# ಶ್ರೀ ರಾಮಕೃಷ್ಣ ವಚನವೇದ

(ಉತ್ತರಾರ್ಧ)

'ಮ'



ಶ್ರೀ ರಾಮಕೃಷ್ಣ ಆಶ್ರಮ

**ಮೈಸೂರು.**

# ವಿಷಯಾನುಕ್ರಮಣಿಕೆ

# ಮುನ್ನುಡಿ

"ಈ ಅಸೀಮ ಅನಂತಭಾವವು, ಸನಾತನ ಶಾಸ್ತ್ರ ಮತ್ತು ಧರ್ಮಗಳಲ್ಲಿ ನಿಹಿತವಾಗಿದ್ದರೂ ಕೆಲವು ಕಾಲ ಮಾತ್ರ ಪ್ರಚ್ಛನ್ನವಾಗಿದ್ದ ಈ ಅಸೀಮ ಅನಂತಭಾವವು, ಈ ಯುಗಾವತಾರನಿಂದ ಪುನರಾವಿಷ್ಕೃತವಾಗಿ ಪಾಂಚಜನ್ಯ ಸದೃಶವಾದ ಉಚ್ಚನಿನಾದದಿಂದ ಮಾನವ ಸಮಾಜದಲ್ಲಿ ಘೋಷಿತವಾಗುವುದು.

"ಈ ನವಯುಗ ಪ್ರವರ್ತಕನಾದ ಭಗವಾನ್ ಶ್ರೀರಾಮಕೃಷ್ಣನಃ ಹಿಂದೆ ಅವತರಿಸಿದ ಯುಗಧರ್ಮಪ್ರವರ್ತಕ ಸಮೂಹದ ಪುನಸ್ಸಂಸ್ಕೃತ ಮಹಾಪ್ರಕಾಶವಾಗಿರುತ್ತಾನೆ!

"ಯಾವ ಶಕ್ತಿಯ ಉನ್ಮೇಷಮಾತ್ರದಿಂದಲೆ ದಿಗ್ದಿಗಂತವ್ಯಾಪಿಯಾದ ಪ್ರತಿಧ್ವನಿಯಿಂದ ಜಗತ್ತು ಜಾಗ್ರತವಾಗುತ್ತಿರುವುದೊ ಆ ಶಕ್ತಿಯ ಪೂರ್ಣತ್ವವನ್ನು ಭಾವಿಸಿ ಅನುಭವಿಸು!"

ಅರ್ಧಶತಮಾನಕ್ಕೆ ಪೂರ್ವದಲ್ಲಿ ಶ್ರೀರಾಮಕೃಷ್ಣರು ಮಹಾಸಮಾಧಿಸ್ಥರಾದ ತರುಣದಲ್ಲಿಯೆ, ಜಗತ್ತಿನ ಕಿವಿ ಆ ದಕ್ಷಿಣೇಶ್ವರ ದೇವಮಾನವನ ಪುಣ್ಯನಾಮದ ದೂರಘೋಷದ ಅನುರಣನ ಮತ್ತು ಪ್ರತಿಧ್ವನನಗಳಿಂದ ಆಗತಾನೆ ಒಂದಿನಿತೆ ಉನ್ಮೇಷನಗೊಳ್ಳುತ್ತಿದ್ದ ಶುಭ ಮುಹೂರ್ತದಲ್ಲಿ ದ್ರಷ್ಟಾರ ಸ್ವಾಮಿ ವಿವೇಕಾನಂದರ ಋಷಿವಾಣಿ ಹಾಗೆಂದು ಘೋಷಿಸಿತು. ಅವರು ಅಂದು ಸಾರಿ ಹೇಳಿದ ಭವಿಷ್ಯತ್ತು ದಿನ ದಿನಕ್ಕೂ ಹೆಚ್ಚು ಹೆಚ್ಚು ಸತ್ಯವಾಗಿ ಈ ಐವತ್ತು ವರ್ಷಗಳಲ್ಲಿ ನಿರ್ವಿವಾದವಾದ ನಿಸ್ಸಂದೇಹವಾದ ನಿರ್ಣಾಯಕವಾದ ಸಿದ್ಧಾಂತವಾಗಿರುವುದನ್ನು ಕಾಣುತ್ತಲಿದ್ದೇವೆ. ಶ್ರೀರಾಮಕೃಷ್ಣರ ದಿವ್ಯಪ್ರಭಾವ ಸಮಗ್ರ ಪೃಥ್ವೀಮಂಡಲವನ್ನೆ ವ್ಯಾಪಿಸುತ್ತಿದೆ. ಅವರ ಜೀವನ ಉಪದೇಶಗಳಿಂದ ಕೋಟ್ಯಂತರ ಚೇತನಗಳು ಅರಳಿ ಬೆಳಕು ಕಾಣುತ್ತಿವೆ; ಅಸಂಖ್ಯ ಹೃದಯ ಗಹ್ವರಗಳಲ್ಲಿ ಶಾಂತಿಯ ಸತ್ತ್ವದ ಆನಂದದ ಭಗವಜ್ಜ್ಯೋತಿ ಹೊಮ್ಮುತ್ತಿದೆ. ಆ ದಿವ್ಯ ಸಂದೇಶಾಮೃತದಿಂದ ಆಕರ್ಷಿತರಾಗಿ ಆರ್ತರೂ ಮುಮುಕ್ಷುಗಳೂ ಜ್ಞಾನಾರ್ಥಿಗಳೂ ಭೂಮಂಡಲದ ಮೂಲೆ ಮೂಲೆಗಳಿಂದ ಯಾತ್ರೆ ಬರುತ್ತಿದ್ದಾರೆ. ಕಂಡರಿಯದ ಕೇಳರಿಯದ ಬಹುದೂರದ ದೇಶವಿದೇಶಗಳಲ್ಲಿ ಪರಮಹಂಸರ

ಜೀವನ ಸಂದೇಶಗಳು ಪ್ರಕಟವಾಗುತ್ತಿವೆ. ಸ್ವಾಮಿ ವಿವೇಕಾನಂದರಿಂದ "ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ" ಎಂಬ ಮಹಾಧ್ಯೇಯದಿಂದ ಸ್ಥಾಪಿತವಾದ ಶ್ರೀರಾಮಕೃಷ್ಣ ಮಹಾಸಂಘವು ಸದ್ದುಗದ್ದಲವಿಲ್ಲದೆ ಮೆಲ್ಲಮೆಲ್ಲಗೆ ಕ್ರಮಕ್ರಮೇಣ ತನ್ನ ಶಾಖೋಪಶಾಖೆಗಳನ್ನು ವಿಸ್ತರಿಸುತ್ತಾ ತನ್ನ ಮಾತೃಸದೃಶವಾದ ಕರುಣಾಬಾಹುಗಳಿಂದ ಪ್ರಪಂಚವನ್ನೆಲ್ಲ ತಬ್ಬುತ್ತಿದೆ. ಪ್ರತಿ ವರುಷವೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಮಹಾಸಂಘದ ಶಾಖಾಕೇಂದ್ರಗಳು ಸ್ಥಾಪಿತವಾಗುತ್ತಿವೆ. ಆದರೆ ಅದರ ರೀತಿಯೆ ಬೇರೆ, ನೀತಿಯೆ ಬೇರೆ. ಅಲ್ಲಿ ಪ್ರೀತಿಗಲ್ಲದೆ ಭೀತಿಗೆ ಒಂದಿನಿತೂ ಅವಕಾಶವಿರುವುದಿಲ್ಲ. ಅದು ಮತಪ್ರಚಾರ ಸಂಸ್ಥೆಯಲ್ಲ; ಧರ್ಮಪ್ರಸಾರ ಸಂಸ್ಥೆ. ಅದರ ಉದ್ದೇಶ ಇತರ ವಿದೇಶೀಯ ಮತ ಸಂಸ್ಥೆಗಳಂತೆ ಮತಾಂತರಗೊಳಿಸುವುದಲ್ಲ. ಎಲ್ಲ ಮತಗಳೂ ಭಗವಂತನೆಡೆಗೆ ಭಕ್ತನನ್ನು ಕರೆದೊಯ್ಯುವ ವಿವಿಧ ಪಥಗಳು ಎಂಬುದೆ ಅದರ ದೃಢವಿಶ್ವಾಸ. ಅಮೇರಿಕದ ಮತ್ತು ಇಂಗ್ಲೆಂಡಿನ ಕ್ರೈಸ್ತಮಿಷನ್ನುಗಳಂತೆಯಾಗಲಿ ಮಹಮ್ಮದೀಯ ಬೌದ್ಧಾದಿ ಪ್ರಚಾರ ಸಂಸ್ಥೆಗಳಂತಾಗಲಿ ಅದು ಮತಾಂತರಗೊಳಿಸುವ ನೆವದಿಂದ ತಮ್ಮ ಪಕ್ಷದ ಸಂಖ್ಯೆಯನ್ನು ವಿಪುಲಗೊಳಿಸುವ ಲೌಕಿಕವೂ ರಾಜಕೀಯವೂ ಆದ ಕಾರ್ಯಕ್ಕೆ ಎಂದೂ ಪ್ರವೇಶಿಸುವುದಿಲ್ಲ. ಅಲ್ಲದೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿ ಎಂದರೆ, ಇತರ ವಿದೇಶೀಯ ಮಿಷನ್ನುಗಳಿಗೆ ಅವರ ದೇಶದ ಸರಕಾರವೋ ಅಥವಾ ಅವರ ಮತಾಧಿಪತಿಯೋ ಹಣವೊದಗಿಸುವಂತೆ ಶ್ರೀರಾಮಕೃಷ್ಣ ಮಹಾಸಂಘವು ಹಣವೊದಗಿಸುವುದಿಲ್ಲ. ಎಲ್ಲಿ ಯಾವ ದೇಶದಲ್ಲಿ ಯಾವ ಕೇಂದ್ರ ತೆರೆದರೂ ಅಲ್ಲಿನ ಜನರ ಅಪೇಕ್ಷೆಯಂತೆಯೆ ತೆರೆಯಬೇಕು. ಅಲ್ಲಿಯ ಜನರೆ ಆ ಸಂಸ್ಥೆ ನಡೆಯುವುದಕ್ಕೆ ಹಣ ಒದಗಿಸಬೇಕು. ಅವರು ಬೇಕೆಂದರೆ ಇರುತ್ತದೆ; ಬೇಡವೆಂದರೆ ಹೋಗುತ್ತದೆ. ತಾಯಿಸಂಸ್ಥೆ ಹಣವೊದಗಿಸಿ ಅದರ ಆಯುಪ್ರಮಾಣವನ್ನು ಕೃತಕವಾಗಿ ಅಧಿಕಗೊಳಿಸುವ ಗೋಜಿಗೆ ಎಂದಿಗೂ ಹೋಗುವುದಿಲ್ಲ. ಈ ಎಲ್ಲ ಕಾರಣಗಳಿಂದ ಶ್ರೀರಾಮಕೃಷ್ಣ ಸಂಘದ ಕೇಂದ್ರೋಪಕೇಂದ್ರಗಳು ಯಾವ ಕೃತಕ ಪ್ರಚೋದನೆಯೂ ಇಲ್ಲದೆ, ಯಾವ ಲೌಕಿಕ ಪ್ರಯೋಜನದ ಉದ್ದೇಶವನ್ನೂ ಒಲ್ಲದೆ, ಸ್ವಾಭಾವಿಕವಾಗಿ, ಸಂದೇಹ ಭೀತಿ ಘರ್ಷಣೆಗಳಿಗೆ ಒಂದಿನಿತೂ ಅವಕಾಶವಿಲ್ಲದಂತೆ ಮೂಡಿ ಮಲರಿ ಬಾಳುತ್ತಿವೆ, ಬದುಕನ್ನು ಬೆಳಗಿಸುತ್ತಿವೆ.

ಶ್ರೀರಾಮಕೃಷ್ಣರ ಹೆಸರು ಜಗದ್ವ್ಯಾಪಿಯಾಗುವಂತೆಯೂ ಅವರ ಉಪದೇಶಾಮೃತವು ಲೋಕದ ಹೃದಯಕ್ಕೆ ಪ್ರವಹಿಸುವಂತೆಯೂ ಮಾಡಿದ ಮಹಾವ್ಯಕ್ತಿಗಳಲ್ಲಿ ಇಬ್ಬರು ಕಲಶಪ್ರಾಯವಾಗಿದ್ದಾರೆ. ಅವರಲ್ಲಿ ಒಬ್ಬರು ವಿಖ್ಯಾತನಾಮರು; ಮತ್ತೊಬ್ಬರು ಅಜ್ಞಾತರು ಅಥವಾ ಅನಾಮರು: ಸ್ವಾಮಿ ವಿವೇಕಾನಂದ ಮತ್ತು "ಮ"! ಒಂದು, ಆಕಾಶದಲ್ಲಿ ತೊಳಗುವ ಸೂರ್ಯ: ಮತ್ತೊಂದು, ಮನೆಮನೆಯ ಹೃದಯದ ಗುಡಿಗುಡಿಯಲ್ಲಿ ಬೆಳಗುವ ಹಣತೆ, ನಂದಾದೀಪ, ಕತ್ತಲೆಯಲ್ಲಿ ಭಾಸ್ಕರನಿಲ್ಲದ ವೇಳೆಯಲ್ಲಿಯೂ ತಂಪಿನ ಕಾಂತಿ ಶಾಂತಿಗಳನ್ನು ಕಣ್ಣು ಕೋರೈಸದಂತೆ ನಿರಾಡಂಬರವಾಗಿ ನೀಡುವ ಸೊಡರು, ಮುದ್ದು ಸೊಡರು, ತಾಯ್ತನದ ಸೊಡರು, ಹಣತೆಸೊಡರು! ಆತನು ತನ್ನ ಪೂರ್ಣನಾಮದಿಂದ ಪ್ರಪಂಚದ ಸಂತೆಬಯಲಿಗೆ ಬರಲು ನಾಚಿ, ಹೇಸಿ, ಹೆದರಿ, 'ಮ' ಎಂಬ ಮೊದಲಕ್ಕರದಿಂದ ಮಾತ್ರ ತೆರೆಮರೆಯಿಂದ ಇಣುಕಿದ ಎಲೆಮರೆಯ ಮಿಣುಕು ಹೂ!

ಸ್ವಾಮಿ ವಿವೇಕಾನಂದರು ಚಿಕಾಗೊ ಸರ್ವಧರ್ಮ ಸಮ್ಮೇಳನದಲ್ಲಿ ವಿಜಯಿಯಾದಂದು ಮೊದಲುಗೊಂಡು ಅವರು ಪರಂಧಾಮವನ್ನೈದುವವರೆಗೂ ದೇಶವಿದೇಶಗಳಲ್ಲಿ ಜನಾಂಗ ಜನಾಂಗಗಳಲ್ಲಿ ಸಹಸ್ರಾರು ವೇದಿಕೆಗಳಮೇಲೆ ನಿಂತು ತಮ್ಮ ಅನನುಕರಣೀಯವಾದ ಧೀರವಾಣಿಯಿಂದಲೂ ಅನುಪಮ ತೇಜಸ್ಸಿನ ವ್ಯಕ್ತಿತ್ವದಿಂದಲೂ ಶ್ರೀಗುರುದೇವನ ಉದಾರ ದಿವ್ಯ ಸಮನ್ವಯ ಸಂದೇಶವನ್ನು ಜಗತ್ತಿಗೆ ಸಾರಿ ಶ್ರೀರಾಮಕೃಷ್ಣರ ನಾಮಸಿಂಹಾಸನ ದಶದಿಕ್ಕುಗಳಲ್ಲಿಯೂ ಸಂಸ್ಥಾಪಿತವಾಗುವಂತೆ ಪೀಠಿಕೆ ಹಾಕಿದರು. ಅವರು ತಾವೆ ಸ್ವತಃ ಬರೆದ ಬರವಣಿಗೆಯೂ ಶಿಷ್ಯವರ್ಗದವರು ಬರೆದಿಟ್ಟುಕೊಂಡ ಅವರ ಮಾತುಕತೆ ಮತ್ತು ಭಾಷಣಗಳೂ ತರುವಾಯ ಮುದ್ರಿತವಾಗಿ ಹಲವಾರು ಮಹಾಹೊತ್ತಗೆಗಳ ರೂಪದಲ್ಲಿ ಹೊರಬಿದ್ದು ಕೋಟ್ಯಂತರ ಜನಗಳ ಹೃದಯ ಬುದ್ಧಿಗಳಿಗೆ ಪುಷ್ಟಿಕಾಂತಿಗಳನ್ನು ದಾನಮಾಡಿವೆ ಮತ್ತು ಮಾಡುತ್ತಲೂ ಇವೆ. ಇಂಗ್ಲಿಷಿನಲ್ಲಿ ಮೊದಲು ಬೆಳಕು ಕಂಡ ಅವು ಪ್ರಪಂಚದ ಅನೇಕಾನೇಕ ಭಾಷೆಗಳಿಗೆ ಪರಿವರ್ತಿತವಾಗಿ ಈಗ ಸರ್ವಜಗತ್ತಿನ ಸ್ವತ್ತಾಗಿ ಪರಿಣಮಿಸಿವೆ.

ಸ್ವಾಮಿ ವಿವೇಕಾನಂದರ ಸಿರಿಬಾಯಿಯಿಂದಲೆ ಪರಮಹಂಸರ ಜೀವನ ವಿಚಾರಗಳನ್ನೆಲ್ಲ ಸಾಧ್ಯವಾದಷ್ಟು ಆಮೂಲಾಗ್ರವಾಗಿ ಕೇಳಿ

ಅವರ ವಿಚಾರವಾಗಿ ಮೊತ್ತಮೊದಲನೆಯ ಚಿಕ್ಕದಾದರೂ ಮಹತ್ತಾದ ಗ್ರಂಥವನ್ನು ಬರೆದವರೆಂದರೆ ಭಾರತೀಯ ತತ್ತ್ವಶಾಸ್ತ್ರಗಳನ್ನು ಪಾಶ್ಚಾತ್ಯರಿಗೆ ಪರಿಚಯಮಾಡಿ ಕೊಡುವುದರಲ್ಲಿಯೆ ತಮ್ಮ ಜೀವಮಾನವನ್ನೆಲ್ಲ ಕಳೆದ ಪ್ರೊಫೆಸರ್ ಮ್ಯಾಕ್ಸ್‌ಮುಲ್ಲರ್ ಅವರು. ಅವರ ತರುವಾಯ ಬಹುವರ್ಷ ಕಳೆದ ಮೇಲೆ, ಅವರಷ್ಟೆ ಪ್ರಸಿದ್ಧರೂ ಪ್ರಪಂಚದ ಸಾಹಿತ್ಯ ಲೋಕದಲ್ಲಿ ಒಂದು ಶಾಶ್ವತ ತಾರೆಯಾಗಿ ಪ್ರಕಾಶಿಸುತ್ತಿರುವವರೂ ಆದ ಫ್ರೆಂಚ್ ಸಾಧಕ ಸಾಹಿತಿ ಮತ್ತು ಮಹಾಜ್ಞಾನಿ ದಿವಂಗತ ರೊಮೇನ್ ರೊಲಾಂಡ್ ಅವರು ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದ ಇವರಿಬ್ಬರ ಜೀವನ ಚರಿತ್ರೆಗಳನ್ನೂ ಅನ್ಯಾದೃಶವಾದ ವಿಶಾಲ ದೃಷ್ಟಿಯಿಂದಲೂ ವಿದ್ವತ್ತಿನಿಂದಲೂ ಬರೆದು ಜಗತ್ತನ್ನು ಬೆರಗುಗೊಳಿಸಿದರು. ಅದಕ್ಕೆ ಮೊದಲೆ ಭಾರತೀಯ ಭಾಷೆಗಳಲ್ಲಿ ಒಂದಾಗಿರುವ ಬಂಗಾಳಿಯಲ್ಲಿ ಪರಮಹಂಸರ ಅಂತರಂಗ ಶಿಷ್ಯರಲ್ಲಿ ಅಗ್ರಗಣ್ಯರೆಂದು ಪರಿಗಣಿತರಾಗಿದ್ದ ಶ್ರೀಮತ್ ಸ್ವಾಮಿ ಶಾರದಾನಂದರು 'ಶ್ರೀರಾಮಕೃಷ್ಣ ಲೀಲಾಪ್ರಸಂಗ' ಎಂಬ ಅದ್ಭುತ ಬೃಹದ್ ಗ್ರಂಥವನ್ನು ಪೌರಾಣಿಕ ಪ್ರಮಾಣದಲ್ಲಿ ಬರೆದು ತಮ್ಮ ಗುರುವಿನ ಜೀವನದ ನಿಕಟ ಪರಿಚಯವನ್ನು ಲೋಕಕ್ಕೆ ಮಾಡಿಕೊಟ್ಟರು. ಆದರೆ ಎಲ್ಲಕ್ಕೂ ಮೊದಲಾಗಿ, ಎಲ್ಲಕ್ಕೂ ಮಿಗಿಲಾಗಿ, ಎಲ್ಲರಿಗಿಂತಲೂ ಹಿರಿದಾಗಿ, ಇತರರಾರಿಂದಲೂಸಾಧ್ಯವಲ್ಲದಷ್ಟು ವಿವರವಾಗಿ, ಬರೆವ ಇತರರೆಲ್ಲರಿಗೂ ಮೂಲಾಧಾರ ಗ್ರಂಥವಾಗುವಂತೆ ಸಕಲ ವಿಷಯ ವಿಸ್ತಾರವಾಗಿ, ಹಿಂದಿಲ್ಲ ಮುಂದೆ ಬರುವುದಿಲ್ಲವೆಂಬಂತೆ ಆಶ್ಚರ್ಯಕರವಾಗಿ, ಪಂಡಿತ ಪಾಮರ ಸರ್ವ ಸುಲಭ ಸ್ವರಸವಾಗಿ, ಶ್ರೀರಾಮಕೃಷ್ಣ ಪರಮಹಂಸರ ಸ್ವಂತ ಸಹಜ ದಿವ್ಯವಾಣಿಯೆ ಲೋಕಕಲ್ಯಾಣಾರ್ಥವಾಗಿ ಮೂರ್ತಿಮತ್ತಾಗಿರುವಂತೆ ಅವರ ವಚನವೇದವನ್ನು ಲೋಕಕ್ಕೆ ಅನುಗ್ರಹಿಸಿದವರೆಂದರೆ 'ಕಥಾಮೃತ' ಕರ್ತೃ ಶ್ರೀ 'ಮ'! 'ಮ' ಅವರಿಗೆ ತಾನು ಯಾವ ಪ್ರಮಾಣದಲ್ಲಿ ಋಣಿಯಾಗಿದ್ದೇನೆ ಎಂಬುದಿನ್ನೂ ಜಗತ್ತಿಗೆ ಸಂಪೂರ್ಣವಾಗಿ ಅರಿವಾಗಿಲ್ಲ. ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣ ಮಹಾಸಂಘ ಸಂಸ್ಥಾಪನೆ ಮಾಡಿದುದಕ್ಕೆ ಸಮಸಂವಾದಿಯಾಗಿ, ಹೆಗಲೆಣೆಯಾಗಿ ನಿಲ್ಲುತ್ತದೆ 'ಮ' ಅವರ 'ಶ್ರೀರಾಮಕೃಷ್ಣ ವಚನವೇದ' ಮೇರುಕೃತಿ!

ಅಷ್ಟೆ ಅಲ್ಲ. ಅದಕ್ಕಿಂತಲೂ ಚಿರಸ್ಥಾಯಿ ಎಂದಾದರೂ ಹೇಳಬಹುದು. ಒಮ್ಮೆ ಬೇಲೂರು ಮಠದ ಒಂದು ಮರದಡಿಯಲ್ಲಿ ಅಡ್ಡಾಡು

ತ್ತಿದ್ದಾಗ ಸ್ವಾಮಿ ವಿವೇಕಾನಂದರು ಹೇಳಿದರಂತೆ 'ಇಂದು ಇಲ್ಲಿ ಸ್ಥಾಪಿತವಾದ ಈ ಸಂಘರೂಪದ ಶಕ್ತಿ ಇನ್ನು ಐನೂರು ವರ್ಷಗಳವರೆಗೂ ಚ್ಯುತಿಯಿಲ್ಲದೆ ಅವ್ಯಾಹತವಾಗಿ ಮುಂಬರಿಯುತ್ತದೆ' ಎಂದು. ನಮಗನ್ನಿಸುತ್ತದೆ 'ಮ' ಅವರ ಈ ಮೇರುಕೃತಿ ಮನುಷ್ಯತ್ವವಿರುವವರೆಗೆ, ಅದು ದೇವತ್ವವನ್ನು ಬಯಸುತ್ತಿರುವವರೆಗೆ ಚಿರಸ್ಥಾಯಿಯಾಗಿ, ಜೀವಂತ ಶಕ್ತಿಯಾಗಿರುತ್ತದೆಯೆಂದು. ಕಟ್ಟಡ ಸಂಸ್ಥೆಗಳು ಕಾಲವಶವಾಗಿ ಗತಿಸಬಹುದು; ಸರಸ್ವತಿ ಅಮರೆ!

ಈಗೀಗ ಜಗತ್‌ಪ್ರಸಿದ್ಧವಾಗುತ್ತಿರುವ 'ಮ' ಅವರ ನಿಜವಾದ ಹೆಸರು ಮಹೇಂದ್ರನಾಥ ಗುಪ್ತ. ಬಂಗಾಳಿಗಳಿಗೆ 'ಮಾಸ್ಟರ್ ಮಹಾಶಯ' ಎಂಬ ನಚ್ಚಿನ ನಾಮಾಂಕಿತದಿಂದ ನಿತ್ಯಪರಿಚಿತರಾಗಿದ್ದಾರೆ. ಅವರು ಕಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ನವೀನ ರೀತಿಯ ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ಉತ್ತೀರ್ಣರಾಗಿ, ಅಂದಿನ ಅಂತಹರೆಲ್ಲ ತರುಣರಂತೆ ಬ್ರಾಹ್ಮ ಸಮಾಜಕ್ಕೆ ಸೇರಿದವರಾಗಿ, ಒಂದು ವಿದ್ಯಾಸಂಸ್ಥೆಯಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದರು. ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿಯಿಂದ ಭಾರತೀಯ ತರುಣರ ಮೇಲೆ ಆದ ಎಲ್ಲ ಸತ್ ಮತ್ತು ದುಷ್ ಪರಿಣಾಮಗಳಿಗೆ ಅವರೇನೂ ಹೊರತಾಗಿರಲಿಲ್ಲ. ಯಾವ ಅಗೋಚರ ದಿವ್ಯಶಕ್ತಿ ನರೇಂದ್ರನಾಥನನ್ನು ದಕ್ಷಿಣೇಶ್ವರದ ಭವತಾರಿಣಿಯ ಭಕ್ತವರೇಣ್ಯನೆಡೆಗೆ ಸೆಳೆಯಿತೋ ಅದೇ ಶಕ್ತಿ ಮಹೇಂದ್ರನಾಥ ಗುಪ್ತನನ್ನೂ ತನ್ನ ಸನ್ನಿಧಿಗೆ ಆಕರ್ಷಿಸಿತು. ನರೇಂದ್ರ ಮತ್ತು ಶ್ರೀರಾಮಕೃಷ್ಣರ ಮೊದಮೊದಲ ಸಂದರ್ಶನ ಸಂದರ್ಭಗಳಲ್ಲಿ ನಮಗೆ ಗೋಚರವಾಗುವ ಅದ್ಭುತ ನಾಟಕೀಯತೆ ಮಾಸ್ಟರ್ ಮಹಾಶಯ ಶ್ರೀರಾಮಕೃಷ್ಣರನ್ನು ಸಂದರ್ಶಿಸಿದ ಪ್ರಥಮದಲ್ಲಿ ನಮಗೆ ಕಾಣಿಸುವುದಿಲ್ಲ. ಆದರೆ 'ಮ' ತನ್ನ ದಿನಚರಿಯಾದ 'ಕಥಾಮೃತ'ದಲ್ಲಿ ಲೋಕಕ್ಕೆ ಕೊಟ್ಟಿರುವ ಆ ಸಂದರ್ಶನ ಕಥನವನ್ನು ಸುಸೂಕ್ಷ್ಮವಾಗಿ ಅವಲೋಕಿಸುವ ಯಾರಿಗಾದರೂ ಹೊಳೆಯುತ್ತದೆ, ನರೇಂದ್ರನಿಗಾಗಿ ಅವರು ಹಾತೊರೆದು ಕಾಯುತ್ತಿದ್ದಂತೆಯೆ ಮಾಸ್ಟರ್ ಮಹಾಶಯನನ್ನೂ ನಿರೀಕ್ಷಿಸುತ್ತಿದ್ದರೆಂದು. ತಮ್ಮ ಸಂದೇಶವನ್ನು ಡಿಂಡಿಮ ಸದೃಶಕಂಠದಿಂದ ದಶದಿಕ್ಕುಗಳೂ ಪ್ರತಿಧ್ವನಿಸುವಂತೆ ಡಂಗುರ ಹೊಯ್ದು ಸಾರಿ ಆಲಿಸಿದವರನ್ನು ತನ್ನ ಭವ್ಯ ವ್ಯಕ್ತಿತ್ವದಿಂದ ಅಪ್ಪಳಿಸುವ ಕಾರ್ಯಕ್ಕೆ ನರೇಂದ್ರನು ಆವಶ್ಯಕವಾಗಿದ್ದಂತೆಯೆ ಆ ಲೋಕಪರಿವರ್ತನಕರವಾದ ದಿವ್ಯಸಂದೇಶವನ್ನು ತಮ್ಮ

ಸ್ವಂತ ಸಹಜವಾಣಿಯಲ್ಲಿಯೆ ಹಿಡಿದಿಟ್ಟು, ಅದರ ವಿವರ ವಿವರವನ್ನೂ ಸ್ತರಸ್ತರವಾಗಿ ಚಿತ್ರಿಸಿ, ಗುರುದೇವನ ದೈನಂದಿನವಾದ ಗುರುಲಘುಮಿಶ್ರಿತ ಮನೋವಾಕ್ಕಾಯ ವ್ಯಾಪಾರಗಳನ್ನೆಲ್ಲ ತನ್ನ ನೆನಹಿನ ತೊಟ್ಟಿಲಲ್ಲಿ ಲಾಲಿಸಿ ಪಾಲಿಸಿ ಅಪಚಾರವಾಗದಂತೆ ಪೊರೆದು, ಸದ್ದುಗದ್ದಲವಿಲ್ಲದೆ ಆಟೋಪ ಅಟ್ಟಹಾಸಗಳಿಲ್ಲದೆ ಲೋಕಶಿಶುಹೃದಯಕ್ಕೆ ಅಮರಸ್ತನ್ಯವೀಯುವ ದೀನ ದಿವ್ಯ ಮಹತ್ತರ ಕಾರ್ಯಕ್ಕೆ ಮಹೇಂದ್ರನಾಥನಂತಹರ ಆವಶ್ಯಕತೆಯೂ ಅತ್ಯಂತ ಅನಿವಾರ್ಯವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲ. 'ವಚನವೇದ'ದ ನಾನಾ ಭಾಗಗಳಲ್ಲಿ ಮಾಸ್ಟರ್ ಮಹಾಶಯನ ವಿಚಾರ ವಾಗಿ ಶ್ರೀಗುರು ಆತನ ಜನ್ಮಾಂತರ ವಿಷಯಗಳನ್ನೂ ಸೂಚಿಸುತ್ತಾರೆ. ಈ ಯುಗದ ಭಗವದ್‌ವಾಣಿಯನ್ನು ಬರೆದಿಡುವುದಕ್ಕಾಗಿಯೆ ಯುಗಾವ ತಾರನು ತನ್ನ ದಿವ್ಯ ಕರಣಿಕನನ್ನು ಮಹೇಂದ್ರನಾಥಗುಪ್ತನನ್ನಾಗಿ ಕರೆ ತಂದಿದ್ದನೆಂಬುದೂ ಅಲ್ಲಲ್ಲಿ ಧ್ವನಿತವಾಗುತ್ತದೆ. ಮಹೇಂದ್ರನೂ ತನ್ನ ಹೆಸರಿಗೆ ತಕ್ಕಂತೆಯೆ ಗುಪ್ತನಾಗಿದ್ದುಕೊಂಡು, ಗುಪ್ತರೀತಿಯಲ್ಲಿಯೆ ಎಲ್ಲ ವನ್ನೂ ಬರೆದಿಟ್ಟುಕೊಂಡು, ಯಾವುದಕ್ಕಾಗಿ ತಾನು ಅವತಾರದೊಡನೆ ಅವತರಿಸಿದ್ದನೊ ಅದನ್ನು ಸಂಪೂರ್ಣವಾಗಿ ಸಾರ್ಥಕಗೊಳಿಸಿ ಕೃತಕೃತ್ಯನಾಗಿ ಭೂರಂಗತ್ಯಾಗಮಾಡಿದ್ದಾನೆ. ಆತನಿಗೆ ನಾವೆಷ್ಟು ಋಣಿ ಎಂಬುದನ್ನು ಹೇಳಿ ಪೂರೈಸಲಾದೀತೆ?

'ಶ್ರೀರಾಮಕೃಷ್ಣ ವಚನವೇದ'ವೆಂದರೆ ಅದೊಂದು ಕರತಲ ದೇವ ಸ್ಥಾನ, ಕರತಲ ತಪೋರಂಗ, ಕರತಲ ಪುಣ್ಯಕ್ಷೇತ್ರ. ಆದರೆ ದೇವಸ್ಥಾನ ಪುಣ್ಯಕ್ಷೇತ್ರಗಳಂತೆ ತಾನೆಂದಿಗೂ ಕಲುಷಿತವಾಗುವ ಸಂಭವವಿಲ್ಲ, ಶಿಥಿಲ ವಾಗುವ ಸಂಭವವಿಲ್ಲ. ಯಾವ ಮನೆಯಲ್ಲಿ ಈ 'ವಚನವೇದ' ವಿರು ತ್ತದೆಯೊ ಅದು ಮಂದಿರವಾಗುತ್ತದೆ. ಯಾರ ಕೈ ಇದನ್ನು ಹಿಡಿದಿರು ತ್ತದೆಯೊ ಅದು ಭಗವಂತನ ಪಾದಾರವಿಂದವನ್ನೆ ಧರಿಸಿರುತ್ತದೆ. ಯಾರ ಜಿಹ್ವೆ ಇದನ್ನು ಪಠಿಸುತ್ತದೆಯೊ ಅದು ಅಮೃತವನ್ನೆ ಈಂಟುತ್ತಿರುತ್ತದೆ. ಇದು ಆನಂದದ ಆಗರ; ಶಾಂತಿಯ ಸಾಗರ; ದಿವ್ಯಜ್ಞಾನದ ಓಗರ. ಕಷ್ಟದ ಸಮಯದಲ್ಲಿ ಧೈರ್ಯವೀಯುವ ಸಖ; ಸುಖದ ಸಮಯದಲ್ಲಿ ಸಮರ್ಪಣ ಭಾವವಿತ್ತು ವಿನಯ ಭಕ್ತಿಗಳನ್ನು ಪ್ರಚೋದಿಸುವ ಗುರು; ಕತ್ತಲಲ್ಲಿ ದೀಪ, ದಾರಿಗೆ ಊರೆಗೋಲು, ದಿಕ್ಕುಗೆಡದಂತೆ ಗುರಿದೋರುವ ಧ್ರುವತಾರೆ. ಇಲ್ಲಿ ವೇದವೇದಾಂತ ದರ್ಶನಾದಿ ಸರ್ವಸಾರವಿದೆ. ಓದುಬರುವ ಅತ್ಯಂತ

ಸಾಮಾನ್ಯನೂ ಇದನ್ನು ಓದಿದ ಮೇಲೆ ಯಾವ ಪಂಡಿತನಿಗೂ ಕರುಬುವ ಆವಶ್ಯಕತೆಯಿಲ್ಲ; ಯಾವ ವಿದ್ವತ್ ಪೂರ್ಣನಾದ ತತ್ತ್ವಜ್ಞಾನಿಗೂ ಕೀಳೆಂದು ನಾಚಬೇಕಾಗಿಲ್ಲ. ಅದಕ್ಕೆ ಬದಲು ಭಗವಂತನ ಕೃಪೆಯಿಂದ ತನಗಿಂತಲೂ ಧನ್ಯರಿಲ್ಲ ಎಂದರಿತು ನಿರ್ಮಮನಾಗುತ್ತಾನೆ, ಶಾಂತನಾಗುತ್ತಾನೆ, ಪೂರ್ಣನಾಗುತ್ತಾನೆ. ಆತನಿಗೆ ಗಗನದ ವೈಶಾಲ್ಯ, ಹೈಮಾಚಲದ ಔನ್ನತ್ಯ, ಅಂಬುಧಿಯ ಗಭೀರಗಾಂಭೀರ್ಯ ಎಲ್ಲವೂ ಸಿದ್ಧಿಸುತ್ತವೆ. ಇಷ್ಟು ಸರ್ವಜನ ಸಾಮಾನ್ಯರೂಪದಲ್ಲಿ, ಇಷ್ಟು ಸರ್ವಸುಲಭ ರೂಪದಲ್ಲಿ ಭಗವಂತ ಎಂದೂ ಅವತರಿಸಿರಲಿಲ್ಲ, ಭಗವದ್‌ವಾಣಿ ತಾನೆಂದೂ ಕೃತಿಗೊಂಡಿರಲಿಲ್ಲ.

'ಮ' ಅವರ ಈ ಮಹತ್‌ಕೃತಿ 'ಕಥಾಮೃತ' ಈಗಾಗಲೆ ಅನೇಕ ಭಾಷೆಗಳಲ್ಲಿ ಪರಿವರ್ತನಗೊಂಡಿದೆ, ಗೊಳ್ಳುತ್ತಿದೆ. ಸ್ವಾಮಿ ನಿಖಿಲಾನಂದರಿಂದ ಇಂಗ್ಲಿಷ್ ಭಾಷೆಗೆ ಭಾಷಾಂತರಿತವಾಗಿ, ಅಮೆರಿಕದಲ್ಲಿ ಮೊತ್ತ ಮೊದಲು ಪ್ರಕಟವಾಗಿ, "The Gospel of Sri Ramakrishna" ಎಂಬ ಹೆಸರಿನಿಂದ ಜಗತ್ ಪ್ರಿಯವೂ ಪ್ರಸಿದ್ಧವೂ ಆಗಿದೆ. ಅಸಂಖ್ಯಾತ ವಿದೇಶೀಯ ಜೀವಗಳು ಆ ಭಾಷೆಯಲ್ಲಿ ಅದನ್ನು ಓದಿ ಧನ್ಯರಾಗುತ್ತಿದ್ದಾರೆ. ವಿಚಾರವಾದಿಗಳೂ ಕವಿಗಳೂ ಮೇಧಾವಿಗಳೂ ತತ್ತ್ವಜ್ಞರೂ ದೇಶ, ಪಕ್ಷ, ಪಂಥ, ವಾದ, ಮತ, ಯಾವ ಭೇದವೂ ಇಲ್ಲದೆ ಭಾರತದ ಈ ಭಾಗೀರಥಿಯ ತೀರ್ಥಕ್ಕೆ ಪುಣ್ಯಸ್ನಾನ ಗೈಯಲು ಬರತೊಡಗಿದ್ದಾರೆ. ಆ ಆಧ್ಯಾತ್ಮಿಕ ಸಾಹಸದಲ್ಲಿ ಕನ್ನಡಿಗರೂ ಹಿಂದುಳಿದಿಲ್ಲ. 'ಮ' ಅವರ ಗ್ರಂಥದ ಪೂರ್ವಭಾಗದ ಕನ್ನಡ ಭಾಷಾಂತರ 'ಶ್ರೀರಾಮಕೃಷ್ಣ ವಚನಾಮೃತ' ಎಂಬ ಅಂಕಿತದಿಂದ ಅನೇಕ ವರ್ಷಗಳ ಹಿಂದೆಯೆ ಬೆಂಗಳೂರು ಶ್ರೀರಾಮಕೃಷ್ಣಾಶ್ರಮದಿಂದ ಪ್ರಕಟಗೊಂಡಿತು. ಆದರೆ ಆ ಭಾಷಾಂತರ ನಾವು ಅಪೇಕ್ಷಿಸುವಷ್ಟು ಸಮರ್ಪಕವಾಗಿತ್ತೆಂದು ಹೇಳುವಂತಿಲ್ಲ. ಮಾಸ್ಟರ್ ಮಹಾಶಯನು ಶ್ರೀರಾಮಕೃಷ್ಣರ ಬಾಯಿಂದ ಬಂದ ಮಾತುಗಳನ್ನು ಮಾತಾಡಿದಂತೆಯೆ ಬರೆದಿಟ್ಟಿದ್ದಾನೆ, ಬಂಗಾಳಿಯಲ್ಲಿ. ಸಂವಾದವನ್ನು ನಿರ್ವಹಿಸುವಾಗ ಅಲ್ಲಿ ಗ್ರಂಥ ಭಾಷೆಯ ಪ್ರಯೋಗವೆ ಇಲ್ಲ. ಗ್ರಾಮ್ಯ ಪ್ರಯೋಗಗಳೂ ಯಥೇಚ್ಛವಾಗಿವೆ. ಬರವಣಿಗೆಯ ಕೃತಕತೆ ಒಂದಿನಿತೂ ಇಲ್ಲ. ಓದುಗನಿಗೆ ಶ್ರೀರಾಮಕೃಷ್ಣರ ಸಾಮೀಪ್ಯದಲ್ಲಿಯೆ ಕುಳಿತು ಅವರ ಬಾಯಿಂದ ಬರುವ ಮಾತನ್ನೆ ಕೇಳುತ್ತಿರುವಂತೆ ಅನುಭವವಾಗುತ್ತದೆ.

ಅತ್ಯಂತ ಗಹನವಾದ ಆಧ್ಯಾತ್ಮಿಕ ವಿಚಾರಗಳ ಮಧ್ಯೆಮಧ್ಯೆ ಅಳ್ಳಿಬಿರಿಯೆ ನಗುವಂತಹ ಪರಿಹಾಸದ ಮತ್ತು ವಿನೋದದ ಪ್ರಸಂಗಗಳೂ ತಿಳಿಯಾದ ಆಡು ಮಾತಿನಲ್ಲಿಯೆ ಹೊಳೆಯುತ್ತವೆ. ಆದ್ದರಿಂದ ಈಗಿನ ಈ ಭಾಷಾಂತರದಲ್ಲಿ ಮೂಲದ ಆ ಸಹಜತೆ ಸರಳತೆಗಳನ್ನು ಅನುಸರಿಸುವ ಉದ್ದೇಶದಿಂದ ಭಾಷೆಯನ್ನು ಆದಷ್ಟು ಮಟ್ಟಿಗೆ ಗ್ರಂಥಭಾಷೆಯಾಗದಂತೆ ನೋಡಿಕೊಂಡು ಆಡುಮಾತಿನ ಶೈಲಿಯನ್ನೆ ಬಳಸಿಕೊಂಡಿದೆ. ಸದ್ಯಕ್ಕೆ ಹಿಂದೆ ಭಾಷಾಂತರವಾಗದಿದ್ದ ಉತ್ತರ ಭಾಗವನ್ನೆ ಪರಿವರ್ತನಗೊಳಿಸಿದಾರೆ. ಹಿಂದೆ ಭಾಷಾಂತರವಾಗಿದ್ದ ಪೂರ್ವಭಾಗವನ್ನೂ ಇಲ್ಲಿ ಅನುಸರಿಸಿರುವ ಆಡು ಮಾತಿನ ರೀತಿಯಲ್ಲಿಯೆ ಮತ್ತೆ ಅನುವಾದ ಮಾಡಿ ಈ ಗ್ರಂಥಕ್ಕೆ ಪೂರಕವಾಗಿ ಶೀಘ್ರದಲ್ಲಿಯೆ ಪ್ರಕಟಿಸಲಿದ್ದಾರೆ.

ಈ ಭಾಷಾಂತರಕ್ಕೆ 'ಶ್ರೀರಾಮಕೃಷ್ಣ ವಚನವೇದ' ಎಂದು ಹೆಸರಿಟ್ಟಿದೆ. ಅದಕ್ಕೆ ಈ ಮುನ್ನುಡಿಕಾರನೆ ಬಹುಮಟ್ಟಿಗೆ ಕಾರಣವಾಗಿರುವುದರಿಂದ ಅದರ ಪರವಾಗಿ ಎರಡು ಮಾತು ಹೇಳಬೇಕಾಗಿದೆ.

'ವೇದ' ಎಂದರೆ ನಿತ್ಯಜ್ಞಾನ. ಅದು ಸನಾತನ. ಅದು ಅಪೌರುಷೇಯ. ಅಂದರೆ ಯಾವ ಮಾನವವ್ಯಕ್ತಿಯಿಂದಲೂ ಹುಟ್ಟಿಬಂದುದಲ್ಲ. ಮನುಷ್ಯತ್ವ ಹುಟ್ಟುವುದಕ್ಕೆ ಮೊದಲೂ ಅದು ಇತ್ತು, ಮನುಷ್ಯತ್ವ ಹೋದ ಮೇಲೆಯೂ ಅದು ಇರುತ್ತದೆ. ಅಂದರೆ 'ಲೋಕ'ಕ್ಕೆ ಪೂರ್ವದಲ್ಲಿಯೂ ಇತ್ತು; 'ಲೋಕ'ದ ಅನಂತರವೂ ಇರುತ್ತದೆ. 'ವೇದ' ಲೋಕಕ್ಕೆ ಅವತರಿಸುವಾಗ ಯಾವನಾದರೊಬ್ಬ ಮನುಷ್ಯ ಪಾತ್ರದ ಮೂಲಕವಾಗಿಯೆ ಹೊಮ್ಮುತ್ತದೆ. ಅಂತಹ ಮನುಷ ನೀರನ್ನು ಹರಿಯಿಸುವ ಒದಗೆಯೆ ಹೊರತು ಅದನ್ನು ಸೃಷ್ಟಿಸುವವನಲ್ಲ. ಅವನು ಪ್ರಣಾಳಿಕಾ ರೂಪ ಮಾತ್ರ. ಅಂತಹನನ್ನು ಋಷಿ, ಕವಿ, ದ್ರಷ್ಟಾರ ಎಂದೆಲ್ಲ ಕರೆಯುತ್ತೇವೆ. ಆ ದೃಷ್ಟಿಯಿಂದ ವೇದ ಎಂಬುದು ಎಂದೋ ಮುಗಿದ ಒಂದು ಗ್ರಂಥದ ಅಥವಾ ಗ್ರಂಥರಾಶಿಯ ಹೆಸರಲ್ಲ. ವೇದದ ಮಹಾಗ್ರಂಥಕ್ಕೆ ಕಾಲಕಾಲಕ್ಕೂ ಯುಗಯುಗಕ್ಕೂ ಹೊಸ ಹೊಸ ಅಧ್ಯಾಯಗಳೂ ಪ್ರಕರಣಗಳೂ ಸೇರುತ್ತಲೆ ಹೋಗುತ್ತಿವೆ. ಅವುಗಳಲ್ಲಿ ಆಧುನಿಕ ವಿಜ್ಞಾನಶಾಸ್ತ್ರಗಳಿಗೂ ಗೌರವ ಸ್ಥಾನವಿದೆ. ನಮ್ಮ ಅನುಭವಗಳು ವಿಸ್ತರಿಸಿದಂತೆಲ್ಲ, ಹೊಸಹೊಸ ಸಾಕ್ಷಾತ್ಕಾರಗಳೂ ಸಿದ್ಧಿಗಳೂ ಮೈದೋರಿದಂತೆಲ್ಲ ವೇದವೂ ವಿಸ್ತರಣಗೊಳ್ಳುತ್ತದೆ. ಸದ್ಯಕ್ಕೆ ಅತೀತ

ವಾಗಿರುವ 'ವೇದ' ದ ವಿರಾಟ್‌ಜಗತ್ತಿನಲ್ಲಿ 'ಲೋಕ' ಕ್ಕೆ ಇಳಿಯ ಬಹುದಾದ, ಇಳಿಯುಲಿರುವ ಮತ್ತು ಇಳಿಯಲೆ ಬೇಕಾಗಿರುವ ಇನ್ನೆಷ್ಟೆಷ್ಟು ವಿಸ್ಮಯಗಳೂ ಅದ್ಭುತಗಳೂ ಆಶ್ಚರ್ಯಗಳೂ ಕಾಲಲಬ್ಧಿಯನ್ನು ಕಾಯು ತ್ತಿವೆಯೊ ಹೇಳಬಲ್ಲವರಾರು ? ಸೂಕ್ಷ್ಮವಾದ ಆಧ್ಯಾತ್ಮಿಕಾನುಭವ ಜಗತ್ತಿನ ಮಾತಂತಿರಲಿ; ನಮ್ಮ ನಕ್ಷತ್ರನೀಹಾರಿಕಾಮಯವಾದ ಈ ಸ್ಥೂಲ ಜಗತ್ತಿನಲ್ಲಿಯೆ ನಮ್ಮ ವಿಜ್ಞಾನ ಊಹಿಸದಿದ್ದ ಅಘಟನಗಳೂ ಘಟಿಸುತ್ತಿವೆ ಎಂಬುದನ್ನು ನಮ್ಮ ಕಣ್ಣಮುಂದೆಯೆ ಕಾಣುತ್ತಿದ್ದೇವೆ, ಕೇಳುತ್ತಿದ್ದೇವೆ! 'Flying Saucers From Outer Space', 'Flying Saucers Have Landed' ಎಂಬ ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನೂ ನಂಬಲರ್ಹರೂ ಸಮರ್ಥವೀಕ್ಷಕರೂ ಆದ ವಿವಿಧ ಸಾಕ್ಷಿಗಳ ಹೇಳಿಕೆಗಳು ಪ್ರಪಂಚದ ನಾನಾ ಭಾಗದ ಪತ್ರಿಕೆಗಳಲ್ಲಿ ವರದಿಯಾಗುತ್ತಿರುವುದನ್ನೂ ಗಮನಿಸಿದರೆ ನಮ್ಮ ಆಶ್ಚರ್ಯಕ್ಕೆ ಏನೇನು ಆಹಾರಗಳನ್ನು ಒದಗಿಸು ತ್ತಾರೋ ಈ ವ್ಯೋಮಾಂತರದ ವಿಯದ್ಯಾನಗಳಲ್ಲಿರಬಹುದಾದ ಅತಿಥಿ ಮಹನೀಯರು, ಹೇಳಬಲ್ಲವರಾರು ? ಅಂತೂ ಸದ್ಯಕ್ಕೆ ಅತೀತವಾಗಿರುವ 'ವೇದ' ಅನಂತವಾಗಿರುವುದರಿಂದ ಲೋಕಕ್ಕಿಳಿಯುವ ನಮ್ಮ ವೇದವೂ ಕೊನೆಯಿಲ್ಲದೆ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ಶ್ರೀರಾಮಕೃಷ್ಣ ರಂತಹ ಸಿದ್ಧಪುರುಷನ, ಮಹರ್ಷಿಯ, ದ್ರಷ್ಟಾರನ, ಅವತಾರವರಿಷ್ಠನ ವಾಕ್‌ಶ್ರೀಯನ್ನು 'ವಚನವೇದ' ಎಂದು ಕರೆಯುವುದರಲ್ಲಿ ಅನೌಚಿತ್ಯ ವೆಲ್ಲಿ ಬಂತು ? ಈ 'ವಚನವೇದ' ವೇದಗಳೂ ಮಾಡದ ಕೆಲಸವನ್ನು ಮಾಡುತ್ತದೆ. ಈ 'ವಚನವೇದ' ವೇದಗಳು ಹೊಗಲಾರದ, ಬಹುಶಃ ಕೆಲವರ ದೃಷ್ಟಿಯಲ್ಲಿ ಹೊಗಬಾರದ ಮೂಲೆ ಮೂಲೆಗಳನ್ನೂ ಪ್ರವೇಶಿಸಿ ಜ್ಯೋತಿರ್ದಾನ ಮಾಡುತ್ತದೆ. ಈ 'ವಚನವೇದ' ಅಂಧಶ್ರದ್ಧೆಯ ಮೂಢಾಚಾರದ ಜನ ಜಂಗುಳಿಯನ್ನು ಪುರೋಹಿತ ನಖಪಂಜರದಿಂದ ಪಾರುಮಾಡಿ, ಅವರ ಧರ್ಮದಾಸ್ಯದೈನ್ಯಗಳನ್ನು ಪರಿಹರಿಸಿ, ಅವರನ್ನು 'ಮನುಷ್ಯ' ರನ್ನಾಗಿ ಮಾಡುತ್ತದೆ. ಈ 'ವಚನವೇದ' ಪ್ರಜ್ಞಾಪರಾಧ ಜನ್ಯವಾದ ಭಯ ಭೀತಿಗಳಿಂದಲೂ ನೀಚೋಹಂ ಉಚ್ಚೋಹಂ ಮನೋ ಜಟಿಲಗಳಿಂದಲೂ ನಮ್ಮನ್ನುದ್ಧರಿಸಿ, ಉದಾರ ಧೀರರನ್ನಾಗಿ ಮಾಡಿ, ಸಂರಕ್ಷಿಸುತ್ತದೆ; ಜೀವನ್ಮುಕ್ತಿಗೆ ನಡಸುತ್ತದೆ.

ಸ್ವತಂತ್ರ ಭಾರತವನ್ನು ನಮ್ಮ ರಾಜ್ಯಾಂಗ 'ಸೆಕ್ಯುಲರ್ ರಾಜ್ಯ'

ಎಂದು ಕರೆದಿದೆ. ಸೆಕ್ಯುಲರ್ ಎಂದರೆ ಧಾರ್ಮಿಕವಲ್ಲದ ಮತದೂರವಾದ ಲೌಕಿಕ ಲೋಕಾಯತ ಎಂದು ಅರ್ಥವಾಗುತ್ತದೆ. ಯಾವ ಭರತಖಂಡವನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಪುಣ್ಯಭೂಮಿಯೆಂದು ಕರೆದರೊ; ಯಾವುದರ ವಿಶೇಷ ಪ್ರಜ್ಞೆ, ವಿಶೇಷ ಪ್ರತಿಭೆ, ವಿಶಿಷ್ಟ ಕರ್ತವ್ಯ, ಸ್ವಭಾವ, ಸ್ವಧರ್ಮ, ಸರ್ವವೂ ಧಾರ್ಮಿಕದಲ್ಲಿ ಮಾತ್ರವೆ ನಿಷ್ಠವಾಗಿದೆ ಎಂದು ಸ್ವಾಮಿ ವಿವೇಕಾ ನಂದರೂ ಸಾರಿದರೊ; ಯಾವುದರ ಸ್ವಾತಂತ್ರ್ಯಕ್ಕಾಗಿ ದುಡಿದು ಮಡಿದ ಸ್ವಾತಂತ್ರ್ಯ ಶಿಲ್ಪಿ ಮಹಾತ್ಮ ಗಾಂಧಿಜಿಯ ನಡೆ ನುಡಿ ಉಸಿರು ಎಲ್ಲವೂ ಭಗವದಭಿಮುಖವಾದ ದಿವ್ಯ ಧರ್ಮದಲ್ಲಿಯೆ ಸಮರ್ಪಿತವಾಗಿದ್ದಿತೊ ಆ ಭೂಭಾಗವನ್ನು 'ಧಾರ್ಮಿಕವಲ್ಲದ' 'ಮತದೂರವಾದ' 'ಲೌಕಿಕ' 'ಲೋಕಾಯತ' 'ಸೆಕ್ಯುಲರ್' ಎಂದು ಕರೆದರೆ ಏನರ್ಥವಾಗುತ್ತದೆ? ಹಿಮಾಲಯವನ್ನಾದರೂ ಎತ್ತಿ ಬೇರೆ ದಿಕ್ಕಿಗೆ ಸಾಗಿಸಬಹುದೊ ಏನೊ! ಅಣುಶಕ್ತಿಯ ಪ್ರಯೋಗದಿಂದ ಸಮತಲ ಮಾಡಬಹುದೊ ಏನೊ! ಆದರೆ ಭಾರತೀಯ ಸಂಸ್ಕೃತಿಯ ಈ ಆಧ್ಯಾತ್ಮಿಕ ಲಕ್ಷಣವನ್ನು ಮಾತ್ರ ಮಾರ್ಪ ಡಿಸಲು ಎಂದೆಂದಿಗೂ ಸಾಧ್ಯವಿಲ್ಲ! ಹಾಗೆ ಮಾಡುವುದೂ ರಾಜ್ಯಾಂಗದ ಉದ್ದೇಶವಲ್ಲ. ರಾಜ್ಯಾಂಗ 'ಸೆಕ್ಯುಲರ್' ಎಂದು ಕರೆದುದರ ಉದ್ದೇಶ ಆಡಳಿತದ ಸಮನ್ವಯ ದೃಷ್ಟಿಯನ್ನೂ ಮತೀಯ ನಿಷ್ಪಕ್ಷಪಾತವನ್ನೂ ಎಲ್ಲ ಮತದವರಿಗೂ ಸರ್ವಸಮಾನವಾದ ಹಕ್ಕು ಬಾಧ್ಯತೆ ಹೊರೆ ಹೊಣೆ ಉಂಟೆಂಬುದನ್ನೂ ಸಾರುವುದೆ ವಿನಾ ಯಾವ ಆಸ್ತಿಕ ನಾಸ್ತಿಕ ಸಿದ್ಧಾಂತ ಗಳನ್ನೂ ಸಂಸ್ಥಾಪಿಸುವುದೂ ಅಲ್ಲ, ಉತ್ಪಾಟಿಸುವುದೂ ಅಲ್ಲ. ಅಂದರೆ ನಮ್ಮ ರಾಷ್ಟ್ರದ ಆಡಳಿತದ ಈ ಲಕ್ಷಣವನ್ನು ಸರಿಯಾದ ಮಾತಿನಲ್ಲಿ ವರ್ಣಿಸುವುದಾದರೆ 'ಸಮನ್ವಯ ರಾಷ್ಟ್ರ' ಎಂದು ಕರೆಯಬೇಕಾಗುತ್ತದೆ. ಅಂತಹ ಸಮನ್ವಯ ರಾಷ್ಟ್ರಕ್ಕೆ ಅತ್ಯಂತ ಆವಶ್ಯಕವಾಗಿರುವ ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ಈ ಯುಗದಲ್ಲಿ ಸ್ವಾತಂತ್ರ್ಯೋದಯಕ್ಕೆ ಬಹು ಪೂರ್ವದಲ್ಲಿಯೆ ಸ್ಪಷ್ಟವಾಗಿ ಅನುಭವಪೂರ್ವಕವಾಗಿ ಸರ್ವಜನ ಸುಲಭ ಗ್ರಾಹ್ಯವಾಗಿ ಪ್ರಭಾವಯುತವಾಗಿ ಕ್ರಾಂತಿಪೂರ್ಣವಾದರೂ ಸಂಪ್ರದಾಯ ಅವಿರುದ್ಧವೆಂಬಂತೆ ಲೋಕಸಮಸ್ತಕ್ಕೂ ತೋರಿ ಸಾರಿದವರೆಂದರೆ ಭಗವಾನ್ ಶ್ರೀರಾಮಕೃಷ್ಣ ಪರಮಹಂಸರು. ಅವರ ಈ 'ವಚನವೇದ' ನಿಜವಾಗಿಯೂ ಸಮನ್ವಯ ದೃಷ್ಟಿಯನ್ನು ಸರ್ವ ಪ್ರಜೆಗಳಿಗೂ ಸುಲಭವಾಗಿ ಹೃದಯ ಸ್ಪರ್ಶಿಯಾಗುವಂತೆ ಬೋಧಿಸುವ ನವೀನವೇದ. ಮತಾಂತರಗೊಳಿಸು

ವುದು, ಪರಮತ ನಿಂದೆಯಿಂದ ಸ್ವಮತಶ್ಲಾಘನೆ ಮಾಡುವುದು, ರಾಜಕೀಯ ಪ್ರಯೋಜನಕ್ಕಾಗಿ ಸ್ವಮತೀಯರ ಸಂಖ್ಯೆಯನ್ನು ಹೆಚ್ಚಿಸುವ ಕುತಂತ್ರಕ್ಕೆ ಕೈಹಾಕುವುದು ಮೊದಲಾದ ಕಾಡುಭಾವನೆಗಳನ್ನೆಲ್ಲ ಬೇರು ಸಹಿತ ಸುಟ್ಟುಹಾಕುವ ಕಾಳ್ಗಿಚ್ಚಾಗುತ್ತದೆ ಈ 'ವಚನವೇದ'. ನಮ್ಮ ರಾಜ್ಯಾಂಗದ ರಾಜಕೀಯದ ಸುರತರು ಸುಫಲಸುಮಭರಿತವಾಗಬೇಕಾದರೆ ಜನಹೃದಯಮೂಲವಾಗಿರುವ ಅದರ ತಾಯಿಬೇರು ಈ 'ವಚನವೇದ' ಸಾರವನ್ನು ಹೀರಿಕೊಂಡಲ್ಲದೆ ಸಾಧ್ಯವಿಲ್ಲ. ನಮ್ಮ ರಾಜಕೀಯ ರಾಜ್ಯಾಂಗಕ್ಕೆ ಪೂರಕವಾಗುವ ಧಾರ್ಮಿಕ ರಾಜ್ಯಾಂಗವಾಗುತ್ತದೆ ಈ 'ಶ್ರೀರಾಮಕೃಷ್ಣ ವಚನವೇದ'!

ಸುಮಾರು ಇಪ್ಪತ್ತೈದು ಸಂವತ್ಸರಗಳ ಹಿಂದೆ ಮಾಸ್ಟರ್ ಮಹಾಶಯನನ್ನು ಆತನ ಕಲಿಕತ್ತೆಯ ಮನೆಯಲ್ಲಿ, ಸಾಯಂ ಸಮಯದಲ್ಲಿ, ಉತ್ತುಂಗ ಮಹಾಸೌಧದ ಉನ್ನತ ತಾರಸಿಯ ಮೇಲೆ, ಆಕಾಶದ ಕೊಡೆಯಡಿಯಲ್ಲಿ, ಸ್ವಾಮಿ ಸಿದ್ಧೇಶ್ವರಾನಂದರೊಡಗೂಡಿ ಹೋಗಿದ್ದ ಈ ಲೇಖಕ ಸಂದರ್ಶಿಸುವ ಯೋಗ ಒದಗಿತ್ತು. ಶ್ರೀರಾಮಕೃಷ್ಣರ ವಿಚಾರವಾಗಿ ಈ ಲೇಖಕ ಬರೆದಿದ್ದ ಕನ್ನಡ ಕವನವೊಂದನ್ನು ಹಾಡಿಸಿ ಕೇಳಿ 'ಮ' ತುಂಬ ಆನಂದಿತರಾಗಿ ಅದನ್ನು ಯಾರ ಕೈಯಲ್ಲಾದರೂ ಬಂಗಾಳಿಗೆ ಪರಿವರ್ತಿಸಿ ಕಳುಹಿಸುವಂತೆ ಅತ್ಯಂತ ವಿಶ್ವಾಸಪೂರ್ವಕವಾಗಿ ಕೇಳಿಕೊಂಡಿದ್ದರು, ಲೇಖಕನೂ ಒಪ್ಪಿದ್ದ. ಆದರೆ ಬಹುಶಃ ಆಲಸ್ಯವೆ ಕಾರಣವಾಗಿ ಎರಡು ಮೂರು ವರ್ಷಗಳಾದರೂ ಅದನ್ನು ಭಾಷಾಂತರಿಸಿ ಕಳುಹಿಸಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ 'ಮ' ಹೋದವರು ಹಿಂತಿರುಗದ ಧಾಮಕ್ಕೆ ಪ್ರಯಾಣಮಾಡಿಬಿಟ್ಟರು. ಆ ವಚನಋಣವನ್ನು ಇಂದು ಈ ರೀತಿಯಿಂದಾದರೂ ತೀರಿಸುತ್ತೇನೆ. ಆ ಸ್ತೋತ್ರ ಕವನವನ್ನು ಅವರ 'ಕಥಾಮೃತ'ದ ಕನ್ನಡ ಭಾಷಾಂತರಕ್ಕೆ ನಾಂದಿಯಾಗಿ ಹಾಡಿ ಸಮರ್ಪಿಸುತ್ತೇನೆ. 'ವಚನವೇದ'ವನ್ನು ನಮಗಿತ್ತ ಸರ್ವಧರ್ಮ ಸಮನ್ವಯಾಚಾರ್ಯನ ಸರ್ವೋದಯಕಾರಿಯಾದ ಸಮನ್ವಯ ಭಾವವೂ ಪೂರ್ಣದೃಷ್ಟಿಯೂ ಆ ಸ್ತೋತ್ರದಲ್ಲಿ ಮೂರ್ತಿಮತ್ತಾಗಿ ನಮ್ಮನ್ನು ಶ್ರೇಯಸ್ಸಿಗೆ ನಡೆಸಲಿ:

ಭರತಖಂಡದ ನೀಲಗಗನವ ತಿಮಿರ ಮುಸುಗಿರಲು,
ಭಾರತೀಯರು ತಮ್ಮ ಧ್ಯೇಯವ ಮರೆತು ಮಲಗಿರಲು,

ಪರಮಹಂಸನೆ, ಉದಯ ಸೂರ್ಯನ ತೆರದಿ ರಂಜಿಸಿದೆ;
ಹೃದಯ ನಭದಜ್ಞಾನ ತಿಮಿರವನಿರದೆ ಭಂಜಿಸಿದೆ.

ಸರ್ವಮಾರ್ಗಗಳೊಂದೆ ನಿಲಯಕೆ ಪೋಪುವೆಂಬುದನು
ಯೋಗವಿದ್ಯೆಯೊಳರಿತು ಮಾನವಕುಲಕೆ ಬೋಧಿಸಿದೆ;
ಕ್ರೈಸ್ತ ಹಿಂದೂ ಮಹಮುದೀಯರೆ ಬೌದ್ಧ ಮೊದಲಾದ
ಮತಗಳಾತ್ಮವದೊಂದೆ ಎಂಬುದ ತಿಳುಹಿ ಪಾಲಿಸಿದೆ.

ಮಾಯ ತಿಮಿರದಿ ಮಾರ್ಗ ಕಾಣದೆ ಗೋಳಿಡುತಲಿಹರ
ಅಭಯದೀಪವ ಹಿಡಿದು ದಾರಿಯ ತೋರಿ ರಕ್ಷಿಸಿದೆ;
ಘೋರ ಸಂಸಾರಾಂಬುನಿಧಿಯೊಳು ಮುಳುಗಿ ತೇಲುವರ
ಅಮೃತನಾವೆಯ ತಂದು ವೇಲೆಯನಿರದೆ ಸೇರಿಸಿದೆ.

ಶಿರವ ನಾಕದೊಳಿರಿಸಿ ಚರಣಗಳೆರಡ ಭೂತಳದಿ
ಗುರು ಹಿಮಾಚಲದಂತೆ ನಿಂತಿಹೆ, ಶಾಂತಿಯಾಶ್ರಯನೆ.
ಹೃದಯ ನಿನ್ನದು ಮೇರೆಯಿಲ್ಲದ ರುಂದ್ರವಾರಿನಿಧಿ:
ಚಲಿತ ಮತಗಳ ಚಂದ್ರನಾವೆಗಳಲ್ಲಿ ತೇಲುತಿವೆ!

ಕ್ರಿಸ್ತ ಮಹಮದ ರಾಮ ಕೃಷ್ಣ ಜೊ಼ರಾಸ್ತ ಗೌತಮರು
ದಿವ್ಯ ವೇದ ಕೊರಾನು ಬೈಬಲು ತಲ್ಮಡಾದಿಗಳು
ಗುಡಿಯು ಚರ್ಚು ಮಸೀದಿ ಆಶ್ರಮ ಅಗ್ನಿಪೂಜೆಗಳು
ಕಾಶಿ ಮಕ್ಕಗಳೆಲ್ಲ ನಿನ್ನೊಳಗೈಕ್ಯವಾ 'ಗಿಹವು'!

ದಕ್ಷಿಣೇಶ್ವರ ದೇವನಿಲಯದ ಪರಮಯೋಗೀಂದ್ರ,
ಶ್ರೀ ವಿವೇಕಾನಂದ ಪೂಜಿತನಾತ್ಮ ಭಾವಿತನೆ,
ಲೋಕಜೀವರಿಗಾತ್ಮಶಕ್ತಿಯ ನೀಡಿ ಕಾಪಾಡು;
ನೆನೆವರೆಲ್ಲರ ಹೃದಯವಾಗಲಿ ನಿನ್ನ ನೆಲೆವೀಡು!

ಮೈಸೂರು
೨೭–೧೦–೧೯೩೪

— ಕುವೆಂಪು.



ಶ್ರೀ ರಾಮಕೃಷ್ಣ ಪರಮಹಂಸ ದೇವರು

" ಈಶ್ವರಲಾಭವೇ ಮನುಷ್ಯ ಜೀವನದ ಉದ್ದೇಶ "

# ಶ್ರೀ ರಾಮಕೃಷ್ಣ ವಚನವೇದ

## ೨೯

## ಶ್ರೀ ದುರ್ಗಾಪೂಜೆಯ ಮಹೋತ್ಸವ (ನವರಾತ್ರಿ)

**೨೬ನೆ ಸೆಪ್ಟೆಂಬರ್ ೧೮೮೪, ಸಪ್ತಮಿ, ಶುಕ್ರವಾರ.**

ಈ ದಿವಸ ಶ್ರೀರಾಮಕೃಷ್ಣ ಪರಮಹಂಸರು ಕಲ್ಕತ್ತಕ್ಕೆ ಬಂದಿದ್ದಾರೆ. ಅಲ್ಲಿ ಅವರಿಗೆ ಅನೇಕ ಕೆಲಸ. ರಾಜಧಾನಿಯಲ್ಲಿ ದುರ್ಗಾಪೂಜೆಯ ಮಹೋತ್ಸವ. ಪ್ರಾಯಶಃ ಪ್ರತಿಯೊಬ್ಬ ಹಿಂದುವಿನ ಮನೆಯಲ್ಲಿಯೂ ಈ ದಿವಸ ಭಗವತಿಯ ಸಪ್ತಮಿ ಪೂಜೆ ಆರಂಭ. ಪರಮಹಂಸರು ಅಧರ ಸೇನನ ಮನೆಯ ದುರ್ಗಾ ಪ್ರತಿಮೆಯನ್ನು ದರ್ಶನ ಮಾಡಬೇಕೆಂದು ಮತ್ತು ಆನಂದಮಯಿ ಶ್ರೀದುರ್ಗೆಯ ಆನಂದೋತ್ಸವದಲ್ಲಿ ಭಾಗಿಗಳಾಗ ಬೇಕೆಂದು ಇಚ್ಛಿಸಿದ್ದಾರೆ. ಅವರ ಇನ್ನೊಂದು ಇಚ್ಛೆ ಶಿವನಾಥ ಶಾಸ್ತ್ರಿಯನ್ನು ಕಂಡು ಮಾತನಾಡಬೇಕೆಂಬುದು.

ಸುಮಾರು ಮಧ್ಯಾಹ್ನದ ಸಮಯ. ಸಾಧಾರಣ ಬ್ರಾಹ್ಮ ಸಮಾಜದ ಫುಟ್‌ಪಾತಿನಲ್ಲಿ ಕೈಯಲ್ಲಿ ಛತ್ರಿಯನ್ನು ಹಿಡಿದು ಮಾಸ್ಟರ್ ಮಹಾಶಯ ಅಡ್ಡಾಡುತ್ತಿದ್ದಾನೆ. ಘಂಟೆ ಒಂದಾಯ್ತು, ಎರಡಾಯ್ತು, ಪರಮಹಂಸರು ಇನ್ನೂ ಬರಲಿಲ್ಲ. ಆತ ಮಹಾಲನವಿಶನ ಔಷಧಾಲಯದ ಹಂತಗಳ ಮೇಲೆ ಆಗಾಗ ಕುಳಿತುಕೊಳ್ಳುತ್ತಿದ್ದನು; ದುರ್ಗಾಪೂಜೆ ಬಂದಿರುವುದಕ್ಕಾಗಿ ಮಕ್ಕಳು ಆನಂದಪಡುತ್ತಿರುವುದನ್ನೂ ಮತ್ತು ಆಬಾಲ ವೃದ್ಧರಾಗಿ ಸಕಲರೂ ಸಂಭ್ರಮಭರಿತರಾಗಿರುವುದನ್ನೂ ನೋಡುತ್ತಿದ್ದನು.

ಘಂಟೆ ಮೂರಾಯಿತು. ಅನಂತರ ಸ್ವಲ್ಪ ಹೊತ್ತಿನಲ್ಲಿಯೆ ಶ್ರೀರಾಮಕೃಷ್ಣರು ಕುಳಿತಿದ್ದ ಗಾಡಿ ಅಲ್ಲಿಗೆ ಬಂದಿತು. ಅವರು ಅದರಿಂದ ಕೆಳಕ್ಕೆ ಇಳಿದೊಡನೆಯೆ ಸಮಾಜ ಮಂದಿರದ ಕಡೆ ತಿರುಗಿ ಕೈಮುಗಿದರು. ಅವರೊಡನೆ ಹಾಜರಾ ಮತ್ತು ಒಬ್ಬಿಬ್ಬರು ಭಕ್ತರು ಇದ್ದರು. ಮಾಸ್ಟರ್ ಪರಮಹಂಸರಿಗೆ ಪ್ರಣಾಮ ಮಾಡಿ ಅವರ ಪಾದಧೂಳಿ ಸ್ವೀಕರಿಸಿದನು. ಪರಮಹಂಸರು ಆತನಿಗೆ ತಾವು ಶಿವನಾಥಶಾಸ್ತ್ರಿಯ ಮನೆಗೆ ಹೋಗುತ್ತಿರುವುದಾಗಿ ತಿಳಿಸಿದರು. ಶ್ರೀರಾಮಕೃಷ್ಣರ ಆಗಮನ ವಾರ್ತೆಯನ್ನು

ಕೇಳಿದ ಸ್ವಲ್ಪ ಹೊತ್ತಿನಲ್ಲಿಯೆ, ಅಲ್ಲಿಗೆ ಕೆಲವು ಬ್ರಾಹ್ಮ ಭಕ್ತರು ಬಂದರು. ಅವರು ಪರಮಹಂಸರನ್ನು ಬ್ರಾಹ್ಮವತಾರದ ಮಧ್ಯೆ ಇದ್ದ ಶಿವನಾಥ ಶಾಸ್ತ್ರಿಯ ಮನೆಗೆ ಕರೆದುಕೊಂಡು ಹೋದರು. ಶಿವನಾಥಶಾಸ್ತ್ರಿ ಮನೆಯಲ್ಲಿರಲಿಲ್ಲ. ಏನು ಮಾಡಬೇಕು ಎಂದು ಯೋಚಿಸುವಷ್ಟರಲ್ಲಿಯೆ, ಬ್ರಾಹ್ಮ ಸಮಾಜದ ಪ್ರಮುಖರಾದ ವಿಜಯ ಗೋಸ್ವಾಮಿ, ಮಹಾಲನವಿಶ ಇವರೆ ಮೊದಲಾದವರು ಅಲ್ಲಿಗೆ ಬಂದು ಪರಮಹಂಸರಿಗೆ ಸುಖಾಗಮನ ಬಯಸಿ, ಅವರನ್ನು ಸಮಾಜ ಮಂದಿರದೊಳಕ್ಕೆ ಕರೆದುಕೊಂಡು ಹೋದರು.

ವೇದಿಯ ಬಳಿ ಸಂಕೀರ್ತನೆ ನಡೆಯುವ ಜಾಗದಲ್ಲಿ ಅವರಿಗೆ ಒಂದು ಆಸನ ಹಾಕಿದರು. ಆನಂದಮಯರಾದ ಪರಮಹಂಸರು ನಗುಮೊಗದಿಂದ ಅದರ ಮೇಲೆ ಕುಳಿತುಕೊಂಡರು. ವಿಜಯನೆ ಮೊದಲಾದ ಅನೇಕ ಬ್ರಾಹ್ಮ ಭಕ್ತರು ಅವರ ಸಮ್ಮುಖದಲ್ಲಿ ಕುಳಿತರು.

ಪರಮಹಂಸರು ಮಂದಹಾಸದಿಂದ ವಿಜಯನಿಗೆ, "ನಾನು ಕೇಳಿದೆ, ಇಲ್ಲೇನೊ ಒಂದು 'ಸೈನ್ ಬೋರ್ಡ್' ಇದೆಯಂತೆ. ಅನ್ಯ ಸಂಪ್ರದಾಯದವರು ಯಾರೂ ಇಲ್ಲಿಗೆ ಬರುವ ಹಾಗಿಲ್ಲವಂತೆ! ನರೇಂದ್ರ ಹೇಳಿದ: 'ಸಮಾಜಕ್ಕೆ ಹೋಗುವುದು ಚೆನ್ನಾಗಿಲ್ಲ, ಬೇಕಾದರೆ ಶಿವನಾಥನ ಮನೆಗೆ ಹೋಗಿ ಬನ್ನಿ' ಎಂದು.

"ನಾನು ಹೇಳ್ತೇನೆ, ಎಲ್ಲರೂ ಅವನನ್ನೇ ಕರೆಯುವುದು. ಅಲ್ಲಿ ತನ್ನ ಪರ ಏತಕ್ಕೆ? ಕೆಲವರು ಹೇಳ್ತಾರೆ ಸಾಕಾರ, ಕೆಲವರು ಹೇಳ್ತಾರೆ ನಿರಾಕಾರ. ನಾನು ಹೇಳ್ತೇನೆ ಯಾರಿಗೆ ಸಾಕಾರದಲ್ಲಿ ವಿಶ್ವಾಸವೊ ಅವರು ಸಾಕಾರವನ್ನೇ ಚಿಂತಿಸಲಿ, ಯಾರಿಗೆ ನಿರಾಕಾರದಲ್ಲಿ ವಿಶ್ವಾಸವೊ ಅವರು ನಿರಾಕಾರವನ್ನೇ ಚಿಂತಿಸಲಿ. ಆದರೆ ಒಟ್ಟಿನಲ್ಲಿ ಹೀಗೆ ಹೇಳಬಹುದು, ಸ್ವಮತ ಭ್ರಾಂತಿ ಒಳ್ಳೆಯದಲ್ಲ;—ಅಂದರೆ, ನನ್ನ ಧರ್ಮವೇ ಸರಿ ಉಳಿದವರದೆಲ್ಲ ತಪ್ಪು ಎಂಬುದು. 'ನನ್ನ ಧರ್ಮ ಸರಿಯಾದುದೆ; ಉಳಿದವರದು ಸರಿಯೊ ತಪ್ಪೊ, ಸತ್ಯವೊ ಮಿಥ್ಯವೊ ಅದು ನನಗೆ ಸರಿಯಾಗಿ ಗೊತ್ತಾಗುವುದಲ್ಲ–ಈ ಭಾವ ಒಳ್ಳೆಯದು.' ಏಕೆಂದರೆ, ಭಗವಂತನ ಸಾಕ್ಷಾತ್ಕಾರ ಆಗದ ಹೊರತು ಆತನ ಸ್ವರೂಪವನ್ನು ಅರಿತುಕೊಳ್ಳಲಾಗುವುದಿಲ್ಲ. ಕಬೀರ ಹೇಳುತ್ತಿದ್ದ: 'ಸಾಕಾರ ನನ್ನ ತಾಯಿ, ನಿರಾಕಾರ ನನ್ನ ತಂದೆ. ಯಾರನ್ನು ಹೊಗಳುವುದು, ಯಾರನ್ನು ತೆಗಳುವುದು? ತಕ್ಕಡಿ ತಟ್ಟೆಗಳೆರಡೂ ಒಂದೆ ಸಮತೂಕ!' ಎಂದು.

"ಹಿಂದೂ, ಮುಸಲಮಾನ, ಕ್ರೈಸ್ತ; ಶಾಕ್ತ, ಶೈವ, ವೈಷ್ಣವ; ಋಷಿಗಳ ಕಾಲದ ಬ್ರಹ್ಮಜ್ಞಾನಿಗಳು, ಈಗಿನ ಕಾಲದ ಬ್ರಹ್ಮಜ್ಞಾನಿಗಳು ನೀವು— ಎಲ್ಲರೂ ಆ ಒಂದೇ ವಸ್ತುವಿಗಾಗಿ ಹುಡುಕುತ್ತಿರುವುದು. ಆದರೆ ಯಾರ ಹೊಟ್ಟೆಗೆ ಯಾವುದು ಒಗ್ಗುತ್ತದೆಯೊ, ಅದನ್ನೆ ತಾಯಿ ಅಡಿಗೆ ಮಾಡುತ್ತಾಳೆ. ಮನೆಗೆ ಮೀನು ತಂದರೆ, ಐದು ಮಕ್ಕಳಿದ್ದರೆ, ತಾಯಿ ಎಲ್ಲರಿಗೂ ಪಲಾವು, ಕಾಲಿಯೂ ಮಾಡಿ ಬಡಿಸುವುದಿಲ್ಲ. ಎಲ್ಲರ ಜೀರ್ಣ ಶಕ್ತಿಯೂ ಒಂದೇ ಸಮನಾಗಿ ಇರುವುದಿಲ್ಲ. ಕೆಲವರಿಗೆ ಮೀನಿನ ಸಾರು ಮಾಡಿ ಬಡಿಸುತ್ತಾಳೆ. ಆದರೂ ತಾಯಿ ತನ್ನ ಎಲ್ಲಾ ಮಕ್ಕಳನ್ನೂ ಒಂದೇ ಸಮನಾಗಿ ಪ್ರೀತಿಸುತ್ತಾಳೆ.

"ನನ್ನ ಭಾವ ಏನು ಗೊತ್ತೆ? ಮೀನಿನ ಎಲ್ಲಾ ತರಹದ ಮೇಲೋಗರ ಗಳನ್ನು ತಿನ್ನಲು ನನಗೆ ಆಸೆ. ನನ್ನದು ಹೆಂಗಸಿನ ಸ್ವಭಾವ! (ಎಲ್ಲರೂ ನಗುತ್ತಾರೆ.) ನನಗೆ ಬಜ್ಜಿ ಮಾಡಿದ ಮೀನು, ಅರಿಸಿನ ಹಾಕಿದ ಮೀನು, ಹುಳಿಹಾಕಿದ ಮೀನು, ಬಾಟಿ ಚಚ್ಚಡಿ ಯಾವುದು ಎಲೆಗೆ ಬಿದ್ದರೂ ಸರಿಯೆ. ಇವೂ ಅಲ್ಲದೆ ಮೂಡಿ ಘಂಟೊ, ಕಾಲಿಯಾ, ಪಲಾವು ಯಾವುದು ಬಿದ್ದರೂ ಸರಿಯೆ ಹೊಡೆದಪ್ಪಳಿಸಿಬಿಡುತ್ತೇನೆ! (ಎಲ್ಲರೂ ನಗುತ್ತಾರೆ.)

"ನಿಜ ಏನು ಗೊತ್ತೆ? ದೇಶಕಾಲಪಾತ್ರಕ್ಕೆ ತಕ್ಕಂತೆ ಭಗವಂತ ನಾನಾ ಧರ್ಮಗಳನ್ನು ಮಾಡಿದ್ದಾನೆ. ಆದರೂ ಎಲ್ಲಾ ಮತಗಳೂ ಪಥ ಗಳೆ. ಆದರೆ ಮತವೇ ಭಗವಂತನಲ್ಲ. ಆಂತರಿಕ ಭಕ್ತಿಯಿಂದ ಯಾವು ದಾದರೂ ಸರಿ ಒಂದು ದಾರಿ ಹಿಡಿಯುವುದಾದರೆ ಅದರ ಮೂಲಕವೆ ಆತ ನನ್ನು ಮುಟ್ಟಬಹುದು. ಶ್ರದ್ಧೆಯೊಂದಿದ್ದರೆ ಯಾವ ಮತ ಹಿಡಿದರೇನು, ಅದರಲ್ಲಿ ತಪ್ಪಿದ್ದರೂ ಚಿಂತೆಯಿಲ್ಲ ಆತ ತಿದ್ದಿಕೊಡುತ್ತಾನೆ. ಯಾರಾದರೂ ಜಗನ್ನಾಥನನ್ನು ನೋಡಬೇಕೆಂದು ತುಂಬ ಆಕ್ಷಾಂಕ್ಷೆಯಿಂದ ಹೊರಟು ದಿಕ್ಕು ತಪ್ಪಿ ದಕ್ಷಿಣಕ್ಕೆ ಹೋಗುವುದಕ್ಕೆ ಬದಲು ಉತ್ತರಕ್ಕೆ ಹೋಗುತ್ತಿ ದ್ದರೆ, ಆವಶ್ಯಕವಾಗಿ ದಾರಿಯಲ್ಲಿ ಯಾರಾದರೂ ಸಿಕ್ಕಿ: 'ಅಯ್ಯಾ, ಈ ದಿಕ್ಕಿಗೆ ಹೋಗಬೇಡ, ದಕ್ಷಿಣ ದಿಕ್ಕಿಗೆ ಹೋಗು' ಎಂದು ಹೇಳಿ ಕೊಡುತ್ತಾರೆ. ಅವನು ಒಂದಲ್ಲ ಒಂದು ದಿವಸ ಜಗನ್ನಾಥದರ್ಶನ ಮಾಡಿಯೇ ಮಾಡುತ್ತಾನೆ.

"ಒಂದು ಪಕ್ಷ ಅನ್ಯ ಧರ್ಮಗಳಲ್ಲಿ ಲೋಪದೋಷಗಳಿದ್ದರೆ,

ಅದನ್ನು ಕಟ್ಟಿಕೊಂಡು ನಮಗೇನು? ಈ ಜಗತ್ತು ಯಾರದೊ ಆತನಿಗೆ ಅದರ ಚಿಂತನೆ. ನಮ್ಮ ಕರ್ತವ್ಯ ಹೇಗೋ ಮಾಡಿ ಜಗನ್ನಾಥನ ದರ್ಶನ ಮಾಡುವುದು. (ಬ್ರಾಹ್ಮ ಭಕ್ತರ ಕಡೆ ತಿರುಗಿ) ನಿಮ್ಮ ಮತವಂತು ಒಳ್ಳೆಯದೆ. ನೀವು ನಿರಾಕಾರ ಎಂದು ಹೇಳುತ್ತೀರಿ. ಅದೂ ಒಳ್ಳೆಯದೆ. ಕಜ್ಜಾಯವನ್ನು ಉದ್ದುದ್ದವಾಗಿ ತಿನ್ನಿ ಅಡ್ಡಡ್ಡಲಾಗಿ ತಿನ್ನಿ, ಹೇಗೆ ತಿಂದರೂ ಸಿಹಿಯೆ.

"ಆದರೆ ಸ್ವಮತ ಭ್ರಾಂತಿ ಒಳ್ಳೆಯದಲ್ಲ. ನೀನು ಗೋಸುಂಬೆ ಕಥೆ ಕೇಳಿದ್ದೀಯ? ಒಂದು ಸಲ ಒಬ್ಬ ಒಂದು ತೋಪಿಗೆ ಹೋಗಿ ಮರದ ಮೇಲೆ ಒಂದು ಗೋಸುಂಬೆ ಕಂಡ. ಆತ ತನ್ನ ಸ್ನೇಹಿತರಿಗೆ: 'ನಾನು ಆ ತೋಪಿನಲ್ಲಿ ಒಂದು ಕೆಂಪು ಗೋಸುಂಬೆ ನೋಡಿ ಬಂದೆ' ಎಂದ. ಆತನ ವಿಶ್ವಾಸ ಅದು ಸಂಪೂರ್ಣ ಕೆಂಪು ಎಂದೆ. ಅದೇ ತೋಪಿನಿಂದ ಬಂದ ಇನ್ನೊಬ್ಬ: 'ನಾನು ಒಂದು ಹಸುರು ಗೋಸುಂಬೆ ನೋಡಿ ಬಂದೆ' ಎಂದ. ಆತನ ವಿಶ್ವಾಸ ಅದು ಅಚ್ಚ ಹಸುರು ಎಂದೆ. ಆದರೆ ಯಾರು ಆ ತೋಪಿನಲ್ಲಿ ವಾಸವಾಗಿದ್ದಾನೊ ಆತ ಬಂದು: 'ನೀವೇನು ಹೇಳ್ತಿದ್ದೀರೊ ಅದೆಲ್ಲಾ ಸರಿ, ಆದರೆ ಆ ಪ್ರಾಣಿ ಕೆಲವು ವೇಳೆ ಕೆಂಪಾಗಿ, ಕೆಲವು ವೇಳೆ ಹಳದಿಯಾಗಿ, ಕೆಲವು ವೇಳೆ ಹಸುರಾಗಿ ಕಾಣಿಸಿಕೊಳ್ಳುತ್ತದೆ. ಇನ್ನು ಕೆಲವು ಸಮಯ ಅದಕ್ಕೆ ಯಾವ ಬಣ್ಣವೂ ಇರೋದಿಲ್ಲ' ಎಂದ.

"ವೇದದಲ್ಲಿ ಆತ ಸಗುಣ ನಿರ್ಗುಣ ಎಂದು ಹೇಳಿದೆ. ನೀವು ನಿರಾಕಾರ ಎಂದು ಹೇಳ್ತೀರಿ. ನಿಮ್ಮದು ಒಂದೇ ಸ್ವರ. ಆದರೂ ಚಿಂತೆಯಿಲ್ಲ. ಒಂದನ್ನು ಸರಿಯಾಗಿ ತಿಳಿದುಕೊಂಡರೆ ಇನ್ನೊಂದನ್ನೂ ತಿಳಿದುಕೊಳ್ಳಬಹುದು. ಅವನೆ ತಿಳಿಸಿಕೊಡುತ್ತಾನೆ. (ಅಲ್ಲಿ ಕುಳಿತಿದ್ದ ಒಬ್ಬಿಬ್ಬ ಬ್ರಾಹ್ಮ ಭಕ್ತರಕಡೆ ಬೆರಳುಮಾಡಿ) ಇಲ್ಲಿಗೆ ನಿಮ್ಮವರು ಯಾರು ಯಾರು ಬರುತ್ತಾರೊ ಅವರಿಗೆ ಈತನೂ ಗೊತ್ತು ಆತನೂ ಗೊತ್ತು."

ವಿಜಯ ಗೋಸ್ವಾಮಿ ಇನ್ನೂ ಸಾಧಾರಣ ಬ್ರಾಹ್ಮಸಮಾಜದ ಭಕ್ತ; ಆ ಸಮಾಜದಿಂದ ಸಂಬಳ ಪಡೆಯುತ್ತಿರುವ ಆಚಾರ್ಯರಲ್ಲಿ ಅವನೂ ಒಬ್ಬ. ಈಗ ಕೆಲವು ಕಾಲದಿಂದ ಬ್ರಾಹ್ಮ ಸಮಾಜದ ಎಲ್ಲಾ ನೀತಿ ನಿಯಮಗಳನ್ನೂ ಪರಿಪಾಲಿಸಲು ಆತನಿಗೆ ಸಾಧ್ಯವಾಗುತ್ತಿಲ್ಲ. ಸಾಕಾರ ವಾದಿಗಳೊಡನೆ ಬೆರೆಯುತ್ತಿದ್ದಾನೆ. ಇವೆಲ್ಲಾ ಕೂಡಿ, ಆತನಿಗೂ ಸಾಧಾರಣ ಬ್ರಾಹ್ಮಸಮಾಜದ ಮುಖ್ಯಸ್ಥರಿಗೂ ಒಂದು ವಿಧವಾದ ಮನಸ್ತಾಪಕ್ಕೆ

ಕಾರಣವಾಗಿದೆ. ಸಮಾಜದ ಬ್ರಾಹ್ಮ ಭಕ್ತರಲ್ಲಿ ಅನೇಕರಿಗೆ ಆತನ ಮೇಲೆ ಅಸಂತುಷ್ಟಿ. ಪರಮಹಂಸರು ಇದ್ದಕ್ಕಿದ್ದಹಾಗೆ ವಿಜಯನ ಕಡೆ ತಿರುಗಿ ಮತ್ತೆ ಮಾತನಾಡಲಾರಂಭಿಸಿದರು.

ಶ್ರೀ ರಾಮಕೃಷ್ಣರು ಮುಗುಳು ನಗುತ್ತ ವಿಜಯನಿಗೆ: "ನೀನು ಸಾಕಾರ ವಾದಿಗಳೊಡನೆ ಬೆರೆಯುತ್ತಿರುವೆ ಎಂದು ನಿನ್ನನ್ನು ಬಹಳವಾಗಿ ನಿಂದಿಸಿರುವರಂತೆ? ಯಾರು ಭಗವಂತನ ಭಕ್ತನೊ ಆತನಿಗೆ ನಿಶ್ಚಲವಾದ ಬುದ್ಧಿಯ ಆವಶ್ಯಕತೆ ಇದೆ—ಕಮ್ಮಾರನ ಅಡಿಗಲ್ಲಿನಂತೆ. ಸುತ್ತಿಗೆ ಪೆಟ್ಟು ಒಂದರಮೇಲೊಂದು ಬೀಳುತ್ತಲೇ ಇರುತ್ತದೆ. ಆದರೂ ಅದು ನಿರ್ವಿಕಾರಿ. ತಿಳಿಗೇಡಿಗಳು ನಿನ್ನ ಮೇಲೆ ಏನೇನೊ ಹೇಳುತ್ತಾರೆ, ಎಷ್ಟೊಂದೊ ನಿಂದಿಸುತ್ತಾರೆ. ನಿನಗೆ ನಿಜವಾಗಿ ಭಗವಂತ ಬೇಕಾಗಿದ್ದರೆ, ಇವನ್ನೆಲ್ಲಾ ನೀನು ಸಹಿಸಿಕೊಬೇಕು. ದುಷ್ಟರ ಮಧ್ಯೆ ಇರಬೇಕಾಗಿ ಬಂದರೆ ಭಗವಂತನ ಚಿಂತನೆ ಮಾಡುವುದಕ್ಕೆ ಆಗುವುದಿಲ್ಲವೊ? ನೋಡು ಕಾಡಿನ ಮಧ್ಯೆ ಋಷಿಗಳು ಭಗವಚ್ಚಿಂತನೆ ಮಾಡುತ್ತಿದ್ದರು. ಸುತ್ತ ಮುತ್ತಲು ಹುಲಿ ಕರಡಿ ಇನ್ನೂ ಅನೇಕ ಹಿಂಸ್ರ ಜಂತುಗಳು. ದುಷ್ಟರದು ಹುಲಿಕರಡಿಗಳ ಸ್ವಭಾವ; ಅಟ್ಟಿಸಿಬಂದು ಅನಿಷ್ಟ ಮಾಡುತ್ತಾರೆ.

"ಈ ಒಂದೆರಡು ವಿಚಾರಗಳಲ್ಲಿ ಸಾವಧಾನದಿಂದಿರಬೇಕು. ಒಂದನೆಯದಾಗಿ ದೊಡ್ಡ ಮನುಷ್ಯ. ಆತನಿಗೆ ದುಡ್ಡು ಕಾಸು ಆಳು ಕಾಳು ಯಥೇಚ್ಛ. ಮನಸ್ಸು ಮಾಡಿದರೆ ನಿನಗೆ ಅನಿಷ್ಟ ತರಬಲ್ಲ. ಅಂಥವನೊಡನೆ ಎಚ್ಚರಿಕೆಯಿಂದ ಮಾತು ಕತೆ ಆಡಬೇಕು. ಆತ ಹೇಳುವುದಕ್ಕೆಲ್ಲ 'ಹ್ಞೂ' ಗುಟ್ಟಬೇಕಾಗಿ ಬರಬಹುದು. ಎರಡನೆಯದಾಗಿ ನಾಯಿ. ಅದು ಅಟ್ಟಿಸಿಕೊಂಡು ಬಂದಾಗ ಅಥವಾ ಬೊಗಳುವಾಗ ಓಡಿಹೋಗದೆ ಲೊಚಗುಟ್ಟ ಮಾತಾಡಿಸಿ ಸಮಾಧಾನಪಡಿಸಬೇಕು. ಮೂರನೆಯದಾಗಿ ಗೂಳಿ. ಅದು ತಿವಿಯಲು ಬಂದರೆ ಆಗಲೂ ಹೊ! ಹೊ! ಹೊ! ಎಂದು ಹೇಳಿ ಅದನ್ನು ಸುಮ್ಮನಿರಿಸಬೇಕು. ನಾಲ್ಕನೆಯದಾಗಿ ಕುಡುಕ. ನೀನೇನಾದರು ಅವನನ್ನು ರೇಗಿಸಿಬಿಟ್ಟರೆ, ನೀನು ಹಾಗೆ ನೀನು ಹೀಗೆ ಎಂದು ನಿನ್ನ ಹದಿನಾಲ್ಕು ವಂಶಗಳ ಪಾರಂಪರ್ಯವನ್ನೆಲ್ಲ ಹಿಡಿದು ಬೈದುಬಿಡುತ್ತಾನೆ. ಅವನಿಗೆ ಹೇಳಬೇಕು: 'ಏನಣ್ಣಾ! ಹೇಗಿದ್ದೀಯೆ?' ಎಂದು. ಆಗ ಅವನಿಗೆ ತುಂಬಾ ಆನಂದ. ನಿನ್ನ ಹತ್ತಿರ ಕುಳಿತು ಹುಕ್ಕ ಸೇದುತ್ತಾನೆ.

"ದುಷ್ಟರನ್ನು ಕಂಡರೆ ನಾನು ಎಚ್ಚತ್ತುಕೊಳ್ಳುತ್ತೇನೆ. ಯಾರಾದರು

ಬಂದು, 'ಇಲ್ಲಿ ಹುಕ್ಕ ಗಿಕ್ಕ ಇದೆಯೆ?' ಎಂದು ಕೇಳಿದರೆ, 'ಇದೆ' ಎಂದು ಹೇಳುತ್ತೇನೆ. ಕೆಲವರಿಗೆ ಸರ್ಪದ ಸ್ವಭಾವ. ಮುನ್ ಸೂಚನೆ ಕೊಡದೆಯೆ 'ಬುಸ್' ಎಂದು ಕಚ್ಚಿಬಿಡುತ್ತಾರೆ. ಅದರಿಂದ ಪಾರಾಗಬೇಕಾದರೆ ಬಹಳ ಬುದ್ಧಿವಂತಿಕೆ ಉಪಯೋಗಿಸಬೇಕು. ಇಲ್ಲದಿದ್ದರೆ ನಿನಗೆ ತುಂಬಾ ಕೋಪ ಉಕ್ಕಿ ಪ್ರತೀಕಾರಕ್ಕೆ ಇಚ್ಛೆಯಾಗಬಹುದು. ಆದ್ದರಿಂದ ಆಗಾಗ ಸತ್ಸಂಗ ಮಾಡುವುದು ಅತ್ಯಂತ ಆವಶ್ಯಕ. ಸತ್ಸಂಗ ಮಾಡಿದರೆ ಸದಸತ್ ವಿಚಾರ ಉಂಟಾಗುತ್ತದೆ."

ವಿಜಯ: "ನನಗೆ ಸಮಯವೇ ಇಲ್ಲ. ಇಲ್ಲಿಯ ಕೆಲಸಕಾರ್ಯ ಗಳಲ್ಲಿ ಕಟ್ಟಿಬಿದ್ದಿದ್ದೇನೆ."

ಪರಮಹಂಸರು: "ನೀವೆಲ್ಲ ಆಚಾರ್ಯರು. ಉಳಿದವರಿಗೆ ರಜಾ ಸಿಕ್ಕುತ್ತದೆ. ಆದರೆ ಆಚಾರ್ಯರಿಗೆ ಸಿಗೋದಿಲ್ಲ. ಎಸ್ಟೇಟಿನಲ್ಲಿ ಮ್ಯಾನೇಜರಿಗೆ ಒಂದು ಕಡೆ ವ್ಯವಸ್ಥೆ ಮುಗಿಯಿತೊ ಇನ್ನೊಂದು ಕಡೆ ವ್ಯವಸ್ಥೆಗೆ ಆತನನ್ನು ಕಳುಹಿಸುತ್ತಾನೆ ಜಮೀನುದಾರ. ಹಾಗೆಯೆ ನಿಮಗೂ ರಜಾ ಸಿಗೋದಿಲ್ಲ." (ಎಲ್ಲರೂ ನಗುತ್ತಾರೆ.)

ವಿಜಯ (ಕೈ ಜೋಡಿಸಿ): "ನೀವು ನನಗೊಂದುಸ್ವಲ್ಪ ಆಶೀರ್ವಾದ ಮಾಡಿ."

ಶ್ರೀ ರಾಮಕೃಷ್ಣರು: "ಇದು ತಿಳಿಯದವರ ಮಾತು. ಆಶೀರ್ವಾದ ಮಾಡೋನು ಭಗವಂತ."

ವಿಜಯ: "ದಯವಿಟ್ಟು ಸ್ವಲ್ಪ ಉಪದೇಶಮಾಡಿ."

ಪರಮಹಂಸರು ಸಮಾಜ ಮಂದಿರದ ನಾಲ್ಕುಕಡೆಗೂ ದೃಷ್ಟಿಹಾಕಿ ಮುಗುಳು ನಗುತ್ತ: "ಇದೂ ಒಂದು ತರದಲ್ಲಿ ಒಳ್ಳೇದೆ! ಜೋನಿ,[1] ಗಟ್ಟ. ಇಲ್ಲಿ ಜೋನಿಯೂ ಇದೆ, ಗಟ್ಟಿಯೂ ಇದೆ.

"ನನಗೆ ಹೆಚ್ಚಾಗಿ ನಂಬರು ಬಂದು ನನ್ನ ಆಟ ಮುಗಿದುಹೋಗಿದೆ. (ಎಲ್ಲರೂ ನಗುತ್ತಾರೆ.) ನಿನಗೆ ನಕ್ಸ್ ಆಟ ಬರುತ್ತದೆಯೆ? ಅದರಲ್ಲಿ ಯಾರಿಗೆ ಹದಿನೇಳಕ್ಕಿಂತ ಹೆಚ್ಚಾಗಿ ನಂಬರು ಬರುತ್ತದೆಯೊ ಅವರ ಆಟ ಮುಗಿದುಹೋಗುತ್ತದೆ. ಅದು ಒಂದು ತರದ ಇಸ್ಪೀಟ್ ಆಟ. ಯಾರಿಗೆ

1. ಬ್ರಾಹ್ಮ ಸಮಾಜದ ಆದರ್ಶ ಲೌಕಿಕ ಮತ್ತು ಆಧ್ಯಾತ್ಮಿಕಗಳ ಸಮ್ಮಿಶ್ರಣ. ಅದನ್ನ ಪರಮಹಂಸರು ಜೋನಿ, ಗಟ್ಟಿ ಎಂದು ರೂಪಕ ರೀತಿಯಲ್ಲಿ ಸೂಚಿಸಿದ್ದಾರೆ.

ಹದಿನೇಳಕ್ಕಿಂತ ಕಮ್ಮಿ, ಅಂದರೆ ಐದೊ, ಏಳೊ ಅಥವಾ ಹತ್ತೊ ನಂಬರು ಬಂದಿರುವುದೊ ಅವರೆ ತುಂಬ ಜಾಣರು. ನಾನು ಹೆಚ್ಚಾಗಿ ನಂಬರು ತೆಗೆದು ನನ್ನ ಆಟ ಪೂರೈಸೇ ಹೋಗಿದೆ.

"ಕೇಶವಸೇನ ತನ್ನ ಮನೆಯಲ್ಲಿ ಉಪನ್ಯಾಸ ಕೊಟ್ಟ. ನಾನು ಕೇಳುತ್ತಿದ್ದೆ. ಅನೇಕರು ಬಂದಿದ್ದರು. ಹೆಂಗಸರು ಪರದೆ ಹಿಂದೆ ಕುಳಿತ್ತಿದ್ದರು. ಕೇಶವ ಹೇಳಿದ: 'ಹೇ ಭಗವಂತ! ನಾವು ಒಮ್ಮೆಯೆ ಭಕ್ತಿ ನದಿಯಲ್ಲಿ ಮುಳುಗಿ ಹೋಗುವಂತೆ ಅನುಗ್ರಹಮಾಡು' ಎಂದು. ನಾನು ನಗುತ್ತ ಕೇಶವನಿಗೆ ಹೇಳಿದೆ: 'ಭಕ್ತಿನದಿಯಲ್ಲಿ ನೀವು ಒಮ್ಮೆಯೆ ಮುಳುಗಿ ಹೋಗಿಬಿಟ್ಟರೆ, ಪರದೆ ಹಿಂದೆ ಇರುವವರ ಗತಿ ಏನಾಗಬೇಕು? ಆದ್ದರಿಂದ ಒಂದು ಕೆಲಸ ಮಾಡಿ. ಮುಳುಗೇನೊ ಹಾಕಿ, ಆದರೆ ಆಗಾಗ ದಡಕ್ಕೂ ಬಂದು ಹೋಗಿ. ಒಂದೇ ಸಾರಿಗೆ ಮುಳುಗಿ ಕೆಸರು ಕಚ್ಚಬೇಡಿ' ಎಂದು. ಇದನ್ನು ಕೇಳಿ ಕೇಶವ ಮತ್ತು ಎಲ್ಲರೂ ಹೊ! ಹೊ! ಹೊ! ಎಂದು ನಗಲಾರಂಭಿಸಿದರು.

"ಏನೇ ಆದರೂ ನಿಜವಾದ ಆಕಾಂಕ್ಷೆಯೊಂದಿದ್ದರೆ ಸಂಸಾರದಲ್ಲಿದ್ದರೂ ಭಗವಂತನ ಸಾಕ್ಷಾತ್ಕಾರ ಪಡೆಯಬಹುದು. 'ನಾನು ನನ್ನದು' ಎಂಬುದೆ ಅಜ್ಞಾನ 'ಹೇ ಭಗವಂತ, ನೀನು, ನಿನ್ನದು' ಎಂಬುದೆ ಜ್ಞಾನ.

"ಶ್ರೀಮಂತರ ಮನೆಯ ದಾಸಿಯಂತೆ ಸಂಸಾರದಲ್ಲಿರು. ಆಕೆ ಎಲ್ಲಾ ಕೆಲಸ ಮಾಡುತ್ತಾಳೆ. ಯಜಮಾನನ ಮಗುವನ್ನು ಸಲಹುತ್ತಾಳೆ. ಅದನ್ನು, 'ನನ್ನ ಹರಿ' ಎಂದು ಕರೆಯುತ್ತಾಳೆ. ಆದರೆ ಆಕೆಗೆ ತನ್ನ ಮನಸ್ಸಿನಲ್ಲಿ ಚೆನ್ನಾಗಿ ಗೊತ್ತಿದೆ, ಆ ಮಗು ತನ್ನದಲ್ಲವೆಂದು. ಆಕೆ ಎಲ್ಲಾ ಕೆಲಸಗಳನ್ನೂ ಮಾಡುತ್ತಾಳೆ. ಆದರೆ ಆಕೆಯ ಮನಸ್ಸು ಮಾತ್ರ ತನ್ನ ಹಳ್ಳಿಯ ಮೇಲೆ ನೆಲೆಸಿದೆ. ಅದೇರೀತಿ ಸಂಸಾರದ ಎಲ್ಲಾ ಕೆಲಸಗಳನ್ನು ಮಾಡು. ಆದರೆ ಮನಸ್ಸನ್ನು ಮಾತ್ರ ಭಗವಂತನ ಕಡೆ ತಿರುಗಿಸಿ ಇಡು. ಇದನ್ನು ತಿಳಿದುಕೊ, 'ಮನೆ, ಪರಿವಾರ, ಪುತ್ರ ಇವೆಲ್ಲ ನನ್ನವಲ್ಲ, ಎಲ್ಲವೂ ಆತನದು' ಎಂದು. ನೀನು ಆತನ ದಾಸ ಮಾತ್ರ.

"ಮಾನಸಿಕವಾಗಿ ತ್ಯಾಗಮಾಡಲು ನಾನು ಹೇಳುತ್ತಿದ್ದೇನೆ. ಸಂಸಾರ ತ್ಯಜಿಸಬೇಕೆಂದು ಹೇಳುತ್ತಿಲ್ಲ. ಸಂಸಾರದಲ್ಲಿ ಅನಾಸಕ್ತರಾಗಿ ಇದ್ದುಕೊಂಡು ನಿಜವಾಗಿ ವ್ಯಾಕುಲ ಹೃದಯರಾಗಿದ್ದರೆ ಆತನ ಸಾಕ್ಷಾತ್ಕಾರ ಪಡೆಯಬಹುದು.

ಪರಮಹಂಸರು ವಿಜಯನಿಗೆ: "ನಾನು ಕಣ್ಣು ಮುಚ್ಚಿ ಧ್ಯಾನಮಾಡು ತ್ತಿದ್ದೆ. ಅನಂತರ ಭಾವಿಸಿದೆ, ಹೀಗೆ ಮಾಡಿದರೆ (ಕಣ್ಣು ಮುಚ್ಚಿದರೆ) ಭಗವಂತನಿದ್ದಾನೆ, ಹೀಗೆ ಮಾಡಿದರೆ (ಕಣ್ಣು ತೆರೆದರೆ) ಇಲ್ಲವೆ? ಕಣ್ಣು ತೆರೆದಿದ್ದರೂ ಕೂಡ ಸರ್ವ ಭೂತಗಳಲ್ಲಿಯೂ ಭಗವಂತನಿರುವುದನ್ನು ನೋಡಿ ದ್ದೇನೆ. ಮನುಷ್ಯರಲ್ಲಿ, ಪ್ರಾಣಿಗಳಲ್ಲಿ, ಗಿಡಮರಗಳಲ್ಲಿ, ಚಂದ್ರಸೂರ್ಯ ರಲ್ಲಿ, ಸ್ಥಳದಲ್ಲಿ, ಜಲದಲ್ಲಿ ಸರ್ವ ಭೂತಗಳಲ್ಲಿಯೂ ಆತನೆ ಇದ್ದಾನೆ.

"ಶಿವನಾಥನನ್ನು ಕಂಡರೆ ನನಗೇಕೆ ಇಷ್ಟ? ಯಾರು ಬಹಳ ಕಾಲ ಭಗವಂತನ ಚಿಂತನೆ ಮಾಡುತ್ತಾರೊ ಅವರಲ್ಲಿ ಸಾರವಿದೆ. ಅವರ ಅಂತರ್ಯದಲ್ಲಿ ಭಗವಂತನ ಶಕ್ತಿ ಇದೆ. ಅದೂ ಅಲ್ಲದೆ ಯಾರು ಚೆನ್ನಾಗಿ ಹಾಡಬಲ್ಲರೊ, ಚೆನ್ನಾಗಿ ನುಡಿಸಬಲ್ಲರೊ, ಯಾವುದಾದರು ಒಂದು ಕಲೆ ಯನ್ನು ಚೆನ್ನಾಗಿ ತಿಳಿದಿರುವರೊ ಅಂಥವರೊಳಗೂ ಸಾರವಿದೆ, ಭಗವಂತನ ಶಕ್ತಿಇದೆ. ಇದು ಗೀತೆಯ ಮತ. ಚಂಡಿಯಲ್ಲಿ ಇದೆ: 'ಯಾರು ಅತ್ಯಂತ ಸುಂದರನೊ ಆತನೊಳಗೂ ಸಾರವಿದೆ, ಭಗವಂತನ ಶಕ್ತಿ ಇದೆ!' ಎಂದು. (ವಿಜಯನಿಗೆ) ಆಹ! ಕೇದಾರನಿಗೆ ಎಂಥ ಸ್ವಭಾವ ಬಂದುಬಿಟ್ಟಿದೆ! ಬಂದೊಡನೆಯೆ ಅಳಲಾರಂಭಿಸುತ್ತಾನೆ. ಆತನ ಕಣ್ಣುಗಳೆರಡೂ, ಯಾವಾಗ ನೋಡಿದರೂ ಸಕ್ಕರೆ ಪಾಕದಿಂದ ತೆಗೆದ ಛಾಣಾದೊಡೆಯಂತೆ (ಹಾಲಿನ ಗರಣೆ) ಕಾಣುತ್ತವೆ."

ವಿಜಯ: "ಢಾಕಾದಲ್ಲಿ ಯಾವಾಗ ನೋಡಿದರೂ ಆತನ ಬಾಯಲ್ಲಿ ಕೇವಲ ನಿಮ್ಮ ಮಾತೆ. ಇಲ್ಲಿಗೆ ಬಂದು ತಮ್ಮನ್ನು ಕಾಣಲು ಬಹಳ ವ್ಯಾಕುಲನಾಗಿದ್ದಾನೆ."

ಸ್ವಲ್ಪ ಹೊತ್ತಿನ ಮೇಲೆ ಪರಮಹಂಸರು ಮೇಲಕ್ಕೆದ್ದರು. ಬ್ರಾಹ್ಮ ಭಕ್ತರು ಅವರಿಗೆ ನಮಸ್ಕಾರ ಮಾಡಿದರು. ಅವರೂ ಕೂಡ ಅವರ ಕಡೆ ನಮಸ್ಕಾರ ಮಾಡಿದರು. ಅನಂತರ ಶ್ರೀ ರಾಮಕೃಷ್ಣರು ಗಾಡಿಯಲ್ಲಿ ಕುಳಿತುಕೊಂಡರು. ಅಧರಸೇನನ ಮನೆಯ ಪ್ರತಿಮೆ ದರ್ಶನ ಮಾಡಲು ಹೋಗುತ್ತಿದ್ದಾರೆ.

**೨೮ನೆ ಸೆಪ್ಟೆಂಬರ್ ೧೮೮೪, ಮಹಾಷ್ಟಮಿ, ಭಾನುವಾರ.**

ಇಂದು ಮಹಾಷ್ಟಮಿ. ಶ್ರೀ ರಾಮಕೃಷ್ಣರು ದುರ್ಗಾ ಪ್ರತಿಮೆಯ ದರ್ಶನಕ್ಕಾಗಿ ಕಲ್ಕತ್ತಕ್ಕೆ ಬಂದಿರುತ್ತಾರೆ. ಅಧರಸೇನನ ಮನೆಯಲ್ಲಿ

ಶ್ರೀದುಗಾಪೂಜೆಯ ಮಹೋತ್ಸವ ನಡೆಯುತ್ತಿದೆ. ಅತನ ಮನೆಯಿಂದ ಈ ಮೂರು ದಿವಸಗಳೂ – ಸಪ್ತಮಿ, ಅಷ್ಟಮಿ, ನವಮಿ – ಶ್ರೀರಾಮ ಕೃಷ್ಣರಿಗೆ ಆಹ್ವಾನ. ಅವರು ಆತನ ಮನೆಗೆ ಹೋಗಲು ಮುನ್ನ ರಾಮನ ಮನೆಗೆ ಹೋಗಿ ಅನಂತರ ಆತನ ಮನೆಗೆ ಹೋಗುತ್ತಿದ್ದಾರೆ. ಅಲ್ಲಿಗೆ ವಿಜಯ, ಕೇದಾರ, ರಾಮ, ಸುರೇಂದ್ರ, ಚುಣಿಲಾಲ, ನರೇಂದ್ರ, ನಿರಂಜನ, ನಾರಾಯಣ, ಹರೀಶ, ಬಾಬುರಾಮ, ಮಾಸ್ಟರ್ ಇವರೆ ಮೊದಲಾದವರು ಬಂದಿದ್ದಾರೆ. ಬಲರಾಮ, ರಾಖಾಲ ಇನ್ನೂ ಬೃಂದಾ ವನದಲ್ಲೆ ಇದ್ದಾರೆ.

ಶ್ರೀ ರಾಮಕೃಷ್ಣರು ವಿಜಯ ಮತ್ತು ಕೇದಾರನ ಕಡೆ ನೋಡಿ ನಗುತ್ತ: "ಈ ದಿನ ಒಳ್ಳೆ ಜೊತೆ ಸೇರಿದೆ! ನಿಮ್ಮಿಬ್ಬರದೂ ಒಂದೆ ರೀತಿಯ ಭಾವ. (ವಿಜಯನ ಕಡೆ ತಿರುಗಿ) ಒಳ್ಳೇದು, ಶಿವನಾಥಶಾಸ್ತ್ರಿ? ನೀವು—"

ವಿಜಯ: "ಹೌದು, ಆತನಿಗೆ ಗೊತ್ತಾಗಿದೆ. ನಾನು ಆತನನ್ನು ನೋಡಲಾಗಲಿಲ್ಲ. ಆದರೆ ಸಮಾಚಾರ ತಿಳಿಸಿದೇನೆ. ಅದು ಆತನಿಗೆ ಗೊತ್ತಾಗಿದೆ."

ಶಿವನಾಥ ಶಾಸ್ತ್ರಿಯನ್ನು ಕಂಡು ಮಾತನಾಡಿಸಲು ಶ್ರೀ ರಾಮ ಕೃಷ್ಣರು ಮೊನ್ನೆ ಆತನ ಮನೆಗೆ ಹೋಗಿದ್ದರು. ಆದರೆ ಆತ ಮನೆಯಲ್ಲಿ ಇರಲಿಲ್ಲ. ಬಳಿಕ ವಿಜಯ ಆ ಸಮಾಚಾರವನ್ನು ಆತನಿಗೆ ತಿಳಿಸಿದ. ಕೆಲಸಕಾರ್ಯಗಳ ನಿಮಿತ್ತ ಆತ ಇಂದೂ ಶ್ರೀರಾಮಕೃಷ್ಣರನ್ನು ಕಾಣ ಲಾಗಲಿಲ್ಲ.

ಪರಮಹಂಸರು ವಿಜಯನಿಗೆ: "ನನ್ನ ಮನಸ್ಸಿನಲ್ಲಿ ನಾಲ್ಕು ಇಚ್ಛೆ ಎದ್ದಿವೆ. ಮೊದಲನೆಯದು, ಬದನೆಕಾಯಿ ಮೀನಿನ ಸಾರು ಉಣಬೇಕು; ಎರಡನೆಯದು, ಶಿವನಾಥಶಾಸ್ತ್ರಿಯ ನೋಡಬೇಕು; ಮೂರನೆಯದು, ಭಕ್ತರು ಹರಿನಾಮೋಚ್ಚಾರಣೆ ಮಾಡುತ್ತ ಜಪಮಾಲೆ ತಿರುಗಿಸುವುದ ನೋಡಬೇಕು; ನಾಲ್ಕನೆಯದು, ಅಷ್ಟಮಿ ದಿನ ಒಂದೆಂಟಾಣೆ 'ಕಾರಣ'[1] ವನ್ನು ತಾಂತ್ರಿಕ ಭಕ್ತರಿಗೆ ನೀಡಬೇಕು; ಅವರು ಅದನ್ನು ಕುಡಿಯುವಾಗ ನಾನು ನೋಡಬೇಕು; ಆಮೇಲೆ ಪ್ರಣಾಮ ಮಾಡಬೇಕು."

---

1. ಭಗವಂತನಿಗೆ ಅರ್ಪಿಸುವ ಮದ್ಯಕ್ಕೆ 'ಕಾರಣ' ಎಂದು ಹೆಸರು.

ನರೇಂದ್ರ ಪರಮಹಂಸರ ಮುಂದೆ ಕುಳಿತಿದ್ದಾನೆ. ಇಪ್ಪತ್ತೆರಡೊ ಇಪ್ಪತ್ತುಮೂರೊ ವಯಸ್ಸು. ಪರಮಹಂಸರ ದೃಷ್ಟಿ, ಮಾತನಾಡುತ್ತಿದ್ದ ಹಾಗೆಯೆ ನರೇಂದ್ರನ ಮೇಲೆ ಬಿತ್ತು. ಅವರು ಎದ್ದುನಿಂತು ಸಮಾಧಿಸ್ಥ ರಾದರು. ತಮ್ಮ ಒಂದು ಪಾದವನ್ನು ನರೇಂದ್ರನ ಮಂಡಿಯಮೇಲೆ ಊರಿ ನಿಂತಿದ್ದಾರೆ. ಬಾಹ್ಯಜ್ಞಾನ ಸಂಪೂರ್ಣ ಶೂನ್ಯರಾಗಿದ್ದಾರೆ. ಕಣ್ಣು ಎವೆಯಿಕ್ಕದೆ ನೋಡುತ್ತಿವೆ. ಬಹಳ ಹೊತ್ತಿನಮೇಲೆ ಅವರ ಸಮಾಧಿ ಇಳಿಮುಖವಾಯಿತು. ಬ್ರಹ್ಮಾನಂದದ ಅಮಲು ಇನ್ನೂ ಇಳಿದಿಲ್ಲ. ಪರಮಹಂಸರು ತಮ್ಮಷ್ಟಕೆ ತಾವೆ ಮಾತನಾಡಿಕೊಳ್ಳುತ್ತಿದ್ದಾರೆ. ಭಾವಾ ವಿಷ್ಟರಾಗಿ ಭಗವನ್ನಾಮೋಚ್ಚಾರಣೆ ಮಾಡುತ್ತಿದ್ದಾರೆ. ಹೇಳುತ್ತಿದ್ದಾರೆ: "'ಸಚ್ಚಿದಾನಂದ! ಸಚ್ಚಿದಾನಂದ!' ಎಂದು ಹೇಳಲೆ? ಬೇಡ. ಈ ದಿನ ಕಾರಣಾನಂದದಾಯಿನಿ! ಕಾರಣಾನಂದಮಯಿ! ಸ, ರಿ, ಗ, ಮ, ಪ, ದ, ನಿ. ನೀಯಲ್ಲಿ ಇರುವುದು ಒಳ್ಳೆಯದಲ್ಲ. ಅಲ್ಲಿ ಹೆಚ್ಚುಹೊತ್ತು ಇರಲಾಗುವುದಿಲ್ಲ. ಅದರ ಹಿಂದಿನ ಮನೆಯಲ್ಲಿ ಇರುತ್ತೇನೆ.

"ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ. ಮಹಾಕಾರಣ ಮುಟ್ಟಿದರೆ ಬಾಯಿ ಕಟ್ಟಿಹೋಗುತ್ತದೆ. ಅಲ್ಲಿ ಮಾತಿನ ಸೊಲ್ಲೇ ಇಲ್ಲ.

"ಈಶ್ವರ ಕೋಟಿ ಮಹಾಕಾರಣವನ್ನು ಮುಟ್ಟಿ ಹಿಂದಿರುಗಿ ಬರಬಲ್ಲ. ಅವತಾರಾದಿಗಳು ಈಶ್ವರ ಕೋಟಿ. ಅವರು ಮೇಲೆ ಹತ್ತಿ ಹೋಗಬಲ್ಲರು, ಕೆಳಗೆ ಇಳಿದು ಬರಬಲ್ಲರು. ಚಾವಣಿಯ ಮೇಲೆ ಹತ್ತಿ ಹಂತಗಳ ಮೂಲಕ ಕೆಳಕ್ಕೆ ಇಳಿದು ಕೆಳಗಿನ ಅಂತಸ್ತಿನಲ್ಲಿ ಅಡ್ಡಾಡ ಬಲ್ಲರು. ಅವರದು ಅನುಲೋಮ ವಿಲೋಮ. ರಾಜನ ಏಳು ಅಂತಸ್ತಿನ ಮನೆ ತೆಗೆದುಕೊಳ್ಳಿ. ಹೊರಗಿನವರಿಗೆ ಕೆಳಗಿನ ಅಂತಸ್ತಿಗೆ ಮಾತ್ರ ಅವಕಾಶ. ಆದರೆ ರಾಜ ಕುಮಾರ, ಅದು ಆತನ ಮನೆಯೇ ಆದುದರಿಂದ ಏಳು ಅಂತಸ್ತಿನಲ್ಲಿ ಎಲ್ಲಿ ಬೇಕಾದರೆ ಅಲ್ಲಿ ಓಡಾಡಬಲ್ಲ. ಒಂದು ತರದ ಆಕಾಶ ಬಾಣವಿದೆ. ಮೊದಲು ಅದು ಒಂದು ವಿಧದ ಕಿಡಿ ಕಾರಿ ತೆಪ್ಪಗಾಗುತ್ತದೆ. ಸ್ವಲ್ಪ ಹೊತ್ತಿನನಂತರ ಇನ್ನೊಂದು ನಮೂನೆ ಕಿಡಿ ಕಾರಿ ಸುಮ್ಮಗಾಗುತ್ತದೆ. ಆ ಬಳಿಕ ಮತ್ತೊಂದು ತರದ ಕಿಡಿ ಕಾರಿ ತೆಪ್ಪಗಾಗುತ್ತದೆ. ಅದರ ನಮೂನೆ ಮುಗಿಯುವ ಹಾಗೇ ಇಲ್ಲ. ಆದರೆ ಇನ್ನೊಂದು ವಿಧದ ಆಕಾಶ ಬಾಣವಿದೆ. ಬೆಂಕಿ ತಾಗಿದ ಸ್ವಲ್ಪ ಹೊತ್ತಿನಲ್ಲೆ 'ಫುಸ್' ಎಂದು ಮೇಲೆ ಹಾರಿಹೋಗಿ ಒಡೆದು ಚೂರುಚೂರಾಗುತ್ತದೆ. ಸಾಮಾನ್ಯಜೀವ ಈ

ಎರಡನೆಯುದರಂತೆ ಸಾಧನೆಯ ಮೂಲಕ ತುತ್ತತುದಿಯನ್ನು ಮುಟ್ಟ ಬಲ್ಲದು. ಆದರೆ ಹಿಂದಿರುಗಿ ಬಂದು ತನಗೆ ದೊರೆತ ಅನುಭವವನ್ನು ಪರರಿಗೆ ತಿಳಿಸಲಾರದು. ಜೀವಕೋಟಿಗಳಿಗೆ ಸಾಧನೆಯ ಮೂಲಕ ಸಮಾಧಿ ದೊರೆಯುಬಹುದು. ಆದರೆ ದೊರೆತನಂತರ ಕೆಳಗೆ ಇಳಿದುಬರುವು ದಾಗಲಿ, ಬಂದನಂತರ ತಮಗೆ ದೊರೆತ ಅನುಭವವನ್ನು ಇತರರಿಗೆ ತಿಳಿ ಸುವುದಾಗಲಿ ಅವಕ್ಕೆ ಸಾಧ್ಯವಲ್ಲ.

"ನಿತ್ಯಸಿದ್ಧರ ಗುಂಪೊಂದಿದೆ. ಹುಟ್ಟಿದಂದಿನಿಂದಲೆ ಅವರಿಗೆ ಭಗ ವಂತನ ಕಡೆ ಮನಸ್ಸು. ಸಂಸಾರದ್ದು ಯಾವುದೂ ಅವರಿಗೆ ಹಿಡಿಸದು. ವೇದದಲ್ಲಿ ಹೋಮಾಪಕ್ಷಿಯ ಕಥೆಯಿದೆ. ಅದು ಆಕಾಶದಲ್ಲಿ ಬಹಳ ಎತ್ತರದಲ್ಲಿ ಇರುತ್ತದೆ. ಅದು ಅಲ್ಲೆ ಮೊಟ್ಟೆ ಇಡುತ್ತದೆ. ಅದು ಎಷ್ಟು ಎತ್ತರದಲ್ಲಿ ಇರುತ್ತದೆ ಅಂದರೆ, ಅದರ ಮೊಟ್ಟೆ ಅನೇಕ ದಿನಗಳವರೆಗೆ ಕೆಳಕ್ಕೆ ಬೀಳುತ್ತಲೇ ಇರುತ್ತದೆ! ಮೊಟ್ಟೆ ಬೀಳುತ್ತ ಬೀಳುತ್ತಲೆ ಬಿರಿದು ಮರಿಯಾಗುತ್ತದೆ. ಅನಂತರ ಮರಿ ಬೀಳುತ್ತಲೆ ಇರುತ್ತದೆ. ಅನೇಕ ದಿವಸಗಳವರೆಗೆ ಅದು ಬೀಳುತ್ತಲೇ ಹೋಗುತ್ತದೆ. ಬೀಳುತ್ತ ಬೀಳುತ್ತಲೆ ಅದು ಕಣ್ಣು ಬಿಡುತ್ತದೆ. ಭೂಮಿಯ ಹತ್ತಿರಕ್ಕೆ ಬಂದಾಗ ಅದಕ್ಕೆ ಚೈತನ್ಯ ಬರುತ್ತದೆ. ಆಗ ಅದಕ್ಕೆ, 'ತಾನೇನಾದರು ಭೂಮಿ ಮುಟ್ಟಿದೆ ನೆಂದರೆ ಸಾವು ನಿಶ್ಚಯ' ಎಂದು ಗೊತ್ತಾಗುತ್ತದೆ. ಮರಿ ಚೀತ್ಕಾರ ಮಾಡುತ್ತಾ ತಾಯ ಕಡೆ ನೇರವಾಗಿ ಹಾರಿಹೋಗುತ್ತದೆ. ಭೂಮಿಯೆ ಅದರ ಮೃತ್ಯುಸ್ಥಾನ. ಅದನ್ನು ನೋಡಿದೊಡನೆಯೆ ಅದಕ್ಕೆ ಭಯ ಹುಟ್ಟಿತು. ಅದಕ್ಕೆ ತಾಯಿ ಮಾತ್ರ ಬೇಕು. ತಾಯಿ ಆ ಎತ್ತರದ ಆಕಾಶದಲ್ಲಿದೆ. ಆ ಕಡೆ ನೇರವಾಗಿ ಹಾರಿಹೋಗುತ್ತದೆ. ಆಗ ಅದು ಬೇರೆ ಯಾವ ದಿಕ್ಕಿಗೂ ದೃಷ್ಟಿಹಾಕುವುದಿಲ್ಲ.

"ಅವತಾರಾದಿಗಳೊಡನೆ ಯಾರು ಬರುವರೊ ಅವರು ನಿತ್ಯಸಿದ್ಧರು. ಅವರಲ್ಲಿ ಕೆಲವರಿಗೆ ಅದೇ ಕೊನೆಯ ಜನ್ಮ

(ವಿಜಯನಿಗೆ) "ನಿನಗೆ ಯೋಗ ಭೋಗ ಎರಡೂ ಇವೆ. ಜನಕ ರಾಜನಿಗೆ ಯೋಗವೂ ಇತ್ತು ಭೋಗವೂ ಇತ್ತು. ಅದಕ್ಕಾಗಿಯೇ ಆತ ರಾಜರ್ಷಿ,—ರಾಜ ಮತ್ತು ಋಷಿ. ನಾರದ ದೇವರ್ಷಿ. ಶುಕ ಬ್ರಹ್ಮರ್ಷಿ. ಶುಕದೇವ ಬರೀ ಜ್ಞಾನಿಯೆ ಅಲ್ಲ, ಜ್ಞಾನಘನಮೂರ್ತಿ. ಯಾರಿಗೆ ಜ್ಞಾನಿ ಎಂದು ಹೇಳುತ್ತಾರೆ? ಯಾರಿಗೆ ಜ್ಞಾನೋದಯವಾಗಿರವುದೊ

ಆತನಿಗೆ—ಸಾಧನೆಯ ಮೂಲಕ ಜ್ಞಾನೋದಯವಾಗಿದೆ. ಶುಕದೇವ ಜ್ಞಾನದ ಮೂರ್ತಿಯೆ, ಅಂದರೆ ಜ್ಞಾನದ ಘಟ್ಟಿಯೆ. ಸಾಧನೆಯ ಮೂಲಕವಲ್ಲ, ಸ್ವಾಭಾವಿಕವಾಗಿಯೆ ಜ್ಞಾನೋದಯ.”

ಇಷ್ಟು ಹೊತ್ತು ಮಾತನಾಡಿದ ನಂತರ ಶ್ರೀರಾಮಕೃಷ್ಣರು ಪ್ರಕೃತಿಸ್ಥರಾಗಿದ್ದಾರೆ. ಈಗ ಭಕ್ತರೊಡನೆ ಎಂದಿನ ಹಾಗೆ ಮಾತನಾಡಲು ಅವರಿಗೆ ಸಾಧ್ಯ. ಅವರು ಕೇದಾರನಿಗೆ ಹಾಡಲು ಹೇಳಿದರು. ಕೇದಾರ ಹಾಡುತ್ತಿದ್ದಾನೆ:

ಎಂತೊರೆಯಲಿ ಸಖಿ ನನ್ನೆದೆಯೊಳಗನು ?
ಬಾಯಿಗೆ ಇಕ್ಕಿದೊಲಿದೆ ಬೀಗ!
ನನ್ನೀ ವ್ಯಥೆಗನುಕಂಪಿಸುವೆದೆಯಿಲ್ಲದೆ
ಸಾವಂತಿಹೆನೀಗ!

ಪ್ರಿಯನ ಕಂಗಳನು ಬರಿದೆ ದಿಟ್ಟಿಸುತ
ನನ್ನೆದೆಯೊಲವನೆ ಕಾಣುವೆನು!
ಯಾರಿಗೊರೆಯಲಿದ? ಆತನ ಪ್ರೇಮದಿ
ಆಡುವಪೂರ್ವರು ಅತಿ ವಿರಳ!

ಕೇದಾರ ಇನ್ನೂ ಕೆಲವು ಹಾಡುಗಳನ್ನು ಹಾಡಿದನು. ಅವನು ಹಾಡಿದ'ನಂತರ ಪರಮಹಂಸರು ಮತ್ತೆ ಭಕ್ತರೊಡನೆ ಮಾತನಾಡುತ್ತಿದ್ದಾರೆ. ಕೇಶವಸೇನನ ಅಣ್ಣನ ಮಗ ನಂದಲಾಲ ತನ್ನ ಒಬ್ಬಿಬ್ಬರು ಬ್ರಾಹ್ಮಬಂಧುಗಳೊಡನೆ ಶ್ರೀರಾಮಕೃಷ್ಣರ ಹತ್ತಿರ ಕುಳಿತಿದ್ದಾನೆ.

ಪರಮಹಂಸರು ವಿಜಯ ಮೊದಲಾದ ಭಕ್ತರಿಗೆ: “ಒಬ್ಬ ‘ಕಾರಣದ’ ಸೀಸೆ ತಂದಿದ್ದ. ನನ್ನ ಕೈಲಿ ಅದನ್ನ ಮುಟ್ಟಲೂ ಆಗಲಿಲ್ಲ.”

ವಿಜಯ: “ಅಹಾ!”

ಶ್ರೀರಾಮಕೃಷ್ಣರು: “ಸಹಜಾನಂದ ಉಂಟಾದರೆ ತಾನಾಗಿಯೆ ನೆಶಾ ಬರುತ್ತದೆ. ಕಾರಣ ಕುಡಿಯುವ ಆವಶ್ಯಕತೆಯೇ ಇರದು. ಭಗವತಿಯ ಚರಣಾಮೃತ ನೋಡಿದರೇನೇ ನನಗೆ ನೆಶಾ ಬರುತ್ತದೆ, ಐದು ಸೀಸೆ ಮಧ್ಯ ಕುಡಿದವನ ಹಾಗೆ. ಈ ಅವಸ್ಥೆಯಲ್ಲಿ ಸಿಕ್ಕಿದಾಗಲೆಲ್ಲ ಸಿಕ್ಕಿದ್ದನ್ನೆಲ್ಲ ತಿನ್ನೋಹಾಗಿಲ್ಲ.”

ನರೇಂದ್ರ: “ತಿನ್ನೋಗಿನ್ನೋ ವಿಚಾರದಲ್ಲಿ, ‘ಯದೃಚ್ಛಾಲಾಭ ಸಂತುಷ್ಟವೆ’ ಒಳ್ಳೆಯದು.”

ಪರಮಹಂಸರು : "ಅದು ವಿಶೇಷ ಅವಸ್ಥೆಯಲ್ಲಿ ಸಾಧ್ಯ. ಜ್ಞಾನಿಗೆ ಯಾವುದರಿಂದಲೂ ದೋಷವಿಲ್ಲ. ಗೀತೆ ದೃಷ್ಟಿಯಿಂದ, ಜ್ಞಾನಿ ತನಗೆಂದು ತಿನ್ನುವುದಿಲ್ಲ, ಕುಲಕುಂಡಲಿನಿಗೆ ಆಹುತಿ ಕೊಡುತ್ತಾನೆ. ಆದರೆ ಭಕ್ತರಿಗೆ ಅದು ಸರಿಹೋಗದು. ಈಗಿನ ನನ್ನ ಅವಸ್ಥೆಯಲ್ಲಿ ಬ್ರಾಹ್ಮಣ ಪೂಜಾರಿ ಅರ್ಪಿಸಿದ ನೈವೇದ್ಯವನ್ನಲ್ಲದೆ ಬೇರೆ ಏನನ್ನೂ ತಿನ್ನಲಾರೆ. ಹಿಂದೆ ಒಂದು ಅವಸ್ಥೆ ಬಂದಿತ್ತು. ಆಗ ದಕ್ಷಿಣೇಶ್ವರದ ಆಚೆ ದಡದಿಂದ ಬರುತ್ತಿದ್ದ ಸುಟ್ಟ ಹೆಣದ ವಾಸನೆಯನ್ನು ಮೂಗಿನಿಂದ ಎಳೆದು ಸೇದುತ್ತಿದ್ದೆ. ಅದು ನನಗೆ ಸೊಗಸಾಗಿ ತೋರುತ್ತಿತ್ತು. ಈಗ ಎಲ್ಲರ ಕೈಯಿಂದಲೂ ಆಹಾರ ತೆಗೆದುಕೊಳ್ಳಲಾರೆ. ಈಗ ಆಗದಿರುವುದೇನೊ ನಿಜ, ಆದರೆ ಒಮ್ಮೊಮ್ಮೆ ತಿಂದು ಬಿಡುತ್ತೇನೆ. ಕೇಶವಸೇನನ ಮನೆಯಲ್ಲಿ (ನವ ಬೃಂದಾವನ) ನಡೆದ ನಾಟಕಕ್ಕೆ ನನ್ನನ್ನು ಕರೆದುಕೊಂಡು ಹೋಗಿದ್ದರು. ಅಲ್ಲಿ ಪೂರಿಪಲ್ಯ ತಂದುಕೊಟ್ಟರು. ತಂದವನು ಅಗಸನೊ ಹಜಾಮನೊ ಯಾರೊ ಗೊತ್ತಾಗಲಿಲ್ಲ. (ಎಲ್ಲರೂ ನಗುತ್ತಾರೆ.) ನಾನು ಚೆನ್ನಾಗಿ ಹೊಡೆದೆ. ರಾಖಾಲ ಹೇಳಿದ: 'ಸ್ವಲ್ಪ ಕಡಿಮೆ ತಿನ್ನಿ' ಎಂದು.

(ನರೇಂದ್ರನಿಗೆ) "ನಿನಗೆ ಈಗ ಸಾಧ್ಯ. ನೀನು ಇದರಲ್ಲೂ ಇದ್ದೀಯೆ ಅದರಲ್ಲೂ ಇದ್ದೀಯೆ. ಈಗ ನೀನು ಎಲ್ಲವನ್ನೂ ತಿನ್ನಲು ಸಾಧ್ಯ. (ಭಕ್ತರ ಕಡೆ ತಿರುಗಿ) ಹಂದೀಮಾಂಸ ತಿಂದರೂ ಮನಸ್ಸು ಭಗವಂತನ ಕಡೆ ಎಳೆದರೆ, ಆತನೇ ಧನ್ಯ! ಹವಿಷ್ಯಾನ್ನ ತಿಂದರೂ ಮನಸ್ಸು ಕಾಮಕಾಂಚನದಲ್ಲಿ ನೆಲಸಿದರೆ, ಆತ ಜಘನ್ಯ!

"ನನಗೆ ಒಮ್ಮೆ ಕಮ್ಮಾರರ ಮನೆ ತೊವ್ವೆ ತಿನ್ನಲು ಇಚ್ಛೆ ಆಯಿತು. ನನ್ನ ಎಳೆತನದಿಂದಲೂ ಕಮ್ಮಾರರು ಹೇಳುತ್ತಿದ್ದರು; 'ಬ್ರಾಹ್ಮಣರಿಗೇನು ಅಡಿಗೆ ಮಾಡಲು ಬರುವುದೆ?' ಎಂದು. ಅದಕ್ಕಾಗಿ ಒಂದು ದಿನ ತೊವ್ವೆ ತಿಂದೆ. ಆದರೆ ಅದರಲ್ಲಿಯೂ ಕಮ್ಮಾರರ ವಾಸನೆಯೆ! (ಎಲ್ಲರೂ ನಗುತ್ತಾರೆ.)

"ಗೋವಿಂದರಾಯನಿಂದ 'ಅಲ್ಲಾ' ಮಂತ್ರ ಸ್ವೀಕರಿಸಿದೆ. ಕುಟೀರದಲ್ಲಿ ಈರುಳ್ಳಿಹಾಕಿದ ಅನ್ನ ತಯಾರಾಯಿತು. ಎಲ್ಲೋ ಸ್ವಲ್ಪ ತಿಂದೆ. ಮಣಿಮಲ್ಲಿಕನ (ವರಾಹ ನಗರದ) ತೋಟದಲ್ಲಿ ಒಂದು ತರದ ಪಲ್ಯ ತಿಂದೆ. ಆದರೆ ಏನೊ ಒಂದು ತರದ ವಾಕರಿಗೆ ಉಂಟಾಯಿತು.

"ನಾನು ಒಮ್ಮೆ ಊರಿಗೆ ಹೋದೆ. ರಾಮಲಾಲನ ತಂದೆಗೆ ಭಯ

ವಾಯಿತು; ನಾನು ಸಿಕ್ಕಿದವರ ಮನೆಯಲ್ಲೆಲ್ಲ ತಿಂದುಬಿಡಬಹುದೆಂದು ಆತ ಭಾವಿಸಿದ. ನನ್ನನ್ನು ಜಾತಿಯಿಂದ ಹೊರಕ್ಕೆ ಹಾಕಿ ಬಿಡಬಹುದೆಂದು ಆತನಿಗೆ ಭಯ. ಅದಕ್ಕಾಗಿಯೆ ನಾನು ಅಲ್ಲಿ ಹೆಚ್ಚು ದಿವಸ ನಿಲ್ಲಲಾಗಲಿಲ್ಲ; ಬಂದು ಬಿಟ್ಟೆ.

"ವೇದಪುರಾಣಗಳಲ್ಲಿ ಶುದ್ಧ ಆಚಾರ ಯಾವುದು ಎಂಬುದು ನಿರೂಪಿತವಾಗಿದೆ. ಅವು ಯಾವು ಯಾವುದನ್ನು: 'ಮಾಡಬೇಡಿ, ಅನಾಚಾರವಾಗುತ್ತದೆ' ಎಂದು ಹೇಳುವುವೊ ಅವನ್ನೆ ತಂತ್ರ: 'ಪರಮ ಪವಿತ್ರ ಆಚಾರ' ಎಂದು ಹೇಳುತ್ತದೆ.

"ಏನವಸ್ಥೆ ಬಂದು ಹೋಯಿತು! ಸ್ವರ್ಗ ಪಾತಾಳ ಮುಟ್ಟುವ ಹಾಗೆ ಬಾಯಿ ತೆರೆದು 'ತಾಯೀ!' ಎಂದು ಕೂಗುತ್ತಿದ್ದೆ. ಬೆಸ್ತ ಬಲೆ ಬೀಸಿ ಮೀನನ್ನು 'ಉಸ್' 'ಉಸ್' ಎಂದು ಎಳೆಯುವಂತೆ ನಾನು ತಾಯಿಯನ್ನು ಬಾಯಿಗೆ ಸಿಕ್ಕಿಸಿ ಎಳೆದು ತರುತ್ತಿರುವೆನೊ ಎಂಬಂತೆ ಭಾವಿಸುತ್ತಿದೆ. ಆ ಅವಸ್ಥೆಯ ಸಂಬಂಧವಾಗಿ ಒಂದು ಹಾಡಿದೆ:

ಗಂಡಯೋಗದಲಿ ಜನಿಸಿದಂಥ ಶಿಶು ತಿನುವುದಂತೆ ತಾಯ!
ನಾನು ಅಂಥ ಶಿಶು; ನಿನ್ನ ನುಂಗುವೆನು ತೆರೆದು ನನ್ನ ಬಾಯ!
ನೀನೆ ನುಂಗುವೆಯೊ ನಾನೆ ನುಂಗಲೋ ಹೇಳು ಹೇಳು ಬೇಗ
ಎರಡರೊಳಗೆ ಒಂದಾಗಿಬಿಡಲಿ ನೀ ಹೇಳು, ಕಾಳಿ, ಈಗ!

ಕಾಳಿಕಾಡಿಗೆಯ ಕೈಗೆ ಮೈಗೆ ನಾ ಬಳಿದುಕೊಂಡು ಬಿಡುವೆ!
ಮೃತ್ಯು ಬರಲು ನಾನವನ ಮುಖಕು ಈ ಕಾಳಿಯನ್ನೆ ಬಳಿವೆ.
ನಿನ್ನ ನುಂಗಿದರು, ನಿನ್ನನರಗಿಸಲು ಆಗದೆನಗೆ ತಾಯಿ!
ಹೃದಯ ಪದ್ಮದಲಿ ನಿನ್ನನಿರಿಸಿ ನಾ ಪೂಜೆಗೈವೆ ಮನದಿ.

ನಿನ್ನ ನುಂಗಿದರೆ ನಿನ್ನ ಪತಿದೇವ ಆ ಕಾಳ ರೇಗಬಹುದು.
ನಿನ್ನ ನಾಮವನೆ ಜಪಿಸಿ ಕಾಳನನು ನಾನು ತಡೆಯಬಹುದು.
ನಾನು ನಿನ್ನ ಮಗನೆಂಬ ಮಹಿಮೆಯನು ಜಗಕೆ ತೋರಲೆಂದೇ
ನೀನು ನಿನ್ನವರ ನುಂಗಿನೊಣೆವೆ ನಾ, ಜೀವ ಹೋಗಲೆಂದೇ!

"ನನ್ನ ವ್ಯಾಕುಲತೆ ಅಂಥದಾಗಿತ್ತು. ತೀರ ಹುಚ್ಚನಂತೆಯೆ ತೋರುತ್ತಿದ್ದೆ."

ನರೇಂದ್ರ ಹಾಡಲಾರಂಭಿಸಿದ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ!

ಅರಿವು ಚಿಂತನೆಯೆಲ್ಲ ನನಗೇಕೆ?
ಭಕ್ತಹೃದಯಾಪಹಾರಿಣಿಯೆ,
ನಿನ್ನ ಒಲವಿನ ಕಡಲಿನಾಳಕೆ ನನ್ನನದ್ದಿಬಿಡು ;
ನಿನ್ನ ಭಕ್ತಿಯ ಮಧುರ ಮಧುಪಾನದಲಿ
ಉನ್ಮತ್ತಗೊಂಡವರು ಕುಣಿವ ಮನೆ ಈ ಜಗವು.
ಇದರೊಳಗೆ ನಗುವರು ಹಲರು, ಅಳುವರು ಹಲರು,
ಆನಂದದಲಿ ಕುಣಿಯುವರು ಹಲರು.
ಚೈತನ್ಯ ಕ್ರಿಸ್ತ ಬುದ್ಧಾದಿಗಳು ನಿನ್ನ ಪ್ರೇಮದಲಿ
ಉನ್ಮತ್ತರಾಗಿಹರು !
ಆ ದಿವ್ಯಗೋಷ್ಠಿಯಲಿ ನಾನೆಂದು ಸೇರಿ ನಲಿಯಲಿ, ತಾಯಿ,
ನಿನ್ನ ಮಹಿಮೆಗೆ ಸಂದು ?

ಹಾಡನ್ನು ಕೇಳುತ್ತಿದ್ದ ಹಾಗೆಯೆ ಪರಮಹಂಸರು ಮತ್ತೆ ಸಮಾಧಿಸ್ಥರಾಗಿದ್ದಾರೆ. ಪ್ರಕೃತಿಸ್ಥರಾದ ನಂತರ ಶ್ರೀರಾಮಕೃಷ್ಣರು ಗಿರಿರಾಣಿಯ ಭಾವ ಆರೋಪಿಸಿಕೊಂಡು ಆಗಮನಿ ಹಾಡನ್ನು ಹಾಡಲಾರಂಭಿಸಿದ್ದಾರೆ. ಅವರು ಅದನ್ನು ಪ್ರೇಮೋನ್ಮತ್ತತೆಯಿಂದ ಹಾಡುತ್ತಿದ್ದಾರೆ:

ಹೌದೇನೇ ಉಮಾ ಹೌದೇನೇ
ಜನವೆನ್ನುವುದಿದು ನಿಜವೇನೇ ?—
ಮಸಣದ ಬೂದಿಯ ಮೈಗೆ ಬಳಿದು ಶಿವ
ಎಲ್ಲೆಲ್ಲೋ ತಿರುಗುವನಂತೆ !
ಹೊಟ್ಟೆಬಟ್ಟೆಗೂ ಗತಿಯಿಲ್ಲದರೊಲು
ಊರೂರಲು ತಿರಿದುಂಬುವನಂತೆ !
ನೀನು ಕೂಡ ಬಂಗಾರದ ಮೈಯಿಗೆ
ಆ ಬೂದಿಯನೇ ಬಳಿಯುವೆಯಂತೆ !

ನಿನ್ನ ತಾಯಿ ನಾನಾಗಿಹ ತಪ್ಪಿಗೆ
ಸಹಿಸಬೇಕೆ ಅವಮಾನವನು ?
ಮತ್ತೆ ನಿನ್ನ ಶಿವ ಕರೆಯಲು ಬರಲಿ ;
'ಮನೆಯೊಳಿಲ್ಲ ಉಮೆ'—ಎನ್ನುವೆನು !

ಹಾಡಿ ಮುಗಿಸಿದನಂತರ ಪರಮಹಂಸರು ಭಕ್ತರ ಕಡೆ ತಿರುಗಿ: "ಈ ದಿವಸ ಮಹಾಷ್ಟಮಿಯಲ್ಲವೆ; ಭಗವತಿ ಬಂದಿದಾಳೆ. ಅದಕ್ಕಾಗಿ ನನಗೆ ಇಷ್ಟೊಂದು ಉದ್ದೀಪನೆ."

ಕೇದಾರ: "ಪ್ರಭು, ತಾವೇ ಬಂದಿದ್ದೀರಿ! ಭಗವತಿ ತಮಗಿಂತ ಪ್ರತ್ಯೇಕವೆ?"

ಶ್ರೀರಾಮಕೃಷ್ಣರು ಅನ್ಯಮನಸ್ಕರಾಗಿ ಬೇರೆಕಡೆಗೆ ದೃಷ್ಟಿಹಾಕಿ ಹಾಡಲಾರಂಭಿಸಿದ್ದಾರೆ:

ಯಾರಿಗಾಗಿ ಮರುಳುಗೊಂಡು ಅಲೆಯುತಿರುವೆನೋ
ಆ ನನ್ನ ಮೋಹಮೂರ್ತಿ ಕಾಣನಿನ್ನೂ ಕೆಳದಿಯೆ......

ಈ ಹಾಡನ್ನು ಹಾಡಿದನಂತರ ಮತ್ತೆ ಭಾವದಿಂದ ಮತ್ತರಾಗಿ ಮತ್ತೆ ತಾಯ ಮೇಲಿನ ಒಂದು ಹಾಡನ್ನು ಹಾಡುತ್ತಿದ್ದಾರೆ. ಅವರು ಹಾಡುತ್ತಿದ್ದ ಹಾಗೆಯೆ ವಿಜಯ ಇದ್ದಕ್ಕಿದ್ದ ಹಾಗೆ, 'ಹರಿ! ಹರಿ!' ಎಂದು ಹೇಳುತ್ತ ಮೇಲಕ್ಕೆ ಎದ್ದು ನಿಂತಿದ್ದಾನೆ. ಪರಮಹಂಸರು ಭಾವೋನ್ಮತ್ತರಾಗಿ ವಿಜಯನೆ ಮೊದಲಾದ ಭಕ್ತರೊಡನೆ ನರ್ತಿಸಲು ಆರಂಭಿಸಿದ್ದಾರೆ.

ಕೀರ್ತನೆ ಮುಗಿದನಂತರ ಪರಮಹಂಸರು ವಿಜಯ, ನರೇಂದ್ರ ಉಳಿದ ಭಕ್ತರೆಲ್ಲ ಕುಳಿತುಕೊಂಡಿದ್ದಾರೆ. ಎಲ್ಲರೂ ಪರಮಹಂಸರ ಕಡೆ ನೋಡುತ್ತಿದ್ದಾರೆ. ಸಾಯಂಕಾಲವಾಗಲು ಇನ್ನೂ ಸ್ವಲ್ಪ ಸಮಯಬೇಕು. ಪರಮಹಂಸರು ಈಗ ಭಕ್ತರೊಡನೆ ಮಾತುಕತೆ ಆಡುತ್ತಿದ್ದಾರೆ. ಭಕ್ತರ ಕ್ಷೇಮಸಮಾಚಾರ ವಿಚಾರಿಸುತ್ತಿದ್ದಾರೆ. ಕೇದಾರ ಬಹಳ ವಿನಯದಿಂದ ಕೈಜೋಡಿಸಿ ಅತ್ಯಂತ ಮೃದುಮಧುರ ಕಂಠದಿಂದ ಶ್ರೀರಾಮಕೃಷ್ಣರಿಗೆ ಏನನ್ನೋ ಹೇಳಿಕೊಳ್ಳುತ್ತಿದ್ದಾನೆ. ಪರಮಹಂಸರ ಹತ್ತಿರ ನರೇಂದ್ರ, ಚುಣಿ, ಸುರೇಂದ್ರ, ರಾಮ, ಮಾಸ್ಟರ್, ಹರೀಶ ಕುಳಿತಿದ್ದಾರೆ.

ಕೇದಾರ ವಿನಯದಿಂದ ಶ್ರೀರಾಮಕೃಷ್ಣರಿಗೆ: "ತಲೆಸುತ್ತು ಏನು ಮಾಡಿದರೆ ನಿಲ್ಲುತ್ತದೆ?"

ಪರಮಹಂಸರು ಪ್ರೇಮದೃಷ್ಟಿಯಿಂದ: "ಓ, ಹಾಗಾಗುವುದುಂಟು. ಒಮ್ಮೆ ನನಗೂ ಹಾಗಾಗುತ್ತಿತ್ತು. ತಲೆಗೆ ಸ್ವಲ್ಪ ಸ್ವಲ್ಪ ಬಾದಾಮಿ ಎಣ್ಣೆ ಹಚ್ಚು. ಅದು ಅದನ್ನು ನಿಲ್ಲಿಸುವುದು ಎಂದು ಕೇಳಿದ್ದೇನೆ."

ಕೇದಾರ: "ಅಪ್ಪಣೆ, ಹಾಗೆಯೆ ಮಾಡಿನೋಡುತ್ತೇನೆ."

ಪರಮಹಂಸರು ಚುಣಿಗೆ: "ಏನು, ನೀವೆಲ್ಲ ಕ್ಷೇಮವೆ?"

ಚುಣಿ: "ಭಗವಂತನ ಕೃಪೆಯಿಂದ ಎಲ್ಲರೂ ಕ್ಷೇಮ. ಬೃಂದಾವನದಲ್ಲಿ ಬಲರಾಮ ಬಾಬು, ರಾಖಾಲ ಎಲ್ಲರೂ ಕ್ಷೇಮ."

ಪರಮಹಂಸರು: "ನೀನು ಅಷ್ಟೊಂದು ಸಂದೇಶ (ಒಂದು ತರದ ಸಿಹಿ ತಿಂಡಿ) ಏಕೆ ಕಳಿಸಿದೆ?"

ಚುಣಿ: "ನಾನು ಬೃಂದಾವನದಿಂದ ಬಂದೆ—"

ಚುಣಿಲಾಲ ಬಲರಾಮನೊಡನೆ ಬೃಂದಾವನಕ್ಕೆ ಹೋಗಿ ಅಲ್ಲಿ ಕೆಲವು ತಿಂಗಳಕಾಲ ಇದ್ದ. ಆತನ ರಜ ಮುಗಿದುಹೋಗಿದೆ. ಅದಕ್ಕಾಗಿ ಕಲ್ಕತ್ತಕ್ಕೆ ಹಿಂದಿರುಗಿ ಬಂದಿದ್ದಾನೆ.

ಪರಮಹಂಸರು ಹರೀಶನಿಗೆ: "ನೀನು ಒಂದೆರಡು ದಿನಗಳಾದ ಮೇಲೆ ದಕ್ಷಿಣೇಶ್ವರಕ್ಕೆ ಬಾ. ನಿನ್ನ ಆರೋಗ್ಯ ಚೆನ್ನಾಗಿಲ್ಲ. ಇಲ್ಲದಿದ್ದರೆ ಅಲ್ಲಿ ಮತ್ತೆ ಬೀಳುವೆ.

ಶ್ರೀರಾಮಕೃಷ್ಣರು ಪ್ರೇಮಪೂರಿತ ದೃಷ್ಟಿಯಿಂದ ನಾರಾ'ಣನಿಗೆ "ಕುಳಿತುಕೊ. ನನ್ನ ಹತ್ತಿರ ಬಂದು ಕುಳಿತುಕೊ. ನಾಳೆ ದಿನ ದಕ್ಷಿಣೇಶ್ವರಕ್ಕೆ ಬಾ. ಅಲ್ಲೇ ಊಟಮಾಡುವೆಯಂತೆ. (ಮಾಸ್ಟರನ್ನು ತೋರಿಸಿ) ಈತನೊಡನೆ ಬಾ. (ಮಾಸ್ಟರಿಗೆ) ಏನು?"

ಮಾಸ್ಟರಿಗೆ ಇಂದೇ ಪರಮಹಂಸರೊಡನೆ ದಕ್ಷಿಣೇಶ್ವರಕ್ಕೆ ಹೋಗಲು ಇಚ್ಛೆ. ಅದಕ್ಕಾಗಿ ಆತ ಚಿಂತಿಸುತ್ತಿದ್ದಾನೆ.

ಸುರೇಂದ್ರ ಅಲ್ಲಿ ಬಹಳ ಹೊತ್ತಿನವರೆಗೆ ಇದ್ದ. ಅನಂತರ ತನ್ನ ಮನೆಗೆ ಹೋಗಿದ್ದು ಈಗ ಬಂದು ಪರಮಹಂಸರ ಹತ್ತಿರ ನಿಂತಿದ್ದಾನೆ. ಸುರೇಂದ್ರನಿಗೆ ಮದ್ಯ ಕುಡಿಯುವ ಅಭ್ಯಾಸ. ಹಿಂದೆ ಅನೇಕವೇಳೆ ಅತಿಯಾಗಿ ಕುಡಿದುಬಿಡುತ್ತಿದ್ದ. ಪರಮಹಂಸರು ಸುರೇಂದ್ರನ ಅವಸ್ಥೆ ನೋಡಿ ಚಿಂತಿಸುತ್ತಿದ್ದಾರೆ. ಅವರು ಆತನಿಗೆ ಒಮ್ಮೆಗೆಯೇ ಮದ್ಯ ಕುಡಿಯುವುದನ್ನು ಬಿಟ್ಟುಬಿಡು ಎಂದು ಹೇಳಲಿಲ್ಲ. ಹೇಳಿದರು, "ಸುರೇಂದ್ರ, ಒಂದು ಕೆಲಸಮಾಡು. ಕುಡಿಯುವುದನ್ನು ಭಗವಂತನಿಗೆ ಅರ್ಪಿಸಿ ಕುಡಿ. ಕೈಕಾಲು ಮುದುರಿಕೊಳ್ಳುವಷ್ಟು, ತಲೆ ಸುತ್ತುವಷ್ಟು ಕುಡಿಯಬೇಡ, ಭಗವಚ್ಚಿಂತನೆ ಮಾಡುತ್ತ ಮಾಡುತ್ತ ಹೋದಹಾಗೆ ನಿನಗೇನೆ ಕುಡಿತ ರುಚಿಸದೆಹೋಗುತ್ತದೆ. ಆತ ಕಾರಣಾನಂದಮಯನಲ್ಲವೆ! ಆತನ ಸಾಕ್ಷಾತ್ಕಾರ ಮಾಡಿಕೊಂಡರೆ ಸಹಜಾನಂದ ಉಂಟಾಗುತ್ತದೆ."

ಸುರೇಂದ್ರ ಇನ್ನೂ ಪರಮಹಂಸರ ಹತ್ತಿರವೆ ನಿಂತಿದ್ದಾನೆ. ಅವರು ಆತನ ಕಡೆ ನೋಡಿ: "ಏನು, ನೀನು ಮದ್ಯ ಕುಡಿದು ಬಂದಿರುವೆಯಾ?" ಎಂದು ಹೇಳಿಯೇ ಭಾವಾವಿಷ್ಟರಾಗಿದ್ದಾರೆ.

ಸಾಯಂಕಾಲವಾಗುತ್ತಿದೆ. ಸ್ವಲ್ಪ ಬಾಹ್ಯ ಪ್ರಜ್ಞೆ ಪಡೆದು ಪರಮಹಂಸರು ಭಗವತಿಯ ಹೆಸರನ್ನು ಜಪಿಸುತ್ತ ಆನಂದದಿಂದ ಹಾಡಲಾರಂಭಿಸಿದ್ದಾರೆ:

ಶಿವಸಂಗದೊಳಾನಂದದಿ ತಾಯಿ ಕುಣಿಯುತಿರುವಳು.
ದಿವ್ಯ ಮಧುವ ಕುಡಿದು ಕೂಡ, ಹೆಜ್ಜೆತಪ್ಪದಿರುವಳು.
ಶಿವಶಿವೆಯುರ ಪದಘಾತಕೆ ನೆಲವೆ ನಡುಗಿದೆ.
ಲಜ್ಜೆಭಯಗಳೆಂಬುವೆಲ್ಲ ಎಲ್ಲೊ ಬಿದ್ದಿವೆ!

ಸಾಯಂಕಾಲವಾಯಿತು. ಪರಮಹಂಸರು ಹರಿನಾಮವನ್ನು ಜಪಿಸುತ್ತಿದ್ದಾರೆ. ಆಗಾಗ ಚಪ್ಪಾಳೆ ತಟ್ಟುತ್ತಿದ್ದಾರೆ. ಸುಸ್ವರದಿಂದ ಹೇಳುತ್ತಿದ್ದಾರೆ: "ಹರಿ ಎಂದು ಹೇಳಿ, ಹರಿ ಎಂದು ಹೇಳಿ, ಹರಿಮಯ ಹರಿ ಎಂದು ಹೇಳಿ; ಹರಿ ಹರಿ ಎಂದು ಹೇಳಿ" ಎಂದು.

ಮತ್ತೆ ರಾಮನಾಮ ಜಪಿಸುತ್ತಿದ್ದಾರೆ: "ರಾಮ, ರಾಮ, ರಾಮ ರಾಮ! ರಾಮ, ರಾಮ, ರಾಮ, ರಾಮ, ರಾಮ!" ಎಂದು.

ಈಗ ಪರಮಹಂಸರು ಪ್ರಾರ್ಥನೆ ಮಾಡುತ್ತಿದ್ದಾರೆ: "ಓ ರಾಮ! ಓ ರಾಮ! ನಾನು ಭಜನ ಹೀನ, ಸಾಧನ ಹೀನ, ಜ್ಞಾನ ಹೀನ, ಭಕ್ತಿ ಹೀನ—ನಾನು ಕ್ರಿಯಾ ಹೀನ. ರಾಮ, ನಾನು ಶರಣಾಗತ! ಓ ರಾಮ, ನಾನು ಶರಣಾಗತ! ದೇಹಸುಖ ಬೇಡ, ರಾಮ! ಲೋಕಮಾನ್ಯತೆ ಬೇಡ, ರಾಮ! ಅಷ್ಟಸಿದ್ಧಿ ಬೇಡ, ರಾಮ! ಶತಸಿದ್ಧಿ ಬೇಡ, ರಾಮ! ಶರಣಾಗತ ನಾನು, ಶರಣಾಗತ ನಾನು. ಕೇವಲ ಇದನ್ನು ಕರುಣಿಸು — ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಉಂಟಾಗುವಂತೆ ಮಾಡು, ರಾಮ! ನಿನ್ನ ಭುವನ ಮೋಹಿನಿ ಮಾಯೆಯಿಂದ ನಾನು ಮುಗ್ಧನಾಗದ ರೀತಿ ಮಾಡು, ರಾಮ! ಓ ರಾಮ, ಶರಣಾಗತ ನಾನು!"

ಪರಮಹಂಸರು ಈ ರೀತಿಯಾಗಿ ಪ್ರಾರ್ಥನೆ ಮಾಡಿದರು. ಎಲ್ಲರೂ ನಟ್ಟ ಕಣ್ಣಿನಿಂದ ಅವರ ಕಡೆ ನೋಡುತ್ತಿದ್ದಾರೆ. ಅವರ ಕರುಣಾಜನಕ ಸ್ವರವನ್ನು ಕೇಳಿ ಕಣ್ಣೀರು ಸುರಿಸದವರೇ ಇಲ್ಲ.

ರಾಮ ಬಂದು ಪರಮಹಂಸರ ಹತ್ತಿರ ನಿಂತಿದ್ದಾನೆ.

ಪರಮಹಂಸರು ರಾಮನಿಗೆ: "ರಾಮ, ಎಲ್ಲಿಗೆ ಹೋಗಿದ್ದೆ?"

ರಾಮ: "ಮೇಲಿದ್ದೆ."

ಉಪ್ಪರಿಗೆ ಮೇಲೆ ಎಲ್ಲರಿಗೂ ಎಲೆ ಹಾಕಲು ರಾಮ ಅಣಿ ಮಾಡುತ್ತಿದ್ದ.

ಪರಮಹಂಸರು ನಗುತ್ತ ರಾಮನಿಗೆ: "ಮೇಲೆ ಇರೋದಕ್ಕಿಂತ ಕೆಳಗೆ ಇರೋದು ಮೇಲಲ್ಲವೆ? ನೀರು ತಗ್ಗುಪ್ರದೇಶದಲ್ಲಿ ನಿಲ್ಲುತ್ತದೆ, ಅದು ಎತ್ತರ ಪ್ರದೇಶದಿಂದ ಕೆಳಕ್ಕೆ ಉರುಳಿ ಬಂದುಬಿಡುತ್ತದೆ."

ರಾಮ: "ಹೌದು, ನಿಜ."

ಉಪ್ಪರಿಗೆ ಮೇಲೆ ಎಲೆ ಹಾಕಿ ಆಗಿದೆ. ರಾಮಚಂದ್ರದತ್ತ ಪರಮಹಂಸರನ್ನು ಇತರ ಎಲ್ಲಾ ಭಕ್ತರನ್ನು ಮೇಲೆ ಕರೆದುಕೊಂಡುಹೋಗಿ ತೃಪ್ತಿಯಾಗುವಂತೆ ಊಟಕ್ಕೆ ಬಡಿಸಿದ. ಅನಂತರ ಶ್ರೀರಾಮಕೃಷ್ಣರು ನಿರಂಜನ, ಮಾಸ್ಟರ್ ಮೊದಲಾದವರೊಡನೆ ಅಧರಸೇನನ ಮನೆಗೆ ಹೋಗುತ್ತಿದ್ದಾರೆ. ಅಲ್ಲಿಗೆ ಭಗವತಿ ಬಂದಿದ್ದಾಳೆ. ಈ ದಿವಸ ಮಹಾಷ್ಟಮಿ. ಇಂದು ಪರಮಹಂಸರು ತನ್ನ ಮನೆಗೆ ಬಂದು ಪೂಜೆಯನ್ನು ಸಾರ್ಥಕಗೊಳಿಸಬೇಕೆಂಬುದೆ ಅಧರಸೇನನ ವಿಶೇಷ ಪ್ರಾರ್ಥನೆಯಾಗಿತ್ತು.

**೨೯ನೆ ಸೆಪ್ಟೆಂಬರ್ ೧೮೮೪, ಮಹಾನವಮಿ, ಸೋಮವಾರ.**

ಇಂದು ನವಮಿ ಪೂಜೆ. ಈಗತಾನೆ ಬೆಳಗಾಗುತ್ತಿದೆ. ಕಾಳೀದೇವಾಲಯದಲ್ಲಿ ಮುಂಜಾನೆ ಮಂಗಳಾರತಿ ಮುಗಿದಿದೆ. ವಾದ್ಯಶಾಲೆಯಿಂದ ಉದಯರಾಗದ ಆಲಾಪನೆ ಕೇಳಿಬರುತ್ತಿದೆ. ಮಾಲಿಗಳೂ, ಪೂಜಾರಿಗಳೂ ಕೈಯಲ್ಲಿ ಹೂಬುಟ್ಟಿಗಳನ್ನು ಹಿಡಿದು ಹೂವು ಕೊಯ್ಯಲು ಬರುತ್ತಿದ್ದಾರೆ. ಭಗವತಿಯ ಪೂಜೆಗೆ ಸನ್ನಾಹ ನಡೆಯುತ್ತಿದೆ. ಪರಮಹಂಸರು ಇನ್ನೂ ಕತ್ತಲಿರುವಾಗಲೆ, ಬಹಳ ಹೊತ್ತಿಗೆ ಮುಂಚೆ ಎದ್ದಿದ್ದಾರೆ. ಭವನಾಥ, ಬಾಬುರಾಮ, ನಿರಂಜನ, ಮಾಸ್ಟರ್ ನೆನ್ನೆ ರಾತ್ರಿಯಿಂದ ಇಲ್ಲಿಯೆ ಇದ್ದಾರೆ. ಪರಮಹಂಸರ ಕೊಠಡಿಯ ಜಗಲಿಮೇಲೆ ಮಲಗಿದಾರೆ. ಅವರು ಬೆಳಗ್ಗೆ ಕಣ್ಣೊರಸಿ ನೋಡುತ್ತಾರೆ, ಪರಮಹಂಸರು ಪ್ರೇಮೋನ್ಮತ್ತರಾಗಿ ನರ್ತಿಸುತ್ತಿದ್ದಾರೆ. ಅವರು ಹೇಳುತ್ತಿದ್ದರು: "ಜಯ ಜಯ ದುರ್ಗೆ! ಜಯ ಜಯ ದುರ್ಗೆ!" ಎಂದು. ನೋಡಿದರೆ ಒಬ್ಬ ತೀರ ಬಾಲಕನೆ! ಮೈಮೇಲೆ ಬಟ್ಟೆಯಿಲ್ಲ. ಭಗವತಿಯ ಹೆಸರನ್ನು ಜಪಿಸುತ್ತ ಕೊಠಡಿಯೊಳಗೆ ನರ್ತಿಸುತ್ತ ಸುತ್ತಾಡುತ್ತಿದ್ದಾರೆ!

ಸ್ವಲ್ಪ ಹೊತ್ತಾದ'ನಂತರ ಮತ್ತೆ ಹೇಳುತ್ತಿದ್ದಾರೆ: "ಸಹಜಾನಂದ! ಸಹಜಾನಂದ!" ಎಂದು. ಕೊನೆಗೆ ಗೋವಿಂದನ ಹೆಸರನ್ನು ಪುನರಾ

ವೃತ್ತಿಮಾಡುತ್ತಿದ್ದಾರೆ: "ಹೇ ಗೋವಿಂದ! ಮಮಪ್ರಾಣ! ಮಮ ಜೀವನ!" ಎಂದು.

ಭಕ್ತರು ಹಾಸಿಗೆಯ ಮೇಲೆ ಎದ್ದು ಕುಳಿತಿದ್ದಾರೆ. ಪರಮಹಂಸರ ಭಾವವನ್ನು ಎವೆಯಿಕ್ಕದೆ ನೋಡುತ್ತಿದ್ದಾರೆ. ಹಾಜರಾ ಕೂಡ ಕಾಳೀ ದೇವಾಲಯದಲ್ಲಿಯೆ ಇದ್ದಾನೆ. ಪರಮಹಂಸರ ಕೊಠಡಿಯ ನೈರುತ ದಿಕ್ಕಿನ ವರಾಂಡವೆ ಆತನ ವಾಸಸ್ಥಾನ. ಲಾಟೂ ಕೂಡ ಇಲ್ಲೆ ಇದ್ದಾನೆ. ಪರಮಹಂಸರ ಸೇವೆ ಮಾಡಿಕೊಂಡಿದ್ದಾನೆ. ರಾಖಾಲ ಈಗ ಬೃಂದಾವನ ದಲ್ಲಿ ಇದ್ದಾನೆ. ನರೇಂದ್ರ ಆಗಾಗ ಬಂದು ಪರಮಹಂಸರ ದರ್ಶನಮಾಡಿ ಹೋಗುತ್ತಿದ್ದಾನೆ. ಇಂದು ಆತ ಇಲ್ಲಿಗೆ ಬರುತ್ತಾನೆ.

ಭಕ್ತರೆಲ್ಲ ಎದ್ದು ಮುಖ ತೊಳೆದುಕೊಂಡಿದ್ದಾರೆ. ಪರಮಹಂಸರು ತಮ್ಮ ಕೊಠಡಿಯ ಉತ್ತರದ ಜಗಲಿಯಲ್ಲಿ ಮಂದಲಿಗೆಯ ಮೇಲೆ ಕುಳಿತಿದ್ದಾರೆ. ಭವನಾಥ ಮತ್ತು ಮಾಸ್ಟರ್ ಅವರ ಹತ್ತಿರ ಕುಳಿತಿದ್ದಾರೆ. ಉಳಿದ ಭಕ್ತರು ಕ್ರಮಕ್ರಮೇಣ ಬಂದು ಅಲ್ಲಿ ಕುಳಿತುಕೊಳ್ಳುತ್ತಿದ್ದಾರೆ.

ಪರಮಹಂಸರು ಭವನಾಥನಿಗೆ: "ನಿನಗೆ ಇದು ಗೊತ್ತೇ? ಯಾರು ಜೀವಕೋಟಿಗಳೊ ಅವರಿಗೆ ಭಗವಂತನಲ್ಲಿ ವಿಶ್ವಾಸ ಸಹಜವಾಗಿ ಬರುವುದಿಲ್ಲ. ಈಶ್ವರ ಕೋಟಿಗಳ ವಿಶ್ವಾಸ ಸ್ವತಸ್ಸಿದ್ಧವಾದುದು. ಪ್ರಹ್ಲಾದ 'ಕ' ಬರೆಯಲು ಹೋಗಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಅದು ಆತನಿಗೆ ಕೃಷ್ಣನ ನೆನಪು ತಂದಿತು. ಜೀವಿಗಳಿಗೆ ಸಂಶಯಾತ್ಮಕ ಬುದ್ಧಿ. ಅವರೇನೊ ಹೇಳುವರು 'ಹೌದು' ಎಂದು, ಆದರೆ—

"ಹಾಜರಾನ ತಲೆಗೆ ಬ್ರಹ್ಮಕ್ಕು ಶಕ್ತಿಗು, ಶಕ್ತಿಗು ಶಕ್ತಿಮಾನನಿಗೂ ಅಭೇದ ಎಂಬುದನ್ನ ಯಾವ ವಿಧದಿಂದಲೂ ತುಂಬಲು ಸಾಧ್ಯವಿಲ್ಲ. ನಿಷ್ಕ್ರಿಯನಾಗಿರುವಾಗ ಆತನಿಗೆ ಬ್ರಹ್ಮ ಎಂದು ಕರೆಯುತ್ತೇವೆ. ಸೃಷ್ಟಿ ಸ್ಥಿತಿಪ್ರಳಯಗಳನ್ನು ಮಾಡುವಾಗ ಶಕ್ತಿ ಎಂದು ಕರೆಯುತ್ತೇವೆ. ಆದರೆ ವಸ್ತು ಮಾತ್ರ ಒಂದೆ; ಅಭೇದ ಸ್ವರೂಪ. ಅಗ್ನಿ ಎಂದೊಡನೆ ಅದರ ಸುಡುವ ಶಕ್ತಿಯೂ, ಸುಡುವ ಶಕ್ತಿ ಎಂದೊಡನೆ ಅಗ್ನಿಯೂ ತಾನಾಗಿ ಮನಸ್ಸಿಗೆ ಹೊಳೆಯುತ್ತದೆ. ಒಂದನ್ನು ಬಿಟ್ಟು ಇನ್ನೊಂದನ್ನು ಚಿಂತಿಸುವ ಹಾಗೆಯೇ ಇಲ್ಲ!

"ಅದಕ್ಕಾಗಿ ನಾನು ಪ್ರಾರ್ಥನೆಮಾಡಿದೆ: ಹೇ ತಾಯೆ! ಹಾಜರಾ ಇಲ್ಲಿನ ಮತವನ್ನು ತಲೆಕೆಳಕು ಮಾಡುತ್ತಿದ್ದಾನೆ. ಸಾಧ್ಯವಾದರೆ ಆತನಿಗೆ

ಒಳ್ಳೆ ಬುದ್ಧಿ ಕೊಡು, ಇಲ್ಲದಿದ್ದರೆ ಆತನನ್ನು ಇಲ್ಲಿಂದ ತೆಗೆ' ಎಂದು. ಆ ಮಾರನೆ ದಿನವೆ ಆತ ಇಲ್ಲಿಗೆ ಬಂದು: 'ಹಾಂ, ಒಪ್ಪುತ್ತೇನೆ' ಎಂದ. ಆಗ ಅವನು ಹೇಳಿದ: 'ಭಗವಂತ ವಿಭು, ಎಲ್ಲೆಲ್ಲಿಯೂ ಇದ್ದಾನೆ' ಎಂದು."

ಭವನಾಥ ನಗುತ್ತ: "ಹಾಜರಾನ ಈ ಮಾತಿನಿಂದ ನೀವು ಅಷ್ಟೊಂದು ಕಷ್ಟ ಅನುಭವಿಸಿಬಿಟ್ಟಿರಾ!"

ಶ್ರೀರಾಮಕೃಷ್ಣರು: "ನನ್ನ ಅವಸ್ಥೆ ಬದಲಾಯಿಸಿಬಿಟ್ಟಿದೆ. ಈಗ ಜನರೊಡನೆ ವಾದ ಗೀದ ಮಾಡಿ ಗಂಟಲು ಕಿತ್ತುಕೊಳ್ಳಲಾರೆ. ಹಾಜರಾನೊಡನೆ ತರ್ಕ ಗಿರ್ಕ ಮಾಡೊ ಅವಸ್ಥೆ ಈಗ ನನಗಿಲ್ಲ. ಯದುಮಲ್ಲಿಕನ ತೋಟದಲ್ಲಿ ಹೃದೆ[1] ಹೇಳಿದ: "ಮಾವಯ್ಯ, ನನ್ನನ್ನು ಇಟ್ಟುಕೊಳ್ಳೋಕೆ ನಿನಗಿಚ್ಛೆಯಿಲ್ಲವೆ?' ಎಂದು. ನಾನು ಹೇಳಿದೆ: 'ಇಲ್ಲ, ಈಗ ಆ ಅವಸ್ಥೆ ಇಲ್ಲ, ಈಗ ನಿನ್ನೊಡನೆ ಕೂಗಾಡಿ ಗಂಟಲು ಕಿತ್ತುಕೊಳ್ಳುವಂತೆ ಇಲ್ಲ' ಎಂದು.

"ಯಾವುದಕ್ಕೆ ಜ್ಞಾನ, ಯಾವುದಕ್ಕೆ ಅಜ್ಞಾನ ಎಂದು ಹೇಳುತ್ತಾರೆ?— ಎಲ್ಲಿಯವರೆಗೆ ಭಗವಂತ ಬಹುದೂರದಲ್ಲಿರುವನು ಎಂಬ ಬೋಧೆಯಿರುವುದೊ ಅಲ್ಲಿಯವರೆಗೆ ಅಜ್ಞಾನಾವಸ್ಥೆ; ಯಾವಾಗ ಇಲ್ಲೇ, ಇಲ್ಲಿಯೆ ಎಂಬ ಬೋಧೆಯಾಗುವುದೊ ಆಗ ಜ್ಞಾನಾವಸ್ಥೆ.

"ಯಾವಾಗ ಸರಿಯಾದ ಜ್ಞಾನೋದಯವಾಗುವುದೊ ಆಗ ಎಲ್ಲಾ ವಸ್ತುಗಳು ಚೈತನ್ಯಮಯವಾಗಿ ತೋರುತ್ತವೆ. ನಾನು ಊರಿನಲ್ಲಿದ್ದಾಗ ಆಗಾಗ ನನ್ನ ಅಣ್ಣನ ಮಗ ಶಿವುನೊಡನೆ ಹರಟುತ್ತಿದ್ದೆ. ಶಿವು ಅತ್ಯಂತ ಚಿಕ್ಕ ಹುಡುಗ— ನಾಲ್ಕೊ ಐದೊ ವರ್ಷ ಇರಬೇಕು. ಒಂದು ದಿನ ಮುಗಿಲು ಗುಡುಗುತ್ತಿತ್ತು, ಆಕಾಶ ಮಿಂಚುತ್ತಿತ್ತು. ಆಗ ಶಿವು ಹೇಳಿದ: 'ಚಿಕ್ಕಪ್ಪ, ನೋಡಲ್ಲಿ! ಯಾರೊ ಬೆಂಕೀಕಡ್ಡಿ ಗೀಚೋದ!' ಎಂದು. (ಎಲ್ಲರೂ ನಗುತ್ತಾರೆ.) ಒಂದು ದಿವಸ ನೋಡ್ತೇನೆ, ಒಬ್ಬನೆ ಹಸರು

1. ಹೃದೆ, ಅಂದರೆ ಹೃದಯ ಮುಖರ್ಜಿ. ಈತ ಶ್ರೀ ರಾಮಕೃಷ್ಣರ ತಂಗಿಯ ಮಗ. ಪರಮಹಂಸರು ಸಾಧನಾವಸ್ಥೆಯಲ್ಲಿದ್ದಾಗ ಬಹಳ ವರ್ಷ ಅವರ ಸೇವೆ ಮಾಡಿದ್ದ. ಆದರೆ ಕೊನೆಕೊನೆಗೆ ಪರಮಹಂಸರನ್ನು ಬಹಳವಾಗಿ ಕಾಡಲಾರಂಭಿಸಿದ. ಒಮ್ಮೆ ತನ್ನ ಯಾವುದೊ ನಡತೆಯಿಂದ ದೇವಾಲಯದ ಅಧಿಕಾರಿಗಳ ಕೋಪಕ್ಕೆ ಪಾತ್ರನಾದ. ಅವರು ಆತನನ್ನು ದಕ್ಷಿಣೇಶ್ವರದಿಂದ ಓಡಿಸಿಬಿಟ್ಟರು ಮತ್ತು ದೇವಾಲಯಕ್ಕೆ ಕಾಲು ಹಾಕದಹಾಗೆ ಕಟ್ಟಾಜ್ಞೆ ಇತ್ತರು.

ಚಿಟ್ಟೆ ಹಿಡಿಯಲು ಹೋಗುತ್ತಿದ್ದಾನೆ. ಹತ್ತಿರದಲ್ಲಿದ್ದ ಮರದ ಎಲೆಗಳು ಅಳ್ಳಾಡಿದುವು. ಆಗ ಅವನು ಎಲೆಗಳಿಗೆ ಹೇಳಿದ: 'ಚುಪ್! ಚುಪ್! ನಾನು ಚಿಟ್ಟೆ ಹಿಡಿಯುತ್ತಿದ್ದೇನೆ' ಎಂದು. ಇನ್ನೂ ಬಾಲಕ, ಎಲ್ಲಾ ಚೈತನ್ಯಮಯವಾಗಿ ಕಾಣುತ್ತಿದೆ! ಸರಳ ವಿಶ್ವಾಸ, ಹಸುಳೆಯ ವಿಶ್ವಾಸ ಇಲ್ಲದಿದ್ದರೆ ಭಗವಂತನನ್ನು ಪಡೆಯಲಾಗುವುದಿಲ್ಲ.

"ಓ, ನನಗೆ ಹಿಂದೆ ಏನೇನು ಅವಸ್ಥೆ ಬಂದಿದ್ದುವು! ಒಂದು ದಿನ ಹುಲ್ಲುಗಾವಲಿನಲ್ಲಿ ಏನೊ ಒಂದು ನನ್ನನ್ನು ಕಡಿಯಿತು. ಸರ್ಪ ಕಡಿದು ಬಿಟ್ಟಿದ್ದರೆ! ಎಂಬ ಭಯವಾಯಿತು. ದಿಕ್ಕು ತೋರಲಿಲ್ಲ. ಕೇಳಿದ್ದೆ, ಅದು ಮತ್ತೆ ಕಡಿದರೆ ವಿಷ ಹಿಂದಕ್ಕೆ ತೆಗೆದುಕೊಂಡು ಬಿಡುವುದೆಂದು. ಅಲ್ಲೆ ಕುಳಿತು ಅದು ನನ್ನನ್ನು ಮತ್ತೆ ಕಡಿಯಲಿ ಎಂದು ಅದರ ಬಿಲವನ್ನು ಹುಡುಕಲಾರಂಭಿಸಿದೆ. ನಾನು ಹಾಗೆ ಅದರ ಬಿಲ ಹುಡುಕುತ್ತಿದ್ದಾಗ ಒಬ್ಬ ಕೇಳಿದ: 'ಹುಡುಕುತ್ತಿರುವುದು ಏನನ್ನ?' ಎಂದು. ಸಮಾಚಾರವನ್ನೆಲ್ಲ ಕೇಳಿ, ಆತ ಹೇಳಿದ: 'ಹಿಂದೆ ಯಾವ ಜಾಗದಲ್ಲಿ ಕಡಿದಿತ್ತೊ, ಅದೇ ಜಾಗದಲ್ಲಿ ಮತ್ತೆ ಕಡಿಯಬೇಕು. ಆಗ ಅದು ತನ್ನ ವಿಷಯವನ್ನು ಹಿಂದಕ್ಕೆ ತೆಗೆದುಕೊಳ್ಳುತ್ತದೆ' ಎಂದು. ಬಹುಶಃ ಚೇಳು ಗೀಳು ಕಚ್ಚಿದ್ದಿರಬೇಕು.

"ಒಮ್ಮೆ ರಾಮಲಾಲ ಹೇಳಿದ್ದ: 'ಶರದೃತುವಿನ ಹಿಮ ಶರೀರಕ್ಕೆ ಒಳ್ಳೆಯದು' ಎಂದು. ಯಾವುದೊ ಒಂದು ಶ್ಲೋಕ ಅದರ ಸಂಬಂಧವಾಗಿ ಇದೆಯಂತಲ್ಲ ಅದನ್ನ ಎತ್ತಿ ಹೇಳಿದ್ದ. ಒಮ್ಮೆ ಕಲ್ಕತ್ತದಿಂದ ಗಾಡಿಯಲ್ಲಿ ಕುಳಿತು ಬರುವಾಗ ಹಿಮ ಚೆನ್ನಾಗಿ ಬೀಳಲಿ ಎಂದು ತಲೆಯನ್ನು ಹೊರಕ್ಕೆ ಚಾಚಿ ಬಂದೆ. ಫಲ, ಒಡನೆಯೆ ಅಸೌಖ್ಯ." (ಎಲ್ಲರೂ ನಗುತ್ತಾರೆ.)

ಈಗ ಪರಮಹಂಸರು ತಮ್ಮ ಕೊಠಡಿಯಲ್ಲಿ ಬಂದು ಕುಳಿತುಕೊಂಡಿದ್ದಾರೆ. ಅವರ ಪಾದಗಳೆರಡು ಸ್ವಲ್ಪ ಊದು ಊದಿದ ಹಾಗೆ ಇವೆ. ಅವರು ಭಕ್ತರಿಗೆ: "ನನ್ನ ಕಾಲನ್ನ ಸ್ವಲ್ಪ ಬೆರಳಿನಿಂದ ಒತ್ತಿನೋಡಿ, ಕುಳಿಗಿಳಿ ಯಾಗುವುದೆ?" ಎಂದರು. ಒತ್ತಿದಾಗ ಚಿಕ್ಕ ಚಿಕ್ಕ ಕುಳಿ ಬಿದ್ದುವು. ಆದರೆ, ಎಲ್ಲರೂ ಸೇರಿಕೊಂಡು ಹೇಳಲಾರಂಭಿಸಿದರು, "ಓ! ಅದು ಏನೂ ಇಲ್ಲ" ಎಂದು.

ಪರಮಹಂಸರು ವಿಜಯನಿಗೆ: "ನೀನು ಸಿಂಥಿಯ ಮಹೇಂದ್ರನನ್ನು

ಕರೆದುಕೊಂಡು ಬಾ. ಆತ, 'ಇದು ಏನೂ ಇಲ್ಲ' ಎಂದು ಹೇಳಿಬಿಟ್ಟರೆ ಆಗ ನನ್ನ ಮನಸ್ಸಿಗೆ ಶಾಂತಿ.''

ಭವನಾಥ ನಗುತ್ತ: ''ನಿಮಗೆ ಔಷಧದ ಮೇಲೆ ತುಂಬಾ ವಿಶ್ವಾಸ! ನಮಗೆ ಅಷ್ಟೊಂದು ಇಲ್ಲ.''

ಪರಮಹಂಸರು: ''ಔಷಧ ಆತನದೆ. ಆತನೆ ಒಂದು ರೂಪಿನಲ್ಲಿ ಚಿಕಿತ್ಸಕನಾಗಿದ್ದಾನೆ. ಗಂಗಾಪ್ರಸಾದ ಹೇಳಿದ: 'ನೀವು ರಾತ್ರಿಯ ವೇಳೆ ನೀರು ಕುಡಿಯಬೇಡಿ' ಎಂದು. ನಾನು ಅದನ್ನು ವೇದವಾಕ್ಯ ವೆಂದೇ ಎಣಿಸಿದ್ದೇನೆ. ಆತ ಸಾಕ್ಷಾತ್ ಧನ್ವಂತರಿಯೆ ಎಂಬುದಾಗಿ ನನ್ನ ಭಾವನೆ.''

ಹಾಜರಾ ಕೊಠಡಿಗೆ ಬಂದು ಕುಳಿತುಕೊಂಡ. ಪರಮಹಂಸರು ಯಾವು ಯಾವುದೊ ವಿಷಯವಾಗಿ ಮಾತನಾಡುತ್ತಿದ್ದು ಹಾಜರಾನ ಕಡೆ ತಿರುಗಿ: ''ನೋಡು, ನೆನ್ನೆ ವಿಜಯ, ಕೇದಾರ ಇವರೆ ಮೊದಲಾಗಿ ಅನೇಕರು ರಾಮನ ಮನೆಯಲ್ಲಿ ಕುಳಿತಿದ್ದರು. ಅಲ್ಲಿ ಅಷ್ಟೊಂದು ಜನ ಕುಳಿತಿದ್ದರೂ, ನರೇಂದ್ರನ ಕಡೆ ನನ್ನ ದೃಷ್ಟಿಬಿದ್ದೊಡನೆಯೆ ನನಗೇಕೆ ಅಷ್ಟೊಂದು ಉದ್ದೀಪನೆ ಆಯಿತು? ಕೇದಾರ ಕಾರಣಾನಂದದ ಆಲಯಕ್ಕೆ ಸೇರಿದವ ನಾಗಿರುವುದನ್ನ ನಾನು ನೋಡಿದ್ದೇನೆ.''

ನರೇಂದ್ರನಿಗಾಗಿ ಕಾಯುತ್ತಿದ್ದ ಹಾಗೆಯೆ ನರೇಂದ್ರ ಬಂದುಬಿಟ್ಟ. ಪರಮಹಂಸರ ಆನಂದಕ್ಕೆ ಮೇರೆಯೆ ಇಲ್ಲದಂತಾಯಿತು. ಪರಮ ಹಂಸರಿಗೆ ಪ್ರಣಾಮ ಮಾಡಿದನಂತರ ನರೇಂದ್ರ ಕೊಠಡಿಯಲ್ಲಿಯೆ ಕುಳಿತು ಭವನಾಥ ಮೊದಲಾದವರೊಡನೆ ಸ್ವಲ್ಪ ಹರಟುತ್ತಿದ್ದಾನೆ. ಆತನ ಹತ್ತಿರವೆ ಮಾಸ್ಟರ್ ಕುಳಿತಿದ್ದಾನೆ. ಕೊಠಡಿಯಲ್ಲಿ ಒಂದು ಉದ್ದವಾದ ಮಂದಲಿಗೆಯನ್ನು ಹಾಸಿದೆ. ನರೇಂದ್ರ ಮಾತುಕತೆಯಾಡುತ್ತ ಮಂದ ಲಿಗೆ ಮೇಲೆ ತನ್ನ ಹೊಟ್ಟೆಮೇಲೆ ಮಲಗಿಕೊಂಡಿದ್ದಾನೆ. ಪರಮಹಂಸರು ಇದ್ದಕ್ಕಿದ್ದಹಾಗೆ ಆತನ ಕಡೆ ದೃಷ್ಟಿಹಾಕಿ ಸಮಾಧಿಸ್ಥರಾಗಿದ್ದಾರೆ. ಆ ಅವಸ್ಥೆಯಲ್ಲಿಯೆ ಅವರು ಆತನ ಬೆನ್ನಿನ ಮೇಲೆ ಹೋಗಿ ಕುಳಿತಿದ್ದಾರೆ.

ಭವನಾಥ ಹಾಡುತ್ತಿದ್ದಾನೆ:

ನಿನ್ನ ನಿತ್ಯಾನಂದದಾಚೆಗೆ ತಳ್ಳದಿರು ನೀನೆನ್ನನು.
ನಿನ್ನ ಪಾದವನಲ್ಲದೀತನು ಬೇರೆ ಏನೂ ಕಾಣನು.

ಮೃತ್ಯು ಬಂದೆನ್ನೆದುರು ಹುಬ್ಬನು ಗಂಟುಹಾಕುತಲಿರುವನು.
ಹೇಳು ತಾಯೀ, ಏನು ಹೇಳಲಿ? ಅವನು ಬಾಗಿಲೊಳಿರುವನು!

ನಿನ್ನ ನಾಮವನೊಂದ ನಂಬುತ ನಾನು ಭವಸಾಗರದೊಳು
ನನ್ನ ದೋಣಿಯ ತೇಲಿಬಿಡುವೀ ಬಯಕೆಯಿದ್ದಿತು ಎದೆಯೊಳು.
ತೀರವಿಲ್ಲದಪಾರಕತ್ತಲ ಮೊರೆಮೊರೆವ ಮುನ್ನೀರೊಳು
ಒಮ್ಮೆಗೇ ಕೈಬಿಡುವೆ ಎಂಬುದ ಕನಸಿನಲ್ಲೂ ಕಾಣೆನು!

ನಿನ್ನ ತಾರಕ ನಾಮವನು ನೆನೆದಿಲ್ಲಿ ಮುಳುಮುಳುಗೇಳುವೆ.
ಹಗಲು ಇರುಳೂ ನಿನ್ನ ನೆನದರು ತೀರದಾಗಿದೆ ವೇದನೆ!
ನಾನು ಈ ಸಲ ಮುಳುಗಿ ಸತ್ತರೆ ನಾಳೆ ನಿನ್ನಯ ಹೆಸರನು
ಮತ್ತೆ ಯಾರೂ ಜಪಿಸರೆಂಬುದ ಮರೆಯದಿರು ಈಗಾದರೂ!

ಪರಮಹಂಸರಿಗೆ ಬಾಹ್ಯಪ್ರಜ್ಞೆ ಬಂದಿದೆ. ಈಗ ಅವರು ಹಾಡುತ್ತಿದ್ದಾರೆ:

ನಮೋ ಗೌರಿ ನಾರಾಯಣಿ ಶ್ರೀ ದುರ್ಗಾಮಾಯಿ.
ನಿನ್ನಯ ಕೃಪೆ ಇಲ್ಲದಿರಲು ನಾನು ಕಾಣೆ ತಾಯಿ.
ನೀನೆ ಹಗಲು, ನೀನೆ ಇರುಳು, ನೀನೆ ಸಂಜೆ, ರಾತ್ರಿ.
ಕೋದಂಡಪಾಣಿಯಾದ ಶ್ರೀರಾಮರೂಪಿಣೀ
ಕೊಳಲ ಹಿಡಿದು ಗಾನ ಗೈವ ಗೋಪಾಲ ರೂಪಿಣೀ
ಶಿವನ ಮೆಟ್ಟಿ ಮೇಲೆ ನಿಂತ ರುದ್ರ ಭದ್ರ ಕಾಳಿ, ನೀ.
ದಶಾವತಾರಿನೀನೆ, ದಶಮಹಾವಿದ್ಯೆ ನೀನೆ
ಪರಮಶಕ್ತಿರೂಪಿಣೀ
ಭವಸಾಗರ ತಾರಿಣೀ.

ಬಿಲ್ವದಲದಿ ಪೂಜೆಗೈದ ಯಶೋದಾ ತಾಯಿಗೆ
ಬಾಲಗೋಪಾಲನನ್ನು ಕೊಟ್ಟೆ ಮಹಾ ತಾಯಿ.
ಕಾಡಿನಲೋ ಬೀಡಿನಲೋ ಎಲ್ಲಾದರು ಇರಲಿ ನಾ,
ಎಂಥ ಸಾವು ಬಂದರೂ
ನಿನ್ನ ನೆನಪು ಉಳಿಯಲೆನಗೆ
ನನ್ನ ಅಂತ್ಯಕಾಲದಿ.

ನೀನೆ ನನ್ನ ನೂಂಕಿಬಿಟ್ಟರೆಲ್ಲಿ ನನಗೆ ತಾವಿದೆ
ನಿನ್ನ ಅಡಿಯಲಲ್ಲದೆ?

‘ ಹೋಗು ನಡೆ ’—ಎಂದು ನೀನು ಗದರಿಕೊಂಡು ತಳ್ಳಿದರೂ
ಕಾಲಂದಿಗೆಯಾಗಿ ನಿನ್ನ ಕಾಲಿಗಂಟಿಕೊಳ್ಳುವೆ!
ಶಿವನ ಜೊತೆಗೆ ಕುಳಿತು ನೀನು ಸರಸವಾಡುವಾಗ, ನಾನು
“ ಜೈ ಶಿವಾ ” ಎನ್ನುವೆ!

ಗರುಡನಾಗಿ ನೀನು ಮೇಲೆ ನೀಲಜಾನೊಳಾಡುವಾಗ
ಕಿರಿಯ ಮತ್ಸ್ಯವಾಗಿ ನಾನು ತೆರೆಯ ತುದಿಯೊಳಾಡುವೆ!
ಆಗ ನೀನು ಮೇಲೆ ಎರಗಿ ನಿನ್ನ ನಖದಿ ಹಿಡಿಯುವೆ
ಆಗ ಉಸಿರು ಕಟ್ಟಿ ನಾನು ಒದ್ದಾಡುತಲಿದ್ದರೂ,
ನನ್ನ ನೂಕಬೇಡ ತಾಯಿ ಓ ಕಾಲಕಾಮಿನೀ
ನಿನ್ನ ಪಾದಪದ್ಮನೌಕೆ ಭವಸಾಗರ ತಾರಿಣೀ !

ನೀನೆ ಸ್ವರ್ಗ ನೀನೆ ಮರ್ತ್ಯ ನೀನೆಯೆ ಪಾತಾಳ
ದ್ವಾದಶಗೋಪಾಲ ಮತ್ತೆ ಹರಿಹರಬ್ರಹ್ಮಾದಿಗಳಿಗೆ
ನಿನ್ನ ಬಸಿರೆ ಮೂಲ!

ಓ ಅನಂತೆ, ಅನ್ನಪೂರ್ಣೆ, ನಮೋ ಸರ್ವಮಂಗಳೇ.
ಶೂಲಹಸ್ತ ಶೂಲಪಾಣಿ
ತಾನೆ ರಕ್ಷೆ ನಿಲುವನಲ್ತೆ
ನಿನ್ನ ನೆನೆವ ಭಕ್ತಗೇ!

ಹಾಜರಾ ಪರಮಹಂಸರ ಕೊಠಡಿಯ ಈಶಾನ್ಯ ದಿಕ್ಕಿನಲ್ಲಿರುವ ಜಗಲಿ ಮೇಲೆ ಕುಳಿತಿದ್ದಾನೆ. ಕೈಯಲ್ಲಿ ಜಪಮಾಲೆ ಹಿಡಿದು ಹರಿನಾಮ ಜಪ ಮಾಡುತ್ತಿದ್ದಾನೆ. ಪರಮಹಂಸರು ಆತನ ಮುಂದೆ ಹೋಗಿ ಕುಳಿತುಕೊಂಡಿದ್ದಾರೆ. ಅವರು ಆತನ ಜಪಮಾಲೆಯನ್ನು ತಮ್ಮ ಕೈಗೆ ಈಗ ತೆಗೆದುಕೊಂಡಿದ್ದಾರೆ.

ಶ್ರೀರಾಮಕೃಷ್ಣರು ಹಾಜರಾನಿಗೆ: “ ನೋಡು, ನನ್ನ ಕೈಯಲ್ಲಿ ಜಪ ಸಾಧ್ಯವಿಲ್ಲ ;— ಇಲ್ಲ, ಇಲ್ಲ, ಸಾಧ್ಯ ! — ಎಡಗೈಯಿಂದ ಸಾಧ್ಯ,— ಆದರೆ ಅದರೊಂದಿಗೆ ‘ ನಾಮಜಪ ’ ಸಾಧ್ಯವಿಲ್ಲ ! ”

ಹೀಗೆಂದು ಹೇಳಿ ಪರಮಹಂಸರು ಸ್ವಲ್ಪ ಜಪಮಾಡಲು ಪ್ರಯತ್ನ ಮಾಡಿದರು. ಆದರೆ ಜಪ ಆರಂಭಿಸಲು ಹೋಗಿ ಒಮ್ಮೆಗೆಯೆ ಸಮಾಧಿಸ್ಥ

ರಾಗಿದ್ದಾರೆ. ಬಹಳ ಹೊತ್ತು ಕಳೆದುಹೋದರು ಇನ್ನೂ ಆ ಅವಸ್ಥೆಯಲ್ಲಿಯೆ ಕುಳಿತಿದ್ದಾರೆ. ಕೈಯಲ್ಲಿ ಜಪಮಾಲೆಯನ್ನು ಹಿಡಿದುಕೊಂಡೇ ಇದ್ದಾರೆ. ಭಕ್ತರೆಲ್ಲ ಆಶ್ಚರ್ಯಚಕಿತರಾಗಿ ನೋಡುತ್ತಿದ್ದಾರೆ. ಹಾಜರಾ ಕೂಡ ತಾನು ಕುಳಿತಲ್ಲಿಯೆ ಕುಳಿತು ಸ್ತಂಭೀಭೂತನಾಗಿ ನೋಡುತ್ತಿದ್ದಾನೆ. ಈ ರೀತಿಯಾಗಿ ಬಹಳ ಹೊತ್ತು ಕಳೆದುಹೋದನಂತರ ಅವರಿಗೆ ಸ್ವಲ್ಪ ಬಾಹ್ಯಪ್ರಜ್ಞೆ ಬರಲಾರಂಭಿಸಿದೆ. ಅವರು: 'ಹಸಿವು ನನಗೆ' ಎಂದು ಕೂಗಿಕೊಳ್ಳುತ್ತಿದ್ದಾರೆ. ಪ್ರಕೃತಿಸ್ಥರಾಗಲು ಅನೇಕವೇಳೆ ಅವರು ಹೀಗೆ ಕೂಗಿಕೊಳ್ಳುತ್ತಿದ್ದುದುಂಟು. ಮಾಸ್ಟರ್ ಅವರಿಗೆ ಸ್ವಲ್ಪ ಫಲಾಹಾರ ತರಲು ಎದ್ದು ಹೋಗುತ್ತಿದ್ದಾನೆ. ಪರಮಹಂಸರು ಅವನನ್ನು ಕರೆದು: "ಈಗ ಬೇಡಪ್ಪ, ಮೊದಲು ಕಾಳೀದೇವಾಲಯಕ್ಕೆ ಹೋಗಿಬರುತ್ತೇನೆ" ಎಂದರು.

ಶ್ರೀರಾಮಕೃಷ್ಣರು ಸಿಮೆಂಟು ಅಂಗಳದ ಮೂಲಕ ದಕ್ಷಿಣಾಭಿಮುಖರಾಗಿ ಕಾಳೀದೇವಾಲಯಕ್ಕೆ ಹೋಗುತ್ತಿದ್ದಾರೆ. ಕೆಲವು ಹೆಜ್ಜೆ ಹಾಕಿದನಂತರ ದ್ವಾದಶ ಶಿವದೇವಾಲಯಗಳ ಕಡೆ ತಿರುಗಿ ಕೈಮುಗಿದರು. ಎಡಗಡೆಯಲ್ಲಿ ರಾಧಾಕಾಂತ ದೇವಾಲಯ. ಅಲ್ಲಿಗೆ ಹೋಗಿ ರಾಧಾಕಾಂತರ ದರ್ಶನಮಾಡಿ ಅವರಿಗೆ ಪ್ರಣಾಮಮಾಡಿದರು. ಅಲ್ಲಿಂದ ಕಾಳೀದೇವಾಲಯಕ್ಕೆ ಬಂದು, ತಾಯಿಗೆ ಪ್ರಣಾಮಮಾಡಿ ಆಸನದಮೇಲೆ ಕುಳಿತುಕೊಳ್ಳುತ್ತಿದ್ದಾರೆ. ಅನಂತರ ಭಗವತಿಯ ಪಾದಪದ್ಮಗಳಿಗೆ ಹೂವನ್ನು ಅರ್ಪಿಸಿದರು. ಈಗ ತಮ್ಮ ತಲೆಯ ಮೇಲೂ ಹೂವನ್ನು ಇಟ್ಟುಕೊಳ್ಳುತ್ತಿದ್ದಾರೆ. ಬಳಿಕ ಭವನಾಥನಿಗೆ: "ತಾಯಿಯ ಪ್ರಸಾದ, ಈ ಎಳನೀರು ಮತ್ತು ಚರಣಾಮೃತ ತೆಗೆದುಕೊಂಡು ನನ್ನೊಡನೆ ಬಾ" ಎಂದು ಹೇಳಿದರು. ಈಗ ಹಿಂದಿರುಗುತ್ತಿದ್ದಾರೆ. ಭವನಾಥ ಮತ್ತು ಮಾಸ್ಟರ್ ಅವರನ್ನು ಹಿಂಬಾಲಿಸುತ್ತಿದ್ದಾರೆ. ಪರಮಹಂಸರು ಈಗ ತಮ್ಮ ಕೊಠಡಿಗೆ ಹಿಂದಿರುಗಿದ್ದಾರೆ. ಬಳಿಕ ಅವರು ಹಾಜರಾನ ಮುಂದೆ ಬಂದು ಆತನಿಗೆ ಪ್ರಣಾಮ ಮಾಡಿದರು. ಹಾಜರಾ: "ಏನು ನೀವು ಮಾಡುತ್ತಿರುವುದು! ಏನು ನೀವು ಮಾಡುತ್ತಿರುವುದು!" ಎಂದು ಬೊಬ್ಬೆ ಹಾಕಲಾರಂಭಿಸಿದ. ಅದಕ್ಕೆ ಪರಮಹಂಸರು: "ಇದೇನು ಅನ್ಯಾಯದ ಕೆಲಸವೆ? ನೀನೆ ಹೇಳು" ಎನ್ನುತ್ತಿದ್ದಾರೆ. ಹಾಜರಾ ಅನೇಕವೇಳೆ ಪರಮಹಂಸರೊಡನೆ: "ಭಗವಂತ ಎಲ್ಲರಲ್ಲಿಯೂ

ಅಂತರ್ಯಾಮಿಯಾಗಿದ್ದಾನೆ; ಸಾಧನೆಯ ಮೂಲಕ ಸರ್ವರೂ ಬ್ರಹ್ಮ ಜ್ಞಾನ ಪಡೆಯಬಹುದು” ಎಂದು ತರ್ಕ ಮಾಡುತ್ತಿದ್ದ. ಆತನಿಗೆ ತನ್ನ ಆಧ್ಯಾತ್ಮಿಕ ಉನ್ನತಿಯ ವಿಷಯವಾಗಿ ಸ್ವಲ್ಪ ಹೆಮ್ಮೆ ಇದ್ದಿತು.

ಸಮಯ ಆಗಿದೆ. ನೈವೇದ್ಯಾನಂತರದ ಆರತಿ ಮುಗಿಯಿತು. ಅತಿಥಿಶಾಲೆಗೆ ಶಾಕ್ತರು, ವೈಷ್ಣವರು, ಭಿಕ್ಷುಕರಾದಿಯಾಗಿ ಎಲ್ಲರೂ ಹೋಗುತ್ತಿದ್ದಾರೆ. ಎಲ್ಲರಿಗೂ ದೇವಿಯ ಪ್ರಸಾದ, ರಾಧಾಕಾಂತರ ಪ್ರಸಾದ ದೊರೆಯುವ ಸಮಯ. ಪರಮಹಂಸರ ಭಕ್ತರಿಗೂ ಭಗವತಿಯ ಪ್ರಸಾದ ದೊರಕುವುದು. ಬ್ರಾಹ್ಮಣಪರಿಚಾರಕರೊಂದಿಗೆ ಪರಮ ಹಂಸರ ಭಕ್ತರೂ ಅತಿಥಿಶಾಲೆಯಲ್ಲಿ ಕುಳಿತು ಪ್ರಸಾದ ಸ್ವೀಕರಿಸಲು ಹೋಗುವರು. ಪರಮಹಂಸರು ಹೇಳಿದರು: “ನೀವೆಲ್ಲರೂ ಅಲ್ಲಿಗೆ ಹೋಗಿ ಊಟಮಾಡಿ ಬನ್ನಿ—ಏನು?” ಎಂದು. ನರೇಂದ್ರನಿಗೆ: “ನೀನು ಇಲ್ಲಿಯೆ ಊಟ ಮಾಡುವೆಯಾ? ಒಳ್ಳೇದು ನಾನು ನರೇಂದ್ರ ಇಲ್ಲಿಯೆ ಊಟಮಾಡುತ್ತೇವೆ” ಎಂದರು. ಭವನಾಥ, ಬಾಬುರಾಮ, ಮಾಸ್ಟರ್ ಇವರೆ ಮೊದಲಾದವರೆಲ್ಲ ಪ್ರಸಾದಸ್ವೀಕರಿಸಲು ಅತಿಥಿಶಾಲೆಗೆ ಹೋಗುತ್ತಿದ್ದಾರೆ.

ಪ್ರಸಾದ ಸ್ವೀಕರಿಸಿದ'ನಂತರ ಪರಮಹಂಸರು ಸ್ವಲ್ಪ ಹೊತ್ತು ಮಾತ್ರವೆ ವಿಶ್ರಮಿಸಿಕೊಂಡರು. ಭಕ್ತರು ವರಾಂಡದಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದರು. ಪರಮಹಂಸರು ಅಲ್ಲಿಗೆ ಬಂದು ಕುಳಿತು ಅವ ರೊಡನೆ ಆನಂದದಿಂದ ಮಾತುಕತೆಗಳಾಡುತ್ತಿದ್ದಾರೆ. ಆಗ ಘಂಟೆ ಎರಡು. ಎಲ್ಲರೂ ಈಶಾನ್ಯ ವರಾಂಡದಲ್ಲಿ ಕುಳಿತಿದ್ದಾರೆ. ಇದ್ದಕ್ಕಿದ್ದ ಹಾಗೆ ಭವನಾಥ ಬ್ರಹ್ಮಚಾರಿಯ ವೇಷ ಹಾಕಿಕೊಂಡು ಆಗ್ನೇಯ ವರಾಂಡದ ಮೂಲಕ ಹಾದುಬಂದು ಭಕ್ತರ ಮಧ್ಯದಲ್ಲಿ ಕುಳಿತುಕೊಂಡ. ಆತನ ಮೈ ಮೇಲೆ ಕಾಷಾಯ ವಸ್ತ್ರ, ಕೈಯಲ್ಲಿ ಕಮಂಡಲು, ಮುಖದಲ್ಲಿ ನಸುನಗೆ. ಪರಮ ಹಂಸರೂ ಮತ್ತು ಭಕ್ತರೆಲ್ಲರೂ ನಗಲಾರಂಭಿಸಿದ್ದಾರೆ.

ಶ್ರೀರಾಮಕೃಷ್ಣರು ನಗುತ್ತ: “ಈತನ ಮಾನಸಿಕ ಪ್ರವೃತ್ತಿ ಈ ಕಡೆಗೆ ತಾನೆ, ಅದಕ್ಕಾಗಿ ಈ ವೇಷ.”

ನರೇಂದ್ರ: “ಇವನು ಬ್ರಹ್ಮಚಾರಿ ವೇಷ ಹಾಕಿ ಬಂದಿದ್ದಾನೆ; ಸ್ವಲ್ಪತಾಳಿ, ನಾನು ವಾಮಾಚಾರಿ ವೇಷ ಹಾಕಿ ಬರುತ್ತೇನೆ.” (ಎಲ್ಲರೂ ನಗುತ್ತಾರೆ.)

ಹಾಜರಾ: "ಆಗ ನೀನು ಪಂಚಮಕಾರ[1] ಇವೆ ಮೊದಲಾದ ತಾಂತ್ರಿಕ ಕ್ರಿಯೆಗಳಲ್ಲಿ ತೊಡಗಬೇಕಾಗುತ್ತದೆ."

ಪರಮಹಂಸರು ವಾಮಾಚಾರದ ವಿಷಯವಾಗಿ ಒಂದು ಮಾತನ್ನೂ ಆಡಲಿಲ್ಲ. ಆ ಮಾತುಕತೆ ಮುಂದುವರಿಯಲು ಬಿಟ್ಟುಕೊಡಲಿಲ್ಲ. ಸ್ವಲ್ಪ ಹಾಸ್ಯಮಾಡಿ ಅದನ್ನು ಕೊನೆಗಾಣಿಸಿದರು.

ಪರಮಹಂಸರು ಇದ್ದಕ್ಕಿದ್ದ ಹಾಗೆ ಪ್ರೇಮೋನ್ಮತ್ತರಾಗಿ ನರ್ತಿಸಲು ಆರಂಭಿಸಿದ್ದಾರೆ. ಹಾಡುತ್ತಿದ್ದಾರೆ:

ಏನಾದರೂ ನೀನು ನನ್ನ ವಂಚಿಸಲಾರೆ ಇನ್ನು ಮುಂದೆ:
ನಿನ್ನರುಣ ಪಾದಪದ್ಮಗಳ ನಾನಿಂದು ಕಂಡೆ!
ಮಾಯೆಗೊಳಗಾದರೇನಂತೆ, ನಿನ್ನಭಯ ಪದಕಮಲಗಳೆ
ನಿತ್ಯ ಎಂದರಿತಮೇಲೆ!
ಸಂಸಾರ ಕೂಪದೆಡೆ ಎಳೆದೊಯ್ವ ಬಂಧನಕೆ
ಒಳಗಾಗೆನಿನ್ನು ಮೇಲೆ!
ಸುಖದುಃಖ ಸಮ ಎಂದು ಅರಿತುದಾಯಿತು, ಇನ್ನು
ಬಯಕೆಗಳ ಬೆಂಕಿಯನು ಮರುಕೊಳಿಸೆನು
ಕಾಂಚನದಬಯಕೆ ಮೋಹದಮೂಲ ಎಂದರಿತಾಯ್ತು;
ತಿರುಕನಂತದಕಾಗಿ ಹಾರೈಸೆನು.
ರಾಮಪ್ರಸಾದನಿದೊ, ಹಾಡುತಿಹನಿಂತು:
ಹಾಲು ಕುಡಿದವ ನಾನು, ಮಜ್ಜಿಗೆಯೊಳಿನ್ನೇನು?
ಹೀನವನು ನಾ ಬಯಸೆನೆಂದೂ.

ಪರಮಹಂಸರು ಹೇಳುತ್ತಿದ್ದಾರೆ: "ಆಹಾ! ರಾಜನಾರಾಯಣನ ಚಂಡೀ ಮೇಲಿನ ಹಾಡುಗಾರಿಕೆ ಎಷ್ಟು ಸುಶ್ರಾವ್ಯ ಮಧು ಮಧುರ! ಆತ, ಈ ರೀತಿಯಾಗಿ ನರ್ತಿಸುತ್ತ ನರ್ತಿಸುತ್ತ ಹಾಡುತ್ತಾನೆ. ಕಾಮಾರಪುಕುರಿನ ನಕುರ ಆಚಾರ್ಯನ ಹಾಡುಗಾರಿಕೆಯನ್ನ ಕಿವಿಯಿಂದ ಕೇಳಬೇಕು. ಆಹಾ! ಆತನದು ಎಂಥಾ ಮನೋಹರವಾದ ನೃತ್ಯ! ಎಂಥ ಇಂಪಾದ ಹಾಡುಗಾರಿಕೆ!"

ಪಂಚವಟಿಗೆ ಒಬ್ಬ ಸಾಧು ಬಂದಿದ್ದಾನೆ. ಬಹಳ ಕೋಪಿಷ್ಠ. ಸಿಕ್ಕಿ

1. ಮಾಂಸ, ಮದ್ಯ, ಮತ್ಸ್ಯ, ಮೈಥುನ ಮತ್ತು ಮುದ್ರೆ.

ದವರನ್ನೆಲ್ಲ ಬಯ್ಯುವುದೆ ಮತ್ತು ಶಾಪಕೊಡುವುದೆ ಕೆಲಸ. ಆತ ಮರದ ಪಾದರಕ್ಷೆ ಮೆಟ್ಟಿಕೊಂಡು ಕೊಠಡಿಗೆ ಬಂದಿದ್ದಾನೆ. ಆತ ಕೇಳಿದ: "ಏನು, ಇಲ್ಲಿ ಬೆಂಕಿ ಸಿಕ್ಕುವುದೆ?" ಎಂದು. ಪರಮಹಂಸರು ಸಾಧುವಿಗೆ ಕೈಮುಗಿಯುತ್ತಿದ್ದಾರೆ. ಬಳಿಕ ಕೈಕಟ್ಟಿ ನಿಂತಿದ್ದಾರೆ. ಆ ಸಾಧು ಕೊಠಡಿಯಿಂದ ಹೊರಕ್ಕೆ ಹೋಗುವವರೆಗೆ ಹಾಗೆಯೆ ಕೈಕಟ್ಟಿ ನಿಂತಿದ್ದರು.

ಆ ಸಾಧು ಕೊಠಡಿಯಿಂದ ಹೊರಕ್ಕೆ ಹೊರಟುಹೋದ ಮೇಲೆ ಭವನಾಥ ನಗುತ್ತ ನಗುತ್ತ ಹೇಳುತ್ತಿದ್ದಾನೆ: "ನಿಮಗೆ ಆ ಸಾಧುವಿನ ಮೇಲೆ ಎಷ್ಟೊಂದು ಭಕ್ತಿ!"

ಪರಮಹಂಸರು ನಗುತ್ತ: "ಆತ ತಮೋಗುಣಿ ನಾರಾಯಣ. ಯಾರಲ್ಲಿ ತಮೋಗುಣ ಪ್ರಧಾನವಾಗಿದೆಯೊ ಅವರನ್ನು ಈ ರೀತಿ ಪ್ರಸನ್ನರನ್ನಾಗಿ ಮಾಡಬೇಕು. ಏನೇ ಆದರೂ ಆತ ಒಬ್ಬ ಸಾಧು."

ಭಕ್ತರೆಲ್ಲ ಕೂಡಿ ಗೋಲೋಕಧಾಮದ ಆಟ ಆಡುತ್ತಿದ್ದಾರೆ. ಹಾಜರಾ ಕೂಡ ಆಡುತ್ತಿದ್ದಾನೆ. ಪರಮಹಂಸರು ಹತ್ತಿರ ನಿಂತು ನೋಡುತ್ತಿದ್ದಾರೆ. ಮೊದಲು ಮಾಸ್ಟರಿನ ಮತ್ತು ಕಿಶೋರಿಯ ಕಾಯಿಗಳು ಹಣ್ಣಾದುವು. ಪರಮಹಂಸರು ಅವರಿಬ್ಬರಿಗು ನಮಸ್ಕಾರಮಾಡಿದರು. ಹೇಳಿದರು: "ನೀವು ಸಹೋದರರಿಬ್ಬರು ಧನ್ಯರು" ಎಂದು. ಮಾಸ್ಟರನನ್ನು ಒಂದು ಕಡೆ ಕರೆದು: "ಮತ್ತೆ ಆಡಬೇಡ" ಎಂದರು. ಪರಮಹಂಸರು ಮತ್ತೆ ಆಟವನ್ನು ನೋಡುತ್ತಿದ್ದಾರೆ. ಹಾಜರಾನ ಕಾಯಿ ನೇರವಾಗಿ ನರಕಕ್ಕೆ ನುಗ್ಗಿತು. ಪರಮಹಂಸರು ಹೇಳುತ್ತಿದ್ದಾರೆ: "ಹಾಜರಾನಿಗೆ ಏನಾಯಿತು?— ಮತ್ತೆ!" ಎಂದು. ಆತನ ಕಾಯಿ ಮತ್ತೆ ನರಕಕ್ಕೆ ಹೋಗಿ ಬಿದ್ದಿತು. ಇದನ್ನು ನೋಡಿ ಎಲ್ಲರೂ ಗೊಳ್ಳೆಂದು ನಗುತ್ತಿದ್ದಾರೆ. ಲಾಟುವಿನ ಕಾಯಿ ಸಂಸಾರದ ಮನೆಯಿಂದ ಹೊರಟು ನೇರವಾಗಿ ಹೋಗಿ ಸತ್‌ಚಿತ್ ಮುಕ್ತಿಯನ್ನು ಪಡೆಯಿತು. ಲಾಟು ಆಕಾಶಕ್ಕು ಭೂಮಿಗು ನೆಗೆಯುತ್ತಿದ್ದಾನೆ. ಅದನ್ನು ನೋಡಿ ಪರಮಹಂಸರು ಹೇಳುತ್ತಿದ್ದಾರೆ: "ನೋಡಿ ನೀವು ಲಾಟುವಿನ ಆಹ್ಲಾದವನ್ನ! ಅದು ದೊರೆಯದೆ ಇದ್ದರೆ ಆತನ ಮನಸ್ಸಿಗೆ ಬಹಳ ವ್ಯಥೆಯಾಗಿಬಿಡುತ್ತಿತ್ತು" ಎಂದು. (ಏಕಾಂತದಲ್ಲಿ ಭಕ್ತರಿಗೆ) ಇಂದಿನ ಆಟದ ಫಲದಲ್ಲಿ ಅರ್ಥವಿದೆ. ಹಾಜರಾನಿಗೆ ಅಷ್ಟೊಂದು ಅಹಂಕಾರ, ಇದರಲ್ಲಿಯೂ ತಾನು ಗೆದ್ದುಬಿಡುತ್ತೇನೆ ಎಂದು ಇದ್ದ. ಭಗವಂತನದು ಅಂಥಾ ನಿಯಮ, ಆತ ಸಾಧು ಸತ್ಪುರುಷರನ್ನ

ಎಂದಿಗೂ ಮತ್ತು ಎಲ್ಲಿಯೂ ಅಪಮಾನಕ್ಕೆ ಈಡುಮಾಡೋದಿಲ್ಲ. ಅವರಿಗೆ ಎಲ್ಲೆಲ್ಲಿಯೂ ಜಯವೆ.''

ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತಿದ್ದಾರೆ. ನರೇಂದ್ರ, ಭವನಾಥ, ಬಾಬುರಾಮ, ಮಾಸ್ಟರ್ ನೆಲದ ಮೇಲೆ ಕುಳಿತಿದ್ದಾರೆ. ಘೋಷಪಾರಾದವರ ಮತ್ತು ಪಂಚನಾಮಿಗಳ ವಿಷಯವಾಗಿ ನರೇಂದ್ರ ಮಾತು ಎತ್ತಿದ. ಪರಮಹಂಸರು ಅವರನ್ನ ವರ್ಣಿಸುತ್ತ ಅವರನ್ನು ನಿಂದಿಸುತ್ತಿದ್ದಾರೆ. ಹೇಳುತ್ತಿದ್ದಾರೆ: ''ಸರಿಯಾದ ಸಾಧನೆ ಅವರ ಕೈಯಲ್ಲಿ ಹರಿಯದು; ಧರ್ಮದ ಹೆಸರಿನಲ್ಲಿ ಇಂದ್ರಿಯ ರಾಜ್ಯದಲ್ಲಿ ವ್ಯವಹರಿಸುತ್ತಿದ್ದಾರೆ!'' ಎಂದು.

ಶ್ರೀರಾಮಕೃಷ್ಣರು ನರೇಂದ್ರನಿಗೆ: ''ನೀನು ಇಂಥ ವಿಷಯಗಳಿಗೆ ಮನಸ್ಸು ಕೊಡುವುದೇನು ಬೇಡ. ಭೈರವ ಭೈರವಿ, ಇವರದೂ ಇದೇ ರೀತಿ. ನಾನು ಕಾಶಿಗೆ ಹೋಗಿದ್ದಾಗ, ಒಂದು ದಿನ ನನ್ನನ್ನು ಭೈರವ ಮಂಡಲಿಗೆ ಕರೆದುಕೊಂಡು ಹೋಗಿದ್ದರು. ಒಬ್ಬೊಬ್ಬ ಭೈರವನಿಗೆ ಒಬ್ಬೊಬ್ಬ ಭೈರವಿ. ನನಗೆ ಕಾರಣ ಕುಡಿಯಲು ಹೇಳಿದರು. ಕಾರಣವನ್ನ ತಂದ ಭೈರವಿಗೆ ನಾನು ಹೇಳಿದೆ: 'ತಾಯಿ, ನಾನು ಕಾರಣವನ್ನ ಕೈಯಿಂದ ಮುಟ್ಟಲೂ ಲಾರೆ' ಎಂದು. ಆಗ ಅವರೆಲ್ಲರು ಕುಡಿಯಲಾರಂಭಿಸಿದರು. ನಾನು ಯೋಚಿಸಿದೆ, ಬಹುಶಃ ಕುಡಿದ'ನಂತರ ಧ್ಯಾನಮಾಡಬಹುದೆಂದು. ಅವರು ಹಾಗೆ ಮಾಡಲಿಲ್ಲ, ನರ್ತಿಸಲು ಆರಂಭಿಸಿದರು! ಹತ್ತಿರವೆ ಇದ್ದ ಗಂಗೆಗೆ ಬಿದ್ದುಬಿಡುಬಹುದೊ ಏನೊ ಎಂಬ ಭಯ ನನಗಾಯಿತು. ಅವರು ಸೇರಿದ್ದುದು ಗಂಗೆಯ ದಡದಲ್ಲಿಯೆ. ಪತಿ-ಪತ್ನಿಯರು ಭೈರವ-ಭೈರವಿಗಳಾದರೆ, ಅದು ಬಹಳ ಮಾನನೀಯವಾದುದೆ.

(ನರೇಂದ್ರಾದಿ ಭಕ್ತರಿಗೆ) ''ಇದು ಗೊತ್ತೆ ನಿಮಗೆ? ನನ್ನದು ಮಾತೃಭಾವ, ಸಂತಾನಭಾವ. ಮಾತೃಭಾವ ಪರಮ ಶುದ್ಧಭಾವ. ಇದರಲ್ಲಿ ಯಾವ ವಿಪತ್ತೂ ಇಲ್ಲ. ಭಗಿನೀಭಾವ, ಇದು ಕೆಟ್ಟದ್ದೇನಲ್ಲ. ಸ್ತ್ರೀ ಭಾವ,-ವೀರಭಾವ ಬಹಳ ಕಠಿನ. ತಾರಕನ ತಂದೆ ಈ ಭಾವ ಹಿಡಿದು ಸಾಧನೆ ಮಾಡುತ್ತಿದ್ದ. ಬಹಳ ಕಠಿನ! ಇದರಲ್ಲಿ ಮನಸ್ಸನ್ನು ಶುದ್ಧವಾಗಿ ಇಟ್ಟುಕೊಳ್ಳುವುದು ಸ್ವಲ್ಪ ಪ್ರಯಾಸವೆ.

''ಭಗವಂತನನ್ನು ಮುಟ್ಟಲು ಅನೇಕ ಮಾರ್ಗಗಳಿವೆ. ಮತಗಳಿದ್ದಂತೆ ಪಥಗಳು. ಇದು ಕಾಳೀದೇವಾಲಯಕ್ಕೆ ಬರಲು ಅನೇಕ

ಮಾರ್ಗಗಳಿರುವಂತೆ. ಆದರೆ ಕೆಲವು ಮಾರ್ಗ ನಿರ್ಮಲವಾಗಿವೆ, ಕೆಲವು ಕೊಳಕಾಗಿವೆ; ನಿರ್ಮಲ ಮಾರ್ಗದಿಂದ ಹೋಗುವುದೆ ಮೇಲು.

"ಅನೇಕ ಮತ—ಅನೇಕ ಪಥ—ನೋಡಿದ್ದೇನೆ. ಮತ್ತೆ ಅವುಗಳ ಕಡೆ ಮನಸ್ಸು ಕೊಡಲು ನನಗೆ ಇಚ್ಛೆಯಾಗುತ್ತಿಲ್ಲ. ಅವೆಲ್ಲ ಪರಸ್ಪರ ವಾದವಿವಾದದಲ್ಲಿ ತೊಡಗುತ್ತವೆ. ಈಗ ಇಲ್ಲಿ ಬೇರೆ ಯಾರೂ ಇಲ್ಲ; ನೀವೆಲ್ಲರೂ ನನಗೆ ಸೇರಿದವರು; ನಿಮಗೆ ಹೆಳ್ತೀನೆ ಇದನ್ನ. ಕಟ್ಟಕಡೆಗೆ ನನಗೆ ಈ ಅನುಭವ ಆಗಿದೆ: ಆತ ಪೂರ್ಣ, ನಾನು ಆತನ ಅಂಶ; ಆತ ಪ್ರಭು, ನಾನು ಆತನ ದಾಸ; ಮತ್ತೆ ಒಮ್ಮೊಮ್ಮೆ ಅನುಭವಿಸಿದ್ದೇನೆ, ಆತನೇ ನಾನು, ನಾನೇ ಆತ."

ಭಕ್ತರೆಲ್ಲ ಏಕಾಗ್ರಚಿತ್ತದಿಂದ ಈ ಮಾತುಗಳನ್ನು ಕೇಳುತ್ತಿದ್ದಾರೆ.

ಭವನಾಥ ವಿನಯದಿಂದ: "ಜನರೊಡನೆ ನನಗೆ ವೈಮನಸ್ಯವಿದ್ದರೆ ನನ್ನ ಮನನ್ಸು ಕಿರಿ ಕಿರಿ ಅನ್ನುತ್ತದೆ. ಹಾಗಾಗುವುದಾವರೆ ಎಲ್ಲರನ್ನೂ ಪ್ರೀತಿಸಲಾಗುವುದಿಲ್ಲವಲ್ಲ."

ಶ್ರೀರಾಮಕೃಷ್ಣರು: "ಮೊದಲು ಒಮ್ಮೆ ಮಾತುಕತೆಯಾಡಲು—ಅವರೊಡನೆ ಸ್ನೇಹ ಬೆಳೆಸಲು—ಪ್ರಯತ್ನ ಮಾಡು. ಏನೆ ಪ್ರಯತ್ನ ಪಟ್ಟರೂ ಸಾಧ್ಯವಾಗದೆ ಹೋದರೆ, 'ನಂತರ ಅದರ ವಿಷಯವಾಗಿ ಕಿಂಚಿತ್ತೂ ವ್ಯಥೆ ಪಡಬೇಡ. ಭಗವಂತನಿಗೆ ಶರಣಾಗತನಾಗು,—ಆತನ ಚಿಂತನೆ ಮಾಡು,—ಆತನನ್ನು ಮರೆತು ಬೇರೆಯವರ ಚಿಂತನೆಯಿಂದ ಮನಸ್ಸು ಕೆಡಿಸಿಕೊಳ್ಳುವುದು ಬೇಡ."

ಭವನಾಥ: "ಯೇಸುಕ್ರಿಸ್ತ, ಚೈತನ್ಯ ಇವರೆಲ್ಲ ಎಲ್ಲರನ್ನೂ ಪ್ರೀತಿಸಬೇಕು ಎಂದು ಹೇಳಿ ಹೋಗಿರುವರಲ್ಲ."

ಶ್ರೀರಾಮಕೃಷ್ಣರು: "ಭಗವಂತ ಸಕಲ ಭೂತಗಳಲ್ಲಿಯೂ ಇರುವುದರಿಂದ ಎಲ್ಲರನ್ನು ಪ್ರೀತಿಸಲೇನೊ ಬೇಕು. ಆದರೂ, ದುಷ್ಟರಿಗೆ ಸ್ವಲ್ಪ ದೂರದಿಂದಲೆ ನಮಸ್ಕಾರ ಹಾಕಿಬಿಡಬೇಕು. ಏನು! ಚೈತನ್ಯ ದೇವನೆ? ಆತನೂ ಕೂಡ ಅನ್ಯ ಸಂಪ್ರದಾಯದವರೊಡನೆ ವ್ಯವಹರಿಸುವಾಗ ತನ್ನ ಆಂತರಿಕ ಭಾವನೆಗಳನ್ನು ಒಂದು ನಿರೋಧದಲ್ಲಿ ಇಟ್ಟುಕೊಳ್ಳುತ್ತಿದ್ದ. ಶ್ರೀವಾಸನ ಮನೆಯಲ್ಲಿ ಆತನ ಅತ್ತೆಯ ಜುಟ್ಟನ್ನು ಹಿಡಿದು ಮನೆಯಿಂದ ಹೊರಕ್ಕೆ ದೂಡುವ ಕಾರ್ಯ ಆತನ ಮೂಲಕ ನಡೆಯಿತು."

ಭವನಾಥ: "ಆಕೆಯನ್ನು ಹೊರಕ್ಕೆ ದೂಡಿದವ ಬೇರೆ ಯಾರೊ ಒಬ್ಬ."

ಶ್ರೀರಾಮಕೃಷ್ಣರು: "ಆತನ ಅನುಮತಿಯಿಲ್ಲದಿದ್ದರೆ ಆ ಕಾರ್ಯ ನಡೆಯುತ್ತಿತ್ತೆ? ಏನು ಮಾಡೋದು, ಪರರ ಹೃದಯವನ್ನು ಗೆಲ್ಲಲಾಗದೆ ಹೋದರೆ, ಅದಕ್ಕಾಗಿ ಹಗಲು ಇರುಳು ಪ್ರಾಣಬಿಡಬೇಕೆ? ಯಾವ ಮನಸ್ಸನ್ನು ಭಗವಂತನಿಗೆ ಅರ್ಪಿಸಬೇಕೋ, ಅದನ್ನು ತೆಗೆದುಕೊಂಡು ಹೋಗಿ ಅಲ್ಲಿ ಇಲ್ಲಿ ಬರಿದೆ ವ್ಯಯ ಮಾಡುವುದೆ? ನಾನು ಹೇಳ್ತೀನೆ: 'ತಾಯಿ! ನರೇಂದ್ರ, ರಾಖಾಲ, ಭವನಾಥ ನನಗೆ ಯಾರೂ ಬೇಕಾಗಿಲ್ಲ; ಕೇವಲ ನೀನೊಬ್ಬಳೆ ಬೇಕು. ಮಾನವ ಜೀವಿಯಿಂದ ನನಗಾಗಬೇಕಾರುವುದೇನು?' ಎಂದು."

ಆನಂದ ಮಯಿಯಾದ ಶ್ರೀಚಂಡಿ ಬಂದಾಗ
ನನ್ನ ಮನೆಗೆ
ಎನಿತೊಂದು ಮಂತ್ರಗಳು ನನ್ನ ಕಿವಿಗೆ!
ಎನಿತೆನಿತು ಯೋಗಿಗಳು, ಎನಿತು ಸಂನ್ಯಾಸಿಗಳು
ಬಹರಿಲ್ಲಿಗೆ!

"ಆತನ ಸಾಕ್ಷಾತ್ಕಾರ ದೊರೆತರೆ ಉಳಿದುದೆಲ್ಲ ತಾನಾಗಿಯೆ ದೊರೆಯುತ್ತವೆ. ರೂಪಾಯಿ ಮಣ್ಣೇ, ಮಣ್ಣೇ ರೂಪಾಯಿ,—ಚಿನ್ನ ಮಣ್ಣೇ, ಮಣ್ಣೇ ಚಿನ್ನ,—ಹೀಗೆಂದು ಹೇಳಿ ಅವನ್ನು ತ್ಯಜಿಸಿಬಿಟ್ಟೆ; ಗಂಗಾ ನದಿಗೆ ಬಿಸಾಡಿಬಿಟ್ಟೆ. ಆಗ ಭಯವಾಯಿತು ಒಂದು ಪಕ್ಷ ಭಗವತಿ ಲಕ್ಷ್ಮಿ ಕೋಪಿಸಿಕೊಂಡು ಬಿಟ್ಟರೆ! ಎಂದು. ಆಕೆಯ ಐಶ್ವರ್ಯವನ್ನು ತಿರಸ್ಕರಿಸಿ ಬಿಟ್ಟೆ; ನನ್ನ ಗ್ರಾಸಕ್ಕೆ ಆಕೆ ಸೊನ್ನೆ ಹಾಕಿ ಬಿಟ್ಟರೆ! ಎಂದು. ಆಗ ಪ್ರಾರ್ಥನೆ ಮಾಡಿದೆ: 'ಹೇ ತಾಯಿ! ನೀನೊಬ್ಬಳು ಬೇಕೆ ವಿನಾ, ಬೇರೆ ಏನೂ ಬೇಕಾಗಿಲ್ಲ' ಎಂದು. ಆಕೆಯೊಬ್ಬಳು ದೊರೆತರೆ ಉಳಿದುದೆಲ್ಲಾ ಸ್ವಾಭಾವಿಕವಾಗಿಯೆ ದೊರೆಯುತ್ತವೆ ಎಂಬುದು ನನಗೆ ಗೊತ್ತಿದೆ."

ಭವನಾಥ ನಗುತ್ತ ನಗುತ್ತ: "ಇದು ವ್ಯಾಪಾರಿಯ ಬುದ್ಧಿ!"

ಪರಮಹಂಸರು ನಗುತ್ತ: "ಹೌದು, ಇದು ಸ್ವಲ್ಪ ಅದಕ್ಕೆ ಸೇರಿದುದೆ! ಒಮ್ಮೆ ಭಗವಂತ ಪ್ರಸನ್ನನಾಗಿ ಒಬ್ಬನಿಗೆ ಹೇಳಿದ: 'ನಿನ್ನ ತಪಸ್ಯ ನೋಡಿ ನನಗೆ ಬಹಳ ಆನಂದವಾಗಿದೆ. ನೀನು ಒಂದು ವರ ಬೇಡಿಕೊ' ಎಂದು. ಸಾಧಕ ಉತ್ತರವಿತ್ತ: 'ಹೇ ಪ್ರಭು! ಹಾಗಾದರೆ

ಈ ವರ ಕೊಡು. ನಾನು ನನ್ನ ಮೊಮ್ಮಕ್ಕಳೊಂದಿಗೆ ಚಿನ್ನದ ತಟ್ಟೆಯಲ್ಲಿ ಊಟ ಮಾಡುವಹಾಗೆ ಅನುಗ್ರಹಿಸು' ಎಂದು. ಒಂದು ವರದಿಂದಲೆ ಆತನಿಗೆ ಬೇಕಾದುದೆಲ್ಲಾ ದೊರೆತುಬಿಟ್ಟಿತು. ಐಶ್ವರ್ಯ ದೊರೆಯಿತು, ಮಕ್ಕಳು ದೊರೆತುವು, ಮೊಮ್ಮಕ್ಕಳು ದೊರೆತುವು!" (ಎಲ್ಲರೂ ನಗುತ್ತಾರೆ.)

ಭಕ್ತರು ಕೊಠಡಿಯಲ್ಲಿ ಕುಳಿತ್ತಿದ್ದಾರೆ. ಹಾಜರಾ ವರಾಂಡದಲ್ಲಿ ಕುಳಿತಿದ್ದಾನೆ.

ಪರಮಹಂಸರು ಭಕ್ತರಿಗೆ: "ಹಾಜರಾನಿಗೆ ಏನುಬೇಕು ಎಂಬುದು ನಿಮಗೆ ಗೊತ್ತೇನು? ಆತನಿಗೆ ಸ್ವಲ್ಪ ಹಣ ಬೇಕು; ಮನೆಯಲ್ಲಿ ಬಡತನ; ಸ್ವಲ್ಪ ಸಾಲ ಇದೆ. ಆತ ಜಪ ಧ್ಯಾನ ಮಾಡುತ್ತಿರುವುದು ಭಗವಂತ ಐಶ್ವರ್ಯ ಕೊಡುತ್ತಾನೆ ಅಂತ!"

ಒಬ್ಬ ಭಕ್ತ: "ಏನು, ಭಗವಂತ ಭಕ್ತನ ಇಚ್ಛೆಯನ್ನ ಪೂರ್ಣ ಮಾಡಿ ಕೊಡಲಾರನೆ?"

ಶ್ರೀರಾಮಕೃಷ್ಣರು: "ಆತನ ಇಚ್ಛೆ. ಆದರೆ, ಭಕ್ತ ಪ್ರೇಮೋನ್ಮತ್ತನಾಗದಿದ್ದರೆ ಆತನ ಹೊರೆಯನ್ನೆಲ್ಲ ಆತ ಹೊತ್ತುಕೊಳ್ಳಲೊಲ್ಲ. ಚಿಕ್ಕ ಮಕ್ಕಳನ್ನು ಮಾತ್ರವೆ ಅವುಗಳ ಕೈಹಿಡಿದುಕೊಂಡು ಹೋಗಿ ಊಟಕ್ಕೆ ಕುಳಿಸುತ್ತಾರೆ. ದೊಡ್ಡವರ ವಿಷಯವಾಗಿ ಯಾರುತಾನೆ ಹಾಗೆ ವರ್ತಿಸುತ್ತಾರೆ! ಭಕ್ತ ತನ್ನ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳಲಾರದಷ್ಟು ಭಗವತ್‌ಚಿಂತನೆಯಲ್ಲಿ ತನ್ಮಯನಾಗಿಬಿಟ್ಟರೆ, ಆಗ ಮಾತ್ರ ಭಗವಂತ ಆತನ ಇಡಿಯ ಹೊರೆಯನ್ನು ಹೊತ್ತುಕೊಳ್ಳುತ್ತಾನೆ."

"ಹಾಜರಾ ತನ್ನ ಮನೆಯ ಯೋಗಕ್ಷೇಮವನ್ನು ಕೇಳಿ ತಿಳಿದುಕೊಳ್ಳುವುದೆ ಇಲ್ಲ. ರಾಮಲಾಲನಿಗೆ ಹಾಜರಾನ ಮಗ ಹೇಳಿಕಳುಹಿಸಿದನಂತೆ: 'ನಮ್ಮ ತಂದೆಗೆ ಒಮ್ಮೆ ಇಲ್ಲಿಗೆ ಬಂದು ಹೋಗುವಂತೆ ಹೇಳು. ನಾವು ಅವರನ್ನು ಯಾವುದಕ್ಕೂ ಪೀಡಿಸುವುದಿಲ್ಲ' ಎಂದು. ಇದನ್ನು ಕೇಳಿ ನನ್ನ ಕಣ್ಣಿನಲ್ಲಿ ನೀರು ಬಂದೇ ಬಿಟ್ಟಿತು. ಹಾಜರಾನ ತಾಯಿಕೂಡ ರಾಮಲಾಲನಿಗೆ ಹೇಳಿದಂತೆ: 'ನೀನು ಪ್ರತಾಪನಿಗೆ (ಹಾಜರಾ) ಒಮ್ಮೆ ಇಲ್ಲಿಗೆ ಬಂದು ಹೋಗುವಂತೆ ಹೇಳು. ನಿಮ್ಮ ಚಿಕ್ಕಪ್ಪ ಕೂಡ ಇಲ್ಲಿಗೆ ಹೋಗಿ ಬರುವಂತೆ ಆತನಿಗೆ ಹೇಳಬೇಕೆಂದು ನಾನು ಅವರನ್ನು ಪ್ರಾರ್ಥಿಸಿಕೊಂಡಿರುವುದನ್ನ ನೀನು ಅವರಿಗೆ ತಿಳಿಸು' ಎಂದು. ನಾನೂ ಆತನಿಗೆ ಹೇಳಿದೆ, ಆದರೆ ಅವ ಕಿವಿಗೊಡಲಿಲ್ಲ.

“ಏನು, ಹೆತ್ತತಾಯಿ ಕಸಕಡ್ಡಿಯೆ! ಚೈತನ್ಯದೇವ ಎಷ್ಟೊಂದು ತನ್ನ ತಾಯಿಗೆ ಹೇಳಿ ಮಾಡಿ ಆಕೆಯಿಂದ ಸನ್ಯಾಸ ಸ್ವೀಕಾರಕ್ಕೆ ಅನುಮತಿ ಪಡೆದ. ಶಚಿ[1] ಹೇಳಿದಳಂತೆ: ‘ನಾನು ಕೇಶವಭಾರತಿಯನ್ನ[2] ಕತ್ತರಿಸಿ ಹಾಕುತ್ತೇನೆ’ ಎಂದು. ಚೈತನ್ಯದೇವ ಬಹಳವಾಗಿ ಆಕೆಗೆ ಬುದ್ಧಿವಾದವನ್ನು ಇತ್ತ. ಹೇಳಿದ: ‘ತಾಯೆ, ನೀನು ಅನುಮತಿಕೊಡದಿದ್ದರೆ ನಾನು ಮನೆಯನ್ನು ಬಿಟ್ಟು ಹೋಗೋದಿಲ್ಲ. ಆದರೆ ಸಂಸಾರಿಯಾಗಿರಲು ನನ್ನನ್ನು ನೀನು ಒತ್ತಾಯ ಮಾಡಿದೆಯೊ, ಈ ಶರೀರ ಮಾತ್ರ ಬದುಕಿರದು. ಒಂದು ಪಕ್ಷ ನೀನು ಅನುಮತಿ ಕೊಡುವುದೆ ಆದರೆ, ಇಚ್ಛೆ ಬಂದಾಗಲೆಲ್ಲ ನೀನು ನನ್ನನ್ನು ನೋಡಬಹುದು. ನಾನು ಹತ್ತಿರವೆ ಇರಲು ಹೋಗುತ್ತೇನೆ. ಆಗಾಗ ಬಂದು ನೋಡಿ ಹೋಗುತ್ತೇನೆ!’ ಎಂದು. ಆಗ ಮಾತ್ರವೆ ಶಚೀದೇವಿ ಅನುಮತಿ ಕೊಟ್ಟಳಂತೆ. ತಾಯಿ ಬುಕಿದ್ದಷ್ಟು ದಿವಸ ನಾರದ ತಪಸ್ಸಿಗೆ ಹೋಗಲಾಗಲಿಲ್ಲ. ತಾಯಿಯ ಸೇವೆ ಮಾಡಿಕೊಂಡಿರಬೇಕಾಗಿತ್ತು. ತಾಯ ದೇಹತ್ಯಾಗವಾದಮೇಲೇನೆ ಹರಿಯ ಸಾಕ್ಷಾತ್ಕಾರಕ್ಕಾಗಿ ಮನೆ ಬಿಟ್ಟು ಹೊರಟ.

“ಬೃಂದಾವನಕ್ಕೆ ಹೋಗಿ ಹಿಂದಿರುಗಿಬರಲಿಚ್ಛೆಯಾಗಲಿಲ್ಲ. ಅಲ್ಲಿ ಗಂಗಾಮಾಯಿಯೊಡನೆ[3] ಇರಲು ಮಾತುಕತೆ ನಡೆಯಿತು. ಎಲ್ಲಾ ಚಾಜೂ ತಪ್ಪದೆ ವ್ಯವಸ್ಥೆಯಾಗಿಬಿಟ್ಟಿತು: ಈ ಕಡೆ ನನ್ನ ಹಾಸಿಗೆ, ಆ ಕಡೆ ಆಕೆಯ ಹಾಸಿಗೆ. ‘ಕಲ್ಕತ್ತಕ್ಕೆ ಹಿಂದಿರುಗೋದಿಲ್ಲ; ಬೆಸ್ತರ ಮನೆ (ದಕ್ಷಿಣೇಶ್ವರದ) ಅನ್ನ ಇನ್ನೆಷ್ಟು ದಿವಸ ತಿನ್ನೋದು?’ ಎಂದು ಯೋಚಿಸಿದೆ. ಆಗ ಹೃದೆ ಹೇಳಿದ: ‘ಇದೆಲ್ಲ ನಡೆಯದ ಕಾರ್ಯ. ಕಲ್ಕತ್ತಕ್ಕೆ ಹಿಂದಿರುಗಿ ಹೋಗೋಣ’ ಎಂದು. ನನ್ನನ್ನು ಆತ ಒಂದು ಕಡೆಗೆ ಎಳೆಯಲಾರಂಭಿಸಿದ, ಗಂಗಾಮಾಯಿ ಇನ್ನೊಂದು ಕಡೆಗೆ ಎಳೆಯಲಾರಂಭಿಸಿದಳು. ನನಗೆ ಅಲ್ಲೆ ಇರಬೇಕೆಂಬ ಇಚ್ಛೆ ಬಹಳ. ಅಂಥ ಸಂದಿಗ್ಧಸಮಯದಲ್ಲಿ ನನ್ನ ಹೆತ್ತ ತಾಯ ಜ್ಞಾಪಕ ಬಂತು. ಒಡನೆಯೆ ನನ್ನ ಪ್ಲಾನುಗೀನು ಎಲ್ಲ ಬದಲಾಯಿಸಿಬಿಟ್ಟಿತು. ತಾಯಿ ಮುದುಕಿಯಾಗಿದ್ದಳು.

---

1. ಚೈತನ್ಯ ದೇವನ ತಾಯಿ.
2. ಈತ ಚೈತನ್ಯ ದೇವನಿಗೆ ಸಂನ್ಯಾಸಕೊಟ್ಟ ಯತಿ.
3. ಆಧ್ಯಾತ್ಮಿಕ ಜೀವನದಲ್ಲಿ ಬಹಳ ಮುಂದುವರಿದು ಬೃಂದಾವನದಲ್ಲಿಯೆ ವಾಸಿಸುತ್ತಿದ್ದ ಒಬ್ಬ ವೈಷ್ಣವಿ.

ಭಾವಿಸಿದೆ, 'ಹೆತ್ತತಾಯ ಚಿಂತೆ ತಲೆಗೆ ಹತ್ತಿಕೊಂಡಿತೆಂದರೆ ಈಶ್ವರ ಗೀಶ್ವರ ಎಲ್ಲ ದೂರಹೋಗಿಬಿಡುತ್ತಾನೆ. ಇಲ್ಲಿ ಇರೋದಕ್ಕಿಂತ ಆಕೆ ಯೊಡನೆಯೆ ಹೋಗಿ ಇರುತ್ತೇನೆ. ಅಲ್ಲಿಗೆ ಹೋಗಿ ನಿಶ್ಚಿಂತೆಯಿಂದ ಭಗವಚ್ಚಿಂತನೆ ಮಾಡುತ್ತೇನೆ' ಎಂದು.

(ನರೇಂದ್ರನಿಗೆ) "ನೀನು ಒಂದು ಸ್ವಲ್ಪ ಹಾಜರಾನಿಗೆ ಹೇಳು. ಅಂದು ನನಗೆ ಹೇಳಿದ: 'ಹ್ಞಾ, ಊರಿಗೆ ಹೋಗಿ ಮೂರು ದಿನ ಇದ್ದು ಬರುತ್ತೇನೆ' ಎಂದು. ಮತ್ತೆ ನೋಡಿದರೆ ಎಂದಿನಂತೆಯೆ!

(ಭಕ್ತರಿಗೆ) "ಇಂದು ಗೋಷ್‌ಪಾರಾ ಗೀಷ್‌ಪಾರಾ ಇವರೇ ಮೊದಲಾದವರ ಮಾತುಕತೆ ಆಡಿ ವ್ಯರ್ಥವಾಗಿ ಕಾಲ ಕಳೆದೆವು. ಗೋವಿಂದ, ಗೋವಿಂದ, ಗೋವಿಂದ! ಈಗ ಸ್ವಲ್ಪ ಹರಿನಾಮ ನಡೆ ಯಲಿ. ಅಂಬಲಿ ತುಂಬೆಸೊಪ್ಪು ತಿಂದನಂತರ ಸ್ವಲ್ಪ ಮೃಷ್ಟಾನ್ನ ತಿನ್ನೋಣ."

ನರೇಂದ್ರ ಹಾಡಲಾರಭಿಸಿದ:

ಏಕ ಪುರಾತನ ಪುರುಷ ನಿರಂಜನ
ಪಾದದಿ ಚಿತ್ತವ ನಿಲಿಸೋ.
ಆದಿಸತ್ಯನವ, ಕಾರಣ ಕಾರಣ
ಚರಾಚರದೊಳಗು ಪ್ರಾಣಮಯ.

ನಿತ್ಯ ಅತೀಂದ್ರಿಯ ಚೈತನ್ಯಸ್ವರೂಪ
ಹೃದಿಕಂದರದೊಳು ವಿರಾಜಿತ.
ಜ್ಞಾನ ಪ್ರೇಮ ಪುಣ್ಯಾದಿ ಭೂಷಿತ
ಪ್ರಶಾಂತ ಮಾರುತಿ, ಅನಂತಗುಣಭೂತ.

ಚಿರಕ್ಷಮಶೀಲ, ಮಂಗಳದಾತ,
ಭವಸಾಗರದೊಳು ನಿಕಟಸಹಾಯ.
ಜೀವರೂಪನವ, ಜ್ಯೋತಿರ್ಮಯನು
ಸರ್ವಾಶ್ರಯ ಸಂತಾಪಹರ.

ಪಾಪಪುಣ್ಯಗಳ ಪರಮನ್ಯಾಯವಾನ್
ದಯಾಸಿಂಧು ಮೋಕ್ಷ್ಕೃಪಾಮಯ.
ಆತನ ಮಹಿಮೆಯ ನೆನೆವ ತೃಷಿತಮನ
ಕರೆಯುವುದೊಲವಿನ ಕಂಬನಿಯ!

ಅಂಥ ಶ್ರೀಮುಖವ ನೋಡಿನಲಿಯೊ ಮನ;
ನಿರಂತರವು ಎದೆ ಹಸಿದಿರಲಿ.
ಧ್ಯಾನ ಪೂಜೆ ಪ್ರಾರ್ಥನೆಯ ರೂಪದಲಿ
ತಿರುಕನವೋಲಿರು ಬಾಗಿಲಲಿ!

ನರೇಂದ್ರ ಮತ್ತೆ ಹಾಡುತ್ತಿದ್ದಾನೆ:

ಉದಯಿಸಿಹನದೊ ಚಿದಾಕಾಶದಲ್ಲಿ ಪೂರ್ಣ ಇಂದು
ಪ್ರೇಮಸಿಂಧು ಉಕ್ಕಿ ಹರಿದು ಲೋಕಗಳೇ ನಾಂದು!
ತಳತಳಿಸುವ ಚಂದ್ರಿಕೆಯಲಿ ಭಕ್ತವೃಂದಗ್ರಹದಲ
ಭಕ್ತರೊಡನೆ ಭಕ್ತಸಖನು ಲೀಲಾ ರಸ ಚಂಚಲ!
ಅದೋ ನೋಡು ಸ್ವರ್ಗದೆದೆಯ ಸಿರಿಬಾಗಿಲೆ ತೆರದಿದೆ
ಆನಂದಲಹರಿ ಹರಿದಿದೆ!
ತೀಡುತಿಹುದು ಉದಿತದಿನದ ಮಂದ ಮಧು ಸಮೀರನು;
ಹಿರಿಯೊಲವಿನ ಗಂಧದಲ್ಲಿ ತೇಲಿಸಿಹುದು ಜಗವನು.
ಅದನು ಹೀರಿ ಯೋಗಿವೃಂದಕೊದಗಿತಾನಂದ!—
ಭವಜಲಧಿಯ ತೆರೆಯ ಮೇಲೆ ನವೋದಯದ ಪದ್ಮ
ಅರಳಿರಲದೆ ತಾಯಿಗಾಯ್ತು ಸಿಂಹಪೀಠ ಸದ್ಮ.
ಝೇಂಕರಿಸಿದೆ ಬಂಡನುಂಡ ಭಕ್ತಭ್ರಮರ ವೃಂದ!—
ಪ್ರಸನ್ನವದನತೇಜದಲ್ಲಿ ಭುವನ ಮನವ ಮೋಹಿಸಿಹುದು
ತಾಯ ಮಧುರ ರೂಪ!
ಪದತಲದೆಡೆ ದಲದಲದಲ ನೃತ್ಯಶೀಲ ಭಕ್ತವೃಂದ;
ನಿರುಪಮ ವೀನೋಟ!
ಕಾಣಲವಳು ನನ್ನ ಎದೆಗೆ ಶಾಂತಿ ಶಾಂತಿ ಶಾಂತಿ
ಚಿರ ಅನಂತ ಕಾಂತಿ!
ಪ್ರೇಮದಾಸನೆರೆವ ನಿಜ್ಞ; ಇಂಥ ತಾಯ ನುತಿಸಿರಣ್ಣ
ಹಿರಿಯ ಕಿರಿಯರೆಲ್ಲ.

ಪರಮಹಂಸರು ನರ್ತಿಸುತ್ತಿದ್ದಾರೆ. ಪ್ರದಕ್ಷಿಣೆಮಾಡುತ್ತ ಪ್ರದಕ್ಷಿಣೆ ಮಾಡುತ್ತಾ ನರ್ತಿಸುತ್ತಿದ್ದಾರೆ; ಎಲ್ಲರೂ ಕೂಡಿ ಅವರೊಡನೆ ನರ್ತಿಸುತ್ತಿದ್ದಾರೆ ಮತ್ತು ಹಾಡುತ್ತಿದ್ದಾರೆ. ಬಹಳ ಆನಂದ.

ಎಲ್ಲರೂ ಕೂಡಿ ಹಾಡುತ್ತಿದ್ದುದು ಮುಗಿಯಿತು. ಪರಮಹಂಸರು ಮತ್ತೆ ಹಾಡಲಾರಂಭಿಸಿದ್ದಾರೆ:

ಶಿವಸಂಗದೊಳಾನಂದದಿ ತಾಯಿ ಕುಣಿಯುತಿರುವಳು.
ದಿವ್ಯಮಧುವ ಕುಡಿದು ಕೂಡ, ಹೆಜ್ಜೆತಪ್ಪದಿರುವಳು......

ಪರಮಹಂಸರಿಗೆ ಮಾಸ್ಟರ್ ಎಲ್ಲರೊಡನೆಯೂ ಕೂಡಿ ಹಾಡುತ್ತಿದ್ದುದನ್ನು ನೋಡಿ ಬಹಳ ಆನಂದ. ಅವರು ನಗುತ್ತ ಮಣಿಗೆ ಹೇಳುತ್ತಿದ್ದಾರೆ: "ಒಂದು ಮೃದಂಗವಿದ್ದಿದ್ದರೆ ಬಹಳ ಚೆನ್ನಾಗಿರುತ್ತಿತ್ತು; ಇನ್ನೂ ಕಳೆ ಕಟ್ಟುತ್ತಿತ್ತು. ಅದು ತಾಕ್ ತಾಕ್ ತಾ ಧಿನಾ, ದಾಕ್ ದಾಕ್ ದಾ ಧಿನಾ ಎಂದು ಶಬ್ದಮಾಡುತ್ತಿತ್ತು! ಕೀರ್ತನೆ ಮುಗಿಯುವುದರೊಳಗಾಗಿ ಸಂಜೆಯಾಯಿತು.

**೧ನೆ ಅಕ್ಟೋಬರ್ ೧೮೮೪, ಆಶ್ವೀಜ ಶುಕ್ಲ ಏಕಾದಶಿ, ಬುಧವಾರ.**

ಪರಮಹಂಸರು ದಕ್ಷಿಣೇಶ್ವರವನ್ನು ಬಿಟ್ಟು ಅಧರಸೇನನ ಮನೆಗೆ ಹೊರಟಿದ್ದಾರೆ. ಅವರೊಡನೆ ನಾರಾಯಣ ಮತ್ತು ಗಂಗಾಧರ. ಇದ್ದಕ್ಕಿದ್ದ ಹಾಗೆ ಅವರು ಅರ್ಧದಾರಿಯಲ್ಲಿ ಭಾವಾವಿಷ್ಟರಾಗಿದ್ದಾರೆ. ಪರಮಹಂಸರು ಭಾವದಲ್ಲಿ ಹೇಳುತ್ತಿದ್ದಾರೆ: "ನಾನು ಜಪಮಾಲೆ ತಿರುಗಿಸಲೆ? ಹಾಕ್ ಥೂ! ಈ ಶಿವ ಪಾತಾಳದಿಂದ ಒಡೆದುಮೂಡಿದ ಶಿವ; ಸ್ವಯಂಭೂಲಿಂಗ" ಎಂದು.

ಅವರು ಅಧರಸೇನನ ಮನೆಗೆ ಬಂದಿದ್ದಾರೆ. ಅಲ್ಲಿ ಅನೇಕ ಭಕ್ತರು ಬಂದು ಸೇರಿದ್ದಾರೆ. ಕೇದಾರ, ವಿಜಯ, ಬಾಬುರಾಮ ಮೊದಲಾದವರು ಕುಳಿತಿದ್ದಾರೆ. ಕೀರ್ತನೆಗಾರ ವೈಷ್ಣವಚರಣ ಬಂದಿದ್ದಾನೆ. ಪರಮಹಂಸರ ಆಜ್ಞೆಗನುಸಾರ ಅಧರಸೇನನಿಗೆ ತನ್ನ ಆಫೀಸಿನಿಂದ ಹಿಂದಿರುಗಿ ಬಂದನಂತರ ಪ್ರತಿದಿವಸವೂ ಹೋಗಿ ವೈಷ್ಣವ ಚರಣನ ಕೀರ್ತನೆ ಕೇಳುವ ಅಭ್ಯಾಸ. ವೈಷ್ಣವಚರಣನ ಸಂಕೀರ್ತನೆ ಬಹಳ ಇಂಪು. ಇಂದೂ ಆತನ ಸಂಕೀರ್ತನೆ. ಪರಮಹಂಸರು ಅಧರಸೇನನ ಬೈಠಕ್‌ಖಾನೆಯನ್ನು ಪ್ರವೇಶಿಸುತ್ತಿದ್ದಾರೆ. ಭಕ್ತರೆಲ್ಲ ಎದ್ದು ನಿಂತು ಅವರಿಗೆ ಗೌರವವನ್ನು ತೋರಿಸಿದರು. ಪರಮಹಂಸರು ಮುಗುಳು ನಗುತ್ತ ಆಸನದಲ್ಲಿ ಕುಳಿತುಕೊಂಡರು. ಬಳಿಕ ಭಕ್ತರೂ ಕುಳಿತುಕೊಂಡರು. ಕೇದಾರ ಮತ್ತು ವಿಜಯ ಪರಮಹಂಸರಿಗೆ ಪ್ರಣಾಮ ಮಾಡಿದನಂತರ ಅವರಿಬ್ಬರಿಗೂ

ಪ್ರಣಾಮಮಾಡುವಂತೆ ಪರಮಹಂಸರು ನಾರಾ'ಣನಿಗೂ ಮತ್ತು ಬಾಬು ರಾಮನಿಗೂ ಹೇಳಿದರು. ಮತ್ತೆ ಹೇಳಿದರು (ಕೇದಾರ ಮತ್ತು ವಿಜಯನಿಗೆ): "ಭಗವಂತನಲ್ಲಿ ಭಕ್ತಿಯುಂಟಾಗುವಂತೆ ಇವರಿಗೆ ಆಶೀರ್ವಾದ ಮಾಡಿ" ಎಂದು. ನಾರಾ'ಣನನ್ನು ತೋರಿಸಿ ಹೇಳಿದರು: "ಈತ ಅತ್ಯಂತ ಸರಳ ಜೀವಿ" ಎಂದು. ಭಕ್ತರೆಲ್ಲ ನಾರಾ'ಣ ಮತ್ತು ಬಾಬು ರಾಮನನ್ನು ದೃಷ್ಟಿಸಿ ನೋಡುತ್ತಿದ್ದಾರೆ.

ಶ್ರೀರಾಮಕೃಷ್ಣರು ಕೇದಾರಾದಿ ಭಕ್ತರಿಗೆ: "ನಿಮ್ಮನ್ನೆಲ್ಲ ರಸ್ತೆಯಲ್ಲಿಯೆ ನೋಡಿದ್ದಾಯಿತು,— ಇಲ್ಲದೆ ಇದ್ದರೆ ನೀವೆಲ್ಲ ದಕ್ಷಿಣೇಶ್ವರಕ್ಕೆ ಹೋಗಿ ಮುಖ ಒಣಗಿಸಿಕೊಂಡು ಕುಳಿತಿರಬೇಕಾಗುತ್ತಿತ್ತು. ಭಗವಂತನ ಇಚ್ಛೆಯಿಂದ ದಾರಿಯಲ್ಲಿಯೆ ನೋಡಿದ್ದಾಗಿಬಿಟ್ಟಿತು."

ಕೇದಾರ ಕೈಗಳನ್ನು ಜೋಡಿಸಿ ವಿನಯದಿಂದ: "ಭಗವಂತನ ಇಚ್ಛೆಯೆ,—ಎಲ್ಲ ತಮ್ಮ ಇಚ್ಛೆ!"

ಪರಮಹಂಸರು ನಗುತ್ತಿದ್ದಾರೆ.

ಈಗ ಕೀರ್ತನೆ ಆರಂಭವಾಗಿದೆ. ರಾಧಾ ಕೃಷ್ಣರು ಒಬ್ಬರನ್ನೊಬ್ಬರು ಸಂಧಿಸಿದ ಭಾಗ ಆರಂಭವಾದ್ದೆ ತಡ, ಪರಮಹಂಸರು ಪ್ರೇಮಾನಂದದಿಂದ ನರ್ತಿಸುತ್ತಿದ್ದಾರೆ. ತತ್‌ಕ್ಷಣವೆ ಭಕ್ತರೂ ಕೂಡ ಅವರನ್ನು ಸುತ್ತುಗಟ್ಟಿ ಅವರೊಡನೆ ಹಾಡುತ್ತ ನರ್ತಿಸುತ್ತಿದ್ದಾರೆ. ಕೀರ್ತನೆ ಮುಗಿದ ಮೇಲೆ ಎಲ್ಲರೂ ಕುಳಿತುಕೊಂಡಿದ್ದಾರೆ. ಪರಮಹಂಸರು ವೈಷ್ಣವಚರಣನನ್ನು ತೋರಿಸಿ ವಿಜಯನಿಗೆ: "ಈತ ಬಹಳ ಚೆನ್ನಾಗಿ ಹಾಡುತ್ತಾನೆ" ಎಂದು ಹೇಳಿ, 'ಶ್ರೀ ಗೌರಾಂಗ ಸುಂದರ' ಎಂಬ ಹಾಡನ್ನು ಹಾಡುವಂತೆ ವೈಷ್ಣವಚರಣನಿಗೆ ಹೇಳಿದರು.

ವೈಷ್ಣವಚರಣ ಹಾಡುತ್ತಿದ್ದಾನೆ:

ಶ್ರೀ ಗೌರಾಂಗ ಸುಂದರ ನವ ನಟವರ,
ತಪ್ತ ಕಾಂಚನ ಕಾಯಬಂಧುರ ನರವರ......

ಹಾಡುವುದು ಮುಗಿಯಿತು. ಪರಮಹಂಸರು ವಿಜಯನಿಗೆ ಕೇಳಿದರು: "ಹೇಗಿತ್ತು?" ಎಂದು.

ವಿಜಯ: "ದಿವ್ಯವಾಗಿತ್ತು!"

ಪರಮಹಂಸರು ಗೌರಾಂಗನ ಮೇಲಿನ ಒಂದು ಹಾಡನ್ನು ಹಾಡಲಾರಂಭಿಸಿದ್ದಾರೆ. ಮಾಸ್ಟರ್ ಕೂಡ ಅವರೊಡನೆ ಹಾಡುತ್ತಿದ್ದಾನೆ.

ಪರಮಹಂಸರು ಹಾಡಿ ಮುಗಿಸಿದ್ದಾರೆ— ವೈಷ್ಣವಚರಣ ಮತ್ತೆ ಹಾಡಲು ಆರಂಭಿಸಿದ್ದಾನೆ:

ಹರಿನಾಮವ ನುಡಿ, ಕೋಳಲೇ,—ನಿರಂತರ
ಹರಿನಾಮವ ನುಡಿಯೋ.

ಹರಿಯ ನಾಮವನು ನಿತ್ಯವು ನೆನೆದರೆ
ಹಿರಿಯ ಸತ್ಯದರಿವಾಗುವುದೊ.
ಬೆಟ್ಟದಂಥ ಎಡರೆಲ್ಲವು ಕರಗಿ
ನಿಮಿಷದಲ್ಲಿ ನೀರಾಗುವುದೊ.

ಆತನ ಕೃಪೆ ನಮಗೊಮ್ಮೆಗೆ ದೊರೆತರೆ
ಭವದುಃಖದ ಭಯವೆಲ್ಲಿಯದೊ ?
ಅವನ ನೆನೆವುದೇ ಪರಮ ಸಂಪದವು,
ಇದಕೂ ಮಿಗಿಲಿನ್ನೇನಿಹುದೊ ?

ಆತನ ನೆನೆಯದೆ ನನ್ನೀದಿನಗಳು
ಬರಿದೆ ಬರಿದೆ ಹಿಂದೋಡುತಿವೆ!
ತಳಗಾಣದ ಮುನ್ನೀರಿನ ಹರವೊಳು
'ನಾ ಮುಳುಗದಿರಲಿ' ಎನುವೆ!

ವೈಷ್ಣವಚರಣ ಮತ್ತೆ ಹಾಡುತ್ತಿದ್ದಾನೆ:

ಶ್ರದ್ಧೆಯ ಸರೋವರದಿ ತಾಯನಾಮದ ನೌಕೆ
ತೇಲುತಿದೆ ನೋಡು !
ಗುರುಕರುಣೆಯಲಿ ಕಲಿತ ಸಾಧನಾದಿಗಳಿಂದ
ಭವಜಲಧಿ ಕೂಲವನು ಸೇರಬಹುದು.
ಮೃತ್ಯುಂಜಯನೆ ತಾ ಹುಟ್ಟುಹಾಕುತಲಿರಲು,
ಬಿರುಗಾಳಿಯಲಿ ನೌಕೆ ಮುಳುಗಿಹೋಗುವುದೆಂಬ
ಭಯವೇಕೆ ನಿನಗೆ,
ತಾಯಪಾದವ ಮಾತ್ರ ನಂಬಿದವಗೆ ?

ತಾಯ ನಿಸ್ತಾರಕ ಶ್ರೀ ನಾಮವನು ನಿತ್ಯವೂ ನುತಿಸೊ—
ನೀನೆ ಸ್ವರ್ಗ, ನೀನೆ ಮರ್ತ್ಯ, ನೀನೆಯೆ ಪಾತಾಳ
ದ್ವಾದಶಗೋಪಾಲ ಮತ್ತೆ ಹರಿಹರಬ್ರಹ್ಮಾದಿಗಳಿಗೆ
ನಿನ್ನ ಬಸಿರೆ ಮೂಲ !

ದಶಾವತಾರಿ ನೀನೆ, ದಶಮಹಾವಿದ್ಯೆ ನೀನೆ,
ತ್ರೈಜಗವೇ ನಿನ್ನದು !
ಚಲ – ಅಚಲ, ಸ್ಥೂಲ – ಸೂಕ್ಷ್ಮ
ಸೃಷ್ಟಿ – ಸ್ಥಿತಿ – ಪ್ರಲಯ ರೂಪಿ,
ಕಾರ್ಯ್ಯ ಭಾರ ನಿನ್ನದು !
ನಿನಗೆ ನೀನೆ ಶಕ್ತಿಯಾದ, ಸರ್ವಶಕ್ತಿಧಾರಿಣೀ
ಪಾರುಗಾಣಿಸೆನ್ನನು.

ಪರಮಹಂಸರು ಗಾಯಕನೊಡನೆ ಮತ್ತೆ ಮತ್ತೆ ಈ ಕೆಳಗಿನ ಚರಣವನ್ನು ಹಾಡುತ್ತಿದ್ದಾರೆ :

ಚಲ – ಅಚಲ, ಸ್ಥೂಲ – ಸೂಕ್ಷ್ಮ
ಸೃಷ್ಟಿ – ಸ್ಥಿತಿ – ಪ್ರಲಯ ರೂಪಿ,
ಕಾರ್ಯ್ಯ ಭಾರ ನಿನ್ನದು !
ನಿನಗೆ ನೀನೆ ಶಕ್ತಿಯಾದ, ಸರ್ವಶಕ್ತಿಧಾರಿಣೀ
ಪಾರುಗಾಣಿಸೆನ್ನನು.

ಕೀರ್ತನೆಯ ಮಂಡಲಿ ಮತ್ತೆ ಹಾಡಲು ಆರಂಭಿಸಿದೆ :

ವಾಯು ಅಂಧಕಾರ ಆದಿ ಶೂನ್ಯ ಆಕಾಶ
ರೂಪ ದಿಕ್ ದಿಗಂತರ ನಿನ್ನಿಂದಲೆ ಪ್ರಕಾಶ.
ಬ್ರಹ್ಮ ವಿಷ್ಣು ಆದಿ ಅಮರ ವೃಂದ
ನಿನ್ನ ಶಕ್ತಿಪ್ರಕಾಶ ತರಂಗ ಛಂದ.

ಇಡೆ ಪಿಂಗಳೆ ಸುಷುಮ್ನೆ ವಜ್ರೆ ಚಿತ್ರೆ ಎಲ್ಲ
ಕ್ರಮಕ್ರಮದಿ ಎಚ್ಚೆತ್ತಿವೆ ಸಹಸ್ರಯಿಂದ.
ಚಿತ್ರಾಣಿಯ ಮಧ್ಯೆ ಮೇಲೆ ಇಹವು ಪದ್ಮ ಪಂಕ್ತಿ ಪಂಕ್ತಿ
ಶುಕ್ಲವರ್ಣ ಸ್ವರ್ಣವರ್ಣ ವಿದ್ಯುತಾದಿಯಾಗಿ.

ಪದ್ಮವೆರಡು ಅರಳಿವೆ, ಪದ್ಮವೊಂದು ಮುಚ್ಚಿದೆ
ಅಧೋಮುಖದಿ ಊರ್ಧ್ವಮುಖದಿ ಪದ್ಮವೆರಡು ಇಹವು ಜೋಡಿ;
ವಿಹರಿಸುತಿಹೆ ನೀನಲ್ಲಿ ಹಂಸರೂಪದಿ
ಆಧಾರದಿ ತಾಯಿ ನೀನೆ ಕುಲಕುಂಡಲಿನೀ.

ಅದಕೆ ಮೇಲೆ ನಾಭಿಸ್ಥಲದಿ ಮಣಿಪುರದಾ ನಾಮದಿಂದೆ
ದಶದಲದಾ ರಕ್ತವರ್ಣ ಪದ್ಮವಿಹದು ಅಲ್ಲಿ ಒಂದೆ.

ನಿನ್ನ ಶಕ್ತಿ–ಅನಲ ಇಹುದು ಆ ಪದ್ಮದಲ್ಲಿ
ಅನಲ ಅದು ನಿವೃತ್ತಿಯಾಗೆ ಎಲ್ಲ ಶೂನ್ಯದಲ್ಲಿ.

ಹೃದಿ ಪದ್ಮದಿ ಆಕಾಶದ ಮಾನಸ ಸರೋವರದಲಿ
ತೇಲುತಿದೆ ಅನಾಹತ ಪದ್ಮ ಅದರ ಮೇಗಡೆ;
ಸುವರ್ಣವರ್ಣ ದ್ವಾದಶದಲ ಅಲ್ಲಿ ಶಿವತ್ರಾಣ,
ಆ ಪದ್ಮದಿ ನಿನ್ನ ಶಕ್ತಿ ಜೀವ ಮೇಣ್ ಪ್ರಾಣ.

ಅದಕೆ ಮೇಲೆ ಕಂಠದಲ್ಲಿ ಧೂಮ್ರವರ್ಣ ಪದ್ಮ
ಷೋಡಶದಲ ಅದರ ಹೆಸರು ವಿಶುದ್ಧಾಖ್ಯ ಪದ್ಮ.
ಆ ಪದ್ಮದಿ ನಿನ್ನ ಶಕ್ತಿ ತಾನಾಗಿದೆ ಆಕಾಶ
ರುದ್ಧವಾಗಲಾ ಆಕಾಶ ಸಕಲವಹುದು ಆಕಾಶ.

ಅದಕೆ ಮೇಲೆ ಶಿರದ ಮಧ್ಯೆ ಪದ್ಮವಿಹುದು ಸಹಸ್ರದಲ
ಗುರುದೇವನ ಸ್ಥಾನವೆ ಅದು ಅತಿ ಗುಹ್ಯಸ್ಥಲ.
ಆ ಪದ್ಮದಿ ಬಿಂಬರೂಪದಿ ವಿರಾಜಿಸಿಹನು ಪರಮ ಪಿನಾಕಿ
ಶುಕ್ಲವರ್ಣ ಸಹಸ್ರದಲ ಪಂಕಜದಲಿ ಒಬ್ಬನೆ ಏಕಾಕಿ.

ಅಲ್ಲೆ ಇಹುದು ಬ್ರಹ್ಮರಂಧ್ರ ಎಲ್ಲಿಯೊ ಶಿವನ ಬಿಂಬರೂಪ,
ಅಲ್ಲಿಗೇರಿ ಹೋಗೆ ನೀನು ಶಿವ ತಾಳುವ ಸ್ವೀಯರೂಪ;
ಆಗಳೆ ನೀ ಶಿವಸಂಗದ ಕ್ರೀಡೆಯಲ್ಲಿ ವಿಹರಿಪೆ,
ಕ್ರೀಡೆ ಮುಗಿಯೆ ಶಿವನು ಮತ್ತೆ ತಿರುಗುವನಾ ಬಿಂಬರೂಪಕೆ.

ಕೇದಾರ ಮತ್ತು ಕೆಲವು ಭಕ್ತರು ಮೇಲಕ್ಕೆದ್ದರು—ಮನೆಗೆ ಹೋಗುತ್ತಾರೆ. ಕೇದಾರ ಪರಮಹಂಸರಿಗೆ ಪ್ರಣಾಮ ಮಾಡಿದ ಮತ್ತು ಕೇಳಿದ: “ಹೋಗಿ ಬರಲೆ?” ಎಂದು.

ಪರಮಹಂಸರು: “ನೀನು ಅಧರನಿಗೆ ತಿಳಿಸದೆ ಹೋಗುತ್ತೀಯ? ಅದು ಅಸಭ್ಯತೆಯನ್ನು ತೋರಿಸುವುದಿಲ್ಲವೆ?”

ಕೇದಾರ: “‘ತಸ್ಮಿನ್ ತುಷ್ಟೆ ಜಗತ್ ತುಷ್ಟಮ್;’ ನಿವೂ ಇಲ್ಲಿಗೆ ಬಂದದ್ದರಿಂದ ನಾವೂ ಬಂದೆವು—ನನಗೆ ಸ್ವಲ್ಪ ದೇಹ ಸೌಖ್ಯವಿಲ್ಲ—ಮಕ್ಕಳ ಮದುವೆ ಮುಂಜಿಗಾಗಿ ಸ್ವಲ್ಪ ಭಯ—ಸಮಾಜಕ್ಕೆ ಹೆದರಬೇಕಾಗಿದೆ—ನನಗಾಗಲೆ ಒಂದು ಸಲ ಏಟು ಬಿದ್ದಿದೆ—”

ವಿಜಯ: "ಇವರನ್ನು ಇಲ್ಲಿಯೆ ಬಿಟ್ಟು ಹೋಗೋದು"?

ಆ ಸಮಯಕ್ಕೆ ಸರಿಯಾಗಿ ಅಧರಸೇನ ಪರಮಹಂಸರನ್ನು ಒಳಕ್ಕೆ ಕರೆದುಕೊಂಡು ಹೋಗಲು ಬಂದ. ಒಳಗೆ ಎಲೆ ಹಾಕಿದೆ. ಪರಮಹಂಸರು ಮೇಲಕ್ಕೆ ಎದ್ದರು. ಕೇದಾರ ಮತ್ತು ವಿಜಯನನ್ನು ಸಂಬೋಧಿಸಿ ಹೇಳಿದರು: "ಬನ್ನಿ, ನನ್ನೊಡನೆ ಬನ್ನಿ" ಎಂದು. ವಿಜಯ ಕೇದಾರ ಮತ್ತು ಉಳಿದ ಭಕ್ತರು ಪರಮಹಂಸರೊಡನೆ ಕುಳಿತು ಪ್ರಸಾದ ಸ್ವೀಕರಿಸಿದರು.

ಶ್ರೀರಾಮಕೃಷ್ಣರು ಪ್ರಸಾದ ಸ್ವೀಕರಿಸಿದನಂತರ ಮತ್ತೆ ಬೈಠಕ್ ಖಾನೆಯಲ್ಲಿ ಕುಳಿತುಕೊಂಡಿದ್ದಾರೆ. ವಿಜಯ, ಕೇದಾರ ಮತ್ತು ಉಳಿದ ಭಕ್ತರು ಅವರ ಸುತ್ತಲೂ ಕುಳಿತುಕೊಂಡಿದ್ದಾರೆ. ಕೇದಾರ ಕೈಮುಗಿದುಕೊಂಡು ಬಹಳ ನಮ್ರತೆಯಿಂದ ಪರಮಹಂಸರಿಗೆ ನಿವೇದಿಸಿಕೊಳ್ಳುತ್ತಿದ್ದಾನೆ: "ಇಲ್ಲಿ ಊಟ ಮಾಡಲು ಅನುಮಾನಪಡುತ್ತಿದ್ದುದಕ್ಕಾಗಿ ನನ್ನನ್ನು ಕ್ಷಮಿಸಿ" ಎಂದು. ಪರಮಹಂಸರೆ ಅಲ್ಲಿ ಊಟಮಾಡಲು ಸಿದ್ಧರಾಗಿರುವಾಗ ತಾನು ಎತ್ತಲ ಕಂತೆ ಎಂದು ಕೇದಾರ ಬಹುಶಃ ಭಾವಿಸಿರಬೇಕು.

ಕೇದಾರ ಹುದ್ದೆಯಲ್ಲಿದ್ದುದು ಢಾಕಾದಲ್ಲಿ. ಆತನಿಗೆ ಅಲ್ಲಿ ಅನೇಕ ಭಕ್ತರಿದ್ದಾರೆ. ಅವರು ಸಂದೇಶವೆ ಮೊದಲಾದ ವಿವಿಧ ಭಕ್ಷ್ಯ ಭೋಜ್ಯಗಳನ್ನು ಆತನಿಗೆಂದು ತರುವ ಪಾಡಿಕೆ. ಕೇದಾರ ಆ ವಿಷಯಗಳನ್ನೆಲ್ಲ ಕುರಿತು ಪರಮಹಂಸರಿಗೆ ನಿವೇದನೆ ಮಾಡಿಕೊಳ್ಳುತ್ತಿದ್ದಾನೆ.

ಕೇದಾರ ವಿನಯದಿಂದ: "ಜನರು ಬಹಳವಾಗಿ ತಿಂಡಿ ತೀರ್ಥಗಳನ್ನು ತಾವಾಗಿಯೆ ತರುವರು. ಪ್ರಭು, ಏನುಮಾಡಲಿ ನಾನು? ಅಪ್ಪಣೆ ಕೊಡಿಸಿ."

ಶ್ರೀರಾಮಕೃಷ್ಣರು: "ಭಕ್ತನಾಗಿದ್ದರೆ ಆತ ಚಂಡಾಲನಾಗಿದ್ದರೂ ಆತನ ಕೈಯಿಂದ ಅನ್ನ ತಿನ್ನಬಹುದು. ಏಳು ವರ್ಷಗಳಕಾಲ ಉನ್ಮಾದದವಸ್ಥೆಯಲ್ಲಿ ಇದ್ದ'ನಂತರ ಆ ದೇಶಕ್ಕೆ (ಕಾಮಾರಪುಕುರಕ್ಕೆ) ಹೋದೆ. ಆಗಿನದು ಎಂಥ ಅವಸ್ಥೆ! ಆಗ ಸೂಳೆ ಕೂಡ ತನ್ನ ಕೈಯಿಂದಲೆ ತಿನ್ನಿಸಿಬಿಟ್ಟಳು! ಆದರೆ ಈಗ ನನ್ನ ಕೈಯಲ್ಲಿ ಆಗೋದಿಲ್ಲ."

ಕೇದಾರ ಇನ್ನೇನು ಪರಮಹಂಸರಿಂದ ಬೀಳ್ಕೊಂಡು ಹೊರಡುವುದರಲ್ಲಿದ್ದ. ಕೇದಾರ ಮೆತ್ತಗೆ: "ಪ್ರಭು, ನನ್ನಲ್ಲಿ ತಾವು ಸ್ವಲ್ಪ ಶಕ್ತಿಸಂಚಾರ ಮಾಡಿ. ಅಲ್ಲಿಗೆ ಅನೇಕರು ಬರುತ್ತಾರೆ. ನನಗೆ ಏನುತಾನೆ ಗೊತ್ತು?"

ಪರಮಹಂಸರು: “ಎಲ್ಲಾ ದೊರಕಿಬಿಡುತ್ತದೆ. ಮನಸ್ಸು ಹೃತ್ಪೂರ್ವಕವಾಗಿ ಭಗವಂತನ ಕಡೆಗೆ ಹರಿಯುತ್ತಿದ್ದರೆ ಎಲ್ಲ ದೊರೆತು ಬಿಡುತ್ತದೆ.”

ವಂಗವಾಸಿ ಪತ್ರಿಕೆಯ ಸಂಪಾದಕ ಯೋಗೇಂದ್ರ ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮ ಮಾಡಿ ಒಂದು ಕಡೆ ಕುಳಿತುಕೊಂಡ. ಆತ ನೊಡನೆ ಸಾಕಾರ ನಿರಾಕಾರದ ಸಂಬಂಧವಾಗಿ ಮಾತುಕತೆ ಆರಂಭ ವಾಯಿತು.

ಪರಮಹಂಸರು: “ಆತ ಸಾಕಾರ, ನಿರಾಕಾರ ಮತ್ತು ಇನ್ನು ಏನೋನೊ, ಅದು ನಮಗೆ ಗೊತ್ತಾಗುವುದಲ್ಲ. ಸುಮ್ಮನೆ ನಿರಾಕಾರ ಎಂದು ಹೇಳಿಬಿಟ್ಟರೆ ಎಂತಾದೀತು ?”

ಯೋಗೇಂದ್ರ: “ಇದು ಬ್ರಾಹ್ಮಸಮಾಜದ ಒಂದು ವೈಶಿಷ್ಟ್ಯ. ಅಲ್ಲಿನ ಒಂದು ಹನ್ನೆರಡು ವಯಸ್ಸಿನ ಬಾಲಕನಿಗೂ ನಿರಾಕಾರವೇ ಆದರ್ಶ! ಆದಿ ಸಮಾಜದವರು ಸಾಕಾರವನ್ನು ಅಷ್ಟೊಂದು ನಿಕೃಷ್ಟ ದೃಷ್ಟಿಯಿಂದ ನೋಡುವುದಿಲ್ಲ. ಸದ್ಗೃಹಸ್ಥರ ಮನೆಗಳಲ್ಲಿ ನಡೆಯುವ ಪೂಜೆ ಪುರಸ್ಕಾರ ಗಳಿಗೆ ಹೋಗಲು ಅವರಿಗೆ ಅನುಮತಿ ಇದೆ.”

ಪರಮಹಂಸರು ನಗುತ್ತ: “ಈತ ಚೆನ್ನಾಗಿ ವರ್ಣಿಸುತ್ತಾನೆ, ಬಾಲಕನಿಗೂ ನಿರಾಕಾರದ ಆದರ್ಶ ಎಂದು!”

ಅಧರಸೇನ: “ಶಿವನಾಥಬಾಬು ಸಾಕಾರವನ್ನು ಒಪ್ಪುವುದಿಲ್ಲ.”

ವಿಜಯ: “ಆತ ಸರಿಯಾಗಿ ತಿಳಿದುಕೊಳ್ಳದೆ ಇರುವುದರಿಂದ. (ಪರಮಹಂಸರನ್ನು ತೋರಿಸಿ) ಇವರು ಹೇಳುತ್ತಾರಲ್ಲ, ‘ಗೋಸುಂಬೆಗೆ ಒಮ್ಮೊಮ್ಮೆ ಈ ಬಣ್ಣ, ಒಮ್ಮೊಮ್ಮೆ ಆ ಬಣ್ಣ. ಆದರೆ ಆ ಮರದಕೆಳಗೆ ವಾಸಿಸುವವನಿಗೆ ಅದರ ನಿಜಸ್ವರೂಪ ಚೆನ್ನಾಗಿ ಗೊತ್ತಿದೆ’ ಎಂದು.

“ನಾನು ಧ್ಯಾನ ಮಾಡುತ್ತ ಮಾಡುತ್ತ ಒಮ್ಮೆ ಪರದೆಯಮೇಲಿನ ಚಿತ್ರಗಳಂಥ ಒಂದು ದೃಶ್ಯವನ್ನು ಕಂಡೆ. ಅದರಲ್ಲಿ ಎಷ್ಟೊಂದು ದೇವತೆ ಗಳು! ಮತ್ತು ಅವರು ಏನೇನು ಮಾತನಾಡಿದರು ಅಂತ! ನನ್ನ ಮನಸ್ಸಿ ನಲ್ಲೆ ನಾನು: ‘ಪರಮಹಂಸರ ಹತ್ತಿರ ಹೋಗಿ ತಿಳಿಸುವೆ. ಆಗ ಸತ್ಯ ಗೊತ್ತಾಗುತ್ತದೆ’ ಎಂದು.”

ಪರಮಹಂಸರು: “ನೀನು ನೋಡಿದ್ದು ಯಾಥಾರ್ಥ.”

ಕೇದಾರ: “ಭಕ್ತರಿಗಾಗಿ ಸಾಕಾರ. ಭಕ್ತ ಪ್ರೇಮದದೆಸೆಯಿಂದ

ಸಾಕಾರ ನೋಡುತ್ತಾನೆ. ಧ್ರುವ ಭಗವಂತನ ದರ್ಶನ ಮಾಡಿದಾಗ ಕೇಳಿದ: 'ನಿನ್ನ ಕರ್ಣಕುಂಡಲವೇಕೆ ತೂಗಾಡವು!' ಎಂದು. ಭಗವಂತ ಉತ್ತರವಿತ್ತ: 'ನೀನು ತೂಗಾಡಿಸಿದರೆ ಅವು ತೂಗಾಡುತ್ತವೆ' ಎಂದು."

ಪರಮಹಂಸರು: "ಎಲ್ಲವನ್ನು ಒಪ್ಪಬೇಕು—ನಿರಾಕಾರ ಸಾಕಾರ ಎಲ್ಲವನ್ನು ಒಪ್ಪಬೇಕು. ಕಾಳೀದೇವಾಲಯದಲ್ಲಿ ಕುಳಿತು ಧ್ಯಾನ ಮಾಡುತ್ತ ಧ್ಯಾನಮಾಡುತ್ತ ಇದ್ದಹಾಗೆ ನನ್ನ ಮನಸ್ಸಿನಲ್ಲಿ ಒಮ್ಮೆ ಸೂಳೆ ರಮಣಿಯ ರೂಪು ಎದ್ದಿತು. ಆಗ ಹೇಳಿದೆ: 'ಹೇ ತಾಯೆ, ನೀನೆ ಈ ರೂಪಿನಲ್ಲಿ ಇದ್ದೀಯೆ' ಎಂದು. ಅದಕ್ಕಾಗಿಯೆ ನಾನು ಹೇಳುವುದು ಎಲ್ಲವನ್ನು ಒಪ್ಪಬೇಕು ಎಂದು. ಆತ ಯಾವ ರೂಪದಿಂದ ನಮಗೆ ಕಾಣಿಸಿಕೊಳ್ಳುವನು, ಯಾವ ರೂಪದಿಂದ ನಮ್ಮ ಹತ್ತಿರ ಬರುವನು ಎಂಬುದನ್ನ ಹೇಳಲಾಗುವುದಿಲ್ಲ."

ಪರಮಹಂಸರು ಹಾಡುತ್ತಿದ್ದಾರೆ:

ನಿರಂತರವು ಹಿರಿಯೊಲವಿನೊಳದ್ದಿದ
ಫಕೀರನೊಬ್ಬನು ಬಂದಿಹನು......

ವಿಜಯ: "ಆತನಿಗೆ ಅನಂತಶಕ್ತಿ,—ಇಚ್ಛೆ ಬಂದರೆ ಬೇರೆ ರೂಪಿನಲ್ಲಿ ಕಾಣಿಸಿಕೊಳ್ಳಲಾರನೆ? ಏನಾಶ್ಚರ್ಯ ಇದು! ಮಾನವ ಒಂದು ರೇಣುವಿನ ರೇಣು ಮಾತ್ರ. ಈತ ಭಗವಂತನ ಸ್ವರೂಪವನ್ನು ನಿರ್ಧರಿಸಲು ಹೋಗುವುದು!"

ಪರಮಹಂಸರು: "ಒಂದಷ್ಟು ಗೀತ, ಒಂದಷ್ಟು ಭಾಗವತ, ಒಂದಷ್ಟು ವೇದಾಂತ ಓದಿ ಜನರು ಭಾವಿಸುತ್ತಾರೆ: 'ನಾವು ಎಲ್ಲವನ್ನು ಅರಿದು ಕುಡಿದುಬಿಟ್ಟಿದ್ದೇವೆ!' ಎಂದು. ಸಕ್ಕರೆ ಗುಡ್ಡಕ್ಕೆ ಒಂದು ಇರುವೆ ಹೋಯಿತು. ಒಂದು ಕಣ ಸಕ್ಕರೆ ತಿನ್ನುವುದರಲ್ಲಿಯೆ ಅದರ ಹೊಟ್ಟೆ ತುಂಬಿಹೋಯಿತು. ಇನ್ನೊಂದು ಕಣ ಸಕ್ಕರೆಯನ್ನ ಬಾಯಲ್ಲಿ ಕಚ್ಚಿಕೊಂಡು ತನ್ನ ಗೂಡಿಗೆ ಹಿಂದಿರುಗುತ್ತಿತ್ತು. ಹಿಂದಿರುಗುವಾಗ ಅದು ಯೋಚಿಸಿತು: 'ಮುಂದಿನ ಸಲ ಬಂದು ಆ ಗುಡ್ಡವನ್ನೇ ಗೂಡಿಗೆ ಸಾಗಿಸಿಬಿಡುತ್ತೇನೆ!' ಎಂದು." (ಎಲ್ಲರೂ ನಗುತ್ತಿದ್ದಾರೆ.)

## ೩೦

# ವಿವಿಧ ಭಾವಗಳಲ್ಲಿ ಶ್ರೀ ರಾಮಕೃಷ್ಣರು

**೨ನೆ ಅಕ್ಟೋಬರ್ ೧೮೮೪, ಆಶ್ವೀಜ ಶುಕ್ಲ ದ್ವಾದಶಿ–ತ್ರಯೋದಶಿ, ಗುರುವಾರ.**

ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯಲ್ಲಿ ಕುಳಿತು ಕೊಂಡಿದ್ದಾರೆ. ಲಾಟು, ರಾಮಲಾಲ, ಹರೀಶ, ಹಾಜರಾ ಇವರೆಲ್ಲ ಪರಮಹಂಸರೊಡನೆಯೆ ಇದ್ದಾರೆ. ಬಾಬುರಾಮ ಆಗಾಗ ಬಂದು ಒಂದೆರಡು ದಿವಸ ಇದ್ದು ಹೋಗುತ್ತಿದ್ದಾನೆ.

ಮಣಿಲಾಲ ಮಲ್ಲಿಕ, ಪ್ರಿಯ ಮುಖರ್ಜಿ ಮತ್ತು ಆತನ ಸಂಬಂಧಿ ಹರಿ, ಶಿವಪುರದ ಒಬ್ಬ ಬ್ರಾಹ್ಮಭಕ್ತ (ಗಡ್ಡವಿದೆ), ಕಲ್ಕತ್ತ್ರದಿಂದ ಬಂದ ಅನೇಕ ಮಾರ್ವಾಡಿ ಭಕ್ತರು ಇವರೆಲ್ಲ ಪರಮಹಂಸರ ಕೊಠಡಿಯಲ್ಲಿ ಕುಳಿತುಕೊಂಡಿದ್ದಾರೆ. ಕ್ರಮೇಣ ಕೆಲವು ಮಂದಿ ದಕ್ಷಿಣೇಶ್ವರದ ಯುವಕರು, ಸಿಂಥಿಯ ಕವಿರಾಜ ಮಹೇಂದ್ರ ಮತ್ತು ಇನ್ನೂ ಕೆಲವರು ಬಂದು ಕುಳಿತುಕೊಂಡಿದ್ದಾರೆ. ಮಣಿಲಾಲ ಹಳೆಯ ಬ್ರಾಹ್ಮಭಕ್ತ.

ಶ್ರೀರಾಮಕೃಷ್ಣರು ಮಣಿಲಾಲ ಮೊದಲಾದವರಿಗೆ: "ನಮಸ್ಕಾರವನ್ನು ಮನಸ್ಸಿನಿಂದ ಮಾಡೋದೆ ಮೇಲು. ಪಾದಮುಟ್ಟಿ ನಮಸ್ಕಾರ ಮಾಡುವುದರ ಆವಶ್ಯಕತೆಯೇನಿದೆ? ಮಾನಸಿಕ ನಮಸ್ಕಾರ ಮಾಡಿದರೆ ಯಾರೂ ಸಂಕೋಚ ಪಡಬೇಕಾಗೊದಿಲ್ಲ.

"ನನ್ನ ಧರ್ಮವೆ ಸರಿ, ಉಳಿದವರದೆಲ್ಲ ತಪ್ಪು, ಈ ಭಾವ ಒಳ್ಳೆಯದಲ್ಲ. ನಾನು ನೋಡುತ್ತಿದ್ದೇನೆ ಆತನೆ ಈ ಎಲ್ಲಾ ಆಗಿರುವುದನ್ನ— ಮನುಷ್ಯ, ಪ್ರತಿಮೆ, ಸಾಲಗ್ರಾಮ. ಎಲ್ಲದರ ಅಂತರ್ಯದಲ್ಲಿಯೂ ಆತನೊಬ್ಬನನ್ನೆ ನೋಡುತ್ತಿದ್ದೇನೆ; ಆತನೊಬ್ಬನನ್ನು ವಿನಾ ಎರಡನೆಯದನ್ನು ಕಾಣುತ್ತಿಲ್ಲ.

"ಅನೇಕರ ಭಾವನೆ ತಮ್ಮ ಮತವೆ ಸರಿ ಉಳಿದವರದೆಲ್ಲ ತಪ್ಪು,— ಗೆದ್ದಿರತಕ್ಕವರು ತಾವು ಮಾತ್ರವೆ, ಉಳಿದವರೆಲ್ಲ ಸೋತಿದ್ದಾರೆ ಎಂದು. ಆದರೆ ಯಾರು ಮುಂದುವರಿದು ಬಂದನೊ ಆತ ಒಂದು ಚಿಕ್ಕ ಅಡಚಣೆಯಿಂದ ನಿಂತುಕೊಂಡು ಬಿಡಬಹುದು. ಆಗ, ಹಿಂದಕ್ಕೆ ಯಾರು

ಬಿದ್ದಿದ್ದನೊ ಆತ ಮುಂದುವರಿದು ಬಿಡಬಹುದು. ಗೋಲೋಕ ಧಾಮದ ಆಟದಲ್ಲಿ ಬಹುವಾಗಿ ಮುಂದುವರಿದೂ ಕಾಯಿ ಗುರಿಯನ್ನು ಮುಟ್ಟದೆ ಉಳಿಯಬಹುದು.

"ಸೋಲು ಗೆಲುವು ಆತನ ಕೈಯಲ್ಲಿ. ಆತನ ಕಾರ್ಯ ಸ್ವಲ್ಪವೂ ಅರಿಯಲಾಗುವುದಲ್ಲ. ನೋಡಿ, ಎಳನೀರು ಎಷ್ಟು ಎತ್ತರದಲ್ಲಿ ಜೋಲಾಡುತ್ತದೆ, ಅದರ ಮೇಲೆ ಎಷ್ಟು ವಿಪರೀತ ಬಿಸಿಲು ಬೀಳುತ್ತದೆ! ಆದರೂ ಅದು ತಂಪುಕಾರಿ! ಅದಕ್ಕೆ ವ್ಯತಿರಿಕ್ತವಾಗಿ 'ಪಾನೀಫಲ' ನೀರಿನಲ್ಲೇ ಇರುತ್ತದೆ, ಆದರೂ ಉಷ್ಣಕಾರಿ!

"ಮನುಷ್ಯನ ಶರೀರದ ಕಡೆ ನೋಡಿ. ತಲೆಯೇ ಮೂಲ, ಆದರೆ ಅದು ಮೇಲೆ ಹೋಗಿ ಕುಳಿತುಬಿಟ್ಟಿದೆ!"

ಮಣಿಲಾಲ: "ನಮ್ಮ ಸದ್ಯದ ಕರ್ತವ್ಯ?"

ಶ್ರೀರಾಮಕೃಷ್ಣರು: "ಹೇಗೊ ಮಾಡಿ ಆತನೊಡನೆ ಐಕ್ಯವಾಗಿ ಇರುವುದು. ಎರಡು ಮಾರ್ಗಗಳಿವೆ — ಕರ್ಮಯೋಗ ಮತ್ತು ಮನೋಯೋಗ. ಯಾರು ಗೃಹಸ್ಥರೊ ಅವರು ಆತನೊಡನೆ ಐಕ್ಯವಾಗುವುದು ಕರ್ಮದ ಮೂಲಕ. ಬ್ರಹ್ಮಚರ್ಯ, ಗಾರಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ. ಸಂನ್ಯಾಸಿಗಳು ಕಾಮ್ಯಕರ್ಮ ತ್ಯಜಿಸಬೇಕು, ಆದರೆ ನಿತ್ಯಕರ್ಮಗಳನ್ನು ಕಾಮನಾಶೂನ್ಯರಾಗಿ ಮಾಡಬೇಕು. ದಂಡಧಾರಣೆ, ಭೈಕ್ಷಚರ್ಯೆ, ತೀರ್ಥಯಾತ್ರೆ, ಪೂಜೆ, ಜಪ ಇವೇ ಮೊದಲಾದ ಕರ್ಮಗಳ ಮೂಲಕ ಇವರಿಗೆ ಆತನೊಡನೆ ಐಕ್ಯತೆ.

"ಮಾಡೊ ಕೆಲಸ ಯಾವುದಾದರೂ ಸರಿಯೆ, ಫಲಾಕಾಂಕ್ಷೆ ತ್ಯಜಿಸಿ ಕಾಮನಾಶೂನ್ಯರಾಗಿ ಮಾಡಿದಿರೆಂದರೆ ಆತನೊಡನೆ ಐಕ್ಯತೆ ದೊರೆಯುತ್ತದೆ.

"ಮನೋಯೋಗ ಬೇರೆ ಮಾರ್ಗ. ಈ ಯೋಗಿಗಳಿಗೆ ಬಾಹ್ಯಕ ಚಿಹ್ನೆ ಯಾವುದೂ ಇಲ್ಲ. ಅಂತರ್ಯದಲ್ಲಿಯೆ ಐಕ್ಯವಾಗುವಿಕೆ. ಉದಾಹರಣೆಗೆ ಜಡಭರತ, ಶುಕದೇವ. ಇಂಥವರು ಇನ್ನೂ ಎಷ್ಟೊಂದೊ —

1. ಇದು ಒಂದು ವಿಧದ ಪಗಡೆ ಆಟ. ಕಾಯಿ ವಿವಿಧ ಭೂಮಿಕೆಗಳ (ಮನೆಗಳ) ಮೂಲಕ ಹಾದು ವೈಕುಂಠವನ್ನು ಮುಟ್ಟಬೇಕು. ತಪ್ಪಾಗಿ ನಡೆಸಿದಾಗಲೆಲ್ಲ ಕಾಯಿ ಒಂದೊಂದು ನಿರ್ದಿಷ್ಟ ನರಕಕ್ಕೆ ಬೀಳುತ್ತದೆ.

ಇವರಿಬ್ಬರು ಪ್ರಸಿದ್ಧ ಪುರುಷರು. ಇವರ ಶರೀರದ ಮೇಲಿನ ಗಡ್ಡ ಮೀಸೆ ಕೂದಲು ಹುಟ್ಟಿದಂತೆಯೆ ಬೆಳೆದಿರುತ್ತವೆ.

"ಪರಮಹಂಸ ಅವಸ್ಥೆಯಲ್ಲಿ ಕರ್ಮ ಬಿಟ್ಟು ತೊಲಗುತ್ತದೆ. ಸ್ಮರಣ ಮನನ ಉಳಿದುಕೊಂಡಿರುತ್ತದೆ. ಮನಸ್ಸು ಸರ್ವದಾ ಆತನಲ್ಲಿ ಐಕ್ಯವಾಗಿರುತ್ತದೆ. ಕರ್ಮ ಮಾಡುತ್ತಿದ್ದರೆ, ಅದು ಲೋಕ ಶಿಕ್ಷಣಾರ್ಥ ವಾಗಿ ಮಾತ್ರ.

"ಕರ್ಮದ ಮೂಲಕ ಐಕ್ಯತೆ ದೊರೆಯಲಿ, ಮನಸ್ಸಿನ ಮೂಲಕ ಐಕ್ಯತೆ ದೊರೆಯಲಿ, ಭಕ್ತಿಯೊಂದಿದ್ದರೆ ಎಲ್ಲವನ್ನೂ ತಿಳಿಯಬಹುದು. ಭಕ್ತಿಯಿಂದ ಕುಂಭಕ ತಾನಾಗಿಯೆ ಉಂಟಾಗುತ್ತದೆ—ಮನಸ್ಸು ಏಕಾಗ್ರ ವಾದೊಡನೆಯೆ ಉಸಿರು ಸ್ಥಿರವಾಗಿಬಿಡುತ್ತದೆ; ಅದೇರೀತಿ ಉಸಿರು ಸ್ಥಿರ ವಾಯಿತೆಂದರೆ ಮನಸ್ಸು ಏಕಾಗ್ರವಾಗಿಬಿಡುತ್ತದೆ, ಬುದ್ಧಿಯೂ ಸ್ಥಿರವಾಗಿ ಬಿಡುತ್ತದೆ. ಯಾರಿಗೆ ಈ ಸ್ಥಿತಿ ಉಂಟಾಗಿದೆಯೊ, ಅದು ಉಂಟಾಗಿ ರೋದು ಅವರಿಗೆ ಗೊತ್ತೇ ಆಗದು.

"ಭಕ್ತಿಯೋಗದಿಂದ ಎಲ್ಲವನ್ನೂ ಪಡೆಯಬಹುದು. ನಾನು ಭಗ ವತಿಯ ಬಳಿ ಅತ್ತು ಅತ್ತು ಪ್ರಾರ್ಥನೆಮಾಡುತ್ತಿದ್ದೆ, 'ಹೆ ತಾಯೆ! ಯೋಗಿಗಳು ಯೋಗಾಭ್ಯಾಸ ಮಾಡಿ ಏನನ್ನು ತಿಳಿದುಕೊಂಡಿದಾರೊ, ಜ್ಞಾನಿಗಳು ವಿಚಾರ ಮಾಡಿ ಏನನ್ನು ತಿಳಿದುಕೊಂಡಿದಾರೊ—ಅವನ್ನು ನನಗೆ ತಿಳಿಸಿಕೊಡು — ಅವನ್ನ ನನಗೆ ಸಾಕ್ಷಾತ್ಕಾರಮಾಡಿಕೊಡು' ಎಂದು. ಭಗವತಿ ನನಗೆ ಎಲ್ಲವನ್ನೂ ತೋರಿಸಿದ್ದಾಳೆ. ವ್ಯಾಕುಲರಾಗಿ ಆಕೆಯ ಬಳಿ ಅತ್ತರೆ ಆಕೆ ಎಲ್ಲವನ್ನು ತಿಳಿಸಿಕೊಡುತ್ತಾಳೆ. ವೇದ, ವೇದಾಂತ, ಪುರಾಣ, ತಂತ್ರ ಈ ಶಾಸ್ತ್ರಗಳಲ್ಲೆಲ್ಲ ಏನೇನು ಇದೆಯೊ ಅವೆಲ್ಲವನ್ನು ಆಕೆ ನನಗೆ ತಿಳಿಸಿಕೊಟ್ಟಿದ್ದಾಳೆ."

ಮಣಿಲಾಲ: "ಹಠಯೋಗ?"

ಪರಮಹಂಸರು: "ಹಠಯೋಗಿಗಳು ದೇಹಾಭಿಮಾನಿ ಸಾಧುಗಳು. ಕೇವಲ ನೇತಿ ಧೌತಿಯಲ್ಲಿಯೆ ನಿರತರಾಗಿರುತ್ತಾರೆ. ಶರೀರ ಚಿಂತನೆಯೆ ಅವರ ಏಕ ಮಾತ್ರ ಚಿಂತನೆ. ಅವರ ಗುರಿ ಆಯುಸ್ಸನ್ನು ವೃದ್ಧಿಮಾಡಿ ಕೊಳ್ಳುವುದು. ಹಗಲು ಇರುಳು ದೇಹದ ಸೇವೆಯಲ್ಲಿಯೆ ಮಗ್ನರಾಗಿರು ತ್ತಾರೆ. ಅದು ಒಳ್ಳೆಯದಲ್ಲ.

"ನೀವೇನು ಮಾಡಬೇಕು ಗೊತ್ತೆ? ನೀವು ಮಾನಸಿಕವಾಗಿ ಕಾಮ

ಕಾಂಚನ ತ್ಯಾಗಮಾಡಬೇಕು. ಸಂಸಾರವನ್ನ ನೀವು, 'ಕಾಕಪಿಷ್ಠ' ಎಂದು ನೋಡಲಾಗುವುದಿಲ್ಲ.

"ಗೋಸ್ವಾಮಿಗಳು ಗೃಹಸ್ಥರು. ಅದಕ್ಕಾಗಿ ನಾನು ಅವರಿಗೆ ಹೇಳಿದೆ: 'ನಿಮಗೆ ಅರ್ಚಕರ ಕೆಲಸ ಇದೆ. ನೀವು ಸಂಸಾರವನ್ನ ಹೇಗೆ ತಾನೆ ತ್ಯಜಿಸಲಾದೀತು? ನೀವು ಸಂಸಾರವನ್ನು ಬರಿಯ ಮಾಯೆ ಎಂದು ಗಾಳಿಯಲ್ಲಿ ತೂರಿಬಿಡಲಾಗುವುದಿಲ್ಲ.

"ಸಂಸಾರಿಗಳ ಕರ್ತವ್ಯವೇನು ಎಂಬುದನ್ನು ಚೈತನ್ಯದೇವ ಹೇಳಿ ಹೋಗಿದ್ದಾನೆ. ಅದು, 'ಜೀವಿಗಳಿಗೆ ದಯೆ ತೋರೋದು, ವೈಷ್ಣವರ ಸೇವೆ ಮಾಡೋದು, ಭಗವನ್ನಾಮ ಸಂಕೀರ್ತನೆ ಮಾಡೋದು.'

"ಕೇಶವಸೇನ ಒಮ್ಮೆ ನನ್ನ ಸಂಬಂಧವಾಗಿ ಹೇಳಿದ: 'ಈಗ ಇವರು ನಮಗೆ ಭಗವಂತ ಮತ್ತು ಪ್ರಪಂಚ ಈ ಎರಡರ ಕಡೆಗೂ ಮನಸ್ಸ್ನ ಇಟ್ಟಿರುವಂತೆ ಹೇಳುತ್ತಿದ್ದಾರೆ. ಆದರೆ ನೋಡಿಕೊಳ್ಳಿ, ಒಂದು ದಿನ ಕಚಕ್ ಅಂತ ಚುಚ್ಚಿಯೇ ಬಿಡುತ್ತಾರೆ' ಎಂದು. ಅದು ಸತ್ಯವಲ್ಲ. ನಾನೇಕೆ ಚುಚ್ಚೋಕೆ ಹೋಗಲಿ?"

ಮಣಿಮಲ್ಲಿಕ: "ಆದರೆ, ನೀವು ಹಾಗೆ ಮಾಡೋದುಂಟು."

ಪರಮಹಂಸರು ನಗುತ್ತ: "ನಿದರ್ಶನ? ನೀನೊಬ್ಬ ಸಂಸಾರಿ. ನಿಮ್ಮಗಳಿಗೆ ತ್ಯಾಗದ ಆವಶ್ಯಕತೆಯೇನಿದೆ?"

"ಯಾರ ಮುಖಾಂತರ ಆತ ಲೋಕಶಿಕ್ಷಣೆ ಮಾಡಬೇಕಾಗಿದೆಯೊ ಅವರಿಗೆ ಸಂಸಾರತ್ಯಾಗದ ಆವಶ್ಯಕತೆ. ಆಚಾರ್ಯ ಲೋಕಶಿಕ್ಷಕ; ಆದ್ದರಿಂದ ಆತ ಕಾಮಕಾಂಚನತ್ಯಾಗಿಯಾಗುವುದರ ಆವಶ್ಯಕತೆ; ಇಲ್ಲದಿದ್ದರೆ ಆತನ ಉಪದೇಶ ಬೇರು ಬಿಡದು. ಬರಿಯ ಆಂತರಿಕ ತ್ಯಾಗವೆ ಸಾಕಾಗದು, ಬಾಹ್ಯಕ ತ್ಯಾಗವೂ ಬೇಕೇಬೇಕು. ಆಗ ಮಾತ್ರ ಸರಿಯಾಗಿ ಲೋಕಶಿಕ್ಷಣೆ ನಡೆಯುತ್ತದೆ. ಹಾಗಿಲ್ಲದೆ ಇದ್ದರೆ ಜನರು ಯೋಚಿಸುತ್ತಾರೆ: 'ಈತ ಕಾಮಕಾಂಚನವನ್ನು ತ್ಯಾಗಮಾಡಬೇಕೆಂದು ನಮಗೆ ಬೋಧಿಸುತ್ತಿದ್ದರೂ, ತಾನು ಮಾತ್ರ ಅವನ್ನ ರಹಸ್ಯವಾಗಿ ಭೋಗಿಸುತ್ತಿದ್ದಾನೆ' ಎಂದು.

"ಒಬ್ಬ ಆಯುರ್ವೇದ ಪಂಡಿತ ರೋಗಿಗೆ ಔಷಧಕೊಟ್ಟು ಹೇಳಿದ: 'ನೀನು ಇನ್ನೊಂದು ದಿನ ಬಾ, ಆಗ ಪಥ್ಯ ಗಿತ್ಯ ತಿಳಿಸುತ್ತೇನೆ' ಎಂದು. ಅಂದು ಪಂಡಿತನ ಕೊಠಡಿಯಲ್ಲಿ ಅನೇಕ ಬೆಲ್ಲದ ಗುಡಾಣಗಳಿದ್ದುವು.

ಆ ರೋಗಿಯ ಊರು ಬಹಳ ದೂರದಲ್ಲಿತ್ತು. ಆತ ಇನ್ನೊಂದು ದಿವಸ ಬಂದು ಪಂಡಿತನನ್ನು ನೋಡಿದ. ಪಂಡಿತ ಹೇಳಿದ: 'ಉಣ್ಣೊ ತಿನ್ನೊ ವಿಷಯದಲ್ಲಿ ಬಹಳ ಸಾವಧಾನದಿಂದ ಇರಬೇಕು. ಬೆಲ್ಲ ನಿನ್ನ ಶರೀರಕ್ಕೆ ಒಳ್ಳೆಯದಲ್ಲ' ಎಂದು. ರೋಗಿ ಹಿಂದಿರುಗಿ ಹೊರಟು ಹೋದ. ಆಗ ಆ ಪಂಡಿತನಿಗೆ ಒಬ್ಬ ಹೇಳಿದ: 'ಇದಿಷ್ಟಕ್ಕಾಗಿ ಅಷ್ಟೊಂದು ದೂರದಿಂದ ಮತ್ತೆ ಆತ ನಡೆಯುವ ಹಾಗೆ ಏಕೆ ಮಾಡಿದೆ? ಈ ಪಥ್ಯವನ್ನು ಅಂದೇ ಹೇಳಿಬಿಟ್ಟಿದ್ದರೆ ಮುಗಿದುಹೋಗುತ್ತಿತ್ತಲ್ಲ!' ಎಂದು. ಪಂಡಿತ ಗಹ ಗಹಿಸಿ ನಕ್ಕು ಹೇಳಿದ: 'ನಾನು ಹಾಗೆ ಮಾಡಿದುದರಲ್ಲಿ ಅರ್ಥವಿದೆ. ಅಂದು ನನ್ನ ಕೊಠಡಿಯಲ್ಲಿ ಅನೇಕ ಬೆಲ್ಲದ ಗುಡಾಣಗಳಿದ್ದುವು. ನಾನು ಆ ಪಥ್ಯವನ್ನು ಅಂದು ರೋಗಿಗೆ ತಿಳಿಸಿದ್ದರೆ, ಆತನಿಗೆ ಅದರಲ್ಲಿ ಶ್ರದ್ಧೆ ಯುಂಟಾಗುತ್ತಿರಲಿಲ್ಲ. ಆತ ಭಾವಿಸುತ್ತಿದ್ದ: "ಈತನ ಕೊಠಡಿಯಲ್ಲಿಯೆ ಇಷ್ಟೊಂದು ಬೆಲ್ಲದ ಗುಡಾಣಗಳಿವೆ. ನಿಶ್ಚಯವಾಗಿ ಈತ ಅದನ್ನು ಸ್ವಲ್ಪ ಸ್ವಲ್ಪವಾಗಿ ತಿನ್ನುತ್ತಲೆ ಇರಬೇಕು. ಆದ್ದರಿಂದ ಬೆಲ್ಲ ಅಂಥ ಕೆಡಕು ವಸ್ತುವೇನಲ್ಲ" ಎಂದು. ಇಂದು ನಾನು ಬೆಲ್ಲದ ಗುಡಾಣಗಳನ್ನು ಆತನ ಕಣ್ಣಿಗೆ ಬೀಳದಂತೆ ಇಟ್ಟಿದ್ದೇನೆ. ಈಗ ನನ್ನ ಮಾತಿನಲ್ಲಿ ಆತನಿಗೆ ವಿಶ್ವಾಸ ಉಂಟಾಗುತ್ತದೆ' ಎಂದು.

"ಆದಿಸಮಾಜದ ಆಚಾರ್ಯನನ್ನು ನೋಡಿದ್ದೇನೆ. ಯಾರೊ ಹೇಳಿ ದರು, 'ಆತ ಎರಡನೆ ಸಾರಿಯೊ ಮೂರನೆ ಸಾರಿಯೊ ಮದುವೆಯಾಗಿ ದ್ದಾನೆ' ಎಂದು. ಆತನಿಗೆ ದೊಡ್ಡದೊಡ್ಡ ಮಕ್ಕಳು! ಇಂಥವರು ಆಚಾರ್ಯರು! ಇಂಥವರು ಉಪದೇಶ ಮಾಡಿದರೆ, 'ಭಗವಂತನೊಬ್ಬನೆ ಸತ್ಯ ಉಳಿದುದೆಲ್ಲ ಮಿಥ್ಯ' ಎಂದು, ಯಾರು ತಾನೆ ಇವರ ಉಪದೇಶ ವನ್ನು ಸ್ವೀಕರಿಸುತ್ತಾರೆ? ಎಂಥವರು ಇಂಥವರ ಶಿಷ್ಯರಾಗುತ್ತಾರೆ ಎಂಬುದು ನಿಮಗೆ ಗೊತ್ತೇ ಇದೆ. ಗುರುವಿನಂತೆ ಶಿಷ್ಯ!

ಸನ್ಯಾಸಿ, ಮಾನಸಿಕವಾಗಿ ಕಾಮಕಾಂಚನ ತ್ಯಾಗಮಾಡಿ, ಬಾಹ್ಯಕ ವಾಗಿ ಅವುಗಳ ಮಧ್ಯದಲ್ಲಿ ಓಡಾಡುತ್ತಿದ್ದರೆ, ಆತನ ಮುಖಾಂತರ ಲೋಕ ಶಿಕ್ಷಣೆಯ ಕಾರ್ಯ ನಡೆಯದು. ಜನರು ಆಡಿಕೊಳ್ಳುತ್ತಾರೆ 'ಈತ ಮುಚ್ಚುಮರೆಯಲ್ಲಿ ಬೆಲ್ಲ ತಿನ್ನುತ್ತಾನೆ' ಎಂದು.

"ಒಮ್ಮೆ ಸಿಂಥಿಯ ವೈದ್ಯ ಮಹೇಂದ್ರ ರಾಮಲಾಲನ ಕೈಯಲ್ಲಿ ಐದು ರೂಪಾಯಿ ಕೊಟ್ಟು ಹೋಗಿದ್ದ. ಅದು ನನಗೆ ಗೊತ್ತಿರಲಿಲ್ಲ.

ರಾಮಲಾಲ ಅದನ್ನು ನನಗೆ ತಿಳಿಸಿದನಂತರ ನಾನು ಆತನನ್ನ ಕೇಳಿದೆ, 'ವೈದ್ಯ ಯಾರಿಗೆಂದು ಕೊಟ್ಟ?' ಎಂದು. ಆತ ಹೇಳಿದ, 'ತಮಗೆ' ಎಂದು. ನಾನು ಪ್ರಥಮತಃ ಭಾವಿಸಿದೆ, 'ಹಾಲಿನವನಿಗೆ ಸ್ವಲ್ಪ ಬಾಕಿ ಕೊಡಬೇಕಾಗಿದೆ, ಅದನ್ನು ತೀರಿಸಿಬಿಡೋಣ' ಎಂದು. ಏನಹೇಳಲಿ! ಸ್ವಲ್ಪ ನಿದ್ರಿಸಿರಬಹುದು. ದಡಮುಡಗುಟ್ಟಿಕೊಂಡು ಎದ್ದೆ. ಬೆಕ್ಕು ಎದೆ ಪರಚಿದಂತೆ ನೋವು! ಆಗ ರಾಮಲಾಲನನ್ನು ಎಬ್ಬಿಸಿ ಕೇಳಿದೆ, 'ಆತ ಕೊಟ್ಟದ್ದು ನಿಮ್ಮ ಚಿಕ್ಕಮ್ಮನಿಗೇನೊ?' ಎಂದು. ಆತ ಹೇಳಿದ, 'ಇಲ್ಲ' ಅಂತ. ಆಗ ನಾನು ಆತನಿಗೆ ಹೇಳಿದೆ, 'ನೀನು ಈಗಲೆ ಹೋಗಿ ಅದನ್ನ ಆತನಿಗೆ ಕೊಟ್ಟು ಬಾ' ಎಂದು. ರಾಮಲಾಲ ಅದನ್ನ ಮಾರನೆಯ ದಿನ ಹಿಂದಿರುಗಿ ಕೊಟ್ಟು ಬಂದ.

"ಸನ್ಯಾಸಿ ಹಣವನ್ನ ಸ್ವೀಕರಿಸೋದು, ಲೋಭದಿಂದ ಮೋಹಕ ವಸ್ತುಗಳಲ್ಲಿ ಆಸಕ್ತನಾಗಿರೋದು ಯಾವ ರೀತಿಯಾಗಿ ತೋರುತ್ತದೆ ಎಂಬುದು ನಿಮಗೆ ಗೊತ್ತೆ? ಇದು ಬ್ರಾಹ್ಮಣ ವಿಧವೆ ಬಹಳ ಕಾಲ ಹವಿಷ್ಯಾನ್ನ ತಿಂದು, ನಿರಂತರ ಬ್ರಹ್ಮಚರ್ಯ ಪರಿಪಾಲನೆ ಮಾಡಿಕೊಂಡು ಹೋಗಿ ಕೊನೆಗೆ ಒಬ್ಬ ಹೊಲೆಯನನ್ನ ಮಿಂಡನನ್ನಾಗಿ ಸ್ವೀಕರಿಸಿದಂತೆ." (ಎಲ್ಲರೂ ಸ್ತಂಭಿತರಾದಂತೆ ಕಾಣುತ್ತಿದ್ದಾರೆ.)

"ಕಾಮಾರಪುಕುರದ ಭಗೀತೇಲಿ ಎಂಬ ಒಬ್ಬ ಶೂದ್ರಳಿಗೆ ಅನೇಕರು ಶಿಷ್ಯರಾದರು. ಆ ಶೂದ್ರಳಿಗೆ ಎಲ್ಲರೂ ಹೋಗಿ ಪ್ರಣಾಮ ಮಾಡುತ್ತಿರುವುದನ್ನು ನೋಡಿ, ಜಮೀನುದಾರ ಒಬ್ಬ ದುರುಳನನ್ನು ಆಕೆಗೆ ಹಚ್ಚಿಬಿಟ್ಟ. ಆತ ಆಕೆಯ ಧಾರ್ಮಿಕ ಪ್ರವೃತ್ತಿಯನ್ನ ನಷ್ಟಮಾಡಿಬಿಟ್ಟ. ಆಕೆಯ ಸಾಧನೆ ಗೀಧನೆಯೆಲ್ಲ ಮಣ್ಣು ಪಾಲಾಯಿತು. ಪತಿತ ಸನ್ಯಾಸಿ ಈಕೆಯ ಅಣ್ಣತಮ್ಮನೆ.

"ನೀವು ಸಂಸಾರದಲ್ಲಿದ್ದೀರಿ. ನಿಮಗೆ ಸತ್ಸಂಗ (ಸಾಧುಸಂಗ) ಆವಶ್ಯಕ. ಮೊದಲು ಸಾಧುಸಂಗ, ಬಳಿಕ ಭಗವಂತನಲ್ಲಿ ಶ್ರದ್ಧೆ.

"ಸಾಧು ಭಗವಂತನ ನಾಮಗುಣಸಂಕೀರ್ತನೆ ಮಾಡದೆ ಇದ್ದರೆ, ಹೇಗೆ ತಾನೆ ಜನರಿಗೆ ಭಗವಂತನಲ್ಲಿ ಶ್ರದ್ಧೆ ಭಕ್ತಿ ವಿಶ್ವಾಸ ಉಂಟಾದೀತು? ಮೂರು ತಲೆಗಳಿಂದಲೂ ಅಮೀರರಾಗಿ (ಮಂತ್ರಿಗಳಾಗಿ) ಬಂದಿರುವ ಮನೆತನಕ್ಕೆ ಸೇರಿದವನಿವ ಎಂದು ಜನರಿಗೆ ಗೊತ್ತಾದರೆ ತಾನೆ ಅವರು ಆತನ ಮಾತಿಗೆ ಬೆಲೆ ಕೊಡುತ್ತಾರೆ.

(ಮಣಿಗೆ) "ಜ್ಞಾನ ದೊರೆತಿದ್ದರೂ ಸರ್ವದಾ ಆತನ ಕಡೆ ಲಕ್ಷ್ಯವಿಟ್ಟೇ ಇರಬೇಕು. ನ್ಯಾಂಗ್ಟ (ತೋತಾಪುರಿ)[1] ಹೇಳುತ್ತಿದ್ದ : 'ಹಿತ್ತಾಳೆ ಲೋಟವನ್ನು ಎಲ್ಲೋ ಒಂದು ದಿನ ಮಾತ್ರ ಬೆಳಗಿಬಿಟ್ಟರೆ ಏನು ಪ್ರಯೋಜನ? ಉಪಯೋಗಿಸದೆ ಒಂದು ಮೂಲೆಗೆ ಹಾಕಿಬಿಟ್ಟರೆ ಮತ್ತೆ ಕಪ್ಪಾಗುತ್ತದೆ' ಎಂದು. ನಾನು ನಿನ್ನ ಮನೆಗೆ ಒಂದು ದಿವಸ ಹೋಗಿಬರಬೇಕಾಗಿದೆ. ನಿನ್ನ ಮನೆ ನನಗೆ ಪರಿಚಯವಾದರೆ, ಉಳಿದ ಭಕ್ತರನ್ನೂ ಅಲ್ಲಿ ಸಂಧಿಸಬಹುದು. ಒಮ್ಮೆ ಈಶಾನನನ್ನು ಹೋಗಿ ನೋಡು.

(ಮಣಿಲಾಲನಿಗೆ) "ಕೇಶವಸೇನನ ತಾಯಿ ಬಂದಿದ್ದಳು ಇಲ್ಲಿಗೆ. ಆಕೆ ಮನೆಯ ಚಿಕ್ಕಪುಟ್ಟ ಮಕ್ಕಳೆಲ್ಲ ಕೂಡಿ ಇಲ್ಲಿ ಹರಿನಾಮ ಸಂಕೀರ್ತನೆ ಮಾಡಿದುವು. ಆಕೆ ಅವರ ಸುತ್ತಲೂ ಪ್ರದಕ್ಷಿಣೆಮಾಡುತ್ತ ಕೈತಾಳ ಹಾಕಲಾರಂಭಿಸಿದಳು. ನೋಡಿದೆ ಕೇಶವಸೇನನ ಮರಣಕ್ಕಾಗಿ ಆಕೆ ಶೋಕದಿಂದ ಅಷ್ಟೊಂದಾಗಿ ಕುಗ್ಗಿಹೋಗದೆ ಇರುವುದನ್ನ. ಇಲ್ಲಿಗೆ ಬಂದು ಜಪಮಾಲೆ ಹಿಡಿದು ಜಪಮಾಡುತ್ತ ಏಕಾದಶಿ ವ್ರತವನ್ನು ಆಚರಿಸಿದಳು. ಒಳ್ಳೆ ಭಕ್ತೆಯಾಗಿರುವುದನ್ನು ನೋಡಿದೆ."

ಮಣಿಲಾಲ: "ಕೇಶವಸೇನನ ತಾತ ರಾಮಕಮಲಸೇನನೂ ಒಬ್ಬ ಭಕ್ತನೆ. ಆತ ತುಳಸೀವನದಲ್ಲಿ ಕುಳಿತು ಜಪತಪಾದಿಗಳನ್ನು ಮಾಡುತ್ತಿದ್ದ. ಕೇಶವಸೇನನ ತಂದೆ ಪ್ಯಾರೀಮೋಹನನೂ ಒಬ್ಬ ವೈಷ್ಣವ ಭಕ್ತನಾಗಿದ್ದ."

ಶ್ರೀರಾಮಕೃಷ್ಣರು: "ತಂದೆ ಅಂಥವನಲ್ಲದಿದ್ದರೆ, ಮಗ ಅಂಥ ಭಕ್ತನಾಗುತ್ತಿರಲಿಲ್ಲ. ವಿಜಯನ ಕಡೆ ನೋಡು. ವಿಜಯನ ತಂದೆ ಭಾಗವತವನ್ನು ಓದುತ್ತ ಓದುತ್ತ ಇದ್ದಹಾಗೆ ಭಾವದಿಂದ ಬಾಹ್ಯಜ್ಞಾನಶೂನ್ಯನಾಗಿ ಬಿಡುತ್ತಿದ್ದ. ವಿಜಯ ಆಗಾಗ, 'ಹರಿ! ಹರಿ!' ಎಂದು ಹೇಳಿ ಎದ್ದು ನಿಂತುಕೊಂಡುಬಿಡುತ್ತಾನೆ. ಈಗ ಕೆಲ ಕಾಲದಿಂದ ವಿಜಯ ಏನೇನು ಭಗವಂತನ ರೂಪಗಳನ್ನು ದರ್ಶನ ಮಾಡುತ್ತಿರುವನೊ, ಅವೆಲ್ಲ ಸತ್ಯ. ಸಕಾರ ನಿರಾಕಾರದ ಸಂಬಂಧವಾಗಿ ವಿಜಯ ಹೇಳಿದ, 'ಯಾವ

---

1. ಈತ ನಾಗಸಂಪ್ರದಾಯಕ್ಕೆ ಸೇರಿದ ಒಬ್ಬ ದಿಗಂಬರ ಸನ್ಯಾಸಿ. ಈತ ಪರಮಹಂಸರಿಗೆ ಸಂನ್ಯಾಸಾಶ್ರಮವನ್ನು ಕೊಟ್ಟು ಅವರಿಗೆ ಅದ್ವೈತ ಸಾಧನೆಯನ್ನು ಮಾಡಿಸಿದನು. ಈತನನ್ನು ಪರಮಹಂಸರು 'ನ್ಯಾಂಗ್ಟ' (ದಿಗಂಬರ) ಎಂದು ಕರೆಯುತ್ತಿದ್ದರು.

ರೀತಿಯಾಗಿ ಗೋಸುಂಬೆ ಕೆಂಪು, ನೀಲಿ, ಹಳದಿ ಬಣ್ಣವನ್ನು ತಾಳುವುದೊ ಮತ್ತು ಅದಕ್ಕೆ ಕೆಲವು ವೇಳೆ ಯಾವ ರೀತಿಯಾಗಿ ಯಾವ ಬಣ್ಣವೂ ಇಲ್ಲವೊ, ಅದೇರೀತಿಯಾಗಿ ಭಗವಂತ ಕೆಲವು ವೇಳೆ ಸಗುಣ ಕೆಲವು ವೇಳೆ ನಿರ್ಗುಣ' ಎಂದು.

"ವಿಜಯ ಅತ್ಯಂತ ಸರಳ ಜೀವಿ. ಅತ್ಯಂತ ಉದಾರ ಮತ್ತು ಸರಳ ಹೃದಯುದವನಾಗದಿದ್ದರೆ, ಮನುಷ್ಯ ಭಗವಂತನನ್ನು ಪಡೆಯಲಾರ. ವಿಜಯ ನೆನ್ನೆ ಅಧರಸೇನನ ಮನೆಗೆ ಬಂದಿದ್ದ. ಅದು ತನ್ನ ಸ್ವಂತ ಮನೆಯೇ, ಎಲ್ಲರೂ ತನ್ನ ಬಂಧು ಬಾಂಧವರೇ ಎಂಬ ರೀತಿಯಲ್ಲಿ ವರ್ತಿಸಿದ. ವಿಷಯ ಬುದ್ಧಿ ಹೋಗದ ಹೊರತು ಉದಾರತೆ, ಸರಳತೆ ಬರದು."

ಬಳಿಕ ಪರಮಹಂಸರು ಹಾಡಲಾರಂಭಿಸಿದ್ದಾರೆ:

ಅಮೂಲ್ಯ ನಿಧಿ ದೊರೆಕೊಳುವುದು ನಿನಗೆ
ಮನವು ನಿರಂಜನವಾದಾಗ! ........

ಪರಮಹಂಸರು ಮುಂದುವರಿಸಿದರು: "ಮಣ್ಣನ್ನು ಚೆನ್ನಾಗಿ ಹದ ಮಾಡಿಕೊಳ್ಳದೆ ಇದ್ದರೆ ಮಡಕೆ ಕುಡಿಕೆಗಳನ್ನು ತಯಾರುಮಾಡಲಾಗುವುದಿಲ್ಲ. ಒಳಗೆ ಮರಳು ಕಲ್ಲು ಸೇರಿಕೊಂಡಿದ್ದರೆ ಮಡಕೆ ಬಿರುಕುಬಿಡುತ್ತದೆ. ಅದಕ್ಕಾಗಿಯೆ ಕುಂಬಾರ ಮಣ್ಣನ್ನು ಮೊದಲೆ ಚೆನ್ನಾಗಿ ಹದಮಾಡಿಕೊಳ್ಳುತ್ತಾನೆ.

"ಕನ್ನಡಿಯ ಮೇಲೆ ಧೂಳು ಕವಿದಿದ್ದರೆ ಮುಖ ಕಾಣಿಸದು. ಚಿತ್ತ ಶುದ್ಧವಿಲ್ಲದಿದ್ದರೆ ಸ್ವಸ್ವರೂಪದ ದರ್ಶನ ದೊರೆಯದು. ನೋಡಿ, ಎಲ್ಲಿ ಅವತಾರಪುರುಷ ಜನ್ಮವೆತ್ತುವನೊ ಅಲ್ಲಿ ಸರಳತೆ ತಾಂಡವವಾಡುತ್ತದೆ. ನಂದ, ದಶರಥ, ವಸುದೇವ— ಇವರೆಲ್ಲರೂ ಸರಳ ಜೀವಿಗಳೆ.

"ವೇದಾಂತ ಹೇಳುತ್ತದೆ: 'ಚಿತ್ತ ಪರಿಶುದ್ಧವಾಗಿಲ್ಲದೆ ಇದ್ದರೆ ಭಗವಂತನನ್ನು ಪಡೆಯಬೇಕು ಎಂಬ ಇಚ್ಛೆಯೆ ಬರದು' ಅಂತ. ಹಿಂದಿನ ಜನ್ಮದಲ್ಲಿಯೆ ಆಗಲಿ ಅಥವಾ ಈ ಜನ್ಮದಲ್ಲಿಯೆ ಆಗಲಿ ವಿಶೇಷವಾಗಿ ತಪಸ್ಸುಮಾಡದಿದ್ದರೆ ಸರಳತೆ ಉದಾರತೆ ಉಂಟಾಗದು."

ಪರಮಹಂಸರ ಕಾಲು ಸ್ವಲ್ಪ ಊದು ಊದಿದಹಾಗೆ ಇರುವದರಿಂದ ಅವರು ಬಾಲಕನೋಪಾದಿಯಲ್ಲಿ ಬಹಳ ಚಿಂತಾಶೀಲರಾಗಿದ್ದಾರೆ. ಸಿಂಥಿಯ ಕವಿರಾಜ (ವೈದ್ಯ) ಮಹೇಂದ್ರ ಬಂದು ಅವರಿಗೆ ಪ್ರಣಾಮ ಮಾಡಿದ.

ಪರಮಹಂಸರು ಪ್ರಿಯಮುಖರ್ಜಿ ಮೊದಲಾದ ಭಕ್ತರಿಗೆ: "ನೆನ್ನೆ ನಾರಾ'ಣನಿಗೆ ಹೇಳಿದೆ, 'ನಿನ್ನ ಕಾಲನ್ನು ಬೆರಳಿನಿಂದ ಒತ್ತಿನೋಡು ಕುಳಿಗಿಳಿಯಾಗುವುದೆ?' ಎಂದು. ಆತ ಒತ್ತಿ ನೋಡಿದ—ಕುಳಿಬಿತ್ತು; 'ಬದುಕಿಕೊಂಡೆ!' ಎಂದೆ. (ಮುಖರ್ಜಿಗೆ) ನೀನು ಒಮ್ಮೆ ನಿನ್ನ ಕಾಲನ್ನು ಒತ್ತಿ ನೋಡು ನೋಡೋಣ. ಕುಳಿ ಬಿತ್ತೇನು?"

ಮುಖರ್ಜಿ: "ಹೌದು, ಬಿದ್ದಿದೆ."

ಪರಮಹಂಸರು: "ಉಸ್, ಬದುಕಿದೆನಪ್ಪ!"

ಮಣಿಮಲ್ಲಿಕ: "ಇದಕ್ಕೇಕೆ ಇಷ್ಟೊಂದು ಚಿಂತನೆ? ಹರಿಯೊ ನೀರಿನಲ್ಲಿ ಸ್ನಾನ ಮಾಡಿಬಿಡಿ. ಇದಕ್ಕಾಗಿ ಔಷಧ ಗಿವ್‌ಷಧವನ್ನು ಏಕೆ ಕುಡಿಯಬೇಕು?"

ಪರಮಹಂಸರು: "ಉಹ್ಞೂ, ನಿಮ್ಮಗಳ ರಕ್ತದಲ್ಲಿ ಇನ್ನೂ ಬಲವಿದೆ,—ನಿಮ್ಮಗಳ ವಿಷಯವೇ ಪ್ರತ್ಯೇಕ. ಭಗವತಿ ನನ್ನನ್ನು ಬಾಲಕನ ಅವಸ್ಥೆಯಲ್ಲಿ ಇಟ್ಟಿದ್ದಾಳೆ. ಒಂದು ದಿನ ಹುಲ್ಲುಗಾವಲಿನಲ್ಲಿ ಏನೊ ಕಡಿಯಿತು. ನಾನು ಕೇಳಿದ್ದೆ, 'ಸರ್ಪ ಮತ್ತೊಮ್ಮೆ ಕಡಿದರೆ ವಿಷವನ್ನು ಹಿಂದಕ್ಕೆ ತೆಗೆದುಕೊಂಡುಬಿಡುವುದು' ಎಂದು. ಅದಕ್ಕಾಗಿ ಹುತ್ತಕ್ಕೆ ಕೈಹಾಕಿ ಕುಳಿತೆ ಒಬ್ಬ ಬಂದು ನನಗೆ ಹೇಳಿದ: 'ಏನು ನೀವು ಮಾಡುತ್ತಿರೋದು? ಸರ್ಪ ಅದೇ ಜಾಗವನ್ನು ಮತ್ತೆ ಕಡಿದರೆ ಮಾತ್ರ. ಬೇರೆ ಜಾಗದಲ್ಲಿ ಕಡಿದರೆ ಏನೂ ಆಗದು' ಅಂತ.

"ಶರದೃತುವಿನ ಹಿಮ ಮೈಗೆ ಒಳ್ಳೆಯದೆಂದು ಕೇಳಿದ್ದೆ. ಕಲ್ಕತ್ತೆದಿಂದ ಗಾಡಿಯಲ್ಲಿ ಬರುವಾಗ ತಲೆಯನ್ನು ಹೊರಕ್ಕೆ ಚಾಚಿ ಅದಕ್ಕೆ ಹಿಮವನ್ನು ಸಮ್ಮನೆ ಬೀಳಿಸಿದ್ದೇ ಬೀಳಿಸಿದ್ದು! (ಎಲ್ಲರೂ ನಗುತ್ತಾರೆ.)

(ಸಿಂಥಿಯ ಮಹೇಂದ್ರನಿಗೆ) "ನಿಮ್ಮ ಸಿಂಥಿಯ ಆ ಪಂಡಿತ ಬಹಳ ಒಳ್ಳೆಯವ. ಆತ ವೇದಾಂತವಾಗೀಶ. ನನ್ನನ್ನು ಗೌರವಿಸುತ್ತಾನೆ. ಆತನಿಗೆ ನಾನು, 'ನೀನು ಬಹಳವಾಗಿ ಓದಿದ್ದೀಯೆ; ಆದರೆ, "ನಾನು ಒಬ್ಬ ಮಹಾ ಪಂಡಿತ" ಎಂಬ ಅಹಂಕಾರವನ್ನು ಮಾತ್ರ ತ್ಯಜಿಸಿಬಿಡು' ಎಂದು ಹೇಳಿದಾಗ, ಆತನಿಗೆ ಬಹಳ ಆನಂದವಾಯಿತು. ಆತನೊಡನೆ ವೇದಾಂತದ ವಿಷಯವಾಗಿ ಮಾತುಕತೆಗಳಾಡಿದೆ.

(ಮಾಸ್ಟರಿಗೆ) "ಯಾವುದು ಶುದ್ಧ ಆತ್ಮವೊ ಅದು ನಿರ್ಲಿಪ್ತವಾದುದು. ಅದರಲ್ಲಿ ಮಾಯೆ ಅಥವಾ ಅವಿದ್ಯೆ ಇದೆ. ಈ ಮಾಯೆಗೆ

ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿವೆ. ಯಾವುದು ಶುದ್ಧ ಆತ್ಮವೊ ಅದರಲ್ಲಿಯೂ ಈ ಮೂರು ಗುಣಗಳು ಇದ್ದೇ ಇವೆ; ಆದರೂ ಅದು ನಿರ್ಲಿಪ್ತವೆ. ಬೆಂಕಿಗೆ ನೀಲಿ ಉಂಡೆ ಬಿಸಾಡಿದರೆ ನೀಲಿ ಬಣ್ಣದ ಉರಿ ಏಳುತ್ತದೆ; ಕೆಂಪು ಉಂಡೆ ಬಿಸಾಡಿದರೆ ಕೆಂಪು ಬಣ್ಣದ ಉರಿ ಏಳುತ್ತದೆ. ಆದರೆ, ಬೆಂಕಿಗೆ ತನ್ನದೆ ಆದ ಯಾವ ಬಣ್ಣವೂ ಇಲ್ಲ.

"ನೀರಿಗೆ ನೀಲಿ ಬಣ್ಣ ಕದಡಿದರೆ ಅದು ನೀಲಿಯಾಗಿ ಕಾಣುತ್ತದೆ. ಮತ್ತೆ ಅದಕ್ಕೇನೆ ಪಟಿಕ ಹಾಕಿದರೆ, ಅದು ತನ್ನ ಸ್ವಸ್ವರೂಪವನ್ನು ಪಡೆಯುತ್ತದೆ.

"ಒಬ್ಬ ಚಂಡಾಲ ಮಾಂಸದ ಹೊರೆಯನ್ನು ಹೊತ್ತುಕೊಂಡು ಹೋಗುತ್ತಿದ್ದ. ಆತ ಶ್ರೀ ಶಂಕರಾಚಾರ್ಯರನ್ನು ಮುಟ್ಟಿಬಿಟ್ಟ. ಶಂಕರಾಚಾರ್ಯರು ರೇಗಿದರು : 'ಏನು, ನನ್ನನ್ನು ಮುಟ್ಟಿಬಿಟ್ಟೆಯಲ್ಲ?' ಅಂತ. ಚಂಡಾಲ ಉತ್ತರವಿತ್ತ : 'ಪೂಜ್ಯರೆ! ನಾನೂ ನಿಮ್ಮನ್ನು ಮುಟ್ಟಲಿಲ್ಲ; ನೀವೂ ನನ್ನನ್ನು ಮುಟ್ಟಲಿಲ್ಲ. ನೀವು ಶುದ್ಧ ನಿರ್ಲಿಪ್ತ ಆತ್ಮ' ಎಂದು. ಜಡಭರತ ಇದೇ ಮಾತನ್ನು ರಾಜ ರಹೂಗಣನಿಗೆ ಹೇಳಿದ.

"ಶುದ್ಧ ಆತ್ಮ ನಿರ್ಲಿಪ್ತವಾದ್ದು. ಅದನ್ನು ಕಣ್ಣಿನಿಂದ ನೋಡಲಾಗುವುದಿಲ್ಲ. ನೀರಿನಲ್ಲಿ ಉಪ್ಪು ಬೆರೆತುಕೊಂಡಿದ್ದರೆ, ಅದನ್ನು ಕಣ್ಣಿನಿಂದ ನೋಡಲಾಗುವುದಿಲ್ಲ.

"ಯಾವುದು ಶುದ್ಧ ಆತ್ಮವೊ, ಅದೇ ಮಹಾಕಾರಣ—ಕಾರಣದ ಕಾರಣ. ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ. ಪಂಚಭೂತಸ್ಥೂಲ; ಮನಸ್ಸು ಬುದ್ಧಿ ಅಹಂಕಾರ, ಸೂಕ್ಷ್ಮ; ಪ್ರಕೃತಿ ಅಥವಾ ಆದ್ಯಾಶಕ್ತಿ ಎಲ್ಲದರ ಕಾರಣ. ಬ್ರಹ್ಮ ಅಥವಾ ಶುದ್ಧ ಆತ್ಮ, ಕಾರಣದಕಾರಣ.

"ಈ ಶುದ್ಧ ಆತ್ಮವೆ ನಮ್ಮ ಸ್ವಸ್ವರೂಪ. ಯಾವುದಕ್ಕೆ ಜ್ಞಾನ ಎಂದು ಹೆಸರು? ಈ ಸ್ವಸ್ವರೂಪವನ್ನ ಅರಿತುಕೊಳ್ಳೋ'ಕೆ ಮತ್ತು ಅದರಲ್ಲಿಯೆ ಮನಸ್ಸನ್ನಿಡೋ'ಕೆ; ಈ ಶುದ್ಧ ಆತ್ಮವನ್ನ ಅರಿತುಕೊಳ್ಳೋ'ಕೆ.

"ಕರ್ಮ ಎಲ್ಲಿಯವರೆಗೆ?—ದೇಹಾಭಿಮಾನ ಇರುವವರೆಗೆ, ಅಂದರೆ ನಾನೆ ಈ ದೇಹ ಎಂಬ ಅಭಿಮಾನ ಇರುವವರೆಗೆ. ಗೀತೆಯಲ್ಲಿಯೂ ಹೀಗೆಯೆ ಹೇಳಿದೆ. ದೇಹವನ್ನು ಆತ್ಮ ಎಂದು ಭಾವಿಸುವುದೆ ಅಜ್ಞಾನ.

(ಶಿವಪುರದ ಬ್ರಾಹ್ಮ ಭಕ್ತನಿಗೆ) "ನೀವು ಒಬ್ಬ ಬ್ರಾಹ್ಮಭಕ್ತರೇನು?"

ಬ್ರಾಹ್ಮ: "ಹೌದು."

ಪರಮಹಂಸರು ನಗುತ್ತ: "ನಾನು ನಿರಾಕಾರಸಾಧಕರ ಕಣ್ಣು ಮುಖಚರ್ಯೆ ನೋಡಿಯೆ ಅವರನ್ನ ಅರಿತು ಕೊಂಡುಬಿಡಬಲ್ಲೆ. ನೀವು ಒಂದು ಸ್ವಲ್ಪ ಮುಳುಗು ಹಾಕಬೇಕು. ಮೇಲೆಯೆ ತೇಲಿದರೆ ರತ್ನ ದೊರೆಯದು. ನಾನು ಸಾಕಾರ ನಿರಾಕಾರ ಎಲ್ಲವನ್ನೂ ಅನುಮೋದಿಸುತ್ತೇನೆ."

ದೊಡ್ಡ ಅಂಗಡಿಬೀದಿಯ ಮಾರ್ವಾಡಿಭಕ್ತರು ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದರು. ಪರಮಹಂಸರು ಅವರ ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಿದ್ದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಆಹಾ! ಇವರು ದೊಡ್ಡ ಭಕ್ತರು. ಇವರೆಲ್ಲರೂ ದೇವಾಲಯಕ್ಕೆ ಹೋಗೋದು—ಸ್ತೋತ್ರಮಾಡೋದು—ಪ್ರಸಾದ ಸ್ವೀಕರಿಸೋದು! ಈ ಸಲ ಯಾರು ಪುರೋಹಿತನಾಗಿದ್ದಾನೊ ಆತ ಒಬ್ಬ ಭಾಗವತಪಂಡಿತ."

ಮಾರ್ವಾಡಿ ಭಕ್ತ: "'ಹೇ ಭಗವಂತ! ನಾನು ನಿನ್ನ ದಾಸ' ಎಂದು ಹೇಳುತ್ತಿರುವ ಈ 'ನಾನು' ಎಂಬುದು ಯಾವುದು?"

ಪರಮಹಂಸರು: "ಲಿಂಗಶರೀರ ಅಥವಾ ಜೀವಾತ್ಮ. ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಈ ನಾಲ್ಕೂ ಸೇರಿ ಲಿಂಗಶರೀರವಾಗಿದೆ."

ಮಾರ್ವಾಡಿ ಭಕ್ತ: "ಜೀವಾತ್ಮ ಎಂಬುದು ಯಾವುದು?"

ಶ್ರೀರಾಮಕೃಷ್ಣರು: "ಅಷ್ಟಪಾಶಬಂಧಿತ ಆತ್ಮ. ಚಿತ್ತ ಎಂಬುದು ಯಾವುದು? ಯಾವುದರಿಂದ 'ಅಹಂ' ಎಂಬುದು ಉದ್ಭವವಾಗುವುದೊ ಅದು."

ಮಾರ್ವಾಡಿ ಭಕ್ತ: "ಮಹಾರಾಜ್, ಸತ್ತರೆ ಏನಾಗುತ್ತದೆ?"

ಪರಮಹಂಸರು: "ಗೀತೆಯ ಪ್ರಕಾರ, ಸಾಯುವಾಗ ಯಾವ ಭಾವನೆ ಬರುತ್ತದೆಯೊ, ಅದರಂತೆ ಮುಂದೆ. ಭರತರಾಜ ಜಿಂಕೆಯ ಚಿಂತನೆ ಮಾಡಿ ಜಿಂಕೆಯಾಗಿ ಹುಟ್ಟಿದ. ಅದಕ್ಕಾಗಿಯೆ ಭಗವಂತನನ್ನು ಪಡೆಯುವುದಕ್ಕೆ ಸಾಧನೆ ಆವಶ್ಯಕ. ಹಗಲು ಇರುಳು ಆತನ ಚಿಂತನೆ ಮಾಡಿದರೆ, ಸಾಯುವಾಗಲೂ ಆತನ ಚಿಂತನೆಯೇ ಬರುತ್ತದೆ."

ಮಾರ್ವಾಡಿ ಭಕ್ತ: "ಒಳ್ಳೆಯದು. ಮಹಾರಾಜ್, ವಿಷಯಗಳನ್ನು ಕಂಡರೆ ನಮಗೇಕೆ ವೈರಾಗ್ಯ ಉಂಟಾಗೋದಿಲ್ಲ?"

ಪರಮಹಂಸರು: ಮಾಯೆ ಎಂಬುದು ಇದೇನೆ. ಮಾಯೆಯ

ದೆಸೆಯಿಂದ ಸತ್ ಅಸತ್ತಾಗಿಯೂ, ಅಸತ್ ಸತ್ತಾಗಿಯೂ ಕಾಣಿಸಿ ಕೊಳ್ಳುತ್ತದೆ. ಸತ್ ಅಂದರೆ ನಿತ್ಯವಾದ್ದು—ಪರಬ್ರಹ್ಮ. ಅಸತ್ ಅಂದರೆ ಅನಿತ್ಯವಾದ್ದು—ಸಂಸಾರ.''

ಮಾರ್ವಾಡಿ ಭಕ್ತ: ''ಶಾಸ್ತ್ರಗಳನ್ನೇನೊ ಓದುತ್ತೇವೆ, ಆದರೆ ಜೀವನ ಮಾರ್ಪಾಟು ಹೊಂದುತ್ತಿಲ್ಲವಲ್ಲ?''

ಪರಮಹಂಸರು: ಸುಮ್ಮನೆ ಓದಿಬಿಟ್ಟರೆ ಏನಾದೀತು? ಸಾಧನೆ—ತಪಸ್ಸು ಬೇಕು. ಕರೆ ಆತನನ್ನ. ಸುಮ್ಮನೆ ಸಿದ್ಧಿ ಸಿದ್ಧಿ ಎಂದು ಹೇಳಿದರೆ ಅಮಲೇರುವುದೇ? ಅರೆದು ಕುಡಿಯಬೇಕು.

''ಈ ಸಂಸಾರ ಒಂದು ಮುಳ್ಳು ಗಿಡ. ಕೈ ಹಾಕಿತು ಅಂದರೆ ತರಚಿ ರಕ್ತ ಸುರಿಯಲಾರಂಭಿಸುತ್ತದೆ. ಒಂದು ಮುಳ್ಳುಗಿಡ ತೆಗೆದು ಕೊಂಡುಬಂದು ಅದರ ಹತ್ತಿರ ಕುಳಿತುಕೊಂಡು ಜಪಿಸು: 'ಈ ಗಿಡ ಸುಟ್ಟುಹೋಯಿತು, ಈ ಗಿಡ ಸುಟ್ಟುಹೋಯಿತು' ಎಂದು. ಅದಷ್ಟಕ್ಕೆ ಅದು ಸುಟ್ಟುಹೋಗುತ್ತದೆಯೆ? ಜ್ಞಾನಾಗ್ನಿಯನ್ನು ಹೊತ್ತಿಸಿಕೊ. ಆ ಅಗ್ನಿ ಯಿಂದ ಅದನ್ನು ಸುಡು. ಆಗ ಮಾತ್ರವೆ ಅದು ಸುಟ್ಟು ಬೂದಿಯಾಗುತ್ತದೆ.

''ಸಾಧನೆಯ ಸಮಯದಲ್ಲಿ ಸ್ವಲ್ಪ ಹೆಚ್ಚು ಶ್ರಮ ತೆಗೆದುಕೊಳ್ಳ ಬೇಕು. ಆ ಬಳಿಕ ರಾಜರಸ್ತೆ. ನದಿ ಡೊಂಕಾಗಿ ಹರಿಯುವ ಜಾಗದಲ್ಲಿ ಸ್ವಲ್ಪ ಶ್ರಮ ತೆಗೆದುಕೊಂಡು ಮುಂದುವರಿದು, ಬಳಿಕ ಅನುಕೂಲವಾದ ಗಾಳಿ ದೊರೆತಾಗ ದೋಣಿಯನ್ನು ಸುಮ್ಮನೆ ತೇಲಿಬಿಡು.

''ಎಲ್ಲಿಯವರೆಗೆ ನೀನು ಮಾಯೆಯ ಮನೆಯೊಳಗೆ ಇರುವೆಯೊ, ಎಲ್ಲಿಯವರೆಗೆ ಮಾಯೆಯ ಮೋಡ ಮೇಲೆ ಕವಿದುಕೊಂಡಿರುತ್ತದೆಯೊ, ಅಲ್ಲಿಯವರೆಗೆ ಜ್ಞಾನಸೂರ್ಯನ ಪ್ರಭಾವ ಗೊತ್ತಾಗದು. ಮಾಯೆಯ ಗೃಹವನ್ನು ತ್ಯಜಿಸಿ (ಕಾಮಕಾಂಚನ ತ್ಯಜಿಸಿ) ಹೊರಗಡೆ ಬಂದು ನಿಂತು ಕೊಂಡರೆ ಆಗ ಜ್ಞಾನಸೂರ್ಯ ಅವಿದ್ಯೆಯನ್ನು ನಾಶಮಾಡುತ್ತಾನೆ. ಮನೆಯ ಒಳಗೆ ನಿಂತರೆ ಲೆನ್ಸು ಕಾಗದವನ್ನು ಸುಡಲಾರದು. ಮನೆಯಿಂದ ಹೊರಗೆ ಬಂದು ನಿಂತರೆ ಬಿಸಿಲು ಲೆನ್ಸಿನ ಮೇಲೆ ಬೀಳುತ್ತದೆ,—ಆಗ ಕಾಗದ ಸುಟ್ಟುಹೋಗುತ್ತದೆ. ಮತ್ತೆ ಆಕಾಶ ಮೋಡವಾಗಿದ್ದರೆ ಲೆನ್ಸು ಕಾಗದ ವನ್ನು ಸುಡಲಾರದು. ಮೇಘ ಚೆದರಿಹೋದರೆ ಆಗ ಅದು ಸುಟ್ಟು ಹಾಕುತ್ತದೆ.

''ಕಾಮಕಾಂಚನದ ಮನೆಯನ್ನು ಬಿಟ್ಟು ಸ್ವಲ್ಪ ಹೊರಗೆ ನಿಂತರೆ—

ಹೊರಗೆ ನಿಂತು ಸ್ವಲ್ಪ ಸಾಧನೆ ತಪಸ್ಸು ಮಾಡಿದರೆ, ಆಗ ಮನಸ್ಸಿನ ಅಂಧಕಾರ ನಾಶವಾಗುತ್ತದೆ; ಅಹಂಕಾರವೆಂಬ ಅವಿದ್ಯಾ ಮೋಡ ಸುಟ್ಟು ಭಸ್ಮವಾಗುತ್ತದೆ; ಜ್ಞಾನ ಪ್ರಾಪ್ತಿಯಾಗುತ್ತದೆ. ಕಾಮಕಾಂಚನವೇ ಆ ಮೋಡ.

(ಮಾರ್ವಾಡಿ ಭಕ್ತರಿಗೆ) "ತ್ಯಾಗಿಗಳಿಗೆ ಅತ್ಯಂತ ಕಠಿನವಾದ ನಿಯಮ. ಕಾಮಕಾಂಚನದ ಸಹವಾಸ ಲೇಶಮಾತ್ರವೂ ಇರಕೂಡದು. ಹಣವನ್ನ ತಮ್ಮ ಕೈಯಿಂದ ಮುಟ್ಟುವುದಂತೂ ಇಲ್ಲವೇ ಇಲ್ಲ,—ಹತ್ತಿರ ಇಡಲೂ ಕೂಡ ಅನುಮತಿ ಕೊಡಕೂಡದು.

"ವೇದಾಂತವಾದಿ ಲಕ್ಷ್ಮೀನಾರಾಯಣ ಮಾರ್ವಾಡಿ ಇಲ್ಲಿಗೆ ಬಹು ಪಾಗಿ ಬರುತ್ತಿದ್ದ. ನನ್ನ ಹಾಸಿಗೆ ಸ್ವಲ್ಪ ಕೊಳಕಾಗಿರುವುದನ್ನು ನೋಡಿ ಹೇಳಿದ: 'ನಿಮ್ಮ ಹೆಸರಿನಲ್ಲಿ ಹತ್ತುಸಾವಿರ ರೂಪಾಯಿಯನ್ನು ಇಡುತ್ತೇನೆ. ಅದರಿಂದ ಬರುವ ಬಡ್ಡಿ ನಿಮ್ಮ ಸೇವೆಗಾಗಿ ಉಪಯೋಗವಾಗುತ್ತದೆ' ಎಂದು. ಈ ಮಾತುಗಳು ಆತನ ಬಾಯಿಂದ ಹೊರಬೀಳುವುದೆ ತಡ, ನನ್ನನ್ನು ಯಾರೊ ದೊಣ್ಣೆಯಿಂದ ರುಬ್ಬಿಸಿದಂತಾಗಿ ಮೂರ್ಛಿತನಾದೆ. ಮೈತಿಳಿದ ಮೇಲೆ ಆತನಿಗೆ ಹೇಳಿದೆ: 'ನೀನು ಅಂಥ ಮಾತುಗಳನ್ನು ನಿನ್ನ ಬಾಯಿಂದ ಮತ್ತೆ ಹೊರಗೆಡಹುವುದಾದರೆ, ಮುಂದೆ ದಯವಿಟ್ಟು ಇಲ್ಲಿಗೆ ಬರಬೇಡ. ನಾನು ಹಣವನ್ನು ಮುಟ್ಟುವಂತೆಯೂ ಇಲ್ಲ; ಹತ್ತಿರ ಇಟ್ಟು ಕೊಳ್ಳುವಂತೆಯೂ ಇಲ್ಲ' ಅಂತ. ಆತ ಅತ್ಯಂತ ಬುದ್ಧಿವಂತ. ಹೇಳಿದ: 'ನಿಮಗೂ ಇನ್ನೂ ಗ್ರಾಹ್ಯ ತ್ಯಾಜ್ಯ ಬುದ್ಧಿ ಇದೆ. ಹಾಗಾದರೆ ನಿಮಗೆ ಜ್ಞಾನ ಲಭ್ಯವಾಗಿಲ್ಲ' ಎಂದು. ನಾನು ಹೇಳಿದೆ, 'ನನ್ನದು ಇನ್ನೂ ಅಷ್ಟು ದೂರ ಮುಂದುವರಿದಿಲ್ಲ!' ಅಂತ. (ಎಲ್ಲರೂ ನಗುತ್ತಾರೆ.) ಆತ ಅದನ್ನು ಬಳಿಕ ಹೃದಯನ ಹತ್ತಿರ ಇಡಲು ಇಚ್ಛಿಸಿದ. ನಾನು ಹೇಳಿದೆ: 'ನೀನು ಹಾಗೆ ಮಾಡಿದರೆ ನಾನು ಹೃದಯನಿಗೆ ಹೇಳಬೇಕಾಗುತ್ತದೆ, "ಈತನಿಗೆ ಕೊಡು, ಆತನಿಗೆ ಕೊಡು" ಎಂದು. ಆತ ಹಾಗೆ ಮಾಡ ದಿದ್ದರೆ ಕೋಪ ಬರುವ ಸಂಭವ. ಹಣ ಹತ್ತಿರವಿರುವುದೇ ಕೆಟ್ಟದ್ದು. ನೀನು ಹಾಗೆಲ್ಲ ಮಾಡಲು ಹೋಗಬೇಡ' ಅಂತ. ಕನ್ನಡಿಯ ಹತ್ತಿರ ಸಾಮಾನು ಇದ್ದರೆ, ಅವು ಪ್ರತಿಬಿಂಬಿತವಾಗವೆ?"

ಮಾರ್ವಾಡಿ ಭಕ್ತ: "ಮಹಾರಾಜ್, ಗಂಗೆಯಲ್ಲಿ ಶರೀರವನ್ನು ತ್ಯಾಗಮಾಡಿದರೆ ತಾನೆ ಮುಕ್ತಿ?"

ಪರಮಹಂಸರು: ಜ್ಞಾನ ದೊರೆತರೇ ಮುಕ್ತಿ. ಜ್ಞಾನಿ ಗಂಗಾ ದಡದಲ್ಲಿಯೆ ಆಗಲಿ, ಹೆಣದ ಗುಂಡಿಯಲ್ಲಿಯೆ ಆಗಲಿ ಮತ್ತೆಲ್ಲಿಯೆ ಆಗಲಿ ಸತ್ತರೂ ಆತನಿಗೆ ಮುಕ್ತಿ. ಆದರೆ ಅಜ್ಞಾನಿಗಳಿಗೆ ಮಾತ್ರ ಗಂಗಾ ದಡ."

ಮಾರ್ವಾಡಿ ಭಕ್ತ: "ಮಹಾರಾಜ್, ಕಾಶಿಯಲ್ಲಿ ಮುಕ್ತಿ ದೊರಕಲು ಕಾರಣವೇನು?"

ಪರಮಹಂಸರು: "ಕಾಶಿಯಲ್ಲಿ ಮೃತ್ಯು ಉಂಟಾದರೆ ಶಿವ ಪ್ರತ್ಯಕ್ಷನಾಗುತ್ತಾನೆ. ಆಗ ಶಿವ ಹೇಳುತ್ತಾನೆ: 'ಈ ನನ್ನ ಸಾಕಾರ ರೂಪು ಇದೆಯಲ್ಲ ಇದು ಮಾಯಿಕವಾದುದು; ಭಕ್ತರಿಗಾಗಿ ನಾನು ಈ ರೂಪವನ್ನು ಧರಿಸುತ್ತೇನೆ; ನೋಡಿಲ್ಲಿ, ನಾನು ಅಖಂಡಸಚ್ಚಿದಾನಂದದಲ್ಲಿ ಲಯವಾಗಿಬಿಡುವುದ!' ಎಂದು. ಬಳಿಕ ಆ ರೂಪು ಅಂತರ್ಧಾನವಾಗಿಬಿಡುತ್ತದೆ.

"ಪುರಾಣದ ದೃಷ್ಟಿಯಿಂದ ವ್ಯಕ್ತಿ ಚಂಡಾಲನಾದರೂ ಆತನ ಹೃದಯದಲ್ಲಿ ಭಗವದ್ಭಕ್ತಿ ಉಂಟಾದರೆ, ಆತನಿಗೆ ಮುಕ್ತಿ. ಅದರ ದೃಷ್ಟಿಯಿಂದ ಬರಿಯ ನಾಮೋಚ್ಚಾರಣೆಯಿಂದಲೇ ಮುಕ್ತಿ. ಯಾಗ, ಯಜ್ಞ, ತಂತ್ರ, ಮಂತ್ರ ಇವೆಲ್ಲ ಬೇಕಾಗಿಲ್ಲ.

"ಆದರೆ, ವೇದೋಕ್ತಿ ಪ್ರತ್ಯೇಕವಾದ್ದು. ಬ್ರಾಹ್ಮಣನಾಗದಿದ್ದರೆ ಮುಕ್ತಿ ದೊರಕದು. ಮತ್ತೆ, ಮಂತ್ರೋಚ್ಚಾರಣೆಯನ್ನು ಸರಿಯಾಗಿ ಮಾಡದೆ ಇದ್ದರೆ ಪೂಜೆ ಸಾಫಲ್ಯವಾಗದು. ಯಾಗ, ಯಜ್ಞ, ಮಂತ್ರ, ತಂತ್ರ ಇವುಗಳನ್ನೆಲ್ಲ ವಿಧಿಗನುಸಾರವಾಗಿ ಮಾಡಬೇಕು.

"ಈ ಕಲಿಯುಗದಲ್ಲಿ ವೇದೋಕ್ತ ಕರ್ಮಗಳನ್ನು ಮಾಡಲು ಸಮಯವೆಲ್ಲಿ? ಅದಕ್ಕಾಗಿಯೆ ಈ ಯುಗಕ್ಕೆ ನಾರದೀಯ ಭಕ್ತಿ. ಕರ್ಮಯೋಗ ಬಹಳ ಕಠಿನ. ನಿಷ್ಕಾಮ ಭಾವನೆಯಿಂದ ಮಾಡಲಾಗದಿದ್ದರೆ ಅದು ಬಂಧನಕ್ಕೆ ಕಾರಣವಾಗುತ್ತದೆ. ಜೊತೆಗೆ ಈ ಶರೀರ ಅನ್ನಗತಪ್ರಾಣ ಬೇರೆ. ವಿಧಿನಿಯಮಗಳಿಗನುಸಾರ ಕರ್ಮ ಮಾಡಲು ಸಮಯವಿಲ್ಲ. ದಶಮೂಲಿಕೆಗಳ ಕಷಾಯ ಕುಡಿಯಲು ಹೋದರೆ, ರೋಗಿ ಈ ಕಡೆ ಯಮಪುರಿಗೆ ಟಿಕೆಟ್ಟು ತೆಗೆದುಕೊಳ್ಳಬೇಕಾಗುತ್ತದೆ! ಅದಕ್ಕಾಗಿ ಈಗಿನವರಿಗೆ 'ಫೀವರ್ ಮಿಕ್ಸ್ಚರ್'.

"ನಾರದೀಯ ಭಕ್ತಿ—ಭಗವಂತನ ನಾಮಗುಣಕೀರ್ತನೆ ಮಾಡುವುದು. ಕಲಿಯುಗಕ್ಕೆ ಸೂಕ್ತವಾದ್ದು ಕರ್ಮಯೋಗವಲ್ಲ, ಭಕ್ತಿಯೋಗ. ಆಸಕ್ತಿ ಇರುವವರೆಗೆ ಸಂಸಾರದಲ್ಲಿ ಕೆಲಸಮಾಡಿ. ಆದರೆ ಅದರ ಜೊತೆಗೆ

ಭಕ್ತಿಯೂ ಅನುರಾಗವೂ ಬೇಕು. ಆತನ ನಾಮಗುಣಕೀರ್ತನೆ ಮಾಡಿದರೆ ಕರ್ಮಕ್ಷಯವಾಗುತ್ತದೆ.

"ಚಿರಕಾಲವೂ ಕರ್ಮಗಳನ್ನು ಮಾಡುತ್ತಿರಬೇಕಾದ ಆವಶ್ಯಕತೆಯೇನು ಇರೋದಿಲ್ಲ. ಆತನ ಅಡಿದಾವರೆಗಳಲ್ಲಿ ಶುದ್ಧ ಭಕ್ತಿ ಪ್ರೇಮ ಬೆಳೆದಷ್ಟು ಕರ್ಮಗಳು ಕಡಮೆ ಕಡಮೆಯಾಗುತ್ತ ಬರುತ್ತವೆ. ಆತನನ್ನು ಪಡೆದುಕೊಂಡರೆ ಅವು ತಾವಾಗಿಯೆ ನಿಂತುಹೋಗುತ್ತವೆ. ಸೊಸೆ ಗರ್ಭಿಣಿಯಾದರೆ, ಅತ್ತೆ ಆಕೆಯ ಕೆಲಸಗಳನ್ನು ಕಡಮೆ ಮಾಡುತ್ತಾಳೆ. ಹೆತ್ತ ನಂತರ ಆಕೆ ಯಾವ ಕೆಲಸವನ್ನೂ ಮಾಡಬೇಕಾಗಿರೋದಿಲ್ಲ."

ದಕ್ಷಿಣೇಶ್ವರಗ್ರಾಮದಿಂದ ಕೆಲವು ಯುವಕರು ಬಂದು ಪರಮಹಂಸರಿಗೆ ಪ್ರಣಾಮಮಾಡಿದರು. ಈಗ ಅಪರಾಹ್ನ ನಾಲ್ಕು. ಅವರು ಕೊಠಡಿಯಲ್ಲಿ ಒಂದು ಕಡೆ ಕುಳಿತುಕೊಂಡು ಪರಮಹಂಸರಿಗೆ ಪ್ರಶ್ನೆ ಹಾಕುತ್ತಿದ್ದಾರೆ.

ಒಬ್ಬ ಯುವಕ: "ಮಹಾಶಯರೆ, ಯಾವುದಕ್ಕೆ ಜ್ಞಾನ ಎಂದು ಹೇಳುತ್ತಾರೆ?"

ಪರಮಹಂಸರು: "ಭಗವಂತನೊಬ್ಬನೆ ಸತ್ ಉಳಿದುದೆಲ್ಲ ಅಸತ್ ಎಂದು ಅರಿತುಕೊಳ್ಳೋಕೆ ಜ್ಞಾನ ಎಂದು ಹೆಸರು. ಯಾವುದು ಸತ್ತೊ ಅದರ ಇನ್ನೊಂದು ಹೆಸರು 'ಬ್ರಹ್ಮ' ಎಂದು; ಅದರ ಮತ್ತೊಂದು ಹೆಸರು 'ಕಾಲ' ಎಂದು. ಅದಕ್ಕಾಗಿಯೆ ಜನರು ಹೇಳುತ್ತಾರೆ, 'ಅಣ್ಣಗಳಿರಾ! ಕಾಲಗರ್ಭದಲ್ಲಿ ಎಷ್ಟೊಂದು ಬಂದು ಎಷ್ಟೊಂದು ಹೋದುವು!' ಎಂದು.

"ಯಾರು ಕಾಳಿಯೊ ಆಕೆ ಕಾಲನೊಡನೆ ರಮಿಸುತ್ತಾಳೆ. ಆಕೆಯೇ ಆದ್ಯಾಶಕ್ತಿ. ಕಾಲನಿಗು ಕಾಳಿಗು, ಬ್ರಹ್ಮನಿಗು ಶಕ್ತಿಗು ಅಭೇದ.

"ಆ ಸತ್‌ಸ್ವರೂಪಬ್ರಹ್ಮ ನಿತ್ಯ; ತ್ರಿಕಾಲದಲ್ಲಿಯೂ ಇದಾನೆ; ಆದಿ ಅಂತ ರಹಿತ. ಆತನನ್ನ ಬಾಯಿಂದ ವರ್ಣಿಸಲು ಆಗೋದಿಲ್ಲ. ಇಷ್ಟುಮಾತ್ರ ಹೇಳಬಹುದು,—ಅವನು ಚೈತನ್ಯಸ್ವರೂಪ ಆನಂದಸ್ವರೂಪ ಎಂದು.

"ಜಗತ್ತು ಅನಿತ್ಯ, ಆತ ನಿತ್ಯ. ಜಗತ್ತು ಇಂದ್ರಜಾಲಸ್ವರೂಪದ್ದು. ಐಂದ್ರಜಾಲಿಕನೆ ಸತ್ಯ, ಅವನ ಇಂದ್ರಜಾಲ ಅನಿತ್ಯ."

ಯುವಕ: "ಜಗತ್ತು ಮಾಯೆ—ಇಂದ್ರಜಾಲ. ಈ ಮಾಯೆ ಏಕೆ ಹೋಗೋದಿಲ್ಲ?"

ಪರಮಹಂಸರು: "ಸಂಸ್ಕಾರದೋಷದಿಂದ ಮಾಯೆ ಹೋಗುವುದಿಲ್ಲ. ಅನೇಕ ಜನ್ಮಗಳಿಂದ ಈ ಮಾಯಾಸಂಸಾರದಲ್ಲಿಯೆ ಇದ್ದು ಇದ್ದು ಮಾಯೆ ಸತ್ಯ ಎಂಬ ಬೋಧೆ ಬಂದುಬಿಟ್ಟಿದೆ.

"ಸಂಸ್ಕಾರಕ್ಕೆ ಎಷ್ಟು ಬಲ ಎಂಬುದನ್ನು ಕೇಳು. ಒಬ್ಬ ರಾಜಕುಮಾರ ತನ್ನ ಹಿಂದಿನ ಜನ್ಮದಲ್ಲಿ ಅಗಸನ ಮನೆಯಲ್ಲಿ ಜನ್ಮವೆತ್ತಿದ್ದ. ಈ ಜನ್ಮದಲ್ಲಿ ರಾಜಕುಮಾರನಾಗಿ ಹುಟ್ಟಿ ಆಟವಾಡುವಾಗ ತನ್ನ ಸಂಗಾತಿಗಳಿಗೆ ಹೇಳ್ತಾನೆ: 'ಈ ಆಟಗಳನ್ನೆಲ್ಲ ಒಂದು ಕಡೆ ಕಟ್ಟಿಡಿ. ನಾನು ಬಗ್ಗಿ ನಿಂತುಕೊಳ್ಳುತ್ತೇನೆ. ನೀವು ನನ್ನ ಬೆನ್ನಿನ ಮೇಲೆ 'ಉಸ್' 'ಉಸ್' ಅಂತ ಬಟ್ಟೆ ಒಗೆಯಿರಿ' ಎಂದು.

"ಇಲ್ಲಿಗೆ ಅನೇಕ ಯುವಕರು ಬರುತ್ತಾರೆ. ಆದರೆ ಎಲ್ಲೋ ಕೆಲವರು ಮಾತ್ರ ಭಗವಂತನಿಗಾಗಿ ವ್ಯಾಕುಲರಾಗಿದ್ದಾರೆ. ಅವರು ಒಳ್ಳೆ ಸಂಸ್ಕಾರ ಪಡೆದುಕೊಂಡು ಬಂದಿದ್ದಾರೆ. ವಿವಾಹ ಎಂಬ ಪದವನ್ನು ಕೇಳಿದರೆಯೆ ಅವರಿಗೆ ಮೈಯೆಲ್ಲಾ ನಡುಗುತ್ತದೆ, ಅದರ ವಿಷಯವಾಗಿ ಯೋಚಿಸುವುದೇ ಇಲ್ಲ. ನಿರಂಜನ ಬಾಲ್ಯದಿಂದಲೆ ಹೇಳುತ್ತಿದ್ದಾನೆ, 'ವಿವಾಹವಾಗೋದಿಲ್ಲ' ಎಂದು.

"ಬಹಳ ದಿವಸ ಆಯ್ತು—ಬಹಶಃ ಇಪ್ಪತ್ತು ವರ್ಷದ ಹಿಂದೆ ಅಂತ ಕಾಣುತ್ತೆ—ವರಾಹನಗರದಿಂದ ಇಬ್ಬರು ಯುವಕರು ಇಲ್ಲಿಗೆ ಬರುತ್ತಿದ್ದರು. ಒಬ್ಬನ ಹೆಸರು ಗೋವಿಂದಪಾಲ ಇನ್ನೊಬ್ಬನ ಹೆಸರು ಗೋಪಾಲಸೇನ ಎಂದು. ಅವರಿಬ್ಬರಿಗೂ ಬಾಲ್ಯದಿಂದಲೆ ಭಗವಂತನ ಕಡೆ ಮನಸ್ಸು. ವಿವಾಹದ ಮಾತು ಎತ್ತಿದರೆಯೆ ಭಯದಿಂದ ಸುಮ್ಮನೆ ಕಂಪಿಸಲಾರಂಭಿಸುತ್ತಿದ್ದರು. ಗೋಪಾಲನಿಗೆ ಭಾವಸಮಾಧಿ ಬರುತ್ತಿತ್ತು. ಇಲಿ ಬೆಕ್ಕನ್ನು ನೋಡಿ ಹೆದರಿ ಹಿಮ್ಮೆಟ್ಟುವಂತೆ ವಿಷಯಾಸಕ್ತರನ್ನು ಕಂಡರೆ ಹೆದರಿ ಹಿಮ್ಮೆಟ್ಟುತ್ತಿದ್ದ. ದೇವೇಂದ್ರನಾಥ ಠಾಕೂರನ ಮಕ್ಕಳು ಇಲ್ಲಿನ ತೋಟದಲ್ಲಿ ಸುಮ್ಮನೆ ಸುತ್ತಾಡಲು ಬಂದಿದ್ದಾಗ, ಅವರೊಡನೆ ಮಾತುಕತೆಗಳಾಡುವ ಸಂಭವ ಬರಬಹುದೆಂದು ಭಾವಿಸಿ ಮಥುರ ಬಾಬುವಿನ ಬಂಗಲೆಯ ಒಂದು ಕೊಠಡಿಯಲ್ಲಿ ಬಾಗಿಲು ಹಾಕಿಕೊಂಡು ಇದ್ದುಬಿಟ್ಟ.

"ಗೋಪಾಲನಿಗೆ ಪಂಚವಟಿಯಲ್ಲಿ ಭಾವಸಮಾಧಿ ಬಂದಿತ್ತು. ಆತ ಆ ಅವಸ್ಥೆಯಲ್ಲಿಯೆ ನನ್ನ ಕಾಲುಗಳನ್ನು ಹಿಡಿದು ಹೇಳಿದ: "ನಾನು

ಹೋಗಿ ಬರುತ್ತೇನೆ. ನಾನು ಈ ಜಗತ್ತಿನಲ್ಲಿ ಇನ್ನು ಮೇಲೆ ಜೀವ ಹಿಡಿದು ಕೊಂಡು ಇರಲಾರೆ—ನೀವು ಬರಬೇಕಾದರೆ ಇನ್ನೂ ಬಹಳ ಕಾಲ ಬೇಕು—ನಾನು ಹೋಗಿ ಬರುತ್ತೇನೆ' ಎಂದು. ನಾನೂ ಭಾವಾವಸ್ಥೆಯಲ್ಲಿಯೆ ಹೇಳಿದೆ: 'ಮತ್ತೆ ಬಾ' ಎಂದು. ಆತ ಹೇಳಿದ: 'ಒಳ್ಳೇದು, ಆಗಲಿ' ಅಂತ. ಕೆಲವು ದಿವಸಗಳನಂತರ ಗೋವಿಂದ ಬಂದು ನನ್ನನ್ನು ನೋಡಿದ. ನಾನು ಕೇಳಿದೆ, 'ಗೋಪಾಲನೆಲ್ಲಿ?' ಎಂದು. ಆತ ಹೇಳಿದ: 'ಗೋಪಾಲ [ಶರೀರ ತ್ಯಾಗಮಾಡಿ] ಹೊರಟೇ ಹೋದ' ಅಂತ.

"ಉಳಿದ ಯುವಕರ ದೃಷ್ಟಿ ಯಾವ ಕಡೆ. ದುಡ್ಡು ಸಂಪಾದನೆ ಹೇಗೆ ಮಾಡೋದು — ಮನೆ — ಸಾರೋಟು — ಪೋಷಾಕು,— ಬಳಿಕ ವಿವಾಹ—ಇದಕ್ಕಾಗಿ ಹಗಲು ಇರಳು ಚಿಂತಿಸೋದು. ಮದುವೆ ಮಾಡಿ ಕೊಳ್ಳಬೇಕಾಗಿಬಂದಾಗ, ಮೊದಲೇ ಹುಡುಗಿಯ ವಿಶಿಷ್ಟವನ್ನೆಲ್ಲ ಕೇಳಿ ತಿಳಿದುಕೊಳ್ಳಬೇಕು ! ಜೊತೆಗೆ ಹುಡುಗಿ ಸುಂದರಿಯೊ ಅಲ್ಲವೊ ಎಂಬುದನ್ನ ತಾವೇ ಖುದ್ದಾಗಿ ಕಣ್ಣಿನಿಂದ ನೋಡಿಕೊಳ್ಳಬೇಕು !

"ಒಬ್ಬ ನನ್ನನ್ನು ಬಹಳವಾಗಿ ನಿಂದಿಸುತ್ತಾನೆ. ಆತನ ಖಂಡನೆ, 'ನಾನು ಯುವಕ ಪ್ರೇಮಿ' ಎಂದು. ಯಾರಿಗೆ ಸುಸಂಸ್ಕಾರವಿದೆಯೊ, ಶುದ್ಧ ಆತ್ಮರೊ, ಭಗವಂತನಿಗಾಗಿ ವ್ಯಾಕುಲರಾಗಿದಾರೊ, ಹಣ ಕಾಸು ಶರೀರಸುಖ ಇವುಗಳ ಕಡೆ ಮನಸ್ಸಿಲ್ಲವೊ ಅಂಥವರನ್ನು ನಾನು ಪ್ರೀತಿ ಸುತ್ತೇನೆ.

"ಯಾರು ವಿವಾಹವಾಗಿದ್ದಾರೊ ಅವರು ಭಗವದ್ಭಕ್ತರಾಗಿದ್ದರೆ ಅವರು ಸಂಸಾರದಲ್ಲಿ ಆಸಕ್ತರಾಗಿ ಇರೋದಿಲ್ಲ. ಹಿರಾನಂದ ವಿವಾಹ ವಾಗಿದ್ದಾನೆ. ಆಗಿದ್ದರೇನು ? ಆತ ಅದರಲ್ಲಿ ವಿಶೇಷವಾಗಿ ಏನು ಆಸಕ್ತ ನಾಗೋದಿಲ್ಲ."

ಹಿರಾನಂದ ಸಿಂಧೂದೇಶ ವಾಸಿ. ಬಿ. ಎ. ಪಾಸುಮಾಡಿದಾನೆ. ಆತ ಶ್ರೀ ರಾಮಕೃಷ್ಣರನ್ನು ಕಲ್ಕತ್ತೆಯಲ್ಲಿ ಒಮ್ಮೆ ಸಂಧಿಸಿದ. ಅಂದಿನಿಂದ ಆತ ಪರಮಹಂಸರ ಭಕ್ತನಾಗಿದ್ದಾನೆ.

ಮಣಿಲಾಲ, ಶಿವಪುರದ ಬ್ರಾಹ್ಮಭಕ್ತ, ಮಾರ್‍ವಾಡಿ ಭಕ್ತರು ಮತ್ತು ಯುವಕರು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡರು.

ಸಾಯಂಕಾಲವಾಗಿದೆ. ದಕ್ಷಿಣದ ವರಾಂಡಾದಲ್ಲಿ ಮತ್ತು ಪಶ್ಚಿಮದ ಗುಂಡು ವರಾಂಡಾದಲ್ಲಿ ದೀಪ ಹಚ್ಚಿದೆ. ಪರಮಹಸಂರ ಕೊಠಡಿಗೆ

ಧೂಪಹಾಕಿ ದೀಪವನ್ನು ಹಚ್ಚಿದೆ. ಪರಮಹಂಸರು ತಮ್ಮ ಸ್ವಸ್ಥಾನದಲ್ಲಿ ಕುಳಿತು ದೇವಿಯ ಹೆಸರನ್ನು ಜಪಿಸುತ್ತ ಆಕೆಯ ಧ್ಯಾನದಲ್ಲಿ ತೊಡಗಿದ್ದಾರೆ. ಧ್ಯಾನ ಮುಗಿಸಿದನಂತರ ಪರಮಹಂಸರು ಭಕ್ತರೊಡನೆ ಮಾತುಕತೆಗಳನ್ನಾಡುತ್ತಿದ್ದಾರೆ. ದೇವಾಲಯಗಳಲ್ಲಿ ಆರತಿ ಆರಂಭವಾಗಲು ಇನ್ನೂ ಸ್ವಲ್ಪ ಸಮಯ ಹೋಗಬೇಕು.

ಪರಮಹಂಸರು ಮಾಸ್ಟರಿಗೆ: "ಯಾರು ನಿಶೆ ದಿನ ಆತನ ಚಿಂತನೆಯಲ್ಲಿಯೆ ಮಗ್ನರಾಗಿರುವರೊ ಅವರಿಗೆ ಸಂಧ್ಯಾದಿಗಳ ಅವಶ್ಯಕತೆಯೇನಿದೆ?

ಎಲ್ಲಿವರೆಗೂ ನಾನು ಕಾಳಿಯ ನೆನೆಯುತಿರುವೆನೊ ನಿತ್ಯವೂ,
ಅಲ್ಲಿವರೆಗೂ ಜಪತಪಾದಿಯ ಕಟ್ಟುಕಟ್ಟಲೆ ಏತಕೆ?
ದಾನಧರ್ಮವೊ, ನಿಯಮವ್ರತವೊ— ಎಲ್ಲವೂ ನನಗೇತಕೆ?
ಬ್ರಹ್ಮಮಯಿಯಾ ಪಾದಪದ್ಮವೆ ಸರ್ವವೂ ಎನುವಾತಗೆ!

"ಸಂಧ್ಯೆ ಗಾಯತ್ರಿಯಲ್ಲಿ ಲಯವಾಗುತ್ತದೆ. ಗಾಯತ್ರಿ ಓಂಕಾರದಲ್ಲಿ ಲಯವಾಗುತ್ತದೆ. ಓಂಕಾರವನ್ನು ಒಮ್ಮೆ ಪಠಿಸುವುದರಿಂದಲೆ ಸಮಾಧಿ ಉಂಟಾದರೆ ಆಗ ಅದು ಪೂರ್ಣ ಹಣ್ಣು.

"ಹೃಷೀಕೇಶದ ಒಬ್ಬ ಸಾಧುವಿಗೆ ಬೆಳಗಾಗೆದ್ದು ಒಂದು ದೊಡ್ಡ ಜಲಪಾತದ ಹತ್ತಿರ ಹೋಗಿ ನಿಂತುಕೊಳ್ಳುವ ಅಭ್ಯಾಸ. ಇಡೀ ದಿವಸವೆಲ್ಲ ಅದನ್ನು ನೋಡುತ್ತ ಭಗವಂತನಿಗೆ ಹೇಳುತ್ತಿದ್ದ: 'ಆಹ! ಬಹಳ ಚೆನ್ನಾಗಿದೆ ನಿನ್ನ ಸೃಷ್ಟಿ! ಬಹಳ ಮನೋಹರವಾಗಿದೆ ನಿನ್ನ ಸೃಷ್ಟಿ! ಎಷ್ಟೊಂದು ಆಶ್ಚರ್ಯಕರವಾಗಿದೆ ನಿನ್ನ ಸೃಷ್ಟಿ!' ಎಂದು. ಆತ ಬೇರೆ ಯಾವ ಜಪವನ್ನೂ ಮಾಡುತ್ತಿರಲಿಲ್ಲ. ರಾತ್ರಿಯಾದನಂತರ ಕುಟೀರಕ್ಕೆ ಹಿಂದಿರುಗಿಬಿಡುತ್ತಿದ್ದ.

"ಭಗವಂತ ನಿರಾಕಾರನೆ ಅಥವಾ ಸಾಕಾರನೆ ಎಂಬ ವಿಷಯಗಳನ್ನು ತಲೆಗೆ ಹಚ್ಚಿಕೊಳ್ಳುವ ಆವಶ್ಯಕತೆ ತಾನೆ ಏನಿದೆ? ನಿರ್ಜನ ಪ್ರದೇಶದಲ್ಲಿ ಏಕಾಂತವಾಗಿ ವ್ಯಾಕುಲ ಹೃದಯದಿಂದ ಅಳುತ್ತ ಅಳುತ್ತ ಆತನಿಗೆ: 'ಹೇ ಭಗವಂತನೆ! ನೀನು ಯಾವ ರೀತಿಯಾಗಿ ಇರುವೆಯೊ ಅದನ್ನು ನನಗೆ ತೋರಿಸು' ಎಂದು ಪ್ರಾರ್ಥಿಸಿದರೆ ಮುಗಿಯಿತು.

"ಭಗವಂತ ಒಳಗೂ ಹೊರಗೂ ಇದಾನೆ. ಅಂತರ್ಯದಲ್ಲಿ ಆತನೆ ಇದಾನೆ. ಅದಕ್ಕಾಗಿಯೆ ವೇದ ಹೇಳುತ್ತದೆ, 'ತತ್ತ್ವಮಸಿ— ಆತನೇ ನೀನು' ಎಂದು. ಹೊರಗೂ ಆತನೆ. ಮಾಯೆಯಿಂದ ನಾನಾ ರೂಪುಗಳಾಗಿ ಕಾಣಿಸಿಕೊಳ್ಳುತ್ತಿದ್ದಾನೆ; ಆದರೆ ವಸ್ತುತಃ ಆತನೆ ಇದ್ದಾನೆ. ಅದಕ್ಕಾಗಿಯೆ

ಆತನ ಎಲ್ಲಾ ನಾಮರೂಪಗಳನ್ನು ವರ್ಣಿಸುವುದಕ್ಕೆ ಮುನ್ನ ಹೇಳಬೇಕು, 'ಓಂ ತತ್ ಸತ್' ಎಂದು.

"ದರ್ಶನ ಮಾಡಿದರೆ ಒಂದು ತರ, ಶಾಸ್ತ್ರ ಓದಿದರೆ ಇನ್ನೊಂದು ತರ. ಶಾಸ್ತ್ರದಿಂದ ಆಭಾಸ ಮಾತ್ರ ದೊರೆಯುತ್ತದೆ. ಅದಕ್ಕಾಗಿಯೆ ಅನೇಕ ಶಾಸ್ತ್ರಗಳನ್ನು ಓದುವುದರಿಂದ ಯಾವ ಪ್ರಯೋಜನವೂ ದೊರಕದು ಅದಕ್ಕೆ ಬದಲು ನಿರ್ಜನ ಪ್ರದೇಶದಲ್ಲಿ ಆತನನ್ನು ಕರೆಯುವುದು ಮೇಲು.

"ಗೀತೆಯನ್ನು ಪೂರ್ಣವಾಗಿ ಓದದೆ ಇದ್ದರೂ ಸರಿಯೆ, ಹತ್ತು ಸಲ 'ಗೀತ ಗೀತ' ಎಂದು ಉಚ್ಚರಿಸಿದರೆ ಅದು ಏನಾಗುವುದೊ ಅದೇ ಗೀತೆಯ ಸಾರ. ಅಂದರೆ 'ತ್ಯಾಗಿ' ಎಂದು; 'ಹೇ ಜೀವ, ಎಲ್ಲವನ್ನೂ ತ್ಯಜಿಸಿ ಭಗವಂತನನ್ನು ಆರಾಧಿಸು' ಎಂದು. ಇದೇ ಗೀತೆಯ ಸಾರವಿಷಯ."

ಪರಮಹಂಸರು ಭಗವತಿ ಕಾಳಿಯ ಆರತಿಯನ್ನು ನೋಡುತ್ತಿದ್ದ ಹಾಗೆ ಭಾವಾವಿಷ್ಟರಾಗಿಬಿಟ್ಟಿದ್ದಾರೆ; ಭಗವತಿಗೆ ಸಾಷ್ಟಾಂಗ ಪ್ರಣಾಮ ಮಾಡಲೂ ಅವರಿಗೆ ಆಗುತ್ತಿಲ್ಲ. ಬಹಳ ಎಚ್ಚರಿಕೆಯಿಂದ ಕಾಲಿಡುತ್ತ ಭಕ್ತರೊಡನೆ ತಮ್ಮ ಕೊಠಡಿಗೆ ಹಿಂದಿರುಗಿ ಬಂದು ತಮ್ಮ ಸ್ವಸ್ಥಾನದಲ್ಲಿ ಕುಳಿತುಕೊಂಡಿದ್ದಾರೆ. ಈಗಲೂ ಭಾವವಿಷ್ಟರಾಗಿಯೇ ಇದಾರೆ. ಆ ಅವಸ್ಥೆಯಲ್ಲಿಯೆ ಭಕ್ತರೊಡನೆ ಮಾತುಕತೆಗಳನ್ನಾಡುತ್ತಿದ್ದಾರೆ.

ಮುಖರ್ಜಿಯ ಸಂಬಂಧಿ ಹರಿಗೆ ಸುಮಾರು ಇಪ್ಪತ್ತು ವಯಸ್ಸು. ಮದುವೆ ಆಗಿದೆ. ಸದ್ಯದಲ್ಲಿ ಮುಖರ್ಜಿಯ ಮನೆಯಲ್ಲಿಯೆ ಇದ್ದಾನೆ. ಕೆಲಸಕ್ಕಾಗಿ ಹುಡುಕುತ್ತಿದ್ದಾನೆ. ಪರಮಹಂಸರನ್ನು ವಿಶೇಷವಾದ ಶ್ರದ್ಧಾಭಕ್ತಿಯಿಂದ ನೋಡುತ್ತಿದ್ದಾನೆ.

ಪರಮಹಂಸರು ಭಾವಾವಿಷ್ಟರಾಗಿಯೆ ಹರಿಗೆ: "ನೀನು ನಿನ್ನ ತಾಯ ಅನುಮತಿ ಪಡೆದು ಮಂತ್ರೋಪದೇಶ ತೆಗೆದುಕೊ. (ಪ್ರಿಯ ಮುಖರ್ಜಿಗೆ ಹರಿಯ ಸಂಬಂಧವಾಗಿ) ಈತನಿಗೆ ವಾಗ್ದಾನಮಾಡಿಯೂ ಕೊಡಲಾಗಲಿಲ್ಲ. ಮಂತ್ರವನ್ನು ನಾನು ಕೊಡುತ್ತಿಲ್ಲ. ಈಗ ನೀನು ಯಾವ ಜಪಧ್ಯಾನವನ್ನು ಮಾಡುತ್ತಿದ್ದಿಯೊ ಅದನ್ನೇ ಮುಂದುವರಿಸು."

ಪ್ರಿಯ ಮುಖರ್ಜಿ: "ಆಗಲಿ, ಹಾಗೆಯೆ ಮಾಡುತ್ತೇನೆ."

ಶ್ರೀ ರಾಮಕೃಷ್ಣರು: "ನಾನು ಈ ಅವಸ್ಥೆಯಲ್ಲಿ ಹೇಳುತ್ತಿದ್ದೇನೆ— ಮಾತಿನಲ್ಲಿ ವಿಶ್ವಾಸವಿಡು. ನೋಡು, ಇಲ್ಲಿ ಠಕ್ಕು ಮೋಸ ಏನೂ ಇಲ್ಲ. ನಾನು ಭಾವದಲ್ಲಿ ಹೇಳಿದ್ದೇನೆ, 'ಹೇ ತಾಯೆ! ಯಾರು ಇಲ್ಲಿಗೆ ಆಂತರಿಕ

ಶ್ರದ್ಧಾ ಭಕ್ತಿಯಿಂದ ಬರುವರೊ ಅವರು ಮುಕ್ತರಾಗಲಿ' ಎಂದು.''

ಸಿಂಥಿಯ ಕವಿರಾಜ ಮಹೇಂದ್ರ ವರಾಂಡದಲ್ಲಿ ಕುಳಿತಿದ್ದಾನೆ. ರಾಮಲಾಲ ಹಾಜರಾ ಮೊದಲಾದವರೊಡನೆ ಮಾತುಕತೆಗಳಾಡುತ್ತಿದ್ದಾನೆ. ಪರಮಹಂಸರು ತಮ್ಮ ಆಸನದಲ್ಲಿ ಕುಳಿತು ಕೂಗುತ್ತಿದ್ದಾರೆ, ''ಮಹೇಂದ್ರ! ಮಹೇಂದ್ರ!'' ಎಂದು. ಮಾಸ್ಟರ್ ಒಡನೆಯೆ ಹೋಗಿ ಕವಿರಾಜನನ್ನು ಒಳಕ್ಕೆ ಕರೆದುಕೊಂಡು ಬಂದ.

ಪರಮಹಂಸರು ಕವಿರಾಜನಿಗೆ: ''ಕುಳಿತುಕೊ—ಒಂದು ಸ್ವಲ್ಪ ಕೇಳು.''

ಕವಿರಾಜ ಒಂದು ಸ್ವಲ್ಪ ಪೆಚ್ಚಾದವನಾಗಿ ಕುಳಿತುಕೊಂಡು ಪರಮಹಂಸರ ಅಮೃತೋಪಮ ಮಾತುಕತೆಗಳನ್ನು ಕೇಳಲಾರಂಭಿಸಿದ.

ಪರಮಹಂಸರು ಭಕ್ತರಿಗೆ: ''ಆತನಿಗೆ ಹಲವಾರು ವಿಧದಿಂದ ಸೇವೆ ಸಲ್ಲಿಸಬಹುದು. ಪ್ರೇಮಿಕ ಭಕ್ತ ಆತನೊಡನೆ ವಿವಿಧ ರೂಪದಲ್ಲಿ ಆನಂದ ಪಡುತ್ತಾನೆ. ಕೆಲವು ವೇಳೆ ಯೋಚಿಸುತ್ತಾನೆ, 'ನೀನು ತಾವರೆ, ನಾನು ದುಂಬಿ' ಎಂದು. ಇನ್ನು ಕೆಲವು ವೇಳೆ ಭಾವಿಸುತ್ತಾನೆ, 'ನೀನು ಸಚ್ಚಿದಾನಂದ ಸಾಗರ, ನಾನು ಅದರಲ್ಲಿನ ಮೀನು' ಎಂದು. ಮತ್ತೆ ಕೆಲವುವೇಳೆ ಯೋಚಿಸುತ್ತಾನೆ, 'ನಾನು ನಿನ್ನ ನರ್ತಕಿ' ಎಂದು. ಆತನ ಮುಂದೆ ಹಾಡುತ್ತಾನೆ ನರ್ತಿಸುತ್ತಾನೆ. ಕೆಲವುವೇಳೆ ಸಖೀಭಾವ ದಾಸೀಭಾವ. ಕೆಲವುವೇಳೆ ವಾತ್ಸಲ್ಯಭಾವ—ಯಶೋದೆಯಂತೆ. ಕೆಲವು ವೇಳೆ ಪತೀಭಾವ—ಮಧುರಭಾವ—ಗೋಪಿಯರಂತೆ.

''ಬಲರಾಮ ಕೆಲವುವೇಳೆ ಸಖನ ಭಾವದಲ್ಲಿ ಇರುತ್ತಿದ್ದ; ಕೆಲವು ವೇಳೆ ಯೋಚಿಸುತ್ತಿದ್ದ, 'ನಾನು ಕೃಷ್ಣನ ಛತ್ರಿ ಮತ್ತು ಪೀಠ ಆಗಿದ್ದೇನೆ' ಎಂದು. ವಿವಿಧ ರೀತಿಯಿಂದ ಆತನ ಸೇವೆ ಮಾಡುತ್ತಿದ್ದ.''

ಪರಮಹಂಸರು ಪ್ರೇಮಿಕಭಕ್ತನ ವರ್ಣನೆ ಮಾಡುತ್ತ ತಮ್ಮ ಸ್ವಂತ ಅವಸ್ಥೆಯ ಸಂಬಂಧವಾಗಿ ಸೂಚನೆಯನ್ನು ಕೊಡುತ್ತಿದ್ದಾರೇನು ?

ಬಳಿಕ ಅವರು ಚೈತನ್ಯದೇವನ ಮೂರು ಅವಸ್ಥೆಗಳನ್ನು ವರ್ಣಿಸಿದರು.

ಪರಮಹಂಸರು: ''ಚೈತನ್ಯದೇವನಿಗೆ ಮೂರು ಅವಸ್ಥೆಗಳು. ಅಂತರ್ದಶಾವಸ್ಥೆಯಲ್ಲಿ ಸಮಾಧಿಸ್ಥನಾಗುತ್ತಿದ್ದ—ಬಾಹ್ಯಜ್ಞಾನ ಶೂನ್ಯನಾಗುತ್ತಿದ್ದ. ಅರ್ಧಬಾಹ್ಯದಶೆಯಲ್ಲಿ ಭಾವಾವಿಷ್ಟನಾಗಿ ನರ್ತಿಸಲು ಸಾಧ್ಯವಾಗುತ್ತಿತ್ತೆ ವಿನಾ ಮಾತುಕತೆಗಳನ್ನಾಡಲು ಆಗುತ್ತಿರಲಿಲ್ಲ. ಬಾಹ್ಯ

ದಶೆಯಲ್ಲಿ ಸಂಕೀರ್ತನೆ ಮಾಡುತ್ತಿದ್ದ.

(ಭಕ್ತರಿಗೆ) "ನೀವು ಈ ಮಾತುಕತೆಗಳನ್ನೆಲ್ಲ ಕೇಳುತ್ತಿದ್ದೀರಿ. ಅರಗಿಸಿಕೊಳ್ಳಲು ಪ್ರಯತ್ನಿಸಿ. ಪ್ರಾಪಂಚಿಕರು ಸಾಧುಗಳ ಹತ್ತಿರಕ್ಕೆ ಬಂದಾಗ ತಮ್ಮ ಪ್ರಾಪಂಚಿಕ ಭಾವನೆ, ವಿಷಯ ಚಿಂತನೆ ಇವನ್ನೆಲ್ಲ ತಮ್ಮ ಹೃದಯದಲ್ಲಿ ಬಚ್ಚಿಟ್ಟು ಕುಳಿತಿರುತ್ತಾರೆ. ಅಲ್ಲಿಂದ ಹೊರಟು ಹೋದ'ನಂತರ ಅವನ್ನೆಲ್ಲ ಹೊರಕ್ಕೆ ತರುತ್ತಾರೆ. ಪಾರಿವಾಳ ಬಟಾಣಿ ತಿನ್ನುತ್ತದೆ. ನೋಡೋ'ಕೆ ಅದು ಅದನ್ನೆಲ್ಲ ಅರಗಿಸಿಕೊಂಡು ಬಿಟ್ಟಂತೆ ಕಾಣುತ್ತದೆ. ಆದರೆ ಅದು ತನ್ನ ಗಂಟಲಿನೊಳಗೇ ಅದನ್ನೆಲ್ಲ ಇಟ್ಟು ಕೊಂಡಿರುತ್ತದೆ. ಅಲ್ಲಿ ಬಟಾಣಿ ಗಿಜಿಗಿಜಿ ಅನ್ನುತ್ತದೆ.

"ಸಂಧ್ಯಾ ಸಮಯದಲ್ಲಿ ಎಲ್ಲಾ ಕೆಲಸಗಳನ್ನು ಬಿಟ್ಟು ಆತನನ್ನ ಕರೆಯಬೇಕು. ಕತ್ತಲೆ ಆತನ ನೆನಪು ತರುತ್ತದೆ. ಆಗ: 'ಈಗ ತಾನೆ ಎಲ್ಲಾ ಕಾಣಿಸಿಕೊಳ್ಳುತ್ತಿತ್ತು; ಈ ರೀತಿಯಾಗಿ ಮಾಡಿಬಿಟ್ಟವನು ಯಾರು!' ಎಂಬ ಭಾವನೆ ಬರುತ್ತದೆ. ನೋಡಿ, ಮುಸಲ್ಮಾನರು ಎಲ್ಲಾ ಕೆಲಸಗಳನ್ನ ಬಿಟ್ಟು ಸಕಾಲಕ್ಕೆ ನಮಾಜು ಮಾಡುತ್ತಾರೆ."

ಪ್ರಿಯ ಮುಖರ್ಜಿ: "ಹೌದು, ನಿಜ. ಜಪಮಾಡುವುದು ಒಳ್ಳೆ ಯದೇನು?"

ಶ್ರೀರಾಮಕೃಷ್ಣರು: "ಹೌದು, ಜಪದಿಂದ ಆತನನ್ನು ಪಡೆಯ ಬಹುದು. ನಿರ್ಜನ ಪ್ರದೇಶದಲ್ಲಿ ಏಕಾಂತವಾಗಿ ಆತನ ನಾಮವನ್ನು ಜಪ ಮಾಡುತ್ತ ಜಪಮಾಡುತ್ತ ಇದ್ದರೆ ಆತನ ಕೃಪೆ ದೊರಕುತ್ತದೆ. ಬಳಿಕ ಆತನ ದರ್ಶನ. ಉದಾಹರಣೆಗಾಗಿ, ಒಂದು ದೊಡ್ಡ ಮರದ ದಿಮ್ಮಿಯನ್ನು ನೀರಿ ನಲ್ಲಿ ಮುಳುಗಿಸಿ ಅದನ್ನು ಸರಪಣಿಯಿಂದ ದಡಕ್ಕೆ ಕಟ್ಟಿರುವುದನ್ನು ತೆಗೆದು ಕೊಳ್ಳಿ: ಆ ಸರಪಣಿಯ ಕೊಂಡಿಯಾದ ಮೇಲೆ ಕೊಂಡಿಯನ್ನು ಹಿಡಿದು ಮುಂದುವರಿದರೆ ಕೊನೆಗೆ ಹೋಗಿ ಆ ಮರದ ದಿಮ್ಮಿಯನ್ನು ಮುಟ್ಟಲು ಆಗುವಂತೆ ಇದು.

"ಪೂಜೆಗಿಂತ ಮೇಲಾದುದು ಜಪ, ಜಪಕ್ಕಿಂತ ಮೇಲಾದುದು ಧ್ಯಾನ, ಧ್ಯಾನಕ್ಕಿಂತ ಮೇಲಾದುದು ಭಾವ, ಭಾವಕ್ಕಿಂತ ಮೇಲಾದುದು ಮಹಾಭಾವ ಪ್ರೇಮ. ಚೈತನ್ಯದೇವನಿಗೆ ಪ್ರೇಮ ಉಂಟಾಗಿತ್ತು. ಪ್ರೇಮ ಉಂಟಾದರೆ ಭಗವಂತನನ್ನ ಕಟ್ಟಿ ಇಡಲು ಒಂದು ಹಗ್ಗ ದೊರಕಿ ದಂತೆಯೆ."

ಹಾಜರಾ ಬಂದು ಕುಳಿತಿದ್ದಾನೆ.

ಪರಮಹಂಸರು ಹಾಜರಾನಿಗೆ: "ಭಗವಂತನಲ್ಲಿ ಪ್ರೇಮ ಉಂಟಾದರೆ, ಅದಕ್ಕೆ ರಾಗಭಕ್ತಿ ಎಂದು ಹೆಸರು. ವೈಧೀಭಕ್ತಿ ಬರೋ'ಕೆ ಎಷ್ಟು ಸಮಯ ಬೇಕೋ ಹೋಗೋಕೂ ಅಷ್ಟೇ ಸಮಯ. ರಾಗಭಕ್ತಿ ಸ್ವಯಂಭೂ ಲಿಂಗದ ಹಾಗೆ. ಅದರ ಮೂಲವನ್ನು ಹುಡುಕಿ ತೆಗೆಯಲಾಗುವುದಿಲ್ಲ. ಅದರ ಮೂಲ ಕಾಶಿಯುವರೆಗೂ ಹಬ್ಬಿದೆ. ರಾಗಭಕ್ತಿ ಅವತಾರ ಪುರುಷರಿಗೆ ಮತ್ತು ಅವರ ಸಾಂಗೋಪಾಂಗಿಗಳಿಗೆ ಮಾತ್ರ ಉಂಟಾಗುತ್ತದೆ."

ಹಾಜಾರಾ: "ಆಹ!"

ಪರಮಹಂಸರು: "ನೀನು ಒಂದು ದಿವಸ ಜಪಮಾಡುತ್ತಿದ್ದಾಗ ನಾನು 'ಆ ದೇವದಾರು ತೋಪಿನಿಂದ ಬಂದು ಭಗವತಿಗೆ ಹೇಳಿದೆ: 'ತಾಯಿ! ಇದೆಂಥ ಹೀನಬುದ್ಧಿ, ಮಾಲಾ ಹಿಡಿದು ಜಪಿಸುತ್ತಿದ್ದಾನೆ! ಇಲ್ಲಿಗೆ ಯಾರು ಬರುತ್ತಾರೊ ಅವರಿಗೆ ಒಡನೆಯೆ ಚೈತನ್ಯ ಉಂಟಾಗಿಬಿಡುತ್ತದೆ. ಜಪಮಾಲೆ ಹಿಡಿದು ಜಪವನ್ನು ಅಷ್ಟೊಂದಾಗಿ ಏನು ಮಾಡಬೇಕಾಗಿರೊದಿಲ್ಲವಲ್ಲ!' ಎಂದು. ನೀನು ಕಲ್ಕತ್ತಕ್ಕೆ ಹೋಗಿ ನೋಡು ಸಹಸ್ರ ಸಹಸ್ರ ಜನ ಜಪಮಾಲೆ ತಿರುಗಿಸೋದನ್ನ—ವೇಶ್ಯೆಯರೂ ಕೂಡ!

(ಮಾಸ್ಟರಿಗೆ) "ನೀನು ಗಾಡಿ ಮಾಡಿಕೊಂಡು ನಾರಾ'ಣನನ್ನು ಕರೆದುಕೊಂಡು ಬಾ. (ಮುಖರ್ಜಿಯ ಕಡೆ ತಿರುಗಿ) ಈತನಿಗೆ ನಾನು ಹೇಳಿದೇನೆ—ನಾರಾ'ಣನ ವಿಷಯವನ್ನು. ಆತ ಬಂದರೆ ಏನನ್ನಾದರು ತಿನ್ನಸುತ್ತೇನೆ. ಅಂಥವರಿಗೆ ತಿನ್ನಿಸುವುದರಲ್ಲಿ ಬಹಳ ಅರ್ಥವಿದೆ."

**೪ ನೆ ಅಕ್ಟೋಬರ್ ೧೮೮೪, ಆಶ್ವೀಜ ಶುಕ್ಲ ಪೂರ್ಣಿಮೆ, ಶನಿವಾರ.**

ಶ್ರೀರಾಮಕೃಷ್ಣ ಪರಮಹಂಸರು ಕೇಶವಸೇನನ ಹಿರಿಯಣ್ಣ ನವೀನ ಸೇನನ ಕಲ್ಕತ್ತದ ಮನೆಗೆ ಬಂದಿದ್ದಾರೆ. ಕಳೆದ ಗುರುವಾರ ಕೇಶವ ಸೇನನ ತಾಯಿ ಪರಮಹಂಸರಿಗೆ ಆಹ್ವಾನವಿತ್ತು ಅಲ್ಲಿಗೆ ಬರಬೇಕೆಂದು ಬಹುವಾಗಿ ಹೇಳಿ ಹೋಗಿದ್ದಳು.

ಹೊರಗಿನ ಕೊಠಡಿಯ ಮೇಲಿರುವ ಕೊಠಡಿಗೆ ಹೋಗಿ ಪರಮಹಂಸರು ಕುಳಿತಿದ್ದಾರೆ. ಅವರೊಡನೆ ಬಾಬುರಾಮ, ಕಿಶೋರಿ ಮತ್ತು ಒಬ್ಬಿಬ್ಬರು ಭಕ್ತರು ಬಂದಿದ್ದಾರೆ. ಕೇಶವಸೇನನ ಅಣ್ಣನ ಮಕ್ಕಳು ನಂದಲಾಲ ಮೊದಲಾದವರು ಕೇಶವಸೇನನ ತಾಯಿ ಮತ್ತು ಆಕೆಯ

ಬಂಧುಗಳು ಪರಮಹಂಸರಿಗೆ ಕೈಂಕರ್ಯ ಮಾಡುತ್ತಿದ್ದಾರೆ. ಆ ಕೊಠಡಿಯಲ್ಲೇ ಸಂಕೀರ್ತನೆ ಆರಂಭವಾಯಿತು. ಅಕ್ಕಪಕ್ಕದಿಂದ ಅನೇಕ ಹೆಂಗಸರು ಬಂದಿದ್ದಾರೆ. ಮಾಸ್ಟರೂ ಅಲ್ಲಿಗೆ ಬಂದಿದ್ದಾನೆ. ಆತ ಕೆಳಗಿನ ಅಂತಸ್ತಿನ ಕೊಠಡಿಯಲ್ಲಿಯೆ ಕುಳಿತು ಕೀರ್ತನೆ ಕೇಳುತ್ತಿದ್ದಾನೆ.

ಪರಮಹಂಸರು ಬ್ರಾಹ್ಮಭಕ್ತರಿಗೆ: "ಸಂಸಾರ ಅನಿತ್ಯ; ಸರ್ವದಾ ಮೃತ್ಯುವನ್ನು ಸ್ಮರಿಸಿಕೊಳ್ಳುವುದು ಆವಶ್ಯಕ."

ಪರಮಹಂಸರು ಹಾಡುತ್ತಿದ್ದಾರೆ:

ಎತ್ತ ಹೋದರು ಸುತ್ತಲೆಲ್ಲೂ
ನನಗೆ ಯಾರೂ ಇಲ್ಲ ಜಗದೊಳು
ಎಂಬುದನು ನೀ ನೆನಪಿಡು.
ಮಾಯೆಯೊಡ್ಡಿದ ಬಲೆಯೊಳಿದ್ದರು
ತಾಯಪಾದದಿ ಮನವಿಡು.

ಒಂದು ದಿನವೋ, ಎರಡು ದಿನವೋ,
'ಸ್ವಾಮಿ, ಬುದ್ಧೀ'— ಎಂದು ಜನಗಳು
ಗೌರವದಿ ಬಳಿ ಸುಳಿವರು!
ಮೃತ್ಯು ಬಂದೆಳೆವಾಗ ನಿನ್ನನು
ಎಲ್ಲರೂ ಹಿಂದುಳಿವರು!

ಯಾವ ಪ್ರಿಯತಮೆಯೊಲವಿಗಾಗಿಯೆ
ಹಗಲು ಇರುಳೂ ಜೀವ ತೇದೆಯೊ,
ಬಾರಳವಳೂ ಜೊತೆಯೊಳು!
ನೀನು ಸಾಯಲು, ನಿನ್ನ ಶವವನು
ಅಶುಭವೆಂದೇ ತಿಳಿವಳು!

ಪರಮಹಂಸರು ಭಕ್ತರಿಗೆ ಹೇಳುತ್ತಿದ್ದಾರೆ. "ಆಳಕ್ಕೆ ಮುಳುಗಿ. ಮೇಲೆಯೆ ತೇಲಿದರೆ ಏನಾದೀತು? ಎಲ್ಲವನ್ನು ತ್ಯಜಿಸಿ ಕೆಲವು ದಿವಸಗಳ ಮಟ್ಟಿಗೆ ನಿರ್ಜನ ಪ್ರದೇಶದಲ್ಲಿದ್ದು ಹದಿನಾರಾಣೆ ಮನಸ್ಸಿಟ್ಟು ಆತನನ್ನು ಕರೆಯಿರಿ."

ಪರಮಹಂಸರು ಹಾಡುತ್ತಿದ್ದಾರೆ:

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ

ಮುಳುಗು ಮುಳುಗು ಒಳಗೇ.
ತಲಾತಲ ಪಾತಾಲಕೆ ಮುಳುಗಲು
ಮುತ್ತುರತುನಗಳ ನೀ ತರುವೆ

ಹುಡುಕು ಹುಡುಕು ನಿನ್ನೆದೆಯೊಳಗನು
ಬೃಂದಾವನವಿದೆ ಅಲ್ಲಿ!
ಗೋಪೀಜನ ಮನಮೋಹನವಲ್ಲಭ
ನಿತ್ಯ ಲೀಲೆಯಲಿ ಇಹನಲ್ಲಿ!

ಅರಿವಿನ ಹಣತೆಯ ಹಚ್ಚಿಕೊಳ್ಳೋ ಒಳಗೆ,
ನಿರಂತರವು ಅದು ಬೆಳಗುತಿರಲಿ.
ಘಟ್ಟನೆಲದ ಮೇಲಾರೊ ದೋಣಿಯನು
ಹುಟ್ಟುಹಾಕುತ ಇಂತು ನಡೆಸುವವರು?
'ಅವನೆ ನಿನ್ನ ಗುರು' ಎನುವ ಕಬೀರ.
ಆತನ ಪಾದದಿ ಮನವನು ನಿಲಿಸೊ.

ಪರಮಹಂಸರು ಬ್ರಾಹ್ಮಭಕ್ತರಿಗೆ, 'ನೀನೆನ್ನ ಸರ್ವಸ್ವ' ಎಂಬ ಹಾಡನ್ನು ಹಾಡುವಂತೆ ಹೇಳಿದರು.

ಬ್ರಾಹ್ಮಭಕ್ತರು ಹಾಡುತ್ತಿದ್ದಾರೆ:

ನೀನೆನ್ನ ಸರ್ವಸ್ವ, ನನ್ನ ಜೀವದ ಜೀವ, ನನ್ನೊಳಗಿನೊಳಗು.
ನಿನ್ನಹೊರತೆನಗಾರು ನನ್ನವರು ಇಲ್ಲವೋ ಮೂಲೋಕದೊಳಗೂ!
ಶಾಂತಿ, ಸುಖ, ಆಸೆ, ಆಶ್ರಯ, ಮತ್ತೆ ಸಂಪದೈಶ್ವರ್ಯ ನೀನೆ.
ಜ್ಞಾನಾದಿ ಬುದ್ಧಿಬಲ ನೀನೆ.

ಮನೆ ನೀನೆ, ಮಠ ನೀನೆ, ಆತ್ಮೀಯ ಬಂಧು ಪರಿವಾರ ನೀನೆ.
ನನ್ನಿಂದುಮುಂದುಗಳು ನೀನೆ, ಸ್ವರ್ಗಮೋಕ್ಷವು ನೀನೆ;
ವೇದಾದಿ ಶಾಸ್ತ್ರಗಳು ನೀನೆ, ಪರಮ ಗುರು ನೀನೆ.
ಅನಂತ ಸುಖದ ನೆಲೆವೀಡು ನೀನೆ.

ಪಥ ನೀನೆ, ಗುರಿ ನೀನೆ, ತಾಯ್ತಂದೆಗಳು ನೀನೆ.
ಸೃಷ್ಟಿಕರ್ತನು ನೀನೆ, ಪ್ರಳಯರೂಪಿಯು ನೀನೆ,
ಜೀವನದ ಜಲಧಿಯಲಿ ನನ್ನ ದೋಣಿಯ ನಡೆಪ
ಅಂಬಿಗನು ನೀನೆ!

ಈಗ ಪರಮಹಂಸರು ತಾವೇ ಹಾಡಲಾರಂಭಿಸಿದಾರೆ:

ಅಂದು—

ನಂದಗೋಕುಲದಲ್ಲಿ ಗೋಪಾಲನಾದಂದು,
ಶ್ರೀ ಯಶೋದೆಯು ನಿನ್ನ, 'ಓ ನನ್ನ ಮುದ್ದುಮಣಿ'
ಎಂದು ಮುದ್ದಿಸಿದಂದು,
ನೀನಾವರೂಪದಲಿ ನರ್ತಿಸಿದೆಯೋ ಅಂಥ
ರೂಪವನು ಮತ್ತೊಮ್ಮೆ ಧರಿಸು ಕಾಳಿ!
ಕರವಾಳವನು ಬಿಸುಟು ಕರದಿ ಕೊಳಲನು ಧರಿಸು!
ರುಂಡಮಾಲೆಯನೆಸೆದು ವನಮಾಲೆಯನು ಧರಿಸು!
ಬಲರಾಮನೇ ಶಿವನೆಂದು ತಿಳಿದು ನರ್ತಿಸು ಮತ್ತೆ
ನನ್ನ ಮುಂದೆ!
ಆ ಕೊಳಲ ನುಡಿಸಮ್ಮ—

ಹಿಂದೆ ಬೃಂದಾವನದಿ, ಗೋಪಿಯರ ಮರುಳುಗೊಳಿಸಿದ ಮಧುರ
ವೇಣುವನು ನುಡಿಸು!
ಗೋವುಗಳ ಮೈಮರೆಯಿಸಿದ ಮೋಹನದ ಮುರಳಿಯ ನುಡಿಸು!
ಜುಳಜುಳನೆ ಹರಿವ ಯಮುನೆಯ ಹೊನಲ
ಹೆಪ್ಪುಗಟ್ಟಿಸಿದಂಥ ಗಾರುಡಿಯ ಕೊಳಲ ನುಡಿಸು!

ನಡುಹಗಲ ಬಿರುಬಿಸಿಲೊಳರಸಿಬಂದ ಯಶೋದೆ,
"ಬಾ ನನ್ನ ಗೋಪಾಲ ಹಾಲಕೆನೆಬೆಣ್ಣೆಗಳ ತಂದಿರುವೆ ನಿನಗಾಗಿ"
ಎಂದು ಬಳಿಯಲಿ ಬಂದು ಕುರುಳ ನೇವರಿಸುವಳು.
ಕೆದರಿರುವ ತಲೆನವಿರ ಬಾಚಿಸಿಂಗರಿಸುವಳು!

ಅಂದು, ನೀ ತ್ರಿಭಂಗಿಯಲಿ ನಿಂತು,
ಶ್ರೀಧಾಮ ನೊಡನೆಂತು
ಕಾಲಗೆಜ್ಜೆಯು ಝುಣಿರು ಝುಣಿರೆನುವಂತೆ ನರ್ತಿಸಿದೆಯೋ, ಅಂತು
ಮತ್ತೊಮ್ಮೆ ಕುಣಿಯಮ್ಮ, ನಿನ್ನನೂಪುರ ರವಕೆ
ಭಕ್ತಗೋಪಿಯರೆದೆಯು ಪುಳಕಗೊಳುವಂತೆ!

ಈ ಹಾಡನ್ನು ಕೇಳಿ ಕೇಶವಸೇನ ಇದೇ ಮಟ್ಟಿನ ಬೇರೊಂದು ಹಾಡನ್ನು ರಚಿಸಿದ್ದಾನೆ.

ಬ್ರಾಹ್ಮಭಕ್ತರು ತಾಳ ಮೇಳ ವಾದ್ಯಗಳೊಡನೆ ಆ ಹಾಡನ್ನು ಹಾಡಲು ಆರಂಭಿಸಿದಾರೆ:

ಮಾನವ ಸಂತಾನದೆಡೆಗೆ ಎನಿತು ಕರುಣೆ ನಿನ್ನದು !
ಅದ ನೆನೆಯಲು ಕಂಬನಿಯೇ ಕೋಡಿಯೊಡೆದು ಹರಿವುದು !—

ಹುಟ್ಟಿದಂದಿನಿಂದ ನಾನು ನಿನ್ನಾಣೆಯ ಮೀರಿದೆ,
ಆದರು ನೀ ಅಕ್ಕರೆಯಲಿ ತಾಯ್ತನವನೆ ತೋರಿದೆ !
ಮಧುರವಚನದಿಂದ ಮನವ ಸಂತೈಸುತ ನಲಿಸಿದೆ.
ಇದ ನೆನೆದರೆ ಕಂಬನಿಯೇ ಕೋಡಿಯೊಡೆದು ಹರಿದಿದೆ !

ನಿನ್ನೊಲವಿನ ಹೊರೆಯ ಹೊತ್ತು ನಾನು ಬಹಳ ಬಳಲಿದೆ.
ಇನ್ನು ಮುಂದೆ ಹೊರಲಾರದೆ ಎದೆಯು ನರಳಿ ಕೊರಗಿದೆ.
ನಿನ್ನೊಲವಿನ ಕರಸ್ಪರ್ಶದಿ ಈ ನೋವನು ನೀಗಿಸು ;
ನಿನ್ನ ಪಾದಪದ್ಮದಲ್ಲಿ ನನ್ನನಿರಿಸಿ ಪಾಲಿಸು !

ಬ್ರಾಹ್ಮಭಕ್ತರು ಈಗ ಇನ್ನೊಂದು ಹಾಡನ್ನು ಹಾಡಲು ಆರಂಭಿಸಿದಾರೆ:

ನನ್ನ ಹೃದಯದ ದಿವ್ಯ ಸೂತ್ರಧಾರಿಣಿ ನೀನು ;
ತೊಡೆಯ ತೊಟ್ಟಿಲೊಳಿಟ್ಟು ಪಾಲಿಸಿರುವೆ !
ನಾನಪಾತ್ರನು ತಾಯಿ, ನಿನ್ನ ಒಲವಿನ ಕೃಪೆಗೆ ;
ಆದರೂ ಎನಿತೊಂದು ಕರುಣೆ ನಿನಗೆ !

ನನ್ನಮೇಲಿನಿತೊಂದು ವ್ಯಾಮೋಹವಿದೆ ನಿನಗೆ !
ನೇವರಿಸಿ ಕೈ ಹಿಡಿದು ನಡೆಸುತಿರುವೆ !
ಮೃದುನುಡಿಗಳಮೃತವನು ಕಿವಿಗಳಿಗೆ ಕರೆಯುತ್ತ
ದಿವ್ಯ ಮಧುವನು ನನಗೆ ಕುಡಿಸುತಿರುವೆ !

ದೋಷವರಸದ ಹಿರಿಯ ತಾಯ್ತನದ ಮೂರ್ತಿ ನೀ ;
ಕಷ್ಟಸಂಕಟದಿಂದ ರಕ್ಷಿಸಿರುವೆ !
ನಾನು ನಿನ್ನವನೆಂಬ, ನೀನು ನನ್ನವಳೆಂಬ—
ಹಿರಿಯ ತತ್ತ್ವವನೀಗ ಅರಿಯುತಿರುವೆ !

ನಾನಿನ್ನು ಆ ತಾಯ, ಹಾಲುಂಡು ಪುಷ್ಟಿಯಲಿ,
ಅವಳ ಆಣತಿಯಂತೆ ಋಜು ಪಥದಲಿ,

ನಡೆನಡೆದು ಭಕ್ತಿಯಲಿ, "ಜಯ್ ಬ್ರಹ್ಮಮಯಿ" ಎಂದು
ಹಾಡಿ ಕುಣಿಯುವೆನಿನ್ನು ದಿನದಿನದಲಿ!

ಪರಮಹಂಸರು ಈಗ ಹರಿನಾಮವನ್ನು ಮತ್ತು ಗೌರಾಂಗನ ನಾಮವನ್ನು ಹಾಡುತ್ತ ಬ್ರಾಹ್ಮಭಕ್ತರೊಡನೆ ನರ್ತಿಸುತ್ತಿದ್ದಾರೆ.

**೩ನೆ ಅಕ್ಟೋಬರ್ ೧೮೮೪, ಆಶ್ವೀಜ ಕೃಷ್ಣ ಪಾಡ್ಯಮಿ, ಭಾನುವಾರ.**

ಶ್ರೀರಾಮಕೃಷ್ಣರು ಮಧ್ಯಾಹ್ನದ ಊಟವಾದ ಮೇಲೆ ತಮ್ಮ ಕೊಠಡಿಯಲ್ಲಿ ಭಕ್ತರೊಡನೆ ಕುಳಿತುಕೊಂಡಿದಾರೆ. ಅವರ ಹತ್ತಿರವೆ ನೆಲದಮೇಲೆ ಮಾಸ್ಟರ್ ಕುಳಿತಿದ್ದಾನೆ. ಹಾಜರಾ, ಹಿರಿಯ ಕಾಳಿ, ಬಾಬುರಾಮ, ರಾಮಲಾಲ, ಮುಖರ್ಜಿಯ ಬಂಧು ಹರಿ ಇವರೆ ಮೊದಲಾದವರಲ್ಲಿ ಕೆಲವರು ನಿಂತಿದಾರೆ ಕೆಲವರು ಕುಳಿತಿದಾರೆ. ನೆನ್ನೆ ಪರಮಹಂಸರು ಕೇಶವಸೇನನ ತಾಯಿಯ ಇಚ್ಛೆಯಂತೆ ಅವರ ಕಲ್ಕತ್ತದ ಮನೆಗೆ ಹೋಗಿ ಬಹಳವಾಗಿ ಹಾಡಿ ಆಕೆಯನ್ನು ತೃಪ್ತಿಪಡಿಸಿದ್ದರು.

ಪರಮಹಂಸರು ಹಾಜರಾನಿಗೆ: "ನಾನು ಕೇಶವಸೇನನ ಆ ಮನೆಯಲ್ಲಿ—ನವೀನಸೇನನ ಮನೆಯಲ್ಲಿ—ನೆನ್ನೆ ಚೆನ್ನಾಗಿ ಕತ್ತರಿಸಿದೆ; ಒಳ್ಳೆ ಭಕ್ತಿಯಿಂದ ಬಡಿಸಿದರು."

ಹಾಜರಾ ಮಹಾಶಯ ಬಹಳ ಕಾಲದಿಂದ ಪರಮಹಂಸರೊಡನೆಯೆ ಇದಾನೆ. "ನಾನು ಒಬ್ಬ ಜ್ಞಾನಿ" ಎಂಬ ಅಹಂಕಾರ ಆತನಿಗೆ ಉಂಟು. ಪರಮಹಂಸರನ್ನು ಜನರೆದುರಿಗೆ ನಿಂದಿಸುವ ಅಭ್ಯಾಸ ಆತನಿಗೊಂದು ಸ್ವಲ್ಪ ಇದೆ. ಪರಮಹಂಸರ ಕೊಠಡಿಯ ವರಾಂಡದಲ್ಲಿ ಒಮ್ಮೊಮ್ಮೆ ಕುಳಿತು ಏಕಾಗ್ರಚಿತ್ತದಿಂದ ಜಪಮಾಡುತ್ತಾನೆ. ಚೈತನ್ಯದೇವ "ಆಧುನಿಕ ಅವತಾರ" ಎಂಬುದಾಗಿ ಆತನನ್ನು ಒಂದು ವಿಧವಾದ ನಿಕೃಷ್ಟ ದೃಷ್ಟಿಯಿಂದ ನೋಡುತ್ತಾನೆ. ಆತ ಹೇಳುತ್ತಾನೆ: "ಭಗವಂತ ಶುದ್ಧ ಭಕ್ತಿಯೊಂದಷ್ಟನ್ನೆ ಅಲ್ಲ, ಐಶ್ವರ್ಯವನ್ನೂ ಕೊಡುತ್ತಾನೆ; ಆತನಿಗೆ ಐಶ್ವರ್ಯದ ಅಭಾವವೇನಿಲ್ಲ. ಆತನನ್ನು ಪಡೆದುಕೊಂಡರೆ ಅಷ್ಟಸಿದ್ಧಿ ಮೊದಲಾದುವೂ ದೊರೆಯುತ್ತವೆ" ಎಂದು. ಮನೆಕಟ್ಟಲು ಒಂದು ಸ್ವಲ್ಪ ಸಾಲಮಾಡಿದಾನೆ—ಬಹುಶಃ ಒಂದು ಸಾವಿರ. ಅದನ್ನು ತೀರಿಸುವುದೆಂತು ಎಂದು ಹಂಬಲಿಸುತ್ತಿದ್ದಾನೆ.

ಹಿರಿಯ ಕಾಳಿಗೆ ಒಂದು ಆಫೀಸಿನಲ್ಲಿ ಕೆಲಸ. ಸಾಮಾನ್ಯ ತಲಬು ಬರುತ್ತದೆ. ಮನೆಯಲ್ಲಿ ಹೆಂಡತಿ ಮಕ್ಕಳು ಮರಿ ಇದ್ದಾರೆ. ಆತನಿಗೆ

ಪರಮಹಂಸರ ಮೇಲೆ ವಿಶೇಷವಾದ ಭಕ್ತಿ. ಆಗಾಗ ಮತ್ತೆ ಕೆಲವು ವೇಳೆ ಆಫೀಸಿಗೆ ಹೋಗದೆಯೂ ಪರಮಹಂಸರ ದರ್ಶನ ಮಾಡಿ ಹೋಗುತ್ತಾನೆ.

ಹಿರಿಯ ಕಾಳಿ ಹಾಜರಾನಿಗೆ: "ನೀನು ಒರೆಗಲ್ಲಿನೋಪಾದಿಯಲ್ಲಿ ಯಾರದು ಅಪ್ಪಟ ಚಿನ್ನ ಯಾರದು ಬೆರಕೆ ಚಿನ್ನ ಎಂದು ಜನರನ್ನು ಪರೀಕ್ಷಿಸುತ್ತಾ ಕಾಲಕಳೆಯುತ್ತಿದ್ದೀಯೆ. ಪರರನ್ನು ನೀನು ಅಷ್ಟೊಂದು ಏಕೆ ನಿಂದಿಸುತ್ತಿದ್ದೀಯೆ?"

ಹಾಜರಾ: "ಹೇಳಬೇಕೆನಿಸುವುದನ್ನೆಲ್ಲ ನಾನು ಇವರ (ಶ್ರೀರಾಮಕೃಷ್ಣರ) ಎದುರಿಗೆ ತಾನೆ ಹೇಳುತ್ತಿರೋದು?"

ಶ್ರೀರಾಮಕೃಷ್ಣರು: "ಅದೇನೊ ದಿಟ."

ಹಾಜರಾ ತತ್ತ್ವಜ್ಞಾನ ಎಂಬುದು ಏನು ಎಂಬುದನ್ನು ವಿವರಿಸಲು ಆರಂಭಿಸಿದಾನೆ.

ಹಾಜರಾ: "ತತ್ತ್ವಜ್ಞಾನವೆಂದರೆ,— ಚತುರ್ವಿಂಶತಿ ತತ್ತ್ವಗಳಿವೆಯಲ್ಲ, ಅದನ್ನ ತಿಳಿದುಕೊಳ್ಳುವುದು"

ಒಬ್ಬ ಭಕ್ತ: "ಚತುರ್ವಿಂಶತಿ ತತ್ತ್ವಗಳು ಯಾವು ಯಾವುವು?"

ಹಾಜರಾ: "ಪಂಚ ಭೂತಗಳು, ಆರು ರಿಪುಗಳು, ಐದು ಜ್ಞಾನೇಂದ್ರಿಯಗಳು— ಐದು ಕರ್ಮೇಂದ್ರಿಯಗಳು ಇವೇ ಮೊದಲಾದುವು."

ಮಾಸ್ಟರ್ ನಗುತ್ತ ಪರಮಹಂಸರಿಗೆ: "ಈತ ಹೇಳುತ್ತಾನೆ, 'ಆರು ರಿಪುಗಳು ಚತುರ್ವಿಂಶತಿ ತತ್ತ್ವಗಳ ಅಂಗ' ಎಂದು!"

ಪರಮಹಂಸರು ನಗುತ್ತ: "ನೋಡಿ! ನೀವೇ ನೋಡಿ ಅವನ ತತ್ತ್ವಜ್ಞಾನದ ವ್ಯಾಖ್ಯಾನವನ್ನ! 'ತತ್ತ್ವಜ್ಞಾನ' ಅಂದರೆ 'ಆತ್ಮಜ್ಞಾನ!' 'ತತ್' ಅಂದರೆ ಪರಮಾತ್ಮ, 'ತ್ವಮ್' ಅಂದರೆ ಜೀವಾತ್ಮ. ಜೀವಾತ್ಮ ಪರಮಾತ್ಮ ಒಂದೇ ಎಂಬ ಜ್ಞಾನೋದಯವಾದರೆ ಆಗ ತತ್ತ್ವಜ್ಞಾನ ದೊರೆಯುತ್ತದೆ."

ಕೆಲವು ನಿಮಿಷಗಳಾದನಂತರ ಹಾಜರಾ ಕೊಠಡಿಯಿಂದ ಎದ್ದು ಹೋಗಿ ವರಾಂಡದಲ್ಲಿ ಕುಳಿತುಕೊಂಡ.

ಪರಮಹಂಸರು ಮಾಸ್ಟರ್ ಮೊದಲಾದವರಿಗೆ: "ಆತ ಸುಮ್ಮನೆ ತರ್ಕಮಾಡುತ್ತಾನೆ. ಈ ಕ್ಷಣ ಆತನ ಅರಿವಿಗೆ ಬಂದರೂ ಮರುಕ್ಷಣ ಆತ ಎಂದಿನ ಮೂರ್ತಿಯೆ!

"ದೊಡ್ಡಮೀನು ದಾರವನ್ನು ಜೋರಾಗಿ ಎಳೆಯುತ್ತಿರುವುದನ್ನು ನೋಡಿ ಗಾಳ ಹಾಕಿರುವವ ದಾರವನ್ನು ಸಡಿಲಬಿಡುತ್ತಾನೆ. ಇಲ್ಲದಿದ್ದರೆ ಅದು ದಾರವನ್ನು ಕಿತ್ತುಬಿಡುತ್ತದೆ ಮತ್ತು ಹಿಡಿದಿರುವವನನ್ನ ನೀರಿಗೆ ಎಳೆದು ಬಿಡುತ್ತದೆ. ಅದಕ್ಕಾಗಿಯೆ ನಾನು ಆತನೊಡನೆ ವಿಶೇಷವಾಗಿ ಏನೂ ಮಾತನಾಡಲು ಹೋಗೋದಿಲ್ಲ.

(ಮಾಸ್ಟರಿಗೆ) "ಹಾಜರಾ ಹೇಳುತ್ತಾನೆ, 'ಬ್ರಾಹ್ಮಣ ಶರೀರ ನಲ್ಲದೆ ಇದ್ದರೆ ಮುಕ್ತಿ ದೊರಕದು' ಅಂತ. ನಾನು ಹೇಳಿದೆ, 'ಅದು ಹೇಗೆ! ಭಕ್ತಿಯ ಮೂಲಕವೂ ಮುಕ್ತಿ ದೊರೆಯುತ್ತದೆ. ಶಬರಿ ಒಬ್ಬ ಬೇಡನ ಮಗಳು. ಈಕೆ, ರೂಹಿದಾಸ ಮತ್ತು ಇನ್ನೂ ಕೆಲವರು ಶೂದ್ರರೆ. ಇವರಿಗೆಲ್ಲ ಭಕ್ತಿಯ ಮೂಲಕವೆ ಮುಕ್ತಿ ದೊರಕಿದೆ' ಎಂದು. ಆದರೂ ಹಾಜರಾ ಎಂದಿನಂತೆಯೇ ಹೇಳುತ್ತಾನೆ.

"ಆತ ಧ್ರುವನನ್ನೇನೊ ಒಪ್ಪಿಕೊಳ್ಳುತ್ತಾನೆ, ಆದರೆ ಪ್ರಹ್ಲಾದನ ಸ್ಥಾನವನ್ನು ಆತನಿಗೆ ಕೊಡುತ್ತಿಲ್ಲ. ಒಮ್ಮೆ ಲಾಟು ಹೇಳಿದ, 'ಎಳೆಯ ವಯಸ್ಸಿನಿಂದಲೆ ಆತನದು ಬಹಳ ವಿಶೇಷವಾದ ಅನುರಾಗ' ಎಂದು. ಆಗ ಅವನು ಬಾಯಿ ಮುಚ್ಚಿದ.

"ನಾನು ಹೇಳುತ್ತೇನೆ, 'ಕಾಮನಾಶೂನ್ಯಭಕ್ತಿ ಅಹೇತುಕಭಕ್ತಿ—ಇದಕ್ಕಿಂತ ಮೇಲಾದ್ದು ಯಾವುದೂ ಇಲ್ಲ' ಅಂತ. ಆತ ಅದನ್ನ ಖಂಡಿಸುತ್ತಾನೆ. ಆತನಿಗೆ ನಾನು ಹೇಳಿದೆ, 'ಯಾರು ಯಾಚಿಸುತ್ತಾರೊ ಅಂಥವರು ಬಂದರೆ ಶ್ರೀಮಂತನ ಮನಸ್ಸು ಕಿರಿ ಕಿರಿ ಅನ್ನುತ್ತದೆ. ವಿರಕ್ತನಾಗಿ ಹೇಳುತ್ತಾನೆ, "ನೋಡಪ್ಪ ಬಂದ!" ಎಂದು, ಬಂದನಂತರ ಒಂದು ವಿಧ ವಾದ ಸ್ವರದಿಂದ ಹೇಳುತ್ತಾನೆ, "ಕೂತುಕೊ!" ಅಂತ—ಬಹಳ ರೇಗಿ ಕೊಂಡವನಂತೆ. ಇಂಥವರನ್ನ ಆತ ತನ್ನ ಗಾಡಿಯಲ್ಲಿ ಕೂರಿಸಿಕೊಂಡು ಒಟ್ಟಿಗೆ ಪ್ರಯಾಣ ಬೆಳಸೊದಿಲ್ಲ' ಎಂದು.

"ಹಾಜರಾ ಹೇಳುತ್ತಾನೆ, 'ಆತ ಈ ಧನಿಕರಂತಲ್ಲ; ಆತನಿಗೆ ಐಶ್ವರ್ಯದ ಅಭಾವವಿದೆಯೇನು ಜನರಿಗೆ ಕೊಡಲು ಕಷ್ಟವಾಗೋಕೆ?' ಅಂತ. ಅವನು ಮತ್ತೆ ಹೇಳುತ್ತಾನೆ, 'ಆಕಾಶದಿಂದ ಮಳೆ ಬೀಳುವಾಗ ಗಂಗಾನದಿ ಮೊದಲಾದ ದೊಡ್ಡ ದೊಡ್ಡ ನದಿಗಳು, ದೊಡ್ಡ ದೊಡ್ಡ ಸರೋವರಗಳು ನೀರಿನಿಂದ ತುಂಬಿ ಹರಿಯುತ್ತವೆ; ಚಿಕ್ಕ ಪುಟ್ಟ ಕೆರೆಕಟ್ಟೆಗಳೂ ತುಂಬಿ ಹೋಗುತ್ತವೆ. ಆತ ಕೃಪೆ ಮಾಡಿದರೆ ಜ್ಞಾನ ಭಕ್ತಿ ಇವನ್ನೂ

ಕೊಡುತ್ತಾನೆ,–ಜೊತೆಗೆ ಧನ ಕನಕಾದಿಗಳನ್ನೂ ಕೊಡುತ್ತಾನೆ' ಎಂದು.

(ಭಕ್ತರಿಗೆ) "ಇದಕ್ಕೆ ಮಲಿನ ಭಕ್ತಿ ಎಂದು ಹೆಸರು. ಶುದ್ಧ ಭಕ್ತಿಯಲ್ಲಿ ಯಾವ ಕಾಮನೆಗೂ ಆಶ್ರಯವಿಲ್ಲ. ನೀವು ಇಲ್ಲಿಗೆ ಏನನ್ನಾದರು ಯಾಚಿಸಲು ಬರುತ್ತಿಲ್ಲ; ಆದರೆ ನನ್ನನ್ನು ನೋಡಲು, ನನ್ನ ಮಾತುಕತೆ ಕೇಳಲು ನಿಮಗೆ ಇಚ್ಛೆ. ನನ್ನ ಮನಸ್ಸೂ ಕೂಡ ನಿಮ್ಮ ಕಡೆಗೆಯೇ ಹರಿದು ಹೋಗುತ್ತಿರುತ್ತದೆ. ಹೇಗಿದ್ದಾರೆ?—ಏಕೆ ಬರಲಿಲ್ಲ?—ಇವುಗಳ ವಿಷಯವಾಗೆಲ್ಲ ಯೋಚಿಸುತ್ತೇನೆ.

"ಏನೂ ಬೇಕಾಗಿಲ್ಲ, ಆದರೂ ಪ್ರೀತಿಸುವುದು—ಇದಕ್ಕೆ ಅಹೇತುಕ ಭಕ್ತಿ, ಶುದ್ಧ ಭಕ್ತಿ ಎಂದು ಹೆಸರು. ಪ್ರಹ್ಲಾದನಿಗೆ ಇದು ಇತ್ತು; ರಾಜ್ಯ ಬೇಕಾಗಲಿಲ್ಲ, ಐಶ್ವರ್ಯ ಬೇಕಾಗಲಿಲ್ಲ, ಕೇವಲ 'ಹರಿ' ಮಾತ್ರ ಆತನಿಗೆ ಬೇಕಾಗಿತ್ತು."

ಮಾಸ್ಟರ್: "ಹಾಜರಾ ಮಹಾಶಯ ತುಂಬಾ ಮಾತಾಳಿ, ವಟ ವಟ ಅನ್ನುತ್ತಾನೆ. ಮೌನಿಯಾದ ಹೊರತು ಆತನಿಗೆ ಏನೂ ದೊರಕದು."

ಶ್ರೀರಾಮಕೃಷ್ಣರು: "ನನ್ನ ಸಹವಾಸ ಮಾಡಿ ಒಮ್ಮೊಮ್ಮೆ ಸೌಮ್ಯನಾಗುತ್ತಾನೆ. ಎಂಥ ಪಿಶಾಚಿ ಆತ! ಮತ್ತೆ ತರ್ಕಮಾಡುತ್ತಾನೆ. ಅಹಂಕಾರ ತೊಲಗೋದು ಬಹಳ ಕಠಿನ. ಅಶ್ವತ್ಥವೃಕ್ಷವನ್ನು ಇಂದು ಕಡಿದುಹಾಕಿದರೆ ಮಾರನೆ ದಿವಸವೆ ಅದು ಚಿಗುರುತ್ತದೆ. ಬೇರು ಇರುವವರೆಗೆ ಅದು ಮತ್ತೆ ಬೆಳೆಯುತ್ತದೆ.

"ನಾನು ಹಾಜರಾನಿಗೆ ಹೇಳುತ್ತೇನೆ, 'ಯಾರನ್ನೂ ನಿಂದಿಸಬೇಡ' ಎಂದು. ಭಗವಂತನೆ ಈ ಎಲ್ಲಾ ರೂಪುಗಳನ್ನು ಧರಿಸಿದ್ದಾನೆ. ದುಷ್ಟರನ್ನೂ ಪೂಜಿಸಬಹುದು. ನೀನು ಕುಮಾರಿ ಪೂಜೆ ನೋಡಿಲ್ಲವೆ? ಉಚ್ಚೆ ಬಟ್ಟೆ ಕೆಡಿಸಿಕೊಳ್ಳುವ ಮೂಗಿನಿಂದ ಗೊಣ್ಣೆ ಸುರಿಸಿ ಕೊಳ್ಳುವ ಬಾಲೆಯನ್ನ ಏಕೆ ಪೂಜಿಸುತ್ತಾರೆ? ಅವಳು ಭಗವತಿಯ ಒಂದು ರೂಪು ಎಂಬುದಾಗಿ. ಭಕ್ತನಲ್ಲಿ ಆತ ವಿಶೇಷರೂಪದಿಂದ ಇದ್ದಾನೆ. ಭಕ್ತ ಭಗವಂತನ ಬೈಠಕ್ ಖಾನೆ. ಸೋರೆ ಕಾಯಿಯ ಬುರುಡೆ ತುಂಬ ದಪ್ಪವಾಗಿದ್ದರೆ, ಅದು ಒಳ್ಳೆ ತಂಬೂರಿಯಾಗುತ್ತದೆ.—ಬಹಳ ಒಳ್ಳೇಸ್ವರ ಕೊಡುತ್ತದೆ."

ಇಂದು ಪಂಚವಟಿಗೆ ಇಬ್ಬರು ಸಾಧು ಅತಿಥಿಗಳು ಬಂದಿದ್ದಾರೆ. ಅವರು ಗೀತೆ ವೇದಾಂತ ಮೊದಲಾದುವುಗಳನ್ನು ಅಧ್ಯಯನ ಮಾಡುತ್ತಾರೆ.

ಮಧ್ಯಾಹ್ನದ ಊಟವಾದನಂತರ ಪರಮಹಂಸರ ದರ್ಶನಕ್ಕಾಗಿ ಕೊಠಡಿಗೆ ಬಂದಿದ್ದಾರೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದ್ದಾರೆ. ಸಾಧುಗಳು ಅವರಿಗೆ ಪ್ರಣಾಮ ಮಾಡಿ ನೆಲದ ಮೇಲೆ ಹಾಸಿದ್ದ ಮಂದಲಿಗೆಯ ಮೇಲೆ ಕುಳಿತುಕೊಂಡರು. ಮಾಸ್ಟರ್ ಮೊದಲಾದವರೂ ಕೊಠಡಿಯಲ್ಲಿ ಕುಳಿತಿದ್ದಾರೆ. ಪರಮಹಂಸರು ಆ ಸಾಧುಗಳೊಡನೆ ಹಿಂದಿಯಲ್ಲಿ ಮಾತುಕತೆಗಳಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು : " ಭೋಜನವಾಯಿತೆ ? "

ಸಾಧುಗಳು : " ಹೌದು, ಆಯಿತು. "

ಶ್ರೀರಾಮಕೃಷ್ಣರು : " ಏನೇನು ಊಟಮಾಡಿದಿರಿ ? "

ಸಾಧುಗಳು : " ತೊವ್ವೆ ರೊಟ್ಟಿ ; ನಿಮಗೆ ಸ್ವಲ್ಪ ಬೇಕೇನು ? "

ಶ್ರೀರಾಮಕೃಷ್ಣರು : "ದಯವಿಟ್ಟು ಕ್ಷಮಿಸಿ. ನಾನು ತಿನ್ನೋದು ಕೆಲವು ತುತ್ತು ಅನ್ನ ಮಾತ್ರ. ಒಳ್ಳೇದು, ನೀವು ನಿಮ್ಮ ಜಪಧ್ಯಾನಾದಿಗಳನ್ನು ನಿಷ್ಕಾಮಭಾವನೆಯಿಂದ ಮಾಡುತ್ತಿರಬೇಕು; ಅಲ್ಲವೆ? "

ಸಾಧು : " ಹೌದು, ಮಹರಾಜ್. "

ಪರಮಹಂಸರು: "ಅದು ಬಹಳ ಒಳ್ಳೆಯದು. ಫಲವನ್ನು ಭಗವಂತನಿಗೆ ಅರ್ಪಿಸಬೇಕು ;—ಅಲ್ಲವೇನು ? ಗೀತೆಯಲ್ಲಿ ಹಾಗೆಯೇ ಹೇಳಿದೆ"

ಒಬ್ಬ ಸಾಧು ಇನ್ನೊಬ್ಬ ಸಾಧುವಿಗೆ: " ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ । ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ॥ " ಎಂಬ ಗೀತೆಯ ಶ್ಲೋಕವನ್ನು ಎತ್ತಿ ಹೇಳಿದ.

ಪರಮಹಂಸರು : " ಯಾವುದನ್ನೇ ಆದರು ಆತನಿಗೆ ಒಂದು ಪಾಲಿನಷ್ಟು ಅರ್ಪಿಸಿದರೆ ಅದರ ಸಹಸ್ರದಷ್ಟು ಪಾಲು ಹಿಂದಿರುಗಿ ಬರುತ್ತದೆ. ಅದಕ್ಕಾಗಿಯೆ ದಾನ ಧರ್ಮಾದಿಕಾರ್ಯಗಳನ್ನು ಮಾಡಿದ ನಂತರ ಒಂದು ಬೊಗಸೆ ನೀರನ್ನು ತೆಗೆದುಕೊಂಡು, 'ಶ್ರೀಕೃಷ್ಣಾರ್ಪಣಮಸ್ತು—ಶ್ರೀಕೃಷ್ಣನಿಗೆ ಫಲವನ್ನು ಅರ್ಪಿಸಿದ್ದೇನೆ' ಎಂದು ಹೇಳುವುದು. ಯುಧಿಷ್ಠಿರ ತನ್ನ ಸಕಲ ಪಾಪಗಳನ್ನು ಶ್ರೀಕೃಷ್ಣನಿಗೆ ಅರ್ಪಿಸಲು ಸಿದ್ಧನಾಗುತ್ತಿದ್ದಾಗ ಒಬ್ಬ ( ಭೀಮ ) ಎಚ್ಚರಿಕೆ ಕೊಟ್ಟ: ' ಅಂಥ ಕಾರ್ಯವನ್ನ ಎಂದಿಗೂ ಮಾಡಬೇಡ—ಶ್ರೀಕೃಷ್ಣನಿಗೆ ನೀನು ಏನ ಅರ್ಪಿಸುವಿಯೊ, ಅದು ಒಂದು ಸಹಸ್ರಮಡಿಯಾಗಿ ನಿನಗೆ ಹಿಂದಿರುಗಿ ಬರುತ್ತದೆ' ಎಂದು.

(ಒಬ್ಬ ಸಾಧುವಿಗೆ) "ಒಳ್ಳೆಯದು, ಮನುಷ್ಯ ನಿಷ್ಕಾಮಿಯಾಗ ಬೇಕಾಗುತ್ತದೆ; ಸಕಲ ಕಾಮನೆಗಳನ್ನು ತ್ಯಾಗಮಾಡಬೇಕಾಗುತ್ತದೆ; ಅಲ್ಲವೇನು ?"

ಸಾಧು: "ಹೌದು."

ಶ್ರೀರಾಮಕೃಷ್ಣರು: "ಆದರೆ ನನ್ನಲ್ಲಿ ಭಕ್ತಿಕಾಮನೆ ಇದೆ. ಅದು ಕೆಟ್ಟದ್ದೇನಲ್ಲ. ಅದಕ್ಕೆ ಬದಲು ಅದರಿಂದ ಒಳ್ಳೆಯದೇ ಆಗುತ್ತದೆ. ಸಿಹಿ ಕೆಟ್ಟ ವಸ್ತು—ಹುಳಿಯನ್ನುಂಟುಮಾಡುತ್ತದೆ, ಆದರೆ ಕಲ್ಲುಸಕ್ಕರೆಯಿಂದ ವಿಶೇಷವಾಗಿ ಉಪಕಾರವಾಗುತ್ತದೆ. ಏನು, ನಿಜವೇನು ?"

ಸಾಧು: "ಹೌದು ಮಹರಾಜ್."

ಶ್ರೀರಾಮಕೃಷ್ಣರು; "ಒಳ್ಳೆಯದು, ವೇದಾಂತದ ವಿಷಯವಾಗಿ ನಿಮ್ಮ ಅಭಿಪ್ರಾಯವೇನು ?"

ಸಾಧು: "ವೇದಾಂತ ಷಡ್‌ದರ್ಶನಗಳನ್ನು ಒಳಗೊಂಡಿದೆ."

ಶ್ರೀರಾಮಕೃಷ್ಣರು: "ಆದರೆ ವೇದಾಂತದ ಸಾರ— ಬ್ರಹ್ಮ ಸತ್ಯ, ಜಗತ್ ಮಿಥ್ಯ. ನಾನು, ಪ್ರತ್ಯೇಕವಾಗಿರುವ ಯಾವ ಒಂದು ವಸ್ತುವೂ ಅಲ್ಲ; ನಾನೇ ಆ ಬ್ರಹ್ಮ ಎಂದು. ಏನು, ಅಲ್ಲವೇನು ?"

ಸಾಧು: "ಹೌದು, ಸತ್ಯ."

ಪರಮಹಂಸರು: "ಆದರೆ 'ಯಾರು ಸಂಸಾರಿಗಳೊ, ಯಾರಿಗೆ ದೇಹಬುದ್ಧಿ ಇದೆಯೊ, ಅವರಿಗೆ ಸೋಽಹಂ' ಭಾವ ಒಳ್ಳೆಯದಲ್ಲ. ಸಂಸಾರಿಗಳಿಗೆ ಯೋಗವಾಶಿಷ್ಠ, ವೇದಾಂತ,—ಒಳ್ಳೆಯದಲ್ಲ. ಬಹಳ ಕೆಡಕಾಗುತ್ತದೆ. ಸಂಸಾರಿಗಳು ಸೇವ್ಯಸೇವಕ ಭಾವವನ್ನ ಅನುಸರಿಸ ಬೇಕು. ಅವರು ಭಾವಿಸಬೇಕು 'ಹೇ ಭಗವಂತ! ನೀನು ಸೇವ್ಯಾರ್ಹ— ಪ್ರಭು, ನಾನು ಸೇವಕ—ನಾನು ನಿನ್ನ ದಾಸ' ಎಂದು. ಯಾರಿಗೆ ದೇಹ ಬುದ್ಧಿ ಇದೆಯೊ, 'ಸೋಽಹಂ' ಭಾವ ಅವರಿಗೆ ಒಳ್ಳೆಯದಲ್ಲವೇ ಅಲ್ಲ."

ಎಲ್ಲರೂ ಸದ್ದಿಲ್ಲದೆ ಕುಳಿತುಕೊಂಡಿದ್ದಾರೆ. ಪರಮಹಂಸರು ತಮ್ಮೊ ಳಗೆ ತಾವೆ ಸ್ವಲ್ಪ ಸ್ವಲ್ಪ ನಗುತ್ತಿದ್ದಾರೆ. ಆತ್ಮಾರಾಮ! ಸ್ವಯಮಾನಂದ ದಲ್ಲಿಯೆ ಆನಂದಿತರಾಗಿದ್ದಾರೆ!

ಒಬ್ಬ ಸಾಧು ಇನ್ನೊಬ್ಬ ಸಾಧುವಿಗೆ ಪಿಸುಗುಟ್ಟುತ್ತಿದ್ದಾನೆ: "ನೋಡು, ನೋಡು! ಇದಕ್ಕೇನೆ ಪರಮಹಂಸಾವಸ್ಥೆ ಅಂತ ಹೆಸರು" ಎಂದು.

ಶ್ರೀರಾಮಕೃಷ್ಣರು ಅವರ ಕಡೆಗೆ ನೋಡಿ ಮಣಿಗೆ: "ನನಗೆ ನಗು ಬರುತ್ತಿದೆ."

ಪರಮಹಂಸರು ಬಾಲಕನೋಪಾದಿಯಲ್ಲಿ ತಮ್ಮಷ್ಟಕ್ಕೆ ತಾವೇ ನಗುತ್ತಿದ್ದಾರೆ. ಸಾಧುಗಳು ಎದ್ದು ಹೊರಟುಹೋದರು. ಭಕ್ತರು ಕೊಠಡಿಯೊಳಗೆ ಮತ್ತು ವರಾಂಡದಲ್ಲಿ ಸುತ್ತಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನವೀನಸೇನನ ಆ ಮನೆಗೆ ನೀನು ಹೋಗಿದ್ದೆಯಾ?"

ಮಾಸ್ಟರ್: "ಹೌದು, ಹೋಗಿದ್ದೆ. ಕೆಳಗಡೆ ಕುಳಿತು ಹಾಡುಗಳನ್ನೆಲ್ಲ ಕೇಳುತ್ತಿದ್ದೆ."

ಶ್ರೀರಾಮಕೃಷ್ಣರು: "ಒಳ್ಳೇದು ಮಾಡಿದೆ. ನಿನ್ನವರೂ ಅಲ್ಲಿಗೆ ಬಂದಿದ್ದರು. ಕೇಶವಸೇನ ನಿನ್ನವಳ ಸೋದರ ವರ್ಗಕ್ಕೆ ಸೇರಿದವನಂತೆ?"

ಮಾಸ್ಟರ್: "ದೂರದ ಸೋದರ."

ಪರಮಹಂಸರು ಸುತ್ತಾಡುತ್ತ ಸುತ್ತಾಡುತ್ತ ಮಣಿಯೊಡನೆ ನಿಸ್ಸಂಕೋಚವಾಗಿ ಮಾತನಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಜನರು ಮಾವನ ಮನೆಗೆ ಹೋಗುತ್ತಾರೆ. ನಾನು ಅಷ್ಟೊಂದು ಸ್ವಪ್ನ ಕಟ್ಟಿದ್ದೆ, 'ಮದುವೆಯಾಗುತ್ತೇನೆ, ಮಾವನ ಮನೆಗೆ ಹೋಗುತ್ತೇನೆ— ತಮಾಷೆ ಗಿಮಾಷೆ ಮಾಡುತ್ತೇನೆ!' ಎಂದು. ಅದೆಲ್ಲ ಏನಾಯಿತು ನೋಡು!"

ಮಣಿ: "ನಿಜ. ನೀವು ಹೇಳುತ್ತೀರಿ, 'ಮಗು ತಂದೆಯನ್ನು ಹಿಡಿದುಕೊಂಡಿದ್ದರೆ ಅದು ಬೀಳುವ ಸಂಭವವಿದೆ; ಆದರೆ ತಂದೆ ಮಗುವನ್ನು ಹಿಡಿದುಕೊಂಡಿದ್ದರೆ ಅದು ಬೀಳುವ ಹಾಗೆಯೇ ಇಲ್ಲ' ಎಂದು. ನಿಮ್ಮದೂ ತದ್ವತ್ ಆ ಅವಸ್ಥೆಯೆ. ಭಗವತಿ ನಿಮ್ಮನ್ನು ಹಿಡಿದುಕೊಂಡಿದ್ದಾಳೆ."

ಶ್ರೀರಾಮಕೃಷ್ಣರು: "ನಾನು ಉಲೋರು ವಾಮನದಾಸನನ್ನು —ವಿಶ್ವಾಸರ ಮನೆಯಲ್ಲಿ— ನೋಡಿದೆ. ಆತನಿಗೆ ಹೇಳಿದೆ, 'ನಾನು ನಿನ್ನನ್ನು ನೋಡಲು ಬಂದಿದೇನೆ' ಎಂದು. ನಾನು ಹಿಂದಿರುಗುವಾಗ ಆತ ಹೇಳಿಕೊಳ್ಳುತ್ತಿದ್ದುದನ್ನು ಕೇಳಿದೆ. 'ಹಾ ಭಗವಂತ! ಹುಲಿ ಮನುಷ್ಯನನ್ನು ಹಿಡಿದುಕೊಳ್ಳುವ ಹಾಗೆ ಭಗವತಿ ಇವರನ್ನು ಹಿಡಿದುಕೊಂಡುಬಿಟ್ಟಿದ್ದಾಳೆ' ಅಂತ. ಆಗ ನನಗೆ ಒಳ್ಳೆ ಪ್ರಾಯ,— ದುಂಡುದುಂಡಾದ ಶರೀರ. ಯಾವಾಗಲೂ ಭಾವಾವಸ್ಥೆಯಲ್ಲೇ ಇರುತ್ತಿದ್ದೆ.

"ಹೆಂಗಸರ ಕಂಡರೆ ನನಗೆ ಬಹಳ ಭಯ. ಕಾಣುತ್ತದೆ, ಹೆಣ್ಣು ಹುಲಿ ನುಂಗೋಕೆ ಬರುತ್ತಿರುವಂತೆ! ಇದೂ ಅಲ್ಲದೆ ಅವರ ಅಂಗ, ಪ್ರತ್ಯಂಗ, ರೋಮಕೂಪಗಳು ಬಹಳ ದೊಡ್ಡ ದೊಡ್ಡದಾಗಿರುವಂತೆ ಕಾಣುತ್ತವೆ! ಎಲ್ಲರೂ ರಾಕ್ಷಸಿಯರ ಹಾಗೆ ಕಾಣುತ್ತಾರೆ. ಹಿಂದೆ ನನಗೆ ಅತ್ಯಂತ ಭಯವಿತ್ತು. ಅವರು ಯಾರೂ ಹತ್ತಿರಬರಲು ಬಿಟ್ಟುಕೊಡುತ್ತಿರಲಿಲ್ಲ. ಈಗ ನಾನೇ ನನ್ನ ಮನಸ್ಸಿಗೆ ಬಹಳವಾಗಿ ಬುದ್ಧಿ ಹೇಳಿ ಅವರೆಲ್ಲ ಭಗವತಿ ಆನಂದಮಯಿಯ ಒಂದೊಂದು ರೂಪು ಎಂಬುದಾಗಿ ನೋಡುತ್ತಿದ್ದೇನೆ.

"ಹೆಂಗಸು ಭಗವತಿಯ ಅಂಶ. ಆದರೆ ಪುರುಷನ ಹಿತದೃಷ್ಟಿಯಿಂದ—ಸಾಧುವಿನ ಹಿತದೃಷ್ಟಿಯಿಂದ—ಭಕ್ತನ ಹಿತದೃಷ್ಟಿಯಿಂದ—ಅವರನ್ನು ತ್ಯಜಿಸಬೇಕು. ಹೆಂಗಸು ಭಕ್ತಾಗ್ರೇಸರೆಯಾಗಿದ್ದರೂ ಹೆಚ್ಚುಹೊತ್ತು ಹತ್ತಿರ ಕುಳಿತುಕೊಳ್ಳಲು ಬಿಟ್ಟುಕೊಡೋದಿಲ್ಲ. ಸ್ವಲ್ಪ ಹೊತ್ತಾದ ನಂತರವೆ ಹೇಳಿ ಬಿಡುತ್ತೇನೆ, 'ಹೋಗಿ, ದೇವಾಲಯಕ್ಕೆ ಹೋಗಿ ಬನ್ನಿ' ಎಂದು. ಆಗಲೂ ಏಳದೆ ಇದ್ದರೆ, ಹುಕ್ಕ ಸೇದಬೇಕೆಂಬ ನೆವದಿಂದ ನಾನೆ ಹೊರಕ್ಕೆ ಬಂದು ಬಿಡುತ್ತೇನೆ.

"ಕೆಲ ಕೆಲವರಿಗೆ ಹೆಂಗಸರ ಕಡೆ ಮನಸ್ಸೇ ಹೋಗದಿರುವುದು ನನ್ನ ಕಣ್ಣಿಗೆ ಬೀಳುತ್ತಿದೆ. ನಿರಂಜನ ಹೇಳುತ್ತಾನೆ, 'ಹೆಂಗಸಿನ ಕಡೆ ನನ್ನ ಮನಸ್ಸು ಒಂದು ಸ್ವಲ್ಪವೂ ಹೋಗುತ್ತಿಲ್ಲ' ಎಂದು. ನಾನು ಈ ವಿಷಯವಾಗಿ ಹರಿಯನ್ನು (ಡಾಕ್ಟರ್ ಉಪೇನನ ಸಹೋದರನನ್ನು) ಕೇಳಿದೆ. ಆತನೂ ಹೇಳಿದ, 'ಇಲ್ಲ, ಹೆಂಗಸಿನ ಕಡೆ ನನ್ನ ಮನಸ್ಸು ಹೋಗುತ್ತಿಲ್ಲ' ಎಂದು.

"ಯಾವ ಮನಸ್ಸನ್ನ ನಾವು ಭಗವಂತನಿಗೆ ಕೊಡಬೇಕೊ ಅದರ ಮುಕ್ಕಾಲು ಭಾಗವನ್ನು ಹೆಂಗಸು ಅಪಹರಿಸಿಕೊಂಡು ಬಿಡುತ್ತಾಳೆ. ಬಳಿಕ ಮಕ್ಕಳಾದರೆ ಪ್ರಾಯಶಃ ಇಡಿಯ ಮನಸ್ಸು ವ್ಯಯವಾಗಿ ಹೋಗಿ ಬಿಡುತ್ತದೆ. ಅನಂತರ ಭಗವಂತನಿಗೆ ನೀನು ಕೊಡುವುದು ತಾನೆ ಏನನ್ನ?

"ಕೆಲ ಕೆಲವರಿಗೆ ಆಕೆಯನ್ನ ಸುರಕ್ಷಿತವಾಗಿ ಇಟ್ಟುಕೊಳ್ಳುವುದರಲ್ಲೆ ತಮ್ಮ ಪ್ರಾಣವನ್ನೆಲ್ಲ ಬಸಿಯಬೇಕಾಗಿಬರುತ್ತದೆ. ಇಲ್ಲಿನ ಗೇಟ್ ಕೀಪರ್ ಒಬ್ಬ ಮುದುಕ. ಆತನಿಗೆ ಹದಿನಾಲ್ಕು ವಯಸ್ಸಿನ ಒಬ್ಬಳು ಹೆಂಡತಿ! ಈ ಮುದುಕನೊಡನೆ ಆಕೆ ಒಗೆತನ ಮಾಡಬೇಕಾಗಿದೆ. ಅವರದು ತಾಳೆಗರಿಯ ಗುಡಿಸಲು. ಜನರು ಆ ಎಲೆಗಳನ್ನು ಕಳಚಿ ಕಳಚಿ ಇಣಿಕಿ

ನೋಡುತ್ತಾರೆ. ಈಗ ಆ ಹುಡುಗಿ ಆತನನ್ನು ಬಿಟ್ಟುಹೋಗಿಬಿಟ್ಟಿದ್ದಾಳೆ.

"ಒಬ್ಬನ ಹೆಂಡತಿ—ಆಕೆಯನ್ನ ಎಲ್ಲಿ ಸುರಕ್ಷಿತವಾಗಿ ಇಡೋದು ಎಂಬುದು ಆತನಿಗೆ ಒಂದು ದೊಡ್ಡ ಸಮಸ್ಯೆಯಾಗಿ ಬಿಟ್ಟಿದೆ. ಮನೆಯಲ್ಲಿ ವಿಪರೀತ ಜಗಳ. ಈಗ ಬಹಳ ಚಿಂತಾಕ್ರಾಂತನಾಗಿದಾನೆ. ಇಂಥ ಮಾತುಕಥೆಗಳು ಇಷ್ಟಕ್ಕೇ ಸಾಕು, ಮುಂದಕ್ಕೆ ಬೇಡ.

"ಹೆಂಗಸಿನೊಡನೆ ಇದ್ದರೇನೇ ಆಕೆಯ ವಶ ಆಗೇಬೇಕಾಗುತ್ತದೆ. ಸಂಸಾರಿಗಳು ಹೆಂಗಸಿನ ಆಜ್ಞೆಯಂತೆ ಏಳು ಅಂದರೆ ಏಳಬೇಕು, ಕೂರು ಅಂದರೆ ಕೂರಬೇಕು. ಎಲ್ಲರೂ ತಮ್ಮ ತಮ್ಮ ಹೆಂಡತಿಯರನ್ನ ಬಹಳವಾಗಿ ಹೊಗಳುತ್ತಾರೆ!

"ನಾನು ಯಾವುದೊ ಒಂದು ಜಾಗಕ್ಕೆ ಹೋಗಲಿಚ್ಛಿಸಿದ್ದೆ. ರಾಮಲಾಲನ ಚಿಕ್ಕಮ್ಮನ್ನ (ಪರಮಹಂಸರ ಹೆಂಡತಿಯನ್ನ) ಕೇಳಲಾಗಿ ಬೇಡ ಅಂದಳು; ಅದಕ್ಕಾಗಿ ಹೋಗೋಕಾಗಲಿಲ್ಲ. ಬಳಿಕ ಯೋಚಿಸದೆ: 'ಏನಪ್ಪ ಇದು! ನಾನು ಸಂಸಾರಿಯಾಗಿ ಜೀವಿಸುತ್ತಿಲ್ಲ, ಕಾಮಕಾಂಚನ ತ್ಯಾಗಿ. ಹಾಗಿದ್ದರೂ ಈ ದುರವಸ್ಥೆ! ಸಂಸಾರಿಗಳು ತಮ್ಮ ಹೆಂಡತಿಯರಿಗೆ ಎಷ್ಟೊಂದು ವಶರಾಗಿಬಿಟ್ಟಿರುತ್ತಾರೆ ಎಂಬುದನ್ನ ಹೇಳೋಕಾಗದು!' ಎಂದು."

ಮಣಿ: "ಕಾಮಕಾಂಚನದ ಮಧ್ಯೆ ಇದ್ದರೆ ಏನಿಲ್ಲ ಎಂದರೂ ಒಂದು ಕಿಂಚಿತ್ತಾದರೂ ಅದರ ಬಣ್ಣ ತಾಗಿಯೇ ತಾಗುತ್ತದೆ. ನೀವು ಒಮ್ಮೆ ಹೇಳಿದಿರಿ, 'ಜಯನಾರಾಯಣ ಒಬ್ಬ ದೊಡ್ಡ ಪಂಡಿತ—ಮುದುಕನಾಗಿದ್ದಾನೆ—ನೀವು ಅಲ್ಲಿಗೆ ಹೋಗಿದ್ದಾಗ ಆತ ಹಾಸಿಗೆ ದಿಂಬುಗಿಂಬನ್ನ ಬಿಸಿಲಿಗೆ ಹಾಕುತ್ತಿದ್ದ' ಎಂದು."

ಶ್ರೀರಾಮಕೃಷ್ಣರು: "ಆದರೆ ಆತನಿಗೆ ತಾನು ಒಬ್ಬ ಪಂಡಿತ ಎಂಬ ಅಹಂಕಾರವಿಲ್ಲ. ಆತ ಹೇಳುತ್ತಿದ್ದ ಹಾಗೆಯೆ, ಶಾಸ್ತ್ರಾನುಸಾರ ಕೊನೆಗಾಲದಲ್ಲಿ ಆತನಿಗೆ ಕಾಶಿವಾಸ ದೊರಕಿತು. ಆತನ ಮಕ್ಕಳು ಮರಿಗಳನ್ನು ನೋಡಿದೆ. ಅವರು ಬೂಟ್ಸನ್ನು ಹಾಕಿಕೊಂಡಿದ್ದರು; ಇಂಗ್ಲಿಷು ಬರುತ್ತಿತ್ತು."

ಪ್ರಶ್ನೋತ್ತರಗಳ ರೂಪವಾಗಿ ಪರಮಹಂಸರು ಮಣಿಗೆ ತಮ್ಮ ಸ್ವಂತ ಆಧ್ಯಾತ್ಮಿಕ ಉನ್ನತಿಯನ್ನು ತಿಳಿಸುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಹಿಂದೆ ಬಹಳವಾಗಿ ಉನ್ಮತ್ತತೆ ಬಂದಿತ್ತು. ಈಗ ಏಕೆ ಅದು ಕಡಮೆಯಾಗಿ ಬಿಟ್ಟಿತು?—ಆದರೆ ಆಗಾಗ ಬರುತ್ತದೆ."

ಮಣಿ: "ನಿಮ್ಮದು ಒಂದೇ ಒಂದು ವಿಧವಾದ ಭಾವವೇನಲ್ಲ. ನೀವು ತಿಳಿಸಿರುವಹಾಗೆ ನಿಮಗೆ ಕೆಲವು ವೇಳೆ ಬಾಲಕನ,—ಕೆಲವು ವೇಳೆ ಉನ್ಮತ್ತನ—ಕೆಲವು ವೇಳೆ ಜಡನ—ಕೆಲವು ವೇಳೆ ಪಿಶಾಚಿಯ—ಈ ಅವಸ್ಥೆಗಳೆಲ್ಲಾ ಆಗಾಗ ಬರುತ್ತವೆ. ಮತ್ತೆ ಆಗಾಗ ಸಹಜಾವಸ್ಥೆಯೂ ಬರುತ್ತದೆ."

ಪರಮಹಂಸರು: "ಹೌದು, ಬಾಲಕನಹಾಗೆ. ಅದರ ಜೊತೆಗೆ ಬಾಲ್ಯ, ಕೌಮಾರ್ಯ, ಯೌವನ—ಈ ಅವಸ್ಥೆಗಳೆಲ್ಲಾ ಬರುತ್ತವೆ. ಜ್ಞಾನೋಪದೇಶವನ್ನು ಕೊಡುವಾಗ ನನಗೆ ಯುವಕನ ಅವಸ್ಥೆ ಬರುತ್ತದೆ. ಕುಮಾರನ ಅವಸ್ಥೆ: ಹನ್ನೆರಡು ಹದಿಮೂರು ವಯಸ್ಸಿನ ಹುಡುಗನಹಾಗೆ ಹುಡುಗಾಟವಾಡಬೇಕೆನಿಸುತ್ತದೆ. ಅದಕ್ಕಾಗಿಯೆ ನಾನು ಹುಡುಗರೊಡನೆ ತಮಾಷೆ ಗಿಮಾಷೆ ಮಾಡೋದು.

"ಒಳ್ಳೆದು, ನಾರಾ'ಣ ಎಂಥವನು?"

ಮಣಿ: "ಆತನಿಗೆ ಒಳ್ಳೆ ಗುಣಗಳಿವೆ."

ಶ್ರೀರಾಮಕೃಷ್ಣರು: "ಹೌದು, ಸೋರೆಕಾಯಿ ಬರುಡೆ ಒಳ್ಳೆಯದೆ—ಅದರಿಂದಾದ ತಂಬೂರಿ ಒಳ್ಳೆ ಶಬ್ದ ಕೊಡುತ್ತದೆ. ಅವನು ನನಗೆ ಹೇಳುತ್ತಾನೆ, 'ನೀವೇ ಎಲ್ಲ (ಅವತಾರ)' ಎಂದು. ಯಾರಿಗೆ ಹೇಗೆ ಕಾಣುತ್ತೇನೆಯೊ ಅವರು ಹಾಗೆ ಹೇಳುತ್ತಾರೆ. ಕೆಲವರು ಹೇಳುತ್ತಾರೆ, 'ಸಾಮಾನ್ಯ ಸಾಧು ಭಕ್ತ' ಎಂದು.

"ನಾನು ಯಾವುದನ್ನು ಮಾಡಬೇಡ ಎಂದು ನಾರಾ'ಣನಿಗೆ ಹೇಳುತ್ತೇನೆಯೊ ಅದನ್ನ ಆತ ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿರುತ್ತಾನೆ. ಅಂದು ಪರದೆ ಮೇಲಕ್ಕೆಳೆಯಲು ಹೇಳಿದೆ, ಆತ ಹಾಗೆ ಮಾಡಲಿಲ್ಲ. ನಾನು ಆತನಿಗೆ ಸೆರಗಿಗೆ ಗಂಟುಹಾಕೋದು, ಬಟ್ಟೆ ತೇಪೆಹಾಕೋದು, ಪೆಟ್ಟಿಗ್ಗೆ ಬೀಗಹಾಕೋದು, ಪರದೆ ಮೇಲಕ್ಕೆತ್ತೋದು ಇವೆ ಮೊದಲಾದುವನ್ನ ಮಾಡಬಾರದೆಂದು ಹೇಳಿದ್ದೆ. ಅವನ್ನೆಲ್ಲ ಆತ ಜ್ಞಾಪಕದಲ್ಲಿಟ್ಟುಕೊಂಡಿದ್ದಾನೆ. ತ್ಯಾಗಿಯಾಗಬೇಕೆಂಬುವನು ಇವನ್ನೆಲ್ಲ ಅನುಷ್ಠಾನಕ್ಕೆ ತರಬೇಕು. ಸನ್ಯಾಸಿ ಇವನ್ನೆಲ್ಲ ಆಚರಿಸಬೇಕು.

"ಸಾಧನೆ ಅವಸ್ಥೆಯಲ್ಲಿ 'ಕಾಮಿನಿ', 'ದಾವಾನಲಸ್ವರೂಪಿ—ಕೃಷ್ಣಸರ್ಪದ ಸ್ವರೂಪಿ!' ಎಂದು ಭಾವಿಸಬೇಕು. ಸಿದ್ಧನ ಅವಸ್ಥೆಯಲ್ಲಿ ಭಗವಂತನ ದರ್ಶನ ದೊರೆತನಂತರ,—ಆಕೆ ಭಗವತಿ ಆನಂದಮಯಿಯಾಗಿ

ಕಾಣುತ್ತಾಳೆ. ಆಗ ಆಕೆಯನ್ನ ಭಗವತಿಯ ಒಂದೊಂದು ರೂಪು ಎಂಬುದಾಗಿ ಕಾಣುತ್ತೀಯೆ.''

ಈಗ ಕೆಲವು ದಿನಗಳ ಹಿಂದೆ ಪರಮಹಂಸರು ನಾರಾ'ಣನಿಗೆ ಹೆಂಗಸಿನ ಸಂಬಂಧವಾಗಿ ಬಹಳವಾಗಿ ಎಚ್ಚರಿಕೆ ಕೊಟ್ಟಿದ್ದರು. ಹೇಳಿದ್ದರು : ''ಹೆಂಗಸಿನ ಶರೀರದ ಗಾಳಿಯೂ ತಾಗದ ಹಾಗೆ ನೋಡಿಕೊ'ಬೇಕು. ಅವರ ಶರೀರದ ಗಾಳಿ ತನಗೆ ತಾಗದೆ ಇರಲೆಂದು ಮಂದವಾದ ಬಟ್ಟೆಯನ್ನು ಉಟ್ಟುಕೊ'ಬೇಕು,—ಹೆತ್ತ ತಾಯಿಯೊಬ್ಬಳು ವಿನಾ ಉಳಿದವರೊಡನೆ ಎಂಟು ಮೊಳ, ಇಲ್ಲದಿದ್ದರೆ ಎರಡು ಮೊಳ, ಅದೂ ಆಗದಿದ್ದರೆ ಕೊನೆಗೆ ಒಂದು ಮೊಳದ ಅಂತರದಲ್ಲಿಯಾದರೂ ತಾನು ಇರುವಂತೆ ನೋಡಿಕೊ' ಬೇಕು.'' ಎಂದು.

ಶ್ರೀ ರಾಮಕೃಷ್ಣರು ಮಣಿಗೆ: ''ನಾರಾ'ಣನ ತಾಯಿ ನನ್ನ ಸಂಬಂಧವಾಗಿ ನಾರಾ'ಣನಿಗೆ, 'ಅವರನ್ನು ನೋಡಿ ನಾವೂ ಮುಗ್ಧರಾಗಿ ಹೋಗಿಬಿಡುತ್ತೇವೆ. ನೀನೊ ಇನ್ನೂ ಚಿಕ್ಕ ಹುಡುಗ!' ಎಂದು ಹೇಳಿದ ಳಂತೆ. ಸರಳ ಜೀವಿಯಾಗದೆ ಇದ್ದರೆ ಭಗವಂತನನ್ನ ಪಡೆಯಲಾಗುವು ದಿಲ್ಲ. ನಿರಂಜನ ಎಷ್ಟೊಂದು ಸರಳಜೀವಿ!''

ಮಣಿ: ''ಹೌದು, ನಿಜ.''

ಪರಮಹಂಸರು: ''ಅಂದು ಕಲ್ಕತ್ತಕ್ಕೆ ಹೋದಾಗ ಆತನನ್ನ ಗಾಡಿ ಯಲ್ಲಿ ನೋಡಲಿಲ್ಲವೇನು? ಎಲ್ಲಾ ಸಮಯದಲ್ಲಿಯೂ ಒಂದೇ ವಿಧವಾದ ನಡತೆ—ಸರಳತೆ. ಜನರು ತಮ್ಮ ಮನೆಯ ಒಳಗೆ ಇರುವಾಗ ಒಂದು ವಿಧವಾಗಿ, ಮನೆಯಿಂದ ಹೊರಕ್ಕೆ ಬಂದಾಗ ಬೇರೊಂದು ವಿಧವಾಗಿ ನಡೆದುಕೊಳ್ಳುತ್ತಾರೆ. ನರೇಂದ್ರ ಈಗ (ತಂದೆ ಸತ್ತನಂತರ) ಸಂಸಾರದ ಯೋಚನೆಯಲ್ಲಿ ಸಿಕ್ಕಿಬಿದ್ದಿದ್ದಾನೆ. ಆತನಿಗೆ ಒಂದು ಸ್ವಲ್ಪ ಸಂಧಾನ ಮಾಡೊ ಬುದ್ಧಿ ಇದೆ. ಹುಡುಗರೆಲ್ಲಾ ಇವರಂತೆ ಆಗಲು ಸಾಧ್ಯವೇನು?

''ಇಂದು ನಾನು ದಕ್ಷಿಣೇಶ್ವರದಲ್ಲಿ ನೀಲಕಂಠನ ಬಯಲು ನಾಟಕ ನೋಡಲು ಹೋಗಿದ್ದೆ. ಅದು ನವೀನ ನಿಯೋಗಿಯ ಮನೆಯಲ್ಲಿ ನಡೆಯಿತು. ಅಲ್ಲಿನ ಹುಡುಗರ ನಡೆ ನುಡಿ ಬಹಳ ಕೆಟ್ಟದು; ಕೇವಲ ಇವನ ಅವನ ನಿಂದಿಸೋದೆ ಕೆಲಸ. ಅಂಥ ಸ್ಥಳಗಳಲ್ಲಿ ಭಾವ ಅಡಗಿಹೋಗುತ್ತದೆ. ಆ ಸಲದ ನಾಟಕದ ಸಮಯದಲ್ಲಿ ಡಾಕ್ಟರ್ ಮಧುವಿನ ಕಣ್ಣಿನಿಂದ ಪ್ರೇಮಾಶ್ರು ಹರಿಯುತ್ತಿರುವುದನ್ನು ನೋಡಿ,

ನಾನು ಆತನ ಕಡೆಗೇ ದೃಷ್ಟಿಸಿ ನೋಡುತ್ತಿದ್ದೆ. ಬೇರೆ ಯಾರ ಕಡೆಗೂ ದೃಷ್ಟಿಹಾಕಲು ಮನಸ್ಸಾಗಲಿಲ್ಲ.

(ಮಣಿಗೆ) "ಒಳ್ಳೇದು, ಜನರು ಅಷ್ಟೊಂದು ಆಕರ್ಷಿತರಾಗಿ ಇಲ್ಲಿಗೆ ಬರುತ್ತಿದ್ದಾರಲ್ಲ ಇದರ ರಹಸ್ಯವೇನು?"

ಮಣಿ: "ನನಗೆ ವ್ರಜದ (ಬೃಂದಾವನದ) ಲೀಲೆ ಜ್ಞಾಪಕಕ್ಕೆ ಬರುತ್ತಿದೆ. ಯಾವಾಗ ಕೃಷ್ಣ ಗೋಪಾಲರ ಮತ್ತು ಗೋವು ಕರುಗಳ ರೂಪನ್ನು ಧರಿಸಿದನೊ ಆಗ ಗೋಪಾಲರ ಮೇಲೆ ಗೋಪಿಯರ, ಕರುಗಳ ಮೇಲೆ ಗೋವುಗಳ ಆಕರ್ಷಣೆ ವಿಶೇಷವಾಗಲಾರಂಭಿಸಿತು."

ಶ್ರೀರಾಮಕೃಷ್ಣರು: "ಅದು ಭಗವಂತನ ಆಕರ್ಷಣೆ. ಸತ್ಯವೇನೆಂದರೆ ಭಗವತಿ ಆ ವಿದಧ ಮೋಡಿ ಹಾಕಿಬಿಡುತ್ತಾಳೆ; ಅದಕ್ಕಾಗಿ ಆಕರ್ಷಣೆ.

"ಇಲ್ಲಿ ನೋಡು, ಕೇಶವಸೇನನನ್ನು ನೋಡಲು ಎಷ್ಟೊಂದು ಜನ ಹೋಗುತ್ತಿದ್ದರೊ ಅಷ್ಟೊಂದು ಜನ ಇಲ್ಲಿಗೆ ಬರುತ್ತಿಲ್ಲ. ಕೇಶವಸೇನನನ್ನು ಎಷ್ಟೊಂದು ಜನ ಸನ್ಮಾನಿಸುತ್ತಾರೆ ಗೌರವಿಸುತ್ತಾರೆ! ಆತನ ಕೀರ್ತಿ ವಿಲಾಯಿತಿಯವರೆಗೂ ಹಬ್ಬಿದೆ. ವಿಕ್ಟೋರಿಯಾ ರಾಣಿ ಕೂಡ ಆತನೊಡನೆ ಮಾತುಕತೆಯಾಡಿದ್ದಾಳೆ. ಗೀತೆ ಕೂಡ ಹೇಳಿದೆ, 'ಯಾರನ್ನ ಅನೇಕರು ಸನ್ಮಾನಿಸುತ್ತಾರೊ ಗೌರವಿಸುತ್ತಾರೊ ಅವರಲ್ಲಿ ಭಗವಂತನ ಶಕ್ತಿ ವಿಶೇಷವಾಗಿ ಇದೆ' ಎಂದು. ಇಲ್ಲಿ ನೋಡಿದರೆ ಅಂಥದೇನು ಕಾಣುತ್ತಿಲ್ಲವಲ್ಲ?"

ಮಣಿ: "ಕೇಶವಸೇನನನ್ನು ನೋಡಲು ಸಂಸಾರಿಗಳು ಮಾತ್ರ ಹೋಗುತ್ತಿದ್ದರು."

ಶ್ರೀರಾಮಕೃಷ್ಣರು: "ಹೌದು, ಅದೇನೊ ನಿಜ. ಪ್ರಾಪಂಚಿಕರು ಮಾತ್ರವೆ."

ಮಣಿ: "ಕೇಶವಸೇನ ಏನನ್ನು ಮಾಡಿ ಹೋಗಿದಾನೊ ಅದು ಇರಲು ಹೋಗುವುದೆ?"

ಶ್ರೀರಾಮಕೃಷ್ಣರು: "ಏಕೆ, ಒಂದು ಸಂಹಿತೆಯನ್ನೇ ಬರಿದಿಟ್ಟು ಹೋಗಿದಾನಲ್ಲ,—ಅವರಲ್ಲಿ ಎಷ್ಟೊಂದು ನಿಯಮ!"

ಮಣಿ: "ಅವತಾರಪುರುಷ ತಾನೇ ಸ್ವತಃ ಧರ್ಮಸಂಸ್ಥಾಪನೆ ಮಾಡಿ ಹೋಗೋದು, ಅದು ಬೇರೆ ಮಟ್ಟಕ್ಕೆ ಸೇರಿದ್ದು. ಉದಾಹರಣೆ

ಗಾಗಿ ಚೈತನ್ಯ ದೇವನದು."

ಶ್ರೀರಾಮಕೃಷ್ಣರು: "ಹೌದು, ಹೌದು. ನೀನು ಹೇಳೋದು ಸರಿ."

ಮಣಿ: "ನೀವೆ ಹೇಳುತ್ತೀರಿ,— ಚೈತನ್ಯದೇವ ಹೇಳಿದ್ದಾನೆ, 'ನಾನು ಏನು ಬೀಜವನ್ನು ಚೆಲ್ಲಿ ಹೋಗಿದ್ದೇನೋ, ಒಂದಲ್ಲ ಒಂದು ದಿನ ಅದು ಫಲಿಸುತ್ತದೆ' ಎಂದು. ಯಾರೊ ಮನೆಯ ಕಾರ್ನಿಸಿನ ಮೇಲೆ ಬೀಜವನ್ನಿಟ್ಟಿದ್ದರು. ಮನೆ ಮುರಿದುಬಿದ್ದಿತೆಂದರೆ ಮತ್ತೆ ಆ ಬೀಜ ಮರ ವಾಗುತ್ತದೆ."

ಶ್ರೀರಾಮಕೃಷ್ಣರು: "ಇಲ್ಲಿ ನೋಡು, ಶಿವನಾಥ ಮತ್ತು ಆತನ ಅನುಯಾಯಿಗಳು ಯಾವ ಸಮಾಜವನ್ನು ಕಟ್ಟಿದ್ದಾರೊ, ಅದಕ್ಕೂ ಅನೇಕರು ಹೋಗುತ್ತಿದ್ದಾರೆ. ಅಲ್ಲವೇನು ?"

ಮಣಿ: "ಹೌದು, ಆ ಮಟ್ಟದ ಜನರು."

ಶ್ರೀರಾಮಕೃಷ್ಣರು: "ಹೌದು, ಹೌದು. ಸಂಸಾರಿ ಜನ ಅಲ್ಲಿಗೆ ಹೋಗುತ್ತಾರೆ. ಯಾರು ಭಗವಂತನಿಗಾಗಿ ವ್ಯಾಕುಲರಾಗಿದ್ದಾರೊ— ಕಾಮಕಾಂಚನವನ್ನು ತ್ಯಜಿಸಲು ಪ್ರಯತ್ನಿಸುತ್ತಿರುವರೊ— ಅಂಥವರು ಅಲ್ಲಿಗೆ ಹೋಗುವುದು ಬಹಳ ಕಡಿಮೆಯೇನೊ ನಿಜ."

ಮಣಿ: "ಇಲ್ಲಿಂದ ಒಂದು ಪ್ರವಾಹ ಹೊರಟರೆ ಅದು ಬಹಳ ಸೊಗಸಾಗಿಬಿಡುತ್ತದೆ. ಅದರ ವೇಗಕ್ಕೆ ಸಿಕ್ಕಿ ಎಲ್ಲವೂ ಕೊಚ್ಚಿಹೋಗಿ ಬಿಡುತ್ತವೆ. ಇಲ್ಲಿಂದ ಏನು ಹೊರಡುತ್ತದೆಯೊ ಅದು ಒಂದೇ ಸ್ವರದ್ದೇನು ಆಗೊದಿಲ್ಲವಲ್ಲ."

ಪರಮಹಂಸರು: ನಗುತ್ತ: "ಯಾರದು ಯಾವ ಭಾವವೊ ನಾನು ಅದನ್ನು ಸಂರಕ್ಷಿಸಲು ಪ್ರಯತ್ನಿಸುತ್ತಿದ್ದೇನೆ. ವೈಷ್ಣವನಿಗೆ ವೈಷ್ಣವರ ಭಾವ ದಲ್ಲಿಯೆ ಮುಂದುವರಿಯುವಂತೆ ಹೇಳುತ್ತೇನೆ; ಶಾಕ್ತನಿಗೆ ಶಾಕ್ತರ ಭಾವ. ಆದರೆ ಹೇಳುತ್ತೇನೆ, 'ಹೀಗೆ ಎಂದೂ ಹೇಳಬೇಡಿ—ನಮ್ಮ ಮಾರ್ಗವೆ ಸತ್ಯ, ಉಳಿದವರದೆಲ್ಲ ಮಿಥ್ಯ, ತಪ್ಪು!' ಎಂದು. ಹಿಂದೂ, ಮುಸಲ್ಮಾನ, ಕ್ರೈಸ್ತ— ವಿವಿಧ ಮಾರ್ಗದಿಂದ ಒಂದೇ ಸ್ಥಳಕ್ಕೆ ಹೋಗಿ ಸೇರುತ್ತಾರೆ. ತಮ್ಮ ತಮ್ಮ ಭಾವವನ್ನು ಸಂರಕ್ಷಿಸಿಕೊಂಡು ಹೃತ್ಪೂರ್ವಕವಾಗಿ ಭಗವಂತನನ್ನು ಕರೆದರೆ ಆತನನ್ನು ಪಡೆಯಬಹುದು.

"ವಿಜಯನ ಅತ್ತೆ ಹೇಳಿದಳು, 'ನೀವು ಬಲರಾಮನಿಗೆ ಹೇಳಿಬಿಡಿ, "ಸಾಕಾರ ಪೂಜೆಯ ಅವಶ್ಯಕತೆಯೇನಿದೆ; ನಿರಾಕಾರ ಸಚ್ಚಿದಾನಂದನನ್ನ

ಕರೆದರೆ ಆಯಿತಲ್ಲ?" ಎಂದು' ಅಂತ. ನಾನು ಹೇಳಿದೆ, 'ನಾನು ತಾನೆ ಅಂಥ ಮಾತು ಏಕೆ ಹೇಳಲು ಹೋಗಲಿ?—ಆತ ತಾನೆ ಅದನ್ನು ಏಕೆ ಕೇಳಲು ಹೋಗಬೇಕು?' ಎಂದು. ತಾಯಿ ಮೀನನ್ನು ಅಡಿಗೆಗೆ ಉಪಯೋಗಿಸುತ್ತಾಳೆ—ಒಂದು ಮಗುವಿಗೆ ಪಲಾವು ಮಾಡಿ ಬಡಿಸುತ್ತಾಳೆ. ಯಾವ ಮಗುವಿಗೆ ಹೊಟ್ಟೆ ಸರಿಯಾಗಿಲ್ಲವೊ ಅದಕ್ಕೆ ಮೀನಿನ ಸಾರು ಮಾಡಿ ಬಡಿಸುತ್ತಾಳೆ. ರುಚಿಭೇದ ಅಧಿಕಾರಿಭೇದ ಇವಕ್ಕೆ ತಕ್ಕಂತೆ ಒಂದೇ ಒಂದು ವಸ್ತುವನ್ನು ವಿವಿಧ ರೂಪದಲ್ಲಿ ಕೊಡಬೇಕಾಗುತ್ತದೆ."

ಮಣಿ: "ಹೌದು, ಅದೇನೊ ನಿಜ. ದೇಶಕಾಲಪಾತ್ರಕ್ಕೆ ತಕ್ಕಂತೆ ಪ್ರತಿಯೊಬ್ಬನಿಗೂ ಪ್ರತ್ಯೇಕ ಪ್ರತ್ಯೇಕ ಮಾರ್ಗ. ಆದರೆ ಯಾವ ಮಾರ್ಗವನ್ನಾದರೂ ಹಿಡಿದು ಹೋಗಲಿ ಶುದ್ಧ ಮನಸ್ಕನಾಗಿ ಹೃತ್ಪೂರ್ವಕ ವ್ಯಾಕುಲತೆಯಿಂದ ಆತನನ್ನು ಕರೆದರೆ ಆಗ ಆತನನ್ನು ಪಡೆಯಬಹುದು. ಹೀಗೆಂದು ನೀವೇ ಹೇಳುತ್ತೀರಿ."

ಪರಮಹಂಸರು ಕೊಠಡಿಯೊಳಗೆ ತಮ್ಮ ಸ್ವಸ್ಥಾನದಲ್ಲಿ ಕುಳಿತುಕೊಂಡಿದಾರೆ. ನೆಲದಮೇಲೆ ಮುಖರ್ಜಿಯ ಸಂಬಂಧಿ ಹರಿ, ಮಾಸ್ಟರ್ ಮೊದಲಾದವರು ಕುಳಿತಿದಾರೆ. ಒಬ್ಬ ಅಪರಿಚಿತ ಪರಮಹಂಸರಿಗೆ ಪ್ರಣಾಮಮಾಡಿ ಒಂದುಕಡೆ ಕುಳಿತುಕೊಂಡಿದಾನೆ. ಆತ ಹೊರಟು ಹೋದಮೇಲೆ ಪರಮಹಂಸರು ಹೇಳಿದರು, "ಆತನ ಕಣ್ಣಿನ ಲಕ್ಷಣ ಒಳ್ಳೆಯದಲ್ಲ—ಆತನದು ಬೆಕ್ಕಿನಹಾಗೆ ಕಂದುಹಳದಿ ವರ್ಣದ ಕಣ್ಣು" ಎಂದು.

ಹರಿ ಹುಕ್ಕ ತಯಾರುಮಾಡಿ ಪರಮಹಂಸರಿಗೆ ತಂದುಕೊಟ್ಟ.

ಪರಮಹಂಸರು ಹುಕ್ಕವನ್ನು ಕೈಯಲ್ಲಿ ಹಿಡಿದು ಹರಿಗೆ: "ಎಲ್ಲಿ ನಿನ್ನ ಕೈ ನೋಡೋಣ. ಒಹೊ, ಎಲ್ಲಾ ಇದೆ!—ಇದು ಬಹಳ ಒಳ್ಳೆಯ ಲಕ್ಷಣ. ನಿನ್ನ ಕೈ ಸ್ವಲ್ಪ ಸಡಿಲಬಿಡು ನೋಡೋಣ."

ಪರಮಹಂಸರು ತಮ್ಮ ಕೈ ಮೇಲೆ ಹರಿಯ ಕೈಯನ್ನು ಇಟ್ಟುಕೊಂಡು ಅದರ ಭಾರವನ್ನು ಕಂಡುಹಿಡಿಯುತ್ತಿರುವಂತೆ ಅದನ್ನು ತೂಗುತ್ತಿದ್ದಾರೆ.

ಪರಮಹಂಸರು: "ಈಗಲೂ ಈತನಿಗೆ ಹುಡುಗತನದಂಥ ಬುದ್ಧಿ;—ಇನ್ನೂ ಯಾವ ದೋಷವೂ ತಾಗಿಲ್ಲ. (ಭಕ್ತರ ಕಡೆ ತಿರುಗಿ) ಕೈ ನೋಡಿಯೆ ವ್ಯಕ್ತಿ ಸರಳನೊ ಕಪಟಿಯೊ ಎಂಬುದನ್ನು ಹೇಳಿಬಿಡಬಲ್ಲೆ.

(ಹಾಗೆ) ಏಕೆ,—ಮಾವನ ಮನೆಗೆ ಹೋಗು—ಹೆಂಡತಿಯೊಡನೆ ಮಾತು ಕತೆಯಾಡು—ಇಚ್ಛೆ ಬಂದರೆ ಆಕೆಯೊಡನೆ ಸ್ವಲ್ಪ ಸರಸಸಲ್ಲಾಪಗಳನ್ನೂ ಆಡು. (ಮಣಿಯ ಕಡೆ ತಿರುಗಿ) ಏನು, ಸರಿಯೆ?" (ಮಾಸ್ಟರ್ ಮತ್ತು ಉಳಿದವರು ನಗುತ್ತಾರೆ.)

ಮಾಸ್ಟರ್: "ಹೊಸ ಮಡಕೆ ಕೆಟ್ಟುಹೋಗಿಬಿಟ್ಟರೆ, ಅದರಲ್ಲಿ ಮತ್ತೆ ಹಾಲನ್ನು ಇಡಲಾಗೊದಿಲ್ಲ."

ಪರಮಹಂಸರು ನಗುತ್ತ: "ಅದು ಮೊದಲೇ ಕೆಟ್ಟುಹೋದ ಮಡಕೆ ಯಲ್ಲ ಎಂಬುದು ನಿನಗೆ ಹೇಗೆ ಗೊತ್ತು?"

ಮುಖರ್ಜಿಗಳು—ಮಹೇಂದ್ರ ಮತ್ತು ಪ್ರಿಯನಾಥ—ಇಬ್ಬರೂ ಸಹೋದರರೆ. ಅವರು ಯಾವ ಸರ್ಕಾರಿ ಉದ್ಯೋಗದಲ್ಲೂ ಇಲ್ಲ. ಅವರು ಹಿಟ್ಟಿನ ಮಿಲ್ಲು ಇಟ್ಟಿದ್ದಾರೆ. ಪ್ರಿಯನಾಥ ಹಿಂದೆ ಎಂಜನಿಯರ್ ಕೆಲಸ ಮಾಡುತ್ತಿದ್ದ. ಪರಮಹಂಸರು ಹರಿಯೊಡನೆ ಮುಖರ್ಜಿ ಸಹೋದರರ ವಿಷಯವಾಗಿ ಮಾತುಕತೆಯಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು ಹರಿಗೆ: "ಹಿರಿಯವನು ಬಹಳ ಒಳ್ಳೆಯವ, ಅಲ್ಲವೆ?—ಬಹಳ ಒಳ್ಳೆಯವ, ಸರಳ ಜೀವಿ."

ಹರಿ: "ಹೌದು, ನಿಜ."

ಶ್ರೀರಾಮಕೃಷ್ಣರು ಭಕ್ತರಿಗೆ: "ಚಿಕ್ಕವನು ಬಹಳ ಕೃಪಣ ನಲ್ಲವೆ?—ಇಲ್ಲಿಗೆ ಬಂದ ಮೇಲೆ ಈಗ ಆತ ಎಷ್ಟೋ ಮೇಲು. ನನಗೆ ಹೇಳಿದ, 'ನನಗೆ ಏನೂ ಗೊತ್ತಿರಲಿಲ್ಲ' ಎಂದು. (ಹರಿಯ ಕಡೆಗೆ ತಿರುಗಿ) ಇವರೇನಾದರು ದಾನ ಧರ್ಮ ಮಾಡುತ್ತಾರೇನು?"

ಹರಿ: "ಅಂಥದೇನು ನನ್ನ ಕಣ್ಣಿಗೆ ಬಿದ್ದಿಲ್ಲ. ಇವರ ಹಿರಿಯ ಅಣ್ಣ ಬದುಕಿದ್ದಾಗ ಅದು ನಡೆಯಿತು. ಆತ ಬಹಳ ಒಳ್ಳೆಯ ಮನುಷ್ಯ—ಬಹಳವಾಗಿ ಆಗ ದಾನ ಧ್ಯಾನ ಎಲ್ಲ ನಡೆಯಿತು."

ಶ್ರೀರಾಮಕೃಷ್ಣರು ಮಾಸ್ಟರ್ ಮೊದಲಾದವರಿಗೆ: "ಶರೀರದ ಲಕ್ಷಣ ನೋಡಿ ಬಹುಮಟ್ಟಿಗೆ ತಿಳಿದುಕೊಳ್ಳಬಹುದು ಈತನಿಗೆ ದೊರಕುತ್ತೊ ಇಲ್ಲವೊ ಎಂಬುದನ್ನ. ಕಪಟಿಯ ಕೈ ಭಾರವಾಗಿರುತ್ತೆ. ಮೂಗು ಗಿಡ್ಡವಾಗಿರೋದು ಒಳ್ಳೆಯದಲ್ಲ. ಶಂಭುಬಾಬುವಿನ ಮೂಗು ಗಿಡ್ಡಮೂಗು. ಅದಕ್ಕಾಗಿಯೆ ಆತ ಅಷ್ಟು ಬುದ್ಧಿವಂತನಾಗಿದ್ದರೂ ತಕ್ಕಂತೆ ಸರಳನಾಗಿರಲಿಲ್ಲ. ಪಾರಿವಾಳದಂಥ ಎದೆಯ ಗೂಡೂ ಒಳ್ಳೆಯ

ಲಕ್ಷಣವಲ್ಲ. ಗಟ್ಟಿ ಎಲುಬುಗಳು, ದಪ್ಪವಾದ ಮೊಳಕೈ ಕೀಲುಗಳು ಒಳ್ಳೆಯವಲ್ಲ. ಬೆಕ್ಕಿನ ಕಣ್ಣು—ಬೆಕ್ಕಿನಹಾಗೆ ಕಂದುಹಳದಿ ವರ್ಣದ ಕಣ್ಣು ಒಳ್ಳೆಯದಲ್ಲ.

"ತುಟಿ—ಮೇದರ ತುಟಿಯಂತೆ ಇದ್ದರೆ–ನೀಚಬುದ್ಧಿ ಉಂಟಾಗುತ್ತದೆ. ಒಬ್ಬ ಬ್ರಾಹ್ಮಣ ಇಲ್ಲಿನ ವಿಷ್ಣು ದೇವಾಲಯದಲ್ಲಿ ಕೆಲವು ತಿಂಗಳ ಮಟ್ಟಿಗೆ ಆಕ್ಟಿಂಗ್ ಆಗಿ ಬಂದಿದ್ದ. ನಾನು ಆತನ ಕೈಯಿಂದ ಊಟ ಮಾಡುತ್ತಿರಲಿಲ್ಲ—ಅಕಸ್ಮಾತ್ತಾಗಿ ಬಾಯಿಂದ ಹೇಳಿಬಿಟ್ಟೆ, 'ಎಲೊ ಮೇದ!' ಎಂದು. ಬಳಿಕ ಆತ ಒಂದು ದಿನ ಹೇಳಿದ: 'ಹೌದು, ನಮ್ಮ ಮನೆ ಮೇದರ ಕೇರಿಯಲ್ಲಿದೆ—ನನಗೆ ಮೇದರ ಹಾಗೆ ಮಕ್ಕರಿ ಕುಕ್ಕೆ ಮಾಡೋಕೆ ಬರುತ್ತದೆ' ಎಂದು.

"ಮಾಲುಗಣ್ಣು, ಒಕ್ಕಣ್ಣು ಇನ್ನೂ ಅಧಿಕ ಕೆಟ್ಟ ಲಕ್ಷಣಗಳು. ಒಕ್ಕಣ್ಣು ಮಾಲುಗಣ್ಣಿಗಿಂತ ಎಷ್ಟೋ ಮೇಲು. ಮಾಲುಗಣ್ಣಿನವರು ಬಹಳ ದುಷ್ಟರು ಮತ್ತು ಕಪಟಿಗಳು ಆಗುತ್ತಾರೆ.

"ನ್ಯಾಯರತ್ನ ಮಹೇಶನ ಒಬ್ಬ ವಿದ್ಯಾರ್ಥಿ ಇಲ್ಲಿಗೆ ಬಂದಿದ್ದ. ಆತ ಹೇಳಿದ ತಾನು ಒಬ್ಬ ನಾಸ್ತಿಕ ಎಂದು. ಅವನು ಹೃದಯನಿಗೆ ಹೇಳಿದ: 'ನಾನು ಒಬ್ಬ ನಾಸ್ತಿಕ. ನೀನು ಒಬ್ಬ ಆಸ್ತಿಕನ ಪಾತ್ರವಹಿಸಿ ನನ್ನೊಡನೆ ವಾದ ಮಾಡು' ಎಂದು. ಆಗ ನಾನು ಆತನನ್ನು ಸ್ವಲ್ಪ ಚೆನ್ನಾಗಿ ದೃಷ್ಟಿಸಿ ನೋಡಿದೆ. ನೋಡುತ್ತೇನೆ, ಬೆಕ್ಕಿನ ಕಣ್ಣು!

"ನಡಗೆಯಲ್ಲೇ ಸ್ವಭಾವ ಒಳ್ಳೆಯದೊ ಕೆಟ್ಟದ್ದೊ ಎಂಬುದರ ಸೂಕ್ಷ್ಮ ಗೊತ್ತಾಗಿಬಿಡುತ್ತದೆ.

"ಪುರುಷಶಿಶ್ನದ ಮುಂದೊಗಲು ಮುಸಲ್ಮಾನರು ಸುನತಿ (Circumcision) ಮಾಡಿಕೊಂಡ ಹಾಗೆ ಇದ್ದರೆ ಅದು ಒಂದು ಕೆಟ್ಟ ಲಕ್ಷಣ. (ಮಾಸ್ಟರ್ ಮೊದಲಾದವರು ನಗುತ್ತಿದ್ದಾರೆ.) (ಮಾಸ್ಟರಿಗೆ ನಗುತ್ತ) ನೀನು ಅದನ್ನು ನೋಡಿಕೊ—ಅದು ಕೆಟ್ಟ ಲಕ್ಷಣ." (ಎಲ್ಲರೂ ನಗುತ್ತಿದ್ದಾರೆ.)

ಕೊಠಡಿಯಿಂದ ಹೊರಕ್ಕೆ ಬಂದು ಪರಮಹಂಸರು ವರಾಂಡದಲ್ಲಿ ಸುತ್ತಾಡುತ್ತಿದ್ದಾರೆ. ಅವರ ಜೊತೆಯಲ್ಲಿ ಮಾಸ್ಟರ್ ಮತ್ತು ಬಾಬುರಾಮ ಇದ್ದಾರೆ.

ಶ್ರೀರಾಮಕೃಷ್ಣರು ಹಾಜರಾನಿಗೆ: "ಒಬ್ಬ ಇಲ್ಲಿಗೆ ಬಂದಿದ್ದ,—

ನೋಡಿದೆ, ಬೆಕ್ಕಿನಂತೆ ಕಣ್ಣು. ಆತ ಕೇಳಿದ: 'ನಿಮಗೆ ಜ್ಯೋತಿಷವೇನಾದರು ಗೊತ್ತೆ?— ನಾನು ಒಂದು ಸ್ವಲ್ಪ ಕಷ್ಟದಲ್ಲಿ ಸಿಕ್ಕಿದೇನೆ' ಅಂತ. ನಾನು ಉತ್ತರವಿತ್ತೆ: 'ಇಲ್ಲ;— ವರಾಹನಗರಕ್ಕೆ ಹೋಗು; ಅಲ್ಲಿ ಜ್ಯೋತಿಷ ತಿಳಿದ ಪಂಡಿತರು ಇದಾರೆ' ಎಂದು.''

ಬಾಬುರಾಮು ಮತ್ತು ಮಾಸ್ಟರ್ ನೀಲಕಂಠನ ಬಯಲು ನಾಟಕದ ಸಂಬಂಧವಾಗಿ ಮಾತುಕತೆಯಾಡುತ್ತಿದ್ದಾರೆ. ಬಾಬುರಾಮು ನವೀನ ಸೇನನ ಮನೆಗೆ ಹೋಗಿದ್ದು ಹಿಂದಿರುಗಿ ದಕ್ಷಿಣೇಶ್ವರಕ್ಕೆ ಬಂದು ನೆನ್ನೆ ರಾತ್ರಿ ಇಲ್ಲೆ ಇದ್ದ. ಇಂದು ಪ್ರಾತಃಕಾಲ ಪರಮಹಂಸರೊಡನೆ ದಕ್ಷಿಣೇಶ್ವರ ದಲ್ಲಿರುವ ನವೀನ ನಿಯೋಗಿಯ ಮನೆಗೆ ಹೋಗಿ ನೀಲಕಂಠನ ಬಯಲು ನಾಟಕ ನೋಡಿಬಿಟ್ಟು ಹಿಂದಿರುಗಿ ಬಂದಿದ್ದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಮತ್ತು ಬಾಬುರಾಮುವಿಗೆ: ''ನೀವೇನು ಮಾತನಾಡುತ್ತಿರೋದು?''

ಮಾಸ್ಟರ್ ಮತ್ತು ಬಾಬುರಾಮು: ''ನೀಲಕಂಠನ ಬಯಲು ನಾಟಕದ ಸಂಬಂಧವಾಗಿ,— ಆ ಹಾಡಿನ ಸಂಬಂಧವಾಗಿ— ಶ್ಯಾಮಾ ಪದೆಯನ್ನು ಹೊಂದುವುದರ ಮತ್ತು ನದೀತೀರ ವಾಸದ ಸಂಬಂಧವಾಗಿ ಮಾತನಾಡುತ್ತಿದ್ದೇವೆ.''

ಪರಮಹಂಸರು ವರಾಂಡದಲ್ಲಿ ನಡೆಯುತ್ತ ನಡೆಯುತ್ತ ಇದ್ದ ಹಾಗೆ, ಮಣಿಯನ್ನು ಒಂದು ಕಡೆಗೆ ಕರೆದುಕೊಂಡು ಹೋಗಿ ಹೇಳು ತ್ತಿದ್ದಾರೆ, ''ನೀನು ಭಗವಚ್ಚಿಂತನೆ ಮಾಡುವುದು ಆದಷ್ಟುಮಟ್ಟಿಗೆ ಹೆಚ್ಚು ಜನರಿಗೆ ಗೊತ್ತಾಗದಿರುವುದೆ ಮೇಲು'' ಅಂತ. ಹೀಗೆಂದು ಹೇಳಿ ಒಮ್ಮಿಂದೊಮ್ಮೆಯೆ ಹೊರಟುಹೋದರು. ಒಂದು ಸ್ವಲ್ಪ ಹೊತ್ತಾದ'ನಂತರ ಹಾಜರಾನೊಡನೆ ಮಾತುಕತೆಗಳಾಡಲು ಆರಂಭಿಸಿದಾರೆ.

ಹಾಜರಾ: ''ನೀಲಕಂಠ ನಿಮಗೆ ಹೇಳಿದ್ದಾನೆ ತಾನೇ ಇಲ್ಲಿಗೆ ಬರುತ್ತೇನೆ ಎಂದು; ಕರೆಸುವುದೆ ಒಳ್ಳೆಯದು.''

ಶ್ರೀರಾಮಕೃಷ್ಣರು: ''ಬೇಡ, ರಾತ್ರಿಯೆಲ್ಲ ನಿದ್ದೆಗೆಟ್ಟದ್ದಾನೆ,— ಭಗವಂತನ ಇಚ್ಛೆಯಿಂದ ತಾನೇ ಆತ ಇಲ್ಲಿಗೆ ಬರುವುದಾದರೆ ಅದು ಬೇರೆ ವಿಷಯ.''

ಪರಮಹಂಸರು ಬಾಬುರಾಮನಿಗೆ ನಾರಾ'ಣನ ಮನೆಗೆ ಹೋಗಿ ನಾರಾ'ಣನನ್ನು ನೋಡಿ ಬರುವಂತೆ ಹೇಳುತ್ತಿದ್ದಾರೆ. ಅವರು ನಾರಾ'ಣನನ್ನ

ಸಾಕ್ಷಾತ್ ನಾರಾಯಣನೆ ಎಂದು ನೋಡುತ್ತಿದ್ದಾರೆ. ಅದಕ್ಕಾಗಿಯೆ ಆತನನ್ನು ನೋಡಲು ವ್ಯಾಕುಲರಾಗಿದಾರೆ. ಬಾಬುರಾಮನಿಗೆ ಹೇಳುತ್ತಿದ್ದಾರೆ, "ನೀನು ಒಂದು ಇಂಗ್ಲಿಷು ಪುಸ್ತಕವನ್ನ ತೆಗೆದುಕೊಂಡು ಆತನ ಮನೆಗೆ ಹೋಗು" ಎಂದು.

ಪರಮಹಂಸರು ಕೊಠಡಿಯಲ್ಲಿ ತಮ್ಮ ಸ್ವಸ್ಥಾನದಲ್ಲಿ ಕುಳಿತಿದ್ದಾರೆ. ಘಂಟೆ ಮೂರರ ಸಮಯ. ನೀಲಕಂಠ ಐದಾರು ತನ್ನ ಸಂಗೋಪಾಂಗಿಗಳೊಡನೆ ಪರಮಹಂಸರ ಕೊಠಡಿ ಕಡೆಗೆ ಬರುತ್ತಿದ್ದಾನೆ. ಪರಮಹಂಸರು ಆತನನ್ನು ಎದುರುಗೊಳ್ಳಲು ಹೋಗುತ್ತಿರುವಂತೆ ಪೂರ್ವ ದಿಕ್ಕಿನ ಬಾಗಿಲ ಕಡೆ ಹೋದರು. ನೀಲಕಂಠ ಪೂರ್ವದ ಬಾಗಿಲಿನಿಂದ ಒಳಕ್ಕೆ ಬಂದು ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಿದ್ದಾನೆ.

ಪರಮಹಂಸರು ಸಮಾಧಿಸ್ಥರಾಗಿದ್ದಾರೆ. ಅವರ ಹಿಂದುಗಡೆ ಬಾಬುರಾಮ ನಿಂತಿದ್ದಾನೆ— ಮುಂದುಗಡೆ ಮಾಸ್ಟರ್ ನೀಲಕಂಠ ಮತ್ತು ಉಳಿದ ನಾಟಕಾಭಿನಯಿಗಳು ಆಶ್ಚರ್ಯಚಕಿತರಾಗಿ ಅವರನ್ನು ನೋಡುತ್ತಾ ನಿಂತಿದ್ದಾರೆ. ಮಂಚದ ಉತ್ತರಕ್ಕೆ ನಿಂತುಕೊಂಡು ಖಜಾಂಚಿ ಧೀನನಾಥ ನೋಡುತ್ತಿದ್ದಾನೆ. ಬರುತ್ತ ಬರುತ್ತ ದೇವಾಲಯದ ಕೆಲಸಗಾರರಿಂದ ಕೊಠಡಿ ತುಂಬಿಹೋಗಿದೆ. ಈಗ ಪರಮಹಂಸರ ಭಾವ ಸ್ವಲ್ಪ ಉಪಶಮನವಾಗಿದೆ. ಅವರು ನೆಲದ ಮೇಲೆ ಹಾಸಿದ್ದ ಮಂದಲಿಗೆ ಮೇಲೆ ಕುಳಿತಿದ್ದಾರೆ— ಮುಂದುಗಡೆ ನೀಲಕಂಠ, ಚತುರ್ದಿಕ್ಕುಗಳಲ್ಲಿಯೂ ಉಳಿದ ಭಕ್ತರು ಕುಳಿತಿದ್ದಾರೆ.

ಪರಮಹಂಸರು ಭಾವಾವಿಷ್ಟರಾಗಿಯೆ: "ನಾನು ಕ್ಷೇಮವಾಗಿದೇನೆ."

ನೀಲಕಂಠ ಕೈಮುಗಿದು: "ನನಗೂ ಕ್ಷೇಮವಾಗುವಂತೆ ಕೃಪೆ ಮಾಡಿ."

ಪರಮಹಂಸರು ನಗುತ್ತ: "ನೀನು ಅಗಲೆ ಕ್ಷೇಮವಾಗಿದ್ದೀಯೆ. 'ಕ'ಕ್ಕೆ 'ಆ' ಸೇರಿಸಿದರೆ 'ಕಾ' ಆಗುತ್ತದೆ. ಅದಕ್ಕೆ ಮತ್ತೆ ಪುನಃ 'ಆ' ಸೇರಿಸಿದರೆ ಏನು ಪ್ರಯೋಜನ? 'ಕಾ'ಕ್ಕೆ ಪುನಃ ಪುನಃ 'ಆ' ಸೇರಿಸಿದರೆ ಅದು 'ಕಾ' ಆಗಿಯೆ ಉಳಿಯುತ್ತದೆ." (ಎಲ್ಲರೂ ನಗುತ್ತಾರೆ.)

ನೀಲಕಂಠ: "ಈ ಸಂಸಾರದಲ್ಲಿ ಬಿದ್ದು ಹೊರಳಾಡುತ್ತಿದ್ದೇನಲ್ಲ!"

ಪರಮಹಂಸರು ನಗುತ್ತ: "ಪರರಿಗೋಸ್ಕರ ನಿನ್ನನ್ನು ಸಂಸಾರದಲ್ಲಿ

ಇಟ್ಟಿದ್ದಾನೆ. ಅಷ್ಟಪಾಶಗಳಿವೆ. ಎಲ್ಲ ಒಟ್ಟಿಗೆ ಹೋಗೋದಿಲ್ಲ. ಒಂದೆರಡು ಪಾಶಗಳನ್ನ ಆತ ಇಟ್ಟಿರುತ್ತಾನೆ—ಲೋಕಶಿಕ್ಷಣೆಗಾಗಿ. ನೀನು ಈ ಬಯಲು ನಾಟಕವನ್ನ ಆಡಿದೆ. ನಿನ್ನ ಭಕ್ತಿಯನ್ನು ನೋಡಿ ಎಷ್ಟೊಂದು ಜನಕ್ಕೆ ಉಪಕಾರವಾಗುತ್ತಿದೆ. ನೀನು ಇದನ್ನೆಲ್ಲ ಬಿಟ್ಟುಬಿಟ್ಟರೆ ಇವರ (ನಟರ) ಗತಿಯೇನಾಗಬೇಕು ?

"ಆತ ನಿನ್ನ ಮೂಲಕ ತನ್ನ ಕೆಲಸ ಮಾಡಿಸಿಕೊಳ್ಳುತ್ತಿದ್ದಾನೆ. ಅದು ಮುಗಿಯಿತೆಂದರೆ ನೀನು ಮತ್ತೆ ಜನ್ಮವೆತ್ತುವುದಿಲ್ಲ. ಗೃಹಿಣಿ ಮನೆ ಕೆಲಸವನ್ನೆಲ್ಲ ಪೂರ್ಣವಾಗಿ ಮುಗಿಸಿ,—ಎಲ್ಲರಿಗೂ ಊಟಕ್ಕೆ ಗೀಟಕ್ಕೆ ಹಾಕಿ—ಆಳು ಗೀಳುಗಳಿಗೂ ಊಟಕ್ಕೆ ಬಡಿಸಿ—ಸ್ನಾನಕ್ಕೆ ಹೋಗುತ್ತಾಳೆ ;—ಆಗ ಕೂಗಿ ಗಂಟಲು ಕಿತ್ತುಕೊಂಡರೂ ಸ್ನಾನ ಬಿಟ್ಟು ಬರೋದಿಲ್ಲ."

ನೀಲಕಂಠ : "ನನಗೆ ಆಶೀರ್ವಾದ ಮಾಡಿ."

ಶ್ರೀರಾಮಕೃಷ್ಣರು : "ಕೃಷ್ಣನ ವಿರಹದಿಂದ ಯಶೋದೆ ಉನ್ಮತ್ತಳಾಗಿದ್ದಾಳೆ,—ಶ್ರೀಮತಿಯನ್ನ (ರಾಧೆಯನ್ನ) ನೋಡಲು ಹೋಗಿದ್ದಾಳೆ. ಆಗ ಶ್ರೀಮತಿ ಧ್ಯಾನ ಮಾಡುತ್ತಿದ್ದಳು. ಆಕೆ ಭಾವಾವೇಶಳಾಗಿ ಯಶೋದೆಗೆ ಹೇಳಿದಳು: 'ನಾನು ಆ ಮೂಲಪ್ರಕೃತಿ ಆಧ್ಯಾಶಕ್ತಿ, ನೀನು ಒಂದು ವರ ಬೇಡಿಕೊ' ಎಂದು. ಯಶೋದೆ ಉತ್ತರವಿತ್ತಳು: 'ನಾನು ಏನನ್ನು ತಾನೆ ಕೇಳಲಿ? ಕೊಡುವುದಾದರೆ, ಕಾಯಾ ಮನಸಾ ವಾಚಾ ಆತನ ಚಿಂತನೆ, ಆತನ ಸೇವೆ ಮಾಡುವಂತೆ; ಕಿವಿಯಿಂದ ಆತನ ನಾಮ ಗುಣ ಕೀರ್ತನೆಯನ್ನು ಕೇಳುವಂತೆ ; ಕೈಯಿಂದ ಆತನ ಮತ್ತು ಆತನ ಭಕ್ತರ ಸೇವೆ ಮಾಡುವಂತೆ; ಕಣ್ಣಿನಿಂದ ಆತನ ರೂಪವನ್ನ ಮತ್ತು ಆತನ ಭಕ್ತರನ್ನ ನೋಡುವಂತೆ ಅನುಗ್ರಹಿಸು' ಎಂದು.

"ನೀನು ಭಗವಂತನ ಹೆಸರನ್ನು ಉಚ್ಚರಿಸಿದೊಡನೆಯೆ ನಿನ್ನ ಕಣ್ಣುಗಳು ಪ್ರೇಮಾಶ್ರುವಿನಿಂದ ತುಂಬಿ ಹೋಗುವುದರಿಂದ, ನಿನಗೇಕೆ ಚಿಂತನೆ ?—ಆತನ ಮೇಲಿನ ಪ್ರೇಮ ನಿನಗಾಗಲೆ ಉಂಟಾಗಿಬಿಟ್ಟಿದೆ.

"ಬಹುತ್ವದ ಜ್ಞಾನಕ್ಕೆ ಅಜ್ಞಾನ ಎಂದು ಹೆಸರು, ಏಕತ್ವದ ಜ್ಞಾನಕ್ಕೆ ಜ್ಞಾನ ಎಂದು ಹೆಸರು—ಅಂದರೆ ಭಗವಂತನೊಬ್ಬನೆ ಸತ್ಯ, ಸರ್ವಭೂತಗಳಲ್ಲಿಯೂ ಇದಾನೆ ಎಂದು. ಆತನೊಡನೆ ಆಲಾಪಿಸುವುದಕ್ಕೆ ವಿಜ್ಞಾನ ಎಂದು ಹೆಸರು—ಆತನ ಸಾಕ್ಷಾತ್ಕಾರವನ್ನು ಮಾಡಿಕೊಂಡು ಹಲವಾರು

ವಿಧದಿಂದ ಆತನನ್ನು ಪ್ರೀತಿಸುವುದಕ್ಕೆ ವಿಜ್ಞಾನ ಎಂದು ಹೆಸರು.

"ಮತ್ತೆ ಇದೆ—ಆತ ದ್ವೈತಾದ್ವೈತ ವಿವರ್ಜಿತ—ವಾಕ್ಯಮನಾತೀತ. ಲೀಲೆಯಿಂದ ನಿತ್ಯಕ್ಕೆ ನಿತ್ಯದಿಂದ ಲೀಲೆಗೆ ಬರೋದು;—ಇದಕ್ಕೆ ಪಕ್ವಭಕ್ತಿ ಎಂದು ಹೆಸರು.

"ನಿನ್ನ ಆ ಹಾಡು ಬಹಳ ಚೆನ್ನಾಗಿದೆ—ಶ್ಯಾಮಾಪದೆಯನ್ನು ಹೊಂದುವುದರ ಮತ್ತು ನದೀತೀರದಲ್ಲಿ ವಾಸಿಸುವುದರ ಎಂಬ ಹಾಡು. ಅದು ದೊರೆತು ಬಿಟ್ಟರೇ ಮುಗಿಯಿತು,–ಎಲ್ಲಾ ಆಕೆಯ ಕೃಪೆ ಮೇಲೆ ನಿಂತಿದೆ. ಆದರೆ ಆಕೆಯನ್ನ ಕರೆಯಬೇಕು,—ಸುಮ್ಮನೆ ಇದ್ದುಬಿಟ್ಟರೆ ಆಗೋದಿಲ್ಲ. ವಕೀಲ ನ್ಯಾಯಾಧೀಶನಿಗೆ ಎಲ್ಲವನ್ನೂ ತಿಳಿಸಿ ಕೊನೆಗೆ ಹೇಳುತ್ತಾನೆ: 'ಏನೇನು ತಿಳಿಸಬೇಕೊ ಅದೆಲ್ಲವನ್ನೂ ತಿಳಿಸಿಬಿಟ್ಟಿದೇನೆ, ಈಗ ತಮ್ಮ ಚಿತ್ತ' ಎಂದು."

ಸ್ವಲ್ಪ ಹೊತ್ತಿನ'ನಂತರ ಪರಮಹಂಸರು ನೀಲಕಂಠನಿಗೆ ಹೇಳುತ್ತಿದ್ದಾರೆ: "ನೀನು ಇಂದು ಬೆಳಗ್ಗೆ ಬಹಳವಾಗಿ ಹಾಡಿದೆ; ಮತ್ತೆ ಇಲ್ಲಿಗೆ ಶ್ರಮ ವಹಿಸಿ ಬಂದಿದ್ದೀಯೆ. ನೋಡು, ಇಲ್ಲಿ ಮಾತ್ರ ಬರಿ 'ಆನರರಿ' ಯೆ" ಎಂದು.

ನೀಲಕಂಠ: "ಏಕೆ ಹಾಗೆ?"

ಪರಮಹಂಸರು ನಗುತ್ತ: "ಅರ್ಥವಾಯಿತು, ಏನು ಹೇಳುತ್ತೀಯೆ ಅಂಬುದು."

ನೀಲಕಂಠ: "ಅಮೂಲ್ಯ ರತ್ನವನ್ನೇ ತೆಗೆದುಕೊಂಡು ಹೋಗುತ್ತೇನೆ!!!"

ಶ್ರೀ ರಾಮಕೃಷ್ಣರು: "ಆ ಅಮೂಲ್ಯ ರತ್ನ ನಿಮ್ಮ ಹತ್ತಿರವೆ ಇದೆ. ಮತ್ತೆ 'ಕಾ' ಗೆ 'ಆ' ಸೇರಿಸಿದರೆ ಆಗುವುದೇನು? ಅದು ನಿನ್ನಲ್ಲಿ ಇಲ್ಲದೆ ಇದ್ದರೆ, ನಿನ್ನ ಹಾಡು ಅಷ್ಟೊಂದು ಚೆನ್ನಾಗಿ ಏಕೆ ಮನಸ್ಸಿಗೆ ಹಿಡಿಸುತ್ತದೆ? ರಾಮಪ್ರಸಾದ ಸಿದ್ಧಪುರುಷ, ಅದಕ್ಕಾಗಿಯೆ ಆತನ ಹಾಡುಗಳು ಬಹಳವಾಗಿ ಹಿಡಿಸುತ್ತವೆ. ಸಾಧಾರಣ ಜೀವಕ್ಕೆ ಮಾನುಷ್ ಎಂದು ಹೆಸರು. ಯಾರಿಗೆ ಚೈತನ್ಯ ಉಂಟಾಗಿದೆಯೊ ಅವನು ಮಾನ್‌ಹ್ಹುಸ್ (ಜಾಗ್ರತನಾದ ಮನುಷ್ಯ). ಆದ್ದರಿಂದ ನೀನು ಮಾನ್‌ಹ್ಹುಸ್.

"ಅಲ್ಲಿ ನಿನ್ನ ಹಾಡುಗಾರಿಕೆ ಆಗುವುದೆಂದು ಕೇಳಿ ನಾನೇ ಅಲ್ಲಿಗೆ ಬರಬೇಕೆಂದಿದ್ದೆ—ಅಷ್ಟರಲ್ಲಿ ನಿಯೋಗಿ ಕೂಡ ಇಲ್ಲಿಗೆ ಬಂದು ನನ್ನನ್ನು ಆಹ್ವಾನಿಸಿದ."

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದ್ದಾರೆ. ನೀಲಕಂಠನಿಗೆ ಹೇಳುತ್ತಿದ್ದಾರೆ, "ಒಂದೆರಡು ಭಗವತಿಯ ಹಾಡುಗಳನ್ನು ಹಾಡು" ಎಂದು.

ನೀಲಕಂಠ ತನ್ನ ಸಂಗೋಪಾಂಗಿಗಳೊಡನೆ ಎರಡು ಹಾಡನ್ನು ಹಾಡಿದನು. ಎರಡನೆಯ ಹಾಡನ್ನು ಕೇಳುತ್ತಿದ್ದ ಹಾಗೆಯೆ ಪರಮಹಂಸರು ನಿಂತಿಕೊಂಡೆ ಸಮಾಧಿಸ್ಥರಾಗಿದಾರೆ. ಸ್ವಲ್ಪ ಪ್ರಕೃತಿಸ್ಥರಾದನಂತರ ಪ್ರೇಮೋನ್ಮತ್ತರಾಗಿ ನರ್ತಿಸುತ್ತಿದ್ದಾರೆ. ನೀಲಕಂಠ ಮತ್ತು ಉಳಿದ ಭಕ್ತರು ಅವರ ಸುತ್ತಲೂ ಸುತ್ತುತ್ತ ಸುತ್ತುತ್ತ ನರ್ತಿಸಲು ಮತ್ತು ಹಾಡಲು ಆರಂಭಿಸಿದರು. ಆ ರೀತಿಯಾಗಿ ನರ್ತಿಸಿದ ನಂತರ ನೀಲಕಂಠ ಶಿವನ ಮೇಲಿನ ಒಂದು ಹಾಡನ್ನು ಹಾಡುತ್ತಿದ್ದಾನೆ. ಪರಮಹಂಸರು ಭಕ್ತರೊಡಗೂಡಿ ಮತ್ತೆ ನರ್ತಿಸುತ್ತಿದ್ದಾರೆ.

ಆ ಹಾಡು ಮುಗಿಯಿತು. ಪರಮಹಂಸರು ನೀಲಕಂಠನಿಗೆ ಹೇಳುತ್ತಿದ್ದಾರೆ, "ನಾನು ನಿಮ್ಮ ಆ ಹಾಡನ್ನು—ಕಲ್ಕತ್ತದಲ್ಲಿ ಕೇಳಿದೆನಲ್ಲ ಅದನ್ನು—ಕೇಳಬೇಕೆಂಬ ಇಚ್ಛೆ" ಎಂದು.

ಮಾಸ್ಟರ್: "ಶ್ರೀ ಗೌರಾಂಗ ಸುಂದರ ನವ ನಟವರ ಎಂಬುದೇನು?"

ಪರಮಹಂಸರು: "ಹೌದು ಹೌದು!"

ನೀಲಕಂಠ ಆ ಹಾಡನ್ನು ಹಾಡುತ್ತಾನೆ:

**ಶ್ರೀ ಗೌರಾಂಗ ಸುಂದರ ನವ ನಟವರ,**
**ತಪ್ತ ಕಾಂಚನ ಕಾಯ ಬಂಧುರ ನರವರ........**

"ಪ್ರೇಮದ ಪ್ರವಾಹಕ್ಕೆ ಸಿಕ್ಕಿ ಎಲ್ಲವೂ ಕೊಚ್ಚಿ ಹೋಗುತ್ತಿತ್ತು" ಎಂಬ ನುಡಿಯನ್ನು ಹಿಡಿದು ಹಾಡುತ್ತ ಪರಮಹಂಸರು ನೀಲಕಂಠನೆ ಮೊದಲಾದ ಭಕ್ತರೊಡನೆ ಮತ್ತೆ ನರ್ತಿಸುತ್ತಿದ್ದಾರೆ. ಈ ಅಪೂರ್ವ ನೃತ್ಯವನ್ನು ಅಂದು ಯಾರು ನೋಡಿದರೊ ಅದನ್ನು ಅವರು ಎಂದಿಗೂ ಮರೆಯುವ ಹಾಗಿಲ್ಲ. ಕೊಠಡಿಯಲ್ಲಿ ಜನ ತುಂಬಿದಾರೆ. ಪ್ರಾಯಶಃ ಎಲ್ಲರೂ ಉನ್ಮತ್ತರಾಗಿದಾರೆ. ತನ್ನ ಅನುಯಾಯಿಗಳೊಡನೆ ಸಾಕ್ಷಾತ್ ಶ್ರೀಚೈತನ್ಯ ಪ್ರಭುವೇ ನರ್ತಿಸುತ್ತಿರುವನೊ ಏನೊ ಎಂಬಂತಿತ್ತು.

ಮನಮೋಹನ ಭಾವಾವಿಷ್ಟನಾಗಿದಾನೆ. ಆತನ ಮನೆಯಿಂದ

ಕೆಲವು ಹೆಂಗಸರು ಬಂದಿದಾರೆ. ಅವರು ಉತ್ತರದ ವರಾಂಡದಿಂದ ಈ ಅದ್ಭುತ ನೃತ್ಯ ಮತ್ತು ಸಂಕೀರ್ತನೆಯನ್ನು ನೋಡುತ್ತಿದ್ದಾರೆ. ಅವರಲ್ಲಿಯೂ ಒಬ್ಬಳಿಗೆ ಭಾವ ಬಂದುಬಿಟ್ಟಿದೆ. ಮನಮೋಹನ ಪರಮಹಂಸರ ಭಕ್ತ ಮತ್ತು ರಾಖಾಲನ ಸಂಬಂಧಿ.

ಪರಮಹಂಸರು ಮತ್ತೆ ಹಾಡಲಾರಂಭಿಸಿದಾರೆ:

ಹರಿನಾಮವನು ನುತಿಸಿ, ಆನಂದ ಬಾಷ್ಪವನು
ಕರೆವಣ್ಣತಮ್ಮದಿರು,[1] ಇವರು ನೋಡು!
ತಾವು ಆನಂದದಲಿ ಕುಣಿದು ಜಗವನೆ ಕುಣಿಪ
ತಾವು ಕಂಬನಿಗರೆದು, ಜಗವ ಕಂಬನಿಗರೆಪ
ಚೋದ್ಯವನು ನೋಡು!

ಒದೆಯುನಿತ್ತರು, ಹರಿಯ ಸುಧೆಯನೇ ನೀಡುವರು!
ಹಿಂದೆ, ಗೋಪಿಯರಿಂದ ಹಾಲ್ ಬೆಣ್ಣೆಗಳ ಕದ್ದ
ಗೋಪಾಲರಿವರು!

ಜಾತಿಗೀತಿಯ ಕ್ಷುದ್ರಭಾವಗಳ ಪುಡಿಗುಟ್ಟಿ
ಸಮತೆಯನು ನೆಲೆಗೊಳಿಸ ಬಂದರಿವರು!
ಹೊಲೆಯರನು ತೆಕ್ಕೆಯಲಿ ತಬ್ಬಿದವರು!
ಹರಿನಾಮ ಸುಧೆಯಲ್ಲಿ ಇರವ ಕರಗಿಸಿದವರು
ಜಗವನೇ ಉನ್ಮತ್ತಗೊಳಿಸಿದವರು!

ತನ್ನ ಹೆಸರನು ತಾನೆ ಸವಿಪ ಲೀಲೆಗೆ ಸಂದು
ಶ್ರೀಹರಿಯೆ ಇವರಾಗಿ ಬಂದನೇನೊ!
ದುರುಳರಿಬ್ಬರ[2] ಹಿಂದೆ ಉದ್ಧಾರಮಾಡಿದಾ
ಪತಿತಪಾವನಮೂರ್ತಿ, ಇವರೆ ಏನೋ!
ಹಗೆಕೆಳೆಗಳೆಂಬುದನು ಕಾಣದೀ ಸೋದರರು
ಮತ್ತೆ ಜಗದುದ್ಧಾರಕೆ ಬಂದರೇನೊ!

---

1. ಗೌರಾಂಗ ಮತ್ತು ನಿತ್ಯಾನಂದ.

2. ಒಮ್ಮೆ ನಿತ್ಯಾನಂದನನ್ನು ಹೊಡೆದ ಜಗಾಯ್ ಮತ್ತು ಮಾಧಾಯ್ ಎಂಬ ಇಬ್ಬರು ಪುಂಡರು ನಿತ್ಯಾನಂದನ ಪ್ರೇಮದಿಂದ ಕೊನೆಗೆ ಭಗವದ್ ಭಕ್ತರಾದರು.

ಸಂಕೀರ್ತನೆ ಮಾಡುತ್ತ ಮಾಡುತ್ತ ಪರಮಹಂಸರು ನೀಲಕಂಠನೆ ಮೊದಲಾದ ಭಕ್ತರೊಡನೆ ನರ್ತಿಸುತ್ತಿದ್ದಾರೆ ಮತ್ತು ಆಶುಕವಿತೆ ಮಾಡುತ್ತಿದ್ದಾರೆ:

ರಾಧೆಯೊಲವನು ಕಂಡು ಉನ್ಮತ್ತರಾಗಿರುವ
ಸೋದರರು ಬಂದಿರುವರಿಲ್ಲಿ ನೋಡು!

ಈ ಉಚ್ಚಕಂಠದ ಸಂಕೀರ್ತನೆ ಕೇಳಿ ಅಕ್ಕಪಕ್ಕದ ಜನರೆಲ್ಲ ಕೊಠಡಿಯ ಸುತ್ತಲೂ ನಿಂತಿದಾರೆ. ದಕ್ಷಿಣದ ವರಾಂಡ, ಉತ್ತರದ ವರಾಂಡ, ಪಶ್ಚಿಮದ ಗುಂಡು ವರಾಂಡ ಎಲ್ಲೆಲ್ಲೂ ಜನ ಸುಮ್ಮನೆ ತುಂಬಿ ನಿಂತಿದಾರೆ. ಯಾರು ಗಂಗೆಯಲ್ಲಿ ದೋಣಿಯಲ್ಲಿ ಹೋಗುತ್ತಿದ್ದರೊ ಅವರೂ ಈ ಮಾಧುರ ಸಂಕೀರ್ತನೆಯ ಶಬ್ದ ಕೇಳಿ ಆಕರ್ಷಿತರಾಗಿಬಿಟ್ಟದಾರೆ.

ಕೀರ್ತನೆ ಮುಗಿಯಿತು. ಪರಮಹಂಸರು ಭಗವತಿಗೆ ಪ್ರಣಾಮ ಮಾಡುತ್ತಿದ್ದಾರೆ ಮತ್ತು ಹೇಳುತ್ತಿದ್ದಾರೆ: "ಭಾಗವತ—ಭಕ್ತ—ಭಗವಂತ. ಜ್ಞಾನಿಗಳಿಗೆ ನಮಸ್ಕಾರ, ಯೋಗಿಗಳಿಗೆ ನಮಸ್ಕಾರ, ಭಕ್ತರಿಗೆ ನಮಸ್ಕಾರ" ಎಂದು.

ಈಗ ಪರಮಹಂಸರು ಗುಂಡು ವರಾಂಡದಲ್ಲಿ ನೀಲಕಂಠನೆ ಮೊದಲಾದ ಭಕ್ತರೊಡನೆ ಕುಳಿತಿದ್ದಾರೆ. ಸಾಯಂಕಾಲವಾಗಿದೆ. ಶರದೃತುವಿನ ಹುಣ್ಣಿಮೆಯ ಎರಡನೆ ದಿನ. ಎಲ್ಲೆಲ್ಲಿಯೂ ಬೆಳದಿಂಗಳು ಚೆಲ್ಲಿದೆ. ಪರಮಹಂಸರು ನೀಲಕಂಠನೊಡನೆ ಆನಂದದಿಂದ ಮಾತುಕತೆಗಳನ್ನಾಡುತ್ತಿದ್ದಾರೆ.

ನೀಲಕಂಠ: "ತಾವು ಸಾಕ್ಷಾತ್ ಗೌರಾಂಗನೆ ಅಲ್ಲದೆ ಬೇರೆ ಯಾರೂ ಅಲ್ಲ."

ಶ್ರೀ ರಾಮಕೃಷ್ಣರು: "ಓ! ಅಂಥ ದೊಡ್ಡ ಮಾತುಗಳೆಲ್ಲ ಏಕೆ?—ನಾನು ಎಲ್ಲರ ದಾಸನ ದಾಸ. ಅಲೆಯೇನೊ ಗಂಗೆಯದೆ; ಎಂದಿಗಾದರು ಗಂಗೆ ಅಲೆಯದಾಗುವುದೆ?"

ನೀಲಕಂಠ: "ನೀವು ಏನು ಬೇಕಾದರೂ ಹೇಳಿಕೊಳ್ಳಿ, ನಾವು ಮಾತ್ರ ಭಾವಿಸುತ್ತೇವೆ ತಾವು ಗೌರಾಂಗನೆ ಎಂದು."

ಶ್ರೀ ರಾಮಕೃಷ್ಣರು ಕಿಂಚಿಂತ್ ಭಾವಾವೇಶರಾಗಿ ಕರುಣಾಮಯ ಸ್ವರದಿಂದ: "ಅಣ್ಣಂದಿರಾ! ನನ್ನ 'ನಾನು' ಎಂಬುದನ್ನು ಪತ್ತೆ ಮಾಡಲು ನನಗೆ ಇಚ್ಛೆ, ಆದರೆ ಅದು ಹುಡುಕಿದರೂ ಪತ್ತೆಯಾಗುತ್ತಿಲ್ಲ.

ಹನುಮಂತ ಹೇಳಿದ: 'ಹೇ ರಾಮ, ಕೆಲವು ವೇಳೆ ಭಾವಿಸುತ್ತೇನೆ ನೀನು ಪೂರ್ಣ ನಾನು ಅಂಶ ಅಂತ,—ನೀನು ಪ್ರಭು ನಾನು ದಾಸ ಅಂತ,—ಮತ್ತೆ ತತ್ತ್ವ ಜ್ಞಾನ ದೊರೆತಾಗ ನೋಡುತ್ತೇನೆ ನೀನೇ ನಾನಾಗಿರುವುದನ್ನ ನಾನೇ ನೀನಾಗಿರುವುದನ್ನ' ಎಂದು"

ನೀಲಕಂಠ: "ನಾನು ಏನನ್ನು ತಾನೆ ಹೇಳಲಿ? ನಮ್ಮ ಮೇಲೆ ದಯವಿಟ್ಟು ಕೃಪಾಕಟಾಕ್ಷವನ್ನು ಬೀರಬೇಕು."

ಶ್ರೀ ರಾಮಕೃಷ್ಣರು ನಗುತ್ತ: "ನೀನು ಎಷ್ಟೊಂದು ಜನರನ್ನು ಪಾರುಮಾಡಿಸುತ್ತಿದ್ದೀಯೆ ಏನುಕತೆ!—ನಿನ್ನ ಹಾಡನ್ನು ಕೇಳಿ ಎಷ್ಟೊಂದು ಜನಕ್ಕೆ ಉದ್ದೀಪನೆಯಾಗುತ್ತಿದೆ!"

ನೀಲಕಂಠ: "ಪಾರುಮಾಡಿಸುತ್ತಿದ್ದೇನೆ ಎಂದು ಹೇಳುತ್ತಿದ್ದೀರಿ! ಆದರೆ ನಾನೇ ಮುಳುಗಿ ಹೋಗದಹಾಗೆ ಆಶೀರ್ವಾದ ಮಾಡಿ!"

ಶ್ರೀರಾಮಕೃಷ್ಣರು ನಗುತ್ತ: "ನೀನು ಮುಳುಗಿ ಹೋಗುವುದಾದರೆ ಅದು ಅಮೃತಸಾಗರದಲ್ಲಿಮಾತ್ರ."

ಪರಮಹಂಸರು ನೀಲಕಂಠನ ಸಹವಾಸದಿಂದ ಬಹಳ ಆನಂದದಿಂದ ಇದ್ದಾರೆ. ಆತನಿಗೆ ಮತ್ತೆ ಹೇಳುತ್ತಿದ್ದಾರೆ: "ನೀನು ಇಲ್ಲಿಗೆ ಬರುವುದು!—ಯಾರನ್ನ ಬಹಳ ಸಾಧನೆ ತಪಸ್ಸಿನಿಂದ ಪಡೆಯಬೇಕೊ ಅಂಥವ ನೀನು! ಹೋಗಲಿ, ಒಂದು ಹಾಡು ಕೇಳು." ಎಂದು.

ಪರಮಹಂಸರು ಹಾಡುತ್ತಿದ್ದಾರೆ. ಅದರ ಎರಡು ಚರಣ:

ಆನಂದ ಮಯಿಯಾದ ಶ್ರೀ ಚಂಡಿ ಬಂದಾಗ
ನನ್ನ ಮನೆಗೆ
ಎನಿತೊಂದು ಮಂತ್ರಗಳು ನನ್ನ ಕಿವಿಗೆ!
ಎನಿತೆನಿತು ಯೋಗಿಗಳು, ಎನಿತು ಸನ್ಯಾಸಿಗಳು
ಬಹರಿಲ್ಲಿಗೆ!

ಪರಮಹಂಸರು ಮತ್ತೆ ಹೇಳಿದರು, "ಭಗವತಿ ಎಲ್ಲಿಯವರೆಗೆ ಇಲ್ಲಿ ಇರುವಳೊ, ಅಲ್ಲಿಯವರೆಗೆ ಎಷ್ಟೊಂದು ಜನ ಜಟಧಾರಿ ಯೋಗಿಗಳು ಬರುವರಿಲ್ಲಿಗೆ" ಎಂದು.

ಪರಮಹಂಸರು ನಗುತ್ತಿದ್ದಾರೆ. ಮಾಸ್ಟರ್, ಬಾಬುರಾಮ, ಮೊದಲಾದವರಿಗೆ ಹೇಳುತ್ತಿದ್ದಾರೆ: "ನನಗೆ ಬಹಳ ನಗು ಬರುತ್ತಿದೆ.

ಯೋಚಿಸುತ್ತಿದ್ದೇನೆ — ಇವರ (ನಟರ) ಎದುರಿಗೆ ನಾನು ಹಾಡೋದು !" ಎಂದು.

ನೀಲಕಂಠ: "ನಾವು ಯಾವುದನ್ನ ಇಲ್ಲಿ ಅಲ್ಲಿ ಹಾಡುತ್ತ ಸುತ್ತುತ್ತಿದ್ದೆವೊ ಅದಕ್ಕೆ ಇಂದು ಪುರಸ್ಕಾರ ದೊರೆಯಿತು."

ಶ್ರೀರಾಮಕೃಷ್ಣರು ನಗುತ್ತ: "ಏನುಮಾರಿದರೂ ಅಂಗಡಿಯುವ ಒಂದು ಸ್ವಲ್ಪ ಕೊಸರು ಕೊಡುತ್ತಾನೆ. ನೀವು ಅಲ್ಲಿಗೆ ಹೋಗಿ ಹಾಡಿದಿರಿ! ಇಲ್ಲಿಗೆ ಬಂದು ಕೊಸರು ಕೊಟ್ಟರಿ!" (ಎಲ್ಲರೂ ನಗುತ್ತಿದ್ದಾರೆ.)



## ೩೧

# ಈಶಾನನಿಗೆ ಹಿತೋಪದೇಶ

---

**೧೧ನೆ ಅಕ್ಟೋಬರ್ ೧೮೮೪, ಸಪ್ತಮಿ, ಶನಿವಾರ.**

ಪರಮಹಂಸರು ಚಿಕ್ಕ ಮಂಚದ ಮೇಲೆ ತಮ್ಮ ಕೊಠಡಿಯಲ್ಲಿ ಸುಮ್ಮನೆ ಮಲಗಿಕೊಂಡಿದ್ದಾರೆ. ಸಮಯ ಅಪರಾಹ್ನ ಎರಡು. ನೆಲದ ಮೇಲೆ ಮಾಸ್ಟರ್ ಮತ್ತು ಪ್ರಿಯಮುಖರ್ಜಿ ಕುಳಿತುಕೊಂಡಿದ್ದಾರೆ. ಮಾಸ್ಟರ್ ತನ್ನ ಸ್ಕೂಲನ್ನು ಒಂದು ಘಂಟೆಗೆ ಬಿಟ್ಟು ಅದೇತಾನೆ ಬಂದು ಕುಳಿತಿದ್ದಾನೆ. ಪರಮಹಂಸರು ಶ್ರೀಮಂತ ಯದುಮಲ್ಲಿಕನ ಜಿಪುಣತೆಯ ಸಂಬಂಧವಾಗಿ ಮಾತು ಎತ್ತಿದರು.

ಶ್ರೀರಾಮಕೃಷ್ಣರು: "ಒಮ್ಮೆ ನಾನು ಯದುಮಲ್ಲಿಕನ ಮನೆಗೆ ಹೋಗಿದ್ದೆ. ನೇರವಾಗಿ ಕೇಳಿಬಿಟ್ಟೆ, 'ಗಾಡಿ ಬಾಡಿಗೆ ಎಷ್ಟು?' ಅಂತ. ಆಗ ಜೊತೆಯವರು ಹೇಳಿದರು, 'ಮೂರು ರೂಪಾಯಿ ಎರಡು ಆಣೆ' ಅಂತ. ಬಳಿಕ ಒಮ್ಮೆ ನನ್ನನ್ನೂ ಕೇಳಿದ. ಅದೂ ಸಾಲದೆಂದು ಆತನ ಮನೆಯವನೊಬ್ಬ ಗಾಡಿಯವನನ್ನು ರಹಸ್ಯವಾಗಿ ಕೇಳಿದ. ಗಾಡಿಯವ ಹೇಳಿದ, 'ಮೂರು ರೂಪಾಯಿ ನಾಲ್ಕು ಆಣೆ' ಅಂತ. (ಎಲ್ಲರೂ ನಗುತ್ತಾರೆ.) ಆಗ ನಮ್ಮ ಹತ್ತಿರಕ್ಕೆ ಓಡಿ ಬಂದು ಕೇಳಿದ, 'ಗಾಡಿ ಬಾಡಿಗೆ ಎಷ್ಟು ಅಂತ ಹೇಳಿದಿರಿ?' ಎಂದು.

"ಅಂದು ಒಬ್ಬ ದಳ್ಳಾಳಿ ಅಲ್ಲಿಗೆ ಬಂದಿದ್ದ. ಆತ ಯದುವನ್ನು ಕೇಳಿದ: 'ಬಡೊಬಜಾರಿನ ಹತ್ತಿರ ಒಂದು ಭೂಮಿ ಮಾರಾಟಕ್ಕೆ ಬಂದಿದೆ. ಕೊಂಡುಕೊಳ್ಳುವಿರೇನು?' ಎಂದು. ಯದು ಕೇಳಿದ: 'ಬೆಲೆ ಎಷ್ಟು?' ಅಂತ. ದಳ್ಳಾಳಿ ಅದರ ಬೆಲೆ ಹೇಳಿದ. ಬಳಿಕ ಯದು ಕೇಳಿದ: 'ಅದಕ್ಕಿಂತ ಕಡಮೆ ಬೆಲೆಗೆ ಕೊಡಲೊಲ್ಲನೆ?' ಎಂದು. ಆಗ ನಾನು ಯದುವಿಗೆ ಹೇಳಿದೆ: 'ನೀನು ಕೊಂಡುಕೊಳ್ಳುವುದೇನೂ ಇಲ್ಲ. ಸುಮ್ಮನೆ ಚೌಕಾಸಿ ಮಾಡುತ್ತಿದ್ದೀಯೆ, ಅಲ್ಲವೆ?' ಎಂದು. ಆಗ ನನ್ನ ಕಡೆ ತಿರುಗಿ ನಕ್ಕ.

"ಪ್ರಾಪಂಚಿಕನ ಸ್ವಭಾವವೇ ಇದು; ಒಂದು ಹತ್ತಾರು ಜನ ಮನೆಗೆ ಬಂದು ಹೋಗುತ್ತಿರಬೇಕು! ಊರಿನಲ್ಲೆಲ್ಲ ದೊಡ್ಡವ ಅನಿಸಿಕೊಬೇಕು!

"ಯದು ಒಮ್ಮೆ ಅಧರಸೇನನ ಮನೆಗೆ ಹೋಗಿದ್ದ. ನಾನು ಯದುವಿಗೆ ಹೇಳಿದೆ, 'ನೀನು ಅಧರನ ಮನೆಗೆ ಹೋಗಿದುದಕ್ಕಾಗಿ ಆತನಿಗೆ ಬಹಳ ಆನಂದವಾಗಿಬಿಟ್ಟಿದೆ' ಎಂದು. ಆಗ ಆತ ಕೇಳಿದ: 'ಏನು, ಏನು ನಿಜವಾಗಿ?' ಎಂದು. ಯದುವಿನ ಮನೆಗೆ ಒಬ್ಬ ಮಲ್ಲಿಕ ಬಂದಿದ್ದ. ಒಳ್ಳೆ ಚತುರ ಮತ್ತು ತಂತ್ರಿ. ಕಣ್ಣು ನೋಡಿಯೆ ಅರಿತು ಕೊಂಡುಬಿಟ್ಟೆ. ಆಗ ನಾನು ಆತನ ಕಡೆ ತಿರುಗಿನೋಡಿ ಹೇಳಿದೆ: 'ಚತುರನಾಗೋದು ಒಳ್ಳೆಯದಲ್ಲ. ಕಾಗೆಯೇನೊ ಬಹಳ ಚತುರ ಪ್ರಾಣಿ, ಆದರೆ ಅದು ಪರರ ಹೇಸಿಕೆಯನ್ನು ತಿಂದು ಸಾಯುತ್ತದೆ' ಎಂದು. ಆತ ದಟ್ಟದರಿದ್ರನಾಗಿಯೂ ಕಂಡುಬಂದ. ಯದುವಿನ ತಾಯಿ ಆಶ್ಚರ್ಯ ಚಕಿತಳಾಗಿ ನನ್ನನ್ನು ಕೇಳಿದಳು, 'ಆತ ದಟ್ಟದರಿದ್ರ ಎಂಬುದು ನಿಮಗೆ ಹೇಗೆ ಗೊತ್ತಾಯಿತು?' ಎಂದು. ಮೋರೆ ನೋಡಿಯೆ ತಿಳಿದು ಕೊಂಡುಬಿಟ್ಟೆ."

ನಾರಾ'ಣ ಬಂದಿದ್ದಾನೆ. ಆತನೂ ನೆಲದ ಮೇಲೆ ಕುಳಿತಿದ್ದಾನೆ.

ಶ್ರೀರಾಮಕೃಷ್ಣರು ಪ್ರಿಯನಾಥನಿಗೆ: "ನಿಮ್ಮ ಹರಿ ಬಹಳ ಒಳ್ಳೆಯವ."

ಪ್ರಿಯನಾಥ: "ಅಂಥ ವಿಶೇಷವಾದ ಒಳ್ಳೆಯತನ ಏನಿದೆ ಅವನಲ್ಲಿ? ಆದರೆ ಇನ್ನೂ ಮಗುವಿನಂಥ ಮನಸ್ಸು—"

ನಾರಾ'ಣ: "ಅವನು ತನ್ನ ಹೆಂಡತೀನ ತಾಯಿ ಎಂದು ಕರೆಯುತ್ತಾನೆ."

ಶ್ರೀರಾಮಕೃಷ್ಣರು: "ಹೇಗಪ್ಪ ಅದು? ಅದು ನನ್ನ ಕೈಯಲ್ಲೂ ಸಾಧ್ಯವಿಲ್ಲ, ಅಂಥಾದ್ದರಲ್ಲಿ ಅವನು ತಾಯಿ ಅಂತ ಕರೆಯುತ್ತಾನೆಯೆ! (ಪ್ರಿಯನಾಥನ ಕಡೆ ತಿರುಗಿ) ನೋಡು, ಹುಡುಗನದು ಬಹಳ ಶಾಂತ ಪ್ರಕೃತಿ. ಭಗವಂತನ ಕಡೆ ಮನಸ್ಸಿದೆ."

ಪರಮಹಂಸರು ಬೇರೆ ಮಾತು ಎತ್ತಿದರು.

ಶ್ರೀರಾಮಕೃಷ್ಣರು: "ಹೇಮ ಏನು ಹೇಳಿದ ಅಂಬುದು ಗೊತ್ತೇನು? ಬಾಬುರಾಮನಿಗೆ ಹೇಳಿದ, 'ಭಗವಂತನೊಬ್ಬನೇ ಸತ್ಯ; ಉಳಿದುದೆಲ್ಲ ಮಿಥ್ಯ' ಎಂದು. (ಎಲ್ಲರೂ ನಗುತ್ತಾರೆ.) ಹಾಗಲ್ಲ! ಹೃತ್ಪೂರ್ವಕ

ವಾಗಿಯೂ ಹೇಳಿದ. ಇದೂ ಅಲ್ಲದೆ ತನ್ನ ಮನೆಗೆ ನನ್ನನ್ನು ಕರೆದು ಕೊಂಡು ಹೋಗಿ ತಾನು ಹಾಡುವುದಾಗಿ ಹೇಳಿದ. ಆದರೆ ಅದು ನಡೆಯ ಲಿಲ್ಲ. ಬಳಿಕ ಏನೊ ಹೇಳಿದನಂತೆ, 'ನಾನು ತಾಳ ಮೃದಂಗಗಳೊಡನೆ ಹಾಡಲಾರಂಭಿಸಿದರೆ ಜನ ಏನು ಅಂದುಕೊಳ್ಳುತ್ತಾರೊ!' ಎಂದು. ಜನರು ಹುಚ್ಚನಾಗಿ ಬಿಟ್ಟಿದ್ದಾನೆ ಎಂಬುದಾಗಿ ಹೇಳಬಹುದೆಂದು ಹೆದರಿಬಿಟ್ಟ.

"ಹರಿಪದ ಘೋಷ್‌ಪಾರಾ ಸಂಪ್ರದಾಯದ ಒಬ್ಬ ಹೆಂಗಸಿನ ಬಲೆಗೆ ಬಿದ್ದಿದ್ದಾನೆ; ಬಿಡುತ್ತಿಲ್ಲ. ಹೇಳ್ತಾನೆ, 'ತೊಡೆಯ ಮೇಲೆ ಕೂರಿಸಿ ಕೊಂಡು ತಿನ್ನಿಸುತ್ತಾಳೆ' ಅಂತ. ಹೇಳುತ್ತಾಳಂತೆ, 'ಗೋಪಾಲಭಾವ!' ಅಂತ. ನಾನು ಆತನಿಗೆ ಬಹಳವಾಗಿ ಎಚ್ಚರಿಕೆ ಕೊಟ್ಟಿದ್ದೇನೆ. ವಾತ್ಸಲ್ಯ ಭಾವ ಅಂತಲೇನೊ ಹೇಳುತ್ತಾಳೆ! ಈ ವಾತ್ಸಲ್ಯಭಾವ ಕೊನೆಗೆ ಗೀತ್ಸಲ್ಯ ಭಾವವಾಗಿ ಬಿಡುತ್ತದೆ.

"ನೋಡು, ಹೆಂಗಸಿನಿಂದ ಬಹಳ ದೂರದಲ್ಲಿಯೆ ಇರಬೇಕು; ಆಗ ಭಗವಂತನ ಸಾಕ್ಷಾತ್ಕಾರ ದೊರೆಯುವ ಸಂಭವ. ದುರಾಲೋಚನೆಯುಳ್ಳ ಹೆಂಗಸಿರೊಡನೆ ಬೆರೆಯೋದು, ಅಥವಾ ಅವರ ಕೈಯಿಂದ ಏನಾದರು ತಿನ್ನೋದು ಬಲು ಕೆಟ್ಟದ್ದು. ಅವರು ಸತ್ತ್ವವನ್ನು ಅಪಹರಿಸಿಕೊಂಡು ಬಿಡುತ್ತಾರೆ. ಬಹಳ ಎಚ್ಚರಿಕೆಯಿಂದ ಇದ್ದುಕೊಂಡಿದ್ದರೆ ಮಾತ್ರ ನಮ್ಮ ಭಕ್ತಿ ಸುರಕ್ಷಿತವಾಗಿ ಉಳಿದುಕೊಳ್ಳುತ್ತದೆ. ಭವನಾಥ, ರಾಖಾಲ ಇವರೆಲ್ಲ ಕೂಡಿ ಒಂದು ದಿನ ಸ್ವಯಂಪಾಕ ತಯಾರುಮಾಡಿದರು. ಅವರೆಲ್ಲ ಊಟಕ್ಕೆ ಕುಳಿತಿದ್ದಾರೆ. ಆ ಸಮಯಕ್ಕೆ ಸರಿಯಾಗಿ ಒಬ್ಬ ಬಾವುಲ (ಬಾವುಲ ಸಂಪ್ರದಾಯದವ) ಬಂದು ಅವರ ಪಂಕ್ತಿಯಲ್ಲಿ ಕುಳಿತುಕೊಂಡು ಹೇಳಿದ, 'ಊಟಕ್ಕೆ ಹಾಕಿ' ಅಂತ. ನಾನು ಹೇಳಿದೆ, 'ಸಾಕಾದಷ್ಟು ಅನ್ನವಿಲ್ಲ; ಒಂದುಪಕ್ಷ ಮಿಕ್ಕರೆ ನಿನಗಾಗಿ ಇಡುತ್ತೇವೆ' ಎಂದು. ಆತ ಕೋಪಿಸಿಕೊಂಡು ಎದ್ದು ಹೊರಟು ಹೋದ. ವಿಜಯ ದಶಮಿ ದಿನ ಸಿಕ್ಕಿಸಿಕ್ಕಿದವರೆಲ್ಲ ತಿಂಡಿ ತಂದು ಬಾಯಿಗೆ ಹಾಕುತ್ತಾರೆ. ಹಾಗೆ ಅನುಮತಿ ಕೊಡೋದು ಒಳ್ಳೆಯದಲ್ಲ. ಶುದ್ಧ ಸಾತ್ತ್ವಿಕ ಭಕ್ತರ ಕೈಯಿಂದ ಹಾಗೆ ತಿನ್ನಬಹುದು.

"ಹೆಂಗಸರ ವಿಷಯವಾಗಿ ಬಹಳ ಎಚ್ಚರಿಕೆಯಿಂದ ಇರಬೇಕು. ಅವರ ಗೋಪಾಲಭಾವ ಗೀಪಾಲಭಾವ ಇವುಗಳ ಕಡೆ ಕಿವಿ ಕೊಡಬೇಡಿ. ಹೆಂಗಸು ಮೂರು ಲೋಕ ಕೊಟ್ಟರೂ ತಿಂದು ಬಿಡುತ್ತಾಳೆ. ದೃಢಕಾಯ

ಯುವಕ, ನೋಡಲು ಸುಂದರ ರೂಪು ಇಂಥವರನ್ನು ಕಂಡರೆ ಅನೇಕ ಹೆಂಗಸರು ತಮ್ಮ ಮಾಯಾಬಲೆಯನ್ನ ಅವರ ಸುತ್ತ ಹರಡುತ್ತಾರೆ. ಅದಕ್ಕಾಗಿ ಗೋಪಾಲಭಾವ !

"ಯಾರಿಗೆ ಕೌಮಾರ್ಯದಿಂದಲೆ ವೈರಾಗ್ಯವೊ, ಯಾರು ಬಾಲ್ಯ ದಿಂದಲೆ ಭಗವಂತನಿಗಾಗಿ ವ್ಯಾಕುಲರಾಗಿದಾರೊ, ಯಾರು ಸಂಸಾರಕ್ಕೆ ಕಾಲು ಹಾಕಲೊಲ್ಲರೊ, ಅವರದು ಒಂದು ಪ್ರತ್ಯೇಕ ಶ್ರೇಣಿ. ಅವರು ಕಳಂಕರಹಿತ ಕುಲೀನರು. ನಿಜನಾದ ವೈರಾಗ್ಯ ಉಂಟಾಗಿದ್ದರೆ, ತಮ್ಮ ಭಾವ ನಷ್ಟವಾಗಿಬಿಡಬಹುದು ಎಂದು ಹೆದರಿ ಅವರು ಹೆಂಗಸರಿಂದ ಒಂದು ಐವತ್ತು ಮೊಳ ದೂರದಲ್ಲೇ ಇರುತ್ತಾರೆ. ಅವರೇನಾದರು ಒಂದು ಪಕ್ಷ ಹೆಂಗಸರ ಬಲೆಗೆ ಬಿದ್ದರೆಂದರೆ, ಅವರು ಆ ನಿಷ್ಕಳಂಕ ಕುಲೀನ ಗುಂಪಿನಲ್ಲಿರೋಕಾಗುವುದಿಲ್ಲ. ಅವರ ಭಾವ ನಷ್ಟವಾಗಿ ಬಿಡುತ್ತದೆ. ಯಾರು ಕೌಮಾರ್ಯದಿಂದಲೆ ವೈರಾಗ್ಯಸಂಪನ್ನರೊ ಅವರದು ಉಚ್ಚಶ್ರೇಣಿ; ಅತ್ಯಂತ ಶುದ್ಧಭಾವ. ಅವರಿಗೆ ಕಿಂಚತ್ ಕರೆ ಕೂಡ ಹತ್ತದು.

"ಏನು ಮಾಡಿದರೆ ಜಿತೇಂದ್ರಿಯರಾಗಬಹುದು? ತನಗೆ ತಾನೇ ಹೆಂಗಸಿನ ಭಾವವನ್ನು ಆರೋಪಿಸಿಕೊಳ್ಳಬೇಕು. ನಾನು ಬಹಳ ಕಾಲ ಸಖೀಭಾವದಿಂದಿದ್ದೆ. ಹೆಂಗಸಿನಂತೆ ಸೀರೆ ಉಡುತ್ತಿದ್ದೆ; ಆಭರಣ ತೊಡುತ್ತಿದ್ದೆ; ಉತ್ತರೀಯುವನ್ನು ಹೊದ್ದುಕೊಳ್ಳುತಿದ್ದೆ; ಉತ್ತರೀಯುವನ್ನು ಹೊದ್ದುಕೊಂಡು ಆರತಿ ಮಾಡುತ್ತಿದ್ದೆ. ಹಾಗಿಲ್ಲದೆ ಇದ್ದರೆ ನನ್ನ ಹೆಂಡತಿಯನ್ನ ಕರೆದುಕೊಂಡುಬಂದು ಎಂಟು ತಿಂಗಳಕಾಲ ಹತ್ತಿರವೆ ಇಟ್ಟುಕೊಂಡಿದ್ದೆನಲ್ಲ ಅದು ಹೇಗೆ? ಇಬ್ಬರೂ ಇದ್ದೆವು ಭಗವತಿಯ ಸಖಿಯರಂತೆ. ನಾನು ನನ್ನನ್ನು ಪು (ಪುರುಷ) ಎಂದು ಹೇಳಿಕೊಳ್ಳಲಾರೆ. ಒಂದು ದಿನ ಭಾವದಲ್ಲಿದ್ದೆ. ನನ್ನ ಹೆಂಡತಿ ಕೇಳಿದಳು, 'ನೀವು ನನ್ನನ್ನು ಯಾವ ದೃಷ್ಟಿಯಿಂದ ನೋಡುತ್ತೀರಿ?' ಎಂದು. ನಾನು ಹೇಳಿದೆ, 'ಆನಂದಮಯಿಯೆ' ಅಂತ.

"ಶಿವಪೂಜೆಯ ಇಂಗಿತವೇನೆಂಬುದು ಗೊತ್ತೆ? ಶಿವಲಿಂಗದ ಪೂಜೆ, ಮಾತೃಸ್ಥಾನದ ಮತ್ತು ಪಿತೃಸ್ಥಾನದ ಪೂಜೆ. ಭಕ್ತ ಹೀಗೆ ಪ್ರಾರ್ಥಿಸುತ್ತಾ ಪೂಜೆಮಾಡುತ್ತಾನೆ: 'ಹೇ ಭಗವಂತ! ನನಗೆ ಮತ್ತೆ ಜನ್ಮ ಬಾರದ ಹಾಗೆ ನೋಡಿಕೊ; ಶೋಣಿ-ಶುಕ್ರದ ಮೂಲಕ, ತಾಯಿ ಗರ್ಭದ ಮೂಲಕ ನನಗೆ ಇನ್ನು ಎಂದೆಂದಿಗೂ ಜನ್ಮಬಾರದ ಹಾಗೆ ನೋಡಿಕೊ' ಎಂಬುದಾಗಿ."

ಪರಮಹಂಸರು ಪ್ರಕೃತಿಭಾವದ ಸಂಬಂಧವಾಗಿ ಮಾತನಾಡುತ್ತಿದ್ದಾರೆ. ಪ್ರಿಯಮುಖರ್ಜಿ, ಮಾಸ್ಟರ್, ಇನ್ನು ಕೆಲವು ಭಕ್ತರು ಕುಳಿತಿದ್ದಾರೆ. ಆಗ ದೇವೇಂದ್ರನಾಥ ಠಾಕೂರರ ಮನೆಯ ಹುಡುಗರ ಒಬ್ಬ ಪ್ರೈವೇಟ್ ಟೀಚರ್ ಕೆಲವು ಹುಡುಗರನ್ನು ಕರೆದುಕೊಂಡುಬಂದು ಕೊಠಡಿಯನ್ನು ಪ್ರವೇಸಿದನು.

ಶ್ರೀ ರಾಮಕೃಷ್ಣರು ಭಕ್ತರಿಗೆ: "ಶ್ರೀ ಕೃಷ್ಣನ ತಲೆಯ ಮೇಲೆ ನವಿಲಿನ ಗರಿ ಇದೆ. ಆ ಗರಿಯಲ್ಲಿ ಯೋನಿಯ ಚಿಹ್ನೆ ಇದೆ—ಅಂದರೆ ಶ್ರೀಕೃಷ್ಣ ಪ್ರಕೃತಿಯನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡಿದ್ದಾನೆ ಎಂದರ್ಥವಾಗುತ್ತದೆ. ಶ್ರೀಕೃಷ್ಣ ರಾಸಮಂಡಲಿಗೆ ಹೋದ. ಆದರೆ, ಅಲ್ಲಿ ತಾನೇ ಪ್ರಕೃತಿಯಾದ. ಅದಕ್ಕಾಗಿಯೆ ನೋಡು, ರಾಸಮಂಡಲಿಯಲ್ಲಿ ಆತ ಹೆಂಗಸಿನ ವೇಷವನ್ನ ಧರಿಸಿರೋದು. ಪ್ರಕೃತಿಭಾವೋಪಪನ್ನನಾಗದೆ ಇದ್ದರೆ, ಪ್ರಕೃತಿಯ ಸಂಗದ ಅಧಿಕಾರಿಯಾಗಲಾರ. ಪ್ರಕೃತಿಭಾವಸಂಪನ್ನನಾದರೆ ಆಗ ಕ್ರೀಡೆ, ಆಗ ಆನಂದ. ಆದರೆ ಸಾಧಕನ ಅವಸ್ಥೆಯಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು. ಆಗ ಹೆಂಗಸಿನಿಂದ ಬಹಳ ದೂರದಲ್ಲೇ ಇರಬೇಕು. ಅಷ್ಟೇಕೆ, ಭಕ್ತಿಮತಿಯಾದರೂ ಹೆಚ್ಚು ಹತ್ತಿರ ಹೋಗಕೂಡದು. ಮನೆಯ ಮೇಲಕ್ಕೆ ಹತ್ತುವಾಗ ಹಿಂದಕ್ಕೂ ಮುಂದಕ್ಕೂ ಜಗ್ಗಾಡಕೂಡದು. ಹಿಂದಕ್ಕು ಮುಂದಕ್ಕು ಜಗ್ಗಾಡಿದರೆ ಕೆಳಕ್ಕೆ ಬೀಳುವ ಸಂಭವ ಇದೆ. ದುರ್ಬಲರು ಮೆಟ್ಟಲನ್ನು ಹಿಡಿದುಹಿಡಿದು ಹತ್ತಬೇಕು.

"ಸಿದ್ಧನ ಅವಸ್ಥೆ ಪ್ರತ್ಯೇಕವಾದ ಸಮಾಚಾರ. ಭಗವಂತನ ದರ್ಶನಾನಂತರ ಅಷ್ಟೊಂದು ಹೆದರಿಕೊಳ್ಳಬೇಕಾಗಿದ್ದೇನಿಲ್ಲ, ಬಹುಮಟ್ಟಿಗೆ ನಿರ್ಭಯನಾಗಿರಬಹುದು. ಹೇಗೊ ಮಾಡಿ ಚಾವಣಿಯ ಮೇಲಕ್ಕೆ ಹತ್ತಿಬಿಟ್ಟರೆ ಕಾರ್ಯ ಮುಗಿಯಿತು. ಹತ್ತಿದನಂತರ ಚಾವಣಿ ಮೇಲೆ ನರ್ತಿಸಲೂ ಬಹುದು. ಆದರೆ ಹಂತ ಹತ್ತುವಾಗ ನರ್ತಿಸಲಾಗುವುದಿಲ್ಲ. ಮತ್ತೆ ನೋಡು—ಯಾವುದನ್ನ ತ್ಯಜಿಸಿ ಚಾವಣಿ ಹತ್ತಿದೆಯೊ, ಹತ್ತಿದನಂತರ ಪೂರ್ವದಲ್ಲಿ ತ್ಯಜಿಸಿದ್ದನ್ನು ಮತ್ತೆ ತ್ಯಜಿಸಬೇಕಾಗಿಲ್ಲ. ಚಾವಣಿಯೂ ಇಟ್ಟಿಗೆ ಸುಣ್ಣ ಮರಳಿನಿಂದ ತಯಾರಾಗಿದೆ; ಹಾಗೇ ಹಂತವೂ ಅದೇ ವಸ್ತುಗಳಿಂದ ತಯಾರಾಗಿದೆ. ಯಾವ ಹೆಂಗಸನ್ನು ಕಂಡರೆ ಬಹಳ ಎಚ್ಚರಿಕೆಯಿಂದಿರಬೇಕೊ, ಭಗವಂತನ ದರ್ಶನಾನಂತರ ಅದೇ ಹೆಂಗಸು ಸಾಕ್ಷಾತ್ ಭಗವತಿಯೆ ಎಂಬ ಬೋಧೆಯಾಗುತ್ತದೆ.

ಆಗ ಮಾತೃದೃಷ್ಟಿಯಿಂದ ಆಕೆಯನ್ನು ಪೂಜಿಸುತ್ತೀಯೆ. ಆಗ ಅಷ್ಟೊಂದು ಹೆದರಿಕೆ ಆಗೋದಿಲ್ಲ.

"ವಿಷಯವೇನೆಂದರೆ, ಅಜ್ಜಿಯನ್ನು ಮುಟ್ಟಿ ಇಚ್ಛೆಬಂದಂತೆ ಮಾಡು.

"ಬಹಿರ್ಮುಖ ಅವಸ್ಥೆಯಲ್ಲಿ ಸ್ಥೂಲ ಕಣ್ಣಿಗೆ ಬೀಳುತ್ತದೆ. ಆಗ ಮನಸ್ಸು ಅನ್ನಮಯಕೋಶದಲ್ಲಿ ಇರುತ್ತದೆ. ಬಳಿಕ ಸೂಕ್ಷ್ಮಶರೀರ—ಲಿಂಗಶರೀರ. ಆಗ ಮನಸ್ಸು ಮನೋಮಯಕೋಶದಲ್ಲಿ ಮತ್ತು ವಿಜ್ಞಾನಮಯಕೋಶದಲ್ಲಿ ಇರುತ್ತದೆ. ಬಳಿಕ ಕಾರಣಶರೀರ. ಮನಸ್ಸು ಕಾರಣಶರೀರಕ್ಕೆ ಬಂದಾಗ ಆನಂದ ಉಂಟಾಗುತ್ತದೆ,—ಆನಂದಮಯ ಕೋಶದಲ್ಲಿ ಮನಸ್ಸು ಇರುತ್ತದೆ. ಇದೇ ಚೈತನ್ಯದೇವನ ಅರ್ಧಬಾಹ್ಯ ದಶೆ. ಬಳಿಕ ಮನಸ್ಸು ಲಯವಾಗಿ ಹೋಗುತ್ತದೆ, ಮನಸ್ಸು ನಾಶವಾಗುತ್ತದೆ. ಅದು ಮಹಾಕಾರಣದಲ್ಲಿ ನಾಶವಾಗಿ ಬಿಡುತ್ತದೆ. ಮನಸ್ಸು ನಾಶವಾಯಿತು ಎಂದರೆ ಸುದ್ದಿ ಸಮಾಚಾರವೇ ಇಲ್ಲ. ಇದು ಚೈತನ್ಯ ದೇವನ ಅಂತರ್ದಶೆ. ಅಂತರ್ಮುಖಾವಸ್ಥೆ ಯಾವರೀತಿಯದು ಎಂಬುದು ಗೊತ್ತೆ? ದಯಾನಂದ ಹೇಳಿದ್ದಾನೆ, 'ಅಂತಃಪುರಕ್ಕೆ ಹೋಗಿ ಕಿಟಕಿ ಬಾಗಿಲುಗಳನ್ನು ಹಾಕಿಕೊಂಡು ಬಿಡು' ಅಂತ. ಆಗ ಸಿಕ್ಕಿಸಿಕ್ಕಿದವರೆಲ್ಲ ಅಲ್ಲಿಗೆ ಹೋಗೋಕಾಗೋದಿಲ್ಲ.

"ನಾನು ದೀಪದ ಕುಡಿಯನ್ನು ಇದಕ್ಕೆ ಹೋಲಿಸುತ್ತಿದ್ದೆ. ಅದರ ಕೆಂಪು ಭಾಗವನ್ನು ಸ್ಥೂಲಕ್ಕೆ ಹೋಲಿಸುತ್ತಿದ್ದೆ; ಅದರೊಳಗಿನ ಬಿಳಿಯ ಭಾಗವನ್ನು ಸೂಕ್ಷ್ಮಕ್ಕೆ ಹೋಲಿಸುತ್ತಿದ್ದೆ; ಇವೆಲ್ಲದರ ಒಳಗೆ ಒಂದು ಕಪ್ಪು ಕಡ್ಡಿಯಂತೆ ಕಾಣುವ ಭಾಗವನ್ನು ಕಾರಣ ಶರೀರಕ್ಕೆ ಹೋಲಿಸುತ್ತಿದ್ದೆ.

"ಧ್ಯಾನ ಸರಿಯಾಗಿ ಆಗುತ್ತಿರುವುದೆ ಎಂಬುದನ್ನು ಅರಿಯಲು ಕೆಲವು ಲಕ್ಷಣಗಳಿವೆ. ಒಂದು—ಇದು ಒಂದು ಜಡ ವಸ್ತು ಎಂದು ಭಾವಿಸಿ ಹಕ್ಕಿ ಬಂದು ತಲೆಯ ಮೇಲೆ ಕುಳಿತುಕೊಳ್ಳುತ್ತದೆ.

"ನಾನು ಕೇಶವಸೇನನನ್ನು ಮೊಟ್ಟಮೊದಲು ನೋಡಿದುದು ಆದಿ ಸಮಾಜದಲ್ಲಿ. ಅಲ್ಲಿ ವೇದಿಕೆಯ ಮೇಲೆ ಕೆಲವರು ಕುಳಿತುಕೊಂಡಿದ್ದರು. ಕೇಶವಸೇನ ಅವರ ಮಧ್ಯದಲ್ಲಿ ಕುಳಿತುಕೊಂಡಿದ್ದ. ಆತ ಒಂದು ಮರದ ದಿಮ್ಮಿಯೋಪಾದಿಯಲ್ಲಿ ಕುಳಿತಿರುವುದನ್ನು ಕಂಡೆ! ಸೇಜಬಾಬುವಿಗೆ (ಮಥುರಬಾಬುವಿಗೆ) ಹೇಳಿದೆ: 'ನೋಡಲ್ಲಿ! ಆ ಎರೆಯನ್ನು ಮೀನು

ತಿಂದುಬಿಟ್ಟದೆ! ಅದೊಂದಷ್ಟು ಧ್ಯಾನವಿದ್ದುದರಿಂದ ಭಗವಂತನ ಇಚ್ಛೆಯಿಂದ ಆತನ ಹೃದಯ ಯಾವುದಕ್ಕಾಗಿ—ಹೆಸರು, ಕೀರ್ತಿ ಮೊದಲಾದುವು—ಹಾತೊರೆಯುತ್ತಿತ್ತೊ ಅವು ದೊರೆತುವು.

"ಕಣ್ಣು ತೆರದಿದ್ದರೂ ಧ್ಯಾನ ಸಾಧ್ಯ. ಮಾತುಕತೆಯಾಡುತ್ತಿದ್ದರೂ ಧ್ಯಾನಮಾಡಬಹುದು. ಭಾವಿಸಿಕೊಳ್ಳಿ ಒಬ್ಬನಿಗೆ ಹಲ್ಲುನೋವಿದೆ, ಅದು ಸುಮ್ಮನೆ ಬಾಧೆಕೊಡುತ್ತಿದೆ ಎಂದು.—"

ಠಾಕೂರರ ಮನೆಯ ಶಿಕ್ಷಕ: "ಹೌದು, ನನಗೆ ಚೆನ್ನಾಗಿ ಅನುಭವ ಆಗಿದೆ." (ನಗೆ.)

ಪರಮಹಂಸರು ನಗುತ್ತ: "ನೋಡು, ಹಲ್ಲು ನೋಯುತ್ತಿದ್ದರೂ ಮನುಷ್ಯ ಎಲ್ಲಾ ಕೆಲಸಗಳನ್ನು ಮಾಡುತ್ತಾನೆ, ಆದರೆ ಆತನ ಮನಸ್ಸು ಮಾತ್ರ ನೋವಿನ ಕಡೆಗೇ ಹರಿಯುತ್ತಿರುತ್ತದೆ. ಆದ್ದರಿಂದ ಧ್ಯಾನ ಕಣ್ಣು ತೆರದಿದ್ದರೂ ಸಾಧ್ಯ; ಮಾತುಕತೆಗಳಾಡುತ್ತಿದ್ದರೂ ಸಾಧ್ಯ."

ಶಿಕ್ಷಕ: "ಪತಿತಪಾವನ ಎಂಬ ಹೆಸರು ಆತನಿಗಿದೆ. ಅದೇ ನಮ್ಮ ಆಸೆಯ ನೆಲೆ. ಆತ ದಯಾಮಯ."

ಶ್ರೀರಾಮಕೃಷ್ಣರು: "ಒಮ್ಮೆ ಸಿಕ್ ಮತದವರು ಹೇಳಿದರು ಆತ ದಯಾಮಯನೆಂದು. ನಾನು ಕೇಳಿದೆ, 'ಹೇಗೆ ಆತ ದಯಾಮಯ?' ಎಂದು. ಆಗ ಅವರು ಉತ್ತರವಿತ್ತರು, 'ಏಕೆ ಮಹಾರಾಜ್! ಆತ ನಮ್ಮನ್ನು ಸೃಷ್ಟಿಸಿದ್ದಾನೆ; ನಮಗಾಗಿ ಅಷ್ಟೊಂದು ವಸ್ತುಗಳನ್ನು ಸೃಷ್ಟಿ ಮಾಡಿದ್ದಾನೆ; ನಮ್ಮನ್ನು ಬೆಳಸಿ ಮನುಷ್ಯರನ್ನಾಗಿ ಮಾಡುತ್ತಾನೆ; ಪ್ರತಿಯೊಂದು ಹೆಜ್ಜೆಹೆಜ್ಜೆಗು ನಮ್ಮನ್ನು ವಿಪತ್ತುಗಳಿಂದ ಪಾರುಮಾಡಿಸುತ್ತಿದ್ದಾನೆ' ಎಂದು. ಅದಕ್ಕೆ ನಾನು ಉತ್ತರವಿತ್ತೆ: 'ಆತ ನಮಗೆ ಜನ್ಮವಿತ್ತು ರಕ್ಷಿಸುತ್ತಿದ್ದಾನೆ, ಪೋಷಿಸುತ್ತಿದ್ದಾನೆ, ನಿಜ. ಇದೇನು ಒಂದು ಮಹಾ ಕಾರ್ಯವೆ? ನಿಮಗೆ ಮಕ್ಕಳಾದರೆ ಅಗ್ರಹಾರದಿಂದ ಜನ ಬಂದು ಅವನ್ನು ಬೆಳೆಸುತ್ತಾರೆಯೆ?' ಎಂದು."

ಶಿಕ್ಷಕ: "ಕೆಲವರಿಗೆ ಇದ್ದಕ್ಕಿದ್ದ ಹಾಗೆ ದೊರೆತುಬಿಡುತ್ತದೆ, ಕೆಲವರಿಗೆ ಆಗೋದಿಲ್ಲ. ಇದರ ರಹಸ್ಯವೇನು?"

ಶ್ರೀರಾಮಕೃಷ್ಣರು: "ಹೀಗೆ ಏಕೆ ಗೊತ್ತೆ? ಬಹುಮಟ್ಟಿಗೆ ಪೂರ್ವ ಜನ್ಮದ ಸಂಸ್ಕಾರದಿಂದ ದೊರೆಯುತ್ತದೆ. ಜನರು ಭಾವಿಸುತ್ತಾರೆ, 'ಇದ್ದಕ್ಕಿದ್ದಹಾಗೆ ದೊರೆತುಬಿಟ್ಟಿತು' ಎಂದು. ಒಬ್ಬ ಬೆಳಗ್ಗೆ ಎದ್ದು ಒಂದು

ಗ್ಲಾಸು ಮದ್ಯ ಸೇವಿಸಿದ. ಅದರಿಂದಲೇ ತಲೆ ತಿರುಗಲು ಆರಂಭವಾಯಿತು; ತತ್ತರಿಸಲು ಆರಂಭಿಸಿದ. ಜನರಿಗೆಲ್ಲ ಆಶ್ಚರ್ಯ, ಒಂದು ಗ್ಲಾಸಿಗೇನೆ ಇಷ್ಟೊಂದು ಉನ್ಮತ್ತತೆ ಹೇಗೆ ಬಂತು ಅಂತ! ಆಗ ಒಬ್ಬ ಹೇಳಿದ, 'ಹುಚ್ಚರಾ! ಆತ ಇಡೀ ರಾತ್ರಿ ಮಧ್ಯ ಕುಡಿದ!' ಅಂತ.

"ಹನುಮಂತ ಸ್ವರ್ಣನಿರ್ಮಿತ ಲಂಕೆಯನ್ನು ಸುಟ್ಟುಹಾಕಿದ. ಜನರಿಗೆ ಆಶ್ಚರ್ಯ, ಕಪಿಯೊಂದು ಬಂದು ಎಲ್ಲವನ್ನೂ ಸುಟ್ಟುಹಾಕಿಬಿಟ್ಟಿತಲ್ಲ! ಅಂತ. ಆದರೆ ಮತ್ತೆ ಅವರು ಹೇಳಿದರು, 'ಸತ್ಯವೇನೆಂದರೆ,—ಸೀತೆಯ ನಿಟ್ಟುಸಿರು, ರಾಮನ ಕೋಪಾಗ್ನಿ ಸುಟ್ಟುಹಾಕಿತು' ಎಂದು.

"ಲಾಲಾಬಾಬುವನ್ನು[1] ನೋಡಿ! ಆತನಿಗೆ ಎಷ್ಟೊಂದು ಐಶ್ವರ್ಯ! ಪೂರ್ವ ಜನ್ಮದ ಸಂಸ್ಕಾರವಿಲ್ಲದೆ ಇದ್ದರೆ ಇದ್ದಕ್ಕಿದ್ದಹಾಗೆ ವೈರಾಗ್ಯ ಉಂಟಾಗುವುದೆ! ಮತ್ತೆ ರಾಣಿ ಭವಾನಿ ನೋಡಿ! ಹೆಂಗಸಾದರೂ ಎಷ್ಟೊಂದು ಜ್ಞಾನ ಭಕ್ತಿ ಆಕೆಯಲ್ಲಿ!

"ಹಿಂದಿನ ಜನ್ಮದಲ್ಲಿ ಸತ್ತ್ವಗುಣ ತುಂಬಿದ್ದರೆ, ಈ ಜನ್ಮದಲ್ಲಿ ಮನಸ್ಸು ಭಗವಂತನ ಕಡೆ ಹರಿಯುತ್ತದೆ; ಆತನಿಗಾಗಿ ವ್ಯಾಕುಲಪಡುತ್ತದೆ; ಎಲ್ಲಾ ವಿಷಯಕರ್ಮಗಳನ್ನೂ ತ್ಯಜಿಸಿ ಬಂದುಬಿಡುತ್ತದೆ.

"ಕೃಷ್ಣದಾಸಪಾಲ ಬಂದಿದ್ದ; ರಜೋಗುಣಿಯಾಗಿ ಕಂಡುಬಂದ. ಆದರೆ ಹಿಂದೂ ಆಗಿದ್ದರಿಂದ ಮೆಟ್ಟನ್ನು ಹೊರಗೆ ಬಿಟ್ಟುಬಂದ. ಒಂದೆರಡು ಮಾತನಾಡಿ ನೋಡಿದೆ; ಒಳಗೆ ಏನೂ ಇಲ್ಲ. ಪ್ರಶ್ನೆಹಾಕಿದೆ, 'ಮನುಷ್ಯನ ಕರ್ತವ್ಯವೇನು?' ಅಂತ. ಆತ ಹೇಳಿದ, 'ಜಗತ್ತಿಗೆ ಉಪಕಾರ ಮಾಡೋದು' ಎಂದು. ಆಗ ನಾನು ಉತ್ತರವಿತ್ತೆ, 'ಹಾಗೆ ಹೇಳೋಕೆ ನೀನು ಯಾರು? ನೀನು ಯಾವ ಉಪಕಾರವನ್ನು ತಾನೆ ಮಾಡಬಲ್ಲೆ? ನೀನು ಉಪಕಾರ ಮಾಡೋಕೆ ಈ ಜಗತ್ತೇನು ಒಂದು ಅಂಗೈಯಗಲದ್ದೆ!' ಎಂದು."

ನಾರಾ'ಣ ಬಂದಿದಾನೆ. ಪರಮಹಂಸರಿಗೆ ಬಹಳ ಆನಂದ. ನಾರಾಯಣನನ್ನು ಚಿಕ್ಕ ಮಂಚದ ಮೇಲೆ ತಮ್ಮ ಹತ್ತಿರವೆ ಕೂರಿಸಿಕೊಂಡಿದ್ದಾರೆ. ಆತನ ಕೈ ಮೈಯನ್ನು ಸವರುತ್ತ ಆದರವನ್ನು ತೋರಿಸ

1. ವಂಗದೇಶದ ಬಹಳ ಪ್ರಸಿದ್ಧನಾದ ಒಬ್ಬ ಜಮೀನುದಾರ. ಆತ ತನ್ನ ಎಳೆಯ ವಯಸ್ಸಿನಲ್ಲಿಯೆ ಮನೆಯನ್ನು ಬಿಟ್ಟು ವೈಷ್ಣವ ಸನ್ಯಾಸಿಯಾಗಿ ಮಥುರಾದಲ್ಲಿ ವಾಸಿಸುತ್ತಿದ್ದ.

ಲಾರಂಭಿಸಿದರು. ಆತನಿಗೆ ವೃಷ್ಟಾನ್ನ ತಿನ್ನಿಸಲಾರಂಭಿಸಿದ್ದಾರೆ. ಪ್ರೀತಿಯಿಂದ ಕೇಳುತ್ತಿದ್ದಾರೆ, 'ನೀರು ಕುಡಿಯುತ್ತೀಯ?' ಎಂದು. ನಾರಾ'ಣ ವ್ಯಾಸರಿನ ಸ್ಕೂಲಿನಲ್ಲಿ ಓದುತ್ತಿದ್ದಾನೆ. ಪರಮಹಂಸರನ್ನು ನೋಡಲು ಹೋಗುತ್ತಾನಲ್ಲ ಅಂತ ಆತನಿಗೆ ಮನೆಯಲ್ಲಿ ಬಡಿತ. ಪರಮಹಂಸರು ಪ್ರೀತಿಯಿಂದ ಸ್ವಲ್ಪ ಸ್ವಲ್ಪ ನಗುತ್ತ ನಾರಾಯಣನಿಗೆ ಹೇಳುತ್ತಿದ್ದಾರೆ, "ನೀನು ಒಂದು ಚರ್ಮದ ಕೋಟು ಹೊಲಿಸಿಕೊಂಡುಬಿಡು. ಆಗ ಹೊಡೆದರೂ ಅಷ್ಟಾಗಿ ತಾಗೋದಿಲ್ಲ" ಎಂದು. ಪರಮಹಂಸರು ಹರೀಶನಿಗೆ ಹೇಳಿದರು, "ಹುಕ್ಕ ಬೇಕು" ಎಂದು.

ಪರಮಹಂಸರು ಮತ್ತೆ ನಾರಾಯಣನನ್ನು ಸಂಬೋಧಿಸಿ: "ಹರಿಪದನನ್ನು ಮಾತೃಭಾವದಿಂದ ನೋಡುತ್ತಾಳಲ್ಲ ಆಕೆ ಇಲ್ಲಿಗೆ ಬಂದಿದ್ದಳು. ನಾನು ಹರಿಪದನಿಗೆ ಬಹಳವಾಗಿ ಎಚ್ಚರಿಕೆ ಕೊಟ್ಟಿದ್ದೇನೆ. ಆಕೆ ಘೋಷ್ ಪಾರಾದವರ ಸಂಪ್ರದಾಯದವಳು. ನಾನು ಆಕೆಯನ್ನು ಕೇಳಿದೆ, 'ನಿನಗೆ ಯಾರಾದರು ದೊರೆತಿದಾರೆಯೆ?' ಎಂದು. ಆಕೆ ಹೇಳಿದಳು 'ಹೌದು—ಒಬ್ಬ ಚರ್ಕವರ್ತಿ' ಅಂತ.

(ಮಾಸ್ಟರಿಗೆ) "ಆಹ! ನೀಲಕಂಠ ಅಂದು ಬಂದಿದ್ದ. ಆತನದು ಎಂಥ ಭಾವ! ಇನ್ನೊಂದು ದಿನ ಬರುವೆನೆಂದು ಹೇಳಿ ಹೋಗಿದ್ದಾನೆ. ಬಂದು ಹಾಡುತ್ತಾನಂತೆ. ಈಗ ಅವರು ಅಲ್ಲಿ ನರ್ತಿಸುತ್ತಿದ್ದಾರೆ. ಏಕೆ ನೀನು ಹೋಗಿ ನೋಡಬಾರದು? (ರಾಮಲಾಲನಿಗೆ) ಎಣ್ಣೆ ಇಲ್ಲವಲ್ಲ. (ಎಣ್ಣೆಗಡಿಗೆ ನೋಡಿ) ಕಾವಲುಗಾರ ಎಣ್ಣೆ ಹಾಕೇ ಇಲ್ಲವಲ್ಲ."

ಈಗ ಶ್ರೀರಾಮಕೃಷ್ಣರು ಅಡ್ಡಾಡುತ್ತಿದ್ದಾರೆ; ಒಮ್ಮೊಮ್ಮೆ ಕೊಠಡಿಯೊಳಗೆ ಒಮ್ಮೊಮ್ಮೆ ದಕ್ಷಿಣದ ವರಾಂಡದಲ್ಲಿ. ಪಶ್ಚಿಮದ ವರಾಂಡಕ್ಕೆ ಒಮ್ಮೊಮ್ಮೆ ಹೋದಾಗ, ಅಲ್ಲಿ ನಿಂತು ಗಂಗೆಯನ್ನು ನೋಡುತ್ತಾರೆ.

ಹೀಗೆ ಸ್ವಲ್ಪ ಹೊತ್ತು ಅಡ್ಡಾಡಿದನಂತರ ಮತ್ತೆ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದ್ದಾರೆ. ಘಂಟೆ ಅಪರಾಹ್ನ ಮೂರು. ಭಕ್ತರೆಲ್ಲ ಮತ್ತೆ ನೆಲದ ಮೇಲೆ ಕುಳಿತುಕೊಂಡಿದ್ದಾರೆ. ಪರಮಹಂಸರು ತಮ್ಮ ಚಿಕ್ಕ ಮಂಚದಮೇಲೆ ಸುಮ್ಮನೆ ಕುಳಿತಿದ್ದಾರೆ. ಒಮ್ಮೊಮ್ಮೆ ಕೊಠಡಿಯ ಗೋಡೆ ಕಡೆ ನೋಡುತ್ತಿದ್ದಾರೆ. ಗೋಡೆಗಳಲ್ಲಿ ಅನೇಕ ಪಟಗಳನ್ನು ನೇತುಹಾಕಿದೆ. ಪರಮಹಂಸರ ಎಡಭಾಗಕ್ಕೆ ಇರುವ ಗೋಡೆಯಲ್ಲಿ ಸರಸ್ವತಿ ಪಟ ಇದೆ. ಅದಾದನಂತರ ಅದಕ್ಕೆ ಸ್ವಲ್ಪ ದೂರದಲ್ಲಿ

ಗೌರಾಂಗ ಮತ್ತು ನಿತಾಯಿ ಭಕ್ತರೊಡನೆ ಕೀರ್ತನೆ ಮಾಡುತ್ತಿರುವ ಪಟ ಇದೆ. ಪರಮಹಂಸರ ಎದುರಿಗೆ ಧ್ರುವ, ಪ್ರಹ್ಲಾದ, ಕಾಳಿಯ ಪಟಗಳು. ಪರಮಹಂಸರ ಬಲಭಾಗಕ್ಕಿರುವ ಗೋಡೆಯಮೇಲೆ ರಾಜರಾಜೇಶ್ವರಿ ಪಟ ಇದೆ. ಅವರ ಹಿಂದುಗಡೆ ಇರುವ ಗೋಡೆಯಮೇಲೆ ಯೇಸುಕ್ರಿಸ್ತನ ಪಟವಿದೆ,— ಪೀಟರ್ ಮುಳುಗಿ ಹೋಗುತ್ತಿದ್ದಾನೆ, ಯೇಸು ಆತನನ್ನ ಮೇಲಕ್ಕೆ ಎತ್ತುತ್ತಿದ್ದಾನೆ. ಪರಮಹಂಸರು ಇದ್ದಕ್ಕಿದ್ದಹಾಗೆ ಮಾಸ್ಟರಿಗೆ ಹೇಳುತ್ತಿದ್ದಾರೆ: "ನೋಡು, ಸಾಧುಸನ್ಯಾಸಿಗಳ ಪಟವನ್ನು ಮನೆಯಲ್ಲಿ ಇಡುವುದು ಶ್ರೇಯಸ್ಕರ. ಬೆಳಗಾಗೆದ್ದು ಬೇರೆಯವರ ಮುಖ ನೋಡದೆ ಸಾಧುಸನ್ಯಾಸಿಗಳ ಮುಖನೋಡಿ ಹಾಸಿಗೆ ಬಿಡೋದು ಒಳ್ಳೆಯದು. ಗೋಡೆಯ ಮೇಲೆ ಆಂಗ್ಲರ ಚಿತ್ರಗಳು—ಧನಿಕ, ರಾಜ, ರಾಣಿ ಚಿತ್ರಗಳು; ರಾಣಿ ಮತ್ತು ಆಕೆಯ ಮಕ್ಕಳ ಚಿತ್ರಗಳು; ಪರಂಗಿಯ ದಂಪತಿಗಳು ಜೊತೆಯಲ್ಲಿ ಹೋಗುತ್ತಿರುವ ಚಿತ್ರ—ಇವೆಲ್ಲ ಜನರ ರಜೋಗುಣವನ್ನು ತೋರಿಸುತ್ತವೆ.

"ನೀನು ಯಾರ ಸಹವಾಸವನ್ನು ಮಾಡುವೆಯೊ, ನಿನಗೂ ಅವರ ಸ್ವಭಾವ ಬಂದುಬಿಡುತ್ತದೆ. ಹಾಗೆಯೆ ಚಿತ್ರಪಟಗಳಲ್ಲಿಯೂ ಆ ದೋಷವಿದೆ. ತಮ್ಮ ಸ್ವಭಾವ ಎಂಥದೊ ಅಂಥ ಸಹವಾಸಕ್ಕಾಗಿಯೆ ಜನ ಹುಡುಕುತ್ತಾರೆ. ಪರಮಹಂಸಾವಸ್ಥೆಯನ್ನು ಹೊಂದಿದವರು ಐದಾರು ವರ್ಷದ ನಾಲ್ಕೈದು ಹುಡುಗರನ್ನು ತಮ್ಮ ಹತ್ತಿರ ಇಟ್ಟುಕೊಂಡಿರುತ್ತಾರೆ; ತಮ್ಮೊಡನೆ ಬೆರೆಯಲು ಬಿಟ್ಟುಕೊಡುತ್ತಾರೆ. ಅವರಿಗೆ ಆ ಅವಸ್ಥೆಯಲ್ಲಿ ಮಕ್ಕಳ ಮಧ್ಯೆ ಇರಲು ಇಚ್ಛೆಯಾಗುತ್ತದೆ. ಮಕ್ಕಳು ಸತ್ತ್ವ ರಜಸ್ಸು ತಮಸ್ಸು ಯಾವ ಗುಣಗಳಿಗೂ ವಶರಾಗಿಲ್ಲ.

"ಮರಗಿಡಗಳನ್ನು ನೋಡಿದೊಡನೆಯೆ ತಪೋವನದ, ಋಷಿ ತಪಸ್ಸು ಮಾಡುತ್ತಿದ್ದಾನೆ ಎಂಬುದರ ಭಾವನೆ ಉದ್ದೀಪನೆಯಾಗುತ್ತದೆ."

ಸಿಂಥಿಯ ಒಬ್ಬ ಬ್ರಾಹ್ಮಣ ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಆತ ಕಾಶಿಯಲ್ಲಿ ವೇದಾಂತ ಓದುತ್ತಿದ್ದ.

ಶ್ರೀರಾಮಕೃಷ್ಣರು. "ಏನು ಸಮಾಚಾರ? ಎಲ್ಲಾ ಹೇಗಿದ್ದಾರೆ? ಅಪರೂಪ ದರ್ಶನ."

ಪಂಡಿತ ನಗುತ್ತ: "ಹೌದು, ಬರಲಿಲ್ಲ. ಸಂಸಾರದ ತಾಪತ್ರಯ. ನಿಮಗೆ ಗೊತ್ತೇ ಇದೆ ಹೆಚ್ಚು ಸಮಯ ದೊರೆಯೊಹಾಗಿಲ್ಲ ಎಂಬುದು."

ಪಂಡಿತ ಒಂದು ಕಡೆ ಕುಳಿತುಕೊಂಡ. ಪರಮಹಂಸರು ಆತನೊಡನೆ ಮಾತುಕತೆಗಳನ್ನಾಡುತ್ತಿದ್ದಾರೆ.

ಪರಮಹಂಸರು: "ಕಾಶಿಯಲ್ಲಿ ನೀನು ಬಹಳ ಕಾಲ ಇದ್ದೆ. ಅಲ್ಲಿ ಏನೇನು ನೋಡಿದೆ ಎಂಬುದರ ವಿಷಯವಾಗಿ ಒಂದು ಸ್ವಲ್ಪ ಹೇಳು. ದಯಾನಂದನ ವಿಷಯವಾಗಿ ಒಂದಷ್ಟು ತಿಳಿಸು."

ಪಂಡಿತ: "ಹೌದು ನಾನು ದಯಾನಂದರನ್ನು ಕಂಡು ಮಾತನಾಡಿದ್ದೇನೆ. ನೀವೂ ಕೂಡ ಆತನನ್ನು ಸಂಧಿಸಿದ್ದಿರಲ್ಲವೆ?"

ಶ್ರೀರಾಮಕೃಷ್ಣರು: "ನೋಡೋಕೆ ಹೋಗಿದ್ದೆ,—ಆಗ ಆಚೆ ದಡದಲ್ಲಿ ಒಂದು ತೋಟದಲ್ಲಿ ಇಳಿದುಕೊಂಡಿದ್ದ. ಅಂದು ಅಲ್ಲಿಗೆ ಕೇಶವಸೇನ ಬರುವ ವದಂತಿ ಇತ್ತು. ಚಕೋರ ಪಕ್ಷಿಯಂತೆ ಆತ ಕೇಶವಸೇನನಿಗಾಗಿ ಹಾತೊರೆಯಲಾರಂಭಿಸಿದ. ದೊಡ್ಡ ವಿದ್ಯಾವಂತ. ಬೆಂಗಾಳಿ ಭಾಷೆಯನ್ನ ಒಂದು ತಿರಸ್ಕಾರ ದೃಷ್ಟಿಯಿಂದ ನೋಡುತ್ತಿದ್ದ. ದೇವತೆಗಳನ್ನ ಒಪ್ಪುತ್ತಿದ್ದ—ಕೇಶವ ಒಪ್ಪುತ್ತಿರಲಿಲ್ಲ. ದಯಾನಂದ ಹೇಳುತ್ತಿದ್ದ: 'ಭಗವಂತ ಇಷ್ಟೊಂದು ವಸ್ತುಗಳನ್ನ ಸೃಷ್ಟಿಸಿದ್ದಾನೆ, ದೇವತೆಗಳನ್ನು ಸೃಷ್ಟಿಸಲು ಅವನ ಕೈಯಲ್ಲಾಗೋದಿಲ್ಲವೆ!' ಎಂದು. ಆದರೆ ಆತ ನಿರಾಕಾರವಾದಿ. ಕ್ಯಾಪ್ಟನ್, 'ರಾಮ, ರಾಮ' ಎಂದು ಹೇಳುತ್ತಿದ್ದ. ಆಗ ಆತ ಹೇಳಿದ, 'ಅದಕ್ಕೆ ಬದಲು "ಜಿಲೇಬಿ! ಜಿಲೇಬಿ!" ಎಂದು ಹೇಳು' ಅಂತ!"

ಪಂಡಿತ: "ಕಾಶಿಯಲ್ಲಿ ದಯಾನಂದ ಸರಸ್ವತಿಗು ಉಳಿದ ಪಂಡಿತರಿಗು ಒಂದು ದೊಡ್ಡ ವಾಗ್ವಾದ ನಡೆಯಿತು. ಕೊನೆಕೊನೆಗೆ ಆತನೊಬ್ಬನೇ ಒಂದು ಕಡೆ ಉಳಿದವರೆಲ್ಲಾ ಇನ್ನೊಂದು ಕಡೆ. ಅವರೆಲ್ಲಾ ಆತನಿಗೆ ಅಂಥ ಬಿಸಿ ತಾಗಿಸಿದರು ಆತನಿಗೆ ಅಲ್ಲಿಂದ ಓಡಿಹೋಗಿ ತಲೆ ತಪ್ಪಿಸಿಕೊಂಡು ಬಿಟ್ಟರೆ ಬದುಕಿಕೊಂಡೆನಲ್ಲ ಅನ್ನುವಂತೆ ಆಯಿತು. ಎಲ್ಲರೂ ಒಟ್ಟಿಗೆ ಕೂಡಿ ಉಚ್ಚಕಂಠದಿಂದ ಕೂಗಿಕೊಳ್ಳಲಾರಂಭಿಸಿದರು, 'ದಯಾನಂದೇನ ಯದುಕ್ತಂ ತದ್ಧೇಯಮ್!' ಎಂದು.

"ನಾನು ಕರ್ನಲ್ ಆಲ್ಕಾಟನ್ನೂ ಕಂಡು ಮಾತನಾಡಿದ್ದೇನೆ. ತಿಯಾಸೊಫಿಗಳು ಹೀಗೆ ಹೇಳುತ್ತಾರೆ: ಮಹಾತ್ಮರಿದ್ದಾರೆ; ಚಂದ್ರಲೋಕ, ಸೂರ್ಯಲೋಕ, ನಕ್ಷತ್ರಲೋಕ ಇವೆಲ್ಲ ಇವೆ; ಸೂಕ್ಷ್ಮ ಶರೀರದಲ್ಲಿ ಅಲ್ಲಿಗೆಲ್ಲ ಹೋಗಬಹುದು—ಇನ್ನು ಏನೇನೊ. ಒಳ್ಳೆಯದು, ನಿಮಗೆ

ತಿಯಾಸೊಫಿ ಹೇಗೆ ಕಾಣುತ್ತದೆ?"

ಶ್ರೀರಾಮಕೃಷ್ಣರು: "ಭಕ್ತಿಯೊಂದೇ ಸಾರಭೂತವಾದ್ದು—ಭಗವಂತನಲ್ಲಿ ಭಕ್ತಿ. ಅವರು ಅದನ್ನು ಪಡೆಯಲು ವ್ಯಾಕುಲರಾಗಿದ್ದಾರೇನು? ಹಾಗಿದ್ದರೆ ಒಳ್ಳೆಯದೆ. ಭಗವಂತನ ಸಾಕ್ಷಾತ್ಕಾರವೆ ಉದ್ದೇಶವಾಗಿದ್ದರೆ ಅದು ಒಳ್ಳೆಯದೆ. ಚಂದ್ರಲೋಕ, ಸೂರ್ಯಲೋಕ, ಮಹಾತ್ಮ ಇವುಗಳಲ್ಲಿಯೆ ಮನಸ್ಸು ನಿರತವಾಗಿಬಿಟ್ಟರೆ ಭಗವಂತನನ್ನು ಪಡೆಯಲಾಗೋದಿಲ್ಲ. ಆತನ ಪಾದಪದ್ಮಗಳಲ್ಲಿ ಭಕ್ತಿ ಉಂಟಾಗಲೋಸುಗ ಸಾಧನೆ ಮಾಡಬೇಕು; ವ್ಯಾಕುಲರಾಗಿ ಕರೆಯಬೇಕು. ವಿವಿಧ ವಸ್ತುಗಳ ಕಡೆ ಹರಿದು ಹೋಗಿರುವ ಮನಸ್ಸನ್ನು ಒಂದು ಕಡೆ ಏಕೀಕರಿಸಿ ಅದನ್ನು ಆತನ ಕಡೆ ತಿರುಗಿಸಬೇಕು."

ಹೀಗೆಂದು ಹೇಳಿ ಪರಮಹಂಸರು ರಾಮಪ್ರಸಾದನ ಹಾಡನ್ನು ಹಾಡುತ್ತಿದ್ದಾರೆ:

ದೇವ ದೇವನೆ ನಿಜವನರಿಯಲು
ಮನವು ತೊಳಲುತ ಬಳಲಿದೆ.
ಬೀಗ ಮುದ್ರೆಯನಿಟ್ಟ ಕೋಣೆಯೊ-
ಳಲೆವ ಮರುಳನ ಹೋಲಿದೆ!

ದಿವ್ಯ ಪ್ರೇಮಕೆ ದೊರೆವನಾತನು;
ಶ್ರದ್ಧೆಗಲ್ಲದೆ ಒಲಿಯನು.
ವೇದಶಾಸ್ತ್ರ ಪುರಾಣದರ್ಶನ-
ದಾಚೆಗೇ ನಿಂತಾತನು!

ಭಕ್ತಿಗೊಲಿಯುವ ಹೃದಯದನ್ಯಾ-
ನಂದರೂಪನು ಆತನು;
ಇದನರಿತೆ ಆ ಯೋಗಿವರ್ಯರು
ಯುಗ ಯುಗವು ತಪಗೈವರು!

ಭಕ್ತಿಯುಚ್ಚ್ವರಗೊಳಲು ಎದೆಯಲಿ
ಅವನೆ ನಿನ್ನನು ಸೆಳೆವನು.
ಈ ರಹಸ್ಯವ ಜಗದ ಸಂತೆಯ
ಜನದ ಜಂಗುಳಿಗೊರೆಯೆನು.

ಶ್ರೀ ಪ್ರಸಾದನು ನುಡಿವನೀತೆರ:
"ಮಾತೃಭಾವದಿ ನೆನೆವೆನು;
ನನ್ನ ಸೂಚನೆಯರಿತು ನೀವೇ
ತಿಳಿಯಿರಾತನ ನಿಜವನು!"

ಮತ್ತೆ ಪರಮಹಂಸರು ಹೇಳಿದರು: "ಶಾಸ್ತ್ರ ಹೇಳು! ದರ್ಶನ ಹೇಳು! ವೇದಾಂತ ಹೇಳು! ಇವುಗಳಾವುದರಲ್ಲಿಯೂ ಆತನಿಲ್ಲ. ಆತನಿಗಾಗಿ ನಿನ್ನ ಪ್ರಾಣ ವ್ಯಾಕುಲಪಡದೆ ಇದ್ದರೆ ಏನೂ ದೊರಕದು.

ದಿವ್ಯ ಪ್ರೇಮಕೆ ದೊರೆವನಾತನು;
ಶ್ರದ್ಧೆಗಲ್ಲದೆ ಒಲಿಯನು.
ವೇದಶಾಸ್ತ್ರ ಪುರಾಣದರ್ಶನ–
ದಾಚೆಗೇ ನಿಂತಾತನು!
ಭಕ್ತಿಗೊಲಿಯುವ ಹೃದಯದಮೃತಾ–
ನಂದರೂಪನು ಆತನು;

"ಬಹಳವಾಗಿ ವ್ಯಾಕುಲನಾಗಬೇಕು. ಒಂದು ಹಾಡನ್ನು ಕೇಳು:

ಎಲ್ಲರಿಗೂ ಲಭಿಸಬಹುದೆ ಆ ರಾಧೆಯ ದರ್ಶನ
ಎಲ್ಲರೂ ಸವಿಯಬಹುದೆ ರಾಧೆಯೊಲವಿನಮೃತವ!
ಎಷ್ಟು ಹಣವ ಸುರಿದರೂ ಈ ಅಪೂರ್ವ ನಿಧಿಯು ನಮಗೆ
ಎಂದೆಂದಿಗು ದೊರೆಯದು
ಭಕ್ತಿಭಾವ ಸಾಧನೆಯಲಿ ಮಾತ್ರ ದೊರೆಯುವಂಥದು!
ಸ್ವಾತಿಯ ಹನಿ ಚಿಪ್ಪಿನಲ್ಲಿ
ಮುತ್ತಾಗುವ ರೀತಿಯಲ್ಲಿ
ಬೇರೆ ಮಳೆಯ ಹನಿಯಿಂದಲು ಮುತ್ತಾಗಲು ಸಾಧ್ಯವೆ?
'ಬಾನ ತೊರೆದು ಇಳೆಗೆ ಇಳಿದು
ಬಾರೊ ಚಂದುಮಾಮ' ಎಂದು
ತಾಯ್ ಕರೆಯಲು ಮಗುವಿಗಾಗಿ, ಚಂದ್ರ ಸಿಳಿದು ಬರುವನೆ?

"ಸಾಧನೆ ಅತ್ಯಂತ ಆವಶ್ಯಕ. ಇದ್ದಕ್ಕಿದ್ದ ಹಾಗೆ ಭಗವಂತನ ದರ್ಶನ ದೊರೆಯುವುದೆ?

"ಒಬ್ಬ ನನ್ನನ್ನು ಕೇಳಿದ, 'ನನಗೇಕೆ ಭಗವಂತನನ್ನು ನೋಡಲಾಗುತ್ತಿಲ್ಲ?' ಎಂದು. ಆಗ ಮನಸ್ಸಿಗೆ ಏನು ತಟ್ಟಿತೊ ಅದನ್ನು ಹೇಳಿಬಿಟ್ಟೆ.

'ನಿನಗೆ ದೊಡ್ಡ ಮೀನು ಹಿಡಿಯಬೇಕು ಎಂಬ ಇಚ್ಛೆ. ಅದಕ್ಕೆ ತಕ್ಕ ಸಲಕರಣೆಗಳನ್ನು ಒದಗಿಸಿಕೊ. ಎರೆಯನ್ನು ತಯಾರು ಮಾಡಿಕೊ. ಗಾಳದಕಡ್ಡಿ ಮತ್ತು ದಾರವನ್ನು ಹವಣಿಸಿಕೊ. ಅನಂತರ ಗಾಳವನ್ನು ಬೀಸು. ಎರೆಯ ಗಂಧದಿಂದ ಆಕರ್ಷಿತವಾಗಿ ಆಳವಾದ ನೀರಿನಿಂದ ಮೀನು ಬರುತ್ತದೆ. ನೀರು ಅಲುಗಾಡಿದರೆ ದೊಡ್ಡ ಮೀನು ಬಂದಿದೆ ಎಂಬುದರ ಸೂಚನೆ ನಿನಗೆ ಸಿಕ್ಕುತ್ತದೆ' ಎಂದು.

"ನಿನಗೆ ಬೆಣ್ಣೆ ತಿನ್ನಬೇಕೆಂಬ ಇಚ್ಛೆ. ಅದಕ್ಕಾಗಿ, ಹಾಲಿನಲ್ಲಿ ಬೆಣ್ಣೆ ಇದೆ, ಹಾಲಿನಲ್ಲಿ ಬೆಣ್ಣೆ ಇದೆ,—ಎಂದು ಜಪಿಸಿದರೆ ಏನಾಗುತ್ತದೆ? ಮೈಮುರಿದು ಕೆಲಸ ಮಾಡಬೇಕು. ಆಗ ಬೆಣ್ಣೆ ಬರುತ್ತದೆ. 'ಭಗವಂತ ಇದ್ದಾನೆ, ಭಗವಂತ ಇದ್ದಾನೆ' ಎಂದು ಸುಮ್ಮನೆ ಹೇಳುತ್ತಿದ್ದರೆ ಆತನನ್ನು ನೋಡಲಾಗುವುದೆ? ಸಾಧನೆ ಆವಶ್ಯಕ.

"ಭಗವತಿ ತಾನೇ ಸ್ವಯಂ ಐದು ಪ್ರಾಣಿಗಳ ಕಪಾಲಗಳಿಂದ ನಿರ್ಮಿತವಾದ ಆಸನದ ಮೇಲೆ ಕುಳಿತು ಲೋಕಶಿಕ್ಷಣಾರ್ಥವಾಗಿ ಕಠೋರ ತಪಸ್ಸು—ಮಾಡಿದಳು. ಶ್ರೀಕೃಷ್ಣ ಸಾಕ್ಷಾತ್ ಪೂರ್ಣಬ್ರಹ್ಮ. ಆತನೂ ರಾಧಾಯಂತ್ರವನ್ನು ಹುಡುಕಿತಂದು ಲೋಕಶಿಕ್ಷಣಾರ್ಥವಾಗಿ ತಪಸ್ಸು ಮಾಡಿದ.

"ಶ್ರೀಕೃಷ್ಣ ಪುರುಷ; ರಾಧೆ ಪ್ರಕೃತಿ, ಚಿಚ್ಛಕ್ತಿ—ಆದ್ಯಾಶಕ್ತಿ. ರಾಧೆ ಪ್ರಕೃತಿ, ತ್ರಿಗುಣಮಯಿ. ಆಕೆಯಲ್ಲಿ ಸತ್ತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳಿವೆ. ಈರುಳ್ಳಿಯನ್ನು ಬಿಡಿಸುತ್ತಾ ಹೋದರೆ, ಮೊದಲು ಕಪ್ಪುಮಿಶ್ರವ ಕೆಂಪುಸಿಪ್ಪೆ, ಬಳಿಕ ಕೆಂಪುಸಿಪ್ಪೆ, ಆ ಬಳಿಕ ಬಿಳಿ ಸಿಪ್ಪೆ ಬರುತ್ತಾ ಹೋಗುತ್ತವೆ. ವೈಷ್ಣವ ಶಾಸ್ತ್ರದಲ್ಲಿ 'ಕಾಮರಾಧೆಯು', 'ಪ್ರೇಮರಾಧೆಯು', 'ನಿತ್ಯರಾಧೆಯು' ವಿಷಯ ಇದೆ. ಕಾಮರಾಧೆಯೇ ಚಂದ್ರಾವಳಿ, ಪ್ರೇಮರಾಧೆಯೇ ಶ್ರೀಮತಿ; ನಂದ ನಿತ್ಯರಾಧೆಯನ್ನ—ಕಂಕುಳಲ್ಲಿ ಗೋಪಾಲನನ್ನು ಎತ್ತಿಕೊಂಡಿದ್ದ ರಾಧೆಯನ್ನ—ನೋಡಿದ್ದ.

"ನೀರು ಮತ್ತು ಅದರ ತೋಯುವ ಶಕ್ತಿಯಂತೆ ಚಿಚ್ಛಕ್ತಿಗು ವೇದಾಂತದ ಬ್ರಹ್ಮನಿಗೂ ಅಭೇದ. ನೀರಿನ ತೋಯುವ ಶಕ್ತಿಯನ್ನು ಭಾವಿಸಿದರೆ ನೀರನ್ನು ಭಾವಿಸಬೇಕಾಗುತ್ತದೆ; ನೀರನ್ನು ಭಾವಿಸಿದರೆ ನೀರಿನ ತೋಯುವ ಶಕ್ತಿಯು ಭಾವನೆ ಬಂದೇಬಿಡುತ್ತದೆ. ಹಾವು ಮತ್ತು ಅದರ ವಕ್ರಗತಿ; ವಕ್ರಗತಿಯನ್ನು ಭಾವಿಸಿದರೆ ಸರ್ಪವನ್ನು ಭಾವಿಸಲೇ

ಬೇಕಾಗುತ್ತದೆ. ಬ್ರಹ್ಮವೆಂದು ಯಾವಾಗ ಹೇಳುತ್ತೇನೆ? ಆತ ನಿಷ್ಕ್ರಿಯ ನಾಗಿರುವಾಗ, ಕಾರ್ಯದಿಂದ ನಿರ್ಲಿಪ್ತನಾಗಿರುವಾಗ. ಪುರುಷ. ಪೋಷಾಕು ಹಾಕಿಕೊಂಡ ಮೇಲೂ ಎಂದಿನಂತೆ ಪುರುಷನೆ. ದಿಗಂಬರ ನಾಗಿದ್ದ, ಸಾಂಬರನಾದ— ಮತ್ತೆ ದಿಗಂಬರನಾಗುತ್ತಾನೆ. ಹಾವಿನಲ್ಲಿ ವಿಷವಿದೆ. ಆದರೆ ಅದರಿಂದ ಹಾವಿಗೆ ಏನೂ ಆಗೋದಿಲ್ಲ. ಅದು ಯಾರನ್ನ ಕಡಿಯುತ್ತದೆಯೊ ಅವರಿಗೆ ಅದು ವಿಷವಾಗಿ ಪರಿಣಮಿಸುತ್ತದೆ. ಬ್ರಹ್ಮ ಅದರಿಂದ ನಿರ್ಲಿಪ್ತ.

"ನಾಮರೂಪ ಎಲ್ಲಿದೆಯೊ ಅಲ್ಲೇನೆ ಪ್ರಕೃತಿಯ ಐಶ್ವರ್ಯ (ಆವಿ ರ್ಭಾವ). ಸೀತೆ ಹನುಮಂತನಿಗೆ ಹೇಳಿದಳು: 'ಮಗು, ನಾನೆ ಒಂದು ರೂಪಿನಲ್ಲಿ ರಾಮ, ಒಂದು ರೂಪಿನಲ್ಲಿ ಸೀತೆ ಆಗಿದೇನೆ; ಒಂದು ರೂಪಿನಲ್ಲಿ ಇಂದ್ರ, ಒಂದು ರೂಪಿನಲ್ಲಿ ಇಂದ್ರಾಣಿ,— ಒಂದು ರೂಪಿನಲ್ಲಿ ಬ್ರಹ್ಮ, ಒಂದು ರೂಪಿನಲ್ಲಿ ಬ್ರಹ್ಮಾಣಿ,— ಒಂದು ರೂಪಿನಲ್ಲಿ ರುದ್ರ, ಒಂದು ರೂಪಿ ನಲ್ಲಿ ರುದ್ರಾಣಿ,— ಆಗಿದೇನೆ' ಎಂದು. ಏನೇನು ನಾಮರೂಪಗಳಿವೆಯೊ ಅವೆಲ್ಲಾ ಚಿಚ್ಛಕ್ತಿಯ ಐಶ್ವರ್ಯ (ಆವಿರ್ಭಾವ). ಎಲ್ಲವೂ ಚಿಚ್ಛಕ್ತಿಯ ಐಶ್ವರ್ಯವೆ— ಧ್ಯಾನ ಧ್ಯಾನಿ ಕೂಡ. ನಾನು ಧ್ಯಾನಮಾಡುತ್ತೇನೆ ಎಂಬ ಬೋಧೆ ಎಲ್ಲಿಯವರೆಗೆ ಇರುವುದೊ ಅಲ್ಲಿಯವರೆಗೆ ಆಕೆಯ ಇಲಾಖೆ ಯಲ್ಲಿಯೆ ನಾನು ಇದೇನೆ. (ಮಾಸ್ಟರ್ ಕಡೆ ತಿರುಗಿ) ಇವನ್ನು ಅರಗಿಸಿಕೊ. ವೇದ ಪುರಾಣಗಳನ್ನು ಕೇಳಬೇಕು, ಅವು ಹೇಳುವುದನ್ನು ಅನುಷ್ಠಾನಕ್ಕೆ ತರಬೇಕು.

(ಪಂಡಿತನಿಗೆ) "ಆಗಾಗ ಸಾಧುಸಂಗ ಒಳ್ಳೆಯದು. ಮನುಷ್ಯನಿಗೆ ರೋಗ ಹತ್ತಿಕೊಂಡೇ ಇದೆ. ಅದು ಸಾಧುಸಂಗದಿಂದ ಬಹಳವಾಗಿ ತಲೆ ತಗ್ಗಿಸುತ್ತದೆ.

"'ನಾನು' ಮತ್ತು 'ನನ್ನದು'. 'ಹೇ ಭಗವಂತ, ನೀನೆ ಎಲ್ಲದರ ಕರ್ತ. ನೀನೊಬ್ಬನೆ ನಮ್ಮ ಆಪ್ತ ಬಂಧು. ಈ ಮನೆ, ಮಠ, ಪರಿವಾರ, ಬಾಂಧವರು, ಬಂಧುಗಳು; ಈ ಇಡೀ ಜಗತ್ತು ಎಲ್ಲವೂ ನಿನಗೆ ಸೇರಿದವೆ,—' ಇದಕ್ಕೇ ಸರಿಯಾದ ಜ್ಞಾನ ಎಂದು ಹೆಸರು. ಅದಕ್ಕೆ ಬದಲು, 'ನಾನೆ ಎಲ್ಲವನ್ನು ಮಾಡುತ್ತಿದ್ದೇನೆ; ನಾನು ಕರ್ತ; ಮನೆ, ಮಠ, ಪರಿವಾರ, ಮಕ್ಕಳುಗಿಕ್ಕಳು, ಬಂಧುಗಳು, ಆಸ್ತಿಪಾಸ್ತಿ ಇವೆಲ್ಲ ನನಗೆ ಸೇರಿದವೆ,—' ಇವೆಲ್ಲಾ ಅಜ್ಞಾನ.

" ಒಮ್ಮೆ ಗುರು ಈ ವಿಷಯವನ್ನೆಲ್ಲ ಶಿಷ್ಯನಿಗೆ ತಿಳಿಸುತ್ತಿದ್ದ. ಗುರು ಹೇಳಿದ, 'ಭಗವಂತನೊಬ್ಬನೆ ನಿನ್ನ ಸ್ವಂತದವ, ಬೇರೆ ಯಾರೂ ನಿನ್ನ ಸ್ವಂತದವರಲ್ಲ' ಎಂದು. ಶಿಷ್ಯ ಹೇಳಿದ: 'ಒಳ್ಳೇದು, ಆದರೆ ತಾಯಿ ಹೆಂಡತಿ ಇವರೆಲ್ಲ ಬಹಳ ಅಕ್ಕರೆಯಿಂದ ನನ್ನನ್ನು ನೋಡುತ್ತಾರೆ. ನಾನು ಇಲ್ಲದೆ ಇದ್ದಾಗ ಅವರಿಗೆ ಎಲ್ಲವೂ ಅಂಧಕಾರಮಯವಾದಂತೆ ಕಾಣುತ್ತದೆ. ಅವರು ಎಷ್ಟೊಂದು ನನ್ನನ್ನು ಪ್ರೀತಿಸುತ್ತಾರೆ!' ಅಂತ. ಗುರು ಹೇಳಿದ: 'ಅದೆಲ್ಲ ನಿನ್ನ ಮಾನಸಿಕ ಭ್ರಾಂತಿ. ನಿನಗೆ ತೋರಿಸಿಕೊಡುತ್ತೇನೆ ಯಾರೂ ನಿನ್ನ ಸ್ವಂತದವರಲ್ಲ ಎಂಬುದನ್ನ. ಈ ಕೆಲವು ಔಷಧದ ಗುಳಿಗೆಗಳನ್ನು ನಿನ್ನ ಹತ್ತಿರ ಇಟ್ಟುಕೊ. ಮನೆಗೆ ಹೋಗಿ ಅವನ್ನು ನುಂಗಿ ಮಲಗಿಕೊ. ಜನರಿಗೆ ಭಾವನೆಯಾಗುತ್ತದೆ ನೀನು ಸತ್ತುಹೋಗಿಬಿಟ್ಟಿದ್ದೀಯೆ ಅಂತ. ಆದರೆ ನಿನಗೆ ಮಾತ್ರ ಬಾಹ್ಯಜ್ಞಾನವಿರುತ್ತದೆ; ನೋಡಲು ಕೇಳಲು ಎಲ್ಲಾ ಸಾಧ್ಯವಾಗುತ್ತದೆ. ಆ ಸಮಯಕ್ಕೆ ಸರಿಯಾಗಿ ನಾನು ನಿನ್ನ ಮನೆಗೆ ಬರುತ್ತೇನೆ' ಎಂದು.

" ಶಿಷ್ಯ ಹಾಗೆಯೆ ಮಾಡಿದ. ಮನೆಗೆ ಹೋಗಿ ಕೆಲವು ಗುಳಿಗೆಗಳನ್ನು ತಿಂದ ಬಳಿಕ ಅಚೇತನನಾಗಿ ಹಾಸಿಗೆ ಮೇಲೆ ಬಿದ್ದಿದ್ದ. ತಾಯಿ, ಹೆಂಡತಿ ಎಲ್ಲರೂ—ಗೋಳಾಡಲಾರಂಭಿಸಿದರು. ಆ ಸಮಯಕ್ಕೆ ಸರಿಯಾಗಿ ಗುರು ಕವಿರಾಜನ (ಆಯುರ್ವೇದ ಪಂಡಿತನ) ವೇಷ ಹಾಕಿಕೊಂಡು ಆ ಮನೆಗೆ ಹೋದ. ಎಲ್ಲವನ್ನೂ ಕೇಳಿ ಹೇಳಿದ: 'ಒಳ್ಳೇದು, ಇದಕ್ಕೊಂದು ಔಷಧವಿದೆ— ಮತ್ತೆ ಬದುಕಿ ಏಳುತ್ತಾನೆ. ಆದರೆ ಒಂದು ವಿಷಯ. ಈ ಔಷಧವನ್ನು ಆತನ ಸ್ವಂತದವರೊಬ್ಬರು ಮೊದಲು ತಿನ್ನಬೇಕು, ಬಳಿಕ ಅದನ್ನು ಆತನಿಗೆ ಕೊಡಲಾಗುತ್ತದೆ. ಆತನ ಸ್ವಂತದವರು ಯಾರು ಈ ಗುಳಿಗೆಯನ್ನು ತಿನ್ನುತ್ತಾರೊ, ಅವರು ಮಾತ್ರ ಸತ್ತುಹೋಗುತ್ತಾರೆ. ಇಲ್ಲಿ ಆತನ ತಾಯಿ ಹೆಂಡತಿ ಎಲ್ಲರೂ ಇದ್ದೀರಿ. ಒಬ್ಬರಿಲ್ಲದಿದ್ದರೆ ಒಬ್ಬರಾದರೂ ಮುಂದೆಬಂದು ತಿಂದುಬಿಡುತ್ತೀರಿ ಎಂಬುದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ. ನೋಡಿ, ಹಾಗೆ ಮಾಡುವುದಾದರೆ ಆತ ಬದುಕಿ ಏಳುತ್ತಾನೆ' ಎಂದು.

" ಶಿಷ್ಯ ಎಲ್ಲವನ್ನೂ ಕೇಳುತ್ತಿದ್ದಾನೆ. ಕವಿರಾಜ ಮೊದಲು ತಾಯಿಯನ್ನು ಕರೆದ. ಆಕೆ ದುಃಖದಿಂದ ನೆಲದ ಮೇಲೆ ಬಿದ್ದು ಹೊರಳಾಡುತ್ತಾ ಅಳುತ್ತಿದ್ದಾಳೆ. ಪಂಡಿತ ಆಕೆಗೆ ಹೇಳಿದ: 'ತಾಯೆ, ನೀನಿನ್ನು ಅಳ

ಬೇಕಾಗಿಲ್ಲ. ನೀನು ಈ ಔಷಧವನ್ನು ತೆಗೆದುಕೊ. ನಿಸ್ಸಂದೇಹವಾಗಿ ನಿನ್ನ ಮಗ ಬದುಕಿ ಏಳುತ್ತಾನೆ. ಆದರೆ ನಿನಗೆ ಮಾತ್ರ ಇದರಿಂದ ಮೃತ್ಯು ಉಂಟಾಗುತ್ತದೆ' ಎಂದು. ತಾಯಿ ಔಷಧವನ್ನ ಕೈಗೆ ತೆಗೆದುಕೊಂಡು ಯೋಚಿಸಲಾರಂಭಿಸಿದಳು. ಬಹಳವಾಗಿ ಯೋಚಿಸಿ, ಚಿಂತೆಯಿಂದ ಅಳುತ್ತ ಹೇಳಿದಳು: 'ಅಪ್ಪಾ, ನನಗೆ ಇನ್ನೂ ಕೆಲವು ಗಂಡು ಹೆಣ್ಣು ಮಕ್ಕಳಿದ್ದಾರೆ. ನಾನು ಸತ್ತು ಹೋದರೆ ಅವರಿಗೆ ಏನಾಗಿಬಿಡುತ್ತದೊ ಏನೊ. ಆ ವಿಷಯವಾಗಿ ನಾನು ಯೋಚಿಸುತ್ತಿದ್ದೇನೆ. ಯಾರು ತಾನೆ ನೋಡಿಕೊಳ್ಳುತ್ತಾರೆ ಅವರನ್ನ? ಯಾರು ತಾನೆ ಅವರಿಗೆ ಅನ್ನಾಹಾರಾದಿಗಳನ್ನ ಕೊಡುತ್ತಾರೆ? ಅದಕ್ಕಾಗಿ ಯೋಚಿಸುತ್ತಿದ್ದೇನೆ' ಎಂದು. ಕವಿರಾಜ ಹೆಂಡತಿಯನ್ನ ಕರೆದು ಆಕೆಯ ಕೈಗೆ ಔಷಧವನ್ನು ಕೊಟ್ಟ,— ಆಕೆಯೂ ಬಹಳವಾಗಿ ಅಳುತ್ತಿದ್ದಳು. ಔಷಧವನ್ನು ಕೈಗೆ ತೆಗೆದುಕೊಂಡು ಆಕೆಯೂ ಯೋಚಿಸಲಾರಂಭಿಸಿದಳು. ಔಷಧ ತೆಗೆದುಕೊಂಡರೆ ತಾನು ಸಾಯಬೇಕಾಗುತ್ತದೆ ಎಂಬುದನ್ನ ಕೇಳಿದಳು. ಆಗ ಅಳುತ್ತ ಹೇಳಲಾರಂಭಿಸಿದಳು: 'ಅಯ್ಯೊ! ಅವರ ಹಣೆಯಲ್ಲಿ ಏನು ಬರೆದಿತ್ತೊ ಅದು ಆಗಿಹೋಯಿತು. ಈಗ ಈ ಎಳೆಯ ಮಕ್ಕಳ ಗತಿಯೇನು ಹೇಳು? ಇವರನ್ನು ಬೆಳೆಸುವವರು ಯಾರು ತಾನೆ ಇದ್ದಾರೆ? ನಾನು ಔಷಧವನ್ನ ಎಂಥ ಹೃದಯದಿಂದ ತೆಗೆದುಕೊಳ್ಳಲಿ?' ಎಂದು. ಅಷ್ಟರಲ್ಲಿ ಶಿಷ್ಯನ ಆ ಔಷಧದ ನೆಶಾ ಇಳಿದುಹೋಯಿತು. ಆಗ ಅವನಿಗೆ ಯಾರೂ ತನ್ನ ಸ್ವಂತದವರಲ್ಲ ಎಂಬುದು ಚೆನ್ನಾಗಿ ಮಂಚಟ್ಟಾಯಿತು. ದಡಮುಡಗಟ್ಟಿಕೊಂಡು ಎದ್ದು ಗುರುವಿನೊಡನೆ ಹೊರಟೇ ಹೋದ. ಆಗ ಗುರು ಶಿಷ್ಯನಿಗೆ ಹೇಳಿದ, 'ನಿನ್ನ ಸ್ವಂತದವರು ಒಬ್ಬನೇ ಒಬ್ಬ;—ಭಗವಂತ' ಎಂದು.

"ಆದ್ದರಿಂದ ಯಾವುದರಿಂದ ಆತನ ಪಾದಪದ್ಮಗಳಲ್ಲಿ ಭಕ್ತಿಯುಂಟಾಗುವುದೊ,—ಯಾವುದರಿಂದ ಆತನೇ ತನ್ನ ಸ್ವಂತದವ, ಎಂಬ ಶ್ರದ್ಧಾಭಕ್ತಿಯುಂಟಾಗುವುದೊ,—ಅದನ್ನು ಮಾಡುವುದೆ ಮೇಲು. ಸಂಸಾರ ಎಂಬುದನ್ನು ನೋಡುತ್ತಿದ್ದೀಯೆ. ಎಲ್ಲಾ ಎರಡು ದಿವಸದ ವ್ಯಾಪಾರ. ಇದರಲ್ಲಿ ಏನೂ ಇಲ್ಲ."

ಪಂಡಿತ ನಗುತ್ತಾ: "ಇಲ್ಲಿಗೆ ಬಂದರೆ, ಬಂದ ದಿವಸವಂತೂ ಪೂರ್ಣ ವೈರಾಗ್ಯ ಬಂದುಬಿಡುತ್ತದೆ. ಇಚ್ಛೆಬರುತ್ತದೆ—ಸಂಸಾರವನ್ನು ತ್ಯಜಿಸಿ ಹೊರಟೇ ಹೋಗಿಬಿಡೋಣ ಅಂತ."

ಪರಮಹಂಸರು: "ಬೇಕಾಗಿಲ್ಲ, ತ್ಯಜಿಸಿ ಹೋಗಬೇಕಾದುದರ ಆವಶ್ಯಕತೆ ಏನಿದೆ? ನೀವು ಮಾನಸಿಕವಾಗಿ ತ್ಯಾಗಮಾಡಿ. ಸಂಸಾರದಲ್ಲಿ ಅನಾಸಕ್ತರಾಗಿ ಇದ್ದುಕೊಂಡಿರಿ.

"ರಾತ್ರಿವೇಳೆ ಆಗಾಗ ಇಲ್ಲಿಗೆ ಬಂದು ಇರಬೇಕು ಎಂದು ಭಾವಿಸಿ ಸುರೇಂದ್ರ ತನ್ನ ಹಾಸಿಗೆ ತಂದಿಟ್ಟಿದ್ದ. ಒಂದೆರಡು ದಿನ ಇಲ್ಲಿಗೆ ಬಂದಿದ್ದ. ಬಳಿಕ ಆತನ ಹೆಂಡತಿ ಹೇಳಿದಳಂತೆ: 'ಹಗಲುವೇಳೆ ಎಲ್ಲಿಗೆ ಬೇಕು ಅಂದರೆ ಅಲ್ಲಿಗೆ ಹೋಗಿ ಬನ್ನಿ, ಆದರೆ ರಾತ್ರಿವೇಳೆ ನೀವು ಮನೆ ಬಿಟ್ಟು ಹೋಗ ಕೂಡದು' ಎಂದು. ಆಗ ಸುರೇಂದ್ರ ಪಾಪ ಇನ್ನೇನು ತಾನೆ ಮಾಡಿ ಯಾನು? ರಾತ್ರಿ ಕಾಲವನ್ನು ಆತ ಹೊರಗೆ ಕಳೆಯುವ ಹಾಗೆಯೇ ಇಲ್ಲ.

"ನೋಡು, ಬರೀ ಶುಷ್ಕ ವಿಚಾರದಿಂದ ಏನುತಾನೆ ಪ್ರಯೋಜನ? ಆತನಿಗಾಗಿ ವ್ಯಾಕುಲನಾಗು. ಆತನನ್ನು ಪ್ರೀತಿಸಲು ಯತ್ನಿಸು. ಜ್ಞಾನ—ವಿಚಾರ—ಗಂಡಸು; ಮನೆಯ ಜಗಲಿಯವರೆಗೆ ಹೋಗಬಲ್ಲದು. ಭಕ್ತಿ—ಹೆಂಗಸು; ಅಂತಃಪುರದವರೆಗೂ ಹೋಗಬಲ್ಲದು.

"ಯಾವುದಾದರು ಒಂದು ಭಾವವನ್ನು ಅವಲಂಬಿಸಬೇಕಾಗುತ್ತದೆ, ಆಗ ಭಗವಂತ ದೊರಕುತ್ತಾನೆ. ಸನಕಾದಿ ಋಷಿಗಳು ಶಾಂತ ಭಾವವನ್ನು ಅವಲಂಭಿಸಿದ್ದರು. ಹನುಮಂತ ದಾಸ್ಯಭಾವವನ್ನು ಅವಲಂಬಿಸಿದ್ದ. ಶ್ರೀಧಾಮ, ಸುಧಾಮ ಮೊದಲಾದ ವ್ರಜದ ಗೋಪಾಲರದು—ಸಖ್ಯಭಾವ. ಯಶೋದೆಯದು ವಾತ್ಸಲ್ಯಭಾವ–ಭಗವಂತನನ್ನು ಸಂತಾನ ದೃಷ್ಟಿಯಿಂದ ನೋಡೋದು. ಶ್ರೀಮತಿಯದು ಮಧುರಭಾವ.

"'ಹೇ ಭಗವಂತ, ನೀನು ಪ್ರಭು, ನಾನು ದಾಸ',—ಇದಕ್ಕೆ ದಾಸ್ಯ ಭಾವ ಎಂದು ಹೆಸರು. ಸಾಧಕನ ಹಿತದೃಷ್ಟಿಯಿಂದ ಈ ಭಾವ ಬಹಳ ಒಳ್ಳೆಯದು."

ಪಂಡಿತ: "ಹೌದು ನಿಜ."

ಸಿಂಥಿಯ ಪಂಡಿತ ಹೊರಟು ಹೋದ. ಕ್ರಮೇಣ ಸಾಯಂಕಾಲ ವಾಗಲು ಹತ್ತಿದೆ. ಕಾಳೀದೇವಾಲಯದಲ್ಲಿ ದೇವದೇವಿಯರ ಮಂಗಳಾರತಿಯ ನಿನಾದ ಎದ್ದಿತು. ಪರಮಹಂಸರು ದೇವದೇವಿಯರಿಗೆ ನಮಸ್ಕಾರ ಮಾಡುತ್ತಿದ್ದಾರೆ. ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಭಾವನಾರಾಜ್ಯದಲ್ಲಿ ಮುಳುಗಿದ್ದಾರೆ. ಕೆಲವು ಭಕ್ತರು ಮತ್ತೆ ಕೊಠಡಿಗೆ ಬಂದು ನೆಲದ ಮೇಲೆ ಕುಳಿತುಕೊಂಡಿದ್ದಾರೆ. ಕೊಠಡಿ ನಿಶ್ಶಬ್ದವಾಗಿದೆ.

ಈ ರೀತಿಯಾಗಿ ಒಂದು ಘಂಟೆ ಕಳೆಯಿತು. ಈಶಾನಮುಖ್ಯೋಪಾಧ್ಯಾಯ ಮತ್ತು ಕಿಶೋರಿ ಬಂದಿದಾರೆ. ಅವರು ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು. ಈಶಾನನಿಗೆ ಪುರಶ್ಚರಣವೆ ಮೊದಲಾದ ಶಾಸ್ತ್ರೋಕ್ತ ಕರ್ಮಗಳಲ್ಲಿ ಬಹಳ ಶ್ರದ್ಧಾಭಕ್ತಿ. ಆತ ಒಬ್ಬ ಕರ್ಮಯೋಗಿ. ಈಗ ಪರಮಹಂಸರು ಮಾತುಕತೆಯಾಡಲು ಆರಂಭಿಸಿದರು.

ಶ್ರೀ ರಾಮಕೃಷ್ಣರು : "ಸುಮ್ಮನೆ 'ಜ್ಞಾನ', 'ಜ್ಞಾನ' ಎಂದು ಹೊಡೆದುಕೊಂಡರೆ ಏನಾಗುತ್ತಾದೆ? ಜ್ಞಾನಲಾಭಕ್ಕೆ ಲಕ್ಷಣಗಳಿವೆ. ಮುಖ್ಯವಾಗಿ ಎರಡು ಲಕ್ಷಣ,—ಮೊದಲನೆಯದು ಅನುರಾಗ, ಅಂದರೆ ಭಗವಂತನನ್ನು ಪ್ರೀತಿಸುವುದು. ಬರಿದೆ ಜ್ಞಾನವಿಚಾರವನ್ನೇನೊ ಮಾಡುತ್ತಿರಬಹುದು, ಆದರೆ ಭಗವಂತನಲ್ಲಿ ಅನುರಾಗವಿಲ್ಲದಿದ್ದರೆ, ಪ್ರೀತಿ ಇಲ್ಲದಿದ್ದರೆ, ಅದು ವಿಫಲ. ಇನ್ನೊಂದು ಲಕ್ಷಣ, ಕುಲಕುಂಡಲಿನೀಶಕ್ತಿ ಎಚ್ಚರಗೊಳ್ಳುವಿಕೆ. ಕುಲಕುಂಡಲಿನಿ ಎಲ್ಲಿಯವರೆಗೆ ನಿದ್ರಿಸುವುದೊ, ಅಲ್ಲಿಯವರೆಗೆ ಜ್ಞಾನ ದೊರಕದು. ಘಂಟೆಗಳ ಕಾಲ ಕುಳಿತು ಪುಸ್ತಕ ಓದುತ್ತಿರಬಹುದು, ವಿಚಾರಮಾಡುತ್ತಿರಬಹುದು, ಆದರೆ ಅಂತರ್ಯದಲ್ಲಿ ವ್ಯಾಕುಲತೆಯಿಲ್ಲದಿದ್ದರೆ, ಅದು ಜ್ಞಾನ ದೊರಕುವ ಲಕ್ಷಣವಲ್ಲ.

"ಕುಲಕುಂಡಲಿನೀಶಕ್ತಿ ಜಾಗ್ರತವಾದರೆ ಭಾವ, ಭಕ್ತಿ, ಪ್ರೇಮ ಇವೆಲ್ಲಾ ಉಂಟಾಗುತ್ತವೆ. ಇದಕ್ಕೇ ಭಕ್ತಿಯೋಗ ಎಂದು ಹೆಸರು.

"ಕರ್ಮಯೋಗ[1] ಬಹಳ ಕಠಿನ. ಕರ್ಮಯೋಗದಿಂದ ಅನೇಕ ಶಕ್ತಿಗಳು ಉಂಟಾಗುತ್ತವೆ—ಸಿದ್ಧಿಗಳೂ ದೊರಕುತ್ತವೆ."

ಈಶಾನ: "ನಾನು ಹಾಜರಾ ಮಹಾಶಯನನ್ನ ನೋಡಿ ಬರುತ್ತೇನೆ."

ಪರಮಹಂಸರು ಸುಮ್ಮನೆ ಕುಳಿತಿದ್ದಾರೆ. ಸ್ವಲ್ಪ ಹೊತ್ತಾದ ಮೇಲೆ ಈಶಾನ ಮತ್ತೆ ಕೊಠಡಿಗೆ ಬಂದ. ಆತನ ಜೊತೆಯಲ್ಲಿ ಹಾಜರಾ ಬಂದಿದ್ದಾನೆ. ಪರಮಹಂಸರು ಇನ್ನೂ ಸುಮ್ಮನೆ ಕುಳಿತಿದ್ದಾರೆ. ಸ್ವಲ್ಪ ಹೊತ್ತಾದ ಮೇಲೆ ಹಾಜರಾ ಈಶಾನನಿಗೆ ಹೇಳಿದ: "ಬಾ, ಬಹುಶಃ ಇವರು ಈಗ ಧ್ಯಾನ ಮಾಡಬಹುದು" ಎಂದು. ಇಬ್ಬರೂ ಹೊರಕ್ಕೆ ಹೊರಟು ಹೋದರು.

ಶ್ರೀ ರಾಮಕೃಷ್ಣರು ಇನ್ನೂ ಸುಮ್ಮನೆ ಕುಳಿತಿದ್ದಾರೆ. ನೋಡುವಲ್ಲಿ

---

1. ಇಲ್ಲಿ ಇದರ ಇಂಗಿತ ಧಾರ್ಮಿಕ ಕ್ರಿಯಾಕರ್ಮಗಳು ಎಂದು.

ನಿಜವಾಗಿಯೂ ಧ್ಯಾನಮಾಡುತ್ತಿದ್ದಾರೆ. ಕೈಯಿಂದ ಜಪಮಾಡುತ್ತಿದ್ದಾರೆ. ಅದೇ ಕೈಯನ್ನು ಒಮ್ಮೆ ತಲೆಯ ಮೇಲೆ ಇಟ್ಟುಕೊಂಡರು. ಬಳಿಕ ಭ್ರೂಮಧ್ಯದ ಮೇಲೆ, ಬಳಿಕ ಕಂಠದ ಮೇಲೆ, ಬಳಿಕ ಹೃದಯದ ಮೇಲೆ, ಬಳಿಕ ನಾಭೀದೇಶದ ಮೇಲೆ ಇಟ್ಟುಕೊಂಡರು. ಏನು ಪರಮಹಂಸರು ಷಡ್‌ಚಕ್ರದಲ್ಲಿ ಆದ್ಯಾಶಕ್ತಿಯ ಧ್ಯಾನಮಾಡುತ್ತಿದ್ದಾರೆಯೇನು? ಶಿವಸಂಹಿತಾದಿ ಶಾಸ್ತ್ರದಲ್ಲಿ ಯೋಗದ ವಿಷಯವಾಗಿ ಏನಿದೆಯೊ ಅದೇ ಏನು ಇದು?

ಹಾಜರಾ ಈಶಾನನೊಡನೆ ಕಾಳೀದೇವಾಲಯಕ್ಕೆ ಹೋದ. ಪರಮಹಂಸರು ಇನ್ನೂ ಧ್ಯಾನಮಾಡುತ್ತಲೆ ಇದ್ದಾರೆ. ಆಗ ಬಹುಶಃ ರಾತ್ರಿ ಏಳೂವರೆ. ಅಷ್ಟರಲ್ಲಿ ಅಧರಸೇನನೂ ಬಂದುಬಿಟ್ಟ.

ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ಕಾಳೀದೇವಾಲಯಕ್ಕೆ ಹೋದರು. ಅಲ್ಲಿ ದೇವಿಯ ದರ್ಶನಮಾಡಿ,—ಆಕೆಯ ಪಾದಪದ್ಮದಲ್ಲಿದ್ದ ನಿರ್ಮಾಲ್ಯವನ್ನು ತೆಗೆದುಕೊಂಡು ತಲೆಗೆ ಮುಡಿದುಕೊಂಡರು,—ತಾಯಿಗೆ ಪ್ರಣಾಮ ಬಳಿಕ ಪ್ರದಕ್ಷಿಣೆ ಮಾಡಿದರು. ಚಾಮರ ಹಿಡಿದು ಭಗವತಿಗೆ ಗಾಳಿ ಬೀಸಿದರು. ಪರಮಹಂಸರು ಭಾವದಲ್ಲಿ ತನ್ಮಯರಾಗಿದ್ದಾರೆ. ಹೊರಕ್ಕೆ ಬರುವಾಗ ನೋಡಿದರು ಈಶಾನ ಕೋಶಾಕುಶಿ (ಪಂಚಪಾತ್ರೆ ಉದ್ಧರಣೆ) ತೆಗೆದುಕೊಂಡು ಸಂಧ್ಯಾವಂದನೆ ಮಾಡುತ್ತಿದ್ದುದನ್ನ.

ಶ್ರೀ ರಾಮಕೃಷ್ಣರು ಈಶಾನನಿಗೆ: "ನೀನು ಆಗಲೆ ಬಂದೆ, ಇನ್ನೂ ಸಂಧ್ಯಾವಂದನೆ ಮಾಡುತ್ತಿದ್ದೀಯ? ಒಂದು ಹಾಡು ಕೇಳು. ಭಾವದಿಂದ ಉನ್ಮತ್ತರಾಗಿ ಈಶಾನನ ಹತ್ತಿರ ಕುಳಿತು ಮಧುರ ಕಂಠದಿಂದ ಹಾಡಲಾರಂಭಿಸಿದರು:

**ಏತಕೆ, ಇನ್ನೇತಕೆ?**
**ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ**
**ಪುಣ್ಯಕ್ಷೇತ್ರಗಳೇತಕೆ?**
**ಎಲ್ಲಿವರೆಗೂ ನಾನು ಕಾಳಿಯ ನೆನೆಯುತಿರುವೆನೂ ನಿತ್ಯವೂ,**
**ಅಲ್ಲಿವರೆಗೂ ಜಪತಪಾದಿಯ ಕಟ್ಟುಕಟ್ಟಲೆ ಏತಕೆ?......**

"ಸಂಧ್ಯಾದಿ ಎಷ್ಟುದಿವಸ? ಎಲ್ಲಿಯವರೆಗೆ ಭಗವಂತನ ಪಾದಪದ್ಮಗಳಲ್ಲಿ ಭಕ್ತಿಯುಂಟಾಗಿಲ್ಲವೊ ಅಲ್ಲಿಯವರೆಗೆ—ಆತನ ನಾಮವನ್ನು ಜಪಿಸುತ್ತ ಜಪಿಸುತ್ತ ಇದ್ದಹಾಗೆ ಕಣ್ಣಿನಿಂದ ಪ್ರೇಮಾಶ್ರು ಎಲ್ಲಿಯವರೆಗೆ

ಸುರಿಯದೊ ಅಲ್ಲಿಯವರೆಗೆ,—ಶರೀರ-ರೋಮಾಂಚ ಎಲ್ಲಿಯವರೆಗೆ ಉಂಟಾಗದೊ ಅಲ್ಲಿಯವರೆಗೆ.

> ತಾಯಿ ದುರ್ಗೆಯೆ ಪರಮಬ್ರಹ್ಮಸ್ವರೂಪಿ-
> ಯೆಂಬುದನರಿಯುತ,
> ಭುಕ್ತಿ ಮುಕ್ತಿಗೆ ತಲೆಯಬಾಗಿಸಿ ನಿಲ್ಲುತ
> ಧರ್ಮ ಮೇಣ್ ಅಧರ್ಮವೆರಡನು ಬಿಸುಡುತ
> ನಿಲುವೆನೆಂಬನು ಶ್ರೀ ಪ್ರಸಾದನು ಹಾಡುತ!

"ಫಲ ಬಿಟ್ಟೊಡನೆಯೆ ಹೂವು ಉದುರಿಹೋಗುತ್ತದೆ. ಯಾವಾಗ ಭಕ್ತಿ ಉಂಟಾಗುತ್ತದೆಯೊ ಆಗ ಭಗವಂತ ದೊರೆಯುತ್ತಾನೆ,—ಆಗ ಸಂಧ್ಯಾವಂದನಾದಿ ಕರ್ಮಗಳು ಬಿಟ್ಟುಹೋಗುತ್ತವೆ. ಸೊಸೆ ಗರ್ಭಿಣಿಯಾದರೆ ಅತ್ತೆ ಆಕೆಯ ಕೆಲಸಗಳನ್ನು ಕಡಮೆಮಾಡಿಕೊಡುತ್ತಾಳೆ. ಒಂಬತ್ತು ತಿಂಗಳಾದರೆ ಮನೆಗೆಲಸ ಮಾಡಲು ಬಿಟ್ಟುಕೊಡೋದಿಲ್ಲ. ಮಗು ಹುಟ್ಟಿದನಂತರ, ಆಕೆ ಅದನ್ನು ಕಂಕುಳಲ್ಲಿ ಎತ್ತಿಕೊಂಡು ಕೇವಲ ಅದರ ಸೇವೆಯಲ್ಲಿಯೆ ನಿರತಳಾಗಿರುತ್ತಾಳೆ. ಆಕೆಗೆ ಬೇರೆ ಯಾವ ಕೆಲಸವೂ ಇರದು. ಭಗವಂತನನ್ನು ಪಡೆದುಕೊಂಡರೆ ಸಂಧ್ಯಾವಂದನಾದಿ ಕರ್ಮಗಳು ಬಿಟ್ಟುಹೋಗುತ್ತವೆ.

"ನೀನು ಈ ರೀತಿಯಾಗಿ ಸುಮ್ಮನೆ ತೆವಳುತ್ತಿದ್ದರೆ ಏನನ್ನೂ ಸಾಧಿಸಲಾಗೋದಿಲ್ಲ. ತೀವ್ರ ವೈರಾಗ್ಯ ಅವಶ್ಯಕ. ಒಂದು ದಿವಸದ್ದನ್ನ ಒಂದು ವರ್ಷದವರೆಗೆ ಮಾಡಿದರೆ ಏನನ್ನಾದರು ಸಾಧಿಸಲಾಗುತ್ತದೆಯೆ? ನೋಡಿದರೆ, ನಿನ್ನಲ್ಲಿ ಸ್ಫೂರ್ತಿ ಇಲ್ಲದ ಹಾಗೆ, ಶಕ್ತಿ ಇಲ್ಲದ ಹಾಗೆ ತೋರುತ್ತಿದೆಯಲ್ಲ! ನೆನೆದ ಅವಲಕ್ಕಿಯ ಹಾಗೆ ತೋರುತ್ತಿರುವೆಯಲ್ಲ! ಏಳು, ಇಳಿ ಕಾರ್ಯರಂಗಕ್ಕೆ! ಕಟ್ಟು ಸೊಂಟಾನ!

"ಅದಕ್ಕಾಗಿ ನನಗೆ ಆ ಹಾಡು ರುಚಿಸದು:

> ನಲವಿನಲಿ ದೇವರಿಗೆ ಅಂಟಕೊಂಡಿರು ನೀನು.
> ಈ ಬಗೆಯ ಸಾಧನೆಗೆ ಎಂದಾದರೊಂದು ದಿನ
> ದೊರಕುವನು ಅವನು.

"ನನಗೆ, 'ಎಂದಾದರೊಂದುದಿನ ದೊರಕುವನು ಅವನು' ಎಂಬ ಭಾವನೆ ರುಚಿಸುತ್ತಿಲ್ಲ. ತೀವ್ರ ವೈರಾಗ್ಯ ಬೇಕು. ಹಾಜರಾನಿಗೆ ನಾನು ಅದನ್ನೇ ಹೇಳುತ್ತಿರುವುದು.

"ತೀವ್ರ ವೈರಾಗ್ಯ ಏಕೆ ಉಂಟಾಗುತ್ತಿಲ್ಲ ಎಂದು ಪ್ರಶ್ನಿಸುತ್ತಿದ್ದೀಯೆ? ಕಾರಣವಿದೆ. ಅಂತರ್ಯದಲ್ಲಿ ವಾಸನಾಪ್ರವೃತ್ತಿಗಳು ತುಂಬಿವೆ. ಹಾಜರಾನಿಗೆ ನಾನು ಅದನ್ನೇ ಹೇಳುತ್ತಿರೋದು. ನಮ್ಮ ಊರಿನಲ್ಲಿ ಗದ್ದೆಗೆ ನೀರು ಹಾಯಿಸುತ್ತಾರೆ. ನೀರು ಹರಿದು ಹೋಗದೆ ಇರಲೆಂದು ಗದ್ದೆಯ ನಾಲ್ಕು ಕಡೆಗೂ ತೆವರಿ ಕಟ್ಟುತ್ತಾರೆ. ಇವು ಮಣ್ಣಿನವಾದ್ದರಿಂದ ಅನೇಕ ವೇಳೆ ಬಿರುಕು ಬಿಟ್ಟಿರುತ್ತವೆ. ರೈತರು ಎದೆಮುರಿದೇನೊ ಗದ್ದೆಗೆ ನೀರು ತರುತ್ತಾರೆ, ಆದರೆ ಬಿರುಕುಗಳ ಮೂಲಕ ನೀರು ಹೊರಕ್ಕೆ ಹರಿದು ಹೋಗಿಬಿಡುತ್ತದೆ. ವಾಸನೆಗಳೇ ಬಿರುಕು. ನಿಜ, ಜನ ಜಪತಪಾದಿಗಳನ್ನು ಮಾಡುತ್ತಾರೆ, ಆದರೆ ಅವುಗಳ ಹಿನ್ನೆಲೆಯಲ್ಲಿಯೇ ವಾಸನೆಗಳು (ಆಸೆಗಳು). ಆ ವಾಸನೆಯು ಬಿರುಕುಗಳ ಮೂಲಕ ಎಲ್ಲಾ ಖಾಲಿಯಾಗಿ ಬಿಡುತ್ತದೆ.

"ಜನರು ಒಂದು ವಿಧದ ಬಿದಿರಬೋನಿನಿಂದ ಮೀನು ಹಿಡಿಯುತ್ತಾರೆ. ಬಿದಿರಿನದು ನೆಟ್ಟಗೆ ನಿಲ್ಲುವ ಸ್ವಭಾವ. ಆದರೆ ಅದು ಬೋನಿನಲ್ಲಿ ಬಗ್ಗಿಕೊಂಡಿದೆಯಲ್ಲ ಏಕೆ ಗೊತ್ತೆ? ಮೀನು ಹಿಡಿಯಲೋಸುಗ. ವಾಸನೆಯೇ ಮೀನು. ಅದಕ್ಕಾಗಿಯೆ ಮನಸ್ಸು ಸಂಸಾರದಕಡೆ ವಾಲಿಕೊಂಡಿದೆ. ವಾಸನೆಗಳಿಲ್ಲದಿದ್ದರೆ ಸಹಜವಾಗಿಯೆ ಮನಸ್ಸಿಗೆ ಊರ್ಧ್ವ ದೃಷ್ಟಿ; ಭಗವಂತನಕಡೆ ದೃಷ್ಟಿ.

"ಹೇಗೆ ಗೊತ್ತೆ? ಇದು ತಕ್ಕಡಿಯ ಮುಳ್ಳುಗಳ ಹಾಗೆ. ಕಾಮಕಾಂಚನದ ಭಾರ ತಕ್ಕಡಿಯಮೇಲೆ ಇರುವುದರಿಂದ ಮೇಲಿನ ಕೆಳಗಿನ ಮುಳ್ಳು ಒಂದಾಗಿ ನಿಲ್ಲುವುದಿಲ್ಲ. ಅದಕ್ಕಾಗಿಯೆ ಮನುಷ್ಯ ಯೋಗಭ್ರಷ್ಟನಾಗುತ್ತಾನೆ. ದೀಪದ ಉರಿಯನ್ನು ನೋಡಿಲ್ಲವೆ? ಒಂದು ಸ್ವಲ್ಪ ಗಾಳಿ ತಾಗಿದರೇ ಅಲುಗಲಾರಂಭಿಸುತ್ತದೆ. ಯೋಗಾವಸ್ಥೆ ದೀಪದ ಉರಿಯ ಹಾಗೆ,—ಅಲ್ಲಿ ಗಾಳಿ ಇಲ್ಲ.

"ಮನಸ್ಸು ಚದುರಿ ಹೋಗಿದೆ,—ಸ್ವಲ್ಪಭಾಗ ಢಾಕಾಕ್ಕೆ, ಸ್ವಲ್ಪ ಭಾಗ ದೆಹಲಿಗೆ, ಸ್ವಲ್ಪಭಾಗ ಕುಚ್‌ಬಿಹಾರಿಗೆ. ಅಂಥ ಮನಸ್ಸನ್ನು ಈಗ ಒಟ್ಟುಗೂಡಿಸಬೇಕಾಗಿದೆ. ಒಟ್ಟುಗೂಡಿಸಿ ಒಂದು ವಸ್ತುವಿನ ಮೇಲೆ ಏಕಾಗ್ರಮಾಡಬೇಕಾಗುತ್ತದೆ. ನಿನಗೆ ಹದಿನಾರಾಣೆ ಬೆಲೆ ಬಾಳುವ ಬಟ್ಟೆ ಬೇಕಾದರೆ ವ್ಯಾಪಾರಿಗೆ ಹದಿನಾರಾಣೆಯನ್ನೇ ಕೊಡಬೇಕಾಗುತ್ತದೆ. ಒಂದು ಸ್ವಲ್ಪ ವಿಘ್ನವೇನಾದರು ಇದ್ದರೆ ಯೋಗ ಸಿದ್ಧಿಸುವಹಾಗಿಲ್ಲ.

ಟೆಲಿಗ್ರಾಫ್ ತಂತಿಯಲ್ಲಿ ಒಂದು ಸ್ವಲ್ಪ ಬಿರುಕು ಇದ್ದರೂ ಸಮಾಚಾರ ಮುಟ್ಟದು.

"ನೀನು ಸಂಸಾರದಲ್ಲೇನೊ ಇದ್ದೀಯೆ. ಇದ್ದರೇನು ಭಯ? ಆದರೆ ಮಾತ್ರ ಇಡಿಯ ಕರ್ಮಫಲವನ್ನು ಭಗವಂತನಿಗೆ ಅರ್ಪಿಸಿಬಿಡಬೇಕು. ನೀನು ಮಾತ್ರ ಯಾವ ಫಲವನ್ನೂ ಅಪೇಕ್ಷಿಸಕೂಡದು. ಆದರೆ ಒಂದು ವಿಷಯ. ಭಕ್ತಿಕಾಮನೆ ಕಾಮನೆಗಳ ಗುಂಪಿಗೆ ಸೇರಿದುದಲ್ಲ. ಭಕ್ತಿಕಾಮನೆಯನ್ನ, ಭಕ್ತಿಪ್ರಾರ್ಥನೆಯನ್ನ, — ಮಾಡಬಹುದು. ಭಕ್ತಿಯ ತಾಮಸಿಕ ಭಾಗವನ್ನು ಉಪಯೋಗಿಸು. ಭಗವತಿಯನ್ನು ಬಲಾತ್ಕರಿಸಿ ಕೇಳು. —

ತಾಯಿಗೂ ಮಗನಿಗೂ ಏನು ಜಿದ್ದಿನ ಸ್ಪರ್ಧೆ!
ಎಂಥ ಲೀಲೆಯಿದಮ್ಮ! ಕಾದಲಾರದೆ ಸೋತು
ನಿನ್ನ ತೋಳೊಳಗೆನ್ನ ಎತ್ತಿಕೊಳುವನ್ನೆಗಂ
ನನ್ನ ಪೀಡನೆ ನಿನಗೆ ತಪ್ಪದೆಂದಿಗೂ!

"ತ್ರೈಲೋಕ್ಯ ಒಮ್ಮೆ ಹೇಳಿದ, 'ಎಂದು ನಾನು ಅವರ ಮನೆಯಲ್ಲಿ ಜನ್ಮ ತಾಳಿದೆನೊ, ಅಂದಿನಿಂದಲೆ ನನ್ನ ಭಾಗದ ಹಿಸ್ಸೆ ಅಲ್ಲಿ ಇದ್ದೇ ಇದೆ' ಎಂದು.

"ಭಗವತಿ ನಿನ್ನ ಹಡೆದ ತಾಯಿ. ಆಕೆ ಏನು ನಿನ್ನ ದತ್ತೂ ತಾಯೆ? ಆಕೆಯೊಡನೆ ಏನು ಕೃತಕ ಸಂಬಂಧವಿದೆಯೆ? ಆಕೆಯೊಡನೆ ಬಲಾತ್ಕಾರ ಗಿಲಾತ್ಕಾರ ನಡೆಯೊ ಹಾಗಿಲ್ಲ ಎಂದರೆ ಬೇರೆ ಯಾರೊಡನೆ ತಾನೆ ಸಾಧ್ಯ? ಹೇಳು —

ಇವನೆಲ್ಲೊ ಎಂಟು ತಿಂಗಳ ಕೂಸು — ಎಂದುಕೊಂಡಿಹೆ ನೀನು!
ನಿನ್ನ ಕೆಂಗಣ್ಣುಗಳ ಕಂಡು ಬೆದರುವೆನೆ ನಾನು?
ಶಿವನೆದೆಯ ಮೆಟ್ಟಿರುವ ನಿನ್ನ ಪದಕಮಲಗಳೆ
ನನ್ನ ನಿಧಿಯು.
ಆ ನನ್ನ ಆಸ್ತಿಯನು ಪಡೆವ ಹಕ್ಕಿದ್ದರೂ
ನಡುನಡುವೆ ನಿನ್ನಿಂದ ಎಡರುತೊಡರು!
ಶಿವನೆ ಸಾಕ್ಷಿಯು ಇದಕೆ; ಪಂಚಾಯಿತರ ಮುಂದೆ
ಒಂದೇ ಸವಾಲಿನಲಿ ನಾನು ಗೆಲುವೆ!

ನೀನಿಂತು ಪ್ರತಿಭಟಿಸುತಿದ್ದರೆ ನಾನು
ಎಂಥ ಮಗನೆಂಬುದನು ತೋರಿಬಿಡುವೆ!
ರಾಮಪ್ರಸಾದನಿದೊ ನುಡಿಯುವನು ಈ ತೆರದಿ:—
ತಾಯಿಗೂ ಮಗುವಿಗೂ ಏನು ಜಿದ್ದಿನ ಸ್ಪರ್ಧೆ!
ಎಂಥ ಲೀಲೆಯಿದಮ್ಮ! ಕಾದಲಾರದೆ ಸೋತು
ನಿನ್ನ ತೋಳೊಳಗೆನ್ನ ಎತ್ತಿಕೊಳುವನ್ನೆಗಂ
ನನ್ನ ಪೀಡನೆ ನಿನಗೆ ತಪ್ಪದೆಂದಿಗೂ!

"ಭಗವತಿ ನಿನ್ನ ತಾಯಿ. ಜೋರುಮಾಡಿ ಕೇಳು. ಯಾವುದು ಯಾವುದರ ಅಂಶವೊ ಅದು ಅದರಿಂದ ಆಕರ್ಷಿತವಾಗುತ್ತದೆ. ತಾಯಿಯ ಸತ್ತ್ವ ನಮ್ಮಲ್ಲಿ ಇರುವುದರಿಂದ, ಆಕೆಯ ಕಡೆಗೆ ಅಷ್ಟೊಂದು ಸೆಳೆತ. ನಿಜವಾದ ಶೈವ ಶಿವನ ಸತ್ತ್ವವನ್ನು ಪಡೆಯುತ್ತಾನೆ; ಕೆಲವು ಕಿಡಿ ಆತನ ಹೃದಯಕ್ಕೆ ಬಂದು ಬೀಳುತ್ತದೆ. ಯಾರು ನಿಜವಾದ ವೈಷ್ಣವನೊ ಆತನಲ್ಲಿ ನಾರಾಯಣನ ಸತ್ತ್ವವಿರುತ್ತದೆ.

"ಈಗ ನೀನು ಹಿಟ್ಟುಬಟ್ಟೆಗಾಗಿ ದುಡಿಯಬೇಕಾಗಿಲ್ಲ. ಈಗ ಸ್ವಲ್ಪ ಕಾಲ ಆತನ ಚಿಂತನೆ ಮಾಡು. ಸಂಸಾರದಲ್ಲಿ ಏನೂ ಇಲ್ಲ ಎಂಬುದನ್ನಂತು ಆಗಲೆ ನೀನು ಅರಿತಿದ್ದೀಯೆ."

ಪರಮಹಂಸರು ಮತ್ತೆ ತಮ್ಮ ಮಧುರ ಕಂಠದಿಂದ ಹಾಡಲಾರಂಭಿಸಿದರು:

ಎತ್ತ ಹೋದರು ಸುತ್ತಲೆಲ್ಲೂ
ನನಗೆ ಯಾರೂ ಇಲ್ಲ ಜಗದೊಳು
ಎಂಬುದನು ನೀ ನೆನಪಿಡು............

ಪರಮಹಂಸರು ಮತ್ತೆ ಮಾತು ಮುಂದುವರಿಸಿದರು: "ನೀನು ಮಧ್ಯಸ್ಥಿಕೆಗಿಧ್ಯಸ್ಥಿಕೆ ಕೆಲಸಗಳಲ್ಲಿ ಏಕೆ ವ್ಯರ್ಥವಾಗಿ ಕಾಲಕಳೆಯುತ್ತಿರುವೆ? 'ನೀನು ಜನರ ಜಗಳಗಿಗಳ ಇವನ್ನು ಫೈಸಲು ಮಾಡುತ್ತೀಯೆ—ನಿನ್ನನ್ನು ಜನರು ಮಧ್ಯಸ್ಥನನ್ನಾಗಿ ಮಾಡಿಕೊಳ್ಳುತ್ತಾರೆ' ಅಂತ ಕೇಳಿದ್ದೇನೆ. ನೀನು ಆ ರೀತಿಯಾಗಿ ಬಹಳ ಕಾಲದಿಂದ ಮಾಡಿಕೊಂಡು ಬಂದಿದ್ದೀಯೆ. ಯಾರಿಗೆ ಇಚ್ಛೆ ಇದೆಯೊ ಅವರು ಅದನ್ನು ಮಾಡಲಿ. ನೀನು ಈಗ ಆಕೆಯ ಪಾದಪದ್ಮಗಳ ಕಡೆ ಹೆಚ್ಚಾಗಿ ಮನಸ್ಸಿಡು. ಜನ ಹೇಳ್ತಾರೆ: 'ರಾವಣ

ಲಂಕೆಯಲ್ಲಿ ಸತ್ತರೆ, ಇಲ್ಲಿ ಬೇಹುಳ[1] ಅತ್ತು ಅತ್ತು ಅಳಲೇಕಾಯಿಯಾದ!' ಎಂದು.

"ಶಂಭೂ ಕೂಡ ಒಮ್ಮೆ ನನಗೆ ಹೇಳಿದ, 'ಹಾಸ್ಪಿಟಲ್, ಡಿಸ್ಪೆನ್ಸರಿ ಕಟ್ಟಿಸುತ್ತೇನೆ' ಎಂದು. ಮನುಷ್ಯ ಭಕ್ತ; ಅದಕ್ಕಾಗಿ ನಾನು ಹೇಳಿದೆ, 'ಭಗವಂತ ದರ್ಶನ ಕೊಟ್ಟರೆ ಹಾಸ್ಪಿಟಲ್, ಡಿಸ್ಪೆನ್ಸರಿಗಳಿಗಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೀಯ!' ಅಂತ.

"ಕೇಶವಸೇನ ನನ್ನನ್ನು ಕೇಳಿದ, 'ಭಗವಂತನ ದರ್ಶನ ಏಕೆ ಆಗೊಲ್ಲದು?' ಅಂತ. ನಾನು ಹೇಳಿದೆ, 'ನೀನು ಹೆಸರು ಕೀರ್ತಿ ಪಾಂಡಿತ್ಯ ಇವುಗಳಲ್ಲಿಯೆ ನಿರತನಾಗಿರುವುದರಿಂದ ಆಗುತ್ತಿಲ್ಲ' ಎಂದು. ಮಗು ಎಲ್ಲಿಯವರೆಗೆ ಗಿಲಕೆ—ಕೆಂಪು ಗಿಲಕೆ— ತೆಗೆದುಕೊಂಡು ಚೀಪುತ್ತಿರುವುದೊ ಅಲ್ಲಿಯವರೆಗೆ ತಾಯಿ ಹತ್ತಿರ ಬರಳು. ಆದರೆ ಹಾಗೇ ಸ್ವಲ್ಪ ಸಮಯವನ್ನು ಕಳೆದನಂತರ ಯಾವಾಗ ಗಿಲಕೆ ಬಿಸಾಡಿ ಚಂಡಿ ಹಿಡಿಯುವುದೊ, ಆಗ ತಾಯಿ ಒಲೆ ಮೇಲೆ ಬೇಯುತ್ತಿದ್ದ ಅನ್ನದ ತಪ್ಪಲೆಯನ್ನು ಕೂಡ ಕೆಳಗಿಳಿಸಿ ಓಡಿಬರುತ್ತಾಳೆ.

"ನೀನು ಮಧ್ಯಸ್ಥಿಗೆ ಕೆಲಸ ಮಾಡುತ್ತೀಯೆ. ಭಗವತಿ ಭಾವಿಸುತ್ತಾಳೆ: 'ನನ್ನ ಮಗು ಮಧ್ಯಸ್ಥಿಕೆ ಕೆಲಸ ಮಾಡಿಕೊಂಡು ಆನಂದದಿಂದ ಇದ್ದಾನೆ. ಆನಂದದಿಂದಿದ್ದಾನೆ ತಾನೆ, ಇರಲಿ' ಎಂದು."

ಇಷ್ಟೆಲ್ಲ ಹೇಳಿ ಮುಗಿಸುವುದರಲ್ಲಿ ಈಶಾನ ಪರಮಹಂಸರ ಪಾದಗಳನ್ನು ಹಿಡಿದು ಕುಳಿತುಕೊಂಡಿದ್ದಾನೆ. ಪಾದಗಳನ್ನು ಹಿಡಿದು ನಮ್ರತೆಯಿಂದ ಹೇಳುತ್ತಿದ್ದಾನೆ, "ನಾನು ಬೇಕೂ ಅಂತ ಇವುಗಳೆನ್ನೆಲ್ಲ ಮಾಡುತ್ತಿಲ್ಲ" ಎಂದು.

ಶ್ರೀ ರಾಮಕೃಷ್ಣರು: "ಅದು ಗೊತ್ತು. ಆ ಹೆಂಗಸಿನ ಕ್ರೀಡೆಯೆ— ಆಕೆಯ ಲೀಲೆಯೆ. ಸಂಸಾರದಲ್ಲಿ ಬದ್ಧರನ್ನಾಗಿ ಇಟ್ಟಿರೋದು ಆ ಮಹಾಮಾಯೆಯ ಇಚ್ಛೆಯೆ. ಅದು ಹೇಗೆ ಗೊತ್ತೆ?

ಜಗದ ಕಡಲಿನ ಮೇಲೆ ಎನಿತೊಂದು ದೋಣಿಗಳು
ತೇಲುತಿಹವೊ!
ಮತ್ತೆನಿತು ದೋಣಿಗಳು ಮುಳುಗಲಿಹವೊ!

---

1. ರಾವಣನಿಗು ಮತ್ತು ಬೇಹುಳನಿಗು ಇರುವ ಸಂಬಂಧ ಏಕಾದಶಿಗು ಪೀರ್‌ಸಾಹೇಬರಿಗು ಇರುವ ಹಾಗೆ!

ಮತ್ತೆ,

ಬಾನೊಳಾಡುವ ನೂರುಸಾವಿರ ಪಟದಲಿ,
ಒಂದೊ ಎರಡೋ ಕಿತ್ತುಬಿಡುಗಡೆ
ಪಡೆಯುತಿರಲಾಕಡೆಯಲಿ,
ಅದನು ನೋಡುತ ನೀನು ಚಪ್ಪಳಿ-
ತಟ್ಟಿ ನಲಿಯುವೆ ಬಯಲಲಿ!

ಲಕ್ಷಾಂತರಗಳ ಮಧ್ಯೆ ಒಬ್ಬಿಬ್ಬರು ಮುಕ್ತರಾಗಿಬಿಡುತ್ತಾರೆ. ಬಾಕಿಯವರೆಲ್ಲರೂ ಭಗವತಿಯ ಇಚ್ಛೆಯಿಂದ ಬದ್ಧರಾಗಿ ಇರುತ್ತಾರೆ.

"ನೀನು ಕಣ್ಣುಮುಚ್ಚಾಲೆ ಆಟ ನೋಡಿಲ್ಲವೇನು? ಅಜ್ಜಿಯ ಇಚ್ಛೆ ಆಟ ಮುಂದುವರಿಯಬೇಕೆಂದು. ಎಲ್ಲರೂ ಅಜ್ಜಿಯನ್ನು ಮುಟ್ಟಿಮುಗಿಸಿಬಿಟ್ಟರೆ ಆಟ ಮುಗಿದುಹೋಗಿಬಿಡುತ್ತದೆ. ಅದಕ್ಕಾಗಿಯೆ ಆಕೆಗೆ ಇಚ್ಛೆ ಇಲ್ಲ ಎಲ್ಲರೂ ಬಂದು ಆಕೆಯನ್ನು ಮುಟ್ಟಿಬಿಡೋದು.

"ನೋಡು ದೊಡ್ಡ ದೊಡ್ಡ ಅಂಗಡಿಗಳಲ್ಲಿ ದೊಡ್ಡ ದೊಡ್ಡ ಅಕ್ಕಿಯ ಹೆಡಗೆಗಳಿರುತ್ತವೆ. ಅವನ್ನು ಅಟ್ಟದವರೆಗೂ ಅಡಕಿರುತ್ತಾರೆ. ಅಕ್ಕಿಯ ಜೊತೆಗೆ ಬೇಳೆಯನ್ನೂ ಇಟ್ಟಿರುತ್ತಾರೆ. ಇಲಿ ಅವನ್ನು ತಿನ್ನದೆ ಇರಲಿ ಎಂದು ವ್ಯಾಪಾರಿಗಳು ಅವುಗಳ ಹತ್ತಿರ ಪುರಿಯನ್ನು ಮತ್ತು ಬೆಲ್ಲದ ಅರಳನ್ನು ಮೊರಗಳಲ್ಲಿ ತುಂಬಿ ಇಡುತ್ತಾರೆ. ಅದಕ್ಕೆ ಸಿಹಿಕಂಡರೆ ಇಷ್ಟ, ಜೊತೆಗೆ ಹುರಿದ ವಾಸನೆ ಬೇರೆ ಇದೆ. ಅದಕ್ಕಾಗಿ ಇಲಿಗಳು ಎಷ್ಟಿದ್ದರೂ ಸರಿಯೆ ಎಲ್ಲಾ ಮೊರಗಳ ಕಡೆಗೇ ಹೋಗುತ್ತವೆ. ದೊಡ್ಡ ದೊಡ್ಡ ಅಕ್ಕಿ ಬೇಳೆ ಹೆಡಗೆಗಳಿರುವುದು ಅವಕ್ಕೆ ಗೊತ್ತೇ ಆಗದು—ಜೀವ, ಕಾಮಕಾಂಚನದಿಂದ ಮುಗ್ಧವಾಗಿ ಹೋಗುತ್ತದೆ. ಭಗವಂತನ ವಿಷಯವೇ ಅದಕ್ಕೆ ಗೊತ್ತಾಗದು.

"ಶ್ರೀರಾಮ ನಾರದನಿಗೆ ಹೇಳಿದ, 'ನೀನು ನನ್ನಿಂದ ಒಂದು ವರ ಬೇಡಿಕೊ' ಎಂದು. ನಾರದ ಹೇಳಿದ: 'ಹೇ ರಾಮ, ನಾನು ಕೇಳಬೇಕಾದ್ದು ಏನಾದರು ಉಳಿದುಕೊಂಡಿದೆಯೇನು? ಯಾವ ವರ ಬೇಡಲಿ? ನೀನು ಕೊಡಲೇಬೇಕಾಗಿ ಇದ್ದರೆ ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿ ಉಂಟಾಗುವಂತೆ ಮತ್ತು ನಿನ್ನ ಭುವನಮೋಹಿನಿ ಮಾಯೆಯಿಂದ ನಾನು ಮುಗ್ಧನಾಗಿ ಹೋಗದೆ ಇರುವಂತೆ ವರಕೊಡು' ಎಂದು. ಶ್ರೀರಾಮ ಹೇಳಿದ, 'ಬೇರೆ ಏನನ್ನಾದರು ಕೇಳು' ಅಂತ. ನಾರದ ಮತ್ತೆ ಉತ್ತರ

ವಿತ್ತ: 'ಓ ರಾಮ, ನನಗೆ ಇನ್ನು ಏನೂ ಬೇಕಾಗಿಲ್ಲ. ನಿನ್ನ ಪಾದಪದ್ಮ ಗಳಲ್ಲಿ ನನಗೆ ಶುದ್ಧಭಕ್ತಿ ಉಂಟಾಗುವಂತೆ ಅನುಗ್ರಹಮಾಡು' ಎಂದು.

"ನಾನು ಭಗವತಿಗೆ ಪ್ರಾರ್ಥನೆ ಮಾಡಿದೆ: 'ತಾಯಿ! ನನಗೆ ಲೋಕಮಾನ್ಯತೆ ಬೇಡ ತಾಯಿ, ಅಷ್ಟಸಿದ್ಧಿ ಬೇಡ ತಾಯಿ; ಹೇ ತಾಯಿ! ಶತಸಿದ್ಧಿ ಬೇಡ ತಾಯಿ, ದೇಹಸುಖ ಬೇಡ ತಾಯಿ, ನನಗೆ ನಿನ್ನ ಪಾದ ಪದ್ಮಗಳಲ್ಲಿ ಶ್ರದ್ಧಾಭಕ್ತಿಯುಂಟಾಗುವಂತೆ ಮಾಡು; ಕೇವಲ ಇದೊಂದನ್ನು ಮಾತ್ರ ಕರುಣಿಸು' ಎಂದು.

"ಅಧ್ಯಾತ್ಮ ರಾಮಾಯಣದಲ್ಲಿ ಹೀಗೆ ಹೇಳಿದೆ: ಲಕ್ಷ್ಮಣ ಶ್ರೀರಾಮ ನನ್ನು ಕೇಳಿದ: 'ರಾಮ, ನೀನು ಎಷ್ಟೊಂದು ಭಾವಗಳಲ್ಲಿ ಎಷ್ಟೊಂದು ರೂಪು ಗಳಲ್ಲಿ ಇದ್ದುಕೊಂಡಿದ್ದೀಯೆ? ಯಾವ ರೂಪಿನಲ್ಲಿ ನಿನ್ನನ್ನು ಗುರುತಿಸಲಿ?' ಎಂದು. ಶ್ರೀರಾಮ ಉತ್ತರವಿತ್ತ: 'ಸಹೋದರ, ಇದನ್ನು ನೀನು ಚೆನ್ನಾಗಿ ಜ್ಞಾಪಕದಲ್ಲಿಡು. ಎಲ್ಲೆಲ್ಲಿ ನೀನು ಪ್ರೇಮೋನ್ಮತ್ತತೆಯನ್ನು ನೋಡು ತ್ತೀಯೊ ಅಲ್ಲೆಲ್ಲ ನಾನು ನಿಶ್ಚಯವಾಗಿಯೂ ಇದ್ದೇನೆ' ಎಂದು. ಪ್ರೇಮೋನ್ಮಾದಭಕ್ತಿಯ ದೆಸೆಯಿಂದ ಭಕ್ತ ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ" ಹಾಡುತ್ತಾನೆ. ಯಾರಿಗೆ ಆಗಲಿ ಈ ವಿಧದ ಭಕ್ತಿ ಉಂಟಾ ಗಿದ್ದರೆ, ನಿಶ್ಚಯವಾಗಿ ತಿಳಿದುಕೊಳ್ಳಬೇಕು ಆತನಲ್ಲಿ ಭಗವಂತ ಸ್ವಯಂ ಇದಾನೆ ಎಂದು. ಚೈತನ್ಯದೇವನಿಗೆ ಈ ವಿಧದ ಭಕ್ತಿ ಉಂಟಾಗಿತ್ತು."

ಭಕ್ತರೆಲ್ಲ ಆಶ್ಚರ್ಯಚಕಿತರರಾಗಿ ಕೇಳುತ್ತಿದ್ದಾರೆ. ದೈವವಾಣಿಯೇ ಎಂಬಂತೆ ಪರಮಹಂಸರ ಈ ಮಾತುಗಳನ್ನೆಲ್ಲ ಕೇಳುತ್ತಿದ್ದಾರೆ. ಕೆಲವರು ಭಾವಿಸುತ್ತಿದ್ದಾರೆ, "ಪರಮಹಂಸರು ಹೇಳುತ್ತಾರೆ, 'ಪ್ರೇಮೋನ್ಮತ್ತತೆಯ ದೆಸೆಯಿಂದ ಭಕ್ತ ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ, ಹಾಡುತ್ತಾನೆ' ಎಂದು. ಇದು ಕೇವಲ ಚೈತನ್ಯದೇವನಿಗೆ ಉಂಟಾಗಿದ್ದ ಅವಸ್ಥೆ ಮಾತ್ರವೇ ಅಲ್ಲ, ಪರಮಹಂಸರದೂ ಅದೇ ಅವಸ್ಥೆ! ಆದ್ದರಿಂದ ಇವರಲ್ಲಿ ಸ್ವಯಂ ಭಗವಂತನೇ ಇದಾನೇನು?" ಅಂತ.

ನಿವೃತ್ತಿಮಾರ್ಗದ ವಿಷಯವಾಗಿ ಪರಮಹಂಸರ ಅಮೃತಮಯ ಮಾತುಕತೆ ಮುಂದುವರಿಯುತ್ತಿದೆ. ಈಗ ಈಶಾನನಿಗೆ ಗಂಭೀರವಾಣಿ ಯಿಂದ ಹಿತೋಪದೇಶವೀಯುತ್ತಿದ್ದಾರೆ.

ಪರಮಹಂಸರು: "ನೀನು ಮುಖಸ್ತುತಿ ಮಾತುಗಳಿಂದ ಮೈಮರೆಯ ಬೇಡ. ಪ್ರಾಪಂಚಿಕನ (ಧನಕನಕಾದಿಯುಳ್ಳವನ) ಸುತ್ತಲೂ ಹೊಗಳ

ಭಟ್ಟರು ಬಂದು ಸೇರಿಕೊಳ್ಳುತ್ತಾರೆ. ಒಂದು ಸತ್ತ ಹಸುವೇನಾದರು ಸಿಕ್ಕಿಬಿಟ್ಟರೆ, ಅಕ್ಕಪಕ್ಕದಲ್ಲಿ ಎಷ್ಟೊಂದು ರಣಹದ್ದುಗಳು ಇವೆಯೊ ಅವೆಲ್ಲಾ ಅಲ್ಲಿಗೆ ಬಂದುಬಿಡುತ್ತವೆ.

"ಪ್ರಾಪಂಚಿಕರ ಹೃದಯದಲ್ಲಿ ತಿರುಳಿಲ್ಲ. ಅವರು ಒಂದು ಗೊಬ್ಬರದ ಗುಡ್ಡೆಯೆ. ಹೊಗಳು ಭಟ್ಟರು ಬಂದು ಸೇರಿಕೊಂಡು ಆತನಿಗೆ ಹೇಳುತ್ತಾರೆ: 'ನೀನು ದಾನಿ! ನೀನು ಧ್ಯಾನಿ! ನೀನು ಜ್ಞಾನಿ!' ಎಂದು. ಅವೆಲ್ಲ ಬರಿಯ ಮಾತುಗಳೇನಲ್ಲ, ಮೊನೆಯಾದ ಬಿದಿರಿನ ಗೂಟಗಳೆ! ಇದೆಂಥ ಅವಿವೇಕ! ಕೆಲವು ಸಂಸಾರಿ ಬ್ರಾಹ್ಮಣ ಪಂಡಿತರುಗಳಿಂದ ಹಗಲು ಇರುಳು ಸುತ್ತುಗಟ್ಟಿಸಿಕೊಂಡಿರೋದು ಮತ್ತು ಅವರಿಂದ ಮುಖಸ್ತುತಿ ಕೇಳೋದು !

"ಸಂಸಾರಿಗಳು ಇವು ಮೂರರ ದಾಸರು. ಆದ್ದರಿಂದ ಅವರಲ್ಲಿ ತಿರುಳೇನಾದರು ಇರಬಲ್ಲದೆ? ಅವರು ಹೆಂಡತಿಯ ದಾಸರು, ಹಣದ ದಾಸರು, ಒಡೆಯನ ದಾಸರು. ಒಬ್ಬ ಇದಾನೆ, ಆತನ ಹೆಸರು ಹೇಳೋಲ್ಲ ಅವನಿಗೆ ತಿಂಗಳಿಗೆ ಎಂಟು ನೂರು ರೂಪಾಯಿ ಸಂಬಳ, ಆದರೆ ಹೆಂಡತಿಯ ದಾಸ; ಏಳು ಅಂದರೆ ಏಳ್ತಾನೆ, ಕೂರು ಅಂದರೆ ಕೂರ್‍ತಾನೆ !

"ಮಧ್ಯಸ್ಥಿಕೆ, ಮುಖ್ಯಸ್ಥಿಕೆ ಇವೆಲ್ಲ ಮಹತ್ತಾದ ಕೆಲಸಗಳೇನು? ದಯೆಯೆ? ಪರೋಪಕಾರವೆ? ಇವಕ್ಕೆ ಸಾಕಾದಷ್ಟು ಮಣ್ಣು ಹೊತ್ತಿದ್ದೀಯೆ. ಯಾರು ಇಂಥ ಕೆಲಸಗಳಲ್ಲಿ ನಿರತರಾಗಿರಬೇಕೊ ಅವರು ಬೇರೆ ದರ್ಜೆಗೆ ಸೇರಿದವರು. ನಿನಗೆ ಭಗವಂತನ ಪಾದಪದ್ಮಗಳ ಕಡೆ ಮನಸ್ಸು ತಿರುಗಿಸಿಡುವ ಸಮಯ ಬಂದುಬಿಟ್ಟದೆ. ಆತನನ್ನು ಪಡೆದುಕೊಂಡರೆ ಎಲ್ಲವನ್ನೂ ಪಡೆಯಬಹುದು. ಮೊದಲು ಆತ, ಬಳಿಕ ದಯೆ ಪರೋಪಕಾರ ಜಗತ್ತಿನ ಉಪಕಾರ ಜೀವೋದ್ಧಾರ. ನಿನಗೇಕೆ ಅವುಗಳ ವಿಷಯವಾಗಿ ಚಿಂತನೆ? 'ಲಂಕೆಯಲ್ಲಿ ರಾವಣ ಸತ್ತರೆ, ಇಲ್ಲಿ ಬೇಹುಳ ಅತ್ತು ಅಳಲೇಕಾಯಿಯಾದ!'

"ನಿನಗೂ ಅದೇ ವಿಪತ್ತು. ನಿನಗೆ ಹೀಗೆ ಹೀಗೆ ಮಾಡು ಎಂಬುದಾಗಿ ಒಬ್ಬ ಸರ್ವಸಂಗ ಪರಿತ್ಯಾಗಿ ಉಪದೇಶ ಕೊಡುವುದಾದರೆ ಅದು ಬಹಳ ಒಳ್ಳೆಯದಾಗುತ್ತದೆ. ಸಂಸಾರಿಯ ಉಪದೇಶ, ಆತ ಬ್ರಾಹ್ಮಣ ಪಂಡಿತನೇ ಆಗಿರಲಿ ಅಥವಾ ಇನ್ನೇನು ಬೇಕಾದರೂ ಆಗಿರಲಿ ಅದು ಸರಿಹೋಗದು.

ಈಶಾನ ಕಾಳಿಯ ಮೂರ್ತಿಯನ್ನು ತೋರಿಸಿ ಪರಮಹಂಸರಿಗೆ: "ನೀವು ಏನೇನು ನಿಮ್ಮ ಶ್ರೀಮುಖದಿಂದ ನುಡಿದಿರೊ ಅವೆಲ್ಲ ಅಲ್ಲಿಂಪಲೇ ಬಂದಿವೆ."

ಪರಮಹಂಸರು: "ನಾನು ಯಂತ್ರ, ಆಕೆ ಯಂತ್ರಿ;—ನಾನು ಗೃಹ, ಆಕೆ ಗೃಹಿಣಿ;—ನಾನು ರಥ, ಆಕೆ ರಥಿ; ಆಕೆ ನಡೆಸಿದಂತೆ ನಡೆಯುತ್ತೇನೆ, ನುಡಿಸಿದಂತೆ ನುಡಿಯುತ್ತೇನೆ. ಕಲಿಯುಗದಲ್ಲಿ ಬೇರೆ ಯಾವ ವಿಧದ ದೈವವಾಣಿಯೂ ಆಗುವುದಿಲ್ಲ. ಆದರೆ ಒಂದು ವಿಧವಾಗಿ ಆಗುತ್ತದೆ. ಆಕೆ ಬಾಲಕನೊ ಹುಚ್ಚನೊ ಇವರ ಮೂಲಕ ನುಡಿಯುತ್ತಾಳೆ.

"ಮನುಷ್ಯ ಮಾತ್ರದವ ಗುರುವಾಗಲಾರ. ಭಗವಂತನ ಇಚ್ಛೆಯಿಂದಲೆ ಎಲ್ಲವೂ ನಡೆಯುತ್ತದೆ. ಮಹಾಪಾಪ, ಬಹಳ ಕಾಲದಿಂದ ಹಿಂಬಾಲಿಸಿದ ಪಾಪ, ಬಹಳ ಕಾಲದಿಂದ ಬಂದ ಅಜ್ಞಾನ ಆಕೆಯ ಕೃಪೆಯೊದಗಿದರೆ ಒಡನೆಯೇ ಧ್ವಂಸವಾಗಿ ಹೋಗುತ್ತವೆ. ಕೊಠಡಿಯೊಳಗೆ ಒಂದು ಸಾವಿರಾರು ವರ್ಷಗಳಿಂದ ಅಂಧಕಾರವಿದೆ. ದೀಪ ಹಚ್ಚಿದರೆ ಆ ಸಹಸ್ರಾರು ವರ್ಷಗಳ ಅಂಧಕಾರ ಕಿಂಚಿತ್ ಕಿಂಚಿತ್ತಾಗಿ ನಾಶವಾಗಿ ಹೋಗುತ್ತದೆಯೊ ಅಥವಾ ಒಡನೆಯೆ ನಾಶವಾಗಿಹೋಗುವುದೊ? ಅದು ಬೆಳಕು ಬಿದ್ದೊಡನೆಯೆ ವಿಧಿಯಿಲ್ಲದೆ ಕಾಲಿಗೆ ಬುದ್ಧಿ ಹೇಳುತ್ತದೆ.

"ಮನುಷ್ಯನ ಕೈಯಿಂದ ಏನು ತಾನೆ ಸಾಧ್ಯ? ಮನುಷ್ಯ ಬೇಕಾದಷ್ಟು ಒದರಬಹುದು, ಆದರೆ ಎಲ್ಲವೂ ಭಗವಂತನ ಕೈಲಿದೆ. ಲಾಯರು ಹೇಳುತ್ತಾನೆ 'ನಾನು ತಿಳಿಸಬೇಕಾದುದನ್ನೆಲ್ಲ ತಿಳಿಸಿ ಮುಗಿಸಿದ್ದೇನೆ, ಈಗ ಎಲ್ಲ ನ್ಯಾಯಾಧೀಶನ ಕೈಯಲ್ಲಿದೆ' ಎಂದು.

"ಬ್ರಹ್ಮ ನಿಷ್ಕ್ರಿಯ. ಯಾವಾಗ ಆತ ಸೃಷ್ಟಿಸ್ಥಿತಿಪ್ರಳಯ ಕಾರ್ಯ ಇವೇ ಮೊದಲಾದವುಗಳನ್ನು ಮಾಡುತ್ತಾನೊ ಆಗ ಆತನಿಗೆ 'ಆದ್ಯಾಶಕ್ತಿ' ಎಂದು ಹೆಸರು. ಆ ಆದ್ಯಾಶಕ್ತಿಯನ್ನು ಪ್ರಸನ್ನಳನ್ನಾಗಿ ಮಾಡಿಕೊಬೇಕು. ಚಂಡಿಯಲ್ಲಿ ಹೇಳಿರುವುದು ನಿನಗೆ ಗೊತ್ತಿಲ್ಲವೆ? ದೇವತೆಗಳು ಮೊದಲು ಆದ್ಯಾಶಕ್ತಿಯನ್ನು ಸ್ತುತಿಸಿದರು. ಆಕೆ ಪ್ರಸನ್ನಳಾದರೆ ಮಾತ್ರ ಹರಿ ಯೋಗನಿದ್ರೆಯಿಂದ ಎಚ್ಚರಗೊಳ್ಳುತ್ತಾನೆ."

ಈಶಾನ: "ಹೌದು, ನಿಜ. ಮಧುಕೈಟಭ ರಾಕ್ಷಸರ ವಧೆಯ ಕಾಲದಲ್ಲಿ ಬ್ರಹ್ಮಾದಿ ದೇವತೆಗಳು ಈ ಸ್ತೋತ್ರವನ್ನು ಹೇಳಲಾರಂಭಿಸಿದರು:

ತ್ವಂ ಸ್ವಾಹಾ ತ್ವಂ ಸ್ವಧಾ ತ್ವಂ ಹಿ ವಷಟ್‌ಕಾರಃ ಸ್ವರಾತ್ಮಿಕಾ ।
ಸುಧಾ, ತ್ವಮಕ್ಷರೆ ನಿತ್ಯೆ ತ್ರಿಧಾಮಾತ್ರಾತ್ಮಿಕಾ ಸ್ಥಿತಾ ॥
ಅರ್ಧಮಾತ್ರಾ ಸ್ಥಿತಾ ನಿತ್ಯಾ ಯಾನುಚ್ಚಾರ್ಯಾ ವಿಶೇಷತಃ ।
ತ್ವಮೇವ ಸಾ ತ್ವಂ ಸಾವಿತ್ರೀ ತ್ವಂ ದೇವಿ ಜನನೀ ಪರಾ ॥
ತ್ವಯೈವ ಧಾರ್ಯತೆ ಸರ್ವಂ ತ್ವಯೈತತ್ ಸೃಜ್ಯತೆ ಜಗತ್ ।
ತ್ವಯೈತತ್ ಪಾಲ್ಯತೆ ದೇವಿ ತ್ವಮತ್‌ಸ್ಯಂತೆ ಚ ಸರ್ವದಾ ॥
ವಿಸೃಷ್ಟೌ ಸೃಷ್ಟಿರೂಪಾ ತ್ವಂ ಸ್ಥಿತಿರೂಪಾ ಚ ಪಾಲನೆ ।
ತಥಾ ಸಂಹೃತಿರೂಪಾಂತೆ ಜಗತೋಽಸ್ಯ ಜಗನ್ಮಯೆ ॥ ” *

ಶ್ರೀರಾಮಕೃಷ್ಣರು : “ ಹೌದು, ಆದರೆ ಅದನ್ನು ಅರಗಿಸಿಕೊಳ್ಳ ಬೇಕು.”

ಕಾಳೀದೇವಾಲಯದ ಮುಂಭಾಗದಲ್ಲಿ ಭಕ್ತರೆಲ್ಲರೂ ಪರಮಹಂಸರ ಸುತ್ತ ಕುಳಿತಿದ್ದಾರೆ. ಇಲ್ಲಿಯವರೆಗೂ ಮುಗ್ಧರಾಗಿ ಅವರ ಶ್ರೀಮುಖ ದಿಂದ ಬಂದ ವಾಣಿಯನ್ನೆಲ್ಲ ಕೇಳಿದರು. ಈಗ ಪರಮಹಂಸರು ಮೇಲಕ್ಕೆ ಎದ್ದರು. ಗರ್ಭಗುಡಿಯ ಮುಂಭಾಗಕ್ಕೆ ಬಂದು ಭಗವತಿಗೆ ಸಾಷ್ಟಾಂಗ ಪ್ರಣಾಮಮಾಡಿದರು. ಭಕ್ತರೆಲ್ಲ ಕ್ಷಣಮಾತ್ರದಲ್ಲಿ ಅವರ ಹತ್ತಿರ ಬಂದು ಅವರಿಗೆ ಸಾಷ್ಟಾಂಗಪ್ರಣಾಮ ಮಾಡಿದರು. ಎಲ್ಲರೂ ಅವರ ಪಾದ ಧೂಳಿಯ ಭಿಕಾರಿಗಳೆ. ಭಕ್ತರೆಲ್ಲ ಪ್ರಣಾಮ ಮಾಡಿದನಂತರ ಪರಮ ಹಂಸರು ವರಾಂಡದಿಂದ ಕೆಳಕ್ಕೆ ಇಳಿಯುತ್ತಿದ್ದಾರೆ. ಮಾಸ್ಟರೊಡನೆ ಮಾತುಕತೆಯಾಡುತ್ತ ತಮ್ಮ ಕೊಠಡಿಯ ಕಡೆಗೆ ಬರುತ್ತಿದ್ದಾರೆ. ಮೊದಲು ಅವರು ಹಾಡಿದರು:

ತಾಯಿ ದುರ್ಗೆಯೆ ಪರಮಬ್ರಹ್ಮಸ್ವರೂಪಿ–
ಯೆಂಬುದನ್ನರಿಯುತ,
ಭಕ್ತಿಮುಕ್ತಿಗೆ ತಲೆಯ ಬಾಗಿಸಿ ನಿಲ್ಲುತ
ಧರ್ಮ ಮೇಣ್ ಅಧರ್ಮವೆರಡನು ಬಿಸುಡುತ
ನಿಲುವೆನೆಂಬನು ಶ್ರೀಪ್ರಸಾದನು ಹಾಡುತ !

ಪರಮಹಂಸರು ಮಾತು ಮುಂದುವರಿಸಿದರು : “ ಧರ್ಮ ಅಧರ್ಮ ಎಂದರೆ ಏನು ಗೊತ್ತೆ ? ಇಲ್ಲಿ ‘ ಧರ್ಮ ’ ಅಂದರೆ ವೈದಿಕಧರ್ಮ. ಯಾವ ರೀತಿಯಾಗಿ ದಾನ ಮಾಡಬೇಕು ; ಶ್ರಾದ್ಧ, ಭಿಕ್ಷುಕರಿಗೆ ಅನ್ನದಾನ ಇವೇ

* ಇದರ ಸರಳಾನುವಾದಕ್ಕೆ ಪರಿಶಿಷ್ಟ ೩ರಲ್ಲಿ ೧ನ್ನು ನೋಡಿ.

ಮೊದಲಾದವನ್ನು ಹೇಗೆ ಮಾಡಬೇಕು ಎಂಬುದರ ವಿಷಯವಾಗಿ ತಿಳಿಸುತ್ತದೆ.

"ಈ ಧರ್ಮಕ್ಕೇನೆ ಕರ್ಮಕಾಂಡ ಎಂದು ಹೆಸರು. ಈ ಮಾರ್ಗ ಬಹಳ ಕಠಿನವಾದ್ದು. ನಿಷ್ಕಾಮ ಕರ್ಮ ಬಹಳ ಕಠಿನವಾದ ಕೆಲಸ. ಅದಕ್ಕಾಗಿಯೆ ಶಾಸ್ತ್ರ ಭಕ್ತಿಮಾರ್ಗವನ್ನು ಅವಲಂಬಿಸುವಂತೆ ಹೇಳುತ್ತದೆ.

"ಒಬ್ಬ ತನ್ನ ಮನೆಯಲ್ಲಿ ಶ್ರಾದ್ಧ ಮಾಡುತ್ತಿದ್ದ. ಅನೇಕರು ಬಂದು ಊಟಮಾಡಿ ಹೋಗುತ್ತಿದ್ದರು. ಒಬ್ಬ ಕಟುಕ ಕೊಲೆಮನೆಗೆ ಒಂದು ಹಸುವನ್ನು ಹೊಡೆದುಕೊಂಡು ಹೊಗುತ್ತಿದ್ದ. ಆ ಹಸು ಆತ ಹೇಳಿದಹಾಗೆ ಕೇಳುತ್ತಿರಲಿಲ್ಲ,—ಕಟುಕನಿಗೆ ಬಹಳವಾಗಿ ಸಾಕಾಗಿ ಹೋಗಿತ್ತು. ಆಗ ಆತ ಭಾವಿಸಿದ: 'ಶ್ರಾದ್ಧದ ಮನೆಗೆ ಹೋಗಿ ಊಟ ಮಾಡುತ್ತೇನೆ;–ಊಟಮಾಡಿ ಶರೀರವನ್ನು ಸ್ವಲ್ಪ ಬಲಪಡಿಸಿಕೊಳ್ಳುತ್ತೇನೆ; ಬಳಿಕ ಹಸುವನ್ನು ಹೊಡೆದುಕೊಂಡುಹೋಗುತ್ತೇನೆ' ಎಂದು. ಕೊನೆಗೆ ಹಾಗೆಯೇ ಮಾಡಿದ. ಆದರೆ ಆತ ಹಸುವನ್ನು ಕೊಲೆಮಾಡಿದಾಗ,— ಯಾರು ಶ್ರಾದ್ಧ ಮಾಡುತ್ತಿದ್ದನೊ ಆತನಿಗೂ ಗೋಹತ್ಯೆಯ ಪಾಪ ಬಂದಿತು. ಅದಕ್ಕಾಗಿಯೆ ನಾನು ಹೇಳುವುದು, 'ಕರ್ಮಕಾಂಡಕ್ಕಿಂತ ಭಕ್ತಿಮಾರ್ಗ ಮೇಲು' ಅಂತ."

ಪರಮಹಂಸರು ಮಾಸ್ಟರೊಡನೆ ತಮ್ಮ ಕೊಠಡಿಗೆ ಬಂದರು. ಅವರು ಒಂದು ಹಾಡನ್ನು ಮೂಗಿನಲ್ಲೆ ಹಾಡುತ್ತಿದ್ದಾರೆ. ನಿವೃತ್ತಿ ಮಾರ್ಗದ ವಿಷಯವಾಗಿ ಈಗ ತಾನೆ ಈಶಾನನೊಡನೆ ಏನು ಮಾತ ನಾಡಿದರೊ ಅದು ಆ ಹಾಡಿನ ಮೂಲಕ ಮೂಡುತ್ತಿದೆ.

ಅವರು ಹೀಗೆ ಹಾಡುತ್ತಿದ್ದಾರೆ:

**ನನ್ನ ಸರ್ವಸ್ವವನು ಸುಳಿದುಕೊಳ್ಳೌ ತಾಯಿ;**
**ಅಸ್ಥಿಮಾಲೆಯು ಜೊತೆಗೆ ಸಿದ್ಧಿಘಟವನು ಮಾತ್ರ**
**ಉಳಿಸು ನನಗೆ!**

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು. ಅಧರಸೇನ, ಕಿಶೋರಿ ಮತ್ತು ಉಳಿದ ಭಕ್ತರು ನೆಲದ ಮೇಲೆ ಕುಳಿತು ಕೊಂಡರು.

ಶ್ರೀರಾಮಕೃಷ್ಣರು ಭಕ್ತರಿಗೆ: "ಈಶಾನನನ್ನು ನೋಡಿದೆ,—ಎಲ್ಲಿ, ಏನೂ ಆಗಲಿಲ್ಲವಲ್ಲ! ಕಾರಣವೇನು ಹೇಳು? ಆತ ಐದು ತಿಂಗಳಕಾಲ

ಪುರಶ್ಚರಣೆ ಮಾಡಿದಾನೆ. ಬೇರೆಯವರಲ್ಲಿ ಅದು ಇಡಿಯ ಜೀವನವನ್ನೆ ಪರಿವರ್ತಿಸಿ ಬಿಡುತ್ತಿತ್ತು!"

ಅಧರಸೇನ: "ನಮ್ಮ ಎದುರಿಗೆಲ್ಲ ನೀವು ಆತನಿಗೆ ಹಾಗೆಲ್ಲ ಹೇಳಿದ್ದು ಸರಿಹೋಗಲಿಲ್ಲ."

ಶ್ರೀರಾಮಕೃಷ್ಣರು: "ಏನು ಹೇಳುತ್ತಿದ್ದೀಯೆ! ಆತನಿಗೆ ಬರೇ ಜಪದ ಹುಚ್ಚು. ಆ ಮಾತು ಆತನಿಗೇಕೆ ದುಃಖವನ್ನುಂಟುಮಾಡೀತು?"

ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ಅಧರ ಸೇನನಿಗೆ ಹೇಳುತ್ತಿದ್ದಾರೆ, "ಈಶಾನ ಒಬ್ಬ ದೊಡ್ಡ ದಾನಿ. ಜೊತೆಗೆ ನೋಡು, ಜಪತಪಾದಿಗಳನ್ನು ಬಹಳವಾಗಿ ಮಾಡುತ್ತಿದ್ದಾನೆ" ಎಂದು. ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು. ಭಕ್ತರು ಅವರ ಕಡೆಗೆ ದೃಷ್ಟಿಸಿ ನೋಡುತ್ತಿದ್ದಾರೆ. ಇದ್ದಕ್ಕಿದ್ದಹಾಗೆ ಪರಮಹಂಸರು ಅಧರಸೇನನಿಗೆ ಹೇಳಿದರು, "ನಿನಗೆ ಯೋಗ ಭೋಗ ಎರಡೂ ಇವೆ" ಎಂದು.

**೧೮ನೆ ಅಕ್ಟೋಬರ್ ೧೮೮೪, ಕಾರ್ತಿಕ ಅಮಾವಾಸ್ಯೆ, ಶನಿವಾರ.**

ಇಂದು ಕಾಳಿಯ ಪೂಜೆ. ರಾತ್ರಿ ಹತ್ತೊ ಹನ್ನೊಂದೂ ಘಂಟೆಗೆ ಆರಂಭವಾಗುತ್ತದೆ. ಕೆಲವು ಭಕ್ತರು ಈ ಗಭೀರ ಅಮಾವಾಸ್ಯೆಯ ರಾತ್ರಿಯಲ್ಲಿ ಪರಮಹಂಸರ ದರ್ಶನ ಮಾಡಬೇಕೆಂದು ಇಚ್ಛಿಸಿದ್ದಾರೆ. ಅದಕ್ಕಾಗಿ ಅವರು ಹೊತ್ತಿಗೆ ಮುಂಚೆಯೆ ದಕ್ಷಿಣೇಶ್ವರಕ್ಕೆ ಬಂದು ಸೇರುತ್ತಿದ್ದಾರೆ.

ಮಾಸ್ಟರ್ ಸುಮಾರು ರಾತ್ರಿ ಎಂಟು ಘಂಟೆಯ ಸಮಯಕ್ಕೆ ಒಬ್ಬನೆ ದಕ್ಷಿಣೇಶ್ವರಕ್ಕೆ ಬಂದ. ನೋಡುತ್ತಾನೆ, ಕಾಳೀದೇವಾಲಯದಲ್ಲಿ ಮಹೋತ್ಸವ ಆಗಲೆ ಆರಂಭವಾಗಿಬಿಟ್ಟಿದೆ. ಉದ್ಯಾನವನದಲ್ಲಿ ಅಲ್ಲಲ್ಲಿ ದೀಪ ಹಚ್ಚಿದೆ. ಬೆಳಕಿನಿಂದ ದೇವಾಲಯ ಸುಮ್ಮನೆ ಹೊಳೆಯುತ್ತಿದೆ. ವಾದ್ಯಾಲಯದಿಂದ ವಾದ್ಯಘೋಷ ಕೇಳಿಬರುತ್ತಿದೆ. ದೇವಾಲಯದ ಕೆಲಸಗಾರರು ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಓಡಾಡುತ್ತಿದ್ದಾರೆ. ಇಂದಿನ ರಾತ್ರಿ ರಾಸಮಣಿಯ ಕಾಳೀದೇವಾಲಯದಲ್ಲಿ ಮೇಳ ನಡೆಯುತ್ತದೆ, ಬೆಳಗಿನ ಜಾವ ನಾಟಕ ನಡೆಯುತ್ತದೆ ಎಂಬುದಾಗಿ ದಕ್ಷಿಣೇಶ್ವರದ ಗ್ರಾಮವಾಸಿಗಳು ಕೇಳಿದ್ದರು. ಹಳ್ಳಿಯಿಂದ ಆಬಾಲವೃದ್ಧ ವನಿತೆಯರೆಲ್ಲರೂ ಇರುವೆ ಸಾಲಿನೋಪಾದಿಯಲ್ಲಿ ದೇವಾಲಯಕ್ಕೆ ಬರುತ್ತಲೇ ಇದ್ದಾರೆ.

ಅಪರಾಹ್ನದಲ್ಲಿ ರಾಜನಾರಾಯಣನ ಚಂಡೀಕೀರ್ತನೆ ನಡೆಯಿತು. ರಾಮಕೃಷ್ಣರು ತಮ್ಮ ಭಕ್ತರೊಡನೆ ಅದನ್ನು ಬಹಳ ಆನಂದದಿಂದ ಕೇಳಿದರು. ಈಗ ಜಗನ್ಮಯಿ ಕಾಳಿಯ ಪೂಜೆಗೆ ಸಿದ್ಧತೆ ಆಗುತ್ತಿದೆ. ಪರಮಹಂಸರು ಆನಂದದಿಂದ ತುಂಬಿತುಳುಕಾಡುತ್ತಿದ್ದಾರೆ.

ಮಾಸ್ಟರ್ ದಕ್ಷಿಣೇಶ್ವರಕ್ಕೆ ಬಂದು ಪರಮಹಂಸರ ಕೊಠಡಿಯನ್ನು ಪ್ರವೇಶಿಸಿ ನೋಡುತ್ತಾನೆ, ಅವರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದ್ದಾರೆ. ಅವರ ಮುಂಭಾಗದಲ್ಲಿ ನೆಲದಮೇಲೆ ಬಾಬುರಾಮ, ಚಿಕ್ಕ ಗೋಪಾಲ, ಹರಿಪದ, ಕಿಶೋರಿ, ಒಬ್ಬ ಚಿಕ್ಕ ಹುಡುಗ—ನಿರಂಜನನ ಸಂಬಂಧಿ, ಏಡೇದಾರಿನಿಂದ ಬಂದಿದ್ದ ಒಬ್ಬ ಯುವಕ ಇವರೆ ಮೊದಲಾದ ಭಕ್ತರು ಕುಳಿತುಕೊಂಡಿದ್ದಾರೆ. ರಾಮಲಾಲ ಮತ್ತು ಹಾಜರಾ ಆಗಾಗ ಅಲ್ಲಿಗೆ ಬಂದು ಹೋಗುತ್ತಿದ್ದಾರೆ. ನಿರಂಜನನ ಸಂಬಂಧಿ—ಆ ಚಿಕ್ಕ ಹುಡುಗ—ಪರಮಹಂಸರ ಮುಂದೆ ಕುಳಿತು ಧ್ಯಾನಮಾಡುತ್ತಿದ್ದಾನೆ,—ಪರಮಹಂಸರು ಆತನಿಗೆ ಧ್ಯಾನಮಾಡುವಂತೆ ಹೇಳಿದ್ದರು.

ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡನು. ಸ್ವಲ್ಪ ಹೊತ್ತಾದನಂತರ ನಿರಂಜನನ ಸಂಬಂಧಿ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡು ಹೊರಡುವುದರಲ್ಲಿದ್ದಾನೆ. ಏಡೇದಾರಿನ ಹುಡುಗನೂ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ನಿಂತುಕೊಂಡಿದ್ದಾನೆ,— ಈತ ಆ ಹುಡುಗನ ಜೊತೆಯಲ್ಲಿ ತೆರಳುವನು. ಪರಮಹಂಸರು ನಿರಂಜನನ ಸಂಬಂಧಿಗೆ ಕೇಳಿದರು, "ಮತ್ತೆ ಯಾವಾಗ ಬರುತ್ತೀಯೆ ?" ಎಂದು.

ಭಕ್ತ : "ಬಹುಶಃ ಮುಂದಿನ ಸೋಮವಾರ."

ಶ್ರೀ ರಾಮಕೃಷ್ಣರು ಆಕಾಂಕ್ಷೆಯಿಂದ: "ಲಾಟೀನು ಬೇಕೇನು? ಜೊತೆಯಲ್ಲಿ ತೆಗೆದುಕೊಂಡು ಹೋಗುವೆಯಾ ?"

ಭಕ್ತ: "ಬೇಡಿ, ಈ ತೋಟದ ಪಕ್ಕದಲ್ಲಿಯೆ ;—ಅವಶ್ಯಕತೆಯೇ ನಿಲ್ಲ."

ಪರಮಹಸರು ಏಡೇದಾರಿನ ಹುಡುಗನಿಗೆ: "ಮಗು, ನೀನೂ ಹೊರಟುಬಿಟ್ಟೆಯಾ ?"

ಯುವಕ: "ಹೌದು, ಸ್ವಲ್ಪ ನೆಗಡಿಯಾಗಿಬಿಟ್ಟಿದೆ."

ಪರಮಹಂಸರು: "ಒಳ್ಳೇದು, ತಲೆ ಮೇಲೆ ಬಟ್ಟೆಹಾಕಿಕೊಂಡು ಹೋಗು."

ಆ ಹುಡುಗರಿಬ್ಬರು ಮತ್ತೆ ಪರಮಹಂಸರಿಗೆ ಪ್ರಣಾಮಮಾಡಿ ಹೊರಟುಹೋದರು.

ಇಂದು ಅಮಾವಾಸ್ಯೆಯ ಗಾಢಾಂಧಕಾರ. ಇದರ ಜೊತೆಗೆ ಜಗನ್ಮಾಯಿಯ ಪೂಜೆ ಬೇರೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಒರಗುದಿಂಬು ಹಾಕಿಕೊಂಡು ಒರಗಿ ಕುಳಿತಿದ್ದಾರೆ. ಅವರ ಮನಸ್ಸು ಅಂತರ್ಮುಖವಾಗಿದೆ. ಆಗಾಗ ಭಕ್ತರೊಡನೆ ಒಂದೊ ಎರಡೊ ಮಾತು ಆಡುತ್ತಿದ್ದಾರೆ. ಇದ್ದಕ್ಕಿದ್ದಹಾಗೆ ಮಾಸ್ಟರನ ಮತ್ತು ಭಕ್ತರ ಕಡೆ ತಿರುಗಿ ಹೇಳುತ್ತಿದ್ದಾರೆ: "ಆ ಹುಡುಗನದು ಎಂಥ ಧ್ಯಾನ! (ಹರಿಪದನಿಗೆ) ಏನು? ಎಂಥ ಧ್ಯಾನ!"

ಹರಿಪದ: "ಹೌದು, ನಿಜ. ಒಂದು ಮರದ ದಿಮ್ಮಿಯ ಹಾಗೆ."

ಪರಮಹಂಸರು ಕಿಶೋರಿಗೆ: "ಆ ಹುಡುಗ ಯಾರೆಂಬುದು ಗೊತ್ತೆ? ನಿರಂಜನನ ದೂರದ ಸೋದರ."

ಮತ್ತೆ ಎಲ್ಲರೂ ನಿಶ್ಶಬ್ದರಾಗಿ ಕುಳಿತಿದ್ದಾರೆ. ಹರಿಪದ ಪರಮಹಂಸರ ಪಾದಗಳನ್ನು ಒತ್ತುತ್ತಿದ್ದಾನೆ. ಪರಮಹಂಸರು ಅಪರಾಹ್ನದಲ್ಲಿ ಚಂಡಿಯ ಹಾಡುಗಳನ್ನು ಕೇಳಿದ್ದರು. ಅವು ಅವರ ಮೂಗಿನ ಮೂಲಕ ಹೊರಬರುತ್ತಿವೆ. ಮೆಲ್ಲಮೆಲ್ಲಗೆ ಹಾಡುತ್ತಿದ್ದಾರೆ:

ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು!
ಆರು-ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು.
ಯೋಗಿಹೃದಯದ ದಿವ್ಯನಿತ್ಯಾನಂದರೂಪಿಣಿ— ಆಕೆಯು.
ತನ್ನ ಆನಂದದಲಿ ತಾನೇ ಜೀವರೆದೆಯೊಳಗಿರುವಳು.

ಸಕಲ ಬ್ರಹ್ಮಾಂಡವನು ಬಸಿರಲಿ ಧರಿಸಿ ನಿತ್ಯವು ಪೊರೆವಳು.
ಮೂಲಾಧಾರ ಸಹಸ್ರಾರದಲ್ಲಿಯೆ ಮುನಿಗಳವಳನು ನೆನೆವರು.
ಶಿವನ ಹೊರತಿನ್ನಾರು ಅರಿಯರು ಅವಳ ದಿವ್ಯ ಸ್ವರೂಪವ,
ಪದ್ಮವನದಲಿ ಹಂಸರೂಪನ ಜೊತೆಗೆ ನಲಿಯುವ ಮಾಟವ!

ಕಡಲನೀಜುವೆನೆಂಬ ಮರುಳನ ಕಲ್ಪನೆಗೆ ನಗುವಂದದಿ!
ಇಂಥ ತಾಯಿಯ ತಿಳಿದೆನೆಂದರೆ ಪ್ರಸಾದರಾಮನು ನಗುವನು!

ಕುಬ್ಜನಾದವ ಮುಗಿಲ-ಚಂದ್ರನ ಹಿಡಿವ ಯತ್ನದ ತೆರದಲಿ,
ಬುದ್ಧಿಯರಿತರು ಹೃದಯವರಿಯದು ತಾಯಿ ದುರ್ಗೆಯ ನಿಜವನು !

ಪರಮಹಂಸರು ಎದ್ದು ಕುಳಿತುಕೊಂಡರು. ಮತ್ತೆ ಅತ್ಯಂತ ಉತ್ಸಾಹದಿಂದ ಭಗವತಿಯ ಮೇಲಿನ ಹಾಡನ್ನು ಹಾಡುತ್ತಿದ್ದಾರೆ:

ತಾಯಿ ಕಾಳಿಯ ಉನ್ಮತ್ತ ಲೀಲೆ ಈ ಸೃಷ್ಟಿ;
ಮೂಲೋಕಗಳು ಅವಳ ಮಾಯೆಯಲಿ ಮರುಳು !
ಶಿವ ಮರುಳು, ಶಿವೆಯೂ ಮರುಳು, ಅವರೊಡನೆ
ನರ್ತಿಸುವ ಭಕ್ತರಿಬ್ಬರು ಮರುಳು.
ಕುಣಿವ ತಾಯಿಯ ರೂಪ ಭಾವ ಭಂಗಿಗಳನ್ನು
ಬಣ್ಣಿಸಲ್ಕರಿದು !
ಕಂಠಸ್ಥಗರಳ ಬಾಧೆಗೆ ಶಿವನೆ ಶ್ರೀಕಾಳಿಯನು
ಜಪಿಸುವನು ಹಗಲು ಇರುಳು !
ಕಲ್ಲಿನಿಂದಲೆ ಮತ್ತೊಂದು ಕಲ್ಲನು ಒಡೆವೊಲು,
ಸಗುಣ-ನಿರ್ಗುಣವೆಂಬ ವಾದವ ಸೃಜಿಸಿ — ಅದನೂ ಮುರಿವಳು.
ಉಳಿದ ಎಲ್ಲಾ ವಿಷಯದಲ್ಲೂ ಅವಳು ಒಪ್ಪಿಗೆಯಿತ್ತರೂ,
ಕರ್ತವ್ಯಚ್ಯುತಿಯನು ಒಪ್ಪಳು !
ಇಂಥ ತಾಯಿಯ ನಾಮನೌಕೆಯ ಹಿಡಿದು ಭವಸಾಗರದೊಳು
ತೇಲಿ ನಡೆಯಿರಿ ಎಂದು ನುಡಿವನು ಭಕ್ತ ರಾಮಪ್ರಸಾದನು !

ಪರಮಹಂಸರು ಹಾಡುತ್ತ ಹಾಡುತ್ತ ಭಾವಾವಿಷ್ಟರಾಗಿಹೋಗಿದ್ದಾರೆ. ಹೇಳಿದರು, 'ಈ ವಿಧದ ಹಾಡುಗಳೆಲ್ಲ ಭಗವತ್ ಪ್ರೇಮೋನ್ಮಾದಕ ಹಾಡುಗಳು' ಎಂದು. ಬಳಿಕ ಹಾಡಿನ ಮೇಲೆ ಹಾಡನ್ನು ಹಾಡಲಾರಂಭಿಸಿದ್ದಾರೆ:

ಗಂಡಯೋಗದಲಿ ಜನಿಸಿದಂಥ ಶಿಶು ತಿನುವುದಂತೆ ತಾಯ !
ನಾನು ಅಂಥ ಶಿಶು ; ನಿನ್ನ ನುಂಗುವೆನು ತೆರೆದು ನನ್ನ ಬಾಯ !

ಮತ್ತೆ :

ಸದಾನಂದ ಮಯಿ ಕಾಳೀ
ಪರಶಿವ ಮನಮೋಹಿನೀ !
ಕರತಾಳವ ಗೈದು ಕುಣಿವೆ
ಉನ್ಮತ್ತರ ತೆರದಲಿ.

ಆದಿಭೂತೆ ಸನಾತನಿ
ಶೂನ್ಯರೂಪೆ ಶಶಿ ಭಾಲೀ.
ಬ್ರಹ್ಮಾಂಡವೆ ಇರುವ ಮುನ್ನ
ನೀನಾಗಿಹೆ ಶಿರಮಾಲೀ.

ಸರ್ವ ಚಲನಕೂ ಪ್ರೇರಕೆ ನೀನು,
ನಾವೋ ಬರಿ ಬೊಂಬೆಗಳು.
ನೀನಾಡಿಸಿದಂತೆ ಆಡಿ
ನೀ ನುಡಿಸಿದಂತೆ ನುಡಿವೆವು!

ಅಶಾಂತ ಕಮಲಾಕಾಂತ ನುಡಿವನು :
'ಓ ಕಾಳೀ ಪ್ರಳಯ ಸ್ವರೂಪೀ,
ಧರ್ಮಾಧರ್ಮಗಳೆರಡನು ನೀನು
ಸೀಳಿಹಾಕಿರುವೆ ಖಡ್ಗದಲಿ!

ಮತ್ತೆ :

ಜಯ್ ಕಾಳಿ, ಜಯ್ ಕಾಳಿ, ಜಯ್ ಕಾಳಿ ಎಂದಾನು
ನಿಷ್ಕ್ರಮಣ ಕಾಲದಲಿ ಜಪಿಸುತಿರಲು
ಶಿವತ್ವ ಲಭಿಸುವುದು ; ಕಾಶಿಗೀಶಿಗಳೆಂಬ
ಪುಣ್ಯಕ್ಷೇತ್ರಗಳಿಂದ ಮತ್ತೆ ನನಗೇನು ?

ಅನಂತರೂಪಿಣಿಯ ಮಹಿಮೆ ಏನೆಂಬುದನು
ನಾವು ಮರ್ತ್ಯರು ತಿಳಿಯಬಲ್ಲವೇನು ?
ತನ್ನಲ್ಪಮಹಿಮೆಯನು ಅರಿತ ಶಿವನೇ ಅವಳ
ಪದಕಮಲಗಳ ಕೆಳಗೆ ಬಿದ್ದಿಲ್ಲವೇನು ?

ಹಾಡುವುದು ಮುಗಿಯಿತು. ಆ ಸಮಯಕ್ಕೆ ಸರಿಯಾಗಿ ರಾಜನಾರಾಯಣನ ಇಬ್ಬರು ಮಕ್ಕಳು ಬಂದು ಪರಮಹಂಸರಿಗೆ ಪ್ರಣಾಮ ಮಾಡಿದರು. ಅಪರಾಹ್ನ ನಾಟ್ಯಮಂದಿರದಲ್ಲಿ ರಾಜನಾರಾಯಣ ಚಂಡೀ ಕೀರ್ತನೆಯನ್ನು ಮಾಡಿದ. ಆತನ ಈ ಮಕ್ಕಳಿಬ್ಬರೂ ಆತನೊಡನೆ ಹಾಡಿದರು. ಪರಮಹಂಸರು ಮತ್ತೆ ಆ ಮಕ್ಕಳೊಡನೆ ಹಾಡಲಾರಂಭಿಸಿದರು :

ತಾಯಿ ಕಾಳಿಯ ಉನ್ಮತ್ತಲೀಲೆ ಈ ಸೃಷ್ಟಿ ;
ಮೂಲೋಕಗಳು ಅವಳ ಮಾಯೆಯಲಿ ಮರುಳು !

ಶಿವ ಮರುಳು, ಶಿವೆಯೂ ಮರುಳು, ಅವರೊಡನೆ
ನರ್ತಿಸುವ ಭಕ್ತರಿಬ್ಬರು ಮರುಳು.

ಚಿಕ್ಕ ಹುಡುಗ ಪರಮಹಂಸರನ್ನು ಕೇಳಿದ: "'ನೀವು ಕರುಣಾಪೂರ್ಣರೆಂಬುದ ಕೇಳಿ ಬಂದೆನು' ಎಂಬ ಹಾಡನ್ನು ದಯವಿಟ್ಟು ಒಮ್ಮೆ ಹಾಡಿ" ಎಂದು. ಪರಮಹಂಸರು ಕೇಳಿದರು: "'ಗೌರಾಂಗ ನಿತ್ಯಾನಂದರೆನ್ನುವ ದಿವ್ಯ ಸೋದರವರ್ಯರೇ,' ಎಂಬ ಹಾಡನ್ನನೇನು?" ಎಂದು. ಬಳಿಕ ಅದನ್ನು ಹಾಡಲಾರಂಭಿಸಿದರು:

ಗೌರಾಂಗ ನಿತ್ಯಾನಂದರೆನ್ನುವ
ದಿವ್ಯ ಸೋದರವರ್ಯರೇ,
ನೀವು ಕರುಣಾಪೂರ್ಣರೆಂಬುದ
ಕೇಳಿ ಬಂದೆನು ನಿಮ್ಮೆಡೆ.
ಪರಮಹಂಸರು ನೀವು — ಎಂಬುದ
ಕಾಶಿಯೊಡೆಯನೆ ನುಡಿದನು.
ಬ್ರಹ್ಮರೂಪರು ನೀವು, ನಿಮ್ಮನು
ನಾನು ಗುರುತಿಸಿ ಬಂದೆನು.
ಎನಿತೊ ಸಾಧುಗಳನ್ನು ಕಂಡೆನು
ನಿಮ್ಮ ಕರುಣೆಯಂ ನನಗೆ ಯಾರಲು
ಇಂದುವರೆಗೂ ಕಾಣದು!

ಹಿಂದೆ ಗೋಕುಲದಲ್ಲಿ ನೀವೇ
ವ್ರಜರ ಕುಲದಲಿ ಬಂದಿರಿ.
ಗೋಪ ಕಾಯುತ ಹುಲ್ಲುಗಾವಲ
ಹಸುರಬಯಲೊಳು ನಲಿದಿರಿ
ಗೆಳೆಯ ಗೋಪಕುಮಾರರೊಂದಿಗೆ
ನೂರು ಆಟದೊಳಿದ್ದಿರಿ.
ಆದರಂದಿನ ರೂಪವನು ಮರೆ-
ಮಾಡಿ ನಮ್ಮೆಡೆ ನಿಂದಿರಿ.
ಇಂದು ಹರಿನಾಮವನು ನುತಿಸುತ
ನಮ್ಮ ಎದುರೇ ನಲಿವಿರಿ!

ಅಯ್ಯ, ಗೌರಾಂಗದೇವನೆ
ನಿನ್ನ ಅಂದಿನ ನೀಲ ವರ್ಣವ
ಎಂತು ಮರೆಮಾಡಿರುವೆಯೋ !
ಆದರೂ ನಿನ್ನಕ್ಷಿ ಅಂದಿನ
ಗುಟ್ಟನೊರೆಯುತಲಿರುವುವೊ !
ನಿನ್ನ ನಾಮವ ನುತಿಸಿ ಎನಿತೋ,
ಮುಕ್ತರಾದರು ಜೀವರು.
ನಿನ್ನ ಮಹಿಮೆಯ ಕೇಳಿ ನಾನೂ
ನಿನ್ನ ಪಾದಕೆ ಮಣಿಯುವೆ.
'ನಿನ್ನ ನೆರಳೊಳಗಿಟ್ಟು ನನ್ನನು
ಸಲಹು' ಎನ್ನುತ ಬೇಡುವೆ.

ದುರಳರಿಬ್ಬರ[1] ಹಿಂದೆ ನೀನೇ
ಕೈ ಹಿಡಿದು ಮೇಲೆತ್ತಿದೆ.
ಸರ್ವರನು ಸಮದೃಷ್ಟಿಯಲಿ ನೀ
ತೆಗೆದು ಎದೆಯೊಳಗಪ್ಪುವೆ.
ಹರಿಯನಾಮದ ಅಮೃತಬೀಜವ
ಎಲ್ಲ ಮನದೊಳು ಬಿತ್ತುವೆ.
'ಇಂದು ನನ್ನನು ಎತ್ತು ತಂದೇ'
ಎಂದು ನಿನ್ನನು ಬೇಡುವೆ!

ರಾಮಲಾಲ ಕೊಠಡಿಗೆ ಬಂದ. ಆತನಿಗೆ ಪರಮಹಂಸರು ಹೇಳಿದರು: "ಒಂದು ಸ್ವಲ್ಪ ಹೊತ್ತು ಹಾಡು. ಇಂದು ಭಗವತಿಯ ಪೂಜೆ" ಎಂದು.

ರಾಮಲಾಲ ಹಾಡುತ್ತಿದ್ದಾನೆ:

ನಲಿಯುವಳಾರೀ ಭೈರವನಾರೀ
ರಣರಂಗದೊಳೀ ಬೆಳಕನು ಬೀರಿ ?—
ಮಿಂಚಿನ ಬಳಗವನೊಳಕೊಂಡಿರುವ
ಮುಂಗಾರ್ ಮೋಡದ ಮಯ್ಯವಳು !
ಮಿಂಚುವ ದಾಡೆಯ, ಬಿಡುಮುಡಿಗೂದಲ

1. ಜಗಾಯ್ ಮತ್ತು ಮಾಧಾಯ್.

ರುದ್ರಭಯಂಕರಿ ನುಗ್ಗುವಳು.
ಇಂತು ರೌದ್ರವನು ತೋರುತ ಮೆರೆಯುವ
ಧೀರನಾರಿಯಿವಳಾರಿವಳು ?

ಎನಿತು ಮನೋಹರ ನೋಡು ಹಣೆಯೊಳಗೆ
ಅಂಟಿಕೊಂಡಿರುವ ಬೆವರು ಮಣಿ!
ಕೆದರುಗೂದಲಲಿ ಝೇಂಕೃತಿಗೈಯ್ಯುತ
ಹಾರಾಡುವ ಆ ಭೃಂಗಾಳಿ!
ಭುವನಮೋಹಿನಿಯ ರೂಪದೆದುರು, ಆ
ಚಂದಿರನೇ ಬಲು ನಾಚಿಹನು.
ಅಚ್ಚರಿ, ಅಚ್ಚರಿ, ಶಿವನೇ ಆಕೆಯ
ಪದತಲದೆಡೆ ಶವದಂತಿಹನು!
ಈ ಗಜಗಾಮಿನಿ ಲೋಕಮಾತೆ ಶ್ರೀ
ಮಹಾಕಾಳಿ ಎಂತೆಂಬುದನು
ಕಮಲಾಕಾಂತನು ಊಹಿಪನು.

ಮತ್ತೆ ರಾಮಲಾಲ ಹಾಡಿದ:

ನಟ್ಟಿರುಳ ನಭದಂತೆ ಕಾಳಿಮಾ ತನುವಾಗಿ
ಧಾವಿಸುವ ನಾರಿ ಯಾರು ?
ರಕ್ತಸಾಗರದಲ್ಲಿ ನೀಲ ಕಮಲದ ತೆರದಿ
ರಣರಂಗದಲಿ ಕುಣಿವ ಇವಳು ಯಾರು ?
ಯಾರೀ ದಿಗಂಬರೆಯು, ತನ್ನ ಮೂರ್ ಕಣ್ಣನೂ
ದಿಕ್ಕುದಿಕ್ಕಿಗೆ ಇಂತು ಹೊರಳಿಸುವಳು ?
ಶೂಲ ಪಾಣಿಯನಿಂತು ಶವದಂತೆ ಮೆಟ್ಟುತ್ತ
ತಿರೆ ನಡುಗೆ ನರ್ತನವ ಗೈಯ್ಯುವವಳು ?

ಪರಮಹಂಸರು ಪ್ರೇಮಾನಂದದಿಂದ ನರ್ತಿಸುತ್ತಿದ್ದಾರೆ. ನರ್ತಿಸುತ್ತ ನರ್ತಿಸುತ್ತ ಪರಮಹಂಸರೇ ಹಾಡಲಾರಂಭಿಸಿದರು:

ಸಾಗುತಿಹುದು ಚಿತ್ತಭೃಂಗ
ಕಾಳೀಪದನೀಲಕಮಲ ಮಧುಪಾನದ ಆಸೆಗೆ!
ಸಕಲ ವಿಷಯ ಕುಸುಮರಸವು

ಎಷ್ಟಾದರು ತುಚ್ಛವೆಂದು
ತಿಳಿಯಿತಿಂದು ಮನಸಿಗೆ!

ತಾಯಪಾದಕಮಲನೀಲ
ಮಧುಕುಡಿಯುವ ಭೃಂಗನೀಲ
ನೀಲದಲ್ಲಿ ನೀಲಸೇರಿ ನೀಲವಾದ ಪರಿಯನು,
ಕಂಡು ಬೆರಗುವಡುವನು.
ಸುಖಬಂದರೆ ಹಿಗ್ಗದೆ
ನೋವಿನಲ್ಲಿ ಕುಗ್ಗದೆ
ಆನಂದದ ಸಿಂಧುವಿನಲಿ ಸಿರುತ ತೇಲುತಿರುವನು
ಭಕ್ತ ಕಮಲಕಾಂತನು!

ಹಾಡುವುದು, ನರ್ತಿಸುವುದು ಮುಗಿಯಿತು. ಭಕ್ತರೆಲ್ಲ ಮತ್ತೆ ನೆಲದಮೇಲೆ ಕುಳಿತುಕೊಂಡರು. ಪರಮಹಂಸರು ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು. ಅವರು ಮಾಸ್ಟರಿಗೆ ಹೇಳುತ್ತಿದ್ದಾರೆ: "ನೀನು ಬರದೆ ಹೋದೆಯಲ್ಲ. ಚಂಡೀಕೀರ್ತನೆ ಎಷ್ಟು ಚೆನ್ನಾಗಿ ನಡೆಯಿತು!"

ಭಕ್ತರಲ್ಲಿ ಕೆಲವರು ಕಾಳೀದೇವಾಲಯಕ್ಕೆ ಭಗವತಿಯ ದರ್ಶನಕ್ಕಾಗಿ ಹೊರಟರು. ದರ್ಶನಮಾಡಿದನಂತರ ಕೆಲವರು ಒಬ್ಬೊಬ್ಬರೆ ಗಂಗಾತೀರದ ಹಂತಗಳ ಮೇಲೆ ನಿರ್ಜನ ಪ್ರದೇಶಗಳಲ್ಲಿ ಕುಳಿತು ಮಾನಸಿಕವಾಗಿ ನಾಮ ಜಪ ಮಾಡುತ್ತಿದ್ದಾರೆ. ಆಗ ಸುಮಾರು ಹನ್ನೊಂದು ಘಂಟೆ. ಮಹಾನಿಶಿ. ಗಂಗೆಯಲ್ಲಿ ಉಬ್ಬರ ಬರುತ್ತಿದೆ— ಆಕೆ ಉತ್ತರವಾಹಿನಿಯಾಗಿದ್ದಾಳೆ. ದಡದಲ್ಲಿದ್ದ ದೀಪಗಳು ಆಕೆಯ ಕಪ್ಪು ನೀರಿನಲ್ಲಿ ಒಮ್ಮೊಮ್ಮೆ ಕಾಣಿಸಿ ಕೊಳ್ಳುತ್ತಿವೆ.

ರಾಮಲಾಲ ಪೂಜಾಪದ್ಧತಿಯ ಪುಸ್ತಕವನ್ನು ಕೈಯಲ್ಲಿ ಹಿಡಿದು ಭಗವತಿಯ ಗರ್ಭಗುಡಿಯನ್ನು ಪ್ರವೇಶಿಸಿದನು. ಮಣಿ ಹೊರಗೆ ನಿಂತೆ ಭಗವತಿಯನ್ನು ನಟ್ಟ ದೃಷ್ಟಿಯಿಂದ ನೋಡುತ್ತಿರವುದನ್ನು ಕಂಡು ರಾಮಲಾಲ ಆತನನ್ನು ಕೇಳಿದನು: "ಏನು, ಒಳಕ್ಕೆ ಬರುವಿರೇನು?" ಎಂದು. ಮಣಿ ಅತ್ಯಂತ ಸಂತುಷ್ಟನಾಗಿ ಒಳಕ್ಕೆ ಹೋಗಿ ಕುಳಿತು ಕೊಂಡನು. ನೋಡುತ್ತಾನೆ ಭಗವತಿಗೆ ಬಹಳ ಚೆನ್ನಾಗಿ ಅಲಂಕಾರ ವಾಗಿದೆ. ಗರ್ಭಗುಡಿ ಬೆಳಕಿನಿಂದ ಕಂಗೊಳಿಸುತ್ತಿದೆ. ತಾಯಿ ಮುಂಭಾಗ ದಲ್ಲಿ ಎರಡು ದೀಪದ ಕಂಬಗಳು ಉರಿಯುತ್ತಿವೆ. ಮೇಲ್ಕಾವಣಿಯಿಂದ

ಒಂದು ದೀಪದ ಗೊಂಚಲು ನೇತಾಡುತ್ತಿದೆ. ದೇವಾಲಯದ ತಟ್ಟೆಗಳು ನೈವೇದ್ಯದಿಂದ ತುಂಬಿವೆ. ತಾಯ ಪಾದಪದ್ಮಗಳು ಜಾವಾ ಬಿಲ್ವದಳಗಳಿಂದ ಅಲಂಕೃತವಾಗಿವೆ. ನಾನಾವಿಧ ಪುಷ್ಪಮಾಲಿಕೆಗಳಿಂದ ಆಕೆಯ ಕೊರಳು ಶೋಭಿಸುತ್ತಿದೆ. ಹತ್ತಿರವೆ ಚಾಮರ ನೇತಾಡುತ್ತಿದ್ದುದು ಮಣಿಯ ಕಣ್ಣಿಗೆ ಬಿತ್ತು. ಪರಮಹಂಸರು ಅನೇಕವೇಳೆ ಅದರಿಂದ ಭಗವತಿಗೆ ಶೈತ್ಯೋಪಚಾರ ಮಾಡಿರುವುದು ಆತನ ಮನಸ್ಸಿಗೆ ಥಟ್ಟನೆ ಹೊಳೆಯಿತು. "ತಾನೂ ಸಹ ಅದರಿಂದ ಭಗವತಿಗೆ ಶೈತ್ಯೋಪಚಾರ ಮಾಡಬಹುದೆ?" ಎಂದು ಅಂಜುತ್ತ ರಾಮಲಾಲನನ್ನು ಕೇಳಿದನು. ರಾಮಲಾಲ ಅನುಮತಿ ಕೊಟ್ಟ. ಬಳಿಕ ಆತ ಭಗವತಿಗೆ ಚಾಮರಸೇವೆ ಮಾಡಲು ಆರಂಭಿಸಿದ. ಆಗ ಪೂಜೆ ಇನ್ನೂ ಆರಂಭವಾಗಿರಲಿಲ್ಲ.

ಭಕ್ತರು ಯಾರು ಯಾರು ಹೊರಗೆ ಹೋಗಿದ್ದರೊ ಅವರೆಲ್ಲ ಮತ್ತೆ ಪರಮಹಂಸರ ಕೊಠಡಿಗೆ ಬಂದು ಸೇರಲಾರಂಭಿಸಿದರು. ವೇಣೀಪಾಲ ಪರಮಹಂಸರನ್ನು ಆಹ್ವಾನಿಸಿದ್ದಾನೆ. ಅವರು ನಾಳೆದಿನ ಸಿಂಥಿ ಬ್ರಾಹ್ಮ ಸಮಾಜಕ್ಕೆ ಹೋಗಬೇಕಾಗಿದೆ. ಆದರೆ ಆಹ್ವಾನ ಪತ್ರದಲ್ಲಿ ತಪ್ಪು ತಾರೀಖನ್ನು ಹಾಕಿದ್ದಾನೆ.

ಶ್ರೀರಾಮಕೃಷ್ಣರು ಮಣಿಗೆ: "ವೇಣೀಪಾಲ ನನ್ನನ್ನು ಆಹ್ವಾನಿಸಿದ್ದಾನೆ. ಆದರೆ ಹೀಗೇಕೆ ಬರೆದುಬಿಟ್ಟ ಹೇಳು ನೋಡೋಣ?"

ಮಾಸ್ಟರ್: ಹೌದು, ಬರೆದದ್ದು ಸರಿಯಾಗಿಲ್ಲ. ಆದರೆ ಅಷ್ಟೊಂದು ಯೋಚಿಸಿ ಮಾಡಿ ನೋಡಿ ಬರೆಯಲಿಲ್ಲ ಅಂತ ಕಾಣುತ್ತೆ."

ವೇಣೀಪಾಲನ ಪತ್ರದ ವಿಷಯವಾಗಿ ಮಾತನಾಡುತ್ತಿದ್ದಾಗ ಪರಮಹಂಸರು ಕೊಠಡಿಯ ಮಧ್ಯೆ ನಿಂತಿದ್ದರು. ಬಾಬುರಾಮ ಅವರ ಹತ್ತಿರ ನಿಂತಿದ್ದ. ಬಳಿಕ ಪರಮಹಂಸರು ಬಾಬುರಾಮನ ಮೇಲೆ ಒರಗಿ ನಿಂತರು. ಒಡನೆಯೆ ಸಮಾಧಿಸ್ಥರಾಗಿಬಿಟ್ಟಿದ್ದಾರೆ. ಭಕ್ತರೆಲ್ಲ ಅವರ ಸುತ್ತಲೂ ಸುತ್ತುಗಟ್ಟಿ ನಿಂತಿದ್ದಾರೆ. ಅವರೆಲ್ಲ ಆ ಸಮಾಧಿಸ್ಥ ಪುರುಷರನ್ನ ಆಶ್ಚರ್ಯ ಚಕಿತರಾಗಿ ನೋಡುತ್ತಿದ್ದಾರೆ. ಬಲಗಾಲನ್ನು ಸ್ವಲ್ಪ ಮುಂದಕ್ಕೆ ಚಾಚಿ ನಿಂತಿದ್ದಾರೆ; ಭುಜ ಒಂದು ಕಡೆಗೆ ಸ್ವಲ್ಪ ಬಾಗಿದೆ; ಬಾಬುರಾಮನ ಹೆಗಲ ಮೇಲೆ ಕಿವಿಯ ಸಮೀಪದಲ್ಲಿ ಕೈ ಇಟ್ಟಿದ್ದಾರೆ. ಸ್ವಲ್ಪ ಹೊತ್ತಿನ ಮೇಲೆ ಸಮಾಧಿ ಇಳಿಮುಖವಾಯಿತು. ಇನ್ನೂ ನಿಂತೆ ಇದ್ದಾರೆ. ಈಗ ತಮ್ಮ ಕೆನ್ನೆಯ ಮೇಲೆ ಕೈ ಇಟ್ಟುಕೊಂಡು ಏನೊ ಬಹಳವಾಗಿ

ಚಿಂತಿಸುತ್ತಿರುವಂತೆ ನಿಂತಿದ್ದಾರೆ. ಈಗ ಸ್ವಲ್ಪ ನಕ್ಕು ಭಕ್ತರನ್ನು ಸಂಬೋಧಿಸುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಎಲ್ಲವನ್ನು ನೋಡಿದೆ—ಯಾರು ಎಷ್ಟು ಎಷ್ಟು ದೂರ ಮುಂದುವರಿದಿದಾರೆ ಅಂಬುದನ್ನ. ರಾಖಾಲ, ಇವನು (ಮಣಿ) ಸುರೇಂದ್ರ, ಬಾಬುರಾಮ, ಇನ್ನೂ ಅನೇಕರನ್ನು ನೋಡಿದೆ."

ಹಾಜರಾ: "ನನ್ನ?"

ಶ್ರೀರಾಮಕೃಷ್ಣರು: "ನೋಡಿದೆ."

ಹಾಜರಾ: "ಬಂಧನ ಹೆಚ್ಚಾಗಿದೆಯೆ?"

ಶ್ರೀರಾಮಕೃಷ್ಣರು: "ಇಲ್ಲ."

ಹಾಜರಾ: "ನರೇಂದ್ರನ್ನ ನೋಡಿದಿರೇನು?"

ಶ್ರೀರಾಮಕೃಷ್ಣರು: "ನೋಡಲಿಲ್ಲ,—ಆದರೆ ಈಗಲೂ ಹೇಳಬಲ್ಲೆ;–ಒಂದು ಸ್ವಲ್ಪ ತೊಡಕಿನಲ್ಲಿ ಸಿಕ್ಕಿಬಿದ್ದಿದ್ದಾನೆ;–ಆದರೆ ಎಲ್ಲರಿಗೂ ದೊರೆತುಬಿಡುವುದನ್ನ ನೋಡಿದೆ. (ಮಣಿ ಕಡೆ ದೃಷ್ಟಿಹಾಕಿ) ಎಲ್ಲರೂ ಅವಿತುಕುಳಿತಿರುವುದನ್ನು ನೋಡಿದೆ."

ಭಕ್ತರೆಲ್ಲ ಆಶ್ಚರ್ಯಚಕಿತರಾಗಿದಾರೆ; ದೈವವಾಣಿ ಸದೃಶವಾದ ಈ ಅದ್ಭುತ ಸಂವಾದವನ್ನು ಕೇಳುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಆದರೆ ಇವನನ್ನು (ಬಾಬುರಾಮನನ್ನು) ಮುಟ್ಟೆ ಆ ಭಾವ ಬಂದಿತು."

ಹಾಜರಾ "ಫಸ್ಟ್ ಯಾರು?"

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಇದ್ದರು. ಬಳಿಕ ಹೇಳಿದರು, "ನಿತ್ಯ ಗೋಪಾಲನಂಥವರು ಕೆಲವರು ಇದ್ದಿದ್ದರೆ!" ಮತ್ತೆ ಯೋಚಿಸುತ್ತಿದ್ದಾರೆ. ಈಗಲೂ ಅದೇ ಭಾವದಲ್ಲೇ ನಿಂತಿದ್ದಾರೆ. ಮತ್ತೆ ಹೇಳಿದರು: "ಅಧರಸೇನ—ತನ್ನ ಕೆಲಸ ಕಾರ್ಯಗಳನ್ನು ಸ್ವಲ್ಪ ಕಡಮೆ ಮಾಡಿಕೊಳ್ಳುವುದಾದರೆ;— ಆದರೆ ಸಾಹೇಬ ರೇಗಿಕೊಂಡುಬಿಟ್ಟರೆ ಎಂಬ ಭಯ! ಆತ ಹೇಳಿಬಿಟ್ಟರೆ, 'ಎಲ್ಲ ಏನಿದು ಅಂತ!' ಎಂದು." (ಎಲ್ಲರೂ ಸ್ವಲ್ಪ ನಕ್ಕರು.)

ಈಗ ಪರಮಹಂಸರು ತಮ್ಮ ಸ್ವಂತ ಜಾಗದಲ್ಲಿ ಹೋಗಿ ಕುಳಿತುಕೊಂಡಿದ್ದಾರೆ. ಭಕ್ತರೆಲ್ಲ ನೆಲದ ಮೇಲೆ ಕುಳಿತಿದ್ದಾರೆ. ಬಾಬುರಾಮ

ಮತ್ತು ಕಿಶೋರಿ ಚಿಕ್ಕ ಮಂಚದ ಹತ್ತಿರಕ್ಕೆ ಧಾವಿಸಿಬಂದು ಪರಮಹಂಸರ ಪಾದಗಳನ್ನು ಒತ್ತುತ್ತಿದ್ದಾರೆ.

ಶ್ರೀರಾಮಕೃಷ್ಣರು ಕಿಶೋರಿಯಕಡೆ ನೋಡಿ: "ಇಂದೇನು ಬಹಳ ಸೇವೆ!"

ರಾಮಲಾಲ ಬಂದು ಸಾಷ್ಟಾಂಗ ಪ್ರಣಾಮಮಾಡಿದ; ವಿಶೇಷ ಭಕ್ತಿಭಾವದಿಂದ ಪಾದಧೂಳಿಯನ್ನು ತೆಗೆದುಕೊಂಡ. ಭಗವತಿಯ ಪೂಜೆ ಪ್ರಾರಂಭಮಾಡಲು ಸನ್ನಿದ್ಧನಾಗಿದ್ದಾನೆ.

ರಾಮಲಾಲ ಪರಮಹಂಸರಿಗೆ: "ಪೂಜೆ ಪ್ರಾರಂಭಿಸಲೆ?"

ಶ್ರೀರಾಮಕೃಷ್ಣರು: "ಓಂ ಕಾಳಿ, ಓಂ ಕಾಳಿ. ಸಾವಧಾನದಿಂದ ಪೂಜೆಮಾಡು. ಜೊತೆಗೆ ಹೋತನ ಬಲಿ ಬೇರೆ ಕೊಡಬೇಕಾಗಿದೆ!"

ಮಧ್ಯರಾತ್ರಿಯಾಗಿದೆ. ಪೂಜೆ ಪ್ರಾರಂಭವಾಗಿದೆ. ಪರಮಹಂಸರು ಪೂಜೆ ನೋಡಲು ಬರುತ್ತಿದ್ದಾರೆ. ದೇವಾಲಯಕ್ಕೆ ಬಂದು ಭಗವತಿಯ ಹತ್ತಿರ ನಿಂತು ನೋಡುತ್ತಿದ್ದಾರೆ. ಈಗ ಬಲಿ ಆಗುತ್ತದೆ. ಜನರು ಆಕಾಂಕ್ಷಿತರಾಗಿ ನಿಂತುಕೊಂಡಿದ್ದಾರೆ. ವಧ್ಯಪಶುವಿಗೆ ಪ್ರೋಕ್ಷಣೆಮಾಡಿದರು. ಅದನ್ನು ಈಗ ಬಲಿಕೊಡಲು ಎಳೆದುಕೊಂಡು ಹೋಗುತ್ತಿದ್ದಾರೆ. ಪರಮಹಂಸರು ದೇವಾಲಯವನ್ನು ಬಿಟ್ಟು ತಮ್ಮ ಕೊಠಡಿಗೆ ಹಿಂದಿರುಗಿ ಬಂದುಬಿಟ್ಟರು. ಪರಮಹಂಸರಿಗೆ ಈಗ ಆ ಅವಸ್ಥೆ ಇಲ್ಲ; ಪಶುವಧೆ ನೋಡಲು ಅವರ ಕೈಯಲ್ಲಾಗುತ್ತಿಲ್ಲ.

ರಾತ್ರಿ ಎರಡು ಘಂಟೆಯವರೆಗೆ ಅನೇಕ ಭಕ್ತರು ಕಾಳೀದೇವಾಲಯದಲ್ಲಿ ಕುಳಿತುಕೊಂಡಿದ್ದರು. ಹರಿಪದ ಕಾಳೀದೇವಾಲಯಕ್ಕೆ ಬಂದು ಹೇಳಿದ: "ಏಳಿ, ಪರಮಹಂಸರು ಕರೆಯುತ್ತಿದ್ದಾರೆ; ಪ್ರಸಾದ ಎಲ್ಲ ಸಿದ್ಧವಾಗಿದೆ" ಎಂದು. ಭಕ್ತರು ದೇವಿಯ ಪ್ರಸಾದ ಸ್ವೀಕರಿಸಿದರು; ಬಳಿಕ ಎಲ್ಲೆಲ್ಲಿ ಸ್ಥಳ ಸಿಕ್ಕಿತೊ ಅಲ್ಲಲ್ಲ ಮಲಗಿ ನಿದ್ರಿಸಿದರು.

ಬೆಳಗಾಯಿತು. ಭಗವತಿಯ ಪ್ರಾತಃಕಾಲದ ಮಂಗಳಾರತಿ ಮುಗಿಯಿತು. ಭಗವತಿಯ ಎದುರಿಗೇನೇ ನಾಟ್ಯಮಂದಿರವಿದೆ. ಅಲ್ಲಿ ನಾಟಕ ನಡೆಯುತ್ತಿದೆ. ಭಗವತಿ ನಾಟಕ ನೋಡುತ್ತಿದ್ದಾಳೆ. ಪರಮಹಂಸರು ಸಿಮೆಂಟು ಹಾಕಿದ ಅಂಗಳದ ಮೂಲಕ ನಾಟಕ ನೋಡಲು ಬರುತ್ತಿದ್ದಾರೆ. ಮಣಿ ಅವರೊಡನೆಯೆ ಬರುತ್ತಿದ್ದಾನೆ— ಪರಮಹಂಸರಿಂದ ಬೀಳ್ಕೊಂಡು ಹೊರಡುವುದರಲ್ಲಿದ್ದಾನೆ.

ಶ್ರೀರಾಮಕೃಷ್ಣರು : "ಈಗ ಏಕೆ ಹೋಗುತ್ತೀಯೆ ?"

ಮಣಿ : "ನೀವು ಇಂದಿನ ಅಪರಾಹ್ನ ಸಿಂಥಿಗೆ ಹೋಗುತ್ತೀರಿ. ನನಗೂ ಅಲ್ಲಿಗೆ ಬರಲು ಇಚ್ಛೆ. ಅದಕ್ಕಾಗಿ ಮನೆಗೆ ಒಮ್ಮೆ ಹೋಗಿ ಬರುತ್ತೇನೆ."

ಮಾತುಮಾತಾಡುತ್ತ ಕಾಳೀದೇವಾಲಯದ ಹತ್ತಿರ ಬಂದುಬಿಟ್ಟರು. ಮಣಿ ಮೆಟ್ಟಲುಗಳ ಹತ್ತಿರ ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮ ಮಾಡಿದ.

ಪರಮಹಂಸರು : "ಒಳ್ಳೆಯದು, ಹೋಗಿ ಬಾ. ನನಗಾಗಿ ಅಗ್ಗವಾಗಿರುವ ಎರಡು ಸ್ನಾನದ ಚೌಕ ತೆಗೆದುಕೊಂಡು ಬಾ."

---

೩೨

## ಸಿಂಥಿಯ ಬ್ರಾಹ್ಮಸಮಾಜಕ್ಕೆ ಭೇಟಿ

**೧೯ ನೆ ಅಕ್ಟೋಬರ್ ೧೮೮೪, ಕಾರ್ತಿಕ ಶುಕ್ಲ ಪಾಡ್ಯಮಿ, ಭಾನುವಾರ.**

ಬ್ರಾಹ್ಮಭಕ್ತರೆಲ್ಲ ಸಿಂಥಿಯ ಬ್ರಾಹ್ಮಸಮಾಜಕ್ಕೆ ಬಂದು ಸೇರಿದ್ದಾರೆ. ಇಂದು ಸಮಾಜದ ಶರದೃತುವಿನ ಮಹೋತ್ಸವ. ವೇಣೀಮಾಧವಪಾಲನ ಮನೋಹರ ಉದ್ಯಾನವನದಲ್ಲಿ ಬ್ರಾಹ್ಮಸಮಾಜದ ಅಧಿವೇಶನ ನಡೆಯುಲಿದೆ. ಪ್ರಾತಃಕಾಲದ ಉಪಾಸನೆಗಳೆಲ್ಲ ಮುಗಿದಿದೆ. ಪರಮಹಂಸರು ಅಪರಾಹ್ನ ನಾಲ್ಕೂವರೆ ಘಂಟೆಯ ಸಮಯಕ್ಕೆ ಅಲ್ಲಿಗೆ ಬಂದರು. ಅವರ ಗಾಡಿ ಉದ್ಯಾನ ವನದ ಮಧ್ಯೆ ನಿಂತಿದೆ. ಭಕ್ತರು ಸುಮ್ಮನೆ ಗುಂಪು ಗುಂಪಾಗಿ ಅವರ ಸುತ್ತಲೂ ನೆರೆಯುತ್ತಿದ್ದಾರೆ. ಪ್ರಾಂಗಣದ ಮಧ್ಯೆ ಸಮಾಜದ ವೇದಿಕೆಯನ್ನು ನಿರ್ಮಿಸಿದಾರೆ. ಅದರ ಮುಂಭಾಗದಲ್ಲಿ ಸಭಾಂಗಣ. ಅಲ್ಲಿ ಪರಮಹಂಸರು ಕುಳಿತುಕೊಂಡಿದಾರೆ. ಭಕ್ತರು ಅವರ ಸುತ್ತಲೂ ಸುತ್ತುಗಟ್ಟಿ ಕುಳಿತುಕೊಂಡಿದಾರೆ. ವಿಜಯ, ತ್ರೈಲೋಕ್ಯ ಇವರೆ ಮೊದಲಾದ ಅನೇಕ ಬ್ರಾಹ್ಮಭಕ್ತರು ಕುಳಿತಿದ್ದಾರೆ. ಅವರ ಮಧ್ಯೆ ಒಬ್ಬ ಬ್ರಾಹ್ಮಭಕ್ತ ಸಬ್-ಜಡ್ಜಿ ಕೂಡ ಇದ್ದಾನೆ.

ಸಮಾಜಗೃಹ ಮಹೋತ್ಸವದ ದೆಸೆಯಿಂದ ಒಂದು ವಿಚಿತ್ರ ಶೋಭೆಯನ್ನು ಧರಿಸಿದೆ. ಅಲ್ಲಲ್ಲಿ ವಿವಿಧ ವರ್ಣಗಳ ಪತಾಕೆ ಹಾರಾಡುತ್ತಿವೆ. ಆ ಗೃಹದ ಮಧ್ಯೆ ಅಂದರೆ ಕಿಟಕಿ ಬಾಗಿಲುಗಳಲ್ಲಿ ತಳಿರುತೋರಣಗಳನ್ನು ಆ ರೀತಿಯಾಗಿ ಅಲಂಕಾರಮಾಡಿದಾರೆ, ಅಲ್ಲೆಲ್ಲ ಮರಗಿಡಗಳು ನಿಜವಾಗಿ ಬೆಳೆದಿರುವುವೊ ಏನೊ ಎಂಬಂತೆ ನಯನರಂಜಿತವಾಗಿದೆ. ಬಳಿಯಲ್ಲಿಯೆ ಇರುವ ಸರೋವರದ ಸ್ವಚ್ಛ ಸಲಿಲದಲ್ಲಿ ಶರದೃತುವಿನ ಸುನೀಲ ನಭೋಮಂಡಲ ಪ್ರತಿಬಿಂಬಿತವಾಗುತ್ತಿದೆ. ಉದ್ಯಾನವನದ ಕೆಂಪುಕೆಂಪಾಗಿರುವ ರಸ್ತೆಗಳ ಇಕ್ಕೆಲಗಳಲ್ಲಿಯೂ ಹೂವು ಹಣ್ಣು ಮರಗಿಡಗಳ ಸಾಲು ಹಬ್ಬಿದೆ. ಇಂದು ಪರಮಹಂಸರ ಶ್ರೀಮುಖದಿಂದ ಬರುವ ವೇದವಾಣಿಯನ್ನು ಭಕ್ತರು ಮತ್ತೆ ಕೇಳುವ ಸುಯೋಗವಿದೆ: ಯಾವ ವಾಣಿ ಆರ್ಯ ಋಷಿಗಳ ಮುಖದಿಂದ ವೇದರೂಪವಾಗಿ ಏಕಕಾಲದಲ್ಲಿ ಹೊರಬಿದ್ದಿತ್ತೊ—

ಯಾವ ವಾಣಿ ಮತ್ತೊಮ್ಮೆ ನರರೂಪಧಾರಿ, ಪರಮಸನ್ಯಾಸಿ, ಬ್ರಹ್ಮಗತ ಪ್ರಾಣ, ಜೀವರ ದುಃಖಿಗಳಿಗಾಗಿ ಕಾತರ, ಭಕ್ತವತ್ಸಲ, ಭಕ್ತಾವತಾರ, ಹರಿಪ್ರೇಮವಿಹ್ವಲ ಯೇಸುವಿನ ಬಾಯಿಂದ ಬೆಸ್ತರ ಜಾತಿಗೆ ಸೇರಿದ ನಿರಕ್ಷರ ಕುಕ್ಷಿಗಳಾದ ಆತನ ಹನ್ನೆರಡು ಜನ ಶಿಷ್ಯರ ಕಿವಿಗೆ ಬಿದ್ದಿತ್ತೊ — ಯಾವ ವಾಣಿ ಪುಣ್ಯಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಭಗವಾನ್ ಶ್ರೀಕೃಷ್ಣನ ಮುಖದಿಂದ ಶ್ರೀಮದ್ಭಗವದ್ಗೀತೆ ರೂಪದಿಂದ ಏಕಕಾಲದಲ್ಲಿ ಹೊರಹೊರಟಿತ್ತೊ — ಸಾರಥಿ ವೇಷಧಾರಿ ಮಾನವಾಕಾರ ಸಚ್ಚಿದಾನಂದ ಗುರುವಿನ ತುಟಿಗಳಿಂದ ಮೇಘಗಂಭೀರ ವಾಣಿಯ ಮೂಲಕ ಬಂದ,

"ಕವಿಂ ಪುರಾಣಮ್ ಅನುಶಾಸಿತಾರಮ್ ಅಣೋರಣೀಯಾನ್ ಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪಮ್ ಆದಿತ್ಯವರ್ಣಂ ತಮಸಃ ಪರಸ್ತಾತ್ ॥
ಪ್ರಯಾಣಕಾಲೆ ಮನಸಾಚಲೇನ ಭಕ್ತ್ಯಾ ಯುಕ್ತೊ ಯೋಗಬಲೇನ ಚೈವ ।
ಭ್ರುವೋರ್ಮಧ್ಯೆ ಪ್ರಾಣಮಾವೇಶ್ಯ ಸಮ್ಯಕ್ ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥
ಯದಕ್ಷರಂ ವೇದವಿದೊ ವದಂತಿ ವಿಶಂತಿ ಯದ್ಯತಯೊ ವೀತರಾಗಾಃ ।
ಯದಿಚ್ಛಂತೊ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೆ ॥ * (ಭ. ಗೀ. viii. ೯ – ೧೧)

ಇತ್ಯಾದಿಯನ್ನು ವಿನಯ ನಮ್ರ ವ್ಯಾಕುಲ ಗುಡಾಕೇಶ ಕೌಂತೇಯ ಪಾನಮಾಡಿದ್ದನೊ, ಅದನ್ನೆ ಪರಮಹಂಸರ ಮೂಲಕ ಕೇಳುವ ಸುಯೋಗ ಇಂದು.

ಪರಮಹಂಸರು ಸಭಾಂಗಣದಲ್ಲಿ ಕುಳಿತನಂತರ ಬಹಳ ಸುಂದರವಾಗಿ ನಿರ್ಮಿತವಾದ ಸಮಾಜ ವೇದಿಕೆಯ ಕಡೆ ಅವರ ದೃಷ್ಟಿ ಬೀಳುವುದೆ ತಡ ಒಡನೆಯೆ ಬಗ್ಗಿ ಪ್ರಣಾಮಮಾಡಿದರು. ವೇದಿಕೆಯ ಮೇಲೆ ಭಗವಂತನ ಕಥಾಶ್ರವಣ ನಡೆಯುತ್ತದೆ— ಅದಕ್ಕಾಗಿ ಅವರು ಭಾವಿಸುತ್ತಿದ್ದಾರೆ: "ವೇದಿಕೆ ಒಂದು ಪುಣ್ಯಸ್ಥಳ; ಅಚ್ಯುತನ ಕಥಾಶ್ರವಣವಾಗುವುದರಿಂದ ಅಲ್ಲಿ ಸರ್ವತೀರ್ಥಗಳು ಸಮಾಗಮವಾಗುತ್ತವೆ" ಎಂದು. ಕೋರ್ಟನ್ನು ನೋಡಿದೊಡನೆಯೆ ಮೊಕದ್ದಮೆಯ ಮತ್ತು ಜಡ್ಜಿಯ

---

* ಪರಿಶಿಷ್ಟ ೩ ರಲ್ಲಿ ೨ ನ್ನು ನೋಡಿ.

ಜ್ಞಾಪಕ ಬರುತ್ತದೆ. ಅದೇ ರೀತಿಯಾಗಿ ಈ ಹರಿಕಥಾಶ್ರವಣ ಸ್ಥಾನವನ್ನು ನೋಡಿ ಪರಮಹಂಸರಿಗೆ ಭಗವಂತನ ಉದ್ದೀಪನೆಯಾಗಿಬಿಟ್ಟಿದೆ.

ತ್ರೈಲೋಕ್ಯ ಹಾಡುತ್ತಿದ್ದಾನೆ:

ಪರಮಹಂಸರು ತ್ರೈಲೋಕ್ಯನಿಗೆ: "ನಿನ್ನ ಆ ಹಾಡು, 'ನನ್ನನೂ ಉನ್ಮತ್ತನಾಗಿಸೆಲೆ ತಾಯೆ' ಎಂಬ ಹಾಡು ಬಹಳ ಚೆನ್ನಾಗಿದೆ. ಅದನ್ನು ಸ್ವಲ್ಪ ಹಾಡು."

ತ್ರೈಲೋಕ್ಯ ಹಾಡಿದ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ
ನಿನ್ನ ಭಕ್ತಿಯ ಮಧುರ ಮಧುಪಾನದಿಂದ! ........

ಹಾಡನ್ನು ಕೇಳುತ್ತ ಕೇಳುತ್ತ ಇದ್ದಹಾಗೆಯೆ ಪರಮಹಂಸರಿಗೆ ಭಾವಪರಿವರ್ತನೆಯಾಗಿದೆ. ಒಡನೆಯೆ ಸಮಾಧಿಸ್ಥರಾಗಿಬಿಟ್ಟಿದ್ದಾರೆ. ಕರ್ಮೇಂದ್ರಿಯ ಜ್ಞಾನೇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ ಇವುಗಳೆಲ್ಲದರ ಆಸ್ತಿತ್ವವೇ ಇಲ್ಲದಂತೆ ಕಾಣುತ್ತಿದೆ. ದೇಹ ಚಿತ್ರಿತ ಗೊಂಬೆಯಂತಿದೆ. ಸ್ವಲ್ಪ ಹೊತ್ತಿನ ಮೇಲೆ ಪರಮಹಂಸರು ಕಿಂಚಿತ್ ಪ್ರಕೃತಿಸ್ಥರಾಗಿ ಭಾವಾವಸ್ಥೆಯಲ್ಲಿಯೆ ಬ್ರಾಹ್ಮಭಕ್ತರಿಗೆ ಉಪದೇಶ ಮಾಡುತ್ತಿದ್ದಾರೆ. ಅವರ ಭಾವ ಭಗವದ್ಭಾವನೆಯಿಂದ ಘನೀಭೂತವಾಗಿರುವಂತೆ ಕಾಣುತ್ತಿದೆ; ಉನ್ಮತ್ತರಂತೆ ಮಾತನಾಡುತ್ತಿದ್ದಾರೆ. ಅವರ ಭಾವದ ತೀವ್ರತೆ ಕ್ರಮಕ್ರಮೇಣ ಕಡಮೆಯಾಗುತ್ತಾ ಬರುತ್ತಿದೆ. ಕೊನೆಗೆ ಎಂದಿನ ಸಹಜಾವಸ್ಥೆ ಬಂದಿದೆ.

ಶ್ರೀರಾಮಕೃಷ್ಣರು ಭಾವಸ್ಥರಾಗಿ: "ಹೇ ತಾಯೆ! ನನಗೆ ಕಾರಣಾನಂದ ಬೇಡ, ಸಿದ್ಧಿ ಬೇಕು.

(ಭಕ್ತರಿಗೆ) "'ಸಿದ್ಧಿ' ಅಂದರೆ ವಸ್ತುಲಾಭ, ಅಷ್ಟಸಿದ್ಧಿಗಳ ಸಿದ್ಧಿಯಲ್ಲ—ಅಣಿಮಾ ಲಘಿಮಾದಿಗಳಲ್ಲ. ಸಿದ್ಧಿಗಳ ವಿಷಯವಾಗಿ ಶ್ರೀಕೃಷ್ಣ ಅರ್ಜುನನಿಗೆ ಹೇಳಿದ: 'ಸಖ! ನೋಡು, ಅಷ್ಟಸಿದ್ಧಿಗಳಲ್ಲಿ ಎಲ್ಲದರ ಮಾತುಬಿಡು, ಒಂದೇ ಒಂದು ಯಾರಿಗಾದರೂ ಲಭಿಸಿದ್ದರೂ ಆ ವ್ಯಕ್ತಿ ನನ್ನನ್ನು ಪಡೆಯಲಾರ' ಎಂದು. ಏಕೆಂದರೆ, ಸಿದ್ಧಿ ಇದ್ದಿತು ಅಂದರೆ, ಅಹಂಕಾರ ಇದ್ದೇ ಇರುತ್ತದೆ. ಅಹಂಕಾರ ಲೇಶಮಾತ್ರ ಇದ್ದರೂ ಭಗವಂತನನ್ನ ಪಡೆಯಲಾಗೋದಿಲ್ಲ.

"ಒಂದು ವಿಷಯ. ಭಕ್ತರಲ್ಲಿ ನಾಲ್ಕು ಗುಂಪಿನವರಿದ್ದಾರೆ: ಪ್ರವರ್ತಕ, ಸಾಧಕ, ಸಿದ್ಧ, ಸಿದ್ಧರಸಿದ್ಧ. ಈಗ ತಾನೆ ಭಗವಂತನ ಪೂಜೆ ಪುರಸ್ಕಾರಗಳಲ್ಲಿ ತೊಡಗಿರುವವನಿಗೆ 'ಪ್ರವರ್ತಕ' ಎಂದು ಹೆಸರು. ಅವನು ಹಣೆಗೆ ಮೈಗೆ ಕೈಗೆ ತಿಲಕ ಮೊದಲಾದುವನ್ನು ಹಚ್ಚಿಕೊಳ್ಳುತ್ತಾನೆ. ಕೊರಳಿಗೆ ತುಳಸಿ-ಗಿಳಸಿ ಮಾಲೆ ಹಾಕಿಕೊಳ್ಳುತ್ತಾನೆ, ಬಾಹ್ಯಕವಾಗಿ ಬಹಳ ಆಚಾರವಂತನಾಗಿರುತ್ತಾನೆ. ಸಾಧಕ ಅಂಬುವನು ಇನ್ನೂ ಸ್ವಲ್ಪ ಮುಂದುವರಿದಿರುತ್ತಾನೆ; ಆತನಲ್ಲಿ ಬಾಹ್ಯಾಡಂಬರ ಕಡಮೆಯಾಗಿ ಬಿಟ್ಟಿರುತ್ತದೆ. ಭಗವಂತನನ್ನು ಪಡೆಯಲು ವ್ಯಾಕುಲನಾಗಿರುತ್ತಾನೆ. ಆತನ ಹೃದಯ ಭಗವಂತನನ್ನು ಕರೆಯುತ್ತಿರುತ್ತದೆ. ಆತ ಭಗವಂತನ ನಾಮವನ್ನು ಜಪಿಸುತ್ತಾನೆ, ಹೃತ್ಪೂರ್ವಕವಾದ ಪ್ರಾರ್ಥನೆ ಸಲ್ಲಿಸುತ್ತಾನೆ. ಸಿದ್ಧ ಅಂಬುವನು ಯಾರು ಗೊತ್ತೆ? ಯಾರಿಗೆ ಭಗವಂತನಿದಾನೆ ಆತನೆ ಸಮಸ್ತವನ್ನೂ ಮಾಡುತ್ತಿದ್ದಾನೆ ಎಂಬ ನಿಶ್ಚಯಾತ್ಮಕ ಬುದ್ಧಿ ಉಂಟಾಗಿದೆಯೊ, ಯಾರಿಗೆ ಆತನ ಸಾಕ್ಷಾತ್ಕಾರ ದೊರೆತಿದೆಯೊ ಆತನೇ ಸಿದ್ಧ. ಸಿದ್ಧರಸಿದ್ಧ ಯಾರು ಗೊತ್ತೆ? ಯಾರು ಆತನೊಡನೆ ಆಲಾಪಮಾಡಿದಾನೊ ಆತ ಸಿದ್ಧರ ಸಿದ್ಧ. ಅವರದು ಬರಿಯ ದರ್ಶನವೇ ಅಲ್ಲ; ಅವರಲ್ಲಿ ಕೆಲವರು ಪಿತೃಭಾವದಿಂದ ಕೆಲವರು ವಾತ್ಸಲ್ಯಭಾವದಿಂದ, ಕೆಲವರು ಮಧುರಭಾವದಿಂದ ಆತನೊಡನೆ ಅನ್ಯೋನ್ಯವಾಗಿ ಬೆರೆತಿದ್ದಾರೆ.

"ಕಟ್ಟಿಗೆಯಲ್ಲಿ ಬೆಂಕಿ ನಿಶ್ಚಯವಾಗಿ ಇದೆ ಎಂಬ ನಂಬಿಕೆ ಒಂದು; ಕಟ್ಟಿಗೆಯಿಂದ ಬೆಂಕಿ ಉತ್ಪನ್ನಮಾಡಿ ಅನ್ನ ಬೇಯಿಸಿ ಊಟಮಾಡಿ ಶಾಂತಿ ಅಥವಾ ತೃಪ್ತಿಯನ್ನು ಪಡೆಯೋದು ಇನ್ನೊಂದು. ಇವೆರಡಕ್ಕೂ ಅಜಗಜಾಂತರ ವತ್ಯಾಸ.

"ಆಧ್ಯಾತ್ಮಿಕ ಅನುಭವಗಳು ಇಷ್ಟೇ ಎಂದು ಹೇಳಲಾಗೋದಿಲ್ಲ. ಒಂದು ದೊರೆತರೆ ಇನ್ನೊಂದು, ಅದು ದೊರೆತರೆ ಮತ್ತೊಂದು ಇದ್ದೇ ಇರುತ್ತದೆ.

(ಭಾವಾವಿಷ್ಟರಾಗಿ ಬ್ರಾಹ್ಮಭಕ್ತರನ್ನುದ್ದೇಶಿಸಿ) "ಇವರೆಲ್ಲ ಬ್ರಹ್ಮಜ್ಞಾನಿಗಳು, ನಿರಾಕಾರವಾದಿಗಳು; ಅದು ಒಳ್ಳೆಯದೆ.

(ಬ್ರಾಹ್ಮಭಕ್ತರಿಗೆ) "ಒಂದರಲ್ಲಿ ದೃಢ ವಿಶ್ವಾಸವುಳ್ಳವರಾಗಿರಿ— ಸಾಕಾರದಲ್ಲಿ ಇಲ್ಲದಿದ್ದರೆ ನಿರಾಕಾರದಲ್ಲಿ. ಆಗ ಮಾತ್ರ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ; ಇಲ್ಲದೆ ಇದ್ದರೆ ದೊರೆಯದು. ದೃಢತೆ

ಯೊಂದಿದ್ದರೆ ಸಾಕಾರವಾದಿಗೂ ಭಗವಂತನ ಸಾಕ್ಷಾತ್ಕಾರ ದೊರೆಯು ತ್ತದೆ, ನಿರಾಕಾರವಾದಿಗೂ ದೊರೆಯುತ್ತದೆ. ಕಜ್ಜಾಯವನ್ನು ನೆಟ್ಟ ನೆಟ್ಟಗೆ ಕಡಿದು ತಿನ್ನಿ ಅಡ್ಡಡ್ಡಲಾಗಿ ಕಡಿದು ತಿನ್ನಿ, ಹೇಗೆ ತಿಂದರೂ ಸಿಹಿ ಯಾಗೆ ಇರುತ್ತದೆ. (ಎಲ್ಲರೂ ನಗುತ್ತಾರೆ.)

"ಆದರೆ ದೃಢ ವಿಶ್ವಾಸ ಉಳ್ಳವರಾಗಿರಬೇಕು; ವ್ಯಾಕುಲರಾಗಿ ಆತನನ್ನು ಕರೆಯಬೇಕು. ಪ್ರಾಪಂಚಿಕರ ದೃಷ್ಟಿಯ ಭಗವಂತ ಎಂಥ ವನು ಎಂಬುದು ಗೊತ್ತೆ? ಮಕ್ಕಳು ಚಿಕ್ಕಮ್ಮ ದೊಡ್ಡಮ್ಮನ ಜಗಳ ಕೇಳಿಕೊಂಡಿದ್ದು ತಾವು ಆಟವಾಡುವಾಗ ಪರಸ್ಪರ, 'ಭಗವಂತನ ಆಣೆ ಯಾಗಿಯೂ' ಎಂಬುದಾಗಿ ಹೇಳುತ್ತವೆ. ಇವರದೂ ಅವರ ಭಗವಂತನ ಹಾಗೆ. ಅಥವಾ ಇದು ಒಬ್ಬ ಷೋಕಿಲಾಲ ಎಲಡಿಕೆ ಅಗಿಯುತ್ತ ಅಗಿ ಯುತ್ತ ಕೈಯಲ್ಲಿ ಬೆತ್ತ ಹಿಡಿದು ಪಾರ್ಕಿನಲ್ಲಿ ನಡೆಯುತ್ತ ನಡೆಯುತ್ತ ಒಂದು ಹೂವನ್ನು ಕಿತ್ತುಕೊಂಡು ತನ್ನ ಬಂಧುವಿಗೆ, 'ಆಹ! ಭಗವಂತ ಎಷ್ಟು ಬ್ಯೂಟಿಫುಲ್ (ಸುಂದರವಾದ) ಹೂವನ್ನು ಸೃಷ್ಟಿಸಿದಾನೆ!' ಎಂಬುದಾಗಿ ಹೇಳುವಾಗ ಭಗವಂತ ಎಂಬ ಪದವನ್ನು ಉಪಯೋಗಿಸಿದ ಹಾಗೆ. ಆದರೆ ಈ ಪ್ರಾಪಂಚಿಕರ ಭಗವಂತನ ಭಾವನೆ ಬಹಳ ಕ್ಷಣಿಕ ವಾದ್ದು, ಕಾದ ಬಾಣಲೆಯ ಮೇಲೆ ಬಿದ್ದ ಹನಿಯ ಹಾಗೆ.

"ಒಂದರ ಮೇಲೆ ದೃಢವಿಶ್ವಾಸವುಳ್ಳವರಾಗಿ ಇರಬೇಕು. ಆಳಕ್ಕೆ ಮುಳುಗಿ. ಹಾಗೆ ಮಾಡದಿದ್ದರೆ ಸಮುದ್ರದೊಳಗಿನ ರತ್ನಗಳನ್ನು ಪಡೆಯ ಲಾಗೋದಿಲ್ಲ. ನೀರಿನ ಮೇಲೆಯೆ ಕೇವಲ ತೇಲುತ್ತಿದ್ದರೆ ಪಡೆಯ ಲಾಗೋದಿಲ್ಲ."

ಹೀಗೆಂದು ಹೇಳಿ ಶ್ರೀರಾಮಕೃಷ್ಣರು ಯಾವ ಹಾಡಿನಿಂದ ಕೇಶವಾದಿ ಭಕ್ತರ ಮನಸ್ಸನ್ನು ಮುಗ್ಧಮಾಡುತ್ತಿದ್ದರೊ ಆ ಹಾಡನ್ನು ತಮ್ಮ ಮಧುರ ಕಂಠದಿಂದ ಹಾಡಲಾರಾರಂಭಿಸಿದ್ದಾರೆ:

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ.............

ಎಲ್ಲರಿಗೂ ಅನಿಸುತ್ತಿದೆ ತಾವು ಸ್ವರ್ಗಧಾಮದಲ್ಲಿಯೊ ಅಥವಾ ವೈಕುಂಠದಲ್ಲಿಯೊ ಕುಳಿತಿರಬೇಕು ಅಂತ.

ಪರಮಹಂಸರು ಬ್ರಾಹ್ಮಭಕ್ತರಿಗೆ: "ಆಳಕ್ಕೆ ಮುಳುಗಿ. ಭಗವಂತ ನನ್ನು ಪ್ರೀತಿಸಲು ಕಲಿತುಕೊಳ್ಳಿ. ಆತನ ಪ್ರೇಮದಲ್ಲಿ ಮಗ್ನರಾಗಿ. ನೋಡಿ,

ನಾನು ನಿಮ್ಮ ಪ್ರಾರ್ಥನೆ ಕೇಳಿದ್ದೇನೆ. ಆದರೆ ನಿಮ್ಮ ಬ್ರಾಹ್ಮಸಮಾಜ ದಲ್ಲಿ ಭಗವಂತನ ವೈಭವವನ್ನು ಅಷ್ಟೊಂದು ವರ್ಣಿಸುತ್ತೀರಲ್ಲ ಏಕೆ? 'ಹೇ ಭಗವಂತ! ನೀನು ಆಕಾಶವನ್ನು ಸೃಷ್ಟಿಸಿದ್ದೀಯೆ, ಮಹಾ ಮಹಾ ಸಾಗರ ಗಳನ್ನು ಸೃಷ್ಟಿಸಿದ್ದೀಯೆ, ಚಂದ್ರಲೋಕ ಸೂರ್ಯಲೋಕ ನಕ್ಷತ್ರಲೋಕ ಇವನ್ನೆಲ್ಲ ಸೃಷ್ಟಿಸಿದ್ದೀಯೆ' ಅಂತ. ಇಂಥ ಭಾವನೆಗಳೆಲ್ಲದರ ಮಹಾ ಆವಶ್ಯಕತೆಯೇನಿದೆ?

"ಎಲ್ಲರೂ ದೊಡ್ಡ ಮನುಷ್ಯನ ತೋಟವನ್ನು ನೋಡುವುದೆ ತಡ ಬೆರಗಾಗಿಬಿಡುತ್ತಾರೆ— ಎಷ್ಟು ಸುಂದರವಾದ ಗಿಡಗಳು, ಎಷ್ಟು ಸುಂದರ ವಾದ ಹೂವುಗಳು, ಎಷ್ಟು ಸುಂದರವಾದ ಕೊಳಗಳು, ಎಷ್ಟು ಸುಂದರ ವಾದ ಬೈಠಕ್‌ಖಾನೆ, ಅದರೊಳಗೆ ಎಷ್ಟು ಸುಂದರವಾದ ಪಟಗಳು ಇವು ಗಳನ್ನೆಲ್ಲ ನೋಡಿಯೆ ಆಶ್ಚರ್ಯಚಕಿತರಾಗಿ ಬಿಡುತ್ತಾರೆ. ಆದರೆ ಎಲ್ಲಿ, ತೋಟದ ಯಜಮಾನ ಇದಾನಲ್ಲ ಆ ದೊಡ್ಡ ಮನುಷ್ಯ, ಆತ ಬೇಕೆಂದು ಇಚ್ಛಿಸುವವರು ಎಷ್ಟೊಂದು ಜನ? ಆತ ಬೇಕು ಎನ್ನುವವರು ಎಲ್ಲೊ ಒಬ್ಬಿಬ್ಬರು. ವ್ಯಾಕುಲನಾಗಿ ಭಗವಂತನನ್ನು ಕರೆದರೆ ಆತನ ದರ್ಶನ ದೊರೆಯುತ್ತದೆ, ಆತನೊಡನೆ ಆಲಾಪ ಸಾಧ್ಯವಾಗುತ್ತದೆ. ಆತನೊಡನೆ ಮಾತುಕತೆಯಾಡಬಹುದು ನಾನು ನಿಮ್ಮೊಡನೆ ಈಗ ಮಾತುಕತೆಯಾಡು ತ್ತಿರುವಂತೆ. ಸತ್ಯವಾಗಿ ಹೇಳ್ತೀನೆ ಆತನ ದರ್ಶನ ದೊರೆಯುತ್ತದೆ. ನಾನು ಯಾರಿಗೆ ಇದನ್ನೆಲ್ಲ ಹೇಳುತ್ತಿರೋದು! ಯಾರು ತಾನೆ ನನ್ನ ಮಾತಿಗೆ ಬೆಲೆ ಕೊಡುತ್ತಾರೆ!

"ಶಾಸ್ತ್ರಗಳೊಳಗೆ ಭಗವಂತ ಸಿಕ್ಕುವನೆ? ಶಾಸ್ತ್ರಾಧ್ಯಯನದಿಂದ ಅಬ್ಬಬ್ಬ ಎಂದರೆ ಆತನ ಅಸ್ತಿ ಮಾತ್ರ ಸಿಕ್ಕಬಹುದು. ಆದರೆ ತಾನೇ ಸ್ವತಃ ಮುಳುಗದೆ ಇದ್ದರೆ ಭಗವಂತ ಕಾಣಿಸಿಕೊಳ್ಳಲೊಲ್ಲ. ಮುಳುಗಿದ ನಂತರ ಆತ ತಾನಾಗಿಯೆ ತೋರಿಸಿಕೊಂಡರೆ ಆಗ ಸಂದೇಹ ನಿವೃತ್ತಿಯಾಗು ತ್ತದೆ. ಲೆಕ್ಕವಿಲ್ಲದಷ್ಟು ಪುಸ್ತಕ ಓದು, ಬಾಯಿಂದ ಅಸಂಖ್ಯ ಶ್ಲೋಕ ಗಳನ್ನು ಹೇಳು, ವ್ಯಾಕುಲನಾಗಿ ಮುಳುಗು ಹಾಕದೆ ಇದ್ದರೆ ಆತನ ಸಾಕ್ಷಾತ್ಕಾರ ಮಾಡಿಕೊಳ್ಳಲಾಗೋದಿಲ್ಲ. ಬರೀ ಪಾಂಡಿತ್ಯದಿಂದ ಮನುಷ್ಯನನ್ನು ಮುಗ್ಧಗೊಳಿಸಲು ಸಾಧ್ಯ, ಆದರೆ ಆತನನ್ನು ಸಾಧ್ಯವಿಲ್ಲ.

"ಶಾಸ್ತ್ರ, ಗ್ರಂಥ ಕೇವಲ ಇವುಗಳಿಂದಲೆ ಏನು ತಾನೆ ಸಾಧ್ಯ? ಆತನ ಕೃಪೆ ದೊರಕದೆ ಇದ್ದರೆ ಏನೂ ದೊರೆಯುವ ಹಾಗಿಲ್ಲ. ಏನು ಮಾಡಿದರೆ

ಆತನ ಕೃಪೆ ದೊರಕಬಹುದೊ ವ್ಯಾಕುಲನಾಗಿ ಅದಕ್ಕೆ ಪ್ರಯತ್ನಿಸಿ. ಕೃಪೆ ಯೊದಗಿತೆಂದರೆ ಆತನ ದರ್ಶನ ದೊರೆಯುತ್ತದೆ. ಆಗ ಆತ ನಿಮ್ಮೊಡನೆ ಮಾತುಕತೆಗಳಾಡುತ್ತಾನೆ."

ಸಬ್-ಜಡ್ಜಿ : "ಮಹಾಶಯರೆ, ಏನು, ಆತನ ಕೃಪೆ ಒಬ್ಬನ ಮೇಲೆ ಹೆಚ್ಚಾಗಿ ಇನ್ನೊಬ್ಬನ ಮೇಲೆ ಕಡಮೆಯಾಗಿ ಬೀಳುವುದೇನು? ಅದು ಹಾಗಿದ್ದರೆ ಭಗವಂತನಿಗೆ ವೈಷಮ್ಯದೋಷ ಬರುವುದಲ್ಲ?"

ಶ್ರೀರಾಮಕೃಷ್ಣರು : "ಏನು ಹಾಗೆ ಕೇಳುತ್ತೀಯಲ್ಲ! ಆನೆಯೂ ಒಂದು ಪ್ರಾಣಿ, ಇಲಿಯೂ ಒಂದು ಪ್ರಾಣಿ! ನೀನು ಕೇಳಿದುದನ್ನೆ ವಿದ್ಯಾಸಾಗರ ಕೇಳಿದ. ಆತ ಕೇಳಿದ, 'ಮಹಾಶಯರೆ, ಕೆಲವರಿಗೆ ಅಧಿಕ ಶಕ್ತಿ ಕೆಲವರಿಗೆ ಕಡಮೆ ಶಕ್ತಿ ಕೊಟ್ಟಿದ್ದಾನೇನು?' ಅಂತ. ನಾನು ಹೇಳಿದೆ, 'ವಿಭುರೂಪದಿಂದ ಆತ ಎಲ್ಲರಲ್ಲಿಯೂ ಇದ್ದಾನೆ— ನನ್ನೊಳಗೆ ಹೇಗೊ ಹಾಗೆಯೆ ಇರುವೆಯೊಳಗೂ ಕೂಡ. ಆದರೆ ಶಕ್ತಿ ವಿಶೇಷವಿದೆ. ಎಲ್ಲರಲ್ಲಿಯು ಒಂದೇ ಸಮನಾಗಿದ್ದರೆ ನಿನ್ನ ಹೆಸರು ಕೀರ್ತಿ ಕೇಳಿ ನಾವೇಕೆ ನಿನ್ನನ್ನು ನೋಡಲು ಬಂದಿದ್ದೇವೆ? ನಿನಗೇನು ಎರಡು ಕೊಂಬು ಬೆಳೆದಿವೆಯೆ? ಅದಲ್ಲ. ನೀನು ದಯಾಳು, ನೀನು ಪಂಡಿತ, ಈ ಅನೇಕ ಗುಣಗಳು ಬೇರೆಯವರಿಗಿಂತ ನಿನ್ನಲ್ಲಿ ಅಧಿಕವಾಗಿ ವ್ಯಕ್ತವಾಗಿವೆ; ಅದಕ್ಕಾಗಿ ನೀನು ಅಷ್ಟೊಂದು ಪ್ರಸಿದ್ಧನಾಗಿರೋದು' ಎಂದು. ನೋಡುತ್ತಿಲ್ಲವೆ ಅಂಥವರನ್ನು, ಒಬ್ಬನೆ ಒಂದು ನೂರು ಜನರನ್ನು ಒಟ್ಟಿಗೆ ಸೋಲಿಸಿ ಬಿಡೋದನ್ನ? ಜೊತೆಗೆ ಇದನ್ನೂ ನೋಡಬಹುದು, ಒಬ್ಬನಿಗೆ ಹೆದರಿ ಎಲ್ಲರೂ ಓಡಿ ಹೋಗುವುದನ್ನು. ಶಕ್ತಿವಿಶೇಷತೆ ಇಲ್ಲದೆ ಇದ್ದರೆ ಜನ ಕೇಶವನನ್ನು ಅಷ್ಟೊಂದಾಗಿ ಏಕೆ ಗೌರವಿಸುತ್ತಿದ್ದರು!

"ಗೀತೆಯಲ್ಲಿ ಹೇಳಿದೆ: ಯಾರನ್ನೆ ಆಗಲಿ ಅನೇಕರು ಗೌರವಿಸಿ ಆದರಿಸುತ್ತಿದ್ದರೆ— ವಿದ್ವತ್ತಿಗೆ ಆಗಲಿ, ಗಾಯನಕ್ಕೆ ಆಗಲಿ, ಬಾಜನಕ್ಕೆ ಆಗಲಿ, ಲೆಕ್ಚರ್ (ಉಪನ್ಯಾಸ) ಕೊಡವುದಕ್ಕೆ ಆಗಲಿ, ಅಥವಾ ಇನ್ನು ಬೇರೆ ಯಾವುದಕ್ಕೆ ಆಗಲಿ— ನಿಶ್ಚಯವಾಗಿ ತಿಳಿದುಕೊ ಆತನಲ್ಲಿ ಭಗವಂತನ ವಿಶೇಷ ಶಕ್ತಿ ಇದೆ ಎಂದು."

ಒಬ್ಬ ಬ್ರಾಹ್ಮಭಕ್ತ ಜಡ್ಜಿಗೆ: "ಅವರು ಹೇಳುವುದನ್ನು ಸುಮ್ಮನೆ ಏಕೆ ಒಪ್ಪಿಕೊಂಡುಬಿಡಬಾರದು?"

ಶ್ರೀರಾಮಕೃಷ್ಣರು ಆ ಬ್ರಾಹ್ಮಭಕ್ತನಿಗೆ: "ನೀನು ಎಂಥ ಮನುಷ್ಯ? ಹೇಳಿದ್ದರಲ್ಲಿ ವಿಶ್ವಾಸವಿಲ್ಲದೆ ಬರಿದೆ ಒಪ್ಪಿಕೊಳ್ಳೋದು! ಕಪಟಾಚರಣೆ! ನೀನು ಖೋಟಾ ನಾಣ್ಯ ಅಂತ ಕಾಣುತ್ತೆ."

ಆ ಬ್ರಾಹ್ಮಭಕ್ತ ಬಹಳವಾಗಿ ಲಜ್ಜೆಗೊಂಡ.

ಸಬ್-ಜಡ್ಜ್: "ಮಹಾಶಯರೆ, ಸಂಸಾರವನ್ನು ನಾವು ತ್ಯಜಿಸಿಬಿಡಬೇಕೇನು?"

ಶ್ರೀರಾಮಕೃಷ್ಣರು: "ಇಲ್ಲ, ಬೇಕಾಗಿಲ್ಲ. ನೀವೇಕೆ ತ್ಯಜಿಸಲು ಹೋಗಬೇಕು? ಸಂಸಾರದಲ್ಲಿ ಇದ್ದರೂ ಆತ ದೊರೆಯುಬಹುದು. ಆದರೆ ಮೊದಲು ಕೆಲವುಕಾಲ ನಿರ್ಜನ ಪ್ರದೇಶದಲ್ಲಿ ಇರಬೇಕು. ನಿರ್ಜನ ಪ್ರದೇಶದಲ್ಲಿದ್ದು ಸಾಧನೆ ಮಾಡಬೇಕು. ಮನೆಯ ಹತ್ತಿರ ಅಂಥದೊಂದು ಸ್ಥಳವನ್ನು ಏರ್ಪಡಿಸಿಕೋಬೇಕು, ಅಲ್ಲಿಂದ ಬಂದು ಒಂದಷ್ಟು ಅನ್ನ ತಿಂದು ಮತ್ತೆ ಹಿಂದಿರುಗಿ ಅಲ್ಲಿಗೆ ಹೋಗುವಂತಿರಬೇಕು. ಕೇಶವಸೇನ, ಪ್ರತಾಪ ಇವರೆ ಮೊದಲಾದವರು ಹೇಳಿದರು ನನಗೆ, 'ಮಹಾಶಯರೆ, ನಮ್ಮದು ಜನಕರಾಜನ ಆದರ್ಶ' ಅಂತ. ನಾನು ಹೇಳಿದೆ, 'ಬರೀ ಮಾತುಗಳಿಂದಲೆ ಜನಕರಾಜನಾಗೋಕೆ ಆಗೋದಿಲ್ಲ. ಆತ ತಲೆಕೆಳಕಾಗಿ ನಿಂತು ಮೊದಲು ನಿರ್ಜನಪ್ರದೇಶದಲ್ಲಿ ಎಷ್ಟೊಂದು ತಪಸ್ಸು ಮಾಡಿದ್ದ! ನೀವು ಮೊದಲು ಒಂದು ಸ್ವಲ್ಪ ಏನಾದರು ಮಾಡಿ; ಆಗ ತಾನೆ ಜನಕ ರಾಜನಾಗುತ್ತೀರಿ' ಎಂದು. ಅವನು ಬಹು ಬೇಗ ಬೇಗ ಇಂಗ್ಲಿಷನ್ನು ಬರೆಯಬಲ್ಲ; ಹಾಗೆ ಪ್ರಾರಂಭದಲ್ಲೆ ಬರೆಯೋಕಾಗುತ್ತಿತ್ತೆ? ಆತ ಒಬ್ಬ ಬಡ ಹುಡುಗ. ಹಿಂದೆ ಒಬ್ಬರ ಮನೆಯಲ್ಲಿದ್ದುಕೊಂಡು ಅವರಿಗೆ ಅಡಿಗೆ ಮಾಡಿ ಹಾಕುತ್ತಿದ್ದ, ಒಂದೆರಡು ತುತ್ತನ್ನು ತಾನೂ ತಿನ್ನುತ್ತಿದ್ದ. ಬಹಳ ಕಷ್ಟಪಟ್ಟು ಓದುಬರಹ ಕಲಿತ. ಅದಕ್ಕಾಗಿಯೆ ಈಗ ಅಷ್ಟು ಬೇಗ ಬೇಗ ಬರಿಯಬಲ್ಲ.

"ನಾನು ಕೇಶವಸೇನನಿಗೆ ಮತ್ತೂ ಹೇಳಿದೆ, 'ನಿರ್ಜನಪ್ರದೇಶಕ್ಕೆ ಹೋಗಿ ಇರದೆ ಇದ್ದರೆ, ಬಲವಾದ ರೋಗ ಹೇಗೆ ತಾನೆ ಬಿಟ್ಟುತೊಲಗೀತು?' ಅಂತ. ರೋಗವೊ ವಿಷಮಶೀತಜ್ವರ. ಸಾಲದುದಕ್ಕೆ ಯಾವ ಕೊಠಡಿಯಲ್ಲಿ ವಿಷಮಶೀತಜ್ವರದ ರೋಗಿ ಮಲಗಿದಾನೊ, ಅದೇ ಕೊಠಡಿಯಲ್ಲೆ ಇವೆ ಉಪ್ಪಿನಕಾಯಿ ಹುಣಿಸೆ ಹಣ್ಣು ನೀರಿನ ಕೊಡಗಳು! ಆತನನ್ನು ರೋಗ ಹೇಗೆ ತಾನೆ ಬಿಟ್ಟುತೊಲಗೀತು? ಉಪ್ಪಿನಕಾಯಿ ಹುಣಿಸೆ ಹಣ್ಣು—

ಇಲ್ಲಿ ನೋಡು, ಅನ್ನುತ್ತಲೆ ಅನ್ನುತ್ತಲೆ ನನ್ನ ಬಾಯಲ್ಲಿ ನೀರು ಬಂದು ಬಿಟ್ಟಿದೆ. (ಎಲ್ಲರೂ ನಗುತ್ತಾರೆ.) ಎದುರಿಗಿದ್ದರೆ ಏನು ನಡೆಯುತ್ತದೆ ಎಂಬುದು ನಿಮಗೆಲ್ಲ ಗೊತ್ತೇ ಇದೆ. ಹೆಂಗಸು ಗಂಡಸಿಗೆ ಉಪ್ಪಿನಕಾಯಿ ಮತ್ತು ಹುಣಿಸೆ ಹಣ್ಣು. ಭೋಗವಾಸನೆಯೆ ನೀರಿನ ಕೊಡ. ವಿಷಯ ತೃಷ್ಣೆಗೆ ಕೊನೆಯೆಂಬುದೇ ಇಲ್ಲ. ಸಹಾಯಕವಾಗಿ ವಿಷಯ ವಸ್ತು ರೋಗಿಯ ಕೊಠಡಿಯಲ್ಲಿ. ಪರಿಸ್ಥಿತಿ ಹೀಗಿದ್ದರೆ, ಏನು ವಿಷಮ ಶೀತಜ್ವರ ಬಿಟ್ಟುಹೋಗುವುದೆ? ಎಲ್ಲಿ ಉಪ್ಪಿನಕಾಯಿ ಆಗಲಿ ಹುಣಿಸೆ ಹಣ್ಣೆ ಆಗಲಿ ನೀರಿನ ಕೊಡಗಳೆ ಆಗಲಿ ಇಲ್ಲವೊ, ಅಲ್ಲಿ ಆತನನ್ನು ಒಂದು ಕೆಲವು ದಿವಸಗಳ ಮಟ್ಟಿಗೆ ಇಡಬೇಕು. ಬಳಿಕ ಆತ ರೋಗನಿರ್ಮುಕ್ತನಾಗಿ ಅದೇ ಕೊಠಡಿಗೆ ಬಂದು ಇದ್ದರೂ ಭಯವೇನಿಲ್ಲ. ಆತನ ಸಾಕ್ಷಾತ್ಕಾರ ಪಡೆದ ವ್ಯಕ್ತಿ ಸಂಸಾರದಲ್ಲಿ ಬಂದು ಇದ್ದರೂ ಕಾಮಕಾಂಚನ ಆತನಿಗೆ ಏನನ್ನೂ ಮಾಡಲಾರವು. ಆಗ ಆತ ಜನಕರಾಜನಂತೆ ನಿರ್ಲಿಪ್ತನಾಗಿ ಇರಬಲ್ಲ. ಆದರೆ ಪ್ರಥಮದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು. ಅತ್ಯಂತ ನಿರ್ಜನಪ್ರದೇಶದಲ್ಲಿ ಇದ್ದು ಸಾಧನೆ ಮಾಡಬೇಕು. ಅಶ್ವತ್ಥವೃಕ್ಷ ಇನ್ನೂ ಸಸಿಯಾಗಿರುವಾಗ ಆಡು ದನಕರುಗಳು ಅದನ್ನು ತಿಂದು ನಾಶ ಮಾಡದೆ ಇರಲಿ ಎಂದು ಅದರ ಸುತ್ತಲೂ ಬೇಲಿ ಹಾಕುತ್ತಾರೆ. ಆದರೆ ಬುಡ ದಪ್ಪವಾಯಿತೆಂದರೆ ಬೇಲಿಯ ಆವಶ್ಯಕತೆಯೇನಿರದು. ಆಗ ತೆಗೆದುಕೊಂಡು ಹೋಗಿ ಆನೆಯನ್ನು ಕಟ್ಟಿದರೂ ಅದಕ್ಕೆ ಏನೂ ಆಗದು. ನಿರ್ಜನಪ್ರದೇಶದಲ್ಲಿ ಸಾಧನೆಮಾಡಿ ಭಗವಂತನ ಪಾದಪದ್ಮಗಳನ್ನು ಭಕ್ತಿಯಿಂದ ಪೂಜಿಸಿ ಶಕ್ತಿಯನ್ನು ವೃದ್ಧಿಮಾಡಿಕೊಂಡು ಮನೆಗೆ ಹೋಗಿ ಸಂಸಾರದಲ್ಲಿ ಇದ್ದರೆ ಕಾಮಕಾಂಚನ ನಿನ್ನ ತುದಿಬೆರಳನ್ನೂ ಅಳ್ಳಾಡಿಸಲಾರವು.

"ನೆಮ್ಮದಿಯಾಗಿರುವ ಸ್ಥಳದಲ್ಲಿ ಹಾಲಿಗೆ ಹೆಪ್ಪು ಹಾಕಿ ಬೆಣ್ಣೆ ತೆಗೆಯಬೇಕು. ಮನಸ್ಸೆಂಬ ಹಾಲಿನಿಂದ ಜ್ಞಾನಭಕ್ತಿ ಎಂಬ ಬೆಣ್ಣೆಯನ್ನು ಒಮ್ಮೆ ತೆಗೆದುಬಿಟ್ಟದ್ದೆ ಆದರೆ ಅದನ್ನು ತೆಗೆದುಕೊಂಡುಹೋಗಿ ಸಂಸಾರವೆಂಬ ನೀರಿನಲ್ಲಿ ಇಟ್ಟರೂ ಅದು ನಿರ್ಲಿಪ್ತವಾಗಿ ಮೇಲೆ ತೇಲುತ್ತದೆ. ಆದರೆ ಮನಸ್ಸನ್ನು ಅದರ ಕಾಯ (ಅಪಕ್ವ) ಸ್ಥಿತಿಯಲ್ಲಿ—ಹಾಲಿನ ಸ್ಥಿತಿಯಲ್ಲಿ, ಸಂಸಾರವೆಂಬ ನೀರಿನ ಮೇಲೆ ಇಡು, ಆಗ ಹಾಲು ನೀರು ಎರಡೂ ಬೆರತುಕೊಂಡುಬಿಡುತ್ತವೆ. ಬಳಿಕ ಮನಸ್ಸು ನಿರ್ಲಿಪ್ತವಾಗಿ ತೇಲಲಾರದು.

"ಸಂಸಾರದಲ್ಲಿ ಇದ್ದು ಭಗವಂತನ ಸಾಕ್ಷಾತ್ಕಾರ ಪಡೆಯಬೇಕಾದರೆ ಒಂದು ಕೈಯಿಂದ ಭಗವಂತನ ಪಾದಪದ್ಮಗಳನ್ನು ಹಿಡಿದುಕೊಂಡಿರಬೇಕು ಇನ್ನೊಂದು ಕೈಯಿಂದ ಕೆಲಸಕಾರ್ಯಗಳನ್ನು ಮಾಡುತ್ತಿರಬೇಕು. ಯಾವಾಗ ಕೆಲಸಕಾರ್ಯಗಳಿಂದ ಬಿಡುಗಡೆ ಹೊಂದುವೆಯೊ ಆಗ ಎರಡು ಕೈಗಳಿಂದಲೂ ಭಗವಂತನ ಪಾದಪದ್ಮಗಳನ್ನು ಹಿಡಿದುಕೋಬೇಕು, ನಿರ್ಜನ ಪ್ರದೇಶದಲ್ಲಿ ವಾಸಮಾಡಬೇಕು, ಕೇವಲ ಆತನ ಚಿಂತನೆ ಮತ್ತು ಸೇವೆ ಯಲ್ಲಿಯೆ ನಿರತನಾಗಿರಬೇಕು."

ಸಬ್-ಜಡ್ಜಿ ಆನಂದದಿಂದ: "ಮಹಾಶಯರೆ, ತಾವು ಹೇಳಿದ್ದೆಲ್ಲ ಬಹಳ ಅಮೌಲ್ಯ ವಿಷಯಗಳು. ನಿರ್ಜನಪ್ರದೇಶದಲ್ಲಿ ಸಾಧನೆಯೇನೊ ಆವಶ್ಯಕ. ಇದನ್ನೇ ನಾವು ಮರೆತುಬಿಡುತ್ತಿರೋದು. ಭಾವಿಸುತ್ತೇವೆ, 'ಒಮ್ಮೆಗೆಯೆ ಜನಕರಾಜನಾಗಿಬಿಟ್ಟದ್ದೇವೆ!' ಎಂದು. (ಶ್ರೀರಾಮ ಕೃಷ್ಣರು ಮತ್ತು ಎಲ್ಲರೂ ನಗುತ್ತಾರೆ.) ಸಂಸಾರವನ್ನು ತ್ಯಜಿಸುವ ಆವಶ್ಯಕತೆಯೇನಿಲ್ಲ, ಮನೆಯಲ್ಲಿ ಇದ್ದುಕೊಂಡೆ ಭಗವಂತನನ್ನು ಪಡೆಯ ಬಹುದು ಎಂಬುದನ್ನು ಕೇಳಿಯೆ ನನಗೆ ಶಾಂತಿ ಮತ್ತು ಆನಂದ ದೊರೆತು ಬಿಟ್ಟದೆ."

ಶ್ರೀರಾಮಕೃಷ್ಣರು: "ನೀವು ಏಕೆ ತ್ಯಾಗಮಾಡಬೇಕು? ಯುದ್ಧ ವನ್ನಂತು ಮಾಡಬೇಕಾಗೆ ಇರುವುದರಿಂದ ಕೋಟೆಯೊಳಗಿನಿಂದಲೆ ಯುದ್ಧಮಾಡುವುದು ಮೇಲು. ಇಂದ್ರಿಯಗಳೊಡನೆ ಯುದ್ಧ, ಹಸಿವು ತೃಷೆ ಇವುಗಳೆಲ್ಲರೊಡನೆಯೂ ಯುದ್ಧ ಮಾಡಬೇಕಾಗೆ ಇದೆ. ಈ ಯುದ್ಧ ವನ್ನು ಸಂಸಾರದಲ್ಲಿದ್ದು ಮಾಡುವುದೆ ಮೇಲು. ಜೊತೆಗೆ ಕಲಿಯುಗದಲ್ಲಿ ಪ್ರಾಣ ಅನ್ನದಮೇಲೆ ನಿಂತಿದೆ; ತಿನ್ನಲು ಏನೂ ದೊರೆಯದೆ ಹೋಗ ಬಹುದು. ಆಗ ಭಗವಂತ-ಗಿಗವಂತ ಎಲ್ಲ ದೂರ ಸರಿಯಬೇಕಾಗುತ್ತದೆ. ಒಬ್ಬ ತನ್ನ ಹೆಂಡತಿಗೆ ಹೇಳಿದ, 'ನಾನು ಸಂಸಾರ ತ್ಯಜಿಸಿ ಹೊರಟೆ' ಎಂದು. ಹೆಂಡತಿ ಸ್ವಲ್ಪ ಬುದ್ಧಿವಂತೆ. ಆಕೆ ಹೇಳಿದಳು: 'ನೀವು ಸುಮ್ಮನೆ ಏಕೆ ಅಲ್ಲಿ ಇಲ್ಲಿ ಅಲೆಯಲು ಹೋಗಬೇಕು? ನೀವು ಹೊಟ್ಟೆ ತುಂಬಿಸಿಕೊಳ್ಳಲು ಒಂದು ಹತ್ತು ಮನೆಗೆ ಭಿಕ್ಷೆಗಾಗಿ ಅಲೆಯುವ ಆವಶ್ಯ ಕತೆಯೇನಿಲ್ಲದಿದ್ದರೆ ಹೋಗಿ ಬನ್ನಿ. ಆದರೆ ಹಾಗೆ ಅಲೆಯಬೇಕಾಗಿದ್ದರೆ ಈ ಒಂದು ಮನೆಯದೇ ಒಳ್ಳೆಯದು' ಎಂದು.

"ನೀವು ಏಕೆ ತ್ಯಾಗ ಮಾಡಬೇಕು? ಮನೆಯಲ್ಲೆ ಅನುಕೂಲ ಜಾಸ್ತಿ.

ಆಹಾರಕ್ಕಾಗಿ ಯೋಚಿಸಬೇಕಾಗಿಲ್ಲ. ಸ್ವಪತ್ನಿಯೊಡನೆ ಸಹವಾಸ ಮಾಡೋದು ದೋಷವಾದ್ದೇನಲ್ಲ. ಶರೀರಕ್ಕೆ ಬೇಕಾದ ಅನುಕೂಲತೆಗಳೆಲ್ಲ ಕೈಯ ಹತ್ತಿರವೆ ಇರುತ್ತವೆ. ರೋಗಗ್ರಸ್ತನಾದರೆ ಸೇವೆಮಾಡಲು ಜನ ಬಳಿಯಲ್ಲೆ ಇರುತ್ತಾರೆ.

"ಜನಕ, ವ್ಯಾಸ, ವಸಿಷ್ಠ ಜ್ಞಾನ ಪಡೆದು ಸಂಸಾರದಲ್ಲಿದ್ದರು. ಇವರು ಎರಡು ಕತ್ತಿಗಳನ್ನು ತಿರುಗಿಸುತ್ತಿದ್ದರು; ಒಂದು ಜ್ಞಾನದ್ದು, ಇನ್ನೊಂದು ಕರ್ಮದ್ದು."

ಸಬ್-ಜಡ್ಜಿ: "ಮಹಾಶಯರೆ, ಜ್ಞಾನೋದಯವಾಗಿದೆ ಎಂಬುದನ್ನು ಅರಿವುದೆಂತು?"

ಶ್ರೀರಾಮಕೃಷ್ಣರು: "ಜ್ಞಾನೋದಯವಾದರೆ ಆತ ದೂರದಲ್ಲಿದ್ದಾನೆ ಎಂಬುದಾಗಿ ಅನಿಸೋದಿಲ್ಲ. ಆಗ ಅವನು ಅವನಾಗಿ ತೋರೋದಿಲ್ಲ, ಇವನಾಗಿ ಬಿಡುತ್ತಾನೆ. ಆಗ ಅವನನ್ನು ಹೃದಯ ಮಧ್ಯದಲ್ಲಿ ನೋಡಬಹುದು. ಆತ ಎಲ್ಲರ ಅಂತರ್ಯದಲ್ಲಿಯೂ ಇದ್ದಾನೆ; ಅರಸಿದವರಿಗೆ ದೊರತುಬಿಡುತ್ತಾನೆ."

ಸಬ್-ಜಡ್ಜಿ: "ನಾನು ಒಬ್ಬ ಪಾಪಿ. ನನ್ನ ಅಂತರ್ಯದಲ್ಲಿ ಆತ ಇದಾನೆ ಎಂದು ಹೇಗೆ ತಾನೆ ಹೇಳಲಿ?"

ಶ್ರೀರಾಮಕೃಷ್ಣರು: "ಯಾವಾಗ ನೋಡಿದರೂ ನೀವು ಪಾಪ ಪಾಪ ಅಂತಲೆ ಇರುತ್ತೀರಿ! ಕ್ರಿಶ್ಚಿಯನ್ನರೂ ಹೀಗೆಯೆ ಹೇಳುತ್ತಾರೆ, ಅಲ್ಲವೆ? ಒಬ್ಬ ನನಗೆ ಒಂದು ಪುಸ್ತಕ (ಬೈಬಲ್) ತಂದುಕೊಟ್ಟ. ಒಂದು ಸ್ವಲ್ಪ ಓದಿಸಿ ಕೇಳಿದೆ. ಕೇವಲ ಅದರಲ್ಲಿ ಇದೊಂದೇ ಮಾತು—ಪಾಪ ಪಾಪ! 'ನಾನು ಆತನ ಹೆಸರನ್ನು ಜಪಿಸಿದ್ದೇನೆ; ಹರನ, ಹರಿಯ ಅಥವಾ ರಾಮನ ಹೆಸರನ್ನು ಜಪಿಸಿದ್ದೇನೆ—ನನ್ನಲ್ಲಿ ಪಾಪಕ್ಕೆ ಆಶ್ರಯ!' ಇಂಥ ವಿಶ್ವಾಸ ಬೇಕು."

ಸಬ್-ಜಡ್ಜಿ: "ಮಹಾಶಯರೆ, ಅಂಥ ವಿಶ್ವಾಸವನ್ನು ಪಡೆಯುವುದೆಂತು?"

ಶ್ರೀರಾಮಕೃಷ್ಣರು: "ಆತನಲ್ಲಿ ಅನುರಕ್ತನಾಗು. ನಿಮ್ಮ ಸಮಾಜದ ಒಂದು ಹಾಡು ಹೇಳುತ್ತದೆ:

ಅನುರಾಗಕಲ್ಲದೆಯೆ
ಒಲಿಯುದಿಹ ಪ್ರಭು ನೀನು !
ಯಜ್ಞಯಾಗಗಳಿಂದ ಇನ್ನು ಫಲವೇನು ?

ಯಾವುದರಿಂದ ಈ ವಿಧವಾದ ಅನುರಾಗ, ಈ ವಿಧವಾಗಿ ಭಗವಂತನಲ್ಲಿ ಪ್ರೇಮ ಉಂಟಾಗುವುದೊ ಅದಕ್ಕಾಗಿ ಏಕಾಂತದಲ್ಲಿದ್ದು ವ್ಯಾಕುಲನಾಗಿ ಆತನನ್ನು ಪ್ರಾರ್ಥಿಸು ಮತ್ತು ಅಳು. ಹೆಂಡತಿಗೆ ಕಾಯಿಲೆ ಆಗಿಬಿಟ್ಟಿದೆಯಲ್ಲ ಅಂತ, ದುಡ್ಡು ನಷ್ಟವಾಗಿ ಬಿಟ್ಟಿತಲ್ಲ ಅಂತ, ಏನೂ ಕೆಲಸ ಸಿಕ್ಕಲಿಲ್ಲವಲ್ಲ ಅಂತ ಜನ ಒಂದೊಂದು ಬಿಂದಿಗೆ ಕಣ್ಣೀರು ಸುರಿಸುತ್ತಾರೆ. ಭಗವಂತನಿಗಾಗಿ ಯಾರು ಅಳುತ್ತಾರೆ ಹೇಳು ನೋಡೋಣ ?''

ತ್ರೈಲೋಕ್ಯ : ''ಮಹಾಶಯರೆ, ಜನರಿಗೆ ವಿರಾಮವೆಲ್ಲಿ ? ಆಂಗ್ಲ ಧಣಿಗಳ ಸೇವೆ ಮಾಡಬೇಕಾಗಿದೆ.''

ಶ್ರೀರಾಮಕೃಷ್ಣರು : ''ಒಳ್ಳೇದು, ಹಾಗಾದರೆ ಆತನಿಗೆ ವಕಾಲತ್ತು ವಹಿಸಿಬಿಡು. ಯಾರೆ ಆಗಲಿ ಒಳ್ಳೆಯವರ ಮೇಲೆ ತನ್ನ ಹೊರೆಯನ್ನು ಹೊರಿಸಿದ್ದರೆ ಅವರು ಆತನಿಗೆ ಕೇಡು ತರುವರೆ ? ಹೃತ್ಪೂರ್ವಕವಾಗಿ ಇಡೀ ಹೊರೆಯನ್ನು ಭಗವಂತನ ಮೇಲೆ ಹಾಕಿ ನಿಶ್ಚಿಂತನಾಗಿ ಇದ್ದುಬಿಡು. ಆತ ನಿನ್ನನ್ನು ಯಾವ ಕೆಲಸವನ್ನು ಮಾಡುವಂತೆ ಪ್ರೇರೇಪಿಸಿರುವನೊ ಅದನ್ನು ಮಾಡಿಬಿಡು. ಬೆಕ್ಕಿನಮರಿಗೆ ಲೆಕ್ಕಾಚಾರಬುದ್ಧಿ ಇಲ್ಲ; ಮಾತ್ರ, 'ಮಿಯಾವ್, ಮಿಯಾವ್ !' ಅನ್ನುತ್ತದೆ. ತಾಯಿ ಬೆಕ್ಕು ತೆಗೆದುಕೊಂಡು ಹೋಗಿ ಅಡಿಗೆಮನೆಯಲ್ಲಿ ಒಲೆ ಬೂದಿಯೊಳಗೆ ಇಟ್ಟರೆ, ಅಲ್ಲಿಯೆ ಸುಮ್ಮನೆ ಬಿದ್ದಿರುತ್ತದೆ. ತಾಯಿ ಬೇಕಾಗಿದ್ದರೆ ಮಾತ್ರ ಕೇವಲ, 'ಮಿಯಾವ್, ಮಿಯಾವ್ !' ಅನ್ನುತ್ತದೆ. ತಾಯಿಬೆಕ್ಕು ಮತ್ತೆ ಅದನ್ನು ತೆಗೆದುಕೊಂಡು ಹೋಗಿ ಮನೆ ಯಜಮಾನನ ಹಾಸಿಗೆ ಮೇಲೆ ಇಟ್ಟಾಗಲೂ ಆ ಮರಿ ಎಂದಿನಂತೆಯೇ ವರ್ತಿಸುತ್ತದೆ. ಕೇವಲ, 'ಮಿಯಾವ್, ಮೀಯಾವ್ !' ಅನ್ನುತ್ತದೆ.''

ಸಬ್-ಜಡ್ಜಿ : ''ನಾವು ಗೃಹಸ್ಥರು. ಎಲ್ಲಿಯವರೆಗೆ ಈ ಕೆಲಸ ಕಾರ್ಯಗಳನ್ನೆಲ್ಲ ಮಾಡಿಕೊಂಡು ಹೋಗಬೇಕು ?''

ಶ್ರೀರಾಮಕೃಷ್ಣರು : ''ನಿಮಗೆ ಕೆಲಸಕಾರ್ಯಗಳೇನೊ ನಿಶ್ಚಯವಾಗಿ ಇವೆ. ಮಕ್ಕಳನ್ನು ಬೆಳೆಸೋದು, ಹೆಂಡತಿಗೆ ಹಿಟ್ಟುಬಟ್ಟೆ ಹಾಕೋದು, ಆಕೆಗೆ ಆಸ್ತಿಪಾಸ್ತಿ ಇಟ್ಟು ಸಾಯೋದು ಇವನ್ನೆಲ್ಲ ಮಾಡ

ಬೇಕಾಗಿದೆ. ಇವನ್ನೆಲ್ಲ ಮಾಡದೆ ಇದ್ದರೆ ನೀವು ನಿರ್ದಯಿಗಳೆ. ಶುಕ ದೇವಾದಿಗಳು ದಯಾವಂತರಾಗಿದ್ದರು. ಯಾರಲ್ಲಿ ದಯೆ ಇಲ್ಲವೊ ಆತ ಮನುಷ್ಯನೇ ಅಲ್ಲ."

ಸಬ್-ಜಡ್ಜಿ: "ಸಂತಾನಪಾಲನೆಯನ್ನು ಎಷ್ಟು ಕಾಲ ಮಾಡ ಬೇಕು?"

ಶ್ರೀರಾಮಕೃಷ್ಣರು: "ಪ್ರಾಪ್ತವಯಸ್ಸು ಬರುವವರೆಗೆ. ಮರಿ ದೊಡ್ಡದಾಗಿ ಬೆಳೆದು ತನ್ನ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳುವ ಶಕ್ತಿಯನ್ನು ಸಂಪಾದಿಸಿಕೊಂಡಾಗ ತಾಯಿ ಹಕ್ಕಿ ಅದನ್ನು ಕುಟುಕಿ ಓಡಿಸಿ ಬಿಡುತ್ತದೆ ಮತ್ತು ಅದು ತನ್ನ ಹತ್ತಿರ ಬರಲು ಬಿಟ್ಟುಕೊಡಲೊಲ್ಲದು." (ಎಲ್ಲರೂ ನಗುತ್ತಾರೆ.)

ಸಬ್-ಜಡ್ಜಿ: "ಹೆಂಡತಿಯ ಸಂಬಂಧವಾಗಿ ಗಂಡನ ಕರ್ತವ್ಯ ವೇನು?"

ಶ್ರೀರಾಮಕೃಷ್ಣರು: "ನೀನು ಬದುಕಿಕೊಂಡಿರುವವರೆಗೆ ನೀನು ಆಕೆಗೆ ಧರ್ಮೋಪದೇಶ ನೀಡಬೇಕು ಮತ್ತು ಹಿಟ್ಟುಬಟ್ಟೆ ಹಾಕಬೇಕು. ಆಕೆ ಪತಿವ್ರತೆಯಾಗಿದ್ದರೆ ನೀನು ಸತ್ತನಂತರ ಆಕೆಯ ಜೀವನಾಂಶಕ್ಕೆ ಬೇಕಾಗಬಹುದಾದ ಅನುಕೂಲತೆಗಳನ್ನು ಮೊದಲೆ ಕಲ್ಪಿಸಿ ಇಟ್ಟುಕೋ ಬೇಕು.

"ಆದರೆ ಜ್ಞಾನೋನ್ಮಾದ ಉಂಟಾಗಿ ಬಿಟ್ಟಿತು ಅಂದರೆ ನಿನಗೆ ಯಾವ ಕರ್ತವ್ಯವೂ ಇರದು. ಆಗ ನಿನಗೆ ಮಾರನೆ ದಿನದ ಯೋಚನೆ ಬಾರದೆ ಇದ್ದರೂ ಭಗವಂತ ಅದಕ್ಕಾಗಿ ಯೋಚಿಸುತ್ತಾನೆ. ನಿನಗೆ ಜ್ಞಾನೋನ್ಮಾದ ಬಂದುಬಿಟ್ಟರೆ ನಿನ್ನ ಸಂಸಾರದವರ ಹಿತಚಿಂತನೆಯನ್ನು ಆತ ಮಾಡುತ್ತಾನೆ. ಜಮೀನುದಾರ ಅಪ್ರಾಪ್ತವಯಸ್ಕ ಮಗನನ್ನು ಬಿಟ್ಟು ಸತ್ತರೆ, ಕೋರ್ಟಿನಿಂದ ನೇಮಿಸಲ್ಪಟ್ಟ ಅಧಿಕಾರಿ ಆತನ ರಕ್ಷಕನಾಗು ತ್ತಾನೆ. ಇವೆಲ್ಲ ಲಾ ಕ್ಕೆ ಸಂಬಂಧಪಟ್ಟ ವಿಷಯಗಳು. ನಿನಗೆ ಗೊತ್ತೇ ಇವೆ."

ಸಬ್-ಜಡ್ಜಿ: "ಹೌದು, ನಿಜ."

ವಿಜಯ ಗೋಸ್ವಾಮಿ: "ಆಹಾ! ಆಹಾ! ಎಂಥ ಅಮೌಲ್ಯ ಮಾತುಗಳು! ಯಾರು ಅನನ್ಯಮನಸ್ಕನಾಗಿ ಭಗವಂತನ ಚಿಂತನೆ ಮಾಡುತ್ತಾನೊ, ಯಾರು ಆತನ ಪ್ರೇಮದಿಂದ ಉನ್ಮತ್ತನಾಗಿದ್ದಾನೊ,

ಆತನ ಹೊರೆಯನ್ನು ಭಗವಂತ ತಾನೇ ಸ್ವಯಂ ಹೊತ್ತುಕೊಳ್ಳುತ್ತಾನೆ. ಅಪ್ರಾಪ್ತವಯಸ್ಕ ಬಾಲಕನಿಗೆ ತಾನಾಗಿಯೆ ಬಂದು ಒದಗುತ್ತಾನೆ. ಆಹಾ! ಎಂದು ಆ ಅವಸ್ಥೆ ನನಗೆ ಬರುತ್ತದೆ? ಅದು ಯಾರಿಗೆ ದೊರೆತಿದೆಯೊ ಅವರು ಎಂಥ ಭಾಗ್ಯಶಾಲಿಗಳು!''

ತ್ರೈಲೋಕ್ಯ: ''ಮಹಾಶಯರೆ, ಸಂಸಾರದಲ್ಲಿದ್ದರೆ ಯಥಾರ್ಥ ಜ್ಞಾನ ದೊರಕುವುದೆ? ಭಗವಂತನ ಸಾಕ್ಷಾತ್ಕಾರ ದೊರಕುವುದೆ?''

ಶ್ರೀರಾಮಕೃಷ್ಣರು ನಗುತ್ತ ನಗುತ್ತ: ''ನಿನಗೇಕೆ ಚಿಂತನೆ? ನೀನು ಜೋನಿ, ಗಟ್ಟಿ ಎರಡನ್ನೂ ತಿನ್ನುತ್ತಿದ್ದೀಯೆ. (ಎಲ್ಲರೂ ನಗುತ್ತಿದ್ದಾರೆ.) ಭಗವಂತನಲ್ಲಿ ಮನಸ್ಸನ್ನಿಟ್ಟು ಸಂಸಾರದಲ್ಲಿ ಇದ್ದುಕೊಂಡಿದ್ದೀಯೆ. ಸಂಸಾರದಲ್ಲಿದ್ದರೆ ಏಕೆ ಆತನ ಸಾಕ್ಷಾತ್ಕಾರ ದೊರಕದು? ನಿಶ್ಚಯವಾಗಿ ದೊರಕುತ್ತದೆ.''

ತ್ರೈಲೋಕ್ಯ: ''ಸಂಸಾರದಲ್ಲಿದ್ದರೂ ಜ್ಞಾನ ದೊರೆತಿದೆ ಎಂಬುದಕ್ಕೆ ಚಿಹ್ನೆಗಳೇನು?''

ಶ್ರೀರಾಮಕೃಷ್ಣರು: ''ಪ್ರೇಮಾಶ್ರು ಮತ್ತು ಪುಲಕ. ಆತನ ಸುಮಧುರ ಹೆಸರನ್ನು ಕೇಳುವುದೇ ತಡ ಶರೀರದಲ್ಲಿ ರೋಮಾಂಚ ಉಂಟಾಗುತ್ತದೆ; ಕಣ್ಣಿನಿಂದ ಪ್ರೇಮಾಶ್ರು ಸುರಿಯಲಾರಂಭಿಸುತ್ತದೆ.

''ಎಲ್ಲಿಯವರೆಗೆ ವಿಷಯಾಸಕ್ತಿ ಇರುವುದೊ, ಕಾಮಕಾಂಚನದ ಮೇಲೆ ಪ್ರೀತಿ ಇರುವುದೊ, ಅಲ್ಲಿಯವರೆಗೆ ದೇಹಬುದ್ಧಿ ಹೋಗದು. ವಿಷಯಾಸಕ್ತಿ ಎಷ್ಟೆಷ್ಟು ಮಟ್ಟಿಗೆ ಕಡಮೆಯಾಗುವುದೊ ಅಷ್ಟಷ್ಟು ಮಟ್ಟಿಗೆ ಆತ್ಮಜ್ಞಾನದ ಕಡೆ ಮುಂದುವರಿಯಬಹುದು; ದೇಹಬುದ್ಧಿ ಕೂಡ ಕಡಮೆಯಾಗುತ್ತದೆ. ವಿಷಯಾಸಕ್ತಿ ಬೇರುಸಹಿತ ಹೊರಟುಹೋದರೆ ಆತ್ಮಜ್ಞಾನ ದೊರಕುತ್ತದೆ. ಆಗ, ಆತ್ಮ ಬೇರೆ ದೇಹ ಬೇರೆ ಎಂಬ ಬೋಧೆಯಾಗುತ್ತದೆ. ತೆಂಗಿನಕಾಯಿಯ ನೀರು ಇಂಗದ ಮುನ್ನ ಅದನ್ನು ಮಚ್ಚಿನಿಂದ ಕತ್ತರಿಸಿ ತಿರುಳನ್ನು ಪ್ರತ್ಯೇಕ ಕರಟವನ್ನು ಪ್ರತ್ಯೇಕ ಮಾಡಬೇಕಾದರೆ ಕಷ್ಟಪಡಬೇಕಾಗುತ್ತದೆ. ಆದರೆ ನೀರು ಇಂಗಿಹೋಗಿಬಿಟ್ಟಿತೆಂದರೆ ತಿರುಳು ಒಳಗೆ ಸುಮ್ಮನೆ 'ಗಡ ಗಡ' ಎಂದು ಶಬ್ದ ಮಾಡುತ್ತದೆ. ಅದು ಕರಟದಿಂದ ಪ್ರತ್ಯೇಕವಾಗಿ ಬಿಟ್ಟಿರುತ್ತದೆ. ಅದಕ್ಕೆ ತೆಂಗಿನ ಗಿಟುಕು ಅನ್ನುತ್ತಾರೆ.

"ಭಗವಂತನನ್ನು ಪಡೆದರೆ ವ್ಯಕ್ತಿಯಲ್ಲಿ ಈ ಚಿಹ್ನೆ ಕಂಡುಬರುತ್ತದೆ, ಆತ ತೆಂಗಿನ ಗಿಟಕಿನೋಪಾದಿಯಲ್ಲಿ ಆಗಿಬಿಡುತ್ತಾನೆ—ದೇಹಬುದ್ಧಿ ಹೊರಟುಹೋಗುತ್ತದೆ. ದೇಹದ ಸುಖ ದುಃಖ ತನ್ನ ಸುಖದುಃಖ ಎಂಬ ಭಾವನೆ ಆತನಿಗೆ ಉಂಟಾಗದು. ಆ ವ್ಯಕ್ತಿ ದೇಹದ ಸುಖಕ್ಕಾಗಿ ಆಸಿಸೋದಿಲ್ಲ. ಜೀವನ್ಮುಕ್ತನಾಗಿ ಸುತ್ತಾಡುತ್ತಾನೆ. 'ಕಾಳಿಯ ಭಕ್ತ, ನಿತ್ಯಾನಂದಮಯ ಜೀವನ್ಮುಕ್ತ.'

"ಭಗವನ್ನಾಮಶ್ರವಣಮಾತ್ರದಿಂದಲೆ ಪ್ರೇಮಾಶ್ರು ಮತ್ತು ಪುಲಕ ಉಂಟಾಗುವುದು ಕಂಡುಬಂದರೆ, ಆಗ ತಿಳಿದುಕೋಬೇಕು ಕಾಮಕಾಂಚನ ಆಸಕ್ತಿ ಹೊರಟುಹೋಗಿದೆ, ಭಗವಂತನ ಸಾಕ್ಷಾತ್ಕಾರ ದೊರೆತುಬಿಟ್ಟದೆ ಅಂತ. ಬೆಂಕಿ ಕಡ್ಡಿ ಒಣಗಿದ್ದರೆ ಒಂದನ್ನು ಗೀಚಿದರೇನೆ ಅದು ಭಗ್ ಎಂದು ಹತ್ತಿಕೊಂಡುಬಿಡುತ್ತದೆ. ಅದೇನಾದರು ನೆನೆದಿದ್ದರೆ ಒಂದೈವತ್ತು ಕಡ್ಡಿ ಗೀಚಿದರೂ ಏನೂ ಆಗದು. ಬರಿದೆ ಬೆಂಕಿ ಕಡ್ಡಿಗಳ ನಷ್ಟ. ವಿಷಯರಸದಲ್ಲಿ ನೆನೆದಿದ್ದರೆ, ಕಾಮಕಾಂಚನ ರಸದಲ್ಲಿ ಮನಸ್ಸು ನೆನೆದಿದ್ದರೆ, ಭಗವದುದ್ದೀಪನೆ ಉಂಟಾಗದು. ಕಂಡ ಆಟವನ್ನೆಲ್ಲ ಆಡು, ಅದೆಲ್ಲ ಬರಿದೆ ವಿಫಲ. ವಿಷಯರಸ ಒಣಗಿಹೋದರೆ ಒಡನೆಯೆ ಉದ್ದೀಪನೆ ಉಂಟಾಗಿಬಿಡುತ್ತದೆ.

ತ್ರೈಲೋಕ್ಯ: "ವಿಷಯರಸವನ್ನು ಒಣಗಿಸಲು ಸದ್ಯಕ್ಕೆ ಉಪಾಯವೇನು?"

ಶ್ರೀರಾಮಕೃಷ್ಣರು: "ವ್ಯಾಕುಲನಾಗಿ ಭಗವತಿಯನ್ನು ಕರೆ. ಆಕೆಯ ದರ್ಶನ ದೊರೆತರೆ ವಿಷಯರಸ ಒಣಗಿಹೋಗಿ ಬಿಡುತ್ತದೆ; ಕಾಮಕಾಂಚನ ಆಸಕ್ತಿ ಸಾದ್ಯಂತವಾಗಿ ಬಿಟ್ಟು ತೊಲಗುತ್ತದೆ. ಆಕೆ ನಿನ್ನ ಸ್ವಂತ ತಾಯಿ ಎಂಬ ಬೋಧೆ ಉಂಟಾದರೆ ಈಕ್ಷಣವೆ ಹಾಗಾಗಿಬಿಡುತ್ತದೆ. ಆಕೆ ನಿನ್ನ ದೇವಮಾತೆ (godmother) ಅಲ್ಲ. ನಿನ್ನ ಸ್ವಂತ ಮಾತೆಯೆ. ವ್ಯಾಕುಲನಾಗಿ ಹಠ ಹಿಡಿದು ಆಕೆಯನ್ನು ಕೇಳು. ಮಗು ಗಾಳೀಪಟ ಕೊಂಡುಕೊಳ್ಳಲೋಸುಗ ತಾಯ ಸೆರಗನ್ನು ಹಿಡಿದು ದುಡ್ಡು ಕೇಳುತ್ತದೆ—ತಾಯಿ ಬಹುಶಃ ಆಗ ಬೇರೆ ಹೆಂಗಸರೊಡನೆ ಹರಟೆ ಹೊಡೆಯುತ್ತಿರಬಹುದು. ಮೊದಲು ಆಕೆಗೆ ಕೊಡಲು ಇಚ್ಛೆಯೇ ಇಲ್ಲ. ಹೇಳುತ್ತಾಳೆ, 'ಕೊಡೋದಿಲ್ಲ. ನಿಮ್ಮ ತಂದೆ ಬೇಡ ಅಂತ ಹೇಳಿ ಹೋಗಿದ್ದಾರೆ. ಅವರು ಬಂದರೆ ನೋಡು ಹೇಳಿಬಿಡುತ್ತೇನೆ. ಒಡನೆಯೆ

ಹೋಗಿ ಗಾಳೀಪಟ ಕೊಂಡುಕೊಂಡು ಕೈಯೊ ಕಾಲೊ ಏನೊ ಒಂದು ಮಾಡಿಕೊಂಡು ಬಂದುಬಿಡುತ್ತೀಯೆ' ಎಂದು. ಆಗ ಮಗು ಅಳಲು ಆರಂಭಿಸುತ್ತದೆ. ಏನು ಮಾಡಿದರೂ ಬಿಡಲೊಲ್ಲದು. ತಾಯಿ ತನ್ನ ಗೆಳತಿಯರಿಗೆ ಹೇಳುತ್ತಾಳೆ: 'ದಯವಿಟ್ಟು ಒಂದು ಸ್ವಲ್ಪ ಕುಳಿತು ಕೊಂಡಿರಿ. ಈ ಮಗುವನ್ನು ಸ್ವಲ್ಪ ಸಮಾಧಾನಪಡಿಸಿ ಬರುತ್ತೇನೆ.' ಎಂದು. ಬಳಿಕ ಬೀಗದ ಕೈ ತೆಗೆದುಕೊಂಡುಹೋಗಿ 'ಕಟಕ್,' 'ಕಟಕ್' ಎಂದು ಶಬ್ದಮಾಡಿ ಪೆಟ್ಟಿಗೆಯನ್ನು ತೆರೆದು ಮೂರು ಕಾಸನ್ನು ಬಿಸಾಕುತ್ತಾಳೆ.

"ನೀವೂ ಕೂಡ ತಾಯಿಯೊಡನೆ ಚಂಡಿ ಹಿಡಿಯಬೇಕು. ಆಗ ಆಕೆ ವಿಧಿಯಿಲ್ಲದೆ ಪ್ರತ್ಯಕ್ಷಳಾಗುತ್ತಾಳೆ. ನಾನು ಸಿಕ್ಕರಿಗೂ ಇದೇ ವಿಷಯವನ್ನು ಹೇಳಿದೆ. ಅವರು ದಕ್ಷಿಣೇಶ್ವರದ ಕಾಳೀದೇವಾಲಯಕ್ಕೆ ಬಂದಿದ್ದರು. ಕಾಳೀದೇವಾಲಯದ ಎದುರಿಗೆ ಕುಳಿತು ಈ ಮಾತುಕತೆ ಗಳೆಲ್ಲ ನಡೆದುವು. ಅವರು ಹೇಳಿದರು, 'ಭಗವಂತ ದಯಾಮಯ' ಅಂತ. ನಾನು ಪ್ರಶ್ನಿಸಿದೆ, 'ಹೇಗೆ ದಯಾಮಯ?' ಅಂತ. ಅವರು ಹೇಳಿದರು, 'ಏಕೆ ಮಹರಾಜ್, ಆತ ಸರ್ವದಾ ನಮ್ಮನ್ನು ನೋಡಿಕೊಳ್ಳು ತ್ತಾನೆ, ನಮಗೆ ಬೇಕಾದ ಧರ್ಮ ಅರ್ಥ ಎಲ್ಲವನ್ನೂ ಕೊಡುತ್ತಾನೆ, ಬೇಕಾದ ಆಹಾರ ಸಾಮಗ್ರಿಗಳನ್ನು ಒದಗಿಸಿಕೊಡುತ್ತಾನೆ' ಎಂದು. ಆಗ ನಾನು ಹೇಳಿದೆ, 'ಯಾರಿಗಾದರು ಮಕ್ಕಳುಗಿಕ್ಕಳು ಆದರೆ ಅವರ ಯೋಗ ಕ್ಷೇಮವನ್ನ, ಅವರ ಪೋಷಣೆಯ ಭಾರವನ್ನ ತಂದೆ ಹೊತ್ತುಕೊಳ್ಳು ತ್ತಾನೊ ಅಥವಾ ಪಕ್ಕದ ಅಗ್ರಹಾರದ ಬ್ರಾಹ್ಮಣ ಹೊತ್ತುಕೊಳ್ಳು ತ್ತಾನೊ?' ಅಂತ."

ಸಬ್-ಜಡ್ಜಿ: "ಮಹಾಶಯರೆ, ಹಾಗಾದರೆ ಆತ ದಯಾಮಯ ನಲ್ಲವೆ?"

ಶ್ರೀರಾಮಕೃಷ್ಣರು "ಏಕಲ್ಲ? ಹಾಗೇನೊ ಒಂದು ಮಾತು ಆಡಿದೆ. ಆತ ನಿಜವಾಗಿಯೂ ಆತ್ಮೀಯನೆ. ನಾವು ಆತನನ್ನು ಬಲಾತ್ಕರಿಸಿ ಕೇಳ ಬಹುದು. ಸ್ವಂತದವರನ್ನ ಹೀಗೂ ಕೇಳಿಬಿಡಬಹುದು: 'ಏನೊ ಮೂರ್ಖ, ಕೊಡುತ್ತೀಯೊ ಇಲ್ಲವೊ?' ಅಂತ.

(ಸಬ್-ಜಡ್ಜಿಗೆ) "ಒಳ್ಳೆಯದು, ಅಭಿಮಾನ, ಅಹಂಕಾರ ಜ್ಞಾನ ಜನ್ಯವೊ—ಅಥವಾ ಅಜ್ಞಾನ ಜನ್ಯವೊ? ಅಹಂಕಾರ ತಮೋಗುಣಾತ್ಮಕ

ವಾದ್ದು ; ಅಜ್ಞಾನದಿಂದ ಉತ್ಪನ್ನವಾಗಿದೆ. ಈ ಅಹಂಕಾರ ಅಡ್ಡಲಾಗಿ ರೋದರಿಂದ ಭಗವಂತನನ್ನು ನೋಡಲಾಗೋದಿಲ್ಲ. 'ನಾನು ಎಂಬುದು ಸತ್ತರೆ ತಾಪತ್ರಯಗಳೆಲ್ಲ ಕೊನೆಗಾಣುವುವು.' ಅಹಂಕಾರವೃದ್ಧಿ ನಿಷ್ಪ್ರಯೋಜಕವಾದ್ದು. ಈ ಶರೀರವೆ ಆಗಲಿ, ಈ ಐಶ್ವರ್ಯವೆ ಆಗಲಿ ಯಾವುದೂ ಸ್ಥಿರವಲ್ಲ. ಒಮ್ಮೆ ಒಬ್ಬ ಕುಡುಕ ದುರ್ಗಾ ಪ್ರತಿಮೆಯನ್ನು ನೋಡುತ್ತಿದ್ದ. ಪ್ರತಿಮೆಯ ಶೃಂಗಾರ ಅಲಂಕಾರಗಳನ್ನು ನೋಡಿ ಹೇಳಿದ, 'ತಾಯೆ, ನೀನು ಎಷ್ಟೇ ಶೃಂಗಾರ ಅಲಂಕಾರಗಳನ್ನು ಮಾಡಿ ಕೊಂಡರೂ, ಎರಡುಮೂರು ದಿವಸಗಳಾದ ಮೇಲೆ ನಿನ್ನನ್ನು ಎತ್ತಿ ಕೊಂಡು ಹೋಗಿ ಗಂಗೆಯಲ್ಲಿ ಬಿಸಾಡುತ್ತಾರೆ' ಎಂದು. (ಎಲ್ಲರೂ ನಗುತ್ತಾರೆ.)

"ಅದಕ್ಕಾಗಿಯೆ ನಾನು ನಿಮ್ಮೆಲ್ಲರಿಗೂ ಹೇಳುತ್ತಿರೋದು, 'ನೀವು ಜಡ್ಜಿಗಳಾಗಿರಿ ಅಥವಾ ಬೇರೆ ಏನಾದರೂ ಆಗಿರಿ ಎಲ್ಲಾ ಎರಡು ದಿವಸದ ಬಾಳುವೆ' ಎಂದು. ಆದ್ದರಿಂದ ಅಭಿಮಾನ ಮತ್ತು ಅಹಂಕಾರವನ್ನು ಬಿಟ್ಟುಬಿಡಬೇಕು.

"ಸತ್ತ್ವ ರಜಸ್ಸು ತಮಸ್ಸು ಗುಣಗಳ ಸ್ವಭಾವ ಭಿನ್ನ ಭಿನ್ನವಾದುದು. ಅಹಂಕಾರ, ನಿದ್ರೆ, ಅತಿಭೋಜನ, ಕಾಮ, ಕ್ರೋಧ ಇವೆಲ್ಲ ತಮೋ ಗುಣಿಯ ಲಕ್ಷಣಗಳು. ರಜೋಗುಣಿಗಳು ಹೆಚ್ಚು ಕೆಲಸಕಾರ್ಯಗಳನ್ನು ಗಂಟುಹಾಕಿಕೊಳ್ಳುತ್ತಾರೆ; ಬಟ್ಟೆ ಬರೆ ಠಾಕುಠೀಕು, ಮನೆ ಪರಿಷ್ಕಾರ ಪರಿಚ್ಛಿನ್ನ, ಬೈಠಕ್‌ಖಾನೆಯಲ್ಲಿ ರಾಣಿ ಮೊದಲಾದವರ ಪಟ; ಪೂಜೆ ಪುರಸ್ಕಾರಗಳಲ್ಲಿ ತೊಡಗಿರುವಾಗ ನಾರು ಮಡಿಯನ್ನು ಉಡುತ್ತಾರೆ; ಕೊರಳಿಗೆ ಮಧ್ಯೆ ಮಧ್ಯೆ ಚಿನ್ನದ ರುದ್ರಾಕ್ಷಿ ಹಾಕಿರುವ ರುದ್ರಾಕ್ಷಿಸರ ಹಾಕಿರುತ್ತಾರೆ; ಯಾರಾದರು ಅವರ ದೇವಾಲಯ ನೋಡಲು ಬಂದರೆ ತಾವೆ ಸ್ವತಃ ಅವರನ್ನು ಜೊತೆಯಲ್ಲಿ ಕರೆದುಕೊಂಡುಹೋಗಿ ತೋರಿಸು ತ್ತಾರೆ ಮತ್ತು ಹೇಳುತ್ತಾರೆ. 'ಈ ಕಡೆಗೆ ಬನ್ನಿ, ನೋಡಬೇಕಾದ್ದು ಇನ್ನೂ ಇದೆ—ಬಿಳಿಯ ಅಮೃತಶಿಲೆ ಹಾಸಿದ ಅಂಗಳ ಮತ್ತು ಬಹಳ ಚೆನ್ನಾಗಿ ಕೆತ್ತನೆ ಕೆಲಸ ಮಾಡಿರುವ ಪ್ರಾರ್ಥನಾಲಯ ಇವೆಲ್ಲ ಇವೆ' ಎಂದು. ಅವರು ದಾನಮಾಡುತ್ತಾರೆ ಈ ಜಗತ್ತೆ ಅರಿಯುವ ರೀತಿಯಲ್ಲಿ. ಸತ್ತ್ವಗುಣಿ ಜನರು ಬಹಳ ನಿಷ್ಠಾವಂತರು ಮತ್ತು ಶಾಂತ ಸ್ವಭಾವಿಗಳು; ಅವರಿಗೆ ದೊರೆತುದೆ ಉಡಿಗೆತೊಡಿಗೆ; ಸಂಪಾದನೆ ಹೊಟ್ಟೆ ತುಂಬಿ

ಕೊಳ್ಳಲು ಮಾತ್ರ; ಹೊಗಳು ಭಟ್ಟರ ಕೆಲಸ ಮಾಡಿ ಎಂದಿಗೂ ದುಡ್ಡು ಸಂಪಾದಿಸರು; ಮನೆಗೆ ಸುಣ್ಣ ಮಣ್ಣು ಮಾಡಿರೋದಿಲ್ಲ; ಮಕ್ಕಳ ಉಡಿಗೆತೊಡಿಗೆಗಳ ವಿಷಯವಾಗಿ ಅಷ್ಟೊಂದು ತಲೆಗೆ ಹಚ್ಚಿಕೊಳ್ಳೋದಿಲ್ಲ; ಭಗವಚ್ಚಿಂತನೆ ದಾನ ಧ್ಯಾನ ಇವನ್ನೆಲ್ಲ ಗೋಪ್ಯವಾಗಿ—ಯಾರಿಗೂ ಗೊತ್ತೇ ಆಗದ ಹಾಗೆ—ಮಾಡುತ್ತಾರೆ. ಸೊಳ್ಳೆಪರದೆಯೊಳಗೆ ಕುಳಿತು ಧ್ಯಾನ ಮಾಡುತ್ತಾರೆ. ಜನ ಭಾವಿಸುತ್ತಾರೆ, 'ಇವರಿಗೆ ರಾತ್ರಿ ನಿದ್ರೆ ಬರಲಿಲ್ಲ ಅಂತ ಕಾಣುತ್ತೆ. ಅದಕ್ಕಾಗಿ ಹೊತ್ತು ಹುಟ್ಟಿದರೂ ನಿದ್ರೆ ಮಾಡುತ್ತಿದ್ದಾರೆ' ಎಂದು. ಸತ್ತ್ವಗುಣ, ಮೆಟ್ಟಿಲ ಸಾಲಿನ ಕೊನೆಯ ಹಂತ; ಮುಂದಿನದೇ ಚಾವಣಿ. ಸತ್ತ್ವಗುಣ ಉಂಟಾಯಿತು ಅಂದರೆ ಭಗವಂತನ ಸಾಕ್ಷಾತ್ಕಾರಕ್ಕೆ ಇನ್ನು ಹೆಚ್ಚು ಕಾಲವಿಳಂಬವಾಗದು—ಒಂದು ಕಿಂಚಿತ್ ಮುಂದುವರಿದರೇ ಆತ ದೊರೆತುಬಿಡುತ್ತಾನೆ. (ಸಬ್-ಜಡ್ಜಿಗೆ) ನೀನು ತಾನೆ ಹೇಳಿದವನು ಜನರೆಲ್ಲ ಒಂದೇ ಸರಿಸಮ ಅಂತ; ಈಗ ನೋಡು ಎಷ್ಟೊಂದು ವಿಧದ, ಭಿನ್ನಭಿನ್ನ ಪ್ರಕೃತಿಗಳ ಜನ ಇದ್ದಾರೆ ಎಂಬುದನ್ನ.

"ಇನ್ನೂ ಎಷ್ಟೋ ಅಂತಸ್ತಿನವರಿದ್ದಾರೆ; —ನಿತ್ಯಜೀವ, ಮುಕ್ತಜೀವ, ಮುಮುಕ್ಷುಜೀವ, ಬದ್ಧಜೀವ;—ವಿವಿಧ ತರದ ಮನುಷ್ಯರು. ನಾರದ ಮತ್ತು ಶುಕದೇವ ನಿತ್ಯಜೀವರು; ಯಾವರೀತಿಯಾಗಿ ಜಹಜು ತಾನೂ ಸಮುದ್ರದ ಆಚೆಯ ದಡವನ್ನು ಸೇರುವುದಲ್ಲದೆ, ದೊಡ್ಡ ದೊಡ್ಡ ಜೀವಜಂತುಗಳನ್ನು, ಕೊನೆಗೆ ಆನೆಯನ್ನೂ ಕೂಡ ಆಚೆ ದಡಕ್ಕೆ ಸಾಗಿಸಿಬಿಡುತ್ತದೆಯೊ, ಹಾಗೆ ಇವರೂ ಕೂಡ ತಾವು ಮುಕ್ತರಾಗುವುದೇ ಅಲ್ಲದೆ ಪರರೂ ಮುಕ್ತರಾಗಲು ನೆರವಾಗುತ್ತಾರೆ. ಮತ್ತೆ ಇವರನ್ನು ಒಂದು ಎಸ್ಟೇಟಿನ ಮ್ಯಾನೇಜರಿಗೆ ಹೋಲಿಸಬಹುದು. ಆತ ಒಂದು ತಾಲ್ಲೋಕಿನಲ್ಲಿ ಸುವ್ಯವಸ್ಥೆ ಮಾಡಿದನಂತರ ಮತ್ತೆ ಇನ್ನೊಂದು ತಾಲ್ಲೋಕಿಗೆ ಅದೇ ಕಾರ್ಯಕ್ಕಾಗಿ ಹೋಗುತ್ತಾನೆ. ಬಳಿಕ ಮುಮುಕ್ಷು ಜೀವಿಗಳಿದ್ದಾರೆ. ಇವರು ಸಂಸಾರ ಬಲೆಯಿಂದ ತಪ್ಪಿಸಿಕೊಳ್ಳಲು ಅತ್ಯಂತ ವ್ಯಾಕುಲಹೃದಯದಿಂದ ಬಹಳವಾಗಿ ಪ್ರಯತ್ನಮಾಡುವರು. ಇವರಲ್ಲಿ ಎಲ್ಲೋ ಒಬ್ಬಿಬ್ಬರು ಮಾತ್ರ ಬಲೆಯಿಂದ ತಪ್ಪಿಸಿಕೊಂಡುಬಿಡಬಹುದು. ಇವರೇ ಮುಕ್ತಜೀವರು. ನಿತ್ಯ ಜೀವರನ್ನು ಬಹಳ ಬುದ್ಧಿಯುಳ್ಳ ಮೀನಿಗೆ ಹೋಲಿಸಬಹುದು; ಅವರು ಎಂದಿಗೂ ಬಲೆಗೆ ಬೀಳರು.

"ಆದರೆ ಬದ್ಧ ಜೀವಿಗಳು – ಸಂಸಾರಜೀವಿಗಳು – ಇವರಿಗೆ ಪ್ರಜ್ಞೆ ಎಂಬುದೇ ಇಲ್ಲ. ಇವರು ಬಲೆಗೆ ಸಿಕ್ಕಿಕೊಂಡುಬಿಟ್ಟಿದ್ದಾರೆ. ಸಿಕ್ಕಿದ್ದರೂ ತಾವು ಬಲೆಗೆ ಸಿಕ್ಕಿಕೊಂಡುಬಿಟ್ಟಿದ್ದೇವಲ್ಲ ಎಂಬ ಅರಿವೇ ಇಲ್ಲ ಇವರಿಗೆ. ಇವರ ಎದುರಿಗೇ ಹರಿಕಥಾಶ್ರವಣವಾಗುತ್ತಿದ್ದರೆ, ಇವರು ಆ ಸ್ಥಳ ಬಿಟ್ಟು ಬೇರೆ ಕಡೆ ಹೊರಟುಹೋಗುತ್ತಾರೆ. ಇವರು ಹೇಳುತ್ತಾರೆ, 'ಹರಿ ನಾಮವನ್ನು ಸಾಯುವಾಗ ಮಾಡಿದರಾಯಿತು, ಈಗಲೆ ಏಕೆ?' ಎಂದು. ಇವರು ಮೃತ್ಯುಶಯ್ಯೆಯಲ್ಲಿ ಮಲಗಿರುವಾಗ ಹೆಂಡತಿಗೊ ಅಥವಾ ಮಕ್ಕಳಿಗೊ ಹೇಳುತ್ತಾರೆ, 'ದೀಪದ ಕಂಬಕ್ಕೆ ಅಷ್ಟೊಂದು ಬತ್ತಿಗಳನ್ನೇಕೆ ಹಾಕಿದ್ದೀರಿ? ಒಂದು ಬತ್ತಿಯೇ ಸಾಕು. ಇಲ್ಲದಿದ್ದರೆ ಎಣ್ಣೆ ಹೆಚ್ಚಾಗಿ ಖರ್ಚಾಗಿಬಿಡುತ್ತದೆ' ಎಂದು. ಮತ್ತೆ ಅದೇ ಸಮಯದಲ್ಲಿ ಹೆಂಡತಿ ಮಕ್ಕಳು ಇವರ ನೆನೆಸಿಕೊಂಡು ಗೋಳೋ ಅಂತ ಅಳುತ್ತಾರೆ; ಮತ್ತೆ ಹೇಳುತ್ತಾರೆ, 'ಅಯ್ಯೊ! ನಾನು ಸತ್ತರೆ ಇವರ ಗತಿಯೇನು?' ಎಂದು.

"ಬದ್ಧ ಜೀವರು ಯಾವ ಕಾರ್ಯದ ದೆಸೆಯಿಂದ ಅಷ್ಟೊಂದು ದುಃಖಗಳಿಗೆ ಈಡಾಗುವರೊ, ಮತ್ತೆ ಅದೇ ಕಾರ್ಯದಲ್ಲಿ ತೊಡಗುವರು. ಇವರ ವ್ಯವಹಾರ ಒಂಟೆಯ ಹಾಗೆ. ಒಂಟೆ ಮುಳ್ಳುಗಿಡ ತಿನ್ನಲು ಹೋಗಿ ಆದರ ಬಾಯಿಂದ ಪ್ರವಾಹದೋಪಾದಿಯಲ್ಲಿ ರಕ್ತ ಹರಿಯುತ್ತಿದ್ದರೂ ಅದು ಮಾತ್ರ ಆ ಮುಳ್ಳುಗಿಡ ತಿನ್ನುವುದನ್ನು ಬಿಡದು. ಒಂದು ಕಡೆ ನೋಡಿದರೆ ಮಕ್ಕಳು ಸತ್ತು ವಿಪರೀತ ಶೋಕಾಕ್ರಾಂತರಾಗಿರುತ್ತಾರೆ, ಆದರೂ ವರ್ಷಕ್ಕೊಂದು ಮಕ್ಕಳನ್ನು ಹಡೆಯುತ್ತಲೇ ಇರುತ್ತಾರೆ. ಮಗಳ ಮದುವೆಗಾಗಿ ಇದ್ದಬದ್ದ ಆಸ್ತಿಯನ್ನೆಲ್ಲ ಕಳೆದುಕೊಂಡರೂ ಪ್ರತಿ ವರ್ಷವೂ ಒಂದೊಂದು ಹೆಣ್ಣುಮಗುವನ್ನು ಹೆರುತ್ತಾರೆ. ಆಗ ಹೇಳ್ತಾರೆ, 'ನಾವೇನು ಮಾಡೋಣ? ಇದೆಲ್ಲ ನಾವು ತಂದ ಅದೃಷ್ಟ' ಎಂದು. ಇವರು ತೀರ್ಥಯಾತ್ರೆಗೆ ಹೋದರೆ, ಇವರಿಗೆ ಭಗವಚ್ಚಿಂತನೆ ಮಾಡಲು ಸಮಯವೇ ದೊರಕದು — ಹೆಂಡತಿಯ ಗಂಟುಮೂಟೆ ಹೊತ್ತೇ ಪ್ರಾಣ ಬಿಡಬೇಕಾಗುತ್ತದೆ; ದೇವಾಲಯಕ್ಕೆ ಹೋದರೆ ಮಕ್ಕಳಿಗೆ ಚರಣಾಮೃತ ಕುಡಿಸಿ ಅವರನ್ನೆಲ್ಲ ಅಡ್ಡಬೀಳಿಸುವುದರಲ್ಲೇ ನಿರತರಾಗಿಬಿಡುತ್ತಾರೆ. ಬದ್ಧ ಜೀವರು ತಮ್ಮ ಮತ್ತು ತಮ್ಮ ಪರಿವಾರದವರ ಉದರಪೋಷಣೆಗಾಗಿ ದಾಸತ್ವಕ್ಕೆ ಇಳಿಯುತ್ತಾರೆ — ಸುಳ್ಳು, ಮೋಸ, ಮುಖಸ್ತುತಿ ಇವುಗಳಲ್ಲಿ ತೊಡಗಿ ದುಡ್ಡು ಸಂಪಾದಿಸುತ್ತಾರೆ. ಯಾರು ಭಗವಚ್ಚಿಂತನೆಮಾಡು

ತ್ತಾರೊ, ಭಗವಂತನ ಧ್ಯಾನದಲ್ಲಿ ಮಗ್ನರಾಗಿರುತ್ತಾರೊ ಅವರನ್ನು ಈ ಬದ್ಧಜೀವರು, 'ಹುಚ್ಚರು' ಎಂದು ಹೀಯಾಳಿಸುತ್ತಾರೆ.

"ಮನುಷ್ಯರು ಎಂಥೆಂಥ ಸ್ವಭಾವದವರಿದ್ದಾರೆ ಎಂಬುದನ್ನು ನೋಡು. ನೀನು ಹೇಳಿಬಿಟ್ಟೆ ಎಲ್ಲಾ ಒಂದೇ ಅಂತ? ಎಷ್ಟೊಂದು ಭಿನ್ನ ಭಿನ್ನ ಪ್ರಕೃತಿಯುಳ್ಳವರಿದಾರೆ! ಕೆಲವರಲ್ಲಿ ಶಕ್ತಿ ವಿಶೇಷವಾಗಿದೆ, ಇನ್ನು ಕೆಲವರಲ್ಲಿ ಕಡಮೆ ಇದೆ.

"ಸಂಸಾರಾಸಕ್ತ ಬದ್ಧಜೀವರು ಸಾಯುವ ಸಮಯದಲ್ಲಿ ಸಾಂಸಾರಿಕ ಮಾತುಕತೆಗಳನ್ನೆ ಆಡುತ್ತಾರೆ. ತೋರಿಕೆಗಾಗಿ ಜಪಮಾಲೆ ತಿರುಗಿಸಿದರೆ, ಗಂಗಾಸ್ನಾನ ಮಾಡಿದರೆ, ತೀರ್ಥಯಾತ್ರೆ ಮಾಡಿದರೆ— ಏನು ತಾನೆ ದೊರಕೀತು? ಅಂತರ್ಯದಲ್ಲಿ ಸಂಸಾರಾಸಕ್ತಿ ಇದ್ದರೆ ಸಾಯುವಾಗ ಅದು ಹೊರಕ್ಕೆ ಕಾಣಿಸಿಕೊಂಡುಬಿಡುತ್ತದೆ. ಆಗ ಬರೀ ಅಬದ್ಧವನ್ನೇ ಬೊಗಳುವರು. ಬಹುಶಃ ಮತಿವಿಭ್ರಮೆಯಿಂದ ಚೀತ್ಕಾರಮಾಡಬಹುದು, 'ಅರಿಸಿನ! ಒಗ್ಗರಣೆ! ಕರುಬೇವಿನಸೊಪ್ಪು!' ಎಂದು. ಅರಗಿಣಿ ಯಾವ ತೊಂದರೆಗೂ ಈಡಾಗದಿರುವಾಗ, 'ರಾಧಾಕೃಷ್ಣ,' 'ರಾಧಾಕೃಷ್ಣ' ಎಂದು ಹೇಳುತ್ತದೆ; ಆದರೆ ಅದನ್ನ ಬೆಕ್ಕು ಹಿಡಿಯಿತೆಂದರೆ ಅದರ ಸ್ವಂತ ಕೂಗು ಹೊರಕ್ಕೆ ಬರುತ್ತದೆ. ಆಗ ಅದು, 'ಕ್ಯಾ! ಕ್ಯಾ' ಎಂದು ಕಿರಿಚಿಕೊಳ್ಳುತ್ತದೆ. ಸಾಯುವ ಸಮಯದಲ್ಲಿ ಏನೇನು ಭಾವನೆಗಳು ಬರುವುವೊ, ಅವುಗಳಂತೆಯೇ ಮುಂದಿನ ಜನ್ಮದಲ್ಲಿ ಫಲ ದೊರಕುವುದು ಎಂಬುದಾಗಿ ಗೀತೆಯಲ್ಲಿ ಹೇಳಿದೆ. ಭರತ ರಾಜ, 'ಜಿಂಕೆ! ಜಿಂಕೆ!' ಎಂದು ಕೂಗಿಕೊಳ್ಳುತ್ತಲೇ ದೇಹತ್ಯಾಗಮಾಡಿದ. ಅದಕ್ಕಾಗಿ ಮುಂದಿನ ಜನ್ಮದಲ್ಲಿ ಆತನಿಗೆ ಜಿಂಕೆ ಜನ್ಮ ದೊರೆಯಿತು. ಭಗವಂತನ ಚಿಂತನೆ ಮಾಡುತ್ತ ದೇಹತ್ಯಾಗ ಮಾಡಿದರೆ ಭಗವಂತನ ಸಾಕ್ಷಾತ್ಕಾರ ದೊರಕುತ್ತದೆ, ಮತ್ತೆ ಈ ಸಂಸಾರಕ್ಕೆ ಬರಬೇಕಾಗಿರೋದಿಲ್ಲ."

ಬ್ರಾಹ್ಮಭಕ್ತ: "ಮಹಾಶಯರೆ, ಒಬ್ಬ ವ್ಯಕ್ತಿ ಉಳಿದ ಸಮಯದಲ್ಲೆಲ್ಲಾ ಭಗವಚ್ಚಿಂತನೆ ಮಾಡಿದ್ದಾನೆ. ಆದರೆ, ಸಾಯುವಾಗ ಆತನ ಚಿಂತನೆ ಮಾಡಲಿಲ್ಲ ಅಂತ ಆತ ಮತ್ತೆ ಈ ಸುಖದುಃಖಮಯ ಸಂಸಾರಕ್ಕೆ ಹಿಂದಿರುಗಿ ಬರಬೇಕಾಗುತ್ತೇನು? ಹಾಗೆ ಏಕಾಗಬೇಕು, ಆತ ಹಿಂದೆ ಭಗವಚ್ಚಿಂತನೆ ಮಾಡಿದಾನಲ್ಲ?"

ಶ್ರೀರಾಮಕೃಷ್ಣರು: "ಮನುಷ್ಯ ಭಗವಚ್ಚಿಂತನೆಯನ್ನೇನೊ

ಮಾಡುತ್ತಾನೆ, ಆದರೆ ಆತನ ಇರುವಿಕೆಯಲ್ಲಿ ಆತನಿಗೆ ವಿಶ್ವಾಸವಿರೋದಿಲ್ಲ; ಮತ್ತೆ ಮತ್ತೆ ಭಗವಂತನನ್ನು ಮರೆಯುತ್ತಾನೆ ಮತ್ತು ಸಂಸಾರದಲ್ಲಿ ಆಸಕ್ತನಾಗುತ್ತಾನೆ. ಇದು ಆನೆಗೆ ಮೈ ತೊಳೆದ ಹಾಗೆ; ಅದು ಮತ್ತೆ ಧೂಳು ಮತ್ತು ಬದಿಯನ್ನು ಮೈಗೆ ಮೆತ್ತುಕೊಂಡುಬಿಡುತ್ತದೆ. 'ಮನಸ್ಸೆಂಬುದು ಒಂದು ಮದಿಸಿದ ಆನೆ.' ಆದರೆ ಆನೆಗೆ ಮೈ ತೊಳೆದ ಒಡನೆಯೆ ಅದನ್ನು ತೆಗೆದುಕೊಂಡು ಹೋಗಿ ಲಾಯದಲ್ಲಿ ಕಟ್ಟಿಹಾಕಿದರೆ ಅದು ಮತ್ತೆ ಧೂಳು ಮತ್ತು ಬದಿಯನ್ನು ಮೈಗೆ ಬಳಿದುಕೊಳ್ಳಲಾರದು. ಮನುಷ್ಯ ಮೃತ್ಯುಶಯ್ಯೆಯಲ್ಲಿ ಭಗವಂತನ ಚಿಂತನೆ ಮಾಡಿದರೆ ಆತನ ಮನಸ್ಸು ಶುದ್ಧವಾಗುತ್ತದೆ. ಬಳಿಕ ಆ ಮನಸ್ಸಿಗೆ ಮತ್ತೆ ಕಾಮಕಾಂಚನದಲ್ಲಿ ಆಸಕ್ತವಾಗಲು ಅವಕಾಶ ದೊರೆಯದು.

"ಮನುಷ್ಯನಿಗೆ ಭಗವಂತನಲ್ಲಿ ವಿಶ್ವಾಸವಿಲ್ಲ; ಅದಕ್ಕಾಗಿಯೆ ಆತ ಅಷ್ಟೊಂದು ದುಃಖವನ್ನು ಅನುಭವಿಸೋದು. ಜನ ಹೇಳುತ್ತಾರೆ, 'ಗಂಗಾಸ್ನಾನದ ಸಮಯದಲ್ಲಿ ಜನರ ಪಾಪಗಳೆಲ್ಲ ಅವರವರನ್ನು ಬಿಟ್ಟು ಗಂಗೆಯ ತೀರದಲ್ಲಿರುವ ಗಿಡಗಳ ಮೇಲೆ ಕುಳಿತುಕೊಂಡಿರುತ್ತವೆ. ಸ್ನಾನ ಮುಗಿಸಿ ದಡಕ್ಕೆ ಬರುವುದೇ ತಡ ಒಡನೆಯೆ ಅವು ನೆಗೆದು ಅವರವರ ಹೆಗಲನ್ನು ಹತ್ತಿಬಿಡುತ್ತವೆ' ಎಂದು. (ಎಲ್ಲರೂ ನಗುತ್ತಾರೆ.) ದೇಹತ್ಯಾಗದ ಸಮಯದಲ್ಲಿ ಭಗವಂತನ ಚಿಂತನೆ ಬರಬೇಕಾದರೆ, ಬದುಕಿರುವಾಗಲೆ ಅದಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಿಕೋಬೇಕು. ಸಿದ್ಧತೆ—ಅಭ್ಯಾಸಯೋಗ. ಭಗವಚ್ಚಿಂತನೆಯ ಅಭ್ಯಾಸವನ್ನು ಮಾಡಿದ್ದರೆ ಜೀವನದ ಕೊನೆಯ ದಿನವೂ ಆತನ ಭಾವನೆ ಮನಸ್ಸಿನಲ್ಲಿ ಏಳುತ್ತದೆ."

ಬ್ರಾಹ್ಮಭಕ್ತ: "ಬಹಳ ಒಳ್ಳೆಯ ಮಾತುಕತೆಗಳಾದುವು. ಬಹಳ ಒಳ್ಳೆಯ ವಿಷಯಗಳು ಇವು."

ಶ್ರೀರಾಮಕೃಷ್ಣರು: "ಬಾಯಿಗೆ ಬಂದುದನ್ನೆಲ್ಲ ಬೊಗಳಿಬಿಟ್ಟೆ. ಆದರೆ ನನ್ನ ಭಾವ ಏನೆಂಬುದು ನಿನಗೆ ಗೊತ್ತೆ? ನಾನು ಯಂತ್ರ ಆಕೆ ಯಂತ್ರಿ; ನಾನು ಗೃಹ ಆಕೆ ಗೃಹಿಣಿ; ನಾನು ಎಂಜಿನ್ ಆಕೆ ಎಂಜಿನೀಯರ್; ನಾನು ರಥ ಆಕೆ ರಥಿ; ಆಕೆ ನಡೆಸಿದಂತೆ ನಡೆಯುತ್ತೇನೆ, ಮಾಡಿಸಿದಂತೆ ಮಾಡುತ್ತೇನೆ."

ಪಕ್ಕವಾದ್ಯಗಳೊಡನೆ ತ್ರೈಲೋಕ್ಯ ಹಾಡಲು ಆರಂಭಿಸಿದ್ದಾನೆ. ಪರಮಹಂಸರು ಪ್ರೇಮದಿಂದ ಉನ್ಮತ್ತರಾಗಿ ನರ್ತಿಸುತ್ತಿದ್ದಾರೆ.

ನರ್ತಿಸುತ್ತ ನರ್ತಿಸುತ್ತ ಎಷ್ಟೊಂದು ಸಲ ಸಮಾಧಿಸ್ಥರಾದರೊ! ಈಗ ಸಮಾಧಿಸ್ಥರಾಗಿ ನಿಂತುಕೊಂಡೇ ಇದ್ದಾರೆ. ಸ್ಪಂದಹೀನ ದೇಹ, ಸ್ಥಿರ ನೇತ್ರ, ಪ್ರಸನ್ನವದನ ಇವುಗಳಿಂದ ಕೂಡಿ ಯಾರೊ ಒಬ್ಬ ಆಪ್ತ ಭಕ್ತನ ಹೆಗಲ ಮೇಲೆ ಕೈ ಇಟ್ಟುಕೊಂಡಿದ್ದಾರೆ. ಆ ಭಾವದಿಂದ ಕೆಳಕ್ಕೆ ಇಳಿದು ಬಂದನಂತರ ಮದಿಸಿದ ಆನೆಯಂತೆ ನರ್ತಿಸುತ್ತಿದ್ದಾರೆ. ಬಾಹ್ಯದಶೆ ಉಂಟಾಗಿ ಆ ಹಾಡಿಗೆ ಆಶುಕವಿತೆಗಳನ್ನು ಮಾಡುತ್ತಿದ್ದಾರೆ:

ನಿನ್ನ ಭಕ್ತರ ಜೊತೆಗೆ ಕುಣಿ ಕುಣಿದು ಅವರನೂ
ಕುಣಿಸು ಬಾ ತಾಯೀ!
ಭುವನ ಮೋಹನ ರೂಪೆ, ನನ್ನ ಹೃದಿಪದ್ಮದಲಿ
ನಿತ್ಯಲಾಸ್ಯದಿ ತೊಡಗಿ ನೆಲಸು ಬಾ ತಾಯಿ!

ಅದು ಒಂದು ಅಪೂರ್ವ ದೃಶ್ಯವೇ ಆಗಿತ್ತು! ಮಾತೃಗತಪ್ರಾಣ ರಾದ ಅವರು ಪ್ರೇಮದಿಂದ ಉನ್ಮತ್ತರಾಗಿ ಬಾಲಕನೋಪಾದಿಯಲ್ಲಿ ಸ್ವರ್ಗ ಸದೃಶ ನೃತ್ಯವನ್ನು ನರ್ತಿಸುತ್ತಿರುವಂತೆ ಇತ್ತು. ಈಗ ಬ್ರಾಹ್ಮಭಕ್ತರು ಅವರನ್ನು ಸುತ್ತುಗಟ್ಟಿ ನರ್ತಿಸುತ್ತಿದ್ದಾರೆ. ಅಯಸ್ಕಾಂತ ಲೋಹ ವನ್ನು ಆಕರ್ಷಿಸುವ ರೀತಿಯಲ್ಲಿ ಬ್ರಾಹ್ಮಭಕ್ತರು ಆಕರ್ಷಿತರಾಗಿಬಿಟ್ಟಿ ದ್ದಾರೆ. ಎಲ್ಲರೂ ಉನ್ಮತ್ತರಾಗಿ ಬ್ರಹ್ಮನಾಮಸಂಕೀರ್ತನೆ ಮಾಡು ತ್ತಿದ್ದಾರೆ. ಮತ್ತೆ ಬ್ರಹ್ಮನ ಆ ಮಧುರ ನಾಮ, ಭಗವತಿಯ ನಾಮ ಹಾಡುತ್ತಿದ್ದಾರೆ. ಅನೇಕರು ಬಾಲಕರ ಹಾಗೆ, 'ತಾಯಿ! ತಾಯಿ!' ಎಂದು ರೋದಿಸಲಾರಂಭಿಸಿದ್ದಾರೆ.

ಕೀರ್ತನೆ ಮುಗಿದನಂತರ ಎಲ್ಲರೂ ಕುಳಿತುಕೊಂಡರು. ಘಂಟೆ ಎಂಟಾಗಿದ್ದರೂ ಇನ್ನೂ ಸಮಾಜದ ಸಾಯಂ ಪ್ರಾರ್ಥನೆ ಆರಂಭವಾಗಿರ ಲಿಲ್ಲ. ಈ ಸ್ವರ್ಗಸದೃಶ ಕೀರ್ತನೆಯ ಆನಂದದಲ್ಲಿ ನಿಯಮಗಿಯಮ ಗಳೆಲ್ಲ ಎಲ್ಲೋ ಹಾರಿ ಹೋಗಿಬಿಟ್ಟಿವೆ. ಇಂದಿನ ರಾತ್ರಿ ವಿಜಯಕೃಷ್ಣ ಗೋಸ್ವಾಮಿ ವೇದಿಕೆಯಲ್ಲಿ ಮಂಡಿಸುವ ವ್ಯವಸ್ಥೆಯಾಗಿದೆ. ಆತ ಪರಮಹಂಸರ ಮುಂದೆಯೆ ಕುಳಿತುಕೊಂಡಿದ್ದಾನೆ. ವಿಜಯನ ಅತ್ತೆ ಮತ್ತು ಇನ್ನೂ ಕೆಲವು ಮಹಿಳೆಯರು ಪರಮಹಂಸರೊಡನೆ ಮಾತುಕತೆ ಗಳನ್ನಾಡಬೇಕೆಂದು ಇಚ್ಛಿಸಿದರು. ಪರಮಹಂಸರು ಎದ್ದು ಬೇರೊಂದು ಕೊಠಡಿಗೆ ಹೋಗಿ ಅವರನ್ನು ಸಂಧಿಸಿದರು.

ಸ್ವಲ್ಪ ಹೊತ್ತಾದನಂತರ ಹಿಂದಿರುಗಿ ಬಂದು ವಿಜಯನಿಗೆ ಹೇಳುತ್ತಿದ್ದಾರೆ, "ನಿನ್ನ ಅತ್ತೆಯುದು ಎಂಥಾ ಭಕ್ತಿ! ಹೇಳಿದಳು, 'ಈ ಸಂಸಾರ ನನಗೆ ಸುಮ್ಮನೆ ರೋಸಿಹೋಗಿಬಿಟ್ಟಿದೆ. ಒಂದು ಅಲೆಯಿಂದ ಪಾರಾದೆವು ಎಂದರೆ ಇನ್ನೊಂದು ಅಲೆ ಬಂದುಕೊಂಡೇ ಇರುತ್ತದೆ,' ಎಂದು. ನಾನು ಹೇಳಿದೆ, 'ನಿನಗೂ ಅದಕ್ಕೂ ಏನು ಸಂಬಂಧ? ನಿನಗಂತು ಆಗಲೆ ಜ್ಞಾನ ದೊರೆತುಬಿಟ್ಟಿದೆಯಲ್ಲ' ಅಂತ. ಅದಕ್ಕೆ ಆಕೆ ಹೇಳಿದಳು, 'ನನಗೆ ಆಗಲೆ ಜ್ಞಾನ ದೊರೆತುಬಿಟ್ಟಿದೆಯೆ! ನಾನು ಇನ್ನೂ ವಿದ್ಯಾಮಾಯೆ ಮತ್ತು ಅವಿದ್ಯಾಮಾಯೆಯನ್ನು ದಾಟಿಹೋಗಿಲ್ಲ; ಅವಿದ್ಯೆಯಿಂದ ಮುಕ್ತವಾದರೇ ಸಾಕಾಗದು, ವಿದ್ಯೆಯಿಂದಲೂ ಮುಕ್ತವಾಗಬೇಕಾಗಿದೆ. ಆಗತಾನೆ ಜ್ಞಾನ ದೊರಕುತ್ತದೆ. ನೀವೇ ಹಾಗೆ ಹೇಳುತ್ತೀರಲ್ಲ' ಎಂದು."

ಪರಮಹಂಸರು ಈ ರೀತಿಯಾಗಿ ಮಾತನಾಡುತ್ತಿರುವಾಗ ವೇಣೀಪಾಲ ಅಲ್ಲಿಗೆ ಬಂದ.

ವೇಣೀಪಾಲ ವಿಜಯನಿಗೆ: "ಮಹಾಶಯ, ದಯವಿಟ್ಟು ಏಳಿ, ಆಗಲೆ ಹೊತ್ತಾಗಿಬಿಟ್ಟಿದೆ; ಉಪಾಸನೆಯನ್ನು ಶುರುಮಾಡಿ."

ವಿಜಯ: "ಮಹಾಶಯ, ಇನ್ನು ಉಪಾಸನೆಯ ಆವಶ್ಯಕತೆ ಏನಿದೆ? ನಿಮ್ಮ ವ್ಯವಸ್ಥೆ ನೋಡಿದರೆ ಮೊದಲು ಪಾಯಸ ಬಳಿಕ ಅನ್ನ ಸಾರು ಅಂತ ಕಾಣುತ್ತೆ."

ಶ್ರೀರಾಮಕೃಷ್ಣರು ನಗುತ್ತ: "ಭಕ್ತ ಎಂಥವನೊ ಅವನಂತೆ ವ್ಯವಸ್ಥೆ. ಸಾತ್ತ್ವಿಕಭಕ್ತ ಭಗವಂತನಿಗೆ ಪಾಯಸವನ್ನು ಅರ್ಪಿಸುತ್ತಾನೆ; ರಾಜಸಿಕಭಕ್ತ ಭಕ್ಷಭೋಜ್ಯಾದಿಗಳನ್ನು ಅರ್ಪಿಸುತ್ತಾನೆ; ತಾಮಸಿಕಭಕ್ತ ಆಡು ಮತ್ತು ಉಳಿದ ಪ್ರಾಣಿಗಳ ಬಲಿ ಕೊಡುತ್ತಾನೆ."

ವಿಜಯ ಉಪಾಸನೆ ನಡೆಸಲು ವೇದಿಕೆಯ ಮೇಲಕ್ಕೆ ಹೋಗುವುದೊ ಬೇಡವೊ ಎಂದು ಚಿಂತಿಸುತ್ತಿದ್ದಾನೆ. ಆತ ಪರಮಹಂಸರಿಗೆ ಪ್ರಾರ್ಥನೆ ಮಾಡಿಕೊಂಡ, "ಅನುಗ್ರಹ ಮಾಡುವುದಾದರೆ ನಾನು ವೇದಿಕೆಯ ಮೇಲೆ ಹೋಗಿ ಉಪಾಸನೆ ನಡೆಸುವೆನು" ಎಂದು.

ಶ್ರೀರಾಮಕೃಷ್ಣರು: "ಅಭಿಮಾನ ಹೋಯಿತು ಎಂದರೆ ಎಲ್ಲ ಸರಿ ಹೋಗುತ್ತದೆ. 'ನಾನು ಉಪನ್ಯಾಸ ಮಾಡುತ್ತೇನೆ, ನೀವು ಕೇಳಿ' ಎಂಬ ಈ ಅಭಿಮಾನ ಇಲ್ಲದೆ ಇದ್ದರೆ ಯಾವ ತೊಂದರೆಯೂ ಬರದು.

ಅಹಂಕಾರ ಜ್ಞಾನಜನ್ಯವಾದುದೊ ಅಜ್ಞಾನಜನ್ಯವಾದುದೊ? ಯಾರು ನಿರಹಂಕಾರಿಯೊ ಆತನಿಗೆ ಮಾತ್ರವೇ ಜ್ಞಾನ ಲಭಿಸುತ್ತದೆ. ಮಳೆಯ ನೀರು ತಗ್ಗು ಪ್ರದೇಶದಲ್ಲಿ ಶೇಖರವಾಗುತ್ತದೆ; ಎತ್ತರ ಪ್ರದೇಶದಿಂದ ಕೆಳಕ್ಕೆ ಹರಿದುಬಂದುಬಿಡುತ್ತದೆ.

"ಎಲ್ಲಿಯವರೆಗೆ ಅಹಂಕಾರವಿರುವುದೊ ಅಲ್ಲಿಯವರೆಗೆ ಜ್ಞಾನ ದೊರಕದು; ಮುಕ್ತಿಯೂ ದೊರಕದು; ಈ ಸಂಸಾರಕ್ಕೆ ಮತ್ತೆ ಮತ್ತೆ ಹಿಂದಿರುಗಿ ಬರಬೇಕಾಗುತ್ತದೆ. ಹಸುವಿನ ಕರು, 'ಹಂಬಾ! ಹಂಬಾ!' ಅಂದರೆ, 'ನಾನು! ನಾನು!' ಅನ್ನುತ್ತದೆ. ಅದಕ್ಕಾಗಿಯೆ ಅದಕ್ಕೆ ಕಾದಿದೆ ಅಷ್ಟೊಂದು ಚಿತ್ರಹಿಂಸೆ. ಕಟುಕ ಅದನ್ನು ಕೊಲ್ಲುತ್ತಾನೆ. ಅದರ ಚರ್ಮದಿಂದ ಮೆಟ್ಟು ಆಗುತ್ತದೆ, ನಗಾರಿಯ ಮತ್ತು ಡೋಲಿನ ಬಾಯಿಮುಚ್ಚಳ ಆಗುತ್ತದೆ. ಅದನ್ನು ಜನ ದಯದಾಕ್ಷಿಣ್ಯವಿಲ್ಲದೆ ಸುಮ್ಮನೆ ಬಡಿಯುತ್ತಾರೆ. ಅದರ ಕಷ್ಟ ಅಷ್ಟಕ್ಕೇ ಮುಗಿಯೋಹಾಗಿಲ್ಲ. ಕಟ್ಟಕಡೆಗೆ ಅದರ ಕರುಳಿನಿಂದ ಹುರಿಯಾಗುತ್ತದೆ. ಆ ಹುರಿಯಿಂದ ಹತ್ತಿ ಯುಕ್ಕುವ ಯಂತ್ರವನ್ನು ತಯಾರುಮಾಡುತ್ತಾರೆ. ಆ ಯಂತ್ರದಿಂದ ಹತ್ತಿ ಯನ್ನು ಯುಕ್ಕುವಾಗ ಆ ಹುರಿ ಯಾವಾಗ 'ತುಹ್ನೊ! ತುಹ್ನೊ!' ಅಂದರೆ, 'ನೀನು! ನೀನು!' ಎಂದು ಹೇಳಲು ಆರಂಭಿಸುವುದೊ ಆಗ ಅದಕ್ಕೆ ಬಿಡುಗಡೆ. ಬಳಿಕ ಅದು ಎಂದಿಗೂ, 'ಹಂಬಾ! ಹಂಬಾ!' ಎಂದು ಹೇಳದು, 'ನೀನು! ನೀನು!' ಎಂದೇ ಹೇಳುತ್ತದೆ. ಅಂದರೆ, 'ಹೇ ಭಗವಂತ, ನೀನು ಕರ್ತ, ನಾನು ಅಕರ್ತ; ನೀನು ಯಂತ್ರಿ, ನಾನು ಯಂತ್ರ; ಸಮಸ್ತವೂ ನೀನೇ' ಅಂತ.

"ಇವು ಮೂರು ಪದಗಳ—'ಗುರು', 'ತಂದೆ', 'ಕರ್ತ'— ಮಾತು ಎತ್ತಿದರೇ ನನಗೆ ಮುಳ್ಳು ಚುಚ್ಚಿದ ಹಾಗೆ ಅನುಭವ. ನಾನು ಆತನ ಮಗು, ಎಂದೆಂದಿಗೂ ಬಾಲಕನೆ. ಹೀಗಿರುವಲ್ಲಿ ನಾನು ಯಾವ ರೀತಿಯಾಗಿ ತಂದೆ ಆಗಬಲ್ಲೆ? ಭಗವಂತನೇ ಕರ್ತ, ನಾನು ಅಕರ್ತ; ಆತ ಯಂತ್ರಿ, ನಾನು ಯಂತ್ರ ಮಾತ್ರ.

"ಯಾರಾದರು ನನ್ನನ್ನು, 'ಗುರು!' ಎಂದು ಸಂಬೋಧಿಸಿದರೆ ನಾನು ಉತ್ತರವೀಯುತ್ತೇನೆ, 'ತಿಳಿಗೇಡಿ, ದೂರ ಸರಿ! ಹೇಗೆ ನಾನು ಗುರು?' ಎಂದು. ಸಚ್ಚಿದಾನಂದನೊಬ್ಬನನ್ನು ಬಿಟ್ಟರೆ ಬೇರೆ ಯಾರೂ ಗುರು ಅಂಬುವರೇ ಇಲ್ಲ. ಆತ ವಿನಾ ಬೇರೆ ಯಾವ ಆಸರೆಯೂ ಇಲ್ಲ.

ಕೇವಲ ಆತ ಮಾತ್ರನೇ ಈ ಭವಸಾಗರದ ಅಂಬಿಗ. (ವಿಜಯನಿಗೆ) ಆಚಾರ್ಯಗಿರಿ ಕೆಲಸ ಬಹಳ ಕಠಿನವಾದ್ದು. ಅದರಿಂದ ಆಚಾರ್ಯನಿಗೇ ಹಾನಿಯುಂಟಾಗುತ್ತದೆ. ಒಂದು ಹತ್ತಾರು ಜನ ಗೌರವಿಸುವುದನ್ನು ನೋಡಿ, ಕಾಲಿನ ಮೇಲೆ ಕಾಲು ಹಾಕಿಕೊಂಡು ಹೇಳುತ್ತಾನೆ, 'ನಾನು ಉಪದೇಶಮಾಡುತ್ತೇನೆ, ನೀವೆಲ್ಲ ಕೇಳಿ' ಎಂದು. ಈ ಭಾವ ಬಹಳ ಕೆಟ್ಟದ್ದು. ಆತನಿಗೆ ನಿಜವಾಗಿ ದೊರೆಯುವುದು ಒಂದಷ್ಟು ಗೌರವ ಮಾತ್ರ! ಅತಿ ಹೆಚ್ಚೆಂದರೆ ಜನ ಹೇಳುತ್ತಾರೆ, 'ಆಹ! ವಿಜಯಬಾಬು ಬಹಳ ಚೆನ್ನಾಗಿ ಮಾತನಾಡುತ್ತಾನೆ; ಒಳ್ಳೇ ಜ್ಞಾನಿ' ಅಂತ. 'ನಾನು ಉಪದೇಶ ಮಾಡುತ್ತೇನೆ' ಎಂಬ ಭಾವನೆ ನಿನಗೆ ಎಂದಿಗೂ ಬಾರದೆ ಇರಲಿ. ನಾನು ತಾಯಿಗೆ ಹೇಳುತ್ತೇನೆ, 'ಹೇ ತಾಯೆ! ನೀನು ಯಂತ್ರಿ, ನಾನು ಯಂತ್ರ; ಮಾಡಿಸಿದಂತೆ ಮಾಡುತ್ತೇನೆ, ನುಡಿಸಿದಂತೆ ನುಡಿಯುತ್ತೇನೆ' ಎಂದು."

ವಿಜಯ ವಿನಯದಿಂದ: "ನೀವು ಹೇಳುವುದಾದರೆ ಮಾತ್ರ ಅಲ್ಲಿಗೆ ಹೋಗಿ ಕುಳಿತುಕೊಳ್ಳುತ್ತೇನೆ."

ಶ್ರೀರಾಮಕೃಷ್ಣರು ನಗುನಗುತ್ತ: "ನಾನು ಏನ ಹೇಳಲಿ? ಚಂದಮಾಮ ಎಲ್ಲರ ಮಾಮ. ನೀನೇ ಆತನಿಗೆ ಹೇಳಿಕೊ. ನಿಷ್ಕಪಟ ಯಾಗಿದ್ದರೆ ಯಾವ ಭಯವೂ ಇಲ್ಲ."

ವಿಜಯ ಮತ್ತೆ ಅನುಮತಿಗಾಗಿ ಪ್ರಾರ್ಥನೆಮಾಡಿಕೊಳ್ಳಲು ಶ್ರೀರಾಮಕೃಷ್ಣರು ಹೇಳಿದರು, "ಹೋಗು, ಪದ್ಧತಿಗನುಸಾರ ನಡೆಯಿಸು. ನಿಜವಾದ ಭಕ್ತಿಯನ್ನು ಆತನಲ್ಲಿ ಇಟ್ಟಿದ್ದರೆ ಎಲ್ಲಾ ಸರಿಹೋಗುತ್ತದೆ" ಎಂದು.

ವಿಜಯ ವೇದಿಕೆಯ ಮೇಲೆ ಕುಳಿತು ಬ್ರಾಹ್ಮಸಮಾಜದ ಪದ್ಧತಿ ಪ್ರಕಾರ ಉಪಾಸನೆ ಪ್ರಾರಂಭಿಸಿದನು. ಆತ ಉಪಾಸನೆಯ ಸಮಯದಲ್ಲಿ, 'ತಾಯಿ! ತಾಯಿ!' ಎಂದು ಕರೆಯುತ್ತಿದ್ದನು. ಎಲ್ಲರ ಮನಸ್ಸೂ ದ್ರವೀ ಭೂತವಾಗಿಬಿಟ್ಟಿತ್ತು.

ಉಪಾಸನೆ ಮುಗಿಯಿತು. ಭಕ್ತರ ಭೋಜನಕ್ಕೆ ವ್ಯವಸ್ಥೆ ನಡೆಯುತ್ತಿದೆ. ಜಮಖಾನ-ಗಿಮಖಾನಗಳನ್ನು ಮಡಿಸಿಟ್ಟು ಎಲೆ ಹಾಕುತ್ತಿದ್ದಾರೆ. ಭಕ್ತರೆಲ್ಲ ಕುಳಿತುಕೊಂಡರು. ಪರಮಹಂಸರಿಗೂ ಒಂದು ಸ್ಥಳವನ್ನು ಏರ್ಪಡಿಸಿದರು. ಅವರು ಆ ಸ್ಥಳದಲ್ಲಿ ಕುಳಿತುಕೊಂಡು, ವೇಣೀಪಾಲ ಬಡಿಸಿದ ಪೂರಿ, ಕಚೂರಿ, ಹಪ್ಪಳ, ನಾನಾವಿಧ ಮೃಷ್ಟಾನ್ನ, ಮೊಸರು,

ಕೀರು ಇತ್ಯಾದಿಗಳೆಲ್ಲವನ್ನು ಭಗವಂತನಿಗೆ ಅರ್ಪಿಸಿ ಆನಂದದಿಂದ ಆತನ ಪ್ರಸಾದವನ್ನು ಸ್ವೀಕರಿಸಿದರು.

ಊಟವಾದನಂತರ ಎಲ್ಲರೂ ತಾಂಬೂಲವನ್ನು ಅಗಿಯುತ್ತ ಅಗಿಯುತ್ತ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಲು ಸಿದ್ಧರಾಗುತ್ತಿದ್ದಾರೆ. ಪರಮಹಂಸರು ಏಕಾಂತದಲ್ಲಿ ಕುಳಿತು ವಿಜಯನೊಡನೆ ಮಾತುಕತೆಗಳನ್ನಾಡುತ್ತಿದ್ದಾರೆ. ಅಲ್ಲಿ ಮಾಸ್ಟರ್ ಕೂಡ ಇದ್ದಾನೆ.

ಶ್ರೀರಾಮಕೃಷ್ಣರು: "ನೀನು ಭಗವಂತನನ್ನು, 'ತಾಯಿ! ತಾಯಿ!' ಎಂದು ಸಂಬೋಧಿಸಿ ಪ್ರಾರ್ಥಿಸುತ್ತಿದ್ದೆ. ಅದು ಬಹಳ ಒಳ್ಳೆಯದು. ಜನ ಹೇಳುತ್ತಾರೆ, 'ತಾಯಿಯ ಒಲವು ತಂದೆಯದಕ್ಕಿಂತ ಅಧಿಕ' ಅಂತ. ತಾಯಿಯನ್ನ ಬಲಾತ್ಕರಿಸಿ ಕೇಳಬಹುದು, ಆದರೆ ತಂದೆಯೊಡನೆ ಅದು ನಡೆಯದು. ತ್ರೈಲೋಕ್ಯನ ತಾಯಿಯ ಜಮೀನುದಾರಿಯಿಂದ ಗಾಡಿ ಗಾಡಿ ಹಣ ಬರುತ್ತಿತ್ತು. ತಲೆಗೆ ಕೆಂಪು ರುಮಾಲನ್ನು ಸುತ್ತಿದ್ದ ಮತ್ತು ಕೈಯಲ್ಲಿ ಬೀಸುದೊಣ್ಣೆಯನ್ನು ಹಿಡಿದಿದ್ದ ಆಜಾನುಬಾಹು ಸಿಬ್ಬಂದಿಗಳು ಅದರೊಡನೆ ರಕ್ಷಕರಾಗಿ ಬರುತ್ತಿದ್ದರು. ತ್ರೈಲೋಕ್ಯ ತನ್ನ ಜನರೊಡನೆ ರಸ್ತೆ ಕಾಯುತ್ತಿದ್ದು ಬಲಪ್ರಯೋಗ ಮಾಡಿ ಅದನ್ನೆಲ್ಲ ಅಪಹರಿಸಿಕೊಂಡುಬಿಟ್ಟ. ತಾಯಿಯ ಹಣದ ಮೇಲೆ ಮಗ ಕೈ ಇಡಲು ಸಾಧ್ಯ. ಜನ ಏನೋ ಒಂದನ್ನ ಹೇಳ್ತಾರಲ್ಲ, 'ಮಗನ ಮೇಲೆ ಮೊಕದ್ದಮೆ ಹೂಡಲು ತಾಯಿಗೆ ಕೋರ್ಟಿನ ಅನುಮತಿ ದೊರಕದು' ಅಂತ."

ವಿಜಯ: "ಬ್ರಹ್ಮನೆ ಭಗವತಿಯಾಗಿರುವುದಾದರೆ, ಆತ ಸಾಕಾರನೊ ಅಥವಾ ನಿರಾಕಾರನೊ?"

"ಶ್ರೀರಾಮಕೃಷ್ಣರು: "ಯಾರು ಬ್ರಹ್ಮನೊ ಆತನೇ ಕಾಳಿ, ಭಗವತಿ, ಆದ್ಯಾಶಕ್ತಿ. ನಿಷ್ಕ್ರಿಯನಾಗಿರುವಾಗ ಆತನಿಗೆ ಬ್ರಹ್ಮ ಎಂದು ಹೆಸರು. ಯಾವಾಗ ಸೃಷ್ಟಿ ಸ್ಥಿತಿ ಪ್ರಳಯ ಈ ಕಾರ್ಯಗಳನ್ನು ಮಾಡುತ್ತಾನೊ ಆಗ ಆತನಿಗೆ ಶಕ್ತಿ ಎಂದು ಹೆಸರು. ಸ್ಥಿರ ಜಲ ಬ್ರಹ್ಮನ ಉಪಮೆ. ಅಲೆಯಾಕಾರದಲ್ಲಿ ಎದ್ದು ಬೀಳುವ ಜಲ ಶಕ್ತಿಯ ಅಥವಾ ಕಾಳಿಯ ಉಪಮೆ. ಹಾಗಾದರೆ ಕಾಳಿ ಎಂಬುವಳು ಯಾರು? ಯಾರು ಮಹಾಕಾಲನೊಡನೆ (ಬ್ರಹ್ಮನೊಡನೆ) ರಮಿಸುತ್ತಾಳೊ ಅವಳು. ಆಕೆ ಸಾಕಾರಳೂ ಹೌದು, ನಿರಾಕಾರಳೂ ಹೌದು. ನಿಮಗೆ ನಿರಾಕಾರದಲ್ಲಿ ವಿಶ್ವಾಸವಿರುವುದಾದರೆ ಕಾಳಿಯನ್ನು ಆ ರೂಪಿನಿಂದ ಚಿಂತನೆಮಾಡಿ

ಯಾವುದಾದರು ಒಂದನ್ನು ಹಿಡಿದು ಆಕೆಯ ಚಿಂತನೆ ಮಾಡಿದರೆ ತಾನು ಏನೇನು ಎಂಬುದನ್ನು ಆಕೆಯೇ ತೋರಿಸಿಕೊಟ್ಟುಬಿಡುತ್ತಾಳೆ. ಶ್ಯಾಮಪುಕುರಕ್ಕೆ ಹೋಗಿ ತಲುಪಿದರೆ ತೇಲೀಕೊಪ್ಪಲು ಎಲ್ಲಿದೆ ಅಂಬುದೂ ಗೊತ್ತಾಗಿಬಿಡುತ್ತದೆ. ಆಗ ಆಕೆಯ ಇರುವಿಕೆಯ ಅನುಭವ ದೊರೆಯುವುದೊಂದೇ ಅಲ್ಲ, ನಾನು ನಿಮ್ಮೊಡನೆ ಮಾತನಾಡುತ್ತಿರುವಂತೆ ಆಕೆ ನಿಮ್ಮ ಹತ್ತಿರ ಬಂದು ನಿಮ್ಮೊಡನೆ ಮಾತನಾಡುವುದರ ಅನುಭವವೂ ದೊರೆಯುತ್ತದೆ. ಆದರೆ ಒಂದು ವಿಷಯ— ನಿಮಗೆ ನಿರಾಕಾರದಲ್ಲಿ ವಿಶ್ವಾಸವಿರುವುದಾದರೆ ಅದನ್ನೇ ದೃಢವಾಗಿ ಹಿಡಿದುಕೊಳ್ಳಿ. ಆದರೆ ಮಾತ್ರ ಸ್ವಮತ ಭ್ರಾಂತರಾಗಬೇಡಿ. ಆತನ ಸಂಬಂಧವಾಗಿ ಎಂದಿಗೂ ಹೀಗೆ ಒತ್ತಿ ಹೇಳಬೇಡಿ; 'ಆತ ಇದು ಆಗಬಲ್ಲ, ಅದು ಆಗಲಾರ' ಎಂದು. ಅದಕ್ಕೆ ಬದಲು ಹೇಳಿ, 'ನನ್ನ ವಿಶ್ವಾಸ ಆತ ನಿರಾಕಾರ ಅಂತ; ಆತ ಇನ್ನೇನು ಆಗಬಲ್ಲನೋ ಅದು ಆತನಿಗೇ ಗೊತ್ತು. ಅದು ನನಗೆ ಗೊತ್ತಿಲ್ಲ; ತಿಳಿದುಕೊಳ್ಳಲಾಗುತ್ತಿಲ್ಲ' ಎಂದು. ಮನುಷ್ಯನ ಒಂದು ಚಟಾಕು ಬುದ್ಧಿಯಿಂದ ಭಗವಂತನ ಸ್ವರೂಪವನ್ನು ಅರಿಯಲು ಸಾಧ್ಯವೆ? ಒಂದು ಸೇರಿನ ಗಡಿಗೆ ನಾಲ್ಕು ಸೇರು ಹಾಲನ್ನು ಹಿಡಿಸುವುದೆ? ಆತ ಕೃಪೆಮಾಡಿ ಯಾವಾಗಲಾದರು ದರ್ಶನ ಕೊಡುವುದಾದರೆ ಮತ್ತು ತಿಳಿಸಿಕೊಡುವುದಾದರೆ ಆಗ ಅರಿತುಕೊಳ್ಳಲು ಸಾಧ್ಯ; ಇಲ್ಲದೆ ಇದ್ದರೆ ಸಾಧ್ಯವೇ ಇಲ್ಲ.

"ಯಾರು ಬ್ರಹ್ಮನೊ ಆತನೇ ಶಕ್ತಿ ಆತನೇ ಭಗವತಿ.

ಶ್ರೀ ಪ್ರಸಾದನು ನುಡಿವನೀ ತೆರ:
ಮಾತೃಭಾವದಿ ನೆನೆವೆನು,
ಈ ರಹಸ್ಯವ ಜಗದ ಸಂತೆಯು
ಜನದ ಜಂಗುಳಿಗೊರೆಯೆನು!
ನನ್ನ ಸೂಚನೆಯರಿತು ನೀವೇ
ತಿಳಿಯಿರಾಕೆಯ ನಿಜವನು!

'ಮಾತೃಭಾವದಿ ನೆನೆವೆನು,' ಅಂದರೆ, ನಾನು ಬ್ರಹ್ಮನ ಸ್ವರೂಪವನ್ನು ಅರಿತಿದ್ದೇನೆ, ಅತನನ್ನೇ ನಾನು 'ಭಗವತಿ! ಭಗವತಿ!' ಎಂದು ಕರೆಯುತ್ತೇನೆ ಎಂಬುದಾಗಿ.

"ಮತ್ತೆ ಇನ್ನೊಂದು ಹಾಡಿನಲ್ಲಿ ರಾಮಪ್ರಸಾದ ಇದೇ ಭಾವನೆಯನ್ನು ಹೊರಗೆಡಹಿದ್ದಾನೆ:

ತಾಯಿ ದುರ್ಗೆಯೆ ಪರಮ ಬ್ರಹ್ಮಸ್ವರೂಪಿಯೆಂಬುದನರಿಯುತ
ಧರ್ಮ ಮೇಣ್ ಅಧರ್ಮವೆರಡನು ಬಿಸುಡುತ
ನಿಲುವೆನೆಂಬನು ಭಕ್ತ ರಾಮಪ್ರಸಾದನು !

ಅಧರ್ಮ ಎಂದರೆ ಅಸತ್ ಕರ್ಮ. ಧರ್ಮ ಎಂದರೆ ವೈದಿಕ ಕರ್ಮ– ಇಷ್ಟೊಂದು ದಾನ ಮಾಡಬೇಕು, ಇಷ್ಟೊಂದು ಬ್ರಾಹ್ಮಣ ಭೋಜನ ಮಾಡಿಸಬೇಕು ಇವೇ ಮೊದಲಾದ ಧರ್ಮಗಳು.''

ವಿಜಯ: ''ಧರ್ಮಾಧರ್ಮಗಳನ್ನು ತ್ಯಾಗ ಮಾಡಿಬಿಟ್ಟರೆ ಇನ್ನು ಉಳಿದುಕೊಳ್ಳುವುದೇನು ?''

ಶ್ರೀರಾಮಕೃಷ್ಣರು : ''ಶುದ್ಧಭಕ್ತಿ. ನಾನು ಭಗವತಿಗೆ ಪ್ರಾರ್ಥನೆ ಮಾಡಿದೆ: 'ತಾಯೆ, ಇಗೋ ತೆಗೆದುಕೊ ನಿನ್ನ ಧರ್ಮವನ್ನ, ಇಗೋ ತೆಗೆದುಕೊ ನಿನ್ನ ಅಧರ್ಮವನ್ನ, ನನಗೆ ಶುದ್ಧಭಕ್ತಿಯನ್ನು ಕೊಡು; ಇಗೋ ತೆಗೆದುಕೊ ನಿನ್ನ ಪುಣ್ಯಾನ, ಇಗೋ ತೆಗೆದುಕೊ ನಿನ್ನ ಪಾಪಾನ, ನನಗೆ ಶುದ್ಧಭಕ್ತಿಯನ್ನು ನೀಡು; ಇಗೋ ತೆಗೆದುಕೊ ನಿನ್ನ ಜ್ಞಾನವನ್ನ, ಇಗೋ ತೆಗೆದುಕೊ ನಿನ್ನ ಅಜ್ಞಾನವನ್ನ, ನನಗೆ ಶುದ್ಧಭಕ್ತಿಯನ್ನು ಕರುಣಿಸು' ಎಂದು. ನೋಡು, ನಾನು ಜ್ಞಾನ ಬೇಕೆಂದು ಕೂಡ ಪ್ರಾರ್ಥಿಸಲಿಲ್ಲ. ನಾನು ಲೋಕಮಾನ್ಯತೆಗಾಗಿಯೂ ಪ್ರಾರ್ಥಿಸಲಿಲ್ಲ. ಧರ್ಮಾಧರ್ಮಗಳನ್ನು ತ್ಯಜಿಸಿಬಿಟ್ಟರೆ ಶುದ್ಧಭಕ್ತಿ— ಅಮಲ, ನಿಷ್ಕಾಮ, ಅಹೇತುಕಭಕ್ತಿ— ಉಳಿದುಕೊಳ್ಳುತ್ತದೆ.''

ಬ್ರಾಹ್ಮಭಕ್ತ: ''ಆತನಿಗು ಆತನ ಶಕ್ತಿಗು ಏನಾದರು ವ್ಯತ್ಯಾಸ ವಿದೆಯೇನು ?''

ಶ್ರೀರಾಮಕೃಷ್ಣರು : ''ಪೂರ್ಣಜ್ಞಾನ ದೊರೆತನಂತರ ಅಭೇದ ಎಂಬ ಅನುಭವ. ಇದು ರತ್ನಕ್ಕು ಅದರ ಪ್ರಭೆಗು ಇರುವ ಅಭಿನ್ನತೆಯ ಹಾಗೆ. ರತ್ನಪ್ರಭೆಯ ಭಾವನೆಯೊಡನೆ ರತ್ನದ ಭಾವನೆಯನ್ನು ಭಾವಿಸಲೇ ಬೇಕಾಗುತ್ತದೆ. ಇದು ಹಾಲಿಗು ಮತ್ತು ಅದರ ಬಿಳುಪಿಗು ಇರುವ ಅಭಿನ್ನತೆಯ ಹಾಗೆ. ಒಂದನ್ನು ಭಾವಿಸಿದ ಒಡನೆಯೆ ಇನ್ನೊಂದನ್ನು ಭಾವಿಸಲೇಬೇಕಾಗುತ್ತದೆ. ಆದರೆ ಈ ಅಭಿನ್ನತೆಯ ಜ್ಞಾನ— ಪೂರ್ಣಜ್ಞಾನ ದೊರತ ಹೊರತು ಉಂಟಾಗದು. ಪೂರ್ಣಜ್ಞಾನ ದೊರೆತ ಒಡನೆಯೆ ಸಮಾಧಿಯುಂಟಾಗುತ್ತದೆ, ಚತುರ್ವಿಂಶತಿ ತತ್ತ್ವಗಳನ್ನು ದಾಟಿ ಹೋಗುತ್ತಾನೆ— ಅದಕ್ಕಾಗಿಯೆ ಆ ಸ್ಥಿತಿಯಲ್ಲಿ 'ಅಹಂ ತತ್ತ್ವ' ಇರದು.

ಸಮಾಧಿಯಲ್ಲಿ ಏನು ಅನುಭವ ದೊರೆಯುವುದೊ ಅದನ್ನು ಬಾಯಿಂದ ಹೇಳಲಾಗೋದಿಲ್ಲ. ಇಳಿದುಬಂದು ಎಲ್ಲೋ ಒಂದು ಕಿಂಚಿತ್ತು ಅದರ ಆಭಾಸದ ಹಾಗಿರುವದನ್ನು ಮಾತ್ರ ತಿಳಿಸಬಹುದು. ಸಮಾಧಿ ಇಳಿಮುಖ ವಾದನಂತರ ಯಾವಾಗ ನಾನು 'ಓಂ, ಓಂ' ಎಂದು ಹೇಳುವೆನೊ, ಆಗ ನಾನು ಆಗಲೇ ಒಂದು ನೂರು ಮೊಳ ಕೆಳಕ್ಕೆ ಇಳಿದುಬಿಟ್ಟಿರುತ್ತೇನೆ. ಬ್ರಹ್ಮನು ವೇದವಿಧಿಗಳಿಗೆ ಅತೀತನು, ಬಾಯಿಂದ ವರ್ಣಿಸಲಾಗೋದಿಲ್ಲ. ಅಲ್ಲಿ 'ನಾನು', 'ನೀನು' ಎಂಬ ಭಾವನೆ ಇಲ್ಲವೇ ಇಲ್ಲ.

"ಎಲ್ಲಿಯುವರೆಗೆ 'ನಾನು', 'ನೀನು' ಎಂಬ ಭಾವನೆ ಇರುವುದೊ, ಎಲ್ಲಿಯುವರೆಗೆ 'ನಾನು ಪ್ರಾರ್ಥನೆ ಅಥವಾ ಧ್ಯಾನ ಮಾಡುತ್ತೇನೆ' ಎಂಬ ಭಾವನೆ ಇರುವುದೊ, ಅಲ್ಲಿಯುವರೆಗೆ 'ನೀನು (ಭಗವಂತ) ಪ್ರಾರ್ಥನೆ ಕೇಳುತ್ತೀಯೆ' ಎಂಬ ಭಾವನೆಯೂ ಇರುತ್ತದೆ, ಭಗವಂತ ಒಬ್ಬ ವ್ಯಕ್ತಿ ಎಂಬ ಬೋಧೆಯಿರುತ್ತದೆ. 'ನೀನು ಪ್ರಭು, ನಾನು ದಾಸ; ನೀನು ಪೂರ್ಣ, ನಾನು ಅಂಶ; ನೀನು ತಾಯಿ, ನಾನು ಮಗು' ಎಂಬ ಬೋಧೆ ಇರುತ್ತದೆ. ಆಗ ಈ ಭೇದ ಬೋಧೆ— ನಾನು ಪ್ರತ್ಯೇಕ ನೀನು ಪ್ರತ್ಯೇಕ ಎಂಬುದು— ಇದ್ದೇ ಇರುತ್ತದೆ. ಈ ಭೇದ ಬೋಧೆಯನ್ನು ಆತನೇ ನಮ್ಮ ಕೈಯಿಂದ ಮಾಡಿಸುತ್ತಾನೆ. ಅದಕ್ಕಾಗಿಯೆ ಗಂಡಸು ಹೆಂಗಸು, ಬೆಳಕು ಕತ್ತಲೆ, ಇವೇ ಮೊದಲಾದುವುಗಳ ಬೋಧೆ ಆಗುತ್ತಿರೋದು. ಎಲ್ಲಿಯುವರೆಗೆ ಈ ಭೇದ ಬೋಧೆ ಇರುವುದೊ, ಅಲ್ಲಿಯುವರೆಗೆ ಶಕ್ತಿಯನ್ನ (ಸಾಕಾರವನ್ನ) ಒಪ್ಪಬೇಕು. ಆತನೆ ನಮ್ಮ ಅಂತರ್ಯದಲ್ಲಿ 'ನಾನು' ಎಂಬುದನ್ನು ಇಟ್ಟುಬಿಟ್ಟಿದ್ದಾನೆ. ಎಷ್ಟೇ ವಿಚಾರ ಮಾಡಿದರೂ— ಸಾವಿರ ಬಾರಿ— 'ನಾನು' ಎಂಬುದು ಹೋಗದು. ಅದು ಹೋಗದವರೆಗೆ ಆತ ವ್ಯಕ್ತಿರೂಪದಿಂದ ತೋರಿಸಿಕೊಳ್ಳುತ್ತಾನೆ.

"ಅದಕ್ಕಾಗಿಯೆ ಎಲ್ಲಿಯುವರೆಗೆ 'ನಾನು' ಎಂಬುದು ಇರುವುದೊ, ಭೇದಬುದ್ಧಿ ಇರುವುದೊ,— ಬ್ರಹ್ಮನನ್ನು ನಿರ್ಗುಣ ಎಂದು ಹೇಳುವ ಹಾಗಿಲ್ಲ. ಅದು ಇರುವವರೆಗೆ ಸಗುಣಬ್ರಹ್ಮನನ್ನು ಒಪ್ಪಿಕೊಳ್ಳಬೇಕು. ಈ ಸಗುಣಬ್ರಹ್ಮನನ್ನೇ ವೇದ ಪುರಾಣ ಶಾಸ್ತ್ರಗಳು, 'ಕಾಲ ಅಥವಾ ಆದ್ಯಾಶಕ್ತಿ' ಎಂದು ಕರೆದಿವೆ."

ವಿಜಯ: "ಏನು ಮಾಡಿದರೆ ಈ ಆದ್ಯಾಶಕ್ತಿಯ ದರ್ಶನ ದೊರೆಯುತ್ತದೆ, ಬ್ರಹ ಜ್ಞಾನ ದೊರೆಯುತ್ತದೆ?"

ಶ್ರೀರಾಮಕೃಷ್ಣರು: “ವ್ಯಾಕುಲ ಹೃದಯದಿಂದ ಆತನಿಗೆ ಪ್ರಾರ್ಥನೆ ಸಲ್ಲಿಸು; ಆತನಿಗಾಗಿ ಅಳು. ಆಗ ಚಿತ್ತಶುದ್ಧಿ ಉಂಟಾಗುತ್ತದೆ. ನಿರ್ಮಲವಾದ ನೀರಿನಲ್ಲಿ ಸೂರ್ಯನ ಪ್ರತಿಬಿಂಬವನ್ನು ನೋಡಬಹುದು. ‘ಭಕ್ತನ ನಾನು’ ಎಂಬ ರೂಪಿನ ಕನ್ನಡಿಯಲ್ಲಿ ಸಗುಣಬ್ರಹ್ಮನ, ಆದ್ಯಾಶಕ್ತಿಯ ದರ್ಶನ ದೊರೆಯುತ್ತದೆ. ಆದರೆ ಕನ್ನಡಿಯನ್ನು ಬಹಳ ಚೆನ್ನಾಗಿ ಒರಸಬೇಕು. ಕೊಳೆ ಕುಳಿತಿದ್ದರೆ ಸರಿಯಾದ ಪ್ರತಿಬಿಂಬ ಬೀಳದು.

“ಎಲ್ಲಿಯವರೆಗೆ ‘ನಾನು’ ಎಂಬ ನೀರಿನಲ್ಲಿ ಸೂರ್ಯನನ್ನು ನೋಡಬೇಕಾಗಿರುವುದೊ ಮತ್ತು ಸೂರ್ಯನನ್ನು ನೋಡಲು ಬೇರೆ ಯಾವ ಮಾರ್ಗವೂ ಇಲ್ಲವೊ, ಎಲ್ಲಿಯವರೆಗೆ ಪ್ರತಿಬಿಂಬಿತ ಸೂರ್ಯನನ್ನು ವಿನಾ ನಿಜವಾದ ಸೂರ್ಯನನ್ನು ನೋಡಲು ಯಾವ ಉಪಾಯವೂ ಇಲ್ಲವೊ, ಅಲ್ಲಿಯವರೆಗೆ ರೂಪಾಯಿಗೆ ಹದಿನಾರಾಣೆ ಭಾಗ ಪ್ರತಿಬಿಂಬಿತ ಸೂರ್ಯನೇ ಸತ್ಯ. ಆ ಪ್ರತಿಬಿಂಬಿತ ಸೂರ್ಯನೇ ಆದ್ಯಾಶಕ್ತಿ.

“ಬ್ರಹ್ಮಜ್ಞಾನ ಬೇಕಾಗಿದ್ದರೆ ಆ ಪ್ರತಿಬಿಂಬ ಸೂರ್ಯನನ್ನು ಹಿಡಿದುಕೊಂಡು ನಿಜವಾದ ಸೂರ್ಯನ ಕಡೆಗೆ ಹೋಗು. ನಮ್ಮ ಪ್ರಾರ್ಥನೆ ಕೇಳುತ್ತಾನಲ್ಲ ಆ ಸಗುಣಬ್ರಹ್ಮ ಆತನನ್ನೇ ಕೇಳಿಕೊ, ಆತನೇ ಬ್ರಹ್ಮಜ್ಞಾನವನ್ನು ಕೊಡುತ್ತಾನೆ; ಹೇಗೆಂದರೆ ಯಾರು ಸಗುಣಬ್ರಹ್ಮನೊ ಆತನೇ ನಿರ್ಗುಣಬ್ರಹ್ಮ, ಯಾರು ಶಕ್ತಿಯೊ ಆತನೇ ಬ್ರಹ್ಮ. ಪೂರ್ಣಜ್ಞಾನ ದೊರೆತ ಮೇಲೆ ಈ ಅಭಿನ್ನತೆಯ ಅನುಭವ.

“ಭಗವತಿ ಬ್ರಹ್ಮಜ್ಞಾನವನ್ನು ಕೊಡಬಲ್ಲಳು. ಆದರೆ ನಿಜವಾದ ಭಕ್ತ ಪ್ರಾಯಶಃ ಬ್ರಹ್ಮಜ್ಞಾನಕ್ಕಾಗಿ ಹಾತೊರೆಯೋದಿಲ್ಲ.

“ಇನ್ನೊಂದು ಮಾರ್ಗವಿದೆ, ಜ್ಞಾನಯೋಗ, ಬಹಳ ಕಠಿನ ಮಾರ್ಗ. ಬ್ರಹ್ಮಸಮಾಜಕ್ಕೆ ಸೇರಿದ ನೀವು ಜ್ಞಾನಿಗಳಲ್ಲ, ಭಕ್ತರೇ. ಯಾರು ಜ್ಞಾನಿಗಳೊ ಅವರ ವಿಶ್ವಾಸ, ‘ಬ್ರಹ್ಮ ಸತ್ಯ, ಜಗತ್ ಮಿಥ್ಯ, ಸ್ವಪ್ನವತ್. “ನಾನು”, “ನೀನು” ಎಲ್ಲ ಸ್ವಪ್ನವತ್’ ಎಂಬುದು.

“ಆತ ಅಂತರ್ಯಾಮಿ. ಆತನಿಗೆ ಸರಳ ಮನಸ್ಸಿನಿಂದ, ಶುದ್ಧ ಮನಸ್ಸಿನಿಂದ ಪ್ರಾರ್ಥನೆ ಸಲ್ಲಿಸು. ಆತ ಎಲ್ಲವನ್ನೂ ತಿಳಿಸಿಕೊಡುತ್ತಾನೆ. ಅಹಂಕಾರವನ್ನು ತ್ಯಜಿಸಿ ಆತನಲ್ಲಿ ಶರಣಾಗತನಾಗು; ಎಲ್ಲಾ ದೊರೆಯುತ್ತದೆ.”

ಪರಮಹಂಸರು ಹಾಡಲಾರಂಭಿಸಿದರು :

ನಿನ್ನೊಳಗೇ ನೀನಿರು ಮನವೇ,
ಅನ್ಯಾಶ್ರಯದೊಳಗರಸದಿರು.
ನೀನಾವುದನೀತೆರ ಹುಡುಕುತಲಿಹೆಯೋ
ಅದೆ ನಿನ್ನೆದೆಯೊಳಗಿರುತಿರಲು !

ಹೃದಯದ ಕರೆಗೋಗೊಡುವನು ಅವನು
ಸರ್ವಸಿದ್ಧಿಗಳ ಸ್ಪರುಶಮಣಿ !
ನಿನ್ನ ಎದೆಯೊಳೇ ಹುದುಗಿದೆ ಕಾಣೊ
ಸಕಲೈಶ್ವರ್ಯದ ರನ್ನಗಣಿ !

ಮುತ್ತುರತುನಗಳೊ ಪಚ್ಚೆಹರಳುಗಳೊ
ಹೃದಯಮಂದಿರದ ಅಂಗಳದಿ
ಚದುರಿಬಿದ್ದಿರಲು, ಎಲ್ಲಿ ಹುಡುಕುತಿಹೆ
ಮರುಳನಂತೆ ಅನ್ಯಾಶ್ರಯದಿ ?

ಪರಮಹಂಸರು ಮಾತು ಮುಂದುವರಿಸಿದರು : "ಹೊರಗಿನವರೊಡನೆ ಬೆರೆಯುವಾಗ ಎಲ್ಲರನ್ನೂ ಪ್ರೀತಿಸು, ಬೆರೆತು ಒಂದಾಗಿಬಿಡು— ತಿರಸ್ಕಾರ ದೃಷ್ಟಿಗೆ ಎಡೆಗೊಡಬೇಡ. 'ಆ ವ್ಯಕ್ತಿ ಸಾಕಾರ ಒಪ್ಪುತ್ತಾನೆ, ನಿರಾಕಾರ ಒಪ್ಪುತ್ತಿಲ್ಲ; ಈತ ನಿರಾಕಾರ ಒಪ್ಪುತ್ತಾನೆ, ಸಾಕಾರ ಒಪ್ಪುತ್ತಿಲ್ಲ; ಆತ ಹಿಂದೂ, ಈತ ಮುಸಲಮಾನ, ಆತ ಕ್ರಿಶ್ಚಿಯನ್' ಎಂಬುದಾಗಿ ತಿರಸ್ಕಾರ ದೃಷ್ಟಿಯಿಂದ ಜನರ ಮೂಗು ಮುರಿಯಬೇಡ. ಭಗವಂತನೇ ಜನರಿಗೆ ವಿವಿಧ ದೃಷ್ಟಿಯನ್ನು ಕೊಟ್ಟಿದ್ದಾನೆ. ಪ್ರತಿಯೊಬ್ಬರದೂ ಬೇರೆಬೇರೆ ಪ್ರಕೃತಿ ಎಂಬುದನ್ನು ಮೊದಲು ಅರಿತುಕೊ. ಅರಿತುಕೊಂಡು ಅವರೊಡನೆ ಬೆರೆ,—ಸಾಧ್ಯವಾದಷ್ಟು ಮಟ್ಟಿಗೆ ಬೆರೆ. ಎಲ್ಲರನ್ನೂ ಪ್ರೀತಿಸು. ಬಳಿಕ ನಿನ್ನ ಸ್ವಂತ ಅಂತರ್ಯಕ್ಕೆ ಹಿಂದಿರುಗಿ ಹೋಗಿ ಶಾಂತಿ ಮತ್ತು ಆನಂದವನ್ನು ಅನುಭವಿಸು.

ಹೃದಯ ಮಂದಿರದಲ್ಲಿ ಜ್ಞಾನದೀವಿಗೆ ಹಚ್ಚಿ
ಬ್ರಹ್ಮಮಯಿ ಮಾತಾಯ ಮುಖವನೋಡು !

ನಿನ್ನ ಸ್ವಂತ ಅಂತರ್ಯದಲ್ಲಿ ಮಾತ್ರವೆ ಸ್ವಸ್ವರೂಪದ ದರ್ಶನ ಪಡೆಯಬಲ್ಲೆ. ಗೋಪಾಲಕರು ದನ ಮೇಯಿಸಲು ಹೋದಾಗ, ಎಲ್ಲಾ ದನಗಳು ಹುಲ್ಲುಗಾವಲಿಗೆ ಹೋಗಿ ಒಂದಾಗಿ ಕಲೆತುಹೋಗುತ್ತವೆ; ಒಂದು

ಹಿಂಡಾಗಿಬಿಡುತ್ತವೆ. ಆದರೆ ಸಾಯಂಕಾಲದಲ್ಲಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುವಾಗ ಮತ್ತೆ ಪ್ರತ್ಯೇಕ ಪ್ರತ್ಯೇಕವಾಗಿಬಿಡುತ್ತವೆ. ಅದಕ್ಕಾಗಿಯೆ ನಾನು ಹೇಳೋದು, 'ಸ್ವಂತ ಅಂತರ್ಯದಲ್ಲಿ ನೀನೇ ನೀನಾಗಿರು' ಎಂದು."

ರಾತ್ರಿ ಹತ್ತು ಘಂಟೆಯಾದ ನಂತರ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂದಿರುಗಲು ಗಾಡಿಯಲ್ಲಿ ಕುಳಿತುಕೊಂಡರು. ಅವರೊಡನೆ ಒಬ್ಬಿಬ್ಬರು ಸೇವಕರೂ ಗಾಡಿಯನ್ನು ಹತ್ತಿದರು. ಒಂದು ಮರದ ಕೆಳಗೆ ಅಂದಿನ ಗಭೀರ ಅಂಧಕಾರದಲ್ಲಿ ಗಾಡಿ ನಿಂತಿದೆ. ವೇಣೀಪಾಲ ರಾಮಲಾಲನಿಗಾಗಿ ಪೂರಿ ಮೃಷ್ಟಾನ್ನಾದಿಗಳನ್ನು ಗಾಡಿಯಲ್ಲಿ ಇಡಲು ಬಂದ.

ವೇಣೀಪಾಲ ಪರಮಹಂಸರಿಗೆ: "ಮಹಾಶಯರೆ, ರಾಮಲಾಲ ಬರೋಕಾಗಲಿಲ್ಲ. ಆತನಿಗಾಗಿ ಒಂದಿಷ್ಟನ್ನ ಇವರೊಡನೆ ಕಳುಹಿಸಲು ಇಚ್ಛೆಯಾಗುತ್ತಿದೆ. ದಯವಿಟ್ಟು ತಾವು ಅನುಮತಿಕೊಡಬೇಕು."

ಶ್ರೀರಾಮಕೃಷ್ಣರು ವ್ಯಸ್ತರಾಗಿ: "ಓ, ವೇಣೀಪಾಲ! ದಯವಿಟ್ಟು ನೀನು ನನ್ನೊಡನೆ ಅಂಥವುಗಳನ್ನೆಲ್ಲ ಕಳುಹಿಸಬೇಡ. ಅದು ನನಗೆ ಹಾನಿಯನ್ನು ತರುತ್ತದೆ. ನನ್ನೊಡನೆ ಯಾವ ವಸ್ತುವನ್ನೇ ಆಗಲಿ ನಾನು ಸಂಚಯಮಾಡಿಕೊಂಡು ತೆಗೆದುಕೊಂಡುಹೋಗೋಹಾಗಿಲ್ಲ. ನೀನು ಅನ್ಯಥಾ ಭಾವಿಸಬೇಡ."

ವೇಣೀಪಾಲ: "ತಮ್ಮ ಚಿತ್ತ. ದಯವಿಟ್ಟು ಆಶೀರ್ವಾದಮಾಡಿ."

ಶ್ರೀರಾಮಕೃಷ್ಣರು: "ಇಂದು ಬಹಳವಾಗಿ ಆನಂದ ಆಗಿಬಿಟ್ಟಿತು. ನೋಡು, ಅರ್ಥ ಯಾರ ದಾಸನಾಗುತ್ತದೆಯೊ ಆತನೇ ಮನುಷ್ಯ. ಯಾರಿಗೆ ಅರ್ಥದ ವ್ಯವಹಾರ ಗೊತ್ತಿಲ್ಲವೊ ಅವರು ಮನುಷ್ಯರಾಗಿಯೂ ಮನುಷ್ಯರಲ್ಲ. ಆಕೃತಿಯೇನೊ ಮನುಷ್ಯರದು, ಆದರೆ ವ್ಯವಹಾರ ಪಶುವಿನದು. ಧನ್ಯ ನೀನು. ಇಷ್ಟೊಂದು ಮಂದಿ ಭಕ್ತರಿಗೆ ಆನಂದ ಕೊಟ್ಟೆ.

**೨೦ನೆ ಅಕ್ಟೋಬರ್ ೧೮೮೪, ಕಾರ್ತಿಕ ಶುಕ್ಲ ಬಿದಿಗೆ, ಸೋಮವಾರ.**

ಇಂದಿಗೆ ಕಾಳಿಯ ಪೂಜೆ ಮುಗಿದು ಎರಡು ದಿವಸಗಳಾಗಿವೆ. ಬಡೋಬಸಾರಿನ ಮಾರ್ವಾಡಿ ಭಕ್ತರು ಇಂದು ಅನ್ನಕೂಟದ[1] ಹಬ್ಬವನ್ನು

---

1. ಅಂದರೆ, "ಅನ್ನದರಾಶಿ" ಎಂದು. ಈ ಹಬ್ಬದಲ್ಲಿ ಒಂದು ಅನ್ನದ ಗುಡ್ಡೆಯನ್ನೇ ಭಗವಂತನಿಗೆ ಅರ್ಪಿಸಿ, ಬಳಿಕ ಭಕ್ತರಿಗೆ ಮತ್ತು ಬಡಬಗ್ಗರಿಗೆ ಹಂಚುತ್ತಾರೆ.

ಆಚರಿಸುತ್ತಿದ್ದಾರೆ. ಅದರ ನಿಮಿತ್ತ ಅವರು ಪರಮಹಂಸರನ್ನು ಮಣಿ ಮಲ್ಲಿಕನ ಬೀದಿಯ ೧೨ನೆ ನಂಬರ್ ಮನೆಗೆ ಆಹ್ವಾನಿಸಿದ್ದಾರೆ. ಕಾಳಿಯ ಪೂಜೆ ಮುಗಿದು ಎರಡು ದಿನ ಆಗಿದ್ದರೂ ದೀಪಾವಳಿಯ ಸಂಭ್ರಮ ಇನ್ನೂ ಬಡೋಬಸಾರಿನಲ್ಲಿ ಕಾಣಬರುತ್ತಿದೆ.

ಬಹುಶಃ ಸಮಯ ಮೂರು ಇರಬೇಕು. ಮಾಸ್ಟರ್ ಚಿಕ್ಕ ಗೋಪಾಲನೊಡನೆ ಬಡೋಬಸಾರಿಗೆ ಬಂದಿದ್ದಾನೆ. ಪರಮಹಂಸರು ಮಾಸ್ಟರಿಗೆ ಸ್ನಾನದ ಚೌಕಗಳನ್ನು ಕೊಂಡುಕೊಂಡುಬರಲು ಹೇಳಿದ್ದರು. ಆತ ಅವುಗಳನ್ನು ಕೊಂಡುಕೊಂಡು ಬಂದಿದ್ದಾನೆ. ಅವನ್ನು ಕಾಗದದಲ್ಲಿ ಸುತ್ತಿ ಒಂದು ಕೈಯಲ್ಲಿ ಹಿಡಿದುಕೊಂಡಿದ್ದಾನೆ. ಅವರಿಬ್ಬರೂ ಮಲ್ಲಿಕನ ಬೀದಿಗೆ ಬಂದು ನೋಡುತ್ತಾರೆ, ಅದು ಎತ್ತಿನ ಗಾಡಿಗಳಿಂದ ಕುದುರೆಗಾಡಿ ಗಳಿಂದ ಮತ್ತು ಜನರಿಂದ ಕಿಕ್ಕಿರಿದು ತುಂಬಿದೆ. ಅವರು ೧೨ನೆ ನಂಬರಿನ ಮನೆಯ ಹತ್ತಿರಹತ್ತಿರಕ್ಕೆ ಹೋಗಿ ನೋಡುತ್ತಾರೆ ಪರಮಹಂಸರು ಒಂದು ಗಾಡಿಯಲ್ಲಿ ಕುಳಿತುಕೊಂಡಿದ್ದಾರೆ, ಅದು ಮುಂದುವರಿಯಲಾಗದೆ ನಿಂತು ಕೊಂಡಿದೆ. ಅದರೊಳಗೆ ಬಾಬುರಾಮ ಮತ್ತು ರಾಮಚಾಟರ್ಜಿಯೂ ಕುಳಿತಿದ್ದಾರೆ. ಪರಮಹಂಸರು ಗೋಪಾಲ ಮತ್ತು ಮಾಸ್ಟರನ್ನು ಕಂಡು ನಗುತ್ತಿದ್ದಾರೆ.

ಪರಮಹಂಸರು ಗಾಡಿಯಿಂದ ಕೆಳಕ್ಕೆ ಇಳಿದರು. ಮಾಸ್ಟರ್ ಮುಂದು ಮುಂದಕ್ಕೆ ಹೋಗುತ್ತ ದಾರಿ ತೋರಿಸುತ್ತಿದ್ದಾನೆ. ಪರಮ ಹಂಸರು ಬಾಬುರಾಮನೊಡನೆ ಆತನನ್ನು ಹಿಂಬಾಲಿಸುತ್ತಿದ್ದಾರೆ. ಆ ಮಾರ್ವಾಡಿಯ ಮನೆಯನ್ನು ತಲುಪಿದನಂತರ ನೋಡುತ್ತಾರೆ ಕೆಳಗಿನ ಅಂಗಳವೆಲ್ಲ ಬಟ್ಟೆಯ ಬೇಲುಗಳಿಂದ ಸುಮ್ಮನೆ ತುಂಬಿದೆ. ಆಗಾಗ ಎತ್ತಿನ ಗಾಡಿಗಳು ಆ ಸರಕನ್ನು ತುಂಬಿಕೊಂಡು ಬಂದರಿಗೆ ಹೋಗುತ್ತಲೇ ಇವೆ. ಪರಮಹಂಸರು ಭಕ್ತರೊಡನೆ ಮೇಲಿನ ಅಂತಸ್ತಿಗೆ ಹತ್ತಿದರು. ಮಾರ್ವಾಡಿಗಳು ಪರಮಹಂಸರನ್ನು ಎದುರುಗೊಂಡು ಅವರನ್ನು ಮೂರನೆ ಅಂತಸ್ತಿಗೆ ಕರೆದುಕೊಂಡು ಹೋದರು. ಅಲ್ಲಿ ಭಗವತಿ ಕಾಳಿಯ ಪಟ ಗೋಡೆಗೆ ನೇತುಹಾಕಿದ್ದಿತು. ಪರಮಹಂಸರು ಅದಕ್ಕೆ ನಮಸ್ಕಾರ ಮಾಡಿದರು. ಬಳಿಕ ಅವರು ಒಂದು ಕಡೆ ಕುಳಿತುಕೊಂಡು ಭಕ್ತ ರೊಡನೆ ಮಾತುಕತೆ ಆಡಲು ಆರಂಭಿಸಿದರು. ಒಬ್ಬ ಮಾರ್ವಾಡಿ ಮುಂದೆ ಬಂದು ಅವರ ಪಾದಗಳನ್ನು ಒತ್ತಲು ಆರಂಭಿಸಿದ. ಪರಮ

ಹಂಸರು ಏನೂ ಬೇಡ ಎಂದರು. ಬಳಿಕ ಏನೋ ಯೋಚಿಸಿ ಹೇಳಿದರು: "ಒಳ್ಳೆಯದು, ಒಂದು ಸ್ವಲ್ಪ ಒತ್ತು" ಎಂದು. ಅವರ ಪ್ರತಿಯೊಂದು ಮಾತೂ ಕರುಣೆಯಿಂದ ತುಂಬಿತ್ತು.

ಶ್ರೀರಾಮಕೃಷ್ಣರು ಮಣಿಗೆ: "ಸ್ಕೂಲಿನ ಗತಿ ?—"

ಮಾಸ್ಟರ್: "ಇಂದು ರಜ."

ಶ್ರೀರಾಮಕೃಷ್ಣರು ನಗುತ್ತ: "ನಾಳೆ ಅಧರಸೇನನ ಮನೆಯಲ್ಲಿ ಮತ್ತೆ ಚಂಡಿ ಕೀರ್ತನೆ."

ಮನೆಯ ಯಜಮಾನ ಒಬ್ಬ ಪಂಡಿತನನ್ನು ಪರಮಹಂಸರ ಹತ್ತಿರಕ್ಕೆ ಕಳುಹಿಸಿದನು. ಆತ ಅಲ್ಲಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡನು. ಪರಮಹಂಸರು ಆತನೊಡನೆ ಭಗವಂತನ ವಿಷಯವಾಗಿ ಮಾತುಕತೆಗಳನ್ನಾಡುತ್ತಿದ್ದಾರೆ. ಅವತಾರಾದಿಗಳ ಮಾತು ಆರಂಭವಾಯಿತು.

ಶ್ರೀರಾಮಕೃಷ್ಣರು: "ಭಕ್ತರಿಗಾಗಿಯೇ ಅವತಾರ, ಜ್ಞಾನಿಗಳಿಗಾಗಿ ಅಲ್ಲ."

ಪಂಡಿತ: "'ಪರಿತ್ರಾಣಾಯ ಸಾಧೂನಾಮ್ ವಿನಾಶಾಯ ಚ ದುಷ್ಕೃತಾಮ್। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥' ಭಗವಂತ ಅವತರಿಸೋದು ಪ್ರಥಮತಃ ಭಕ್ತರಿಗೆ ಆನಂದ ನೀಯುವುದಕ್ಕಾಗಿ, ದ್ವಿತೀಯತಃ ದುಷ್ಟರನ್ನು ದಮನಮಾಡುವುದಕ್ಕಾಗಿ. ಆದರೆ ಜ್ಞಾನಿ ಕಾಮನಾಶೂನ್ಯ."

ಶ್ರೀರಾಮಕೃಷ್ಣರು ನಗುತ್ತ: "ಆದರೆ ಎಲ್ಲಾ ಕಾಮನೆಗಳು ನನ್ನನ್ನು ಬಿಟ್ಟು ಹೋಗಿಲ್ಲ. ನನ್ನಲ್ಲಿ ಭಕ್ತಿಕಾಮನೆ ಇದೆ."

ಹೀಗೆ ಮಾತನಾಡುತ್ತಿದ್ದಾಗ ಪಂಡಿತನ ಮಗ ಕೊಠಡಿಗೆ ಬಂದು ಪರಮಹಂಸರಿಗೆ ನಮಸ್ಕಾರಮಾಡಿ ಒಂದು ಕಡೆ ಕುಳಿತುಕೊಂಡನು.

ಶ್ರೀರಾಮಕೃಷ್ಣರು ಪಂಡಿತನಿಗೆ: "ಒಳ್ಳೆಯದು, ಯಾವುದಕ್ಕೆ ಭಾವ ಅಂತ ಹೇಳುತ್ತಾರೆ, ಯಾವುದಕ್ಕೆ ಭಕ್ತಿ ಅಂತ ಹೇಳುತ್ತಾರೆ?"

ಪಂಡಿತ: "ಭಗವಂತನ ಚಿಂತನೆ ಮಾಡಿದರೆ ಮನೋವೃತ್ತಿ ಕೋಮಲವಾಗಿಬಿಡುತ್ತದೆ. ಈ ಕೋಮಲಮನೋವೃತ್ತಿಗೆ 'ಭಾವ' ಅಂತ ಹೆಸರು. ಇದು ಸೂರ್ಯ ಉದಯಿಸಿದರೆ ಮಂಜು ಹೇಗೆ ಕರಗಿ ನೀರಾಗುತ್ತದೆಯೊ ಹಾಗೆ."

ಶ್ರೀರಾಮಕೃಷ್ಣರು: "ಒಳ್ಳೆಯದು, ಯಾವುದಕ್ಕೆ ಪ್ರೇಮ ಅಂತ ಹೇಳುತ್ತಾರೆ?"

ಪಂಡಿತ ಮತ್ತೆ ಮತ್ತೆ ಹಿಂದಿಯಲ್ಲಿ ಮಾತನಾಡುತ್ತಿದ್ದಾನೆ. ಪರಮಹಂಸರು ಆತನೊಡನೆ ಬಹಳ ಒಳ್ಳೆಯ ಹಿಂದಿಯಲ್ಲಿ ಮಾತುಕತೆ ಯಾಡುತ್ತಿದ್ದಾರೆ. ಪಂಡಿತ ಪರಮಹಂಸರ ಪ್ರಶ್ನೆಗೆ ಉತ್ತರವೀಯುತ್ತ ಪ್ರೇಮ ಎಂಬುದಕ್ಕೆ ಏನೋ ಒಂದು ವಿಧವಾದ ಅರ್ಥವನ್ನು ಕೊಟ್ಟ.

ಶ್ರೀರಾಮಕೃಷ್ಣರು ಪಂಡಿತನಿಗೆ: "ಅಲ್ಲ! ಅಲ್ಲ! ಅದಲ್ಲ ಅದರ ಅರ್ಥ. ಪ್ರೇಮ ಅಂದರೆ ಭಗವಂತನಲ್ಲಿ ಅಂಥ ಅಗಾಧವಾದ ಅನುರಾಗ, ಅದರ ದೆಸೆಯಿಂದ ಜಗತ್ತೂ ಮರೆತುಹೋಗಿಬಿಡುತ್ತದೆ, ಜೊತೆಗೆ ಅಷ್ಟೊಂದು ಪ್ರಿಯವಾಗಿರುವ ಸ್ವಂತ ದೇಹ ಕೂಡ ಮರೆತುಹೋಗಿ ಬಿಡುತ್ತದೆ. ಅದಕ್ಕೇ 'ಪ್ರೇಮ' ಅಂತ ಹೆಸರು. ಅದು ಚೈತನ್ಯದೇವನಿಗೆ ಉಂಟಾಗಿತ್ತು."

ಪಂಡಿತ: "ಹೌದು, ನೀವು ಹೇಳುವುದು ಸರಿ. ಕುಡುಕನಿಗೆ ಆಗುತ್ತದೆಯಲ್ಲ ಹಾಗೆ."

ಶ್ರೀರಾಮಕೃಷ್ಣರು: "ಒಳ್ಳೆಯದು, ಕೆಲವರ ಹೃದಯದಲ್ಲಿ ಭಕ್ತಿ ಉದ್ದೀಪನೆಯಾಗಿಬಿಡುತ್ತದೆ, ಇನ್ನು ಕೆಲವರಲ್ಲಿ ಆಗೋದಿಲ್ಲ; ಇದ್ದಕ್ಕೇನು ಉತ್ತರ?"

ಪಂಡಿತ: "ಭಗವಂತನಿಗೆ ವೈಷಮ್ಯತೆ ಅಂಬುದೇನಿಲ್ಲ. ಆತ ಕಲ್ಪತರು. ಯಾರು ಏನನ್ನು ಬೇಡುವರೊ ಅದು ಅವರಿಗೆ ದೊರೆತು ಬಿಡುತ್ತದೆ. ಆದರೆ ಕಲ್ಪತರುವಿನ ಹತ್ತಿರ ಹೋಗಿ ಬೇಡಬೇಕು."

ಪಂಡಿತ ಇದನ್ನೆಲ್ಲ ಹಿಂದಿಯಲ್ಲೇ ಹೇಳಿದನು. ಪರಮಹಂಸರು ಅದನ್ನು ಮಾಸ್ಟರಿಗೆ ಬೆಂಗಾಳಿಯಲ್ಲಿ ವಿವರಿಸಿದರು.

ಶ್ರೀರಾಮಕೃಷ್ಣರು: "ಒಳ್ಳೆಯದು, ಸಮಾಧಿ ಅಂಬುದು ಹೇಗೆ ಹೇಗೆ ಎಂಬುದನ್ನು ಸ್ವಲ್ಪ ವಿವರಿಸಿ ಹೇಳಿ ನೋಡೋಣ."

ಪಂಡಿತ: "ಸಮಾಧಿಯಲ್ಲಿ ಎರಡು ವಿಧ:—ಸವಿಕಲ್ಪ ಮತ್ತು ನಿರ್ವಿಕಲ್ಪ. ನಿರ್ವಿಕಲ್ಪ ಸಮಾಧಿಯಲ್ಲಿ ವಿಕಲ್ಪ ಎಂಬುದು ಇಲ್ಲವೇ ಇಲ್ಲ—"

ಶ್ರೀರಾಮಕೃಷ್ಣರು: "ಹೌದು, 'ತದಾಕಾರಕಾರಿತ.' ಧ್ಯಾತ, ಧ್ಯೇಯ ಎಂಬ ಭೇದವಿರದು. ಮತ್ತೆ ಚೇತನಸಮಾಧಿ ಮತ್ತು ಜಡ

ಸಮಾಧಿ ಅಂಬುವೂ ಇವೆ. ನಾರದ, ಶುಕದೇವ ಇವರಿಗೆ ಉಂಟಾಗಿದ್ದುದು ಚೇತನಸಮಾಧಿ. ಏನು, ಹೇಗೆ?"

ಪಂಡಿತ: "ಹೌದು, ನಿಜ."

ಶ್ರೀರಾಮಕೃಷ್ಣರು: "ಮತ್ತೆ ಉನ್ಮನಸಮಾಧಿ ಮತ್ತು ಸ್ಥಿರ ಸಮಾಧಿ ಎಂಬುವು ಇವೆ, ಅಲ್ಲವೆ?"

ಪಂಡಿತ ಸುಮ್ಮನೆ ಇದ್ದುಬಿಟ್ಟ; ಯಾವ ಉತ್ತರವನ್ನೂ ಕೊಡಲಿಲ್ಲ.

ಶ್ರೀರಾಮಕೃಷ್ಣರು: "ಒಳ್ಳೇದು, ಜಪ ತಪ ಮಾಡಿದರೆ, ಗಂಗೆಯ ಮೇಲೆ ನಡೆದುಹೋಗುವ ಇವೇ ಮೊದಲಾದ ಸಿದ್ಧಿಗಳು ದೊರೆಯಬಹದು. ಏನು, ಅಲ್ಲವೆ?"

ಪಂಡಿತ: "ಹೌದು, ದೊರಕುತ್ತವೆ. ಆದರೆ ಭಕ್ತನಿಗೆ ಅವು ಬೇಕಿನಿಸೋದಿಲ್ಲ."

ಹೀಗೆ ಸ್ವಲ್ಪ ಹೊತ್ತು ಮಾತುಕತೆಗಳನ್ನಾಡಿದ ನಂತರ ಪಂಡಿತ ಹೇಳಿದ, "ನಾನು ಏಕಾದಶಿ ದಿವಸ ನಿಮ್ಮ ದರ್ಶನಕ್ಕಾಗಿ ದಕ್ಷಿಣೇಶ್ವರಕ್ಕೆ ಬರುತ್ತೇನೆ" ಎಂದು.

ಶ್ರೀರಾಮಕೃಷ್ಣರು: "ಆಹಾ! ನಿಮ್ಮ ಹುಡುಗ ಬಹಳ ಒಳ್ಳೆಯವ."

ಪಂಡಿತ: "ಇದೇನು ವಿಶೇಷ! ನದಿಯಲ್ಲಿ ಒಂದು ಅಲೆ ಎಳುತ್ತದೆ ಒಂದು ಅಲೆ ಬೀಳುತ್ತದೆ. ಎಲ್ಲಾ ಅನಿತ್ಯ."

ಶ್ರೀರಾಮಕೃಷ್ಣರು: "ನಿನ್ನ ಆಂತರ್ಯದಲ್ಲಿ ಸಾರವಿದೆ."

ಪಂಡಿತ ಸ್ವಲ್ಪ ಹೊತ್ತು ಹಾಗೆ ಕುಳಿತಿದ್ದು ಎದ್ದು ಪರಮಹಂಸಗೆ ಪ್ರಣಾಮಮಾಡಿ ಹೇಳಿದ, "ಪೂಜೆ ಮಾಡಬೇಕಾಗಿದೆ, ಬರುತ್ತೇನೆ" ಎಂದು.

ಶ್ರೀರಾಮಕೃಷ್ಣರು: "ಓ, ಹೋಗೋರಂತೆ ಕುಳಿತುಕೊಳ್ಳಿ! ಕುಳಿತುಕೊಳ್ಳಿ!"

ಪಂಡಿತ ಮತ್ತೆ ಕುಳಿತುಕೊಂಡನು. ಪರಮಹಂಸರು ಹಠಯೋಗದ ಮಾತು ಎತ್ತಿದರು. ಪಂಡಿತ ಹಿಂದಿಯಲ್ಲಿ ಪರಮಹಂಸರೊಡನೆ ಅದರ ಸಂಬಂಧವಾಗಿ ಮಾತನಾಡುತ್ತಿದ್ದಾನೆ. ಪರಮಹಂಸರು ಹೇಳಿದರು, "ಹೌದು, ಅದೂ ಒಂದು ವಿಧವಾದ ತಪಸ್ಯೆಯೇನೊ ನಿಜ. ಆದರೆ ಹಠಯೋಗಿ ದೇಹಾಭಿಮಾನಿ ಸಾಧು—ಕೇವಲ ದೇಹದ ಕಡೆಗೇ ಮನಸ್ಸು"

ಎಂದು. ಪಂಡಿತ ಮತ್ತೆ ಪರಮಹಂಸರಿಂದ ಬೀಳ್ಕೊಂಡನು. ಪರಮಹಂಸರು ಆತನ ಮಗನೊಡನೆ ಮಾತುಕತೆಗಳನ್ನಾಡಲು ಆರಂಭಿಸಿದರು.

ಶ್ರೀರಾಮಕೃಷ್ಣರು: "ಒಂದು ಸ್ವಲ್ಪ ನ್ಯಾಯ, ವೇದಾಂತ ಮತ್ತು ಉಳಿದ ದರ್ಶನಗಳನ್ನು ಅಧ್ಯಯನ ಮಾಡಿದರೆ ಶ್ರೀಮದ್ಭಾಗವತವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು. ಏನು?"

ಪಂಡಿತನ ಮಗ: "ಹೌದು. ಸಾಂಖ್ಯದರ್ಶನವನ್ನು ಓದುವುದು ಅತ್ಯಂತ ಆವಶ್ಯಕ."

ಈ ವಿಧವಾದ ಮಾತುಗಳು ಸ್ವಲ್ಪ ಹೊತ್ತು ಸಾಗಿದುವು. ಪರಮಹಂಸರು ಸ್ವಲ್ಪ ಒರಗಿ ಮಲಗಿಕೊಂಡರು. ಪಂಡಿತನ ಮಗ ಮತ್ತು ಕೆಲವು ಭಕ್ತರು ನೆಲದ ಮೇಲೆ ಕುಳಿತುಕೊಂಡಿದ್ದಾರೆ. ಪರಮಹಂಸರು ಮಲಗಿಕೊಂಡೇ ಹಾಡಲಾರಂಭಿಸಿದರು:

ನಲವಿನಲಿ ದೇವರಿಗೆ ಅಂಟಿಕೊಂಡಿರು ನೀನು.
ಈ ಬಗೆಯ ಸಾಧನೆಗೆ ಎಂದಾದರೊಂದು ದಿನ
ದೊರಕುವನು ಅವನು !

ಮನೆಯ ಯಜಮಾನ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಆತ ಒಬ್ಬ ಭಗವದ್ಭಕ್ತ. ಪರಮಹಂಸರನ್ನು ಬಹಳ ಭಕ್ತಿಯಿಂದ ನೋಡುತ್ತಿದ್ದಾನೆ. ಪಂಡಿತನ ಮಗ ಇನ್ನೂ ಕುಳಿತೇ ಇದ್ದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈ ಕಡೆ ಪಾಣಿನಿಯ ವ್ಯಾಕರಣ ಹೇಳಿ ಕೊಡುತ್ತಾರೆಯೇನು?"

ಮಾಸ್ಟರ್: "ಏನು, ಪಾಣಿನಿಯನ್ನ?"

ಶ್ರೀರಾಮಕೃಷ್ಣರು: "ಹೌದು. ನ್ಯಾಯ, ವೇದಾಂತ ಇವುಗಳನ್ನೆಲ್ಲ ಕಲಿಸುತ್ತಾರೇನು?"

ಮನೆಯ ಯಜಮಾನ ಈ ವಿಷಯವಾಗಿ ಹೆಚ್ಚು ಆಸಕ್ತಿ ತೋರಿಸದೆ ಬೇರೆ ಮಾತು ಎತ್ತಿದ.

ಯಜಮಾನ: "ಮಹರಾಜ್, ನಮಗೆ ಉಪಾಯವೇನು?"

ಶ್ರೀರಾಮಕೃಷ್ಣರು: "ಆತನ ನಾಮಗುಣಕೀರ್ತನೆ, ಸಾಧುಸಂಗ, ವ್ಯಾಕುಲನಾಗಿ ಆತನಿಗೆ ಪ್ರಾರ್ಥನೆ ಮಾಡೋದು."

ಯಜಮಾನ: "ಒಳ್ಳೆಯದು, ಸಂಸಾರಾಸಕ್ತಿ ಕಡಮೆ ಕಡಮೆಯಾಗುವಂತೆ ನನಗೆ ಆಶೀರ್ವಾದ ಮಾಡಿ."

ಶ್ರೀರಾಮಕೃಷ್ಣರು ನಗುತ್ತ: "ಎಷ್ಟಿದೆ? ಎಂಟಾಣೆಯಷ್ಟು?" (ನಗು.)

ಯಜಮಾನ: "ಅದು ನಿಮಗೆ ಗೊತ್ತೇ ಇದೆ. ಮಹಾತ್ಮರ ದಯೆ ದೊರೆಯದೆ ಇದ್ದರೆ ಏನೂ ಆಗದು."

ಶ್ರೀರಾಮಕೃಷ್ಣರು: "ಭಗವಂತನನ್ನು ಸಂತುಷ್ಟನನ್ನಾಗಿ ಮಾಡಿದರೆ ಎಲ್ಲರೂ ಸಂತುಷ್ಟರಾಗುತ್ತಾರೆ. ಮಹಾತ್ಮರ ಹೃದಯದಲ್ಲಿ ಕೇವಲ ಆತ ತಾನೆ ಇರೋದು."

ಯಜಮಾನ: "ಆತ ದೊರೆತುಬಿಟ್ಟ ಅಂದರೆ ಮುಂದಿನ ಮಾತೇ ಇಲ್ಲ. ಯಾರಿಗಾದರು ಆತ ದೊರೆತುಬಿಟ್ಟದ್ದೇ ಆದರೆ, ಆಗ ಅವರು ಎಲ್ಲವನ್ನೂ ತ್ಯಜಿಸಿಬಿಡುತ್ತಾರೆ. ರೂಪಾಯಿ ದೊರೆತರೆ ಕಾಸಿನ ಆನಂದದ ಕಡೆ ಹೋಗುವುದನ್ನು ಬಿಟ್ಟುಬಿಡುತ್ತಾರೆ."

ಶ್ರೀರಾಮಕೃಷ್ಣ: "ಒಂದು ಸ್ವಲ್ಪ ಸಾಧನೆ ಬೇಕೇ ಬೇಕು. ಸಾಧನೆ ಮಾಡುತ್ತ ಮಾಡುತ್ತ ಮುಂದುವರಿದರೆ, ಕ್ರಮೇಣ ಆನಂದ ದೊರೆಯುತ್ತದೆ. ನೆಲದಲ್ಲಿ ಬಹಳ ಆಳದಲ್ಲಿ ಒಂದು ಗಡಿಗೆ ಹಣವನ್ನು ಹೂತಿಟ್ಟಿರುವುದಾದರೆ, ಅದು ಯಾರಿಗಾದರು ಬೇಕಾದರೆ, ಶ್ರಮ ವಹಿಸಿ ಅದನ್ನು ಅಗೆದು ತೆಗೆಯಬೇಕು. ಅಗೆಯುವಾಗ ಬೆವರು ಸುರಿಯುತ್ತದೆ. ಬಹಳವಾಗಿ ಅಗೆದನಂತರ, ಯಾವಾಗ ಗುದ್ದಲಿಯ ಮೊನೆ ಆ ಗಡಿಗೆಗೆ ತಗುಲಿ ಹಣ 'ಢಣಢಣ' ಎಂದು ಶಬ್ದ ಮಾಡುವುದೊ ಆಗ ಒಡನೆಯೇ ಆನಂದ ಉಂಟಾಗುತ್ತದೆ. ಅದು ಎಷ್ಟೊಂದು ಹೆಚ್ಚಾಗಿ 'ಢಣಢಣ' ಎಂದು ಶಬ್ದಮಾಡುತ್ತದೆಯೊ ಅಷ್ಟೊಂದು ಹೆಚ್ಚಾಗಿ ಆನಂದ ಉಂಟಾಗುತ್ತದೆ.

"ರಾಮನನ್ನು ಕರೆಯುತ್ತಾ ಹೋಗು; ಆತನ ಚಿಂತನೆ ಮಾಡು. ಆತನೇ ಬೇಕಾದ್ದನ್ನೆಲ್ಲ ಒದಗಿಸಿಕೊಡುತ್ತಾನೆ."

ಯಜಮಾನ: "ಮಹರಾಜ್, ನೀವೇ ರಾಮ."

ಶ್ರೀರಾಮಕೃಷ್ಣರು: "ಅದು ಹೇಗೆ? ಅಲೆಗಳೇನೊ ನದಿಯವು; ನದಿ ಅಲೆಯದೆ?"

ಯಜಮಾನ: "ಕೇವಲ ಮಹಾತ್ಮರ ಅಂತರ್ಯದಲ್ಲೇ ರಾಮ ಇರೋದು. ಆತನನ್ನು ಅಲ್ಲಿ ವಿನಾ ಬೇರೆಲ್ಲಿಯೂ ನೋಡಲಾಗೋದಿಲ್ಲ. ನೋಡೋಣ ಅಂದರೆ ಈಗ ಆತ ಅವತರಿಸಿಲ್ಲವಲ್ಲ."

ಶ್ರೀರಾಮಕೃಷ್ಣರು ನಗುತ್ತ: "ಪ್ರಸ್ತುತ ಆತ ಅವತರಿಸಿಲ್ಲ ಎಂಬುದನ್ನು ನೀನು ಹೇಗೆ ಅರಿತೆ?"

ಯಜಮಾನ ಸುಮ್ಮನೆ ಕುಳಿತಿದ್ದಾನೆ.

ಶ್ರೀರಾಮಕೃಷ್ಣರು: "ಅವತಾರವನ್ನು ಎಲ್ಲರೂ ಗುರುತಿಸಲಾರರು. ನಾರದ ರಾಮಚಂದ್ರನ ದರ್ಶನಕ್ಕಾಗಿ ಹೋದಾಗ, ಆತ ಎದ್ದುನಿಂತು ನಾರದನಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಬಳಿಕ ಹೇಳಿದ, 'ನಾವು ಸಂಸಾರಿ ಜೀವಿಗಳು. ನಿಮ್ಮಂಥ ಸಾಧುಗಳು ಬಂದು ನಮಗೆ ದರ್ಶನ ಕೊಡದಿದ್ದರೆ ನಾವು ಪವಿತ್ರರಾಗುವುದು ಎಂತು?' ಎಂದು. ಮತ್ತೆ ರಾಮಚಂದ್ರ ಸತ್ಯಪಾಲನೆಗಾಗಿ ವನವಾಸಕ್ಕೆ ತೆರಳಿದಾಗ, ರಾಮಚಂದ್ರನಿಗೆ ವನವಾಸ ದೊರಕಿದೆ ಎಂಬುದನ್ನು ಕೇಳಿ ಅನೇಕ ಋಷಿಗಳು ಉಪವಾಸವ್ರತ ಕೈಗೊಂಡಿರುವುದನ್ನು ರಾಮಚಂದ್ರ ನೋಡಿದ. ರಾಮಚಂದ್ರ ಸಾಕ್ಷಾತ್ ಪರಬ್ರಹ್ಮನೇ ಎಂಬುದು ಅವರಲ್ಲಿ ಅನೇಕರಿಗೆ ಗೊತ್ತಿರಲಿಲ್ಲ."

ಯಜಮಾನ: "ನೀವೇ ಆ ಶ್ರೀರಾಮಚಂದ್ರ."

ಪರಮಹಂಸರು: "ರಾಮ! ರಾಮ! ಹಾಗೆಲ್ಲ ಹೇಳಬಾರದು."

ಹೀಗೆಂದು ಹೇಳಿ ಕೈ ಜೋಡಿಸಿ ಪ್ರಣಾಮ ಮಾಡಿದರು. ಮತ್ತೆ ಹೇಳಿದರು, "'ಆ ರಾಮ ಸಕಲ ಜೀವರಾಶಿಗಳ ಅಂತರ್ಯಾಮಿ; ಆತ ಈ ಜಗತ್ತನ್ನೆಲ್ಲಾ ವ್ಯಾಪಿಸಿಕೊಂಡಿದ್ದಾನೆ.' ನಾನು ನಿಮ್ಮಗಳ ದಾಸ ಆ ರಾಮನೇ ಈ ಜೀವ ಜಂತು ಮನುಷ್ಯ ಸಕಲವೂ ಆಗಿದ್ದಾನೆ."

ಯಜಮಾನ: "ಮಹರಾಜ್, ನಮಗೆಲ್ಲ ಅದು ಗೊತ್ತಿಲ್ಲ,— "

ಶ್ರೀರಾಮಕೃಷ್ಣರು: "ನಿನಗೆ ಗೊತ್ತಿರಲಿ ಗೊತ್ತಿಲ್ಲದಿರಲಿ, ನೀನೂ ರಾಮನೆ."

ಯಜಮಾನ: "ನಿಮಗೆ ರಾಗ ದ್ವೇಷ ಇಲ್ಲ."

ಶ್ರೀರಾಮಕೃಷ್ಣರು: "ಏಕಿಲ್ಲ? ಒಬ್ಬ ಗಾಡಿಯವನನ್ನು ಕಲ್ಕತ್ತಕ್ಕೆ ಬರಲು ಗೊತ್ತುಮಾಡಿಯಾಯಿತು. ಆತ ಮುಂಗಡವಾಗಿ ಮೂರು ಆಣೆಯನ್ನೂ ತೆಗೆದುಕೊಂಡು ಹೋದ. ಆದರೆ ತಲೆ ತೋರಿಸಲೇ ಇಲ್ಲ. ಆತನ ಮೇಲೆ ನನಗೆ ಬಹಳ ಕೋಪ ಬಂದುಬಿಟ್ಟಿತ್ತು. ಆತ ಬಹಳ ಕೆಟ್ಟವ. ನೋಡು, ಆತ ನನಗೆ ಎಷ್ಟು ಕಷ್ಟ ಕೊಟ್ಟ!"

ಪರಮಹಂಸರು ಸ್ವಲ್ಪ ವಿಶ್ರಮಿಸಿಕೊಳ್ಳುತ್ತಿದ್ದಾರೆ. ಮಾರ್‍ವಾಡಿ ಭಕ್ತರು ಚಾವಣಿಯ ಮೇಲೆ ಭಜನೆಮಾಡುತ್ತಿದ್ದಾರೆ. ಇಂದು

ಶ್ರೀ ಮಯೂರಮುಕುಟಧಾರಿಯ ಮಹೋತ್ಸವ. ನೈವೇದ್ಯವೆಲ್ಲ ಸಿದ್ಧವಾಗಿದೆ. ಯಜಮಾನ ಬಂದು ಪರಮಹಂಸರನ್ನು ದೇವರ ಮನೆಗೆ ಕರೆದುಕೊಂಡು ಹೋದನು. ಪರಮಹಂಸರು ಮಯೂರಮುಕುಟಧಾರಿಗೆ ಪ್ರಣಾಮಮಾಡಿ ಪುಷ್ಪಪ್ರಸಾದವನ್ನು ಸ್ವೀಕರಿಸಿದರು.

ಪರಮಹಂಸರು ವಿಗ್ರಹದರ್ಶನಾನಂತರ ಭಾವಾವಿಷ್ಟರಾಗಿದ್ದಾರೆ. ಕೈಗಳನ್ನು ಜೋಡಿಸಿ ಹೇಳುತ್ತಿದ್ದಾರೆ: "ಓ ಗೋವಿಂದ, ಮಮ ಪ್ರಾಣ! ಮಮ ಜೀವನ! ಜೈ ಗೋವಿಂದ ಗೋವಿಂದ ವಾಸುದೇವ ಸಚ್ಚಿದಾನಂದ ವಿಗ್ರಹ! ಹಾ ಕೃಷ್ಣ! ಹೇ ಕೃಷ್ಣ! ಜ್ಞಾನ ಕೃಷ್ಣ! ಮನ ಕೃಷ್ಣ! ಪ್ರಾಣ ಕೃಷ್ಣ! ಆತ್ಮ ಕೃಷ್ಣ! ದೇಹ ಕೃಷ್ಣ! ಜಾತಿ ಕೃಷ್ಣ! ಕುಲ ಕೃಷ್ಣ! ಪ್ರಾಣ ಹೇ, ಗೋವಿಂದ ಮಮ ಜೀವನ!" ಎಂದು. ಹೀಗೆ ಹೇಳುತ್ತ ಹೇಳುತ್ತ ಪರಮಹಂಸರು ನಿಂತೇ ಸಮಾಧಿಸ್ಥರಾಗಿಬಿಟ್ಟಿದ್ದಾರೆ. ರಾಮಚಾಟರ್ಜಿ ಅವರನ್ನು ಹಿಡಿದು ನಿಂತುಕೊಂಡಿದ್ದಾನೆ.

ಬಹಳ ಹೊತ್ತಾದ ಮೇಲೆ ಪರಮಹಂಸರು ಪ್ರಕೃತಿಸ್ಥರಾದರು. ಈಗ ಮಾರ್ವಾಡಿ ಭಕ್ತರು ಸಿಂಹಾಸನಸ್ಥ ಮಯೂರಮುಕುಟಧಾರಿ ವಿಗ್ರಹವನ್ನು ಹೊರಗಡೆಗೆ ತೆಗೆದುಕೊಂಡು ಹೋಗಲು ಬಂದಿದ್ದಾರೆ. ನೈವೇದ್ಯದ ವ್ಯವಸ್ಥೆಯನ್ನು ಹೊರಗಡೆ ಮಾಡಿದ್ದಾರೆ. ಮಹದಾನಂದದಿಂದ ಮಾರ್ವಾಡಿ ಭಕ್ತರು ಆ ಸಿಂಹಾಸನಸ್ಥ ವಿಗ್ರಹವನ್ನು ದೇವರ ಮನೆಯಿಂದ ಹೊರಕ್ಕೆ ತೆಗೆದುಕೊಂಡು ಹೋಗುತ್ತಿದ್ದಾರೆ. ಪರಮಹಂಸರು ಅದನ್ನು ಹಿಂಬಾಲಿಸುತ್ತಿದ್ದಾರೆ. ನೈವೇದ್ಯವನ್ನು ಅರ್ಪಿಸಿ ಆಯಿತು. ನೈವೇದ್ಯವನ್ನಿಟ್ಟಿದ್ದಾಗ ಮಾರ್ವಾಡಿ ಭಕ್ತರು ವಿಗ್ರಹದೆದುರಿಗೆ ಒಂದು ಬಟ್ಟೆಯ ಪರದೆಯನ್ನು ಇಳಿಬಿಟ್ಟಿದ್ದರು. ಈಗ ಮಂಗಳಾರತಿ ಆರಂಭವಾಯಿತು. ಭಜನೆಯೂ ನಡೆಯುತ್ತಿದೆ. ಪರಮಹಂಸರು ವಿಗ್ರಹಕ್ಕೆ ಚಾಮರದಿಂದ ಶೈತ್ಯೋಪಚಾರಮಾಡುತ್ತಿದ್ದಾರೆ.

ಈಗ ಬ್ರಾಹ್ಮಣ ಭೋಜನ ನಡೆಯುತ್ತಿದೆ. ಆ ಚಾವಣಿ ಮೇಲೆ ಪರಮಹಂಸರ ಕಣ್ಣೆದುರು ಇಂದಿನ ಕೆಲಸಕಾರ್ಯಗಳೆಲ್ಲ ನಿರ್ವಿಘ್ನವಾಗಿ ನೆರವೇರುತ್ತಾ ಬಂದಿವೆ. ಮಾರ್ವಾಡಿ ಭಕ್ತರು ಪರಮಹಂಸರನ್ನು ಊಟಮಾಡುವಂತೆ ಬೇಡಿಕೊಂಡರು. ಪರಮಹಂಸರು ಊಟಕ್ಕೆ ಕುಳಿತುಕೊಂಡರು; ಭಕ್ತರೂ ಕುಳಿತು ಪ್ರಸಾದ ಸ್ವೀಕರಿಸಿದರು.

ಪರಮಹಂಸರು ಆ ಮನೆಯ ಯಜಮಾನನಿಂದ ಬೀಳ್ಕೊಂಡರು.

ಆಗ ಸಾಯಂಕಾಲವಾಗಿಬಿಟ್ಟಿದೆ. ಇನ್ನೂ ಬೀದಿ, ಜನ ಗಾಡಿ ಮೊದಲಾದುವುಗಳಿಂದ ಕಿಕ್ಕಿರಿದು ತುಂಬಿದೆ. ಆಗ ಪರಮಹಂಸರು ಹೇಳಿದರು: "ನಾವು ಗಾಡಿಯಿಂದ ಇಳಿದುಬಿಡೋಣ. ಅದು ಹಿಂದಿನ ರಸ್ತೆಯಿಂದ ಬಳಸಿಕೊಂಡು ಬರಲಿ" ಎಂದು. ಬೀದಿಯಲ್ಲಿ ಸ್ವಲ್ಪ ದೂರ ನಡೆದ ನಂತರ ಒಂದು ಗವಿಯೋಪಾದಿಯಲ್ಲಿದ್ದ ಮನೆಯ ಮುಂದೆ ಒಬ್ಬ ಎಲಡಿಕೆ ಅಂಗಡಿ ಇಟ್ಟಿರುವುದನ್ನು ಕಂಡರು. ಆ ಮನೆಯನ್ನು ಪ್ರವೇಶಮಾಡಬೇಕಾದರೆ ಬಗ್ಗಿ ಒಳಕ್ಕೆ ನುಗ್ಗಬೇಕು. ಪರಮಹಂಸರು ಹೇಳಿದರು, "ಏನು ಕಷ್ಟವಪ್ಪ ಇದು, ಇದೊಂದಿಷ್ಟರೊಳಗೆ ಕಟ್ಟಿಬಿದ್ದಿರೋದು! ಸಂಸಾರಿಗಳದು ಎಂಥ ಸ್ವಭಾವ! ಇದಿಷ್ಟರಲ್ಲೇ ಆನಂದಮಯರಾಗಿರೋದು!"

ಗಾಡಿ ಬಳಸಿಕೊಂಡು ಬಂದಿತು, ಪರಮಹಂಸರು ಮತ್ತೆ ಗಾಡಿಗೆ ಹತ್ತಿದರು. ಬಳಿಕ ಬಾಬುರಾಮ, ಮಾಸ್ಟರ್, ರಾಮಚಾಟರ್ಜಿ ಗಾಡಿಯನ್ನು ಹತ್ತಿದರು. ಚಿಕ್ಕ ಗೋಪಾಲ ಗಾಡಿಯ ಕಮಾನಿನಮೇಲೆ ಕುಳಿತುಕೊಂಡನು.

ಒಬ್ಬ ಭಿಕ್ಷುಕಿ ಕಂಕುಳಲ್ಲಿ ಮಗುವನ್ನು ಎತ್ತಿಕೊಂಡು ಗಾಡಿಯ ಹತ್ತಿರಕ್ಕೆ ಬಂದು ಭಿಕ್ಷೆ ಬೇಡಿದಳು. ಪರಮಹಂಸರು ಅದನ್ನು ನೋಡಿ, ಮಾಸ್ಟರನ್ನು ಕೇಳಿದರು, 'ಏನು, ಕಾಸು ಇದೆಯೇನು?' ಎಂದು. ಗೋಪಾಲ ಆಕೆಗೆ ಮೂರು ಕಾಸು ಕೊಟ್ಟ.

ಗಾಡಿ ಬಡೋಬಸಾರಿನಮೂಲಕ ಮುಂದುವರಿಯುತ್ತಿದೆ. ದೀಪಾವಳಿಯ ಧಾಮ್ ಧೂಮ್ ಇನ್ನೂ ಮುಂದುವರಿಯುತ್ತಿದೆ. ರಾತ್ರಿಯೇನೊ ಅಂಧಕಾರಮಯವಾಗಿದೆ, ಆದರೆ ಎಲ್ಲೆಲ್ಲೂ ದೀಪವೇ ದೀಪ. ಗಾಡಿ ಬಡೋಬಸಾರಿನ ಗಲ್ಲಿಯನ್ನು ಬಿಟ್ಟು ಚಿತ್‌ಪುರ ರಸ್ತೆಗೆ ಬಂದಿತು. ಅಲ್ಲೂ ಅಸಂಖ್ಯ ದೀಪಗಳು. ಇರುವೆಸಾಲಿನೋಪಾದಿಯಲ್ಲಿ ಜನ ಮುಂದುವರಿಯುತ್ತಿದ್ದಾರೆ. ಜನರು ಬಾಯಿಬಿಟ್ಟುಕೊಂಡು ಇಕ್ಕೆಲಗಳಲ್ಲಿಯೂ ಬಹಳ ಚೆನ್ನಾಗಿ ಅಲಂಕೃತವಾಗಿರುವ ಅಂಗಡಿಮುಂಗಟ್ಟುಗಳನ್ನು ನೋಡಿಕೊಂಡು ಮುಂದುವರಿಯುತ್ತಿದ್ದಾರೆ. ಅಲ್ಲಲ್ಲಿ ಮಿಠಾಯಿ ಅಂಗಡಿಗಳಿವೆ; ತಟ್ಟೆಗಳಲ್ಲಿ ಸಿಹಿ ತಿಂಡಿಗಳನ್ನು ಬಹಳ ಚೆನ್ನಾಗಿ ಜೋಡಿಸಿ ಇಟ್ಟಿದ್ದಾರೆ. ಇನ್ನೂ ಬೇರೆ ಬೇರೆ ಕಡೆಗಳಲ್ಲಿ ಸುಗಂಧದ್ರವ್ಯಗಳ ಅಂಗಡಿಗಳು. ಅವೆಲ್ಲ ವಿವಿಧ ಸುಂದರ ಚಿತ್ರಪಟಗಳಿಂದ ಸುಶೋಭಿತವಾಗಿವೆ. ಅಂಗಡಿಯವರು ಬಹಳ ಸೊಗ

ಸಾದ ಉಡಿಗೆತೊಡಿಗೆಗಳನ್ನು ಹಾಕಿಕೊಂಡು ಪನ್ನೀರುದಾನಿಯನ್ನು ಕೈಯಲ್ಲಿ ಹಿಡಿದು ಪ್ರೇಕ್ಷಕವೃಂದಕ್ಕೆ ಪನ್ನೀರನ್ನು ಎರಚುತ್ತಿದ್ದಾರೆ. ಪರಮ ಹಂಸರ ಗಾಡಿ ಒಂದು ಸುಗಂಧದ್ರವ್ಯದ ಅಂಗಡಿಯ ಹತ್ತಿರಕ್ಕೆ ಬಂದಿತು. ಪರಮಹಂಸರು ಐದು ವರ್ಷದ ಬಾಲಕನೋಪಾದಿಯಲ್ಲಿ ಚಿತ್ರಪಟಗಳನ್ನು ಮತ್ತು ದೀಪಗಳನ್ನು ನೋಡಿ ಆನಂದಪಡುತ್ತಿದ್ದಾರೆ. ಎಲ್ಲಾ ಕಡೆಯು ಕೋಲಾಹಲವೇ ಕೋಲಾಹಲ. ಪರಮಹಂಸರು ಗಟ್ಟಿಯಾಗಿ ಕೂಗಿ ಕೊಳ್ಳುತ್ತಿದ್ದಾರೆ, "ಇನ್ನೂ ಮುಂದೆ ಹೋಗಿ ನೋಡಿ! ಇನ್ನೂ ಮುಂದಕ್ಕೆ ಹೋಗಿ ನೋಡಿ!" ಎಂದು. ಹೀಗೆಂದು ಹೇಳುತ್ತ ನಗುತ್ತಿದ್ದಾರೆ. ಗಹಗಹಿಸಿ ನಗುತ್ತ ಬಾಬುರಾಮನಿಗೆ ಹೇಳುತ್ತಿದ್ದಾರೆ, "ಏನು ಮಾಡು ತ್ತಿದ್ದೀಯೆ? ಹೋಗು ಇನ್ನೂ ಮುಂದಕ್ಕೆ" ಎಂದು. ಭಕ್ತರೂ ನಗ ಲಾರಂಭಿಸಿದರು. ಭಕ್ತರು ಭಾವಿಸಿದರು, ಪರಮಹಂಸರು ಬಹುಶಃ ಹೇಳುತ್ತಿದ್ದಾರೆ ಭಗವಂತನ ಕಡೆಗೆ ಮುಂದುವರಿಯಿರಿ, ನೀವು ಈಗಿರುವ ಸ್ಥಿತಿಯಲ್ಲೇ ತುಷ್ಟರಾಗಿರಬೇಡಿ ಅಂತ ಎಂದು.

ಗಾಡಿ ಮುಂದುವರಿಯಲಾರಂಭಿಸಿತು. ಮಾಸ್ಟರ್ ತಮಗಾಗಿ ಸ್ನಾನದ ಚೌಕಗಳನ್ನು ತಂದಿರುವುದು ಪರಮಹಂಸರ ಕಣ್ಣಿಗೆ ಬಿತ್ತು. ಅವುಗಳಲ್ಲಿ ಎರಡು ಕೋರಾ ಎರಡು ಚಲುವೆ ಮಾಡಿದ್ದು. ಆದರೆ ಪರಮ ಹಂಸರು ಎರಡು ಕೋರಾ ಚೌಕಗಳನ್ನು ತರಲು ಹೇಳಿದ್ದರು. ಅವರು ಮಣಿಗೆ ಹೇಳಿದರು, "ಆ ಎರಡು ಕೋರಾ ಚೌಕಗಳನ್ನು ಮಾತ್ರ ನನಗೆ ಈಗಲೆ ಕೊಡು. ಉಳಿದ ಎರಡನ್ನು ಸದ್ಯಕ್ಕೆ ತೆಗೆದುಕೊಂಡು ಹೋಗಿ ನಿನ್ನ ಹತ್ತಿರ ಇಟ್ಟುಕೊ. ಹೋಗಲಿ ಅದರಲ್ಲೂ ಒಂದನ್ನು ಕೊಟ್ಟುಬಿಡು" ಎಂದು.

ಮಾಸ್ಟರ್: "ಒಳ್ಳೆಯದು, ಹಾಗಾದರೆ ಒಂದು ಚೌಕವನ್ನು ವಾಪಸು ತೆಗೆದುಕೊಂಡು ಹೋಗಲೇನು?"

ಶ್ರೀರಾಮಕೃಷ್ಣರು: "ಈಗ ಕೋರಾ ಚೌಕಗಳೇ ಸಾಕು. ಆವೆರ ಡನ್ನೂ ಹಿಂದಕ್ಕೆ ತೆಗೆದುಕೊಂಡು ಹೋಗಿಬಿಡು."

ಮಾಸ್ಟರ್: "ಒಳ್ಳೆಯದು, ತಮ್ಮ ಚಿತ್ತ."

ಶ್ರೀರಾಮಕೃಷ್ಣರು: "ಆವಶ್ಯಕತೆ ತೋರಿಬಂದಾಗ ಮತ್ತೆ ಅವು ಗಳನ್ನು ತಂದುಕೊಡುವೆಯಂತೆ. ನೋಡು, ನೆನ್ನೆ ವೇಣೀಪಾಲ ರಾಮಲಾಲನಿಗೆಂದು ತಿಂಡಿ ತೀರ್ಥವನ್ನು ಗಾಡಿಯಲ್ಲಿ ಇಡಲು ಬಂದ.

ನಾನು ಹೇಳಿದೆ, 'ನನ್ನೊಡನೆ ಯಾವ ವಸ್ತುವನ್ನೂ ಕಳುಹಿಸಬೇಡ. ನಾನು ಸಂಚಯ ಮಾಡೋಹಾಗಿಲ್ಲ' ಎಂದು."

ಮಾಸ್ಟರ್: "ಅದು ಸರಿ. ಚೆಲುವೆ ಮಾಡಿದ ಎರಡು ಚೌಕಗಳನ್ನೂ ಹಿಂದಿರುಗಿ ತೆಗೆದುಕೊಂಡು ಹೋಗಿಬಿಡುತ್ತೇನೆ."

ಶ್ರೀರಾಮಕೃಷ್ಣರು ಮೃದುವಾಗಿ: "ನನ್ನ ಮನಸ್ಸಿನಲ್ಲಿ ಯಾವುದಾದರು ಆಸೆ ಎದ್ದರೆ ಅದು ನಿಮ್ಮೆಲ್ಲರ ಹಿತಚಿಂತನೆಗಾಗಿಯೆ, ಅಲ್ಲವೆ? ನೀನು ನನಗೆ ಸೇರಿದವ. ಬೇಕಾದಾಗಲೆಲ್ಲ ತಿಳಿಸುತ್ತೇನೆ."

ಮಾಸ್ಟರ್ ವಿನಯದಿಂದ: "ದಯವಿಟ್ಟು ಹಾಗೆ ಮಾಡಿ."

ಶ್ರೀರಾಮಕೃಷ್ಣರು ಯಾರೊ ಒಬ್ಬ ಭಕ್ತನ ಮಾತು ಎತ್ತಿದರು. ಅವರು: "ನಾನು ಅವನಿಗೆ ಹೇಳಿದೆ, 'ನಾನು ನಾಳೆ ಬಡೋಬಸಾರಿಗೆ ಹೋಗುತ್ತೇನೆ, ನೀನೂ ಅಲ್ಲಿಗೆ ಬಾ' ಅಂತ. ಅವನು ಏನು ಹೇಳಿದ ನಿಮಗೆ ಗೊತ್ತೆ? 'ಟ್ರಾಮಿಗೆ ಒಂದಾಣೆ ಕೊಡಬೇಕಾಗುತ್ತದೆ, ನಾನೆಲ್ಲಿ ತರಲಿ?' ಅಂತ. ನೆನ್ನೆ ವೇಣೀಪಾಲನ ತೋಟಕ್ಕೆ ಬಂದಿದ್ದ. ಅಲ್ಲಿ ಆಚಾರ್ಯನ ಕೆಲಸ ಮಾಡಿದ. ಹಾಗೆ ಮಾಡು ಅಂತ ಯಾರೂ ಆತನಿಗೆ ಹೇಳಲಿಲ್ಲ. ತನ್ನ ಸ್ವಪ್ರತಿಷ್ಠೆಯನ್ನು ತೋರಿಸಿಕೊಂಡ. ಆತನ ಇಚ್ಛೆ ತಾನೂ ಬ್ರಹ್ಮಜ್ಞಾನಿಗಳಲ್ಲಿ (ಬ್ರಹ್ಮಸಮಾಜದವರಲ್ಲಿ) ಒಬ್ಬ ಎಂದು ಜನರಿಗೆ ಗೊತ್ತಾಗಲಿ ಅಂತ. (ಮಾಸ್ಟರಿಗೆ) ಟ್ರಾಮಿಗೆ ಒಂದಾಣೆ ಕೊಡಬೇಕಾಗುತ್ತೆ ಅಂತ ಅವ ಏಕೆ ಹೇಳಿದ ಹೇಳು ನೋಡೋಣ?"

ಸಂಭಾಷಣೆ ಮಾರ್ವಾಡಿಗಳ ಅನ್ನಕೂಟ ಹಬ್ಬದ ವಿಷಯವಾಗಿ ಆರಂಭವಾಯಿತು.

ಶ್ರೀರಾಮಕೃಷ್ಣರು ಭಕ್ತರಿಗೆ: "ಇಲ್ಲಿ ಏನು ನೋಡಿದಿರೋ ಬೃಂದಾವನದಲ್ಲೂ ಹಾಗೇನೆ. ರಾಖಾಲ ಮೊದಲಾದವರೂ ಬೃಂದಾವನದಲ್ಲಿ ಇದನ್ನೇ ನೋಡುತ್ತಿದ್ದಾರೆ. ಆದರೆ ಅಲ್ಲಿನ ಅನ್ನಕೂಟ ಇನ್ನೂ ದೊಡ್ಡದು; ಜನರ ಕೂಟವೂ ಹೆಚ್ಚು; ಜೊತೆಗೆ ಅಲ್ಲಿ ಗೋವರ್ಧನ ಪರ್ವತ ಬೇರೆ ಇದೆ. ಇಷ್ಟೇ ಪ್ರಭೇದ.

"ಮಾರ್ವಾಡಿಗಳದು ಎಂಥ ಭಕ್ತಿ ಎಂಬುದನ್ನು ನೋಡಿದಿರಾ? ಇದು ಯಥಾರ್ಥ ಹಿಂದೂ ಭಾವ. ಇದೇ ಸನಾತನ ಧರ್ಮ. ದೇವರ ಮೆರವಣಿಗೆ ಸಮಯದಲ್ಲಿ ಅವರು ಎಷ್ಟು ಆನಂದಪಟ್ಟರು ಎಂಬುದನ್ನು ನೋಡಿದಿರಾ? ಅವರ ಆನಂದ ಈ ರೀತಿಯದು: 'ನಮಗೆ ಭಗವಂತನ

ಸಿಂಹಾಸನವನ್ನು ನಮ್ಮ ಹೆಗಲ ಮೇಲೆ ಹೊತ್ತುಕೊಂಡು ಹೋಗಲು ಸೌಲಭ್ಯ ದೊರೆಯಿತಲ್ಲ!' ಅಂತ.

"ಹಿಂದೂ ಧರ್ಮವೇ ಸನಾತನ ಧರ್ಮ. ಈ ನವನಾಗರಿಕ ಕಾಲದಲ್ಲಿ ಕಾಣಬರುವ ಧರ್ಮಗಳೆಲ್ಲ ಆತನ ಇಚ್ಛೆಯಿಂದ ಬರುತ್ತವೆ ಹೋಗುತ್ತವೆ— ಹೆಚ್ಚುಕಾಲ ನಿಲ್ಲವು. ಅದಕ್ಕಾಗಿಯೆ ನಾನು ಹೇಳುವುದು, 'ಈ ನವನಾಗರಿಕ ಧರ್ಮಗಳ ಅನುಯಾಯಿಗಳ ಚರಣೇಭ್ಯೋ ನಮಃ' ಎಂದು. ಹಿಂದೂ ಧರ್ಮ ಎಂದೆಂದಿನಿಂದಲೂ ಬದುಕಿ ಬಂದಿದೆ, ಮುಂದೆಯೂ ಎಂದೆಂದಿಗೂ ಬದುಕಿ ಬಾಳುತ್ತದೆ."

ಮಾಸ್ಟರ್ ತನ್ನ ಮನೆಗೆ ಹೋಗಬೇಕಾಗಿದೆ. ಪರಮಹಂಸರಿಗೆ ಪ್ರಣಾಮಮಾಡಿ ಶೋಭಾಬಸಾರಿನ ಹತ್ತಿರ ಗಾಡಿಯಿಂದ ಇಳಿದನು. ಪರಮಹಂಸರು ಆನಂದದಿಂದ ಗಾಡಿಯಲ್ಲಿ ಮುಂದುವರಿಯುತ್ತಿದ್ದಾರೆ.



## ೩೩

# ವಿವಿಧ ಭಕ್ತರೊಡನೆ

೨೬ನೆ ಅಕ್ಟೋಬರ್ ೧೮೮೪, ಕಾರ್ತಿಕ ಶುಕ್ಲ ಸಪ್ತಮಿ, ಭಾನುವಾರ.

ಅಪರಾಹ್ನವಾಗಿದೆ. ಅನೇಕ ಮಂದಿ ಭಕ್ತರು ಬಂದು ಶ್ರೀರಾಮಕೃಷ್ಣರ ಕೊಠಡಿಯಲ್ಲಿ ಸೇರಿದ್ದಾರೆ. ಮನಮೋಹನ, ಮಹಿಮಚರಣ, ಮಾಸ್ಟರ್ ಸಹ ಬಂದಿರುವರು. ಸ್ವಲ್ಪ ಹೊತ್ತಿನನಂತರ ಈಶಾನ ಮತ್ತು ಹಾಜರಾ ಅಲ್ಲಿಗೆ ಬಂದರು. ಬಲರಾಮ ಮತ್ತು ರಾಖಾಲ ಇನ್ನೂ ಬೃಂದಾವನದಲ್ಲೆ ಇದ್ದಾರೆ. ಈವಾಗ ಕೆಲವು ಕಾಲದಿಂದ ಅನ್ಯೋನ್ಯವಾಗಿ ಶ್ರೀರಾಮಕೃಷ್ಣರೊಡನೆ ಬೆರೆತ ಯುವಕರು ಮುಂದೆ ಅವರ ಪರಮ ಶಿಷ್ಯರಾದರು. ಲಾಟು ಶ್ರೀರಾಮಕೃಷ್ಣರೊಡನೆಯೆ ಇದ್ದಾನೆ. ಹತ್ತಿರದ ಹಳ್ಳಿಯಲ್ಲಿ ವಾಸಿಸುತ್ತಿದ್ದ ಯೋಗಿ ಎಂಬುವನು ಆಗಾಗ ಬಂದು ಪರಮಹಂಸರನ್ನು ನೋಡಿ ಹೋಗುತ್ತಿದ್ದಾನೆ.

ಸಾಕ್ಷಾತ್ ಭಗವತಿಯ ಮಗುವೇ ಆದ ಪರಮಹಂಸರು ತಮ್ಮ ಸುತ್ತಲೂ ಸತತ ಆನಂದ ಮತ್ತು ಶಾಂತಿಯನ್ನು ಬೀರುತ್ತಿದ್ದಾರೆ. ಅದು ಭಕ್ತರ ಹೃದಯದಲ್ಲಿ ಪ್ರತಿಬಿಂಬಿತವಾಗುತ್ತಿದೆ ಮತ್ತು ಅವರ ಮುಖದಿಂದ ಎದ್ದು ಕಾಣುತ್ತಿದೆ. ಅವರೆಲ್ಲ ಪರಮಹಂಸರನ್ನು ದೃಷ್ಟಿಸಿ ನೋಡುತ್ತ ನೆಲದ ಮೇಲೆ ಕುಳಿತುಕೊಂಡಿದ್ದಾರೆ. ಶ್ರೀರಾಮಕೃಷ್ಣರು ಏನನ್ನೊ ಯೋಚಿಸುತ್ತ ತೀರ ಬಾಲಕನೋಪಾದಿಯಲ್ಲಿ ನಿಂತುಕೊಂಡಿದ್ದಾರೆ.

ಶ್ರೀರಾಮಕೃಷ್ಣರು ಮನಮೋಹನನಿಗೆ: "ಎಲ್ಲಾ ರಾಮನೇ ಆಗಿ ಕಾಣುತ್ತಿದ್ದಾನೆ. ನೀವೆಲ್ಲಾ ಕುಳಿತುಕೊಂಡಿದ್ದೀರಿ; ರಾಮನೇ ನಿಮ್ಮ ಪ್ರತಿಯೊಬ್ಬರ ರೂಪವನ್ನು ಧರಿಸಿ ಕುಳಿತಿರುವಂತೆ ಕಾಣುತ್ತಿದೆ."

ಮನಮೋಹನ: "ಹೌದು, ರಾಮನೇ ಎಲ್ಲಾ ಆಗಿದ್ದಾನೆ. ಆದರೆ, ನೀವು ಹೇಳುವ ಹಾಗೆ, ಎಲ್ಲಾ ನೀರು ನಾರಾಯಣನೆ ಆದರೂ, ಕೆಲವನ್ನು ಕುಡಿಯಬಹುದು, ಕೆಲವುದರಲ್ಲಿ ಮುಖ ಮಾತ್ರ ತೊಳೆಯಬಹುದು, ಇನ್ನೂ ಕೆಲವು ಮುಸುರೆ ತೊಳೆಯೋಕೆ ಮಾತ್ರವೇ ಉಪಯೋಗವಾಗುತ್ತವೆ."

ಶ್ರೀರಾಮಕೃಷ್ಣರು: "ಅದೇನೋ ನಿಜ. ಆದರೆ ಆತನೇ ಎಲ್ಲಾ ಆಗಿರುವುದು ನನಗೆ ಕಾಣುತ್ತಿದೆ. ಆತನೇ ಜೀವ ಜಗತ್ತು ಆಗಿದ್ದಾನೆ."

ಹೀಗೆ ಹೇಳುತ್ತ ಹೇಳುತ್ತ ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು.

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಒಳ್ಳೇದು, ಸತ್ಯ ನುಡಿಯಬೇಕೆಂದು ನಾನು ಸುಮ್ಮನೆ ಹುಚ್ಚನಾಗಿಬಿಡೋದೆ? ಅಕಸ್ಮಾತ್ತಾಗಿ ನಾನು ಊಟಮಾಡೋಲ್ಲ ಅಂದುಬಿಟ್ಟರೆ ಹಸಿವಾದರೂ ಊಟ ಮಾಡೋಹಾಗಿಲ್ಲವಲ್ಲ. ನಾನು ಯಾರಿಗಾದರು ನನ್ನ ಕಾಲುತಂಬಿಗೆ ತೆಗೆದುಕೊಂಡು ದೇವದಾರು ತೋಪಿಗೆ ಬರುವಂತೆ ಹೇಳಿದ್ದರೆ, ಆತನಲ್ಲದೆ ಬೇರೆ ಯಾರೂ ತರಲಾಗೋದಿಲ್ಲ. ಬೇರೆ ಯಾರಾದರು ತಂದರೆ ಆತ ಹಿಂದಿರುಗಿ ತೆಗೆದುಕೊಂಡು ಹೋಗಬೇಕಾಗುತ್ತದೆ. ನಾನು ಎಂಥ ದುರವಸ್ಥೆಯಲ್ಲಿ ಸಿಕ್ಕಿಕೊಂಡಿದ್ದೇನೆ. ಪಾರಾಗಲು ಬೇರೆ ಮಾರ್ಗವೇ ಇಲ್ಲವೇನು?

"ಮತ್ತೆ, ಏನನ್ನೂ ಜೊತೆಯಲ್ಲಿ ತರೋಹಾಗಿಲ್ಲ. ಎಲಡಿಕೆ, ಆಹಾರ ಸಾಮಗ್ರಿ,— ಯಾವುದನ್ನೂ ಜೊತೆಯಲ್ಲಿ ತೆಗೆದುಕೊಂಡು ಬರೋಹಾಗಿಲ್ಲ. ಹಾಗೆ ಮಾಡಿದರೆ ಸಂಚಯ ಮಾಡಿದ ಹಾಗೆ ಆಗಿಬಿಡುತ್ತದೆಯಲ್ಲ ಅದಕ್ಕಾಗಿ. ಒಂದು ಹಿಡಿ ಮಣ್ಣು ಹಿಡಿದುಕೊಂಡು ಬರೋಹಾಗೂ ಇಲ್ಲ."

ಪರಮಹಂಸರು ಹೀಗೆ ಮಾತನಾಡುತ್ತಿದ್ದಾಗ ಒಬ್ಬ ಬಂದು ಹೇಳಿದ: "ಮಹಾಶಯರೆ, ಹೃದಯ (ಹೃದೆ) ಯದುಮಲ್ಲಿಕನ ತೋಟಕ್ಕೆ ಬಂದಿದ್ದಾನೆ. ಗೇಟಿನ ಹತ್ತಿರ ನಿಂತಿದ್ದಾನೆ. ನಿಮ್ಮನ್ನು ನೋಡಬೇಕಂತೆ" ಎಂದು.

ಪರಮಹಂಸರು ಭಕ್ತರಿಗೆ, "ನಾನು ಹೃದೆಯನ್ನು ಒಮ್ಮೆ ನೋಡಿ ಬರುತ್ತೇನೆ. ನೀವು ಸ್ವಲ್ಪ ಕುಳಿತುಕೊಂಡಿರಿ" ಎಂದು ಹೇಳಿ ಕಾಲಿಗೆ ಪಾಲಿಷ್ ಮಾಡಿದ ಮೆಟ್ಟನ್ನು ಹಾಕಿಕೊಂಡು ಪೂರ್ವ ದಿಕ್ಕಿನ ಗೇಟಿನ ಕಡೆ ಹೋದರು. ಅವರೊಡನೆ ಮಾಸ್ಟರ್ ಕೂಡ ಹೋದನು. ಉದ್ಯಾನ ಪಥವನ್ನು ಕೆಂಪು ಇಟ್ಟಿಗೆಪುಡಿಯಿಂದ ರುಬ್ಬಿಸಿದ್ದರು. ಪರಮಹಂಸರು ಅದೇ ಮಾರ್ಗವಾಗಿ ಪೂರ್ವ ದಿಕ್ಕಿಗೆ ಹೋಗುತ್ತಿದ್ದಾರೆ. ರಸ್ತೆಯಲ್ಲಿ ನಿಂತಿದ್ದ ಖಜಾಂಚಿ ಪರಮಹಂಸರಿಗೆ ಪ್ರಣಾಮಮಾಡಿದ. ಪರಮಹಂಸರು

ದೇವಾಲಯ ಪ್ರಾಕಾರದ ಉತ್ತರ ಬಾಗಿಲನ್ನು ದಾಟಿದರು. ಅಲ್ಲಿ ಗಡ ಬೆಳಸಿಕೊಂಡಿದ್ದ ಕಾವಲುಗಾರರು ಕುಳಿತಿದ್ದರು. ಅವರ ಎಡಭಾಗದಲ್ಲಿ ರಾಣಿ ರಾಸಮಣಿ ಬಂದಾಗ ಇಳಿದುಕೊಳ್ಳುವ ಬಂಗಲೆ ಇದೆ. ಅಲ್ಲಿಂದಾಚೆಗೆ ರಸ್ತೆಯ ಎರಡು ಪಾರ್ಶ್ವಗಳಲ್ಲಿಯೂ ಹೂವಿನ ಗಿಡಗಳು ತುಂಬಿವೆ. ರಸ್ತೆಯ ಹತ್ತಿರವೆ ಅದರ ಬಲಭಾಗಕ್ಕೆ ಗಾಜೀತಲ ಎಂಬ ಪುಷ್ಕರಣಿ ಇದೆ. ಇನ್ನೂ ಮುಂದುವರಿದು ಉದ್ಯಾನವನವನ್ನು ಬಿಟ್ಟು ಹೊರಕ್ಕೆ ಬಂದರು. ಹೃದಯು ತಮಗಾಗಿ ಯದುಮಲ್ಲಿಕನ ತೋಟದ ಬಾಗಿಲ ಹತ್ತಿರ ಕಾದು ನಿಂತಿರುವುದನ್ನು ನೋಡಿದರು.

ಪರಮಹಂಸರನ್ನು ಕಂಡೊಡನೆಯೆ ಅದುವರೆಗೆ ಕೈಕಟ್ಟಿ ನಿಂತಿದ್ದ ಹೃದಯು ಒಮ್ಮೆಗೆಯೇ ರಾಜಪಥದ ಮೇಲೆ ಬಿದ್ದು ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಪರಮಹಂಸರು ಆತನಿಗೆ ಮೇಲಕ್ಕೆ ಏಳುವಂತೆ ಹೇಳಿದರು. ಹೃದಯು ಮತ್ತೆ ಕೈಮುಗಿದು ಬಾಲಕನ ಹಾಗೆ ಸುಮ್ಮನೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಏನಾಶ್ಚರ್ಯ! ಪರಮಹಂಸರೂ ಅಳಲಾರಂಭಿಸಿದ್ದಾರೆ. ಅವರ ಕಣ್ಣಿನಲ್ಲಿ ನೀರೂ ಬಂದುಬಿಟ್ಟಿತು. ಅವರು ಅದನ್ನು ತಮ್ಮ ಕೈಯಿಂದ ಒರಸಿಬಿಟ್ಟರು. ಏನಿದು! ಯಾವ ಹೃದಯು ಪರಮಹಂಸರಿಗೆ ಅಷ್ಟೊಂದು ಚಿತ್ರಹಿಂಸೆಯನ್ನು ಕೊಟ್ಟಿದ್ದನೋ, ಆತನನ್ನು ನೋಡಲು ಎದ್ದು ಓಡಿಬಂದಿದ್ದಾರೆ ಮತ್ತು ಆತನಿಗಾಗಿ ಅಳುತ್ತಿದ್ದಾರೆ!

ಶ್ರೀರಾಮಕೃಷ್ಣರು : "ಏನು ಬಂದೆ?"

ಹೃದಯು ಬಿಕ್ಕಿಬಿಕ್ಕಿ ಅಳುತ್ತ: "ನಿಮ್ಮನ್ನು ನೋಡಲು ಬಂದೆ. ನನ್ನ ದುಃಖವನ್ನು ನಾನು, ಬೇರೆ ಇನ್ನು ಯಾರಿಗೆ ತಾನೇ ಹೇಳಿಕೊಳ್ಳಲಿ?"

ಶ್ರೀರಾಮಕೃಷ್ಣರು ನಗುತ್ತ ಮತ್ತು ಸಂತೈಸುತ್ತ: "ಸಂಸಾರದಲ್ಲಿ ಈ ವಿಧದ ದುಃಖ ಇದ್ದೇ ಇದೆ. ಸಂಸಾರಕ್ಕೆ ಕಾಲು ಹಾಕಿತು ಅಂದರೆ ಸುಖ ದುಃಖವನ್ನು ಅನುಭವಿಸಲೇಬೇಕು. (ಮಾಸ್ಟರನ್ನು ತೋರಿಸಿ) ಇವರೆಲ್ಲ ಒಮ್ಮೊಮ್ಮೆ ಇದಕ್ಕಾಗೆ ಇಲ್ಲಿಗೆ ಬರುತ್ತಿರೋದು; ಬಂದು ಒಂದೆರಡು ಭಗವಂತನ ಮಾತುಗಳನ್ನು ಕೇಳಿದರೆ ಮನಸ್ಸಿಗೆ ಶಾಂತಿಯುಂಟಾಗುತ್ತದೆ. ನಿನಗೆ ಯಾತರ ದುಃಖ?"

ಹೃದಯು ಅಳುತ್ತ: "ನಿಮ್ಮ ಸಂಗ ನನಗೆ ಇಲ್ಲದೆ ಹೋಯಿತಲ್ಲ, ಎಂಬ ದುಃಖ."

ಶ್ರೀರಾಮಕೃಷ್ಣರು: "ನೀನೆ ಹೇಳಿದೆ, 'ನಿಮ್ಮ ಆದರ್ಶಧ್ಯೇಯ ನಿಮ್ಮ ಹತ್ತಿರ ಇರಲಿ, ನನ್ನ ಆದರ್ಶಧ್ಯೇಯ ನನ್ನ ಹತ್ತಿರ ಇರಲಿ' ಅಂತ?"

ಹೃದಯ: "ಹೌದು, ಹಾಗೇನೊ ಹೇಳಿದೆ— ಆಗ ನನಗೆ ಏನು ತಾನೆ ಗೊತ್ತು?"

ಶ್ರೀರಾಮಕೃಷ್ಣರು: "ಇಂದು ಇಷ್ಟಕ್ಕೇ ಸಾಕು. ನಾನು ಹಿಂದಿರುಗಿಹೋಗಬೇಕಾಗಿದೆ. ಇನ್ನೊಂದು ದಿನ ನಿನ್ನೊಡನೆ ಮಾತುಕತೆ ಆಡುತ್ತೇನೆ. ಇಂದು ಭಾನುವಾರ. ಅನೇಕರು ಬಂದಿದ್ದಾರೆ. ನನಗಾಗಿ ಕಾದಿದ್ದಾರೆ. ಈ ಸಲ ಊರಿನಲ್ಲಿ ಮಳೆ ಬೆಳೆ ಹೇಗೆ?"

ಹೃದಯ: "ಈ ಸಲ ಅಷ್ಟೇನು ಕೆಟ್ಟುಹೋಗಿಲ್ಲ."

ಶ್ರೀರಾಮಕೃಷ್ಣರು: "ಹಾಗಾದರೆ ನಾನು ಹಿಂದಿರುಗುತ್ತೇನೆ. ಇನ್ನೊಂದು ದಿನ ಬಾ."

ಹೃದಯ ಮತ್ತೆ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಪರಮಹಂಸರು ಬಂದ ದಾರಿಯಲ್ಲೆ ಹಿಂದಿರುಗಿದರು. ಮಾಸ್ಟರ್ ಅವರನ್ನು ಹಿಂಬಾಲಿಸುತ್ತಿದ್ದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನನಗೆ ಸೇವೆಮಾಡಿದಷ್ಟೂ ಚಿತ್ರಹಿಂಸೆಯನ್ನೂ ಕೊಟ್ಟಿದ್ದಾನೆ. ನಾನು ಒಮ್ಮೆ ಹೊಟ್ಟೆ ರೋಗದಿಂದ ಮೂಳೆ ಚಕ್ಕಳ ಆಗಿಬಿಟ್ಟಿದ್ದೆ— ಏನು ತಿನ್ನಲೂ ಆಗುತ್ತಿರಲಿಲ್ಲ. ಆಗ ನನಗೆ ಹೇಳಿದ, 'ಇಲ್ಲಿ ನೋಡಿ, ನಾನು ಹೇಗೆ ತಿನ್ನುತ್ತೇನೆ! ತಿನ್ನೋಕಾಗೋಲ್ಲ ಅಂತ ನೀವು ಸುಮ್ಮನೆ ನಟಿಸುತ್ತಿದ್ದೀರಿ' ಅಂತ. ಮತ್ತೊಮ್ಮೆ ಹೇಳಿದ, 'ಬುದ್ಧಿಯಿಲ್ಲ! ನಾನು ಇಲ್ಲಿ ನಿಮ್ಮ ಸಹಾಯಕನಾಗಿ ಇಲ್ಲದೆ ಇದ್ದರೆ, ನಿಮ್ಮ ಸಾಧುಗಿರಿ ಎಲ್ಲಿ ತಲೆ ಎತ್ತುತ್ತಿತ್ತು ಎಂಬುದನ್ನು ನೋಡಬಹುದಾಗಿತ್ತು!' ಎಂದು. ಒಂದು ದಿನ ಆತ ನನ್ನನ್ನು ಅಷ್ಟೊಂದು ಕಾಡಿದ, ನಾನು ಗಂಗೆಯ ದಡದ ಮೇಲೆ ನಿಂತುಕೊಂಡು ಅದರ ಉಬ್ಬರ ಪ್ರವಾಹಕ್ಕೆ ಬಿದ್ದು ದೇಹತ್ಯಾಗ ಮಾಡಲು ಯತ್ನಿಸಿದೆ."

ಇದನ್ನು ಕೇಳಿ ಮಾಸ್ಟರ್ ಆಶ್ಚರ್ಯಚಕಿತನಾಗಿದ್ದಾನೆ. ಭಾವಿಸುತ್ತಿದ್ದಾನೆ, ಏನಾಶ್ಚರ್ಯ! ಇಂಥ ಮನುಷ್ಯನಿಗಾಗಿಯೇನು ಪರಮಹಂಸರು ಸ್ವಲ್ಪ ಹೊತ್ತಿನ ಹಿಂದೆ ಕಣ್ಣೀರು ಸುರಿಸಿದ್ದು! ಎಂದು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಳ್ಳೆಯದು, ಆತ ಬಹಳವಾಗಿ ನನಗೆ ಸೇವೆ ಮಾಡಿದ್ದಾನೆ,— ಆದರೂ ಆತನಿಗೆ ಹೀಗಾಗಲು ಕಾರಣ

ವೇನು? ಮಗುವನ್ನು ಬೆಳೆಸೋ ರೀತಿಯಲ್ಲಿ ನನ್ನನ್ನು ನೋಡಿಕೊಂಡಿದ್ದಾನೆ. ಆಗ ನನಗಂತು ಇದು ಹಗಲು ಅದು ಇರಳು ಎಂಬ ಪ್ರಜ್ಞೆಯೇ ಇರುತ್ತಿರಲಿಲ್ಲ. ಅದರ ಜೊತೆಗೆ ಬಹಳ ಕಾಲ ರೋಗಗ್ರಸ್ತನಾಗಿದ್ದೆ. ನನ್ನ ಯೋಗಕ್ಷೇಮವೆಲ್ಲ ಸಂಪೂರ್ಣವಾಗಿ ಆತನ ಕೈಯಲ್ಲಿತ್ತು.''

ಮಾಸ್ಟರಿಗೆ ಏನು ಹೇಳಲು ತಾನೆ ಸಾಧ್ಯ, ಅದಕ್ಕಾಗಿ ಸುಮ್ಮನೆ ಇದ್ದ. ಹೃದಯ ಬಹುಶಃ ನಿಷ್ಕಾಮಭಾವನೆಯಿಂದ ಸೇವೆ ಮಾಡದೆ ಇರಬೇಕು ಎಂದು ಭಾವಿಸಿದ.

ಹಾಗೆ ಮಾತಾಡುತ್ತ ಮಾತಾಡುತ್ತ ಪರಮಹಂಸರು ತಮ್ಮ ಕೊಠಡಿಯನ್ನು ತಲುಪಿದರು. ಭಕ್ತರು ಅವರಿಗಾಗಿ ಎದರುನೋಡುತ್ತಿದ್ದರು. ಪರಮಹಂಸರು ಮತ್ತೆ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದ್ದಾರೆ. ಮಹಿಮಚರಣ ಮೊದಲಾದವರೇ ಅಲ್ಲದೆ ಇನ್ನೂ ಕೆಲವು ಕೊನ್ನಗರದ ಭಕ್ತರೂ ಬಂದಿದ್ದಾರೆ. ಅವರಲ್ಲಿ ಒಬ್ಬ ಪರಮಹಂಸರಿಗೆ ಕೆಲವು ಪ್ರಶ್ನೆಗಳನ್ನು ಹಾಕಿದ.

ಭಕ್ತ: ''ಮಹಾಶಯರೆ, ಕೇಳಿದ್ದೇವೆ, 'ನಿಮಗೆ ಭಾವ ಬರುತ್ತೆ ಸಮಾಧಿ ಉಂಟಾಗುತ್ತೆ' ಅಂತ. ಏಕೆ ಹಾಗಾಗುತ್ತದೆ ಮತ್ತು ಯಾವ ರೀತಿಯಾಗಿ ಆಗುತ್ತದೆ ಎಂಬುದನ್ನು ದಯವಿಟ್ಟು ನಮಗೆ ಸ್ವಲ್ಪ ತಿಳಿಸಿ.''

ಶ್ರೀರಾಮಕೃಷ್ಣರು: ''ಶ್ರೀಮತಿ ರಾಧೆಗೆ ಮಹಾಭಾವ ಉಂಟಾಗುತ್ತಿತ್ತು. ಸಖಿಯರಲ್ಲಿ ಯಾರಾದರು ಆಕೆಯನ್ನು ಮುಟ್ಟಲು ಹೋಗುತ್ತಿದ್ದರೆ, ಆಕೆಯ ಅಂಗರಕ್ಷಕಿ ಹೇಳುತ್ತಿದ್ದಳು, 'ಆಕೆಯ ಶರೀರ ಶ್ರೀಕೃಷ್ಣನ ವಿಲಾಸಕ್ಷೇತ್ರ, ಮುಟ್ಟಬೇಡಿ — ಆಕೆಯ ದೇಹದಲ್ಲಿ ಈಗ ಶ್ರೀಕೃಷ್ಣ ಕ್ರೀಡಿಸುತ್ತಿದ್ದಾನೆ' ಎಂದು. ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳದ ಹೊರತು ಭಾವ ಅಥವಾ ಮಹಾಭಾವ ಉಂಟಾಗೋದಿಲ್ಲ. ಆಳವಾದ ನೀರಿನಿಂದ ಮೀನು ಮೇಲಕ್ಕೆ ಬಂದರೆ ಆಗ ನೀರು ಚಲಿಸುತ್ತದೆ; — ಭಾರಿ ಮೀನು ಆಗಿದ್ದರೆ ನೀರು ಆ ಕಡೆಗೆ ಈ ಕಡೆಗೆ ಸುಮ್ಮನೆ ಹಾರುತ್ತಿರುತ್ತದೆ. ಅದಕ್ಕಾಗಿಯೆ ಭಕ್ತ, 'ಭಾವದಲ್ಲಿ ನಗುವನು ಅಳುವನು, ನರ್ತಿಸುವನು, ಹಾಡುವನು.'

''ಭಾವಾವಸ್ಥೆಯಲ್ಲಿ ಹೆಚ್ಚುಕಾಲ ಇರಲಾಗೋದಿಲ್ಲ. ಕನ್ನಡಿಯ ಹತ್ತಿರ ಕುಳಿತು ಸುಮ್ಮನೆ ಮುಖ ನೋಡಿಕೊಳ್ಳುತ್ತಿದ್ದರೆ ಜನ ಭಾವಿಸುತ್ತಾರೆ ಆತ ಒಬ್ಬ ಹುಚ್ಚನಿರಬೇಕು ಅಂತ.''

ಭಕ್ತ : "ಕೇಳಿದ್ದೇವೆ, 'ನಿಮಗೆ ಭಗವಂತನ ದರ್ಶನ ಆಗಿದೆ' ಅಂತ. ಹಾಗಿದ್ದರೆ ನಮಗೂ ಆತನನ್ನು ತೋರಿಸಿ."

ಶ್ರೀರಾಮಕೃಷ್ಣರು : "ಎಲ್ಲವೂ ಭಗವಂತನಾಧೀನ— ಮನುಷ್ಯನ ಕೈಯಲ್ಲಿ ಏನು ತಾನೆ ಸಾಧ್ಯ? ಆತನ ನಾಮವನ್ನು ಜಪಮಾಡುತ್ತ ಜಪ ಮಾಡುತ್ತ ಇದ್ದಹಾಗೆ ಒಮ್ಮೊಮ್ಮೆ ಪ್ರೇಮಾಶ್ರು ಸುರಿಯುತ್ತದೆ, ಒಮ್ಮೊಮ್ಮೆ ಸುರಿಯದು. ಆತನ ಧ್ಯಾನಮಾಡುತ್ತಿದ್ದ ಹಾಗೆ ಒಂದೊಂದು ದಿನ ಒಳ್ಳೆ ಉದ್ದೀಪನೆಯಾಗಿಬಿಡುತ್ತದೆ, ಒಂದೊಂದು ದಿನ ಏನೂ ಆಗದು.

"ಸಾಧನೆ ಮಾಡಬೇಕು, ಆಗ ಆತನ ದರ್ಶನ ದೊರೆಯುತ್ತದೆ. ಒಂದು ದಿನ ಭಾವದಲ್ಲಿ ಹಾಲದಾರಪುಕುರವನ್ನು ನೋಡಿದೆ. ಒಬ್ಬ ಅಂತ್ಯಜ ಅದರಲ್ಲಿ ತೇಲುತ್ತಿದ್ದ ಹಸಿರು ಪಾಚಿಯನ್ನು ತಳ್ಳಿ ತಳ್ಳಿ ಕೊಡಕ್ಕೆ ನೀರು ತುಂಬುತ್ತಿದ್ದ. ಆಗಾಗ ಆತ ಕೈಯಲ್ಲಿ ನೀರನ್ನು ತೆಗೆದುಕೊಂಡು ಅದನ್ನು ಪರೀಕ್ಷಿಸುತ್ತಿದ್ದ. ಪಾಚಿಯನ್ನು ತಳ್ಳದೆ ಇದ್ದರೆ ನೀರನ್ನು ನೋಡಲಾಗೋದಿಲ್ಲ ಎಂಬುದನ್ನು ಆತ ನನಗೆ ಪಾಠಕಲಿಸಿಕೊಟ್ಟಂತೆ ಆಯಿತು—ಸಾಧನೆಮಾಡದೆ ಇದ್ದರೆ ಭಕ್ತಿ ದೊರಕದು, ಭಗವಂತನ ಸಾಕ್ಷಾತ್ಕಾರ ದೊರಕದು. ಧ್ಯಾನ, ಜಪ ಇವೆಲ್ಲ ಕರ್ಮವೆ; ಆತನ ನಾಮಗುಣ ಕೀರ್ತನೆ ಮಾಡೋದೂ ಕರ್ಮವೆ; ದಾನ, ಯಜ್ಞ ಇವೂ ಕರ್ಮವೆ.

"ಬೆಣ್ಣೆ ಬೇಕಾಗಿದ್ದರೆ, ಹಾಲಿಗೆ ಹೆಪ್ಪುಹಾಕಿ ಮೊಸರು ಮಾಡಬೇಕು. ಹಾಲಿಗೆ ಹೆಪ್ಪುಹಾಕಿದನಂತರ ಅದನ್ನು ನೆಮ್ಮದಿಯಾಗಿರೋ ಜಾಗದಲ್ಲಿ ಇಡಬೇಕು. ಅದು ಮೊಸರಾದನಂತರ ಶ್ರಮ ತೆಗೆದುಕೊಂಡು ಅದನ್ನು ಕಡೆಯಬೇಕು. ಆಗತಾನೆ ಬೆಣ್ಣೆ ತೆಗೆಯಲು ಆಗುತ್ತದೆ."

ಮಹಿಮಚರಣ: "ಹೌದು, ನಿಜ. ಕೆಲಸಮಾಡದೆ ಹೇಗೆ? ಬಹಳ ಶ್ರಮ ತೆಗೆದುಕೋಬೇಕು. ಆಗ ದೊರೆಯುತ್ತದೆ. ಓದಿತಿಳಿದುಕೊಳ್ಳೋದೆ ಎಷ್ಟೊಂದಿದೆ! ಶಾಸ್ತ್ರಗ್ರಂಥಗಳಿಗೆ ಮಿತಿ ಅಂಬುದು ಇಲ್ಲವೇ ಇಲ್ಲ."

ಶ್ರೀರಾಮಕೃಷ್ಣರು ಮಹಿಮನಿಗೆ: "ಶಾಸ್ತ್ರವನ್ನು ಎಷ್ಟು ಅಂತ ಓದೋದು? ಬರೀ ವಿಚಾರದಿಂದ ಏನು ದೊರೆಯುತ್ತದೆ. ಮೊದಲು ಆತನ ಸಾಕ್ಷಾತ್ಕಾರ ಪಡೆಯಲು ಪ್ರಯತ್ನಿಸು. ಗುರುವಾಕ್ಯದಲ್ಲಿ ವಿಶ್ವಾಸ ವಿಟ್ಟು ಒಂದಷ್ಟು ಸಾಧನೆ ಮಾಡು. ನಿನಗೆ ಗುರು ದೊರೆಯದಿದ್ದರೆ,

ವ್ಯಾಕುಲ ಹೃದಯದಿಂದ ಆತನಿಗೆ ಪ್ರಾರ್ಥನೆ ಮಾಡು. ತನ್ನ ನಿಜಸ್ವರೂಪ ಎಂಥದು ಅಂಬುದನ್ನು ಆತ ತಾನಾಗಿಯೇ ತೋರಿಸಿಕೊಟ್ಟುಬಿಡುತ್ತಾನೆ.

"ಶಾಸ್ತ್ರ ಓದಿ ಏನುತಾನೆ ತಿಳಿಯಬಲ್ಲೆ. ಸಂತೆಯನ್ನು ಮುಟ್ಟದೆ ಬಹು ದೂರದಲ್ಲೇ ಇನ್ನೂ ಇರುವಾಗ ಬರೀ 'ಹೋ! ಹೋ!' ಎಂಬ ಶಬ್ದ ಕೇಳುತ್ತಿರುತ್ತದೆ. ಸಂತೆ ಮುಟ್ಟಿದನಂತರ ಬೇರೊಂದು ವಿಧದ ಅನುಭವ. ಆಗ ಎಲ್ಲವನ್ನೂ ಸ್ಪಷ್ಟವಾಗಿ ನೋಡಬಹುದು, ಕೇಳಬಹುದು. ಆಗ ಜನ, 'ಈಗೋ ತೆಗೆದುಕೊಳ್ಳಿ ನಿಮ್ಮ ಆಲೂಗೆಡ್ಡೆ, ನಮಗೆ ದುಡ್ಡು ಕೊಡಿ' ಎಂಬುದಾಗಿ ಹೇಳುವದನ್ನೂ ಕೇಳಬಹುದು.

"ಸಮುದ್ರ ಇನ್ನೂ ದೂರದಲ್ಲಿ ಇರುವಾಗ ಅದು ಭೋರ್ಗರೆಯುತ್ತಿರುವ ಶಬ್ದ ಮಾತ್ರ ಕೇಳಿಸುತ್ತದೆ. ಅದರ ಹತ್ತಿರ ಹೋದರೆ ಅನೇಕ ಜಹಜುಗಳು ಸಂಚರಿಸುವುದನ್ನು, ಹಕ್ಕಿಗಳು ಹಾರಾಡುತ್ತಿರುವುದನ್ನು, ಅಲೆ ಹೊಡೆಯುತ್ತಿರುವುದನ್ನು,—ನೋಡಬಹುದು.

"ಶಾಸ್ತ್ರಾಧ್ಯಯನದಿಂದ ಸರಿಯಾದ ಅನುಭವ ದೊರೆಯದು. ಇವೆರಡಕ್ಕೂ ಅಜಗಜಾಂತರ ವ್ಯತ್ಯಾಸ. ಆತನ ದರ್ಶನ ದೊರೆತನಂತರ ಶಾಸ್ತ್ರ, ಸೈನ್ಸು (ವಿಜ್ಞಾನ) ಎಲ್ಲ ಕಸಕಡ್ಡಿಗಳ ಹಾಗೆ ಕಾಣುತ್ತವೆ.

"ಆವಶ್ಯಕವಾಗಿ ಮೊದಲು ಬೇಕಾಗಿರೋದು ಮನೆ ಯಜಮಾನನ ಪರಿಚಯ. ಆತನಿಗೆ ಎಷ್ಟು ಮನೆಗಳಿವೆ, ಎಷ್ಟು ಲೇವಾದೇವಿ ಪತ್ರಗಳಿವೆ ಇವನ್ನೆಲ್ಲ ಮೊದಲೇ ತಿಳಿದುಕೊಳ್ಳಲು ಅಷ್ಟೊಂದು ವ್ಯಸ್ತರಾಗಿ ಏಕೆ ಆಗಬೇಕು? ಸೇವಕರ ಹತ್ತಿರ ಹೋದರೆ ಒಂದು ನಿಮಿಷ ನಿಂತುಕೊಳ್ಳಲು ಕೂಡ ಬಿಟ್ಟುಕೊಡೋದಿಲ್ಲ,—ಲೇವಾದೇವಿ ಪತ್ರ ಎಷ್ಟಿದೆ ಅಂಬುದನ್ನು ಅವರು ತಿಳಿಸುತ್ತಾರೆ ನಿನಗೆ! ಆದರೆ ಹೇಗೋ ಮಾಡಿ ಮನೆ ಯಜಮಾನನ ಪರಿಚಯ ಮಾಡಿಕೊಂಡುಬಿಡು. ಅದಕ್ಕಾಗಿ ನೀನು ಒಂದೆರಡೇಟು ತಿನ್ನಬೇಕಾಗಿ ಬಂದರೂ ಚಿಂತೆಯಿಲ್ಲ, ಬೇಲಿ ನೆಗೆಯಬೇಕಾಗಿ ಬಂದರೂ ಚಿಂತೆಯಿಲ್ಲ,— ಆಗ ಯಜಮಾನ ತನಗೆಷ್ಟು ಮನೆ, ಎಷ್ಟು ತೋಟಗಳು, ಎಷ್ಟು ಲೇವಾದೇವಿ ಇದೆ ಎಂಬುದನ್ನು ತಾನೇ ಹೇಳಿಬಿಡುತ್ತಾನೆ. ಮನೆಯ ಯಜಮಾನನ ಪರಿಚಯ ಮಾಡಿಕೊಂಡುಬಿಟ್ಟಿತು ಅಂದರೆ, ಆತನ ಸೇವಕರು ಜವಾನರು ಎಲ್ಲರೂ ನಿನಗೆ ಸಲಾಮುಹೊಡೆಯುತ್ತಾರೆ." (ಎಲ್ಲರೂ ನಗುತ್ತಾರೆ.)

ಭಕ್ತ: "ಮನೆಯ ಯಜಮಾನನೊಡನೆ ಪರಿಚಯ ಮಾಡಿಕೊಳ್ಳುವುದು ಎಂತು ಎಂಬುದೇ ಪ್ರಶ್ನೆ." (ನಗು.)

ಶ್ರೀರಾಮಕೃಷ್ಣರು: "ಅದಕ್ಕಾಗೇ ಶ್ರಮಿಸಬೇಕು. ಭಗವಂತನಿದ್ದಾನೆ ಎಂದು ಸುಮ್ಮನೆ ಕೈಕಟ್ಟಿ ಕುಳಿತಿದ್ದರಾಗದು. ಹೇಗೊ ಮಾಡಿ ಆತನ ಹತ್ತಿರ ಹೋಗಬೇಕು. ಏಕಾಂತಸ್ಥಳದಲ್ಲಿ ಆತನನ್ನು ಕರೆ. ಆತನಿಗೆ ಪ್ರಾರ್ಥನೆ ಮಾಡು: 'ನನಗೆ ನಿನ್ನ ದರ್ಶನಕೊಡು' ಅಂತ. ವ್ಯಾಕುಲನಾಗಿ ಅಳು. ಕಾಮಕಾಂಚನಕ್ಕಾಗಿ ಹುಚ್ಚನ ಹಾಗೆ ಅಲೆಯಲು ಸಿದ್ಧನಾಗಿದ್ದೀಯೆ! ಈಗ ಭಗವಂತನಿಗಾಗಿ ಸ್ವಲ್ಪ ಹುಚ್ಚನಾಗು. ಜನ ಹೇಳಿಕೊಳ್ಳಲಿ ಭಗವಂತನಿಗಾಗಿ ಆತ ಹುಚ್ಚನಾಗಿಬಿಟ್ಟ ಅಂತ. ಒಂದೆರಡು ದಿನಗಳಮಟ್ಟಿಗಾದರೂ ಎಲ್ಲವನ್ನು ತ್ಯಜಿಸಿ ಆತನನ್ನು ಏಕಾಂತದಲ್ಲಿ ಕರೆ.

"'ಭಗವಂತನಿದ್ದಾನೆ' ಎಂದು ಕೇವಲ ಬಾಯಲ್ಲಿ ಹೇಳುತ್ತ ಕೈಕಟ್ಟಿ ಸುಮ್ಮನೆ ಕುಳಿತಿದ್ದರೆ ಏನಾಗುತ್ತದೆ? ಹಾಲದಾರಪುಕುರದಲ್ಲಿ ದೊಡ್ಡ ದೊಡ್ಡ ಮೀನುಗಳೇನೊ ಇವೆ. ಆದರೆ ಆ ಪುಷ್ಕರಣಿಯ ದಡದಲ್ಲಿ ಸುಮ್ಮನೆ ಕೈಕಟ್ಟಿ ಕುಳಿತಿದ್ದರೆ ಮೀನು ದೊರೆಯುವುದೆ? ಎರೆ ತಯಾರುಮಾಡಿ ಅದನ್ನು ನೀರಿನಲ್ಲಿ ಬಿಸಾಡು. ಬಳಿಕ ಮೀನು ಆಳದ ನೀರಿನಿಂದ ಮೇಲಕ್ಕೆ ಬರುತ್ತದೆ, ನೀರು ಅಲುಗಲು ಆರಂಭಿಸುತ್ತದೆ. ಆಗ ನಿನಗೆ ಬಹಳ ಆನಂದವಾಗುತ್ತದೆ. ಬಹುಶಃ ಅವುಗಳಲ್ಲಿ ಒಂದು ಮೀನು ನೀರಿನ ಮೇಲಕ್ಕೆ ತಟಕ್ಕನೆ ಒಂದು ಸ್ವಲ್ಪ ಎದ್ದಾಗ ಅದರ ಆಕೃತಿ ನಿನಗೆ ಗೋಚರವಾಗಬಹುದು. ಆಗ ನಿನಗೆ ಬಹಳ ಆನಂದವಾಗುತ್ತದೆ.

"ಹಾಲನ್ನು ಮೊಸರುಮಾಡಿ ಅದನ್ನು ಕಡೆದರೆ ತಾನೆ ಬೆಣ್ಣೆ ದೊರೆಯುತ್ತದೆ. (ಮಹಿಮಚರಣನಿಗೆ) ಏನಪ್ಪ ಕಾಟ ಇದು! ಮನುಷ್ಯನಿಗೆ, ತಾನುಮಾತ್ರ ಸುಮ್ಮನೆ ಕುಳಿತಿರಬೇಕಂತೆ, ಬೇರೆಯವರು ಬಂದು ಆತನಿಗೆ ಭಗವಂತನನ್ನು ತೋರಿಸಿಕೊಟ್ಟುಬಿಡಬೇಕಂತೆ! ಬೇರೆಯವರು ಬೆಣ್ಣೆ ತೆಗೆದು ಈತನ ಬಾಯಿಗೆ ಹಾಕಬೇಕು! (ಎಲ್ಲರೂ ನಗುತ್ತಾರೆ.) ಇದು ಎಂಥ ತೊಂದರೆ! ಮೀನು ಹಿಡಿದು ಕೈಗೆ ಕೊಡು ಅನ್ನೋದು!

"ಒಬ್ಬ ರಾಜನನ್ನು ನೋಡಲು ಇಚ್ಛಿಸಿದ. ರಾಜ ಇರೋದು ಏಳು ಗೇಟುಗಳಿಂದಾಚೆ. ಮೊದಲನೆ ಗೇಟನ್ನು ದಾಟುತ್ತಿರುವಾಗಲೆ ಆತ

ಕೇಳಿದ, 'ರಾಜನೆಲ್ಲಿ?' ಅಂತ. ಒಂದೊಂದಾಗಿ ಏಳು ಗೇಟುಗಳನ್ನು ದಾಟಿದರೆ ತಾನೆ ಆತ ದೊರೆಯೋದು!"

ಮಹಿಮಾಚರಣ: "ಯಾವ ಕರ್ಮದ ಮೂಲಕ ಆತನನ್ನು ಪಡೆಯ ಬಹುದು?"

ಶ್ರೀರಾಮಕೃಷ್ಣರು: "ಈ ಕರ್ಮದಿಂದ ಆತ ದೊರೆಯುತ್ತಾನೆ, ಆ ಕರ್ಮದಿಂದ ಆತ ದೊರೆಯೋದಿಲ್ಲ ಅಂತಲೇನು ಇಲ್ಲ. ಎಲ್ಲಾ ಆತನ ಕೃಪೆ ಮೇಲೆ ನಿಂತಿದೆ. ಆದರೆ ವ್ಯಾಕುಲನಾಗಿ ಸ್ವಲ್ಪ ಸಾಧನೆ ಮಾಡಬೇಕು. ವ್ಯಾಕುಲತೆ ಇದ್ದರೆ ಆತನ ಕೃಪೆ ಬಂದೊದಗುತ್ತದೆ.

"ಆತನ ಸಾಕ್ಷಾತ್ಕಾರಕ್ಕೆ ಕೆಲವು ಸುಯೋಗ ಬಂದೊದಗಬೇಕು: ಸಾಧುಸಂಗ, ವಿವೇಕ, ಸದ್ಗುರುವಿನ ಕೃಪೆ. ಒಂದು ಪಕ್ಷ ಹಿರಿಯ ಅಣ್ಣ ಸಂಸಾರದ ಭಾರವನ್ನು ಹೊತ್ತುಕೊಂಡುಬಿಡೋದು; ಒಂದು ಪಕ್ಷ ಹೆಂಡತಿ ವಿದ್ಯಾಶಕ್ತಿಯಾಗಿಯೂ, ಬಹಳ ಧಾರ್ಮಿಕಳಾಗಿಯೂ ಇರೋದು; ವಿವಾಹವಾಗದೆ ಉಳಿದುಕೊಂಡಿರೋದು; ಸಂಸಾರಕ್ಕೆ ಕಟ್ಟು ಬೀಳದೆ ಇರೋದು;— ಇವೆಲ್ಲಾ ಒಂದಕ್ಕೊಂದು ಸೇರಿಕೊಂಡರೆ ದೊರೆತು ಬಿಡುತ್ತದೆ.

"ಒಂದು ಮನೆಯಲ್ಲಿ ಒಬ್ಬ ದಾರುಣ ರೋಗಗ್ರಸ್ತನಾಗಿದ್ದಾನೆ;— ಇನ್ನೇನು ಹೋಗುವುದರಲ್ಲಿದ್ದಾನೆ. ಆಗ ಯಾರೋ ಒಬ್ಬ ಹೇಳಿದ, 'ಸ್ವಾತಿ ನಕ್ಷತ್ರದಲ್ಲಿ ಮಳೆ ಹೊಯ್ಯಬೇಕು, ಆ ಮಳೆಯ ನೀರು ಮನುಷ್ಯನ ಒಂದು ಕಪಾಲದಲ್ಲಿ (skull) ಶೇಖರವಾಗಬೇಕು, ನಾಗರ ಹಾವು ಒಂದು ಕಪ್ಪೆಯನ್ನು ಅಟ್ಟಿಸಿಕೊಂಡು ಹೋಗಬೇಕು, ಆ ಹಾವು ಅದನ್ನು "ಬುಸ್" ಎಂದು ಕಡಿಯುವಾಗ ಕಪ್ಪೆ ನೆಗೆದು ತಪ್ಪಿಸಿಕೋ ಬೇಕು, ಆಗ ಆ ಹಾವಿನ ವಿಷ ಆ ಕಪಾಲದೊಳಗೆ ಬೀಳಬೇಕು; ಬಳಿಕ ಆ ವಿಷದಿಂದ ಔಷಧ ತಯಾರುಮಾಡಿ ಕುಡಿಸುವುದಾದರೆ ಆಗ ಈತ ಬದುಕಿಕೊಳ್ಳುತ್ತಾನೆ' ಅಂತ. ಆಗ ಆ ರೋಗಿಯ ಮನೆಯವ ಪಂಚಾಂಗ ನೋಡಿ ಸಕಾಲಕ್ಕೆ ಮನೆಯಿಂದ ಹೊರಟ. ಬಹಳ ವ್ಯಾಕುಲ ಚಿತ್ತದಿಂದ ಆ ಸಾಮಗ್ರಿಗಳಿಗಾಗಿ ಹುಡುಕಲು ಯತ್ನಿಸಿದ. ಆತ ಮನಸ್ಸಿನಲ್ಲೆ ಭಗವಂತನಿಗೆ ಮೊರೆಯಿಡುತ್ತಿದ್ದಾನೆ: 'ಹೇ ಭಗವಂತ, ಎಲ್ಲವನ್ನೂ ನೀನೇ ತಂದೊದಗಿಸಿಕೊಟ್ಟರೆ ಮಾತ್ರ ಸಾಧ್ಯ' ಅಂತ. ಹಾಗೆ ಪ್ರಾರ್ಥಿ ಸುತ್ತ ಮುಂದು ಮುಂದುವರಿಯುತ್ತಿರುವಾಗ ವಾಸ್ತವವಾಗಿ ಒಂದು

ಕಪಾಲ ನೆಲದಮೇಲೆ ಬಿದ್ದಿರುವುದನ್ನು ನೋಡಿದ. ಇದ್ದಕ್ಕಿದ್ದ ಹಾಗೆ ಒಂದು ಹದ ಮಳೆ ಬಂತು. ಆಗ ಆ ವ್ಯಕ್ತಿ ಪ್ರಾರ್ಥನೆ ಮಾಡಿದ ; 'ಹೇ ಗುರುದೇವ, ಮನುಷ್ಯನ ಕಪಾಲ ದೊರಕಿತು, ಸ್ವಾತಿ ನಕ್ಷತ್ರದ ಮಳೆ ಹೊಯ್ಯಿತು, ಅದರ ನೀರು ಕಪಾಲದಲ್ಲಿ ಶೇಖರವಾಗಿದೆ; ಈಗ ಕೃಪೆ ಇಟ್ಟು ಉಳಿದ ಕೆಲವನ್ನು ಒದಗಿಸಿಕೊಟ್ಟುಬಿಡು ಭಗವಂತ' ಅಂತ. ವ್ಯಾಕುಲ ಚಿತ್ತದಿಂದ ಎದುರುನೋಡುತ್ತಿದ್ದಾನೆ. ಆಗ ನೋಡುತ್ತಾನೆ ಒಂದು ನಾಗರ ಹಾವು ಬರುತ್ತಿದೆ. ಆಗ ಅವನಿಗೆ ಬಹಳ ಆನಂದ ವಾಯಿತು. ಆತನ ಸಂಭ್ರಮ ಎಂಥಾ ಸ್ಥಿತಿಯನ್ನು ಮುಟ್ಟಿಬಿಟ್ಟಿತು ಎಂದರೆ, ಎದೆ 'ಡಬಡಬ' ಎಂದು ಹೊಡೆದುಕೊಳ್ಳಲಾರಂಭಿಸಿತು. ಆಗ ಮತ್ತೆ ಆತ ಪ್ರಾರ್ಥನೆ ಮಾಡಿದ: 'ಹೇ ಗುರುದೇವ, ಈಗ ಹಾವೂ ಬಂದಿದೆ. ಈಗ ಬೇಕಾಗಿದ್ದರಲ್ಲಿ ಅನೇಕ ವಸ್ತುಗಳು ತಾವಾಗಿಯೇ ಬಂದೊದಗಿವೆ. ದಯವಿಟ್ಟು ಇನ್ನೂ ಏನೇನು ಉಳಿದುಕೊಂಡಿವೆಯೊ ಅವುಗಳನ್ನೂ ಒದಗಿಸಿ ಕೊಟ್ಟುಬಿಡು' ಅಂತ. ಹೀಗೆಂದು ಪ್ರಾರ್ಥಿಸುತಿದ್ದಾಗಲೆ ಒಂದು ಕಪ್ಪೆ ಬಂತು. ಹಾವು ಅದನ್ನು ಅಟ್ಟಿಸಿಕೊಂಡು ಹೋಗಲೂ ಹೋಯಿತು. ಆ ಹಾವು ಆ ಕಪಾಲದ ಹತ್ತಿರ ಬಂದು ಇನ್ನೇನು ಕಪ್ಪೆಯನ್ನು 'ಬುಸ್ಸೆಂದು' ಕಚ್ಚಬೇಕು ಅಷ್ಟರಲ್ಲಿ ಆ ಕಪ್ಪೆ ನೆಗೆದು ಆ ಕಡೆಗೆ ಹೋಗಿ ಬಿತ್ತು, ವಿಷ ಕಪಾಲದೊಳಕ್ಕೆ ಬಿತ್ತು. ಆಗ ಆ ವ್ಯಕ್ತಿ ಆನಂದದಿಂದ ಚಪ್ಪಾಳೆ ಹಾಕುತ್ತ ಕುಣಿಯಲಾರಂಭಿಸಿದ. ಅದಕ್ಕಾಗಿಯೆ ನಾನು ಹೇಳೋದು, 'ವ್ಯಾಕುಲತೆ ಇದ್ದರೆ ಎಲ್ಲಾ ದೊರೆಯುತ್ತೆ' ಅಂತ.

"ಮನಸ್ಸಿನಿಂದ ಎಲ್ಲಾ ಆಸೆಗಳನ್ನು ತ್ಯಜಿಸದ ಹೊರತು ಭಗವಂತನ ಸಾಕ್ಷಾತ್ಕಾರ ದೊರೆಯದು. ಸಾಧು ಸಂಚಯ ಮಾಡಿ ಇಡಲಾರ. 'ಹಕ್ಕಿ ಮತ್ತು ಪರಿವ್ರಾಜಕ ಸನ್ಯಾಸಿ ಸಂಚಯ ಮಾಡಿ ಇಡೋದಿಲ್ಲ.' ಇಲ್ಲಿನ ಭಾವ ಅಂಥದು, — ಕೈ ಶುದ್ಧಿಮಾಡಿಕೊಳ್ಳೋಕೆ ಒಂದು ಹಿಡಿ ಮಣ್ಣೂ ತಂದಿಟ್ಟುಕೊಳ್ಳುವಹಾಗಿಲ್ಲ. ಎಲಡಿಕೆ ಚೀಲಕ್ಕೆ ಎಲಡಿಕೆ ಹಾಕಿ ಕೊಂಡುಬರೋಹಾಗಿಲ್ಲ. ಹೃದೆ ನನ್ನನ್ನು ಒಮ್ಮೆ ಬಹಳವಾಗಿ ಕಾಡಿದಾಗ, 'ಇಲ್ಲಿಂದ ಕಾಶಿಗೆ ಹೊರಟು ಹೋಗೋಣ' ಎಂದು ಪ್ಲಾನು ಮಾಡಿದೆ. ನನ್ನೊಡನೆ ಕೆಲವು ಬಟ್ಟೆಗಳನ್ನು ತೆಗೆದುಕೊಂಡು ಹೋಗಲೆಂತಲೇನೊ ಯೋಚಿಸಿದೆ — ಆದರೆ ಹಣವನ್ನು ಹೇಗೆ ತೆಗೆದುಕೊಂಡುಹೋಗಲಿ? ಅದಕ್ಕಾಗಿ ಕಾಶಿಗೆ ಹೋಗೋಕಾಗಲಿಲ್ಲ. (ಎಲ್ಲರೂ ನಗುತ್ತಾರೆ.)

(ಮಹಿಮಚರಣನಿಗೆ) "ನೀವು ಸಂಸಾರಿಗಳು. ನೀವು ಇದರ ಕಡೆಯೂ ಮನಸ್ಸನ್ನಿಡಿ, ಅದರ ಕಡೆಯೂ ಮನಸ್ಸನ್ನಿಡಿ. ಸಂಸಾರದ ಕಡೆಯೂ ಮನಸ್ಸನ್ನಿಡಿ, ಧರ್ಮದ ಕಡೆಯೂ (ಭಗವಂತನ ಕಡೆಯೂ) ಮನಸ್ಸನ್ನಿಡಿ."

ಮಹಿಮಚರಣ: "ಅದರ ಕಡೆ ಮನಸ್ಸನ್ನಿಟ್ಟರೆ, ಮತ್ತೆ ಇದರ ಕಡೆ ಇಡಲಾಗುವುದೆ?"

ಶ್ರೀರಾಮಕೃಷ್ಣರು: "ಒಮ್ಮೆ ನಾನು ಪಂಚವಟಿಯ ಬಳಿ ಗಂಗೆ ದಡದಲ್ಲಿ ಕುಳಿತು, ಒಂದು ಕೈಯಲ್ಲಿ ಒಂದು ಹಿಡಿ ಮಣ್ಣನ್ನು ಇನ್ನೊಂದು ಕೈಯಲ್ಲಿ ಒಂದು ರೂಪಾಯನ್ನು ಹಿಡಿದು, 'ರೂಪಾಯಿ ಮಣ್ಣು – ಮಣ್ಣೇ ನಿಜವಾಗಿ ರೂಪಾಯಿ, ರೂಪಾಯೇ ನಿಜವಾಗಿ ಮಣ್ಣು' ಎಂಬುದಾಗಿ ವಿಚಾರ ಮಾಡುತ್ತ ಮಾಡುತ್ತ ಯಾವಾಗ ಅವನ್ನು ಗಂಗೆಯಲ್ಲಿ ಬಿಸಾಡಿದೆನೊ, ಆಗ ನನಗೆ ಸ್ವಲ್ಪ ಭಯವಾಯಿತು. ಆಗ ಭಾವಿಸಿದೆ, 'ಈ ರೀತಿಯಾಗಿ ನಾನು ಭಗವತಿ ಲಕ್ಷ್ಮೀದೇವಿಯನ್ನು ತಿರಸ್ಕರಿಸಿದುದು ಎಂಥ ಅವಿವೇಕವಾದ ಕೆಲಸ ಆಯಿತು! ಆಕೆ ನನ್ನ ಗ್ರಾಸಕ್ಕೆ ಸೊನ್ನೇಹಾಕಿಬಿಟ್ಟರೆ ಮಾಡುವುದೇನು!' ಅಂತ. ಆಗ ಹಾಜರಾನ ಹಾಗೆ ಒಂದು ಯುಕ್ತಿ ಹೂಡಿದೆ. ಹೇಳಿದೆ, 'ಹೇ ತಾಯೆ, ನನ್ನ ಹೃದಯದಲ್ಲೇ ವಾಸಿಸು' ಅಂತ. ಒಬ್ಬನ ತಪಸ್ಸನ್ನು ಮೆಚ್ಚಿ ಭಗವತಿ ಆತನಿಗೆ ಹೇಳಿದಳು, 'ನೀನು ಒಂದು ವರ ಬೇಡಿಕೊ' ಅಂತ. ಅವನು ಹೇಳಿದ, 'ನೀನು ವರ ಕೊಡುವುದಾದರೆ ನನಗೆ ಈ ವರ ಕೊಡು, ನಾನು ನನ್ನ ಮೊಮ್ಮಕ್ಕಳೊಡನೆ ಚಿನ್ನದ ತಟ್ಟೆಯಲ್ಲಿ ಊಟಮಾಡುವ ಹಾಗೆ' ಅಂತ. ಒಂದು ವರದಿಂದಲೇ ಆತನಿಗೆ ಮೊಮ್ಮಕ್ಕಳು, ಐಶ್ವರ್ಯ, ಚಿನ್ನದ ತಟ್ಟೆಗಳು ಇವೆಲ್ಲಾ ದೊರೆತುವು. (ಎಲ್ಲರೂ ನಗುತ್ತಾರೆ.)

"ಕಾಮಕಾಂಚನಾಸಕ್ತಿ ಮನಸ್ಸಿನಿಂದ ತೊಲಗಿಹೋದರೆ, ಭಗವಂತನ ಕಡೆ ಮನಸ್ಸು ಹರಿಯುತ್ತದೆ, ಅಲ್ಲಿಗೆ ಹೋಗಿ ಆತನಲ್ಲಿ ಲೀನವಾಗಿಬಿಡುತ್ತದೆ. ಯಾರು ಬದ್ಧನೋ ಆತನೇ ಮುಕ್ತನಾಗಬಲ್ಲ. ಭಗವಂತನಿಂದ ವಿಮುಖನಾದೊಡನೆಯೇ ಬದ್ಧನಾಗಿಬಿಡುತ್ತಾನೆ— ತಕ್ಕಡಿಯ ಕೆಳಗಿನ ಮುಳ್ಳು ಮೇಲಿನ ಮುಳ್ಳಿನಿಂದ ಬೇರೆಯಾಗಿ ಯಾವಾಗ ನಿಲ್ಲುತ್ತದೆ? ಯಾವಾಗ ತಕ್ಕಡಿಯ ಒಂದು ತಟ್ಟೆಯಲ್ಲಿ ಕಾಮಕಾಂಚನದ ಭಾರ ಅಧಿಕವಾಗುವುದೋ ಆಗ.

"ಮಗು ತಾಯ ಗರ್ಭದಿಂದ ಹೊರಕ್ಕೆ ಬಂದೊಡನೆಯೆ ಏಕೆ ಅಳುತ್ತದೆ? 'ಗರ್ಭದಲ್ಲಿತ್ತು, ಯೋಗದಲ್ಲಿತ್ತು.' ಭೂಮಿಷ್ಟವಾಗಿ ಅಳುತ್ತದೆ: 'ಇದು ಯಾವ ಸ್ಥಳ! ಇದು ಯಾವ ಸ್ಥಳ! ನಾನು ಎಲ್ಲಿಗೆ ಬಂದು ಬಿದ್ದಿದ್ದೇನೆ! ಅಲ್ಲಿ ಭಗವಂತನ ಪಾದಪದ್ಮಗಳ ಚಿಂತನೆ ಮಾಡುತ್ತಿದ್ದೆ, ಈಗ ನಾನು ಎಲ್ಲಿಗೆ ಬಂದು ಬಿದ್ದಿದ್ದೇನೆ!' ಅಂತ.

(ಮಹಿಮಚರಣನಿಗೆ) "ನಿಮಗೆ ಅಗತ್ಯವಾದ್ದು ಮಾನಸಿಕ ತ್ಯಾಗ—ಅನಾಸಕ್ತರಾಗಿ ಇದ್ದುಕೊಂಡು ಸಂಸಾರವನ್ನು ನಡೆಯಿಸಿಕೊಂಡು ಹೋಗಿ."

ಮಹಿಮಚರಣ: "ಭಗವಂತನ ಕಡೆ ಮನಸ್ಸು ಹರಿಯಲಾರಂಭಿಸಿದ ಮೇಲೆ, ಈ ಸಂಸಾರದಲ್ಲಿ ಇರಲಾಗುತ್ತದೆಯೆ?"

ಶ್ರೀರಾಮಕೃಷ್ಣರು: "ಏನು ನೀನು ಹೇಳೋದು? ಸಂಸಾರದಲ್ಲಿ ಇರೋದಿಲ್ಲ ಅಂದರೆ ಹೋಗುವುದು ತಾನೆ ಎಲ್ಲಿಗೆ? ನನಗೆ ಅನುಭವ ಆಗುತ್ತಿದೆ. 'ನಾನೆಲ್ಲಿ ಇದ್ದರೂ ಅದು ಅಯೋಧ್ಯೆಯೆ' ಅಂತ. ಈ ಇಡೀ ಸಂಸಾರವೇ, ಜಗತ್ತೇ ರಾಮನ ಅಯೋಧ್ಯೆ. ಗುರುವಿನಿಂದ ಉಪದೇಶ ಪಡೆದನಂತರ ರಾಮಚಂದ್ರ ಹೇಳಿದ, 'ನಾನು ಸಂಸಾರವನ್ನು ತ್ಯಾಗ ಮಾಡಿ ಹೋಗುತ್ತೇನೆ' ಅಂತ. ಆತನಿಗೆ ಬುದ್ಧಿ ಹೇಳಲು ದಶರಥ ವಸಿಷ್ಠನನ್ನು ಕರೆಸಿದ. ವಸಿಷ್ಠ ನೋಡುತ್ತಾನೆ, ರಾಮನಿಗೆ ತೀವ್ರ ವೈರಾಗ್ಯ ಬಂದುಬಿಟ್ಟಿದೆ. ಆಗ ಆತ ಹೇಳಿದ, 'ಓ ರಾಮ, ಮೊದಲು ನನ್ನೊಡನೆ ಸ್ವಲ್ಪ ವಿಚಾರ ಮಾಡು, ಬಳಿಕ ಸಂಸಾರವನ್ನು ತ್ಯಜಿಸುವೆಯಂತೆ. ಒಳ್ಳೆಯದು, ಒಂದು ಪ್ರಶ್ನೆ. ಈ ಸಂಸಾರ (ಪ್ರಪಂಚ) ಭಗವಂತನಿಂದ ಪ್ರತ್ಯೇಕವಾದುದೆ? ಅದು ಹಾಗಿದ್ದರೆ ನೀನು ಅದನ್ನು ತ್ಯಜಿಸಿಹೋಗು' ಅಂತ. ರಾಮ ನೋಡುತ್ತಾನೆ, ಭಗವಂತನೇ ಜೀವ ಜಗತ್ತು ಎಲ್ಲ ಆಗಿದ್ದಾನೆ. ಆತನ ಸತ್ತ್ವದಿಂದಲೇ ಎಲ್ಲವೂ ಸತ್ಯವಾಗಿ ತೋರಿಬರುತ್ತಿದೆ. ಆಗ ರಾಮಚಂದ್ರ ತೆಪ್ಪಗೆ ಕುಳಿತ.

"ಈ ಸಂಸಾರದಲ್ಲಿ ಕಾಮ ಕ್ರೋಧ ಇವೇ ಮೊದಲಾದುವುಗಳೊಡನೆ ಯುದ್ಧಮಾಡಬೇಕಾಗಿದೆ. ವಿವಿಧ ಕಾಮನೆಗಳೊಡನೆ ಯುದ್ಧ ಮಾಡಬೇಕಾಗಿದೆ, ಆಸಕ್ತಿಯೊಡನೆ ಯುದ್ಧಮಾಡಬೇಕಾಗಿದೆ. ಯುದ್ಧವನ್ನು ಕೋಟೆಯೊಳಗಿನಿಂದ ಮಾಡುವುದೇ ಮೇಲು. ಗೃಹದಲ್ಲಿದ್ದುಕೊಂಡೇ ಯುದ್ಧಮಾಡುವುದು ಮೇಲು;— ಊಟೋಪಚಾರ ದೊರೆಯುತ್ತೆ;— ಕೈ

ಹಿಡಿದ ಹೆಂಡತಿ ಅನೇಕ ವಿಧವಾಗಿ ಸಹಾಯಮಾಡುತ್ತಾಳೆ. ಈ ಕಲಿ ಯುಗದಲ್ಲಿ ಅನ್ನಗತ ಪ್ರಾಣ—ಭಿಕ್ಷಾಟನೆಗಾಗಿ ಒಂದು ಏಳು ಮನೆಗೆ ಹೋಗುವುದಕ್ಕೆ ಬದಲು ಒಂದು ಮನೆಯದೇ ಮೇಲು. ಗೃಹದಲ್ಲಿ ರೋದು ಕೋಟೆಯೊಳಗಿನಿಂದ ಯುದ್ಧಮಾಡಿದ ಹಾಗೆ.

"ಸಂಸಾರದಲ್ಲಿರಿ, ಬಿರುಗಾಳಿಗೆ ಸಿಕ್ಕಿದ ಎಂಜಲೆಲೆಯೋಪಾದಿಯಲ್ಲಿ. ಗಾಳಿ ಅದನ್ನು ಒಮ್ಮೊಮ್ಮೆ ಮನೆಯ ಒಳಕ್ಕೂ, ಒಮ್ಮೊಮ್ಮೆ ತಿಪ್ಪೆ ಗುಂಡಿಗೂ ಎತ್ತಿಬಿಸಾಡುತ್ತದೆ. ಗಾಳಿ ಯಾವ ಕಡೆಗೆ ಬೀಸುವುದೊ ಅದು ಆ ಕಡೆಗೆ ಹೋಗುತ್ತದೆ—ಒಮ್ಮೊಮ್ಮೆ ಒಳ್ಳೆಯ ಸ್ಥಳಗಳಿಗೆ ಒಮ್ಮೊಮ್ಮೆ ಮಲಿನ ಸ್ಥಳಗಳಿಗೆ ಹೋಗಿಬೀಳುತ್ತದೆ. ಈಗ ನಿನ್ನನ್ನು ಸಂಸಾರದಲ್ಲಿ ಬಿಸಾಡಿದ್ದಾನೆ; ಒಳ್ಳೆಯದು, ಈಗ ಇಲ್ಲೇ ಇರು—ಮತ್ತೆ ಯಾವಾಗ ಆತ ನಿನ್ನನ್ನು ಇಲ್ಲಿಂದ ಎತ್ತಿಕೊಂಡುಹೋಗಿ ಇದಕ್ಕಿಂತಲೂ ಮೇಲಾದ ಜಾಗದಲ್ಲಿ ಬಿಸಾಡುವನೊ ಆಗ ಏನಾಗಬೇಕೊ ಅದು ಆಗುತ್ತದೆ.

"ಸಂಸಾರದಲ್ಲಿ ಇಟ್ಟಿದ್ದಾನೆ, ಅದಕ್ಕೇನು ತಾನೆ ಮಾಡಲಾದೀತು? ಎಲ್ಲವನ್ನೂ ಆತನಿಗೆ ಸಮರ್ಪಿಸಿಬಿಡು—ಆತನಿಗೆ ಆತ್ಮಸಮರ್ಪಣೆ ಮಾಡಿಕೊ. ಹಾಗೆ ಮಾಡಿದರೆ ಮತ್ತೆ ಯಾವ ತೊಂದರೆಯೂ ಬರದು. ಆಗ ಎಲ್ಲವನ್ನೂ ಆತನೇ ಮಾಡುತ್ತಿದ್ದಾನೆ ಎಂಬ ಅರಿವು ಉಂಟಾ ಗುತ್ತದೆ. ಎಲ್ಲವೂ 'ರಾಮನ ಇಚ್ಛೆಯಂತೆ' ನಡೆಯುತ್ತದೆ."

ಒಬ್ಬ ಭಕ್ತ: "'ರಾಮನ ಇಚ್ಛೆಯಂತೆ' ಎಲ್ಲವೂ ನಡೆಯುತ್ತದೆ ಎಂಬ ಕಥೆ ಯಾವುದು?"

ಶ್ರೀರಾಮಕೃಷ್ಣರು: "ಒಂದು ಗ್ರಾಮದಲ್ಲಿ ಒಬ್ಬ ನೆಯ್ಗೆಯವನು ಇದ್ದ. ಆತ ಅತ್ಯಂತ ಧಾರ್ಮಿಕ. ಎಲ್ಲರೂ ಆತನನ್ನು ನಂಬುತ್ತಿದ್ದರು ಮತ್ತು ಪ್ರೀತಿಸುತ್ತಿದ್ದರು. ಆತ ಸಂತೆಗೆ ಹೋಗಿ ಬಟ್ಟೆ ಮಾರುತ್ತಿದ್ದ. ಗಿರಾಕಿ ಯಾವುದಕ್ಕಾದರು ಬೆಲೆ ಎಷ್ಟು ಎಂದು ಕೇಳಿದರೆ ಆತ ಹೇಳುತ್ತಿದ್ದ, 'ರಾಮನ ಇಚ್ಛೆಗನುಸಾರ ನೂಲಿನ ಬೆಲೆ ಒಂದು ರೂಪಾಯಿ, ನೆಯ್ಗೆ ಕೂಲಿ ನಾಲ್ಕು ಆಣೆ; ರಾಮನ ಇಚ್ಛೆಗನುಸಾರ ಲಾಭ ಎರಡಾಣೆ. ಆದ್ದರಿಂದ ಬಟ್ಟೆ ಬೆಲೆ ರಾಮನ ಇಚ್ಛೆಗನುಸಾರ ರೂಪಾಯಿ ಆರಾಣೆ' ಅಂತ. ಗಿರಾಕಿಗಳಿಗೆ ಆತನಲ್ಲಿ ಅಷ್ಟೊಂದು ನಂಬಿಕೆ, ಒಡನೆಯೆ ಬೆಲೆ ಕೊಟ್ಟು ಬಟ್ಟೆ ಕೊಂಡುಕೊಂಡು ಹೋಗಿ ಬಿಡುತ್ತಿದ್ದರು. ಮನುಷ್ಯ ದೊಡ್ಡ ಭಕ್ತ. ರಾತ್ರಿ ವೇಳೆ ಊಟ

ಗೀಟವಾದನಂತರ ಚಂಡೀಮಂಟಪದಲ್ಲಿ ಕುಳಿತು ಭಗವಂತನ ಚಿಂತನೆ ಮಾಡುತ್ತಿದ್ದ ಮತ್ತು ಆತನ ನಾಮಗುಣಕೀರ್ತನೆಮಾಡುತ್ತಿದ್ದ. ಒಂದು ದಿನ ಬಹಳವಾಗಿ ರಾತ್ರಿಯಾಗಿಬಿಟ್ಟಿದೆ, ಬಡಪಾಯಿಗೆ ನಿದ್ರೆ ಬರುತ್ತಿಲ್ಲ, ಕುಳಿತೇ ಇದ್ದಾನೆ. ಒಮ್ಮೊಮ್ಮೆ ಹುಕ್ಕ ಸೇದುತ್ತಾನೆ. ಆ ಸಮಯ ದಲ್ಲಿ ಆ ಮಾರ್ಗವಾಗಿ ಒಂದು ಕಳ್ಳರ ಗುಂಪು ಕಳವುಮಾಡಲು ಹೋಗು ತ್ತಿದೆ. ಮೂಟೆ ಹೊರೋಕೆ ಅವರಿಗೆ ಒಬ್ಬ ಆಳು ಬೇಕಾಗಿತ್ತು. ಅವರು ಬಂದು ಈ ನೆಯ್ಗೆಯವನಿಗೆ ಹೇಳಿದರು, 'ಬಾ ನಮ್ಮೊಡನೆ!' ಅಂತ. ಹೀಗೆಂದು ಹೇಳಿ ಆತನ ಕೈ ಹಿಡಿದು ಎಳೆದುಕೊಂಡು ಹೊರಟೇಹೋದರು. ಬಳಿಕ ಒಬ್ಬ ಗೃಹಸ್ಥನ ಮನೆಗೆ ಕನ್ನಹಾಕಿದರು. ಅಲ್ಲಿ ಕದ್ದ ಸಾಮಾನುಗಳ ಮೂಟೆಯೊಂದನ್ನು ನೆಯ್ಗೆಯವನ ತಲೆ ಮೇಲೆ ಹೊರಿಸಿದರು. ಆ ಸಮ ಯಕ್ಕೆ ಸರಿಯಾಗಿ ಪೋಲೀಸಿನವರು ಅಲ್ಲಿಗೆ ಬಂದರು. ಕಳ್ಳರು ಓಡಿ ಬಿಟ್ಟರು. ತಲೆ ಮೇಲೆ ಮೂಟೆ ಹೊತ್ತುಕೊಂಡಿದ್ದ ಈ ನೆಯ್ಗೆಯವ ಅವರ ಕೈಗೆ ಸಿಕ್ಕಿಬಿದ್ದ. ಅಂದಿನ ರಾತ್ರಿ ಅವನನ್ನು ಜೈಲಿನಲ್ಲಿ ಇಟ್ಟರು. ಮಾರನೆಯ ದಿನ ಮ್ಯಾಜಿಸ್ಟ್ರೇಟ್ ಸಾಹೇಬರ ಎದುರು ವಿಚಾರಣೆ ಶುರು ಆಯಿತು. ಈ ಸಮಾಚಾರವನ್ನು ಕೇಳಿ ಗ್ರಾಮಸ್ಥರೆಲ್ಲ ಅಲ್ಲಿಗೆ ಓಡಿ ಬಂದರು. ಅವರೆಲ್ಲರೂ ಹೇಳಿದರು, 'ಹುಜೂರ್, ಈ ಮನುಷ್ಯ ಎಂದಿಗೂ ಕಳವು ಮಾಡಲಾರ' ಅಂತ. ಆಗ ಸಾಹೇಬರು ನೆಯ್ಗೆಯವ ನನ್ನು ಕೇಳಿದರು, 'ಏನು ಸಮಾಚಾರ, ಏನಾಯಿತು ಹೇಳು?' ಅಂತ.

"ಆ ನೆಯ್ಗೆಯವನು ಹೇಳಿದ: 'ಮಹಾಸ್ವಾಮಿ, ರಾಮನ ಇಚ್ಛೆಯಂತೆ ನಾನು ರಾತ್ರಿ ಊಟ ಮುಗಿಸಿದೆ. ಬಳಿಕ ರಾಮನ ಇಚ್ಛೆ ಯಂತೆ ಚಂಡೀಮಂಟಪದಲ್ಲಿ ಕುಳಿತುಕೊಂಡಿದ್ದೆ. ರಾಮನ ಇಚ್ಛೆಯಂತೆ ರಾತ್ರಿ ಬಹಳವಾಗಿ ಮುಂದುವರಿಯಿತು. ನಾನು ರಾಮನ ಇಚ್ಛೆಯಂತೆ ಆತನ ಚಿಂತನೆ ಮಾಡುತ್ತಿದ್ದೆ ಮತ್ತು ಆತನ ನಾಮಗುಣಕೀರ್ತನೆ ಮಾಡುತ್ತಿದ್ದೆ. ಆಗ ರಾಮನ ಇಚ್ಛೆಯಂತೆ ಒಂದು ಕಳ್ಳರ ಗುಂಪು ಆ ಮಾರ್ಗವಾಗಿ ಮುಂದುವರಿಯುತ್ತಿತ್ತು. ರಾಮನ ಇಚ್ಛೆಯಂತೆ ಆ ಕಳ್ಳರು ನನ್ನನ್ನು ಹಿಡಿದು ಎಳೆದುಕೊಂಡುಹೋದರು. ರಾಮನ ಇಚ್ಛೆ ಯಂತೆ ಅವರು ಒಬ್ಬ ಗೃಹಸ್ಥನ ಮನೆಗೆ ಕನ್ನಹಾಕಿದರು. ರಾಮನ ಇಚ್ಛೆಯಂತೆ ನನ್ನ ತಲೆ ಮೇಲೆ ಮೂಟೆ ಹೊರಿಸಿದರು. ಆ ಸಮಯಕ್ಕೆ ಸರಿಯಾಗಿ ರಾಮನ ಇಚ್ಛೆಯಂತೆ ಪೋಲೀಸಿನವರು ಅಲ್ಲಿಗೆ ಬಂದರು.

ರಾಮನ ಇಚ್ಛೆಯಂತೆ ನಾನು ಸಿಕ್ಕಿಬಿದ್ದೆ. ಆಗ ರಾಮನ ಇಚ್ಛೆಯಂತೆ ಪೊಲೀಸಿನವರು ಜೈಲುಖಾನೆಯಲ್ಲಿ ಇಟ್ಟರು. ಇಂದು ಬೆಳಗ್ಗೆ ರಾಮನ ಇಚ್ಛೆಯಂತೆ ಹುಜೂರರ ಹತ್ತಿರ ಕರೆದುಕೊಂಡುಬಂದಿದ್ದಾರೆ' ಅಂತ. ಆಗ ಮ್ಯಾಜಿಸ್ಟ್ರೇಟ್ ಈತ ಬಹಳ ಧಾರ್ಮಿಕ ಎಂದು ಭಾವಿಸಿ ಆತನನ್ನು ಬಿಟ್ಟುಬಿಡಲು ಹುಕುಮ್‌ಮಾಡಿದರು. ಮನೆಗೆ ಹಿಂದಿರುಗುವಾಗ ಆ ನೆಯ್ಗೆಯವನು ತನ್ನ ಬಂಧುಗಳಿಗೆ ಹೇಳಿದ, 'ರಾಮನ ಇಚ್ಛೆಯಂತೆ ನನ್ನನ್ನು ಬಿಟ್ಟುಬಿಟ್ಟರು' ಅಂತ.

"ಮನುಷ್ಯ ಸಂಸಾರಿಯಾಗೋದು ಅಥವಾ ಸಂನ್ಯಾಸಿಯಾಗೋದು ಎಲ್ಲ ಆತನ ಇಚ್ಛೆಯಂತೆ. ಅದಕ್ಕಾಗಿಯೆ ಎಲ್ಲಾ ಭಾರವನ್ನು ಆತನ ಮೇಲೆ ಹೊರಸಿಬಿಟ್ಟು ಈ ಪ್ರಪಂಚದಲ್ಲಿ ನಿನ್ನ ಕೆಲಸಕಾರ್ಯಗಳನ್ನು ಮಾಡು. ಅದನ್ನು ಬಿಟ್ಟರೆ ಮತ್ತೆ ಇನ್ನೇನು ತಾನೆ ಸಾಧ್ಯ? ಒಬ್ಬ ಗುಮಾಸ್ತ ಜೈಲನ್ನು ಅನುಭವಿಸಬೇಕಾಗಿ ಬಂತು. ಸಜಾ ಮುಗಿದ ನಂತರ ಆತ ಜೈಲಿನಿಂದ ಹಿಂದಿರುಗಿ ಬಂದ. ಹಿಂದಿರುಗಿಬಂದನಂತರ ಆತ 'ತಕಥೈ' ಅಂತ ಕುಣಿತಾನೊ ಅಥವಾ ತನ್ನ ಹಿಂದಿನ ಗುಮಾಸ್ತೆ ಕೆಲಸಾನೆ ಮಾಡುತ್ತಾನೊ?

"ಸಂಸಾರಿ ಜೀವನ್ಮುಕ್ತಿಯನ್ನು ಪಡೆದರೆ, ಆತ ಇಚ್ಛೆಪಟ್ಟರೆ ಅನಾಯಾಸವಾಗಿ ಸಂಸಾರದಲ್ಲೇ ಇರಬಲ್ಲ. ಯಾರಿಗೆ ಜ್ಞಾನ ದೊರಿತಿದೆಯೊ ಅವರಿಗೆ 'ಈ ಸ್ಥಳ,' 'ಆ ಸ್ಥಳ' ಎಂಬ ಭೇದಭಾವವೇನಿರದು. ಅವರಿಗೆ ಎಲ್ಲಾ ಒಂದೇ. ಯಾರಿಗೆ 'ಆ ಸ್ಥಳ' ಎಂಬ ಭಾವನೆ ಇರುವುದೊ ಅವರಿಗೆ 'ಈ ಸ್ಥಳ' ಎಂಬ ಭಾವನೆಯೂ ಇರುತ್ತದೆ.

"ನಾನು ಕೇಶವಸೇನನನ್ನು ಮೊಟ್ಟಮೊದಲು ಜಯಗೋಪಾಲ ಸೇನನ ತೋಟದಲ್ಲಿ ನೋಡಿದಾಗ ಆತನನ್ನು ತಮಾಷೆಮಾಡಿಹೇಳಿದೆ, 'ಕೇವಲ ಈತನಿಗೆ ಮಾತ್ರವೇ ಬಾಲ ಬಿದ್ದುಹೋಗಿದೆ' ಅಂತ. ಇಡೀ ಸಭೆ ಜನರೆಲ್ಲ ಗೊಳ್ಳೆಂದು ನಕ್ಕರು. ಕೇಶವ ಹೇಳಿದ, 'ನೀವು ಸುಮ್ಮನೆ ನಗಬೇಡಿ, ಇವರ ಮಾತಿನಲ್ಲಿ ಏನೊ ಅರ್ಥ ಇದೆ, ಕೇಳಿ ತಿಳಿದುಕೊಳ್ಳೋಣ' ಅಂತ. ನಾನು ಹೇಳಿದೆ, 'ಎಲ್ಲಿಯವರೆಗೆ ಕಪ್ಪೆಮರಿಗೆ ಬಾಲ ಬಿದ್ದುಹೋಗುವುದಿಲ್ಲವೊ, ಅಲ್ಲಿಯವರೆಗೆ ಅದು ಕೇವಲ ನೀರಿನಲ್ಲೇ ಇರಬೇಕಾಗುತ್ತದೆ. ಅದು ನೆಗೆದು ದಡಕ್ಕೆ ಬಂದು ನೆಲದ ಮೇಲೆ ಸಂಚರಿಸಲಾರದು. ಆದರೆ ಬಾಲ ಬಿದ್ದುಹೋದ ಒಡನೆಯೆ ನೆಲದ ಮೇಲಕ್ಕೆ ನೆಗೆದುಬರು

ತ್ತದೆ. ಬಳಿಕ ಅದು ನೀರಿನಲ್ಲೂ ಇರಬಲ್ಲದು ನೆಲದ ಮೇಲೂ ಇರಬಲ್ಲದು. ಅದೇ ರೀತಿಯಾಗಿ ಮನುಷ್ಯನ ಅವಿದ್ಯೆ ಎಂಬ ಬಾಲ ಕಳಚಿಬಿದ್ದು ಹೋಗದವರೆಗೆ ಸಂಸಾರವೆಂಬ ನೀರಿನಲ್ಲೇ ಇರುತ್ತಾನೆ. ಅವಿದ್ಯೆ ಎಂಬ ಬಾಲ ಕಳಚಿಬಿದ್ದುಹೋಯಿತು ಅಂದರೆ— ಜ್ಞಾನ ದೊರೆಯಿತು ಅಂದರೆ ಮುಕ್ತನಾಗಿ ತಿರುಗಾಡಬಲ್ಲ, ಇಚ್ಛೆ ಬಂದರೆ ಸಂಸಾರದಲ್ಲಿ ಇರಲೂ ಬಲ್ಲ' ಅಂತ."

ಮಹಿಮಚರಣ ಮೊದಲಾದ ಭಕ್ತರು ಕುಳಿತು ಪರಮಹಂಸರ ಅಮೃತಮಯ ಮಾತುಗಳನ್ನು ಕೇಳುತ್ತಿದ್ದಾರೆ. ಒಂದೊಂದು ಮಾತೂ ಒಂದೊಂದು ರತ್ನ. ಯಾರಿಗೆ ಎಷ್ಟೆಷ್ಟು ಬೇಕೊ ಅವರು ಅಷ್ಟಷ್ಟನ್ನು ಆರಿಸಿಕೊಳ್ಳಬಹುದು— ಆದರೆ ಮಡಿಲು ತುಂಬಿಹೋಗಿಬಿಟ್ಟಿದೆ. ಅದು ಅಷ್ಟೊಂದು ಭಾರವಾಗಿಬಿಟ್ಟಿದೆ, ಎತ್ತೋಕಾಗುತ್ತಿಲ್ಲ. ಸೃಷ್ಟಿಯ ಆರಂಭದಿಂದ ಇದುವರೆಗೆ ಎಷ್ಟೊಂದು ಸಮಸ್ಯೆಗಳು ಮನುಷ್ಯನ ಹೃದಯದಲ್ಲಿ ಉದಯವಾಗಿವೆಯೋ, ಅವೆಕ್ಕೆಲ್ಲ ಪರಿಹಾರ ಇಲ್ಲಿ ದೊರೆಯುತ್ತಿದೆ.

ಶ್ರೀರಾಮಕೃಷ್ಣರು: "ಒಮ್ಮೆ ನಾನು ಮಥುರಬಾಬುವಿನೊಡನೆ ದೇವೇಂದ್ರನಾಥಠಾಕೂರನನ್ನು ನೋಡಲು ಹೋಗಿದ್ದೆ. ಮಥುರಬಾಬುವಿಗೆ ಹೇಳಿದೆ, 'ನಾನು ಕೇಳಿದ್ದೇನೆ, "ದೇವೇಂದ್ರನಾಥಠಾಕೂರ ಭಗವಂತನ ಚಿಂತನೆ ಮಾಡುತ್ತಾನೆ" ಎಂದು. ಆತನನ್ನು ನೋಡಲು ನನಗೆ ಇಚ್ಛೆ ಆಗುತ್ತಿದೆ' ಅಂತ. ಮಥುರಬಾಬು ಹೇಳಿದ, 'ಒಳ್ಳೆಯದು, ನಾನು ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ. ಅವನೂ ನಾನೂ ಹಿಂದೂ ಕಾಲೇಜಿನಲ್ಲಿ ಒಂದೇ ಕ್ಲಾಸಿನಲ್ಲಿ ಓದುತ್ತಿದ್ದೆವು, ನಮ್ಮಿಬ್ಬರಿಗೂ ಸ್ನೇಹ ಇದೆ' ಅಂತ. ನಾವು ದೇವೇಂದ್ರನಾಥಠಾಕೂರನ ಮನೆಗೆ ಹೋದೆವು. ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಬಹಳ ದಿವಸ ಆಗಿತ್ತು. ಮಥುರಬಾಬುವನ್ನು ನೋಡಿ ದೇವೇಂದ್ರ ಹೇಳಿದ, 'ನೀನು ಒಂದು ಸ್ವಲ್ಪ ಬದಲಾಯಿಸಿಬಿಟ್ಟಿದ್ದೀಯೆ— ನಿನಗೊಂದಷ್ಟು ಬೊಜ್ಜು ಬೆಳೆದಿದೆ' ಅಂತ. ಬಳಿಕ ಮಥುರಬಾಬು ನನ್ನನ್ನು ತೋರಿಸಿ ಹೇಳಿದ, 'ಇವರು ನಿನ್ನನ್ನು ನೋಡಲು ಬಂದಿದ್ದಾರೆ. ಇವರು "ಭಗವಂತ, ಭಗವಂತ" ಅಂತ ಹೇಳುತ್ತ ಆತನಿಗಾಗಿ ಹುಚ್ಚರಾಗಿದ್ದಾರೆ' ಎಂದು. ನಾನು ದೇವೇಂದ್ರನಾಥನ ದೇಹದ ಲಕ್ಷಣ ನೋಡಲೋಸುಗ ಆತನಿಗೆ ಹೇಳಿದೆ, 'ಎಲ್ಲಿ, ನಿನ್ನ ಮೈಯನ್ನು ತೋರಿಸು ನೋಡೋಣ' ಅಂತ. ಆತ ಷರಟನ್ನು ಮೇಲಕ್ಕೆ ಎತ್ತಿ ತೋರಿಸಿದ. ನೋಡಿದೆ—

ಗೌರವರ್ಣ. ಅದರ ಮೇಲೆ ಕುಂಕುಮ ಹರಡಿದ ಹಾಗೆ ಕಂಡಿತು. ಆಗ ಆತನ ತಲೆಗೂದಲು ಇನ್ನೂ ನರೆತಿರಲಿಲ್ಲ.

"ದರ್ಶನಮಾತ್ರದಿಂದಲೆ ಆತನಲ್ಲಿ ಸ್ವಲ್ಪ ಅಭಿಮಾನ ಇರೋದು ಕಂಡುಬಂದಿತು. ಅದರಲ್ಲಿ ಆಶ್ಚರ್ಯವೇನು? ಆತನಿಗೆ ಅಷ್ಟೊಂದು ಐಶ್ವರ್ಯ ಪಾಂಡಿತ್ಯ ಮತ್ತು ಹೆಸರು ಕೀರ್ತಿ! ಆತನ ಅಭಿಮಾನ ನೋಡಿ ಮಥುರಬಾಬುವಿಗೆ ಕೇಳಿದೆ, 'ಒಳ್ಳೆಯದು, ಅಭಿಮಾನ ಜ್ಞಾನಜನ್ಯವೊ ಅಜ್ಞಾನಜನ್ಯವೊ? ಯಾರಿಗೆ ಬ್ರಹ್ಮಜ್ಞಾನ ದೊರೆತಿರುವುದೊ ಅವರಿಗೆ, "ನಾನು ಒಬ್ಬ ಪಂಡಿತ; ನಾನು ಒಬ್ಬ ಜ್ಞಾನಿ; ನಾನು ಧನಿಕ" ಎಂಬ ಭಾವನೆಗಳಿರುವುವೇನು?' ಅಂತ.

"ದೇವೇಂದ್ರನೊಡನೆ ಮಾತುಕತೆಯಾಡುತ್ತಿದ್ದಹಾಗೆಯೆ ಇದ್ದಕ್ಕಿದ್ದ ಹಾಗೆ ನನಗೆ ಆ ಅವಸ್ಥೆ ಬಂದುಬಿಟ್ಟಿತು. ಆ ಅವಸ್ಥೆಯಲ್ಲಿ ಯಾರು ಯಾರು ಎಂಥೆಂಥವರು ಎಂಬುದು ನನ್ನ ಕಣ್ಣೆದುರು ಬರುತ್ತದೆ. ನನ್ನ ಅಂತರ್ಯದಲ್ಲಿ ಬಹಳವಾಗಿ ನಗು ಎದ್ದಿತು. ಆ ಅವಸ್ಥೆ ಬಂದಾಗ ಪಂಡಿತ-ಗಿಂಡಿತರೆಲ್ಲ ಒಂದು ತೃಣವಾಗಿ ಕಾಣುತ್ತಾರೆ. ಪಂಡಿತನಲ್ಲಿ ವಿವೇಕವೈರಾಗ್ಯ ಇಲ್ಲ ಅಂಬುದು ಕಂಡುಬಂದರೆ, ಆಗ ಆತ ಒಂದು ಚೂರು ಕಸಕಡ್ಡಿಯಂತೆ ಕಾಣುತ್ತಾನೆ. ಆಗ ನನ್ನ ಕಣ್ಣಿಗೆ ಆತ ಬಹು ಎತ್ತರಕ್ಕೆ ಹಾರಿಹೋಗಿದ್ದರೂ ಹೆಣದಗುಂಡಿಗಳ ಕಡೆ ದೃಷ್ಟಿಇಟ್ಟು ಕೊಂಡಿರೋ ರಣಹದ್ದಿನೋಪಾದಿಯಲ್ಲಿ ಕಂಡುಬರುತ್ತಾನೆ.

"ನೋಡಿದೆ, ಆತನಿಗೆ ಯೋಗ ಭೋಗ ಎರಡೂ ಇವೆ. ಚಿಕ್ಕ ಚಿಕ್ಕ ಅನೇಕ ಮಕ್ಕಳುಮರಿಗಳು ಇದ್ದುವು. ಅಂದು ಅಲ್ಲಿಗೆ ಮನೆ-ಡಾಕ್ಟರ್ ಬಂದಿದ್ದ. ಇದರಿಂದ ಗೊತ್ತಾಗುತ್ತದೆ ಆತ ಜ್ಞಾನಿಯಾಗಿದ್ದರೂ ಪ್ರಾಪಂಚಿಕನಾಗಿಯೂ ಇದ್ದ ಅಂಬುದು. ನಾನು ಆತನಿಗೆ ಹೇಳಿದೆ, 'ನೀನು ಕಲಿಯುಗದ ಜನಕನೆ.

**ಅದನೂ ಇದನೂ—ಎರಡನು ಹಿಡಿದು**

**ಕುಡಿದನು ತುಂಬಿದ ಹಾಲ್‌ಬಟ್ಟಲನು!**

ನೀನು ಸಂಸಾರದಲ್ಲಿದ್ದರೂ ಭಗವಂತನಲ್ಲಿ ಮನಸ್ಸನ್ನಿಟ್ಟಿರುವುದನ್ನು ಕೇಳಿ ನಿನ್ನನ್ನು ನೋಡಲು ಬಂದಿದ್ದೇನೆ. ನನಗೆ ಭಗವಂತನ ವಿಷಯವಾಗಿ ಒಂದಷ್ಟು ತಿಳಿಸು' ಅಂತ.

"ಆಗ ಆತ ವೇದಗಳಿಂದ ಕೆಲವು ಮಂತ್ರಗಳನ್ನು ಎತ್ತಿಹೇಳಿದ. ಆತ ಹೇಳಿದ, 'ಈ ಜಗತ್ತು ಒಂದು ಗೊಂಚಲುದೀಪ (Chandelier)ದ ಹಾಗೆ. ಪ್ರತಿಯೊಂದು ಜೀವವೂ ಅದರ ಒಂದೊಂದು ದೀಪವಿದ್ದ ಹಾಗೆ' ಅಂತ. ಇಲ್ಲಿ ಒಮ್ಮೆ ನಾನು ಪಂಚವಟಿಯಲ್ಲಿ ಧ್ಯಾನಮಾಡುತ್ತಿದ್ದಾಗ ಅದೇ ರೀತಿಯಾಗೇ ಧ್ಯಾನದಲ್ಲಿ ಕಂಡಿದ್ದೆ. ದೇವೇಂದ್ರನ ಮಾತಿನೊಡನೆ ನನ್ನ ಅನುಭವ ಹೊಂದಿಕೊಂಡುಬಿಟ್ಟದ್ದರಿಂದ ಭಾವಿಸಿದೆ, 'ಆತ ದೊಡ್ಡ ಅನುಭವಶಾಲಿಯೇ' ಅಂತ. ಆತನಿಗೆ ಅದನ್ನು ಇನ್ನೂ ಸ್ವಲ್ಪ ವಿಷದ ಪಡಿಸುವಂತೆ ಹೇಳಿದೆ. ಆಗ ಆತ ಹೇಳಿದ, 'ಭಗವಂತ ಮನುಷ್ಯನನ್ನು ಸೃಷ್ಟಿಮಾಡಿರೋದು ತನ್ನ ಮಹಿಮೆಯನ್ನು ಪ್ರಕಾಶಗೊಳಿಸಲೋಸುಗ; ಇಲ್ಲದಿದ್ದರೆ ಈ ಜಗತ್ತು ಇರೋದು ಯಾರಿಗೆ ತಾನೆ ಗೊತ್ತಾಗುತ್ತಿತ್ತು? ಗೊಂಚಲುದೀಪದ ಬೆಳಕು ಇಲ್ಲದೆ ಇದ್ದ ಪಕ್ಷದಲ್ಲಿ ಎಲ್ಲಾ ಅಂಧಕಾರ ಮಯವಾಗಿರುತ್ತಿತ್ತು, ಗೊಂಚಲುದೀಪವನ್ನೂ ನೋಡೋಕಾಗುತ್ತಿರ ಲಿಲ್ಲ' ಎಂದು.

"ನಾವಿಬ್ಬರು ಬಹಳ ಹೊತ್ತು ಮಾತುಕತೆಗಳಾಡಿದನಂತರ ದೇವೇಂದ್ರನಿಗೆ ಬಹಳ ಆನಂದವಾಗಿಬಿಟ್ಟು ಹೇಳಿದ, 'ನೀವು ಬ್ರಾಹ್ಮ ಸಮಾಜದ ವಾರ್ಷಿಕೋತ್ಸವಕ್ಕೆ ಬಂದೇತೀರಬೇಕು' ಅಂತ. ನಾನು ಹೇಳಿದೆ, 'ಅದೆಲ್ಲ ಭಗವಂತನ ಇಚ್ಛೆಯಂತೆ; ನೀನೇ ನೋಡುತ್ತಿದ್ದೀಯೆ, ನನ್ನದು ಅಂಥ ಅವಸ್ಥೆ, ಆತ ನನ್ನನ್ನು ಯಾವ ಘಳಿಗೆಯಲ್ಲಿ ಯಾವ ಭಾವ ದಲ್ಲಿ ಇಡುತ್ತಾನೊ ಹೇಳೋಕಾಗೋದಿಲ್ಲ' ಅಂತ. ದೇವೇಂದ್ರ ಹೇಳಿದ, 'ಹಾಗಾಗೋದಿಲ್ಲ, ಬರಲೇಬೇಕು; ಆದರೆ ಬಟ್ಟೆ ಬರೆ ಹಾಕಿಕೊಂಡು, ಮೈಮೇಲೆ ಉತ್ತರೀಯ ಹೊದ್ದುಕೊಂಡು ಬರಬೇಕು;—ನೀವು ಹಾಗೆ ಹೀಗೆ ಬಟ್ಟೆ ಬರೆ ಹಾಕಿಕೊಂಡಿರುವುದನ್ನು ನೋಡಿ ಯಾರಾದರು ಒಂದೆರಡು ಮಾತು ಆಡಿದರೆ ಅದು ನನಗೆ ದುಃಖವನ್ನುಂಟುಮಾಡು ತ್ತದೆ' ಎಂದು. ನಾನು ಹೇಳಿದೆ, 'ಅದು ನನ್ನ ಕೈಯಲ್ಲಿ ಸಾಧ್ಯವಾಗೋ ದಿಲ್ಲ. ನಾನು ಬಾಬು ಆಗಲಾರೆ' ಅಂತ. ದೇವೇಂದ್ರ, ಮಥುರಬಾಬು ಮತ್ತೆಲ್ಲರೂ ನಗಲಾರಂಭಿಸಿದರು.

"ಮಾರನೆ ದಿನವೇ ದೇವೇಂದ್ರನಿಂದ, ಮಥುರಬಾಬುವಿಗೆ ಒಂದು ಪತ್ರ ಬಂತು—ನಾನು ಉತ್ಸವಕ್ಕೆ ಹೋಗಕೂಡದು ಎಂಬುದಾಗಿ. ಅದ ರಲ್ಲಿ ಬರೆದಿದ್ದಿತು, ಉತ್ತರೀಯ ಹೊದ್ದುಕೊಂಡುಬರದೆ ಇದ್ದರೆ ಅದು

ಅಸಭ್ಯತೆಯನ್ನು ತೋರಿಸುತ್ತದೆ' ಎಂಬುದಾಗಿ. (ಎಲ್ಲರೂ ನಗುತ್ತಾರೆ.)

"ಒಬ್ಬ ದೊಡ್ಡ ಮನುಷ್ಯನಿದ್ದಾನೆ: ಕ್ಯಾಪಟನ್[1] ಅಂಬುವನು. ಸಂಸಾರಿಯೇನೊ ನಿಜ, ಆದರೆ ದೊಡ್ಡ ಭಕ್ತ. (ಮಹಿಮಚರಣನಿಗೆ) ನೀನು ಆತನೊಡನೆ ಒಮ್ಮೊಮ್ಮೆ ಮಾತುಕತೆಗಳನ್ನಾಡು. ಆತ ವೇದ, ವೇದಾಂತ, ಶ್ರೀಮದ್ಭಾಗವತ, ಗೀತ ಅಧ್ಯಾತ್ಮರಾಮಾಯಣ ಇವನ್ನು ಕಂಠಪಾಠಮಾಡಿಕೊಂಡಿದ್ದಾನೆ. ನೀನು ಆತನೊಡನೆ ಮಾತುಕತೆಯಾಡಿ ನೋಡು.

"ಆತ ಒಳ್ಳೆ ಸದ್ಗುಣ ಶಾಲಿ. ನಾನು ಒಮ್ಮೆ ವರಾಹನಗರದ ರಸ್ತೆಯಲ್ಲಿ ಹೋಗುತ್ತಿರುವಾಗ ನನ್ನ ತಲೆಯಮೇಲೆ ಛತ್ರಿ ಹಿಡಿದುಕೊಂಡು ಬಂದ. ನನ್ನನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ಎಷ್ಟೊಂದು ಉಪಚಾರ ಮಾಡುತ್ತಾನೆ ಅಂತ!—ಗಾಳಿ ಬೀಸೋದು, ಕಾಲು ಒತ್ತೋದು, ವಿವಿಧ ಭಕ್ಷ್ಯಭೋಜ್ಯಗಳಿಂದ ತೃಪ್ತಿಗೊಳಿಸೋದು, ಇತ್ಯಾದಿ. ನಾನು ಒಂದು ದಿನ ಆತನ ಕಕ್ಕಸಿನಲ್ಲಿ ಸಮಾಧಿಸ್ಥನಾಗಿಬಿಟ್ಟೆ. ಆತ ಅಷ್ಟೊಂದು ಆಚಾರಶೀಲನಾಗಿದ್ದರೂ ಅಸಹ್ಯಪಟ್ಟುಕೊಳ್ಳದೆ ಅಲ್ಲಿಗೆ ಬಂದು ನನ್ನ ಕೈ ಕಾಲು ತೊಳೆದು ನನ್ನ ಯೋಗಕ್ಷೇಮವನ್ನು ನೋಡಿಕೊಂಡ. ನೋಡು, ಅಷ್ಟೊಂದು ಆಚಾರವಂತ, ಆದರೂ ಅದನ್ನೆಲ್ಲ ಒಂದು ಬದಿಗಿಟ್ಟು ಅಲ್ಲಿಗೆ ಬಂದನಲ್ಲ!

"ಆತನಿಗೆ ಹಲವಾರು ವಿಧದ ಖರ್ಚು. ಕಾಶಿಯಲ್ಲಿ ಸಹೋದರರಿದ್ದಾರೆ. ಅವರಿಗೆ ಕಳುಹಿಸಬೇಕಾಗಿದೆ. ಹೆಂಡತಿ ಮೊದಲು ಜಿಪುಣೆ ಆಗಿದ್ದಳು. ಈಗ ಆಕೆ ಅಷ್ಟೊಂದು ವಿಶಾಲ ಹೃದಯದವಳಾಗಿಬಿಟ್ಟಿದ್ದಾಳೆ ಆಕೆಯ ವಿವಿಧ ಖರ್ಚುಗಳಿಗೆ ಸಾಕಾದಷ್ಟು ಹಣ ದೊರೆಯುತ್ತಿಲ್ಲ.

"ಕ್ಯಾಪ್ಟನ್ನನ ಹೆಂಡತಿ ಒಮ್ಮೆ ನನಗೆ ಹೇಳಿದಳು, 'ಅವರಿಗೆ ಸಂಸಾರ ರುಚಿಸುತ್ತಿಲ್ಲ. ಅದಕ್ಕಾಗಿಯೇ ಅವರು ಒಮ್ಮೆ ತಾವು ಸಂಸಾರವನ್ನು ತ್ಯಜಿಸಿಬಿಡುವುದಾಗಿ ಹೇಳಿದರು' ಅಂತ. ಆತ ಆಗಾಗ ನನಗೂ ಹೇಳುತ್ತಿದ್ದ, 'ಬಿಟ್ಟುಬಿಡುತ್ತೇನೆ' ಅಂತ.

---

1. ಈತನ ನಿಜವಾದ ಹೆಸರು ವಿಶ್ವನಾಥ ಉಪಾಧ್ಯಾಯ ಅಂತ. ನೇಪಾಳ ನಿವಾಸಿ; ನೇಪಾಳ ರಾಜನ ವಕೀಲ. ರಾಜಪ್ರತಿನಿಧಿಯಾಗಿ ಕಲ್ಕತ್ತದಲ್ಲಿ ಇದ್ದಾನೆ. ಈತ ಬಹಳ ಸದಾಚಾರನಿಷ್ಠ ಬ್ರಾಹ್ಮಣ. ಒಬ್ಬ ದೊಡ್ಡ ಭಕ್ತನೂ ಆಗಿದ್ದಾನೆ.

"ಆತನ ವಂಶಿಕರೆಲ್ಲರೂ ಭಕ್ತರೆ. ಆತನ ತಂದೆ ಒಬ್ಬ ಸಿಪಾಯಿ. ಆತ ಯುದ್ಧದ ಸಮಯದಲ್ಲಿ ಒಂದು ಕೈಯಿಂದ ಶಿವಪೂಜೆಯನ್ನು ಮಾಡುತ್ತ ಇನ್ನೊಂದು ಕೈಯಿಂದ ಕತ್ತಿ ಹಿಡಿದು ಯುದ್ಧಮಾಡುತ್ತಿದ್ದನಂತೆ.

"ಕ್ಯಾಪ್ಟನ್ ಬಹಳ ಆಚಾರವಂತ. ನಾನು ಕೇಶವಸೇನನನ್ನು ನೋಡಲು ಹೋಗುತ್ತಿದ್ದೆ. ಅದನ್ನು ನೋಡಿ ಆತ ಇಲ್ಲಿಗೆ ಒಂದು ತಿಂಗಳ ಕಾಲ ಬರಲಿಲ್ಲ. ಆತ ಹೇಳುತ್ತಿದ್ದ, 'ಕೇಶವಸೇನ ಭ್ರಷ್ಟಾಚಾರಿ—ಇಂಗ್ಲಿಷರೊಡನೆ ಉಣ್ಣೋದು ತಿನ್ನೋದು ಮಾಡುತ್ತಾನೆ, ಬೇರೆ ಜಾತಿಯವರಿಗೆ ತನ್ನ ಮಗಳ ಕೊಟ್ಟು ಮದುವೆ ಮಾಡಿದ್ದಾನೆ; ಅವನಿಗೆ ಜಾತಿ ಕುಲ ಅಂಬುದೇ ಇಲ್ಲ' ಅಂತ. ನಾನು ಹೇಳಿದೆ, 'ಅದನ್ನೆಲ್ಲ ಕಟ್ಟಿಕೊಂಡು ನನಗೇನು? ಕೇಶವಸೇನ ಭಗವಂತನ ನಾಮಸ್ಮರಣೆ ಮಾಡುತ್ತಾನೆ. ಅದಕ್ಕಾಗಿ ಆತನನ್ನು ನೋಡಲು ಹೋಗುತ್ತೇನೆ; ಆತನ ಬಾಯಿಂದ ಭಗವಂತನ ವಿಷಯ ಕೇಳಲು ಹೋಗುತ್ತೇನೆ. ನನಗೆ ಬೇಕಾಗಿರೋದು ದ್ವೀಪದ್ರಾಕ್ಷಿಯ ಹಣ್ಣು; ಅದರ ಮುಳ್ಳಿನ ವಿಚಾರ ನನಗೇಕೆ?' ಅಂತ. ಹಾಗೂ ಆತ ನನ್ನನ್ನು ಸುಮ್ಮನೆ ಬಿಡಲಿಲ್ಲ. ಆತ ಹೇಳಿದ, 'ಭಗವಂತನ ವಿಷಯವಾಗಿ ಕೇಳೋಕೆ ನೀವು ಕೇಶವಸೇನನ ಹತ್ತಿರಕ್ಕೆ ಏಕೆ ಹೋಗಬೇಕು?' ಅಂತ. ಆಗ ಸ್ವಲ್ಪ ಚಿಟ್ಟುಕೊಂಡು ಹೇಳಿದೆ, 'ನಾನು ದುಡ್ಡಿಗಾಗಿ ಅಲ್ಲಿಗೆ ಹೋಗುತ್ತಿಲ್ಲ—ನಾನು ಹರಿನಾಮ ಕೇಳಲು ಹೋಗುತ್ತಿದ್ದೇನೆ—ನೀನು ವೈಸ್‌ರಾಯನ್ನು ನೋಡಲು ಹೋಗುತ್ತೀಯಲ್ಲ ಅದು ಹೇಗೆ? ಅವರು ಮ್ಲೇಚ್ಛರು. ಅವರೊಡನೆ ನೀನು ಬೆರೆಯುತ್ತೀಯಲ್ಲ ಅದು ಹೇಗೆ?' ಅಂತ. ಇದನ್ನೆಲ್ಲ ಹೇಳಿದ ಮೇಲೆ ಆತ ಒಂದು ಸ್ವಲ್ಪ ಮೆತ್ತಗಾದ.

"ಆದರೂ ಒಬ್ಬ ದೊಡ್ಡ ಭಕ್ತ. ಪೂಜೆಯ ಸಮಯದಲ್ಲಿ ಕರ್ಪೂರದ ಮಂಗಳಾರತಿ ಮಾಡುತ್ತಾನೆ. ಅವನು ಸ್ತೋತ್ರಪಾಠಮಾಡುವಾಗಲಂತು ಬೇರೆ ವ್ಯಕ್ತಿಯೇ ಆಗಿಬಿಡುತ್ತಾನೆ. ಅದರಲ್ಲಿ ಆತ ಸಂಪೂರ್ಣ ತನ್ಮಯನಾಗಿಬಿಡುತ್ತಾನೆ.

(ಮಹಿಮಚರಣನಿಗೆ) "ವೇದಾಂತದ ದೃಷ್ಟಿಯಿಂದ ಈ ಜಗತ್ತು ಮಾಯಾಮಯ—ಸ್ವಪ್ನದಂತೆ ಮಿಥ್ಯ. ಯಾರು ಪರಮಾತ್ಮನೊ ಆತನೇ ಸಾಕ್ಷಿಸ್ವರೂಪನಾಗಿದ್ದಾನೆ—ಜಾಗ್ರತ್ ಸ್ವಪ್ನ ಸುಷುಪ್ತಿ ಇವು ಮೂರು

ಅವಸ್ಥೆಗಳಲ್ಲಿಯೂ ಸಾಕ್ಷಿಸ್ವರೂಪನಾಗಿದ್ದಾನೆ. ಇವೆಲ್ಲ ನಿನಗೆ ತುಂಬ ಚೆನ್ನಾಗಿ ಹಿಡಿಸುವ ವಿಷಯ. ಸ್ವಪ್ನ ಎಷ್ಟು ಸತ್ಯವೊ ಜಾಗ್ರತ್ತೂ ಅಷ್ಟೇ ಸತ್ಯ. ನಿನಗೆ ಹಿಡಿಸುವ ಒಂದು ಕಥೆ ಹೇಳುತ್ತೇನೆ ಕೇಳು.

"ಒಂದು ಊರಿನಲ್ಲಿ ಒಬ್ಬ ರೈತ ಇದ್ದ, ಒಳ್ಳೇ ಜ್ಞಾನಿ. ಆತನಿಗೆ ಮದುವೆ ಆಗಿತ್ತು. ಬಹಳಕಾಲವಾದ ಮೇಲೆ ಆತನಿಗೆ ಒಂದು ಗಂಡು ಮಗು ಆಯಿತು. ಅದರ ಹೆಸರು ಹಾರೂ ಅಂತ. ಗಂಡ ಹೆಂಡತಿ ಇಬ್ಬರೂ ಆ ಮಗುವನ್ನು ಬಹಳವಾಗಿ ಪ್ರೀತಿಸುತ್ತಿದ್ದರು, ಏಕೆಂದರೆ ಆತನೇ ಸಂಸಾರದ ಏಕಮಾತ್ರ ಪುತ್ರರತ್ನ. ರೈತ ಬಹಳ ಧಾರ್ಮಿಕ. ಆ ಊರಿನವರೆಲ್ಲರೂ ಆತನನ್ನು ಪ್ರೀತಿಸುತ್ತಿದ್ದರು. ಒಂದು ದಿನ ಹೊಲದಲ್ಲಿ ಕೆಲಸ ಮಾಡುತ್ತಿದ್ದಾನೆ. ಆಗ ಯಾರೊ ಒಬ್ಬ ಬಂದು ಹೇಳಿದ, 'ಹಾರುವಿಗೆ ಕಾಲರಾ ತಗುಲಿಬಿಟ್ಟಿದೆ' ಅಂತ. ಆತ ಮನೆಗೆ ಬಂದು ಬಹಳವಾಗಿ ಚಿಕಿತ್ಸೆ-ಗಿಕಿತ್ಸೆ ಮಾಡಿದ. ಆದರೂ ಆ ಹುಡುಗ ಸತ್ತು ಹೋಗಿಬಿಟ್ಟ. ಮನೆಯವರೆಲ್ಲರೂ ಶೋಕಾಕ್ರಾಂತರಾಗಿದ್ದಾರೆ, ಆದರೆ ರೈತನಿಗೆ ಏನೂ ಆದ ಹಾಗೆ ತೋರಲಿಲ್ಲ. ಶೋಕಪಡುವುದಕ್ಕೆ ಬದಲು ಎಲ್ಲರಿಗೂ ಸಮಾಧಾನ ಹೇಳುತ್ತಿದ್ದಾನೆ, 'ಬರಿದೆ ಶೋಕಪಟ್ಟರೆ ಏನು ದೊರೆತೀತು?' ಅಂತ. ಬಳಿಕ ಎಂದಿನಂತೇ ಕೆಲಸಕ್ಕೆ ಹೊರಟ. ಮನೆಗೆ ಹಿಂದಿರುಗಿ ಬಂದು ನೋಡುತ್ತಾನೆ, ಹೆಂಡತಿ ಇನ್ನೂ ಅಧಿಕವಾಗಿ ಶೋಕಪಡುತ್ತಿದ್ದಾಳೆ. ಅವಳು ಹೇಳಿದಳು, 'ನಿಮ್ಮದು ಕಲ್ಲು ಎದೆ!— ಮಗುವಿಗಾಗಿ ಒಂದು ತೊಟ್ಟು ಕಣ್ಣೀರನ್ನೂ ಹಾಕಲಿಲ್ಲವಲ್ಲ!' ಅಂತ. ಆಗ ರೈತ ಸಮಾಧಾನ ಚಿತ್ತದಿಂದ ಹೇಳಿದ, 'ನಾನು ಏಕೆ ಅಳುತ್ತಿಲ್ಲ ಹೇಳಲೆ? ನನಗೆ ನಿನ್ನೆ ರಾತ್ರಿ ಒಂದು ಸ್ಪಷ್ಟ ಸ್ವಪ್ನಬಿತ್ತು. ಅದರಲ್ಲಿ ನಾನು ದೊರೆಯಾಗಿರುವಂತೆ, ಎಂಟು ಮಕ್ಕಳ ತಂದೆಯಾಗಿರುವಂತೆ, ಬಹಳ ಆನಂದದಿಂದ ಇರುವಂತೆ ಅನುಭವ ಆಯಿತು. ಬಳಿಕ ಎಚ್ಚರಗೊಂಡೆ, ಈಗ ಮಹಾ ದಿಗ್ಭ್ರಾಂತಿಯಲ್ಲಿ ಸಿಕ್ಕಿಬಿದ್ದಿದ್ದೇನೆ—ಆ ಎಂಟು ಮಕ್ಕಳಿಗಾಗಿ ಶೋಕಪಡಲೊ, ಈ ಒಂದು ಹುಡುಗ ಹಾರೂ, ಇವನಿಗಾಗಿ ಶೋಕಪಡಲೊ?' ಎಂದು.

"ರೈತ ಒಬ್ಬ ಜ್ಞಾನಿ; ಆದ್ದರಿಂದ ಆತನಿಗೆ ಅನುಭವ ಆಗಿತ್ತು ಸ್ವಪ್ನಾವಸ್ಥೆ ಎಷ್ಟು ಮಿಥ್ಯವೊ ಅಷ್ಟೇ ಮಿಥ್ಯ ಜಾಗ್ರದವಸ್ಥೆ ಅಂತ. ನಿತ್ಯವಸ್ತು ಒಂದೇ ಒಂದು; ಅದೇ ಆತ್ಮ.

"ನಾನು ಎಲ್ಲವನ್ನೂ ಅಂಗೀಕರಿಸುತ್ತೇನೆ: ತುರೀಯ ಮತ್ತು ಜಾಗ್ರತ್ ಸ್ವಪ್ನ ಸುಷುಪ್ತಿ. ನಾನು ಈ ಮೂರು ಅವಸ್ಥೆಗಳನ್ನೂ ಅಂಗೀಕರಿಸುತ್ತೇನೆ. ಎಲ್ಲವನ್ನು ಒಟ್ಟಿಗೆ ಸೇರಿಸಿ ಅಂಗೀಕರಸದೆ ಇದ್ದರೆ ತೂಕ ಕಡಮೆಬಿದ್ದುಬಿಡುತ್ತದೆ."

ಒಬ್ಬ ಭಕ್ತ: "ತೂಕ ಏಕೆ ಕಡಮೆಬಿದ್ದುಬಿಡುತ್ತದೆ?" (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: "ಬ್ರಹ್ಮ—ಜೀವಜಗತ್ ವಿಶಿಷ್ಟ (ಜೀವಜಗತ್ ಎಲ್ಲವೂ ಕೂಡಿ). ಮೊದಲು 'ನೇತಿ', 'ನೇತಿ', ಎಂಬ ಮಾರ್ಗವನ್ನು ಅನುಸರಿಸುವಾಗ ಜೀವಜಗತ್ತನ್ನು ಬಿಟ್ಟುಬಿಡಬೇಕಾತ್ತದೆ. 'ಅಹಂ' ಬುದ್ಧಿ ಎಲ್ಲಿಯವರೆಗೆ ಇರವುದೊ ಅಲ್ಲಿಯವರೆಗೆ ಆತನೇ ಎಲ್ಲವೂ ಆಗಿದ್ದಾನೆ ಎಂಬ ಬೋಧೆ ಇರುತ್ತದೆ;— ಆತನೇ ಚತುರ್ವಿಂಶತಿ ತತ್ತ್ವ ಆಗಿದ್ದಾನೆ.

"ಬೇಲದ ಹಣ್ಣಿನ ಮುಖ್ಯಭಾಗ ಯಾವುದು ಎಂದರೆ ಜನರಿಗೆ ಅರ್ಥವಾಗುತ್ತದೆ ಅದರ ತಿರುಳು ಮಾತ್ರವೇ ಅಂತ. ಆಗ ಅದರ ಬೀಜ ಮತ್ತು ಓಟೆಯನ್ನು ಗಣನೆಗೆ ತೆಗೆದುಕೊಳ್ಳದೆ ಹೋಗಬೇಕಾಗುತ್ತದೆ ಆದರೆ ಬೇಲದ ಹಣ್ಣಿನ ತೂಕ ಕಂಡುಹಿಡಿಯಬೇಕಾದರೆ ಬರೀ ತಿರುಳನ್ನು ತೂಗಿದರೇ ಸಾಲದು. ತಿರುಳು, ಓಟೆ, ಬೀಜ ಎಲ್ಲವನ್ನೂ ಸೇರಿಸಿ ತೂಗಬೇಕಾಗುತ್ತದೆ. ತಿರುಳು ಯಾವುದರದೊ, ಅದರದೇ ಬೀಜ ಮತ್ತು ಓಟೆ.

"ನಿತ್ಯ ಯಾರದೊ ಆತನದೇ ಲೀಲೆ ಕೂಡ. ಅದಕ್ಕಾಗಿಯೆ ನಾನು ನಿತ್ಯ ಲೀಲೆ ಎಲ್ಲವನ್ನೂ ಸ್ವೀಕರಿಸೋದು. ಸಂಸಾರ, ಜಗತ್ತು ಮಾಯಾ ಅಂತ ಅದನ್ನು ಗಾಳಿಯಲ್ಲಿ ಹಾರಿಸಿಬಿಡುತ್ತಿಲ್ಲ. ಹಾಗೆ ಮಾಡಿದರೆ ತೂಕ ಕಡಮೆಬಿದ್ದುಬಿಡುತ್ತದೆ."

ಮಹಿಮಚರಣ: "ಇದು ಒಳ್ಳೆ ಸಾಮಂಜಸ್ಯ;— ನಿತ್ಯದಿಂದಲೇ ಲೀಲೆ, ಲೀಲೆಯಿಂದಲೇ ನಿತ್ಯ."

ಶ್ರೀರಾಮಕೃಷ್ಣರು: "ಜ್ಞಾನಿಗಳು ಎಲ್ಲವನ್ನು ಸ್ವಪ್ನಸದೃಶ ಎಂದು ಭಾವಿಸುತ್ತಾರೆ; ಆದರೆ ಭಕ್ತರು ಎಲ್ಲಾ ಅವಸ್ಥೆಗಳನ್ನೂ ಅನುಮೋದಿಸುತ್ತಾರೆ. ಜ್ಞಾನಿ 'ಚಿಟಕ್, ಚಿಟಕ್' ಅಂತ ತೊಟ್ಟು ತೊಟ್ಟಾಗಿ ಹಾಲು ಕೊಡುತ್ತಾನೆ. (ಎಲ್ಲರೂ ನಗುತ್ತಾರೆ.) ಕೆಲವು ಹಸು ಇವೆ— ಅವು ಆಯ್ದು ಆಯ್ದು ಮೇಯುತ್ತವೆ; ಅದಕ್ಕೇನೆ ಅವು, 'ತೊಟಕ್, ತೊಟಕ್' ಅಂತ ಹಾಲುಕರೆಯೋದು. ಆದರೆ ಯಾವುವು ಅಷ್ಟೊಂದಾಗಿ ಹುಡುಕಿ

ಹುಡುಕಿ ಮೇಯದೆ ಸಿಕ್ಕಿದುದನ್ನೆಲ್ಲ ತಿನ್ನುವುವೊ ಅವು 'ಹುರ್, ಹುರ್' ಅಂತ ಧಾರಾಕಾರವಾಗಿ ಹಾಲು ಕರೆಯುತ್ತವೆ. ಉತ್ತಮ ಭಕ್ತ—ನಿತ್ಯ ಲೀಲೆ ಎರಡನ್ನೂ ಅನುಮೋದಿಸುತ್ತಾನೆ; ಆದಕ್ಕಾಗಿಯೆ ಆತನ ಮನಸ್ಸು ನಿತ್ಯದಿಂದ ಲೀಲೆಗೆ ಇಳಿದು ಬಂದಾಗಲೂ ಆತ ಭಗವಂತನೊಡನೆ ಆನಂದಪಡಬಲ್ಲ. ಉತ್ತಮ ಭಕ್ತ, 'ಹುರ್, ಹುರ್' ಅಂತ ಧಾರಾಕಾರ ವಾಗಿ ಹಾಲು ಕೊಡುತ್ತಾನೆ." (ಎಲ್ಲರೂ ನಗುತ್ತಾರೆ.)

ಮಹಿಮಚರಣ: "ಆದರೆ ಆ ಹಾಲಿನಲ್ಲಿ ಸ್ವಲ್ಪ ವಾಸನೆ ಇರುತ್ತೆ." (ನಗು.)

ಶ್ರೀರಾಮಕೃಷ್ಣರು ನಗುತ್ತ: "ಅದೇನೊ ನಿಜ. ಅದಕ್ಕಾಗಿ ಅದನ್ನು ಸ್ವಲ್ಪ ಕಾಯಿಸಬೇಕು. ಅದನ್ನು ಬೆಂಕಿಯ ಮೇಲೆ ಇಟ್ಟು ಸ್ವಲ್ಪ ಹೊತ್ತು ಕಾಯಿಸಬೇಕು; ಜ್ಞಾನಾಗ್ನಿಯ ಮೇಲೆ ಅದನ್ನು ಸ್ವಲ್ಪ ಹೊತ್ತು ಇಡಬೇಕಾಗುತ್ತದೆ. ಆಗ ಅದರಲ್ಲಿ ವಾಸನೆ-ಗೀಸನೆ ಏನೂ ಇರದು. (ಎಲ್ಲರೂ ನಗುತ್ತಾರೆ.)

(ಮಹಿಮಚರಣನಿಗೆ) "ಓಂಕಾರ ಅಂಬುದು 'ಅಕಾರ, ಉಕಾರ' ಮಕಾರ' ಇವುಗಳಿಂದಾದ ಸಂಯುಕ್ತಾಕ್ಷರ ಅಂತ ನೀವು ಕೇವಲ ವ್ಯಾಖ್ಯಾನಮಾಡುತ್ತೀರಿ."

ಮಹಿಮಚರಣ: "ಅಕಾರ, ಉಕಾರ, ಮಕಾರ—ಅಂದರೆ ಸೃಷ್ಟಿ, ಸ್ಥಿತಿ, ಪ್ರಳಯ."

ಶ್ರೀರಾಮಕೃಷ್ಣ: "ನಾನು ಗಂಟೆಯ 'ಟಂ' ಶಬ್ದವನ್ನು ಉಪಮೆ ಯನ್ನಾಗಿ ಕೊಡುತ್ತೇನೆ. 'ಟ–ಅ–ಅ–ಮ–' ಅಂತ ಶಬ್ದ ಮಾಡು ತ್ತದೆ. ಇದು ಲೀಲೆಯಿಂದ ನಿತ್ಯದಲ್ಲಿ ಲಯವಾಗುತ್ತದೆ; ಸ್ಥೂಲ, ಸೂಕ್ಷ್ಮ, ಕಾರಣಗಳಿಂದ ಮಹಾಕಾರಣದಲ್ಲಿ ಲಯವಾಗುವಿಕೆ. ಜಾಗ್ರತ್, ಸ್ವಪ್ನ, ಸುಷುಪ್ತಿಗಳಿಂದ ತುರೀಯದಲ್ಲಿ ಲಯವಾಗುವಿಕೆ. ಮತ್ತೆ ಗಂಟೆ ಶಬ್ದ ಆಯಿತು ಅಂದರೆ ಅದು ಮಹಾ ಸಮುದ್ರಕ್ಕೆ ಒಂದು ಭಾರವಾದ ವಸ್ತುವನ್ನು ಬಿಸಾಡಿದ ಹಾಗೆ. ಆಗ ಮತ್ತೆ ಅಲೆಗಳು ಆರಂಭವಾಗುತ್ತವೆ. ನಿತ್ಯದಿಂದ ಲೀಲೆಯ ಆರಂಭ, ಮಹಾಕಾರಣದಿಂದ ಸ್ಥೂಲ ಸೂಕ್ಷ್ಮ ಕಾರಣಶರೀರಗಳ ಆರಂಭ—ಆ ತುರೀಯದಿಂದಲೇ ಜಾಗ್ರತ್ ಸ್ವಪ್ನ ಸುಷುಪ್ತಿ ಮೊದಲಾದ ಅವಸ್ಥೆಗಳು ಆರಂಭವಾಗುತ್ತವೆ. ಮತ್ತೆ ಆ ಮಹಾ ಸಮುದ್ರದ ಅಲೆಗಳು ಆ ಮಹಾ ಸಮುದ್ರದಲ್ಲೇ

ಲಯವಾಗುತ್ತವೆ. ನಿತ್ಯದಿಂದ ಲೀಲೆ, ಲೀಲೆಯಿಂದ ನಿತ್ಯ. ಅದಕ್ಕಾಗೇ ನಾನು 'ಟಂ' ಎಂಬ ಶಬ್ದವನ್ನು ಉಪಮೆಯನ್ನಾಗಿ ಕೊಡೋದು. ನಾನು ಇವನ್ನೆಲ್ಲ ಸಾಕ್ಷಾತ್ತಾಗಿ ನೋಡಿದ್ದೇನೆ. ನನಗೆ ಭಗವತಿ ಚಿತ್ ಸಮುದ್ರವನ್ನು ತೋರಿಸಿದ್ದಾಳೆ. ಅದಕ್ಕೆ ಮಿತಿ ಅಂಬುದೇ ಇಲ್ಲ, ಅದರಿಂದಲೆ ಈ ಇಡೀ ಲೀಲೆ ಆರಂಭವಾಯಿತು, ಮತ್ತೆ ಅದರಲ್ಲೇ ಅದು ಲಯವಾಗಿ ಹೋಯಿತು. ಕೋಟಿ ಕೋಟಿ ಬ್ರಹ್ಮಾಂಡಗಳು ಆ ಚಿದಾಕಾಶದಲ್ಲೇ ಉದ್ಭವವಾದುವು ಮತ್ತೆ ಅದರಲ್ಲೇ ಲಯವಾದುವು; ನಿಮ್ಮ ಶಾಸ್ತ್ರಗ್ರಂಥಗಳು ಏನು ಹೇಳುವುವೊ ಅದು ನನಗೆ ಅಷ್ಟೊಂದಾಗಿ ಗೊತ್ತಿಲ್ಲ.''

ಮಹಿಮಚರಣ: ''ಯಾರಿಗೆ ಈ ವಿಧದ ಅನುಭವ ದೊರೆಯಿತೊ ಅಂಥವರು ಶಾಸ್ತ್ರಗಳನ್ನು ಬರೆಯಲಿಲ್ಲ. ಅವರು ತಮ್ಮ ಭಾವದಲ್ಲೇ ಮಗ್ನರಾಗಿಬಿಟ್ಟಿದ್ದರು; ಅವರು ಬರೆಯುವುದು ಯಾವಾಗ? ಬರೆಯಬೇಕಾದರೆ ಒಂದು ಸ್ವಲ್ಪ ಲೆಕ್ಕಾಚಾರದ ಬುದ್ಧಿ ಆವಶ್ಯಕ. ಅಂಥವರಿಂದ (ಮಂತ್ರ ದ್ರಷ್ಟರಿಂದ) ಕೇಳಿ ಬೇರೆಯವರು ಬರೆದಿಟ್ಟಿದ್ದಾರೆ.''

ಶ್ರೀರಾಮಕೃಷ್ಣರು: ''ಸಂಸಾರಿಗಳು ಕೇಳುತ್ತಾರೆ, 'ಕಾಮ ಕಾಂಚನದ ಆಸಕ್ತಿ ಏಕೆ ಹೋಗದು?' ಅಂತ. ಆತನ ಸಾಕ್ಷಾತ್ಕಾರ ದೊರೆತರೆ ಅದು ಹೋಗುತ್ತದೆ. ಒಮ್ಮೆ ಏನಾದರು ಬ್ರಹ್ಮಾನಂದ ದೊರೆತುದೇ ಅದರೆ ಇಂದ್ರಿಯ ಸುಖಗಳನ್ನು ಭೋಗಿಸುವುದಕ್ಕೇ ಆಗಲಿ ಅಥವಾ ಹೆಸರು ಕೀರ್ತಿ ಐಶ್ವರ್ಯಗಳನ್ನು ಪಡೆಯುವುದಕ್ಕೇ ಆಗಲಿ ಮನಸ್ಸು ಓಡಿ ಹೋಗದು. ದೀಪದ ಚಿಟ್ಟೆ ಒಮ್ಮೆ ಬೆಳಕನ್ನು ಕಂಡಿತು ಅಂದರೆ ಅದು ಎಂದಿಗೂ ಕತ್ತಲೆ ಕಡೆ ಹಾರಿಹೋಗದು.

''ಕೆಲವು ಸ್ನೇಹಿತರು ರಾವಣನಿಗೆ ಹೇಳಿದರು, 'ನೀನು ಸೀತೆಯನ್ನು ಒಲಿಸಿಕೊಳ್ಳಲು ನಿನ್ನ ಮಾಯಾ ಶಕ್ತಿಯಿಂದ ಅನೇಕ ರೂಪುಗಳನ್ನು ಧರಿಸುತ್ತಿದ್ದೀಯೆ. ಒಮ್ಮೆ ರಾಮನ ರೂಪು ಧರಿಸಿ ಆಕೆಯನ್ನು ನೀನು ಏಕೆ ಸಮೀಪಿಸಬಾರದು?' ಅಂತ. ರಾವಣ ಹೇಳಿದ, '"ತುಚ್ಛಂ ಬ್ರಹ್ಮಪದಂ ಪರವಧುಸಂಗಃ ಕುತಃ।" ರಾಮನ ಚಿಂತನೆ ಮಾಡಿದಾಗ ಬ್ರಹ್ಮಪದವಿಯೂ ತುಚ್ಛವಾಗಿ ತೋರುವಾಗ ಪರಸ್ತ್ರೀಯಂತು ಒಂದು ಅಲ್ಪ ವಸ್ತುವೆ! ಆ ಕಾರ್ಯಕ್ಕಾಗಿ ನಾನು ರಾಮನ ರೂಪನ್ನು ಹೇಗೆ ತಾನೆ ಧರಿಸಲಿ?' ಅಂತ.

"ಸಂಸಾರಾಸಕ್ತಿಯನ್ನು ನಿರ್ಮೂಲಮಾಡೋಕೇ ಸಾಧನೆ ಭಜನೆ ಮಾಡೋದು. ಭಗವಂತನ ಚಿಂತನೆ ಹೆಚ್ಚು ಹೆಚ್ಚಿದಂತೆಲ್ಲ ಸಂಸಾರದ ಸಾಮಾನ್ಯ ವಸ್ತುಗಳ ಭೋಗಾಸಕ್ತಿ ಕಡಮೆ ಕಡಮೆಯಾಗುತ್ತಾ ಬರುತ್ತದೆ. ಆತನ ಪಾದಪದ್ಮಗಳ ಕಡೆ ಭಕ್ತಿ ಎಷ್ಟು ಪ್ರಮಾಣದಲ್ಲಿ ಬೆಳೆಯುವುದೊ ಅಷ್ಟೇ ಪ್ರಮಾಣದಲ್ಲಿ ವಿಷಯಾಸಕ್ತಿ ಕಡಮೆ ಕಡಮೆಯಾಗುತ್ತಾ ಬರುತ್ತದೆ, ಅಷ್ಟೇ ಪ್ರಮಾಣದಲ್ಲಿ ದೇಹಸುಖದ ಕಡೆ ಹಾತೊರೆಯೋದು ಕಡಮೆ ಕಡಮೆಯಾಗುತ್ತಾ ಬರುತ್ತದೆ. ಪರಸ್ತ್ರೀ ತಾಯಿಯೇ ಎಂಬ ಬೋಧೆಯಾಗುತ್ತದೆ. ಸ್ವಪತ್ನಿ ಆಧ್ಯಾತ್ಮಜೀವನದ ಸಹಾಯಕಿ ಎಂಬ ಬೋಧೆಯಾಗುತ್ತದೆ. ಪಶುಪ್ರವೃತ್ತಿ ಹೊರಟುಹೋಗುತ್ತದೆ, ದೇವಭಾವ ಬಂದು ಬಿಡುತ್ತದೆ. ಸಂಸಾರಾಸಕ್ತಿ ಒಮ್ಮೆಗೆಯೆ ಬಿಟ್ಟು ತೊಲಗಿ ಹೋಗುತ್ತದೆ. ಆಗ ನೀನು ಸಂಸಾರದಲ್ಲಿ ಇದ್ದರೂ ಜೀವನ್ಮುಕ್ತನಾಗಿ ಓಡಾಡಿಕೊಂಡು ಇರುತ್ತೀಯೆ. ಚೈತನ್ಯದೇವನ ಶಿಷ್ಯರು ಅನಾಸಕ್ತರಾಗಿ ಸಂಸಾರದಲ್ಲಿ ಇದ್ದುಕೊಂಡಿದ್ದರು.

"ಯಾರು ನಿಜವಾದ ಭಕ್ತನೊ ಆತನೊಡನೆ ಬೇಕಾದಷ್ಟು ವೇದಾಂತ ವಿಚಾರಮಾಡು, ಈ ಜಗತ್ತು ಸ್ವಪ್ನಸದೃಶ ಅಂತ ಹೇಳು, ಆತನ ಭಕ್ತಿ ಮಾತ್ರ ಆತನನ್ನು ಬಿಟ್ಟುಹೋಗೋಹಾಗಿಲ್ಲ. ಹೇಗೋ ಮಾಡಿ ಒಂದು ಕಿಂಚಿತ್ತಾದರೂ ಉಳಿದೇ ಉಳಿದುಕೊಳ್ಳುತ್ತದೆ. ಕೊನೆಗೆ ಅದು ಆತನ ಹೃದಯವನ್ನು ಸಂಪೂರ್ಣವಾಗಿ ಆವರಿಸಿಕೊಂಡು ಬಿಡುತ್ತದೆ.

"ಶಿವಾಂಶದಿಂದ ಜನ್ಮವೆತ್ತಿದರೆ ವ್ಯಕ್ತಿ ಜ್ಞಾನಿಯಾಗುತ್ತಾನೆ; ಬ್ರಹ್ಮ ಸತ್ಯ ಜಗತ್ ಮಿಥ್ಯಾ ಎಂಬ ಭಾವನೆಯ ಕಡೆ ಆತನ ಮನಸ್ಸು ಸರ್ವದಾ ಹರಿಯುತ್ತದೆ. ವಿಷ್ಣು ಅಂಶದಿಂದ ಜನ್ಮವೆತ್ತಿದರೆ ಪ್ರೇಮ ಭಕ್ತಿ ಉಂಟಾಗುತ್ತದೆ. ಆ ಪ್ರೇಮ ಭಕ್ತಿ ಎಂದಿಗೂ ಹೃದಯವನ್ನು ಬಿಟ್ಟುಹೋಗುವಹಾಗಿಲ್ಲ. ಜ್ಞಾನ-ವಿಚಾರದ ದೆಸೆಯಿಂದ ಆ ಪ್ರೇಮ ಭಕ್ತಿ ಒಂದು ಪಕ್ಷ ಕಡಮೆಯಾಗಿ ಹೋದರೂ, ಮತ್ತೆ ಒಮ್ಮೊಮ್ಮೆ 'ಹು, ಹು,' ಅಂತ ಅಧಿಕವಾಗಿ ಬಿಡುತ್ತದೆ; ಯದುವಂಶವನ್ನು ನಾಶ ಮಾಡಿದ್ದು ಒಂದು ಒನಕೆಯ ತುಂಡು. ಹಾಗೇ ಇದೂ ಕೂಡ ವರ್ತಿಸುತ್ತದೆ."

ಭಕ್ತರೆಲ್ಲರು ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ತಮ್ಮ ತಮ್ಮ ಗೃಹಗಳಿಗೆ ಹಿಂದಿರುಗಿದನಂತರ ಮಹಿಮಚರಣ ಹಾಜರಾನನ್ನು ಪರಮಹಂಸರ

ಹತ್ತಿರಕ್ಕೆ ಕರೆದುಕೊಂಡು ಬಂದಿದ್ದಾನೆ. ಅಲ್ಲಿ ಮಾಸ್ಟರ್ ಕೂಡ ಕುಳಿತಿದ್ದಾನೆ. ಮಹಿಮಚರಣ ಶ್ರೀರಾಮಕೃಷ್ಣರಿಗೆ ಹೇಳಿದ, "ಮಹಾಶಯರೆ, ನಾನು ನಿಮ್ಮ ಮೇಲೆ ಒಂದು ತಪ್ಪು ಹೊರಿಸಬೇಕಾಗಿದೆ. ನೀವು ಹಾಜರಾನಿಗೆ ಮನೆಗೆ ಹೋಗುವಂತೆ ಹೇಳುತ್ತೀರಂತಲ್ಲ ಏಕೆ? ಮತ್ತೆ ಸಂಸಾರದ ಮಧ್ಯೆ ಇರೋಕೆ ಆತನಿಗೆ ಇಚ್ಛೆಯಿಲ್ಲ" ಅಂತ.

ಶ್ರೀರಾಮಕೃಷ್ಣರು: "ಈತನ ತಾಯಿ ರಾಮಲಾಲನ ಹತ್ತಿರ ಈತನ ಸಂಬಂಧವಾಗಿ ತನ್ನ ದುಃಖವನ್ನು ಹೇಳಿಕೊಂಡಿದ್ದಾಳೆ. ಅದಕ್ಕಾಗಿ ನಾನು ಈತನಿಗೆ ಹೇಳಿದೆ, 'ಒಂದು ಮೂರು ದಿವಸದ ಮಟ್ಟಿಗಾದರೂ ಊರಿಗೆ ಹೋಗಿ ಆಕೆಯನ್ನು ನೋಡಿ ಬಾ' ಅಂತ. ಹೆತ್ತ ತಾಯನ್ನು ದುಃಖಕ್ಕೆ ಈಡುಮಾಡಿ ಯಾರೇ ಆಗಲಿ ಅಧ್ಯಾತ್ಮಜೀವನದಲ್ಲಿ ಮುಂದುವರಿಯಲು ಸಾಧ್ಯವೆ? ನಾನು ಒಮ್ಮೆ ಬೃಂದಾವನಕ್ಕೆ ಹೋಗಿ ಅಲ್ಲೆ ಇದ್ದುಬಿಡಬೇಕೆಂದು ಸಂಕಲ್ಪಿಸಿದಾಗ ಹೆತ್ತ ತಾಯ ನೆನಪು ಬಂದಿತು; ಆಗ ಭಾವನೆ ಬಂತು, ನಾನು ಇಲ್ಲೆ ಇದ್ದುಬಿಟ್ಟರೆ ತಾಯಿ ಅಲ್ಲಿ (ದಕ್ಷಿಣೇಶ್ವರದಲ್ಲಿ) ಅಳಲಾರಂಭಿಸುತ್ತಾಳೆ ಅಂತ. ಅದಕ್ಕಾಗಿ ಮಥುರಬಾಬುವಿನೊಡನೆ ಇಲ್ಲಿಗೆ ಹಿಂದಿರುಗಿಬಂದುಬಿಟ್ಟೆ. ಅದೂ ಅಲ್ಲದೆ ಹಾಜರಾನಂಥ ಜ್ಞಾನಿಗಳು ಸಂಸಾರದ ಮಧ್ಯೆ ಇರೋಕೆ ಏಕೆ ಭಯ ಪಡಬೇಕು?"

ಮಹಿಮಚರಣ ನಗುತ್ತ: "ಈತನಿಗೆ ಜ್ಞಾನ ದೊರೆತಿದ್ದರೆ ತಾನೆ!"

ಶ್ರೀರಾಮಕೃಷ್ಣರು ನಗುತ್ತ: "ಹಾಜರಾನಿಗೆ ಎಲ್ಲ ದೊರೆತುಬಿಟ್ಟದೆ. ಈತನಿಗೆ ಕೆಲವು ಮಕ್ಕಳಿರೋದರಿಂದ ಮತ್ತು ಸ್ವಲ್ಪ ಸಾಲ ಇರೋದರಿಂದ ಸಂಸಾರದಲ್ಲಿ ಎಲ್ಲೋ ಕಿಂಚಿತ್ತು ಮನಸ್ಸು ಇಟ್ಟಿದ್ದಾನೆ. 'ನಮ್ಮ ಸೋದರ ಅತ್ತೆಗೆ ಸಂಪೂರ್ಣ ಗುಣ ಆಗಿದೆ, ಆದರೆ ಒಂದಷ್ಟು ಕೊಸರು ಮಾತ್ರ ಉಳಿದುಕೊಂಡಿದೆ!'" (ಎಲ್ಲರೂ ನಗುತ್ತಾರೆ.)

ಮಹಿಮಚರಣ: "ಎಲ್ಲಿ, ಮಹಾಶಯರೆ ಹಾಜರಾನಿಗೆ ಜ್ಞಾನ ದೊರೆತಿರೋದು?"

ಶ್ರೀರಾಮಕೃಷ್ಣರು ನಗುತ್ತ: "ಓ, ಅದೆಲ್ಲ ನಿನಗೆ ಗೊತ್ತಿಲ್ಲ! ಎಲ್ಲರೂ ಹೇಳುತ್ತಾರೆ, 'ಹಾಜರಾ ಒಬ್ಬ ಗಣ್ಯ ವ್ಯಕ್ತಿ. ಆತ ರಾಸಮಣಿಯ ಕಾಳೀದೇವಾಲಯದಲ್ಲಿ ವಾಸವಾಗಿದ್ದಾನೆ' ಅಂತ. ಆತನ ಹೆಸರೇ

ಎಲ್ಲರ ತುಟಿಯ ಮೇಲು. ನನ್ನ ಹೆಸರನ್ನು ಯಾರಾದರು ಎತ್ತುತ್ತಾರೇನು?" (ಎಲ್ಲರೂ ನಗುತ್ತಾರೆ.)

ಹಾಜರಾ: "ನೀವು ನಿರುಪಮರು—ನಿಮ್ಮೊಡನೆ ಹೋಲಿಸಲು ಯಾವ ಉಪಮೆಯೂ ದೊರೆಯೋ ಹಾಗಿಲ್ಲ. ಆದ್ದರಿಂದ ಯಾರಿಗೂ ನಿಮ್ಮನ್ನು ಅರಿತುಕೊಳ್ಳೋಕೆ ಆಗುತ್ತಿಲ್ಲ."

ಶ್ರೀರಾಮಕೃಷ್ಣರು: "ಅಲ್ಲಿ ನೋಡು ನಿನ್ನ ನಿಜಸ್ವರೂಪಾನ! ಹೌದು ನಿರುಪಮ ವಸ್ತು ಯಾವುದಕ್ಕೂ ಬಂದುದಲ್ಲ; ಆದ್ದರಿಂದ ಜನ ನನ್ನ ಹೆಸರು ಏಕೆ ಎತ್ತಬೇಕು?"

ಮಹಿಮಚರಣ: "ಮಹಾಶಯರೆ, ಈತನಿಗೆ ಏನುತಾನೆ ಗೊತ್ತು? ಇನ್ನು ಮುಂದೆ ನೀವು ಹೇಳಿದ ಹಾಗೆ ಕೇಳುತ್ತಾನೆ."

ಶ್ರೀರಾಮಕೃಷ್ಣರು: "ನಿನಗೆ ಗೊತ್ತಿಲ್ಲ ಅದು. ನೀನೇ ಒಂದು ಪ್ರಶ್ನೆ ಹಾಕಿ ನೋಡು. ಈತ ನನಗೆ ಹೇಳಿದ, 'ನಿಮಗೂ ನನಗೂ ಕೊಟ್ಟು ತೆಗೆದುಕೊಳ್ಳುವಂಥದು ಏನೂ ಇಲ್ಲ' ಅಂತ."

ಮಹಿಮಚರಣ: "ಬಹಳವಾಗಿ ತರ್ಕ ಮಾಡುತ್ತಾನೆ."

ಶ್ರೀರಾಮಕೃಷ್ಣರು: "ಆಗಾಗ ಈತ ನನಗೆ ಬುದ್ಧಿ ಕಲಿಸೋಕೆ ಬರುತ್ತಾನೆ. (ಎಲ್ಲರೂ ನಗುತ್ತಿದ್ದಾರೆ.) ಬಹುವಾಗಿ ವಾದಿಸಲು ಮುಂದೆ ಬಂದಾಗ ನಾನು ಕೆಲವು ವೇಳೆ ಈತನನ್ನು ಗದರಿಸುತ್ತೇನೆ. ಬಳಿಕ ನಾನು ಬಹುಶಃ ಸೊಳ್ಳೇಪರದೆಯ ಒಳಗೆ ಮಲಗಿರಬಹುದು. ಆದರೂ ನಾನು ಹೇಳಿದ್ದು ಆತನ ಮನಸ್ಸಿಗೆ ನೋವು ಉಂಟುಮಾಡಿರುವುದೊ ಏನೊ ಎಂದು ದುಃಖಿಸಿ ಪರದೆಯಿಂದ ಹೊರಕ್ಕೆ ಬಂದು ಈತನಿಗೆ ಪ್ರಣಾಮಮಾಡಿ ಹೋಗುತ್ತೇನೆ,—ಆಗ ನನ್ನ ಮನಸ್ಸಿಗೆ ಶಾಂತಿ.

(ಹಾಜರಾನಿಗೆ) "ನೀನು ಶುದ್ಧ ಆತ್ಮವನ್ನ 'ಈಶ್ವರ' ಅಂತ ಕರೆಯುತ್ತೀಯಲ್ಲ ಏಕೆ? ಶುದ್ಧ ಆತ್ಮ ನಿಷ್ಕ್ರಿಯ, ಮೂರು ಅವಸ್ಥೆಗಳಲ್ಲಿಯೂ ಸಾಕ್ಷಿಸ್ವರೂಪನಾಗಿ ಇದ್ದಾನೆ. ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯಗಳ ಭಾವನೆ ಬಂದಾಗ, ನಾನು ಆತನನ್ನ 'ಈಶ್ವರ' ಅಂತ ಕರೆಯುತ್ತೇನೆ. ಶುದ್ಧ ಆತ್ಮವನ್ನ ಯಾವುದಕ್ಕೆ ಹೋಲಿಸಬಹುದು? ಆತ ಸೂಜಿಯಿಂದ ಬಹಳ ದೂರದಲ್ಲಿ ಬಿದ್ದಿರುವ ಸೂಜಿಗಲ್ಲಿನ ಹಾಗೆ. ಸೂಜಿ ಚಲಿಸುತ್ತದೆ, ಆದರೆ ಸೂಜಿಗಲ್ಲು ಸುಮ್ಮನೆ ಬಿದ್ದಿರುತ್ತದೆ—ಯಾವ ಚಲನೆಯೂ ಇಲ್ಲದೆ ಬಿದ್ದಿರುತ್ತದೆ."

ಇನ್ನೇನು ಸಾಯಂಕಾಲವಾಗುವುದರಲ್ಲಿದೆ. ಪರಮಹಂಸರು ಸುಮ್ಮನೆ ಕೊಠಡಿಯಲ್ಲೆ ಅಡ್ಡಾಡುತಿದ್ದಾರೆ. ಮಣಿ ಏನನ್ನೊ ಯೋಚಿಸುತ್ತ ಕುಳಿತಿದ್ದಾನೆ. ಪರಮಹಂಸರು ಇದ್ದಕ್ಕಿದ್ದಹಾಗೆ ಆತನನ್ನು ಸಂಬೋಧಿಸಿ ಸೌಮ್ಯದೃಷ್ಟಿಯಿಂದ ಹೇಳುತ್ತಿದ್ದಾರೆ, "ನನಗೆ ಒಂದೆರಡು ಬಿಳಿ ಬಟ್ಟೆಯ ಷರಟುಗಳನ್ನು ಹೊಲಿಸಿಕೊಡು. ಸಿಕ್ಕಿದವರೆಲ್ಲ ತಂದುಕೊಡುವುದನ್ನು ನಾನು ಉಪಯೋಗಿಸುವುದಕ್ಕೆ ಆಗೋದಿಲ್ಲ ಅಂಬುದು ನಿನಗೆ ಗೊತ್ತೇ ಇದೆ. ಅದಕ್ಕಾಗಿ ಕ್ಯಾಪ್ಟನ್ನನಿಗೆ ಹೇಳಬೇಕೆಂದಿದ್ದೆ. ನೀನೇ ತಂದುಕೊಟ್ಟುಬಿಡು" ಅಂತ. ಮಣಿ ಎದ್ದುನಿಂತುಕೊಂಡು ಹೇಳಿದ, "ಬಹಳ ಒಳ್ಳೆಯದು" ಎಂದು.

ಸಾಯಂಕಾಲವಾಗಿದೆ. ಪರಮಹಂಸರ ಕೊಠಡಿಗೆ ಧೂಪ ಹಾಕಿ ಆಯಿತು. ಅವರು ಎಂದಿನಂತೆ ದೇವದೇವಿಯರ ಪಟಗಳಿಗೆಲ್ಲ ಕೈಮುಗಿದು, ಬೀಜಮಂತ್ರ ಜಪಿಸಿ ನಾಮಸಂಕೀರ್ತನೆ ಮಾಡುತ್ತಿದ್ದಾರೆ. ಕೊಠಡಿಯ ಹೊರಗಿನಿಂದ ಗಂಗೆಯ ಮರ್ಮರ ಧ್ವನಿ, ಕಾಳಿ ವಿಷ್ಣು ಶಿವದೇವಾಲಯಗಳಿಂದ ಸಂಧ್ಯಾರತಿಯ ಗಂಟೆ ಜಾಗಟೆ ಇವೇ ಮೊದಲಾದುವುಗಳ ನಿನಾದ ಕೇಳಿಬರುತ್ತಿದೆ. ಅರ್ಚಕ ಎಡಗೈಯಲ್ಲಿ ಗಂಟೆಯನ್ನು ಬಲಗೈಯಲ್ಲಿ ಪಂಚಾರತಿಯನ್ನು ಹಿಡಿದು ಒಂದು ಶಿವದೇವಾಲಯದಿಂದ ಇನ್ನೊಂದು ಶಿವದೇವಾಲಯಕ್ಕೆ ಹೋಗುತ್ತಿದ್ದುದನ್ನು ಮತ್ತು ಆತನನ್ನು ಇನ್ನೊಬ್ಬ ಜಾಗಟೆಯೊಡನೆ ಹಿಂಬಾಲಿಸುತ್ತಿದ್ದುದನ್ನು ಬಾಗಿಲಿನ ಹತ್ತಿರದಿಂದ ನೋಡಬಹುದಾಗಿತ್ತು. ವಾದ್ಯಶಾಲೆಯಿಂದ ಹೊರಡುತ್ತಿದ್ದ ಸುಮಧುರ ವಾದ್ಯಘೋಷ ಆ ವೇಳೆಗೆ ತಕ್ಕಂತೆ ಮತ್ತು ಭಕ್ತರ ಆಂತರಿಕ ಭಾವನೆಗಳಿಗೆ ಅನುಗುಣವಾಗಿ ಹೊರಡುತ್ತಿದೆ. ಆಗ ಅಲ್ಲಿನ ಜನರೆಲ್ಲ ತಮ್ಮ ದೈನಂದಿನ ಕೆಲಸಕಾರ್ಯಗಳ ಕೋಟಲೆ-ಗೀಟಲೆಗಳನ್ನೆಲ್ಲ ಮರೆತಂತೆ ಕಾಣುತ್ತಿತ್ತು.

ಪರಮಹಂಸರು ತಮ್ಮ ಎಂದಿನ ಆನಂದಮಯಾವಸ್ಥೆಯಲ್ಲಿ ಕೊಠಡಿಯಲ್ಲಿ ಕುಳಿತಿದ್ದಾರೆ. ಈಶಾನ ಕಲ್ಕತ್ತದಿಂದ ಬಂದಿದ್ದಾನೆ. ಭಗವಂತನ ವಿಷಯವಾಗಿ ಮಾತುಕತೆ ನಡೆಯುತ್ತಿದೆ. ಈಶಾನನಿಗೆ ಭಗವಂತನ ಕೃಪಾಕಟಾಕ್ಷದಲ್ಲಿ ಉಜ್ವಲವಾದ ಶ್ರದ್ಧೆ ಇದೆ. ಆತ ಹೇಳುತ್ತಾನೆ, "ಯಾರೇ ಆಗಲಿ ಒಮ್ಮೆ ದುರ್ಗೆಯ ನಾಮವನ್ನು ಜಪಿಸಿ ಮನೆಯನ್ನು ಬಿಟ್ಟು ಹೊರಡುವುದಾದರೆ ಶೂಲಪಾಣಿ ಶೂಲವನ್ನು ಹಸ್ತದಲ್ಲಿ ಹಿಡಿದು ಆತನ ಅಂಗರಕ್ಷಕನಾಗಿ ಹಿಂಬಾಲಿಸುತ್ತಾನೆ. ಆದ್ದರಿಂದ ಯಾವ ವಿಪತ್ತು

ಬಂದರೂ ಭಯಪಡುವುದೇಕೆ? ಆತನೇ ಸ್ವಯಂ ನಮ್ಮನ್ನು ಪಾರುಮಾಡಿ ಸುತ್ತಾನೆ" ಅಂತ.

ಶ್ರೀರಾಮಕೃಷ್ಣರು ಈಶಾನನಿಗೆ: "ನಿನಗೆ ಭಗವಂತನಲ್ಲಿ ಅತಿಶಯವಾದ ವಿಶ್ವಾಸವಿದೆ—ನಮಗೆ ಇನ್ನೂ ಅಷ್ಟೊಂದಾಗಿ ಉಂಟಾಗಿಲ್ಲ. (ಎಲ್ಲರೂ ನಗುತ್ತಾರೆ.) ವಿಶ್ವಾಸದಿಂದಲೇ ಆತನನ್ನು ಪಡೆಯಬಹುದು."

ಈಶಾನ: "ಹೌದು, ನಿಜ."

ಶ್ರೀರಾಮಕೃಷ್ಣರು: "ನೀನು ಜಪ, ಆಹ್ನಿಕ, ಉಪವಾಸ, ಪುರಶ್ಚರಣೆ ಇವೇ ಮೊದಲಾದ ಕರ್ಮಗಳನ್ನು ಮಾಡುತ್ತೀಯೆ. ಇದು ಬಹಳ ಒಳ್ಳೆಯದೆ. ಯಾರಿಗೆ ನಿಜವಾಗಿ ಭಗವಂತನ ಕಡೆ ಮನಸ್ಸು ಹರಿಯುವುದೊ ಅವರ ಮೂಲಕ ಆತ ಈ ವಿಧವಾದ ಕರ್ಮಗಳನ್ನೆಲ್ಲ ಮಾಡಿಸುತ್ತಾನೆ. ಫಲಾಕಾಂಕ್ಷೆ ಇಲ್ಲದೆ ಈ ಕರ್ಮಗಳನ್ನೆಲ್ಲ ಮಾಡಿದರೆ ನಿಶ್ಚಯವಾಗಿಯೂ ಆತನನ್ನು ಪಡೆಯಬಹುದು. ಶಾಸ್ತ್ರ ಈ ವಿಧವಾದ ಅನೇಕ ಕರ್ಮಗಳನ್ನು ಮಾಡುವಂತೆ ಹೇಳಿದೆ—ಅದಕ್ಕಾಗಿ ನೀನು ಮಾಡುತ್ತಿದ್ದೀಯೆ. ಈ ವಿಧವಾದ ಭಕ್ತಿಗೆ 'ವೈಧೀಭಕ್ತಿ' ಅಂತ ಹೆಸರು. ಇನ್ನೊಂದಿದೆ 'ರಾಗ ಭಕ್ತಿ' ಅಂಬೋದು. ಅದು ಅನುರಾಗದಿಂದ ಬರುತ್ತದೆ, ಭಗವಂತನ್ನು ಪ್ರೀತಿಸುವುದರಿಂದ ಬರುತ್ತದೆ. ಉದಾಹರಣೆಗೆ ಪ್ರಹ್ಲಾದನದು. ಆ ಭಕ್ತಿ ಏನಾದರು ಹೃದಯದಲ್ಲಿ ಅಂಕುರವಾದರೆ, ಬಳಿಕ ವೈಧೀಕರ್ಮಗಳ ಆವಶ್ಯಕತೆಯೇನಿರದು."

**೯ನೆ ನೊವೆಂಬರ್ ೧೮೮೪, ಕಾರ್ತಿಕ ಕೃಷ್ಣ ಸಪ್ತಮಿ, ಭಾನುವಾರ.**

ಶ್ರೀರಾಮಕೃಷ್ಣರು ಪೂರ್ವಾಭಿಮುಖರಾಗಿ ಚಿಕ್ಕ ಮಂಚದ ಮೇಲೆ ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದ್ದಾರೆ. ಭಕ್ತರು ನೆಲದಮೇಲೆ ಕುಳಿತಿದ್ದಾರೆ. ಘಂಟೆ ಬಹುಶಃ ಅಪರಾಹ್ನ ಎರಡು. ಮಾಸ್ಟರ್ ಅಲ್ಲಿಗೆ ಬಂದು ನೋಡಿದಾಗ ಇನ್ನೂ ಭಕ್ತರು ಬರುತ್ತಲೇ ಇದ್ದರು. ವಿಜಯಕೃಷ್ಣಗೋಸ್ವಾಮಿಯೊಡನೆ ಕೆಲವು ಮಂದಿ ಬ್ರಾಹ್ಮಭಕ್ತರು ಬಂದಿದ್ದಾರೆ. ಅರ್ಚಕ ರಾಮಚಕ್ರವರ್ತಿಯೂ ಬಂದುಕುಳಿತಿದ್ದಾನೆ. ಕ್ರಮೇಣ ಮಹಿಮ ಚರಣ, ನಾರಾಯಣ, ಕಿಶೋರಿ ಬಂದರು. ಇನ್ನೂ ಸ್ವಲ್ಪ ಹೊತ್ತಾದ ಮೇಲೆ ಇನ್ನೂ ಕೆಲವು ಮಂದಿ ಭಕ್ತರು ಬಂದರು.

ಚಳಿಗಾಲ ಪ್ರಾರಂಭಿಸಿದೆ. ಪರಮಹಂಸರಿಗೆ ಒಂದೆರಡು ಷರಟು ಬೇಕಾಗಿವೆ. ಅವುಗಳಿಗಾಗಿ ಅವರು ಮಾಸ್ಟರಿಗೆ ಹೇಳಿದ್ದರು. ಆತ ಬಿಳಿ ಬಟ್ಟೆಯ ಎರಡು ಷರಟುಗಳನ್ನಲ್ಲದೆ ಒಂದು ವಿಧದ ದಪ್ಪ ಬಟ್ಟೆಯ ಷರಟನ್ನೂ ತಂದಿದ್ದ. ಆದರೆ ಶ್ರೀರಾಮಕೃಷ್ಣರು ಆ ತರದ ಷರಟನ್ನು ತರಲು ಹೇಳಿರಲಿಲ್ಲ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೀನು ಅದನ್ನು ತೆಗೆದುಕೊಂಡು ಹೋಗಿಬಿಡು. ನೀನೇ ಅದನ್ನು ಹಾಕಿಕೊ. ಹಾಗೆ ಮಾಡುವುದರಿಂದ ದೋಷವೇನು ಬರದು. ಒಳ್ಳೇದು, ನಾನು ನಿನಗೆ ಎಂಥ ಷರಟನ್ನು ತೆಗೆದುಕೊಂಡುಬರುವಂತೆ ಹೇಳಿದ್ದೆ?"

ಮಾಸ್ಟರ್: "ತಾವು ಸಾಮಾನ್ಯ ಬಿಳಿ ಬಟ್ಟೆಯ ಷರಟುಗಳನ್ನು ತರಲು ಹೇಳಿದ್ದಿರಿ. ಈ ದಪ್ಪ ಬಟ್ಟೆಯ ಷರಟನ್ನು ತರಲು ಹೇಳಿರಲಿಲ್ಲ."

ಶ್ರೀರಾಮಕೃಷ್ಣರು: "ಹಾಗಾದರೆ ಆ ದಪ್ಪ ಬಟ್ಟೆಯ ಷರಟನ್ನು ಹಿಂದಿರುಗಿ ತೆಗೆದುಕೊಂಡು ಹೋಗಿಬಿಡು. (ವಿಜಯ ಮೊದಲಾದವರಿಗೆ) ನೋಡಿ, ದ್ವಾರಕನಾಥ ನನಗೊಂದು ಶಾಲು ತೆಗೆದುಕೊಟ್ಟ. ಮಾರ್‍ವಾಡಿ ಭಕ್ತರೂ ಒಂದು ಶಾಲನ್ನು ತಂದರು. ನಾನು ಅದನ್ನು ಸ್ವೀಕರಿಸಲಿಲ್ಲ–"

ವಿಜಯ ಮಧ್ಯೆ ಬಾಯಿ ಹಾಕಿ: "ನೀವು ಹಾಗೆ ಮಾಡಿದ್ದು ಸರಿ. ಆವಶ್ಯಕವಾಗಿ ಬೇಕಾಗಿದ್ದರೆ ಮಾತ್ರ ಸ್ವೀಕರಿಸಬೇಕು. ಯಾವನಾದರೂ ಒಬ್ಬ ತಂದುಕೊಡಬೇಕು ತಾನೆ. ಮನುಷ್ಯನಲ್ಲದೆ ಬೇರೆ ಯಾರು ತಂದು ಕೊಡುತ್ತಾರೆ?"

ಶ್ರೀರಾಮಕೃಷ್ಣರು: "ಕೊಡುವವನು ಭಗವಂತನೇ. ಅತ್ತೆ ಸೊಸೆಗೆ ಹೇಳಿದಳು, 'ಮಗೂ, ಎಲ್ಲರಿಗೂ ಸೇವೆ ಮಾಡುವವರಿದ್ದಾರೆ, ನಿನಗೂ ಯಾರಾದರು ಒಬ್ಬ ಸೇವಕಿ ಪಾದ-ಗೀದಗಳನ್ನು ಒತ್ತಲು ಇದ್ದಿದ್ದರೆ ಬಹಳ ಚೆನ್ನಾಗಿರುತ್ತಿತ್ತು' ಅಂತ. ಸೊಸೆ ಹೇಳಿದಳು, 'ತಾಯಿ, ನನ್ನ ಪಾದಗಳನ್ನು ಭಗವಂತನೇ ಒತ್ತುತ್ತಾನೆ, ನನಗೆ ಬೇರೆ ಯಾರೂ ಬೇಕಾಗಿಲ್ಲ' ಅಂತ. ಆಕೆ ಒಳ್ಳೆ ಭಕ್ತಿಮತಿಯಾಗಿದ್ದುದರಿಂದ ಹಾಗೆ ಹೇಳಿದಳು.

"ಒಬ್ಬ ಫಕೀರ ಅಕ್ಬರ್ ಬಾದಶಹನ ಹತ್ತಿರಕ್ಕೆ ಸ್ವಲ್ಪ ಹಣ ಯಾಚಿಸಲು ಹೋಗಿದ್ದ. ಬಾದಶಹ ಆಗ ನಮಾಜು ಮಾಡುತ್ತಿದ್ದ. ಆತ ಆಗ ಪ್ರಾರ್ಥಿಸುತ್ತಿದ್ದ, 'ಹೇ ಖುದಾ, ನನಗೆ ಧನ ಕೊಡು, ದೌಲತ್ತು

ಕೊಡು' ಅಂತ. ಫಕೀರ ಅದನ್ನು ನೋಡಿ, ಎದ್ದು ಹೊರಟುಬರುವುದರಲ್ಲಿದ್ದ. ಆಗ ಅಕ್ಬರ್ ಆತನಿಗೆ ಒಂದು ಸ್ವಲ್ಪ ಕುಳಿತಿರುವಂತೆ ಸಂಜ್ಞೆ ಮಾಡಿದ. ನಮಾಜು ಮುಗಿದನಂತರ ಆತನನ್ನು ಕೇಳಿದ, 'ಏಕೆ ನೀವು ಎದ್ದು ಹೊರಟುಹೋಗುವುದರಲ್ಲಿದ್ದರಲ್ಲ?' ಅಂತ. ಆತ ಉತ್ತರವಿತ್ತ, 'ನೀವೇ ಭಗವಂತನನ್ನು ಧನ ದರ್ಪಾದಿಗಳಿಗಾಗಿ ಪ್ರಾರ್ಥಿಸುತ್ತಿದ್ದಿರಿ; ಅದಕ್ಕಾಗಿ ಯೋಚಿಸದೆ, ಬೇಡಬೇಕಾದರೆ ಭಿಕಾರಿಯನ್ನೇಕೆ—ಖುದಾನನ್ನು ಬೇಡಬೇಕು ಅಂತ' ಎಂದು."

ವಿಜಯ: "ಗಯೆಯಲ್ಲಿ ನಾನು ಒಬ್ಬ ಸಾಧುವನ್ನು ನೋಡಿದೇನೆ. ಆತನಿಗೆ 'ಅಹಂ' ಅಂಬುದು ಇಲ್ಲವೇ ಇಲ್ಲ. ಆತನಿಗೆ ಒಂದು ದಿನ ಭಕ್ತರಿಗೆ ಅನ್ನ ಹಾಕಬೇಕೆಂಬ ಇಚ್ಛೆಯಾಯಿತು. ನೋಡುತ್ತೇವೆ, ಜನ ಎಲ್ಲಿಂದಲೊ ತಾವು ತಾವಾಗಿಯೇ ಗೋಧಿಹಿಟ್ಟು, ತುಪ್ಪ ಇವನ್ನೆಲ್ಲ ತಲೆ ಮೇಲೆ ಹೊತ್ತುಕೊಂಡುಬಂದು ತಂದಿಟ್ಟುಹೋದರು. ಹಾಗೇ ಹಣ್ಣು ಹಂಪಲಗಳೂ ಬಂದು ಸೇರಿದವು."

ಶ್ರೀರಾಮಕೃಷ್ಣರು ವಿಜಯ ಮೊದಲಾದವರಿಗೆ: "ಸಾಧುಗಳಲ್ಲಿ ಮೂರು ಶ್ರೇಣಿ ಸಾಧುಗಳಿದ್ದಾರೆ: ಉತ್ತಮ, ಮಧ್ಯಮ, ಅಧಮ. ಯಾರು ಉತ್ತಮ ಶ್ರೇಣಿ ಸಾಧುಗಳೊ ಅವರು ತಮ್ಮ ಆಹಾರಕ್ಕಾಗಿ ಪ್ರಯತ್ನ ಮಾಡೋದಿಲ್ಲ. ದಂಡಿ-ಗಿಂಡಿ ಸಾಧುಗಳೆಲ್ಲ ಮಧ್ಯಮ ಅಥವಾ ಅಧಮ ಶ್ರೇಣಿಗೆ ಸೇರಿದವರು. ಅವರಲ್ಲಿ ಮಧ್ಯಮ ಶ್ರೇಣಿಗೆ ಸೇರಿದ ಸಾಧುಗಳು 'ನಮೋ ನಾರಾಯಣ' ಅಂತ ಹೇಳಿ ಭಿಕ್ಷೆಬೇಡುತ್ತಾರೆ. ಯಾರು ಅಧಮ ಶ್ರೇಣಿಯವರೊ ಅವರು, ಭಿಕ್ಷೆಕೊಡದಿದ್ದರೆ ಜಗಳಕ್ಕೇ ಬರುತ್ತಾರೆ.

"ಉತ್ತಮ ಶ್ರೇಣಿ ಸಾಧುಗಳದು ಅಜಗರವೃತ್ತಿ. ಕುಳಿತಲ್ಲಿಯೇ ಅವರಿಗೆ ಆಹಾರ ಬಂದೊದಗುತ್ತದೆ. ಅಜಗರ ತನ್ನ ಸ್ಥಳದಿಂದ ಎದ್ದು ಚಲಿಸದು. ಒಬ್ಬ ಎಳೆ ವಯಸ್ಸಿನ ಸಾಧು—ಬಾಲ ಬ್ರಹ್ಮಚಾರಿ, ಭಿಕ್ಷಾಟನೆಗಾಗಿ ಹೋಗಿದ್ದ. ಒಬ್ಬ ಯುವತಿ ತಂದು ಭಿಕ್ಷೆ ಹಾಕಿದಳು. ಆಕೆಯ ವಕ್ಷಸ್ಥಳದಲ್ಲಿದ್ದ ಸ್ತನಗಳನ್ನು ನೋಡಿ, ಆಕೆಯ ಎದೆಯ ಮೇಲೆ ಕುರು ಎದ್ದಿರಬೇಕು ಎಂದು ಭಾವಿಸಿದ. ಅದಕ್ಕಾಗಿ ಆತ ಕೇಳಿದ, 'ಅವು ಏನು?' ಅಂತ. ಮನೆಯ ವಯಸ್ಸಾದ ಹೆಂಗಸರು ಆತನಿಗೆ ವಿವರಿಸಿ ಹೇಳಿದರು, 'ಈಕೆಯ ಗರ್ಭದಲ್ಲಿ ಮುಂದೆ ಮಕ್ಕಳು ಹುಟ್ಟುವುವು ಎಂದು ಭಗವಂತ

ಈಕೆಯ ಸ್ತನಗಳಲ್ಲಿ ಹಾಲು ಕೊಟ್ಟಿದ್ದಾನೆ. ಅದಕ್ಕಾಗಿಯೇ ಭಗವಂತ ಅವುಗಳಿಗೆ ಮೊದಲೇ ವ್ಯವಸ್ಥೆ ಮಾಡಿದ್ದಾನೆ' ಅಂತ. ಈ ಮಾತನ್ನು ಕೇಳಿ ಆ ಯುವಕಸಾಧು ಆಶ್ಚರ್ಯಚಕಿತನಾದ. ಆಗ ಆತ ಹೇಳಿದ, 'ಹಾಗಾದರೆ ನಾನು ಭಿಕ್ಷೆಮಾಡುವ ಆವಶ್ಯಕತೆ ಏನೂ ಇರದು. ನನಗೂ ಭಗವಂತ ವ್ಯವಸ್ಥೆ ಮಾಡಿಯೇ ಇರಬೇಕು' ಎಂದು."

ಅಲ್ಲಿದ್ದ ಭಕ್ತರಲ್ಲಿ ಕೆಲಕೆಲವರು ತಮಗೆ ತಾವೇ, ಹಾಗಾದರೆ ತಾವೂ ಯಾವ ಪ್ರಯತ್ನವನ್ನೂ ಮಾಡದೆ ಇದ್ದರೆ ಆಯಿತಲ್ಲ ಅಂತ ಭಾವಿಸಿದರು.

ಶ್ರೀರಾಮಕೃಷ್ಣರು: "ಆದರೆ ಯಾರಿಗೆ ಪ್ರಯತ್ನ ಆವಶ್ಯಕ ಎಂಬ ಭಾವನೆ ಇರುವುದೊ ಅವರು ಪ್ರಯತ್ನ ಮಾಡಿಯೇ ತೀರಬೇಕು."

ವಿಜಯ: "ಇದರ ಸಂಬಂಧವಾಗಿ ಭಕ್ತಮಾಲೆಯಲ್ಲಿ ಒಂದು ಸೊಗಸಾದ ಕಥೆ ಇದೆ."

ಶ್ರೀರಾಮಕೃಷ್ಣರು: "ನೀನೆ ಹೇಳು ಅದನ್ನ."

ವಿಜಯ: "ದಯವಿಟ್ಟು ನೀವೇ ಹೇಳಿ."

ಶ್ರೀರಾಮಕೃಷ್ಣರು: "ನೀನೇ ಹೇಳು. ನನಗೆ ಸ್ವಲ್ಪ ಮರೆತು ಹೋಗಿದೆ.

"ಮೊದಲು ಮೊದಲು ಇವುಗಳನ್ನೆಲ್ಲ ಕೇಳಬೇಕು. ಅದಕ್ಕಾಗಿಯೆ ಬಹಳ ವರ್ಷಗಳ ಹಿಂದೆ ಇವುಗಳನ್ನೆಲ್ಲ ಕೇಳುತ್ತಿದ್ದೆ. ಈಗ ನನಗೆ ಆ ಅವಸ್ಥೆ ಇಲ್ಲ. ಹನುಮಂತ ಹೇಳಿದ, 'ನನಗೆ ತಿಥಿಯೇ ಆಗಲಿ ನಕ್ಷತ್ರವೇ ಆಗಲಿ ಗೊತ್ತಿಲ್ಲ, ಕೇವಲ ರಾಮಚಿಂತನೆ ಮಾಡುತ್ತಿದ್ದೇನೆ' ಅಂತ.

"ಚಾತಕಪಕ್ಷಿಗೆ ಕುಡಿಯಲು ಮಳೆ ನೀರೇ ಬೇಕು. ಬಾಯಾರಿಕೆಯಿಂದ ಪ್ರಾಣ ಹೋಗುತ್ತಿದ್ದರೂ ಬಾಯಿ ಮೇಲಕ್ಕೆ ತಿರುಗಿಸಿ ಆಕಾಶದಿಂದ ಬೀಳುವ ಮಳೆ ನೀರಿಗಾಗಿಯೇ ಎದುರು ನೋಡುತ್ತಿರುತ್ತದೆ. ಗಂಗೆ ಯಮುನೆ ಮತ್ತು ಏಳು ಸಮುದ್ರಗಳಲ್ಲಿಯೂ ನೀರು ಭರ್ತಿಯಾಗಿದೆ, ಆದರೂ ಅದು ಭೂಮಿಯ ಮೇಲೆ ಶೇಖರವಾಗಿರುವ ನೀರಿನ ಒಂದು ತೊಟ್ಟನ್ನೂ ಮುಟ್ಟದು.

"ರಾಮಲಕ್ಷ್ಮಣರು ಪಂಪಾ ಸರೋವರಕ್ಕೆ ಹೋಗಿದ್ದರು. ಅಲ್ಲಿ ಒಂದು ಕಾಗೆ ಆತುರದಿಂದ ಮತ್ತೆ ಮತ್ತೆ ನೀರು ಕುಡಿಯಲು ಆ ಸರೋವರದ ದಡದ ಹತ್ತಿರ ಹೋಗುತ್ತ ನೀರನ್ನು ಮಾತ್ರ ಕುಡಿಯದೆ ಹಿಂದಿರುಗುತ್ತಿರುವುದನ್ನು ಲಕ್ಷ್ಮಣ ನೋಡಿದ. ಆತ ರಾಮನನ್ನು ಕಾರಣ ಕೇಳ

ಳಾಗಿ ರಾಮ ಹೇಳಿದ, 'ಸಹೋದರ, ಈ ಕಾಗೆ ಪರಮ ಭಕ್ತ ಕಾಗೆ. ಅಹರ್ನಿಶಿ ಇದು ರಾಮನಾಮವನ್ನು ಜಪಿಸುತ್ತಿದೆ. ನೀರಡಿಕೆಯಿಂದ ಇದರ ಗಂಟಲು ಒಣಗಿ ಬತ್ತಿಹೋಗುತ್ತಿದೆ, ಆದರೂ ಅದಕ್ಕೆ ನೀರು ಕುಡಿಯಲು ಆಗುತ್ತಿಲ್ಲ. ಅದು ಯೋಚಿಸುತ್ತಿದೆ, ನೀರು ಕುಡಿಯಲು ಹೋದರೆ ಆ ಸಮಯದಲ್ಲಿ ರಾಮನಾಮಜಪ ನಿಂತುಹೋಗುವದಲ್ಲ ಏನುಮಾಡುವುದು ಅಂತ' ಎಂದು.

"ಒಂದು ಪೂರ್ಣಿಮೆಯ ರಾತ್ರಿ ನಾನು ಹಲಧಾರಿಯನ್ನು ಕೇಳಿದೆ, 'ಅಣ್ಣಾ, ಇವೊತ್ತು ಅಮಾವಾಸ್ಯೆಯೇನು?' ಅಂತ. (ಎಲ್ಲರೂ ನಗುತ್ತಾರೆ.)

(ನಗುತ್ತ) "ಹೌದು, ಇದು ಸತ್ಯ. ಕೇಳಿದ್ದೇನೆ, 'ಅಮಾವಾಸ್ಯೆ ಮತ್ತು ಪೂರ್ಣಿಮೆ ಯಾವಾಗ ವ್ಯಕ್ತಿಗೆ ಅದಲುಬದಲಾಗಿ ತೋರುತ್ತದೆಯೊ ಆಗ ಆತನಿಗೆ ಪೂರ್ಣಜ್ಞಾನ ದೊರೆತಿದೆ' ಅಂತ. ಹಲಧಾರಿ ಅದನ್ನು ಏಕೆ ತಾನೆ ನಂಬಿಯಾನು? ಆತ ಹೇಳಿದ, 'ಇದು ನಿಜವಾಗಿಯೂ ಕಲಿಗಾಲವೇ! ಯಾರಿಗೆ ಅಮಾವಾಸ್ಯೆಗು ಪೂರ್ಣಿಮೆಗು ವ್ಯತ್ಯಾಸ ಗೊತ್ತಾಗದೊ ಅಂಥ ಇವರನ್ನು ಜನ ಗೌರವಿಸುತ್ತಾ ಇರೋದು!' ಅಂತ."

ಮಹಿಮಚರಣ ಕೊಠಡಿಯನ್ನು ಪ್ರವೇಶಿಸಿದನು.

ಶ್ರೀರಾಮಕೃಷ್ಣರು ಸಂಭ್ರಮದಿಂದ: "ಬನ್ನಿ ಬನ್ನಿ, ಕುಳಿತುಕೊಳ್ಳಿ.

(ವಿಜಯ ಮೊದಲಾದವರಿಗೆ) "ಈಗಿನ ಅವಸ್ಥೆಯಲ್ಲಿ ನನಗೆ ತಿಥಿ ವಾರ ನಕ್ಷತ್ರ ಇವು ಜ್ಞಾಪಕದಲ್ಲಿರೋದಿಲ್ಲ. ಅಂದು ವೇಣೀಪಾಲನ ಉದ್ಯಾನವನದಲ್ಲಿ ಮಹೋತ್ಸವ;— ದಿನ ಯಾವುದು ಅಂಬುದೇ ಮರೆತು ಹೋಯಿತು. ಇಂಥ ದಿವಸ ಸಂಕ್ರಮಣ, ಹೆಚ್ಚಾಗಿ ಭಗವನ್ನಾಮ ಸಂಕೀರ್ತನೆಮಾಡಬೇಕು ಎಂಬ ಈ ವಿಧವಾದ ಸಂಕಲ್ಪನೆಗಳು ಮರೆತೇ ಹೋಗುತ್ತವೆ."

ಪರಮಹಂಸರು ಸ್ವಲ್ಪಹೊತ್ತು ಹಾಗೆ ಏನನ್ನೊ ಯೋಚಿಸುತ್ತ ಕುಳಿತಿದ್ದರು.

ಶ್ರೀರಾಮಕೃಷ್ಣರು: "ಆದರೆ ಯಾರಾದರು ನನ್ನನ್ನು ಇಂಥ ಸಮಯದಲ್ಲಿ ಬಂದು ಕಾಣುತ್ತೇನೆ ಅಂತ ಹೇಳಿದ್ದರೆ ಅದು ಮಾತ್ರ ಜ್ಞಾಪಕದಲ್ಲಿ ಇರುತ್ತದೆ.

"ಭಗವಂತನ ಕಡೆಗೆ ಮನಸ್ಸಿನ ಹದಿನಾರಾಣೆ ಭಾಗವೂ ಹರಿದು ಹೋಗುತ್ತಿದ್ದರೆ ಈ ಅವಸ್ಥೆ ಬರುತ್ತದೆ. ರಾಮ ಹನುಮಂತನನ್ನು ಕೇಳಿದ, 'ಹನುಮಂತ, ನೀನು [ಲಂಕೆಯಿಂದ] ಸೀತೆಯ ಸಂದೇಶವನ್ನು ತಂದಿದ್ದೀಯೆ; ಆಕೆ ಯಾವ ರೀತಿಯಾಗಿ ಇದ್ದುಕೊಂಡಿದ್ದಾಳೆ ಎಂಬುದನ್ನು ನನಗೆ ತಿಳಿಸು' ಅಂತ. ಹನುಮಂತ ಹೇಳಿದ, 'ಹೇ ರಾಮ, ಸೀತೆಯ ಬರೀ ಸ್ಥೂಲ ಶರೀರ ಅಲ್ಲಿ ಬಿದ್ದಿರುವುದನ್ನು ಕಂಡೆ; ಅದರೊಳಗೆ ಪ್ರಾಣವೂ ಇಲ್ಲ ಮನಸ್ಸೂ ಇಲ್ಲ. ಆಕೆ ತನ್ನ ಪ್ರಾಣ ಮನಸ್ಸನ್ನು ನಿಮ ಪಾದಪದ್ಮಗಳಿಗೆ ಅರ್ಪಿಸಿಬಿಟ್ಟಿದ್ದಾಳೆ. ಅದಕ್ಕಾಗಿ ಬರೀ ಸ್ಥೂಲ ಶರೀರ ಮಾತ್ರ ಅಲ್ಲಿ ಬಿದ್ದಿದೆ. ಯಮ ಅದರ ಹತ್ತಿರ ಸುಳಿದಾಡುತ್ತಿದ್ದಾನೆ. ಆತ ಏನು ತಾನೆ ಮಾಡಿಯಾನು? ಅಲ್ಲಿ ಬಿದ್ದಿರುವುದು ಬರೀ ಸ್ಥೂಲ ಶರೀರ ಮಾತ್ರ; ಮನಸ್ಸು ಪ್ರಾಣ ಅದರಲ್ಲಿ ಇಲ್ಲ' ಅಂತ.

"ನೀವು ಯಾರ ಚಿಂತನೆ ಮಾಡುತ್ತೀರೊ ನಿಮಗೆ ಅವರ ಸತ್ತ್ವ ಬಂದುಬಿಡುತ್ತದೆ. ಹಗಲು ಇರುಳು ಭಗವಂತನ ಚಿಂತನೆ ಮಾಡುತ್ತಿದ್ದರೆ ಭಗವಂತನ ಸತ್ತ್ವ ನಿಮಗೆ ಬಂದುಬಿಡುತ್ತದೆ. ಉಪ್ಪಿನ ಗೊಂಬೆ ಸಮುದ್ರ ಅಳೆಯಲು ಹೋಗಿ ಸಮುದ್ರವೇ ಆಗಿಬಿಟ್ಟಿತು. ಗ್ರಂಥಗಳ ಅಥವಾ ಶಾಸ್ತ್ರಗಳ ಉದ್ದೇಶವೇನು? ಭಗವಂತನ ಸಾಕ್ಷಾತ್ಕಾರ ದೊರಕಿಸಿಕೊಡೋದು. ಯಾರೊ ಒಬ್ಬ ವ್ಯಕ್ತಿ ಒಬ್ಬ ಸಾಧುವಿನ ಪುಸ್ತಕ ತೆಗೆದು ನೋಡಿದ. ಅದರ ಪ್ರತಿಯೊಂದು ಹಾಳೆಯಲ್ಲಿಯೂ ಕೇವಲ 'ರಾಮ, ರಾಮ' ಅಂತ ಬರೆದಿತ್ತು; ಬೇರೆ ಏನೂ ಬರೆದಿರಲಿಲ್ಲ.

"ಭಗವಂತನಲ್ಲಿ ಅನುರಾಗ ಉಂಟಾದರೆ ಸಾಮಾನ್ಯ ಘಟನೆಯಿಂದಲೇ ಭಕ್ತಿ ಉದ್ದೀಪನೆಯಾಗಿಬಿಡುತ್ತದೆ. ಆಗ ಒಂದು ಸಲ ರಾಮ ನಾಮ ಜಪಿಸಿದರೆ ಅದಕ್ಕೆ ಒಂದು ಕೋಟಿ ಸಂಧ್ಯಾವಂದನೆಗಳ ಫಲ ದೊರೆತುಬಿಡುತ್ತದೆ. ಮೇಘವನ್ನು ನೋಡಿದೊಡನೆಯೆ ನವಿಲಿಗೆ ರಾಗದುದ್ದೀಪನೆಯಾಗಿಬಿಡುತ್ತದೆ, ಆನಂದದಿಂದ ಪುಕ್ಕವನ್ನು ಕೆದರಿ ನಲಿಯುತ್ತದೆ. ಶ್ರೀಮತಿ (ರಾಧೆ) ಗೂ ಹಾಗೇ ಆಗುತ್ತಿತ್ತು. ಮೇಘವನ್ನು ನೋಡಿದೊಡನೆಯೆ ಆಕೆಗೆ ಕೃಷ್ಣನ ನೆನಪು ಬಂದುಬಿಡುತ್ತಿತ್ತು.

"ಚೈತನ್ಯದೇವ ಒಮ್ಮೆ ಒಂದು ಹಳ್ಳಿಯ ಹತ್ತಿರ ಹೋಗುತ್ತಿದ್ದ. ಆ ಹಳ್ಳಿಯ ಮಣ್ಣಿನಿಂದ ಮೃದಂಗ ತಯಾರಾಗುತ್ತದೆ ಎಂಬುದಾಗಿ ಯಾರೋ ಆತನಿಗೆ ಹೇಳಿದರು. ಒಡನೆಯೆ ಭಾವೋನ್ಮತ್ತನಾಗಿಬಿಟ್ಟ,—

ಏಕೆಂದರೆ ಹರಿನಾಮ ಸಂಕೀರ್ತನೆಯ ಸಮಯದಲ್ಲಿ ಮೃದಂಗವನ್ನು ಬಾಜಿಸುತ್ತಾರೆ.

"ಯಾರಿಗೆ ಭಗವದ್ಭಾವನೆಯು ಉದ್ದೀಪನೆಯಾಗುತ್ತದೆ? ವಿಷಯಾತ್ಮಿಕಾಬುದ್ಧಿಯನ್ನು ತ್ಯಜಿಸಿರತಕ್ಕವರಿಗೆ. ಯಾರ ವಿಷಯರಸ ಬತ್ತಿಹೋಗಿರುವುದೊ ಅವರಿಗೆ ಒಂದು ಸ್ವಲ್ಪದರಿಂದಲೆ ಭಗವದ್ಭಾವನೆಯು ಉದ್ದೀಪನೆಯಾಗಿಬಿಡುತ್ತದೆ. ಬೆಂಕೀಕಡ್ಡಿ ಒದ್ದೆಯಾಗಿದರೆ ಒಂದು ಸಾವಿರ ಸಲ ಗೀಚಿದರೂ ಅದು ಹತ್ತದು; ಆದರೆ ಒಣಗಿದ್ದರೆ ಒಂದು ಸ್ವಲ್ಪ ಗೀಚಿದರೇ ಸಾಕು 'ಧಗ್' ಎಂದು ಹತ್ತಿಕೊಂಡುಬಿಡುತ್ತದೆ.

"ದೇಹದ ಸುಖದುಃಖವಂತು ಇದ್ದೇ ಇದೆ. ಯಾರಿಗೆ ಭಗವಂತನ ಸಾಕ್ಷಾತ್ಕಾರ ಆಗಿದೆಯೊ ಅವರು ಮನಸ್ಸು ಪ್ರಾಣ ದೇಹ ಆತ್ಮ ಎಲ್ಲವನ್ನೂ ಆತನಿಗೆ ಅರ್ಪಿಸಿಬಿಟ್ಟಿರುತ್ತಾರೆ. ರಾಮಲಕ್ಷ್ಮಣರು ಪಂಪಾ ಸರೋವರಕ್ಕೆ ಸ್ನಾನಮಾಡಲು ಹೋದಾಗ ಅವರು ದಡದಲ್ಲಿ ತಮ್ಮ ಧನುಸ್ಸುಗಳನ್ನು ನೆಟ್ಟುಹೋದರು. ಸ್ನಾನಾನಂತರ ಲಕ್ಷ್ಮಣ ಧನುಸ್ಸುಗಳನ್ನು ಕೈಯಲ್ಲಿ ತೆಗೆದು ನೋಡುತ್ತಾನೆ ಅವುಗಳ ಮೊನೆ ರಕ್ತಮಯವಾಗಿದೆ. ಆಗ ರಾಮ ಲಕ್ಷ್ಮಣನಿಗೆ ಹೇಳಿದ, 'ಸಹೋದರ, ನೋಡು ನೋಡು! ಬಹುಶಃ ಯಾವುದೊ ಒಂದು ಪ್ರಾಣಿಗೆ ನಾವು ಗಾಯ ಮಾಡಿರಬೇಕು' ಅಂತ. ಲಕ್ಷ್ಮಣ ಆ ಸ್ಥಳವನ್ನು ಅಗೆದು ನೋಡಿದಾಗ ಅದು ಒಂದು ಗೂಳಿ ಕಪ್ಪೆ ಆಗಿತ್ತು. ಅದು ಇನ್ನೇನು ಸಾಯುವುದರಲ್ಲಿತ್ತು. ಆಗ ರಾಮ ಕರುಣಾಜನಕ ಕಂಠದಿಂದ ಕಪ್ಪೆಗೆ ಹೇಳಿದ, 'ಏಕೆ ನೀನು ಕೂಗಿಕೊಳ್ಳಲಿಲ್ಲ, ನಿನ್ನನ್ನು ಸರ್ಪ ಹಿಡಿದಾಗ ಮಾತ್ರ ನೀನು ಬಹುವಾಗಿ ಕೂಗಿಕೊಳ್ಳುತ್ತೀಯಲ್ಲ' ಅಂತ. ಅದಕ್ಕೆ ಆ ಕಪ್ಪೆ ಹೇಳಿತು, 'ಹೇ ರಾಮ, ಹಾವು ನನ್ನನ್ನು ಹಿಡಿದಾಗ, "ಹೇ ರಾಮ ನನ್ನನ್ನು ರಕ್ಷಿಸು! ಹೇ ರಾಮ ನನ್ನನ್ನು ರಕ್ಷಿಸು!" ಅಂತ ಕೂಗಿಕೊಳ್ಳುತ್ತೇನೆ. ಈಗ ನೋಡಿದರೆ ರಾಮನೇ ನನ್ನನ್ನು ಕೊಲ್ಲುತ್ತಿದ್ದಾನೆ; ಅದಕ್ಕಾಗಿ ಸುಮ್ಮನೆ ಇದ್ದುಬಿಟ್ಟೆ' ಎಂದು."

ಶ್ರೀರಾಮಕೃಷ್ಣರು ಮಹಿಮ ಮೊದಲಾದವರ ಕಡೆ ದೃಷ್ಟಿಹಾಕುತ್ತ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಮಹಿಮಚರಣನಿಗೆ ಗುರುವಿನ ಉಪದೇಶದಲ್ಲಿ ವಿಶ್ವಾಸವಿಲ್ಲ ಎಂಬುದನ್ನು ಕೇಳಿದ್ದರು. ಮತ್ತೆ ಅವರು ಮಾತನಾಡಲಾರಂಭಿಸಿದ್ದಾರೆ.

ಶ್ರೀರಾಮಕೃಷ್ಣರು: "ಗುರುವಾಕ್ಯದಲ್ಲಿ ಶ್ರದ್ಧೆ ಇಡುವುದು

ಉಚಿತ. ಗುರುವಿನ ಚಾರಿತ್ರ್ಯದ ಕಡೆ ಗಮನವೀಯಬೇಕಾಗಿಲ್ಲ. 'ನನ್ನ ಗುರು ಹೆಂಡದಂಗಡಿಗೆ ಹೋಗುತ್ತಿದ್ದರೂ, ತಥಾಪಿ ಆತ ನಿತ್ಯಾನಂದ ರಾಯ.'

"ಒಬ್ಬ ಚಂಡಿ, ಭಾಗವತ ಇವುಗಳ ಪ್ರವಚನಮಾಡುತ್ತಿದ್ದ. ಆತ ಒಮ್ಮೆ ಹೇಳಿದ, 'ಪೊರಕೆಯೇನೊ ಕೊಳಕಾದ್ದೆ, ಆದರೆ ಅದು ಮಲಿನ ಸ್ಥಳಗಳನ್ನು ಚೊಕ್ಕಟಮಾಡುತ್ತದೆ' ಅಂತ."

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಸ್ವಸ್ವರೂಪವನ್ನು ಅರಿಯಬೇಕೆಂಬುದೇ ಜ್ಞಾನಿಗಳ ಉದ್ದೇಶ. ಇದಕ್ಕೇ 'ಜ್ಞಾನ' ಎಂದು ಹೆಸರು, ಇದಕ್ಕೇ 'ಮುಕ್ತಿ' ಅಂತ ಹೆಸರು. ನಮ್ಮ ನಿಜ ಸ್ವರೂಪವೇ ಪರಮಬ್ರಹ್ಮ ಸ್ವರೂಪ. ನಾನು ಮತ್ತು ಪರಮಬ್ರಹ್ಮ ಒಂದೇ ಒಂದು ವಸ್ತು. ಮಾಯೆಯ ದೆಸೆಯಿಂದ ಅದು ಗೊತ್ತಾಗುತ್ತಿಲ್ಲ.

"ನಾನು ಹರೀಶನಿಗೆ ಹೇಳಿದೆ, 'ಇನ್ನೇನು ಇಲ್ಲ,— ಚಿನ್ನದ ಮೇಲೆ ಒಂದು ಕೆಲವು ಕುಕ್ಕೆ ಮಣ್ಣು ಬಿದ್ದಿದೆ, ಅದನ್ನು ತೆಗೆದುಹಾಕಿಬಿಡೋದೆ ಉಳಿದುಕೊಂಡಿರೋದು' ಅಂತ.

"ಭಕ್ತರು 'ಅಹಂ' ಅಂಬುದನ್ನು ಇಟ್ಟುಕೊಳ್ಳುತ್ತಾರೆ, ಜ್ಞಾನಿಗಳು ಇಟ್ಟುಕೊಳ್ಳುವುದಿಲ್ಲ. ಹೇಗೆ ಸ್ವಸ್ವರೂಪದಲ್ಲಿ ನೆಲಸಿರಬಹುದು ಎಂಬುದರ ವಿಷಯವಾಗಿ ನ್ಯಾಂಕ್ಟ ನನಗೆ ಉಪದೇಶ ಕೊಡುತ್ತಿದ್ದ: 'ಮನಸ್ಸನ್ನು ಬುದ್ಧಿಯಲ್ಲಿ ಲಯಮಾಡು, ಬುದ್ಧಿಯನ್ನು ಆತ್ಮದಲ್ಲಿ ಲಯಮಾಡು; ಆಗ ಸ್ವಸ್ವರೂಪದಲ್ಲಿ ನೆಲಸಬಲ್ಲೆ' ಅಂತ.

"ಆದರೆ 'ಅಹಂ' ಅಂಬುದು ಉಳಿದೇ ಉಳಿದುಕೊಳ್ಳುತ್ತದೆ; ಹೋಗಲೊಲ್ಲದು. ಒಂದು ಅನಂತ ಜಲರಾಶಿಯನ್ನು ಭಾವಿಸಿಕೊಳ್ಳಿ: ಮೇಲೆ ಕೆಳಗೆ, ಮುಂದೆ ಹಿಂದೆ, ಎಡಕ್ಕೆ ಬಲಕ್ಕೆ ಎಲ್ಲೆಲ್ಲಿಯೂ ನೀರಿನಿಂದ ತುಂಬಿದೆ. ಆ ಜಲರಾಶಿಯಲ್ಲಿ ನೀರಿನಿಂದ ತುಂಬಿದ ಕೊಡವೊಂದಿದೆ ಎಂದು ಭಾವಿಸಿಕೊಳ್ಳಿ. ಅದರ ಒಳಗೂ ನೀರಿರುವುದು, ಅದರ ಹೊರಗೂ ನೀರಿರುವುದು; ಆದರೂ 'ಕೊಡ' ಅಂಬುದು ಇದ್ದೇ ಇದೆ. 'ಅಹಂ' ಅಂಬುದೇ ಆ ಕೊಡ.

"ಜ್ಞಾನ ಪಡೆದನಂತರವೂ ಜ್ಞಾನಿಯ ಶರೀರ ಎಂದಿನಂತೆ ಉಳಿದು ಕೊಳ್ಳುತ್ತದೆ. ಆದರೆ ಜ್ಞಾನಾಗ್ನಿಯಲ್ಲಿ ಕಾಮಾದಿ ರಿಪುಗಳು ದಗ್ಧವಾಗಿ ಹೋಗಿರುತ್ತವೆ. ಅನೇಕ ದಿವಸಗಳ ಹಿಂದೆ ಬಹಳ ಬಿರುಮಳೆ ಬಂದು

ಕಾಳೀದೇವಾಲಯಕ್ಕೆ ಸಿಡಿಲು ಬಡಿಯಿತು. ನಾವೆಲ್ಲರೂ ಹೋಗಿ ನೋಡಿದೆವು. ಬಾಗಿಲುಗಳಿಗೆ ಯಾವ ಅಪಾಯವೂ ಆಗಿರಲಿಲ್ಲ; ಆದರೆ ಸ್ಕ್ರೂಮೊಳೆಗಳ ತಲೆಗಳೆಲ್ಲಾ ಹಾರಿಹೋಗಿದ್ದುವು. ಬಾಗಿಲುಗಳೇ ಶರೀರ, ಕಾಮಾದಿ ಆಸಕ್ತಿಗಳೇ ಸ್ಕ್ರೂಮೊಳೆಗಳು.

"ಜ್ಞಾನಿಗೆ ಕೇವಲ ಭಗವಂತನ ಭಾವನೆಗಳೇ ರುಚಿಸುತ್ತವೆ. ವಿಷಯ ವಸ್ತುಗಳ ಮಾತುಕತೆ ಆತನ ಮನಸ್ಸಿಗೆ ಬಹಳವಾಗಿ ಕಷ್ಟವನ್ನುಂಟು ಮಾಡುತ್ತವೆ. ವಿಷಯಾಸಕ್ತರು ಬೇರೆ ಗುಂಪಿಗೆ ಸೇರಿದವರು. ಅವರ ಅವಿದ್ಯೆಯ ರುಮಾಲು ಇನ್ನೂ ಕಳಚಿಬಿದ್ದಿಲ್ಲ. ಅದಕ್ಕಾಗಿಯೆ ಅವರು ಅಲ್ಲಿ ಇಲ್ಲಿ ಸುತ್ತಿ ಮತ್ತೆ ಮತ್ತೆ ವಿಷಯ ವಸ್ತುಗಳ ಮಾತುಗಳನ್ನೇ ಎತ್ತುತ್ತಾರೆ.

"ವೇದದಲ್ಲಿ 'ಸಪ್ತ ಭೂಮಿಕೆಯ' ವಿಷಯ ಇದೆ. ಜ್ಞಾನಿಯ ಮನಸ್ಸು ಐದನೆಯ ಭೂಮಿಕೆಗೆ ಹತ್ತಿದಾಗ, ಆತ ಭಗವದ್ವಿಷಯ ಹೊರತು ಬೇರೆ ಏನನ್ನೂ ಕೇಳಲೂ ಆರ ಅಥವಾ ಮಾತನಾಡಲೂ ಆರ. ಆಗ ಆತನ ಬಾಯಿಂದ ಕೇವಲ ಜ್ಞಾನೋಪದೇಶಗಳೇ ಹೊರ ಹೊರಡುತ್ತವೆ.

"ವೇದದಲ್ಲಿ ಸಚ್ಚಿದಾನಂದ ಬ್ರಹ್ಮನ ವಿಷಯ ಇದೆ. ಬ್ರಹ್ಮ ಒಂದೂ ಅಲ್ಲ ಎರಡೂ ಅಲ್ಲ; ಒಂದೂ ಎರಡರ ಮಧ್ಯೆ. ಆತನನ್ನು ಅಸ್ತಿ ಎಂಬುದಾಗಿಯೂ ಹೇಳಲಾಗೋದಿಲ್ಲ, ನಾಸ್ತಿ ಎಂಬುದಾಗಿಯೂ ಹೇಳಲಾಗೋದಿಲ್ಲ; ಆತ ಅಸ್ತಿನಾಸ್ತಿಗಳ ಮಧ್ಯೆ.

"ರಾಗಭಕ್ತಿ ಉಂಟಾದರೆ, ಅಂದರೆ ಭಗವಂತನಲ್ಲಿ ಪ್ರೀತಿ ಉಂಟಾದರೆ ಆಗ ಆತನನ್ನು ಪಡೆಯಬಹುದು. ವೈಧೀಭಕ್ತಿ ಎಷ್ಟು ಬೇಗ ಉತ್ಪನ್ನವಾಗುತ್ತದೆಯೊ ಅಷ್ಟೇ ಬೇಗ ಹೊರಟುಹೋಗುತ್ತದೆ. ಇಷ್ಟೊಂದು ಜಪಮಾಡಬೇಕು, ಇಷ್ಟೊಂದು ಧ್ಯಾನಮಾಡಬೇಕು, ಇಂಥಿಂಥ ಉಪಚಾರಗಳಿಂದ ಪೂಜೆಮಾಡಬೇಕು, ಪೂಜೆಯ ಸಮಯದಲ್ಲಿ ಇಂಥಿಂಥ ಮಂತ್ರಹೇಳಬೇಕು ಇವುಗಳಿಗೆಲ್ಲ 'ವೈಧೀಭಕ್ತಿ,' ಅಂತ ಹೆಸರು. ಇದು ಬರುವುದಕ್ಕೂ ತಡವಿಲ್ಲ ಹೋಗುವುದಕ್ಕೂ ತಡವಿಲ್ಲ. ಅನೇಕರು ಹೇಳುತ್ತಾರೆ, 'ಅಣ್ಣಂದಿರಾ, ನಾವು ಎಷ್ಟುಕಾಲ ಹವಿಷ್ಯಾನ್ನ ತಿಂದೆವು ಏನು ಕತೆ! ಎಷ್ಟೊಂದು ಸಲ ಮನೆಯಲ್ಲಿ ಪೂಜೆ ನಡೆಸಿದೆವು ಏನು ಕತೆ! ಆದರೆ ಕೊನೆಗೆ ನಮಗೆ ಏನು ತಾನೆ ದೊರೆಯಿತು?' ಅಂತ. ಆದರೆ

ರಾಗಭಕ್ತಿಯಿಂದ ವಿಮುಖವಾಗುವಂತೇ ಇಲ್ಲ. ಯಾರಿಗೆ ರಾಗಭಕ್ತಿ ಉಂಟಾಗುತ್ತದೆ ಅಂಬುದು ಗೊತ್ತೇನು? ಯಾರು ಪೂರ್ವಜನ್ಮಗಳಲ್ಲಿ ಬಹಳವಾಗಿ ಸಾಧನೆ ಮಾಡಿದ್ದಾರೊ ಅಥವಾ ಯಾರು ನಿತ್ಯಸಿದ್ಧರೊ ಅವರಿಗೆ. ಉದಾಹರಣೆಗಾಗಿ ಪಾಳುಬಿದ್ದಿರುವ ಮನೆಯನ್ನು ತೆಗೆದು ಕೊಳ್ಳಿ. ಅದರಲ್ಲಿ ಬೆಳೆದಿರುವ ಗಿಡಗೆಂಡೆಗಳನ್ನು ಮತ್ತು ಕಸಕಡ್ಡಿ ಗಳನ್ನು ತೆಗೆಯುವಾಗ ಪೈಪು ಹಾಕಿರುವ ಒಂದು ಚಿಲುಮೆಯನ್ನು ಕಂಡಂತೆ. ಅದು ಮಣ್ಣು ಮತ್ತು ಇಟ್ಟಿಗೆ ಚೂರುಗಳಿಂದ ಮುಚ್ಚಿ ಹೋಗಿದ್ದಿತು. ಅವುಗಳನ್ನು ತೆಗೆದ ಒಡನೆಯೆ ನೀರು 'ಜಳ, ಜಳ' ಅಂತ ಉಕ್ಕಿಬರಲಾರಂಭಿಸುತ್ತದೆ.

"ಯಾರಿಗೆ ರಾಗಭಕ್ತಿ ಉಂಟಾಗಿದೆಯೊ ಅವರು ಎಂದಿಗೂ ಹೇಳರು, 'ಅಣ್ಣಂದಿರಾ, ಎಷ್ಟೊಂದು ಹವಿಷ್ಯಾನ್ನ ತಿಂದೆವು ಏನು ಕತೆ! ಆದರೆ ದೊರೆತುದೇನು?' ಅಂತ. ಯಾರು ಹೊಸದಾಗಿ ಆರಂಬಗೆಲಸ ಮಾಡುತ್ತಾರೊ ಅವರು ಬೆಳೆ ನಷ್ಟವಾದರೆ ಆರಂಬಗೆಲಸವನ್ನೇ ಬಿಟ್ಟು ಬಿಡುತ್ತಾರೆ. ಆದರೆ ಯಾರು ವಂಶಪಾರಂಪರ್ಯದಿಂದ ಆರಂಬಗೆಲಸ ಮಾಡಿಬಂದಿದ್ದಾರೊ, ಅವರು ಬೆಳೆ ಆದರೂ ಸರಿಯೆ ಹೋದರೂ ಸರಿಯೆ ಆರಂಬಗೆಲಸವನ್ನು ಮಾತ್ರ ಎಂದಿಗೂ ಬಿಡರು. ಅವರ ತಂದೆ, ತಾತ ಎಲ್ಲಾ ವ್ಯವಸಾಯ ಮಾಡಿಕೊಂಡು ಬಂದಿದಾರೆ; ಅವರಿಗೆ ಗೊತ್ತಿದೆ ವ್ಯವ ಸಾಯಮಾಡೇ ತಿನ್ನಬೇಕು ಅಂತ.

"ಯಾರಿಗೆ ರಾಗಭಕ್ತಿ ಉಂಟಾಗಿರುತ್ತದೆಯೊ ಅವರೇ ಆತನ ನಿಜ ವಾದ ಭಕ್ತರು. ಭಗವಂತ ಅವರ ಭಾರವನ್ನು ಹೊತ್ತುಕೊಳ್ಳುತ್ತಾನೆ. ಆಸ್ಪತ್ರೆಗೆ ಹೋಗಿ ದಾಖಲಾದರೆ—ಗುಣವಾಗುವವರೆಗೆ ಡಾಕ್ಟರ್ ಬಿಟ್ಟು ಕೊಡೋದಿಲ್ಲ. ಭಗವಂತ ಯಾರ ಕೈಯನ್ನು ಹಿಡಿದಿರುವನೊ ಅವರು ಯಾವುದಕ್ಕೂ ಭಯಪಡಬೇಕಾಗಿಲ್ಲ. ಯಾವ ಮಗು ಗದ್ದೆ ತೆವರಿಯ ಮೇಲೆ ನಡೆಯುವಾಗ ತಂದೆಯ ಕೈಯನ್ನು ಹಿಡಿದು ನಡೆಯುತ್ತಿರುವುದೊ ಅದು — ಬೇರೆ ಕಡೆ ಮನಸ್ಸಿಟ್ಟು ತಂದೆಯ ಕೈ ಬಿಟ್ಟರೆ — ಬಿದ್ದರೂ ಬೀಳ ಬಹುದು. ಆದರೆ ತಂದೆ ಮಗುವಿನ ಕೈಯ ಹಿಡಿದಿದ್ದರೆ ಅದು ಬೀಳುವ ಸಂಭವವೇ ಇಲ್ಲ.

"ವಿಶ್ವಾಸದಿಂದ ಏನು ತಾನೇ ಸಾಧ್ಯವಿಲ್ಲ? ಯಾರು ನಿಜವಾದ

ಭಕ್ತರೊ ಅವರಿಗೆ ಎಲ್ಲದರಲ್ಲಿಯೂ ವಿಶ್ವಾಸ; — ಸಾಕಾರ, ನಿರಾಕಾರ, ರಾಮ, ಕೃಷ್ಣ, ಭಗವತಿ.

"ಒಮ್ಮೆ ಕಾಮಾರಪುಕುರಕ್ಕೆ ಹೋಗುತ್ತಿರುವಾಗ ಬಿರುಗಾಳಿ ಮಳೆ ಬಂತು. ಆಗ ಹುಲ್ಲುಗಾವಲಿನ ಮಧ್ಯೆ ಹೋಗುತ್ತಿದ್ದೆ. ಅಲ್ಲಿ ಹಗಲು ಗಳ್ಳರ ಭಯ. ಆಗ ಎಲ್ಲರ ಹೆಸರನ್ನೂ ಹೇಳಲಾರಂಭಿಸಿದೆ: ರಾಮ, ಕೃಷ್ಣ, ಭಗವತಿ. ಹನುಮಂತನ ಹೆಸರನ್ನೂ ಹೇಳಿದೆ. ಒಳ್ಳೇದು, ನಾನು ಎಲ್ಲರ ಹೆಸರನ್ನೂ ಹೇಳಿದೆ— ಇದರ ಇಂಗಿತವೇನು? ಇಲ್ಲಿ ಕೇಳಿ; ಚಾಕರನೆ ಆಗಲಿ ದಾಸಿಯೆ ಆಗಲಿ ಸಂತೆ ಖರ್ಚಿಗೆ ದುಡ್ಡು ತೆಗೆದುಕೊಳ್ಳುವಾಗ ಹೀಗೆ ಹೇಳಿ ಹೇಳಿ ತೆಗೆದುಕೊಳ್ಳುತ್ತಾರೆ: 'ಇದು ಆಲೂಗೆಡ್ಡೆಯ ದುಡ್ಡು, ಇದು ಬದನೆಕಾಯಿ ದುಡ್ಡು' ಅಂತ. ಪ್ರತಿಯೊಂದರ ದುಡ್ಡನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಎಣಿಸಿ ಬಳಿಕ ಎಲ್ಲವನ್ನೂ ಒಟ್ಟಿಗೆ ಸೇರಿಸಿಕೊಂಡು ಬಿಡುತ್ತಾರೆ.

"ಭಗವಂತನ ಮೇಲೆ ಪ್ರೀತಿ ಉಂಟಾದರೆ, ಕೇವಲ ಆತನ ಸಂಬಂಧವಾಗಿಯೇ ಮಾತುಕತೆಯಾಡಲು ಇಚ್ಛೆಯಾಗುತ್ತದೆ. ಯಾರು ಯಾರನ್ನು ಪ್ರೀತಿಸುತ್ತಾರೊ ಅವರು ಅವರ ವಿಷಯವಾಗಿ ಕೇಳಲು ಮತ್ತು ಮಾತನಾಡಲು ಇಚ್ಛಿಸುತ್ತಾರೆ. ಸಂಸಾರಿಗಳು ತಮ್ಮ ಮಕ್ಕಳ ಸಂಬಂಧವಾಗಿ ಮಾತನಾಡುವಾಗ ಅವರ ಬಾಯಿಂದ ನೀರು ಊರುವುದನ್ನು ನೋಡಬಹುದು. ಯಾರಾದರು ತನ್ನ ಮಗನನ್ನು ಹೊಗಳಿದರಂತು ಒಡನೆಯೇ ಸಂಸಾರಿ ಮಗುವಿಗೆ ಹೇಳುತ್ತಾನೆ, 'ಮಗು, ನಿಮ್ಮ ಚಿಕ್ಕಪ್ಪ ನಿಗೆ ಕೈಕಾಲು ತೊಳೆಯಲು ನೀರು ತೆಗೆದುಕೊಂಡು ಬಾ' ಅಂತ.

"ಯಾರಿಗೆ ಪಾರಿವಾಳವನ್ನು ಕಂಡರೆ ಬಲು ಪ್ರೀತಿಯೊ ಅವರ ಮುಂದೆ ಅದನ್ನು ಹೊಗಳಿದರೆ ಅವರಿಗೆ ಅತ್ಯಂತ ಆನಂದ. ಯಾರಾದರು ಅದನ್ನು ನಿಂದಿಸಿದರೆ ಆಗ ಅವರು ರೇಗಿಹೇಳುತ್ತಾರೆ, 'ನಿಮ್ಮ ತಂದೆಯೇ ಆಗಲಿ ಅಥವಾ ನಿಮ್ಮ ವಂಶದ ಹದಿನಾಲ್ಕು ತಲೆಗಳಲ್ಲಿ ಯಾರಾದರೂ ಒಬ್ಬರು ಪಾರಿವಾಳವನ್ನು ಸಾಕಿದ್ದರೆ ತಾನೆ' ಅಂತ."

ಮಹಿಮಚರಣ ಸಂಸಾರಿ. ಆದ್ದರಿಂದ ಪರಮಹಂಸರು ಸಂಸಾರದ ವಿಷಯವಾಗಿ ಆತನೊಡನೆ ಮಾತನಾಡಲು ಆರಂಭಿಸಿದ್ದಾರೆ.

ಶ್ರೀರಾಮಕೃಷ್ಣರು: "ಸಂಸಾರವನ್ನು ಒಮ್ಮೆಗೆಯೆ ತ್ಯಾಗಮಾಡಿ ಬಿಡುವುದರ ಆವಶ್ಯಕತೆಯೇನಿದೆ? ಆಸಕ್ತಿ ಹೋಯಿತು ಅಂದರೆಯೇ

ಮುಗಿಯಿತು. ಆದರೆ ಸಾಧನೆ ಆವಶ್ಯಕ; ಇಂದ್ರಿಯಗಳೊಡನೆ ಯುದ್ಧ ಮಾಡಲೇ ಬೇಕು.

"ಕೋಟೆಯೊಳಗಿನಿಂದ ಯುದ್ಧ ಮಾಡುವುದರಲ್ಲಿ ಹೆಚ್ಚು ಅನುಕೂಲ;—ಕೋಟೆ ಬಹಳವಾಗಿ ಸಹಾಯನೀಡುತ್ತದೆ. ಸಂಸಾರ ಭೋಗಾಲಯ; ಒಂದೊಂದನ್ನಾಗಿ ಅನುಭೋಗಿಸಿ ಅವನ್ನು ಒಡೊಡನೆಯೇ ತ್ಯಜಿಸಿಬಿಡಬೇಕು. ಒಮ್ಮೆ ಚಿನ್ನದ ಉಡಿದಾರ ಹಾಕಿಕೊಳ್ಳಬೇಕೆಂಬ ಇಚ್ಛೆಯಾಯಿತು. ಕೊನೆಗೆ ಅದು ದೊರೆಯಿತು; ಕಟ್ಟಿಕೊಂಡೆ; ಆದರೆ ಕಟ್ಟಿದೊಡನೆಯೇ ತೆಗೆಯಬೇಕಾಗಿ ಬಂದಿತು.

"ಒಮ್ಮೆ ನಾನು ಈರುಳ್ಳಿಯನ್ನು ತಿಂದೆ. ತಿನ್ನುವಾಗ ವಿಚಾರ ಮಾಡಿದೆ, 'ಹೇ ಮನಸ್ಸೆ, ಇದೇ ಈರುಳ್ಳಿ ಅಂಬುದು' ಅಂತ. ಬಳಿಕ ಅದನ್ನು ಬಾಯೊಳಗೆ ಒಮ್ಮೆ ಈ ಕಡೆಗೆ, ಒಮ್ಮೆ ಆ ಕಡೆಗೆ, ಹಾಗೆ ಎಲ್ಲಾ ಕಡೆಗೂ ಒತ್ತರಿಸಿ ಕೊನೆಗೆ ಉಗುಳಿಬಿಟ್ಟೆ."

ಇಂದು ಇಲ್ಲಿಗೆ ಒಬ್ಬ ಗಾಯಕ ಬರುವ ಸಂಭವ. ಆತ ತನ್ನ ಮಂಡಲಿಯೊಡಗೂಡಿ ಹಾಡುತ್ತಾನೆ. ಪರಮಹಂಸರು ಆಗಾಗ ಭಕ್ತರನ್ನು ಕೇಳುತ್ತಲೇ ಇದ್ದರು, "ಎಲ್ಲಿ ಸಂಗೀತಗಾರ? ಎಲ್ಲಿ ಸಂಗೀತಗಾರ?" ಅಂತ.

ಮಹಿಮಚರಣ: "ಈಗ ನಡೆದುಕೊಂಡುಹೋಗುತ್ತಿರುವುದೇ ಬಹಳ ಚೆನ್ನಾಗಿದೆ."

ಶ್ರೀರಾಮಕೃಷರು: "ಅದು ಹಾಗಲ್ಲ, ವರ್ಷಾದ್ಯಂತವೂ ನಮ್ಮದು ನಡೆದುಕೊಂಡು ಹೋಗುತ್ತಲೇ ಇರುತ್ತದೆ."

ಹೊರಗೆ ಇದ್ದವನೊಬ್ಬ ಹೇಳಿದ, "ಗಾಯಕ ಬಂದ, ಗಾಯಕ ಬಂದ" ಅಂತ.

ಶ್ರೀರಾಮಕೃಷ್ಣರು ಆನಂದದಿಂದ ತುಂಬಿತುಳುಕಾಡುತ್ತ, "ಹಾ! ಬಂದನೆ?" ಅಂದರು. ಪರಮಹಂಸರ ಕೊಠಡಿಯ ಆಗ್ನೇಯ ದಿಕ್ಕಿನ ಉದ್ದವಾದ ವರಾಂಡದಲ್ಲಿ ಮಂದಲಿಗೆ ಹಾಸಿದೆ. ಶ್ರೀರಾಮಕೃಷ್ಣರು ಹೇಳುತ್ತಿದ್ದಾರೆ, 'ಮಂದಲಿಗೆಗಳ ಮೇಲೆ ಸ್ವಲ್ಪ ಗಂಗಾಜಲ ಚಿಮುಕಿಸಿ, ಅವುಗಳ ಮೇಲೆ ಅನೇಕ ವಿಷಯಾಸಕ್ತರು ಕುಳಿತುಕೊಂಡಿದ್ದರು" ಅಂತ.

ಬಾಲಿಯ ಸಿವಾಸಿ ಪ್ಯಾರೀಬಾಬುವಿನ ಮನೆಯ ಹೆಂಗಸರು ಕಾಳಿಯ ದರ್ಶನಕ್ಕಾಗಿ ಅಲ್ಲಿಗೆ ಬಂದಿದ್ದಾರೆ. ಕೀರ್ತನೆಯ ವ್ಯವಸ್ಥೆ ಆಗುತ್ತಿರು

ವುದನ್ನು ನೋಡಿ ಅವರಿಗೂ ಕೇಳಲಿಚ್ಛೆಯಾಯಿತು. ಒಬ್ಬ ಬಂದು ಪರಮಹಂಸರನ್ನು ಕೇಳಿದ, "ಅವರು ಕೇಳುತ್ತಿದ್ದಾರೆ, 'ಕೊಠಡಿಯಲ್ಲಿ ಜಾಗವಿರುವುದೆ, ತಾವು ಬಂದು ಅಲ್ಲಿ ಕುಳಿತುಕೊಳ್ಳಬಹುದೆ?' ಅಂತ" ಎಂದು. ಪರಮಹಂಸರು ಕೀರ್ತನೆ ಕೇಳುತ್ತ ಕೇಳುತ್ತ ಇದ್ದಹಾಗೆಯೇ ಹೇಳಿದರು, "ಇಲ್ಲ, ಇಲ್ಲ! ಜಾಗವೆಲ್ಲಿದೆ?" ಅಂತ.

ನಾರಾಯಣ ಆ ಸಮಯಕ್ಕೆ ಸರಿಯಾಗಿ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಪರಮಹಂಸರು ಪ್ರೇಮ ದೃಷ್ಟಿಯಿಂದ ಹೇಳಿದರು, "ನೀನು ಏಕೆ ಇಲ್ಲಿಗೆ ಬಂದೆ? ನಿನ್ನ ಮನೆಯವರು ನಿನ್ನನ್ನು ಆಗಲೆ ಬಹಳವಾಗಿ ಹೊಡೆದಿದ್ದಾರೆ!" ಅಂತ. ನಾರಾಯಣ ತಮ್ಮ ಕೊಠಡಿಯ ಕಡೆ ಹೋಗುತ್ತಿರುವುದನ್ನು ನೋಡಿ ಪರಮಹಂಸರು ಬಾಬುರಾಮನಿಗೆ ಸಂಜ್ಞೆ ಮಾಡಿದರು, "ಆತನಿಗೆ ಏನಾದರು ತಿನ್ನಲು ಕೊಡು" ಅಂತ. ನಾರಾಯಣ ಪರಮಹಂಸರ ಕೊಠಡಿಗೆ ಹೋದ. ಪರಮಹಂಸರು ಇದ್ದಕ್ಕಿದ್ದಹಾಗೆ ತಾವೂ ಎದ್ದು ಅಲ್ಲಿಗೆ ಬಂದರು. ಅವರು ತಮ್ಮ ಕೈಯಿಂದಲೇ ಆತನಿಗೆ ತಿನ್ನಿಸಲಾರಂಭಿಸಿದರು. ಆತ ತಿಂದುಮುಗಿಸಿದ ನಂತರ ಮತ್ತೆ ಕೀರ್ತನೆ ಕೇಳಲು ಬಂದರು.

ಅಲ್ಲಿಗೆ ಅನೇಕ ಭಕ್ತರು ಬಂದಿದ್ದಾರೆ, ವಿಜಯಗೋಸ್ವಾಮಿ, ಮಹಿಮ ಚರಣ, ಮಾಸ್ಟರ್, ಚಿಕ್ಕ ಗೋಪಾಲ ಇವರೇಮೊದಲಾದವರು ಬಂದಿದ್ದಾರೆ. ನಾರಾಯಣ ಬಂದು ಪರಮಹಂಸರ ಪಕ್ಕದಲ್ಲಿ ಕುಳಿತುಕೊಂಡ.

ಮೂರು ಘಂಟೆಯ ಹೊತ್ತಿಗೆ ಅಧರಸೇನ ಬಂದ. ಆತನನ್ನು ಕಂಡೊಡನೆಯೆ ಪರಮಹಂಸರು ಸಂಭ್ರಮಭರಿತರಾದರು. ಆತ ಪರಮ ಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ. ತಮ್ಮ ಹತ್ತಿರ ಬಂದು ಕುಳಿತುಕೊಳ್ಳುವಂತೆ ಪರಮಹಂಸರು ಆತನಿಗೆ ಸನ್ನೆಮಾಡಿದರು.

ಗಾಯಕ ಹಾಡಿ ಮುಗಿಸಿದ. ಎಲ್ಲರೂ ಎದ್ದುಹೊರಟರು. ಕೆಲವರು ಉದ್ಯಾನವನದಲ್ಲಿ ಅಡ್ಡಾಡುತ್ತಿದ್ದಾರೆ, ಇನ್ನು ಕೆಲವರು ಕಾಳಿಯ ಮತ್ತು ರಾಧಾಕಾಂತ ದೇವಾಲಯಗಳಲ್ಲಿ ಮಂಗಳಾರತಿ ನೋಡಲು ಹೋದರು.

ಸಾಯಂಕಾಲವಾದಮೇಲೆ ಮತ್ತೆ ಭಕ್ತರೆಲ್ಲ ಪರಮಹಂಸರ ಕೊಠ ಡಿಗೆ ಬಂದಿದ್ದಾರೆ. ಪರಮಹಂಸರ ಕೊಠಡಿಯಲ್ಲಿ ಕೀರ್ತನೆಯನ್ನು ಮತ್ತೆ ನಡೆಸುವ ವ್ಯವಸ್ಥೆ ಆಗುತ್ತಿದೆ. ಪರಮಹಂಸರಿಗೆ ಬಹಳ ಉತ್ಸಾಹ. ಹೇಳುತ್ತಿದ್ದಾರೆ, "ಈ ಕಡೆಗೂ ಒಂದು ದೀಪ ಹಚ್ಚಿ" ಅಂತ. ಕೊಠಡಿ

ಯಲ್ಲಿ ಎರಡು ದೀಪಗಳನ್ನು ಹಚ್ಚಿ ಇಟ್ಟಿದ್ದರಿಂದ ಕೊಠಡಿ ಚೆನ್ನಾಗಿ ಪ್ರಕಾಶವಾಗಿದೆ.

ಪರಮಹಂಸರು ವಿಜಯನಿಗೆ ಹೇಳಿದರು, "ನೀನು ಹೋಗಿ ಆ ಸ್ಥಳದಲ್ಲಿ ಏಕೆ ಕುಳಿತೆ? ಈ ಕಡೆ ಎದ್ದು ಬಂದುಬಿಡು" ಅಂತ. ಈ ಸಲದ ಕೀರ್ತನೆ ಬಹಳ ಚೆನ್ನಾಗಿ ಕಳೆಕಟ್ಟಿಬಿಟ್ಟಿತು. ಪರಮಹಂಸರು ಭಾವೋದ್ರೇಕಗೊಂಡು ನರ್ತಿಸುತ್ತಿದ್ದಾರೆ. ಭಕ್ತರು ಅವರನ್ನು ಸುತ್ತುಗಟ್ಟಿ ನರ್ತಿಸುತ್ತಿದ್ದಾರೆ. ವಿಜಯ ನರ್ತಿಸುತ್ತ ನರ್ತಿಸುತ್ತ ದಿಗಂಬರನಾಗಿಬಿಟ್ಟಿದ್ದಾನೆ. ಆತನಿಗೆ ಬಾಹ್ಯ ಪ್ರಜ್ಞೆಯೇ ಇಲ್ಲ.

ಕೀರ್ತನೆ ಮುಗಿದನಂತರ ವಿಜಯ ತನ್ನ ಬೀಗದಕೈಗಾಗಿ ಹುಡುಕುತ್ತಿದ್ದಾನೆ. ಅದು ನರ್ತಿಸುವಾಗ ಎಲ್ಲೋ ಬಿದ್ದುಹೋಗಿಬಿಟ್ಟಿದೆ. ಪರಮಹಂಸರು ಹೇಳುತ್ತಿದ್ದಾರೆ, "ಅದಕ್ಕಾಗಿ ಮತ್ತೆ ಏಕೆ ಪೇಚಾಡಬೇಕು" ಅಂತ. ಹೀಗೆಂದು ಹೇಳಿ ನಗುತ್ತಿದ್ದಾರೆ. ವಿಜಯನಿಗೆ ಮತ್ತೆ ಹೇಳುತ್ತಿದ್ದಾರೆ, "ಅವೆಲ್ಲ ಮತ್ತೇಕೆ?" ಅಂತ. (ಅಂದರೆ, ಬೀಗ-ಗೀಗದ ಕೈಗಳ ತಂಟೆ ಮತ್ತೆ ಆತನಿಗೆ ಏಕೆ? ಎಂದು.)

ಕಿಶೋರಿ ಪರಮಹಂಸರಿಗೆ ಪ್ರಣಾಮಮಾಡಿ ಇನ್ನೇನು ಹೊರಡುವುದರಲ್ಲಿದ್ದಾನೆ. ಪರಮಹಂಸರು ಆತನ ಎದೆಯನ್ನು ಸವರಿ ಆಶೀರ್ವಾದ ಮಾಡಿ ಹೇಳಿದರು, "ಮತ್ತೆ ಬಾ" ಅಂತ. ಆ ಮಾತುಗಳು ಕರುಣಾರಸದಿಂದ ತೊಯ್ದುಹೋಗಿದ್ದುವು. ಬಳಿಕ ಮಣಿ ಮತ್ತು ಗೋಪಾಲ ಪರಮಹಂಸರಿಗೆ ಪ್ರಣಾಮಮಾಡಿದರು. ಅವರೂ ಹೊರಡುವುದರಲ್ಲಿದ್ದರು. ಅದೇ ಪ್ರೇಮಪೂರಿತ ಹೃದಯದಿಂದ ಮಧು ತೊಟ್ಟಿಕ್ಕುತ್ತಾ ಇದೆಯೊ ಏನೊ ಎಂಬ ರೀತಿಯಲ್ಲಿ ಅವರಿಗೆ ಹೇಳಿದರು, "ನೀವು ನಾಳೆ ಬೆಳಗ್ಗೆ ಎದ್ದು ಹೋಗಿ, ಇಲ್ಲದಿದ್ದರೆ ಶೀತಕ್ಕೆ ಸಿಗಬೇಕಾಗುತ್ತದೆ" ಅಂತ.

ಮಣಿ ಮತ್ತು ಗೋಪಾಲ ಮನೆಗೆ ಹೋಗುವುದು ನಿಂತುಹೋಯಿತು. ಅವರು ಇಂದಿನ ರಾತ್ರಿ ಇಲ್ಲೇ ಇರುತ್ತಾರೆ. ಅವರು ಮತ್ತು ಇನ್ನೂ ಒಬ್ಬಿಬ್ಬರು ಭಕ್ತರು ನೆಲದ ಮೇಲೆ ಕುಳಿತಿದ್ದಾರೆ.

ಪರಮಹಂಸರಿಗೆ ಇಡೀ ದಿನವೆಲ್ಲ ವಿಶ್ರಾಂತಿಯೇ ದೊರಕಲಿಲ್ಲ; ಭಕ್ತರು ಅವರ ಸುತ್ತ ನೆರೆದುಕೊಂಡೇ ಇದ್ದರು. ಈಗ ಬಹಿರ್ದೇಶಕ್ಕೆ ಹೋಗುತ್ತಿದ್ದಾರೆ. ಮತ್ತೆ ಕೊಠಡಿಗೆ ಹಿಂದಿರುಗಿ ಬಂದು ನೋಡಿದಾಗ

ಮಣಿ ರಾಮಲಾಲನ ಕೈಯಲ್ಲಿ ಹೇಳಿಸಿಕೊಂಡು ಒಂದು ಹಾಡು ಬರೆದು ಕೊಳ್ಳುತ್ತಿದ್ದಾನೆ.

ಶ್ರೀರಾಮಕೃಷ್ಣರು: "ಏನು ಬರೆಯುತ್ತಿದ್ದೀಯೆ?"

ಮಣಿ ತಾನು ಒಂದು ಹಾಡನ್ನು ಬರೆದುಕೊಳ್ಳುತ್ತಿರುವುದಾಗಿ ಹೇಳಿದ. ಆ ಹಾಡು ಯಾವುದು ಎಂಬುದನ್ನು ಕೇಳಿ ಶ್ರೀರಾಮಕೃಷ್ಣರು ಹೇಳಿದರು, "ಅದು ಒಂದು ದೊಡ್ಡ ಹಾಡು" ಅಂತ. ಮಣಿ ಆ ಹಾಡಿನ ಒಂದೆರಡು ಚರಣಗಳನ್ನು ಮಾತ್ರವೇ ಬರೆದು ಮುಂದಕ್ಕೆ ಬರೆಯುವುದನ್ನು ನಿಲ್ಲಿಸಿದ. ಈಗ ಪರಮಹಂಸರು ನೆಲದಮೇಲೆ ಹಾಕಿದ್ದ ಒಂದು ಆಸನ ದಲ್ಲಿ ಕುಳಿತು ಸ್ವಲ್ಪ ರವೆ ಪಾಯಸ ಮತ್ತು ಒಂದೆರಡು ಪೂರಿಗಳನ್ನು ತಿನ್ನುತ್ತಿದ್ದಾರೆ. ಅವರ ಪಕ್ಕದಲ್ಲಿ ಒಂದು ಪೀಠದ ಮೇಲೆ ದೀಪವೊಂದು ಉರಿಯುತ್ತಿದೆ. ಮಾಸ್ಟರ್ ಪರಮಹಂಸರ ಹತ್ತಿರ ಕುಳಿತಿದ್ದಾನೆ. ಪರಮಹಂಸರು ಹೇಳಿದರು, "ಕೊಠಡಿಯಲ್ಲಿ ಏನಾದರು ಸಿಹಿ-ಗಿಹಿ ತಿಂಡಿ ಇದೆಯೆ ನೋಡು" ಅಂತ. ಮಾಸ್ಟರ್ ಹೊಸಬೆಲ್ಲದ ಸಂದೇಶ (ಸಿಹಿ ತಿಂಡಿ) ತಂದು ಬಡುವಿನ ಮೇಲೆ ಇಟ್ಟಿದ್ದ. ಮಾಸ್ಟರ್ ಅಲ್ಲಿಗೆ ಹೋಗಿ ನೋಡಿದಾಗ ಅದು ಅಲ್ಲಿ ಇರಲಿಲ್ಲ. ಅದನ್ನು ನೋಡಿ ಮಾಸ್ಟರಿಗೆ ತುಂಬ ವ್ಯಥೆಯಾಯಿತು. ಅವುಗಳನ್ನು ಯಾರೊ ಭಕ್ತ-ಗಿಕ್ತರಿಗೆ ಕೊಟ್ಟು ಬಿಟ್ಟಿರಬೇಕು.

ರಾತ್ರಿಯ ಆಹಾರವನ್ನು ಸ್ವೀಕರಿಸಿದನಂತರ ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದ್ದಾರೆ. ಮಾಸ್ಟರ್ ಆ ಮಂಚದ ಹತ್ತಿರವೇ ಇದ್ದ ಫುಟ್‌ರಗ್ಗಿನ ಮೇಲೆ ಕುಳಿತಿದ್ದಾನೆ. ಪರಮಹಂಸರು ನಾರಾಯಣನ ಮಾತು ಎತ್ತಿ ಭಾವಸ್ಥರಾಗುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಇಂದು ನಾರಾ'ಣನನ್ನು ನೋಡಿದೆ."

ಮಾಸ್ಟರ್: "ಹೌದು, ನಾನೂ ನೋಡಿದೆ. ಆತನ ಕಣ್ಣು ಒದ್ದೆ ಯಾಗಿದ್ದಿತು. ಆತನ ಮುಖ ನೋಡಿ ನನಗೆ ಅಳುವಂತೆ ಆಯಿತು."

ಶ್ರೀರಾಮಕೃಷ್ಣರು: "ಆತನನ್ನು ನೋಡಿದರೆ ನನ್ನಲ್ಲಿ ವಾತ್ಸಲ್ಯ ಭಾವ ಹುಟ್ಟುತ್ತದೆ. ಇಲ್ಲಿಗೆ ಬರುತ್ತಾನಲ್ಲ ಅಂತ ಆತನನ್ನು ಮನೆ ಯಲ್ಲಿ ಚಚ್ಚುತ್ತಾರೆ. ಆತನನ್ನು ಕಾಪಿಡತಕ್ಕವರು ಅಲ್ಲಿ ಯಾರೂ ಇಲ್ಲ."

ಮಾಸ್ಟರ್ ನಗುತ್ತ: "ಅಂದು ಆತ ಹರಿಪದನ ಮನೆಯಲ್ಲಿ ಪುಸ್ತಕ ಇಟ್ಟು, ಇಲ್ಲಿಗೆ ಓಡಿಬಂದ."

ಶ್ರೀರಾಮಕೃಷ್ಣ: "ಹಾಗೆ ಮಾಡಿದ್ದು ಸರಿಯಲ್ಲ."

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಮತ್ತೆ ಮಾತನಾಡಲಾರಂಭಿಸಿದರು.

ಶ್ರೀರಾಮಕೃಷ್ಣರು: "ನೋಡು, ಆತನಲ್ಲಿ ವಿಶೇಷ ಸತ್ತ್ವವಿದೆ. ಅದು ಹಾಗಿಲ್ಲದೆ ಇದ್ದರೆ ನಾನು ಕೀರ್ತನೆ ಕೇಳುತ್ತಿದ್ದರೂ ನನ್ನನ್ನು ಆತ ಆಕರ್ಷಿಸಲು ಸಾಧ್ಯವಾಗುತ್ತಿತ್ತೆ? ನಾನು ಕೀರ್ತನೆ ಕೇಳುವುದನ್ನು ಬಿಟ್ಟು ಕೊಠಡಿಗೆ ಬರಬೇಕಾಗಿ ಬಂದುಬಿಟ್ಟಿತು. ಕೀರ್ತನೆಯನ್ನು ಬಿಟ್ಟು ಬರೋದು — ಇದು ಎಂದೂ ಹಿಂದೆ ನಡೆದುದಲ್ಲ."

ಪರಮಹಂಸರು ಮತ್ತೆ ಮೌನವಾಗಿ ಕುಳಿತರು. ಸ್ವಲ್ಪ ಹೊತ್ತಾದ ನಂತರ ಮತ್ತೆ ಮಾತನಾಡಲು ಆರಂಭಿಸಿದರು.

ಶ್ರೀರಾಮಕೃಷ್ಣರು: "ಒಮ್ಮೆ ಭಾವಾವಸ್ಥೆಯಲ್ಲಿ ಆತನನ್ನು, 'ಹೇಗಿದ್ದೀಯೆ?' ಅಂತ ಕೇಳಿದೆ. ಆತ ಒಂದೇ ಮಾತಿನಲ್ಲಿ ಉತ್ತರವಿತ್ತ, 'ನಾನು ಆನಂದದಿಂದ ಇದ್ದೇನೆ' ಅಂತ. (ಮಣಿಗೆ) ನೀನು ಏನನ್ನಾದರು ಕಿಂಚಿತ್ ಆಗಾಗ ಕೊಂಡುಕೊಂಡುಬಂದು ಆತನಿಗೆ ತಿನ್ನಿಸು — ವಾತ್ಸಲ್ಯ ಭಾವದಿಂದ ತಿನ್ನಿಸು."

ಪರಮಹಂಸರು ತೇಜಚಂದ್ರನ ಮಾತು ಎತ್ತಿದರು.

ಶ್ರೀರಾಮಕೃಷ್ಣರು ಮಣಿಗೆ: "ನನ್ನ ವಿಷಯವಾಗಿ ಆತ ಏನು ಹೇಳುತ್ತಾನೆ ಎಂಬುದನ್ನು ಆತನನ್ನು ಒಮ್ಮೆ ಕೇಳಿ ನೋಡು; ಜ್ಞಾನಿ ಅಂತಾನೊ, ಅಥವಾ ಬೇರೆ ಏನಾದರು ಹೇಳ್ತಾನೊ? ಕೇಳಿದ್ದೇನೆ, 'ಆತ ಅತ್ಯಂತ ಮಿತಭಾಷಿ' ಅಂತ. (ಗೋಪಾಲನಿಗೆ) ನೋಡು, ತೇಜಚಂದ್ರನಿಗೆ ಶನಿವಾರ ಮತ್ತು ಮಂಗಳವಾರ ಇಲ್ಲಿಗೆ ಬರುವಂತೆ ಹೇಳು. (ಮಣಿಗೆ) ಒಳ್ಳೆಯದು, ಒಮ್ಮೆ ನಾನು ನಿನ್ನ ಸ್ಕೂಲಿಗೇ ಬಂದು ನೋಡಿದರೆ —"

ಪರಮಹಂಸರು ನಾರಾಯಣನನ್ನು ನೋಡಲು ಸ್ಕೂಲಿಗೇ ಬರಲು ಇಚ್ಛಿಸಿದಾರಲ್ಲ! ಆಶ್ಚರ್ಯ — ಅಂತ ಮಾಸ್ಟರ್ ಭಾವಿಸಿದ. ಆತ ಪರಮಹಂಸರಿಗೆ ಹೇಳಿದ, "ನೀವು ಬಂದು ನಮ್ಮ ಮನೆಯಲ್ಲಿ ಕುಳಿತುಕೊಂಡಿದ್ದರೇ ಸಾಕು" ಅಂತ.

ಶ್ರೀರಾಮಕೃಷ್ಣರು: "ಅದಕ್ಕಲ್ಲ; ಬೇರೊಂದು ಉದ್ದೇಶವಿದೆ. ಅದು ಏನು ಎಂಬುದು ಗೊತ್ತೆ? ಬೇರೆ ಯಾರಾದರು ಒಳ್ಳೇ ಪ್ರವೃತ್ತಿಯುಳ್ಳ ಹುಡುಗರು ಇದಾರೆಯೆ ಅಂಬುದನ್ನು ಒಮ್ಮೆ ನೋಡಲೋಸುಗ."

ಮಾಸ್ಟರ್: "ಆವಶ್ಯಕವಾಗಿ ಬನ್ನಿ. ಬೇರೆಯವರು ಸ್ಕೂಲು ನೋಡುವುದಕ್ಕೆ ಅಲ್ಲಿಗೆ ಬರುತ್ತಾರೆ. ಹಾಗೆ ನೀವೂ ಅಲ್ಲಿಗೆ ಬಂದರಾಯಿತು."

ಪರಮಹಂಸರು ಹುಕ್ಕ ಸೇದುತ್ತಿದ್ದಾರೆ. ಮಣಿ ಮತ್ತು ಗೋಪಾಲ ತಮ್ಮ ರಾತ್ರಿ ಊಟವನ್ನು ಮುಗಿಸಿದರು. ಇವರಿಬ್ಬರು ವಾದ್ಯಶಾಲೆಯಲ್ಲಿ ಮಲಗಿಕೊಳ್ಳಲು ಯೋಚಿಸಿದ್ದಾರೆ. ಮಣಿ ಮತ್ತೆ ಶ್ರೀರಾಮಕೃಷ್ಣರ ಹತ್ತಿರ ಫುಟ್‌ರಗ್ಗಿನ ಮೇಲೆ ಕುಳಿತುಕೊಂಡ.

ಶ್ರೀರಾಮಕೃಷ್ಣರು ಮಣಿಗೆ: "ವಾದ್ಯಶಾಲೆಯಲ್ಲಿ ಕೆಲವು ಮಡಕೆ ಕುಡಿಕೆಗಳಿರಬಹುದು. ಇಲ್ಲೆ, ಈ ಕೊಠಡಿಯಲ್ಲೆ ಏಕೆ ಮಲಗಬಾರದು?"

ಮಣಿ: "ಆಗಲಿ, ಬಹಳ ಆನಂದ."

ರಾತ್ರಿ ಹತ್ತೊ ಹನ್ನೊಂದೊ ಆಯಿತು. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ದಿಂಬನ್ನುಒರಗಿಮಲಗಿಕೊಂಡು ವಿಶ್ರಾಂತಿ ಪಡೆಯುತ್ತಿದ್ದಾರೆ. ಮಣಿ ನೆಲದ ಮೇಲೆ ಕುಳಿತುಕೊಂಡಿದ್ದಾನೆ. ಪರಮಹಂಸರು ಆತನೊಡನೆ ಮಾತುಕತೆಯಾಡುತ್ತಿದ್ದಾರೆ. ಗೋಡೆಯ ಹತ್ತಿರವಿದ್ದ ಪೀಠದಮೇಲೆ ಒಂದು ದೀಪ ಉರಿಯುತ್ತಿದೆ.

ಪರಮಹಂಸರು ಅಹೇತುಕಕೃಪಾಸಿಂಧು. ಮಣಿಯಿಂದ ಸೇವೆಸಲ್ಲಿಸಿಕೊಳ್ಳಲಿದಾರೆ.

ಶ್ರೀರಾಮಕೃಷ್ಣರು: "ಇಲ್ಲಿ ನೋಡು, ನನ್ನ ಪಾದಗಳು ಸ್ವಲ್ಪ ನೋಯುತ್ತಿವೆ. ಅವನ್ನು ಸ್ವಲ್ಪ ಮೆದುವಾಗಿ ಸವರು."

ಮಣಿ ಆ ಚಿಕ್ಕ ಮಂಚದ ಮೇಲೆ ಪರಮಹಂಸರ ಪಾದಗಳ ಹತ್ತಿರ ಕುಳಿತು, ಅವರ ಪಾದಗಳನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಅವುಗಳ ಮೇಲೆ ಮೃದುವಾಗಿ ಕೈ ಆಡಿಸುತ್ತಿದ್ದಾನೆ. ಪರಮಹಂಸರು ಆಗಾಗ ಆತನಿಗೆ ಪ್ರಶ್ನೆ ಹಾಕುತ್ತಿದ್ದಾರೆ.

ಶ್ರೀರಾಮಕೃಷ್ಣರು ನಗುತ್ತ: "ಇಂದಿನ ಮಾತುಕತೆ ಹೇಗೆ ಆಯಿತು?"

ಮಣಿ: "ಬಹಳ ಚೆನ್ನಾಗಿ ಆಯಿತು."

ಶ್ರೀರಾಮಕೃಷ್ಣರು ನಗುತ್ತ: "ಅಕ್ಬರ್ ಬಾದಶಹನ ವಿಷಯ ಹೇಗೆ ಹಿಡಿಸಿತು?"

ಮಣಿ: "ಬಹಳ ಚೆನ್ನಾಗಿತ್ತು."

ಶ್ರೀರಾಮಕೃಷ್ಣರು: "ಅದನ್ನ ನೀನು ಮತ್ತೆ ಹೇಳು ನೋಡೋಣ."

ಮಣಿ: "ಒಬ್ಬ ಫಕೀರ ಅಕ್ಬರ್ ಬಾದಶಹನನ್ನು ಕಾಣಲು ಬಂದ. ಆಗ ಅಕ್ಬರ್ ನಮಾಜು ಮಾಡುತ್ತಿದ್ದ. ನಮಾಜು ಮಾಡುತ್ತ ಮಾಡುತ್ತ ಅಕ್ಬರ್ ಭಗವಂತನನ್ನು ಧನಕನಕಾದಿದೌಲತ್ತುಗಳಿಗಾಗಿ ಬೇಡುತ್ತಿದ್ದುದನ್ನು ನೋಡಿ, ಫಕೀರ ಆ ಕೊಠಡಿಯಿಂದ ಯಾವ ಸದ್ದನ್ನೂ ಮಾಡದೆ ಎದ್ದು ಬರುವುದಲ್ಲಿದ್ದ. ನಮಾಜುಮುಗಿಸಿಕೊಂಡು ಬಂದನಂತರ ಅಕ್ಬರ್ ಆತನನ್ನು ತಾವು ಏಕೆ ಎದ್ದುಹೋಗುತ್ತಿದ್ದಿರಿ ಎಂದು ಕೇಳಲಾಗಿ ಆತ ಉತ್ತರವಿತ್ತ, 'ಭಿಕ್ಷೆ ಬೇಡಬೇಕಾದರೆ ಭಿಕಾರಿಯಿಂದ ಏಕೆ ಭಿಕ್ಷೆ ಬೇಡಲಿ?' ಅಂತ."

ಶ್ರೀರಾಮಕೃಷ್ಣರು: "ಇನ್ನೇನು ಮಾತುಕತೆ ನಡೆಯಿತು?"

ಮಣಿ: "ಸಂಚಯ ಮಾಡುವುದರ ವಿಷಯವಾಗಿ ಬಹಳ ಚೆನ್ನಾಗಿ ಮಾತನಾಡಿದಿರಿ."

ಶ್ರೀರಾಮಕೃಷ್ಣರು ನಗುತ್ತ: "ಅದರ ವಿಷಯವಾಗಿ ಏನೇನು ಹೇಳಿದೆ?"

ಮಣಿ: "ಪ್ರಯತ್ನ ಮಾಡಬೇಕು ಎಂಬ ಭಾವನೆ ವ್ಯಕ್ತಿಗೆ ಇರುವವರೆಗೆ ಆತ ಪ್ರಯತ್ನ ಮಾಡಿಯೇ ತೀರಬೇಕು. ಸಂಚಯ ಮಾಡುವುದರ ವಿಷಯವಾಗಿ ನೀವು ಸಿಂಥಿಯಲ್ಲಿ ಎಷ್ಟು ಚೆನ್ನಾಗಿ ಮಾತನಾಡಿದಿರಿ ಅಂತೆ!"

ಶ್ರೀರಾಮಕೃಷ್ಣರು: "ಅಲ್ಲಿ ಏನು ಹೇಳಿದೆ?"

ಮಣಿ: "ಯಾರು ಭಗವಂತನನ್ನು ಸಂಪೂರ್ಣವಾಗಿ ಆಶ್ರಯಿಸಿರುವನೊ ಆತನ ಇಡೀ ಭಾರವನ್ನು ಭಗವಂತ ಹೊತ್ತುಕೊಳ್ಳುತ್ತಾನೆ—ಇದು ಮೈನರ್ ಹುಡುಗನ ಇಡೀ ಭಾರವನ್ನು ಒಬ್ಬ ಪಾಲಕ ಹೊತ್ತುಕೊಳ್ಳುವಹಾಗೆ. ಇನ್ನೊಂದು ವಿಷಯ ಹೇಳಿದಿರಿ: ಔತಣದ ಮನೆಗೆ ಹೋಗಿ ಚಿಕ್ಕ ಮಗು ತಾನಾಗಿಯೇ ಊಟದ ಪಂಕ್ತಿಯಲ್ಲಿ ಒಂದು

ಜಾಗವನ್ನು ಹಿಡಿದುಕುಳಿತುಕೊಳ್ಳಲಾರದು. ಬೇರೆ ಯಾರಾದರು ಅದನ್ನು ಕರೆದುಕೊಂಡುಹೋಗಿ ಪಂಕ್ತಿಯಲ್ಲಿ ಕೂರಿಸುತ್ತಾರೆ."

ಶ್ರೀರಾಮಕೃಷ್ಣರು: "ಅದಲ್ಲ, ಅದು ನಾನು ಹೇಳಿದಂತೆ ಆಗಲಿಲ್ಲ. ನಾನು ಹೇಳಿದ್ದು, ತಂದೆ ಮಗುವಿನ ಕೈ ಹಿಡಿದು ಕರೆದುಕೊಂಡು ಹೋಗುತ್ತಿದ್ದರೆ ಅದು ಬೀಳುವ ಸಂಭವವೇ ಇಲ್ಲ ಅಂತ."

ಮಣಿ: "ನೀವು ಇಂದು ಮೂರು ಶ್ರೇಣಿಯ ಸಾಧುಗಳ ವಿಷಯವಾಗಿ ಹೇಳಿದಿರಿ. ಉತ್ತಮ ಸಾಧು; ಆತ ಕುಳಿತಲ್ಲಿಯೇ ಕುಳಿತು ದೇಹ ಪೋಷಣೆ ಮಾಡಿಕೊಳ್ಳಬಲ್ಲ. ನೀವು ಒಬ್ಬ ಎಳೆ ವಯಸ್ಸಿನ ಸಾಧುವಿನ ವಿಷಯವಾಗಿ ಹೇಳಿದಿರಿ; ಹುಡುಗಿಯ ಸ್ತನ ನೋಡಿ ಆತ ಹೇಳಿದ, 'ಎದೆಯಲ್ಲಿ ಕುರು ಏಕೆ ಎದ್ದಿದೆ?' ಅಂತ. ನೀವು ಇನ್ನೂ ಏನೇನೂ ಚಮತ್ಕಾರ ಚಮತ್ಕಾರ ವಿಷಯಗಳನ್ನು ಕೊನೆಕೊನೆಗೆ ಹೇಳಿದಿರಿ."

ಶ್ರೀರಾಮಕೃಷ್ಣರು ನಗುತ್ತ: "ಏನೇನು?"

ಮಣಿ: "ಪಂಪಾಸರೋವರದ ಆ ಕಾಗೆಯ ವಿಷಯ. ಅದು ಅಹರ್ನಿಶಿ ರಾಮನಾಮ ಜಪಿಸುತ್ತಿತ್ತು. ಬಾಯಾರಿ ನೀರಿನ ಹತ್ತಿರ ಹೋಗುತ್ತಿತ್ತು, ಆದರೆ ಮಾತ್ರ ನೀರು ಕುಡಿಯಲು ಅದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಒಬ್ಬ ಸಾಧುವಿನ ಪುಸ್ತಕದ ವಿಷಯ;— ಅದರಲ್ಲಿ ಕೇವಲ 'ಓಂ ರಾಮ್, ಓಂ ರಾಮ್' ಎಂದು ಬರೆದಿತ್ತು. ಮತ್ತೆ ಹನುಮಂತ ರಾಮನಿಗೆ ಏನು ಹೇಳಿದನೊ—"

ಶ್ರೀರಾಮಕೃಷ್ಣರು: "ಏನು ಹೇಳಿದ?"

ಮಣಿ: "'ಸೀತೆಯನ್ನು ನೋಡಿ ಬಂದೆ; ಬರೀ ಶರೀರ ಮಾತ್ರ ಅಲ್ಲಿ ಬಿದ್ದಿದೆ. ಆಕೆ ತನ್ನ ಮನಸ್ಸು ಪ್ರಾಣ ಎಲ್ಲವನ್ನೂ ನಿಮ್ಮ ಪಾದ ಪದ್ಮಗಳಿಗೆ ಅರ್ಪಿಸಿಬಿಟ್ಟಿದ್ದಾಳೆ' ಅಂತ.

"ಮತ್ತೆ ಚಾತಕಪಕ್ಷಿಯ ವಿಷಯ,—ಆಕಾಶದಿಂದ ಬೀಳುವ ಮಳೆ ನೀರನ್ನು ವಿನಾ ಬೇರೆ ಏನನ್ನೂ ಕುಡಿಯದು. ಮತ್ತೆ ಜ್ಞಾನಯೋಗ ಮತ್ತು ಭಕ್ತಿಯೋಗದ ವಿಷಯವಾಗಿ."

ಶ್ರೀರಾಮಕೃಷ್ಣರು: "ಏನು ಹೇಳಿದೆ?"

ಮಣಿ: "ಎಲ್ಲಿಯವರೆಗೆ 'ಕುಂಭ,' ಎಂಬುದರ ಜ್ಞಾನವಿರುವುದೊ ಅಲ್ಲಿಯವರೆಗೆ 'ನಾನು ಕುಂಭ,' ಎಂಬ ಜ್ಞಾನ ಇದ್ದೇ ಇರುತ್ತದೆ. ಎಲ್ಲಿಯ

ವರೆಗೆ 'ನಾನು,' ಎಂಬುದರ ಜ್ಞಾನವಿರುವುದೊ, 'ನಾನು ಭಕ್ತ, ನೀನು ಭಗವಂತ' ಎಂಬ ಜ್ಞಾನ ಇದ್ದೇ ಇರುತ್ತದೆ."

ಶ್ರೀರಾಮಕೃಷ್ಣರು: "ಅದು ಹಾಗಲ್ಲ. 'ಕುಂಭ,' ಎಂಬುದರ ಜ್ಞಾನ ಇರಲಿ ಹೋಗಲಿ ಕುಂಭ ಮಾತ್ರ ಹೋಗದು— ಅದೃಶ್ಯವಾಗದು. 'ನಾನು' ಎಂಬುದು ಹೋಗುವ ಹಾಗೆಯೇ ಇಲ್ಲ. ಬೇಕಾದಷ್ಟು ವಿಚಾರ ದಲ್ಲಿ ತೊಡಗು; ಅದು ಮಾತ್ರ ಹೋಗದು."

ಮಣಿ ಒಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಮತ್ತೆ ಹೇಳ ಲಾರಂಭಿಸಿದ.

ಮಣಿ: "ಅಂದು ನೀವು ಕಾಳೀ ದೇವಾಲಯದಲ್ಲಿ ಈಶಾನಮುಖರ್ಜಿ ಯೊಡನೆ ಮಾತನಾಡಿದಿರಿ— ಅದೊಂದು ನಮ್ಮ ದೊಡ್ಡ ಭಾಗ್ಯವೇ ಸರಿ. ಆಗ ನಾವು ಅಲ್ಲೇ ಇದ್ದೆವು, ಎಲ್ಲವನ್ನೂ ಕೇಳಿದೆವು."

ಶ್ರೀರಾಮಕೃಷ್ಣರು ನಗುತ್ತ: "ಹೌದು, ಏನೇನು ಮಾತನಾಡಿದೆ ಹೇಳು ನೋಡೋಣ?"

ಮಣಿ: "ತಾವು ಹೇಳಿದಿರಿ, 'ಕರ್ಮಕಾಂಡ, ಆದಿಕಾಂಡ ಮೊದ ಲನೆ ಹಂತ' ಅಂತ. ಮತ್ತೆ ಹೇಳಿದಿರಿ, 'ನಾನು ಒಮ್ಮೆ ಶಂಭು ಮಲ್ಲಿಕನಿಗೆ ಕೇಳಿದೆ, "ಭಗವಂತ ನಿನ್ನ ಎದುರಿಗೆ ಬಂದರೆ ಆತನನ್ನು ಹಾಸ್ಪಿಟಲ್ ಡಿಸ್ಪೆನ್ಸರಿಗಳಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೀಯ?" ಅಂತ' ಎಂದು.

"ಇನ್ನೊಂದು ವಿಷಯ ಹೇಳಿದಿರಿ;—ಎಲ್ಲಿಯವರೆಗೆ ವ್ಯಕ್ತಿಗೆ ಕರ್ಮ ದಲ್ಲಿ ಆಸಕ್ತಿ ನೆಲೆಸಿರುವುದೊ, ಅಲ್ಲಿಯವರೆಗೆ ಆತನಿಗೆ ಭಗವಂತ ತನ್ನ ದರ್ಶನವನ್ನು ಕೊಡಲೊಲ್ಲ ಅಂತ. ನೀವು ಅದೇ ವಿಷಯವನ್ನು ಕೇಶವ ಸೇನನಿಗೆ ಹೇಳಿದ್ದಿರಿ."

ಶ್ರೀರಾಮಕೃಷ್ಣರು: "ಯಾವುದನ್ನ ಹೇಳಿದ್ದೆ?"

ಮಣಿ: "ಎಲ್ಲಿಯವರೆಗೆ ಮಗು ಗಿಲಕೆ ಹಿಡಿದು ಎಲ್ಲವನ್ನೂ ಮರೆ ಯುವುದೊ, ಅಲ್ಲಿಯವರೆಗೆ ತಾಯಿ ಅಡಿಗೆ - ಗಿಡಗೆ ಕೆಲಸದಲ್ಲಿ ತೊಡಗಿ ರುತ್ತಾಳೆ. ಗಿಲಕೆ ಬಿಸಾಡಿ ಯಾವಾಗ ಮಗು ಚೀತ್ಕಾರ ಮಾಡುತ್ತದೆಯೋ, ಆಗ ತಾಯಿ ಒಲೆ ಮೇಲೆ ಇದ್ದ ಅನ್ನದ ತಪ್ಪಲೆ ಕೆಳಕ್ಕೆ ಇಳಿಸಿ ಮಗುವಿನ ಹತ್ತಿರ ಓಡಿಬರುತ್ತಾಳೆ.

"ಅಂದು ಇನ್ನೊಂದು ವಿಷಯ ಹೇಳಿದಿರಿ: ಲಕ್ಷ್ಮಣ ರಾಮನನ್ನು

ಕೇಳಿದ, 'ಭಗವಂತನನ್ನು ಎಲ್ಲಿ ಎಲ್ಲಿ ದರ್ಶನ ಮಾಡಬಹುದು' ಅಂತ. ರಾಮ ಆ ವಿಷಯವಾಗಿ ಬಹಳ ಹೊತ್ತು ವಿವರಿಸಿ ಹೇಳಿ, ಕೊನೆಗೆ ಹೇಳಿದ, 'ಸಹೋದರ, ಯಾವ ಮನುಷ್ಯನಲ್ಲಿ ನೀನು ಊರ್ಜಿತಭಕ್ತಿ ಉಂಟಾಗಿರುವುದನ್ನು ನೋಡುವೆಯೊ — ಆದರಿಂದ ಆತ "ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ"--ಪ್ರೇಮದಿಂದ ಉನ್ಮತ್ತನಾಗಿರುತ್ತಾನೆ— ಆತನಲ್ಲಿ ನಾನು (ಭಗವಂತ) ಇದ್ದೇನೆ ಎಂಬುದನ್ನು ತಿಳಿದುಕೊ' ಅಂತ."

ಶ್ರೀರಾಮಕೃಷ್ಣರು: "ಆಹ! ಆಹ!"

ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು.

ಮಣಿ: "ಅಂದು ನೀವು ಈಶಾನನಿಗೆ ಕೇವಲ ನಿವೃತ್ತಿ ವಿಷಯವಾಗೇ ಮಾತನಾಡಿದಿರಿ. ಅಂದಿನಿಂದ ನಮ್ಮಲ್ಲಿ ಅನೇಕರಿಗೆ ಸ್ವಲ್ಪ ಬುದ್ಧಿ ಬಂದಿದೆ. ನಮ್ಮ ಕರ್ಮಗಳನ್ನು ಕಡಮೆ ಮಾಡಿಕೊಳ್ಳುವುದರ ಕಡೆಗೇ ಮನಸ್ಸು ಓಡುತ್ತಿದೆ. ಅಂದು ಹೇಳಿದಿರಿ, 'ಲಂಕೆಯಲ್ಲಿ ರಾವಣ ಸತ್ತರೆ, ಇಲ್ಲಿ ಬೇಹುಳ ಅತ್ತು ಅತ್ತು ಅರಳೇಕಾಯಾದ!' ಅಂತ."

ಪರಮಹಂಸರು ಈ ಮಾತು ಕೇಳಿ ಗಹಗಹಿಸಿ ನಗುತ್ತಿದ್ದಾರೆ.

ಮಣಿ ವಿನಯದಿಂದ: "ಒಳ್ಳೆಯದು, ಕರ್ತವ್ಯ ಕರ್ಮಗಳ ಕೋಟಲೆ ಕಡಮೆಮಾಡಿಕೊಳ್ಳುವುದು ಒಳ್ಳೆಯದಲ್ಲವೆ?"

ಶ್ರೀರಾಮಕೃಷ್ಣರು: "ನಿಜ. ಆದರೆ ಸಮ್ಮುಖದಲ್ಲಿ ಯಾರಾದರು ಕಾಣಿಸಿಕೊಂಡರೆ ಅದು ಬೇರೆ ವಿಷಯ. ಸಾಧುವೇ ಆಗಲಿ ದರಿದ್ರನೇ ಆಗಲಿ ಎದುರಿಗೆ ಕಾಣಿಸಿಕೊಂಡರೆ ಅವರ ಸೇವೆ ಮಾಡೋದು ಉಚಿತ."

ಮಣಿ: "ಅಂದು ಈಶಾನಮುಖರ್ಜಿಗೆ ಪರರಿಗೆ ಬೆಣ್ಣೆಹಚ್ಚೊ ವಿಷಯವಾಗಿ ಬಹಳ ಚೆನ್ನಾಗಿ ಹೇಳಿದಿರಿ. ಅವರನ್ನು ಹೆಣಗಳಮೇಲೆ ಕುಳಿತಿರುವ ರಣಹದ್ದುಗಳಿಗೆ ಹೋಲಿಸಿದಿರಿ. ಅದೇ ವಿಷಯವನ್ನು ತಾವು ಒಮ್ಮೆ ಪಂಡಿತ ಪದ್ಮಲೋಚನನಿಗೂ ಹೇಳಿದಿರಿ."

ಶ್ರೀರಾಮಕೃಷ್ಣರು: "ಆತನಿಗಲ್ಲ, 'ಉಲೊ' ಎಂಬ ಸ್ಥಳದ ವಾಮನದಾಸನಿಗೆ."

ಸ್ವಲ್ಪ ಹೊತ್ತು ಹೀಗೆ ಮಾತುಕತೆಗಳಾಡಿದನಂತರ ಮಣಿ ಮಂಚದಿಂದ ಕೆಳಕ್ಕೆ ಇಳಿದು ಅದರ ಹತ್ತಿರವೇ ನೆಲದ ಮೇಲೆ ಹಾಕಿದ್ದ ಫುಟ್ ರಗ್ಗಿನ ಮೇಲೆ ಕುಳಿತುಕೊಂಡ. ಪರಮಹಂಸರಿಗೆ ನಿದ್ದೆ ಬರುತ್ತಿದೆ;—

ಅವರು ಮಣಿಗೆ ಹೇಳಿದರು, "ನೀನು ಹೋಗಿ ಮಲಗು. ಗೋಪಾಲನೆಲ್ಲಿ? ದಯವಿಟ್ಟು ಬಾಗಿಲನ್ನು ಮುಚ್ಚು" ಅಂತ.

ಮಾರನೆಯ ದಿನ ಸೋಮವಾರ ಪರಮಹಂಸರು ಬಹಳ ಹೊತ್ತಿಗೆ ಮುಂಚೆ ಎದ್ದು ಎಂದಿನಂತೆ ಭಗವಂತನ ನಾಮಸ್ಮರಣೆ ಮಾಡುತ್ತಿದ್ದಾರೆ; ಆಗಾಗ ಗಂಗಾ ದರ್ಶನ ಮಾಡುತ್ತಿದ್ದಾರೆ. ಪ್ರಾತಃಕಾಲದ ಮಂಗಳಾರತಿ ಕಾಳಿ ಮತ್ತು ರಾಧಾಕಾಂತ ದೇವಾಲಯಗಳಲ್ಲಿ ಪ್ರಾರಂಭವಾಗಿದೆ. ಮಣಿ ರಾಮಕೃಷ್ಣರ ಕೊಠಡಿಯಲ್ಲಿ ನೆಲದ ಮೇಲೆ ಮಲಗಿ ರಾತ್ರಿಯನ್ನು ಕಳೆದನು. ಆತನೂ ಹಾಸಿಗೆಯಿಂದ ಎದ್ದು ವಿವಿಧ ದೇವಾಲಯಗಳ ಮಂಗಳಾರತಿಯನ್ನು ನೋಡುತ್ತಿದ್ದಾನೆ. ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿ ಕೊಂಡು ಮಣಿ ಪರಮಹಂಸರ ಹತ್ತಿರ ಬಂದು ಕುಳಿತನು.

ಪರಮಹಂಸರು ಇಂದು ಸ್ನಾನ ಮಾಡಿದರು. ಸ್ನಾನವಾದನಂತರ ಕಾಳೀದೇವಾಲಯಕ್ಕೆ ಹೋಗುತ್ತಿದ್ದಾರೆ. ಮಣಿ ಅವರನ್ನು ಹಿಂಬಾಲಿಸು ತ್ತಿದ್ದಾನೆ. ಅವರು ಮಣಿಗೆ ಕೊಠಡಿಗೆ ಬೀಗಹಾಕುವಂತೆ ಹೇಳಿದರು.

ಕಾಳೀದೇವಾಲಯಕ್ಕೆ ಬಂದು ಪರಮಹಂಸರು ಅರ್ಚಕನ ಪೀಠದಲ್ಲಿ ಕುಳಿತು ಹೂವನ್ನು ತೆಗೆದು ಒಮ್ಮೊಮ್ಮೆ ತಮ್ಮ ತಲೆಯ ಮೇಲೂ ಒಮ್ಮೊಮ್ಮೆ ತಾಯ ಪಾದಪದ್ಮಗಳ ಮೇಲೂ ಇಡುತ್ತಿದ್ದಾರೆ. ಬಳಿಕ ಚಾಮರ ತೆಗೆದುಕೊಂಡು ದೇವಿಗೆ ಶೈತ್ಯೋಪಚಾರ ಮಾಡಿದರು. ತರು ವಾಯ ತಮ್ಮ ಕೊಠಡಿಯ ಹತ್ತಿರ ಬಂದು ಅದನ್ನು ತೆರೆಯುವಂತೆ ಮಣಿಗೆ ಹೇಳಿದರು. ಕೊಠಡಿಯನ್ನು ಪ್ರವೇಶಿಸಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು. ಈಗ ಭಾವದಿಂದ ಮತ್ತರಾಗಿದ್ದಾರೆ— ಭಗವಂತನ ಹೆಸರು ಹೇಳುತ್ತಿದ್ದಾರೆ. ಮಣಿ ಒಬ್ಬನೇ ನೆಲದಮೇಲೆ ಕುಳಿತಿದ್ದಾನೆ. ಈಗ ಪರಮಹಂಸರು ಭಗವತಿಯ ಸಂಬಂಧವಾಗಿ ಹಾಡಲಾರಂಭಿಸಿದ್ದಾರೆ:

> ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು !
> ಆರು-ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು......

ಮತ್ತೆ ಹಾಡಿದರು :

> ತಾಯಿ ಕಾಳಿಯ ಉನ್ಮತ್ತ ಲೀಲೆ ಈ ಸೃಷ್ಟಿ ;
> ಮೂಲೋಕಗಳು ಅವಳ ಮಾಯೆಯಲಿ ಮುಳುಗಿಹವು !......

ಮತ್ತೆ ಹಾಡಿದರು:

ತಿಳಿಯ ಬಲ್ಲರಾರು ತಾಯಿ
ಓ ಅನಂತ ರೂಪಿಣೀ........

ಮತ್ತೆ ಹಾಡಿದರು:

ತ್ವರಿತದಿಂದ ಕಡೆಹಾಯಿಸು
ಮೃತ್ಯುಭಯದಿ ತಲ್ಲಣಿಸುತ ಸಾಯುತಿರುವ ನನ್ನನು.......

ಮಣಿ ತನ್ನೊಳಗೆ ತಾನೇ ಅಂದುಕೊಂಡ ಪರಮಹಂಸರು ಈ ಹಾಡು ಹಾಡುವುದಾದರೆ:

"ಏನಾದರೂ ನೀನು ನನ್ನ ವಂಚಿಸಲಾರೆ ಇನ್ನು ಮುಂದೆ:
ನಿನ್ನರುಣ ಪಾದಪದ್ಮಗಳ ನಾನಿಂದು ಕಂಡೆ!"

ಏನಾಶ್ಚರ್ಯ — ಮಣಿ ಹಾಗೆ ಭಾವಿಸುವುದೇ ತಡ, ಪರಮಹಂಸರು ಅದೇ ಹಾಡನ್ನು ಹಾಡಲಾರಂಭಿಸಿದ್ದಾರೆ. ಕೆಲವು ನಿಮಿಷಗಳಾದನಂತರ ಅವರು ಮಣಿಯನ್ನು ಕೇಳುತ್ತಿದ್ದಾರೆ, "ನನ್ನ ಈಗಿನ ಅವಸ್ಥೆ ಎಂಥದು ಎಂಬುದು ನಿನಗೆ ಗೊತ್ತಾಗುತ್ತದೆಯೆ?" ಅಂತ.

ಮಣಿ ನಗುತ್ತ: "ಈಗ ತಮ್ಮದು ಸಹಜಾವಸ್ಥೆ."

ಪರಮಹಂಸರು ತಮ್ಮಷ್ಟಕ್ಕೆ ತಾವೆ ಒಂದು ಹಾಡಿನ ಪಲ್ಲವಿಯನ್ನು ಹಾಡಲಾರಂಭಿಸಿದ್ದಾರೆ:

ಸಹಜಮಾನಸನಾಗದಿರೆ ನೀ
ಸಹಜ ಸುಂದರ ದೇವನೊಲುಮೆಯ
ಗಳಿಪುದೆಂತೀ ಲೋಕದಿ?

—※—

೩೪

# ಬಂಕಿಮಚಂದ್ರಚಟ್ಟೋಪಾಧ್ಯಾಯ.

೬ನೆ ಡಿಸೆಂಬರ್ ೧೮೮೪, ಮಾರ್ಗಶಿರ ಕೃಷ್ಣ ಚತುರ್ಥಿ, ಶನಿವಾರ.

ಅಧರಸೇನ ಒಬ್ಬ ದೊಡ್ಡ ಭಗವದ್ಭಕ್ತ. ಆತನಿಗೆ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಕೆಲಸ. ಆತನ ವಯಸ್ಸು ಸುಮಾರು ೨೮ ರಿಂದ ೩೦ರ ಒಳಗೆ. ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆತನದು ಎಂಥ ಭಕ್ತಿ! ಇಡೀ ದಿವಸವೆಲ್ಲ ಆಫೀಸಿನಲ್ಲಿ ಕೆಲಸಮಾಡಿ ಮನೆಗೆ ಬಂದ ನಂತರ ಕೈ ಕಾಲಿಗೆ ಒಂದಷ್ಟು ನೀರು ಹಾಕಿ ಬಹುಮಟ್ಟಿಗೆ ತಪ್ಪದೆ ಪ್ರತಿ ಸಾಯಂಕಾಲವೂ ಪರಮಹಂಸರನ್ನು ನೋಡಲು ದಕ್ಷಿಣೇಶ್ವರಕ್ಕೆ ಹೋಗುತ್ತಿದ್ದ. ಆತನ ಮನೆ ಇರೋದು ಶೋಭಾಬಸಾರಿನಲ್ಲಿ. ಪ್ರತಿದಿವಸವೂ ತನ್ನ ಮನೆಯಿಂದ ದಕ್ಷಿಣೇಶ್ವರಕ್ಕೆ ಗಾಡಿ ಮಾಡಿಕೊಂಡು ಬರುತ್ತಿದ್ದ. ಕೇವಲ ಪರಮಹಂಸರ ದರ್ಶನ ಪಡೆಯೋದು, ಇದೊಂದೇ ಆತನ ಏಕಮಾತ್ರ ಮಹದಾನಂದವಾಗಿತ್ತು. ಅವರ ಶ್ರೀಮುಖದಿಂದ ಬರುತ್ತಿದ್ದ ಮಾತುಕತೆಗಳನ್ನು ಕೇಳುವುದಕ್ಕೆ ಬಹುಮಟ್ಟಿಗೆ ಆತನಿಗೆ ಆಗುತ್ತಲೇ ಇರಲಿಲ್ಲ. ದಕ್ಷಿಣೇಶ್ವರವನ್ನು ತಲುಪುವುದೇ ತಡ ಒಡನೆಯೇ ಬಂದು ಪರಮಹಂಸರಿಗೆ ಸಾಷ್ಟಾಂಗಪ್ರಣಾಮಮಾಡುತ್ತಿದ್ದ. ಪರಮಹಂಸರು ಆತನ ಕ್ಷೇಮಸಮಾಚಾರವನ್ನು ವಿಚಾರಿಸಿದನಂತರ ಕಾಳೀದೇವಾಲಯಕ್ಕೆ ಭಗವತಿಯ ದರ್ಶನಕ್ಕಾಗಿ ಹೋಗುತ್ತಿದ್ದ. ಅಲ್ಲಿಂದ ಹಿಂದಿರುಗಿಬಂದು ಪರಮಹಂಸರ ಕೊಠಡಿಯಲ್ಲಿ ನೆಲದ ಮೇಲೆ ಹಾಸಿದ್ದ ಮಂದಲಿಗೆಯ ಮೇಲೆ ಮಲಗಿ ವಿಶ್ರಮಿಸಿಕೊಳ್ಳುತ್ತಿದ್ದ. ಪರಮಹಂಸರೇ ಆತನಿಗೆ ಹಾಗೆ ವಿಶ್ರಮಿಸಿಕೊಳ್ಳಲು ಹೇಳುತ್ತಿದ್ದರು. ಇಡೀ ದಿನದ ಪರಿಶ್ರಮದಿಂದ ಅಧರಸೇನನ ಶರೀರ ಅಷ್ಟು ಆಯಾಸಗೊಂಡಿರುತ್ತಿತ್ತು, ಭೂಮಿಗೆ ತಲೆ ಕೊಡುವುದೇ ತಡ ಆತನಿಗೆ ನಿದ್ರಾದೇವಿ ಒಲಿದುಬಿಡುತ್ತಿದ್ದಳು. ಆತನನ್ನು ರಾತ್ರಿ ಒಂಬತ್ತು ಹತ್ತರೊಳಗೆ ಎಳಿಸಿಬಿಡುತ್ತಿದ್ದರು. ಆತ ಎದ್ದು ಪರಮಹಂಸರಿಗೆ ಪ್ರಣಾಮಮಾಡಿ ತಾನು ತಂದಿದ್ದ ಗಾಡಿಯಲ್ಲೇ ಹಿಂದಿರುಗಿಬಿಡುತ್ತಿದ್ದ.

ಅಧರಸೇನ ಆಗಾಗ ಪರಮಹಂಸರನ್ನು ತನ್ನ ಮನೆಗೆ ಕರೆದು ಕೊಂಡು ಹೋಗುತ್ತಿದ್ದ. ಅವರು ಆತನ ಮನೆಗೆ ಹೋದಾಗಲೆಲ್ಲಾ ಅಲ್ಲೊಂದು ದೊಡ್ಡ ಉತ್ಸವವೇ ನಡೆದುಹೋಗುತ್ತಿತ್ತು. ಅನೇಕ ಭಕ್ತರು ಅಲ್ಲಿಗೆ ಬಂದು ಸೇರುತ್ತಿದ್ದರು. ವಿವಿಧ ಭಕ್ಷ್ಯಭೋಜ್ಯಗಳನ್ನು ತಯಾರಿಸಿ ಅವರೆಲ್ಲರಿಗೂ ತೃಪ್ತಿಯಾಗುವಂತೆ ಬಡಿಸುತ್ತಿದ್ದ.

ಒಂದು ದಿನ ಪರಮಹಂಸರು ಆತನ ಮನೆಗೆ ಹೋಗಿದ್ದಾರೆ. ಆಗ ಅಧರಸೇನ ಹೇಳಿದ, "ನೀವು ಬಹಳ ದಿವಸಗಳಿಂದ ಇಲ್ಲಿಗೆ ಬರಲಿಲ್ಲ. ಮನೆ ಮಲಿನವಾಗಿಬಿಟ್ಟಿತ್ತು; ಏನೋ ಒಂದು ವಿಧವಾದ ದುರ್ಗಂಧ ಬರು ತ್ತಿತ್ತು. ಇಂದು ನೋಡಿ, ಹೇಗೆ ಮನೆ 'ಕಿಲ, ಕಿಲ' ಅಂತ ನಗುತ್ತಿದೆ; ಎಂಥ ಸುಗಂಧ ಬರುತ್ತಿದೆ! ಇಂದು ನಾನು ಭಗವಂತನಿಗೆ ಬಹುವಾಗಿ ಪ್ರಾರ್ಥನೆ ಮಾಡಿದೆ. ನಿಜಸ್ಥಿತಿ ಹೇಳುತ್ತೇನೆ, ಆಗ ಕಣ್ಣಿಂದ ನೀರೂ ಬಿದ್ದುಬಿಟ್ಟಿತು" ಎಂದು. ಅದಕ್ಕೆ ಪರಮಹಂಸರು ಹೇಳಿದರು, "ಆಶ್ಚರ್ಯ!" ಅಂತ. ಬಳಿಕ ಅಧರಸೇನನನ್ನು ದೃಷ್ಟಿಸಿನೋಡುತ್ತ ನಗಲಾರಂಭಿಸಿದರು.

ಇಂದು ಪರಮಹಂಸರು ತಮ್ಮ ಭಕ್ತರೊಡನೆ ಅಧರಸೇನನ ಮನೆಗೆ ಬಂದಿದ್ದಾರೆ. ಎಲ್ಲರೂ ಆನಂದದಿಂದ ತುಂಬಿ ತುಳುಕಾಡುತ್ತಿದ್ದಾರೆ. ಅಧರಸೇನ ಇಂದು ಒಂದು ದೊಡ್ಡ ಔತಣ ಏರ್ಪಡಿಸಿದ್ದಾನೆ. ಪರಮ ಹಂಸರ ದರ್ಶನ ಪಡೆಯಲು ಅನೇಕವಾಗಿ ಹೊಸಹೊಸಬರು ಬಂದಿದ್ದಾರೆ. ಅಧರಸೇನನ ಇಚ್ಛೆಗನುಸಾರ ಆತನ ಸಹೋದ್ಯೋಗಿ ಡೆಪ್ಯುಟಿ ಮ್ಯಾಜಿ ಸ್ಟ್ರೇಟರುಗಳಲ್ಲಿ ಕೆಲವರು ಬಂದಿದ್ದಾರೆ. ಅವರ ಇಚ್ಛೆ ತಾವೇ ಪರಮ ಹಂಸರನ್ನು ನೋಡಿ ಅವರು ಎಂಥವರು ಎಂಬುದನ್ನು ಅರಿತುಕೊಳ್ಳ ಬೇಕೆಂಬುದಾಗಿ ಇತ್ತು.

ಶ್ರೀರಾಮಕೃಷ್ಣರು ಹಸನ್ಮುಖರಾಗಿ ಭಕ್ತರೊಡನೆ ಮಾತುಕತೆಗಳ ನ್ನಾಡುತ್ತಿದ್ದಾರೆ. ಅಧರಸೇನ ತನ್ನ ಕೆಲವು ಸ್ನೇಹಿತರೊಡನೆ ಪರಮ ಹಂಸರ ಹತ್ತಿರ ಹೋಗಿ ಕುಳಿತುಕೊಂಡ. ಆತ ಪರಮಹಂಸರಿಗೆ ಬಂಕಿಮಚಂದ್ರಚಟ್ಟೋಪಾಧ್ಯಾಯನನ್ನು ತೋರಿಸಿ ಹೇಳಿದ, "ಈತ ಒಬ್ಬ ದೊಡ್ಡ ಪಂಡಿತ. ಅನೇಕ ಪುಸ್ತಕ-ಗಿಸ್ತಕ ಬರೆದಿದ್ದಾನೆ. ತಮ್ಮ ದರ್ಶನ ಪಡೆಯಲು ಬಂದಿದ್ದಾನೆ. ಈತನ ಹೆಸರು ಬಂಕಿಮಬಾಬು ಅಂತ" ಎಂದು.

ಶ್ರೀರಾಮಕೃಷ್ಣರು ನಗುತ್ತ: "ಏನು, ಬಂಕಿಮ[1] ಅಂತಲೆ! ಒಳ್ಳೆಯದು, ನೀನು ಯಾವುದರ ದೆಸೆಯಿಂದ ಬಗ್ಗಿಹೋಗಿಬಿಟ್ಟೆ!"

ಬಂಕಿಮ ನಗುತ್ತ ನಗುತ್ತ: "ಏನು ಹೇಳಲಿ ಹಣೇಬರಾನ! ಬೂಟ್ಸಿನ ಏಟಿನಿಂದ. (ಎಲ್ಲರೂ ನಗುತ್ತಾರೆ.) ಸಾಹೇಬರ ಬೂಟ್ಸಿನ ಏಟಿನಿಂದ ಬಗ್ಗಿಹೋಗಿದ್ದೇನೆ."

ಶ್ರೀರಾಮಕೃಷ್ಣರು: "ಹಾಗಲ್ಲವಪ್ಪ! ಶ್ರೀಕೃಷ್ಣ ಪ್ರೇಮದ ದೆಸೆಯಿಂದ ಬಾಗಿಬಿಟ್ಟಿದ್ದಾನೆ. ಶ್ರೀಮತಿ (ರಾಧೆ) ಯ ಪ್ರೇಮದ ದೆಸೆಯಿಂದ ಆತ ತ್ರಿಭಂಗಿಯಾಗಿಬಿಟ್ಟಿದ್ದಾನೆ ಅಂತ ಕೆಲವರು ವ್ಯಾಖ್ಯಾನಮಾಡುತ್ತಾರೆ. ಆತನದು ಶ್ಯಾಮವರ್ಣ; ಕಾರಣಗೊತ್ತೆ? ಆತ ಕುಳ್ಳ — ಆತನ ಪುಟ್ಟ ಕೈಗಳಿಂದ ಮೂರೂವರೆ ಮೊಳ ಉದ್ದ ಮಾತ್ರ — ಕಾರಣ ಗೊತ್ತೆ? ಸಮುದ್ರದ ನೀರು ದೂರದಿಂದ ಶ್ಯಾಮವರ್ಣದಂತೆ ಕಾಣುತ್ತದೆ; ಆದರೆ ಹತ್ತಿರಹೋಗಿ ಕೈಯಲ್ಲಿ ತೆಗೆದುನೋಡಿದರೆ, ಅದು ಶ್ಯಾಮವರ್ಣದಂತೆ ಕಾಣೋದಿಲ್ಲ ಬಹಳ ಸ್ವಚ್ಛ ಸಲಿಲವಾಗಿ ಕಾಣುತ್ತದೆ. ಅದೇ ರೀತಿಯಾಗಿ ನಾವು ಭಗವಂತನಿಂದ ಬಹುದೂರದಲ್ಲಿ ಇರುವಾಗ ಆತ ಶ್ಯಾಮವರ್ಣದವನಾಗಿ ಕಾಣುತ್ತಾನೆ. ಸೂರ್ಯ ಬಹಳ ದೂರದಲ್ಲಿರೋದರಿಂದ ಬಹಳ ಚಿಕ್ಕದಾಗಿ ಕಾಣುತ್ತಾನೆ; ಆದರೆ ಹತ್ತಿರ ಹೋಗಿ ನೋಡಿದರೆ ಆತ ಚಿಕ್ಕದಾಗಿ ಕಾಣೋ ಹಾಗೆಯೇ ಇಲ್ಲ. ಭಗವಂತನ ಸ್ವರೂಪವನ್ನು ಸರಿಯಾಗಿ ಅರಿತುಕೊಂಡಾಗ ಆತ ಶ್ಯಾಮವರ್ಣದವನಾಗಿಯೂ ಕಾಣೋದಿಲ್ಲ, ಕುಳ್ಳಾಗಿಯೂ ತೋರೋದಿಲ್ಲ. ಅದು ಬಹು ದೂರದ ಮಾತು: ಸಮಾಧಿಸ್ಥನಾಗದ ಹೊರತು ಆ ಅನುಭವ ದೊರೆಯದು. ಎಲ್ಲಿಯವರೆಗೆ 'ನಾನು', 'ನೀನು', ಎಂಬ ಭಾವನೆ ಹೃದಯದಲ್ಲಿ ಇರುವುದೊ, ಅಲ್ಲಿಯವರೆಗೆ ನಾಮರೂಪವೂ ಇದ್ದೇ ಇರುತ್ತದೆ. ಇದೆಲ್ಲವೂ ಆತನ ಲೀಲೆಯೆ. ಎಲ್ಲಿಯವರೆಗೆ ಹೃದಯದಲ್ಲಿ 'ನಾನು', 'ನೀನು', ಎಂಬ ಭಾವನೆ ಇರುವುದೊ, ಅಲ್ಲಿಯವರೆಗೆ ಆತ ನಮಗೆ ನಾಮರೂಪಗಳಿಂದ ಕಾಣಿಸಿಕೊಳ್ಳುತ್ತಾನೆ.

"ಶ್ರೀಕೃಷ್ಣ ಪುರುಷ; ಶ್ರೀಮತಿ ಆತನ ಶಕ್ತಿ — ಆದ್ಯಾಶಕ್ತಿ. ಪುರುಷ ಮತ್ತು ಪ್ರಕೃತಿ. ಯುಗಲಮೂರ್ತಿ ಎಂದರೆ ಅರ್ಥವೇನು? ಪುರುಷನಿಗು ಪ್ರಕೃತಿಗು ಅಭೇದ ಅಂತ; ಅವರಿಬ್ಬರಿಗೂ ಯಾವ ಭೇದವೂ ಇಲ್ಲ

1. ಬಂಗಾಳಿಯಲ್ಲಿ "ಬಗ್ಗಿಸಿದ" ಅಥವಾ "ಬಾಗಿಸಿದ" ಎಂದು ಅರ್ಥ.

ಅಂತ. ಪ್ರಕೃತಿರಹಿತನಾಗಿ ಪುರುಷನಿರಲಾರ; ಪುರುಷರಹಿತಳಾಗಿ ಪ್ರಕೃತಿಯಿರಲಾರಳು. ಒಂದನ್ನು ಪ್ರಸ್ತಾಪಿಸಿತು ಅಂದರೆ ಅದರೊಡನೆಯೇ ಮತ್ತೊಂದು ಇರುವುದನ್ನೂ ಭಾವಿಸಲೇಬೇಕು. ಇದು ಅಗ್ನಿ ಮತ್ತು ಅದರ ದಾಹಕ ಶಕ್ತಿಯು ಹಾಗೆ, ದಾಹಕ ಶಕ್ತಿಯನ್ನು ಬಿಟ್ಟು ಅಗ್ನಿಯನ್ನು ಭಾವಿಸೋಕಾಗೋದಿಲ್ಲ; ಅಗ್ನಿಯನ್ನು ಬಿಟ್ಟು ದಾಹಕ ಶಕ್ತಿಯನ್ನು ಭಾವಿಸೋಕಾಗೋದಿಲ್ಲ. ಅದಕ್ಕಾಗಿಯೇ ಯುಗಲಮೂರ್ತಿಯಲ್ಲಿ ಶ್ರೀಕೃಷ್ಣನ ದೃಷ್ಟಿ ರಾಧೆ ಕಡೆಗಿರೋದು, ರಾಧೆಯ ದೃಷ್ಟಿ ಶ್ರೀಕೃಷ್ಣನ ಕಡೆಗಿರೋದು. ಶ್ರೀಮತಿಯದು ವಿದ್ಯುತ್ತಿನೋಪಾದಿಯ ಗೌರವರ್ಣ; ಆದಕ್ಕಾಗೇ ಶ್ರೀಕೃಷ್ಣ ಪೀತಾಂಬರ ಉಡೋದು. ಶ್ರೀಕೃಷ್ಣನ ವರ್ಣ ನೀಲಮೇಘದ ವರ್ಣ; ಅದಕ್ಕಾಗೇ ಶ್ರೀಮತಿ ನೀಲಾಂಬರ ಉಡೋದು, ನೀಲ ರತ್ನಗಳಿಂದ ಅಂಗಾಂಗಳನ್ನು ಸಿಂಗರಿಸಿಕೊಳ್ಳೋದು. ಶ್ರೀಮತಿ ಕಾಲಿಗೆ ಗೆಜ್ಜೆ ಕಟ್ಟುತ್ತಾಳೆ; ಆದಕ್ಕಾಗೇ ಶ್ರೀಕೃಷ್ಣನೂ ಕಾಲಿಗೆ ಗೆಜ್ಜೆ ಕಟ್ಟುತ್ತಾನೆ. ಅಂದರೆ ಪ್ರಕೃತಿಪುರುಷರಲ್ಲಿ ಆಂತರಿಕವಾಗಿ ಬಾಹ್ಯಕವಾಗಿ ಸಂಪೂರ್ಣ ಸಾಮರಸ್ಯವಿದೆ ಎಂದು."

ಶ್ರೀರಾಮಕೃಷ್ಣರು ಈ ಮಾತುಗಳನ್ನು ಆಡಿ ಮುಗಿಸಿದ ಒಡನೆಯೇ ಬಂಕಿಮ ಮತ್ತು ಆತನ ಸ್ನೇಹಿತರು ಪರಸ್ಪರ ಇಂಗ್ಲಿಷಿನಲ್ಲಿ ಮೆಲ್ಲಮೆಲ್ಲಗೆ ಮಾತನಾಡಿಕೊಳ್ಳಲಾರಂಭಿಸಿದರು.

ಶ್ರೀರಾಮಕೃಷ್ಣರು ನಗುತ್ತ ಬಂಕಿಮನೇ ಮೊದಲಾದವರಿಗೆ: "ಏನು ಸಮಾಚಾರ? ನೀವು ಇಂಗ್ಲಿಷಿನಲ್ಲಿ ಏನು ಮಾತನಾಡಿಕೊಳ್ಳುತ್ತಿದ್ದೀರಿ?" (ಎಲ್ಲರೂ ನಗುತ್ತಾರೆ.)

ಅಧರಸೇನ: "ಅಂಥದೇನಿಲ್ಲ. ನೀವು ಹೇಳಿದ ಕೃಷ್ಣರೂಪಿನ ವಿವರಣೆ— ಅದರ ಮೇಲೆ ಸ್ವಲ್ಪ ಮಾತನಾಡಿಕೊಳ್ಳುತ್ತಿದ್ದೇವೆ."

ಶ್ರೀರಾಮಕೃಷ್ಣರು ನಗುತ್ತ: "ಒಂದು ವಿಷಯ ನನ್ನ ಜ್ಞಾಪಕಕ್ಕೆ ಬಂದು ನನಗೆ ನಗುವನ್ನು ಉಂಟುಮಾಡುತ್ತಿದೆ. ಒಂದು ಕಥೆ ಹೇಳುತ್ತೇನೆ ಕೇಳಿ. ಒಬ್ಬ ಹಜಾಮ ಒಬ್ಬ ದೊಡ್ಡ ಮನುಷ್ಯನಿಗೆ ಕ್ಷೌರಮಾಡಲು ಹೋಗಿದ್ದ. ಕ್ಷೌರಮಾಡುತ್ತ ಮುಂದುವರಿದಾಗ ಆ ಮನುಷ್ಯನಿಗೆ ಕತ್ತಿ ಒಂದು ಕಡೆ ಸ್ವಲ್ಪ ತಾಗಿತು. ಆತ, 'ಡ್ಯಾಮ್!' ಎಂಬುದಾಗಿ ಕೂಗಿಕೊಂಡ. ಆದರೆ ಹಜಾಮನಿಗೆ 'ಡ್ಯಾಮ್', ಎಂಬುದರ ಅರ್ಥ ಗೊತ್ತಿಲ್ಲ. ಆಗ ಆತ ಕತ್ತಿ-ಗಿತ್ತಿಗಳನ್ನೆಲ್ಲ ಒಂದು ಕಡೆಗೆ ಇಟ್ಟು, ಚಳಿಗಾಲ

ವಾಗಿದ್ದರೂ ರಟ್ಟೆ-ಗಿಟ್ಟೆಗಳನ್ನು ಸರಿಮಾಡಿಕೊಂಡು ಆತನನ್ನು ಕೇಳಿದ, 'ನೀವು ನನ್ನನ್ನು "ಡ್ಯಾಮ್" ಎಂದು ಕರೆದಿರಿ. ಇದರ ಅರ್ಥ ಏನು ಎಂಬುದನ್ನು ನೀವು ಹೇಳಿಯೇತೀರಬೇಕು' ಅಂತ. ಆಗ ಆ ಮನುಷ್ಯ ಉತ್ತರವಿತ್ತ, 'ಓ, ನೀನು ಸುಮ್ಮನೆ ಕ್ಷೌರಮಾಡಿಮುಗಿಸು. ಅದಕ್ಕೆ ಒಂದು ನಿರ್ದಿಷ್ಟ ಅರ್ಥವೇನಿಲ್ಲ; ಆದರೆ ಸ್ವಲ್ಪ ಎಚ್ಚರಿಕೆಯಿಂದ ಕ್ಷೌರ ಮಾಡು, ಅಷ್ಟೆ' ಅಂತ. ಹಜಾಮ ಅಷ್ಟಕ್ಕೇ ಸುಮ್ಮನಾಗೋಮೂರ್ತಿ ಯಲ್ಲ. ಆತ ಹೇಳಿದ, '"ಡ್ಯಾಮ್" ಎಂಬುದರ ಅರ್ಥ ಒಳ್ಳೆಯ ದಾಗಿದ್ದರೆ ನಾನೂ "ಡ್ಯಾಮ್," ನನ್ನ ತಂದೆಯೂ "ಡ್ಯಾಮ್," ನನ್ನ ಹದಿನಾಲ್ಕು ವಂಶದವರೆಲ್ಲರೂ "ಡ್ಯಾಮ್." (ಎಲ್ಲರೂ ನಗುತ್ತಾರೆ.) ಆದರೆ "ಡ್ಯಾಮ್" ಎಂಬುದರ ಅರ್ಥ ಕೆಟ್ಟದ್ದಾಗಿದ್ದರೆ ನೀವೂ "ಡ್ಯಾಮ್," ನಿಮ್ಮ ತಂದೆಯೂ "ಡ್ಯಾಮ್," ನಿಮ್ಮ ಹದಿನಾಲ್ಕು ವಂಶದ ತಲೆಗಳೆಲ್ಲಾ "ಡ್ಯಾಮ್." (ಎಲ್ಲರೂ ನಗುತ್ತಾರೆ.) ಅವರು ಬರೀ "ಡ್ಯಾಮ್" ಮಾತ್ರವೇ ಅಲ್ಲ, "ಡ್ಯಾಮ್—ಡ್ಯಾಮ್—ಡ್ಯಾ—ಡ್ಯಾಮ್—ಡ್ಯಾಮ್"' ಅಂತ." (ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಗುತ್ತಿದ್ದಾರೆ.)

ನಗುವುದು ನಿಂತನಂತರ ಬಂಕಿಮ ಮಾತಾಡಲು ಪ್ರಾರಂಭಿಸಿದ.

ಬಂಕಿಮ: "ನೀವು ಪ್ರಚಾರಕಾರ್ಯ ಮಾಡೋದಿಲ್ಲವಲ್ಲ ಏಕೆ?"

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ಪ್ರಚಾರ! ಅವೆಲ್ಲ ಅಭಿಮಾನ ಜನ್ಯ. ಮನುಷ್ಯನೆ! ಆತ ಒಂದು ಕ್ಷುದ್ರ ಜೀವಿ. ಪ್ರಚಾರ ಮಾಡೋನು ಆತನೇ—ಯಾರು ಚಂದ್ರ ಸೂರ್ಯರನ್ನು ಸೃಷ್ಟಿಸಿ ಈ ಜಗತ್ತನ್ನು ವ್ಯಕ್ತಗೊಳಿಸುತ್ತಿದ್ದಾನೊ ಆತ. ಪ್ರಚಾರ ಮಾಡೋದು ಏನು ಸಾಮಾನ್ಯ ಕೆಲಸವೇ? ಆತ ತನ್ನ ಸಾಕ್ಷಾತ್ಕಾರ ಕೊಟ್ಟು ಆದೇಶ ಮಾಡದಿದ್ದರೆ ಪ್ರಚಾರನಡೆಯೋಹಾಗಿಲ್ಲ. ಆದರೆ, ಮಾಡಿದರೆ ಯಾರೂ ಬೇಡ ಅನ್ನೋದಿಲ್ಲ. ಆತನಿಂದ ಆದೇಶ ದೊರೆತಿಲ್ಲದಿದ್ದರೂ ಬೇಕಾದರೆ ಗಂಟಲು ಕಿತ್ತುಕೊಳ್ಳಬಹುದು. ಒಂದೆರಡು ದಿವಸಗಳ ಮಟ್ಟಿಗೆ ಜನ ನೀನು ಹೇಳಿದಂತೆ ನಡೆದುಕೊಳ್ಳುತ್ತಾರೆ. ಬಳಿಕ ಎಲ್ಲವನ್ನೂ ಮರೆತುಬಿಡುತ್ತಾರೆ. ಜನರಿಗೆ ಇದೂ ಒಂದು ವಿಧವಾದ ತಮಾಷೆ ಮಾತ್ರವೆ. ನೀನು ಮಾತ ನಾಡುತ್ತಿರುವವರೆಗೆ ಜನ ಹೇಳುತ್ತಾರೆ, 'ಆಹ! ಈತ ಬಹಳ ಚೆನ್ನಾಗಿ

ಮಾತನಾಡುತ್ತಾನೆ' ಅಂತ. ನೀನು ಮಾತನಾಡುವುದನ್ನು ನಿಲ್ಲಿಸುವುದೇ ತಡ, ಎಲ್ಲಾ ಗಾಳಿಯಲ್ಲಿ ತೂರಿಹೋಗಿಬಿಡುತ್ತದೆ.

"ಎಲ್ಲಿಯವರೆಗೆ ಒಲೆಯಲ್ಲಿ ಸೌದೆ ಉರಿಯುತ್ತಿರುವುದೊ ಅಲ್ಲಿಯ ವರೆಗೆ ಹಾಲು ಸುಮ್ಮನೆ ಮರಳಿ ಮರಳಿ ಉಕ್ಕುತ್ತಿರುತ್ತದೆ. ಸೌದೆಯನ್ನು ತೆಗೆದುಹಾಕಿದೊಡನೆಯೆ ಎಂದಿನಂತೆ ತೆಪ್ಪಗಾಗುತ್ತದೆ; ಇಳಿದುಹೋಗಿ ಬಿಡುತ್ತದೆ.

"ಸಾಧನೆ ಮಾಡಿ ಸ್ವಶಕ್ತಿಯನ್ನು ಬೆಳಸಿಕೋಬೇಕು; ಹಾಗೆ ಮಾಡದೆ ಇದ್ದರೆ ಪ್ರಚಾರಕಾರ್ಯ ಮಾಡೋಕಾಗೋದಿಲ್ಲ. 'ತನಗೇ ಮಲಗಲು ಸ್ಥಳವಿಲ್ಲ, ಶಂಕರನನ್ನು ಬೇರೆ ಕರೆಯುತ್ತಿದ್ದಾನೆ!' ಮಲಗಲು ತನಗೇ ಸ್ಥಳವಿಲ್ಲ, ಆದರೂ, 'ಓ! ಶಂಕರಾ ಬಾ; ಬಾ ನನ್ನೊಡನೆ ಮಲಗಿಕೊ' ಅಂತ ಕರೆಯೋದುಬೇರೆ! (ನಗು.)

"ನಮ್ಮ ಊರಿನ ಹಾಲಧಾರಪುಕುರದ ಏರಿಯ ಪಕ್ಕದಲ್ಲಿ ನಿತ್ಯವೂ ಬಹಿರ್ದೇಶಕ್ಕೆ ಹೋಗಿ ಆ ಸ್ಥಳವನ್ನು ಕೆಲವರು ಮಲಿನಮಾಡಿಬಿಡುತ್ತಿದ್ದರು. ಪ್ರಾತಃಕಾಲ ಆ ಊರಿನ ಜನ ಅಲ್ಲಿಗೆ ಬಂದು ಹಾಗೆ ಮಲಿನ ಮಾಡಿದವರನ್ನು ಬಯ್ದು ಹೋಗುತ್ತಿದ್ದರು. ಆದರೂ ಮಲಿನಮಾಡುವ ಕಾರ್ಯ ಮಾತ್ರ ತಪ್ಪಿಹೋಗಲಿಲ್ಲ. ಕೊನೆಗೆ ಆ ಗ್ರಾಮದವರು ಸರ್ಕಾರಕ್ಕೆ ಅರ್ಜಿಯ ಮೂಲಕ ಅದನ್ನು ತಿಳಿಯಪಡಿಸಿದರು. ಆಗ ಸರ್ಕಾರದವರು ಅಲ್ಲಿ, 'ಇಲ್ಲಿ ಹೇಸಿಗೆ-ಗೀಸಿಗೆ ಮಾಡಕೂಡದು, ಹಾಗೆ ಮಾಡಿದವರಿಗೆ ಶಿಕ್ಷೆ ವಿಧಿಸಲಾಗುತ್ತದೆ' ಅಂತ ಒಂದು ಬೋರ್ಡು ಹಾಕಿಬಿಟ್ಟರು. ಆಗ ಒಡನೆಯೇ ಎಲ್ಲಾ ನಿಂತುಹೋಗಿಬಿಟ್ಟಿತು. ಬಳಿಕ ಆ ಊರಿನವರಿಗೆ ಯಾವ ತೊಂದರೆಯೂ ಆಗಲಿಲ್ಲ. ಅದು ಸರ್ಕಾರದ ಆಜ್ಞೆ – ಎಲ್ಲರೂ ಪಾಲಿಸಲೇ ಬೇಕು.

"ಅದೇ ರೀತಿಯಾಗಿ ಮೊದಲು ಭಗವಂತನ ದರ್ಶನ ದೊರೆತು ಆತ ಆದೇಶವೀಯುವುದಾದರೆ ಆಗ ಮಾತ್ರ ಪ್ರಚಾರಕಾರ್ಯ ಸಾಧ್ಯವಾಗುತ್ತದೆ, ಲೋಕಶಿಕ್ಷಣೆಯಕಾರ್ಯ ಸಾಧ್ಯವಾಗುತ್ತದೆ; ಇಲ್ಲದೆ ಇದ್ದರೆ ನಿನ್ನ ಮಾತಿಗೆ ಯಾರು ತಾನೆ ಬೆಲೆ ಕೊಡುತ್ತಾರೆ?"

ಶ್ರೀರಾಮಕೃಷ್ಣರು ಹೇಳುತ್ತಿದ್ದ ಈ ಮಾತುಗಳನ್ನೆಲ್ಲ ಎಲ್ಲರೂ ಗಂಭೀರಮುದ್ರೆಯಿಂದ ಕೇಳುತ್ತಿದ್ದಾರೆ.

ಶ್ರೀರಾಮಕೃಷ್ಣರು ಬಂಕಿಮನಿಗೆ: "ಒಳ್ಳೇದು, ನೀನೇನೊ ಒಬ್ಬ

ದೊಡ್ಡ ಪಂಡಿತನೆ; ಬಹಳ ಪುಸ್ತಕಗಳನ್ನು ಬರೆದಿದ್ದೀಯೆ. ನೀನು ಏನು ಹೇಳುತ್ತೀಯೆ: ಮನುಷ್ಯನ ಕರ್ತವ್ಯ ಏನು? ಆತನನ್ನು ಹಿಂಬಾಲಿಸುವುದು ಏನು? ಪರಲೋಕ ಎಂಬುದರಲ್ಲಿ ನಿನಗೆ ನಂಬಿಕೆಯಿದೆ ತಾನೆ?''

ಬಂಕಿಮ: ''ಪರಲೋಕವೆ! ಅದೊಂದು ಬೇರೆ ಏನಪ್ಪ ಅದು?''

ಶ್ರೀರಾಮಕೃಷ್ಣರು: ''ಹೌದು, ಜ್ಞಾನ ಪಡೆದುಕೊಂಡ ಮೇಲೆ ಬೇರೆ ಲೋಕಕ್ಕೆ ಹೋಗಬೇಕಾಗಿಲ್ಲ, ಪುನರ್ಜನ್ಮ ಉಂಟಾಗೋದಿಲ್ಲ. ಆದರೆ ಎಲ್ಲಿಯವರೆಗೆ ಜ್ಞಾನವನ್ನು ಪಡೆದುಕೊಂಡಿಲ್ಲವೊ, ಭಗವಂತನ ಸಾಕ್ಷಾತ್ಕಾರ ವನ್ನು ಪಡೆದುಕೊಂಡಿಲ್ಲವೊ, ಅಲ್ಲಿಯವರೆಗೆ ಮತ್ತೆ ಮತ್ತೆ ಜನ್ಮವೆತ್ತ ಬೇಕಾಗುತ್ತದೆ; ಅದರಿಂದ ಬಿಡುಗಡೆ ಎಂಬುದು ಇಲ್ಲವೇ ಇಲ್ಲ. ಅಂಥ ವರಿಗೆ ಪರಲೋಕ ಎಂಬುದು ಇದ್ದೇ ಇದೆ. ಜ್ಞಾನ ದೊರೆತರೆ, ಭಗವಂತನ ದರ್ಶನ ದೊರೆತರೆ ಮುಕ್ತಿ ದೊರೆತು ಬಿಡುತ್ತದೆ— ಬಳಿಕ ಪುನರ್ಜನ್ಮವಿಲ್ಲ. ಬೇಯಿಸಿದ ಬತ್ತವನ್ನು ಬಿತ್ತಿದರೆ ಅದು ಹುಟ್ಟದು. ಯಾರಾದರು ಜ್ಞಾನಾಗ್ನಿಯಲ್ಲಿ ಬೆಂದುಹೋಗಿಬಿಟ್ಟಿರುವುದಾದರೆ ಅವರಿಂದ ಸೃಷ್ಟಿಯ ಯಾವ ಕಾರ್ಯವೂ ನಡೆಯದು. ಅವರ ಕೈಯಲ್ಲಿ ಸಂಸಾರಕಾರ್ಯ ಸಾಧ್ಯವಿಲ್ಲ; ಅವರಿಗೆ ಕಾಮಕಾಂಚನದಲ್ಲಿ ಆಸಕ್ತಿಯೇ ಇರದು. ಆಗಲೇ ಬತ್ತ ಬೆಂದುಹೋಗಿಬಿಟ್ಟಿದೆ, ಅದನ್ನು ತೆಗೆದುಕೊಂಡುಹೋಗಿ ಒಟ್ಟಲು ಹಾಕಿದರೆ ಏನು ಹುಟ್ಟುತ್ತದೆ?''

ಬಂಕಿಮ ನಗುತ್ತ ನಗುತ್ತ: ''ಮಹಾಶಯರೆ, ಜೊಂಡೂ ಕೂಡ ಯಾವ ಮರಗೆಲಸಕ್ಕೂ ಬಾರದು.''

ಶ್ರೀರಾಮಕೃಷ್ಣರು: ''ಹಾಗೆಂದು ಜ್ಞಾನಿಯೇನು ಜೊಂಡುಗಿಡ ವಲ್ಲ. ಆತ ಭಗವಂತನ ದರ್ಶನ ಮಾಡಿದ್ದಾನೆ, ಆತ ಅಮೃತ ಫಲವನ್ನು ಪಡೆದುಕೊಂಡಿದ್ದಾನೆ—ಅದು ಸೋರೆಕುಂಬಳವಲ್ಲ! ಆತನಿಗೆ ಪುನರ್ಜನ್ಮ ಎಂಬುದು ಇಲ್ಲವೇ ಇಲ್ಲ. ಭೂಮಿಯಲ್ಲಿ ಹೇಳು, ಸೂರ್ಯಲೋಕದಲ್ಲಿ ಹೇಳು, ಚಂದ್ರಲೋಕದಲ್ಲಿ ಹೇಳು— ಯಾವ ಜಾಗದಲ್ಲಿಯೂ ಆತ ಜನ್ಮವೆತ್ತಬೇಕಾಗಿರೋದಿಲ್ಲ.

''ಉಪಮೆ— ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಮಾತ್ರ. ನೀನಂತು ಒಬ್ಬ ಪಂಡಿತನೆ. ನ್ಯಾಯ ಓದಿಲ್ಲವೇನು? ಆತ ಒಂದು ಹುಲಿಯೇ ಅಂತ ಹೇಳಿದರೆ, ಆತನಿಗೆ ಒಂದು ಭೀಕರ ಬಾಲವಿದೆ ಮತ್ತು

ಗುಡಾಣದಂಥ ಒಂದು ಮುಖ ಇದೆ ಅಂತಲೇನಾಗೋದಿಲ್ಲವಲ್ಲ! (ಎಲ್ಲರೂ ನಗುತ್ತಾರೆ.)

"ನಾನು ಕೇಶವಸೇನನಿಗೆ ಇದೇ ವಿಷಯವನ್ನು ಹೇಳಿದೆ. ಕೇಶವ ಸೇನ ಕೇಳಿದ, 'ಮಹಾಶಯರೆ, ಪರಲೋಕ ಎಂಬುದು ಇದೆಯೆ?' ಅಂತ. ನಾನು ಯಾವ ಒಂದು ನಿರ್ದಿಷ್ಟ ಉತ್ತರವನ್ನೂ ಕೊಡಲಿಲ್ಲ. ಹೇಳಿದೆ; ಕುಂಬಾರರು ಮಡಕೆಗಳನ್ನು ಬಿಸಿಲಿಗೆ ಇಡುತ್ತಾರೆ— ಹಸಿಯದು ಬೆಂದದ್ದು ಎರಡನ್ನೂ ಇಡುತ್ತಾರೆ. ಅಕಸ್ಮಾತ್ತಾಗಿ ದನಕರುಗಳು ಅವನ್ನು ಒಮ್ಮೊಮ್ಮೆ ತುಳಿದುಬಿಡುತ್ತವೆ. ಬೆಂದ ಮಡಕೆಗಳು ಒಡೆದುಹೋಗಿದ್ದರೆ ಕುಂಬಾರರು ಅವನ್ನು ಬಿಸಾಡಿಬಿಡುತ್ತಾರೆ; ಆದರೆ ಹಸಿಯ ಮಡಕೆಗಳು ಒಡೆದು ಹೋಗಿದ್ದರೆ ಅವನ್ನು ಮನೆಗೆ ತಂದು ನೀರಿನಲ್ಲಿ ನೆನೆಹಾಕಿ ಮತ್ತೆ ಮುದ್ದೆಮಾಡಿ ಚಕ್ರದಲ್ಲಿಟ್ಟು ಹೊಸ ಮಡಕೆ ತಯಾರು ಮಾಡುತ್ತಾರೆ; ಬಿಸಾಡೋದಿಲ್ಲ. ಅದಕ್ಕಾಗಿ ನಾನು ಕೇಶವನಿಗೆ ಹೇಳಿದೆ, 'ಎಲ್ಲಿಯವರೆಗೆ ನೀನು ಹಸಿಯಾಗಿಯೇ ಇರುವೆಯೊ, ಅಲ್ಲಿಯವರೆಗೆ ಕುಂಬಾರ ನಿನ್ನನ್ನು ಬಿಡ. ಎಲ್ಲಿಯವರೆಗೆ ನೀನು ಜ್ಞಾನವನ್ನು ಪಡೆದುಕೊಳ್ಳುವುದಿಲ್ಲವೊ, ಎಲ್ಲಿಯವರೆಗೆ ನೀನು ಭಗವಂತನ ದರ್ಶನವನ್ನು ಪಡೆದುಕೊಳ್ಳುವುದಿಲ್ಲವೊ, ಅಲ್ಲಿಯವರೆಗೆ ಕುಂಬಾರ (ಭಗವಂತ) ಮತ್ತೆ ಮತ್ತೆ ನಿನ್ನನ್ನು ಚಕ್ರಕ್ಕೆ ಹಾಕುತ್ತಲೇ ಇರುತ್ತಾನೆ; ಬಿಡಲೊಲ್ಲ. ಅಂದರೆ ಮತ್ತೆ ಮತ್ತೆ ಜನ್ಮ ವೆತ್ತಬೇಕಾಗುತ್ತದೆ, ತಪ್ಪಿಸಿಕೊಳ್ಳುವಂತೆಯೇ ಇಲ್ಲ. ಆತನ ಸಾಕ್ಷಾತ್ಕಾರ ಪಡೆದುಕೊಂಡುಬಿಟ್ಟರೆ, ಆಗ ಮುಕ್ತಿ ದೊರಕುತ್ತದೆ, ಆಗ ಕುಂಬಾರ ಬಿಟ್ಟುಬಿಡುತ್ತಾನೆ. ಏಕೆಂದರೆ, ಆಗ ನೀನು ಈ ಮಾಯಾ ಸೃಷ್ಟಿರಚನೆಯಲ್ಲಿ ಯಾವ ಕೆಲಸಕ್ಕೂ ಬಾರದವನಾಗುತ್ತೀಯೆ' ಅಂತ. ಜ್ಞಾನಿ ಮಾಯೆಯ ಮಿತಿಯನ್ನು ದಾಟಿಹೋಗಿ ಬಿಟ್ಟಿರುತ್ತಾನೆ. ಆದ್ದರಿಂದ ಈ ಮಾಯಾ ಸಂಸಾರದಲ್ಲಿ ಆತನಿಗೆ ಮತ್ತೇನು ಕೆಲಸ?

"ಆದರೆ ಕೆಲಕೆಲ ಜ್ಞಾನಿಗಳನ್ನು ಲೋಕಶಿಕ್ಷಣಾರ್ಥಕ್ಕಾಗಿ ಭಗವಂತ ಈ ಮಾಯಾಸಂಸಾರದಲ್ಲಿ ಇಡುತ್ತಾನೆ. ಅವರು ಆ ಕಾರ್ಯಕ್ಕಾಗಿ ವಿದ್ಯಾಮಾಯೆಯ ಸಹಾಯ ತೆಗೆದುಕೊಳ್ಳುತ್ತಾರೆ. ಭಗವಂತನೇ ತನ್ನ ಸ್ವಕಾರ್ಯಕ್ಕಾಗಿ ಇವರನ್ನು ಈ ಜಗತ್ತಿನಲ್ಲಿ ಇಟ್ಟಿರುತ್ತಾನೆ. ಉದಾಹರಣೆಗಾಗಿ: ಶುಕದೇವ, ಶಂಕರಾಚಾರ್ಯರು.

(ಬಂಕಿಮನಿಗೆ ನಗುತ್ತ) "ಒಳ್ಳೇದು, ನೀನು ಏನು ಹೇಳುತ್ತೀಯೆ? ಮನುಷ್ಯನ ಕರ್ತವ್ಯವೇನು?"

ಬಂಕಿಮ ನಗುತ್ತ ನಗುತ್ತ: "ಅದರ ಸಂಬಂಧವಾಗಿ ಹೇಳ ಬೇಕೆಂದರೆ ನನಗೆನಿಸುತ್ತದೆ ಆಹಾರ ನಿದ್ರೆ ಮೈಥುನ ಅಂತ."

ಶ್ರೀರಾಮಕೃಷ್ಣರು ಚಿಟ್ಟುಗೊಂಡು: "ಛೀ! ನಿನಗೆ ನಾಚಿಕೆ ಹೇಸಿಕೆ ಅಂಬೋದು ಏನೂ ಇಲ್ಲ! ನೀನು ಹಗಲೂ ರಾತ್ರಿ ಏನು ಏನು ಮಾಡು ತ್ತಿದ್ದೀಯೊ ಅದೇ ನಿನ್ನ ಬಾಯಿಂದ ಹೊರಬೀಳುತ್ತಿದೆ. ಜನ ಏನು ತಿನ್ನು ತ್ತಾರೊ ಅದನ್ನೇ ತೇಗುತ್ತಾರೆ. ಮೂಲಂಗಿ ತಿಂದರೆ ಮೂಲಂಗಿ ವಾಸನೆಯ ತೇಗು ಬರುತ್ತದೆ. ಎಳನೀರು ಕುಡಿದರೆ ಎಳನೀರು ವಾಸನೆಯ ತೇಗು ಬರುತ್ತದೆ. ಹಗಲೂ ಇರುಳು ನೀನು ಕಾಮಕಾಂಚನದ ಮಧ್ಯೆ ಬಿದ್ದಿದ್ದೀಯೆ; ಅದಕ್ಕಾಗಿಯೇ ನಿನ್ನ ಬಾಯಿಂದ ಈ ವಿಧವಾದ ಮಾತು ಗಳು ಹೊರಬರುತ್ತಿವೆ. ಕೇವಲ ವಿಷಯಚಿಂತನೆಯಲ್ಲಿಯೇ ಮುಳುಗಿ ಹೋಗಿದ್ದರೆ ಲೆಕ್ಕಾಚಾರದ ಸ್ವಭಾವ ಬಂದುಬಿಡುತ್ತದೆ; ಮನುಷ್ಯ ಕಪಟಿ ಯಾಗಿಬಿಡುತ್ತಾನೆ. ಭಗವಚ್ಚಿಂತನೆ ಮಾಡಿದರೆ ಸರಳನಾಗುತ್ತಾನೆ. ಯಾರಿಗೇ ಆಗಲಿ ಭಗವಂತನ ಸಾಕ್ಷಾತ್ಕಾರವಾಗಿದ್ದರೆ ಅವರ ಬಾಯಿಂದ ನೀನಾಡಿದ ಮಾತುಗಳು ಎಂದಿಗೂ ಬಾರವು. ಭಗವಚ್ಚಿಂತನೆ ಮಾಡದೆ ಬರೀ ಪಾಂಡಿತ್ಯಗಳಿಸಿಕೊಂಡುಬಿಟ್ಟರೆ ಏನಾಯಿತು? ವಿವೇಕವೈರಾಗ್ಯವಿಲ್ಲ ದಿದ್ದರೆ ಏನಾಯಿತು? ಕಾಮಕಾಂಚನದಲ್ಲಿ ಮನಸ್ಸು ಆಸಕ್ತವಾಗಿದ್ದರೆ ಬರೀ ಪಾಂಡಿತ್ಯದಿಂದ ಏನಾಗುತ್ತದೆ?

"ರಣಹದ್ದು ಬಹಳ ಎತ್ತರಕ್ಕೇನೊ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿಯೆಲ್ಲ ಕೇವಲ ಹೆಣದ ಗುಂಡಿಗಳ ಕಡೆ. ಪಂಡಿತ ಅನಿಸಿ ಕೊಳ್ಳೋನು ಅನೇಕ ಪುಸ್ತಕ ಶಾಸ್ತ್ರ ಓದಿರುತ್ತಾನೆ, ಶ್ಲೋಕ ಎತ್ತಿಹೇಳಬಲ್ಲ, ಅನೇಕ ಪುಸ್ತಕಗಳನ್ನು ಬರೆದಿರಬಹುದು. ಆದರೆ ಆತ ಸ್ತ್ರೀ ಆಸಕ್ತನಾಗಿ, ಹೆಸರು ಕೀರ್ತಿ ಧನಕನಕಾದಿಗಳೇ ಸಾರವಸ್ತು ಅಂತ ಭಾವಿಸುತ್ತಿದ್ದರೆ ಆತ ಹೇಗೆ ಪಂಡಿತನಾಗಬಲ್ಲ? ಭಗವಂತನಲ್ಲಿ ಮನಸ್ಸು ನೆಲಸದಿದ್ದರೆ ಆತ ಪಂಡಿತನಾಗಬಲ್ಲನೆ?

"ಕೆಲಕೆಲವರು ಭಾವಿಸುತ್ತಾರೆ, 'ಇವರು ಕೇವಲ ಭಗವಚ್ಚಿಂತನೆ ಮಾಡುತ್ತಾರೆ; ಹುಚ್ಚರು ಇವರು. ಇವರಿಗೆ ತಲೆ ಕೆಟ್ಟುಹೋಗಿದೆ. ನಾವೆಷ್ಟು ಬುದ್ಧಿವಂತರು! ನಾವು ಹೇಗೆ ಸುಖೋಪಭೋಗ— ಹಣ,

ಹೆಸರು, ಕೀರ್ತಿ, ಇಂದ್ರಿಯಸುಖ ಪಡುತ್ತಿದ್ದೇವೆ!' ಅಂತ. ಕಾಗೆಯೂ ಭಾವಿಸುತ್ತದೆ ತಾನೂ ಬಹಳ ಬುದ್ಧಿಶಾಲಿ ಹಕ್ಕಿ ಅಂತ; ಆದರೆ ಅದು ಬೆಳಗ್ಗೆ ಏಳುವುದೇ ತಡ ಒಡನೆಯೇ ಹೋಗಿ ಪರರ ಹೇಸಿಗೆ ತಿಂದೇ ಸಾಯುತ್ತದೆ. ನೋಡಿಲ್ಲವೆ ಕಾಗೆ ಎಷ್ಟೊಂದು ಬಿಂಕದಿಂದ ನಡೆಯುತ್ತದೆ ಅಂಬೋದನ್ನ? ಬಹಳ ಬುದ್ಧಿಶಾಲಿ ಹಕ್ಕಿಯೇ!"

ಎಲ್ಲರೂ ನಿಶ್ಶಬ್ದರಾಗಿ ಕುಳಿತಿದ್ದಾರೆ.

ಪರಮಹಂಸರು ಮತ್ತೆ ತಮ್ಮ ಮಾತು ಮುಂದುವರಿಸಿದರು: "ಯಾರು ಭಗವಚ್ಚಿಂತನೆ ಮಾಡುತ್ತಾರೊ, ಯಾರು ವಿಷಯಗಳಲ್ಲಿ ಆಸಕ್ತಿ—ಕಾಮಕಾಂಚನದಲ್ಲಿ ಆಸಕ್ತಿ ತೊಲಗಿಹೋಗಲು ಹಗಲೂ ಇರುಳೂ ಭಗವಂತನ ಪ್ರಾರ್ಥನೆ ಮಾಡುತ್ತಾರೊ, ಯಾರಿಗೆ ವಿಷಯರಸ ಕಹಿಯಾಗಿ ತೋರುವುದೊ, ಯಾರಿಗೆ ಹರಿಪಾದಪದ್ಮಸುಧೆ ಹೊರತು ಬೇರೆ ಏನೂ ರುಚಿಸದೊ ಅಂಥವರ ಸ್ವಭಾವ ಹಂಸಪಕ್ಷಿಯ ಹಾಗೆ ಆಗಿಬಿಟ್ಟಿರುತ್ತದೆ. ಹಂಸದ ಎದುರು ನೀರುಬೆರಸಿದ ಹಾಲನ್ನು ಇಡಿ, ಅದು ನೀರನ್ನು ಬಿಟ್ಟು ಹಾಲನ್ನು ಕುಡಿದುಬಿಡುತ್ತದೆ. ಅದರ ನಡೆಯನ್ನು ನೀನು ನೋಡಿಲ್ಲ ವೇನು? ಅದು ನೇರವಾಗಿ ಮುಂದುಮುಂದಕ್ಕೆ ಮುಂಬರಿದುಬಿಡುತ್ತದೆ. ಶುದ್ಧ ಭಕ್ತರ ನಡೆಯೂ ಕೇವಲ ಭಗವಂತನ ಕಡೆಗೆಯೇ. ಅವರಿಗೆ ಬೇರೆ ಏನೂ ಬೇಕಾಗಿಲ್ಲ; ಅವರಿಗೆ ಬೇರೆ ಯಾವುದೂ ರುಚಿಸದು.

(ದಯಾರ್ದ್ರಹೃದಯದಿಂದ ಬಂಕಿಮನಿಗೆ) "ಮನಸ್ಸಿಗೇನೂ ತಿಳಿದುಕೋಬೇಡ."

ಬಂಕಿಮ: "ಮಹಾಶಯರೆ ನಾನು ತಮ್ಮಿಂದ ಮಧುಪೂರಿತ ವಚನಗಳನ್ನು ಕೇಳಲು ಮಾತ್ರವೇ ಬರಲಿಲ್ಲ."

ಶ್ರೀರಾಮಕೃಷ್ಣರು ಬಂಕಿಮನಿಗೆ: "ಕಾಮಕಾಂಚನವೇ ಸಂಸಾರ. ಇದರ ಹೆಸರೇ ಮಾಯೆ ಅಂಬೋದು. ಅದು ಆತನ ದರ್ಶನ ಪಡೆಯಲು ಆತನ ಚಿಂತನೆ ಮಾಡಲು ಬಿಟ್ಟುಕೊಡಲೊಲ್ಲದು. ಒಂದೆರಡು ಮಕ್ಕಳಾದ ನಂತರ ಹೆಂಡತಿಯೊಡನೆ ಅಣ್ಣತಂಗಿಯರ ಹಾಗೆ ವಾಸಿಸಬೇಕು ಮತ್ತು ಆಕೆಯೊಡನೆ ಸರ್ವದಾ ಭಗವಂತನ ವಿಷಯವನ್ನೇ ಮಾತನಾಡಬೇಕು. ಹಾಗೆಮಾಡುವುದಾದರೆ ಇಬ್ಬರ ಮನಸ್ಸೂ ಆತನಕಡೆ ಹರಿಯುತ್ತದೆ. ಹೆಂಡತಿ ಭಗವಂತನ ಸಾಕ್ಷಾತ್ಕಾರ ಪಡೆಯಲು ಸಹಾಯಕಳಾಗುತ್ತಾಳೆ. ಪಶುಭಾವ ನಾಶವಾಗದ ಹೊರತು ಭಗವಂತನ ಆನಂದದ ಸವಿಯನ್ನು

ಸವಿಯಲಾಗೋದಿಲ್ಲ. ಪಶುಭಾವ ಹೃದಯವನ್ನು ಬಿಟ್ಟುತೊಲಗಿಹೋಗುವಂತೆ ಭಗವಂತನಿಗೆ ಪ್ರಾರ್ಥನೆಮಾಡಬೇಕು; ವ್ಯಾಕುಲಚಿತ್ತದಿಂದ ಪ್ರಾರ್ಥನೆಮಾಡಬೇಕು. ಆತ ಅಂತರ್ಯಾಮಿ. ನಾವು ಹೃತ್ಪೂರ್ವಕವಾಗಿ ಪ್ರಾರ್ಥನೆಮಾಡಿದ್ದೇ ಅದರೆ ಆತ ಕೇಳಿಯೇ ಕೇಳುತ್ತಾನೆ.

"ಮತ್ತೆ—'ಕಾಂಚನ'. ನಾನು ಪಂಚವಟಿಯ ಹತ್ತಿರ ಗಂಗೆ ದಡದಲ್ಲಿ ಕುಳಿತು, 'ರೂಪಾಯಿ ಮಣ್ಣೆ', 'ರೂಪಾಯಿ ಮಣ್ಣೆ', 'ಮಣ್ಣೇ ರೂಪಾಯಿ, ರೂಪಾಯೇ ಮಣ್ಣು' ಅಂತ ಹೇಳಿ ಅವನ್ನು ನೀರಿನಲ್ಲಿ ಬಿಸಾಡಿಬಿಟ್ಟೆ."

ಬಂಕಿಮ: "ದುಡ್ಡು ಅಂಬೋದು ಮಣ್ಣೇ! ಮಹಾಶಯರೆ, ಕೈಯಲ್ಲಿ ಒಂದು ನಾಲ್ಕು ಕಾಸು ಇದ್ದರೆ ಬಡಬಗ್ಗರಿಗೆ ಕೊಡಬಹುದು. ದುಡ್ಡು ಅಂಬೋದು ಮಣ್ಣಿಗೆ ಸರಿಸಮಾನವಾಗಿದ್ದ ಪಕ್ಷದಲ್ಲಿ ದಯೆ ತೋರಿಸೋಕೆ ಪರೋಪಕಾರ ಮಾಡೋಕೆ ಆಗೋಹಾಗೆಯೆ ಇಲ್ಲ."

ಶ್ರೀರಾಮಕೃಷ್ಣರು ಬಂಕಿಮನಿಗೆ: "ದಯೆ! ಪರೋಪಕಾರ! ಪರೋಪಕಾರ ಮಾಡುತ್ತೇನೆ ಅಂತ ಹೇಳಬೇಕಾದರೆ ನಿನಗೆ ಎಷ್ಟೊಂದು ಎದೆಕೆಚ್ಚು ಇರಬೇಕು? ಮನುಷ್ಯ ಅಷ್ಟೊಂದು ಜಂಬಕೊಚ್ಚಿಕೊಳ್ಳುತ್ತಾನೆ. ಆತ ನಿದ್ರಿಸುತ್ತಿರುವಾಗ ಯಾರಾದರು ಬಂದುನಿಂತು ಆತನ ಬಾಯಿಗೆ ಒಂದಕ್ಕೆ ಹೋಗಿಬಿಟ್ಟರೂ ಅದು ಅವನಿಗೆ ಗೊತ್ತೇ ಆಗದು—ಆತನ ಬಾಯಿಂದ ಅದು ತುಂಬಿಹರಿಯುತ್ತಿದ್ದರೂ ಸರಿಯೆ ಅದು ಗೊತ್ತಾಗದು. ಆಗ ಆತನ ಅಹಂಕಾರ ಅಭಿಮಾನ ದರ್ಪ ಇವೆಲ್ಲ ಎಲ್ಲಿಗೆ ಹೋಗಿರುತ್ತವೆ?

"ಸನ್ಯಾಸಿ ಕಾಮಕಾಂಚನತ್ಯಾಗ ಮಾಡಲೇಬೇಕು. ಆತ ಮತ್ತೆ ಅವನ್ನು ಸ್ವೀಕರಿಸಲಾಗೋದಿಲ್ಲ. ಉಗುಳಿಬಿಟ್ಟ ಉಗುಳನ್ನು ಮತ್ತೆ ತೆಗೆದು ನುಂಗಬಾರದು. ಸನ್ಯಾಸಿ ಯಾರಿಗಾದರು ಏನನ್ನಾದರು ಕೊಟ್ಟರೆ ಅದನ್ನು ತಾನು ಕೊಡುತ್ತಿದ್ದೇನೆ ಅಂತ ಆತ ಭಾವಿಸೋದಿಲ್ಲ. ದಯೆದೋರುವುದು ಭಗವಂತನ ಹಕ್ಕು, ಮನುಷ್ಯ ದಯೆದೋರಲೆಂತಾದೀತು? ದಾನ-ಗೀನಗಳೆಲ್ಲ ಆತನ ಇಚ್ಛೆಗನುಸಾರ ಮಾತ್ರ ಸಾಧ್ಯ. ನಿಜವಾದ ಸನ್ಯಾಸಿ ಆಂತರಿಕವಾಗಿಯೂ ತ್ಯಾಗಮಾಡುತ್ತಾನೆ, ಬಾಹ್ಯಕವಾಗಿಯೂ ತ್ಯಾಗ ಮಾಡುತ್ತಾನೆ. ಯಾರು ಬೆಲ್ಲ (ಕಾಮಕಾಂಚನ) ತಿನ್ನೋದಿಲ್ಲವೊ ಆತ ತನ್ನ ಹತ್ತಿರ ಅದನ್ನು ಇಟ್ಟುಕೊಂಡಿರೋದೂ ಒಳ್ಳೆಯದಲ್ಲ. ಆತ ತನ್ನ

ಹತ್ತಿರ ಬೆಲ್ಲ ಇಟ್ಟುಕೊಂಡು ಅದನ್ನು ತಿನ್ನೋದಿಲ್ಲ ಎಂದು ಹೇಳಿದರೆ ಜನ ನಂಬೋದಿಲ್ಲ.

"ಸಂಸಾರಿಗಳಿಗೆ ದುಡ್ಡಿನ ಆವಶ್ಯಕತೆ ಇದೆ; ಏಕೆಂದರೆ ಆತನಿಗೆ ಹೆಂಡತಿ ಮಕ್ಕಳಿದ್ದಾರೆ. ಅವರ ಪೋಷಣೆಗಾಗಿ ಆತ ದುಡ್ಡು ಕೂಡಿಡ ಬೇಕಾಗುತ್ತದೆ. ಕೇವಲ ಸನ್ಯಾಸಿ ಮತ್ತು ಹಕ್ಕಿ ಕೂಡಿಡುವುದಿಲ್ಲ. ಆದರೆ ಹಕ್ಕಿಗೆ ಮರಿ ಆದಾಗ ಅವಕ್ಕೆ ಅದು ಕೊಕ್ಕಿನಲ್ಲಿ ಆಹಾರ ಶೇಖರಿಸಿಕೊಂಡು ತರುತ್ತದೆ; ಆಗ ಅದೂ ಸಂಚಯಮಾಡಬೇಕಾಗುತ್ತದೆ. ಪರಿವಾರದ ಭರಣೆ ಪೋಷಣೆ ಮಾಡಬೇಕಾಗಿರುವುದರಿಂದ ಸಂಸಾರಿಗೆ ದುಡ್ಡಿನ ಆವಶ್ಯ ಕತೆ ಇದೆ.

"ಸಂಸಾರಿ ನಿಜವಾದ ಭಕ್ತನಾದರೆ ಆತ ಅನಾಸಕ್ತನಾಗಿ ತನ್ನ ಕೆಲಸ ಕಾರ್ಯಗಳನ್ನ ಮಾಡುತ್ತಾನೆ. ತನ್ನ ಕರ್ಮದ ಫಲ ಲಾಭದಾಯಕ ವಾಗಿದ್ದರೂ ಸರಿಯೆ ನಷ್ಟದಾಯಕವಾಗಿದ್ದರೂ ಸರಿಯೆ, ಸುಖದಾಯಕ ವಾಗಿದ್ದರೂ ಸರಿಯೆ ದುಃಖದಾಯಕವಾಗಿದ್ದರೂ ಸರಿಯೆ ಎಲ್ಲವನ್ನೂ ಭಗವಂತನಿಗೆ ಅರ್ಪಿಸಿಬಿಡುತ್ತಾನೆ. ಹಗಲಿರುಳು ಭಕ್ತಿಗಾಗಿ ಪ್ರಾರ್ಥನೆ ಮಾಡುತ್ತಾನೆ, ಮತ್ತೆ ಬೇರೆ ಯಾವುದಕ್ಕೂ ಪ್ರಾರ್ಥನೆ ಮಾಡೋದಿಲ್ಲ. ಇದಕ್ಕೇ ನಿಷ್ಕಾಮಕರ್ಮ ಅಂತ ಹೆಸರು, ಅಂದರೆ ಅನಾಸಕ್ತಿಯಿಂದ ಕೆಲಸ ಮಾಡೋದು. ಸನ್ಯಾಸಿಯೂ ಎಲ್ಲಾ ಕೆಲಸಗಳನ್ನು ನಿಷ್ಕಾಮ ಭಾವನೆಯಿಂದ ಮಾಡಬೇಕು; ಆದರೆ ಆತ ಸಂಸಾರಿಗಳ ಹಾಗೆ ಪ್ರಾಪಂಚಿಕ ಕರ್ಮಗಳನ್ನು ಮಾಡಬೇಕಾಗಿರೋದಿಲ್ಲ.

"ಸಂಸಾರಿ ನಿಷ್ಕಾಮ ಭಾವನೆಯಿಂದ ಯಾರಿಗಾದರು ದಾನಮಾಡಿ ದರೆ ಅದು ತನ್ನ ಉಪಕಾರಕ್ಕಾಗಿಯೇ ವಿನಾ ಪರರ ಉಪಕಾರಕ್ಕಲ್ಲ. ಸರ್ವ ಭೂತಗಳಲ್ಲಿಯೂ ಭಗವಂತನಿರುವುದರಿಂದ ಆತನ ಸೇವೆ ಮಾಡಿದಂತೆಯೇ ಆಗುತ್ತದೆ. ಹರಿಯ ಸೇವೆ ಮಾಡಿದರೆ ಅದು ತನಗೇ ಉಪಕಾರ ಮಾಡಿ ಕೊಂಡಂತಾಗುವುದೇ ವಿನಾ ಪರರಿಗಲ್ಲ. ಸರ್ವಭೂತಗಳಲ್ಲಿಯೂ ಹರಿಯ ಸೇವೆ—ಬರೀ ಮನುಷ್ಯನಲ್ಲೇ ಅಲ್ಲ ಎಲ್ಲಾ ಜೀವ ಜಂತುಗಳಲ್ಲಿಯೂ ಹರಿಯ ಸೇವೆ ಯಾರೇ ಆಗಲಿ ಮಾಡಿದರೆ, ಮತ್ತು ಆತನಿಗೆ ಹೆಸರು ಬೇಕಾಗದೆ ಕೀರ್ತಿ ಬೇಕಾಗದೆ ಸತ್ತ ಬಳಿಕ ಸ್ವರ್ಗಕ್ಕೆ ಹೋಗಬೇಕು ಎಂಬ ಇಚ್ಛೆ ಇಲ್ಲದೆ ಇದ್ದರೆ, ಯಾರಿಗೆ ಸೇವೆ ಮಾಡುತ್ತಿದ್ದಾನೊ ಅವರಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಇದ್ದರೆ ಮತ್ತು ಇವೇ ಮೊದಲಾದ

ರೀತಿಯಾಗಿ ಸೇವೆಮಾಡಿದರೆ, ಆತ ಯಥಾರ್ಥ ನಿಷ್ಕಾಮಕರ್ಮ, ಅನಾಸಕ್ತಕರ್ಮ ಮಾಡಿದಂತೆ ಆಗುತ್ತದೆ. ಈ ರೀತಿಯಾಗಿ ನಿಷ್ಕಾಮಕರ್ಮ ಮಾಡಿದರೆ ಮಾಡಿದವನಿಗೇ ಶ್ರೇಯಸ್ಸು ಉಂಟಾಗುತ್ತದೆ. ಕರ್ಮಯೋಗ ಅಂಬುದು ಇದೇ. ಈ ಕರ್ಮಯೋಗ ಭಗವಂತನನ್ನ ಪಡೆಯೋಕೆ ಒಂದು ಮಾರ್ಗ. ಆದರೆ ಬಹಳ ಕಠಿನವಾದ್ದು, ಕಲಿಯುಗಕ್ಕೆ ಅನುಗುಣವಾದ್ದಲ್ಲ.

"ಅದಕ್ಕಾಗಿಯೆ ನಾನು ಹೇಳೋದು, ಯಾರು ಅನಾಸಕ್ತಿಯಿಂದ ಈ ವಿಧವಾಗಿ ಕರ್ಮಮಾಡುತ್ತಾನೊ — ಯಾರು ದಯಾಪರನೊ ಮತ್ತು ದಾನಿಯೊ — ಆತ ತನಗೇ ಶ್ರೇಯಸ್ಸು ತಂದುಕೊಳ್ಳುತ್ತಾನೆ. ಯಾರು ಜೀವರಿಗಾಗಿ ಚಂದ್ರ ಸೂರ್ಯ, ತಂದೆ ತಾಯಿ, ಹೂವು ಹಣ್ಣು ಧಾನ್ಯ ಸೃಷ್ಟಿಸಿದಾನೊ ಆ ಭಗವಂತನೇ ಪರರಿಗೆ ಉಪಕಾರ ಮಾಡಲು ಪರರಿಗೆ ಶ್ರೇಯಸ್ಸನ್ನು ತರಲು ಹಕ್ಕುದಾರ. ತಾಯಿತಂದೆಗಳಲ್ಲಿ ಕಾಣಬರುವ ಒಲುಮೆ ಅದು ಆತನಿಗೆ ಸೇರಿದುದೆ: ಜೀವರಕ್ಷಣೆಗಾಗಿಯೇ ಆತ ಅದನ್ನು ಅವರಿಗೆ ಕೊಟ್ಟಿದಾನೆ. ದಯಾಳುವಿನಲ್ಲಿ ಕಾಣಬರುವ ದಯೆ ಆತನದೇ: ನಿಸ್ಸಹಾಯಕ ಜೀವಿಗಳ ರಕ್ಷಣೆಗಾಗಿ ಅವರಿಗೆ ಅದನ್ನು ಕೊಟ್ಟಿದಾನೆ. ನೀನು ದಯೆ ತೋರು ಬಿಡು ಆತ ಒಂದಲ್ಲ ಒಂದು ವಿಧವಾಗಿ ತನ್ನ ಕೆಲಸವನ್ನು ಮಾಡಿಸಿಕೊಂಡುಬಿಡುತ್ತಾನೆ. ಆತನ ಕಾರ್ಯ ಮಾತ್ರ ಎಂದಿಗೂ ನಿಲ್ಲದು.

"ಆದ್ದರಿಂದ ಜೀವನ ಕರ್ತವ್ಯವೇನು? ಬೇರೆ ಏನು, ಆತನಿಗೆ ಶರಣಾಗತನಾಗೋದು ಮತ್ತು ಯಾವುದರಿಂದ ಆತನನ್ನು ಪಡೆಯಬಹುದೊ, ಯಾವುದರಿಂದ ಆತನ ದರ್ಶನ ಹೊಂದಬಹುದೊ ಅದಕ್ಕಾಗಿ ವ್ಯಾಕುಲನಾಗಿ ಆತನಿಗೆ ಪ್ರಾರ್ಥನೆಮಾಡೋದು.

"ಒಮ್ಮೆ ಶಂಭುಮಲ್ಲಿಕ ಹೇಳಿದ, 'ನನಗೆ ಅನೇಕ ಡಿಸ್ಪೆನ್ಸರಿ ಮತ್ತು ಹಾಸ್ಪಿಟಲ್‌ಗಳನ್ನು ಕಟ್ಟಿಸಬೇಕೆಂಬುದಾಗಿ ಬಹಳ ಇಚ್ಛೆ ಇದೆ; ಅದರಿಂದ ಬಡಬಗ್ಗರಿಗೆ ಬಹಳ ಉಪಕಾರವಾಗುತ್ತದೆ' ಎಂದು. ನಾನು ಹೇಳಿದೆ, 'ಹೌದು, ಅನಾಸಕ್ತನಾಗಿ ಅವುಗಳನ್ನೆಲ್ಲ ಮಾಡುವುದಾದರೆ ಕೆಟ್ಟದ್ದೇನಲ್ಲ. ಆದರೆ ಭಗವಂತನಲ್ಲಿ ನಿಜವಾದ ಪ್ರೀತಿ ಉಂಟಾಗದೆ ಇದ್ದರೆ ಅನಾಸಕ್ತನಾಗೋದು ಬಹಳ ಕಠಿನ. ಜೊತೆಗೆ ಅನೇಕ ಕಾರ್ಯಗಳನ್ನು ಗಂಟು ಹಾಕಿಕೊಂಡರೆ ನಮಗೆ ಗೊತ್ತಾಗದ ರೀತಿಯಲ್ಲಿ ಯಾವ ದಿಕ್ಕಿನಿಂದಲೋ

ಆಸಕ್ತಿ ಹೃದಯವನ್ನು ಹೊಕ್ಕಿಬಿಡುತ್ತದೆ. ನೀನು ಭಾವಿಸಬಹುದು ನಿಷ್ಕಾಮ ಭಾವನೆಯಿಂದ ಕೆಲಸಮಾಡುತ್ತಿದ್ದೇನೆ ಅಂತ, ಆದರೆ ಆಗಲೇ ಹೃದಯದಲ್ಲಿ ಕೀರ್ತಿ ಸಂಪಾದಿಸುವ ಇಚ್ಛೆ ಬಂದುಬಿಟ್ಟಿರಬಹುದು, ಹೆಸರುವಾಸಿಯನ್ನು ಪಡೆಯುವ ಇಚ್ಛೆ ಬಂದುಬಿಟ್ಟಿರಬಹುದು. ಇದೂ ಅಲ್ಲದೆ ಹೆಚ್ಚು ಕರ್ಮಗಳನ್ನು ಗಂಟುಹಾಕಿಕೊಂಡರೆ ಅವುಗಳ ಒತ್ತಡದಲ್ಲಿ ಭಗವಂತನನ್ನು ಮರೆತುಬಿಡುತ್ತೀಯೆ' ಅಂತ. ಆತನಿಗೆ ಮತ್ತೆ ಹೇಳಿದೆ, 'ಶಂಭು, ನಿನಗೆ ಒಂದು ಪ್ರಶ್ನೆ ಹಾಕಬೇಕೆಂದಿದ್ದೇನೆ? ಒಂದು ಪಕ್ಷ ಭಗವಂತ ನಿನಗೆ ದರ್ಶನ ಕೊಟ್ಟರೆ, ನಿನಗೆ ಆತ ಬೇಕೊ ಅಥವಾ ಕೆಲವು ಹಾಸ್ಪಿಟಲ್ ಡಿಸ್ಪೆನ್ಸರಿಗಳು ಬೇಕೊ?' ಅಂತ. ಆತ ದೊರೆತುಬಿಟ್ಟದ್ದೇ ಆದರೆ ಆಗ ಬೇರೆ ಏನೂ ಬೇಕಾಗದು. ಸಕ್ಕರೇಪಾನಕ ದೊರೆತಮೇಲೆ ಜೋನೀಬೆಲ್ಲದ ಪಾನಕದ ಕಡೆ ಹೋಗಲಿಚ್ಛೆಯಾಗದು.

"ಯಾರು ಹಾಸ್ಪಿಟಲ್ ಡಿಸ್ಪೆನ್ಸರಿ ಕಟ್ಟಿಸಿ ಅದರಿಂದಲೇ ಆನಂದ ಪಡೆಯುವರೊ, ಅವರು ಒಳ್ಳೆಯವರೆ; ಆದರೆ ಅವರು ಬೇರೆ ಶ್ರೇಣಿಗೆ ಸೇರಿದವರು. ಯಾರು ನಿಜವಾದ ಭಕ್ತನೊ, ಆತನಿಗೆ ಭಗವಂತನೊಬ್ಬನಲ್ಲದೆ ಬೇರೆ ಏನೂ ಬೇಕಾಗಿಲ್ಲ. ಒಂದುಪಕ್ಷ ಅನೇಕ ಕೆಲಸಗಳನ್ನು ಮಾಡಬೇಕಾಗಿಬಂದರೆ ಆತ ವ್ಯಾಕುಲನಾಗಿ ಪ್ರಾರ್ಥನೆಮಾಡುತ್ತಾನೆ, 'ಹೇ ಭಗವಂತ, ಕೃಪೆಯಿಟ್ಟು ನನ್ನ ಕೆಲಸಕಾರ್ಯಗಳನ್ನು ಕಡಮೆ ಮಾಡಿಕೊಡು. ನೀನು ಹಾಗೆ ಮಾಡಿಕೊಡದಿದ್ದರೆ ಯಾವ ಮನಸ್ಸು ಅಹರ್ನಿಶಿ ನಿನ್ನ ಪಾದಪದ್ಮಗಳಲ್ಲಿ ನೆಲೆಸಿರಬೇಕೊ ಅದು ಬರಿದೆ ವ್ಯಯವಾಗುತ್ತಿದೆ; ಅದರಲ್ಲಿ ವಿಷಯ ಚಿಂತನೆಯ ಕಾರ್ಯ ನಡೆಯುತ್ತಿದೆ. ಶುದ್ಧ ಭಕ್ತರ ಶ್ರೇಣಿ ಒಂದು ಪ್ರತ್ಯೇಕ ಶ್ರೇಣಿ. ಭಗವಂತನೆ ವಸ್ತು ಉಳಿದುದೆಲ್ಲ ಅವಸ್ತು ಎಂಬ ಬೋಧೆ ಇಲ್ಲದಿದ್ದರೆ ಶುದ್ಧ ಭಕ್ತಿ ಉಂಟಾಗದು. ಈ ಸಂಸಾರ ಅನಿತ್ಯ, ಎರಡು ದಿನದ್ದು; ಯಾರು ಅದರ ಕರ್ತನೊ ಆತನೇ ಸತ್ಯ, ನಿತ್ಯ; ಈ ಜ್ಞಾನೋದಯವಾಗದಿದ್ದರೆ ಶುದ್ಧ ಭಕ್ತಿ ಉಂಟಾಗದು.

"ಜನಕಾದಿಗಳು ಭಗವಂತನ ಆದೇಶ ಪಡೆದು ಈ ಜಗತ್ತಿನಲ್ಲಿ ಕೆಲಸಕಾರ್ಯಗಳನ್ನು ಮಾಡಿದರು.

(ಬಂಕಿಮನಿಗೆ) "ಕೆಲಕೆಲವರು ಭಾವಿಸುತ್ತಾರೆ ಶಾಸ್ತ್ರ ಓದದಿದ್ದರೆ ಪುಸ್ತಕ ಓದದಿದ್ದರೆ ಭಗವಂತನನ್ನು ಪಡೆಯಲಾಗೋದಿಲ್ಲ ಅಂತ. ಅವರ

ಭಾವನೆ ಮೊದಲು ಜಗತ್ತಿನ ವಿಷಯ—ಜೀವರ ವಿಷಯವನ್ನು ಮೊದಲು ಅರಿಯಬೇಕು—ಮೊದಲು ಸೈನ್ಸ್ ಓದಬೇಕು ಅಂತ. (ಎಲ್ಲರೂ ನಗುತ್ತಾರೆ.) ಅವರು ಹೇಳುತ್ತಾರೆ, 'ಭಗವಂತನ ಸೃಷ್ಟಿಯನ್ನು ಅರಿತುಕೊಳ್ಳದೆ ಆತನನ್ನು ಅರಿಯಲಾಗೋದಿಲ್ಲ' ಅಂತ. ನಿನ್ನ ಅಭಿಪ್ರಾಯವೇನು? ಮೊದಲು ಸೈನ್ಸೊ ಅಥವಾ ಭಗವಂತನೊ?"

ಬಂಕಿಮ: "ಹೌದು, ಮೊದಲು ವೈಚಿತ್ರ್ಯವನ್ನು ಅರಿಯಬೇಕು; ಜಗತ್ತಿನ ವಿಷಯವನ್ನು ಅರಿಯಬೇಕು. ಇದರ ಜ್ಞಾನವನ್ನು ಮೊದಲು ಸ್ವಲ್ಪ ಪಡೆದುಕೊಳ್ಳದೆ ಇದ್ದರೆ, ಭಗವಂತನನ್ನು ಅರಿಯುವುದೆಂತು? ಮೊದಲು ಪುಸ್ತಕ-ಗಿಸ್ತಕ ಓದಿ ಬಳಿಕ ಆತನನ್ನು ಅರಿಯಬೇಕು."

ಶ್ರೀರಾಮಕೃಷ್ಣ: "ನಿಮ್ಮೆಲ್ಲರದೂ ಒಂದೇ ಒಂದು ಕೂಗು! ಮೊದಲು ಭಗವಂತ, ಬಳಿಕ ಆತನ ಸೃಷ್ಟಿ. ಆತನನ್ನು ಪಡೆದುಕೊಂಡರೆ ಇಚ್ಛೆಬಂದರೆ ಉಳಿದುದನ್ನೆಲ್ಲಾ ಅರಿತುಕೊಳ್ಳಬಹುದು.

"ಹೇಗೋ ಮಾಡಿ ಯದುಮಲ್ಲಿಕನೊಡನೆ ಪರಿಚಯಮಾಡಿಕೊಂಡುಬಿಟ್ಟರೆ, ಬಳಿಕ ಏನಾದರು ನಿನಗೆ ಇಚ್ಛೆ ಇದ್ದರೆ, ಯದುಮಲ್ಲಿಕನಿಗೆ ಮನೆಗಳೆಷ್ಟಿವೆ, ಲೇವಾದೇವಿ ಪತ್ರಗಳೆಷ್ಟಿವೆ, ತೋಟತುಡಿಕೆಗಳೆಷ್ಟಿವೆ ಇವನ್ನೆಲ್ಲಾ ಅರಿತುಕೊಂಡುಬಿಡಬಲ್ಲೆ. ಯದುಮಲ್ಲಿಕ ತಾನೇ ಹೇಳಿಬಿಡುತ್ತಾನೆ. ಆದರೆ ಆತನೊಡನೆ ಪರಿಚಯ ಮಾಡಿಕೊಳ್ಳದೆ ಇದ್ದರೆ, ಆತನ ಮನೆಯ ಜವಾನರು ನಿನ್ನನ್ನು ಒಳಕ್ಕೆ ಬಿಡದೇಹೋದರೆ, ಆತನಿಗೆ ಲೇವಾದೇವಿ ಪತ್ರಗಳೆಷ್ಟಿವೆ, ತೋಟತುಡಿಕೆಗಳೆಷ್ಟಿವೆ, ಇವುಗಳೆಲ್ಲದರ ಸಮಾಚಾರವನ್ನು ನೀನು ಅರಿಯುವ ಬಗೆ ಎಂತು? ಆತನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿಯಬಹುದು, ಆದರೆ ಸಾಮಾನ್ಯ ವಿಷಯಗಳ ಅರಿವಿನ ಆಕಾಂಕ್ಷೆ ಇರದು. ವೇದದಲ್ಲಿಯೂ ಈ ವಿಷಯ ಹೇಳಿದೆ: ವ್ಯಕ್ತಿಯನ್ನು ನೋಡದವರೆಗೆ ಆತನ ಗುಣದ ಸಂಬಂಧವಾಗಿ ಮಾತುಕತೆಯಾಡಬಹುದು; ಆತ ಎದುರಿಗೆ ಕಾಣಿಸಿಕೊಳ್ಳುವುದೇ ತಡ ಆಗ ಆ ವಿಧದ ಮಾತು-ಗೀತುಗಳೆಲ್ಲ ನಿಂತುಹೋಗಿಬಿಡುತ್ತವೆ. ಜನರು ಆತನನ್ನು ನೋಡಿಯೇ ಬಹಳ ಹರ್ಷಚಿತ್ತರಾಗುತ್ತಾರೆ. ಆತನೊಡನೆ ಬೆರೆತು ಆನಂದದಿಂದ ತುಂಬಿತುಳುಕಾಡಲಾರಂಭಿಸುತ್ತಾರೆ. ಆಗ ಆತನ ಗುಣ-ಗಿಣ ವರ್ಣನೆಮಾಡೋದು ಯಾವುದೂ ಇರೋದಿಲ್ಲ.

"ಮೊದಲು ಭಗವಂತನ ಸಾಕ್ಷಾತ್ಕಾರ, ಬಳಿಕ ಆತನ ಸೃಷ್ಟಿ

ಮೊದಲಾದುವು. ವಾಲ್ಮೀಕಿಗೆ ರಾಮ - ಮಂತ್ರ ಜಪಮಾಡಲು ಉಪದೇಶ ದೊರೆಯಿತು. ಆದರೆ ಆತನಿಗೆ ಗುರ್ವಾಜ್ಞೆಯಾಯಿತು, ' "ಮರಾ," "ಮರಾ" ಅಂತ ಜಪ ಮಾಡಬೇಕು' ಎಂದು. 'ಮ' ಅಂದರೆ ಭಗವಂತ, 'ರಾ' ಅಂದರೆ ಜಗತ್ತು ಎಂದು. ಮೊದಲು ಭಗವಂತ ಬಳಿಕ ಜಗತ್ತು. ಆತನೊಬ್ಬನನ್ನು ಅರಿತರೆ ಎಲ್ಲವನ್ನೂ ಅರಿಯಬಹುದು. ಒಂದರ ಪಕ್ಕದಲ್ಲಿ ಒಂದೈವತ್ತು ಸೊನ್ನೆಗಳನ್ನು ಹಾಕಿದರೆ ಅದು ಒಂದು ದೊಡ್ಡ ಸಂಖ್ಯೆಯೇ ಆಗಿ ಬಿಡುತ್ತದೆ; ಆದರೆ ಆ ಒಂದನ್ನು ಅಳಿಸಿಹಾಕಿಬಿಟ್ಟರೆ ಏನೂ ಇರದು. ಏಕವೇ ಅನೇಕಕ್ಕೆ ಕಾರಣ. ಮೊದಲು ಏಕ, ಬಳಿಕ ಅನೇಕ, ಮೊದಲು ಭಗವಂತ, ಬಳಿಕ ಜೀವ ಜಗತ್ತು.

"ನಿನಗೆ ಆವಶ್ಯಕವಾಗಿರೋದು ಭಗವಂತನ ಸಾಕ್ಷಾತ್ಕಾರ. ನೀನು ಏಕೆ ಅಷ್ಟೊಂದಾಗಿ ಜಗತ್ತು ಸೃಷ್ಟಿ ಸೈನ್ಸು - ಗಿಯಿನ್ಸು ಇವುಗಳ ವಿಷಯವಾಗಿ ತಲೆ ಚಚ್ಚಿಕೊಳ್ಳುತ್ತಿದ್ದೀಯೆ? ನಿನಗೆ ಬೇಕಾಗಿರೋದು ಮಾವಿನ ಹಣ್ಣು. ತೋಟದಲ್ಲಿ ಎಷ್ಟುನೂರು ಮರಗಳಿವೆ, ಎಷ್ಟುಸಾವಿರ ಕೊಂಬೆಗಳಿವೆ, ಎಷ್ಟು ಲಕ್ಷ—ಎಷ್ಟು ಕೋಟಿ ಎಲೆಗಳಿವೆ ಇವೇ ಮೊದಲಾದುವುಗಳ ವೃತ್ತಾಂತ ನಿನಗೇಕೆ? ನೀನು ಬಂದಿರೋದು ಮಾವಿನ ಹಣ್ಣು ತಿನ್ನೋಕೆ. ತಿಂದು ಹೋಗು. ಈ ಜಗತ್ತಿಗೆ ಮನುಷ್ಯ ಬಂದಿರೋದು ಭಗವಂತನನ್ನು ಪಡೆದುಕೊಳ್ಳೋಕೆ. ಅದನ್ನು ಮರೆತು ಉಳಿದ ವಿಷಯಗಳಿಗೆ ಮನಸ್ಸು ಹಚ್ಚೋದು ಒಳ್ಳೆಯದಲ್ಲ. ಮಾವಿನ ಹಣ್ಣು ತಿನ್ನೋಕೆ ಬಂದೆ, ಅದನ್ನು ತಿಂದು ಹೋಗು."

ಬಂಕಿಮ: "ಎಲ್ಲಿ, ಮಾವಿನ ಹಣ್ಣು ಎಲ್ಲಿ ಸಿಕ್ಕೀತು?"

ಶ್ರೀರಾಮಕೃಷ್ಣರು: "ವ್ಯಾಕುಲನಾಗಿ ಆತನಿಗೆ ಪ್ರಾರ್ಥಿಸು. ಹೃತ್ಪೂರ್ವಕವಾಗಿ ಪ್ರಾರ್ಥಿಸಿದರೆ ಆತ ಕೇಳಿಯೇ ಕೇಳುತ್ತಾನೆ. ಬಹುಶಃ ಯಾರಾದರೂ ಒಬ್ಬರ ಸತ್ಸಂಗವನ್ನು ನಿನಗೆ ದೊರಕಿಸಿಕೊಟ್ಟುಬಿಡಬಹುದು. ಅದು ನಿನಗೆ ಬಹಳ ಉಪಕಾರಿಯಾಗಿಬಿಡಬಹುದು. ಬಹುಶಃ ಯಾರಾದರೂ ನಿನಗೆ ಹೇಳಿಬಿಡಬಹುದು, ಹೀಗೆ ಹೀಗೆ ಮಾಡು, ಅದರಿಂದ ನಿನಗೆ ಭಗವಂತ ದೊರೆತುಬಿಡುತ್ತಾನೆ ಅಂತ."

ಬಂಕಿಮ: "ಯಾರು? ಗುರು? ಆತ, ತಾನೇ ಒಳ್ಳೊಳ್ಳೆ ಮಾವಿನ ಹಣ್ಣು ತಿಂದು, ನಮಗೆ ಕೆಟ್ಟದನ್ನು ಕೊಡುತ್ತಾನೆ!" (ನಗು.)

ಶ್ರೀರಾಮಕೃಷ್ಣರು: "ಆತ ಹಾಗೆ ಏಕೆಮಾಡಿಯಾನು? ತಾಯಿಗೆ

ಗೊತ್ತಿದೆ ಯಾರ ಜೀರ್ಣಶಕ್ತಿ ಎಂಥದು ಎಂಬೋದು. ಎಲ್ಲರೂ ಪಲಾವು, ಕಾಲಿಯಾ ತಿಂದು ಅರಗಿಸಿಕೊಳ್ಳಬಲ್ಲರೇನು? ಮನೆಗೆ ಮೀನು ತಂದರೆ ಎಲ್ಲಾ ಮಕ್ಕಳಿಗೂ ತಾಯಿ ಪಲಾವು ಕಾಲಿಯಾ ಮಾಡಿ ಬಡಿಸಳು. ಯಾರು ದುರ್ಬಲರೊ, ಯಾರ ಹೊಟ್ಟೆ ಸರಿಯಾಗಿ ಇಲ್ಲವೊ, ಅವಕ್ಕೆ ಮೀನಿನ ಸಾರು ಮಾಡಿ ಬಡಿಸುತ್ತಾಳೆ. ಹಾಗೆಂದು ತಾಯಿ ಅವನ್ನು ಕಡಮೆಯಾಗಿ ಪ್ರೀತಿಸುತ್ತಾಳೇನು?

"ಗುರುವಾಕ್ಯದಲ್ಲಿ ವಿಶ್ವಾಸವಿಡಬೇಕು. ಗುರುವೇ ಸಚ್ಚಿದಾನಂದ, ಸಚ್ಚಿದಾನಂದನೇ ಗುರು. ಆತನ ಮಾತಿನಲ್ಲಿ ವಿಶ್ವಾಸವಿಟ್ಟರೆ,—ಬಾಲಕನ ಹಾಗೆ ವಿಶ್ವಾಸವಿಟ್ಟರೆ,—ಭಗವಂತ ದೊರೆತುಬಿಡುತ್ತಾನೆ. ಬಾಲಕನದು ಎಂಥ ವಿಶ್ವಾಸ! ಒಬ್ಬನನ್ನು ತೋರಿಸಿ ತಾಯಿ ಮಗುವಿಗೆ ಹೇಳಿದರೆ, 'ಆತ ನಿನ್ನ ಅಣ್ಣನಾಗಬೇಕು' ಅಂತ, ಒಡನೆಯೇ ಅದು ನಂಬುತ್ತದೆ ಆತ ತನ್ನ ಅಣ್ಣ ಅಂತ. ಆತ ಬ್ರಾಹ್ಮಣನಾಗಿದ್ದರೂ ಸರಿಯೆ ಅಥವಾ ಕಮ್ಮಾರನಾಗಿದ್ದರೂ ಸರಿಯೆ, ತಾಯ ಮಾತಿನಲ್ಲಿ ಅದಕ್ಕೆ ನೂರಕ್ಕೆ ನೂರಿಪ್ಪತ್ತೈದು ಭಾಗ ವಿಶ್ವಾಸ. ತಾಯಿ ಹೇಳಿದರೆ, 'ಆ ಕೊಠಡಿಯಲ್ಲಿ ಗೊಗ್ಗಯ್ಯನಿದ್ದಾನೆ' ಅಂತ, ಅಲ್ಲಿ ಗೊಗ್ಗಯ್ಯನಿದ್ದಾನೆ ಅಂತ ಮಗು ಸಂಪೂರ್ಣವಾಗಿ ನಂಬಿಬಿಡುತ್ತದೆ. ಬಾಲಕನ ವಿಶ್ವಾಸ ಅಂಬುದು ಇದೇ. ಗುರುವಾಕ್ಯದಲ್ಲಿ ಇಂಥ ವಿಶ್ವಾಸ ಬೇಕು. ಕಪಟಿಯ, ಲೆಕ್ಕಾಚಾರದ, ವಿಚಾರದ ಬುದ್ಧಿಯಿಂದ ಭಗವಂತನನ್ನು ಪಡೆಯಲಾಗೋದಿಲ್ಲ. ಶ್ರದ್ಧಾವಂತನಾಗಿಯೂ ಸರಳನಾಗಿಯೂ ಆಗಬೇಕು; ಕಪಟಿಯಾದರೆ ಆಗದು. ಸರಳನಿಗೆ ಭಗವಂತ ಬಹಳ ಸಹಜವಾಗಿ ದೊರೆತುಬಿಡುತ್ತಾನೆ; ಆದರೆ ಕಪಟಿಯಿಂದ ಆತ ಬಹಳ ದೂರದಲ್ಲೇ ಇರುತ್ತಾನೆ.

"ಯಾವ ರೀತಿಯಾಗಿ ಮಗು ತನ್ನ ತಾಯನ್ನು ಕಾಣದೆ ದಿಗ್ಭ್ರಮೆಗೊಂಡು, ಅದರ ಬಾಯಿಗೆ ಸಂದೇಶ, ಮಿಠಾಯಿ ಯಾವುದು ಹಾಕಿದರೂ ಅದೊಂದೂ ಅದಕ್ಕೆ ಬೇಡವಾಗಿ, ಏನುಮಾಡಿದರೂ ತಾಯನ್ನು ಮರೆಯದೆ ಹೇಳುತ್ತದೆಯೊ, 'ಒಂದೂ ಬೇಡ, ನಾನು ತಾಯ ಹತ್ತಿರ ಹೋಗಬೇಕು' ಅಂತ, ಅದೇ ರೀತಿಯಾಗಿ ಭಗವಂತನಿಗಾಗಿ ಮನುಷ್ಯ ವ್ಯಾಕುಲಪಡಬೇಕು. ಆಹಾ! ಎಂಥ ಅವಸ್ಥೆ! ಮಗು ತನ್ನ ತಾಯಿಗಾಗಿ ಎಷ್ಟೊಂದು ವ್ಯಾಕುಲಪಡುತ್ತದೆ! ಯಾವುದರಿಂದಲೂ ಅದು ತನ್ನ ತಾಯನ್ನು ಮರೆಯದು. ಯಾರಿಗೆ ಈ ಜಗತ್ತಿನ ಸುಖೋಪಭೋಗಗಳು ರುಚಿಸವೊ, ಯಾರಿಗೆ ಬೇರೆ

ಯಾವುದೂ ಬೇಕಾಗಿಲ್ಲವೋ—ಹಣ, ಹೆಸರು, ದೇಹಸುಖ, ಇಂದ್ರಿಯಸುಖ ಇವು ಯಾವುವೂ ಹಿಡಿಸವೋ—, ಆತ ಹೃತ್ಪೂರ್ವಕವಾಗಿಯೂ ಭಗವಂತನ ದರ್ಶನಕ್ಕಾಗಿ ಅತ್ಯಂತ ಕಾತರನಾಗುತ್ತಾನೆ. ಅಂಥವರಿಗಾಗಿಯೇ ಭಗವತಿ ತನ್ನ ಎಲ್ಲಾ ಕೆಲಸಗಳನ್ನು ಬಿಟ್ಟು ಓಡಿಬರಬೇಕಾಗುತ್ತದೆ.

"ವ್ಯಾಕುಲತೆಯೇ ಸರ್ವಸ್ವ. ಯಾವ ಮಾರ್ಗದಲ್ಲಾದರೂ ಹೋಗು—ನೀನು ಹಿಂದೂ, ಮುಸಲಮಾನ, ಕ್ರಿಶ್ಚಿಯನ್, ಶಾಕ್ತ, ಬ್ರಾಹ್ಮ ಯಾವುದು ಬೇಕಾದರೂ ಆಗಿರು—ಆವಶ್ಯಕವಾಗಿ ಬೇಕಾಗಿರೋದು ವ್ಯಾಕುಲತೆ. ಆತ ನಮ್ಮ ಅಂತರ್ಯಾಮಿ. ವ್ಯಾಕುಲತೆಯೊಂದಿದ್ದರೆ ನಾವು ತಪ್ಪುದಾರಿ ಹಿಡಿದಿದ್ದರೂ ಚಿಂತೆಯಿಲ್ಲ, ಆತ ಮತ್ತೆ ನಮ್ಮನ್ನು ಒಳ್ಳೇಮಾರ್ಗಕ್ಕೆ ತಂದುಸೇರಿಸಿಬಿಡುತ್ತಾನೆ.

"ಪ್ರತಿಯೊಂದು ಪಥದಲ್ಲಿಯೂ ಕುಂದುಕೊರತೆಗಳು ಇದ್ದೇ ಇವೆ,—ಪ್ರತಿಯೊಬ್ಬರೂ ಭಾವಿಸುತ್ತಾರೆ ತಮ್ಮ ಗಡಿಯಾರ ಸರಿಯಾಗಿ ನಡೆಯುತ್ತಿದೆ ಅಂತ; ಆದರೆ ಯಾರದೂ ವಾಸ್ತವಿಕವಾಗಿ ಸಂಪೂರ್ಣ ಸರಿಯಾಗಿ ನಡೆದುಕೊಂಡುಹೋಗೋದಿಲ್ಲ. ಅದು ಹಾಗೆಂದು ಯಾರ ಕೆಲಸವೂ ನಿಂತುಕೊಂಡುಬಿಡೋದಿಲ್ಲ. ವ್ಯಾಕುಲತೆ ಇದ್ದರೆ ಸಾಧುಸಂಗ ದೊರೆತುಬಿಡುತ್ತದೆ. ಸಾಧುಸಂಗದಿಂದ ಬಹುಮಟ್ಟಿಗೆ ತಮ್ಮ ತಮ್ಮ ಗಡಿಯಾರವನ್ನು ಸರಿಮಾಡಿಕೊಳ್ಳಬಹುದು."

ಬ್ರಾಹ್ಮಸಮಾಜದ ಅನುಯಾಯಿ ತ್ರೈಲೋಕ್ಯ ಹಾಡುತ್ತಿದ್ದಾನೆ. ಪರಮಹಂಸರು ಕೀರ್ತನೆಯನ್ನು ಒಂದು ಸ್ವಲ್ಪ ಕೇಳುತ್ತಿದ್ದಹಾಗೆಯೇ ಭಗವಂತನ ಆವೇಶದಿಂದ ಎದ್ದುನಿಂತು ಬಾಹ್ಯಜ್ಞಾನಶೂನ್ಯರಾಗಿದ್ದಾರೆ. ಒಮ್ಮೆಗೆಯೆ ಅಂತರ್ಮುಖರಾಗಿ ಸಮಾಧಿಸ್ಥರಾಗಿದ್ದಾರೆ. ಎಲ್ಲರೂ ಅವರನ್ನು ಸುತ್ತುಗಟ್ಟಿ ನಿಂತಿದ್ದಾರೆ. ಬಂಕಿಮ ಗುಂಪನ್ನು ತಳ್ಳಿಕೊಂಡು ಬಂದು ಪರಮಹಂಸರ ಹತ್ತಿರ ನಿಂತು ಅವರನ್ನು ನಟ್ಟದೃಷ್ಟಿಯಿಂದ ನೋಡುತ್ತಿದ್ದಾನೆ. ಆತ ಸಮಾಧಿಸ್ಥಪುರುಷರನ್ನು ಎಂದೂ ನೋಡಿರಲಿಲ್ಲ.

ಸ್ವಲ್ಪ ಹೊತ್ತಾದನಂತರ ಪರಮಹಂಸರು ಕಿಂಚಿತ್ ಬಾಹ್ಯಪ್ರಜ್ಞೆಯನ್ನು ಪಡೆದು ಪ್ರೇಮೋನ್ಮತ್ತತೆಯಿಂದ ನರ್ತಿಸಲಾರಂಭಿಸಿದರು. ಅದು ಗೌರಾಂಗನೇ ಶ್ರೀವಾಸನ ಮನೆಯಲ್ಲಿ ಭಕ್ತರೊಡನೆ ನರ್ತಿಸುತ್ತಿರುವನೊ ಏನೊ ಎಂಬಂತ್ತಿತ್ತು. ಅದು ಒಂದು ಅದ್ಭುತ ನೃತ್ಯವೇ ಆಗಿತ್ತು. ಇಂಗ್ಲಿಷು ವಿದ್ಯಾಭ್ಯಾಸ ಪಡೆದ ಬಂಕಿಮನೇ ಮೊದಲಾದವರು ಇದನ್ನು

ನೋಡಿ ಆಶ್ಚರ್ಯಚಕಿತರಾದರು. ಭಾವಿಸಿದರು, ಪ್ರೇಮಾನಂದ ಅಂಬುದು ಇದೇ ಏನು? ಏನದ್ಭುತವಾದ್ದು! ಅಂತ.

ಇಂಥ ದೇವದುರ್ಲಭ ನೃತ್ಯ ಮತ್ತು ಕೀರ್ತನೆ ಮುಗಿದನಂತರ ಪರಮಹಂಸರು ತಮ್ಮ ಹಣೆಯಿಂದ ನೆಲವನ್ನು ಮುಟ್ಟಿ ಪ್ರಣಾಮ ಮಾಡುತ್ತ ಹೇಳಿದರು, "ಭಾಗವತ—ಭಕ್ತ—ಭಗವಂತ! ಜ್ಞಾನಿಗಳ, ಯೋಗಿಗಳ, ಭಕ್ತರ ಚರಣಗಳಿಗೆ ಪ್ರಣಾಮ! ಮತ್ತೆಲ್ಲರ ಚರಣಗಳಿಗೂ ಪ್ರಣಾಮ" ಅಂತ. ಬಳಿಕ ಅವರು ಕೆಳಗೆ ಕುಳಿತುಕೊಂಡರು. ಭಕ್ತರೆಲ್ಲ ಅವರ ಸುತ್ತಲೂ ಕುಳಿತುಕೊಂಡರು.

ಬಂಕಿಮ ಪರಮಹಂಸರಿಗೆ: "ಭಕ್ತಿ ಏನುಮಾಡಿದರೆ ಉಂಟಾದೀತು?"

ಶ್ರೀರಾಮಕೃಷ್ಣರು: "ವ್ಯಾಕುಲತೆಬೇಕು. ಯಾವರೀತಿಯಾಗಿ ಮಗು ತಾಯನ್ನು ಕಾಣದೆ ದಿಗ್ಭ್ರಮೆಗೊಂಡು ಆಕೆಗಾಗಿ ಅಳುವುದೊ, ಅದೇರೀತಿಯಾಗಿ ವ್ಯಾಕುಲನಾಗಿ ಭಗವಂತನಿಗಾಗಿ ಅತ್ತರೆ ಆಗ ಭಗವಂತ ಕೂಡ ದೊರೆತುಬಿಡುತ್ತಾನೆ.

"ಅರುಣೋದಯವಾದರೆ ಪೂರ್ವ ಹೊಂಬಣ್ಣವಾಗುತ್ತದೆ. ಆಗ ಗೊತ್ತಾಗುತ್ತದೆ ಸೂರ್ಯೋದಯಕ್ಕೆ ಇನ್ನು ಹೆಚ್ಚುಹೊತ್ತು ಇಲ್ಲ ಅಂತ. ಅದೇರೀತಿಯಾಗಿ ಯಾರಲ್ಲಿಯೇ ಆಗಲಿ ಭಗವಂತನಿಗಾಗಿ ಅತ್ಯಂತ ಅಗಾಧವಾದ ವ್ಯಾಕುಲತೆ ಉಂಟಾಗಿರೋದು ಕಂಡುಬಂದರೆ, ಆಗ ಚೆನ್ನಾಗಿ ಗೊತ್ತಾಗುತ್ತದೆ ಆ ವ್ಯಕ್ತಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಇನ್ನು ಹೆಚ್ಚುಕಾಲ ಕಾದಿರಬೇಕಾಗಿಲ್ಲ ಅಂತ.

"ಒಬ್ಬ ಶಿಷ್ಯ ಗುರುವನ್ನು ಕೇಳಿದ, 'ಪೂಜ್ಯರೆ, ದಯವಿಟ್ಟು ಹೇಳಿ ಭಗವಂತನನ್ನು ಪಡೆಯೋದು ಹೇಗೆ' ಅಂತ. ಗುರು ಹೇಳಿದ, 'ಬಾ ನನ್ನೊಡನೆ, ನಿನಗೆ ತೋರಿಸಿಕೊಡುತ್ತೇನೆ' ಅಂತ. ಹೀಗೆಂದು ಹೇಳಿ ಗುರು ಆತನನ್ನು ಸಂಗಡ ಕರೆದುಕೊಂಡು ಒಂದು ಕೆರೆಯ ಹತ್ತಿರಕ್ಕೆ ಹೋದ. ಇಬ್ಬರೂ ನೀರಿಗೆ ಇಳಿದರು. ಬಳಿಕ ಗುರು ಇದ್ದಕ್ಕಿದ್ದ ಹಾಗೆ ಶಿಷ್ಯನನ್ನು ನೀರಿನೊಳಕ್ಕೆ ಮುಳುಗಿಸಿ ಅದುಮಿಹಿಡಿದ. ಒಂದು ಸ್ವಲ್ಪ ಹೊತ್ತಿನ ನಂತರ ಆತನನ್ನು ಬಿಟ್ಟುಬಿಡಲಾಗಿ ಶಿಷ್ಯ ನೀರಿನಿಂದ ಮೇಲಕ್ಕೆ ಎದ್ದುಬಂದು ನಿಂತ. ಆಗ ಗುರು ಕೇಳಿದ, 'ನೀರಿನೊಳಗಿದ್ದಾಗ ನಿನಗೇನನಿಸುತ್ತಿತ್ತು?' ಅಂತ. ಶಿಷ್ಯ ಹೇಳಿದ, 'ಪ್ರಾಣಹೋಗುವುದರಲ್ಲಿತ್ತು;

ಒಂದು ಗುಟುಕು ಉಸಿರಿಗಾಗಿ ಪ್ರಾಣ ಸಮ್ಮನೆ ಒದ್ದಾಡುತ್ತಿತ್ತು' ಅಂತ. ಆಗ ಗುರು ಹೇಳಿದ, 'ಯಾವಾಗ ನಿನ್ನ ಪ್ರಾಣ ಈ ರೀತಿಯಾಗಿ ಭಗವಂತನಿಗಾಗಿ ವ್ಯಾಕುಲಪಡುವುದೊ, ಆಗ ತಿಳಿದುಕೊ ನೀನು ಇನ್ನು ಹೆಚ್ಚುಕಾಲ ಆತನ ದರ್ಶನಕ್ಕಾಗಿ ಕಾಯಬೇಕಾಗಿಲ್ಲ ಅಂತ' ಎಂದು.

(ಬಂಕಿಮನಿಗೆ) "ನಿನಗೊಂದು ವಿಷಯ ತಿಳಿಸುತ್ತೇನೆ. ಸುಮ್ಮನೆ ಮೇಲೇನೆ ತೇಲಿದರೆ ಏನು ದೊರೆಯುತ್ತದೆ? ಒಂದು ಸ್ವಲ್ಪ ಮುಳುಗು. ರತ್ನಗಳು ಬಹಳ ಆಳದಲ್ಲಿ ಬಿದ್ದಿವೆ. ನೀರಿನ ಮೇಲೇನೆ ಕೈಕಾಲು ಹೊಡೆದರೆ ಏನಾಗುತ್ತದೆ? ಮಾಣಿಕ್ಯ ವಾಸ್ತವಿಕವಾಗಿ ಬಹಳ ಭಾರವಾದ್ದು; ಅದು ನೀರಿನ ಮೇಲೆ ತೇಲದು; ಅದು ಮುಳುಗಿ ತಳಕ್ಕೆ ಹೋಗಿ ಕುಳಿತುಕೊಳ್ಳುತ್ತದೆ. ನಿನಗೆ ನಿಜವಾದ ರತ್ನ ಬೇಕಾಗಿದ್ದರೆ ನೀರಿನ ಆಳಕ್ಕೆ ಮುಳುಗಬೇಕು."

ಬಂಕಿಮ: "ಮಹಾಶಯರೆ, ನಾವೇನು ಮಾಡೋಕಾದೀತು? ಬೆನ್ನಿಗೆ ಬೆಂಡು ಬಿಗಿದಿದೆ; ಮುಳುಗಲು ಬಿಟ್ಟುಕೊಡಲೊಲ್ಲದು," (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: "ಆತನ ಸ್ಮರಣೆ ಮಾಡಿದರೆ ಸಕಲ ಪಾಪಗಳೂ ಭಸ್ಮವಾಗಿ ಹೋಗುತ್ತವೆ. ಮುಳುಗುಹಾಕಲೇಬೇಕು, ಇಲ್ಲದಿದ್ದರೆ ರತ್ನ ದೊರೆಯದು. ಒಂದು ಹಾಡು ಕೇಳು."

ಪರಮಹಂಸರು ತಮ್ಮ ದೇವದುರ್ಲಭ ಮಧುರ ಕಂಠದಿಂದ ಹಾಡಿದರು:

ಮುಳುಗು ಮುಳುಗು ಮನವೇ —
ಹರಿಯೊಲವಿನ ಕಡಲಾಳಕೆ............

ಎಲ್ಲರೂ ಈ ಹಾಡನ್ನು ಸ್ತಂಭೀಭೂತರಾಗಿ ಕೇಳಿದರು. ಈ ಹಾಡನ್ನು ಹಾಡಿದನಂತರ ಮತ್ತೆ ಪರಮಹಂಸರು ಮಾತು ಮುಂದುವರಿಸಿದರು.

ಶ್ರೀರಾಮಕೃಷ್ಣರು ಬಂಕಿಮನಿಗೆ: "ಕೆಲಕೆಲವರಿಗೆ, ಮುಳುಗಲು ಇಚ್ಛೆ ಇಲ್ಲ. ಅವರು ಹೇಳುತ್ತಾರೆ, '"ಭಗವಂತ", "ಭಗವಂತ" ಅಂತ ತಲೇಚಚ್ಚಿಕೊಂಡು ಕೊನೆಗೆ ಹುಚ್ಚರಾಗಿಬಿಡೋಣವೇನು?' ಅಂತ. ಯಾರು ಭಗವಂತನ ಪ್ರೇಮದಿಂದ ಮತ್ತರಾಗಿದ್ದಾರೊ ಅವರ ಸಂಬಂಧವಾಗಿ ಅವರು ಹೇಳುತ್ತಾರೆ, 'ಇವರಿಗೆ ತಲೆ ಕೆಟ್ಟುಹೋಗಿಬಿಟ್ಟಿದೆ' ಅಂತ. ಆದರೆ ಈ ಜನರಿಗೆ ಗೊತ್ತಾಗದು: ಸಚ್ಚಿದಾನಂದ ಅಮೃತದಸಾಗರ

ಎಂಬುದು. ನಾನು ಒಮ್ಮೆ ನರೇಂದ್ರನನ್ನು ಕೇಳಿದೆ, 'ಭಾವಿಸಿಕೊ ಒಂದು ಬಟ್ಟಲ ತುಂಬ ಸಕ್ಕರೆಪಾನಕ ಇದೆ, ನೀನು ಒಂದು ನೊಣ ಆಗಿದ್ದೀಯೆ ಅಂತ. ನೀನು ಎಲ್ಲಿ ಕುಳಿತು ಪಾನಕ ಕುಡಿಯುವೆ ಹೇಳು ನೋಡೋಣ?' ಅಂತ. ನರೇಂದ್ರ ಹೇಳಿದ, 'ಬಟ್ಟಲ ಅಂಚಿನಲ್ಲಿ ಕುಳಿತು ಶರೀರ ಮುಂದಕ್ಕೆ ಚಾಚಿ ಕುಡಿಯುತ್ತೇನೆ' ಅಂತ. ನಾನು ಕೇಳಿದೆ, 'ಹಾಗೇಕೆ ಮಾಡಬೇಕು? ಅದರ ಮಧ್ಯಕ್ಕೆ ಮುಳುಗಿ ಕುಡಿದರೆ ತಪ್ಪೇನು?' ಅಂತ. ಆತ ಹೇಳಿದ, 'ಆಗ ಆ ಪಾನಕದಲ್ಲಿ ಸಿಕ್ಕಿಕೊಂಡುಬಿಟ್ಟು ಸತ್ತುಹೋಗಿ ಬಿಡುತ್ತೇನೆ' ಎಂದು. ಅದಕ್ಕೆ ನಾನು ಹೇಳಿದೆ, 'ಮಗು, ಸಚ್ಚಿದಾನಂದ ಪಾನಕ ಅಂಥದೇನಲ್ಲ. ಅದು ಅಮೃತದ ಪಾನಕ. ಅದರಲ್ಲಿ ಮುಳುಗಿದರೆ ಮನುಷ್ಯ ಸಾಯೋದಿಲ್ಲ, ಅಮರನಾಗಿಬಿಡುತ್ತಾನೆ' ಅಂತ.

"ಅದಕ್ಕಾಗಿಯೆ ನಾನು ಹೇಳೋದು, 'ಆಳಕ್ಕೆ ಮುಳುಗಿ' ಅಂತ. ಹೆದರ ಬೇಕಾಗಿಲ್ಲ, ಮುಳುಗಿದರೆ ಅಮರರಾಗುತ್ತೀರಿ."

ಈಗ ಬಂಕಿಮ ಪರಮಹಂಸರಿಗೆ ಪ್ರಣಾಮಮಾಡುತ್ತಿದ್ದಾನೆ. ಇನ್ನೇನು ಹೊರಡುವುದರಲ್ಲಿದ್ದಾನೆ.

ಬಂಕಿಮ: "ಮಹಾಶಯರೆ, ನೀವು ಭಾವಿಸಬಹುದಾದಷ್ಟು ಅಹಮ್ಮಕನೇನಲ್ಲ ನಾನು. ನನ್ನದೊಂದು ಪ್ರಾರ್ಥನೆ—ಕೃಪೆಮಾಡಿ ನನ್ನ ಕುಟೀರದಲ್ಲಿ ಒಮ್ಮೆ ತಮ್ಮ ಪಾದಧೂಳಿ—"

ಶ್ರೀರಾಮಕೃಷ್ಣರು: "ಬಹಳ ಒಳ್ಳೆಯದು, ಭಗವಂತನ ಇಚ್ಛೆಯಿದ್ದರೆ."

ಬಂಕಿಮ: "ಅಲ್ಲಿಯೂ ನೋಡುತ್ತೀರಿ ಭಕ್ತರನ್ನು."

ಶ್ರೀರಾಮಕೃಷ್ಣರು ನಗುತ್ತ: "ಓಹೊ! ಎಂಥ ಭಕ್ತರನ್ನು? ಯಾರು 'ಗೋಪಾಲ! ಗೋಪಾಲ!, ಕೇಶವ! ಕೇಶವ!' ಅಂತ ಹೇಳುತ್ತಿದ್ದರೊ ಅಂಥವರನ್ನೇನು" (ಎಲ್ಲರೂ ನಗುತ್ತಾರೆ.)

ಒಬ್ಬ ಭಕ್ತ: "ಮಹಾಶಯರೆ, 'ಗೋಪಾಲ! ಗೋಪಾಲ!' ಎಂಬ ಕಥೆಯೇನು?"

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ಹಾಗಾದರೆ ಹೇಳುತ್ತೇನೆ ಕೇಳು. ಒಂದು ಸ್ಥಳದಲ್ಲಿ ಅಕ್ಕಸಾಲಿಗರ ಅಂಗಡಿಯೊಂದು ಇದೆ. ಅವರು ಪರಮವೈಷ್ಣವರು: ಕೊರಳಲ್ಲಿ ತುಲಸೀಮಾಲೆ, ಹಣೆಗೆ ತಿಲಕ, ಯಾವಾಗ ನೋಡಿದರೂ ಕೈಯಲ್ಲಿ ಜಪಮಾಲೆ ಚೀಲ, ಸರ್ವದಾ ಹರಿನಾಮೋ

ಚ್ಚಾರಣೆ. ಅವರನ್ನು ಬಹುಮಟ್ಟಿಗೆ ಸಾಧುಗಳೇ ಅಂತ ಹೇಳಬಹುದು; ಆದರೆ ಹೊಟ್ಟೆ ಪಾಡಿಗಾಗಿ ಅವರು ಚಿನ್ನಗೆಲಸ ಮಾಡಬೇಕಾಗಿದೆ; ಹೆಂಡತಿ ಮಕ್ಕಳನ್ನು ಸಾಕಲೇ ಬೇಕಾಗಿದೆಯಲ್ಲ, ಅದಕ್ಕಾಗಿ. ಅವರು ಪರಮವೈಷ್ಣವರು ಅಂತ ಕೇಳಿ ಅನೇಕ ಗಿರಾಕಿಗಳು ಅವರ ಅಂಗಡಿಗೆ ಬರುತ್ತಾರೆ; ಏಕೆಂದರೆ ಅವರಿಗೆ ಗೊತ್ತಿದೆ ಈ ಅಂಗಡಿಯವರು ತಮ್ಮ ಚಿನ್ನ ಬೆಳ್ಳಿಯನ್ನು ಅಪಹರಿಸೋದಿಲ್ಲ ಅಂತ. ಗಿರಾಕಿ ಅಂಗಡಿಗೆ ಹೋಗಿ ನೋಡಿದೊಡನೆಯೆ, ಅಲ್ಲಿನವರು ಬಾಯಲ್ಲಿ ಹರಿನಾಮೋಚ್ಚಾರಣೆ ಮಾಡುತ್ತ ಕೈಯಲ್ಲಿ ಕೆಲಸಮಾಡುತ್ತಿರುವುದು ಕಣ್ಣಿಗೆ ಬೀಳುತ್ತದೆ. ಗಿರಾಕಿ ಅಂಗಡಿಗೆ ಹೋಗಿ ಕುಳಿತುಕೊಳ್ಳುವುದೇ ತಡ ಒಬ್ಬ ಕೆಲಸಗಾರ ಗಟ್ಟಿಯಾಗಿ ಹೇಳಲಾರಂಭಿಸುತ್ತಾನೆ, 'ಕೇಶವ! ಕೇಶವ! ಕೇಶವ!' ಅಂತ. ಒಂದುಕ್ಷಣ ಬಿಟ್ಟು ಇನ್ನೊಬ್ಬ ಹೇಳಲಾರಂಭಿಸುತ್ತಾನೆ, 'ಗೋಪಾಲ! ಗೋಪಾಲ! ಗೋಪಾಲ!' ಅಂತ. ಬಳಿಕ ಗಿರಾಕಿಯೊಡನೆ ಒಂದಷ್ಟು ಮಾತನಾಡಿ ಮತ್ತೊಬ್ಬ ಹೇಳಲಾರಂಭಿಸುತ್ತಾನೆ, 'ಹರಿ! ಹರಿ! ಹರಿ!' ಅಂತ. ಒಡವೆ ಮಾಡಿಸೋ ಮಾತು ಇನ್ನೇನು ಮುಗಿಯುತ್ತದೆ ಅನ್ನುವಷ್ಟರಲ್ಲಿ ನಾಲ್ಕನೆಯವ ಹೇಳಲಾರಂಭಿಸುತ್ತಾನೆ, 'ಹರ! ಹರ! ಹರ! ಹರ!' ಅಂತ. ಕೆಲಸಗಾರರ ಅಷ್ಟೊಂದು ಭಕ್ತಿ ಪ್ರೇಮ ನೋಡಿ, ಗಿರಾಕಿಗಳು ಅಂಗಡಿಯವರಿಗೆ ತಮ್ಮ ಚಿನ್ನ ಬೆಳ್ಳಿ ಕೊಟ್ಟು ನಿಶ್ಚಿಂತರಾಗುತ್ತಾರೆ; ಅವರಿಗೆ ಗೊತ್ತಿದೆ ಇವರು ಎಂದಿಗೂ ಮೋಸ ಮಾಡೋರಲ್ಲ ಅಂತ.

"ಆದರೆ ವಿಷಯ ಏನು ಎಂಬುದು ಗೊತ್ತೆ? ಗಿರಾಕಿ ಬಂದೊಡನೆ ಯಾರು ಹೇಳಿದನೊ, 'ಕೇಶವ! ಕೇಶವ!' ಅಂತ, ಆತನ ಭಾವನೆ, 'ಇವರು ಯಾರು?' ಎಂಬುದಾಗಿ. ಅಂದರೆ, ಬಂದ ಗಿರಾಕಿಗಳ ಬುದ್ಧಿ ಚಾತುರ್ಯತೆ ಎಂಥದು ಅಂತ ಪ್ರಶ್ನೆ. ಯಾರು ಹೇಳಿದನೊ, 'ಗೋಪಾಲ! ಗೋಪಾಲ!' ಅಂತ, ಆತನ ಭಾವನೆ, 'ಇವರು ಕಂಡು ಬರುತ್ತಿದ್ದಾರೆ ಗೋವಿನ ಹಿಂಡಿನಹಾಗೆ' ಎಂಬುದಾಗಿ. ಯಾರು ಹೇಳಿದನೊ, 'ಹರಿ! ಹರಿ!' ಅಂತ, ಆತನ ಭಾವನೆ, 'ಇವರು ಗೋವಿನ ಹಿಂಡಿನೋಪಾದಿಯಲ್ಲಿ ಇರುವುದರಿಂದ ನಾನು ಹರಣಮಾಡಲೇನು?' ಎಂಬುದಾಗಿ. ಕೊನೆಗೆ ಯಾರು ಹೇಳಿದನೊ. 'ಹರ! ಹರ!' ಅಂತ, ಆತನ ಭಾವನೆ, 'ಇವರು ಗೋವಿನ ಹಿಂಡಿಗೆ ಸರಿಸಮಾನರಾಗಿರುವುದರಿಂದ ಯಾವ ಹೆದರಿಕೆಯೂ

ಇಲ್ಲದೆ ಹರಣಮಾಡು' ಎಂಬುದಾಗಿ. ಅವರು ಈ ರೀತಿಯಾದ ಪರಮ ಭಕ್ತ ಸಾಧುಗಳು!" (ಎಲ್ಲರೂ ನಗುತ್ತಾರೆ.)

ಬಂಕಿಮ ಶ್ರೀರಾಮಕೃಷ್ಣರಿಂದ ಬೀಳ್ಕೊಂಡ; ಆದರೆ ಏಕಾಗ್ರಚಿತ್ತನಾಗಿ ಏನನ್ನೋ ಯೋಚಿಸುತ್ತಾ ಇದ್ದಾನೆ. ಬಾಗಿಲ ಬಳಿ ಬಂದು ನೋಡಿಕೊಂಡಾಗ ತಾನು ತನ್ನ ಉತ್ತರೀಯವನ್ನು ಕೊಠಡಿಯಲ್ಲೇ ಬಿಟ್ಟುಬಂದಿರೋದು ಆತನ ಅರಿವಿಗೆ ಬರುತ್ತದೆ. ಆತನ ಮೈಮೇಲೆ ಬರೀ ಷರಟು ಮಾತ್ರ ಇತ್ತು. ಬೇರೊಬ್ಬ ಅದನ್ನು ಹುಡುಕಿ ತಂದು ಆತನ ಕೈಗೆ ಕೊಟ್ಟ.

ಅಧರಸೇನನ ಮನೆಗೆ ಬಂದಿದ್ದ ಭಕ್ತರಲ್ಲಿ ಶರಚ್ಚಂದ್ರ ಮತ್ತು ಸನ್ಯಾಲ ಬ್ರಾಹ್ಮಣರು; ಅಧರಸೇನ ಅಕ್ಕಸಾಲಿಗ. ಅಧರಸೇನ ಊಟಕ್ಕೆ ಏಳಿಸಬಹುದು ಎಂಬುದಾಗಿ ಭಾವಿಸಿ ಅವರಿಬ್ಬರೂ ಬೇಗ ಎದ್ದುಹೋಗಿಬಿಟ್ಟರು. ಅವರು ಇನ್ನೂ ಹೊಸಬರು— ಅಧರಸೇನನನ್ನು ಪರಮಹಂಸರು ಯಾವ ರೀತಿಯಾಗಿ ಪ್ರೀತಿಸುತ್ತಾರೆ ಎಂಬುದು ಅವರಿಗೆ ಗೊತ್ತಿಲ್ಲ. ಪರಮಹಂಸರು ಹೇಳುತ್ತಿದ್ದರು, "ಭಕ್ತರೆಲ್ಲರೂ ಒಂದು ಪ್ರತ್ಯೇಕ ಜಾತಿಗೆ ಸೇರಿದವರು; ಅವರಲ್ಲಿ ಯಾವ ಭೇದಭಾವನೆಯೂ ಇರೋದಿಲ್ಲ" ಅಂತ.

ಅಧರಸೇನ ಪರಮಹಂಸರಿಗೂ ಅಲ್ಲಿ ನೆರೆದಿದ್ದ ಭಕ್ತರೆಲ್ಲರಿಗೂ ಯತ್ನಪೂರ್ವಕವಾಗಿ ಊಟಕ್ಕೆ ಬಡಿಸಿದ. ಊಟವಾದನಂತರ ಭಕ್ತರೆಲ್ಲರು ಪರಮಹಂಸರ ಸುಮಧುರ ಮಾತುಕತೆಗಳನ್ನು ಸ್ಮರಿಸಿಕೊಳ್ಳುತ್ತ ಅವರ ಅದ್ಭುತ ಪ್ರೇಮಮಯ ಮುಖವನ್ನು ತಮ್ಮ ಹೃದಯದಲ್ಲಿ ಮುದ್ರಿಸಿಟ್ಟುಕೊಂಡು ತಮ್ಮ ತಮ್ಮ ಮನೆಗೆ ಹಿಂದಿರುಗಿದರು.

ಪರಮಹಂಸರು ತನ್ನ ಮನೆಗೆ ಬರಬೇಕೆಂದು ಬಂಕಿಮ ಆಹ್ವಾನಿಸಿದ್ದರಿಂದ, ಕೆಲವು ದಿವಸಗಳಾದನಂತರ ಆತನ ಕಲ್ಕತ್ತದಮನೆಗೆ ಆತನನ್ನು ನೋಡಿಬರಲು ಪರಮಹಂಸರು ಮಾಸ್ಟರನನ್ನು ಮತ್ತು ಗಿರೀಶನನ್ನು ಕಳುಹಿಸಿದ್ದರು. ಆಗ ಆತ ಅವರೊಡನೆ ಪರಮಹಂಸರ ವಿಷಯವಾಗಿ ಬಹಳ ಹೊತ್ತು ಮಾತನಾಡಿದ. ಆಗ ಆತ ಹೇಳಿದ, "ನಾನು ಪರಮಹಂಸರನ್ನು ನೋಡಲು ಮತ್ತೆ ಬರುತ್ತೇನೆ" ಅಂತ. ಆದರೆ ಆತನ ಇಚ್ಛೆ ಪೂರ್ಣವಾಗಲಿಲ್ಲ.

## ೩೫

## ಸ್ಟಾರ್ ಥಿಯೇಟರಿನಲ್ಲಿ (೨)

---

**೧೪ನೆ ಡಿಸೆಂಬರ್ ೧೮೮೪, ಮಾರ್ಗಶಿರ ಕೃಷ್ಣ ದ್ವಾದಶಿ, ಭಾನುವಾರ.**

ಶ್ರೀರಾಮಕೃಷ್ಣಪರಮಹಂಸರು ಇಂದು ಕಲ್ಕತ್ತದಲ್ಲಿ ಬೀಡನ್ ಸ್ಟ್ರೀಟಿನಲ್ಲಿರುವ ಸ್ಟಾರ್ ಥಿಯೇಟರಿಗೆ 'ಪ್ರಹ್ಲಾದ ಚರಿತ್ರೆ,' ಎಂಬ ಅಭಿನಯ ನೋಡಲು ಬಂದಿದ್ದಾರೆ. ಅವರೊಡನೆ ಮಾಸ್ಟರ್, ಬಾಬುರಾಮ, ನಾರಾಯಣ ಮೊದಲಾದವರು ಬಂದಿದ್ದಾರೆ. ಥಿಯೇಟರಿನಲ್ಲಿ ಬಹಳ ಪ್ರಕಾಶಮಾನವಾದ ದೀಪಗಳನ್ನು ಹಾಕಿದ್ದಾರೆ. ಅಭಿನಯ ಇನ್ನೂ ಪ್ರಾರಂಭವಾಗಿರಲಿಲ್ಲ. ಪರಮಹಂಸರು ಒಂದು ಬಾಕ್ಸಿನಲ್ಲಿ ಕುಳಿತು ಗಿರೀಶ್ಚಂದ್ರಘೋಷನೊಡನೆ ಮಾತುಕತೆಗಳನ್ನಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು ನಗುತ್ತ: "ಭೇಶ್! ನೀನು ಎಲ್ಲಾ ನಾಟಕಗಳನ್ನು ಬಹಳ ಚೆನ್ನಾಗಿ ಬರೆದಿದ್ದೀಯೆ."

ಗಿರೀಶ: "ಮಹಾಶಯರೆ, ಅವು ನನ್ನ ರಕ್ತಗತವಾಗಿರುವುದೆಲ್ಲಿ? ಸುಮ್ಮನೆ ಬರೆದುಕೊಂಡು ಹೋಗಿಬಿಟ್ಟಿದ್ದೇನೆ ಅಷ್ಟೆ."

ಶ್ರೀರಾಮಕೃಷ್ಣರು: "ಇಲ್ಲ, ನಿನ್ನ ರಕ್ತಗತವಾಗಿವೆ. ಅಂದೇ ನಾನು ನಿನಗೆ ಹೇಳಿದೆ, 'ಅಂತರ್ಯದಲ್ಲಿ ಭಕ್ತಿ ಇಲ್ಲದಿದ್ದರೆ ಯಾರಿಗೂ ಭಗವಂತನ ಸಂಬಂಧವಾಗಿ ನಿರೂಪಿಸಲಾಗೋದಿಲ್ಲ' ಅಂತ.

"ಅನುಭೂತಿ ಬೇಕು. 'ನವಬೃಂದಾವನ,' ಎಂಬ ನಾಟಕ ನೋಡಲು ನಾನು ಒಮ್ಮೆ ಕೇಶವಸೇನನ ಮನೆಗೆ ಹೋಗಿದ್ದೆ. ತಿಂಗಳಿಗೆ ಎಂಟುನೂರು ಸಂಬಳ ಬರುತ್ತಿದ್ದ ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟನ್ನು ಅಲ್ಲಿ ನೋಡಿದೆ. ಅನೇಕರು ಹೇಳಿದರು ಆತ ಒಬ್ಬ ದೊಡ್ಡಪಂಡಿತ ಅಂತ; ಆದರೆ ಆತ ತನ್ನ ಒಬ್ಬ ಹುಡುಗನನ್ನು ಕರೆದುಕೊಂಡುಬಂದು ಅದಕ್ಕಾಗಿ ಸುಮ್ಮನೆ ವ್ಯಸ್ತನಾಗಿದ್ದ. ಆ ಹುಡುಗ ಎಲ್ಲಿ ಕುಳಿತುಕೋಬೇಕು, ಎಲ್ಲಿ ಕುಳಿತುಕೊಂಡರೆ ಆತ ಚೆನ್ನಾಗಿ ನಾಟಕ ನೋಡಬಲ್ಲ, ಇದರ ಚಿಂತನೆಯೇ! ಸ್ಟೇಜಿನಲ್ಲಿ ನಡೆಯುತ್ತಿದ್ದ ಭಗವದ್ವಿಷಯಗಳಿಗೆ ಕಿವಿಯನ್ನೇ ಕೊಡಲಿಲ್ಲ. ಆ ಮಗು ಯಾವಾಗನೋಡಿದರೂ ಕೇಳುತ್ತಿತ್ತು, 'ಅಪ್ಪ, ಇದು ಏನು?

ಅಪ್ಪ, ಅದು ಏನು?' ಅಂತ. ಆತನೂ ಆ ಹುಡುಗನನ್ನು ಸಂತೈಸುವುದರಲ್ಲಿಯೇ ನಿರತನಾಗಿದ್ದ. ಪುಸ್ತಕಗಳನ್ನೇನೊ ಬರಿದೆ ಓದಿದ್ದಾನೆ; ಆದರೆ ಅವನ್ನು ರಕ್ತಗತಮಾಡಿಕೊಂಡಿಲ್ಲ.''

ಗಿರೀಶ: ''ಭಾವಿಸುತ್ತಿದೇನೆ, 'ಥಿಯೇಟರ್-ಗಿಯೇಟರ್ ಎಲ್ಲ ನನಗೇಕೆ ಇನ್ನು?' ಅಂತ.''

ಶ್ರೀರಾಮಕೃಷ್ಣರು: ''ಬೇಡ, ಹಾಗೆ ಯೋಚಿಸಬೇಡ! ಇರಲಿ. ಅದರಿಂದ ಲೋಕಶಿಕ್ಷಣೆಯಾಗುತ್ತಿದೆ.''

ಅಭಿನಯ ಪ್ರಾರಂಭಿಸಿತು. ಪ್ರಹ್ಲಾದ ಓದುಬರಹ ಕಲಿಯಲು ಪಾಠಶಾಲೆಗೆ ಬಂದಿದ್ದಾನೆ. ಪ್ರಹ್ಲಾದನನ್ನು ನೋಡಿದೊಡನೆಯೆ ಪರಮಹಂಸರು ಪ್ರೀತಿಯಿಂದ ''ಪ್ರಹ್ಲಾದ'', ''ಪ್ರಹ್ಲಾದ'' ಅಂತ ಹೇಳುತ್ತಿದ್ದಹಾಗೆಯೆ, ಒಮ್ಮೆಗೆಯೇ ಸಮಾಧಿಸ್ಥರಾಗಿಬಿಟ್ಟದಾರೆ.

ಪ್ರಹ್ಲಾದ ಆನೆಯ ಪಾದದಡಿಯಲ್ಲಿ ಬಿದ್ದಿರುವುದನ್ನು ನೋಡಿ ಪರಮಹಂಸರು ಅಳುತ್ತಿದಾರೆ; ಆತನನ್ನು ಅಗ್ನಿಕುಂಡಕ್ಕೆ ಬಿಸಾಡಿದಾಗಲೂ ಅತ್ತರು.

ಗೋಲೋಕದಲ್ಲಿ ಲಕ್ಷ್ಮೀ ನಾರಾಯಣ ಕುಳಿತಿದಾರೆ. ನಾರಾಯಣ ಪ್ರಹ್ಲಾದನಿಗಾಗಿ ಚಿಂತಿಸುತ್ತಿದಾನೆ. ಆ ದೃಶ್ಯವನ್ನು ನೋಡಿ ಪರಮಹಂಸರು ಮತ್ತೆ ಸಮಾಧಿಸ್ಥರಾದರು.

ನಾಟಕ ಮುಗಿದನಂತರ ಗಿರೀಶ ಪರಮಹಂಸರನ್ನು ಥಿಯೇಟರಿನಲ್ಲಿದ್ದ ತನ್ನ ಕೋಣೆಗೆ ಕರೆದುಕೊಂಡುಹೋದ. ಬಳಿಕ ಆತ ಪರಮಹಂಸರನ್ನು ಕೇಳಿದ, ''ನಿಮಗೆ 'ವಿವಾಹ ವಿಭ್ರಾಂತಿ' ಎಂಬ ನಕಲಿಯನ್ನು ನೋಡಲಿಚ್ಛೆಯಿರುವುದೆ?'' ಅಂತ.

ಶ್ರೀರಾಮಕೃಷ್ಣರು: ''ಛೆ! ಬೇಡ. ಪ್ರಹ್ಲಾದನ ಚರಿತ್ರೆಯನಂತರ ಅದೆಲ್ಲ ಏಕೆ? ಇದೇ ಕಾರಣದಿಂದ ನಾನು ಒಮ್ಮೆ ಗೋಪಾಲನ ಮಂಡಲಿಗೆ ಹೇಳಿದೆ, 'ಸಮಾಪ್ತಿಯನ್ನು ನೀವು ಯಾವುದಾದರು ಒಂದು ಭಗವಂತನ ನೆನಪು ತರುವ ವಿಷಯದಿಂದ ಮುಕ್ತಾಯ ಮಾಡಿ' ಎಂದು. ಇದುವರೆಗೆ ಭಗವಂತನ ಸಂಬಂಧವಾಗಿ ನಡೆಯಿತು; ಈಗ 'ವಿವಾಹ ವಿಭ್ರಾಂತಿ' ಸಂಬಂಧವಾಗಿ— ಸಂಸಾರದ ಸಂಬಂಧವಾಗಿ! ಮತ್ತೆ ಅದೇ ಹಿಂದಿನಮಾನಸಿಕ ಸ್ಥಿತಿಗೆ ಮುಳುಗೋದು!''

ಗಿರೀಶ: ''ಮಹಾಶಯರೆ, ನಾಟಕ ಹೇಗಾಯಿತು?''

ಶ್ರೀರಾಮಕೃಷ್ಣರು: "ಆತನೇ ಎಲ್ಲಾ ಆಗಿರುವುದನ್ನು ನೋಡಿದೆ. ಯಾರು ಹೆಂಗಸರ ಪಾತ್ರ ವಹಿಸಿದ್ದರೊ ಅವರು ಸಾಕ್ಷಾತ್ ಆನಂದಮಯಿ ಯಾಗಿಯೇ ಕಂಡುಬಂದರು. ಯಾರು ಗೋಲೋಕದ ಗೋಪಾಲರ ಪಾತ್ರ ವಹಿಸಿದ್ದರೊ ಅವರು ಸಾಕ್ಷಾತ್ ನಾರಾಯಣನಾಗಿಯೇ ತೋರಿ ಬಂದರು. ಎಲ್ಲವೂ ಆತನೇ ಆಗಿದ್ದಾನೆ.

"ನಿಜವಾಗಿ ಭಗವಂತನ ದರ್ಶನ ಆಗಿದೆಯೊ ಇಲ್ಲವೊ ಎಂಬುದನ್ನು ಅರಿಯಲು ಕೆಲವು ಲಕ್ಷಣಗಳಿವೆ. ಅವುಗಳಲ್ಲಿ ಒಂದು ಆನಂದ; ಸಂಕೋಚವಿರದು. ಆತನನ್ನು ಸಮುದ್ರಕ್ಕೆ ಹೋಲಿಸಬಹುದು: ಮೇಲೆ ಅಲ್ಲೋಲಕಲ್ಲೋಲ, ಅಂತರ್ಯದಲ್ಲಿ ಗಭೀರ ಜಲ. ಯಾರಿಗೆ ಭಗ ವಂತನ ದರ್ಶನ ದೊರೆತಿದೆಯೊ ಆತ ಕೆಲವುವೇಳೆ ಹುಚ್ಚನಹಾಗೆ; ಕೆಲವು ವೇಳೆ ಪಿಶಾಚಿಯ ಹಾಗೆ— ಶುಚಿ ಅಶುಚಿ ಎಂಬ ಭೇದಜ್ಞಾನವಿಲ್ಲದೆ; ಕೆಲವುವೇಳೆ ಜಡನಹಾಗೆ—ಒಳಗೆ ಹೊರಗೆ ಎಲ್ಲೆಲ್ಲೂ ಭಗವಂತನನ್ನು ನೋಡುತ್ತಿರುವುದರಿಂದ ಸ್ತಂಭೀಭೂತನಾಗಿ; ಕೆಲವುವೇಳೆ ಬಾಲಕನ ಹಾಗೆ— ಯಾವ ಆಸಕ್ತಿಯೂ ಇಲ್ಲದೆ ಕಂಕುಳಲ್ಲಿ ಬಟ್ಟೆ ಇಟ್ಟುಕೊಂಡು ಸುತ್ತಾಡುವ ಮಕ್ಕಳಹಾಗೆ ಇರುತ್ತಾನೆ. ಈ ಅವಸ್ಥೆಯಲ್ಲಿ ಕೆಲವುವೇಳೆ ಬಾಲಭಾವದಿಂದ— ಹುಡುಗಾಟವಾಡುತ್ತ; ಕೆಲವುವೇಳೆ ಯುವಕ ಭಾವದಿಂದ— ಸಿಂಹಪರಾಕ್ರಮದಿಂದ ಕೆಲಸಮಾಡುತ್ತ, ಲೋಕಶಿಕ್ಷಣ ಮಾಡುತ್ತ ಇರುತ್ತಾನೆ.

"ಜೀವನಿಗೆ ಅಹಂಕಾರವಿರುವುದರ ದೆಸೆಯಿಂದ ಭಗವಂತನ ದರ್ಶನ ಪಡೆಯಲು ಆತನಿಗೆ ಆಗುತ್ತಿಲ್ಲ. ಮೇಘ ಎದ್ದಿತು ಅಂದರೆ ಸೂರ್ಯನನ್ನು ನೋಡಲಾಗೋದಿಲ್ಲ. ಆದರೆ ಆತ ಕಾಣದೆ ಇರುವುದರಿಂದ ಸೂರ್ಯನೇ ಇಲ್ಲ ಅಂತ ಲೆಕ್ಕವೆ? ಸೂರ್ಯ ಎಂದಿನಂತೆ ಇದ್ದೇ ಇದಾನೆ.

"ಆದರೆ ಬಾಲಕನ 'ಅಹಂ' ಇದರಲ್ಲಿ ಯಾವ ದೋಷವೂ ಇಲ್ಲ; ನಿಸ್ಸಂದೇಹವಾಗಿ ಉಪಕಾರಿ. ಸೊಪ್ಪು ದೇಹಕ್ಕೆ ಒಳ್ಳೆಯದಲ್ಲ; ಆದರೆ ಹಿಂಚೇಸೊಪ್ಪು ದೇಹಕ್ಕೆ ಒಳ್ಳೆಯದು. ಆದ್ದರಿಂದ ಹಿಂಚೆಯನ್ನು ಸೊಪ್ಪು ಅಂತ ಹೇಳೋಕಾಗೋದಿಲ್ಲ. ಅದೇರೀತಿಯಾಗಿ ಕಲ್ಲುಸಕ್ಕರೆ ಸಿಹಿಯ ಗುಂಪಿಗೆ ಸೇರಿದುದಲ್ಲ. ಉಳಿದ ಸಿಹಿ ಪದಾರ್ಥಗಳು ಶರೀರಕ್ಕೆ ರೋಗ ವನ್ನು ತರುತ್ತವೆ; ಆದರೆ ಕಲ್ಲುಸಕ್ಕರೆ ಕಫದೋಷವನ್ನು ವೃದ್ಧಿ ಮಾಡೋದಿಲ್ಲ.

"ಅದಕ್ಕಾಗೇ ನಾನು ಕೇಶವಸೇನನಿಗೆ ಹೇಳಿದೆ, 'ನಿನಗೆ ಇನ್ನೂ ಸ್ವಲ್ಪ ಹೆಚ್ಚಾಗಿ ತಿಳಿಸಿಬಿಟ್ಟಿತು ಅಂದರೆ ನಿನ್ನ ಮಂಡಲಿ-ಗಿಂಡಲಿ ಯಾವುದೂ ಇರದು' ಅಂತ. ಕೇಶವ ಭಯಪಟ್ಟುಬಿಟ್ಟ. ಆಗ ನಾನು ಮತ್ತೆ ಹೇಳಿದೆ, '"ಬಾಲಕನ ಅಹಂ", "ದಾಸನ ಅಹಂ" ಇವುಗಳಲ್ಲಿ ಯಾವ ದೋಷವೂ ಇಲ್ಲ' ಅಂತ.

"ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಆತನಿಗೆ ಭಗವಂತನೇ ಈ ಜೀವಜಗತ್ತಾಗಿರುವಂತೆ—ಎಲ್ಲವೂ ಆತನೇ ಆಗಿರುವಂತೆ ಕಂಡುಬರುತ್ತದೆ. ಆತನಿಗೇನೆ ಉತ್ತಮ ಭಕ್ತ ಅಂತ ಹೆಸರು."

ಗಿರೀಶ ನಗುತ್ತ: "ಎಲ್ಲವೂ ಆತನೆ; ಆದರೆ ಭಕ್ತನಲ್ಲಿ ಕಿಂಚಿತ್ 'ಅಹಂ' ಇರುತ್ತದೆ;—ಅದು ಏನನ್ನೂ ಮಾಡದು."

ಶ್ರೀರಾಮಕೃಷ್ಣರು ನಗುತ್ತ: "ಹೌದು, ಅದರಿಂದ ಯಾವ ಹಾನಿಯೂ ಉಂಟಾಗದು. ಅಂದೊಂದಷ್ಟು 'ಅಹಂ' ಅನ್ನು ಇಟ್ಟು ಕೊಂಡಿರೋದು ಭಗವಂತನೊಡನೆ ಆನಂದ ಪಡೋಕೆ. ನಾನು ಪ್ರತ್ಯೇಕ ನೀನು ಪ್ರತ್ಯೇಕ ಎಂಬ ಭಾವನೆ ಇದ್ದರೆ ತಾನೆ—ಸೇವ್ಯ ಸೇವಕ ಭಾವ ಇದ್ದರೆ ತಾನೆ ಆನಂದ ಪಡಲಾಗುತ್ತದೆ.

"ಮಧ್ಯಮ ಶ್ರೇಣಿಯ ಭಕ್ತನಿದ್ದಾನೆ. ಆತನ ಕಣ್ಣಿಗೆ ಭಗವಂತ ಸರ್ವ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರೋದು ಕಂಡುಬರುತ್ತದೆ. ಅಧಮ ಶ್ರೇಣಿಯ ಭಕ್ತ ಹೇಳುತ್ತಾನೆ, 'ಭಗವಂತನಿದಾನೆ. ನೋಡಲ್ಲಿ ಭಗವಂತ!—ಅಂದರೆ ಆಕಾಶದ ಮೇಲೆ!' ಅಂತ. (ಎಲ್ಲರೂ ನಗುತ್ತಾರೆ.)

"ಗೋಲೋಕದ ಗೋಪಾಲರನ್ನು ನೋಡಿ ನನಗಂತು ಅನುಭವ ವಾಯಿತು ಎಲ್ಲವೂ ಭಗವಂತನೇ ಆಗಿರುವ ಹಾಗೆ. ಯಾರಿಗೆ ಭಗವಂತನ ದರ್ಶನ ದೊರೆತಿದೆಯೊ ಆತನಿಗೆ ಅನುಭವವಾಗುತ್ತದೆ, 'ಭಗವಂತನೆ ಕರ್ತ, ಆತನೇ ಎಲ್ಲವನ್ನೂ ಮಾಡುತ್ತಾನೆ' ಅಂತ."

ಗಿರೀಶ: "ಮಹಾಶಯರೆ, ಆತನೇ ಎಲ್ಲವನ್ನೂ ಮಾಡುತ್ತಾನೇ ಎಂಬುದನ್ನು ಹೇಗೋ ಅರಿತುಕೊಂಡುಬಿಟ್ಟದ್ದೇನೆ."

ಶ್ರೀರಾಮಕೃಷ್ಣರು: "ನಾನು ಹೇಳುತ್ತೇನೆ, 'ಹೇ ತಾಯೆ, ನಾನು ಯಂತ್ರ, ನೀನು ಯಂತ್ರಿ; ನಾನು ಜಡ, ನೀನು ಚೇತಯಿತ್ರಿ; ಮಾಡಿಸಿದಂತೆ ಮಾಡುತ್ತೇನೆ, ನುಡಿಸಿದಂತೆ ನುಡಿಯುತ್ತೇನೆ' ಅಂತ. ಯಾರು

ಅಜ್ಞಾನಿಗಳೊ ಅವರು ಹೇಳುತ್ತಾರೆ, 'ಸ್ವಲ್ಪ ಭಾಗವನ್ನು ನಾವು ಮಾಡುತ್ತೇವೆ, ಸ್ವಲ್ಪ ಭಾಗವನ್ನು ಭಗವಂತ ಮಾಡುತ್ತಾನೆ' ಅಂತ."

ಗಿರೀಶ: "ಮಹಾಶಯರೆ, ನಾನು ನಿಜವಾಗಿ ಏನನ್ನೂ ಮಾಡುತ್ತಿಲ್ಲ. ಇನ್ನೇಕೆ ಕೆಲಸಕಾರ್ಯಗಳ ತಂಟೆ?"

ಶ್ರೀರಾಮಕೃಷ್ಣರು: "ಹಾಗಲ್ಲ, ಕರ್ಮ ಒಳ್ಳೆಯದು. ಜಮೀನನ್ನು ಉತ್ತು ಹಸನುಮಾಡಿ ಇಟ್ಟುಕೊಂಡಿದ್ದರೆ ಅದರಲ್ಲಿ ಯಾವ ಬೀಜ ಬಿತ್ತಿದರೂ ಬೆಳೆಯುತ್ತದೆ. ಆದರೆ ಕರ್ಮವನ್ನು ನಿಷ್ಕಾಮ ಭಾವನೆಯಿಂದ ಮಾಡಬೇಕು.

"ಪರಮಹಂಸರಲ್ಲಿ ಎರಡು ವಿಧ: ಜ್ಞಾನೀ ಪರಮಹಂಸ, ಪ್ರೇಮೀ ಪರಮಹಂಸ. ಯಾರು ಜ್ಞಾನಿಯೊ ಆತ ಸ್ವಾರ್ಥಪರ— ತನಗಾದರೆ ಸಾಕು ಅನ್ನುತ್ತಾನೆ. ಯಾರು ಪ್ರೇಮಿಯೊ ಆತ ಶುಕದೇವಾದಿಗಳೋಪಾದಿಯಲ್ಲಿ ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡು ಲೋಕಶಿಕ್ಷಣೆ ಮಾಡುತ್ತಾನೆ. ಕೆಲವರು ಮಾವಿನ ಹಣ್ಣು ತಿಂದು ಬಾಯನ್ನು ಚೆನ್ನಾಗಿ ಒರೆಸಿಕೊಂಡುಬಿಡುತ್ತಾರೆ; ಇನ್ನು ಕೆಲವರು ಒಂದು ಐದಾರು ಜನಕ್ಕೆ ಕೊಟ್ಟು ತಾವೂ ತಿನ್ನುತ್ತಾರೆ. ಕೆಲವರು ಭಾವಿ ತೋಡಲು ಕುಕ್ಕೆ ಗುದ್ದಲಿ ತೆಗೆದುಕೊಂಡು ಬರುತ್ತಾರೆ; ತೋಡಿದನಂತರ ಅವನ್ನು ಭಾವಿಗೆಯೇ ಬಿಸಾಡಿಬಿಡುತ್ತಾರೆ. ಇನ್ನು ಕೆಲವರು ಅಕ್ಕಪಕ್ಕದವರಿಗೆ ಬೇಕಾಗಬಹುದೆಂದು ಒಂದುಕಡೆ ಇಡುತ್ತಾರೆ. ಶುಕದೇವಾದಿಗಳು ಇತರರಿಗಾಗಿ ಕುಕ್ಕೆ ಗುದ್ದಲಿಯನ್ನ ತೆಗೆದು ಇಟ್ಟಿದ್ದರು. (ಗಿರೀಶನಿಗೆ) ನೀನೂ ಪರರಿಗಾಗಿ ಇಡಬೇಕು."

ಗಿರೀಶ: "ಹಾಗಾದರೆ ತಾವು ಆಶೀರ್ವಾದ ಮಾಡಬೇಕು."

ಶ್ರೀರಾಮಕೃಷ್ಣರು: "ನೀನು ಭಗವತಿಯಲ್ಲಿ ಪೂರ್ಣವಿಶ್ವಾಸವಿಡು, ದೊರೆತುಬಿಡುತ್ತದೆ."

ಗಿರೀಶ: "ನಾನೊಬ್ಬ ಪಾಪಿ."

ಶ್ರೀರಾಮಕೃಷ್ಣರು: "ಯಾವ ನೀಚ ತಾನು 'ಪಾಪಿ', 'ಪಾಪಿ' ಅಂತ ಸರ್ವದಾ ಭಾಷಿಸುತ್ತಾನೊ ಆತ ಪಾಪಿಯೇ ಆಗಿಬಿಡುತ್ತಾನೆ."

ಗಿರೀಶ: "ಮಹಾಶಯರೆ, ನಾನು ಎಲ್ಲಿ ಕುಳಿತುಕೊಳ್ಳುವೆನೊ ಆ ಸ್ಥಳ ಅಪವಿತ್ರವಾಗಿಬಿಡುತ್ತದೆ."

ಶ್ರೀರಾಮಕೃಷ್ಣರು: "ಏಕೆ ಹಾಗೆ? ಕೊಠಡಿ ಸಹಸ್ರಾರು ವರ್ಷ

ಗಳಿಂದ ಅಂಧಕಾರದಲ್ಲಿರಬಹುದು, ಅದಕ್ಕೆ ಬೆಳಕು ತಂದರೆ ಅದು ಸ್ವಲ್ಪ ಸ್ವಲ್ಪವಾಗಿ ಬೆಳಕಾಗುತ್ತದೆಯೊ ಅಥವಾ 'ಥಟ್' ಅಂತ ಒಡನೆಯೇ ಬೆಳಕಾಗುತ್ತದೆಯೊ?"

ಗಿರೀಶ: "ಹಾಗಾದರೆ ನೀವು ಆಗಲೇ ಆಶೀರ್ವಾದ ಮಾಡಿ ಬಿಟ್ಟದ್ದೀರಿ!"

ಶ್ರೀರಾಮಕೃಷ್ಣರು: "ಹಾಗೆಂದು ನೀನು ಸಂಪೂರ್ಣವಾಗಿ ನಂಬುವುದಾದರೆ ಮಾತ್ರ. ನಾನು ಇನ್ನೇನು ತಾನೆ ಹೇಳಲಿ? ನಾನು ಉಂಡು ತಿಂದು ಆಕೆಯ ಹೆಸರನ್ನು ಜಪಿಸುತ್ತ ಕಾಲ ಕಳೆಯುತ್ತಿದ್ದೇನೆ."

ಗಿರೀಶ: "ನನಗೆ ಅಂತಶ್ಶುದ್ಧಿಯಿಲ್ಲ, ದಯವಿಟ್ಟು ಅದೊಂದಷ್ಟನ್ನು ಕರುಣಿಸಿಬಿಡಿ."

ಶ್ರೀರಾಮಕೃಷ್ಣರು: "ನಾನು ಯಾರು? ನಾರದ ಶುಕದೇವ ಇಂಥವರು ಬಹುಶಃ ಕರುಣಿಸಬಲ್ಲವರಾಗಿದ್ದರು."

ಗಿರೀಶ: "ನಾರದಾದಿಗಳು ಕಣ್ಣಿಗೆ ಕಾಣಿಸಿಕೊಳ್ಳುತ್ತಿಲ್ಲವಲ್ಲ. ಸಾಕ್ಷಾತ್ತಾಗಿ ನೀವೇ ಇದ್ದೀರಲ್ಲ."

ಶ್ರೀರಾಮಕೃಷ್ಣರು ನಗುತ್ತ: "ಒಳ್ಳೆಯದು, ನಿನಗೆ ವಿಶ್ವಾಸವಿದೆ."

ಎಲ್ಲರೂ ಒಂದು ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದರು. ಮತ್ತೆ ಮಾತುಕತೆ ಪ್ರಾರಂಭವಾಯಿತು.

ಗಿರೀಶ: "ಒಂದು ಆಸೆ; ಅಹೇತುಕಭಕ್ತಿಯನ್ನು ಕೃಪೆಮಾಡಬೇಕು."

ಶ್ರೀರಾಮಕೃಷ್ಣರು: "ಅಹೇತುಕಭಕ್ತಿ ಈಶ್ವರ ಕೋಟಿಗಳಿಗೆ ಮಾತ್ರ ಲಭಿಸುತ್ತದೆ; ಜೀವಕೋಟಿಗಳಿಗೆ ಲಭಿಸದು."

ಎಲ್ಲರೂ ಸುಮ್ಮನೆ ಕುಳಿತ್ತಿದ್ದಾರೆ. ಪರಮಹಂಸರು ಅನ್ಯಮನಸ್ಕರಾಗಿ ಊರ್ಧ್ವದೃಷ್ಟಿಯಿಟ್ಟು ಹಾಡಲಾರಂಭಿಸಿದ್ದಾರೆ:

ಅತಿ ಕಠೋರ ಸಾಧನೆಯಲಿ ತೊಡಗಿರುವೀ ಶಿವನು ಕೂಡ
ಇನ್ನಾದರು ಕಾಣದಿರಲು ಕಾಳೀಪದನೀಲವ
ಎಲ್ಲರಿಗೂ ಲಭಿಸಬಹುದೆ ಶ್ರೀ ಶ್ಯಾಮೆಯ ದರ್ಶನ
ಎಲ್ಲರಿಗೂ ದೊರೆಯಬಹುದೆ ಶ್ರೀ ಕಾಳಿಯ ಸಂಪದ?
ಏನು ಹುಚ್ಚುಮನಸು ನನಗೆ? ಇದುವರೆಗೂ ತಿಳಿಯದಾದೆ
ಇಷ್ಟು ಮಾತ್ರ ಸತ್ಯವ!

**ಕಾಳೀಪದನಿಷ್ಠ ಮನಕೆ ಸ್ವರ್ಗಭೋಗ ವೈಭವವೂ**
**ತುಚ್ಛವೆಂದು ತಿಳಿವುದು.**
**ಕಾಳಿಯ ಕಡೆಗಣ್ಣನೋಟ ದೊರೆತರಸಿತೆ ಸಾಕು, ಮನವು**
**ಆನಂದದಿ ನಲಿವುದು.**
**ಯೋಗೀಂದ್ರ ಮುನೀಂದ್ರ ಇಂದ್ರಾದಿಗಳೆಲ್ಲರೂ**
**ಕಾಣದಿರಲು ಅವಳನು**
**ಆ ತಾಯಿಯ ಪದಕಮಲಕೆ ಹಂಬಲಿಸುತ ನಮೆವನಿಲ್ಲಿ**
**ಭಕ್ತ ಕಮಲಕಾಂತನು !**

ಗಿರೀಶ ಪುನರಾವೃತ್ತಿ ಮಾಡಿದ:

**ಆ ತಾಯಿಯ ಪದಕಮಲಕೆ ಹಂಬಲಿಸುತ ನಮೆವನಿಲ್ಲಿ**
**ಭಕ್ತ ಕಮಲಕಾಂತನು !**

ಶ್ರೀರಾಮಕೃಷ್ಣರು ಗಿರೀಶನಿಗೆ: "ತೀವ್ರ ವೈರಾಗ್ಯ ಉಂಟಾದರೆ ಆತನನ್ನು ಪಡೆಯಬಹುದು. ಯಾರನ್ನೇ ಆಗಲಿ ನೀರಿನೊಳಕ್ಕೆ ಅದುಮಿ ಇಟ್ಟಾಗ ಹೇಗೆ ಆತನ ಪ್ರಾಣ ಒಂದು ಗುಟುಕು ಉಸಿರಿಗಾಗಿ ಒದ್ದಾಡುವುದೊ, ಅದೇ ರೀತಿಯಾಗಿ ಪ್ರಾಣ ಭಗವಂತನಿಗಾಗಿ ಕಾತರಿಸುತ್ತಿದ್ದರೆ ಆಗ ಆತನ ಸಾಕ್ಷಾತ್ಕಾರವನ್ನು ಪಡೆಯಬಹುದು.

"ಅದಕ್ಕಾಗಿಯೆ ನಾನು ಹೇಳೋದು, 'ಇವು ಮೂರು ಪ್ರೀತಿಗಳನ್ನು ಏಕೀಕರಿಸಿ ಭಗವಂತನ ಕಡೆ ತಿರುಗಿಸುವುದಾದರೆ ಆತನನ್ನು ಪಡೆಯಬಹುದು' ಎಂದು. ಪ್ರಾಪಂಚಿಕನಿಗೆ ಪ್ರಾಪಂಚಿಕ ವಸ್ತುಗಳ ಮೇಲಿರುವ ಪ್ರೀತಿ, ಸತಿಗೆ ಪತಿಯಲ್ಲಿರುವ ಪ್ರೀತಿ, ತಾಯಿಗೆ ತನ್ನ ಮಕ್ಕಳ ಮೇಲಿರುವ ಪ್ರೀತಿ ಇವು ಮೂರು ಪ್ರೀತಿಗಳನ್ನು ಏಕೀಕರಿಸಿ ಯಾರೇ ಆಗಲಿ ಭಗವಂತನ ಕಡೆ ತಿರುಗಿಸುವುದಾದರೆ, ತತ್‌ಕ್ಷಣವೇ ಆತನಿಗೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ.

**ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ ?**
**ನಿನ್ನ ತೊರೆದವಳೆಂತು ಇರಬಲ್ಲಳೊ ?**

"ನಿಜವಾದ ವ್ಯಾಕುಲತೆಯಿಂದ ಆತನನ್ನು ಕರೆದರೆ, ಆತ ಭಕ್ತನಿಗೆ ಪ್ರತ್ಯಕ್ಷನಾಗಲೇ ಬೇಕಾಗುತ್ತದೆ.

"ಅಂದು ನಾನು ಭಕ್ತಿ ಅಂದರೆ ಏನು ಅಂಬುದನ್ನು ನಿನಗೆ ತಿಳಿಸಿದೆನು. ಕಾಯಾ ಮನಸಾ ವಾಚಾ ಆತನನ್ನು ಪೂಜಿಸುವುದಕ್ಕೆ ಭಕ್ತಿ

ಎಂದು ಹೆಸರು. ಕಾಯಾ;—ಅಂದರೆ ಕೈಯ ಮೂಲಕ ಆತನ ಪೂಜೆ ಮತ್ತು ಸೇವೆ ಮಾಡೋದು, ಪಾದಗಳ ಮೂಲಕ ತೀರ್ಥಯಾತ್ರೆ ಮಾಡೋದು, ಕಿವಿಯಿಂದ ಆತನ ಚರಿತ್ರೆ ಮತ್ತು ನಾಮಗುಣಕೀರ್ತನೆ ಕೇಳೋದು, ಕಣ್ಣಿನಿಂದ ಆತನ ವಿಗ್ರಹ ದರ್ಶನ ಮಾಡೋದು. ಮನಸಾ—ಅಂದರೆ ಸರ್ವದಾ ಆತನ ಧ್ಯಾನ ಮತ್ತು ಚಿಂತನೆ ಮಾಡೋದು, ಆತನ ಲೀಲೆಯನ್ನು ಸ್ಮರಣ ಮನನ ಮಾಡೋದು. ವಾಚಾ— ಅಂದರೆ ಆತನ ಸ್ತೋತ್ರ ಸ್ತುತಿಗಳನ್ನು ಪಠಿಸೋದು ಮತ್ತು ಆತನ ನಾಮಗುಣಕೀರ್ತನೆ ಮಾಡೋದು.

"ಕಲಿಯುಗಕ್ಕೆ ನಾರದೀಯ ಭಕ್ತಿ—ಸರ್ವದಾ ಆತನ ನಾಮಗುಣ ಕೀರ್ತನೆಮಾಡೋದು. ಯಾರಿಗೆ ಸಮಯವೇ ಇಲ್ಲವೊ ಅವರು ಪ್ರಾತಃಕಾಲ ಸಾಯಂಕಾಲ ಕೈತಾಳಹಾಕುತ್ತ ನಾಮಜಪವನ್ನು ಮಾಡಲಿ.

"ಭಕ್ತನ 'ಅಹಂ' ಅಹಂಕಾರವನ್ನು ಉತ್ಪನ್ನಮಾಡೋದಿಲ್ಲ; ಅಜ್ಞಾನವನ್ನು ಉಂಟುಮಾಡೋದಿಲ್ಲ; ಅದಕ್ಕೆ ಬದಲು ಭಗವಂತನ ಸಾಕ್ಷಾತ್ಕಾರವನ್ನು ದೊರಕಿಸಿಕೊಡುತ್ತದೆ. ಯಾವರೀತಿಯಾಗಿ ಹಿಂಚೆ ಸೊಪ್ಪು ಸೊಪ್ಪಿನ ಗುಂಪಿಗೆ ಸೇರಿಲ್ಲವೊ, ಅದೇ ರೀತಿಯಾಗಿ ಈ 'ಅಹಂ', 'ಅಹಂ'ನ ಗುಂಪಿಗೆ ಸೇರಿಲ್ಲ. ಉಳಿದ ಸೊಪ್ಪುಗಳಿಂದ ಶರೀರಾರೋಗ್ಯ ಕೆಡುತ್ತದೆ; ಆದರೆ ಹಿಂಚೆ ಪಿತ್ತಹಾರಿ, ದೇಹಕ್ಕೆ ಒಳ್ಳೆಯದು. ಕಲ್ಲುಸಕ್ಕರೆ ಸಿಹಿ ಪದಾರ್ಥಗಳ ಗುಂಪಿಗೆ ಸೇರಿಲ್ಲ. ಉಳಿದ ಸಿಹಿ ಪದಾರ್ಥಗಳನ್ನು ತಿಂದರೆ ಶರೀರಾರೋಗ್ಯ ಕೆಡುತ್ತದೆ, ಆದರೆ ಕಲ್ಲುಸಕ್ಕರೆ ಆಮ್ಲಹಾರಿ.

"ನಿಷ್ಠೆ ಭಕ್ತಿಯನ್ನು ದೊರಕಿಸಿಕೊಡುತ್ತದೆ; ಭಕ್ತಿ ಪಕ್ವವಾದರೆ ಭಾವವಾಗಿ ಪರಿಣಮಿಸುತ್ತದೆ ; ಭಾವ ಘನೀಭೂತವಾದಾಗ ಅದು ಮಹಾ ಭಾವವಾಗುತ್ತದೆ; ಕಟ್ಟಕಡೆಗೆ ಪ್ರೇಮವಾಗುತ್ತದೆ. ಪ್ರೇಮವನ್ನು ಒಂದು ಹಗ್ಗಕ್ಕೆ ಹೋಲಿಸಬಹುದು. ಪ್ರೇಮ ಉಂಟಾಯಿತು ಅಂದರೆ ಭಗವಂತ ಭಕ್ತನ ಕೈಯಲ್ಲಿ ಕಟ್ಟಿಬೀಳುತ್ತಾನೆ, ಮತ್ತೆ ಆತನ ಕೈಯಿಂದ ತಪ್ಪಿಸಿಕೊಳ್ಳಲಾರ. ಸಾಮಾನ್ಯಜೀವ ಅತಿಹೆಚ್ಚೆಂದರೆ ಭಾವಾವಸ್ಥೆಯನ್ನು ಪಡೆಯಬಲ್ಲದು. ಈಶ್ವರಕೋಟಿಗಳಿಗೆ ವಿನಾ ಬೇರೆ ಯಾರಿಗೂ ಮಹಾ ಭಾವ, ಪ್ರೇಮ ಉಂಟಾಗವು. ಈ ಅವಸ್ಥೆಗಳು ಚೈತನ್ಯದೇವನಿಗೆ ಉಂಟಾಗಿದ್ದುವು.

"ಜ್ಞಾನಯೋಗ ಎಂಬುದು ಯಾವುದು ? ಯಾವ ಮಾರ್ಗದಿಂದ

ಸ್ವಸ್ವರೂಪವನ್ನು ಅರಿಯಬಹುದೋ ಅದು; ಬ್ರಹ್ಮವೇ ನನ್ನ ಸ್ವರೂಪ ಎಂಬ ಬೋಧೆಯಾಗುತ್ತದೆ. ಪ್ರಹ್ಲಾದ ಕೆಲವು ವೇಳೆ ತನ್ನ ಸ್ವಸ್ವರೂಪ ದಲ್ಲಿ ಇರುತ್ತಿದ್ದ. ಇನ್ನು ಕೆಲವು ವೇಳೆ ಆತನಿಗೆ ತಾನು ಪ್ರತ್ಯೇಕ ಭಗ ವಂತ ಪ್ರತ್ಯೇಕ ಎಂಬುದಾಗಿ ತೋರುತ್ತಿತ್ತು; ಆಗ ಭಕ್ತಿಯ ಭಾವದಲ್ಲಿ ಇರುತ್ತಿದ್ದ.

"ಹನುಮಂತ ಹೇಳಿದ, 'ಓ ರಾಮ, ಕೆಲವು ವೇಳೆ ಅನುಭವ ವಾಗುತ್ತದೆ, "ನೀನು ಪೂರ್ಣ, ನಾನು ಅಂಶ" ಅಂತ; ಇನ್ನು ಕೆಲವು ವೇಳೆ ಅನುಭವವಾಗುತ್ತದೆ, "ನೀನು ಪ್ರಭು, ನಾನು ದಾಸ" ಅಂತ; ಮತ್ತೆ ರಾಮ, ತತ್ತ್ವಜ್ಞಾನ ದೊರೆತಾಗ ಅನುಭವವಾಗುತ್ತದೆ, "ನೀನೇ ನಾನು, ನಾನೇ ನೀನು" ಅಂತ' ಎಂದು."

ಗಿರೀಶ: "ಆಹಾ!"

ಶ್ರೀರಾಮಕೃಷ್ಣರು: "ಸಂಸಾರದಲ್ಲಿ ಏಕೆ ದೊರಕೋದಿಲ್ಲ? ಆದರೆ ವಿವೇಕವೈರಾಗ್ಯ ಬೇಕು. ಭಗವಂತನೊಬ್ಬನೇ ವಸ್ತು ಉಳಿದುದೆಲ್ಲ ಅನಿತ್ಯವಾದ್ದು, ಒಂದೆರಡು ದಿನದ ಬಾಳಿನವು;— ಈ ಪಕ್ವ ಬೋಧೆ ಬೇಕು. ಮೇಲೆ ಮೇಲೆ ತೇಲಿದರೆ ಆಗದು, ಆಳಕ್ಕೆ ಮುಳುಗಬೇಕು."

ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದ್ದಾರೆ.

**ಮುಳುಗು ಮುಳುಗು ಮನಸೇ—**

**ಹಿರಿಯೊಲವಿನ ಕಡಲಾಳಕೆ........**

ಶ್ರೀರಾಮಕೃಷ್ಣರು: "ಇನ್ನೊಂದು ವಿಷಯ. ಕಾಮಾದಿ ಮೊಸಳೆ ಗಳ ಭಯವೊಂದಿದೆ."

ಗಿರೀಶ: "ಆದರೆ ಯಮನಿಗೂ ನಾನು ಅಂಜೋನಲ್ಲ."

ಶ್ರೀರಾಮಕೃಷ್ಣರು: "ಅದಲ್ಲ, ಕಾಮಾದಿ ಮೊಸಳೆಗಳ ಭಯ ವೊಂದಿದೆ; ಅದಕ್ಕಾಗಿ ಮೈಗೆ ಅರಿಸಿನ ಹಚ್ಚಿಕೊಂಡು ಮುಳುಗಬೇಕು— ವಿವೇಕವೈರಾಗ್ಯಗಳೆಂಬ ಅರಿಸಿನವನ್ನು ಹಚ್ಚಿಕೊಂಡು ಮುಳುಗಬೇಕು.

"ಸಂಸಾರದಲ್ಲಿಯೂ ಕೆಲಕೆಲವರಿಗೆ ಜ್ಞಾನ ದೊರಕುತ್ತದೆ. ಅದಕ್ಕಾಗಿಯೇ ಎರಡು ವಿಧದ ಯೋಗಿಗಳ ವಿಷಯ ಶಾಸ್ತ್ರದಲ್ಲಿ ಹೇಳಿದೆ;— ಗುಪ್ತಯೋಗಿ, ವ್ಯಕ್ತಯೋಗಿ. ಯಾರು ಸಂಸಾರವನ್ನು ತ್ಯಜಿಸಿದ್ದಾರೊ ಅವರೇ ವ್ಯಕ್ತಯೋಗಿಗಳು: ಅವರನ್ನು ಎಲ್ಲರೂ ಗುರುತಿಸ ಬಲ್ಲರು. ಗುಪ್ತಯೋಗಿಗಳು ಪ್ರಕಾಶಕ್ಕೆ ಬರೋದಿಲ್ಲ. ಇವರನ್ನು ಮನೆಯ

ದಾಸಿಗೆ ಹೋಲಿಸಬಹುದು. ಆಕೆ ಮನೆಯ ಎಲ್ಲಾ ಕೆಲಸಗಳನ್ನು ಮಾಡುತ್ತಾಳೆ, ಆದರೆ ಆಕೆಯ ಮನಸ್ಸೆಲ್ಲ ಊರಿನಲ್ಲಿರುವ ತನ್ನ ಮಕ್ಕಳು ಮರಿಗಳ ಕಡೆ ಹರಿಯುತ್ತಿರುತ್ತದೆ. ಇವರನ್ನು ಮತ್ತೆ ನಾನು ನಿನಗೆ ತಿಳಿಸಿರುವಂತೆ, ಪತಿತ ಹೆಂಗಸಿಗೆ ಹೋಲಿಸಬಹುದು. ಪತಿತ ಹೆಂಗಸು ಮನೆಯ ಕೆಲಸಗಳನ್ನೆಲ್ಲಾ ಬಹಳ ಉತ್ಸಾಹದಿಂದ ಮಾಡುತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ತನ್ನ ಉಪಪತಿಯ ಕಡೆಗೆ ಸರ್ವದಾ ಹರಿಯುತ್ತಿರುತ್ತದೆ. ವಿವೇಕವೈರಾಗ್ಯವನ್ನು ಬೆಳೆಸಿಕೊಳ್ಳೋದು ಸುಲಭಸಾಧ್ಯವೇನಲ್ಲ. 'ನಾನು ಕರ್ತಾ ಮತ್ತು ಎಲ್ಲವೂ ನನಗೆ ಸೇರಿದವು' ಎಂಬ ಭಾವನೆ ಸಹಜವಾಗಿ ಹೋಗದು. ನಾನು ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟನ್ನು ನೋಡಿದೆ. ಆತನಿಗೆ ತಿಂಗಳಿಗೆ ಎಂಟು ನೂರು ರೂಪಾಯಿ ಸಂಬಳ. ಭಗವದ್ವಿಷಯವಾಗಿ ಮಾತುಕತೆ ನಡೆಯುತ್ತಿತ್ತು — ಆಕಡೆ ಮನಸ್ಸನ್ನು ಆತ ಒಂದು ಕಿಂಚಿತ್ತು ಕೊಡಲಿಲ್ಲ. ಜೊತೆಯಲ್ಲಿ ತನ್ನ ಹುಡುಗನೊಬ್ಬನನ್ನು ಕರೆದುಕೊಂಡು ಬಂದಿದ್ದ. ಆತನನ್ನು ಒಮ್ಮೆ ಈ ಕಡೆ ಕೂರಿಸುತ್ತಿದ್ದ, ಒಮ್ಮೆ ಆ ಕಡೆ ಕೂರಿಸುತ್ತಿದ್ದ. ನನಗೆ ಇನ್ನೊಬ್ಬ ಗೊತ್ತಿದಾನೆ, ಆತನ ಹೆಸರು ಹೇಳೋಲ್ಲ; ಆತ ಜಪವನ್ನೇನೊ ಬಹಳವಾಗಿ ಮಾಡುತ್ತಿದಾನೆ, ಆದರೆ ಹತ್ತುಸಾವಿರ ರೂಪಾಯಿಗಾಗಿ ಸುಳ್ಳುಸಾಕ್ಷಿ ಕೊಟ್ಟಿದಾನೆ. ಅದಕ್ಕಾಗಿಯೇ ನಾನು ಹೇಳೋದು, 'ವಿವೇಕವೈರಾಗ್ಯವನ್ನು ಗಳಿಸಿಕೊಂಡರೆ ಸಂಸಾರದಲ್ಲಿದ್ದರೂ ದೊರಕುತ್ತದೆ' ಅಂತ."

ಗಿರೀಶ: "ಈ ಪಾಪಿಯ ಗತಿಯೇನು?"

ಪರಮಹಂಸರು ಊರ್ಧ್ವದೃಷ್ಟಿಯುಳ್ಳು ಮಧುರ ಕಂಠದಿಂದ ಹಾಡಲಾರಂಭಿಸಿದ್ದಾರೆ:

**ಕೃತಾಂತ ಭಯಂಕರ ನರಕಾಂತಕ ಶ್ರೀಕಾಂತನ ನೆನೆಯೋ,**
**ಕಣ್ ಮಿಟುಕುವ ಹೊತ್ತಿನಲೇ**
**ಭವಸಾಗರದಾಚೆಯ ದಡಕೊಯ್ಯುವನವನೋ!**

**ನೆನೆ ಮನವೇ: ನೀನೇತಕೆ ಈ ಲೋಕಕೆ ಬಂದೆ.**
**ಅಲ್ಪ ತುಚ್ಛ ಕಿರುಬಯಕೆಯ ನೆನಕೆಯೊಳೇನಿಂದೆ!**
**ಹಾದಿಯುಲ್ಲವಿದು; ಅವನೆಡೆಗೊಯ್ಯುವುದು ನಿತ್ಯಪೂಜೆ ತಪ**
**ಪ್ರಾರ್ಥನೆ ಸಾಧನೆಯೊಂದೇ!**

ಶ್ರೀರಾಮಕೃಷ್ಣರು: “‘ಕಣ್ ಮಿಟುಕುವ ಹೊತ್ತಿನಲೇ ಭವ ಸಾಗರದಾಚೆಯ ದಡಕೊಯ್ಯುವನವನೋ!’ ಮಹಾಮಾಯೆ ಹೊಸಲು ಬಿಟ್ಟು ನಿಂತರೆ ಆತನ ದರ್ಶನ ದೊರೆಯುತ್ತದೆ. ಮಹಾಮಾಯೆಯ ಕೃಪೆ ಬೇಕು: ಅದಕ್ಕಾಗಿಯೆ ಆಕೆಯ ಉಪಾಸನೆಮಾಡೋದು. ನೋಡು, ಹತ್ತಿರವೇ ಭಗವಂತ ಇದಾನೆ, ಆದರೂ ಮಧ್ಯೆ ಮಾಹಾಮಾಯೆ ನಿಂತಿರುವುದರಿಂದ ಆತನನ್ನು ನೋಡೋಕಾಗುತ್ತಿಲ್ಲ. ರಾಮ ಸೀತೆ ಲಕ್ಷ್ಮಣ ಕಾಡಿನಲ್ಲಿ ಹೋಗುತ್ತಿದಾರೆ: ಮುಂದೆ ರಾಮ, ಮಧ್ಯೆ ಸೀತೆ— ಲಕ್ಷ್ಮಣ ಕೊನೆಯಲ್ಲಿ. ರಾಮ ಎರಡೂವರೆ ಮೊಳ ದೂರದಲ್ಲೇ ಇದಾನೆ, ಆದರೂ ಲಕ್ಷ್ಮಣ ಆತನನ್ನು ನೋಡೋಕಾಗುತ್ತಿಲ್ಲ.

“ಆತನ ಉಪಾಸನೆ ಮಾಡಬೇಕಾದರೆ ಯಾವುದಾದರು ಒಂದು ಭಾವವನ್ನು ಆರೋಪಿಸಿಕೋಬೇಕು. ನನ್ನದು ಮೂರು ಭಾವಗಳು: ಸಂತಾನಭಾವ, ದಾಸೀಭಾವ, ಸಖೀಭಾವ. ದಾಸೀಭಾವ ಸಖೀಭಾವ ಇವುಗಳಲ್ಲಿ ಅನೇಕ ಕಾಲ ಇದ್ದೆ; ಆಗ ಹೆಂಗಸರ ಹಾಗೆ ಸೀರೆ ಉಡುತ್ತಿದ್ದೆ, ಒಡವೆ ತೊಡುತ್ತಿದ್ದೆ, ಮುಸುಕು ಹಾಕಿಕೊಳ್ಳುತ್ತಿದ್ದೆ. ಸಂತಾನಭಾವ ಬಹಳ ಒಳ್ಳೆಯದು.

“ವೀರಭಾವ ಒಳ್ಳೆಯದಲ್ಲ. ವೈಷ್ಣವ-ವೈಷ್ಣವಿಯರದು, ಭೈರವ-ಭೈರವಿಯರದು ವೀರಭಾವ: ಪ್ರಕೃತಿಯನ್ನು ಸ್ತ್ರೀ ಎಂದು ಗಣಿಸೋದು, ರಮಿಸೋದರಿಂದ ಆಕೆಯನ್ನು ಪ್ರಸನ್ನಳನ್ನಾಗಿ ಮಾಡಿಕೊಳ್ಳೋದು. ಈ ಭಾವದಲ್ಲಿ ಪ್ರಾಯಶಃ ಪತನ ಆಗುವ ಸಂಭವ ಇದೆ.

ಗಿರೀಶ: “ಒಮ್ಮೆ ನನಗೆ ಈ ಭಾವ ಬಂದುಬಿಟ್ಟಿತ್ತು.”

ಪರಮಹಂಸರು ಚಿಂತಾಕ್ರಾಂತರಾಗಿ ಗಿರೀಶನ ಕಡೆ ನೋಡುತ್ತಿದ್ದಾರೆ.

ಗಿರೀಶ: “ನನಗಿನ್ನೂ ಆ ಪ್ರವೃತ್ತಿ ಇದೆ. ಈಗ ಉಪಾಯವೇನು ದಯವಿಟ್ಟು ಹೇಳಿ.”

ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಯೋಚಿಸಿ: “ಆತನಿಗೆ ವಕಾಲತ್ತು ವಹಿಸಿಬಿಡು— ಆತ ತನಗಿಚ್ಛೆ ಬಂದಂತೆ ಮಾಡಲಿ.”

ಪರಮಹಂಸರು ತಮ್ಮ ಯುವಕ ಭಕ್ತರ ಸಂಬಂಧವಾಗಿ ಮಾತುಕತೆ ಪ್ರಾರಂಭಮಾಡಿದಾರೆ.

ಶ್ರೀರಾಮಕೃಷ್ಣರು ಗಿರೀಶಾದಿಗಳಿಗೆ: “ಧ್ಯಾನದ ಸಮಯದಲ್ಲಿ

ಈ ಯುವಕರ ಎಲ್ಲಾ ಲಕ್ಷಣಗಳನ್ನು ನೋಡಿದೇನೆ. ಮನೆ ಮಠ ಕಟ್ಟಿ ಬಾಳಬೇಕೆಂಬ ಬುದ್ಧಿ ಇವರಿಗಿಲ್ಲ. ಹೆಂಡತಿಯ ಸುಖದ ಬಯಕೆ ಇವರ ಹೃದಯದಲ್ಲಿ ಇಲ್ಲ. ಯಾರಿಗೆ ಮದುವೆಯಾಗಿದೆಯೊ ಅವರು ತಮ್ಮ ಹೆಂಡತಿಯರೊಡನೆ ಒಟ್ಟಿಗೆ ಮಲಗುತ್ತಿಲ್ಲ. ಸತ್ಯವೇನೆಂದರೆ— ರಜೋಗುಣ ಹೋಗಿ ಸತ್ತ್ವಗುಣ ಬರದ ಹೊರತು ಭಗವಂತನಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲದು; ಆತನನ್ನು ಕಂಡರೆ ಪ್ರೀತಿಯುಂಟಾಗದು, ಆತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲಾಗೋದಿಲ್ಲ."

ಗಿರೀಶ: "ನೀವು ನನಗೆ ಆಶೀರ್ವಾದ ಮಾಡಿದ್ದೀರಿ!"

ಶ್ರೀರಾಮಕೃಷ್ಣರು: "ಎಲ್ಲಿ? ಆದರೆ ಹೇಳಿದೇನೆ, 'ನಿಜವಾದ ವ್ಯಾಕುಲತೆ ಇದ್ದರೆ ದೊರೆತುಬಿಡುತ್ತದೆ' ಅಂತ."

ಹೀಗೆ ಮಾತನಾಡುತ್ತಿದ್ದ ಹಾಗೆಯೆ, "ಆನಂದಮಯ! ಆನಂದ ಮಯ!" ಎಂದು ಹೇಳುತ್ತ ಸಮಾಧಿಸ್ಥರಾಗಿದಾರೆ. ಆ ಅವಸ್ಥೆಯಲ್ಲಿ ಬಹಳ ಕಾಲ ಇದ್ದರು. ಕಿಂಚಿತ್ ಪ್ರಕೃತಿಸ್ಥರಾಗಿ ಹೇಳುತ್ತಿದಾರೆ, "ಈ ಯುವಕರೆಲ್ಲ ಎಲ್ಲಿ?" ಅಂತ. ಮಾಸ್ಟರ್ ಬಾಬುರಾಮನ ಮತ್ತು ಉಳಿದವರ ಕಡೆ ದಿಟ್ಟಿಸಿ ನೋಡುತ್ತ ಪ್ರೇಮೋನ್ಮತ್ತರಾಗಿ ಹೇಳುತ್ತಿದಾರೆ, "ಸಚ್ಚಿದಾನಂದವೇ ಒಳ್ಳೆಯದು; ಆದರೆ ಕಾರಣಾನಂದ?" ಎಂಬುದಾಗಿ. ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದಾರೆ:

ಅರಿತೆ ನಾನು ಅರಿತೆ ನಾನು — ನಿಜದ ನೆಲೆಯನರಿತೆನು
ಭಾವದಂತರಂಗವರಿತ ವ್ಯಕ್ತಿಯೊಬ್ಬ ದೊರೆತನು.
ಎಂದೆಂದೂ ಇರುಳಿಲ್ಲದ ಬೆಳಕಿನೂರಿನಿಂದ ಅವನು
ನಮ್ಮಲ್ಲಿಗೆ ಬಂದನು.
ಅವನ ಸಂಗದಿಂದ ನಾನು ಹಗಲಾವುದು ಇರುಳಾವುದು
ಎಂಬುದನೂ ತಿಳಿಯೆನು!
ಜಪತಪಾದಿ ಕರ್ಮಗಳು ನೀರಸವೆಂದರಿತೆ ನಾನು;
ಹಳೆಯ ನಿದ್ರೆ ಹರಿಯಿತು!
ತೂಗಡಿಸುವುದೆಲ್ಲಿ ಬಂತು? — ನಿರಂತರವು ಯೋಗದಲ್ಲಿ
ಎಚ್ಚರಿರುವುದಾಯಿತು.

ಲೋಕನಿದ್ರೆ ಮುಗಿಯಿತಿನ್ನು; ನಿನ್ನ ಯೋಗನಿದ್ರೆಯಲ್ಲಿ
ನಿಲಿಸು ತಾಯಿ ನನ್ನನು.
ಪರಮಬ್ರಹ್ಮರೂಪಿ ನೀನು; ಭುಕ್ತಿ ಮುಕ್ತಿ ಎಂಬೆರಡಕು
ತಲೆಬಾಗಿಸಿ ನಿಲುವೆನು.
ಪಾಪಪುಣ್ಯವೆಂಬುದನೂ ಕಿತ್ತು ಎಸೆಯಬಲ್ಲೆನು!

ಮತ್ತೆ ಹಾಡಿದರು:

ಏತಕೆ, ಇನ್ನೇತಕೆ?
ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ
ಪುಣ್ಯಕ್ಷೇತ್ರಗಳೇತಕೆ?...............

ಪರಮಹಂಸರು ಮಾತು ಮುಂದುವರಿಸುತ್ತ ಹೇಳಿದರು, "ನಾನು ಭಗವತಿಗೆ ಪ್ರಾರ್ಥನೆಮಾಡುತ್ತಿದ್ದಾಗ ಹೇಳಿದೆ, 'ತಾಯೆ, ನನಗೇನೂ ಬೇಕಾಗಿಲ್ಲ: ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಉಂಟಾಗುವಂತೆ ಮಾಡು' ಅಂತ" ಎಂದು.

ಗಿರೀಶನ ಶಾಂತಭಾವವನ್ನು ನೋಡಿ ಪರಮಹಂಸರು ಹರ್ಷಚಿತ್ತರಾಗಿದಾರೆ. ಹೇಳುತ್ತಿದಾರೆ, "ನಿನ್ನ ಈ ಅವಸ್ಥೆ ಬಹಳ ಒಳ್ಳೆಯದು; ಸಹಜ ಅವಸ್ಥೆಯೇ ಉತ್ತಮ ಅವಸ್ಥೆ" ಅಂತ.

ಶ್ರೀರಾಮಕೃಷ್ಣರು ಇನ್ನೂ ಗಿರೀಶನ ಕೊಠಡಿಯಲ್ಲೇ ಕುಳಿತಿದ್ದಾರೆ. ಒಬ್ಬ ಬಂದು ಅವರಿಗೆ ಹೇಳಿದ, "ನೀವು 'ವಿವಾಹ ವಿಭ್ರಾಂತಿ' ಎಂಬುದನ್ನು ನೋಡುವಿರೇನು?— ಈಗ ಅದು ನಡೆಯುತ್ತಿದೆ" ಅಂತ.

ಪರಮಹಂಸರು ಗಿರೀಶನಿಗೆ ಹೇಳಿದರು, "ಏನು ನಿನ್ನ ವ್ಯವಸ್ಥೆ? ಪ್ರಹ್ಲಾದನ ಚರಿತ್ರೆ ನೋಡಿದನಂತರ ಈ ನಕಲಿಯೆ! ಮೊದಲು ಲಾಡು ಚಿರೋಟಿ ಪಾಯಸ, ಬಳಿಕ ಹಾಗಲಕಾಯಿ ಗೊಜ್ಜು!" ಅಂತ.

ಅಭಿನಯ ಮುಗಿದನಂತರ ಗಿರೀಶನ ಇಚ್ಛೆಗನುಸಾರ ನಟಿಯರು ಪರಮಹಂಸರಿಗೆ ಪ್ರಣಾಮಮಾಡಲು ಬಂದಿದ್ದಾರೆ. ಅವರೆಲ್ಲರೂ ಒಟ್ಟಿಗೆ ತಮ್ಮ ತಲೆಯಿಂದ ಭೂಮಿಯನ್ನು ಮುಟ್ಟಿ ಪ್ರಣಾಮಮಾಡಿದರು. ಬಳಿಕ ಅವರಲ್ಲಿ ಕೆಲವರು ಪರಮಹಂಸರ ಪಾದಗಳನ್ನು ಸ್ಪರ್ಶಿಸಿ ಪ್ರಣಾಮ ಮಾಡುತ್ತಿದ್ದುದನ್ನು ನೋಡಿ ಭಕ್ತರು ಆಶ್ಚರ್ಯಚಕಿತರಾದರು. ನಟಿಯರು ಪರಮಹಂಸರ ಪಾದಗಳನ್ನು ಸ್ಪರ್ಶಿಸುತ್ತಿದ್ದಾಗ ಅವರು ಹೇಳುತ್ತಿ

ದ್ದರು, "ತಾಯಿರಾ, ದಯವಿಟ್ಟು ಬೇಡಿ, ದಯವಿಟ್ಟು ಬೇಡಿ' ಅಂತ. ಅವರ ಪ್ರತಿಯೊಂದು ಮಾತೂ ಕರುಣೆಯಿಂದ ತೊಯ್ದಿತ್ತು.

ನಟಿಯರು ಹೊರಟುಹೋದನಂತರ ಪರಮಹಂಸರು ಭಕ್ತರಿಗೆ ಹೇಳುತ್ತಿದ್ದಾರೆ, "ಎಲ್ಲವೂ ಆತನೆ, ಆದರೆ ವಿವಿಧ ರೂಪಿನಿಂದ ಕಾಣುತ್ತಿದ್ದಾನೆ" ಅಂತ.

ಈಗ ಪರಮಹಂಸರು ಗಾಡಿಯಲ್ಲಿ ಕುಳಿತಿದ್ದಾರೆ. ಗಿರೀಶಾದಿ ಭಕ್ತರು ಅವರನ್ನು ಗಾಡಿಗೆ ಹತ್ತಿಸಿದರು. ಗಾಡಿಯನ್ನು ಹತ್ತಿದೊಡನೆಯೇ ಅವರಿಗೆ ಗಾಢಸಮಾಧಿ ಉಂಟಾಯಿತು. ನಾರಾಯಣನೆ ಮೊದಲಾದ ಭಕ್ತರೂ ಗಾಡಿಯಲ್ಲಿ ಕುಳಿತರು. ಅದು ದಕ್ಷಿಣೇಶ್ವರದ ಕಡೆ ಹೋಗುತ್ತಿದೆ.

**೨೭ನೆ ಡಿಸೆಂಬರ್ ೧೮೮೪, ಪುಷ್ಯ ಶುಕ್ಲ ಸಪ್ತಮಿ, ಶನಿವಾರ.**

ಕ್ರಿಸ್‌ಮಸ್ ರಜಾದಿನಗಳು ಬಂದಿರುವುದರಿಂದ ಭಕ್ತರಿಗೆ ವಿರಾಮವಿದೆ. ಅನೇಕರು ಪರಮಹಂಸರನ್ನು ನೋಡಲು ಬಂದಿದ್ದಾರೆ. ಬೆಳಗಾಗೆದ್ದೇ ಅನೇಕರು ಬಂದುಬಿಟ್ಟಿದ್ದಾರೆ. ಕೇದಾರ, ರಾಮ, ನಿತ್ಯಗೋಪಾಲ, ತಾರಕ, ಸುರೇಂದ್ರ, ಮಾಸ್ಟರ್, ಶಾರದಾಪ್ರಸನ್ನ, ಇನ್ನೂ ಕೆಲವು ಯುವಕಭಕ್ತರೂ ಬಂದಿದ್ದಾರೆ. ಇಂದು ಶಾರದಾಪ್ರಸನ್ನನ ಮೊದಲನೆಯ ಆಗಮನ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಬಂಕಿಮನೆಲ್ಲಿ? ಅವನನ್ನು ಕರೆದುಕೊಂಡು ಬರಲಿಲ್ಲವೇನು ನೀನು?"

ಬಂಕಿಮ ಒಬ್ಬ ವಿದ್ಯಾರ್ಥಿ. ಪರಮಹಂಸರು ಆತನನ್ನು ಬಾಗ್‌ಬಸಾರಿನಲ್ಲಿ ನೋಡಿದ್ದರು. ಆತನನ್ನು ದೂರದಿಂದಲೇ ನೋಡಿ ಆತ ಬಹಳ ಒಳ್ಳೆಯ ಹುಡುಗ ಎಂದು ಹೇಳಿದ್ದರು.

ಸ್ವಲ್ಪ ಹೊತ್ತಾದನಂತರ ಪರಮಹಂಸರು ಭಕ್ತರೊಡನೆ ಪಂಚವಟಿಗೆ ಹೋಗಿ ಕುಳಿತಿದ್ದಾರೆ. ಅವರ ಸುತ್ತಲೂ ಕೆಲವರು ಕುಳಿತಿದ್ದಾರೆ ಕೆಲವರು ನಿಂತಿದ್ದಾರೆ. ಪರಮಹಂಸರು ನೈರುತ್ಯಾಭಿಮುಖರಾಗಿ ಸಿಮೆಂಟು ಕಟ್ಟೆಯ ಮೇಲೆ ಕುಳಿತಿದ್ದಾರೆ. ಅವರು ನಗುತ್ತ ಮಾಸ್ಟರನ್ನು ಕೇಳಿದರು, "ಆ ಪುಸ್ತಕ ತಂದಿದ್ದೀಯೇನು?" ಎಂದು.

ಮಾಸ್ಟರ್: "ಹೌದು, ತಂದಿದ್ದೇನೆ."

ಶ್ರೀರಾಮಕೃಷ್ಣರು: "ನನಗೊಂದು ಸ್ವಲ್ಪ ಅದನ್ನು ಓದಿ ಹೇಳು."

ಆ ಪುಸ್ತಕ ಏನೆಂಬುದನ್ನು ಅರಿಯಲು ಭಕ್ತರು ಉತ್ಸುಕರಾಗಿದ್ದಾರೆ.

ಅದರ ಹೆಸರು "ದೇವೀಚೌದುರಾಣಿ" ಅಂತ. ಅದು ನಿಷ್ಕಾಮ ಕರ್ಮದ ವಿಷಯವಾಗಿ ಹೇಳುತ್ತದೆ ಎಂದು ಪರಮಹಂಸರು ಕೇಳಿದ್ದರು. ಅದರ ಲೇಖಕ ಸುಪ್ರಸಿದ್ಧ ಬಂಕಿಮಚಂದ್ರ ಅಂತಲೂ ಕೇಳಿದ್ದರು. ಅದರಲ್ಲಿ ಆತ ಏನು ಬರೆದಿದ್ದಾನೆ ಅಂಬುದನ್ನು ಕೇಳಿದರೆ ಪರಮಹಂಸರಿಗೆ ಗೊತ್ತಾಗಿಬಿಡುತ್ತದೆ ಬಂಕಿಮಚಂದ್ರನ ಮಾನಸಿಕ ಅವಸ್ಥೆ ಎಂಥದು ಎಂಬುದು.

ಮಾಸ್ಟರ್ ಹೇಳಿದ: "ಒಬ್ಬ ಯುವತಿ — ಕಥಾನಾಯಕಿ — ಒಬ್ಬ ಡಕಾಯಿತನ ಕೈಗೆ ಸಿಕ್ಕಿಬಿದ್ದಳು. ಯುವತಿಯ ಹೆಸರು 'ಪ್ರಫುಲ್ಲೆ' ಅಂತ. ಬಳಿಕ ಅವಳಿಗೆ 'ದೇವೀಚೌದುರಾಣಿ' ಎಂಬ ಹೆಸರು ಬಂದಿತು. ಡಕಾಯಿತನ ಹೆಸರು 'ಭವಾನೀಪಾಠಕ' ಅಂತ. ಡಕಾಯಿತ ಬಹಳ ಒಳ್ಳೆಯವ. ಆತ ಆಕೆಯ ಕೈಯಿಂದ ಅನೇಕ ಸಾಧನೆ ಭಜನೆಗಳನ್ನು ಮಾಡಿಸಿದ್ದ; ಯಾವರೀತಿಯಾಗಿ ನಿಷ್ಕಾಮಕರ್ಮ ಮಾಡಬೇಕೆಂಬುದನ್ನೂ ಆಕೆಗೆ ಹೇಳಿಕೊಟ್ಟಿದ್ದ. ಡಕಾಯಿತ ದುಷ್ಟರನ್ನು ಸುಲಿಗೆ ಮಾಡಿ ದೊರೆತ ಹಣದಿಂದ ಬಡಬಗ್ಗರಿಗೆ ಅನ್ನ ಹಾಕುತ್ತಿದ್ದ — ಅವರಿಗೆ ದಾನ ಮಾಡುತ್ತಿದ್ದ. ಪ್ರಫುಲ್ಲೆಗೆ ಹೇಳಿದ್ದ, ದುಷ್ಟರನ್ನು ದಂಡಿಸಿ ಶಿಷ್ಟರನ್ನು ಪಾಲಿಸುತ್ತಿದ್ದೇನೆ' ಅಂತ."

ಶ್ರೀರಾಮಕೃಷ್ಣರು: "ಹಾಗೆ ಮಾಡೋದು ರಾಜನ ಕರ್ತವ್ಯ."

ಮಾಸ್ಟರ್: "ಗ್ರಂಥಕರ್ತ ಬೇರೊಂದು ಜಾಗದಲ್ಲಿ ಭಕ್ತಿಯ ವಿಷಯವಾಗಿ ಬರೆದಿದ್ದಾನೆ. ಭವಾನೀಪಾಠಕ ಪ್ರಫುಲ್ಲೆಯೊಡನೆ ಇರಲು ಒಬ್ಬ ಹುಡುಗಿಯನ್ನು ಕಳುಹಿಸಿಕೊಟ್ಟಿದ್ದ. ಆಕೆಯ ಹೆಸರು 'ನಿಶಿ' ಅಂತ. ಆಕೆ ಒಳ್ಳೆ ಭಕ್ತಿಮತಿ. ಆಕೆ ಹೇಳುತ್ತಿದ್ದಳು, 'ಶ್ರೀಕೃಷ್ಣ ನನ್ನ ಪತಿ' ಅಂತ. ಪ್ರಫುಲ್ಲೆಗೆ ವಿವಾಹವಾಗಿತ್ತು; ಆಕೆಗೆ ತಂದೆ ಇರಲಿಲ್ಲ ತಾಯಿ ಇದ್ದಳು. ಆಕೆಯ ಊರಿನವರು ಬರಿದೆ ಒಂದು ಅಪನಿಂದೆಯನ್ನು ಅವರ ಮನೆಯ ಮೇಲೆ ಹೊರಿಸಿ ಅವರಿಗೆ ಬಹಿಷ್ಕಾರ ಹಾಕಿಬಿಟ್ಟಿದ್ದರು. ಈ ಕಾರಣದಿಂದ ಪ್ರಫುಲ್ಲೆಯ ಮಾವ ಆಕೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಲಿಲ್ಲ. ಆತ ತನ್ನ ಮಗನಿಗೆ ಇನ್ನೂ ಇಬ್ಬರು ಹುಡುಗಿಯರನ್ನು ತಂದು ಮದುವೆ ಮಾಡಿದ್ದ; ಆದರೂ ಪ್ರಫುಲ್ಲೆಗೆ ತನ್ನ ಪತಿಯ ಮೇಲೆ ಬಹಳ ಪ್ರೀತಿ ಇತ್ತು.

(ಶ್ರೀರಾಮಕೃಷ್ಣರಿಗೆ) "ಈ ಭಾಗವನ್ನು ಕೇಳಿದರೆ ಕಥೆ ಏನೆಂಬುದನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು."

ಮಾಸ್ಟರ್ ಓದುತ್ತಾನೆ:

ನಿಶಿ: "ನಾನು ಭವಾನೀಪಾಠಕನ ಮಗಳು, ಆತ ನನ್ನ ತಂದೆ. ಆತನೂ ಒಂದು ವಿಧದಲ್ಲಿ ನನಗೆ ವಿವಾಹಮಾಡಿದ್ದಾನೆ."

ಪ್ರಫುಲ್ಲೆ: "ಒಂದು ವಿಧದಲ್ಲಿ ಅಂದರೆ?"

ನಿಶಿ: "ಸರ್ವಸ್ವವನ್ನೂ ಶ್ರೀಕೃಷ್ಣನಿಗೆ."

ಪ್ರಫುಲ್ಲೆ: "ಹೇಗೆ ಅದು?"

ನಿಶಿ: "ರೂಪು, ಯೌವನ, ಪ್ರಾಣ."

ಪ್ರಫುಲ್ಲೆ: "ಆತನೇ ನಿನ್ನ ಪತಿಯೆ?"

ನಿಶಿ: "ಹೌದು—ಏಕೆಂದರೆ, ಯಾರು ನನ್ನನ್ನು ಸಂಪೂರ್ಣವಾಗಿ ವಶಪಡಿಸಿಕೊಂಡಿರುವನೋ ಆತನೇ ನನ್ನ ಪತಿ."

ಪ್ರಫುಲ್ಲೆ ನಿಟ್ಟುಸಿರುಬಿಟ್ಟು: "ನಿನಗೇನು ಹೇಳುವುದೊ ನನಗೆ ಗೊತ್ತಾಗುತ್ತಿಲ್ಲ. ಪತಿಯ ಅನುಭವ ನಿನಗಿಲ್ಲ, ಅದಕ್ಕಾಗಿ ನೀನು ಹಾಗೆ ಹೇಳುತ್ತಿರುವೆ. ನಿನಗೆ ನಿಜವಾಗಿ ಪತಿಯೊಬ್ಬನಿದ್ದಿದ್ದರೆ ಶ್ರೀಕೃಷ್ಣನ ಕಡೆ ಮನಸ್ಸು ಹೋಗುತ್ತಿರಲಿಲ್ಲ."

ಮೂರ್ಖ ವ್ರಜೇಶ್ವರನಿಗೆ (ಪ್ರಫುಲ್ಲೆಯ ಪತಿಗೆ) ಪ್ರಫುಲ್ಲೆಯ ಹೃದಯ ಎಂಥದು ಎಂಬುದು ಗೊತ್ತಿರಲಿಲ್ಲ.

ನಿಶಿ: "ಶ್ರೀಕೃಷ್ಣನನ್ನು ಕಂಡರೆ ಎಲ್ಲರೂ ಮೋಹಗೊಳ್ಳುವ ಸಂಭವ, ಏಕೆಂದರೆ ಆತನದು ಅನಂತ ರೂಪು, ಅನಂತ ಯೌವನ, ಅನಂತ ಐಶ್ವರ್ಯ."

ಈ ಯುವತಿ (ನಿಶಿ) ಭವಾನೀಪಾಠಕನ ಕೈಯಲ್ಲಿ ಶಿಕ್ಷಣವನ್ನು ಹೊಂದಿದವಳು. ಆದರೆ ಪ್ರಫುಲ್ಲೆ ನಿರಕ್ಷರಕುಕ್ಷಿ—ಈಕೆ ಕೈಯಿಂದ ಆಕೆಗೆ ಉತ್ತರ ಕೊಡಲಾಗಲಿಲ್ಲ. ಹಿಂದೂ ಧರ್ಮದ ಸ್ಮೃತಿಕಾರರಿಗೆ ಉತ್ತರ ಗೊತ್ತಿತ್ತು. ಭಗವಂತ ಅನಂತ ಎಂಬುದೇನೊ ಗೊತ್ತು; ಆದರೆ ಆ ಅನಂತನನ್ನು ಈ ಕ್ಷುದ್ರ ಹೃದಯ ಪಂಜರದೊಳಗೆ ಕೂಡಿಡಲಾಗೋದಿಲ್ಲ. ಸಾಂತನೊಡನೆ ಮಾತ್ರ ಹಾಗೆ ವ್ಯವಹರಿಸಬಹುದು. ಅದಕ್ಕಾಗಿಯೆ ಹಿಂದೂ, ಆ ಅನಂತ ಜಗದೀಶ್ವರನನ್ನು ತನ್ನ ಹೃದಯ ಪಂಜರದಲ್ಲಿ ಸಾಂತ ಶ್ರೀಕೃಷ್ಣನ ರೂಪದಿಂದ ಪೂಜಿಸುತ್ತಾನೆ. ಪತಿ ಇನ್ನೂ ನಿರ್ದಿಷ್ಟವಾದ ಆ ಅನಂತನ ಸಾಂತರೂಪು. ಅದಕ್ಕಾಗಿಯೇ ಹೆಂಗಸಿನ ಪ್ರೇಮ ಪವಿತ್ರವಾದುದೇ ಆಗಿದ್ದರೆ ಭಗವಂತನ ಕಡೆಗೆ ಹೋಗಲು ಪತಿಯೇ ಪ್ರಥಮ

ಸೋಪಾನವಾಗುತ್ತಾನೆ. ಅದಕ್ಕಾಗಿಯೇ ಹಿಂದೂ ಹೆಂಗಸಿಗೆ ಪತಿಯೇ ದೇವರು. ಉಳಿದ ಎಲ್ಲಾ ಸಮಾಜಗಳು ಹಿಂದೂಸಮಾಜದೆದುರು ಈ ವಿಷಯವಾಗಿ ನಿಕೃಷ್ಟದೆಸೆಯಲ್ಲಿವೆ.

ಪ್ರಫುಲ್ಲೆ ಏನೂ ಅರಿಯದವಳು; ಅವಳಿಗೊಂದೂ ಅರ್ಥವಾಗಲಿಲ್ಲ. ಹೇಳಿದಳು, "ಗೆಳತಿ, ನನಗೆ ಅದೆಲ್ಲಾ ಅರ್ಥವಾಗುತ್ತಿಲ್ಲ. ನಿನ್ನ ಹೆಸರೇನು ಎಂಬುದನ್ನು ನೀನು ಇದುವರೆಗೆ ಹೇಳಲೇಯಿಲ್ಲವಲ್ಲ?" ಅಂತ.

ನಿಶಿ: "ಭವಾನೀಪಾಠಕ ನನಗೆ 'ನಿಶಿ' ಅಂತ ಹೆಸರು ಇಟ್ಟಿದ್ದಾನೆ. ನಾನು ದಿವೆಯ ತಂಗಿ. ಒಂದು ದಿವಸ ಮಾತುಕತೆಯಾಡಲು ದಿವೆಯನ್ನು ಇಲ್ಲಿಗೆ ಕರೆದುಕೊಂಡು ಬರುತ್ತೇನೆ. ಆದರೆ ಏನು ಹೇಳುತ್ತಿದ್ದೆನೊ ಅದನ್ನು ಮುಂದು ವರಿಸುತ್ತೇನೆ ಕೇಳು. ಭಗವಂತನೇ ಪರಮಪತಿ. ಹೆಂಗಸಿಗೆ ಪತಿಯೇ ದೇವರು. ಶ್ರೀಕೃಷ್ಣನೇ ಎಲ್ಲರ ದೇವರು. ಎರಡು ದೇವರುಗಳನ್ನೇಕೆ ಹೃದಯದಲ್ಲಿ ಇಟ್ಟುಕೋಬೇಕು? ಇಬ್ಬರು ಭಗವಂತರಲ್ಲಿ ಏಕೆ ಮನಸ್ಸನ್ನಿಡಬೇಕು? ಈ ಕ್ಷುದ್ರಹೃದಯದ ಅಲ್ಪ ಭಕ್ತಿಯನ್ನು ಇಬ್ಭಾಗಮಾಡಿಬಿಟ್ಟರೆ ಅದು ಬಹಳ ಅಲ್ಪವಾಗಿ ಹೋಗಿಬಿಡುತ್ತದೆ!"

ಪ್ರಫುಲ್ಲೆ: "ಏ, ಹೋಗು! ಹೆಂಗಸಿನ ಭಕ್ತಿಗೆ ಮಿತಿ ಎಂಬುದು ಉಂಟೆ?"

ನಿಶಿ: "ಹೆಂಗಸಿನ ಪ್ರೀತಿಗೆ ಕೊನೆ ಎಂಬುದೇನೂ ಇಲ್ಲ. ಆದರೆ ಭಕ್ತಿ ಎಂಬುದು ಒಂದು, ಪ್ರೀತಿ ಎಂಬುದು ಇನ್ನೊಂದು."

ಮಾಸ್ಟರ್ ಈಗ ಪ್ರಫುಲ್ಲೆಯ ಕೈಯಲ್ಲಿ ಭವಾನೀಪಾಠಕ ಮಾಡಿಸಿದ ಸಾಧನೆಯ ಭಾಗವನ್ನು ಓದಲು ಪ್ರಾರಂಭಿಸಿದ:

ಮೊದಲನೆಯ ವರ್ಷ ಭವಾನೀಪಾಠಕ ಪ್ರಫುಲ್ಲೆಯ ಮನೆಗೆ ಯಾವ ಪುರುಷನೂ ಹೋಗದಹಾಗೆ ನೋಡಿಕೊಂಡಿದುದೇ ಅಲ್ಲದೆ, ಆಕೆ ಹೊರಗೆ ಬಂದು ಬೇರೆ ಯಾವ ಪುರುಷನೊಡನೆಯೂ ಮಾತುಕತೆಯಾಡದ ಹಾಗೆ ವ್ಯವಸ್ಥೆ ಮಾಡಿದ. ಎರಡನೆಯ ವರ್ಷ ಆಕೆ ಬೇರೆ ಪುರುಷನೊಡನೆ ಮಾತುಕತೆಯಾಡಕೂಡದು ಎಂಬ ನಿರ್ಬಂಧನೆಯನ್ನು ತೆಗೆದುಹಾಕಿದ; ಆದರೆ ಯಾವ ಪುರುಷನನ್ನೂ ಆಕೆಯ ಮನೆಗೆ ಹೋಗಲು ಬಿಟ್ಟುಕೊಡುತ್ತಿರಲಿಲ್ಲ. ಮೂರನೆಯ ವರ್ಷ ಪ್ರಫುಲ್ಲೆ ಮುಂಡನ ಮಾಡಿಸಿಕೊಂಡನಂತರ ಭವಾನೀಪಾಠಕ ತನ್ನ ಎಳೇ ಎಳೇ ವಯಸ್ಸಿನ ಶಿಷ್ಯರನ್ನು ಜೊತೆಯಲ್ಲಿ ಕರೆದುಕೊಂಡು ಆಕೆಯ ಮನೆಗೆ ಹೋಗುತ್ತಿದ್ದ — ಆಗ ಪ್ರಫುಲ್ಲೆ

ತನ್ನ ದೃಷ್ಟಿಯನ್ನು ನೆಲದ ಕಡೆ ತಿರುಗಿಸಿ ಅವರೊಡನೆ ಶಾಸ್ತ್ರಗಳ ಸಂಬಂಧವಾಗಿ ಮಾತುಕತೆಗಳನ್ನಾಡುತ್ತಿದ್ದಳು.

ಬಳಿಕ ಮಾಸ್ಟರ್ ಓದಿದ, ಪ್ರಫುಲ್ಲೆ ಶಾಸ್ತ್ರಗಳನ್ನು ಓದಲು ಆರಂಭಿಸಿದಳು; ವ್ಯಾಕರಣ ಓದಿ ಮುಗಿಸಿದಳು; ರಘುವಂಶ, ಕುಮಾರಸಂಭವ ಶಾಕುಂತಲ, ನೈಷಧವನ್ನು ಓದಿದಳು; ಕಿಂಚಿತ್ ಸಾಂಖ್ಯ, ವೇದಾಂತ, ನ್ಯಾಯ ಇವನ್ನೂ ಓದಿದಳು ಅಂತ.

ಶ್ರೀರಾಮಕೃಷ್ಣರು: "ಇದರ ಇಂಗಿತವೇನು ಗೊತ್ತೆ? ಓದದೆ ಬರೆಯದೆ ಜ್ಞಾನ ದೊರಕದು ಅಂತ. ಇದರ ಗ್ರಂಥಕರ್ತನ ಮತ್ತು ಇವನಂಥವರ ಅಭಿಪ್ರಾಯವೇ ಇದು. ಇವರ ಭಾವನೆ, ಮೊದಲು ಓದು ಬರಹ ಬಳಿಕ ಭಗವಂತ; ಭಗವಂತನನ್ನು ಅರಿಯಲು ಓದುಬರಹ ಬೇಕು ಅಂತ! ಆದರೆ ಯದುಮಲ್ಲಿಕನೊಡನೆ ಮಾತುಕತೆಯಾಡಬೇಕಾದರೆ ಮೊದಲು ಆತನಿಗೆಷ್ಟು ಮನೆಗಳಿವೆ, ಎಷ್ಟು ಐಶ್ವರ್ಯವಿದೆ, ಎಷ್ಟು ಲೇವಾದೇವಿ ಪತ್ರಗಳಿವೆ ಇವನ್ನೆಲ್ಲ ಅರಿತುಕೊಳ್ಳುವುದರ ಆವಶ್ಯಕತೆ ಯೇನಿದೆ? ಹೇಗೋಮಾಡಿ—ಹೊಗಳಿಯೊ, ಜವಾನರಿಂದ ತಳ್ಳಿಸಿಕೊಂಡೊ ಮನೆಗೆ ಪ್ರವೇಶಮಾಡಿ ಯದುಮಲ್ಲಿಕನೊಡನೆ ಸ್ನೇಹ ಬೆಳಸಿಕೋಬೇಕು. ಒಂದುಪಕ್ಷ ಆತನ ಧನಕನಕಾದಿಗಳ ಮನೆಮಠಾದಿಗಳ ವಿಷಯ ತಿಳಿದು ಕೋಬೇಕು ಎಂಬ ಇಚ್ಛೆ ಬಂದರೆ, ಆಗ ಯದುಮಲ್ಲಿಕನನ್ನು ಕೇಳಿ ಬಿಟ್ಟರೆಯೇ ಎಲ್ಲಾ ದೊರೆತುಬಿಡುತ್ತದೆ—ಬಹಳ ಸಹಜವಾಗಿ ದೊರೆತು ಬಿಡುತ್ತದೆ. ಮೊದಲು ರಾಮ ಬಳಿಕ ಆತನ ಐಶ್ವರ್ಯ,—ಜಗತ್ತು. ಅದಕ್ಕಾಗೇ ವಾಲ್ಮೀಕಿ 'ಮರಾ' ಎಂಬ ಮಂತ್ರವನ್ನು ಜಪಿಸಿದ್ದು. ಮೊದಲು 'ಮ' ಅಂದರೆ ಭಗವಂತ ಬಳಿಕ 'ರಾ' ಅಂದರೆ ಜಗತ್ತು— ಆತನ ಐಶ್ವರ್ಯ."

ಭಕ್ತರೆಲ್ಲರು ಪರಮಹಂಸರ ಈ ಮಾತುಕತೆಗಳನ್ನು ಸ್ತಂಭೀಭೂತರಾಗಿ ಕೇಳಿದರು.

ಮಾಸ್ಟರ್ ಮುಂದಕ್ಕೆ ಓದಿದ:

ಪ್ರಫುಲ್ಲೆ ಶಾಸ್ತ್ರಾಧ್ಯಯನವನ್ನು ಮುಗಿಸಿ ಬಹಳಕಾಲ ಸಾಧನೆಯಲ್ಲಿ ತೊಡಗಿದ್ದಳು. ಆಕೆ ತನ್ನ ಸಾಧನೆಯನ್ನು ಮುಗಿಸಿದನಂತರ ಒಂದುದಿನ ಭವಾನೀಪಾಠಕ ಪ್ರಫುಲ್ಲೆಯನ್ನು ನೋಡಲು ಬಂದ; ಈಸಲ ನಿಷ್ಕಾಮಕರ್ಮದ ಸಂಬಂಧವಾಗಿ ಉಪದೇಶಕೊಡಲಿಚ್ಛಿಸಿದ್ದಾನೆ. ಗೀತೆಯಿಂದ ಒಂದು ಶ್ಲೋಕವನ್ನು ಎತ್ತಿ

ಹೇಳಿದ: "ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮಸಮಾಚರ। ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ॥"* (ಭ. ಗೀ. iii. ೧೯.)

ಆಕೆಗೆ ಅನಾಸಕ್ತಿ ಯೋಗದ ಮೂರು ಲಕ್ಷಣಗಳನ್ನು ತಿಳಿಸಿದ: ಮೊದಲನೆಯದು ಇಂದ್ರಿಯ ಸಂಯಮ; ಎರಡನೆಯದು ನಿರಹಂಕಾರ; ಮೂರನೆಯದು ಶ್ರೀಕೃಷ್ಣನಿಗೆ ಫಲಸಮರ್ಪಣೆ. ಮತ್ತೆ ತಿಳಿಸಿದ, ನಿರಹಂಕಾರಿಯಾಗದ ಹೊರತು ಧರ್ಮಾಚರಣೆ ಸಾಧ್ಯವಿಲ್ಲ ಅಂತ. ಗೀತೆಯಿಂದ ಈ ಶ್ಲೋಕವನ್ನು ಎತ್ತಿ ಹೇಳಿದ: "ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ। ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ॥"† (ಭ. ಗೀ. iii. ೨೭.)

ಬಳಿಕ ಭವಾನೀಪಾಠಕ ಪ್ರಫುಲ್ಲೆಗೆ ಸರ್ವ ಕರ್ಮಗಳ ಫಲವನ್ನು ಶ್ರೀಕೃಷ್ಣನಿಗೆ ಹೇಗೆ ಅರ್ಪಿಸಬೇಕು ಎಂಬುದರ ವಿಷಯವಾಗಿ ತಿಳಿಸಿದ. ಅದಕ್ಕಾಗಿ ಗೀತೆಯಿಂದ ಈ ಶ್ಲೋಕವನ್ನು ಎತ್ತಿ ಹೇಳಿದ: "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್। ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್॥" x (ಭ. ಗೀ. ix. ೨೭.)

ಶ್ರೀರಾಮಕೃಷ್ಣರು: "ಇದು ಬಹಳ ಚೆನ್ನಾಗಿದೆ. ಇವೆಲ್ಲ ಗೀತೋಕ್ತಿಗಳು; ಅಲ್ಲಗಳೆಯೋಹಾಗಿಲ್ಲ. ಆದರೆ ಒಂದು ವಿಷಯ. ಗ್ರಂಥಕರ್ತ ಶ್ರೀಕೃಷ್ಣನಿಗೆ ಫಲಸಮರ್ಪಣೆಮಾಡೋವಿಷಯವನ್ನೇನೊ ಹೇಳಿದ್ದಾನೆ, ಆದರೆ ಆತನಿಗಾಗಿ ಭಕ್ತಿ ಬೆಳಸಿಕೋಬೇಕು ಎಂಬ ವಿಷಯವನ್ನು ಹೇಳಿಲ್ಲ."

ಮಾಸ್ಟರ್: "ಹೌದು, ಅದನ್ನು ಒಂದು ನಿರ್ದಿಷ್ಟರೂಪದಿಂದ ಹೇಳಿಲ್ಲ.

"ಬಳಿಕ ಭವಾನೀಪಾಠಕ ಮತ್ತು ಪ್ರಫುಲ್ಲೆ ಹಣದ ವ್ಯವಹಾರದ ಸಂಬಂಧವಾಗಿ ಮಾತುಕತೆಯಾಡಿದರು. ಪ್ರಫುಲ್ಲೆ ಹೇಳಿದಳು, 'ನನ್ನ ಸಮಸ್ತ ಐಶ್ವರ್ಯವನ್ನೂ ಶ್ರೀಕೃಷ್ಣನಿಗೆ ಅರ್ಪಿಸಿಬಿಟ್ಟಿದ್ದೇನೆ' ಅಂತ."

ಮಾಸ್ಟರ್ ಮತ್ತೆ ಪುಸ್ತಕದಿಂದ ಓದಿದ:

ಪ್ರಫುಲ್ಲೆ: "ಯಾವಾಗ ನಾನು ನನ್ನ ಸಕಲ ಕರ್ಮಗಳ ಫಲವನ್ನು ಶ್ರೀಕೃಷ್ಣನಿಗೆ ಅರ್ಪಿಸಿಬಿಟ್ಟೆನೊ, ಆಗಲೇ ನನ್ನ ಧನವನ್ನೆಲ್ಲಾ ಶ್ರೀಕೃಷ್ಣನಿಗೆ ಅರ್ಪಿಸಿಬಿಟ್ಟೆ."

ಭವಾನಿ: "ಎಲ್ಲವನ್ನೂ?"

ಪ್ರಫುಲ್ಲೆ: "ಹೌದು, ಎಲ್ಲವನ್ನು."

---

**ಪರಿಶಿಷ್ಟ ೩ರರಲ್ಲಿ (* ೩ನ್ನು ನೋಡಿ. † ೪ನ್ನು ನೋಡಿ. x ೫ನ್ನು ನೋಡಿ.)**

ಭವಾನಿ: "ನೀನು ಹಾಗೆ ಮಾಡಿಬಿಟ್ಟಿದ್ದರೆ ಕರ್ಮವನ್ನು ನೀನು ಅನಾಸಕ್ತಿಯಿಂದ ಮಾಡಲಾಗೋದಿಲ್ಲ. ನಿನ್ನ ಉದರಪೋಷಣೆಗಾಗಿ ನೀನು ಕೆಲಸ ಮಾಡಬೇಕಾಗಿ ಬಂದರೆ, ಆಗ ಆ ಕೆಲಸದ ಮೇಲೆ ಆಸಕ್ತಿ ಬಂದುಬಿಡುತ್ತದೆ. ಆದ್ದರಿಂದ ನಿನಗೆ ಎರಡು ಮಾರ್ಗಗಳಿವೆ: ನೀನು ನಿನ್ನ ಆಹಾರವನ್ನು ಭಿಕ್ಷಾವೃತ್ತಿಯಿಂದ ಸಂಪಾದಿಸಿಕೊಳ್ಳಬೇಕಾಗುತ್ತದೆ, ಇಲ್ಲದಿದ್ದರೆ ನಿನ್ನ ಹಣದಿಂದ ಸಂಪಾದಿಸಿಕೊಳ್ಳಬೇಕಾಗುತ್ತದೆ. ಭಿಕ್ಷಾವೃತ್ತಿಯಲ್ಲಿಯೂ ಆಸಕ್ತಿ ಉಂಟಾಗುವ ಸಂಭವ; ಆದ್ದರಿಂದ ನೀನು ನಿನ್ನ ಹಣದಿಂದಲೇ ಜೀವಿಸಿರಬೇಕು."

ಮಾಸ್ಟರ್ ನಗುತ್ತ ಶ್ರೀರಾಮಕೃಷ್ಣರಿಗೆ: "ಇದೊಂದಿಷ್ಟು ಮಾತ್ರ ಲೆಕ್ಕಾಚಾರದ ಬುದ್ಧಿ."

ಶ್ರೀರಾಮಕೃಷ್ಣರು: "ಹೌದು, ಇದು ಲೆಕ್ಕಾಚಾರದ ಬುದ್ಧಿ; ಪ್ರಾಪಂಚಿಕನ ಬುದ್ಧಿ. ಯಾರಿಗೆ ಭಗವಂತ ಬೇಕಾಗಿದಾನೊ ಆತ, ಒಮ್ಮೆಗೆಯೆ ಧುಮುಕಿ ಸಾಧನೆಯಲ್ಲಿ ಮುಳುಗೇ ಬಿಡುತ್ತಾನೆ; ಜೀವನಕ್ಕೆ ಇದೊಂದಿಷ್ಟು ಇರಲಿ ಎಂಬ ಭಾವನೆಯೇ ಆತನ ತಲೆಯನ್ನು ಹೊಗದು."

ಮಾಸ್ಟರ್: "ಬಳಿಕ ಭವಾನೀಪಾಠಕ ಪ್ರಫುಲ್ಲೆಯನ್ನು ಕೇಳಿದ, 'ನೀನು ನಿನ್ನ ಹಣವನ್ನೆಲ್ಲ ಯಾವರೀತಿಯಾಗಿ ಅರ್ಪಿಸಲು ಹೋಗುವೆ?' ಎಂದು. ಪ್ರಫುಲ್ಲೆ ಹೇಳಿದಳು, 'ಶ್ರೀಕೃಷ್ಣ ಸರ್ವ ಭೂತಗಳಲ್ಲಿಯೂ ಇದಾನೆ. ಆದ್ದರಿಂದ ಸರ್ವ ಭೂತಗಳಿಗೂ ಧನವನ್ನು ಹಂಚಿಬಿಡುತ್ತೇನೆ' ಅಂತ. ಭವಾನಿ ಹೇಳಿದ, 'ಒಳ್ಳೆಯದು! ಬಹಳ ಒಳ್ಳೆಯದು!' ಅಂತ. ಮತ್ತೆ ಆತ ಗೀತೆಯಿಂದ ಶ್ಲೋಕಗಳನ್ನು ಎತ್ತಿ ಹೇಳಿದ: "ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ। ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ॥ ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ। ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೆ॥ ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ। ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ॥ * (ಭ. ಗೀ. vi. ೩೦, ೩೧, ೩೨.)

ಶ್ರೀರಾಮಕೃಷ್ಣರು: "ಇವೆಲ್ಲ ಉತ್ತಮ ಭಕ್ತನ ಲಕ್ಷಣ."

---

* ಪರಿಶಿಷ್ಟ ೩ ರರಲ್ಲಿ ೬ ನ್ನು ನೋಡಿ.

ಮಣಿ ಮತ್ತೆ ಓದಲಾರಂಭಿಸಿದ :

ಸರ್ವಭೂತಗಳಿಗೂ ದಾನಮಾಡಬೇಕಾದರೆ ಬಹಳವಾಗಿ ಶ್ರಮಪಡ ಬೇಕಾಗುವ ಆವಶ್ಯಕತೆ ಇದೆ. ಆದ್ದರಿಂದ ಸ್ವಲ್ಪ ಉಡಿಗೆ-ತೊಡಿಗೆಗಳ, ಸ್ವಲ್ಪ ಭೋಗವಿಲಾಸಗಳ ಆವಶ್ಯಕತೆ ಇದೆ. ಅದಕ್ಕಾಗಿಯೇ ಭವಾನಿ ಹೇಳಿದ, 'ಒಮ್ಮೊಮ್ಮೆ ಸ್ವಲ್ಪ ವ್ಯಾಪಾರಬುದ್ಧಿ ಬೇಕು' ಅಂತ.

ಶ್ರೀರಾಮಕೃಷ್ಣರು ಸಿಟ್ಟುಗೊಂಡು : "'ವ್ಯಾಪಾರ ಬುದ್ಧಿ ಬೇಕೆ?' ಮನಸ್ಸಿನ ಆಲೋಚನೆಯಂತೆ ಮಾತುಕತೆ ಹೊರಹೊರಡುತ್ತವೆ. ಹಗಲು ಇರುಳು ವಿಷಯಚಿಂತನೆ, ಇತರರೊಡನೆ ಕಪಟಾಚರಣೆ ಇಂಥವುಗಳನ್ನೆಲ್ಲ ಜನರು ಮಾಡಿ ಮಾಡಿ ಅವರ ಬಾಯಿಂದ ಹೊರಡುವ ಮಾತುಕತೆಗಳೆಲ್ಲ ಅಂಥವೇ ಆಗಿರುತ್ತವೆ. ಮೂಲಂಗಿ ತಿಂದರೆ ಮೂಲಂಗಿ ವಾಸನೆಯ ತೇಗು ಬರುತ್ತದೆ. 'ವ್ಯಾಪಾರಬುದ್ಧಿ ಬೇಕು' ಅಂತ ಹೇಳದೆ, ತಾನು ಅಕರ್ತನೆಂದು ಭಾವಿಸಿ ಕರ್ತನೋಪಾದಿಯಲ್ಲಿ ಕೆಲಸಮಾಡಬೇಕು ಅಂತ ಹೇಳಿದ್ದರೆ ಬಹಳ ಚೆನ್ನಾಗಿರುತ್ತಿತ್ತು. ಅಂದು ಒಬ್ಬ ಇಲ್ಲಿ ಹಾಡುತ್ತಿದ್ದ. ಆ ಹಾಡಿನಲ್ಲಿ 'ಲಾಭ', 'ನಷ್ಟ' ಎಂಬ ಈ ತರದ ಪದಗಳೇ ಬಹಳವಾಗಿ ಇದ್ದುವು. ನಾನು ಆತನಿಗೆ ಅದನ್ನು ಹಾಡಬೇಡವೆಂದು ಹೇಳಿದೆ. ಹಗಲು ಇರುಳು ಯಾವುದರ ಚಿಂತನೆಯೊ ಅದರ ತೇಗೇ ಹೊರಕ್ಕೆ ಬರುತ್ತದೆ."

ಓದುವುದು ಮುಂದುವರಿಯಿತು. ಗ್ರಂಥಕರ್ತ ಭಗವಂತನ ಸಾಕ್ಷಾತ್ಕಾರದ ವಿಷಯವಾಗಿ ಬರೆದಿದ್ದಾನೆ. ಪ್ರಫುಲ್ಲೆ ದೇವೀಚೌದುರಾಣಿ ಆಗಿಬಿಟ್ಟಿದ್ದಾಳೆ. ಅಂದು ವೈಶಾಖ ಶುಕ್ಲ ಸಪ್ತಮಿ. ಆಕೆ ಮನೆ-ದೋಣಿಯ ಚಾವಣಿಯ ಮೇಲೆ ಕುಳಿತು ದಿವೆಯೊಡನೆ ಮಾತುಕತೆಯಾಡುತ್ತಿದ್ದಾಳೆ. ಚಂದ್ರ ಉದಯಿಸಿದ್ದಾನೆ. ದೋಣಿ ಲಂಗರುಹಾಕಿ ಗಂಗೆಯಲ್ಲಿ ನಿಂತಿದೆ. ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವುದೆಂತು ಎಂಬುದರ ವಿಷಯ ವಾಗಿ ಮಾತುಕತೆ ನಡೆಯುತ್ತಿದೆ. ದೇವಿ ಹೇಳಿದಳು, "ಯಾವ ರೀತಿ ಯಾಗಿ ಹೂವಿನ ಗಂಧ ಮೂಗಿಗೆ ಪ್ರತ್ಯಕ್ಷವಾಗುತ್ತದೆಯೊ, ಅದೇ ರೀತಿ ಯಾಗಿ ಭಗವಂತ ಮನಸ್ಸಿಗೆ ಪ್ರತ್ಯಕ್ಷನಾಗುತ್ತಾನೆ" ಅಂತ.

ಹೀಗೆಂದು ಓದಿದೊಡನೆಯೆ ಪರಮಹಂಸರು ಮಧ್ಯೆ ಬಾಯಿ ಹಾಕಿ, "ಮನಸ್ಸಿಗೆ ಪ್ರತ್ಯಕ್ಷವಾಗುವಿಕೆ. ಅದು ಈ ಮನಸ್ಸಿಗೆ ಅಲ್ಲ; ಶುದ್ಧ ಮನಸ್ಸಿಗೆ. ಆಗ ಈ ಮನಸ್ಸು ಇರದು. ವಿಷಯಾಸಕ್ತಿ ಒಂದು ಕಿಂಚಿತ್ತು

ಇದ್ದರೂ ಅದು ಶುದ್ಧ ಮನಸ್ಸಾಗದು. ಯಾವಾಗ ಮನಸ್ಸು ಪರಿಶುದ್ಧ ವಾಗುತ್ತದೆಯೊ, ಆಗ ಅದನ್ನೇ ಶುದ್ಧ ಮನಸ್ಸು ಅಂತಲೂ ಹೇಳಬಹುದು, ಶುದ್ಧ ಆತ್ಮ ಅಂತಲೂ ಹೇಳಬಹುದು."

ಮಾಸ್ಟರ್: "ಮನಸ್ಸಿನ ಮೂಲಕ ಆತನನ್ನು ಸುಲಭವಾಗಿ ಪ್ರತ್ಯಕ್ಷಮಾಡಿಕೊಳ್ಳಲಾಗೋದಿಲ್ಲ ಎಂಬ ವಿಷಯ ಮುಂದೆ ಬರುತ್ತದೆ. ಹೇಳಿದ್ದಾನೆ, 'ಪ್ರತ್ಯಕ್ಷಮಾಡಿಕೊಳ್ಳಲು ದುರ್ಬೀನು ಬೇಕು. ಯೋಗವೇ ಆ ದುರ್ಬೀನು. ಯೋಗ, ಗೀತೆಯಲ್ಲಿ ಹೇಳಿರುವಂತೆ ಮೂರು ವಿಧವಾದ್ದು: ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ. ಈ ಯೋಗವೆಂಬ ದುರ್ಬೀನಿನಿಂದ ಭಗವಂತನನ್ನು ನೋಡಬಹುದು' ಅಂತ."

ಶ್ರೀರಾಮಕೃಷ್ಣರು: "ಇದು ಬಹಳ ಒಳ್ಳೆಯ ವಿಷಯ. ಇವು ಗೀತೋಕ್ತಿಗಳು."

ಮಾಸ್ಟರ್: "ಕಡೆಗೆ ದೇವೀಚೌದುರಾಣಿ ತನ್ನ ಪತಿಯನ್ನು ಸಂಧಿಸುತ್ತಾಳೆ. ಆಕೆಗೆ ಆತನಲ್ಲಿ ವಿಶೇಷವಾದ ಭಕ್ತಿ. ಪತಿಗೆ ಹೇಳಿದಳು, 'ನೀವೇ ನನ್ನ ದೇವರು. ಬೇರೆ ದೇವರುಗಳನ್ನು ಪೂಜೆಮಾಡಲು ಕಲಿಯಲೆತ್ನಿಸಿದೆ,—ಆದರೆ ಸಾಧ್ಯವಾಗಲಿಲ್ಲ. ನೀವೇ ಎಲ್ಲಾ ದೇವತೆಗಳ ಸ್ಥಾನವನ್ನು ಅಲಂಕರಿಸಿಬಿಟ್ಟಿದೀರಿ' ಅಂತ."

ಶ್ರೀರಾಮಕೃಷ್ಣರು ನಗುತ್ತ: "'ಸಾಧ್ಯವಾಗಲಿಲ್ಲ.' ಇದು ಪತಿವ್ರತೆಯ ಧರ್ಮ. ಇದೂ ಒಂದು ಮಾರ್ಗವೆ."

ಓದುವುದು ಮುಗಿಯಿತು. ಪರಮಹಂಸರು ನಗುತ್ತಿದ್ದಾರೆ. ಪರಮಹಂಸರು ಮತ್ತೆ ಏನು ಹೇಳುತ್ತಾರೆ ಎಂಬುದನ್ನು ಕೇಳಲು ಭಕ್ತರು ಕಿವಿ ನೆಟ್ಟಗೆಮಾಡಿಕೊಂಡು ಕುಳಿತಿದ್ದಾರೆ.

ಶ್ರೀರಾಮಕೃಷ್ಣರು ನಗುತ್ತ ಕೇದಾರ ಮೊದಲಾದವರಿಗೆ: "ಇದು ಅಷ್ಟೇನು ಕೆಟ್ಟದ್ದಲ್ಲ; ಇದು ಪತಿವ್ರತೆಯ ಧರ್ಮ. ಪ್ರತಿಮೆಯ ಮೂಲಕ ಭಗವಂತನನ್ನು ಪೂಜಿಸಬಹುದಂತೆ, ಜೀವಂತ ಮನುಷ್ಯನ ಮೂಲಕ ಪೂಜಿಸಲಾಗೋದಿಲ್ಲವೇನು? ಆತನೇ ಮಾನವ ರೂಪಿನಲ್ಲಿ ಕ್ರೀಡಿಸುತ್ತಿದ್ದಾನೆ.

"ಓ, ನನಗೇನವಸ್ಥೆ ಬಂದು ಹೋಯಿತು! ಹರಗೌರೀಭಾವದಲ್ಲಿ ಎಷ್ಟೊಂದು ಕಾಲ ಕಳೆದೆ! ರಾಧಾಕೃಷ್ಣನ ಭಾವದಲ್ಲಿ ಎಷ್ಟೊಂದು ಕಾಲ ಕಳೆದೆ! ಎಷ್ಟೊಂದು ಕಾಲ ಸೀತಾರಾಮರ ಭಾವದಲ್ಲಿ ಕಳೆದೆ! ರಾಧೆಯ

ಭಾವ ಆರೋಪಿಸಿಕೊಂಡು 'ಕೃಷ್ಣ! ಕೃಷ್ಣ!' ಅಂತ ಅಳುತ್ತಿದ್ದೆ. ಸೀತೆಯ ಭಾವ ಆರೋಪಿಸಿಕೊಂಡು 'ರಾಮ! ರಾಮ!' ಅಂತ ಅಳುತ್ತಿದ್ದೆ.

"ಆತನ ಲೀಲೆಗೆ ಕೊನೆ ಎಂಬುದೇ ಇಲ್ಲ. ಈ ಭಾವಗಳನ್ನೆಲ್ಲ ಅನುಭವಿಸಿದನಂತರ ಭಗವಂತನಿಗೆ ಪ್ರಾರ್ಥನೆಮಾಡಿದೆ, 'ತಾಯೆ, ಇವುಗಳಲ್ಲೆಲ್ಲ ವಿಚ್ಛೇದನ ಇದೆ. ಯಾವುದರಲ್ಲಿ ವಿಚ್ಛೇದನ ಎಂಬುದು ಇಲ್ಲವೊ ಅಂಥ ಅವಸ್ಥೆಯನ್ನು ದಯಪಾಲಿಸು' ಅಂತ. ಅದಕ್ಕಾಗೇ ಕೆಲವುಕಾಲ ಅಖಂಡಸಚ್ಚಿದಾನಂದನ ಭಾವದಲ್ಲಿ ಇದ್ದೆ. ದೇವದೇವಿಯರ ಪಟಗಳನ್ನೆಲ್ಲ ರೂಮಿನಿಂದ ತೆಗೆದುಹಾಕಿಬಿಟ್ಟಿದ್ದೆ. ಆತನನ್ನು ಸರ್ವ ಭೂತಗಳಲ್ಲಿಯೂ ದರ್ಶನಮಾಡುತ್ತಿದ್ದೆ. ಪೂಜೆಪಾಠಗಳೆಲ್ಲ ಒಂದು ಮೂಲೆಗೆ ಹೋಗಿ ಕುಳಿತಿದ್ದುವು. ಅಗೋ ಅಲ್ಲಿ ಬಿಲ್ವಮರ, ಅದರಿಂದ ಬಿಲ್ವಪತ್ರೆ ಕಿತ್ತುಕೊಂಡುಬರಲು ಹೋಗುತ್ತಿದ್ದೆ. ಒಂದು ದಿನ ಅದರ ಎಲೆ ಕೀಳಲು ಹೋಗಿ ಅದರ ತೊಗಟೆ ಒಂದು ಕಿಂಚಿತ್ ಕಿತ್ತುಬಂದುಬಿಟ್ಟಿತು. ಆಗ ಕಂಡುಬಂದಿತು ಮರ ಚೈತನ್ಯಮಯವಾಗಿರುವಂತೆ. ಅದಕ್ಕೆ ನೋವು ಉಂಟುಮಾಡಿದುದಕ್ಕಾಗಿ ಸ್ವಲ್ಪ ವ್ಯಥೆ ಆಯಿತು. ಒಂದು ದಿನ ದರ್ಭೆ ಕೀಳಲುಹೋಗಿ ನೋಡುತ್ತೇನೆ, ಅದು ಸುಲಭವಾಗಿ ಬರುತ್ತಿಲ್ಲ. ಆಗ ಸ್ವಲ್ಪ ಬಲಪ್ರಯೋಗಮಾಡಿ ಕಿತ್ತೆ.

"ನನ್ನ ಕೈಯಲ್ಲಿ ನಿಂಬೆ ಹಣ್ಣು ಕತ್ತರಿಸಲಾಗುತ್ತಿಲ್ಲ. ಅಂದು ಬಹಳ ಪ್ರಯಾಸಪಟ್ಟು 'ಜೈ ಕಾಳಿ!' ಅಂತ ಹೇಳಿ ಆಕೆಯ ಎದುರು ಅದನ್ನು ಬಲಿ ಕತ್ತರಿಸುವ ಹಾಗೆ ಕತ್ತರಿಸಲು ಸಾಧ್ಯವಾಯಿತು. ಒಂದು ದಿನ ಹೂವು ಕೊಯ್ಯಲು ಹೋಗಿದ್ದಾಗ, ನನಗೀದೃಶ್ಯ ಕಂಡಿತು,—ಗಿಡಗಳಲ್ಲಿ ಹೂವು ಅರಳಿ ತುಂಬಿತ್ತು. ಎದುರಿಗೇನೇ ವಿರಾಟ್ಪುರುಷನಿರುವ ಹಾಗೆ, ಆತನ ಪೂಜೆ ಆಗತಾನೆ ಮುಗಿದಿರುವ ಹಾಗೆ, ಆತನ ತಲೆಯ ಮೇಲೆ ಈ ಹೂವುಗಳೆಲ್ಲ ಅಲಂಕೃತವಾಗಿರುವ ಹಾಗೆ ಕಂಡೆ. ಅವನ್ನು ಬಳಿಕ ಕೊಯ್ಯಲಾಗಲಿಲ್ಲ.

"ಆತ ಮನುಷ್ಯನಾಗಿಯೂ ಕ್ರೀಡಿಸುತ್ತಿದಾನೆ. ಮನುಷ್ಯ ಸಾಕ್ಷಾತ್ ನಾರಾಯಣನೇ ಆಗಿ ನನಗೆ ಕಂಡು ಬರುತ್ತಿದಾನೆ. ಕಡ್ಡಿಗಳನ್ನು ಒಂದಕ್ಕೊಂದು ಉಜ್ಜಿದರೆ ಯಾವರೀತಿಯಾಗಿ ಬೆಂಕಿ ಉತ್ಪನ್ನವಾಗುತ್ತದೆಯೊ, ಅದೇರೀತಿಯಾಗಿ ತೀವ್ರ ಭಕ್ತಿಯೊಂದಿದ್ದರೆ ಮನುಷ್ಯನಲ್ಲಿಯೂ ಭಗವಂತನನ್ನು ದರ್ಶಿಸಬಹುದು. ಎರೆ ಒಳ್ಳೆಯದಾಗಿದ್ದರೆ

ದೊಡ್ಡ ದೊಡ್ಡ 'ರುಯಿ' ಮೀನುಗಳೂ ಅದನ್ನು "ಗಬಕ್" ಅಂತ ನುಂಗಿ ಬಿಡುತ್ತವೆ. ಪ್ರೇಮೋನ್ಮಾದ ಉಂಟಾದರೆ ಸರ್ವ ಭೂತಗಳಲ್ಲಿಯೂ ಆತನನ್ನು ನೋಡಬಹುದು. ಗೋಪಿಯರು ಸರ್ವ ಭೂತಗಳಲ್ಲಿಯೂ ಶ್ರೀ ಕೃಷ್ಣ ಇರುವುದನ್ನು ಕಂಡಿದ್ದರು; ಎಲ್ಲವೂ ಅವರಿಗೆ ಕೃಷ್ಣಮಯ ವಾಗಿ ಕಂಡಿತು. ಅವರು ಆಗ ಹೇಳುತ್ತಿದ್ದರು, ತಾವೇ ಕೃಷ್ಣ ಅಂತ. ಆಗ ಅವರದು ಪ್ರೇಮೋನ್ಮಾದ ಅವಸ್ಥೆ. ಮರ ನೋಡಿ ಅವರು ಹೇಳು ತ್ತಿದ್ದರು, 'ಇವರು ತಪಸ್ವಿಗಳು; ಶ್ರೀ ಕೃಷ್ಣನ ಧ್ಯಾನ ಮಾಡುತ್ತಿದ್ದಾರೆ' ಅಂತ. ನೆಲದ ಮೇಲೆ ಬೆಳೆದಿರೋ ಹುಲ್ಲು ನೋಡಿ ಅವರು ಹೇಳುತ್ತಿದ್ದರು, 'ನೋಡಿ, ಶ್ರೀ ಕೃಷ್ಣನನ್ನು ಸ್ಪರ್ಶಿಸಿ ಪೃಥಿವಿಗೆ ರೋಮಾಂಚನವಾಗಿ ಬಿಟ್ಟಿದೆ' ಅಂತ.

"ಪತಿವ್ರತಾ ಧರ್ಮ; ಪತಿಯೆ ದೇವರು ಅಂತ. ಇದು ಏಕೆ ಆಗದು? ಪ್ರತಿಮೆಯಲ್ಲಿ ಪೂಜೆ ಸಾಧ್ಯವಾಗುವುದಾದರೆ, ಜೀವಂತ ಮನುಷ್ಯನಲ್ಲಿ ಸಾಧ್ಯವಾಗದೊ? ಪ್ರತಿಮೆಯಲ್ಲಿ ಭಗವಂತ ಆವಿರ್ಭಾವ ವಾಗಬೇಕಾದರೆ ಮೂರು ವಸ್ತುಗಳು ಬೇಕು: ಮೊದಲನೆಯದು ಅರ್ಚಕನ ಭಕ್ತಿ; ಎರಡನೆಯದು ಸುಂದರ ಪ್ರತಿಮೆ; ಮೂರನೆಯದು ಮನೆ ಯಜಮಾನನ ಭಕ್ತಿ. ವೈಷ್ಣವಚರಣ ಹೇಳಿದ, 'ಕೊನೆಕೊನೆಯಲ್ಲಿ ಭಗವಂತನ ನರಲೀಲೆಯಲ್ಲಿಯೇ ಭಕ್ತನ ಮನಸ್ಸು ಏಕಾಗ್ರವಾಗುತ್ತದೆ' ಅಂತ.

"ಆದರೆ ಒಂದು ವಿಷಯ,—ಆತನ ಸಾಕ್ಷಾತ್ಕಾರ ಮಾಡಿಕೊಳ್ಳದೆ ಇದ್ದರೆ ಆತ ಮನುಷ್ಯ ರೂಪಿನಲ್ಲಿ ಕ್ರೀಡಿಸೋದನ್ನು ನೋಡಲಾಗೋದಿಲ್ಲ. ಸಾಕ್ಷಾತ್ಕಾರಕ್ಕೆ ಲಕ್ಷಣ ಏನು ಎಂಬುದು ಗೊತ್ತೇನು? ಬಾಲಕನ ಸ್ವಭಾವ ಬಂದುಬಿಡುತ್ತದೆ. ಬಾಲಕನ ಸ್ವಭಾವ ಬರಲು ಕಾರಣವೇನು? ಭಗವಂತ ತಾನೇ ಬಾಲಕನ ಹಾಗೆ ಇರುವುದರಿಂದ ಅದು ಬರುತ್ತದೆ. ಅದಕ್ಕಾಗಿಯೇ ಯಾರು ಆತನ ಸಾಕ್ಷಾತ್ಕಾರ ಪಡೆಯುತ್ತಾರೊ ಅವರಿಗೂ ಬಾಲಕನ ಸ್ವಭಾವ ಬಂದುಬಿಡುತ್ತದೆ.

"ಭಗವಂತನ ದರ್ಶನವನ್ನು ಪಡೆಯಲೇಬೇಕು. ಈಗ ಪ್ರಶ್ನೆ ಆತನ ದರ್ಶನವನ್ನು ಪಡೆಯೋದು ಹೇಗೆ ಎಂದು? ತೀವ್ರ ವೈರಾಗ್ಯ ಬೇಕು. ಅದು ಅಷ್ಟೊಂದು ತೀವ್ರವಾದುದಾಗಿರಬೇಕು ಆವಶ್ಯಕತೆ ತೋರಿಬಂದರೆ, 'ಹೇ ಜಗತ್ಪಿತನೆ,—ನಾನು ನಿನ್ನ ಈ ಜಗತ್ತಿಗೆ ಸೇರಿಲ್ಲವೇನೊ? ನೀನು

ನನಗೆ ದಯೆದೊರೋದಿಲ್ಲವೇನೊ ನೀಚ?' ಎಂಬುದಾಗಿ ಹೇಳುವಂಥ ದಾಗಿಯೂ ಆಗಿರಬೇಕು.

"ಯಾರು ಯಾರ ಚಿಂತನೆ ಮಾಡುತ್ತಾರೊ ಅವರಿಗೆ ಅವರ ಸತ್ತ್ವ ಬಂದುಬಿಡುತ್ತದೆ. ಶಿವನ ಪೂಜೆ ಮಾಡಿದರೆ ಶಿವನ ಸತ್ತ್ವ ದೊರೆಯುತ್ತದೆ. ಒಬ್ಬ ರಾಮಭಕ್ತ ಹಗಲು ಇರುಳು ಹನುಮಂತನ ಮೇಲೆ ಧ್ಯಾನಮಾಡು ತ್ತಿದ್ದ. ತಾನು ಹನುಮಂತನಾಗಿಬಿಟ್ಟಿದ್ದೇನೆ ಅಂತ ಭಾವಿಸುತ್ತಿದ್ದ. ಕೊನೆಗೆ ಆತನಿಗೆ ತನಗೊಂದು ಬಾಲವೂ ಬೆಳೆದುಬಿಟ್ಟಿದೆ ಎಂಬ ದೃಢ ವಿಶ್ವಾಸ ಆಗಿಬಿಟ್ಟಿತು. ಶಿವನ ಅಂಶದಿಂದ ಜ್ಞಾನ ಉಂಟಾಗುತ್ತದೆ; ವಿಷ್ಣುವಿನ ಅಂಶದಿಂದ ಭಕ್ತಿಯುಂಟಾಗುತ್ತದೆ. ಯಾರಲ್ಲಿ ಶಿವನ ಅಂಶ ಇದೆಯೊ ಅವರದು ಜ್ಞಾನಿಯ ಸ್ವಭಾವ; ಯಾರಲ್ಲಿ ವಿಷ್ಣುವಿನ ಅಂಶ ಇದೆಯೊ ಅವರದು ಭಕ್ತನ ಸ್ವಭಾವ."

ಮಾಸ್ಟರ್: "ಚೈತನ್ಯದೇವನದು? ಆತನದು, ನೀವು ಹೇಳಿದ್ದಿರಿ, 'ಜ್ಞಾನ ಭಕ್ತಿ ಎರಡೂ' ಅಂತ."

ಶ್ರೀರಾಮಕೃಷ್ಣರು ಸಿಟ್ಟುಗೊಂಡು: "ಆತನದು ಒಂದು ಪ್ರತ್ಯೇಕ ಸಮಾಚಾರ. ಆತ ಭಗವಂತನ ಅವತಾರ. ಆತನಿಗು ಜೀವಕ್ಕು ಅಜಗಜಾಂತರ ವ್ಯತ್ಯಾಸ. ಅವನದು ಅಂಥ ವೈರಾಗ್ಯ, ಸಾರ್ವಭೌಮ ಆತನ ನಾಲಗೆ ಮೇಲೆ ಸಕ್ಕರೆ ಚಿಮುಕಿಸಿದನಂತರ, ಆತ 'ಫೂ' ಎಂದು ಊದಿದೊಡನೆಯೆ ಎಲ್ಲಾ ಹಾರಿಹೊಗಿ ಬಿಟ್ಟಿತು; ಒಂದು ತುಣುಕೂ ಆತನ ನಾಲಗೆಗೆ ಅಂಟಿಕೊಂಡಿರಲಿಲ್ಲ; ಸರ್ವದಾ ಸಮಾಧಿಸ್ಥನಾಗಿರುತ್ತಿದ್ದ. ಆತ ಎಂಥ ಅದ್ಭುತ ಕಾಮಜಯಿ! ಅಂಥವನನ್ನು ಜೀವರೊಡನೆ ಹೋಲಿ ಸೋದು! ಸಿಂಹ ಹನ್ನೆರಡು ವರ್ಷಕ್ಕೊಮ್ಮೆ ಸಂಭೋಗಕಾರ್ಯದಲ್ಲಿ ತೊಡಗುತ್ತದೆ, ಆದರೆ ಅದು ಮಾಂಸಾಹಾರಿ; ಗುಬ್ಬಚ್ಚಿ ಧಾನ್ಯಾಹಾರಿ, ಆದರೆ ಹಗಲು ಇರುಳು ಸಂಭೋಗಕಾರ್ಯದಲ್ಲಿಯೇ ತೊಡಗಿರುತ್ತದೆ. ಇದೇ ಅವತಾರಕ್ಕೆ ಮತ್ತು ಜೀವನಿಗೆ ಇರುವ ತಾರತಮ್ಯ. ಜೀವನೇನೊ ಕಾಮವನ್ನು ತ್ಯಜಿಸುತ್ತಾನೆ; ಆದರೆ ತಡೆಯೋಕೆ ಆಗದೆ ಒಮ್ಮೊಮ್ಮೆ ಸಂಭೋಗಕಾರ್ಯ ಆತನಿಂದ ನಡೆದೇಹೋಗಿಬಿಡುತ್ತದೆ.

(ಮಣಿಗೆ) "ಲಜ್ಜೆ ಏಕೆ ಪಟ್ಟುಕೋತೀಯ? ಯಾರು ಮೇಲಿನ ಹಾಗೆ ವರ್ತಿಸುತ್ತಾರೊ ಅವರಿಗೆ ನಾಚಿಕೆ ಹೇಸಿಕೆ ಎಂಬೋದೇ ಇರೋದಿಲ್ಲ!

'ಲಜ್ಜೆ ಘೃಣ ಭಯ ಇವು ಮೂರೂ ಇರಬಾರದು,' ಇವೆಲ್ಲಾ ಪಾಶಗಳೇ. ಅಷ್ಟಪಾಶಗಳಿರೋದನ್ನ ನೀನು ಕೇಳಿಲ್ಲವೆ?

"ಯಾರು ನಿತ್ಯಸಿದ್ಧನೊ ಆತನಿಗೆ ಇನ್ನು ಸಂಸಾರದ ಭಯವೆಲ್ಲಿ? ಪಗಡೆ ಆಟ; ಮತ್ತೆ ಅದನ್ನು ಆಡಬೇಕಾಗಿಬಂದರೆ ನಿಪುಣನಿಗೆ ಕಿಂಚಿತ್ತೂ ಭಯವಿರದು. ನಿತ್ಯಸಿದ್ಧ ಇಚ್ಛೆಪಟ್ಟರೆ ಸಂಸಾರದಲ್ಲೂ ಇರಬಲ್ಲ. ಕೆಲ ಕೆಲವರು ಎರಡು ಕತ್ತಿ ಹಿಡಿದು ತಿರುಗಿಸಬಲ್ಲರು; ಅವರು ಕತ್ತಿವರಸೆಯಲ್ಲಿ ಅಂಥ ನಿಪುಣರು, ಅವರ ಕಡೆ ಕಲ್ಲು ಎಸೆದರೂ ಅವು ಅವರ ಕತ್ತಿಗೆ ಮಾತ್ರ ತಾಗಿ ಹಿಂದಿರುಗುತ್ತವೆ!"

ಭಕ್ತ: "ಮಹಾಶಯರೆ, ಯಾವ ಮಾನಸಿಕ ಅವಸ್ಥೆಯಲ್ಲಿ ಆತನ ದರ್ಶನ ಪಡೆಯಬಹುದು?"

ಶ್ರೀರಾಮಕೃಷ್ಣರು: "ಮನಸ್ಸನ್ನೆಲ್ಲ ಏಕೀಕರಿಸಿ ಆತನ ಕಡೆ ತಿರುಗಿಸದಿದ್ದರೆ ಆತನ ದರ್ಶನ ಪಡೆಯಲಾಗುವುದೆ? ಭಾಗವತದಲ್ಲಿ ಶುಕದೇವನ ಸಂಬಂಧವಾಗಿ ಹೇಳಿದೆ— ದಾರಿಯಲ್ಲಿ ಹೋಗುತ್ತಿದ್ದಾನೆ, ಸನೀನು (Bayonet) ಹಿಡಿದ ಸಿಪಾಯಿಯ ಹಾಗೆ; ಬೇರೆ ಯಾವ ಕಡೆಗೂ ದೃಷ್ಟಿಯಿಲ್ಲ. ಒಂದೇ ದೃಷ್ಟಿ— ಕೇವಲ ಭಗವಂತನ ಕಡೆಗೇ ದೃಷ್ಟಿ. ಯೋಗ ಎಂಬದು ಇದೇನೆ.

"ಚಾತಕಪಕ್ಷಿ ಕೇವಲ ಮಳೆ ನೀರನ್ನು ಮಾತ್ರವೇ ಕುಡಿಯುತ್ತದೆ. ಗಂಗೆ, ಯಮುನೆ, ಗೋದಾವರಿ ಮತ್ತು ಉಳಿದ ನದಿಗಳಲ್ಲೆಲ್ಲಾ ನೀರು ತುಂಬಿದೆ; ಸಪ್ತ ಸಮುದ್ರಗಳೂ ತುಂಬಿತುಳುಕಾಡುತ್ತಿವೆ, ಆದರೂ ಅದು ಆ ನೀರನ್ನೆಲ್ಲ ಮುಟ್ಟದು. ಮಳೆ ಬೀಳಬೇಕು, ಅದು ನೀರು ಕುಡಿಯಬೇಕು.

"ಯಾರಿಗೆ ಈ ವಿಧದ ಯೋಗ ಉಂಟಾಗಿದೆಯೊ, ಅವರಿಗೆ ಭಗವಂತನ ದರ್ಶನ ದೊರೆಯುವ ಸಂಭವ. ಥಿಯೇಟರಿಗೆ ಹೋದರೆ ಪರದೆಯನ್ನು ಎಲ್ಲಿಯವರೆಗೆ ಎತ್ತೋದಿಲ್ಲವೊ ಅಲ್ಲಿಯವರೆಗೆ ಜನ ಕುಳಿತಲ್ಲಿಯೇ ಕುಳಿತು ಹಲವಾರು ವಿಧದ ಹರಟೆ ಹೊಡೆಯುತ್ತಾರೆ— ಗೃಹಕೃತ್ಯದ ವಿಷಯವಾಗಿ, ಆಫೀಸಿನ ವಿಷಯವಾಗಿ, ಸ್ಕೂಲಿನ ವಿಷಯವಾಗಿ, ಇವೇ ಮೊದಲಾದುವುಗಳ ವಿಷಯವಾಗಿ ಹರಟೆ ಹೊಡೆಯುತ್ತಾರೆ. ಪರದೆಯನ್ನು ಮೇಲಕ್ಕೆ ಎಳೆದರು ಅಂದರೆ, ಒಡನೆಯೇ ಎಲ್ಲಾ ಮಾತು ಕತೆಗಳು ನಿಂತುಹೋಗಿಬಿಡುತ್ತವೆ. ಪ್ರೇಕ್ಷಕರು ನೆಟ್ಟದೃಷ್ಟಿಯಿಂದ ನಾಟಕ ನೋಡುತ್ತ ಕುಳಿತಿರುತ್ತಾರೆ. ಎಷ್ಟೋ ಹೊತ್ತಿನ ಮೇಲೆ

ೊರಾದರು ಒಂದೆರಡು ಮಾತಾಡಿದರೆ ಅದು ನಾಟಕದ ಸಂಬಂಧವಾಗಿ ಾತ್ರವೇ ಆಗಿರುತ್ತದೆ.

"ಕುಡುಕ ಮದ್ಯ ಕುಡಿದನಂತರ ಕೇವಲ ಆನಂದದ ಮಾತು ಳನ್ನೇ ಆಡುತ್ತಾನೆ."

ನಿತ್ಯಗೋಪಾಲ ಪರಮಹಂಸರೆದುರು ಕುಳಿತಿದ್ದಾನೆ. ಆತ ೊವಾಗ ನೋಡಿದರೂ ಭಾವಸ್ಥನಾಗಿಯೇ ಇರುತ್ತಾನೆ; ಈಗ ಸುಮ್ಮನೆ ುಳಿತಿದ್ದಾನೆ.

ಶ್ರೀರಾಮಕೃಷ್ಣರು ನಗುತ್ತ: "ಗೋಪಾಲ! ಏಕೆ ಹೀಗೆ? ಯಾವಾಗ ೋಡಿದರೂ ನೀನು ಮೌನವಾಗಿಯೇ ಇರುತ್ತೀಯಲ್ಲ?"

ನಿತ್ಯಗೋಪಾಲ ಬಾಲಕನ ಹಾಗೆ ಉತ್ತರವಿತ್ತ, "ನನಗೆ— ಾತ್ತೂ— ಇಲ್ಲ" ಅಂತ.

ಶ್ರೀರಾಮಕೃಷ್ಣರು: "ನೀನು ಏಕೆ ಮಾತಾಡೋದಿಲ್ಲ ಎಂಬುದನ್ನು ರಿತುಬಿಟ್ಟೆ; ಬಹುಶಃ ಅಪರಾಧ ಆಗಬಹುದು ಎಂದು. ಸರಿ, ಸರಿ. ಯವಿಜಯರು ಶ್ರೀಮನ್ನಾರಾಯಣನ ವೈಕುಂಠದ ದ್ವಾರಪಾಲಕ ಾಗಿದ್ದರು. ಸನಕ ಸನಾತನಾದಿ ಋಷಿಗಳನ್ನು ಒಳಕ್ಕೆ ಹೋಗಲು ಅವರು ಟ್ಟುಕೊಡಲಿಲ್ಲ. ಆ ಅಪರಾಧಕ್ಕಾಗಿ ಅವರು ಈ ಸಂಸಾರದಲ್ಲಿ ಮೂರು ಾರಿ ಜನ್ಮವೆತ್ತಬೇಕಾಯಿತು.

"ಗೋಲೋಕದಲ್ಲಿ ಶ್ರೀದಾಮ ಎಂಬುವನು ವಿರಜೆಯ ಮನೆಯ ್ವಾರಪಾಲಕನಾಗಿದ್ದ. ಶ್ರೀಮತಿ (ರಾಧೆ) ಶ್ರೀಕೃಷ್ಣನನ್ನು ವಿರಜೆಯ ುನೆಯಲ್ಲಿ ಅನಿರೀಕ್ಷಿತವಾಗಿ ಹಿಡಿಯಬೇಕೆಂದು ಆಶಿಸಿ ಆಕೆಯ ಮನೆಯ ಾಗಿಲ ಬಳಿ ಹೋಗಿ ಒಳಕ್ಕೆ ಪ್ರವೇಶಿಸಲು ಶ್ರೀದಾಮನ ಅನುಮತಿ ಕೇಳಿ ಳು — ಆತ ಕೊಡಲಿಲ್ಲ.

ಅದಕ್ಕಾಗಿ ಶ್ರೀಮತಿ ಶಾಪಕೊಟ್ಟಳು, 'ನೀನು ಮರ್ತ್ಯಲೋಕದಲ್ಲಿ ಸುರನಾಗಿ ಹುಟ್ಟು' ಅಂತ. ಶ್ರೀದಾಮನೂ ಆಕೆಗೆ ಶಾಪ ಕೊಟ್ಟ.

"ಆದರೆ ಒಂದು ವಿಷಯ,— ಮಗು ತಂದೆಯ ಕೈ ಹಿಡಿದು ುಂಡಿದ್ದರೆ ಹಳ್ಳಕ್ಕೆ ಬೀಳುವ ಸಂಭವ; ಆದರೆ ತಂದೆಯೇ ಮಗುವಿನ ಹಿಡಿದುಕೊಂಡಿದ್ದರೆ ಅದಕ್ಕೆ ಮತ್ತೇತರ ಭಯ."

ಶ್ರೀದಾಮನ ವಿಷಯ ಬ್ರಹ್ಮವೈವರ್ತ ಪುರಾಣದಲ್ಲಿದೆ.

ಕೇದಾರಚಟ್ಟೋಪಾಧ್ಯಾಯ ಈಗ ಢಾಕಾದಲ್ಲಿ ಇದಾನೆ. ಅಲ್ಲಿ

ಆತನಿಗೆ ಸರ್ಕಾರಿ ಉದ್ಯೋಗ. ಹಿಂದೆ ಕಲ್ಕತ್ತದಲ್ಲಿ ಕೆಲಸ ಮಾಡುತ್ತಿದ್ದ. ಆತ ಪರಮಹಂಸರ ಪರಮ ಭಕ್ತ. ಢಾಕಾದಲ್ಲಿ ಅನೇಕರು ಆತನ ಭಕ್ತರಾಗಿದ್ದಾರೆ. ಅವರು ಸರ್ವದಾ ಆತನ ಹತ್ತಿರಕ್ಕೆ ಬಂದು ಉಪದೇಶ ಪಡೆದು ಹೋಗುತ್ತಿದ್ದಾರೆ. ಬರಿಯ ಕೈಯಲ್ಲಿ ಭಕ್ತರನ್ನು ನೋಡಲು ಹೋಗಬಾರದು. ಆದ್ದರಿಂದ ಅವರು ತಿಂಡೀತೀರ್ಥಗಳನ್ನು ತಂದು ಆತನಿಗೆ ಅರ್ಪಿಸುತ್ತಾರೆ.

ಕೇದಾರ ವಿನಯದಿಂದ ಶ್ರೀರಾಮಕೃಷ್ಣರಿಗೆ: "ಅವರು ತರೋದನ್ನು ತಿನ್ನಲೆ?"

ಶ್ರೀರಾಮಕೃಷ್ಣರು: "ಭಗವಂತನ ಪ್ರೀತ್ಯರ್ಥವಾಗಿ ನಿನಗೆ ತಂದು ಕೊಡುವುದಾದರೆ ದೋಷವೇನಿಲ್ಲ. ಸ್ವಾರ್ಥ ದೃಷ್ಟಿಯಿಂದ ಕೊಟ್ಟರೆ ಒಳ್ಳೆಯದಲ್ಲ."

ಕೇದಾರ: "ನಾನು ನಿಜಸ್ಥಿತಿ ತಿಳಿಸಿ ನಿಶ್ಚಿಂತನಾಗಿಬಿಟ್ಟಿದ್ದೇನೆ. ನಾನು ಅವರಿಗೆ ಹೇಳಿದ್ದೇನೆ, 'ಯಾರು[1] ನನ್ನ ಮೇಲೆ ಕೃಪೆ ಮಾಡಿದಾರೊ ಅವರಿಗೆ ಎಲ್ಲಾ ಗೊತ್ತಿದೆ' ಅಂತ."

ಶ್ರೀರಾಮಕೃಷ್ಣರು ನಗುತ್ತ: "ಅದೇನೊ ನಿಜ, ಇಲ್ಲಿಗೆ ಎಲ್ಲಾ ವಿಧದ ಜನರು ಬರುತ್ತಿದ್ದಾರೆ. ಅದಕ್ಕಾಗಿಯೇ ಜನರು ವಿವಿಧ ಭಾವಗಳನ್ನು ಇಲ್ಲಿ ನೋಡುತ್ತಿದ್ದಾರೆ."

ಕೇದಾರ: "ನನಗೆ ಅನೇಕ ವಿಷಯಗಳನ್ನು ತಿಳಿದುಕೊಳ್ಳುವುದರ ಆವಶ್ಯಕತೆಯೇನಿಲ್ಲ."

ಶ್ರೀರಾಮಕೃಷ್ಣರು ನಗುತ್ತ: "ಏಕಿಲ್ಲ? ಪ್ರತಿಯೊಂದರ ಒಂದಿಷ್ಟನ್ನೂ ತಿಳಿದುಕೊಳ್ಳುವುದರ ಆವಶ್ಯಕತೆ ಇದೆ. ಯಾರಾದರು ಚಿಲ್ಲರೆ ಅಂಗಡಿ ಇಟ್ಟರೆ ಎಲ್ಲಾ ವಿಧದ ಸಾಮಾನುಗಳನ್ನೂ ಇಡಬೇಕಾಗುತ್ತದೆ— ಸ್ವಲ್ಪ ಮಸೂರು ಬೇಳೆಯನ್ನೂ ಇಡಬೇಕಾಗುತ್ತದೆ, ಒಂದಷ್ಟು ಹುಣಿಸೆ ಹಣ್ಣನ್ನೂ ಇಡಬೇಕಾಗುತ್ತದೆ — ಇವನ್ನೆಲ್ಲಾ ಇಡಬೇಕಾಗುತ್ತದೆ. ನಿಪುಣ ವಾದ್ಯಗಾರನಿಗೆ ಎಲ್ಲಾ ವಾದ್ಯಗಳನ್ನೂ ಸ್ವಲ್ಪ ಸ್ವಲ್ಪವಾಗಿ ಬಾಜಿಸಲು ಬರುತ್ತದೆ."

ಪರಮಹಂಸರು ದೇವದಾರು ವೃಕ್ಷಗಳ ಕಡೆ ಹೋದರು. ಒಬ್ಬ ಭಕ್ತ ಕಾಲುತಂಬಿಗೆ ತೆಗೆದುಕೊಂಡು ಹೋಗಿ ಅಲ್ಲಿ ಇಟ್ಟು ಬಂದ.

---

1. ಶ್ರೀರಾಮಕೃಷ್ಣರು.

ಭಕ್ತರು ಇಚ್ಛೆ ಬಂದಕಡೆ ಉದ್ಯಾನವನದಲ್ಲಿ ತಿರುಗಾಡಲಾರಂಭಿಸಿದರು— ಕೆಲವರು ಪರಮಹಂಸರ ಕೊಠಡಿಯ ಕಡೆಗೆ ಹೋಗುತ್ತಿದ್ದಾರೆ, ಕೆಲಕೆಲವರು ಪಂಚವಟಿಗೆ ಹಿಂದಿರುಗಿ ಬರುತ್ತಿದ್ದಾರೆ. ಪರಮಹಂಸರು ಪಂಚವಟಿಯ ಹತ್ತಿರಕ್ಕೆ ಬಂದು ಹೇಳಿದರು, "ನನಗೆ ಸ್ವಲ್ಪ ಅಗ್ನಿಮಾಂದ್ಯವಾಗಿದೆ, ಕಾರಣ ಮಲ್ಲಿಕನ ಮನೆ ಊಟ ;—ಘೋರವಿಷಯಾಸಕ್ತರು. ಉಷ್ಣವಾಗಿಬಿಟ್ಟದೆ" ಅಂತ.

ಶ್ರೀರಾಮಕೃಷ್ಣರ ಒಂದೆರಡು ವಸ್ತುಗಳು ಪಂಚವಟಿಯ ಸಿಮೆಂಟು ಕಟ್ಟೆಯ ಮೇಲೆ ಬಿದ್ದಿದ್ದವು. ಅವನ್ನು ತೆಗೆದುಕೊಂಡು ಬರುವಂತೆ ಮಾಸ್ಟರಿಗೆ ಹೇಳಿ ಪರಮಹಂಸರು ತಮ್ಮ ಕೊಠಡಿಯ ಕಡೆ ಮುಂದುವರಿಯುತ್ತಿದ್ದಾರೆ. ಭಕ್ತರು ಅವರನ್ನು ಹಿಂಬಾಲಿಸುತ್ತಿದ್ದಾರೆ.

ಪರಮಹಂಸರು ಮಧ್ಯಾಹ್ನವಾದನಂತರ ಸ್ವಲ್ಪ ವಿಶ್ರಮಿಸಿಕೊಂಡರು. ಬಳಿಕ ಕೆಲವು ಮಂದಿ ಭಕ್ತರು ಬಂದು ಪರಮಹಂಸರ ಕೊಠಡಿಯಲ್ಲಿ ಕುಳಿತುಕೊಂಡರು. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ದಿಂಬು ಒರಗಿಕೊಂಡು ಕುಳಿತಿದ್ದಾರೆ.

ಒಬ್ಬ ಭಕ್ತ : "ಮಹಾಶಯರೆ, ಜ್ಞಾನದಿಂದ ಭಗವಂತನ ಸ್ವರೂಪವನ್ನು ಅರಿಯಲಾಗುವುದೆ ?"

ಪರಮಹಂಸರು : "ಈ ಜ್ಞಾನದಿಂದ ಸಾಧ್ಯವಿಲ್ಲ. ಏನೂ ಮಾಡದೆ ಅಷ್ಟು ಸುಲಭವಾಗಿ ಆತನನ್ನು ಅರಿಯಲಾಗುತ್ತದೆಯೆ ? ಸಾಧನೆ ಮಾಡಬೇಕು. ಯಾವುದಾದರು ಒಂದು ಭಾವವನ್ನು ಆರೋಪಿಸಿಕೋಬೇಕು ; ಉದಾಹರಣೆಗೆ ದಾಸ್ಯಭಾವ. ಋಷಿಗಳದು ಶಾಂತಭಾವ. ಜ್ಞಾನಿಗಳ ಭಾವ ಎಂಥದು ಅಂಬುದು ಗೊತ್ತೆ ? ಸ್ವಸ್ವರೂಪವನ್ನು ಚಿಂತನೆ ಮಾಡೋದು. (ಒಬ್ಬ ಭಕ್ತನಿಗೆ, ನಗುತ್ತ) ನಿನ್ನದು ಎಂಥದು ?"

ಭಕ್ತ ಸುಮ್ಮನೆ ಕುಳಿತಿದ್ದಾನೆ.

ಶ್ರೀರಾಮಕೃಷ್ಣರು ನಗುತ್ತ : "ನಿನಗೆ ಎರಡು ಭಾವಗಳಿವೆ— ಸ್ವಸ್ವರೂಪದ ಮೇಲೆ ಚಿಂತನೆ ಮಾಡೋದೂ ಇದೆ, ಜೊತೆಗೆ ಸೇವ್ಯ ಸೇವಕ ಭಾವವೂ ಇದೆ. ಏನು, ನಾನು ಹೇಳೋದು ಸರಿಯಲ್ಲವೆ ?"

ಭಕ್ತ ನಗುತ್ತ ಕಕ್ಕಾಬಿಕ್ಕಿಯಾಗಿ : "ಹೌದು, ಸರಿ."

ಶ್ರೀರಾಮಕೃಷ್ಣರು ನಗುತ್ತ : "ಅದಕ್ಕಾಗಿಯೆ ಹಾಜರಾ ಹೇಳು

ತ್ತಿರೋದು, 'ನೀವು ಪರರ ಮನಸ್ಸಿನಲ್ಲಿ ನಡೆಯುವುದನ್ನೆಲ್ಲ ಅರಿತು ಕೊಂಡುಬಿಡಬಲ್ಲಿರಿ' ಅಂತ.

"ಅಧ್ಯಾತ್ಮಜೀವನದಲ್ಲಿ ಬಹಳವಾಗಿ ಮುಂದುವರಿದನಂತರ ಆ ರೀತಿಯ ದ್ವಯಭಾವ ಬರುತ್ತದೆ. ಅದು ಪ್ರಹ್ಲಾದನಿಗೆ ಉಂಟಾಗಿತ್ತು. ಆದರೆ ಆ ಭಾವವನ್ನು ಸಾಧಿಸಬೇಕಾದರೆ ಬಹಳ ಪ್ರಯಾಸಪಡಬೇಕು.

"ಒಬ್ಬ ದ್ವೀಪದ್ರಾಕ್ಷಿಯ ಮುಳ್ಳನ್ನು ಹಿಡಿದುಕೊಂಡಿದ್ದಾನೆ ಅಂತ ಭಾವಿಸಿಕೊಳ್ಳಿ—ಕೈಯಿಂದ ರಕ್ತ ಧಾರಾಕಾರವಾಗಿ ಸುರಿಯುತ್ತಿದೆ; ಆದರೂ ಹೇಳುತ್ತಾನೆ, 'ನನಗೇನೂ ಆಗಿಲ್ಲ, ನನಗೇನೂ ನೋವಾಗುತ್ತಿಲ್ಲ' ಅಂತ. ಆತನ ಗಾಯದ ಸಂಬಂಧವಾಗಿ ಕೇಳಿದರೆ ಹೇಳುತ್ತಾನೆ, 'ಏನೂ ಆಗಿಲ್ಲ, ಏನೂ ಆಗಿಲ್ಲ' ಅಂತ. ಈ ಮಾತನ್ನು ಕೇವಲ ಬಾಯಿಂದ ಹೊರಗೆ ಮಾತ್ರ ಹೇಳಿದರೆ ಏನು ಪ್ರಯೋಜನ? ಆ ಆದರ್ಶವನ್ನು ಸಾಧಿಸಬೇಕಾದರೆ ಸಾಧನೆ ಮಾಡಬೇಕು."

ಭಕ್ತರೆಲ್ಲರು ಪರಮಹಂಸರ ವೇದವಚನವನ್ನು ಕಿವಿಗೊಟ್ಟು ಕೇಳುತ್ತಿದ್ದಾರೆ.



೩೬

# ಶ್ರೀರಾಮಕೃಷ್ಣರ ಜನ್ಮಮಹೋತ್ಸವ

೨೨ನೆ ಫೆಬ್ರುವರಿ ೧೮೮೫, ಫಾಲ್ಗುಣ ಶುಕ್ಲ ಅಷ್ಟಮಿ, ಭಾನುವಾರ.

ಶ್ರೀರಾಮಕೃಷ್ಣಪರಮಹಂಸರು ತಮ್ಮ ಕೊಠಡಿಗೆ ಈಶಾನ್ಯ ದಿಕ್ಕಿನಲ್ಲಿರುವ ಉದ್ದ ವರಾಂಡದಲ್ಲಿ ಕುಳಿತುಕೊಂಡಿದ್ದಾರೆ. ಆಗ ಸಮಯ ಬೆಳಗಿನ ಎಂಟು. ನರೇಂದ್ರ, ರಾಖಾಲ, ಗಿರೀಶ, ಬಾಬುರಾಮ, ಸುರೇಂದ್ರ, ಭವನಾಥ, ಗಿರೀಂದ್ರ, ವಿನೋದ, ಹಾಜರಾ, ರಾಮಲಾಲ, ರಾಮ, ನಿತ್ಯಗೋಪಾಲ, ಮಣಿಮಲ್ಲಿಕ, ಗಿರೀಶ, ಸಿಂಥಿಯ ಕವಿರಾಜ ಮಹೇಂದ್ರ ಇವರೇ ಮೊದಲಾದ ಇನ್ನೂ ಅನೇಕ ಭಕ್ತರು ಬಂದಿದ್ದಾರೆ. ಶ್ರೀರಾಮಕೃಷ್ಣರು ಹುಟ್ಟಿದ ದಿನ ಹಿಂದಿನ ಸೋಮವಾರ ಬಿದ್ದಿತ್ತು. ಇಂದು ಭಕ್ತರೆಲ್ಲರೂ ಕೂಡಿ ಅದರ ಮಹೋತ್ಸವವನ್ನು ಆಚರಿಸುತ್ತಿದ್ದಾರೆ. ಮಾಸ್ಟರ್ ಮನೆಯಿಂದ ಬಂದು ಪರಮಹಂಸರಿಗೆ ಪ್ರಣಾಮ ಮಾಡಿದ. ಅವರು ಆತನಿಗೆ ತಮ್ಮ ಹತ್ತಿರ ಕುಳಿತುಕೊಳ್ಳುವಂತೆ ಕೈ ಸನ್ನೆ ಮಾಡಿದರು.

ನರೋತ್ತಮ ಕೀರ್ತನೆ ಮಾಡುತ್ತಿದ್ದಾನೆ. ಅದನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆಯೆ ಪರಮಹಂಸರು ಭಾವಾವಿಷ್ಟರಾಗಿದ್ದಾರೆ. ಶ್ರೀಕೃಷ್ಣ ತನ್ನ ಗೆಳೆಯ ಗೋಪಾಲರನ್ನು ಹುಲ್ಲುಗಾವಲಿನಲ್ಲಿ ಭೇಟಿಮಾಡಿದುದರ ಸಂಬಂಧವಾಗಿ ಕೀರ್ತನೆ ನಡೆಯುತ್ತಿದೆ. ಶ್ರೀಕೃಷ್ಣ ಇನ್ನೂ ಹುಲ್ಲುಗಾವಲಿಗೆ ಬಂದಿಲ್ಲ, ಸ್ವಲ್ಪ ತಡವಾಗಿಬಿಟ್ಟಿದೆ. ಗೋಪಾಲರು ಆತನ ಬರುವನ್ನೇ ಎದುರು ನೋಡುತ್ತಿದ್ದಾರೆ. ಅವರಲ್ಲಿ ಒಬ್ಬ ಹೇಳುತ್ತಾನೆ, "ಬಹುಶಃ ಯಶೋದೆ ಆತನನ್ನು ಬಿಟ್ಟುಕೊಡುತ್ತಿಲ್ಲ ಅಂತ ಕಾಣುತ್ತೆ" ಎಂದು. ಬಲರಾಯ ಸ್ವಲ್ಪ ಹುಮ್ಮಸ್ಸಿನಿಂದ ಹೇಳುತ್ತಾನೆ, "ನಾನು ತುತೂರಿ ಊದಿ ಆತನನ್ನು ಇಲ್ಲಿಗೆ ಬರುವಂತೆ ಮಾಡುತ್ತೇನೆ" ಅಂತ. ಕೀರ್ತನೆ ಮುಂದುವರಿಯುತ್ತಿದೆ. ಶ್ರೀಕೃಷ್ಣ ವೇಣುನಾದ ಮಾಡುತ್ತಿದ್ದಾನೆ. ಅದನ್ನು ಕೇಳಿ ಗೋಪಾಲರಲ್ಲಿ ಗೋಪಿಯರಲ್ಲಿ ವಿವಿಧ ಭಾವಗಳು ಉತ್ಪನ್ನವಾಗುತ್ತಿವೆ.

ಪರಮಹಂಸರ ದೃಷ್ಟಿ ಇದ್ದಕ್ಕಿದ್ದ ಹಾಗೆ ನರೇಂದ್ರನ ಮೇಲೆ ಬಿತ್ತು. ಆತ ಅವರ ಹತ್ತಿರವೆ ಕುಳಿತಿದ್ದ. ಅವರು ಎದ್ದು ನಿಂತು ಸಮಾಧಿಸ್ಥರಾಗಿದಾರೆ. ನರೇಂದ್ರನ ಮೊಣಕಾಲನ್ನು ತಮ್ಮ ಒಂದು ಪಾದದಿಂದ ಸ್ಪರ್ಶಿಸಿ ನಿಂತುಕೊಂಡಿದಾರೆ. ಪ್ರಕೃತಿಸ್ಥರಾದನಂತರ ಮತ್ತೆ ಕುಳಿತುಕೊಂಡರು. ನರೇಂದ್ರ ಅಲ್ಲಿಂದ ಎದ್ದು ಕೊಠಡಿ ಕಡೆ ಹೋದ. ಕೀರ್ತನೆ ಮುಂದುವರಿಯುತ್ತಿದೆ.

ಶ್ರೀರಾಮಕೃಷ್ಣರು ಬಾಬುರಾಮನಿಗೆ ಪಿಸುಗುಟ್ಟಿದರು : "ಕೊಠಡಿಯಲ್ಲಿ ಸ್ವಲ್ಪ ಖೀರು ಇದೆ. ನರೇಂದ್ರನಿಗೆ ಕೊಟ್ಟು ಬಾ" ಅಂತ.

ಪರಮಹಂಸರು ನರೇಂದ್ರನಲ್ಲಿ ಸಾಕ್ಷಾತ್ ನಾರಾಯಣನನ್ನು ನೋಡುತ್ತಿದಾರೇನು ?

ಕೀರ್ತನೆ ಸಮಾಪ್ತಿಯಾದನಂತರ ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿ ಬಂದು ಬಹು ಅಕ್ಕರೆಯಿಂದ ನರೇಂದ್ರನಿಗೆ ಮಿಠಾಯಿ ತಿನ್ನಿಸುತ್ತಿದಾರೆ.

ಭಗವಂತ ಶ್ರೀರಾಮಕೃಷ್ಣರ ರೂಪಿನಲ್ಲಿ ಅವತರಿಸಿದಾನೆ ಎಂಬುದು ಗಿರೀಶನ ದೃಢ ವಿಶ್ವಾಸ.

ಗಿರೀಶ ಶ್ರೀರಾಮಕೃಷ್ಣರಿಗೆ: "ನಿಮ್ಮ ಇಡೀ ವ್ಯವಹಾರವೆಲ್ಲ ಸಮ್ಮನೆ ಶ್ರೀಕೃಷ್ಣನ ಹಾಗೆ. ಶ್ರೀಕೃಷ್ಣ ಯಾವರೀತಿಯಾಗಿ ಯಶೋದೆಯ ಎದುರು ನಟಿಸುತ್ತಿದ್ದನೊ ಹಾಗೆಯೇ ನೀವು ನಮ್ಮೆದುರು ನಟಿಸುತ್ತಿದ್ದೀರಿ."

ಶ್ರೀರಾಮಕೃಷ್ಣರು: "ಆತ ನಟಿಸಿದ್ದೇನೊ ನಿಜ, ಏಕೆಂದರೆ ಆತ ಅವತಾರಪುರುಷ. ಭಗವಂತ ನರಲೀಲೆಯಲ್ಲಿ ಹಾಗೆ ವರ್ತಿಸಬೇಕಾಗುತ್ತದೆ. ನೋಡು, ಗೋವರ್ಧನ ಗಿರಿಯನ್ನೇ ತನ್ನ ಕೈಯಲ್ಲಿ ಎತ್ತಿಹಿಡಿದಂಥ ಶ್ರೀಕೃಷ್ಣ ತನ್ನ ತಂದೆ ನಂದನ ಎದುರು ಒಂದು ಕಾಲುಮಣೆ ಎತ್ತಲೂ ಬಹಳ ಕಷ್ಟವಾಗಿರುವಂತೆ ನಟಿಸಿದ!"

ಗಿರೀಶ: "ತಿಳಿದುಕೊಂಡುಬಿಟ್ಟೆ; ಈಗ ನೀವು ಯಾರು ಎಂಬುದನ್ನು ತಿಳಿದುಕೊಂಡುಬಿಟ್ಟೆ."

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಆಗ ಘಂಟೆ ಹನ್ನೊಂದು. ರಾಮ ಮೊದಲಾದವರು ಪರಮಹಂಸರಿಗೆ ಹೊಸ ಬಟ್ಟೆಯನ್ನು ಉಡಿಸಲು ಹೋಗುತ್ತಿದಾರೆ. ಅವರು ಹೇಳುತ್ತಿದಾರೆ, "ಬೇಡಿ, ಬೇಡಿ" ಅಂತ. ಅವರು ಒಬ್ಬ ಇಂಗ್ಲಿಷು ಓದಿದವನನ್ನು

ತೋರಿಸಿ ಹೇಳುತ್ತಿದಾರೆ, "ಆತ ಏನು ತಿಳಿದುಕೋತಾನೆ ನೀವು ಹೀಗೆಲ್ಲ ಮಾಡಿದರೆ?" ಅಂತ. ಭಕ್ತರ ತೀವ್ರ ಆಕಾಂಕ್ಷೆಯನ್ನು ನೋಡಿ ಹೇಳಿದರು, "ಒಳ್ಳೆಯದು ನೀವು ಅಷ್ಟೊಂದು ಕೇಳಿಕೊಳ್ಳುತ್ತಿರುವುದರಿಂದ ಉಟ್ಟು ಕೊಳ್ಳುತ್ತೇನೆ" ಅಂತ.

ಭಕ್ತರು ಪರಮಹಂಸರ ಕೊಠಡಿಯಲ್ಲೇ ಅವರಿಗೆ ಊಟಕ್ಕೆ ಅಣಿ ಮಾಡುತ್ತಿದಾರೆ. ಪರಮಹಂಸರು ನರೇಂದ್ರನಿಗೆ ಒಂದಷ್ಟು ಹೊತ್ತು ಹಾಡುವಂತೆ ಹೇಳಿದರು.

ನರೇಂದ್ರ ಹಾಡುತ್ತಿದಾನೆ:

ಮಿರುಗುತಿದೆ ನಿನ್ನ ಅಪರೂಪ ರಾಶಿ ನಿಬಿಡಾಂಧಕಾರದಲ್ಲಿ
ನಿನ್ನನದರಿಂದಲೇ ನೆನೆವರೌ ಯೋಗಿಗಳು ಗಿರಿಗುಹೆಗಳಲ್ಲಿ!
ಅನಂತ ಅಂಧಕಾರದ ಮೇಲೆ ಮಹಾ ನಿರ್ವಾಣ ಹಿಲ್ಲೋಲದಲ್ಲಿ
ಹರಿಯುತಿದೆ ಚಿರಶಾಂತಿ ನಿರಂತರವು ಪರಿಮಳವ ಚೆಲ್ಲಿ!
ಕಗ್ಗತ್ತಲುಡಿಗೆಯನು ಧರಿಸಿ ಈ ಮಹಾಕಾಲರೂಪದಲ್ಲಿ
ನೀನಾರು ತಾಯಿ ಮಗ್ನಳಾಗಿರುವೆ ಮಹಾ ಸಮಾಧಿಯಲ್ಲಿ?
ನಿನ್ನಭಯಪದಕಮಲ ಪ್ರೇಮಕಾಂತಿಯ ಮಿಂಚು ಬೆಳಕಿನಲ್ಲಿ
ಅಟ್ಟಹಾಸದೊಳಿರುವ ನಿನ್ನ ಚಿನ್ಮಯವದನ ಕಾಣುತಿಹುದಿಲ್ಲಿ!

"ನೀನಾರು ತಾಯಿ ಮಗ್ನಳಾಗಿರುವೆ ಮಹಾ ಸಮಾಧಿಯಲ್ಲಿ?" ಎಂಬ ಚರಣವನ್ನು ನರೇಂದ್ರ ಹಾಡಿದೊಡನೆಯೆ ಪರಮಹಂಸರು ಬಾಹ್ಯ ಜ್ಞಾನಶೂನ್ಯರಾಗಿದಾರೆ, ಸಮಾಧಿಸ್ಥರಾಗಿದಾರೆ. ಬಹಳ ಹೊತ್ತು ಆ ಸ್ಥಿತಿ ಯಲ್ಲಿ ಇದ್ದನಂತರ ಅವರು ಪ್ರಕೃತಿಸ್ಥರಾದರು. ಬಳಿಕ ಭಕ್ತರು ಅವರನ್ನು ಊಟಕ್ಕೆ ಕೂರಿಸಿದರು. ಈಗಲೂ ಭಾವಾವಿಷ್ಟರಾಗೇ ಇದಾರೆ. ಊಟ ಮಾಡುತ್ತಿದಾರೆ, ಆದರೆ ಎರಡು ಕೈಯಿಂದ. ಅವರು ಭವನಾಥನಿಗೆ ಹೇಳಿ ದರು, "ನನ್ನ ಬಾಯಿಗೆ ತುತ್ತು ಹಾಕು" ಅಂತ. ಅವರಿನ್ನೂ ಭಾವಾ ವಿಷ್ಟರಾಗೇ ಇರುವುದರಿಂದ ಅವರಿಗೆ ತಾವೇ ಊಟ ಮಾಡಲು ಆಗುತ್ತಿಲ್ಲ. ಭವನಾಥ ಅವರಿಗೆ ಊಟಮಾಡಿಸುತ್ತಿದಾನೆ. ಅವರು ಎಲ್ಲೋ ಸ್ವಲ್ಪ ಊಟಮಾಡಿದರು. ಊಟವಾದನಂತರ ರಾಮ ಅವರಿಗೆ ಹೇಳಿದ, "ನಿತ್ಯಗೋಪಾಲ ನಿಮ್ಮ ಎಲೆಯಿಂದ ಊಟಮಾಡುತ್ತಾನೆ" ಅಂತ.

ಶ್ರೀರಾಮಕೃಷ್ಣರು: "ಏಕೆ ನನ್ನ ಎಲೆಯಿಂದ? ನನ್ನ ಎಲೆಯಿಂದ ಏಕೆ?"

ರಾಮು: "ನೀವೇನೊ ಬೇಡ ಅಂತ ಹೇಳುತ್ತೀರಿ. ಆತ ಬಿಡುತ್ತಾನೇನು?"

ನಿತ್ಯಗೋಪಾಲ ಭಾವಾವಿಷ್ಟನಾಗಿರುವುದನ್ನು ನೋಡಿ ಪರಮಹಂಸರು ಆತನ ಬಾಯಿಗೆ ಒಂದೆರಡು ತುತ್ತು ಅನ್ನ ಹಾಕಿದರು.

ದೋಣಿ ಮಾಡಿಕೊಂಡು ಕೆಲವು ಕೊನ್ನಗರದ ಭಕ್ತರು ಬರುತ್ತಿದಾರೆ. ಅವರು ಕೀರ್ತನೆ ಮಾಡುತ್ತ ಮಾಡುತ್ತ ಪರಮಹಂಸರ ಕೊಠಡಿಯನ್ನು ಪ್ರವೇಶಮಾಡಿದರು. ಕೀರ್ತನೆ ಮುಗಿದ ನಂತರ ಅವರು ಸ್ವಲ್ಪ ಉಪಹಾರ ಮಾಡಲು ರೂಮನ್ನು ಬಿಟ್ಟು ಹೊರಕ್ಕೆ ಹೋದರು. ಕೀರ್ತನೆಗಾರ, ನರೋತ್ತಮ ಪರಮಹಂಸರ ಕೊಠಡಿಯಲ್ಲಿ ಕುಳಿತಿದಾನೆ. ಪರಮಹಂಸರು ನರೋತ್ತಮ ಮೊದಲಾದವರಿಗೆ ಹೇಳುತ್ತಿದಾರೆ, "ಇವರದು ಬಹಳ ಸಪ್ಪೆ ಹಾಡುಗಳು. ಹಾಡು ಅಂಥವಾಗಿರಬೇಕು, ಎಲ್ಲರೂ ಎದ್ದು ಸುಮ್ಮನೆ ಕುಣಿಯಬೇಕು. ಈ ವಿಧದ ಹಾಡುಗಳನ್ನು ಹಾಡಬೇಕು:

ಗೌರಾಂಗನು ಹುಟ್ಟಿದೂರು
ಅವನ ಪ್ರೇಮ ಹಿಲ್ಲೋಲದಿ
ಸ್ಪಂದಿಸುತಿದೆ ಮೋದದಿ!

ಅದರೊಡನೆ ಈ ಚರಣಗಳನ್ನು:

ಹರಿನಾಮವನು ನುತಿಸಿ, ಆನಂದಭಾಷ್ಪವನು
ಕರೆವಣ್ಣತಮ್ಮದಿರು ಇವರು ನೋಡು! ......
ಒದೆಯನಿತ್ತರು, ಹರಿಯ ಸುಧೆಯನೇ ನೀಡುವರು! ....

ಮತ್ತೆ ಇದನ್ನು:

ಗೌರಾಂಗ ನಿತ್ಯಾನಂದರೆನ್ನುವ
ದಿವ್ಯಸೋದರವರ್ಯರೇ, ......"

ಈಗ ಭಕ್ತರು ಪ್ರಸಾದ ಸ್ವೀಕರಿಸುತ್ತಿದಾರೆ. ಎಲ್ಲರೂ ತೃಪ್ತಿಕರವಾಗಿ ಊಟಮಾಡಿದರು. ಪರಮಹಂಸರು ಮಾಸ್ಟರಿಗೆ ಹೇಳಿದರು, "ಮುಖರ್ಜಿಗಳಿಗೆ ಹೇಳಲಿಲ್ಲವೇನು? ಬಾವುಲರಿಗೆ ಊಟಕ್ಕೆ ಹಾಕುವಂತೆ ಸುರೇಂದ್ರನಿಗೆ ಹೇಳು" ಅಂತ.

ವಿಪಿನಸರ್ಕಾರ ಬಂದಿದಾನೆ. ಭಕ್ತರು ಆತನ ಪರಿಚಯವನ್ನು ಪರಮಹಂಸರಿಗೆ ಮಾಡಿಕೊಟ್ಟರು. ಪರಮಹಂಸರು ಎದ್ದು ಕುಳಿತು ಭಕ್ತರಿಗೆ ಹೇಳಿದರು, "ಈತನಿಗೆ ಒಂದು ಆಸನ ಹಾಕಿ ಎಲಡಿಕೆ ಕೊಡಿ"

ಅಂತ. ಅವರು ವಿನಯದಿಂದ ಆತನಿಗೆ ಹೇಳಿದರು, "ನಿಮ್ಮನ್ನು ವಿಚಾರಿಸಲು ಸಾಧ್ಯವಾಗಲಿಲ್ಲ; ಇಂದು ಹೆಚ್ಚು ಗಲಾಟೆ" ಅಂತ.

ಗಿರೀಂದ್ರನನ್ನು ನೋಡಿ ಪರಮಹಂಸರು ಬಾಬುರಾಮನಿಗೆ ಹೇಳಿದರು, "ಇವನಿಗೊಂದು ಆಸನ ಹಾಕು" ಅಂತ. ನಿತ್ಯಗೋಪಾಲ ನೆಲದ ಮೇಲೆ ಕುಳಿತಿರುವುದನ್ನು ಕಂಡು ಒಬ್ಬ ಭಕ್ತನಿಗೆ ಹೇಳಿದರು, "ಆತನಿಗೂ ಒಂದು ಆಸನ ಹಾಕು" ಅಂತ.

ಸಿಂಥಿಯ ಕವಿರಾಜ ಮಹೇಂದ್ರ ಬಂದಿದಾನೆ. ಪರಮಹಂಸರು ನಗುತ್ತ ರಾಖಾಲನಿಗೆ ಸನ್ನೆಮಾಡಿದರು, "ಆತನಿಗೆ ನಿನ್ನ ಕೈ ತೋರಿಸು" ಅಂತ.

ರಾಮಲಾಲನ ಕಡೆ ತಿರುಗಿ ಪರಮಹಂಸರು ಹೇಳಿದರು, "ಗಿರೀಶ ಘೋಷನೊಡನೆ ಸ್ನೇಹ ಬೆಳಸಿಕೊ; ಆಗ ಒಂದು ಕಾಸೂಕರಿಮಣಿ ಇಲ್ಲದೆ ನಾಟಕ ನೋಡಿಬರಬಹುದು" ಅಂತ.

ನರೇಂದ್ರ ಹೊರಗಿನ ವರಾಂಡದಲ್ಲಿ ಹಾಜರಾನೊಡನೆ ಬಹಳ ಹೊತ್ತಿನಿಂದ ಹರಟೆ ಹೊಡೆಯುತ್ತಿದಾನೆ. ತನ್ನ ತಂದೆ ಕಾಲವಾದನಂತರ ನರೇಂದ್ರ ಬಹಳವಾಗಿ ಆರ್ಥಿಕ ಮುಗ್ಗಟ್ಟಿನಿಂದ ನರಳುತ್ತಿದಾನೆ. ಈಗ ನರೇಂದ್ರ ಕೊಠಡಿಯೊಳಕ್ಕೆ ಬಂದು ಕುಳಿತುಕೊಂಡ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನೀನು ಹಾಜರಾನೊಡನೆ ಕುಳಿತಿದ್ದೆಯೇನು? ನೀನು ವಿದೇಶಿ, ಆತ ವಿರಹಿ! ಹಾಜರಾನಿಗೂ ಕೂಡ ಒಂದು ಸಾವಿರದ ಐನೂರು ರೂಪಾಯಿ ಬೇಕಾಗಿದೆ. (ನಗು.)

"ಹಾಜರಾ ಹೇಳುತ್ತಾನೆ, 'ನರೇಂದ್ರನಿಗೆ ಎಲ್ಲೋ ಅಲ್ಪಸ್ವಲ್ಪ ರಜೋಗುಣದ ಸ್ಪರ್ಶವಿದ್ದರೂ ಆತ ನೂರಕ್ಕೆ ನೂರು ಭಾಗ ಸತ್ತ್ವಗುಣಿಯಾಗಿಬಿಟ್ಟಿದಾನೆ. ಆದರೆ ನಾನು ನೂರಕ್ಕೆ ನೂರಿಪ್ಪತ್ತೈದು ಭಾಗ ವಿಶುದ್ಧ ಸತ್ತ್ವಗುಣಿಯಾಗಿಬಿಟ್ಟಿದೇನೆ' ಅಂತ. (ಎಲ್ಲರೂ ನಗುತ್ತಾರೆ.)

"ನಾನು ಹಾಜರಾನಿಗೆ ಹೇಳಿದೆ, 'ನೀನು ಕೇವಲ ವಿಚಾರದಲ್ಲೇ ತೊಡಗೋದರಿಂದ ಒಣಮರದಂತೆ ಕಾಣುತ್ತಿದ್ದೀಯೆ' ಅಂತ. ಆತ ಹೇಳಿದ, 'ಅದಲ್ಲ, ನಾನು ಸೌರಸುಧೆಯನ್ನು ಪಾನಮಾಡುತ್ತಿರೋದರಿಂದ ಒಣಮರದಂತೆ ಕಾಣುತ್ತಿದೇನೆ' ಅಂತ.

"ನಾನು ಶುದ್ಧ ಭಕ್ತಿಯ ಸಂಬಂಧವಾಗಿ ಮಾತನಾಡುವಾಗ ಆತನಿಗೆ ಹೇಳೋದುಂಟು, 'ಶುದ್ಧಭಕ್ತ ಧನಕನಕಾದಿಗಳಾವುದಕ್ಕೂ ಪ್ರಾರ್ಥಿಸೋ

ದಿಲ್ಲ' ಅಂತ. ಆತ ಹೇಳೋದುಂಟು, 'ಆತನ ಕೃಪಾಪ್ರವಾಹ ಬಂದಾಗ ನದಿಗಳೆಲ್ಲಾ ಉಕ್ಕಿ ಹರಿಯಲಾರಂಭಿಸುತ್ತವೆ; ಕೆರೆಕಟ್ಟೆಕುಂಟೆಗಳೆಲ್ಲ ತುಂಬಿತುಳುಕಾಡಲಾರಂಭಿಸುತ್ತವೆ. ಅದೇರೀತಿಯಾಗಿ ಶುದ್ಧ ಭಕ್ತಿಯೂ ಲಭಿಸುತ್ತದೆ, ಷಡೈಶ್ವರ್ಯವೂ ದೊರಕುತ್ತವೆ; ಧನಕನಕಾದಿಗಳೂ ದೊರಕುತ್ತವೆ' ಅಂತ."

ಪರಮಹಂಸರ ಕೊಠಡಿಯಲ್ಲಿ ನರೇಂದ್ರಾದಿ ಅನೇಕ ಭಕ್ತರು ಕುಳಿತಿದಾರೆ. ಗಿರೀಶನೂ ಬಂದು ಕುಳಿತುಕೊಂಡ.

ಶ್ರೀರಾಮಕೃಷ್ಣರು ಗಿರೀಶನಿಗೆ: "ನಾನು ನರೇಂದ್ರನನ್ನು ಆತ್ಮಸ್ವರೂಪ ಅಂತ ಭಾವಿಸುತ್ತೇನೆ. ನಾನು ಆತನ ಅನುಚರ."

ಗಿರೀಶ: "ನೀವು ಯಾರನ್ನು ತಾನೆ ಅನುಸರಿಸುತ್ತಿಲ್ಲ?"

ಶ್ರೀರಾಮಕೃಷ್ಣರು ನಗುತ್ತ: "ಆತನದು ಪುರುಷಭಾವ, ನನ್ನದು ಪ್ರಕೃತಿಭಾವ. ನರೇಂದ್ರನದು ತುತ್ತತುದಿಯ ಆಲಯ, ಅಖಂಡಾಲಯ."

ಗಿರೀಶ ಹೊರಗಡೆಗೆ ಹುಕ್ಕ ಸೇದಲು ಹೋದ.

ನರೇಂದ್ರ ಶ್ರೀರಾಮಕೃಷ್ಣರಿಗೆ: "ಗಿರೀಶಘೋಷನೊಡನೆ ಮಾತುಕತೆಯಾಡಿದೆ. ಆತ ಒಬ್ಬ ದೊಡ್ಡ ಮನುಷ್ಯನೆ. ನಾವು ನಿಮ್ಮ ವಿಷಯವಾಗಿ ಮಾತನಾಡಿದೆವು."

ಶ್ರೀರಾಮಕೃಷ್ಣರು: "ನನ್ನ ವಿಷಯವಾಗಿ ಏನನ್ನು?"

ನರೇಂದ್ರ: "ನೀವು ನಿರಕ್ಷರಕುಕ್ಷಿಗಳು, ನಾವು ಮಹಾ ಪಂಡಿತರು ಎಂಬಿವೇಮೊದಲಾದ ವಿಷಯಗಳ ಸಂಬಂಧವಾಗಿ ಮಾತನಾಡಿದೆವು." (ನಗು.)

ಮಣಿಮಲ್ಲಿಕ ಶ್ರೀರಾಮಕೃಷ್ಣರಿಗೆ: "ನೀವು ಯಾವುದನ್ನೂ ಓದದೇನೇ ಪಂಡಿತರಾಗಿಬಿಟ್ಟಿದೀರಿ."

ಶ್ರೀರಾಮಕೃಷ್ಣರು: "ಸತ್ಯವಾಗಿ ಹೇಳುತ್ತೇನೆ, ನಾನು ವೇದಾಂತ ಮೊದಲಾದ ಶಾಸ್ತ್ರಗಳನ್ನು ಓದಲಿಲ್ಲವಲ್ಲ ಅಂತ ಒಂದು ಕಿಂಚತ್ತೂ ದುಃಖವಾಗುತ್ತಿಲ್ಲ. ನನಗೆ ಗೊತ್ತಾಗಿದೆ ವೇದಾಂತದ ಸಾರ ಬ್ರಹ್ಮ ಸತ್ಯ ಜಗತ್ ಮಿಥ್ಯಾ ಅಂತ. ಗೀತೆಯ ಸಾರವೇನು? ಗೀತೆ ಎಂಬ ಪದವನ್ನು ಒಂದು ಹತ್ತು ಸಾರಿ ಉಚ್ಚರಿಸಿದರೆ ಅದು ಏನಾಗಿ ಕೇಳಿ ಬರುತ್ತದೊ ಅದೇನೆ. ಅದು 'ತ್ಯಾಗಿ, ತ್ಯಾಗಿ' ಅಂತ ಕೇಳಿಬರುತ್ತದೆ.

"ಶಾಸ್ತ್ರದ ಸಾರವನ್ನು ಗುರುಮುಖೇಣ ಕೇಳಿ ತಿಳಿದುಕೋಬೇಕು.

ಬಳಿಕ ಸಾಧನೆ ಭಜನೆಯಲ್ಲಿ ತೊಡಗಬೇಕು. ಒಬ್ಬ ಒಬ್ಬನಿಗೆ ಒಂದು ಪತ್ರ ಬರೆದಿದ್ದ, ಅದನ್ನು ಓದೋಕೆ ಮುನ್ನವೇ ಅದು ಹಾಳಾಗಿ ಹೋಗಿತ್ತು. ಆಗ ಎಲ್ಲರೂ ಕೂಡಿ ಹುಡುಕಲಾರಂಭಿಸಿದರು. ಯಾವಾಗ ಆ ಪತ್ರ ಮತ್ತೆ ಸಿಕ್ಕಿತೋ ಆಗ ಅದನ್ನು ಓದಿ ನೋಡಿದಾಗ ಅದರಲ್ಲಿ ಬರೆದಿತ್ತು, 'ಐದು ಸೇರು ಮಿಠಾಯಿ ಮತ್ತು ಒಂದು ಪಂಚೆಯನ್ನು ಕೊಂಡು ಕಳುಹಿಸು' ಅಂತ. ಬಳಿಕ ಆ ಪತ್ರವನ್ನು ಬಿಸಾಡಿ ಐದು ಸೇರು ಮಿಠಾಯಿ ಒಂದು ಪಂಚೆ ಕೊಂಡುಕೊಳ್ಳಲು ಆತ ಹೊರಟ. ಅದೇ ರೀತಿಯಾಗಿ ಶಾಸ್ತ್ರಗಳ ಸಾರವೇನೆಂಬುದನ್ನು ಅರಿತುಕೊಂಡಮೇಲೆ ಮತ್ತೆ ಅವುಗಳ ಆವಶ್ಯಕತೆಯೇನಿದೆ? ಬಳಿಕ ಸಾಧನೆ ಭಜನೆಯಲ್ಲಿ ತೊಡಗಬೇಕು."

ಈಗ ಗಿರೀಶ ಕೊಠಡಿಗೆ ಬಂದ.

ಶ್ರೀರಾಮಕೃಷ್ಣರು ಗಿರೀಶನಿಗೆ: "ಏನದು? ನನ್ನ ವಿಷಯವಾಗಿ ನೀವು ಏನೇನೊ ಮಾತನಾಡಿದರಂತಲ್ಲ? ನಾನು ಉಂಡು ತಿಂದು ಸುಮ್ಮನಿದ್ದೇನೆ."

ಗಿರೀಶ: "ನಿಮ್ಮ ವಿಷಯವಾಗಿ ನಾವು ಇನ್ನೇನು ತಾನೆ ಮಾತನಾಡಿಕೊಳ್ಳಬಹುದು. ನೀವು ಒಬ್ಬ ಸಾಧುವೇನು?"

ಶ್ರೀರಾಮಕೃಷ್ಣರು: "ನಾನು ಸಾಧು-ಗೀಧು ಏನಲ್ಲ. ಸತ್ಯವಾಗಿಯೂ ನಾನು ಒಬ್ಬ ಸಾಧು ಅಂತ ನನಗೆನಿಸುತ್ತಿಲ್ಲ."

ಗಿರೀಶ: "ಹುಡುಗಾಟಿಕೆಯಲ್ಲಿಯೂ ನಿಮ್ಮನ್ನು ಸೋಲಿಸೋಕಾಗಲಿಲ್ಲವಲ್ಲ!"

ಶ್ರೀರಾಮಕೃಷ್ಣರು: "ನಾನು ಕೆಂಪು ಅಂಚಿನ ಪಂಚೆ ಉಟ್ಟು ಜಯಗೋಪಾಲಸೇನನ ಮನೆಗೆ ಹೋಗಿದ್ದೆ. ಅಲ್ಲಿ ಕೇಶವಸೇನ ಇದ್ದ. ಕೇಶವಸೇನ ನನ್ನ ಕೆಂಪು ಅಂಚಿನ ಪಂಚೆಯನ್ನು ನೋಡಿ ಹೇಳಿದ, 'ಏನು ಸಮಾಚಾರ? ಬಣ್ಣದ ಸ್ಫುರಣ ಇಂದು! ಕೆಂಪು ಅಂಚಿನ ಪ್ರದರ್ಶನ ಇಂದು!' ಅಂತ. ನಾನು ಹೇಳಿದೆ, 'ಕೇಶವಸೇನನ ಮನಸ್ಸನ್ನು ಸೆಳೆಯಬೇಕಾಗಿದೆಯಲ್ಲ, ಅದಕ್ಕಾಗಿ ಈ ಪ್ರದರ್ಶನ!' ಅಂತ."

ಈಗ ಮತ್ತೆ ನರೇಂದ್ರ ಹಾಡಲು ಹೋಗುವನು. ಶ್ರೀರಾಮಕೃಷ್ಣರು ತಂಬೂರಿಯನ್ನು ಗೂಟದಿಂದ ಬಿಚ್ಚಿತರುವಂತೆ ಮಾಸ್ಟರಿಗೆ ಹೇಳಿದರು. ನರೇಂದ್ರ ಅದನ್ನು ಬಹಳ ಹೊತ್ತಿನಿಂದ ಶ್ರುತಿಮಾಡುತ್ತಲೇ ಇದಾನೆ. ಪರಮಹಂಸರಿಗೆ ಮತ್ತು ಉಳಿದ ಭಕ್ತರಿಗೆ ಇದನ್ನು ನೋಡಿ ಬಹಳ

ಬೇಜಾರಾಯಿತು. ಆಗ ವಿನೋದ ಹೇಳಿದ, "ಇಂದು ಶ್ರುತಿಮಾಡೋ ಕೆಲಸವೆ, ಹಾಡೋದು ಇನ್ನೊಂದು ದಿನ" ಅಂತ. (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ನಗುತ್ತಿದಾರೆ ಮತ್ತು ಹೇಳುತ್ತಿದಾರೆ, "ಆ ತಂಬೂರಿಯನ್ನು ಒಡೆದು ಪುಡಿಪುಡಿ ಮಾಡಿಬಿಡಬೇಕು ಅಂತ ಎನಿಸುತ್ತಿದೆ ನನಗೆ! ಏನಿದು, ಇನ್ನೂ 'ಟಂ, ಟಂ' ಅಂತಲೇ ಇದಾನೆ!—ಬಳಿಕ ಅದರ ಮೇಲೆ, 'ತಾನಾ—ನಾನಾ—ನೇರೆ—ನುಮ್' ಅಂತ ಅಭ್ಯಾಸಮಾಡುತ್ತಾನೆ ಅಂತ ಕಾಣುತ್ತೆ!" ಎಂದು.

ಭವನಾಥ: "ಸಂಗೀತ ಆರಂಭವಾಗುವುದಕ್ಕೆ ಮುನ್ನ ಹೀಗೆಯೇ ಬೇಜಾರು ಆಗುತ್ತದೆ."

ನರೇಂದ್ರ ಇನ್ನೂ ಶ್ರುತಿಮಾಡುತ್ತಲೆ: "ಕಲೆ ಗೊತ್ತಿಲ್ಲದವರಿಗೆ ಹಾಗಾಗುತ್ತದೆ."

ಶ್ರೀರಾಮಕೃಷ್ಣರು: "ನೋಡು! ನಮ್ಮ ಬಾಯಿಗಳನ್ನೆಲ್ಲ ಮುಚ್ಚಿಸಿಬಿಟ್ಟ!"

ನರೇಂದ್ರ ಹಾಡಲಾರಂಭಿಸಿದ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ನಿತ್ಯಗೋಪಾಲ ಮತ್ತು ಉಳಿದ ಭಕ್ತರು ನೆಲದ ಮೇಲೆ ಕುಳಿತು ಕೇಳುತ್ತಿದಾರೆ.

ನರೇಂದ್ರ ಹಾಡಿದ:

ನನ್ನ ಹೃದಯದ ದಿವ್ಯ ಸೂತ್ರಧಾರಿಣಿ ನೀನು
ತೊಡೆಯ ತೊಟ್ಟಿಲೊಳಿಟ್ಟು ಪಾಲಿಸಿರುವೆ! . . . . . .

ಬಳಿಕ ಹಾಡಿದ:

ಹೃದಯದೊಂದೇ ತಂತಿಯನು ಮಿಡಿಮಿಡಿದು ನುಡಿಯೊ ಇನ್ನು
ಎದೆಗೆ ಸುಧೆಯನು ಕರೆವ ಮಾತಾಯ ಶ್ರೀ ನಾಮವನ್ನು!

ಮತ್ತೆ:

ಮಿರುಗುತಿದೆ ನಿನ್ನ ಅಪರೂಪ ರಾಶಿ ನಿಬಿಡಾಂಧಕಾರದಲ್ಲಿ
ನಿನ್ನ ಸದರಿಂದಲೇ ನೆನೆವರೌ ಯೋಗಿಗಳು ಗಿರಿಗುಹೆಗಳಲ್ಲಿ! . . . .

ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ ಕೆಳಕ್ಕೆ ಇಳಿದು ಬಂದು ನರೇಂದ್ರನ ಹತ್ತಿರ ಕುಳಿತಿದಾರೆ. ಆ ಸ್ಥಿತಿಯಲ್ಲೇ ಮಾತನಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಹಾಡಲೇನು? ಥೂ ಥೂ! (ನಿತ್ಯಗೋಪಾಲನಿಗೆ) ನೀನು ಏನು ಹೇಳುತ್ತೀಯಾ? ಉದ್ದೀಪನೆ ಪಡೆಯೋದಕ್ಕಾಗಿ

ಹಾಡನ್ನು ಕೇಳಬೇಕು. ಬಳಿಕ ಏನು ಬೇಕಾದರು ಆಗಲಿ, ಏನುಬೇಕಾದರು ಹೋಗಲಿ ಚಿಂತಿಸಬೇಕಾಗಿಲ್ಲ.

"ಆತ ಬೆಂಕಿ ಹೊತ್ತಿಸಿದಾನೆ. ಅದು ಒಳ್ಳೆಯದೆ. ಬಳಿಕ ಪ್ರಶಾಂತತೆ. ಅದೂ ಒಳ್ಳೆಯದೆ. ನಾನು ಪ್ರಶಾಂತನಾಗಿದೇನೆ; ನೀನೂ ಹಾಗೆಯೇ ಇರು. ಬೇಕಾಗಿರೋದು ಆನಂದರಸದಲ್ಲಿ ಮಗ್ನವಾಗಿ ಇರೋದು.

"ಹಾಡಲೇನು? ಒಳ್ಳೆಯದು, ಹಾಡಿದರೂ ಆಯಿತಲ್ಲ. ನೀರು ಪ್ರಶಾಂತ ವಾಗಿದ್ದರೂ ನೀರೆ, ಅಲ್ಲೋಲಕಲ್ಲೋಲವಾಗಿದ್ದರೂ ನೀರೆ."

ನರೇಂದ್ರ ಪರಮಹಂಸರ ಹತ್ತಿರ ಕುಳಿತಿದಾನೆ. ತನ್ನ ಮನೆಯಲ್ಲಿನ ಆರ್ಥಿಕ ಮುಗ್ಗಟ್ಟಿನ ಸಂಬಂಧವಾಗಿ ಸತತ ಚಿಂತಿಸುತ್ತಿದಾನೆ. ಈಗ ಆತನಿಗೆ ಇಪ್ಪತ್ತಮೂರು ವಯಸ್ಸು. ಪರಮಹಂಸರು ಆತನ ಕಡೆ ನೆಟ್ಟದೃಷ್ಟಿಯಿಂದ ನೋಡುತ್ತಿದಾರೆ.

ಶ್ರೀರಾಮಕೃಷ್ಣರು ನಗುತ್ತ ನರೇಂದ್ರನಿಗೆ: "ನೀನೇನೊ 'ಖ' (ಆಕಾಶ). ಆದರೆ ಟ್ಯಾಕ್ಸ್ (ಆರ್ಥಿಕ ಮುಗ್ಗಟ್ಟಿನ ಯೋಚನೆ) ಇಲ್ಲದೆ ಇದ್ದರೆ! (ಎಲ್ಲರೂ ನಗುತ್ತಾರೆ.)

"ಕೃಷ್ಣಕಿಶೋರ ಹೇಳುತ್ತಿದ್ದ, ತಾನು 'ಖ' ಅಂತ. ಒಂದು ದಿನ ಆತನ ಮನೆಗೆ ಹೋಗಿ ನೋಡುತ್ತೇನೆ, ಆತ ಚಿಂತಾಕ್ರಾಂತನಾಗಿ ಕುಳಿತಿದಾನೆ; ಎಂದಿನಂತೆ ಮಾತನಾಡುತ್ತಿಲ್ಲ. ನಾನು ಆತನನ್ನು ಕೇಳಿದೆ, 'ಏನಾಗಿಬಿಟ್ಟಿದೆ? ಏತಕ್ಕೆ ಚಿಂತಾಕ್ರಾಂತನಾಗಿದೀಯೆ?' ಅಂತ. ಆತ ಉತ್ತರವಿತ್ತ, 'ಟ್ಯಾಕ್ಸ್‌ವಾಲ ಬಂದಿದ್ದ. ಆತ ಹೇಳಿಹೋಗಿದಾನೆ, "ನೀನೇನಾದರು ಟಾಕ್ಸ್ ಕೊಡದೆ ಇದ್ದರೆ ನಿನ್ನ ಪಾತ್ರೆ ಪದಾರ್ಥಗಳನ್ನೆಲ್ಲ ಹರಾಜು ಹಾಕಿಬಿಡುತ್ತೇನೆ" ಅಂತ. ಅದಕ್ಕಾಗಿ ನನಗೆ ಯೋಚನೆ ಹತ್ತಿಬಿಟ್ಟಿದೆ' ಎಂದು. ನಾನು ನಗುತ್ತ ನಗುತ್ತ ಹೇಳಿದೆ, 'ನೀನು ಅದಕ್ಕಾಗಿ ಏಕೆ ಚಿಂತಿಸಬೇಕು? ನೀನು 'ಖ' (ಆಕಾಶ). ತೆಗೆದುಕೊಂಡು ಹೋಗಲಿ, ಆ ನೀಚ ನಿನ್ನ ಪಾತ್ರೆ ಪದಾರ್ಥಗಳನ್ನು ತೆಗೆದುಕೊಂಡು ಹೋಗಲಿ. ಅವಕ್ಕು ನಿನಗು ಏನು ಸಂಬಂಧ?' ಅಂತ.

(ನರೇಂದ್ರನಿಗೆ) "ಅದಕ್ಕಾಗೇ ನಾನು ಹೇಳುತ್ತಿರೋದು ನೀನು 'ಖ' ಅಂತ. ಏಕೆ ಸುಮ್ಮನೆ ಚಿಂತಿಸುತ್ತಿದ್ದೀಯೆ? ಶ್ರೀಕೃಷ್ಣ ಅರ್ಜುನನಿಗೆ, 'ಅಷ್ಟಸಿದ್ಧಿಗಳಲ್ಲಿ ಒಂದು ದೊರೆತರೂ ಅದರಿಂದ ಕೆಲವು ಶಕ್ತಿಗಳನ್ನು ಪಡೆಯಬಹುದು, ಆದರೆ ನನ್ನನ್ನು ಮಾತ್ರ ಪಡೆಯೋಕಾಗೋದಿಲ್ಲ' ಅಂತ

ಹೇಳಿರೋದು ನಿನಗೆ ಗೊತ್ತೆ? ಸಿದ್ಧಿಯ ಮೂಲಕ ವಿಶೇಷವಾದ ಶಕ್ತಿ, ಬಲ, ಧನ ಇವನ್ನು ಪಡೆಯಬಹುದು, ಆದರೆ ಅದರಿಂದ ಭಗವಂತನನ್ನು ಪಡೆಯೋಕಾಗೋದಿಲ್ಲ.

"ಇನ್ನೊಂದು ವಿಷಯ. ಜ್ಞಾನಾಜ್ಞಾನಗಳನ್ನು ದಾಟಿ ಹೋಗಬೇಕು. ಜನರು ಹೇಳುವುದುಂಟು, 'ಆತ ಒಬ್ಬ ದೊಡ್ಡ ಜ್ಞಾನಿ' ಅಂತ; ಆದರೆ ವಾಸ್ತವಿಕವಾಗಿ ನೋಡಿದರೆ ಆತ ಆಗಿರೋದಿಲ್ಲ. ವಸಿಷ್ಠ ಒಬ್ಬ ದೊಡ್ಡ ಜ್ಞಾನಿ, ಆದರೂ ಆತ ಪುತ್ರಶೋಕದಿಂದ ದುಃಖಿತನಾಗಿದ್ದ. ಅದನ್ನು ನೋಡಿ ಲಕ್ಷ್ಮಣ ರಾಮನಿಗೆ ಹೇಳಿದ. 'ಹೇ ರಾಮ, ಏನಾಶ್ಚರ್ಯ! ಈತನೂ ಇಷ್ಟು ಶೋಕಾಕ್ರಾಂತನಾಗಿದಾನಲ್ಲ!' ಅಂತ ರಾಮ ಹೇಳಿದ, 'ಸಹೋದರ ಯಾರಿಗೆ ಜ್ಞಾನವಿರುವುದೊ, ಅವರಿಗೆ ಅಜ್ಞಾನವೂ ಇರುತ್ತದೆ; ಯಾರಿಗೆ ಬೆಳಕಿನ ಬೋಧೆ ಇರುತ್ತದೆಯೊ, ಅವರಿಗೆ ಅಂಧಕಾರದ ಬೋಧೆಯೂ ಇರುತ್ತದೆ; ಯಾರಿಗೆ ಒಳ್ಳೆಯದರ ಅರಿವು ಇರುತ್ತದೆಯೊ, ಅವರಿಗೆ ಕೆಟ್ಟದರ ಅರಿವೂ ಇರುತ್ತದೆ; ಯಾರಿಗೆ ಸುಖದ ಜ್ಞಾನ ವಿರುತ್ತದೆಯೊ; ಅವರಿಗೆ ದುಃಖದ ಜ್ಞಾನವೂ ಇರುತ್ತದೆ. ಸಹೋದರ, ನೀನು ಈ ದ್ವಂದ್ವಗಳನ್ನು ಮೀರಿ ಹೋಗು; ಸುಖದುಃಖಗಳನ್ನು ದಾಟಿ ಹೋಗು; ಜ್ಞಾನಾಜ್ಞಾನಗಳನ್ನು ದಾಟಿ ಹೋಗು' ಅಂತ. (ನರೇಂದ್ರನಿಗೆ) ಅದಕ್ಕಾಗಿಯೆ ನಾನು ನಿನಗೆ ಹೇಳುತ್ತಿರೋದು, 'ಜ್ಞಾನಾಜ್ಞಾನಗಳನ್ನು ದಾಟಿ ಹೋಗು' ಅಂತ."

ಪರಮಹಂಸರು ಮತ್ತೆ ಬಂದು ತಮ್ಮ ಚಿಕ್ಕಮಂಚದ ಮೇಲೆ ಕುಳಿತುಕೊಂಡಿದಾರೆ. ಭಕ್ತರು ಇನ್ನೂ ನೆಲದಮೇಲೇ ಕುಳಿತಿದಾರೆ. ಸುರೇಂದ್ರ ಪರಮಹಂಸರ ಹತ್ತಿರ ಕುಳಿತಿದಾನೆ. ಪರಮಹಂಸರು ಆತನ ಕಡೆ ದೃಷ್ಟಿಸಿ ನೋಡುತ್ತ ಬುದ್ಧಿವಾದವೀಯುತ್ತಿದಾರೆ.

ಶ್ರೀರಾಮಕೃಷ್ಣರು ಸುರೇಂದ್ರನಿಗೆ: "ಆಗಾಗ ಇಲ್ಲಿಗೆ ಬಂದು ಹೋಗುತ್ತಿರು. ನ್ಯಾಂಕ್ಟ ಹೇಳುತ್ತಿದ್ದ, 'ಚೆಂಬನ್ನು ಪ್ರತಿ ದಿನವೂ ಬೆಳಗಬೇಕು; ಇಲ್ಲದಿದ್ದರೆ ಅದು ಕಪ್ಪಾಗುತ್ತದೆ' ಅಂತ. ಸರ್ವದಾ ಸಾಧುಸಂಗ ಆವಶ್ಯಕ.

"ಸನ್ಯಾಸಿ ಕಾಮಕಾಂಚನವನ್ನು ತ್ಯಜಿಸಬೇಕು; ಆದರೆ ನೀವೇನೂ ಹಾಗೆ ಮಾಡಬೇಕಾಗಿಲ್ಲ. ನೀವು ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ

ವ್ಯಾಕುಲಚಿತ್ತದಿಂದ ಆತನನ್ನು ಕರೆಯಬೇಕು. ನೀವು ಮಾನಸಿಕವಾಗಿ ತ್ಯಾಗಮಾಡಬೇಕು.

"ವೀರ-ಭಕ್ತನಾಗದೆ ಇದ್ದರೆ ಮನುಷ್ಯ ಎರಡು ಕಡೆಗೂ ಮನಸ್ಸನ್ನಿಡಲಾರ. ಜನಕರಾಜ ಸಾಧನೆ ಭಜನೆ ಮಾಡಿ ಸಿದ್ಧಪುರುಷನಾಗಿ ಸಂಸಾರದಲ್ಲಿದ್ದ. ಆತ ಎರಡು ಕತ್ತಿಗಳನ್ನು ತಿರುಗಿಸುತ್ತಿದ್ದ: ಜ್ಞಾನದ್ದು ಕರ್ಮದ್ದು."

ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದರು :

ಈ ಜಗವೆಂಬುದು ಮೋಜಿನ ಮನೆಯೊ !
ಇದರೊಳು ನಾ ಮನಬಂದೊಲು ನಡೆವೆ.
ತಿನ್ನುವೆ—ಕುಡಿಯುವೆ—ಕುಣಿಯುವೆ—ನಲಿವೆ.
ಜನಕನ ತೇಜವ ಮೀರಿದರಾರೊ ?
ಇಹ-ಪರದಲ್ಲೂ ಕೊರತೆಯಿಲ್ಲದೊಲು
ಬಾಳಿದನವನು.
ಅದನೂ ಇದನೂ—ಎರಡನು ಹಿಡಿದು
ಕುಡಿದನು ತುಂಬಿದ ಹಾಲ್‌ಬಟ್ಟಲನು !

ಶ್ರೀರಾಮಕೃಷ್ಣರು : "ಚೈತನ್ಯದೇವ ಹೇಳಿರುವಂತೆ ನೀವು ಜೀವಿಗಳಿಗೆ ದಯೆಯನ್ನು, ಭಕ್ತರಿಗೆ ಸೇವೆಯನ್ನು ಮತ್ತು ಹರಿನಾಮಸಂಕೀರ್ತನೆಯನ್ನು ಮಾಡಬೇಕು.

(ಸುರೇಂದ್ರನಿಗೆ) "ನಾನು ಇದನ್ನೆಲ್ಲ ನಿನಗೆ ಏಕೆ ಹೇಳುತ್ತಿರುವೆನು ಗೊತ್ತೆ? ನೀನು ಒಬ್ಬ ವ್ಯಾಪಾರಿಯ ಆಫೀಸಿನಲ್ಲಿ ಕೆಲಸ ಮಾಡುತ್ತಿದೀಯೆ. ನೀನು ಅಲ್ಲಿ ಬಹಳವಾಗಿ ದುಡಿಯಬೇಕಾಗಿದೆ; ಅದಕ್ಕಾಗೇ ಇದನ್ನೆಲ್ಲ ನಿನಗೆ ಹೇಳುತ್ತಿರೋದು.

"ನೀನು ಆಫೀಸಿನಲ್ಲಿ ಸುಳ್ಳುವ್ಯವಹಾರವನ್ನು ಮಾಡುತ್ತಿದ್ದೀಯೆ, ಆದರೂ ನೀನು ತರೋದನ್ನು ತಿನ್ನುತ್ತಿದೇನೆ. ಇದಕ್ಕೆ ಕಾರಣ ಗೊತ್ತೆ? ನೀನು ದಾನಧರ್ಮಾದಿಕಾರ್ಯಗಳನ್ನು ಮಾಡುತ್ತಿರೋದರಿಂದ; 'ಕರಬೂಜದ ಹಣ್ಣಿಗಿಂತ ಅದರ ಬೀಜ ದೊಡ್ಡದು!' ಎಂಬ ನಾಣ್ನುಡಿಯಂತೆ ನೀನು ನಿನ್ನ ಸಂಪಾದನೆಗಿಂತ ಅಧಿಕವಾಗಿ ದಾನಧರ್ಮಾದಿ ಕಾರ್ಯಗಳನ್ನು ಮಾಡುತ್ತಿರೋದರಿಂದ.

"ಕೃಪಣರು ತರೋದನ್ನು ತಿನ್ನಲಾರೆ. ಅವರ ಹಣ ಈ ಕೆಲವು

ರೀತಿಯಾಗಿ ಪೋಲಾಗಿ ಹೋಗುತ್ತದೆ: ಮೊದಲನೆಯದಾಗಿ ವ್ಯಾಜ್ಯ ಮೂಲಕ; ಎರಡನೆಯದಾಗಿ ಕಳ್ಳಕಾಕರ ಮೂಲಕ: ಮೂರನೆಯದಾ ವೈದ್ಯನ ಮೂಲಕ; ನಾಲ್ಕನೆಯದಾಗಿ ದುಷ್ಟ ಮಕ್ಕಳ ದುಂದುಗಾರಿಕೆ ಮೂಲಕ.

"ನೀನು ದಾನ ಧ್ಯಾನ ಮಾಡುತ್ತಿದ್ದೀಯೆ. ಅದು ಬಹ ಒಳ್ಳೆಯದೆ. ಯಾರಲ್ಲಿ ಹಣವಿರುವುದೊ ಅವರು ದಾನಧರ್ಮಾದಿಕಾರ್ಯ ಗಳನ್ನು ಮಾಡಬೇಕಾದ್ದೆ. ಕೃಪಣನ ಧನ ದುರ್ವ್ಯಯವಾಗುತ್ತದೆ; ದಾತ ಧನ ಸುವ್ಯಯವಾಗುತ್ತದೆ, ಸತ್ ಕಾರ್ಯಗಳಲ್ಲಿ ವ್ಯಯವಾಗುತ್ತ ಕಾಮಾರಪುಕುರಿನಲ್ಲಿ ರೈತರು ಕಾಲುವೆ ತೆಗೆದು ಗದ್ದೆಗೆ ನೀರು ಹಾಯಿ ತ್ತಾರೆ. ಒಮ್ಮೊಮ್ಮೆ ನೀರು ಗದ್ದೆಗೆ ಬಹಳ ಅಧಿಕವಾಗಿ ಬಂದು ತೆ ಯನ್ನು ಕೊರೆದು ಬೆಳೆಯನ್ನು ನಷ್ಟಮಾಡಿಬಿಡುತ್ತದೆ. ಅದಕ್ಕಾಗಿ ರೈತ ತೆವರಿಗಳಲ್ಲಿ ಅಲ್ಲಿ ಇಲ್ಲಿ ರಂಧ್ರಗಳನ್ನು ಮಾಡಿರುತ್ತಾರೆ. ಅಧಿಕವಾ ಬಂದ ನೀರು ಈ ರಂಧ್ರಗಳ ಮೂಲಕ ಹರಿದು ಹೋಗಿಬಿಡೋದರಿಂ ತೆವರಿಗಳು ಕೊಚ್ಚಿಹೋಗವು. ಜೊತೆಗೆ, ಅಧಿಕವಾಗಿ ಬಂದ ನೀರು ಹರಿ ಹೊರಟುಹೋಗೋದರಿಂದ ಅದು ಗದ್ದೆಗೆ ಮೆಕ್ಕಲು ಮಣ್ಣನ್ನು ತರುತ್ತ ಆ ಮಣ್ಣು ಗದ್ದೆಯ ಆಬಾದನ್ನು ಹೆಚ್ಚಿಸುತ್ತದೆ; ಒಳ್ಳೇ ಬೆಳೆಯನ್ನು ಕೊ ತ್ತದೆ. ಯಾರು ದಾನಧರ್ಮಾದಿಕಾರ್ಯಗಳನ್ನು ಮಾಡುತ್ತಾನೊ ಆತನಿ ಒಳ್ಳೆ ಫಲ ದೊರೆಯುತ್ತದೆ; ನಾಲ್ಕು ಪುರುಷಾರ್ಥಗಳೂ— ಧರ್ಮ ಅರ್ಥ, ಕಾಮ, ಮೋಕ್ಷ— ದೊರೆಯುತ್ತವೆ."

ಭಕ್ತರು ದಾನಧರ್ಮಾದಿಕಾರ್ಯಗಳ ಸಂಬಂಧವಾಗಿ ಪರಮಹಂಸ ಶ್ರೀಮುಖದಿಂದ ಬಂದದ್ದನ್ನೆಲ್ಲ ಏಕಾಗ್ರಚಿತ್ತದಿಂದ ಕೇಳಿದರು.

ಸುರೇಂದ್ರ: "ನನಗೆ ಸರಿಯಾಗಿ ಧ್ಯಾನ ಮಾಡೋಕೆ ಆಗುತ್ತಿ ಆಗಾಗ 'ತಾಯಿ, ತಾಯಿ' ಅಂತ ಹೇಳುತ್ತೇನೆ. ಮಲಗುವ ಸಮಯದ 'ತಾಯಿ, ತಾಯಿ' ಎಂಬುದಾಗಿ ಹೇಳುತ್ತ ಹೇಳುತ್ತ ನಿದ್ರಾವಸ್ಥೆಗೆ ಜಾ ಬೀಳುತ್ತೇನೆ."

ಶ್ರೀರಾಮಕೃಷ್ಣರು: "ಅದೇ ಬೇಕಾದಷ್ಟು. ಸ್ಮರಣ ಮನ ಮಾಡಿದಂತಾಯಿತು, ಅಲ್ಲವೆ?

"ಯೋಗಗಳಲ್ಲಿ ಎರಡು ವಿಧ: ಮನೋಯೋಗ, ಕರ್ಮಯೋ ಗುರುವಿನ ಉಪದೇಶಕ್ಕನುಗುಣವಾಗಿ ಪೂಜೆ, ತೀರ್ಥಯಾತ್ರೆ, ಜೀವಸೇ

ಇವನ್ನೆಲ್ಲ ಮಾಡುವುದಕ್ಕೆ ಕರ್ಮಯೋಗ ಅಂತ ಹೆಸರು. ಜನಕಾದಿಗಳು ಯಾವ ಕರ್ಮಗಳನ್ನು ಮಾಡುತ್ತಿದ್ದರೊ ಅವಕ್ಕೂ ಕರ್ಮಯೋಗ ಅಂತ ಹೆಸರು. ಯೋಗಿಗಳು ಮಾಡುವ ಸ್ಮರಣ ಮನನಕ್ಕೆ ಮನೋಯೋಗ ಅಂತ ಹೆಸರು.

"ಕೆಲವು ವೇಳೆ ನಾನು ಕಾಳೀದೇವಾಲಯದಲ್ಲಿ ಕುಳಿತು ಭಾವಿಸಿ ಕೊಳ್ಳುತ್ತೇನೆ, 'ತಾಯಿ, ಮನಸ್ಸು ಎಂಬುದು ನೀನೇ ಅಲ್ಲದೆ ಮತ್ತೆ ಬೇರೆ ಏನೂ ಅಲ್ಲ' ಅಂತ. ನನ್ನ ದೃಷ್ಟಿಯಿಂದ ಶುದ್ಧ ಮನಸ್ಸು ಎಂದರೂ ಒಂದೆ, ಶುದ್ಧ ಬುದ್ಧಿ ಎಂದರೂ ಒಂದೆ, ಶುದ್ಧ ಆತ್ಮ ಎಂದರೂ ಒಂದೆ."

ಇನ್ನೇನು ಸಾಯಂಕಾಲವಾಗುವುದರಲ್ಲಿದೆ. ಬಂದಿದ್ದ ಭಕ್ತರಲ್ಲಿ ಅನೇಕರು ಪರಮಹಂಸರಿಗೆ ಪ್ರಣಾಮಮಾಡಿ ಮನೆಗೆ ಹಿಂದಿರುಗುತ್ತಿದಾರೆ. ಪರಮಹಂಸರು ಪಶ್ಚಿಮ ವರಾಂಡಕ್ಕೆ ಹೋದರು. ಭವನಾಥ ಮತ್ತು ಮಾಸ್ಟರ್ ಅವರನ್ನು ಹಿಂಬಾಲಿಸಿದರು.

ಶ್ರೀರಾಮಕೃಷ್ಣರು ಭವನಾಥನಿಗೆ: "ನೀನು ಇಲ್ಲಿಗೆ ಬಹಳ ಅಪರೂಪವಾಗಿ ಬರುತ್ತಿರುವೆಯಲ್ಲ ಏಕೆ?"

ಭವನಾಥ ನಗುತ್ತ: "ನಾನು ಸಾಮಾನ್ಯವಾಗಿ ಹದಿನೈದು ದಿನಕ್ಕೊಮ್ಮೆ ಇಲ್ಲಿಗೆ ಬರುತ್ತಿದೇನೆ. ಅಂದು ನಿಮ್ಮನ್ನು ರಸ್ತೆಯಲ್ಲೇ ನೋಡಿ ಬಿಟ್ಟೆ, ಆದಕ್ಕಾಗಿ ಇದುವರೆಗೆ ಇಲ್ಲಿಗೆ ಬರಲಿಲ್ಲ."

ಶ್ರೀರಾಮಕೃಷ್ಣರು: "ಅದು ಹೇಗೆ? ಬರಿಯ ದರ್ಶನದಿಂದಲೇ ಏನು ದೊರೆತೀತು? ಸ್ಪರ್ಶನ, ಆಲಾಪನ ಇವೂ ಆಗಬೇಕು."

ಸಾಯಂಕಾಲವಾಯಿತು. ದೇವಾಲಯಗಳಿಂದ ಮಂಗಳಾರತಿಯ ಶಬ್ದ ಕೇಳಲಾರಂಭಿಸಿದೆ. ಇಂದು ಫಾಲ್ಗುಣ ಶುಕ್ಲ ಅಷ್ಟಮಿ. ಆರೇಳು ದಿನಗಳಾದನಂತರ ದೋಲ್‌ಪೂರ್ಣಿಮೆ ಜಾತ್ರೆ ನಡೆಯುತ್ತದೆ. ದೇವಾಲಯಗಳ ಶಿಖರಗಳು, ಪ್ರಾಂಗಣ, ಉದ್ಯಾನವನ, ಗಿಡಮರಗಳು ಚಂದ್ರನ ಕಿರಣದಿಂದ ಮನೋಹರ ರೂಪವನ್ನು ತಾಳಿವೆ. ಗಂಗೆ 'ಕಲ, ಕಲ' ಎಂದು ಶಬ್ದಮಾಡುತ್ತ ಉತ್ತರಾಭಿಮುಖವಾಗಿ ಹರಿಯುತ್ತಿದಾಳೆ. ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತು ಭಗವತಿಯ ಧ್ಯಾನ ಮಾಡುತ್ತಿದಾರೆ.

ಮಂಗಳಾರತಿ ಮುಗಿದಿದೆ. ಒಬ್ಬಿಬ್ಬ ಭಕ್ತರು ಇನ್ನೂ ತಮ್ಮ ಮನೆಗೆ ಹೋಗದೆ ಉಳಿದುಕೊಂಡಿದಾರೆ. ನರೇಂದ್ರ ಆಗಲೇ ಹೊರಟು

ಹೋಗಿದಾನೆ. ಪರಮಹಂಸರು ಭಾವಾವಿಷ್ಟರಾಗಿ ಅವರ ಕೊಠಡಿಗೆ ಈಶಾನ್ಯದಿಕ್ಕಿನಲ್ಲಿರುವ ಉದ್ದವರಾಂಡದಲ್ಲಿ ಸುಮ್ಮನೆ ಅಡ್ಡಾಡುತ್ತಿದಾರೆ. ಮಾಸ್ಟರ್ ಅವರನ್ನು ದೃಷ್ಟಿಸಿ ನೋಡುತ್ತ ಆ ವರಾಂಡದಲ್ಲೇ ನಿಂತಿದಾನೆ. ಪರಮಹಂಸರು ಇದ್ದಕ್ಕಿದ್ದಹಾಗೆ ಮಣಿಯನ್ನು ಸಂಬೋಧಿಸಿ ಹೇಳಿದರು, "ಆಹ! ನರೇಂದ್ರ ಎಷ್ಟು ಚೆನ್ನಾಗಿ ಹಾಡುತ್ತಾನೆ!" ಅಂತ.

ಮಾಸ್ಟರ್: "ಹೌದು, ಬಹಳ ಚೆನ್ನಾಗಿ ಹಾಡುತ್ತಾನೆ. 'ಮಿರುಗುತಿದೆ ನಿನ್ನ ಅಪರೂಪ ರಾಶಿ ನಿಬಿಡಾಂಧಕಾರದಲ್ಲಿ' ಎಂಬ ಹಾಡನ್ನು ಬಹಳ ಚೆನ್ನಾಗಿ ಹಾಡಿದ."

ಶ್ರೀರಾಮಕೃಷ್ಣರು: "ಹೌದು. ಆ ಹಾಡು ಬಹಳ ಗಹನವಾದ ಭಾವನೆಯಿಂದ ಕೂಡಿದೆ. ನನ್ನ ಮನಸ್ಸನ್ನು ಅದು ಇನ್ನೂ ಹಿಡಿದೆಳೆದು ನಿಲ್ಲಿಸಿರುವಂತೆ ತೋರುತ್ತಿದೆ."

ಮಾಸ್ಟರ್: "ಹೌದು, ನನಗೂ."

ಶ್ರೀರಾಮಕೃಷ್ಣರು: "ಅಂಧಕಾರದ ಮೇಲೆ ಧ್ಯಾನ, ಇದು ತಾಂತ್ರಿಕ ಮತ. ಆಗ ಸೂರ್ಯನ ಬೆಳಕು ಎಲ್ಲಿಗೆ ಹೋಗಿರುತ್ತದೆ?"

ಗಿರೀಶಘೋಷ ಕೊಠಡಿಯನ್ನು ಪ್ರವೇಶಿಸಿ ನಿಂತುಕೊಂಡಿದಾನೆ. ಪರಮಹಂಸರು ಹಾಡುತ್ತಿದಾರೆ:

ಕಾಲರೂಪೆ ದಿಗಂಬರೀ
ಹೃದಯಪದ್ಮ ಭಾಸ್ಕರೀ,
ನಿಜವಾಗಿಯು ಕಪ್ಪಗಿಹಳೆ ನನ್ನ ತಾಯಿ ಕಾಳಿ?

ಪರಮಹಂಸರು ಪ್ರೇಮೋನ್ಮತ್ತರಾಗಿ ಗಿರೀಶನ ಹೆಗಲ ಮೇಲೆ ತಮ್ಮ ಒಂದು ಕೈಯನ್ನಿಟ್ಟುಕೊಂಡು ನಿಂತು ಹಾಡುತ್ತಿದಾರೆ:

ಏತಕೆ, ಇನ್ನೇತಕೆ?
ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ
ಪುಣ್ಯಕ್ಷೇತ್ರಗಳೇತಕೆ? . . . . . .

ಮತ್ತೆ ಪರಮಹಂಸರು ಹಾಡುತ್ತಿದಾರೆ:

ಅರಿತೆ ನಾನು ಅರಿತೆ ನಾನು—ನಿಜದನೆಲೆಯನರಿತೆನು
ಭಾವದಂತರಂಗನರಿತ ವ್ಯಕ್ತಿಯೊಬ್ಬ ದೊರೆತನು . . . .

ಪರಮಹಂಸರ ದೃಷ್ಟಿ ಗಿರೀಶನ ಕಡೆ ಬೀಳುತ್ತ ಬೀಳುತ್ತ ಅವರ

ಪ್ರೇಮೋನ್ಮತ್ತತೆ ಇನ್ನೂ ಗಾಢವಾದಂತೆ ತೋರಿತು. ಅವರು ನಿಂತೇ ಮತ್ತೆ ಹಾಡಲು ಆರಂಭಿಸಿದಾರೆ :

ತಾಯ ಶ್ರೀಪಾದದಲಿ ಜೀವವಿರಿಸಿದ ನನಗೆ
ಮೃತ್ಯುಭಯವೇನು ?
ಆತ್ಮಶಿರಶಿಖೆಯಲ್ಲಿ ತಾಯನಾಮವ ಹಿಡಿದು
ಕಟ್ಟಿರುವೆನು !
ಈ ಜಗದ ಸಂತೆಯಲ್ಲಿ ನನ್ನ ದೇಹವ ಮಾರಿ
ತಾಯ ಶ್ರೀ ನಾಮವನು ಕೊಂಡಿರುವೆನು !

ಕಾಳೀನಾಮ ಕಲ್ಪತರುವನು ನಾನು
ಎದೆಯ ಅಂಗಳದಲ್ಲಿ ನಟ್ಟಿರುವೆನು.
ಯಮ ಬಂದು ನಿಂತಾಗ ನನ್ನ ಎದೆಯನು ತೆರೆದು
ಬೆಳೆಯುವೀ ವೃಕ್ಷವನು ತೋರಿಸುವೆನು.
ಅರಿವರ್ಗವನು ಕಿತ್ತು, ಭವಜಲಧಿಯಲಿ ನಾನು
'ಜಯ ದುರ್ಗೆ' ಎಂದೆಂದು ಹೊರಟಿರುವೆನು !

ಪರಮಹಂಸರು ಭಾವದಿಂದ ಮತ್ತರಾಗಿ ಮತ್ತೆ ಈ ಚರಣವನ್ನು ಹಾಡಿದರು :

ಈ ಜಗದ ಸಂತೆಯಲಿ ನನ್ನ ದೇಹವ ಮಾರಿ
ತಾಯ ಶ್ರೀ ನಾಮವನು ಕೊಂಡಿರುವೆನು !

ಶ್ರೀರಾಮಕೃಷ್ಣರು ಗಿರೀಶಾದಿಗಳ ಕಡೆ ತಿರುಗಿ ಹೇಳಿದರು, "'ಭಕ್ತಿಭಾವವೆದೆಯ ತುಂಬಿ ನನ್ನ ಜ್ಞಾನವ ಮರೆಸಿದೆ.'

"ಇಲ್ಲಿ 'ಜ್ಞಾನ' ಎಂದರೆ ಬಾಹ್ಯಜ್ಞಾನ. ಬೇಕಾಗಿರೋದು ತತ್ತ್ವಜ್ಞಾನ, ಬ್ರಹ್ಮಜ್ಞಾನ.

"ಭಕ್ತಿಯೇ ಸಾರವಾದ್ದು. ಸಕಾಮ ಭಕ್ತಿ ಎಂಬುದು ಒಂದು ಇದೆ; ಮತ್ತೆ ನಿಷ್ಕಾಮ ಭಕ್ತಿ, ಶುದ್ಧ ಭಕ್ತಿ, ಅಹೇತುಕ ಭಕ್ತಿ ಇವೂ ಇವೆ. ಕೇಶವಸೇನನಿಗೆ ಮತ್ತು ಬ್ರಾಹ್ಮಸಮಾಜದವರಿಗೆ ಅಹೇತುಕ ಭಕ್ತಿ ಎಂಬುದು ಒಂದು ಇದೆ ಅಂಬುದು ಗೊತ್ತಿರಲಿಲ್ಲ. ಈ ಭಕ್ತಿಯಲ್ಲಿ ಯಾವ ಕಾಮನೆಯೂ ಇಲ್ಲ; ಇದು ಕೇವಲ ಭಗವಂತನ ಪಾದಪದ್ಮಗಳಲ್ಲಿ ಇಟ್ಟಿರುವ ಶುದ್ಧ ಭಕ್ತಿಯೇ ಅಲ್ಲದೆ ಬೇರೆ ಏನೂ ಅಲ್ಲ.

"ಮತ್ತೆ ಬೇರೆ ಇದೆ ಊರ್ಜಿತ ಭಕ್ತಿ ಎಂಬೋದು. ಇದರಲ್ಲಿ ಭಕ್ತಿ ಉಕ್ಕಿಹರಿಯುತ್ತಿರುವುದೊ ಏನೊ ಎಂಬಂತೆ ತೋರುತ್ತದೆ. ಇದು ಉಂಟಾದಾಗ ಭಕ್ತ 'ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ, ಹಾಡು ತ್ತಾನೆ.' ಇದಕ್ಕೆ ಉದಾಹರಣೆ ಶ್ರೀಚೈತನ್ಯದೇವ. ರಾಮ ಲಕ್ಷ್ಮಣನಿಗೆ ಹೇಳಿದ, 'ಸಹೋದರ, ಯಾರಲ್ಲಿ ನೀನು ಊರ್ಜಿತ ಭಕ್ತಿಯನ್ನು ನೋಡು ವೆಯೊ, ಆತನಲ್ಲಿ ನಾನು ಸ್ವಯಂ ಇದೇನೆ ಎಂಬುದನ್ನು ತಿಳಿದುಕೊ' ಅಂತ."

ಗಿರೀಶ: "ನಿಮ್ಮ ಕೃಪೆಯೊಂದು ದೊರೆಯಿತು ಎಂದರೆ ಎಲ್ಲಾ ದೊರೆತುಬಿಡುತ್ತದೆ. ನಾನು ಹಿಂದೆ ಏನಾಗಿದ್ದೆ? ನೋಡಿ, ಈಗ ಏನಾಗಿ ದೇನೆ!"

ಶ್ರೀರಾಮಕೃಷ್ಣರು: "ನಿನ್ನಲ್ಲಿ ಸಂಸ್ಕಾರವಿತ್ತು; ಅವು ಈಗ ವ್ಯಕ್ತ ವಾಗುತ್ತಿವೆ. ಸಮಯ ಬರದ ಹೊರತು ಏನೂ ಆಗದು. ಯಾವಾಗ ರೋಗ ಗುಣಮುಖವಾಗಿ ಬರುತ್ತಿತ್ತೊ ಆಗ ಕವಿರಾಜ ರೋಗಿಗೆ ಹೇಳಿದ, 'ಈ ಎಲೆಗೆ ಮೆಣಸಿನ ಕಾಳು ಸೇರಿಸಿ ತಿನ್ನು' ಅಂತ. ಆಗ ರೋಗಿ ಗುಣ ವಾಗಿಬಿಟ್ಟ. ಈಗ ಮೆಣಸಿನ ಕಾಳಿನೊಡನೆ ತಿಂದ ಔಷಧ ಆತನನ್ನು ಗುಣ ಪಡಿಸಿತೊ ಅಥವಾ ತಾನಾಗಿಯೆ ಆತ ಗುಣಹೊಂದಿದನೊ ಇದನ್ನು ಯಾರು ತಾನೇ ಹೇಳಬಲ್ಲರು?

"ಲಕ್ಷ್ಮಣ ಲವಕುಶರಿಗೆ ಹೇಳಿದ, 'ನೀವು ಇನ್ನೂ ಚಿಕ್ಕ ಬಾಲಕರು; ರಾಮಚಂದ್ರನ ಮಹತ್ತು ಏನೆಂಬುದು ನಿಮಗೆ ಗೊತ್ತಿಲ್ಲ. ಆತನ ಪಾದ ಸ್ಪರ್ಶನ ಮಾತ್ರದಿಂದಲೇ ಕಲ್ಲಾಗಿದ್ದ ಅಹಲ್ಯೆ ಮತ್ತೆ ಬದುಕಿ ಎದ್ದಳು' ಅಂತ. ಲವಕುಶ ಹೇಳಿದರು, 'ನಮಗೆ ಅದೆಲ್ಲ ಗೊತ್ತಿದೆ. ನಾವು ಆ ಕಥೆಯನ್ನು ಕೇಳಿದ್ದೇವೆ. ಕಲ್ಲಾಗಿದ್ದ ಆಕೆ ಮತ್ತೆ ಬದುಕಿ ಎದ್ದುದು ಋಷಿಯ ಆಶೀರ್ವಾದದಿಂದ. ಗೌತಮ ಮುನಿ ಆಕೆಗೆ ಆಶೀರ್ವದಿಸಿದ್ದ, "ತ್ರೇತಾಯುಗದಲ್ಲಿ ಶ್ರೀರಾಮಚಂದ್ರ ಈ ಆಶ್ರಮದ ಬಳಿಯಲ್ಲಿಯೇ ಹೋಗುತ್ತಾನೆ. ಆತನ ಪಾದಸ್ಪರ್ಶನದಿಂದ ನೀನು ಮತ್ತೆ ಬದುಕಿ ಏಳುವೆ" ಅಂತ' ಎಂದು. ಆಕೆ ಬದುಕಿ ಎದ್ದುದು ರಾಮನ ಮಹತ್ತಿನಿಂದಲೊ ಅಥವಾ ಋಷಿಯ ಆಶೀರ್ವಾದದಿಂದಲೊ, ಇದು ಹೀಗಲ್ಲ ಹಾಗೆ ಎಂದು ಯಾರುತಾನೇ ಹೇಳಬಲ್ಲರು?

"ಪ್ರತಿಯೊಂದೂ ಆತನ ಇಚ್ಛೆಗನುಸಾರವಾಗಿ ಘಟಿಸುತ್ತದೆ. ನೀನು

ಇಲ್ಲಿಗೆ ಬರುತ್ತಿರೋದರಿಂದ ನಿನ್ನ ಆಧ್ಯಾತ್ಮಿಕಜೀವನ ಜಾಗ್ರತಗೊಳ್ಳುವು ದಾದರೆ, ನಾನು ಕೇವಲ ಹೇತು ಮಾತ್ರ ಅಂಬುದನ್ನು ತಿಳಿದುಕೊ. ಚಾಂದಮಾಮ ಎಲ್ಲರ ಮಾಮ. ಭಗವಂತನ ಇಚ್ಛೆಯಂತೆ ಎಲ್ಲಾ ಘಟಿ ಸುತ್ತದೆ."

ಗಿರೀಶ ನಗುತ್ತ: "ಭಗವಂತನ ಇಚ್ಛೆಯಂತೆ ತಾನೆ? ನಾನು ಹೇಳೋದೂ ಅದೇನೆ." (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ಗಿರೀಶನಿಗೆ: "ಮನುಷ್ಯ ಸರಳನಾದರೆ ಶೀಘ್ರ ವಾಗಿ ಆತನ ಸಾಕ್ಷಾತ್ಕಾರ ದೊರತುಬಿಡುತ್ತದೆ. ಈ ಕೆಲವರಿಗೆ ಜ್ಞಾನ ದೊರಕದು: ಪ್ರಥಮತಃ, ವಕ್ರಬುದ್ಧಿಯುಳ್ಳವನಿಗೆ — ಸರಳನಾಗಿಲ್ಲದೆ ಇರೋದರಿಂದ. ದ್ವಿತೀಯತಃ, ಬಾಹ್ಯಶುಚಿಯಲ್ಲಿಯೇ ನಿರತನಾಗಿರುವ ವನಿಗೆ. ತೃತೀಯತಃ, ಸಂಶಯಾತ್ಮನಿಗೆ."

ಶ್ರೀರಾಮಕೃಷ್ಣರು ನಿತ್ಯಗೋಪಾಲನ ಭಾವಾವಸ್ಥೆಯನ್ನು ಬಹು ವಾಗಿ ಪ್ರಶಂಸೆಮಾಡಿದರು.

ಒಂದು ಮೂರು ನಾಲ್ಕು ಜನ ಭಕ್ತರು ಆ ಉದ್ದ ವರಾಂಡದಲ್ಲಿ ಪರಮಹಂಸರ ಹತ್ತಿರ ನಿಂತು ಅವರು ಪರಮಹಂಸಾವಸ್ಥೆಯ ಸಂಬಂಧ ವಾಗಿ ಹೇಳುತ್ತಿರುವುದನ್ನು ಕೇಳುತ್ತಿದಾರೆ. ಪರಮಹಂಸರು ಹೇಳು ತ್ತಿದಾರೆ, "ಪರಮಹಂಸರಿಗೆ ಸರ್ವದಾ ಈ ಬೋಧೆ — ಭಗವಂತ ನೊಬ್ಬನೇ ಸತ್ಯ ಉಳಿದುದೆಲ್ಲ ಅನಿತ್ಯ ಎಂಬ ಬೋಧೆ ಇರುತ್ತದೆ. ಹಾಲನ್ನು ನೀರಿನಿಂದ ಪ್ರತ್ಯೇಕಮಾಡೋ ಶಕ್ತಿ ಹಂಸಪಕ್ಷಿಯೊಂದಕ್ಕೆ ಮಾತ್ರವೇ ಇದೆ. ಹಾಲು ನೀರಿನಲ್ಲಿ ಬೆರೆತುಹೋಗಿದ್ದರೆ, ಹಂಸದ ನಾಲಗೆಯಲ್ಲಿ ಒಂದು ವಿಧವಾದ ಆಮ್ಲದ್ರವವಿದೆ, ಅದು ಹಾಲನ್ನೂ ನೀರನ್ನೂ ಬೇರೆ ಬೇರೆ ಮಾಡಿಬಿಡುತ್ತದೆ. ಪರಮಹಂಸರ ಬಾಯಲ್ಲಿಯೂ ಅಂಥದೊಂದು ಆಮ್ಲದ್ರವವಿದೆ: ಅದೇ ಪ್ರೇಮಭಕ್ತಿ. ಅದು ಅಂಕುರ ವಾಗಿದ್ದರೆ ನಿತ್ಯಾನಿತ್ಯದ ವಿವೇಕ ಉಂಟಾಗುತ್ತದೆ; ಭಗವಂತನ ಅನು ಭೂತಿ ದೊರೆಯುತ್ತದೆ; ಭಗವಂತನ ದರ್ಶನ ದೊರೆಯುತ್ತದೆ" ಅಂತ.

೨೫ನೆ ಫೆಬ್ರುವರಿ ೧೮೮೫, ಫಾಲ್ಗುಣ ಶುಕ್ಲ ಏಕಾದಶಿ, ಬುಧವಾರ.

ಪರಮಹಂಸರು ಕಲ್ಕತ್ತದಲ್ಲಿ ವಸುಪಾರಾ ಗಲ್ಲಿಯಲ್ಲಿರುವ ಗಿರೀಶ ಘೋಷನ ಮನೆಗೆ ಇಂದು ಬಂದಿದಾರೆ. ಸಮಯ ಮೂರು. ಮಾಸ್ಟರ್ ಅಲ್ಲಿಗೆ ಬಂದು ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಇಂದು

ಪರಮಹಂಸರು ಸ್ಟಾರ್ ಥಿಯೇಟರಿನಲ್ಲಿ ನಡೆಯುವ "ವೃಷಕೇತು" ಎಂಬ ನಾಟಕವನ್ನು ನೋಡಲು ಹೋಗುವರು. ಅವರು ಈಗ ಬ್ರಹ್ಮ ಜ್ಞಾನದ ಮತ್ತು ಭಕ್ತಿತತ್ತ್ವದ ಸಂಬಂಧವಾಗಿ ಮಾತನಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು ಗಿರೀಶನೇ ಮೊದಲಾದ ಭಕ್ತರಿಗೆ: "ಮನುಷ್ಯನಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು ಉಂಟಾಗುತ್ತವೆ. ಯಾರು ಜ್ಞಾನಮಾರ್ಗಿಗಳೊ ಅವರು ಈ ಅವಸ್ಥೆಗಳನ್ನು ತಿದ್ದಿ ತೇಲಿಸಿಬಿಡುತ್ತಾರೆ. ಅವರು ಹೇಳುತ್ತಾರೆ, 'ಬ್ರಹ್ಮ ಈ ಮೂರು ಅವಸ್ಥೆಗಳಿಗತೀತ; ಸ್ಥೂಲ ಸೂಕ್ಷ್ಮ ಕಾರಣ—ಈ ಮೂರು ದೇಹಗಳಿಗೆ ಅತೀತ; ಸತ್ವ ರಜಸ್ಸು ತಮಸ್ಸು—ಈ ಮೂರು ಗುಣಗಳಿಗೂ ಅತೀತ; ಕನ್ನಡಿಯಲ್ಲಿ ಬೀಳುವ ಪ್ರತಿಬಿಂಬದ ಹಾಗೆ ಇವೆಲ್ಲ ಬರೀ ಮಾಯೆ; ಪ್ರತಿಬಿಂಬ ಎಂದಿಗೂ ವಸ್ತುವಲ್ಲ; ಬ್ರಹ್ಮನೊಬ್ಬನೇ ವಸ್ತು ಉಳಿದುದೆಲ್ಲಾ ಅವಸ್ತು' ಅಂತ.

"ಬ್ರಹ್ಮಜ್ಞಾನಿಗಳು ಮತ್ತೆ ಹೇಳುತ್ತಾರೆ, 'ದೇಹಾತ್ಮಬುದ್ಧಿ ಇದ್ದಿತು ಎಂದರೆ ದ್ವೈತವನ್ನು ನೋಡಬೇಕಾಗುತ್ತದೆ; ಪ್ರತಿಬಿಂಬವೇ ಸತ್ಯ ಎಂಬ ಬೋಧೆಯಾಗುತ್ತದೆ. ಈ ಬುದ್ಧಿ ಹೋಯಿತು ಎಂದರೆ 'ಸೋಽಹಂ', 'ನಾನೇ ಬ್ರಹ್ಮ' ಎಂಬ ಅನುಭೂತಿ ಉಂಟಾಗುತ್ತದೆ."

ಒಬ್ಬ ಭಕ್ತ: "ಹಾಗಾದರೆ ನಾವೆಲ್ಲರು ವಿಚಾರಮಾರ್ಗವನ್ನು ಅನುಸರಿಸೋಣವೇನು ?"

ಶ್ರೀರಾಮಕೃಷ್ಣರು: "ಅನೇಕ ಮಾರ್ಗಗಳಲ್ಲಿ ವಿಚಾರಮಾರ್ಗವೂ ಒಂದು. ಇದು ವೇದಾಂತವಾದಿಗಳ ಮಾರ್ಗ. ಬೇರೊಂದು ಮಾರ್ಗವಿದೆ, ಭಕ್ತಿಮಾರ್ಗ. ಭಕ್ತ ಬ್ರಹ್ಮಜ್ಞಾನ ಬೇಕೆಂದು ವ್ಯಾಕುಲಚಿತ್ತದಿಂದ ಅತ್ತರೆ, ಅದೂ ಆತನಿಗೆ ದೊರೆತುಬಿಡುತ್ತದೆ. ಜ್ಞಾನಯೋಗ ಮತ್ತು ಭಕ್ತಿಯೋಗ ಎರಡೂ ಭಗವಂತನ ಸಾಕ್ಷಾತ್ಕಾರಕ್ಕೆ ಮಾರ್ಗಗಳೇ.

"ಇವೆರಡು ಮಾರ್ಗಗಳಿಂದಲೂ ಬ್ರಹ್ಮಜ್ಞಾನವನ್ನು ಪಡೆಯಬಹುದು. ಕೆಲಕೆಲವರು ಬ್ರಹ್ಮಜ್ಞಾನವನ್ನು ಪಡೆದುಕೊಂಡನಂತರವೂ ಲೋಕಶಿಕ್ಷಣಾರ್ಥಕ್ಕಾಗಿ ಭಕ್ತರಾಗಿಯೇ ಉಳಿಯುವರು; ಉದಾಹರಣೆಗೆ ಅವತಾರಾದಿಗಳು.

"ದೇಹಾತ್ಮಬುದ್ಧಿ, ಅಹಂಬುದ್ಧಿ ಬಡಪಟ್ಟಿಗೆ ಹೋಗಲೊಲ್ಲದು.

ಆತನ ಕೃಪೆಯಿಂದ ಸಮಾಧಿ— ನಿರ್ವಿಕಲ್ಪ ಸಮಾಧಿ, ಜಡ ಸಮಾಧಿ— ದೊರೆತರೆ ಆಗ ಅದು ಹೋಗುತ್ತದೆ.

"ಸಮಾಧಿ ದೊರೆತನಂತರ ಅವತಾರಾದಿಗಳ 'ಅಹಂ' ಮತ್ತೆ ಹಿಂದಿರುಗಿ ಬರುತ್ತದೆ; ಆದರೆ ಆಗ ಅದು 'ವಿದ್ಯೆಯ ಅಹಂ' ಅಥವಾ 'ಭಕ್ತಿಯ ಅಹಂ' ರೂಪಕ್ಕೆ ಪರಿವರ್ತನೆಯನ್ನು ಹೊಂದಿರುತ್ತದೆ. ಈ 'ವಿದ್ಯೆಯ ಅಹಂ' ನಿಂದ ಲೋಕಶಿಕ್ಷಣೆಯ ಕಾರ್ಯ ನಡೆಯುತ್ತದೆ. ಶ್ರೀ ಶಂಕರಾಚಾರ್ಯರು 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು.

"ಶ್ರೀ ಚೈತನ್ಯದೇವ 'ಭಕ್ತಿಯ ಅಹಂ' ನಿಂದ ಭಕ್ತಿಯನ್ನು ಆಸ್ವಾದನ ಮಾಡುತ್ತಿದ್ದ; ಭಕ್ತರೊಡನೆ ಆನಂದಪಡುತ್ತಿದ್ದ; ಭಗವದ್ವಿಷಯವನ್ನೇ ಮಾತನಾಡುತ್ತಿದ್ದ; ನಾಮಸಂಕೀರ್ತನೆ ಮಾಡುತ್ತಿದ್ದ.

"'ಅಹಂ' ಎಂಬುದು ಸಹಜವಾಗಿ ನಮ್ಮನ್ನು ಬಿಟ್ಟು ತೊಲಗೋದಿಲ್ಲವಲ್ಲ, ಆ ಕಾರಣದಿಂದ ಭಕ್ತ ಜಾಗ್ರತ್ ಸ್ವಪ್ನ ಸುಷುಪ್ತಿ ಅವಸ್ಥೆಗಳನ್ನು ತಿದ್ದಿ ತೀಲಿಸಿಬಿಡೋದಿಲ್ಲ. ಭಕ್ತ ಎಲ್ಲಾ ಅವಸ್ಥೆಗಳನ್ನೂ ಸ್ವೀಕರಿಸುತ್ತಾನೆ; ಸತ್ತ್ವ ರಜಸ್ಸು ತಮಸ್ಸು ಈ ಮೂರು ಗುಣಗಳನ್ನೂ ಅನುಮೋದಿಸುತ್ತಾನೆ. ಭಕ್ತನ ದೃಷ್ಟಿಯಿಂದ ಭಗವಂತನೇ ಚತುರ್ವಿಂಶತಿ ತತ್ತ್ವಗಳಾಗಿದಾನೆ, ಜೀವ ಜಗತ್ತಾಗಿದಾನೆ; ಆತನೇ ಸಾಕಾರ ಚಿನ್ಮಯ ರೂಪಿನಿಂದ ಕಾಣಿಸಿಕೊಳ್ಳುತ್ತಿದಾನೆ.

"ಭಕ್ತ ವಿದ್ಯಾಮಾಯೆಯನ್ನು ಆಶ್ರಯಿಸಿಕೊಂಡು ಇರುತ್ತಾನೆ. ಸಾಧು ಸಂಗ, ತೀರ್ಥಯಾತ್ರೆ, ಜ್ಞಾನ, ವೈರಾಗ್ಯ ಇವುಗಳೆಲ್ಲದರ ಆಶ್ರಯ ಮಾಡಿಕೊಂಡು ಇರುತ್ತಾನೆ. ಆತ ಹೇಳುತ್ತಾನೆ, '"ಅಹಂ" ಎಂಬುದು ಸಹಜವಾಗಿ ಹೋಗದೆ ಇರುವುದರಿಂದ, ಆ ನೀಚ "ಅಹಂ" ಭಗವಂತನ ದಾಸನಾಗಿಯೊ, ಭಗವಂತನ ಭಕ್ತನಾಗಿಯೊ ಇರಲಿ' ಅಂತ.

"ಭಕ್ತನಿಗೂ ಏಕಾಕಾರ ಜ್ಞಾನ ದೊರಕುತ್ತದೆ; ಆತನಿಗೆ ಭಗವಂತನೊಬ್ಬನಲ್ಲದೆ ಬೇರೆ ಏನೂ ಕಾಣದು. ಆತ ಎಲ್ಲವೂ 'ಸ್ವಪ್ನವತ್' ಅಂತ ಹೇಳೋದಿಲ್ಲ, ಆದರೆ ಹೇಳುತ್ತಾನೆ, 'ಭಗವಂತನೆ ಸಮಸ್ತವೂ ಆಗಿದಾನೆ' ಅಂತ. ಮೊಂಬತ್ತಿಯ ತೋಟದಲ್ಲಿ ನಾನಾ ಆಕಾರಗಳನ್ನು ನೋಡಬಹುದು, ಆದರೆ ಪ್ರತಿಯೊಂದೂ ಮೊಂಬತ್ತಿಯಿಂದ ನಿರ್ಮಿತವಾದುವೆ.

"ಆದರೆ ಭಕ್ತಿ ಪಕ್ವವಾದಾಗ ಮಾತ್ರ ಈ ಅನುಭವ ದೊರೆಯು

ತ್ತದೆ. ದೇಹದಲ್ಲಿ ಪಿತ್ತ ಜಾಸ್ತಿಯಾದಾಗ ಕಾಮಾಲೆ ರೋಗ ಬರುತ್ತದೆ; ಆಗ ಎಲ್ಲವೂ ಹಳದಿಯಾಗಿ ತೋರುತ್ತವೆ. ಶ್ರೀಮತಿ (ರಾಧೆ) ಶ್ಯಾಮನ ಚಿಂತನೆ ಮಾಡಿ ಮಾಡಿ ಎಲ್ಲವೂ ಶ್ಯಾಮಮಯವಾಗಿರುವಂತೆ ಕಂಡಳು; ತಾನೂ ಶ್ಯಾಮನಾಗಿರುವಂತೆ ಆಕೆಗೆ ಅನುಭವವಾಯಿತು. ಪಾದರಸದ ಕೊಳದಲ್ಲಿ ಸೀಸ ಅನೇಕ ದಿವಸಗಳವರೆಗೆ ಬಿದ್ದಿದ್ದರೆ ಅದೂ ಪಾದರಸವಾಗಿ ಬಿಡುತ್ತದೆ. ಕೀಟ ಭ್ರಮರಕ್ಕೆ ಹೆದರಿ, ಅದರ ಚಿಂತನೆ ಮಾಡುತ್ತ ಮಾಡುತ್ತ ಸ್ತಬ್ಧವಾಗಿಬಿಡುತ್ತದೆ; ಅದರ ಚಲನೆಯೇ ನಿಂತುಹೋಗಿ ಬಿಡುತ್ತದೆ. ಕೊನೆಗೆ ಅದು ಭ್ರಮರವೇ ಆಗಿಬಿಡುತ್ತದೆ. ಭಕ್ತನೂ ಭಗವಂತನ ಧ್ಯಾನ ಮಾಡಿ ಮಾಡಿ 'ಅಹಂ' ಶೂನ್ಯನಾಗಿಬಿಡುತ್ತಾನೆ; ಆಗ ಅನುಭವ ಪಡೆಯುತ್ತಾನೆ, 'ಆತನೇ ನಾನು, ನಾನೇ ಆತನು' ಎಂಬುದಾಗಿ. ಕೀಟ ಭ್ರಮರವಾಗಿ ಹೋಯಿತು ಎಂದರೆ, ಎಲ್ಲವೂ ಸಿದ್ಧಿಸಿದಹಾಗೆ; ಒಡನೆಯೇ ಮುಕ್ತಿ.

"ಎಲ್ಲಿಯವರೆಗೆ ಆತ 'ಅಹಂ' ಎಂಬದುನ್ನು ಇಟ್ಟಿರುವನೊ, ಅಲ್ಲಿಯವರೆಗೆ ಯಾವುದಾದರು ಒಂದು ಭಾವವನ್ನು — ಶಾಂತ, ದಾಸ್ಯ, ವಾತ್ಸಲ್ಯ ಇವೇ ಮೊದಲಾದುವನ್ನು ಆರೋಪಿಸಿಕೊಂಡು ಆತನನ್ನು ಕರೆಯ ಬೇಕು. ನಾನು ದಾಸೀಭಾವದಿಂದ— ಬ್ರಹ್ಮಮಯಿಯ ದಾಸಿ ಎಂಬ ಭಾವದಿಂಡ ಒಂದು ವರ್ಷಕಾಲ ಸಾಧನೆಮಾಡಿದೆ. ಹೆಂಗಸರ ಹಾಗೆ ಸೀರೆ ಉಡುತ್ತಿದ್ದೆ, ಮೇಲು-ಹೊದಿಕೆ ಹೊದೆಯುತ್ತಿದ್ದೆ. ಹೆಂಗಸಿನ ಭಾವ ವನ್ನು ಆರೋಪಿಸಿಕೊಂಡು ಸಾಧನೆ ಮಾಡಿದರೆ ಕಾಮವನ್ನು ಜಯಿಸ ಬಹುದು.

"ಅದಕ್ಕಾಗಿಯೆ ಆದ್ಯಾಶಕ್ತಿಯ ಪೂಜೆ ಮಾಡಬೇಕು; ಆಕೆಯನ್ನು ಪ್ರಸನ್ನಳನ್ನಾಗಿ ಮಾಡಿಕೋಬೇಕು. ಆಕೆಯೇ ಹೆಂಗಸರ ರೂಪನ್ನು ಧರಿಸಿ ಕೊಂಡು ಇದಾಳೆ. ಅದಕ್ಕಾಗಿಯೇ ನನ್ನದು ಮಾತೃಭಾವ. ಈ ಭಾವ ಬಹಳ ಶುದ್ಧವಾದ ಭಾವ. ತಂತ್ರಶಾಸ್ತ್ರದಲ್ಲಿ ವಾಮಾಚಾರದ ಸಾಧನೆಯೂ ಇದೆ; ಆದರೆ ಅದು ಒಳ್ಳೆಯದಲ್ಲ; ಅದರಲ್ಲಿ ಅಧಃಪತನವಾಗುತ್ತದೆ. ಭೋಗವಸ್ತು ಹತ್ತಿರ ಇತ್ತು ಅಂದರೆಯೇ ಭಯ.

"ಮಾತೃಭಾವವನ್ನು ನಿರ್ಜಲ ಏಕಾದಶಿಗೆ ಹೋಲಿಸಬಹುದು; ಅದರಲ್ಲಿ ಭೋಗದ ಗಂಧವೇ ಇಲ್ಲ. ಇನ್ನೂ ಕೆಲವು ವಿಧದ ಏಕಾದಶಿ ಗಳಿವೆ: ಫಲಮೂಲ ತಿಂದು ಮಾಡುವ ಏಕಾದಶಿ; ಪೂರೀಪಲ್ಯ ತಿಂದು

ಮಾಡುವ ಏಕಾದಶಿ. ನನ್ನದು ನಿರ್ಜಲ ಏಕಾದಶಿ. ನಾನು ಮಾತೃಭಾವದಿಂದ ಷೋಡಶಿಯ ಪೂಜೆ ಮಾಡಿದೆ; ಆಗ ಆಕೆಯ ಸ್ತನ ಮಾತೃಸ್ತನ, ಯೋನಿ ಮಾತೃಯೋನಿ ಎಂದು ಪರಿಗಣಿಸಿದೆ. ಈ ಮಾತೃಭಾವ—ಸಾಧನೆಯ ಕೊನೇ ಮಾತು. 'ಹೇ ಭಗವಂತ, ನೀನು ನನ್ನ ತಾಯಿ, ನಾನು ನಿನ್ನ ಮಗು'— ಇದು ಆಧ್ಯಾತ್ಮಿಕ ಜೀವನದ ಕೊನೇ ಮಾತು.

"ಸನ್ಯಾಸಿಯದು ನಿರ್ಜಲ ಏಕಾದಶಿ. ಸನ್ಯಾಸಿ ಭೋಗವಸ್ತುಗಳನ್ನು ತನ್ನ ಹತ್ತಿರ ಇಟ್ಟುಕೊಂಡರೆಯೇ ಭಯ. ಕಾಮಕಾಂಚನವೇ ಭೋಗವಸ್ತುಗಳು. ಆತ ಅವನ್ನು ಭೋಗಿಸಿದರೆ ತಾನು ಉಗುಳಿದ್ದನ್ನು ತಾನೇ ಉಂಡಂತೆ ಆಗುತ್ತದೆ. ಧನಕನಕಾದಿಗಳು, ಹೆಸರು, ಕೀರ್ತಿ, ಸಂಭ್ರಮ, ಇಂದ್ರಿಯ ಸುಖ— ಇವೆಲ್ಲಾ ಭೋಗವಸ್ತುಗಳೆ. ಸನ್ಯಾಸಿ ಭಕ್ತೆ-ಹೆಂಗಸಿನೊಡನೆ ಕುಳಿತಿರೋದು ಅಥವಾ ಆಕೆಯೊಡನೆ ಮಾತುಕತೆಗಳಾಡೋದು, ಇದು ಒಳ್ಳೆಯದಲ್ಲ—ಅದರಿಂದ ತನಗೂ ಕೇಡು ಇತರರಿಗೂ ಕೇಡು. ಹಾಗೆ ಮಾಡೋದರಿಂದೆ ಅನ್ಯರ ಶಿಕ್ಷಣೆಯ ಕಾರ್ಯ ನಡೆಯದು, ಲೋಕಶಿಕ್ಷಣೆಯ ಕಾರ್ಯ ನಡೆಯದು. ಸನ್ಯಾಸಿ ಬದುಕಿರೋದು ಲೋಕಶಿಕ್ಷಣೆಗಾಗಿ.

"ಹೆಂಗಸಿನೊಡನೆ ಕುಳಿತುಕೊಂಡಿರೋದು ಅಥವಾ ಆಕೆಯೊಡನೆ ಬಹಳ ಹೊತ್ತು ಮಾತುಕತೆಯಾಡೋದು ಇವಕ್ಕೂ ಮೈಥುನ ಅಂತ ಹೇಳುತ್ತಾರೆ. ಮೈಥುನದಲ್ಲಿ ಎಂಟು ವಿಧ. ಹೆಂಗಸರು ಮಾತುಕತೆಗಳಾಡೋದನ್ನು ಕೇಳೋದು, ಹಾಗೆ ಕೇಳುತ್ತ ಕೇಳುತ್ತ ಆನಂದಪಡೋದು, ಇದೂ ಒಂದು ವಿಧವಾದ ಮೈಥುನ; ಹೆಂಗಸರ ಸಂಬಂಧವಾಗಿ ಮಾತುಕತೆಗಳಾಡೋದು (ಕೀರ್ತನೆ) ಇದೂ ಒಂದು ವಿಧವಾದ ಮೈಥುನ; ಹೆಂಗಸಿನೊಡನೆ ನಿರ್ಜನ ಪ್ರದೇಶದಲ್ಲಿ ಪಿಸುಗುಟ್ಟಿಕೊಂಡು ಮಾತನಾಡೋದು, ಇದೂ ಒಂದು ವಿಧವಾದ ಮೈಥುನ; ಹೆಂಗಸಿಗೆ ಸೇರಿದ ಯಾವುದಾದರು ಒಂದು ವಸ್ತುವನ್ನು ಹತ್ತಿರ ಇಟ್ಟುಕೊಂಡು ಆನಂದ ಪಡೋದು, ಇದೂ ಒಂದು ವಿಧದ ಮೈಥುನ. ಆಕೆಯನ್ನು ಸ್ಪರ್ಶಿಸೋದು ಇನ್ನೊಂದು ವಿಧದ ಮೈಥುನ. ಅದಕ್ಕಾಗಿಯೆ ಗುರು-ಪತ್ನಿ ಒಂದುವೇಳೆ ಯುವತಿಯಾಗಿದ್ದರೆ ಆಕೆಯ ಪಾದಗಳನ್ನು ಸ್ಪರ್ಶಿಸಿಯೂ ಪ್ರಣಾಮಮಾಡಕೂಡದು. ಸನ್ಯಾಸಿಗಳಿಗೆ ಈ ಹಲವಾರು ನಿಯಮಗಳಿವೆ.

"ಆದರೆ ಸಂಸಾರಿಗಳ ಸಮಾಚಾರವೇ ಬೇರೆ. ಒಂದೆರಡು ಮಕ್ಕ

ಳಾದ ಮೇಲೆ ದಂಪತಿಗಳು ಅಣ್ಣತಂಗಿಯರೋಪಾದಿಯಲ್ಲಿ ಇರಬೇಕು. ಅವರು ಉಳಿದ ಏಳು ವಿಧದ ಮೈಥುನದಲ್ಲಿ ತೊಡಗೋದು ಅಷ್ಟು ದೋಷವಾದ್ದೇನಲ್ಲ.

"ಗೃಹಸ್ಥ, ಋಣಗಳನ್ನು—ದೇವಋಣ, ಪಿತೃಋಣ, ಋಷಿಋಣ ಇವುಗಳನ್ನೆಲ್ಲ ತೀರಿಸಬೇಕಾಗಿದೆ. ಆತ ಪತ್ನೀಋಣವನ್ನೂ ತೀರಿಸಬೇಕಾಗಿದೆ: ಆಕೆಯಿಂದ ಒಂದೊ ಎರಡೊ ಮಕ್ಕಳನ್ನು ಪಡೆಯೋದು ಮತ್ತು ಆಕೆ ಪತಿವ್ರತೆಯಾಗಿದ್ದರೆ ಪರಿಪಾಲನೆ ಮಾಡೋದು.

"ಸಂಸಾರಿಗಳಿಗೆ ಗೊತ್ತಾಗೋದಿಲ್ಲ ಯಾರು ಒಳ್ಳೆ ಹೆಂಡತಿ ಯಾರು ಕೆಟ್ಟ ಹೆಂಡತಿ, ಯಾರು ವಿದ್ಯಾಶಕ್ತಿ ಯಾರು ಅವಿದ್ಯಾಶಕ್ತಿ ಅಂತ. ಯಾರು ಒಳ್ಳೆ ಹೆಂಡತಿಯೊ, ವಿದ್ಯಾಶಕ್ತಿಯೊ ಆಕೆಗೆ ಕಾಮ ಕ್ರೋಧ ಇವುಗಳೆಲ್ಲ ಬಹಳ ಕಡಮೆ; ನಿದ್ರೆ ಕಡಮೆ; ಪತಿಯ ತಲೆಯನ್ನು ಹಿಡಿದು ತನ್ನಿಂದ ದೂರಕ್ಕೆ ತಳ್ಳಿಬಿಡುತ್ತಾಳೆ. ಆಕೆಯಲ್ಲಿ ಪ್ರೀತಿ, ದಯೆ, ಭಕ್ತಿ, ಲಜ್ಜೆ ಇವೆಲ್ಲ ತುಂಬಿವೆ. ಆಕೆ ಎಲ್ಲರ ಸೇವೆಯನ್ನು ವಾತ್ಸಲ್ಯಭಾವದಿಂದ ಮಾಡುತ್ತಾಳೆ. ಯಾವುದರಿಂದ ಪತಿಗೆ ಭಗವಂತನಲ್ಲಿ ಭಕ್ತಿ ಉಂಟಾಗುತ್ತದೆಯೊ ಅದನ್ನು ಮಾಡಲು ಆಕೆ ಸತತ ಸಿದ್ಧಳಾಗಿರುತ್ತಾಳೆ. ದುಂದುವೆಚ್ಚ ಮಾಡಿದರೆ ತನ್ನ ಪತಿ ಬಹಳವಾಗಿ ದುಡಿಯಬೇಕಾಗಿಬರಬಹುದು, ಅದರಿಂದ ಭಗವಂತನ ಧ್ಯಾನಕ್ಕೆ ಆತನಿಗೆ ಸಮಯ ದೊರಕದೆ ಹೋಗಬಹುದು ಎಂದು ಭಾವಿಸಿ ಅಲ್ಪವೆಚ್ಚದಿಂದಲೇ ಸಂಸಾರವನ್ನು ಸಾಗಿಸಿಕೊಂಡು ಹೋಗುತ್ತಾಳೆ.

"ಗಂಡುಬೀರಿ ಹೆಂಗಸರಿಗೆ ಬೇರೆ ಬೇರೆ ಲಕ್ಷಣಗಳಿವೆ. ಇವು ಕೆಟ್ಟ ಲಕ್ಷಣಗಳು: ಮಾಲಗಣ್ಣು, ಹೂತುಕೊಂಡಿರುವ ಕಣ್ಣು, ಬೆಕ್ಕಿನ ಕಣ್ಣು, ಹಸುವಿನ ಕರುವಿನಂಥ ದವಡೆ, ಪಾರಿವಾಳದ ಹಕ್ಕಿಯಂಥ ಎದೆಗೂಡು."

ಗಿರೀಶ: "ನಮಗೆಲ್ಲ ಗತಿಯೇನು?"

ಶ್ರೀರಾಮಕೃಷ್ಣರು: "ಭಕ್ತಿಯೇ ಸಾರವಾದ್ದು. ಮತ್ತೆ ಸಾತ್ತ್ವಿಕ ಭಕ್ತಿ, ರಾಜಸಿಕಭಕ್ತಿ, ತಾಮಸಿಕಭಕ್ತಿ ಎಂಬುವೂ ಇವೆ. ಸಾತ್ತ್ವಿಕ ಭಕ್ತನದು ದೀನ ನಮ್ರ ಭಾವ. ಆದರೆ ತಾಮಸಿಕ ಭಕ್ತನ ಭಾವ ಡಕಾಯಿತನ ಭಾವ. ಆತ ಹೇಳ್ತಾನೆ, 'ಹೇ ಭಗವಂತ, ನಾನು ನಿನ್ನ ಹೆಸರನ್ನು ಜಪಿಸುತ್ತಿದೇನೆ; ನನ್ನಲ್ಲಿ ಪಾಪಕ್ಕೆ ಆಶ್ರಯವೆಲ್ಲಿ? ಹೇ ಭಗವಂತ, ನೀನು ನನ್ನ ಸ್ವಂತ ತಾಯಿ; ದರ್ಶನ ಕೊಡಲೇ ಬೇಕು' ಅಂತ."

ಗಿರೀಶ ನಗುತ್ತ : "ತಾಮಸಿಕ ಭಕ್ತನಾಗುವುದನ್ನು ನೀವೇ ನಮಗೆ ಕಲಿಸಿಕೊಡುತ್ತಾ ಇದ್ದೀರಲ್ಲ!"

ಶ್ರೀರಾಮಕೃಷ್ಣರು ನಗುತ್ತ : "ಆದರೆ ಆತನ ದರ್ಶನ ಪಡೆಯೋಕೆ ಕೆಲವು ಲಕ್ಷಣಗಳಿವೆ. ಸಮಾಧಿಯುಂಟಾಗುತ್ತದೆ. ಸಮಾಧಿಯಲ್ಲಿ ಐದು ವಿಧ. ಮೊದಲನೆಯದರಲ್ಲಿ ಇರುವೆಯ ಚಲನೆಯಂತೆ ಚಲನೆ—ಮಹಾವಾಯು ಇರುವೆಯಂತೆ ಮೇಲಕ್ಕೆ ಹತ್ತುತ್ತದೆ. ಎರಡನೆಯದರಲ್ಲಿ ಮೀನಿನ ಚಲನೆಯಂತೆ, ಮೂರನೆಯದಲ್ಲಿ ಹಾವಿನ ಚಲನೆಯಂತೆ ಮಹಾವಾಯು ಮೇಲಕ್ಕೆ ಹತ್ತುತ್ತದೆ. ನಾಲ್ಕನೆಯದರಲ್ಲಿ ಹಕ್ಕಿಯ ಚಲನೆಯಂತೆ ಚಲನೆ—ಹಕ್ಕಿ ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ಹಾರಿ ಹೋಗುವ ಹಾಗೆ ಮಹಾವಾಯು ಮೇಲಕ್ಕೆ ಹತ್ತುತ್ತದೆ. ಐದನೆಯದರಲ್ಲಿ ಕಪಿಯ ಚಲನೆಯಂತೆ ಚಲನೆ—ಮಹಾ ವಾಯು ಇದರಲ್ಲಿ ಒಂದೇ ನೆಗತಕ್ಕೆ ಸಹಸ್ರಾರವನ್ನು ಮುಟ್ಟಿದಂತಾಗುತ್ತದೆ; ಬಳಿಕ ಸಮಾಧಿ.

"ಇನ್ನೂ ಎರಡು ವಿಧದವುಗಳಿವೆ. ಮೊದಲನೆಯದು ಸ್ಥಿತಸಮಾಧಿ; ಸಾಧಕ ಒಮ್ಮೆಗೆಯೆ ಬಾಹ್ಯಜ್ಞಾನಶೂನ್ಯನಾಗಿಬಿಡುತ್ತಾನೆ; ಬಹಳ ಹೊತ್ತು, ಒಮ್ಮೊಮ್ಮೆ ಬಹಳ ದಿವಸಗಳವರೆಗೂ ಅದರಲ್ಲಿ ಇರಬಲ್ಲ. ಎರಡನೆಯದು ಉನ್ಮನಸಮಾಧಿ; ಇದ್ದಕ್ಕಿದ್ದ ಹಾಗೆ ನಾಲ್ಕು ಕಡೆಯಿಂದಲೂ ಮನಸ್ಸನ್ನು ಎಳೆದುತಂದು ಏಕೀಕರಿಸಿ ಭಗವಂತನಲ್ಲಿ ಐಕ್ಯ ಮಾಡೋದು.

(ಮಾಸ್ಟರಿಗೆ) "ನಿನಗೆ ಇದು ಅರ್ಥವಾಯಿತೇನು?"

ಮಾಸ್ಟರ್ : "ಹೌದು, ಆಯಿತು."

ಗಿರೀಶ: "ಸಾಧನೆಮಾಡಿ ಆತನನ್ನು ಪಡೆಯಬಹುದೆ?"

ಶ್ರೀರಾಮಕೃಷ್ಣರು: "ಹಲವಾರು ವಿಧದಿಂದ ಜನ ಆತನ ಸಾಕ್ಷಾತ್ಕಾರವನ್ನು ಪಡೆದಿದ್ದಾರೆ. ಕೆಲವರು ಬಹಳವಾಗಿ ಸಾಧನೆ ಭಜನೆ ತಪಸ್ಸನ್ನುಮಾಡಿ; ಇವರೇ ಸಾಧನಸಿದ್ಧರು. ಕೆಲವರು ನಾರದ ಶುಕದೇವಾದಿಗಳೋಪಾದಿಯಲ್ಲಿ ಆಜನ್ಮಸಿದ್ಧರು; ಇವರನ್ನು ನಿತ್ಯಸಿದ್ಧರು ಅಂತ ಕರೆಯಬಹುದು. ಮತ್ತೆ ಹಠಾತ್-ಸಿದ್ಧರು ಎಂಬುವರಿದಾರೆ; ಹಠಾತ್ತಾಗಿ ಸಾಕ್ಷಾತ್ಕಾರಪಡೆದುಕೊಂಡಿರತಕ್ಕವರು. ಇದು ಮನುಷ್ಯ ಇದ್ದಕ್ಕಿದ್ದ ಹಾಗೆ ಕುಬೇರನಾಗುವ ಹಾಗೆ. ಜೊತೆಗೆ ಸ್ವಪ್ನ-ಸಿದ್ಧರು, ಕೃಪಾ-ಸಿದ್ಧರು ಎಂಬುವರೂ ಇದಾರೆ."

ಹೀಗೆಂದು ಹೇಳಿ ಪರಮಹಂಸರು ಭಾವೋನ್ಮತ್ತರಾಗಿ ಹಾಡುತ್ತಿದಾರೆ:

ಅತಿ ಕಠೋರ ಸಾಧನೆಯಲಿ ತೊಡಗಿರುವೀ ಶಿವನು ಕೂಡ
ಇನ್ನಾದರು ಕಾಣದಿರಲು ಕಾಳೀಪದನೀಲವ..........

ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿಯೆ ಸ್ವಲ್ಪ ಹೊತ್ತು ಇದ್ದರು. ಗಿರೀಶನೆ ಮೊದಲಾದ ಭಕ್ತರು ಅವರ ಮುಂದೆ ಕುಳಿತಿದಾರೆ. ಸ್ವಲ್ಪ ದಿವಸಗಳ ಹಿಂದೆ ಗಿರೀಶ ಸ್ಟಾರ್ ಥಿಯೇಟರಿನಲ್ಲಿ ಏನೇನೊ ಬೈದ. ಈಗ ಶಾಂತಭಾವದಲ್ಲಿ ಇದಾನೆ.

ಶ್ರೀರಾಮಕೃಷ್ಣರು ಗಿರೀಶನಿಗೆ: "ನಿನ್ನ ಈ ಭಾವ ಬಹಳ ಒಳ್ಳೆಯದು; ಇದೇ ಶಾಂತಭಾವ. ತಾಯಿಗೆ ಪ್ರಾರ್ಥನೆಮಾಡಿದೆ, 'ತಾಯಿ, ಆತ ನನ್ನನ್ನು ಬಯ್ಯದೆ ಇರುವಷ್ಟುಮಟ್ಟಿಗೆ ಆತನನ್ನು ಶಾಂತನನ್ನಾಗಿ ಮಾಡು' ಅಂತ."

ಗಿರೀಶ ಶ್ರೀರಾಮಕೃಷ್ಣರಿಗೆ: "ನನ್ನ ನಾಲಗೆಯನ್ನು ಯಾರೊ ಅದುಮಿಹಿಡಿದಿರುವಂತೆ ತೋರುತ್ತಿದೆ; ಮಾತನಾಡಲು ಆಗುತ್ತಿಲ್ಲ."

ಪರಮಹಂಸರು ಇನ್ನೂ ಅಂತರ್ಮುಖರಾಗಿಯೆ ಇದಾರೆ; ಸುತ್ತಲೂ ಇದ್ದ ಜನ-ಗಿನ ಎಲ್ಲವನ್ನೂ ಮರೆತು ಕ್ರಮಕ್ರಮೇಣ ಅವರು ಬೇರೆ ಅಂತಸ್ತಿಗೆ ಹೋಗುತ್ತಿರುವಂತೆ ತೋರಿತು. ಕಿಂಚಿತ್ ಪ್ರಕೃತಿಸ್ಥರಾಗಿ ಮನಸ್ಸನ್ನು ಕೆಳಕ್ಕೆ ಇಳಿಸಲು ಪ್ರಯತ್ನಿಸುತ್ತಿದಾರೆ. ಮತ್ತೆ ಭಕ್ತರ ಕಡೆ ದೃಷ್ಟಿಹಾಕಿದರು.

ಮಾಸ್ಟರ್ ಕಡೆ ನೋಡಿ ಪರಮಹಂಸರು ಹೇಳಿದರು, "ಇವರೆಲ್ಲರು ದಕ್ಷಿಣೇಶ್ವರಕ್ಕೆ ಬರುತ್ತಾರೆ, ಬರಲಿ. ಎಲ್ಲಾ ತಾಯಿಗೆ ಗೊತ್ತಿದೆ" ಅಂತ. ಪಕ್ಕದ ಮನೆಯ ಒಬ್ಬ ಹುಡುಗನನ್ನು ಕೇಳಿದರು, "ಏನಪ್ಪ ಹುಡುಗ, ನಿನಗೇನನಿಸುತ್ತದೆ? ಮನುಷ್ಯನ ಕರ್ತವ್ಯವೇನು?" ಎಂದು. ಎಲ್ಲರೂ ಮೌನವಾಗಿ ಕುಳಿತಿದಾರೆ. ನಾರಾಯಣನ ಕಡೆ ತಿರುಗಿ ಹೇಳಿದರು, "ನೀನು ಪರೀಕ್ಷೆಗಳಲ್ಲಿ ಪಾಸಾಗಲು ಇಚ್ಛಿಸುತ್ತಿಲ್ಲವೇನು? ಆದರೆ ಮಗು, ಪಾಶಮುಕ್ತನೆ ಶಿವ, ಪಾಶಬದ್ಧನೆ ಜೀವ." ಎಂದು.

ಪರಮಹಂಸರು ಇನ್ನೂ ಭಾವಾವಿಷ್ಟರಾಗಿಯೆ ಇದಾರೆ. ಅವರ ಹತ್ತಿರ ಒಂದು ಗ್ಲಾಸು ನೀರು ಇಟ್ಟಿತ್ತು. ಅವರು ಅದನ್ನು ಕುಡಿದರು.

ಅವರು ತಮ್ಮಷ್ಟಕ್ಕೆ ತಾವೆ ಹೇಳಿಕೊಳ್ಳುತ್ತಿದಾರೆ, "ಏಕೆ, ಈ ಅವಸ್ಥೆಯಲ್ಲಿ ಏಕೆ ನೀರು ಕುಡಿದುಬಿಟ್ಟೆ!" ಅಂತ.

ಇನ್ನೂ ಸಾಯಂಕಾಲವಾಗಿಲ್ಲ. ಪರಮಹಂಸರು ಗಿರೀಶನ ಅಣ್ಣ ಅತುಲನೊಡನೆ ಮಾತುಕತೆಯಾಡುತ್ತಿದಾರೆ. ಆತ ಕಲ್ಕತ್ತದ ಹೈಕೋರ್ಟಿನ ಒಬ್ಬ ಲಾಯರು. ಪರಮಹಂಸರ ಎದುರಿಗೇನೆ ಕುಳಿತಿದಾನೆ. ಪಕ್ಕದ ಮನೆಯ ಒಬ್ಬ ಬ್ರಾಹ್ಮಣನೂ ಅಲ್ಲಿ ಕುಳಿತಿದಾನೆ. ಉಳಿದ ಭಕ್ತರೂ ಕುಳಿತಿದಾರೆ.

ಶ್ರೀರಾಮಕೃಷ್ಣರು ಅತುಲನಿಗೆ; "ನಿಮಗೆಲ್ಲ ನಾನು ಹೇಳಬೇಕಿಂದಿರುವುದು ಇಷ್ಟೆ. ನೀವು ಎರಡು ಕಡೆಗೂ ಮನಸ್ಸನ್ನಿಡಬೇಕು: ಸಂಸಾರದ ಕಡೆಗೂ ಮನಸ್ಸನ್ನಿಡಬೇಕು; ಯಾವುದರಿಂದ ಭಕ್ತಿ ದೊರುಕುವುದೊ ಅದರ ಕಡೆಗೂ ಮನಸ್ಸನ್ನಿಡಬೇಕು."

ಬ್ರಾಹ್ಮಣ: "ಬ್ರಾಹ್ಮಣನಲ್ಲದವ ಸಿದ್ಧಪುರುಷನಾಗೋಕೆ ಆಗುತ್ತದೆಯೆ?"

ಶ್ರೀರಾಮಕೃಷ್ಣರು: "ಏಕೆ ಆಗೋದಿಲ್ಲ? ಕಲಿಯುಗದಲ್ಲಿ ಶೂದ್ರರಿಗೆ ಭಕ್ತಿ ಉಂಟಾಗುತ್ತೆ ಎಂದು ಹೇಳಿದೆ. ಉದಾಹರಣೆಗಾಗಿ ಶಬರಿ, ರೂಹಿದಾಸ, ಚಂಡಾಲ ಗುಹಕ ಇವರೇ ಮೊದಲಾದವರು ಇದಾರಲ್ಲ."

ನಾರಾಯಣ ನಗುತ್ತ: "ಬ್ರಾಹ್ಮಣ — ಶೂದ್ರ — ಎಲ್ಲರೂ ಒಂದೇ."

ಬ್ರಾಹ್ಮಣ: "ಒಂದೇ ಜನ್ಮದಲ್ಲಿ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುವುದೆ?"

ಶ್ರೀರಾಮಕೃಷ್ಣರು: "ಆತನ ಕೃಪೆಯೊಂದಿದ್ದರೆ ಏನು ತಾನೆ ಸಾಧ್ಯವಿಲ್ಲ. ಸಹಸ್ರಾರು ವರ್ಷಗಳಿಂದ ಕತ್ತಲೆಯಾಗಿದ್ದ ಕೊಠಡಿಗೆ ಬೆಳಕು ತಂದರೆ ಕತ್ತಲೆ ಕಿಂಚಿತ್ ಕಿಂಚಿತ್ತಾಗಿ ಮಾಯವಾಗುವುದೆ? ಕೊಠಡಿ ಒಮ್ಮೆಗೆಯೇ ಬೆಳಕಾಗುತ್ತದೆ. (ಅತುಲನಿಗೆ) ತೀವ್ರ ವೈರಾಗ್ಯಬೇಕು. ಅದು ಒರೆಯಿಂದ ತೆಗೆದ ಕತ್ತಿಯೋಪಾದಿಯಲ್ಲಿರಬೇಕು. ಅಂಥ ವೈರಾಗ್ಯ ಉಂಟಾಯಿತು ಅಂದರೆ ಸ್ವಬಾಂಧವರು ಕಾಲಸರ್ಪನೋಪಾದಿಯಲ್ಲಿ ಕಾಣಬರುತ್ತಾರೆ, ಸ್ವಂತ ಮನೆ ದೊಡ್ಡ ಭಾವಿಯೋಪಾದಿಯಲ್ಲಿ ಕಂಡುಬರುತ್ತದೆ.

"ತೀವ್ರ ವ್ಯಾಕುಲತೆಯಿಂದ ಆತನನ್ನು ಕರೆಯಬೇಕು. ಹೃತ್ಪೂರ್ವಕ ಕರೆಗೆ ಆತ ಮನಸ್ಸು ಕೊಟ್ಟೇಕೊಡುತ್ತಾನೆ."

ಎಲ್ಲರು ಸುಮ್ಮನೆ ಕುಳಿತಿದಾರೆ. ಪರಮಹಂಸರು ಏನು ಹೇಳಿದರೊ ಅದನ್ನೆಲ್ಲ ಮೆಲಕುಹಾಕುತ್ತ ಕುಳಿತಿದಾರೆ.

ಶ್ರೀರಾಮಕೃಷ್ಣರು ಅತುಲನಿಗೆ: "ಏಕೆ ಚಿಂತಾಕ್ರಾಂತನಾಗಿದೀಯೆ? ಅಂಥ ವ್ಯಾಕುಲತೆ, ಅಂಥ ಬಲಯುತ ಮನಸ್ಸು ನಿನಗಿಲ್ಲವಲ್ಲ ಅಂತಲೇನು?"

ಅತುಲ: "ನಮ್ಮ ಮನಸ್ಸನ್ನು ಆತನ ಪಾದಪದ್ಮಗಳಲ್ಲಿ ಇಡುವುದು ಹೇಗೆ?"

ಶ್ರೀರಾಮಕೃಷ್ಣರು: "ಅಭ್ಯಾಸಯೋಗದಿಂದ. ದಿನವೂ ಆತನನ್ನು ಕರೆಯೋ ಅಭ್ಯಾಸ ಇಟ್ಟುಕೊಂಡಿರಬೇಕು. ಒಂದೇ ದಿನದಲ್ಲಿ ಬರದು; ದಿನವೂ ಕರೆಯುತ್ತ ಕರೆಯುತ್ತ ಹೋದರೆ ವ್ಯಾಕುಲತೆ ಬಂದುಬಿಡುತ್ತದೆ.

"ಯಾವಾಗ ನೋಡಿದರೂ ಹಗಲು ಇರುಳು ಎನ್ನದೆ ವಿಷಯ ಕರ್ಮಗಳಲ್ಲಿಯೇ ತೊಡಗಿದ್ದರೆ ವ್ಯಾಕುಲತೆ ಉಂಟಾಗುವುದೆಂತು? ಹಿಂದೆ ಯದುಮಲ್ಲಿಕ ಭಗವತ್ಸಂಬಂಧವಾದ ಮಾತುಕತೆಗಳನ್ನು ಕೇಳುವುದರಲ್ಲಿ ಮತ್ತು ಆಡುವುದುರಲ್ಲಿ ಬಹಳ ಆಸಕ್ತಿಯನ್ನು ತೋರಿಸುತ್ತಿದ್ದ. ಈಗ ಅಷ್ಟೊಂದು ಆಸಕ್ತಿಯನ್ನು ತೋರಿಸುತ್ತಿಲ್ಲ. ಹಗಲು ಇರುಳು ಹೊಗಳು ಭಟ್ಟರನ್ನು ಕಟ್ಟಿಕೊಂಡು ವಿಷಯ ವಸ್ತುಗಳ ಸಂಬಂಧವಾದ ಮಾತುಕತೆಗಳಲ್ಲಿಯೇ ನಿರತನಾಗಿದಾನೆ."

ಸಾಯಂಕಾಲವಾಯಿತು. ಕೊಠಡಿಯಲ್ಲಿ ದೀಪ ಹಚ್ಚಿದಾರೆ, ಪರಮಹಂಸರು ದೇವದೇವಿಯರನ್ನು ನೆನೆಸಿಕೊಳ್ಳುತ್ತಿದಾರೆ, ಹಾಡುತ್ತಿದಾರೆ ಮತ್ತು ಪ್ರಾರ್ಥಿಸುತ್ತಿದಾರೆ. ಹೇಳುತ್ತಿದಾರೆ, "ಹರಿನಾಮವನ್ನು ಪಠಿಸು, ಹರಿನಾಮವನ್ನು ಜಪಿಸು, ಹರಿನಾಮವನ್ನು ಹಾಡು" ಅಂತ. ಮತ್ತೆ ಹೇಳಿದರು, "ರಾಮ! ರಾಮ! ರಾಮ!" ಅಂತ. ಬಳಿಕ ಹೇಳಿದರು, "ಹೇ ನಿತ್ಯಲೀಲಾಮಯಿಯೆ, ಹೇ ತಾಯೆ, ಮಾರ್ಗವನ್ನು ತೋರಿಸು. ಶರಣಾಗತ, ಶರಣಾಗತ, ಶರಣಾಗತ" ಅಂತ.

ಗಿರೀಶ ಅಶಾಂತನಾಗಿರೋದನ್ನು ನೋಡಿ ಪರಮಹಂಸರು ಒಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ತೇಜಚಂದ್ರನಿಗೆ ಹೇಳಿದರು, "ನೀನು ಬಂದು ನನ್ನ ಹತ್ತಿರ ಕುಳಿತುಕೊ" ಅಂತ. ಆತ ಬಂದು

ಪರಮಹಂಸರ ಹತ್ತಿರ ಕುಳಿತುಕೊಂಡ. ಸ್ವಲ್ಪ ಹೊತ್ತಾದಮೇಲೆ ಆ ಹುಡುಗ ತಾನು ಹಿಂದಿರುಗಿ ಹೋಗಬೇಕೆಂದು ಮಾಸ್ಟರಿಗೆ ಪಿಸು ಗುಟ್ಟಿ ಹೇಳುತ್ತಿದ್ದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಆತ ಏನು ಹೇಳುತ್ತಿದ್ದಾನೆ?"

ಮಾಸ್ಟರ್: "ಮನೆಗೆ ಹಿಂದಿರುಗಿ ಹೋಗಬೇಕಂತೆ. ಅದನ್ನು ಕಿವಿಯಲ್ಲಿ ಹೇಳುತ್ತಿದ್ದಾನೆ."

ಶ್ರೀರಾಮಕೃಷ್ಣರು: "ಇಂಥ ಹುಡುಗರನ್ನು ನಾನು ಏಕೆ ಆಕರ್ಷಿಸುತ್ತಿದ್ದೇನೆ? ಇಂಥವರು ಪರಿಶುದ್ಧ ಹೃದಯಗಳು — ವಿಷಯಬುದ್ಧಿ ಇನ್ನೂ ಪ್ರವೇಶಮಾಡಿಲ್ಲ. ವಿಷಯಬುದ್ಧಿ ಇದ್ದಿತು ಎಂದರೆ ಉಪದೇಶವನ್ನು ಗ್ರಹಿಸಲು ಆಗೋದಿಲ್ಲ. ಹೊಸ ಮಡಕೆಯಲ್ಲಿ ಹಾಲನ್ನು ಇಡಬಹುದು. ಮೊಸರಿನ ಮಡಕೆಯಲ್ಲಿ ಹಾಲನ್ನು ಇಟ್ಟರೆ ಅದು ಒಡೆದು ಹೋಗುತ್ತದೆ. ಯಾವ ಪಾತ್ರೆಯಲ್ಲಿ ಬೆಳ್ಳುಳ್ಳಿ ರಸವನ್ನು ಹಾಕಿ ಇಟ್ಟಿತ್ತೊ ಅದನ್ನು ಒಂದು ಸಾವಿರ ಸಲ ತೊಳೀರಿ, ಅದು ಬೆಳ್ಳುಳ್ಳಿ ಗಂಧದಿಂದ ಮುಕ್ತವಾಗದು."

ಶ್ರೀರಾಮಕೃಷ್ಣರು ವೃಷಕೇತು ಎಂಬ ನಾಟಕವನ್ನು ನೋಡಲು ಬೀಡನ್ ಸ್ಟ್ರೀಟಿನಲ್ಲಿರುವ ಸ್ಟಾರ್ ಥಿಯೇಟರಿಗೆ ಬಂದಿದ್ದಾರೆ. ಅವರು ದಕ್ಷಿಣಾಭಿಮುಖರಾಗಿ ಒಂದು ಬಾಕ್ಸಿನಲ್ಲಿ ಕುಳಿತಿದ್ದಾರೆ. ಮಾಸ್ಟರ್ ಮೊದಲಾದ ಭಕ್ತರು ಹತ್ತಿರವೇ ಕುಳಿತಿದ್ದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನರೇಂದ್ರ ಬಂದಿದ್ದಾನೇನು?"

ಮಾಸ್ಟರ್: "ಹೌದು, ಬಂದಿದ್ದಾನೆ."

ನಾಟಕ ಶುರುವಾಯಿತು. ಕರ್ಣನ ದಾನಶೀಲತೆಯನ್ನು ಪರೀಕ್ಷಿಸಲು ಬ್ರಾಹ್ಮಣವೇಷಧಾರಿಯಾಗಿ ಬಂದಿದ್ದ ಭಗವಂತನಿಗೆ ಕರ್ಣ, ಕರ್ಣನ ಹೆಂಡತಿ ಪದ್ಮಾವತಿ ಇಬ್ಬರೂ ಕೂಡಿ ತಮ್ಮ ಮಗ ವೃಷಕೇತುವನ್ನು ಬಲಿ ಕೊಡುತ್ತಿದ್ದಾರೆ. ಈ ದೃಶ್ಯವನ್ನು ನೋಡಿ ಒಬ್ಬ ಭಕ್ತ ನಿಟ್ಟುಸಿರುಬಿಟ್ಟ. ಪರಮಹಂಸರೂ ತಮ್ಮ ದುಃಖವನ್ನು ವ್ಯಕ್ತಪಡಿಸಿದರು.

ನಾಟಕ ಮುಗಿದನಂತರ ಪರಮಹಂಸರು ಥಿಯೇಟರಿನ ವಿಶ್ರಾಂತಿ ಕೊಠಡಿಗೆ ಹೋದರು. ಗಿರೀಶ ಮತ್ತು ನರೇಂದ್ರ ಆಗಲೇ ಅಲ್ಲಿಗೆ ಹೋಗಿದ್ದರು. ಶ್ರೀರಾಮಕೃಷ್ಣರು ನರೇಂದ್ರನ ಹತ್ತಿರ ಹೋಗಿ ನಿಂತು ಹೇಳಿದರು, "ನಾನು ಬಂದಿದ್ದೇನೆ" ಅಂತ.

ಪರಮಹಂಸರು ವಿಶ್ರಾಂತಿ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಇನ್ನೂ ವಾದ್ಯ ಮೇಳದ ಶಬ್ದ ಕೇಳಿಬರುತ್ತಿದೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಈ ವಾದ್ಯ ಮೇಳವನ್ನು ಕೇಳಿ ನನಗೆ ಬಹಳ ಆನಂದವಾಗುತ್ತಿದೆ. ಅಲ್ಲಿ (ದಕ್ಷಿಣೇಶ್ವರದಲ್ಲಿ) ನಾಗಸ್ವರವನ್ನು ಊದುತ್ತಿದ್ದರು. ಅದನ್ನು ಕೇಳಿ ನಾನು ಭಾವಾವಿಷ್ಟನಾಗಿಬಿಡುತ್ತಿದ್ದೆ. ನನ್ನ ಈ ಮಾನಸಿಕ ಸ್ಥಿತಿಯನ್ನು ನೋಡಿ ಒಬ್ಬ ಸಾಧು ಹೇಳಿದ, 'ಇವೆಲ್ಲ ಬ್ರಹ್ಮಜ್ಞಾನದ ಲಕ್ಷಣ' ಅಂತ."

ವಾದ್ಯ ಮೇಳ ನಿಂತಿತು. ಪರಮಹಂಸರು ಮಾತುಕತೆಯಾಡಲು ಪ್ರಾರಂಭಿಸಿದರು.

ಶ್ರೀರಾಮಕೃಷ್ಣರು ಗಿರೀಶನಿಗೆ: "ಈ ಥಿಯೇಟರ್ ನಿನ್ನದೊ ಅಥವಾ ನಿಮ್ಮದೊ?"

ಗಿರೀಶ: "ನಮ್ಮದು."

ಶ್ರೀರಾಮಕೃಷ್ಣರು: "'ನಮ್ಮದು' ಅಂತ ಹೇಳೋದು ಬಹಳ ಒಳ್ಳೆಯದು; 'ನನ್ನದು' ಅಂತ ಹೇಳೋದು ಒಳ್ಳೆಯದಲ್ಲ. ಕೆಲ ಕೆಲವರು ಹೇಳುತ್ತಾರೆ, 'ನಾನೇ ಖುದ್ದಾಗಿ ಬಂದಿದೇನೆ' ಅಂತ. ಇದು ಹೀನ ಬುದ್ಧಿಯುಳ್ಳವರು ಮತ್ತು ಅಹಂಕಾರಿಗಳು ಆಡುವ ಮಾತು."

ನರೇಂದ್ರ: "ಇಡೀ ಪ್ರಪಂಚವೇ ಒಂದು ಥಿಯೇಟರ್."

ಶ್ರೀರಾಮಕೃಷ್ಣರು: "ಹೌದು, ಹೌದು, ನಿಜ. ಆದರೆ ಕೆಲವು ಕಡೆ ವಿದ್ಯೆಯ ಅಭಿನಯ ಇನ್ನು ಕೆಲವು ಕಡೆ ಅವಿದ್ಯೆಯ ಅಭಿನಯ."

ನರೇಂದ್ರ: "ಎಲ್ಲೆಲ್ಲೂ ವಿದ್ಯೆಯ ಅಭಿನಯವೆ."

ಶ್ರೀರಾಮಕೃಷ್ಣರು: "ನಿಜ, ನಿಜ. ಆದರೆ ಅದು ಬ್ರಹ್ಮಜ್ಞಾನ ದೊರೆತಾಗ ಮಾತ್ರ. ಆದರೆ ಭಕ್ತನ ದೃಷ್ಟಿಯಿಂದ ಎರಡೂ—ವಿದ್ಯಾಮಾಯೆ, ಅವಿದ್ಯಾಮಾಯೆ — ಇವೆ.

"ನೀನು ಒಂದು ಸ್ವಲ್ಪ ಹೊತ್ತು ಹಾಡು"

ನರೇಂದ್ರ ಹಾಡಲಾರಂಭಿಸಿದ:

ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು
ಮಹಾಭಾವ ರಾಸಲೀಲ ಮಾಧುರ್ಯದೊಳಾಡಿವೆ!
ನಿಮಿಷಕೊಮ್ಮೆ ನವನವೀನ ಬಹುವಿಲಾಸರಂಗದಲ್ಲಿ
ಕಣ್ಮನಗಳ ಸೆಳೆದಿವೆ!

ಮಹಾಯೋಗದಲ್ಲಿ ಎಲ್ಲ ಏಕರೂಪವಾಂತಿದೆ!
ಕಾಲದೇಶ ಕರಗಿದೆ.
ಭೇದವೆಲ್ಲ ಅಳಿದಿದೆ.
ಹರಿನಾಮವ ನುತಿಸಿ ಮನಸು ಆನಂದದಿ ಕುಣಿದಿದೆ!

ನರೇಂದ್ರ ಈ ಹಾಡಿನ, "ಮಹಾ ಯೋಗವಲ್ಲಿ ಎಲ್ಲ ಏಕರೂಪವಾಂತಿದೆ!", ಎಂಬ ಚರಣವನ್ನು ಹಾಡಿದಾಗ, ಪರಮಹಂಸರು ಹೇಳಿದರು, "ಬ್ರಹ್ಮಜ್ಞಾನ ದೊರೆತಾಗ ಈ ಅನುಭವ ಆಗುತ್ತದೆ; ಆಗ, ನೀನು ಹೇಳಿದ ಹಾಗೆ ಎಲ್ಲವೂ ವಿದ್ಯೆ ಎಂಬ ಅನುಭವಾಗುತ್ತದೆ" ಅಂತ.

ನರೇಂದ್ರ ಇದೇ ಹಾಡಿನ, "ಹರಿನಾಮವ ನುತಿಸಿ ಮನಸು ಆನಂದದಿ ಕುಣಿದಿದೆ", ಎಂಬ ಚರಣವನ್ನು ಹಾಡಿದಾಗ ಪರಮಹಂಸರು ನರೇಂದ್ರನಿಗೆ ಹೇಳಿದರು, "ಈ ಚರಣವನ್ನು ಎರಡು ಸಾರಿ ಹಾಡು" ಅಂತ.

ಹಾಡುವುದು ಮುಗಿದನಂತರ ಪರಮಹಂಸರು ಮತ್ತೆ ಮಾತುಕತೆಯಾಡಲು ಪ್ರಾರಂಭಿಸಿದರು.

ಗಿರೀಶ: "ದೇವೇಂದ್ರಬಾಬು ಬರಲಿಲ್ಲ. ಆತ ಅಭಿಮಾನದಿಂದ ಹೇಳುತ್ತಾನೆ, 'ನಮ್ಮ ಅಂತರ್ಯಕ್ಕೆ ಭಗವಂತ ಹಾಲಿನ ಕೆನೆಯ ಹೂರ್ಣವನ್ನು ತುಂಬಿಲ್ಲ, ಉದ್ದಿನ ಬೇಳೆ ಹೂರ್ಣವನ್ನು ತುಂಬಿಬಿಟ್ಟಿದಾನೆ; ನಾವು ಅಲ್ಲಿಗೆ ಬಂದು ಮಾಡುವುದೇನು?' ಅಂತ."

ಶ್ರೀರಾಮಕೃಷ್ಣರು ವಿಸ್ಮಯರಾಗಿ: "ಹಾಗೆ ಹೇಳುತ್ತಿದಾನೇನು? ಹಿಂದೆ ಎಂದೂ ಹಾಗೆ ವರ್ತಿಸಿದವನಲ್ಲವಲ್ಲ!"

ಪರಮಹಂಸರು ಫಲಹಾರ ತೆಗೆದುಕೊಳ್ಳುತ್ತಿದಾರೆ; ನರೇಂದ್ರನಿಗೂ ಒಂದು ಸ್ವಲ್ಪ ತಿನ್ನಲು ಕೊಟ್ಟರು.

ಯತೀನದೇವ ಶ್ರೀರಾಮಕೃಷ್ಣರಿಗೆ: "ನೀವು ಯಾವಾಗ ನೋಡಿದರೂ ನರೇಂದ್ರನಿಗೆ ಹೇಳುತ್ತೀರಿ, 'ನರೇಂದ್ರ, ಇದನ್ನು ತಿನ್ನು! ನರೇಂದ್ರ, ಅದನ್ನು ತಿನ್ನು!' ಅಂತ. ನಾವೆಲ್ಲ ಕಸಕಡ್ಡಿಗಳೇನು! ನಮ್ಮ ತಾಯಿ ನಮ್ಮನ್ನು ಮೂರು ಕಾಸಿಗೆ ಕೊಂಡುಕೊಂಡಳೇನು!"

ಶ್ರೀರಾಮಕೃಷ್ಣರು ಯತೀನನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆತ ಶೋಭಾಬಸಾರಿನ ಒಬ್ಬ ಶ್ರೀಮಂತನ ಮಗ. ಆಗಾಗ ದಕ್ಷಿಣೇಶ್ವರಕ್ಕೆ ಬರುತ್ತಾನೆ. ಕೆಲವು ವೇಳೆ ರಾತ್ರಿಯನ್ನು ದಕ್ಷಿಣೇಶ್ವರದಲ್ಲೇ ಕಳೆದು

ಬಿಡುತ್ತಾನೆ. ಪರಮಹಂಸರು ನಗುತ್ತ ನರೇಂದ್ರನಿಗೆ, "ಆತ ನಿನ್ನ ಶ್ರಾದ್ಧವನ್ನು ಮಾಡುತ್ತಿದಾನೆ!" ಅಂತ,

ಪರಮಹಂಸರು ನಗುತ್ತ ನಗುತ್ತ ಯತೀನನ ಗದ್ದ ಹಿಡಿದು ಅಕ್ಕರೆಯಿಂದ ಹೇಳಿದರು, "ನೀನು ಅಲ್ಲಿಗೆ (ದಕ್ಷಿಣೇಶ್ವರಕ್ಕೆ) ಬಾ; ಹೊಟ್ಟೆ ಒಡೆಯೋ ಅಷ್ಟು!" ಅಂತ.

ಶ್ರೀರಾಮಕೃಷ್ಣರು "ವಿವಾಹ ವಿಭ್ರಾಂತಿ" ಎಂಬ ನಕಲಿಯನ್ನು ನೋಡಲು ಪ್ರೇಕ್ಷಾಗೃಹಕ್ಕೆ ಹೋಗಿ ಬಂದು ಬಾಕ್ಸಿನಲ್ಲಿ ಕುಳಿತುಕೊಂಡರು. ಮನೆಗೆಲಸದವಳ ಮಾತುಕತೆ ಕೇಳಿ ನಗಲಾರಂಭಿಸಿದರು. ಸ್ವಲ್ಪ ಹೊತ್ತು ಅದನ್ನು ಕೇಳಿ ಬಳಿಕ ಅನ್ಯಮನಸ್ಕರಾಗಿ ಮಾಸ್ಟರೊಡನೆ ಏನನ್ನೋ ಮೆತ್ತ ಮೆತ್ತಗೆ ಮಾತನಾಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಗಿರೀಶಘೋಷ ಹೇಳುತ್ತಾನಲ್ಲ ಅದು ಸತ್ಯವೇನು?"

ಗಿರೀಶ ಇತ್ತೀಚೆಗೆ ಹೇಳುತ್ತಿದಾನೆ ಪರಮಹಂಸರು ಅವತಾರಪುರುಷರು ಅಂತ.

ಮಾಸ್ಟರ್: "ಹೌದು, ಆತ ಹೇಳುವುದು ಸರಿಯಾಗೇ ಇರಬೇಕು. ಅದು ಹಾಗಿಲ್ಲದಿದ್ದರೆ ನಮಗೆಲ್ಲಾ ಅದು ಸರಿ ಅಂತ ಏಕೆ ಅನಿಸುತ್ತಿದೆ?"

ಶ್ರೀರಾಮಕೃಷ್ಣರು: "ನೋಡು, ಈಗ ಒಂದು ಅವಸ್ಥೆ ಬರುತ್ತಿದೆ. ಹಿಂದಿನ ಅವಸ್ಥೆ ಬದಲಾವಣೆಯನ್ನು ಹೊಂದಿಬಿಟ್ಟಿದೆ. ಈಗ ನಾನು ಯಾವ ಲೋಹವನ್ನೂ ಮುಟ್ಟಲಾರೆ."

ಮಾಸ್ಟರ್ ಈ ಮಾತುಗಳನ್ನು ಆಶ್ಚರ್ಯಚಕಿತನಾಗಿ ಕೇಳುತ್ತಿದಾನೆ.

ಶ್ರೀರಾಮಕೃಷ್ಣರು: "ನನಗೆ ಈ ಹೊಸ ಅವಸ್ಥೆ ಬಂದಿದೆಯಲ್ಲ, ಇದರಲ್ಲಿ ಬಹಳ ಗಹನವಾದ ರಹಸ್ಯವಿದೆ."

ಅವತಾರಾದಿಪುರುಷರು ಈ ಮಾಯೆಯ ಐಶ್ವರ್ಯವನ್ನು ಒಂದು ಕಿಂಚಿತ್ತೂ ಸ್ಪರ್ಶಿಸೋದಿಲ್ಲ ಎಂಬುದಾಗಿ ಬಹುಶಃ ಪರಮಹಂಸರು ಈ ಮಾತುಗಳಿಂದ ಸೂಚಿಸಿರಬಹುದೆ?

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಳ್ಳೇದು, ನನ್ನ ಅವಸ್ಥೆಯಲ್ಲಿ ಏನಾದರೂ ಬದಲಾವಣೆಯನ್ನು ನೋಡುತ್ತಿದ್ದೀಯೇನು?"

ಮಾಸ್ಟರ್: "ಯಾವುದರ ಸಂಬಂಧವಾಗಿ?"

ಶ್ರೀರಾಮಕೃಷ್ಣರು: "ನನ್ನ ಕೆಲಸಕಾರ್ಯಗಳಲ್ಲಿ?"

ಮಾಸ್ಟರ್: "ನಿಮ್ಮ ವಿಷಯ ಜನರಿಗೆ ಗೊತ್ತಾಗುತ್ತ ಗೊತ್ತಾಗುತ್ತ ನಿಮ್ಮ ಕೆಲಸಕಾರ್ಯಗಳು ಅಧಿಕಾಧಿಕವಾಗುತ್ತಾ ಬರುತ್ತಿವೆ."

ಶ್ರೀರಾಮಕೃಷ್ಣರು: "ಕಾಣುತ್ತಿದೆಯೇನು, ಹಿಂದೆ ನಾನು ಏನು ಹೇಳುತ್ತಿದ್ದೆನೊ ಅದು ಇಂದು ಫಲಿಸುತ್ತಿರೋದನ್ನು?"

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನಿದ್ದು ಇದ್ದಕ್ಕಿದ್ದ ಹಾಗೆ ಹೇಳಿದರು, "ಒಳ್ಳೇದು, ಪಲ್ಟುವಿಗೆ ಒಳ್ಳೆ ಧ್ಯಾನ ಆಗುತ್ತಿಲ್ಲವಂತೆ, ಕಾರಣ ಹೇಳಬಲ್ಲೆಯ?"

ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂದಿರುಗಲು ಸಿದ್ಧರಾಗಿದಾರೆ. ಅವರು ಯಾರೊ ಒಬ್ಬ ಭಕ್ತನೆದುರು ಗಿರೀಶನ ಸಂಬಂಧವಾಗಿ ಟೀಕೆ ಮಾಡಿದ್ದರು, "ಬೆಳ್ಳುಳ್ಳಿ ರಸ ಹಾಕಿದ್ದ ಪಾತ್ರೆಯನ್ನು ಒಂದು ಸಾವಿರ ಸಾರಿ ತೊಳೆದರೂ, ಆ ವಾಸನೆಯಿಂದ ಅದನ್ನು ಮುಕ್ತವಾದುದನ್ನಾಗಿ ಮಾಡಲಾಗುವುದೇನು?" ಅಂತ. ಪರಮಹಂಸರ ಈ ಟೀಕೆ ಗಿರೀಶನ ಅಭಿಮಾನವನ್ನು ಉದ್ರೇಕಗೊಳಿಸಿದೆ. ಆತ ಪರಮಹಂಸರು ಇನ್ನೇನು ಹೊರಟರು ಎಂಬುವಾಗ ಅವರಿಗೆ ತನ್ನ ಹೃದಯದಲ್ಲಿದ್ದ ನೈವೇದ್ಯವನ್ನು ಅರ್ಪಿಸಿದ.

ಗಿರೀಶ: "ಬೆಳ್ಳುಳ್ಳಿ ವಾಸನೆ ಎಂದಿಗಾದರೂ ಹೋಗುವುದೆ?"

ಶ್ರೀರಾಮಕೃಷ್ಣರು: "ಹೋಗುತ್ತದೆ."

ಗಿರೀಶ: "ಹಾಗಾದರೆ, ಹೋಗುತ್ತದೆ ಅಂತೀರಾ?"

ಶ್ರೀರಾಮಕೃಷ್ಣರು: "ದಾವಾನಲ ಸುಡುವಾಗ ಗಂಧ-ಗಿಂಧ ಎಲ್ಲ ಹೊರಟು ಹೋಗುತ್ತದೆ. ಬೆಳ್ಳುಳ್ಳಿ ಹಾಕಿದ್ದ ಪಾತ್ರೆಯನ್ನು ಚೆನ್ನಾಗಿ ಸುಟ್ಟರೆ, ಅದು ಆ ಗಂಧದಿಂದ ಮುಕ್ತವಾಗುತ್ತದೆ; ಹೊಸ ಪಾತ್ರೆಯಾಗಿಬಿಡುತ್ತದೆ.

"ಯಾರು ಹೇಳುತ್ತಾನೊ ತನಗೆ ದೊರಕದು ಅಂತ, ಆತನಿಗೆ ಎಂದಿಗೂ ದೊರಕದು. ಮುಕ್ತಾಭಿಮಾನಿ ಮುಕ್ತನೇ ಆಗುತ್ತಾನೆ; ಬದ್ಧಾಭಿಮಾನಿ ಬದ್ಧನೇ ಆಗುತ್ತಾನೆ. ಯಾರು ದೃಢಮನಸ್ಸಿನಿಂದ ಭಾವಿಸುತ್ತಾನೊ ತಾನು ಮುಕ್ತನಾಗಿಬಿಟ್ಟೆ ಅಂತ, ಆತ ಮುಕ್ತನೇ ಆಗಿಬಿಡುತ್ತಾನೆ. ಯಾರು ಹಗಲು ಇರುಳು ತಾನು ಬದ್ಧ, ತಾನು ಬದ್ಧ ಅಂತ ಭಾವಿಸುತ್ತಾನೊ, ಆತ ಬದ್ಧನೇ ಆಗಿಬಿಡುತ್ತಾನೆ."

೩೭

## ಪರಮಹಂಸರು ಮತ್ತು ನರೇಂದ್ರ

---

೧ನೆ ಮಾರ್ಚಿ ೧೮೮೫, ಫಾಲ್ಗುಣ ಪೂರ್ಣಿಮೆ, ಭಾನುವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತು ಸಮಾಧಿಸ್ಥರಾಗಿದಾರೆ. ಮಹಿಮಚರಣ, ರಾಮದತ್ತ, ಮನಮೋಹನ, ನಬಾಯಿಚೈತನ್ಯ, ಮಾಸ್ಟರ್ ಇವರೇ ಮೊದಲಾದ ಅನೇಕ ಭಕ್ತರು ನೆಲದ ಮೇಲೆ ಹಾಸಿದ್ದ ಮಂದಲಿಗೆ ಮೇಲೆ ಕುಳಿತಿದಾರೆ. ಇವರೆಲ್ಲರೂ ಶ್ರೀರಾಮಕೃಷ್ಣರನ್ನು ದೃಷ್ಟಿಸಿನೋಡುತ್ತಿದಾರೆ.

ಇಂದು ದೋಲ್-ಪೂರ್ಣಿಮೆ, ಚೈತನ್ಯದೇವ ಹುಟ್ಟಿದ ದಿನ.

ಪರಮಹಂಸರು ಸಮಾಧ್ಯವಸ್ಥೆಯಿಂದ ಕೆಳಕ್ಕೆ ಇಳಿಯುತ್ತಿದಾರೆ. ಈಗ ಇನ್ನೂ ಭಾವಾವಿಷ್ಟರಾಗಿಯೇ ಇದಾರೆ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ ಹೇಳಿದರು, "ಭಗವಂತನ ವಿಷಯವಾಗಿ ಏನಾದರು ಒಂದು ಕಿಂಚಿತ್ ಹೇಳು ನಮಗೆ" ಅಂತ.

ಮಹಿಮಚರಣ ನಾರದಪಂಚರಾತ್ರದಿಂದ ಕೆಲವು ಚರಣಗಳನ್ನು ಎತ್ತಿ ಹೇಳಿದ:

ಪ್ರೇಮದೊಳಾರಾಧಿಸೆ ದೇವರ, ಈ ಜಪತಪವಿನ್ನೇಕೆ?
ಪ್ರೇಮದೊಳಾರಾಧಿಸದಿದ್ದರೆ ಈ ಜಪತಪವಿನ್ನೇಕೆ?
ಒಳ ಹೊರಗೂ ಆತನೆ ಕಾಣಲು ಈ ಜಪತಪದಿಂದೇನು?
ಒಳ ಹೊರಗೂ ಆತನ ಕಾಣದ ಈ ಜಪತಪದಿಂದೇನು?

ಓ ಮಗು ಪರಬ್ರಹ್ಮ, ನಿನ್ನೀ ಜಪತಪವನು ನಿಲಿಸೋ!
ಜ್ಞಾನಸಿದ್ಧ ಶ್ರೀ ದ್ವಿಜವರ ಶಂಕರನೆಡೆ ನಡೆಯೋ.
ಭವನಿಗಳನಿಬಂಧಚ್ಛೇದನಕಾರಣಶಕ್ತಿಯನು
ಪಡೆ ಅವನಿಂ ವೈಷ್ಣವೋಕ್ತ ಹರಿಭಕ್ತಿಯನು!

ಮಹಿಮಚರಣ ಹೇಳಿದ, "ಒಮ್ಮೆ ನಾರದ ತಪಸ್ಸುಮಾಡುತ್ತಿದ್ದಾಗ ದೈವವಾಣಿ ಮೇಲಿನ ಚರಣಗಳನ್ನು ಎತ್ತಿ ಹೇಳಿತು ಎಂಬುದಾಗಿ ನಾರದಪಂಚರಾತ್ರದಲ್ಲಿ ಹೇಳಿದೆ" ಅಂತ.

ಶ್ರೀರಾಮಕೃಷ್ಣರು : "ಎರಡು ವಿಧದ ಸಾಧಕರಿದಾರೆ: ಜೀವಕೋಟಿಗಳು, ಈಶ್ವರಕೋಟಿಗಳು. ಜೀವಕೋಟಿಗಳ ಭಕ್ತಿ ವೈಧೀಭಕ್ತಿ. ಇದರಲ್ಲಿ ಇಷ್ಟು ಉಪಚಾರಗಳಿಂದ ಪೂಜೆಮಾಡಬೇಕು, ಇಷ್ಟುಸಲ ಜಪ ಮಾಡಬೇಕು, ಇಷ್ಟು ಸಲ ಪುರಶ್ಚರಣೆ ಮಾಡಬೇಕು ಎಂಬ ವಿಧಿನಿಯಮಗಳಿವೆ. ಈ ವಿಧವಾದ ಭಕ್ತಿ ಪಕ್ವವಾಯಿತು ಅಂದರೆ ಜ್ಞಾನ ದೊರೆಯುತ್ತದೆ. ಜ್ಞಾನ ದೊರೆಯಿತು ಅಂದರೆ ಜೀವ ಪರಮಾತ್ಮನಲ್ಲಿ ಲಯವಾಗಿಬಿಡುತ್ತದೆ. ಜೀವ ಪರಮಾತ್ಮನಲ್ಲಿ ಲಯವಾಯಿತು ಅಂದರೆ ಮತ್ತೆ ಅದು ಹಿಂದಿರುಗಿ ಬರೋದಿಲ್ಲ.

"ಆದರೆ ಈಶ್ವರಕೋಟಿಗಳ ಸಮಾಚಾರವೇ ಬೇರೆ. ಇವರು ಅನುಲೋಮ ವಿಲೋಮ ಕ್ರಮವನ್ನು ಅನುಸರಿಸುತ್ತಾರೆ. 'ನೇತಿ', 'ನೇತಿ' ಕ್ರಮವನ್ನು ಅನುಸರಿಸಿ ಚಾವಣಿಯನ್ನು ಮುಟ್ಟಿದಾಗ ಇವರಿಗೆ ಅನುಭವವಾಗುತ್ತದೆ, 'ಚಾವಣಿ ಯಾವುದರಿಂದ — ಇಟ್ಟಿಗೆ, ಸುಣ್ಣ, ಇಟ್ಟಿಗೆ ಪುಡಿ — ನಿರ್ಮಿತವಾಗಿರುವುದೊ, ಮೆಟ್ಟಿಲೂ ಅದೇ ವಸ್ತುಗಳಿಂದ ನಿರ್ಮಿತವಾಗಿದೆ' ಅಂತ. ಬಳಿಕ ಇವರು ಇಚ್ಛೆಬಂದಂತೆ ಚಾವಣಿಯ ಮೇಲೂ ಇರಬಲ್ಲರು ಅಥವಾ ಮೆಟ್ಟಲುಗಳನ್ನು ಹತ್ತಿಳಿಯುತ್ತಲೂ ಇರಬಲ್ಲರು.

"ಶುಕದೇವ ಸಮಾಧಿಯಲ್ಲಿ — ನಿರ್ವಿಕಲ್ಪ ಸಮಾಧಿಯಲ್ಲಿ, ಜಡ ಸಮಾಧಿಯಲ್ಲಿ ಇದ್ದ. ಆತ ಪರೀಕ್ಷಿತ್ ರಾಜನಿಗೆ ಭಾಗವತ ಶ್ರವಣ ಮಾಡಿಸಬೇಕಾಗಿದ್ದುದರಿಂದ, ಭಗವಂತ ನಾರದನನ್ನು ಆತನ ಹತ್ತಿರಕ್ಕೆ ಕಳುಹಿಸಿದ. ನಾರದ ಬಂದು ನೋಡುತ್ತಾನೆ, ಶುಕದೇವ ಜಡವತ್ ಬಾಹ್ಯಜ್ಞಾನಶೂನ್ಯನಾಗಿ ಕುಳಿತುಬಿಟ್ಟಿದಾನೆ. ಆಗ ನಾರದ ವೀಣೆಯನ್ನು ನುಡಿಸುತ್ತ ಹರಿಯ ರೂಪಿನ ಸಂಬಂಧವಾಗಿ ನಾಲ್ಕು ಶ್ಲೋಕಗಳನ್ನು ಹಾಡಿದ. ಮೊದಲನೆ ಶ್ಲೋಕವನ್ನು ಹಾಡುತ್ತಿದ್ದ ಹಾಗೆಯೆ ಶುಕದೇವನಿಗೆ ರೋಮಾಂಚವಾಯಿತು. ಬಳಿಕ ಪ್ರೇಮಾಶ್ರು ಸುರಿಯಲಾರಂಭಿಸಿತು; ಆತ ತನ್ನ ಅಂತರ್ಯದಲ್ಲಿ—ಹೃದಯ ಮಧ್ಯದಲ್ಲಿ ಭಗವಂತನ ಚಿನ್ಮಯ ರೂಪನ್ನು ದರ್ಶನ ಮಾಡಲಾರಂಭಿಸಿದ. ಜಡಸಮಾಧಿ ದೊರೆತನಂತರ ಮತ್ತೆ ಆತನಿಗೆ ರೂಪದರ್ಶನವಾಯಿತು. ಶುಕದೇವ ಈಶ್ವರಕೋಟಿ.

"ಹನುಮಂತ ಸಾಕಾರ ಮತ್ತು ನಿರಾಕಾರ ಸಾಕ್ಷಾತ್ಕಾರಮಾಡಿ

ಕೊಂಡು ಚಿದ್ಘನ ಆನಂದಮೂರ್ತಿಯೇ ಆದ ರಾಮಮೂರ್ತಿಯಲ್ಲೇ ನಿಷ್ಠಾವಂತನಾಗಿ ಇದ್ದ.

"ಪ್ರಹ್ಲಾದ ಕೆಲವು ವೇಳೆ 'ಸೋಽಹಂ', 'ನಾನೇ ಆತನು' ಎಂಬ ಭಾವದಲ್ಲಿ ಇರುತ್ತಿದ್ದ! ಮತ್ತೆ ಕೆಲವುವೇಳೆ ದಾಸ್ಯಭಾವದಲ್ಲಿ ಇರುತ್ತಿದ್ದ. ಭಕ್ತಿಯ ಆಶ್ರಯವನ್ನು ಹೊಂದದೆ ಇದ್ದರೆ ಬೇರೆ ಏನನ್ನು ತಾನೆ ಆಶ್ರಯಿಸಿ ಇರಲಾದೀತು? ಅದಕ್ಕಾಗಿಯೆ ಸೇವ್ಯ-ಸೇವಕ ಭಾವವನ್ನು—ನೀನು ಪ್ರಭು ನಾನು ದಾಸ ಎಂಬ ಭಾವವನ್ನು ಆರೋಪಿಸಿಕೊಳ್ಳಬೇಕಾಗುತ್ತದೆ. ಹರಿ-ರಸವನ್ನು ಪಾನಮಾಡಬೇಕಾದರೆ ರಸ-ರಸಿಕನ ಭಾವವನ್ನು—ಹೇ ಭಗವಂತ ನೀನು ರಸ, ನಾನು ರಸಿಕ ಎಂಬ ಭಾವವನ್ನು ಆರೋಪಿಸಿಕೊಳ್ಳಬೇಕಾಗುತ್ತದೆ.

"'ಭಕ್ತಿಯ ಅಹಂ', 'ವಿದ್ಯೆಯ ಅಹಂ', 'ಬಾಲಕನ ಅಹಂ'—ಇವುಗಳಲ್ಲಿ ಯಾವ ದೋಷವೂ ಇಲ್ಲ. ಶಂಕರಾಚಾರ್ಯರು ಲೋಕ ಶಿಕ್ಷಣಾರ್ಥಕ್ಕಾಗಿ 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. 'ಬಾಲಕನ ಅಹಂ' ನಲ್ಲಿ ಯಾವ ಆಸಕ್ತಿಯೂ ಇಲ್ಲ. ಬಾಲಕ ತ್ರಿಗುಣಾತೀತ,—ಯಾವ ಗುಣಕ್ಕೂ ವಶನಾಗಿಲ್ಲ. ಈ ನಿಮಿಷ ಕೋಪಿಸಿಕೊಳ್ಳುತ್ತಾನೆ; ಮರು ನಿಮಿಷ ನೋಡಿದರೆ, ಕೋಪ-ಗೀಪ ಏನೂ ಇರೋದಿಲ್ಲ. ಈ ನಿಮಿಷ ಆಟದ ಮನೆ ಕಟ್ಟುತ್ತಾನೆ; ಮರು ನಿಮಿಷ ಅದನ್ನು ಮರೆತೇ ಬಿಡುತ್ತಾನೆ. ಈಗ ಕಾಣುತ್ತಾನೆ, ತನ್ನ ಗೆಳೆಯರನ್ನು ಬಹಳವಾಗಿ ಪ್ರೀತಿಸುತ್ತಿರುವಂತೆ; ಒಂದು ಕೆಲವು ದಿನ ಅವರು ಕಣ್ಣಿಗೆ ಬೀಳದೆ ಇದ್ದರು ಅಂದರೆ, ಅವರನ್ನು ಸಂಪೂರ್ಣವಾಗಿ ಮರತೇಬಿಡುತ್ತಾನೆ. ಬಾಲಕ, ಸತ್ತ್ವ ರಜಸ್ಸು ತಮಸ್ಸು ಇವುಗಳಾವುದಕ್ಕೂ ವಶನಾಗಿಲ್ಲ.

"'ನೀನು ಭಗವಂತ, ನಾನು ಭಕ್ತ'—ಇದು ಭಕ್ತನ ಭಾವ,—'ಭಕ್ತಿಯ ಅಹಂ' ಎಂಬುದು ಇದೇನೆ. ಏಕೆ, ಭಕ್ತ 'ಭಕ್ತಿಯ ಅಹಂ' ಇಟ್ಟುಕೋತಾನೆ? ಆತನ ಭಾವನೆ, ಈ 'ಅಹಂ' ಎಂಬುದು ಹೋಗತಕ್ಕದ್ದಲ್ಲ; ಆದ್ದರಿಂದ ಈ ನೀಚ 'ಅಹಂ' 'ದಾಸ ಅಹಂ' ಆಗಿ, 'ಭಕ್ತನ ಅಹಂ' ಆಗಿ ಇರಲಿ ಅಂತ.

"ಬೇಕಾದಷ್ಟು ವಿಚಾರದಲ್ಲಿ ತೊಡಗು, 'ಅಹಂ' ಎಂಬುದು ಹೋಗದು. 'ಅಹಂ' ಎಂಬುದೇ ಕುಂಭ, ಬ್ರಹ್ಮನೇ ಎಲ್ಲೆಲ್ಲೂ ನೀರೇ ನೀರಾಗಿರುವ ಸಮುದ್ರ ಅಂತ ಇಟ್ಟುಕೊಳ್ಳಿ. ಕುಂಭದ ಒಳಗು ಹೊರಗು

ನೀರು ತುಂಬಿದೆ; ಎಲ್ಲೆಲ್ಲೂ ಬರೀ ನೀರೇ ನೀರು; ಆದರೂ ಕುಂಭ ಎಂಬುದು ಮಾತ್ರ ಇದ್ದೇ ಇರುತ್ತದೆ. ಈ ಕುಂಭವೇ 'ಭಕ್ತನ ಅಹಂ' ಎಂಬುದರ ಸ್ವರೂಪ. ಎಲ್ಲಿಯವರೆಗೆ 'ಕುಂಭ' ಎಂಬುದು ಇರುವುದೊ ಅಲ್ಲಿಯವರೆಗೆ 'ನಾನು', 'ನೀನು' ಎಂಬುವು ಇದ್ದೇ ಇರುತ್ತವೆ; 'ನೀನು ಪ್ರಭು, ನಾನು ದಾಸ; ನೀನು ಭಗವಂತ, ನಾನು ಭಕ್ತ' ಎಂಬುವೂ ಇದ್ದೇ ಇರುತ್ತವೆ. ಬೇಕಾದಷ್ಟು ವಿಚಾರದಲ್ಲಿ ತೊಡಗು, ಇದು ಹೋಗತಕ್ಕದ್ದಲ್ಲ. ಕುಂಭವೇ ಇಲ್ಲದೆ ಹೋಗಿಬಿಟ್ಟಿತು ಅಂದರೆ ಆಗ ಅದು ಬೇರೆ ಸಮಾಚಾರ."

ನರೇಂದ್ರ ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಒಂದುಕಡೆ ಕುಳಿತುಕೊಂಡ. ಪರಮಹಂಸರು ಆತನೊಡನೆ ಮಾತು ಕತೆಯಾಡುತ್ತಿದಾರೆ. ಹಾಗೆ ಮಾತನಾಡುತ್ತಿದ್ದ ಹಾಗೆಯೆ ಅವರು ಮಂಚ ದಿಂದ ಕೆಳಕ್ಕೆ ಇಳಿದು ಬಂದು ನೆಲದ ಮೇಲೆ ಹಾಸಿದ್ದ ಮಂದಲಿಗೆಯ ಮೇಲೆ ಕುಳಿತುಕೊಂಡರು. ಅಷ್ಟರೊಳಗಾಗಿ ಕೊಠಡಿ ಜನರಿಂದ — ಭಕ್ತರಿಂದ ಮತ್ತು ಹೊರಗಿನವರಿಂದ ತುಂಬಿಹೋಗಿದೆ.

ಶ್ರೀರಾಮಕೃಷ್ಣರು. ನರೇಂದ್ರನಿಗೆ: "ಸೌಖ್ಯವೆ? ನೀನು ಆಗಾಗ ಗಿರೀಶಘೋಷನ ಮನೆಗೆ ಹೋಗುತ್ತಲೇ ಇದ್ದೀಯಂತೆ ನಿಜವೇನು?"

ನರೇಂದ್ರ: "ಹೌದು, ಆಗಾಗ ಅಲ್ಲಿಗೆ ಹೋಗುತ್ತಿದೇನೆ."

ಗಿರೀಶ ಈಗ ಕೆಲವು ತಿಂಗಳಿಂದ ಶ್ರೀರಾಮಕೃಷ್ಣರ ಹತ್ತಿರ ಬಂದು ಹೋಗುತ್ತಿದಾನೆ. ಒಮ್ಮೆ ಪರಮಹಂಸರು ಹೇಳಿದರು, "ಗಿರೀಶ ಘೋಷನ ವಿಶ್ವಾಸದ ಆಳವನ್ನು ಕಂಡುಹಿಡಿಯಲು ಯಾರಿಗೂ ಸಾಧ್ಯವಿಲ್ಲ" ಅಂತ. ಆತನ ವಿಶ್ವಾಸ ಎಂಥದೊ, ಆತನ ಅನುರಾಗವೂ ಅಂಥದೆ. ಮನೆಯಲ್ಲಿ ಸರ್ವದಾ ಪರಮಹಂಸರ ಚಿಂತನೆಯಲ್ಲಿಯೇ ಮುಳುಗಿರು ತ್ತಾನೆ. ನರೇಂದ್ರ ಆಗಾಗ ಆತನ ಮನೆಗೆ ಹೋಗುತ್ತಾನೆ. ಹರಿಪದ, ದೇವೇಂದ್ರ ಮತ್ತು ಇನ್ನೂ ಅನೇಕ ಭಕ್ತರು ಆತನ ಮನೆಗೆ ಆಗಾಗ ಹೋಗುತ್ತಾರೆ. ಗಿರೀಶ ಅವರೊಡನೆ ಪರಮಹಂಸರ ವಿಷಯವಾಗಿಯೇ ಮಾತನಾಡುತ್ತಾನೆ. ಗಿರೀಶ ಗೃಹಸ್ಥನಾಗಿದಾನೆ; ಆದರೆ ಪರಮಹಂಸ ರಿಗೆ ಗೊತ್ತಿದೆ ನರೇಂದ್ರ ಗೃಹಸ್ಥನಾಗೋದಿಲ್ಲ ಅಂತ; — ಕಾಮಕಾಂಚನ ತ್ಯಾಗಿಯಾಗುತ್ತಾನೆ ಅಂತ.

ಶ್ರೀರಾಮಕೃಷ್ಣರು: "ನೀನು ಅಡಿಗಡಿಗೆ ಗಿರೀಶಘೋಷನ ಮನೆಗೆ

ಹೋಗುತ್ತೀಯೇನು? ಆದರೆ ನೋಡಿಕೊ, ಬೆಳ್ಳುಳ್ಳಿ ರಸ ಇಟ್ಟಿದ್ದ ಪಾತ್ರೆಯನ್ನು ಎಷ್ಟುಸಲ ತೊಳೆದರೂ, ಬೆಳ್ಳುಳ್ಳಿ ಗಂಧ ಮಾತ್ರ ಕಿಂಚಿತ್ತಾದರೂ ಆ ಪಾತ್ರೆಯಲ್ಲಿ ಉಳಿದೇ ಉಳಿದಿರುತ್ತದೆ. ಯುವಕರು ಶುದ್ಧ ಜೀವಿಗಳು, ಕಾಮಕಾಂಚನ ಅವರನ್ನು ಸ್ಪರ್ಶಿಸಿಲ್ಲ. ಬಹಳಕಾಲ ಕಾಮಕಾಂಚನದ ಮಧ್ಯೆ ಇದ್ದರೆ ಬೆಳ್ಳುಳ್ಳಿಯಂಥ ಗಂಧ ಉಂಟಾಗಿಬಿಡುತ್ತದೆ. ಅವರನ್ನು ಕಾಗೆ ಕುಟುಕಿದ ಮಾವಿನ ಹಣ್ಣಿಗೆ ಹೋಲಿಸಬಹುದು. ಅದನ್ನು ದೇವರಿಗೂ ಅರ್ಪಿಸೋಕಾಗೋದಿಲ್ಲ, ತಾನೂ ತಿನ್ನೋಕಾಗೋದಿಲ್ಲ. ಉದಾಹರಣೆಗೆ ಹೊಸ ಮಡಕೆ ಮತ್ತು ಮೊಸರಿನ ಮಡಕೆ. ಮೊಸರಿನ ಮಡಕೆಯಲ್ಲಿ ಹಾಲು ಇಡಲು ಭಯವಾಗುತ್ತದೆ. ಅನೇಕವೇಳೆ ಅದು ಕೆಟ್ಟು ಹೋಗಿಬಿಡುತ್ತದೆ.

"ಗಿರೀಶನಂಥವರು ಬೇರೆ ಶ್ರೇಣಿಗೆ ಸೇರಿದವರು. ಇವರಿಗೆ ಯೋಗವೂ ಬೇಕು, ಭೋಗವೂ ಬೇಕು. ಉದಾಹರಣೆಗೆ ರಾವಣ— ಆತನಿಗೆ ದೇವಕನ್ಯೆ ನಾಗಕನ್ಯೆಯರೂ ಬೇಕು, ರಾಮನನ್ನೂ ಪಡೆದುಕೋಬೇಕು. ಇವರನ್ನು ಅಸುರರಿಗೆ ಹೋಲಿಸಬಹುದು. ಅಸುರರು ನಾನಾವಿಧದ ಭೋಗೋಪಭೋಗಗಳನ್ನೂ ಅನುಭವಿಸುತ್ತಾರೆ ಮತ್ತು ನಾರಾಯಣನನ್ನೂ ಪಡೆಯುತ್ತಾರೆ."

ನರೇಂದ್ರ: "ಆದರೆ ಈಗ ಗಿರೀಶಘೋಷ ತನ್ನ ಹಿಂದಿನ ಸಹಚರರನ್ನೆಲ್ಲ ಬಿಟ್ಟುಬಿಟ್ಟಿದಾನೆ."

ಶ್ರೀರಾಮಕೃಷ್ಣರು: "ಹೌದು, ಹೌದು. ಆತ ಈಗ ಮುಪ್ಪಿನಲ್ಲಿ ಹಿಡ ಮಾಡಿದ ಹೋರಿಯ ಹಾಗೆ ಇದಾನೆ. ನಾನು ವರ್ಧಮಾನಕ್ಕೆ ಹೋಗಿದ್ದಾಗ, ಅಲ್ಲಿ ಒಂದು ಎತ್ತು ಹಸುಗಳ ಹಿಂದೆಯೇ ಸುತ್ತಾಡುತ್ತಿದ್ದುದನ್ನು ನೋಡಿದೆ. ಆಗ ನಾನು ಒಬ್ಬ ಗಾಡಿಯವನನ್ನು ಕೇಳಿದೆ, 'ಏನು ಬಂದಿದೆ ಇದಕ್ಕೆ ರೋಗ? ಇದು ಎತ್ತಲ್ಲವೆ!' ಅಂತ. ಅದಕ್ಕೆ ಆತ ಹೇಳಿದ, 'ಹೆಚ್ಚು ವಯಸ್ಸಾದ ಮೇಲೆ ಇದಕ್ಕೆ ಹಿಡ ಮಾಡಿದಾರೆ, ಆದ್ದರಿಂದ ಇದು ತನ್ನ ಹಿಂದಿನ ಚಾಳಿಯನ್ನು ಇನ್ನೂ ಬಿಟ್ಟಿಲ್ಲ' ಅಂತ.

"ಒಂದು ಜಾಗದಲ್ಲಿ ಕೆಲವು ಸನ್ಯಾಸಿಗಳು ಕುಳಿತುಕೊಂಡಿದ್ದರು. ಒಬ್ಬ ಯುವತಿ ಆ ಮಾರ್ಗವಾಗಿಯೆ ನಡೆದುಹೋದಳು. ಎಲ್ಲರೂ ಕುಳಿತು ಧ್ಯಾನಮಾಡುತ್ತಿದಾರೆ; ಆದರೆ, ಅವರಲ್ಲಿ ಒಬ್ಬ ಮಾತ್ರ ಓರೆನೋಟದಿಂದ

ಆಕೆಯನ್ನು ನೋಡಿದ. ಆತ ಮೂರು ಮಕ್ಕಳ ತಂದೆಯಾದ ಬಳಿಕ ಸನ್ಯಾಸಿಯಾಗಿದ್ದ.

"ಯಾವುದಾದರು ಒಂದು ಪಾತ್ರೆಯಲ್ಲಿ ಬೆಳ್ಳುಳ್ಳಿ ರಸವನ್ನು ಇಟ್ಟಿದ್ದರೆ, ಬೆಳ್ಳುಳ್ಳಿ ಗಂಧ ಅದನ್ನು ಬಿಟ್ಟು ತೊಲಗುವುದೆ? ಗೊಬ್ಬಳಿ ಗಿಡ ಮಾವಿನ ಹಣ್ಣು ಬಿಡುತ್ತದೆಯೆ? ಹಾಗೆ ಮಾಡುವ ಸಿದ್ಧಿ ಎಲ್ಲರಿಗೂ ದೊರೆಯುವುದೆ?

"ಸಂಸಾರಿಗಳಿಗೆ ಸಮಯವೆಲ್ಲಿ? ಒಬ್ಬನಿಗೆ, ಒಬ್ಬ ಭಾಗವತಪಂಡಿತ ಬೇಕಾಗಿತ್ತು. ಆತನ ಸ್ನೇಹಿತ ಆತನಿಗೆ ಹೇಳಿದ, 'ಒಬ್ಬ ಉತ್ತಮ ಭಾಗವತಪಂಡಿತ ಇದಾನೆ. ಆದರೆ ಆತನಿಗೆ ಒಂದು ತೊಂದರೆ ಇದೆ: ಆತ ಒಬ್ಬ ದೊಡ್ಡ ಆರಂಬಗಾರ. ಆತನಿಗೆ ನಾಲ್ಕು ನೇಗಿಲು, ಎಂಟು ಎತ್ತುಗಳು ಇವೆ. ಯಾವಾಗ ನೋಡಿದರೂ ಆತ ಅವುಗಳ ಹಿಂದೆಯೇ ಇರುತ್ತಾನೆ; ಎಳ್ಳಷ್ಟೂ ಸಮಯವೇ ಇಲ್ಲ' ಅಂತ. ಯಾರಿಗೆ ಪಂಡಿತ ಬೇಕಾಗಿದ್ದನೊ ಆತ ಹೇಳಿದ, 'ನನಗೆ ಇಂಥ ಭಾಗವತಪಂಡಿತ—ಯಾರಿಗೆ ಸಮಯವೇ ಇಲ್ಲವೊ—ಬೇಕಾಗಿಲ್ಲ. ನೇಗಿಲು ಎತ್ತು ಇವುಗಳಲ್ಲಿಯೇ ನಿರತನಾಗಿರೋ ಭಾಗವತಪಂಡಿತನಿಗಾಗಿ ನಾನು ಹುಡುಕುತ್ತಿಲ್ಲ. ಯಾರು ನನಗೆ ಭಾಗವತಶ್ರವಣ ಮಾಡಿಸಬಲ್ಲನೊ ಅಂಥ ಭಾಗವತಪಂಡಿತ ಬೇಕು' ಅಂತ.

"ಒಬ್ಬ ದೊರೆ ನಿತ್ಯವೂ ಭಾಗವತವನ್ನು ಕೇಳುತ್ತಿದ್ದ. ಭಾಗವತವನ್ನು ಓದುತ್ತಿದ್ದ ಪಂಡಿತ ನಿತ್ಯವೂ ತಾನು ಓದಿಮುಗಿಸಿದನಂತರ ದೊರೆಯನ್ನು ಕೇಳುತ್ತಿದ್ದ, 'ಮಹಾಸ್ವಾಮಿ, ನಾನು ಓದಿದ್ದು ತಮಗೆ ಅರ್ಥವಾಯಿತೆ?' ಅಂತ. ನಿತ್ಯವೂ ದೊರೆ ಉತ್ತರವೀಯುತ್ತಿದ್ದ, 'ಮೊದಲು ನೀವೇ ಅದನ್ನು ಅರ್ಥಮಾಡಿಕೊಳ್ಳಿ' ಅಂತ. ಪಂಡಿತ ಮನೆಗೆ ಹಿಂದಿರುಗಿ ಹೋಗಿ ದಿನವೂ ಯೋಚಿಸುತ್ತಿದ್ದ, 'ದೊರೆ ಏಕೆ ಹೇಳುತ್ತಿದಾನೆ, "ಮೊದಲು ನೀವೇ ಅದನ್ನು ಅರ್ಥಮಾಡಿಕೊಳ್ಳಿ" ಅಂತ?' ಎಂದು. ಪಂಡಿತ ಸಾಧನೆ ಭಜನೆ ಮಾಡುತ್ತಿದ್ದ—ಕ್ರಮೇಣ ಆತನಿಗೆ ಸರಿಯಾದ ಜ್ಞಾನೋದಯವಾಯಿತು. ಆಗ ಆತನಿಗೆ ತೋರಿತು, 'ಹರಿಪಾದಪದ್ಮವೇ ಸತ್ಯ, ಉಳಿದುದೆಲ್ಲ ಮಿಥ್ಯಾ' ಎಂದು. ಬಳಿಕ ಸಂಸಾರದಲ್ಲಿ ವಿರಕ್ತನಾಗಿ ಮನೆ ಬಿಟ್ಟು ಹೊರಟ. ಮನೆ ಬಿಟ್ಟು ಹೊರಡುವಾಗ ಆತ ಒಬ್ಬ ದೂತನ

ಮುಖಾಂತರ ದೊರೆಗೆ ತಿಳಿಸಿದ, 'ಮಹಾಸ್ವಾಮಿ, ಈಗ ನಾನು ಅರ್ಥ ಮಾಡಿಕೊಂಡೆ' ಎಂಬುದಾಗಿ.

"ಆದರೆ ನಾನು ಸಂಸಾರಿಗಳನ್ನ ಒಂದು ವಿಧವಾದ ನಿಕೃಷ್ಟದೃಷ್ಟಿಯಿಂದ ನೋಡುತ್ತಿರುವೆನೇನು? ಇಲ್ಲ. ಅವರು ನನ್ನ ಕಣ್ಣಿಗೆ ಬಿದ್ದಾಗ ಅವರನ್ನು ಬ್ರಹ್ಮಜ್ಞಾನದ ದೃಷ್ಟಿಯಿಂದ ನೋಡಲಾರಂಭಿಸುತ್ತೇನೆ. ಆಗ ಆತನೇ ಎಲ್ಲವೂ ಆಗಿದಾನೆ—ಪ್ರತಿಯೊಂದೂ ನಾರಾಯಣನೆ, ಎಲ್ಲಾ ಯೋನಿಯೂ ಮಾತೃಯೋನಿಯೆ ಅಂತ ತೋರಿಬರುತ್ತದೆ. ಆಗ ವೇಶ್ಯೆಗು ಮತ್ತು ಪತಿವ್ರತೆಗು ಯಾವ ಪ್ರಭೇದವೂ ಇರುವಂತೆ ನನಗೆ ತೋರಿ ಬರೋದಿಲ್ಲ.

"ನಾನು ಏನು ಹೇಳಲಿ! ಎಲ್ಲರೂ ಉದ್ದಿನಬೇಳೆ ಬೇಕು ಅಂತ ಬರೋರೆ! ಕಾಮಕಾಂಚನ ಬಿಡೋಕೆ ಯಾರಿಗೂ ಇಚ್ಛೆಯಿಲ್ಲ. ಜನರು ಹೆಂಗಸಿನ ರೂಪಕ್ಕೆ ಮರುಳಾಗಿಬಿಡುತ್ತಾರೆ; ಹಣ ಐಶ್ವರ್ಯಕ್ಕೆ ಮರುಳಾಗಿಬಿಡುತ್ತಾರೆ. ಆದರೆ ಒಮ್ಮೆ ಭಗವಂತನ ರೂಪವನ್ನು ನೋಡಿದ್ದೇ ಆದರೆ, ಆಗ ಬ್ರಹ್ಮಪದವೂ ತುಚ್ಛವಾಗಿ ತೋರಿಬಿಡುತ್ತದೆ.

"ಒಬ್ಬ ರಾವಣನನ್ನು ಕೇಳಿದ; 'ನೀನು ಅನೇಕ ರೂಪುಗಳನ್ನು ಧರಿಸಿ ಸೀತೆಯ ಸಮ್ಮುಖಕ್ಕೆ ಹೋಗುತ್ತಿದ್ದೀಯೆ; ರಾಮನ ರೂಪು ಧರಿಸಿ ಏಕೆ ನೀನು ಹೋಗಬಾರದು?' ಅಂತ. ಅದಕ್ಕೆ ರಾವಣ ಹೇಳಿದ, 'ರಾಮನ ರೂಪನ್ನು ನನ್ನ ಹೃದಯದಲ್ಲಿ ಒಮ್ಮೆ ನೋಡಿದ್ದೇ ಆದರೆ, ಆಗ ಕಣ್ಣಿಗೆ ರಂಭೆ ತಿಲೋತ್ತಮೆ ಇವರೆಲ್ಲ ಸ್ಮಶಾನದ ಬೂದಿಯೋಪಾದಿಯಲ್ಲಿ ತೋರಿ ಬರುತ್ತಾರೆ; ಬ್ರಹ್ಮಪದವೂ ತುಚ್ಛವಾಗಿ ತೋರಿಬರುತ್ತದೆ. ಹಾಗಿರುವಲ್ಲಿ ಪರಸ್ತ್ರೀಯ ಯೋಚನೆ ಹೇಗೆ ತಾನೆ ಹೃದಯದಲ್ಲಿ ಉದಯವಾದೀತು!' ಅಂತ.

"ಹಾ! ಎಲ್ಲರೂ ಉದ್ದಿನಬೇಳೆ ಗಿರಾಕಿಗಳೇ! ಜೀವಿ ಶುದ್ಧವಾಗದ ಹೊರತು ಭಗವಂತನಲ್ಲಿ ಶ್ರದ್ಧೆ ಭಕ್ತಿ ಉಂಟಾಗದು—ಮನಸ್ಸು ಏಕಾಗ್ರವಾಗದು, ಸಿಕ್ಕಿಸಿಕ್ಕಿದ ಕಡೆಗೆ ಹರಿದುಹೋಗುತ್ತಿರುತ್ತದೆ.

(ಮನಮೋಹನನಿಗೆ) "ನೀನು ಕೋಪಾನಾದರೂ ಮಾಡಿಕೊ ಅಥವಾ ಇನ್ನೇನು ಬೇಕಾದರೂ ಮಾಡಿಕೊ, ನಾನು ಮಾತ್ರ ರಾಖಾಲನಿಗೆ ಹೇಳಿಬಿಟ್ಟೆ, 'ನೀನು ಯಾರ ಕೈಕೆಳಗೊ ದಾಸತ್ವಮಾಡುತ್ತಿದ್ದೀಯೆ, ಉದ್ಯೋಗಕ್ಕೆ ಸೇರಿದ್ದೀಯೆ ಎಂಬ ಸುದ್ದಿಯನ್ನು ಕೇಳುವುದಕ್ಕಿಂತ, ನೀನು

ಭಗವಂತನ ಸಾಕ್ಷಾತ್ಕಾರಕ್ಕಾಗಿ ಗಂಗೆಗೆ ಬಿದ್ದು ಸತ್ತುಹೋಗಿಬಿಟ್ಟಿದ್ದೀಯೆ ಎಂಬ ಸುದ್ದಿಯನ್ನು ಕೇಳಲು ಬಯಸುತ್ತೇನೆ' ಅಂತ.

"ನೇಪಾಳಿನ ಒಬ್ಬ ಹುಡುಗಿ ಇಲ್ಲಿಗೆ ಬಂದಿದ್ದಳು. 'ಎಸ್‌ರಾಜ್' ಎಂಬ ವಾದ್ಯವನ್ನು ಬಾಜಿಸುತ್ತ ಹರಿಯ ಸಂಬಂಧವಾಗಿ ಹಾಡಿದಳು. ಹಾಡು ಕೇಳುತ್ತಿದ್ದವರಲ್ಲಿ ಒಬ್ಬ ಕೇಳಿದ, ನಿನಗೆ ವಿವಾಹ ಆಗಿದೆಯೆ?' ಅಂತ. ಆಕೆ ಉತ್ತರವಿತ್ತಳು, 'ನಾನು ಕೇವಲ ಭಗವಂತನ ದಾಸಿ ಮಾತ್ರ; ಮತ್ತೆ ಬೇರೆ ಯಾರ ದಾಸಿಯಾಗೋಕೆ ಹೋಗಲಿ?' ಅಂತ.

"ಕಾಮಕಾಂಚನದ ಮಧ್ಯೆ ಇದ್ದುಕೊಂಡಿದ್ದರೆ ಭಗವಂತನನ್ನು ಪಡೆಯೋದೆಂತು? ಅಲ್ಲಿ ಅನಾಸಕ್ತನಾಗಿರೋದು ಬಹಳ ಕಠಿನ. ಮೊದಲ ನೆಯದಾಗಿ ಮನುಷ್ಯ ಹೆಂಡತಿಯ ದಾಸ, ಎರಡನೆಯದಾಗಿ ಹಣದ ದಾಸ, ಮೂರನೆಯದಾಗಿ ಧಣಿಯ ದಾಸ; ಇವರೆಲ್ಲರ ಸೇವೆ ಮಾಡಬೇಕಾಗಿದೆ.

"ಒಬ್ಬ ಫಕೀರ ಒಂದು ಕಾಡಿನಲ್ಲಿ ಕುಟೀರ ಕಟ್ಟಿಕೊಂಡು ವಾಸ ವಾಗಿದ್ದ. ಆಗ ಅಕ್ಬರ್ ಡೆಲ್ಲಿಯಲ್ಲಿ ಚಕ್ರವರ್ತಿಯಾಗಿದ್ದ. ಫಕೀರನನ್ನು ನೋಡಲು ಅನೇಕರು ಆತನ ಕುಟೀರಕ್ಕೆ ಬರುತ್ತಿದ್ದರು. ಅವರೆಲ್ಲರಿಗೂ ಅತಿಥಿಸತ್ಕಾರಮಾಡಲು ಆತನಿಗೆ ಬಹಳವಾಗಿ ಇಚ್ಛೆಯಾಯಿತು. 'ಹಣ-ಕಾಸು ಇಲ್ಲದೆ ಅತಿಥಿಸತ್ಕಾರ ಮಾಡುವುದೆಂತು?' ಎಂಬ ಯೋಚನೆ ಬಂತು. ಸಾಧುಸತ್ಪುರುಷರ ಸೇವೆಗಾಗಿ ಅಕ್ಬರನ ಹೃದಯದ ಬಾಗಿಲು ಯಾವಾಗಲೂ ತೆರೆದಿತ್ತು. ಅದಕ್ಕಾಗಿ ಫಕೀರ ಅಕ್ಬರನನ್ನು ನೋಡಲು ಡೆಲ್ಲಿಗೆ ಹೊರಟ. ಆತ ಅರಮನೆಗೆ ಹೋದಾಗ ಅಕ್ಬರ್ ನಮಾಜುಮಾಡು ತ್ತಿದ್ದ. ಆದ್ದರಿಂದ ಆತ ಅಲ್ಲೇ ಒಂದು ಕಡೆ ಕುಳಿತ. ನೋಡುತ್ತಾನೆ,— ಅಕ್ಬರನೂ ತನ್ನ ನಮಾಜು ಮುಗಿದನಂತರ ಪ್ರಾರ್ಥನೆಮಾಡುತ್ತಿದಾನೆ, 'ಹೇ ಅಲ್ಲಾ, ನನಗೆ ಧನ ಕೊಂಡು, ದೌಲತ್ತು ಕೊಡು,—' ಅಂತ. ಇದೆನ್ನೆಲ್ಲ ಕೇಳಿ ಫಕೀರ ನಮಾಜಿನ ಕೊಠಡಿಯಿಂದ ಎದ್ದು ಹೊರಡುವುದ ರಲ್ಲಿದಾನೆ. ಅಕ್ಬರ್ ಸಂಜ್ಞೆಮಾಡಿ ಆತನಿಗೆ ಕುಳಿತುಕೊಳ್ಳಲು ಹೇಳಿದ. ನಮಾಜು ಮುಗಿದನಂತರ ಅಕ್ಬರ್ ಆ ಫಕೀರನನ್ನು ಕೇಳಿದ, 'ಏತಕ್ಕೋ ಬಂದು ಕುಳಿತುಕೊಂಡಿರಿ ಮತ್ತೆ ಎದ್ದುಹೋಗಿಬಿಡುತ್ತಿದ್ದಿರಲ್ಲ, ಕಾರಣ ವೇನು?' ಎಂಬುದಾಗಿ. ಅದಕ್ಕೆ ಫಕೀರ ಹೇಳಿದ, 'ಅದರ ವಿಷಯ ವಾಗಿ ಮಾತ್ರ ದಯವಿಟ್ಟು ನೀವು ಕೇಳಬೇಡಿ; ಇಗೋ ಹೊರಟೆ' ಅಂತ. ತಿಳಿಸಲೇಬೇಕೆಂದು ಅಕ್ಬರ್ ಬಹುವಾಗಿ ಒತ್ತಾಯಪಡಿಸಲು ಆ ಫಕೀರ

ಹೇಳಿದ, ‘ ಅನೇಕರು ನನ್ನ ಕುಟೀರಕ್ಕೆ ಬಂದು ಹೋಗುತ್ತಿದಾರೆ. ಅವರ ಸೇವೆಗಾಗಿ ಸ್ವಲ್ಪ ಧನಸಹಾಯಕ್ಕಾಗಿ ಬಂದೆ’ ಅಂತ. ಆಗ ಅಕ್ಬರ್ ಕೇಳಿದ, ‘ ಹಾಗಾದರೆ ಹೊರಟುಹೋಗಿಬಿಡುತ್ತಿದ್ದಿರಲ್ಲ ಏಕೆ? ’ ಅಂತ. ಅದಕ್ಕೆ ಫಕೀರ ಹೇಳಿದ, ‘ ನೀವೂ ಕೂಡ ಭಗವಂತನನ್ನು ಧನ ದೌಲತ್ತಿಗಾಗಿ ಭಿಕ್ಷೆ ಬೇಡಿದುದನ್ನು ನೋಡಿದೆ. ಆಗ ಭಾವಿಸಿದೆ, “ ಭಿಕ್ಷುಕನ ಹತ್ತಿರ ಹೋಗಿ ಏಕೆ ಭಿಕ್ಷೆ ಬೇಡಬೇಕು ? ಭಿಕ್ಷೆ ಬೇಡಬೇಕಾದರೆ ನೇರವಾಗಿ ಅಲ್ಲಾನಿಂದಲೇ ಭಿಕ್ಷೆ ಬೇಡೋದು ಮೇಲು ” ಅಂತ’ ಎಂದು. ”

ನರೇಂದ್ರ : “ ಈಗ ಗಿರೀಶಘೋಷ ಈ ವಿಷಯಗಳ ಸಂಬಂಧವಾಗಿಯೇ ಆಲೋಚಿಸುತ್ತಾನೆ. ”

ಶ್ರೀರಾಮಕೃಷ್ಣರು : “ ಹಾಗೆ ಮಾಡುತ್ತಿದ್ದರೆ ಅದು ಬಹಳ ಒಳ್ಳೆಯದೆ. ಆದರೆ ಆತ ಅಷ್ಟೊಂದು ಬಯ್ಯೋದು, ದುರ್ಭಾಷೆಯಾಡೋದು ಇದನ್ನೆಲ್ಲ ಏಕೆ ಮಾಡುತ್ತಾನೆ. ಅದನ್ನೆಲ್ಲ ಸಹಿಸೋ ಅವಸ್ಥೆ ಈಗ ನನಗೆ ಇಲ್ಲ. ಸಿಡಿಲು ಹೊಡೆದರೆ ಮನೆಯಲ್ಲಿರೋ ಭಾರಿಭಾರಿ ವಸ್ತುಗಳು ಅಷ್ಟೊಂದು ಅಲುಗಾಡವು, ಆದರೆ ಕಿಟಕಿ ಬಾಗಿಲುಗಳು ‘ ಕಟ ಕಟ ’ ಅಂತ ಶಬ್ದಮಾಡುತ್ತವೆ. ಈಗ ಅಂಥ ಒರಟುತನವನ್ನು ಸಹಿಸೋ ಅವಸ್ಥೆ ನನಗಿಲ್ಲ. ಸತ್ತ್ವಗುಣಾವಸ್ಥೆಯಲ್ಲಿ ಗದ್ದಲ ಗಲಾಟೆಯನ್ನು ಸಹಿಸೋಕಾಗೋದಿಲ್ಲ. ಅದಕ್ಕಾಗಿಯೇ ಹೃದೆ ಇಲ್ಲಿಂದ ಹೊರಟು ಹೋದ ;— ಭಗವತಿ ಕಳುಹಿಸಿಬಿಟ್ಟಳು. ಕೊನೆಕೊನೆಗೆ ಆತ ಬಾಲವನ್ನು ಬಹಳವಾಗಿ ಬಿಚ್ಚಿಬಿಟ್ಟಿದ್ದ. ನನ್ನನ್ನು ಎದ್ವಾತದ್ವ ಬಯ್ಯುತ್ತಿದ್ದ ಮತ್ತು ಒರಟೊರಟಾಗಿ ವರ್ತಿಸುತ್ತಿದ್ದ. ( ನರೇಂದ್ರನಿಗೆ ) ಗಿರೀಶ ಏನೋ ಹೇಳುತ್ತಿದಾನಲ್ಲ ಅದಕ್ಕೆ ನಿನ್ನ ಒಪ್ಪಿಗೆ ಇರುವುದೆ ? ”

ನರೇಂದ್ರ : “ ಆತ ಹೇಳಿದ, ತಾವು ಅವತಾರಪುರುಷರು ಎಂಬ ದೃಢವಿಶ್ವಾಸ ತನಗೆ ಉಂಟಾಗಿಬಿಟ್ಟಿದೆ ಅಂತ. ಅದಕ್ಕೆ ನಾನು ಯಾವ ಉತ್ತರವನ್ನೂ ಕೊಡಲಿಲ್ಲ. ”

ಶ್ರೀರಾಮಕೃಷ್ಣರು : “ ಆದರೆ ಆತನ ವಿಶ್ವಾಸ ಬಹಳ ವಿಶೇಷವಾದ್ದು ! ಅದು ಎದ್ದು ಕಾಣುತ್ತಿಲ್ಲವೇನು ? ”

ಭಕ್ತರೆಲ್ಲ ಪರಮಹಂಸರ ಮಾತುಗಳನ್ನೆಲ್ಲ ಏಕಾಗ್ರ ಮನಸ್ಸಿನಿಂದ ಕೇಳುತ್ತಿದಾರೆ. ಅವರು ಇನ್ನೂ ಮುಂದಲಿಗೆಯ ಮೇಲೆಯೇ ಕುಳಿತಿದಾರೆ.

ಅವರ ಪಕ್ಕದಲ್ಲಿ ಮಾಸ್ಟರ್, ಮುಂಭಾಗದಲ್ಲಿ ನರೇಂದ್ರ, ಸುತ್ತಲು ಭಕ್ತರೂ ಕುಳಿತುಕೊಂಡಿದಾರೆ.

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದನಂತರ ಪ್ರೀತಿಯಿಂದ ನರೇಂದ್ರನಿಗೆ ಹೇಳಿದರು, "ನೋಡಪ್ಪ, ಕಾಮಕಾಂಚನ ತ್ಯಜಿಸದೆ ಇದ್ದರೆ ಆತನನ್ನು ಪಡೆಯೋಕಾಗೋದಿಲ್ಲ" ಅಂತ. ಹೀಗೆಂದು ಹೇಳುತ್ತಿದ್ದ ಹಾಗೆಯೇ ಭಾವಾವಿಷ್ಟರಾದರು. ನರೇಂದ್ರನ ಕಡೆ ತಮ್ಮ ಕರುಣಾಮಯ ದೃಷ್ಟಿಯನ್ನು ಬೀರುತ್ತ ಭಾವೋನ್ಮತ್ತರಾಗಿ ಹಾಡಲಾರಂಭಿಸಿದಾರೆ :

ನುಡಿಯಲಮ್ಮೆವು ನಾವು, ರಾಧಾ, ನುಡಿಯದಿರಲೂ ಅರಿವು!
ನಾವು ನಿನ್ನನ್ನು ಕಳೆದುಕೊಳುವೆವು— ಎಂಬ ಭಯದೊಳಗಿರುವೆವು.
ಹಿಂದೆ ಎನಿತೋಸಾರಿ ಕಂಟಕದಾಚೆ ದಾಟಿದ ಗುಟ್ಟನು
ಇಂದು ನಾವೂ ಬಲ್ಲೆವಾದರು — ಇಂದಿನೆಲ್ಲಾ ಅಗು ಹೋಗನು
ನಿನ್ನ ಮೇಲೇ ಬಿಟ್ಟೆವು !

ನರೇಂದ್ರ ತಮ್ಮವನಾಗದೆ ಬೇರೊಬ್ಬರವನಾಗಿಬಿಟ್ಟರೆ ಏನು ಮಾಡೋದು ಎಂಬ ಭಯ ಪರಮಹಂಸರಿಗೆ ಇರುವಂತೆ ಕಂಡಿತು. ನರೇಂದ್ರ ಅಶ್ರುಪೂರ್ಣಲೋಚನನಾಗಿ ಪರಮಹಂಸರ ಕಡೆ ನೋಡುತ್ತಿದಾನೆ.

ಒಬ್ಬ ಭಕ್ತ ಇಂದೇ ಹೊಸದಾಗಿ ಪರಮಹಂಸರನ್ನು ನೋಡಲು ಬಂದಿದಾನೆ. ಆತ ಪರಮಹಂಸರ ಹತ್ತಿರ ಕುಳಿತು ಅವರ ಮಾತುಕತೆಗಳನ್ನೆಲ್ಲ ಕೇಳಿದ ಮತ್ತು ಅವರ ವರ್ತನೆಯನ್ನೂ ನೋಡಿದ. ಆತ ಪರಮಹಂಸರನ್ನು ಕೇಳಿದ, "ಮಹಾಶಯರೆ, ಕಾಮಕಾಂಚನವನ್ನು ತ್ಯಾಗ ಮಾಡಬೇಕಾಗೇ ಇದ್ದರೆ, ಗೃಹಸ್ಥನಿಗೆ ಬೇರೆ ಗತಿ?" ಅಂತ.

ಶ್ರೀರಾಮಕೃಷ್ಣರು : "ಬೇಕಾದರೆ ನೀನು ಅವನ್ನು ಭೋಗಿಸು. ಇದು ನಮ್ಮಿಬ್ಬರ ಅಂತರಂಗದ ಮಾತು."

ಮಹಿಮಚರಣ ಸುಮ್ಮನೆ ಕುಳಿತಿದಾನೆ. ಬಾಯಿಂದ ಒಂದು ಮಾತೂ ಇಲ್ಲ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ : "ಮುಂದಕ್ಕೆ ಹೋಗು. ಇನ್ನೂ ಮುಂದಕ್ಕೆ ಹೋಗು ಚಂದನದ ಕಾಡು ದೊರೆಯುತ್ತದೆ. ಅದಕ್ಕಿಂತಲೂ ಮುಂದಕ್ಕೆ ಹೋಗು ಬೆಳ್ಳಿಯ ಗಣಿ ಸಿಕ್ಕುತ್ತದೆ. ಮತ್ತೂ

ಮುಂದಕ್ಕೆ ಹೋಗು ಚಿನ್ನದ ಗಣಿ ಸಿಕ್ಕುತ್ತದೆ. ಮತ್ತೂ ಅದಕ್ಕೂ ಮುಂದಕ್ಕೆ ಹೋಗು ಪದ್ಮರಾಗದ ಮುತ್ತು ಮಾಣಿಕ್ಯದ ಗಣಿಗಳು ದೊರೆಯುತ್ತವೆ. ಮುಂದು ಮುಂದಕ್ಕೆ ಹೋಗು.''

ಮಹಿಮಚರಣ: ''ಮುಂದು ಮುಂದಕ್ಕೆ ಹೋಗಲೇನೋ ಬೇಕು. ಆದರೆ ಸಂಸಾರದ ಲಗಾಮು ನಮ್ಮನ್ನು ಹಿಡಿದೆಳೆದು ನಿಲ್ಲಿಸುತ್ತಿದೆ,—ಮುಂದು ಮುಂದಕ್ಕೆ ಹೋಗಲು ಬಿಟ್ಟುಕೊಡುತ್ತಿಲ್ಲ.''

ಶ್ರೀರಾಮಕೃಷ್ಣರು ನಗುತ್ತ: ''ಏಕೆ ಬಿಟ್ಟುಕೊಡದು? ಲಗಾಮನ್ನು ಕತ್ತರಿಸಿಹಾಕಿಬಿಡು. ಭಗವಂತನ ಹೆಸರೆಂಬ ಕತ್ತಿಯಿಂದ ಅದನ್ನು ಕತ್ತರಿಸಿ ಹಾಕು. 'ಕಾಳಿಯ ನಾಮ ಕಾಲನ ಪಾಶಗಳನ್ನು ಕತ್ತರಿಸಿ ಹಾಕುತ್ತದೆ.' ''

ನರೇಂದ್ರ ಪಿತೃವಿಯೋಗವಾದ ಮೇಲೆ ಬಹಳವಾಗಿ ಸಂಸಾರ ತಾಪತ್ರಯಕ್ಕೆ ಸಿಕ್ಕಿಕೊಂಡಿದಾನೆ. ಬಹಳವಾಗಿ ಕಷ್ಟಪಡುತ್ತಿದಾನೆ. ಪರಮಹಂಸರು ಆಗಾಗ ತಮ್ಮ ಕೃಪಾದೃಷ್ಟಿಯನ್ನು ಆತನ ಕಡೆ ಹಾಕುತ್ತ ಹೇಳಿದರು, ''ನೀನು ಏನು ಚಿಕಿತ್ಸಕನಾಗಿಬಿಟ್ಟಿದ್ದೀಯೇನು?'' ಅಂತ. ಅನಂತರ ಒಂದು ಸಂಸ್ಕೃತ ಶ್ಲೋಕವನ್ನು ಎತ್ತಿ ಹೇಳಿದರು: ''ಶತಮಾರೀ ಭವೇದ್ವೈದ್ಯಃ । ಸಹಸ್ರಮಾರೀ ಚಿಕಿತ್ಸಕಃ ॥'' (ಎಲ್ಲರೂ ನಗುತ್ತಾರೆ.)

ಇಷ್ಟು ಅಲ್ಪ ವಯಸ್ಸಿನಲ್ಲಿಯೇ ನರೇಂದ್ರನಿಗೆ ಈ ಸಂಸಾರದ ಅನೇಕ ಕಷ್ಟಗಳ ಮತ್ತು ಸುಖದುಃಖಗಳ ಅನುಭವ ಆಗಿಬಿಟ್ಟಿದೆ ಎಂಬುದನ್ನು ಪರಮಹಂಸರು ಬಹುಶಃ ಸೂಚಿಸುತ್ತಿರಬಹುದೆ?

ನರೇಂದ್ರನೂ ಸ್ವಲ್ಪ ನಕ್ಕು ಸುಮ್ಮನಾದ.

ಅಪರಾಹ್ನವಾಗಿದೆ. ನಬಾಯಿಚೈತನ್ಯ ಹಾಡುತ್ತಿದಾನೆ. ಭಕ್ತರೆಲ್ಲರು ಕುಳಿತು ಕೇಳುತ್ತಿದಾರೆ. ಇದ್ದಕ್ಕಿದ್ದ ಹಾಗೆ ಪರಮಹಂಸರು ತಮ್ಮ ಚಿಕ್ಕಮಂಚದಿಂದ ಎದ್ದು ಕೊಠಡಿಯಿಂದ ಹೊರಕ್ಕೆ ಹೋದರು. ಆದರೆ ಭಕ್ತರು ಮಾತ್ರ ಕುಳಿತೇ ಇದಾರೆ. ಹಾಡುವುದು ಮುಂದುವರಿಯುತ್ತಿದೆ. ಮಾಸ್ಟರ್ ಪರಮಹಂಸರನ್ನು ಹಿಂಬಾಲಿಸಿದ.

ಪರಮಹಂಸರು ಸಿಮೆಂಟಿನ ಅಂಗಳದ ಮೂಲಕ ಕಾಳೀದೇವಾಲಯದ ಕಡೆ ಹೋಗುತ್ತಿದಾರೆ. ಮೊದಲು ಅವರು ರಾಧಾಕಾಂತ ದೇವಾಲಯಕ್ಕೆ ಹೋದರು. ಅಲ್ಲಿ ಅವರು ವಿಗ್ರಹಗಳಿಗೆ ಸಾಷ್ಟಾಂಗಪ್ರಣಾಮ

ಮಾಡಿದರು. ಅವರು ಪ್ರಣಾಮಮಾಡುತ್ತಿರುವುದನ್ನು ನೋಡಿ ಮಾಷ್ಟ ರನೂ ಪ್ರಣಾಮಮಾಡಿದ. ಪರಮಹಂಸರ ಮುಂದುಗಡೆ ಒಂದು ತಟ್ಟೆ ಯಲ್ಲಿ ಕುಂಕುಮ ಇಟ್ಟಿತ್ತು. ಇಂದು ದೋಲೋತ್ಸವ — ಪರಮ ಹಂಸರು ಅದನ್ನು ಮರೆತಿರಲಿಲ್ಲ. ಆದಕ್ಕಾಗಿಯೆ ಅವರು ಕುಂಕುಮವನ್ನು ತೆಗೆದುಕೊಂಡು ಶ್ರೀ ರಾಧಾಶ್ಯಾಮನಿಗೆ ಅರ್ಪಿಸಿ ಮತ್ತೆ ಪ್ರಣಾಮ ಮಾಡಿದರು.

ಈಗ ಕಾಳೀದೇವಾಲಯಕ್ಕೆ ಹೋಗುತ್ತಿದಾರೆ. ಅಲ್ಲಿಗೆ ಹಾಕಿರುವ ಏಳು ಮೆಟ್ಟಲುಗಳನ್ನೂ ಹತ್ತಿ ಮುಖಮಂಟಪಕ್ಕೆ ಬಂದು ತಾಯಿಯ ದರ್ಶನಮಾಡಿದರು. ಬಳಿಕ ಗರ್ಭಗುಡಿಗೆ ಪ್ರವೇಶಮಾಡಿ ಭಗವತಿಗೆ ಕುಂಕುಮವನ್ನು ಅರ್ಪಿಸಿ ಮತ್ತೆ ಪ್ರಣಾಮಮಾಡಿದರು. ಈಗ ದೇವಾಲಯ ವನ್ನು ಬಿಟ್ಟು ತಮ್ಮ ಕೊಠಡಿಗೆ ಹಿಂದಿರುಗುತ್ತಿದಾರೆ. ಕಾಳೀದೇವಾ ಲಯದ ಮುಖಮಂಟಪದಲ್ಲಿ ನಿಂತುಕೊಂಡು ಮಾಷ್ಟರನ್ನು ಕೇಳಿದರು, "ಬಾಬುರಾಮನನ್ನು ಏಕೆ ಕರೆದುಕೊಂಡು ಬರಲಿಲ್ಲ?" ಅಂತ.

ಪರಮಹಂಸರು ಮತ್ತೆ ಅದೇ ಸಿಮೆಂಟು ಅಂಗಳದ ಮೂಲಕ ಹಿಂದಿರುಗುತ್ತಿದಾರೆ. ಮಾಷ್ಟರ್ ಮತ್ತು ಕುಂಕುಮದ ತಟ್ಟೆ ಹಿಡಿದು ಕೊಂಡಿದ್ದ ಇನ್ನೊಬ್ಬ ಅವರನ್ನು ಹಿಂಬಾಲಿಸುತ್ತಿದಾರೆ. ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿದನಂತರ ಒಂದೆರಡು ಪಟಗಳನ್ನು — ತಮ್ಮ ಫೋಟೊ ಮತ್ತು ಕ್ರಿಸ್ತನ ಪಟ — ಬಿಟ್ಟು ಉಳಿದವುಗಳಿಗೆಲ್ಲ ಕುಂಕುಮ ಹಚ್ಚಿದರು. ಈಗ ವರಾಂಡಕ್ಕೆ ಬಂದಿದಾರೆ. ನರೇಂದ್ರ ವರಾಂಡದಲ್ಲಿ ಕುಳಿತು ಯಾರೊ ಭಕ್ತರೊಡನೆ ಮಾತುಕತೆ ಆಡುತ್ತಿದಾನೆ. ಪರಮ ಹಂಸರು ನರೇಂದ್ರನ ಶರೀರದ ಮೇಲೆ ಕುಂಕುಮವನ್ನು ಎರಚಿದ ಮೇಲೆ ಹಿಂದಿರುಗಿ ಕೊಠಡಿಗೆ ಬಂದರು. ಮಾಷ್ಟರೂ ಅವರನ್ನು ಹಿಂಬಾಲಿಸಿದ. ಆತನಿಗೂ ಕುಂಕುಮಪ್ರಸಾದ ದೊರೆಯಿತು. ಬಳಿಕ ಎಲ್ಲಾ ಭಕ್ತರ ಶರೀರ ಗಳ ಮೇಲೂ ಕುಂಕುವನ್ನು ಎರಚಿದರು. ಎಲ್ಲರೂ ಪರಮಹಂಸರಿಗೆ ಪ್ರಣಾಮಮಾಡಲಾರಂಭಿಸಿದಾರೆ.

ಇಳಿಹೊತ್ತಾಯಿತು. ಭಕ್ತರು ಅಲ್ಲಿ ಇಲ್ಲಿ ಸುತ್ತಾಡುತ್ತಿದಾರೆ. ಪರಮಹಂಸರು ಮಾಷ್ಟರೊಡನೆ ಪಿಸುಗುಟ್ಟುತ್ತ ಮಾತನಾಡುತ್ತಿದಾರೆ. ಆಗ ಅವರ ಹತ್ತಿರ ಬೇರೆ ಯಾರೂ ಇಲ್ಲ. ಯುವಕಭಕ್ತರ ಸಂಬಂಧವಾಗಿ ಮಾತನಾಡುತ್ತ ಅವರು ಮಾಷ್ಟರನ್ನು ಕೇಳುತ್ತಿದಾರೆ, "ನೋಡು, ಎಲ್ಲರೂ

ಹೇಳುತ್ತಿದಾರೆ ತಮಗೆಲ್ಲ ಒಳ್ಳೆಯ ಧ್ಯಾನ ಆಗುತ್ತಿದೆ ಅಂತ. ಆದರೆ ಪಲ್ಟುವಿಗೆ ಆಗುತ್ತಿಲ್ಲವಂತಲ್ಲ ಕಾರಣವೇನು? ನರೇಂದ್ರನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು? ಆತ ಬಹಳ ಸರಳ ಸ್ವಭಾವಿ. ಈಗ ಆತನ ಮೇಲೆ ಸಂಸಾರದ ಹೊರೆ ಬಿದ್ದಿದೆ. ಆದ್ದರಿಂದ ಆತನ ಅಧ್ಯಾತ್ಮಜೀವನದ ಉನ್ನತಿಗೆ ಒಂದು ಸ್ವಲ್ಪ ತಡೆ ಬಂದಿದೆ. ಆದರೆ ಅದು ಹೆಚ್ಚು ದಿವಸ ನಿಲ್ಲದು'' ಅಂತ.

ನರೇಂದ್ರ ವರಾಂಡದಲ್ಲಿ ಕುಳಿತು ಒಬ್ಬ ವೇದಾಂತಿಯೊಡನೆ ವಿಚಾರದಲ್ಲಿ ತೊಡಗಿದಾನೆ. ಪರಮಹಂಸರು ಆಗಾಗ ಎದ್ದುಬಂದು ಅವರನ್ನು ನೋಡಿಹೋಗುತ್ತಿದಾರೆ. ಕ್ರಮೇಣ ಎಲ್ಲಾ ಭಕ್ತರೂ ಕೊಠಡಿಗೆ ಬಂದು ಕುಳಿತುಕೊಂಡರು. ಮಹಿಮಚರಣ ಸ್ತೋತ್ರಪಾಠ ಮಾಡಲಾರಂಭಿಸಿದ. ಆತ ಮಹಾನಿರ್ವಾಣ ತಂತ್ರದಿಂದ ಒಂದು ಶ್ಲೋಕವನ್ನು ಪಠಿಸಿದ:

ಹೃದಯಕಮಲಮಧ್ಯೆ ನಿರ್ವಿಶೇಷಂ ನಿರೀಹಂ,
ಹರಿಹರ ವಿಧಿವೇದ್ಯಂ ಯೋಗಿಭಿರ್ಧ್ಯಾನಗಮ್ಯಮ್ ।
ಜನನಮರಣಭೀತಿಭ್ರಂಶಿಸಚ್ಚಿತ್ಸ್ವರೂಪಂ,
ಸಕಲಭುವನಬೀಜಂ ಬ್ರಹ್ಮಚೈತನ್ಯಮೀಡೆ॥ (ಮ. ತಂತ್ರ. iii. ೫೦.)*

ಮಹಿಮಚರಣ ಇನ್ನೂ ಒಂದೆರಡು ಶ್ಲೋಕಗಳನ್ನು ಪಠಿಸಿದನಂತರ ಶ್ರೀ ಶಂಕರಾಚಾರ್ಯ ವಿರಚಿತ ಶಿವನಾಮಾವಲ್ಯಷ್ಟಕವನ್ನು ಪಠಿಸಿದ. ಅದರಲ್ಲಿ ಶ್ರೀ ಶಂಕರಾಚಾರ್ಯರು ಈ ಸಂಸಾರವನ್ನು ಒಂದು ಆಳವಾದ ಭಾವಿಗೂ ಗಹನವಾದ ಕಾಡಿಗೂ ಹೋಲಿಸಿದಾರೆ. ಮಹಿಮಚರಣ ಪರಮಹಂಸರ ಒಬ್ಬ ಗೃಹಸ್ಥ ಭಕ್ತ.

ಶಿವನಾಮಾವಲ್ಯಷ್ಟಕಮ್:

ಹೇ ಚಂದ್ರಚೂಡ ಮದನಾಂತಕ ಶೂಲಪಾಣೇ
ಸ್ಥಾಣೋ ಗಿರೀಶ ಗಿರಿಜೇಶ ಮಹೇಶ ಶಂಭೋ ।
ಭೂತೇಶ ಭೀತಭಯಸೂದನ ಮಾಮನಾಥಂ
ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥

* ಪರಿಶಿಷ್ಟ ೩ರಲ್ಲಿ ೭ನ್ನು ನೋಡಿ.

ಹೇ ಪಾರ್ವತೀಹೃದಯವಲ್ಲಭ ಚಂದ್ರಮೌಲೇ
ಭೂತಾಧಿಪ ಪ್ರಮಥನಾಥ ಗಿರೀಶಚಾಪ ।
ಹೇ ವಾಮದೇವ ಭವ ರುದ್ರ ಪಿನಾಕ ಪಾಣೇ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥

ಹೇ ನೀಲಕಂಠ ವೃಷಭಧ್ವಜ ಪಂಚವಕ್ತ್ರ
ಲೋಕೇಶ ಶೇಷವಲಯ ಪ್ರಮಥೇಶ ಶರ್ವ ।
ಹೇ ಧೂರ್ಜಟೇ ಪಶುಪತೇ ಗಿರಿಜಾಪತೇ ಮಾಂ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥

ಹೇ ವಿಶ್ವನಾಥ ಶಿವ ಶಂಕರ ದೇವದೇವ
ಗಂಗಾಧರ ಪ್ರಮಥನಾಯಕ ನಂದಿಕೇಶ ।
ಬಾಣೇಶ್ವರಾಂಧಕರಿಪೋ ಹರ ಲೋಕನಾಥ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥

ವಾರಾಣಸೀಪುರಪತೇ ಮಣಿಕರ್ಣಿಕೇಶ
ವೀರೇಶ ದಕ್ಷಮುಖಕಾಲ ವಿಭೋ ಗಣೇಶ ।
ಸರ್ವಜ್ಞ ಸರ್ವಹೃದಯೈಕನಿವಾಸ ನಾಥ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥

ಶ್ರೀಮನ್ಮಹೇಶ್ವರ ಕೃಪಾಮಯ ಹೇ ದಯಾಲೋ
ಹೇ ವ್ಯೋಮಕೇಶ ಶಿತಿಕಂಠ ಗಣಾಧಿನಾಥ ।
ಭಸ್ಮಾಂಗರಾಗ ನೃಕಪಾಲಕಲಾಪಮಾಲ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥

ಕೈಲಾಸಶೈಲವಿನಿವಾಸ ವೃಷಾಕಪೇ
ಹೇ ಮೃತ್ಯುಂಜಯ ತ್ರಿನಯನ ತ್ರಿಜಗನ್ನಿವಾಸ ।
ನಾರಾಯಣಪ್ರಿಯ ಮದಾಪಹ ಶಕ್ತಿನಾಥ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥

ವಿಶ್ವೇಶ ವಿಶ್ವಭವನಾಶಿತ ವಿಶ್ವರೂಪ
ವಿಶ್ವಾತ್ಮಕ ತ್ರಿಭುವನೈಕಗುಣಾಭಿವೇಶ ।

ಹೇ ವಿಶ್ವವಂದ್ಯ ಕರುಣಾಮಯ ದೀನಬಂಧೋ
ಸಂಸಾರದುಃಖಗಹನಾಜ್ಜಗದೀಶ ರಕ್ಷ ॥ *

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಈ ಸಂಸಾರ ಒಂದು ಆಳವಾದ ಭಾವಿ, ಗಹನವಾದ ಕಾಡು ಅಂತ ಏಕೆ ಹೇಳುತ್ತಿದೀಯೆ ಮೊದಲು ಮೊದಲೇನೊ ಹಾಗೆ ಭಾವಿಸಬೇಕು. ಆತ ದೊರೆತುಬಿಟ್ಟ ಅಂದರೆ ಆಮೇಲೆ ಯಾತರ ಭಯ? ಆಗ—

ಈ ಜಗವೆಂಬುದು ಮೋಜಿನ ಮನೆಯೊ।
ಇದರೊಳು ನಾ ಮನಬಂದೊಲು ನಡೆವೆ.
ತಿನ್ನುವೆ — ಕುಡಿಯುವೆ — ಕುಣಿಯುವೆ — ನಲಿವೆ . . . . . . .

"ಯಾತರ ಭಯ? ಆತನ ಪಾದಪದ್ಮಗಳನ್ನು ಬಿಗಿಯಾಗಿ ಹಿಡಿದುಕೊ. ಈ ಸಂಸಾರ ಮುಳ್ಳುಕಾಡಾಗಿದ್ದರೆ ತಾನೆ ಏನು? ಕಾಲಿಗೆ ಮೆಟ್ಟುಹಾಕಿಕೊಂಡು ಅದರಮೇಲೆ ನಡೆದುಹೋಗಿಬಿಡು. ಯಾರಿಗೆ ತಾನೆ ಭಯಪಡಬೇಕು? ಯಾರು ಅಜ್ಜಿಯನ್ನು ಮುಟ್ಟಿಬಿಡುತ್ತಾನೊ ಆತ ಮತ್ತೆ ಕಳ್ಳನಾಗುತ್ತಾನೇನು?

"ಜನಕರಾಜ ಎರಡು ಕತ್ತಿಗಳನ್ನು ತಿರುಗಿಸುತ್ತಿದ್ದ: ಒಂದು ಜ್ಞಾನದ್ದು, ಇನ್ನೊಂದು ಕರ್ಮದ್ದು. ನಿಪುಣ ಆಟಗಾರನಿಗೆ ಸ್ವಲ್ಪವೂ ಭಯವೇ ಇಲ್ಲ.

(ಮಾಸ್ಟರಿಗೆ) "ಆತ ಪಠಿಸಿದ ಶ್ಲೋಕಗಳು ಇನ್ನೂ ನನ್ನ ಮನಸ್ಸನ್ನು ಹಿಡಿದೆಳೆದು ನಿಲ್ಲಿಸಿವೆ."

ಪರಮಹಂಸರು ಮಹಿಮಚರಣನ ಸಂಬಂಧವಾಗಿ ಮತ್ತು ಆತ ಪಠಿಸಿದ ಬ್ರಹ್ಮಜ್ಞಾನಸಂಬಂಧವಾದ ಶ್ಲೋಕಗಳ ವಿಷಯವಾಗಿ ಆಲೋಚಿಸುತ್ತಿದಾರೆ.

ನಬಾಯಿಚೈತನ್ಯ ಮತ್ತು ಉಳಿದ ಭಕ್ತರು ಮತ್ತೆ ಹಾಡುತ್ತಿದಾರೆ. ಪರಮಹಂಸರೂ ಅವರೊಡನೆ ಸೇರಿ ಭಾವೋನ್ಮತ್ತರಾಗಿ ಹಾಡುತ್ತ ನರ್ತಿಸುತ್ತಿದಾರೆ. ಕೀರ್ತನೆ ಮುಗಿದನಂತರ ಅವರು ಹೇಳಿದರು, "ಅವಶ್ಯಕವಾಗಿ ಬೇಕಾದ್ದು ಇದೇನೆ, ಉಳಿದುದೆಲ್ಲ ಮಿಥ್ಯಾ. ಪ್ರೇಮವೆ, ಭಕ್ತಿಯೆ ವಸ್ತು ಉಳಿದುದೆಲ್ಲ ಅವಸ್ತು."

---

* ಪರಿಶಿಷ್ಟ ೩ರ ರಲ್ಲಿ ಅನ್ನು ನೋಡಿ.

ಸಾಯಂಕಾಲವಾಗಿದೆ. ಪರಮಹಂಸರು ಪಂಚವಟಿಯ ಕಡೆ ಹೋಗುತ್ತಿದಾರೆ. ಅವರು ವಿನೋದನ ಕ್ಷೇಮಸಮಾಚಾರದ ವಿಷಯ ವಾಗಿ ಮಾಸ್ಟರನ್ನು ಕೇಳುತ್ತಿದಾರೆ. ವಿನೋದ ಮಾಸ್ಟರಿನ ಸ್ಕೂಲಿನಲ್ಲಿ ಓದುತ್ತಿದಾನೆ. ಆತ ಧ್ಯಾನದ ಸಮಯದಲ್ಲಿ ಆಗಾಗ ಭಾವಾವಿಷ್ಟನಾಗುವು ದುಂಟು. ಅದಕ್ಕಾಗಿಯೆ ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿಸುತ್ತಿದಾರೆ.

ಈಗ ಪರಮಹಂಸರು ಮಾಸ್ಟರೊಡನೆ ಮಾತನಾಡುತ್ತ ಹಿಂದಿರುಗು ತ್ತಿದಾರೆ. ಬಕುಳ ವೃಕ್ಷದ ಹತ್ತಿರ ಬಂದು ಕೇಳಿದರು, "ಒಳ್ಳೇದು, ಕೆಲಕೆಲವರು ನನ್ನನ್ನು ಅವತಾರ ಅಂತ ಹೇಳುತ್ತಾರಲ್ಲ ನಿನ್ನ ಅಭಿಪ್ರಾಯ ವೇನು?" ಅಂತ. ಹಾಗೆ ಮಾತುಕತೆಯಾಡುತ್ತಲೆ ತಮ್ಮ ಕೊಠಡಿಗೆ ಹಿಂದಿರುಗಿ ಬಂದು ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು. ಆ ಮಂಚದ ಹತ್ತಿರ ಪೂರ್ವದಿಕ್ಕಿಗೆ ಹಾಕಿದ್ದ ಫುಟ್‌ರಗ್ಗಿನ ಮೇಲೆ ಮಾಸ್ಟರ್ ಕುಳಿತುಕೊಂಡಿದಾನೆ. ಪರಮಹಂಸರು ಮಾಸ್ಟರಿಗೆ ಅದೇ ಪ್ರಶ್ನೆಯನ್ನು ಮತ್ತೆ ಕೇಳುತ್ತಿದಾರೆ. ಉಳಿದ ಭಕ್ತರು ಸ್ವಲ್ಪ ದೂರದಲ್ಲಿ ಕುಳಿತುಕೊಂಡಿದಾರೆ. ಅವರಿಗೆ ಇವರಿಬ್ಬರು ಮಾತನಾಡಿಕೊಳ್ಳೋದು ಸ್ವಲ್ಪವೂ ಅರ್ಥವಾಗಲಿಲ್ಲ.

ಶ್ರೀರಾಮಕೃಷ್ಣರು: "ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ನನಗೂ ಹಾಗೇ ತೋರುತ್ತಿದೆ. ನೀವೂ ಚೈತನ್ಯ ದೇವನ ಹಾಗೆ ಒಬ್ಬರು."

ಶ್ರೀರಾಮಕೃಷ್ಣರು: "ಪೂರ್ಣವೊ, ಅಂಶವೊ ಅಥವಾ ಕಲವೊ? ತೂಕ ಎಷ್ಟು ಹೇಳು."

ಮಾಸ್ಟರ್: "ತೂಕ ಎಷ್ಟು ಎಂಬುದು ನನಗೆ ಗೊತ್ತಾಗುತ್ತಿಲ್ಲ. ಆದರೆ ಆತನ ಶಕ್ತಿ ನಿಮ್ಮಲ್ಲಿ ಅವತರಿಸಿದೆ. ನಿಮ್ಮ ಅಂತರ್ಯದಲ್ಲಿ ರೋನು ಕೇವಲ ಆತನೊಬ್ಬನೆ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಚೈತನ್ಯದೇವನೂ ಭಗ ವಂತನ ಶಕ್ತಿ ತನ್ನಲ್ಲಿ ಆವಿರ್ಭಾವವಾಗಬೇಕೆಂದು ಇಚ್ಛಿಸಿದ."

ಪರಮಹಂಸರು ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದರು. ಬಳಿಕ ಹೇಳಿದರು, "ಆದರೆ ಷಡ್ಭುಜ?" ಅಂತ.

ಮಾಸ್ಟರ್ ಭಾವಿಸುತ್ತಿದಾನೆ, ಚೈತನ್ಯದೇವನೇನೊ ಷಡ್ಭುಜ

ನಾಗಿದ್ದ—ಭಕ್ತರಿಗೆ ಆ ರೀತಿಯಾಗಿ ದರ್ಶನ ಕೊಟ್ಟ. ಪರಮಹಂಸರು ಈ ವಿಷಯವನ್ನು ಏಕೆ ಪ್ರಸ್ತಾಪಮಾಡಿದರು ? ಅಂತ.

ನರೇಂದ್ರ ಒಂದು ದೊಡ್ಡ ವಾಗ್ವಾದದಲ್ಲಿ ತೊಡಗಿದಾನೆ. ಈಗ ತಾನೆ ಕಾಯಿಲೆಯಿಂದ ಗುಣವಾಗಿ ಬಂದಿರುವ ರಾಮಚಂದ್ರದತ್ತನೂ ನರೇಂದ್ರನೊಡನೆ ಸೇರಿಕೊಂಡ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈ ವಿಧವಾದ ವಾಗ್ವಾದ ನನಗೆ ರುಚಿಸದು. (ರಾಮಚಂದ್ರ ದತ್ತನಿಗೆ) ನಿಲ್ಲಿಸು. ನಿನಗೆ ದೇಹ ಸೌಖ್ಯವಿರ ಲಿಲ್ಲ—ಒಳ್ಳೇದು, ಮೆತ್ತ ಮೆತ್ತಗೆ. (ಮಾಸ್ಟರಿಗೆ) ನನಗೆ ಇದೆಲ್ಲ ಸರಿದೋರು ತ್ತಿಲ್ಲ. ನಾನು ಅಳುತ್ತ ಪ್ರಾರ್ಥಿಸುತ್ತಿದ್ದೆ, 'ಹೇ ತಾಯೆ, ಒಬ್ಬ ಹೇಳ್ತಾನೆ, "ಇದು ಸತ್ಯ" ಅಂತ; ಇನ್ನೊಬ್ಬ ಹೇಳ್ತಾನೆ, "ಅದು ಸತ್ಯ" ಅಂತ. ಸತ್ಯ ಯಾವುದು ಎಂಬುದನ್ನು ದಯವಿಟ್ಟು ನನಗೆ ತಿಳಿಸು' ಅಂತ."

೭ನೆ ಮಾರ್ಚಿ ೧೮೮೫, ಫಾಲ್ಗುಣ ಕೃಷ್ಣ ಪಂಚಮಿ, ಶನಿವಾರ.

ಘಂಟೆ ಅಪರಾಹ್ನ ಮೂರು. ಶ್ರೀರಾಮಕೃಷ್ಣರು ತಮ್ಮ ಕೊಠಡಿ ಯಲ್ಲಿ ಭಕ್ತರೊಡನೆ ಆನಂದದಿಂದ ಮಾತುಕತೆಗಳಾಡುತ್ತಿದಾರೆ. ಬಾಬು ರಾಮ, ಚಿಕ್ಕ ನರೇನ, ಪಲ್ಟು, ಹರಿಪದ, ಮೋಹಿನೀಮೋಹನ ಮೊದಲಾದ ಭಕ್ತರು ಮಂದಲಿಗೆ ಮೇಲೆ ಕುಳಿತಿದಾರೆ. ಒಬ್ಬ ಬ್ರಾಹ್ಮಣಯುವಕ ಈಗ ಎರಡು ಮೂರು ದಿವಸಗಳಿಂದ ಪರಮಹಂಸರೊಡನೆಯೆ ಇದಾನೆ. ಆತನೂ ಕುಳಿತಿದಾನೆ.

ಶ್ರೀ ಶಾರದಾದೇವಿಯವರು (ಶ್ರೀರಾಮಕೃಷ್ಣರ ಪತ್ನಿ) ಈಗ ಸ್ವಲ್ಪ ಕಾಲದಿಂದ ನಹಬತ್‌ಖಾನೆಯಲ್ಲಿ ವಾಸಿಸುತ್ತಿದಾರೆ. ಅವರು ಆಗಾಗ ಪರಮಹಂಸರ ಕೊಠಡಿಗೆ ಬಂದು ಅವರಿಗೆ ಸೇವೆ ಸಲ್ಲಿಸಿ ಹೋಗುತ್ತಿದಾರೆ. ಮೋಹಿನೀಮೋಹನ ತನ್ನ ಹೆಂಡತಿಯನ್ನು ಮತ್ತು ನವೀನಬಾಬುವಿನ ತಾಯನ್ನು ಗಾಡಿ ಮಾಡಿಕೊಂಡು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಬಂದಿದಾನೆ. ಆ ಹೆಂಗಸರು ನಹಬತ್‌ಖಾನೆಗೆ ಹೋಗಿ ಶಾರದಾದೇವಿ ಯವರಿಗೆ ಪ್ರಣಾಮಮಾಡಿ ಅವರೊಡನೆಯೆ ಕುಳಿತುಕೊಂಡರು. ಪುರುಷ ರೆಲ್ಲರು ಪರಮಹಂಸರ ಕೊಠಡಿಯನ್ನು ಬಿಟ್ಟುಹೋದನಂತರ ತಾವು ಹೋಗಿ ಏಕಾಂತವಾಗಿ ಪರಮಹಂಸರನ್ನು ಕಾಣಲೋಸುಗ ಆ ಹೆಂಗಸರು ನಹಬತ್‌ಖಾನೆಯಲ್ಲಿಯೇ ಕಾದುಕುಳಿತುಕೊಂಡಿದಾರೆ.

ಪರಮಹಂಸರು ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ.



**ಶ್ರೀ ಮಹಾಮಾತೋಶ್ರೀ ಶಾರದಾ ದೇವಿಯವರು**

“ ನಮ್ಮ ಮನೋವಾಕ್ಕಾಯಗಳು ಜಗತ್ತಿನ ಹಿತಕ್ಕಾಗಿಯೇ ಆಗಬೇಕು ”

ಯುವಕಭಕ್ತರ ಕಡೆ ನೋಡುತ್ತಿದ್ದ ಹಾಗೆ ಅವರ ಮುಖ ಆನಂದದಿಂದ ಅರಳಿವೆ.

ರಾಖಾಲ ಈಗ ಪರಮಹಂಸರೊಡನೆ ಇರುತ್ತಿಲ್ಲ. ಬೃಂದಾವನದಿಂದ ಹಿಂದಿರುಗಿಬಂದಮೇಲೆ ಮನೆಯಲ್ಲೇ ಇದಾನೆ.

ಶ್ರೀರಾಮಕೃಷ್ಣರು ನಗುತ್ತ: "ರಾಖಾಲ ಈಗ ಪೆನ್‌ಷನ್ ತಿನ್ನುತ್ತಿದಾನೆ. ಬೃಂದಾವನದಿಂದ ಬಂದು ಈಗ ಮನೆಯಲ್ಲಿ ಇದಾನೆ. ಮನೆಯಲ್ಲಿ ಆತನ ಹೆಂಡತಿ ಇದಾಳೆ. ಆದರೆ ಆತ ಮತ್ತೆ ನನಗೆ ಹೇಳಿದಾನೆ, 'ತಿಂಗಳಿಗೆ ಒಂದು ಸಾವಿರ ರೂಪಾಯಿ ಸಂಬಳ ಕೊಟ್ಟರೂ ನಾನು ಮಾತ್ರ ಯಾವ ಉದ್ಯೋಗಕ್ಕೂ ಸೇರೋದಿಲ್ಲ' ಅಂತ.

"ರಾಖಾಲ ಇಲ್ಲಿ ಮಲಗಿಕೊಂಡು ಹೇಳುತ್ತಿದ್ದ, 'ನಿಮ್ಮ ಸಹವಾಸವೂ ನನಗೆ ಬೇಕೆನಿಸುತ್ತಿಲ್ಲ' ಅಂತ. ಆತನಿಗೆ ಆಗ ಒಂದು ಉಚ್ಚ ಅವಸ್ಥೆ ಬಂದಿತ್ತು.

"ಭವನಾಥ ಮದುವೆ ಮಾಡಿಕೊಂಡಿದಾನೆ; ಆದರೆ ಆತ ಇಡೀ ರಾತ್ರಿಯನ್ನೆಲ್ಲ ತನ್ನ ಹೆಂಡತಿಯೊಡನೆ ಭಗವದ್ವಿಷಯವಾಗಿ ಮಾತನಾಡುತ್ತಲೇ ಕಳೆಯುತ್ತಾನೆ. ದಂಪತಿಗಳು ಭಗವದ್ವಿಷಯವಾಗಿಯೆ ಚಿಂತಿಸುತ್ತ ಇರುತ್ತಿದಾರೆ. ನಾನು ಆತನಿಗೆ ಹೇಳಿದೆ, 'ಆಗಾಗ ನಿನ್ನ ಹೆಂಡತಿಯೊಡನೆ ಒಂದು ಸ್ವಲ್ಪ ಸರಸಸಲ್ಲಾಪಗಳಲ್ಲಿ ತೊಡಗು' ಅಂತ. ಆಗ ಆತ ಕೋಪಿಸಿಕೊಂಡು ಹೇಳಿದ, 'ನಾವೂ ಹಾಗೆ ಮಾಡೋವೆ?' ಎಂದು."

ಪರಮಹಂಸರು ಈಗ ನರೇಂದ್ರನ ಸಂಬಂಧವಾಗಿ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ನನ್ನ ಮನಸ್ಸು ನರೇಂದ್ರನ ಕಡೆಗೆ ಎಳೆದಷ್ಟು ಮಟ್ಟಿಗೆ ಈತನ (ಚಿಕ್ಕ ನರೇನನ) ಕಡೆಗೆ ಎಳೆಯುತ್ತಿಲ್ಲ.

(ಹರಿಪದನಿಗೆ) "ನೀನು ಗಿರೀಶಘೋಷನ ಮನೆಗೆ ಹೋಗುತ್ತಿದ್ದೀಯೇನು?"

ಹರಿಪದ: "ನಮ್ಮ ಮನೆಯ ಹತ್ತಿರವೇ ಆತನ ಮನೆ. ಹೌದು, ಆಗಾಗ ಹೋಗುತ್ತೇನೆ."

ಶ್ರೀರಾಮಕೃಷ್ಣರು: "ನರೇಂದ್ರನೂ ಅಲ್ಲಿಗೆ ಬರುತ್ತಾನೇನು?"

ಹರಿಪದ: "ಆಗಾಗ ನಾನು ಅವನನ್ನು ಅಲ್ಲಿ ನೋಡುತ್ತೇನೆ."

ಶ್ರೀರಾಮಕೃಷ್ಣರು: "ಗಿರೀಶಘೋಷ ಏನೊ ಹೇಳುತ್ತಾನಲ್ಲ ಅದಕ್ಕೆ ನರೇಂದ್ರ ಏನು ಉತ್ತರಕೊಡುತ್ತಾನೆ?"

ಹರಿಪದ: "ನರೇಂದ್ರ ವಾದಮಾಡಿ ಸೋತುಬಿಟ್ಟ."

ಶ್ರೀರಾಮಕೃಷ್ಣರು: "ಇಲ್ಲವಂತೆ. ನರೇಂದ್ರ ಹೇಳಿದ, 'ಗಿರೀಶಘೋಷನಿಗೆ ಅದರಲ್ಲಿ ಬಹಳ ಬಲವಾದ ವಿಶ್ವಾಸ; ನಾನೇಕೆ ಅದನ್ನು ವಿರೋಧಿಸಲು ಹೋಗಲಿ?' ಅಂತ."

ಜಡ್ಜಿ ಅನುಕೂಲಮುಖ್ಯೋಪಾಧ್ಯಾಯನ ಅಳಿಯನ ಸಹೋದರ ಬಂದಿದಾನೆ. ಶ್ರೀರಾಮಕೃಷ್ಣರು ಆತನನ್ನು ಕೇಳಿದರು, "ನಿನಗೆ ನರೇಂದ್ರನ ಪರಿಚಯವಾಗಿದೆಯೆ?" ಅಂತ.

ಸಹೋದರ: "ಹೌದು. ಆತನದು ಬಹಳ ಚುರುಕು ಬುದ್ಧಿ."

ಶ್ರೀರಾಮಕೃಷ್ಣರು ಭಕ್ತರಿಗೆ: "ಈತ ನರೇಂದ್ರನನ್ನು ಹೊಗಳುತ್ತಿರೋದರಿಂದ ಈತ ಒಳ್ಳೆ ಮನುಷ್ಯನಾಗಿಯೇ ಇರಬೇಕು. ಅಂದು ನರೇಂದ್ರ ಇಲ್ಲಿಗೆ ಬಂದಿದ್ದ; ತ್ರೈಲೋಕ್ಯನೊಡನೆ ಹಾಡಿದ. ಆದರೆ ಆತನ ಹಾಡುಗಳು ಬಹಳ ಸಪ್ಪೆಯಾಗಿ ತೋರಿದುವು."

ಪರಮಹಂಸರು ಬಾಬುರಾಮನ ಕಡೆ ನೋಡುತ್ತ ಮಾತಾಡುತ್ತಿದಾರೆ. ಮಾಸ್ಟರ್ ಉಪಾಧ್ಯಾಯನಾಗಿರೋ ಸ್ಕೂಲಿನಲ್ಲಿ ಬಾಬುರಾಮ ಎಂಟ್ರೆನ್ಸ್ ತರಗತಿಯಲ್ಲಿ ಓದುತ್ತಿದಾನೆ.

ಶ್ರೀರಾಮಕೃಷ್ಣರು ಬಾಬುರಾಮನಿಗೆ: "ನಿನ್ನ ಪುಸ್ತಕಗಳೆಲ್ಲಿ? ಓದೋದು ಬರಿಯೋದು ಏನೂ ಬೇಡವೇನು? (ಮಾಸ್ಟರಿಗೆ) ಎರಡು ಕಡೆಗೂ ಮನಸ್ಸನ್ನಿಡಬೇಕೆಂದಿದಾನೆ.

"ಇದು ಬಹಳ ಕಠಿನ ಮಾರ್ಗ. ಆತನ ಸಂಬಂಧವಾಗಿ ಎಲ್ಲೋ ಒಂದು ಕಿಂಚಿತ್ತು ಅರಿತುಕೊಂಡುಬಿಟ್ಟರೆ ಏನು ಆದಹಾಗಾಯಿತು. ಅಂಥ ವಸಿಷ್ಠ ಋಷಿಗೇ ಪುತ್ರಶೋಕ ಉಂಟಾಗಿಬಿಟ್ಟಿತ್ತು. ಅದನ್ನು ಲಕ್ಷ್ಮಣ ನೋಡಿದಾಗ ಆಶ್ಚರ್ಯಚಕಿತನಾಗಿ ಅದಕ್ಕೆ ಕಾರಣ ಏನು ಅಂತ ರಾಮನನ್ನು ಕೇಳಿದ. ರಾಮ ಹೇಳಿದ, 'ಸಹೋದರ, ಇದರಲ್ಲಿ ಆಶ್ಚರ್ಯ ಪಡುವುದೇನಿದೆ? ಯಾರಲ್ಲಿ ಜ್ಞಾನವಿದೆಯೊ ಆತನಲ್ಲಿ ಅಜ್ಞಾನವೂ ಇದೆ. ಸಹೋದರ, ನೀನು ಜ್ಞಾನಾಜ್ಞಾನಗಳನ್ನು ದಾಟಿಹೋಗು. ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಹುಡುಕಿಕೊಂಡುಹೋಗಿ ಬೇರೊಂದು ಮುಳ್ಳನ್ನು ಸಂಪಾದಿಸಿಕೊಳ್ಳಬೇಕಾಗುತ್ತದೆ. ದೊರೆತ ಮುಳ್ಳಿನಿಂದ ಕಾಲಿಗೆ ಚುಚ್ಚಿ

ಕೊಂಡಿರೋ ಮುಳ್ಳನ್ನು ತೆಗೆದುಹಾಕಿ, ಬಳಿಕ ಎರಡು ಮುಳ್ಳನ್ನೂ ಬಿಸಾಡಬೇಕಾಗುತ್ತದೆ. ಅದಕ್ಕಾಗಿಯೆ ಅಜ್ಞಾನಮುಳ್ಳನ್ನು ತೆಗೆದು ಹಾಕಲೋಸುಗ ಜ್ಞಾನಮುಳ್ಳನ್ನು ಸಂಪಾದಿಸಿಕೋಬೇಕು. ಬಳಿಕ ಜ್ಞಾನಾಜ್ಞಾನಗಳನ್ನು ದಾಟಿಹೋಗಬೇಕು.''

ಬಾಬುರಾಮ ನಗುತ್ತ : '' ನನಗೆ ಬೇಕಾಗಿರೋದೂ ಅದೆ.''

ಪರಮಹಂಸರು ನಗುತ್ತ : '' ಎರಡು ಕಡೆಯೂ ಮನಸ್ಸನ್ನಿಟ್ಟರೆ ಅದು ಸಾಧ್ಯವಾಗುತ್ತದೆಯೆ ? ನಿನಗೆ ಅದು ಬೇಕಾಗಿದ್ದರೆ ಎಲ್ಲವನ್ನೂ ಬಿಟ್ಟುಬಂದುಬಿಡು.''

ಬಾಬುರಾಮ ನಗುತ್ತ: '' ನೀವು ಅಲ್ಲಿಂದ ಎಳೆದುಕೊಂಡು ಬಂದುಬಿಡಿ.''

ಶ್ರೀರಾಮಕೃಷ್ಣರು ಮಾಸ್ಟರಿಗೆ: '' ರಾಖಾಲ ಇಲ್ಲಿ ಇದ್ದ. ಅದು ಬೇರೆ ಸಮಾಚಾರ;— ಆತನ ತಂದೆ ಅನುಮತಿಕೊಟ್ಟಿದ್ದ. ಇವರು ಬಂದು ಇಲ್ಲಿ ಇತ್ತು ಎಂದರೆ ಫಜೀತಿಗಿಟ್ಟುಕೊಳ್ಳುತ್ತದೆ.

( ಬಾಬುರಾಮನಿಗೆ ) '' ನಿನ್ನದು ದುರ್ಬಲ ಮನಸ್ಸು — ನಿನಗೆ ಸಾಹಸ ಕಡಮೆ. ನೋಡು, ಚಿಕ್ಕ ನರೇನ ಯಾವರೀತಿಯಾಗಿ, ' ನಾನು ಒಮ್ಮೆಗೆಯೆ ಇಲ್ಲಿಗೆ ಬಂದು ಇದ್ದುಬಿಡುತ್ತೇನೆ ' ಅಂತ ಹೇಳುತ್ತಿದಾನೆ! ''

ಪರಮಹಂಸರು ಈಗ ಮಂಚದಿಂದ ಎದ್ದು ಬಂದು ಯುವಕಭಕ್ತರ ಮಧ್ಯದಲ್ಲಿ ಮಂದಲಿಗೆ ಮೇಲೆ ಕುಳಿತುಕೊಂಡಿದಾರೆ. ಮಾಸ್ಟರ್ ಅವರ ಹತ್ತಿರ ಕುಳಿತುಕೊಂಡಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: '' ನಾನು ಒಬ್ಬ ಕಾಮಕಾಂಚನ ತ್ಯಾಗಿಗಾಗಿ ಹುಡುಕುತ್ತಿದೇನೆ. ಮನಸ್ಸುಮಾಡಿಕೊಳ್ಳುತ್ತೇನೆ, ' ಬಹುಶಃ ಈತ ನನ್ನ ಹತ್ತಿರ ಇರಬಹುದು ' ಅಂತ. ಆದರೆ ಪ್ರತಿಯೊಬ್ಬನೂ ಒಂದೊಂದು ಅಡ್ಡಿ ತರುತ್ತಾನೆ.

'' ಒಂದು ಭೂತಕ್ಕೆ ಒಬ್ಬ ಜೊತೆಗಾರ ಬೇಕಾಗಿತ್ತು. ಶನಿವಾರ ಮಂಗಳವಾರ ಅಕಾಲಮರಣವನ್ನು ಹೊಂದಿದವರು ಭೂತವಾಗುತ್ತಾರೆ ಎಂಬ ಹೇಳಿಕೆಯೊಂದಿದೆ. ಅದಕ್ಕಾಗಿಯೆ ಆ ಎರಡು ವಾರಗಳಲ್ಲಿ ಯಾರಾದರು ಮನೆ ಮೇಲಿಂದ ಕೆಳಕ್ಕೆ ಬಿದ್ದುಬಿಟ್ಟಿದಾರೆ, ದಾರಿಯಲ್ಲಿ ಹೋಗುತ್ತ ಎಡವಿ ಮೂರ್ಛಿತರಾಗಿಬಿದ್ದಿದಾರೆ ಎಂಬುದನ್ನು ಕೇಳಿದ ಒಡನೆಯೆ ಆ ಭೂತ ಅಲ್ಲಿಗೆ ಬಹುಶಃ ಈತ ಅಕಾಲ ಮೃತ್ಯುವನ್ನು ಹೊಂದಿ ಭೂತ

ವಾಗಿ ತನ್ನ ಜೊತೆಗಾರನಾಗಬಹುದು ಎಂದು ಭಾವಿಸಿ ಓಡಿಹೋಗುತ್ತಿತ್ತು. ಆದರೆ ಅದರ ಅದೃಷ್ಟ ಅಂಥದು ; ಪ್ರತಿಯೊಬ್ಬನೂ ಬದುಕಿ ಏಳುತ್ತಿದ್ದ. ಆ ಬಡಪಾಯಿ ಭೂತಕ್ಕೆ ಯಾರೂ ಜೊತೆಗಾರರೇ ದೊರೆಯಲಿಲ್ಲ.

"ನೋಡು, ಯಾವಾಗ ನೋಡಿದರೂ ರಾಖಾಲ 'ಹೆಂಡತಿ', 'ಹೆಂಡತಿ' ಅನ್ನುತ್ತಲೇ ಇದಾನೆ. ಹೇಳ್ತಾನೆ, 'ನನ್ನ ಹೆಂಡತಿಯ ಗತಿ?' ಅಂತ. ನಾನು ನರೇಂದ್ರನ ಎದೆಯನ್ನು ಸ್ಪರ್ಶಿಸಿದೊಡನೆಯೆ ಆತ ಬಾಹ್ಯಜ್ಞಾನಶೂನ್ಯನಾಗಿಬಿಟ್ಟ; ಆಗ ಕೂಗಿಕೊಂಡ, 'ನನಗೆ ಏನು ಮಾಡಿಬಿಟ್ಟರಿ ನೀವು? ನನಗೆ ತಂದೆತಾಯಿಗಳಿರೋದು ನಿಮಗೆ ಗೊತ್ತಿಲ್ಲವೆ?' ಅಂತ.

"ನನ್ನನ್ನು ಭಗವಂತ ಏಕೆ ಈ ಅವಸ್ಥೆಯಲ್ಲಿ ಇಟ್ಟಿದಾನೆ? ಎಲ್ಲರೂ ಪ್ರಣಾಮಮಾಡಲಿ ಎಂದು ಭಾವಿಸಿ ಚೈತನ್ಯದೇವ ಸನ್ಯಾಸಿಯಾದ. ಯಾರು ಒಮ್ಮೆಯಾದರೂ ಅವತಾರಪುರುಷರಿಗೆ ನಮಸ್ಕಾರ ಮಾಡುತ್ತಾರೊ ಅವರ ಉದ್ಧಾರ ಆಗಿಯೇಬಿಡುತ್ತದೆ."

ಮೋಹಿನೀಮೋಹನ ಪರಮಹಂಸರಿಗಾಗಿ ಒಂದು ಬುಟ್ಟಿ ಸಂದೇಶ ವನ್ನು (ಸಿಹಿ ತಿಂಡಿಯನ್ನು) ತಂದಿದಾನೆ.

ಶ್ರೀರಾಮಕೃಷ್ಣರು : "ಈ ಸಂದೇಶವನ್ನು ತಂದವರು ಯಾರು?"

ಬಾಬುರಾಮ ಮೋಹಿನೀಮೋಹನನ ಕಡೆ ಕೈ ತೋರಿಸಿದ.

ಪರಮಹಂಸರು ಪ್ರಣವೋಚ್ಚಾರಣೆಯನ್ನು ಮಾಡಿ ಸಂದೇಶವನ್ನು ಸ್ಪರ್ಶಿಸಿ ಎಲ್ಲೋ ಒಂದು ಕಿಂಚಿತ್ತನ್ನು ಸ್ವೀಕರಿಸಿದರು. ಉಳಿದುದನ್ನು ತಾವೆ ಭಕ್ತರಿಗೆ ಹಂಚುತ್ತಿದಾರೆ. ಆಶ್ಚರ್ಯ, ಚಿಕ್ಕ ನರೇನನಿಗೂ ಮತ್ತು ಇನ್ನೂ ಕೆಲವು ಯುವಕರಿಗೂ ತಾವೇ ತಮ್ಮ ಕೈಯಿಂದ ತಿನ್ನಿಸುತ್ತಿದಾರೆ!

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಾನು ಹೀಗೆ ಮಾಡುತ್ತಿರುವುದರಲ್ಲಿ ಅರ್ಥವಿದೆ. ಶುದ್ಧ ಆತ್ಮರಲ್ಲಿ ನಾರಾಯಣ ವಿಶೇಷವಾಗಿ ವ್ಯಕ್ತವಾಗಿದಾನೆ. ನಾನು ಕಾಮಾರಪುಕುರಕ್ಕೆ ಒಮ್ಮೊಮ್ಮೆ ಹೋದಾಗ ಕೆಲಕೆಲ ಹುಡುಗರಿಗೆ ಇದೇ ರೀತಿಯಾಗಿ ನನ್ನ ಕೈಯಿಂದಲೇ ತಿನ್ನಿಸುತ್ತಿದ್ದೆ. ಚಿನೆ ಶಾಂಖಾರಿ ಹೇಳುತ್ತಿದ್ದ, 'ನಮಗೇಕೆ ಇವರು ತಿನ್ನಿಸುತ್ತಿಲ್ಲ?' ಅಂತ. ಅವರಿಗೆ ಹೇಗೆ ತಿನ್ನಿಸಲಿ? ಅವರ ಶೀಲ ಸರಿಯಾದುದಲ್ಲ. ಅಂಥವರಿಗೆ ಯಾರು ತಾನೆ ತಿನ್ನಿಸುತ್ತಾರೆ?"

ಪರಮಹಂಸರಿಗೆ ಶುದ್ಧಾತ್ಮರಾದ ಭಕ್ತಾದಿಗಳು ದೊರೆತು ಬಹಳ

ಆನಂದದಿಂದ ಇದಾರೆ. ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಭಕ್ತರಿಗೆ ಕೀರ್ತನಕಾರೆಯರ ಹಾವಭಾವಗಳನ್ನು ತೋರಿಸುತ್ತಿದಾರೆ. ಆಕೆ ಯಾವ ರೀತಿಯಾಗಿ ಒಡವೆ ವಸ್ತ್ರಗಳಿಂದ ಅಲಂಕಾರ ಮಾಡಿಕೊಂಡು ಹಾಡೋಕೆ ಬರುತ್ತಾಳೆ, ಹೇಗೆ ನಿಂತುಕೋತಾಳೆ, ಹೇಗೆ ಕೈಯಲ್ಲಿ ಕರವಸ್ತ್ರವನ್ನು ಹಿಡಿದುಕೋತಾಳೆ, ಹೇಗೆ ಆಗಾಗ ಬೇಕೂ ಅಂತ ಕೆಮ್ಮುತ್ತಾಳೆ ಮತ್ತು ಮುಕರವನ್ನು ಒಂದು ಕಡೆಗೆ ತಳ್ಳಿ, ಮೂಗು ಒರಸಿಕೋತಾಳೆ, ಹೇಗೆ ಯಾರಾದರು ಗಣ್ಯವ್ಯಕ್ತಿ ಬಂದರೆ ಹಾಡುತ್ತ ಇದ್ದ ಹಾಗೆಯೇ ಅವರಿಗೆ ಸುಖಾಗಮನ ಬಯಸಿ, 'ಬನ್ನಿ' ಅಂತ ಹೇಳುತ್ತಾಳೆ, ಹೇಗೆ ಆಕೆ ತನ್ನ ಒಡವೆಗಳನ್ನು ತೋರಿಸಿಕೊಳ್ಳಲು ಆಗಾಗ ಸೆರಗನ್ನು ತೋಳಿನ ಮೇಲಿಂದ ಜಾರಿಸುತ್ತಾಳೆ ಎಂಬಿವೇ ಮೊದಲಾದುವುಗಳನ್ನು ತೋರಿಸಿದರು.

ಶ್ರೀರಾಮಕೃಷ್ಣರು ತೋರಿಸಿದ ಈ ನಟನೆಗಳನ್ನೆಲ್ಲ ನೋಡಿ ಎಲ್ಲರೂ "ಹೋ! ಹೊ! ಹೊ!" ಅಂತ ನಗಲಾರಂಭಿಸಿದರು. ಪಲ್ಟು ನಗುತ್ತ ನೆಲದ ಮೇಲೆ ಹೊರಳಾಡುತ್ತಿದಾನೆ. ಪರಮಹಂಸರು ಪಲ್ಟುವಿನ ಕಡೆ ನೋಡುತ್ತ ಮಾಸ್ಟರಿಗೆ ಹೇಳುತ್ತಿದಾರೆ, "ಈತ ಇನ್ನೂ ಚಿಕ್ಕ ಹುಡುಗನಲ್ಲವೆ! ಆದ್ದರಿಂದ ನಕ್ಕು ಹೊರಳಾಡುತ್ತಿದಾನೆ" ಅಂತ. ನಗುತ್ತ ಪಲ್ಟುವಿಗೆ ಹೇಳಿದರು, "ಹೋಗಿ ಇದನ್ನೆಲ್ಲ ನಿಮ್ಮ ತಂದೆಗೆ ತಿಳಿಸಿಬಿಡಬೇಡ. ಆತನಿಗೆ ನನ್ನ ಮೇಲೆ ಇರೋ ಅಲ್ಪ ಗೌರವವೂ ಕೂಡ ಮಾಯವಾಗಿಬಿಡುತ್ತದೆ. ನೋಡಿಕೊ, ಆತ ಒಬ್ಬ 'ಇಂಗ್ಲಿಷ್‌ಮ್ಯಾನ್'" ಅಂತ.

ಶ್ರೀರಾಮಕೃಷ್ಣರು ಭಕ್ತರಿಗೆ: "ಅನೇಕರು ಆಹ್ನಿಕಕ್ರಿಯೆಗಳಲ್ಲಿ ತೊಡಗಿರುವಾಗ ಈ ಇಡಿಯ ಜಗತ್ತಿನ ಮಾತುಕತೆಗಳನ್ನೆಲ್ಲ ಆಡಿ ಮುಗಿಸಿ ಬಿಡುತ್ತಾರೆ. ಆದರೆ ವಿಧಿಗನುಸಾರವಾಗಿ ಮಾತನ್ನೇ ಆಡಕೂಡದು. ಅದಕ್ಕಾಗಿ ಆಗ ಬಾಯಿ ಮುಚ್ಚಿಕೊಂಡು ವಿವಿಧ ಸನ್ನೆಗಳನ್ನು ಮಾಡುತ್ತಾರೆ. ಆ ಸಮಯದಲ್ಲಿ, 'ಇದನ್ನು ತೆಗೆದುಕೊಂಡು ಬಾ', 'ಅದನ್ನು ತೆಗೆದುಕೊಂಡು ಬಾ' ಎಂದು ಹೇಳೋಕೆ 'ಹ್ಞೂ', 'ಉಹ್ಞೂ' ಎಂಬಿವೇ ಮೊದಲಾದ ಶಬ್ದಗಳನ್ನು ಉಪಯೋಗಿಸುತ್ತಾರೆ! (ನಗು.)

"ಇನ್ನು ಕೆಲವರು ಜಪಮಾಲೆ ತಿರುಗಿಸುತ್ತಿರುತ್ತಾರೆ, ಆದರೆ ಅದೇ ಸಮಯದಲ್ಲಿ ಚೌಕಾಸಿಮಾಡಿ ಮೀನು ಕೊಂಡುಕೊಳ್ಳುತ್ತಲೂ ಇರುತ್ತಾರೆ. ಜಪಮಾಡುತ್ತ ಜಪಮಾಡುತ್ತ ಇದ್ದಹಾಗೆಯೇ ಬೆರಳಿನಿಂದ ತೋರಿಸು

ತ್ತಾರೆ, 'ದಯವಿಟ್ಟು ಆ ಮೀನು' ಅಂತ. ಇಡಿಯ ಪ್ರಪಂಚವ್ಯವಹಾರ ವೆಲ್ಲ ಆ ಸಮಯದಲ್ಲೆ ನಡೆಯಬೇಕು! (ಎಲ್ಲರೂ ನಗುತ್ತಾರೆ.)

"ಕೆಲವರು ಗಂಗಾಸ್ನಾನಕ್ಕಾಗಿ ಬರುತ್ತಾರೆ. ಆಗ ಭಗವಂತನ ಚಿಂತನೆ ಮಾಡೋದು ಎಲ್ಲಿಂದ ಬಂತು? ಇಡೀ ಪ್ರಪಂಚದ ಕಾಡುಹರಟೆ ಗಳನ್ನೆಲ್ಲ ಆಡಿ ಮುಗಿಸಿಬಿಡುತ್ತಾರೆ: 'ನಿಮ್ಮ ಮಗನ ಮದುವೆಯಲ್ಲಿ ಸೊಸೆಗೆ ಏನೇನು ಒಡವೆ ವಸ್ತ್ರಗಳನ್ನು ಇಟ್ಟರಿ?'; 'ಅವನಿಗೆ ದೊಡ್ಡ ಕಾಯಿಲೆಯಾಗಿದೆ'; 'ಆಕೆ ಮಾವನ ಮನೆಯಿಂದ ಬಂದಳೊ ಇಲ್ಲವೊ'; 'ಅವರು ಕನ್ಯೆ ನೋಡಿಕೊಂಡು ಬರಲು ಹೋಗಿದ್ದರು. ಒಳ್ಳೆ ಬಳುವಳಿ ಕೊಡುತ್ತಾರೆ; ಊಟೋಪಚಾರ ಬಹಳ ವಿಜೃಂಭಣೆಯಿಂದ ನಡೆಯು ತ್ತದೆ'; 'ಹರೀಶ ನನ್ನನ್ನು ಸುಮ್ಮನೆ ಪೀಡಿಸುತ್ತಲೇ ಇರುತ್ತಾನೆ. ಒಂದು ಘಂಟೆ ಸುದಾ ನನ್ನನ್ನು ಬಿಟ್ಟು ಇರಲಾರ'; 'ತಾಯೀ, ಇಷ್ಟು ದಿವಸ ನನಗೆ ಬರೋಕಾಗಲಿಲ್ಲವಮ್ಮ; ನಾನು ಆತನ ಮಗಳ ವಿವಾಹದ ಸಂಬಂಧ ವಾಗಿ ಕಾರ್ಯಮಗ್ನಳಾಗಿದ್ದೆ.'

"ನೋಡು, ಅವರು ಬಂದಿರೋದು ಗಂಗಾಸ್ನಾನಕ್ಕೆ: ಎಷ್ಟೊಂದು ಗೃಹಕೃತ್ಯದ ಮಾತುಗಳು!"

ಪರಮಹಂಸರು ಚಿಕ್ಕ ನರೇನನ ಕಡೆ ದೃಷ್ಟಿಸಿ ನೋಡುತ್ತಿದಾರೆ. ಹಾಗೆ ನೋಡುತ್ತ ಇದ್ದ ಹಾಗೆಯೇ ಸಮಾಧಿಸ್ಥರಾದರು. ಶುದ್ಧಾತ್ಮರ ಅಂತರ್ಯದಲ್ಲಿ ಪರಮಹಂಸರು ಸಾಕ್ಷಾತ್ ನಾರಾಯಣನನ್ನು ನೋಡು ತ್ತಿರಬಹುದೆ?

ಭಕ್ತರೆಲ್ಲರು ನೆಟ್ಟದೃಷ್ಟಿಯಿಂದ ಅವರ ಸಮಾಧ್ಯವಸ್ಥೆಯನ್ನು ನೋಡುತ್ತಿದಾರೆ. ಇದುವರೆಗೆ ಅಷ್ಟೊಂದು ತಮಾಷೆ ನಡೆಯುತ್ತಿತ್ತು, ಈಗ ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ. ಕೊಠಡಿಯಲ್ಲಿ ಜನವೇ ಇಲ್ಲ ದಂತೆ ಇದೆ. ಪರಮಹಂಸರ ಶರೀರ ಅಲುಗಾಡದೆ ಇದೆ. ಕಣ್ಣು ಸ್ಥಿರ ದೃಷ್ಟಿಯುಳ್ಳದಾಗಿದೆ. ಕೈಗಳನ್ನು ಜೋಡಿಸಿ ಚಿತ್ರದ ಗೊಂಬೆಯೋಪಾದಿ ಯಲ್ಲಿ ಕುಳಿತಿದಾರೆ.

ಸ್ವಲ್ಪ ಹೊತ್ತಾದನಂತರ ಸಮಾಧಿ ಇಳಿಮುಖವಾಯಿತು. ಅವರ ಶ್ವಾಸ ಸ್ಥಿರವಾಗಿ ಹೋಗಿತ್ತು. ಈಗ ಅವರು ದೀರ್ಘ ನಿಶ್ವಾಸವನ್ನು ಬಿಟ್ಟರು. ಕ್ರಮೇಣ ಮನಸ್ಸು ಬಹಿರ್ಜಗತ್ತಿಗೆ ಬರುತ್ತಿದೆ. ಈಗ ಅವರು ಭಕ್ತರ ಕಡೆ ದೃಷ್ಟಿಹಾಕುತ್ತಿದಾರೆ. ಇನ್ನೂ ಭಾವಾವಿಷ್ಟರಾಗಿಯೇ

ಇದಾರೆ. ಈಗ ಪ್ರತಿಯೊಬ್ಬ ಭಕ್ತನನ್ನು ಸಂಬೋಧಿಸಿ ಯಾರ್ಯಾರಿಗೆ ಏನೇನು ದೊರೆಯುತ್ತದೆ ಮತ್ತು ಈಗ ಯಾವ ಅವಸ್ಥೆಯಲ್ಲಿ ಇದಾರೆ ಎಂಬುದನ್ನು ತಿಳಿಸುತ್ತಿದಾರೆ.

ಶ್ರೀರಾಮಕೃಷ್ಣರು ಚಿಕ್ಕ ನರೇನನಿಗೆ: "ನಿನ್ನನ್ನು ನೋಡಬೇಕೆಂದು ವ್ಯಾಕುಲನಾಗಿದ್ದೆ. ನಿನಗೆ ದೊರೆಯುತ್ತದೆ. ಒಮ್ಮೊಮ್ಮೆ ಇಲ್ಲಿಗೆ ಬಾ. ಒಳ್ಳೇದು, ನಿನಗೆ ಯಾವುದು ರುಚಿಸುತ್ತದೆ— ಜ್ಞಾನವೊ, ಭಕ್ತಿಯೊ?"

ಚಿಕ್ಕ ನರೇನ: "ಶುದ್ಧ-ಭಕ್ತಿ."

ಶ್ರೀರಾಮಕೃಷ್ಣರು: "ಮೊದಲು ಅರಿತುಕೊಳ್ಳದೆ ಇದ್ದರೆ ಯಾರನ್ನು ತಾನೆ ಪ್ರೀತಿಸಲಾದೀತು? (ನಗುತ್ತ ಮಾಸ್ಟರನ್ನು ತೋರಿಸಿ) ಈತ ಯಾರು ಎಂಬುದನ್ನು ಅರಿಯದೆ, ಈತನನ್ನು ಪ್ರೀತಿಸುವುದೆಂತು? (ಮಾಸ್ಟರಿಗೆ) ಆದರೆ ಶುದ್ಧಾತ್ಮನಾದ ಈ ಹುಡುಗ ಶುದ್ಧ-ಭಕ್ತಿ ಬೇಕು ಅಂತ ಕೇಳುತ್ತಿರುವಾಗ ಇದರಲ್ಲಿ ವಿಶೇಷತೆ ಇದ್ದೇ ಇರಬೇಕು. ತಾನು ತಾನಾಗಿಯೆ ಭಕ್ತಿ ಅಂಕುರವಾಗಬೇಕಾದರೆ, ಹಿಂದಿನ ಸಂಸ್ಕಾರವಿಲ್ಲದಿದ್ದರೆ ಆಗದು. ಇದೇ ಪ್ರೇಮಭಕ್ತಿಯ ಲಕ್ಷಣ. ಜ್ಞಾನಭಕ್ತಿ ಎಂಬುದು ವಿಚಾರಪೂರಿತ ಭಕ್ತಿ.

(ಚಿಕ್ಕ ನರೇನನಿಗೆ) "ಎಲ್ಲಿ, ನಿನ್ನ ಮೈ ತೋರಿಸು. ಷರಟು ಬಿಚ್ಚು ನೋಡೋಣ. ಒಳ್ಳೆಯ ಎದೆಕಟ್ಟು;— ನಿನಗೆ ದೊರೆಯುತ್ತದೆ. ಆಗಾಗ ಬಂದು ಹೋಗು."

ಪರಮಹಂಸರು ಇನ್ನೂ ಭಾವಾವಿಷ್ಟರಾಗಿಯೇ ಇದಾರೆ. ಉಳಿದ ಭಕ್ತರನ್ನೂ ದಯಾರ್ದ್ರಹೃದಯದಿಂದ ಒಬ್ಬೊಬ್ಬರನ್ನಾಗಿ ಸಂಬೋಧಿಸಿ ಅವರ ಭವಿಷ್ಯವನ್ನು ತಿಳಿಸುತ್ತಿದಾರೆ.

ಶ್ರೀರಾಮಕೃಷ್ಣರು ಪಲ್ಟುವಿಗೆ: "ನಿನಗೂ ದೊರೆಯುತ್ತದೆ. ಆದರೆ ಒಂದು ಸ್ವಲ್ಪ ನಿಧಾನವಾಗಿ ದೊರೆಯುತ್ತದೆ.

(ಬಾಬುರಾಮನಿಗೆ) "ನಿನ್ನನ್ನು ಏಕೆ ಆಕರ್ಷಿಸುತ್ತಿಲ್ಲ ಗೊತ್ತೆ?— ಕೊನೆಗೆ ಅದು ಒಂದು ಫಜೀತಿಗಿಟ್ಟುಕೊಂಡುಬಿಡುತ್ತದೆ.

(ಮೋಹಿನೀಮೋಹನನಿಗೆ) "ನೀನಂತು ಸರಿಯಾದ ರಸ್ತೆಯಲ್ಲಿ ಇದ್ದೇ ಇದ್ದೀಯೆ. ಇನ್ನೂ ಸ್ವಲ್ಪ ಬಾಕಿ ಉಳಿದುಕೊಂಡಿದೆ. ಅದೊಂದಷ್ಟು ಮುಗಿಯಿತು ಎಂದರೆ ಬೇರೆ ಯಾವುದೂ—ಕರ್ತವ್ಯ, ಕರ್ಮ, ಸಂಸಾರ—

ನಿನ್ನನ್ನು ಹಿಡಿದು ನಿಲ್ಲಿಸದು. ಎಲ್ಲದರಿಂದಲೂ ಒಮ್ಮೆಗೆಯೆ ಮುಕ್ತವಾಗಿ ಬಿಡೋದೇನು ಒಳ್ಳೆಯದೆ!"

ಹೀಗೆಂದು ಹೇಳಿ ಮೋಹಿನೀಮೋಹನನ ಅಂತರ್ಯದ ಎಲ್ಲಾ ಭಾವನೆಗಳನ್ನು ಅರಿತುಕೊಳ್ಳುತ್ತಿರುವರೊ ಏನೊ ಎಂಬಂತೆ ಆತನ ಕಡೆಗೆ ತಮ್ಮ ಪ್ರೇಮಪೂರಿತ ದೃಷ್ಟಿಯನ್ನು ಹಾಕಿದರು. ಮೋಹಿನೀಮೋಹನ ಭಗವಂತನ ಸಾಕ್ಷಾತ್ಕಾರಕ್ಕೋಸುಗ ಎಲ್ಲವನ್ನೂ ತ್ಯಜಿಸಿಬಿಡೋದು ಶ್ರೇಯಸ್ಕರವಾದ್ದೆ ಎಂಬುದಾಗಿ ಯೋಚಿಸುತ್ತಿದ್ದನೇನು? ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಪರಮಹಂಸರು ಹೇಳಿದರು, "ಭಾಗವತಪಂಡಿತನನ್ನು ಭಗವಂತ ಎಲ್ಲೋ ಒಂದು ಪಾಶದಿಂದ ಈ ಜಗತ್ತಿಗೆ ಕಟ್ಟಿಹಾಕಿರುತ್ತಾನೆ; ಇಲ್ಲದೆ ಇದ್ದರೆ ಭಾಗವತಪ್ರವಚನವನ್ನು ಮಾಡಲು ಯಾರು ತಾನೆ ಉಳಿದುಕೊಳ್ಳುತ್ತಿದ್ದರು? ಆತನನ್ನು ಲೋಕಶಿಕ್ಷಣಾರ್ಥಕ್ಕಾಗಿ ಬಂಧಿಸಿ ಇಡುತ್ತಾನೆ. ಆ ಕಾರಣದಿಂದಲೇ ಭಗವತಿ ನಿನ್ನನ್ನು ಈ ಜಗತ್ತಿನಲ್ಲಿ ಇಟ್ಟಿದಾಳೆ" ಅಂತ.

ಈಗ ಪರಮಹಂಸರು ಆ ಬ್ರಾಹ್ಮಣಯುವಕನನ್ನು ಸಂಬೋಧಿಸಿ ಆತನಿಗೆ ಬುದ್ಧಿವಾದವೀಯುತ್ತಿದಾರೆ.

ಶ್ರೀರಾಮಕೃಷ್ಣರು ಯುವಕನಿಗೆ: "ನೀನು ಜ್ಞಾನಚರ್ಚೆಯನ್ನು ಬಿಟ್ಟುಬಿಡು; ಭಕ್ತಿಯನ್ನು ಸ್ವೀಕರಿಸು. ಭಕ್ತಿಯೇ ಸಾರವಾದ್ದು. ನೀನು ಇಲ್ಲಿಗೆ ಬಂದು ಮೂರುದಿನ ಆಯಿತು, ಅಲ್ಲವೆ?"

ಬ್ರಾಹ್ಮಣಯುವಕ ಕರಗಳನ್ನು ಜೋಡಿಸಿ: "ಹೌದು, ಆಯಿತು."

ಶ್ರೀರಾಮಕೃಷ್ಣರು: "ವಿಶ್ವಾಸವಿಡು. ಭಗವತಿಯನ್ನು ಆಶ್ರಯಿಸು. ಹಾಗೆಮಾಡಿದರೆ, ತಾನೇ ಸ್ವತಃ ಏನೂ ಮಾಡಬೇಕಾಗಿರೋದಿಲ್ಲ, ಭಗವತಿ ಕಾಳಿಯೇ ಎಲ್ಲವನ್ನೂ ಮಾಡಿಕೊಟ್ಟುಬಿಡುತ್ತಾಳೆ.

"ಜ್ಞಾನ ಅಂತಃಪುರದವರೆಗೆ ಮಾತ್ರ ಹೋಗಬಲ್ಲದು, ಆದರೆ ಭಕ್ತಿ ಅಂತಪುರಕ್ಕೇನೇ ಹೋಗಬಲ್ಲದು. ಶುದ್ಧಾತ್ಮ ನಿರ್ಲಿಪ್ತ. ಆತನಲ್ಲಿ ವಿದ್ಯೆ ಅವಿದ್ಯೆ ಎರಡೂ ಇವೆ, ಆದರೆ ಆತ ಮಾತ್ರ ನಿರ್ಲಿಪ್ತ. ಗಾಳಿಯಲ್ಲಿ ಒಮ್ಮೆ ಸುಗಂಧ ಒಮ್ಮೆ ದುರ್ಗಂಧ ಎರಡೂ ಬರುತ್ತವೆ, ಆದರೆ ಅದು ಮಾತ್ರ ನಿರ್ಲಿಪ್ತ.

"ಒಮ್ಮೆ ವ್ಯಾಸಮಹರ್ಷಿ ಯಮುನೆಯನ್ನು ಇನ್ನೇನು ದಾಟುವುದರಲ್ಲಿದ್ದರು. ಗೋಪಿಯರೂ ಅಲ್ಲಿಗೆ ಬಂದರು. ಅವರೂ ದಾಟಬೇಕಾಗಿದೆ—

ದಾಟಿ ಆಚೆದಡದಲ್ಲಿ ಹಾಲು ಮೊಸರು ಬೆಣ್ಣೆ ಮಾರಲು ಹೋಗುತ್ತಿದ್ದಾರೆ. ಆಗ ಅಲ್ಲಿ ದೋಣಿ ಇರಲಿಲ್ಲ. ಅವರೆಲ್ಲರೂ ನದಿಯನ್ನು ಹೇಗೆ ದಾಟೋದು ಎಂದು ಚಿಂತಿಸುತ್ತಾ ನಿಂತಿದ್ದರು. ಆಗ ವ್ಯಾಸಮಹರ್ಷಿ ವ್ಯಕ್ತಪಡಿಸಿದರು ತಮಗೆ ಬಹಳ ಹಸಿವಾಗುತ್ತಿದೆ ಅಂತ. ಒಡನೆ ಗೋಪಿಯರು ಅವರಿಗೆ ಹಾಲು ಬೆಣ್ಣೆ ಕೆನೆ ಇವುಗಳನ್ನೆಲ್ಲ ಕೊಟ್ಟರು. ವ್ಯಾಸಮಹರ್ಷಿ ಕೊಟ್ಟದುದನ್ನೆಲ್ಲ ಬಹುಪುಟ್ಟಿಗೆ ತಿಂದುಬಿಟ್ಟರು. ಬಳಿಕ ಅವರು ಯಮುನೆಯನ್ನು ಸಂಬೋಧಿಸಿ ಹೇಳಿದರು, 'ಹೇ ಯಮುನಾದೇವಿ, ನಾನು ಏನನ್ನೂ ತಿನ್ನದೆ ಇರುವುದು ಸತ್ಯವಾದುದೆ ಆಗಿದ್ದರೆ, ನಿನ್ನ ನೀರು ಇಬ್ಭಾಗವಾಗಲಿ, ನಾವು ಆಚೆ ದಡಕ್ಕೆ ನಡೆದು ಹೊರಟುಹೋಗುವೆವು' ಅಂತ. ಅವರು ಸಂಕಲ್ಪಿಸಿದ ಹಾಗೆಯೇ ಆಯಿತು! ಯಮುನೆ ಇಬ್ಭಾಗವಾಗಿ ನಿಂತಳು. ನಡೆದು ಹೋಗಲು ದಾರಿಯಾಯಿತು. ಆ ಮಾರ್ಗವಾಗಿ ವ್ಯಾಸಮಹರ್ಷಿ ಮತ್ತು ಗೋಪಿಯರು ಆಚೆ ದಡವನ್ನು ತಲುಪಿದರು. 'ನಾನು ಏನನ್ನೂ ತಿನ್ನದೆ ಇರುವುದು ಸತ್ಯವಾದುದೆ ಆಗಿದ್ದರೆ' ಎಂಬುದಾಗಿ ವ್ಯಾಸಮಹರ್ಷಿ ಹೇಳಿದುದರ ಅರ್ಥ ತಾವು ಶುದ್ಧಾತ್ಮ ಎಂದು. ಶುದ್ಧಾತ್ಮ ನಿರ್ಲಿಪ್ತ, ಪ್ರಕೃತಿಗತೀತ. ಆತನಿಗೆ ಹಸಿವುತೃಷೆಗಳೇನಿಲ್ಲ; ಜನ್ಮಮೃತ್ಯುಗಳಿಲ್ಲ — ಸುಮೇರುವಿನಂತೆ ಅಜರ, ಅಮರ.

"ಯಾರಿಗೆ ಈ ಬ್ರಹ್ಮಜ್ಞಾನ ದೊರೆತಿರುವುದೊ, ಆತ ಜೀವನ್ಮುಕ್ತ. ಆತನಿಗೆ ಚೆನ್ನಾಗಿ ಗೊತ್ತಿದೆ, ಶರೀರ ಪ್ರತ್ಯೇಕ ಆತ್ಮ ಪ್ರತ್ಯೇಕ ಅಂತ. ಭಗವಂತನ ದರ್ಶನವಾದಮೇಲೆ ದೇಹಾತ್ಮಬುದ್ಧಿ ಇರದು. ನೀರು ಇಂಗಿ ಹೋದ ತೆಂಗಿನಕಾಯಿಯಲ್ಲಿ ತಿರಳು ಪ್ರತ್ಯೇಕವಾಗಿ ಕರಟ ಪ್ರತ್ಯೇಕವಾಗಿ ಇರುವಂತೆ ಇವೆರಡೂ ಪ್ರತ್ಯೇಕ ಪ್ರತ್ಯೇಕ. ಆತ್ಮ ದೇಹದೊಳಗೆ 'ಗಡಗಡ' ಅಂತ ಅಳ್ಳಾಡುತ್ತಿರುವುದೊ ಏನೊ ಎಂಬಂತೆ ಕಾಣಬರುತ್ತದೆ. ವಿಷಯಬುದ್ಧಿ ಎಂಬ ನೀರು ಇಂಗಿಹೋಯಿತು ಎಂದರೆ ಆತ್ಮಜ್ಞಾನ ದೊರಕುತ್ತದೆ; ಆತ್ಮ ಪ್ರತ್ಯೇಕ ದೇಹ ಪ್ರತ್ಯೇಕ ಎಂಬ ಬೋಧೆಯಾಗುತ್ತದೆ. ಹಸಿಯ ಅಡಕೆ ಅಥವಾ ಹಸಿಯ ಬಾದಾಮಿ ಒಳಗಿರೋ ಅಡಕೆಯನ್ನು ಅಥವಾ ಬಾದಾಮಿಯನ್ನು ಅವುಗಳ ಸಿಪ್ಪೆಯಿಂದ ಪ್ರತ್ಯೇಕಪಡಿಸಿಲಾಗೋದಿಲ್ಲ; ಆದರೆ ಅವು ಹಣ್ಣಾದಾಗ ಅಡಕೆ ಮತ್ತು ಬಾದಾಮಿ ಪ್ರತ್ಯೇಕವಾಗಿ, ಅವುಗಳ ಸಿಪ್ಪೆ ಪ್ರತ್ಯೇಕವಾಗಿ ಆಗಿಬಿಡುತ್ತದೆ. ಹಣ್ಣಾದಾಗ ರಸ ಇಂಗಿ

ಹೋಗಿಬಿಡುತ್ತದೆ. ಬ್ರಹ್ಮಜ್ಞಾನ ದೊರೆತರೆ ವಿಷಯರಸ ಇಂಗಿಹೋಗಿ ಬಿಡುತ್ತದೆ.

"ಆದರೆ ಆ ಜ್ಞಾನವನ್ನು ಪಡೆದುಕೊಳ್ಳುವುದು ಬಲು ಕಷ್ಟ. ಬರಿಯ ಬಾಯಿಮಾತಿನಿಂದಲೆ ಬ್ರಹ್ಮಜ್ಞಾನ ದೊರಕದು. ಕೆಲವರು ಬ್ರಹ್ಮಜ್ಞಾನ ದೊರೆತವರ ಹಾಗೆ ನಟಿಸುತ್ತಾರೆ. (ನಗುತ್ತ) ಒಬ್ಬ ಬಹಳ ವಾಗಿ ಸುಳ್ಳು ಹೇಳುತ್ತಿದ್ದ; ಆದರೂ ತನಗೆ ಬ್ರಹ್ಮಜ್ಞಾನ ದೊರೆತಿದೆ ಎಂದು ಹೇಳಿಕೊಳ್ಳುತ್ತಿದ್ದ. ಆತನನ್ನು ಯಾರೊ ತರಾಟಿಗೆ ತೆಗೆದು ಕೊಂಡಾಗ ಆತ ಹೇಳಿದ, 'ಹೀಗೇಕೆ ವರ್ತಿಸುತ್ತಿದ್ದೀರಿ? ಈ ಜಗತ್ತು ಸ್ವಪ್ನವತ್; ಎಲ್ಲವೂ ಮಿಥ್ಯವೇ ಆಗಿದ್ದರೆ ಸತ್ಯವಚನ ಮಾತ್ರ ಸತ್ಯವಾದು ದಾಗಿ ಆಗುವುದೆ? ಮಿಥ್ಯವೂ ಮಿಥ್ಯಾ, ಸತ್ಯವೂ ಮಿಥ್ಯಾ!' ಅಂತ." (ಎಲ್ಲರೂ ನಗುತ್ತಾರೆ.)

ಪರಮಹಂಸರು ಭಕ್ತರೊಡನೆ ಮಂದಲಿಗೆ ಮೇಲೆ ಕುಳಿತಿದಾರೆ. ಮುಖದಲ್ಲಿ ನಗು ಕಾಣಬರುತ್ತಿದೆ. ತಮ್ಮ ಕಾಲನ್ನು ಸ್ವಲ್ಪ ಮೆದುವಾಗಿ ಒತ್ತುವಂತೆ ಅವರು ಭಕ್ತರಿಗೆ ಹೇಳಿದರು. ಭಕ್ತರು ಮೆದುವಾಗಿ ಒತ್ತುತ್ತಿ ದಾರೆ. ಅವರು ಮಾಸ್ಟರಿಗೆ ಹೇಳಿದರು, "ಇದರಲ್ಲಿ (ಪಾದಸೇವೆ ಮಾಡೋದ ರಲ್ಲಿ) ಒಂದು ದೊಡ್ಡ ಮಹತ್ತಿದೆ" ಅಂತ. ತಮ್ಮ ಎದೆಯ ಮೇಲೆ ಕೈ ಇಟ್ಟುಕೊಂಡು ಮತ್ತೆ ಹೇಳಿದರು, "ಇದರೊಳಗೆ ಏನಾದರೂ ಸತ್ತ್ವ ವಿರುವುದಾದರೆ, ಈ ಸೇವೆಯಿಂದ ಭಕ್ತರ ಅಜ್ಞಾನ, ಅವಿದ್ಯೆ ಒಮ್ಮೆಗೆಯೆ ನಾಶವಾಗಿಬಿಡುತ್ತದೆ" ಅಂತ.

ಏನೋ ಒಂದು ಗುಹ್ಯ ವಿಷಯವನ್ನು ತಿಳಿಸೋರಹಾಗೆ ಪರಮ ಹಂಸರು ಗಂಭೀರಮುದ್ರೆಯನ್ನು ತಾಳಿದರು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇಲ್ಲಿ ಪರರು ಯಾರೂ ಇಲ್ಲ. ಅಂದು, ಹರೀಶ ನನ್ನೊಡನೆ ಇದ್ದಾಗ, ಸಚ್ಚಿದಾನಂದ ಈ ಕೋಶದಿಂದ (ಪರಮಹಂಸರ ಶರೀರದಿಂದ) ಹೊರಕ್ಕೆ ಬಂದುದನ್ನು ನೋಡಿದೆ. ಆತ ಹೊರಕ್ಕೆ ಬಂದು ಹೇಳಿದ, 'ನಾನು ಪ್ರತಿಯೊಂದು ಯುಗದಲ್ಲಿಯೂ ಅವತರಿಸುತ್ತೇನೆ' ಅಂತ. ಆಗ ಭಾವಿಸಿದೆ, ಬಹುಶಃ ಚಿತ್ತಭ್ರಮಣೆಯಿಂದ ನಾನು ಹೀಗೆ ಹೇಳುತ್ತಿರಬಹುದು ಎಂದು. ಒಂದು ಸ್ವಲ್ಪ ಹೊತ್ತು ಸುಮ್ಮನೆ ಇದ್ದು ನೋಡಿದೆ. ಆಗ ಸಚ್ಚಿದಾನಂದ ಮತ್ತೆ ತಾನಾಗಿಯೆ ಹೇಳಿದ, 'ಶಕ್ತಿಯ ಆರಾಧನೆಯನ್ನು ಚೈತನ್ಯದೇವನೂ ಮಾಡಿದ' ಅಂತ."

ಇದನ್ನೆಲ್ಲ ಭಕ್ತರು ಬೆರಗಾಗಿ ಕೇಳಿದರು. ಕೆಲಕೆಲವರು ಭಾವಿಸುತ್ತಿದಾರೆ, ಸಾಕ್ಷಾತ್ ಸಚ್ಚಿದಾನಂದನೆ ಪರಮಹಂಸರ ರೂಪನ್ನು ಧರಿಸಿ ನಮ್ಮ ಹತ್ತಿರ ಕುಳಿತಿರುವನೆ? ಭಗವಂತ ಮತ್ತೆ ಅವತರಿಸಿ ಬಂದಿದಾನೆಯೆ? ಅಂತ. ಪರಮಹಂಸರು ಒಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಮಾಸ್ಟರನ್ನು ಸಂಬೋಧಿಸಿ ಮತ್ತೆ ಆತನಿಗೆ ಹೇಳಿದರು, "ಪೂರ್ಣ ಆವಿರ್ಭಾವವಾಗಿ ಕಂಡಿತು; ಆದರೆ ಈ ಸಲ ಅದು ಸತ್ತ್ವಗುಣದ ಐಶ್ವರ್ಯ ಮಾತ್ರ" ಅಂತ.

ಭಕ್ತರೆಲ್ಲರು ಮಂತ್ರಮುಗ್ಧರಾಗಿ ಕುಳಿತು ಇದನ್ನೆಲ್ಲ ಕೇಳುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈಗತಾನೆ ನಾನು ತಾಯಿಗೆ ಹೇಳಿದೆ, 'ನಾನು ಹೆಚ್ಚಾಗಿ ಮಾತನಾಡಲಾರೆ' ಅಂತ. ಮತ್ತೆ ಹೇಳಿದೆ, 'ಹೇ ತಾಯೆ, ಒಮ್ಮೆ ಮುಟ್ಟಿದರೆಯೇ ಜನರಿಗೆ ಚೈತನ್ಯ ಉಂಟಾಗಿಬಿಡುವಂತೆ ಮಾಡಿಬಿಡು' ಅಂತ. ಯೋಗಮಾಯೆಯ ಮಹಿಮೆ ಅಂಥದು, ಆಕೆ ಸುಮ್ಮನೆ ಮೋಡಿ ಹಾಕಿಬಿಡಬಲ್ಲಳು. ಆಕೆ ಬೃಂದಾವನದ ಲೀಲೆಯಲ್ಲಿ ಮೋಡಿ ಹಾಕಿಬಿಟ್ಟಳು. ಅದರ ಬಲದಿಂದ ಶ್ರೀಮತಿ (ರಾಧೆ) ಶ್ರೀಕೃಷ್ಣನನ್ನು ಸಂಧಿಸೋ ಸನ್ನಾಹ ನಡೆಸಲು ಸುಬಲನಿಗೆ ಸಾಧ್ಯವಾಯಿತು. ಯೋಗಮಾಯೆ—ಆದ್ಯಾಶಕ್ತಿ—ಆಕೆಗೆ ಒಂದು ಆಕರ್ಷಣಿಕ ಶಕ್ತಿ ಇದೆ. ನಾನು ಆ ಶಕ್ತಿಯ ಆರೋಪಣೆಯನ್ನು ಮಾಡಿಕೊಂಡಿದ್ದೆ.

(ಮಾಸ್ಟರಿಗೆ) "ಒಳ್ಳೇದು, ಯಾರು ಇಲ್ಲಿಗೆ ಬರುತ್ತಿರುವರೊ ಅವರಿಗೇನಾದರು ಅಲ್ಪ ಸ್ವಲ್ಪ ಅನುಭವ ಆಗುತ್ತಿದೆಯೆ?"

ಮಾಸ್ಟರ್: "ಹೌದು, ಆಗುತ್ತಿದೆ. ಅದರಲ್ಲಿ ಸಂದೇಹವೇನು?"

ಶ್ರೀರಾಮಕೃಷ್ಣರು: "ಅದು ಹೇಗೆ ಗೊತ್ತು ನಿನಗೆ?"

ಮಾಸ್ಟರ್ ನಗುತ್ತ: "ಪ್ರತಿಯೊಬ್ಬರೂ ಹೇಳುತ್ತಿದಾರೆ, 'ಯಾರು ಅವರ ಹತ್ತಿರ ಹೋಗುತ್ತಾರೊ ಅವರು ಮತ್ತೆ ಜನ್ಮವೆತ್ತೋದಿಲ್ಲ' ಅಂತ."

ಶ್ರೀರಾಮಕೃಷ್ಣರು ನಗುತ್ತ: "ಒಂದು ಗೂಳಿಗಪ್ಪೆ ಒಂದು ನೀರಹಾವಿನ ಬಾಯಿಗೆ ಸಿಕ್ಕಿಬಿತ್ತು. ಆ ಹಾವು ಅದನ್ನು ನುಂಗಲೂ ಆರದು ಉಗುಳಲೂ ಆರದು. ಅದರ ಫಲವಾಗಿ ಕಪ್ಪೆ ಸುಮ್ಮನೆ ಸಂಕಟಪಡುತ್ತಿತ್ತು; ಅದು ಸುಮ್ಮನೆ ಕೂಗಿಕೊಳ್ಳುತ್ತಿತ್ತು. ಹಾವಿಗೂ ಮರಣಸಂಕಟ. ಆದರೆ ಆ ಕಪ್ಪೆ ನಾಗರಹಾವಿನ ಬಾಯಿಗೇನಾದರೂ ಸಿಕ್ಕಿ

ಬಿದ್ದಿದ್ದರೆ ಒಂದೆರಡು ಸಲ ಕೂಗಿಕೊಳ್ಳುವುದರಲ್ಲಿಯೆ ಅದರ ಆಟ ಮುಗಿದುಹೋಗುತ್ತಿತ್ತು. (ಎಲ್ಲರೂ ನಗುತ್ತಿದ್ದಾರೆ.)

(ಯುವಕ ಭಕ್ತರಿಗೆ) "ತ್ರೈಲೋಕ್ಯ ಬರೆದಿರೋ ಆ ಪುಸ್ತಕ—ಭಕ್ತಿ ಚೈತನ್ಯಚಂದ್ರಿಕಾ ಓದಿದೀರೇನು? ಅವನಿಂದ ಒಂದು ಪ್ರತಿಯನ್ನು ವಸೂಲುಮಾಡಿ. ಚೈತನ್ಯದೇವನ ಸಂಬಂಧವಾಗಿ ಬಹಳ ಚೆನ್ನಾಗಿ ಬರೆದಿದಾನೆ."

ಒಬ್ಬ ಭಕ್ತ: "ಆತ ನಮಗೆ ಹಾಗೇ ಕೊಡುವನೆ?"

ಶ್ರೀರಾಮಕೃಷ್ಣರು ನಗುತ್ತ: "ಏಕೆ ಕೊಡಲೊಲ್ಲ. ರೈತನಿಗೆ ಕೆಕ್ಕರಿಕೆ ಕರಬೂಜದ ಬೆಳೆ ಬಹಳ ಚೆನ್ನಾಗಿ ಬಂದಿದ್ದರೆ ಒಂದೆರಡು ಹಣ್ಣನ್ನು ಉಚಿತವಾಗಿ ಕೊಟ್ಟುಬಿಡಬಲ್ಲ. (ಎಲ್ಲರೂ ನಗುತ್ತಾರೆ.) ಏನು ನಿನ್ನ ಮಾತು—ಹಾಗೇ ಒಂದು ಪ್ರತಿಯನ್ನು ಕೊಡಲಾರನೆ?

(ಪಲ್ಟುವಿಗೆ) "ಒಮ್ಮೊಮ್ಮೆ ಇಲ್ಲಿಗೆ ಬಂದು ಹೋಗುತ್ತಿರು."

ಪಲ್ಟು: "ಸಾಧ್ಯವಾದಾಗ ಬರುತ್ತೇನೆ."

ಶ್ರೀರಾಮಕೃಷ್ಣರು: "ನಾನು ಕಲ್ಕತ್ತದಲ್ಲಿ ಅಲ್ಲಿಗೆ ಬಂದಾಗ, ನೀನೂ ಅಲ್ಲಿಗೆ ಬರಲಾಗುವುದೆ?"

ಪಲ್ಟು: "ಇಚ್ಛೆ ಇದೆ; ಪ್ರಯತ್ನಮಾಡುತ್ತೇನೆ."

ಶ್ರೀರಾಮಕೃಷ್ಣರು: "ನೋಡು, ಲೆಕ್ಕಾಚಾರದ ಬುದ್ಧೀನ!"

ಪಲ್ಟು: "'ಪ್ರಯತ್ನಮಾಡುತ್ತೇನೆ' ಅಂತ ಹೇಳದೆ ಇದ್ದರೆ, ಸಾಧ್ಯವಾಗದೆ ಹೋಗಿ ಸುಳ್ಳು ಹೇಳಿದಂತಾಗಬಹುದು."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇಂಥ ಹುಡುಗರು ಸುಳ್ಳು ಹೇಳಿದರೆ ನಾನು ಅಷ್ಟೊಂದಾಗಿ ಮನಸ್ಸಿಗೆ ಹಚ್ಚಿಕೊಳ್ಳೋದಿಲ್ಲ; ಇವರ ಸ್ವಾತಂತ್ರ್ಯ ಇವರ ಕೈಯಲ್ಲಿ ಇಲ್ಲ.

(ಹರಿಪದನಿಗೆ) "ಮಹೇಂದ್ರಮುಖರ್ಜಿ ಏಕೆ ಬರುತ್ತಿಲ್ಲ?"

ಹರಿಪದ: "ಕಾರಣವೇನೊ ಸರಿಯಾಗಿ ಗೊತ್ತಿಲ್ಲ."

ಮಾಸ್ಟರ್ ನಗುತ್ತ: "ಆತ ಜ್ಞಾನಯೋಗಕ್ಕೆ ಕೈ ಹಚ್ಚಿದಾನೆ!"

ಶ್ರೀರಾಮಕೃಷ್ಣರು: "ಅಲ್ಲ, ಅದಕ್ಕಲ್ಲ. ಅಂದು ಆತ ಹೇಳಿದ್ದ, 'ಗಾಡಿ ಕಳುಹಿಸುತ್ತೇನೆ, ಹೋಗಿ ಪ್ರಹ್ಲಾದನ ಚರಿತ್ರೆಯನ್ನು ನೋಡಿಬನ್ನಿ' ಅಂತ. ಆದರೆ ಕಳುಹಿಸಲಿಲ್ಲ. ಬಹುಶಃ ಅದಕ್ಕಾಗಿ ಬರುತ್ತಿಲ್ಲ ಅಂತ ಕಾಣುತ್ತೆ."

ಮಾಸ್ಟರ್: "ಒಂದು ದಿನ ನಾನು ಮಹಿಮಚಕ್ರವರ್ತಿಯನ್ನು ಕಂಡು ಆತನೊಡನೆ ಮಾತುಕತೆಯಾಡಿದೆ. ಮಹೇಂದ್ರ ಅಲ್ಲಿಗೆ ಹೋಗಿ ಬರುತ್ತಿದ್ದಾನಂತೆ."

ಶ್ರೀರಾಮಕೃಷ್ಣರು: "ಮಹಿಮಚಕ್ರವರ್ತಿ ಭಕ್ತಿ ವಿಷಯವಾಗಿಯೂ ಮಾತುಕತೆಯಾಡುತ್ತಾನೆ. ಆತನಿಗೆ, 'ಪ್ರೇಮದೊಳಾರಾಧಿಸೆ ದೇವರ, ಈ ಜಪತಪವಿನ್ನೇಕೆ?' ಎಂಬ ಅರ್ಥದ ಶ್ಲೋಕ ಕಂಡರೆ ಬಹಳ ಇಷ್ಟ."

ಮಾಸ್ಟರ್ ನಗುತ್ತ: "ನೀವು ಬಲಾತ್ಕರಿಸೋದರಿಂದ ಆತ ಅದನ್ನು ಪಠಿಸುತ್ತಾನೆ."

ಗಿರೀಶಘೋಷ ಈಗ ಕೆಲವು ಕಾಲದಿಂದ ಯಾವಾಗ ನೋಡಿದರೂ ಭಕ್ತರೊಡನೆ ಪರಮಹಂಸರ ವಿಷಯವಾಗೇ ಮಾತುಕತೆಯಾಡುತ್ತಿರುತ್ತಾನೆ.

ಹರಿಪದ: "ಗಿರೀಶಘೋಷನಿಗೆ ಈಗ ಸ್ವಲ್ಪದಿವಸಗಳಿಂದ ವಿವಿಧ ದರ್ಶನಗಳಾಗುತ್ತಿವೆ. ಇಲ್ಲಿಂದ ಮನೆಗೆ ಹೋದನಂತರ ಭಗವದ್ಭಾವನೆಯಲ್ಲಿಯೇ ತನ್ಮಯನಾಗಿರುತ್ತಾನೆ ಮತ್ತು ಏನೇನನ್ನೊ ದರ್ಶನಪಡೆಯುತ್ತಿರುತ್ತಾನೆ."

ಶ್ರೀರಾಮಕೃಷ್ಣರು: "ಆತ ನೋಡಿದರೂ ನೋಡುತ್ತಿರಬಹುದು. ಗಂಗೆಯ ದಡಕ್ಕೆ ಬಂದರೆ ಅನೇಕ ವಸ್ತುಗಳನ್ನು—ದೋಣಿ, ಜಹಜು, ಇನ್ನು ಏನೇನೊ ವಸ್ತುಗಳನ್ನು ನೋಡಬಹುದು."

ಹರಿಪದ: "ಗಿರೀಶಘೋಷ ಹೇಳುತ್ತಾನೆ, 'ಇನ್ನು ಮೇಲೆ ನಾನು ನನ್ನ ಕೆಲಸದಲ್ಲಿಯೇ ನಿರತನಾಗಿಬಿಡುತ್ತೇನೆ. ಪ್ರಾತಃಕಾಲ ಎದ್ದು ಗಡಿಯಾರ ಮುಂದೆ ಇಟ್ಟುಕೊಂಡು ಕೈಗೆ ಪೆನ್ನು ತೆಗೆದುಕೊಂಡು ಇಡೀ ದಿವಸವೆಲ್ಲ ಇದನ್ನ (ಪುಸ್ತಕ ಬರೆಯೋ ಕೆಲಸವನ್ನ) ಮಾಡುತ್ತೇನೆ' ಅಂತ. ಹೀಗೇನೊ ಹೇಳುತ್ತಾನೆ, ಆದರೆ ಆತನ ಕೈಯಲ್ಲಿ ಹಾಗೆ ನಡೆದುಕೊಳ್ಳಲಾಗುತ್ತಿಲ್ಲ. ನಾವು ಯಾರಾದರು ಅಲ್ಲಿಗೆ ಹೋಯಿತು ಅಂದರೆ ಕೇವಲ ನಿಮ್ಮ ವಿಷಯವಾಗಿಯೇ ಮಾತುಕತೆಯಾಡಲು ಆರಂಭಿಸುತ್ತಾನೆ. ನೀವು ನರೇಂದ್ರನನ್ನು ಇಲ್ಲಿಗೆ ಕಳುಹಿಸುವಂತೆ ಆತನಿಗೆ ಹೇಳಿದ್ದಿರಿ. ಆತ ಹೇಳಿದ, 'ನಾನು ನರೇಂದ್ರನನ್ನ ಒಂದು ಗಾಡಿ ಮಾಡಿ ಕಳುಹಿಸುತ್ತೇನೆ' ಅಂತ."

ಘಂಟೆ ಸಾಯಂಕಾಲ ಐದು. ಚಿಕ್ಕ ನರೇನ ಮನೆಗೆ ಹಿಂದಿರುಗಲು

ಸಿದ್ಧನಾಗುತ್ತಿದಾನೆ. ಪರಮಹಂಸರು ತಮ್ಮ ಕೊಠಡಿಯ ವಾಯುವ್ಯ ದಿಕ್ಕಿನ ಉದ್ದ ವರಾಂಡದಲ್ಲಿ ನಿಂತು ಏಕಾಂತದಲ್ಲಿ ಆತನಿಗೆ ಏನೇನೊ ಉಪದೇಶಗಳನ್ನು ಕೊಡುತ್ತಿದಾರೆ. ಸ್ವಲ್ಪ ಹೊತ್ತಾದನಂತರ ಆತ ಅವರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಉಳಿದ ಭಕ್ತರಲ್ಲಿ ಅನೇಕರು ಅವರಿಂದ ಬೀಳ್ಕೊಂಡರು.

ಶ್ರೀರಾಮಕೃಷ್ಣರು ಚಿಕ್ಕ ಮಂಚದ ಮೇಲೆ ಕುಳಿತು ಮೋಹಿನೀ ಮೋಹನನೊಡನೆ ಮಾತುಕತೆಯಾಡುತ್ತಿದಾರೆ. ಪುತ್ರವಿಯೋಗವಾದ ಮೇಲೆ ಆತನ ಹೆಂಡತಿ ಹುಚ್ಚಿಯಂತಾಗಿಬಿಟ್ಟದಾಳೆ. ಒಮ್ಮೆ ನಗುತ್ತಾಳೆ, ಒಮ್ಮೆ ಅಳುತ್ತಾಳೆ. ಆದರೆ ದಕ್ಷಿಣೇಶ್ವರದಲ್ಲಿ ಪರಮಹಂಸರೆದುರಿಗೆ ಇರುವಾಗ ಮಾತ್ರ ಶಾಂತಳಾಗಿ ಇರುತ್ತಾಳೆ.

ಶ್ರೀರಾಮಕೃಷ್ಣರು: "ಈಗ ನಿನ್ನ ಹೆಂಡತಿಗೆ ಹೇಗೆ ಇದೆ?"

ಮೋಹಿನೀಮೋಹನ: "ಇಲ್ಲಿಗೆ ಬಂತು ಅಂದರೆ ಶಾಂತಳಾಗಿಬಿಡುತ್ತಾಳೆ; ಅಲ್ಲಿ ಆಗಾಗ ಬಹಳವಾಗಿ ಹುಚ್ಚೆದ್ದುಬಿಡುತ್ತಾಳೆ. ಅಂದು ಪ್ರಾಣ ಕಳೆದುಕೊಳ್ಳಲು ಹೋಗಿದ್ದಳು."

ಪರಮಹಂಸರು ಇದನ್ನು ಕೇಳಿ ಒಂದು ಸ್ವಲ್ಪ ಹೊತ್ತು ಚಿಂತಾಮಗ್ನರಾಗಿ ಕುಳಿತುಕೊಂಡರು. ಮೋಹಿನೀಮೋಹನ ವಿನಯದಿಂದ ಪ್ರಾರ್ಥನೆಮಾಡಿಕೊಂಡ, "ತಾವು ಆಕೆಗೆ ಒಂದೆರಡು ಬುದ್ಧಿಮಾತುಗಳನ್ನು ದಯವಿಟ್ಟು ಹೇಳಲೇಬೇಕು" ಅಂತ.

ಶ್ರೀರಾಮಕೃಷ್ಣರು: "ಆಕೆಗೆ ಅಡಿಗೆ ಕೆಲಸ ಕೊಡಬೇಡ. ಅದು ಆಕೆಯ ತಲೆ ಉಷ್ಣವನ್ನು ಇನ್ನೂ ಅತಿಯಾಗಿ ಕೆರಳಿಸಿಬಿಡುತ್ತದೆ. ಆಕೆಯನ್ನು ನೋಡಿಕೊಳ್ಳೋಕೆ ಯಾರಾದರು ಬಂಧುಬಾಂಧವರು ಆಕೆಯ ಜೊತೆಯಲ್ಲಿರಲಿ."

ಸಾಯಂಕಾಲವಾಗಿದೆ. ದೇವಾಲಯಗಳಲ್ಲಿ ಮಂಗಳಾರತಿಗೆ ಸಿದ್ಧತೆ ನಡೆಯುತ್ತಿದೆ. ಪರಮಹಂಸರ ಕೊಠಡಿಗೆ ದೀಪ ಹಚ್ಚಿ ಧೂಪವನ್ನು ಹಾಕಾಗಿದೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಜಗನ್ಮಾತೆಗೆ ಪ್ರಣಾಮಮಾಡುತ್ತ ತಮ್ಮ ಮಧುರ ಕಂಠದಿಂದ ಭಗವತಿಯ ನಾಮಸಂಕೀರ್ತನೆ ಮಾಡುತ್ತಿದಾರೆ. ಕೊಠಡಿಗೆ ಮಾಸ್ಟರ್ ವಿನಾ ಬೇರೆ ಯಾರೂ ಬಂದಿರಲಿಲ್ಲ. ಆತ ಮಂದಲಿಗೆ ಮೇಲೆ ಕುಳಿತಿದಾನೆ.

ಪರಮಹಂಸರು ತಮ್ಮ ಮಂಚವನ್ನು ಬಿಟ್ಟು ಎದ್ದರು. ಮಾಸ್ಟರೂ ಎದ್ದು ನಿಂತುಕೊಂಡ. ಪರಮಹಂಸರು ಮಾಸ್ಟರಿಗೆ ಉತ್ತರದ ಮತ್ತು ಪಶ್ಚಿಮದ ಬಾಗಿಲುಗಳನ್ನು ಮುಚ್ಚುವಂತೆ ಹೇಳಿದರು. ಮಾಸ್ಟರ್ ಅವುಗಳನ್ನು ಮುಚ್ಚಿ ವರಾಂಡಕ್ಕೆ ಬಂದು ಪರಮಹಂಸರ ಹತ್ತಿರ ನಿಂತುಕೊಂಡ. ಅವರು ಹೇಳಿದರು ತಾವು ಕಾಳೀದೇವಾಲಯಕ್ಕೆ ಹೋಗಿಬರಬೇಕಾಗಿದೆ ಅಂತ. ಹೀಗೆಂದು ಹೇಳಿ ಮಾಸ್ಟರನ ಕೈಯನ್ನು ಹಿಡಿದುಕೊಂಡು ಆತನ ಮೇಲೆ ತಮ್ಮ ಭಾರವನ್ನೆಲ್ಲ ಹಾಕಿ ಕಾಳೀದೇವಾಲಯದ ಮುಖಮಂಟಪಕ್ಕೆ ಬಂದು ಅಲ್ಲಿಯೆ ಕುಳಿತುಕೊಂಡರು. ಕುಳಿತುಕೊಳ್ಳುವುದಕ್ಕೆ ಮುನ್ನ ಹೇಳಿದರು, "ನೀನು ಅವನನ್ನು ಕರೆ" ಅಂತ. ಮಾಸ್ಟರ್ ಬಾಬುರಾಮನನ್ನು ಕರೆದ.

ಪರಮಹಂಸರು ಕಾಳಿಯ ದರ್ಶನ ಮಾಡಿಕೊಂಡು ಆ ದೊಡ್ಡ ಅಂಗಳದ ಮೂಲಕ ತಮ್ಮ ಕೊಠಡಿಗೆ ಹಿಂದಿರುಗಿಬಂದರು. ಬರುವಾಗ, "ಹೇ ತಾಯಿ! ತಾಯಿ! ರಾಜರಾಜೇಶ್ವರಿ!" ಅಂತ ಹೇಳುತ್ತ ಬಂದರು.

ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿದನಂತರ ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು. ಈಗ ಕೆಲವು ಕಾಲದಿಂದ ಪರಮಹಂಸರಿಗೆ ಒಂದು ಅದ್ಭುತ ಅವಸ್ಥೆ ಬಂದುಬಿಟ್ಟಿದೆ: ಅವರಿಗೆ ಯಾವ ಲೋಹವನ್ನೂ ಮುಟ್ಟೋಕಾಗುತ್ತಿಲ್ಲ. ಈ ಅವಸ್ಥೆ ಬರೋದಕ್ಕೆ ಒಂದೆರಡು ದಿವಸ ಮುನ್ನ ಅವರು ಹೇಳಿದ್ದರು, "ಬಹುಶಃ ಹೀಗೆ ಕಾಣುತ್ತಿದೆ, ತಾಯಿ ನನ್ನ ಹೃದಯದಿಂದ ಐಶ್ವರ್ಯಾಸಕ್ತಿಯನ್ನ ಒಮ್ಮೆಗೆಯೆ ತೆಗೆದುಹಾಕಿಬಿಡುವಂತಿದೆ" ಅಂತ. ಈಗ ಅವರು ಬಾಳೆ ಎಲೆಯಲ್ಲಿ ಊಟಮಾಡುತ್ತಿದಾರೆ, ಮಣ್ಣಿನ ಲೋಟದಿಂದ ನೀರು ಕುಡಿಯುತ್ತಿದಾರೆ. ಅವರಿಗೆ ಕಾಲುತಂಬಿಗೆಯನ್ನೂ ಮುಟ್ಟೋಕಾಗುತ್ತಿಲ್ಲ; ಅದಕ್ಕಾಗಿ ಅವರು ಭಕ್ತರಿಗೆ ಕೆಲವು ಮಣ್ಣಿನ ಗಡಿಗೆಗಳನ್ನು ತರುವಂತೆ ಹೇಳಿದಾರೆ. ಅವರು ಲೋಹದ ಪಾತ್ರೆ ಪದಾರ್ಥಗಳನ್ನು ಮುಟ್ಟಿದರು ಅಂದರೆ ಮುಳ್ಳಿರೋ ಮೀನು ಅವರ ಕೈಯನ್ನು ಚುಚ್ಚಿದ ಹಾಗೆ ಆಗಿ ಅದು "ಜುಮ್, ಜುಮ್" ಅಂತ ನೊಯ್ಯಲಾರಂಭಿಸುತ್ತದೆ.

ಪ್ರಸನ್ನ ಕೆಲವು ಗಡಿಗೆಗಳನ್ನು ತಂದಿದಾನೆ, ಆದರೆ ಅವು ಬಹಳ ಚಿಕ್ಕವು. ಪರಮಹಂಸರು ನಗುತ್ತ ಹೇಳಿದರು, "ಈ ಗಡಿಗೆಗಳು ಬಹಳ

ಚಿಕ್ಕವು. ಆದರೆ ಈ ಹುಡುಗ ಮಾತ್ರ ಬಹಳ ಒಳ್ಳೆಯವ. ಒಮ್ಮೆ ನಾನು ನಿನ್ನ ಬಟ್ಟೆ ತೆಗೆ ಅಂದೊಡನೆಯೆ ನನ್ನೆದರು ಹುಟ್ಟಿದ ನಿರ್ವಾಣದಲ್ಲಿಯೇ ನಿಂತುಕೊಂಡುಬಿಟ್ಟ. ಈತನದು ತೀರ ಮಗುವಿನಂಥ ಮನಸ್ಸು!'' ಅಂತ.

ಬೇಲಘರದ ತಾರಕ ತನ್ನ ಒಬ್ಬ ಮಿತ್ರನೊಡನೆ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರು ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಮಾಸ್ಟರ್ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರು ಮುಂದಲಿಗೆ ಮೇಲೆ ಕುಳಿತಿದಾರೆ. ಕೊಠಡಿಗೆ ದೀಪ ಹಚ್ಚಿದಾರೆ. ತಾರಕ ಕೊಠಡಿಯನ್ನು ಪ್ರವೇಶಿಸಿದೊಡನೆಯೆ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ.

ತಾರಕನಿಗೆ ವಯಸ್ಸು ಬಹುಶಃ ಇಪ್ಪತ್ತು ಆಗಿರಬಹುದು; ಮದುವೆ ಆಗಿದೆ. ಆತನ ತಂದೆತಾಯಿಗಳು ಪರಮಹಂಸರೊಡನೆ ಬೆರೆಯಲು ಆತನನ್ನು ಬಿಟ್ಟುಕೊಡುತ್ತಿಲ್ಲ. ಕಲ್ಕತ್ತದಲ್ಲಿ ಬೋಬಸಾರಿನಲ್ಲಿರುವ ತಮ್ಮ ಮನೆಯಲ್ಲಿಯೆ ಆತ ವಿಶೇಷವಾಗಿ ಇರುತ್ತಾನೆ. ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿಸುತ್ತಾರೆ. ಆತನೊಡನೆ ಬಂದಿದ್ದವನು ಒಂದು ಸ್ವಲ್ಪ ತಮೋಗುಣಿ; ಧಾರ್ಮಿಕ ವಿಷಯಗಳ ಮತ್ತು ಪರಮಹಂಸರ ಸಂಬಂಧವಾಗಿ ಆತ ವ್ಯಂಗ್ಯವಾಗಿ ಮಾತನಾಡುತ್ತಾನೆ.

ಶ್ರೀರಾಮಕೃಷ್ಣರು ತಾರಕನ ಮಿತ್ರನಿಗೆ: ''ಒಮ್ಮೆ ಹೋಗಿ ದೇವಾಲಯಗಳನ್ನೆಲ್ಲ ನೋಡಿಕೊಂಡು ಬಾ.''

ಮಿತ್ರ: ''ಓ, ಅವನ್ನೆಲ್ಲ ನಾನು ಹಿಂದೆಯೇ ನೋಡಿಬಿಟ್ಟಿದೇನೆ.''

ಶ್ರೀರಾಮಕೃಷ್ಣರು: ''ಒಳ್ಳೇದು, ತಾರಕ ಇಲ್ಲಿಗೆ ಬರುತ್ತಿದಾನಲ್ಲ ಅದೇನು ಕೆಟ್ಟಕಾರ್ಯವೇನು?''

ಮಿತ್ರ; ''ಅದು ನಿಮಗೇ ಗೊತ್ತು.''

ಶ್ರೀರಾಮಕೃಷ್ಣರು ಮಾಸ್ಟರನ್ನು: ''ಈತ ಒಬ್ಬ ಹೆಡ್ಮಾಸ್ಟರ್''

ಮಿತ್ರ: ''ಓ!''

ಪರಮಹಂಸರು ತಾರಕನ ಕ್ಷೇಮಸಮಾಚಾರವನ್ನು ವಿಚಾರಿಸಿ ಆತನೊಡನೆ ಬಹಳ ಹೊತ್ತು ಮಾತುಕತೆಯಾಡಿದರು. ತಾರಕ ಈಗ ಮನೆಗೆ ಹಿಂದಿರುಗಲು ಸಿದ್ಧನಾಗಿದಾನೆ. ಪರಮಹಂಸರು ಆತನಿಗೆ ಕೆಲವು ವಿಷಯಗಳ ಸಂಬಂಧವಾಗಿ ಎಚ್ಚರಿಕೆ ಕೊಡುತ್ತಿದಾರೆ.

ಶ್ರೀರಾಮಕೃಷ್ಣರು: ''ಸಾಧು ಹುಷಾರ್. ಕಾಮಕಾಂಚನದ ಸಂಬಂಧವಾಗಿ ಹುಷಾರ್. ಹೆಂಗಸಿನ ಮಾಯಾಬಲೆಗೆ ಒಮ್ಮೆ ಸಿಕ್ಕಿಬಿಟ್ಟ

ಎಂದರೆ, ಮತ್ತೆ ಏಳೋಹಾಗಿಲ್ಲ. ಅದು ವಿಶಾಲಾಕ್ಷಿಯ[1] ಸುಳಿ. ಅದಕ್ಕೆ ಒಮ್ಮೆ ಸಿಕ್ಕಿದವ ಮತ್ತೆ ಏಳೋಹಾಗೆಯೇ ಇಲ್ಲ. ಒಮ್ಮೊಮ್ಮೆ ಇಲ್ಲಿಗೆ ಬಂದುಹೋಗು.''

ತಾರಕ: ''ಮನೆಯವರು ನನ್ನನ್ನು ಬಿಟ್ಟುಕೊಡುತ್ತಿಲ್ಲವಲ್ಲ.''

ಒಬ್ಬ ಭಕ್ತ: ''ಒಂದು ಪಕ್ಷ ಯಾರೊ ಒಬ್ಬನ ತಾಯಿ ಆತನಿಗೆ ಹೇಳ್ತಾಳೆ, 'ನೀನು ದಕ್ಷಿಣೇಶ್ವರಕ್ಕೆ ಹೋಗಕೂಡದು. ಹೋದೆಯೋ, ನೋಡು ನನ್ನ ರಕ್ತವನ್ನು ನೀನು ಓರಿದ ಹಾಗೆಯೆ!' ಅಂತ.—''

ಶ್ರೀರಾಮಕೃಷ್ಣರು: ''ಯಾವ ತಾಯಿ ಹಾಗೆ ಹೇಳುತ್ತಾಳೊ ಅವಳು ತಾಯಿಯೇ ಅಲ್ಲ; ಆಕೆ ಅವಿದ್ಯಾರೂಪಿಣಿ. ಅಂಥ ತಾಯ ಆಜ್ಞೆಯನ್ನು ಉಲ್ಲಂಘನೆಮಾಡಿದರೆ ಯಾವ ದೋಷವೂ ಬರದು. ಆಕೆ ಭಗವಂತನ ಸಾಕ್ಷಾತ್ಕಾರಕ್ಕೆ ವಿಘ್ನವನ್ನು ತಂದೊಡ್ಡುತ್ತಾಳೆ. ಭಗವಂತನ ಸಾಕ್ಷಾತ್ಕಾರ ಕ್ಕೋಸುಗ ಗುರುಹಿರಿಯರ ಆಜ್ಞೆಯನ್ನು ಉಲ್ಲಂಘನೆಮಾಡಿದರೆ ಯಾವ ಅಪರಾಧವೂ ಆಗದು. ಭರತ ಶ್ರೀರಾಮನಿಗಾಗಿ ಕೈಕೆಯ ಆಜ್ಞೆಯನ್ನು ಮೀರಿದ. ಗೋಪಿಯರು ಶ್ರೀಕೃಷ್ಣನ ದರ್ಶನಕ್ಕಾಗಿ ತಮ್ಮ ಪತಿಗಳ ಪ್ರತಿ ಬಂಧಕಾಜ್ಞೆಯನ್ನು ಮೀರಿದರು. ಪ್ರಹ್ಲಾದ ಭಗವಂತನಿಗಾಗಿ ತಂದೆಯ ಆಜ್ಞೆಯನ್ನು ಮೀರಿದ. ಬಲಿಚಕ್ರವರ್ತಿ ಭಗವಂತನ ಪ್ರೀತ್ಯರ್ಥವಾಗಿ ತನ್ನ ಗುರು ಶ್ರೀ ಶುಕ್ರಾಚಾರ್ಯರ ಆಜ್ಞೆಯನ್ನು ಉಲ್ಲಂಘನೆಮಾಡಿದ. ವಿಭೀಷಣ ಶ್ರೀರಾಮನ ಅನುಗ್ರಹವನ್ನು ಪಡೆಯಲು ತನ್ನ ಹಿರಿಯ ಅಣ್ಣ, ರಾವಣನ ಇಚ್ಛೆಗೆ ವ್ಯತಿರಿಕ್ತವಾಗಿ ನಡೆದುಕೊಂಡ. ಆದರೆ ನಿಮ್ಮ ಗುರುಹಿರಿಯರ, 'ಭಗವಂತನ ಕಡೆಗೆ ಹೋಗ ಬೇಡ' ಎಂಬ ಆಜ್ಞೆಯೊಂದನ್ನು ಬಿಟ್ಟು ಉಳಿದವುಗಳನ್ನೆಲ್ಲಾ ಪಾಲಿಸಬೇಕು. ಎಲ್ಲಿ ನಿನ್ನ ಕೈ ನೋಡೋಣ.''

ಪರಮಹಂಸರು ತಾರಕನ ಕೈ ಎಷ್ಟು ಭಾರವಾಗಿದೆ ಎಂಬುದನ್ನು ಪರೀಕ್ಷಿಸಿ ನೋಡುತ್ತಿದಾರೆ. ಕೆಲವು ನಿಮಿಷಗಳಾದನಂತರ ಹೇಳಿದರು, ''ನಿನ್ನ ಮನಸ್ಸಿನಲ್ಲಿ ಒಂದು ಸ್ವಲ್ಪ ವಕ್ರತೆ ಇದೆ;—ಆದರೆ ಅದು ಹೊರಟು ಹೋಗಿಬಿಡುತ್ತದೆ. ಭಗವಂತನಿಗೆ ಸ್ವಲ್ಪ ಪ್ರಾರ್ಥನೆಮಾಡು. ಆಗಾಗ ಇಲ್ಲಿಗೆ ಬಂದು ಹೋಗುತ್ತಿರು— ಅದೊಂದಷ್ಟು ವಕ್ರತೆ ಹೊರಟು ಹೋಗಿ ಬಿಡುತ್ತದೆ. ಬೋಬಸಾರಿನಲ್ಲಿ ಮನೆ ಬಾಡಿಗೆಗೆ ತೆಗೆದುಕೊಂಡಿರೋನು ನೀನೆ ಏನು?'' ಅಂತ.

1. ಕಾಮಾರಪುಕುರದ ಹತ್ತಿರವಿರುವ ಒಂದು ನದಿ.

ತಾರಕ: "ನಾನಲ್ಲ, ನಮ್ಮ ತಂದೆತಾಯಿಗಳು."

ಶ್ರೀರಾಮಕೃಷ್ಣರು ನಗುತ್ತ: "ಅವರೊ ಅಥವಾ ನೀನೋ? ಏನು, ಹುಲಿಗೆ ಹೆದರಿಕೊಂಡೇನು?"

ತಾರಾಕನಿಗೆ ಆಗತಾನೆ ಮದುವೆ ಆಗಿತ್ತು. ಪುರುಷನಿಗೆ ಕಾಮಿನಿ ಒಂದು ಹುಲಿಯ ಹಾಗೆ ಅಂತ ಪರಮಹಂಸರ ಭಾವನೆಯೇನು?

ತಾರಕ ಪರಮಹಂಸರಿಗೆ ಪ್ರಣಾಮಮಾಡಿ ಅಮೇಂದ ಬೀಳ್ಕೊಂಡ. ಪರಮಹಂಸರು ಚಿಕ್ಕ ಮಂಚದ ಮೇಲೆ ಸುಮ್ಮನೆ ಮಲಗಿಕೊಂಡಿದಾರೆ. ತಾರಕನ ಸಂಬಂಧವಾಗಿ ಅವರು ಯೋಚಿಸುತ್ತಿರುವಂತೆ ಕಂಡಿತು. ಇದ್ದಕ್ಕಿದ್ದ ಹಾಗೆ ಮಾಸ್ಟರನ್ನು ಕೇಳಿದರು, "ಇವರಿಗಾಗಿ ನಾನು ಇಷ್ಟೊಂದು ವ್ಯಾಕುಲನಾಗಿಬಿಡುತ್ತೇನಲ್ಲ ಏಕೆ?" ಎಂದು. ಮಾಸ್ಟರ್ ಸುಮ್ಮನೆ ಕುಳಿತ್ತಿದಾನೆ. ಏನು ಉತ್ತರಕೊಡೋದು ಅಂತ ಭಾವಿಸುತ್ತಿದಾನೆ. ಶ್ರೀರಾಮಕೃಷ್ಣರು ಮತ್ತೆ ಆತನನ್ನು ಕೇಳಿದರು, "ಏಕೆ ಸುಮ್ಮನೆ ಕುಳಿತಿದ್ದೀಯೆ? ಏನಾದರು ಉತ್ತರ ಕೊಡು" ಅಂತ.

ಮೋಹಿನೀಮೋಹನನ ಹೆಂಡತಿ ಪರಮಹಂಸರ ಕೊಠಡಿಗೆ ಬಂದು ಅವರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡಳು. ಪರಮಹಂಸರು ತಾರಕನ ಮಿತ್ರನ ಸಂಬಂಧವಾಗಿ ಮಾಸ್ಟರಿಗೆ ಹೇಳುತ್ತಿದಾರೆ.

ಶ್ರೀರಾಮಕೃಷ್ಣರು: "ತಾರಕ ಅವನನ್ನು ಏಕೆ ಜೊತೆಯಲ್ಲಿ ಕರೆದು ಕೊಂಡು ಬಂದ?"

ಮಾಸ್ಟರ್: "ಬಹುಶಃ ಆತ ರಸ್ತೆಯಲ್ಲಿ ಸಿಕ್ಕಿರಬಹುದು. ಬಹಳ ದೂರದಿಂದ ಬರಬೇಕು; ಅದಕ್ಕಾಗಿ ಯಾರೋ ಒಬ್ಬನನ್ನ ಜೊತೆಯಲ್ಲಿ ಕರೆದುಕೊಂಡು ಬಂದಿರಬೇಕು."

ಹೀಗೆ ಮಾತನಾಡುತ್ತಿದ್ದ ಹಾಗೆಯೆ, ಇದ್ದಕ್ಕಿದ್ದ ಹಾಗೆ ಮೋಹಿನೀ ಮೋಹನನ ಹೆಂಡತಿಯನ್ನು ಸಂಬೋಧಿಸಿ ಹೇಳಿದರು, "ಅಪಘಾತ ಮೃತ್ಯುವಿನಿಂದ ಪ್ರೇತವಾಗಬೇಕಾಗಿ ಬರುತ್ತದೆ. ಹುಷಾರ್. ಇದನ್ನು ನಿನ್ನ ಮನಸ್ಸಿಗೆ ಚೆನ್ನಾಗಿ ಒತ್ತಿ ಹೇಳು. ಇಷ್ಟೊಂದು ಸದ್ವಿಷಯಗಳನ್ನು ಕೇಳಿ ಮಾಡಿ ನೋಡಿ ಕೊನೆಗೆ ನಿನಗೀ ದುರವಸ್ಥೆಯೆ?" ಅಂತ.

ಮೋಹಿನೀಮೋಹನ ಇನ್ನೇನು ಹೊರಡುವುದರಲ್ಲಿದಾನೆ. ಆತ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಆತನ ಹೆಂಡತಿಯೂ ಅವರಿಗೆ ಪ್ರಣಾಮಮಾಡಿದಳು. ಪರಮಹಂಸರು ತಮ್ಮ ಕೊಠಡಿಯ

ಉತ್ತರ ದಿಕ್ಕಿನ ಬಾಗಿಲ ಹತ್ತಿರ ನಿಂತುಕೊಂಡಿದಾರೆ. ಮೋಹಿನೀ ಮೋಹನನ ಹೆಂಡತಿ ತಲೆ ಮೇಲೆ ಸೆರಗು ಹಾಕಿಕೊಂಡು ಪರಮಹಂಸ ರೊಡನೆ ಏನನ್ನೋ ಮೆತ್ತ ಮೆತ್ತಗೆ ಹೇಳಿಕೊಳ್ಳುತ್ತಿದಾಳೆ.

ಶ್ರೀರಾಮಕೃಷ್ಣರು: "ನಿನಗೆ ಇಲ್ಲೆ ಇರಲು ಇಚ್ಛೆಯೇನು?"

ಮೋಹಿನೀಮೋಹನನ ಹೆಂಡತಿ: "ಇಲ್ಲಿಗೆ ಬಂದು ಕೆಲವು ದಿವಸ ಶಾರದಾದೇವಿಯವರೊಡನೆ ಇರಬೇಕು ಅಂತ ಇಚ್ಛೆ. ತಮಗೆ ಅದು ಸಮ್ಮತವೆ?"

ಶ್ರೀರಾಮಕೃಷ್ಣರು: "ಅದು ಬಹಳ ಒಳ್ಳೇದೆ. ಆದರೆ ನೀನು ಸಾಯೊ-ಗೀಯೊ ವಿಷಯವಾಗಿ ಮಾತುಕತೆಯಾಡುತ್ತಿದ್ದೀಯೆ. ಅದು ನನಗೆ ಹೆದರಿಕೆಯನ್ನು ಉಂಟುಮಾಡುತ್ತಿದೆ. ಜೊತೆಗೆ ಹತ್ತಿರವೇ ಗಂಗೆ ಬೇರೆ ಇದೆ!"



೩೮

## ಭಕ್ತರೊಡನೆ ಕಲ್ಕತ್ತದಲ್ಲಿ

೧೧ನೆ ಮಾರ್ಚಿ ೧೮೮೫, ಫಾಲ್ಗುಣ ಕೃಷ್ಣ ದಶಮಿ, ಬುಧವಾರ.

ಇಂದು ಸುಮಾರು ಬೆಳಗಿನ ಹತ್ತು ಘಂಟೆಯ ಸಮಯದಲ್ಲಿ ಶ್ರೀರಾಮಕೃಷ್ಣರು ದಕ್ಷಿಣೇಶ್ವರದಿಂದ ತೆರಳಿಬಂದು ಭಕ್ತಗೃಹ ವಸು ಬಲರಾಮಮಂದಿರದಲ್ಲಿ ಶ್ರೀಜಗನ್ನಾಥನ ಪ್ರಸಾದವನ್ನು ಸ್ವೀಕರಿಸಿದರು. ಅವರೊಡನೆ ಲಾಟು ಮೊದಲಾದವರು ಬಂದಿದಾರೆ.

ಹೇ, ಬಲರಾಮ ನೀನೇ ಧನ್ಯ! ನಿನ್ನ ಮನೆಯೇ ಈಗ ಪರಮ ಹಂಸರ ಪ್ರಧಾನ ಕಾರ್ಯಕ್ಷೇತ್ರವಾಗಿಬಿಟ್ಟಿದೆ. ಎಷ್ಟೊಂದು ಮಂದಿ ಹೊಸ ಹೊಸ ಭಕ್ತರನ್ನು ಇಲ್ಲಿಗೆ ಆಕರ್ಷಿಸಿ ಅವರನ್ನು ಪ್ರೇಮವೆಂಬ ಹಗ್ಗ ದಿಂದ ಕಟ್ಟಿಹಾಕಿಬಿಟ್ಟಿದಾರೆ! ಇಲ್ಲಿ ಭಕ್ತರೊಡನೆ ಎಷ್ಟೊಂದು ಸಲ ನರ್ತಿಸಿದಾರೆ! ಇಲ್ಲಿಯೂ, ಶ್ರೀವಾಸನ ಮನೆಯಲ್ಲಿ ಶ್ರೀ ಗೌರಾಂಗದೇವ ಪ್ರೇಮದ ಸಂತೆಯನ್ನು ಕಟ್ಟಿದಂತೆ ತೋರಿಬರುತ್ತಿದೆಯಲ್ಲ!

ದಕ್ಷಿಣೇಶ್ವರದಲ್ಲಿ ಕಾಳೀದೇವಾಲಯದಲ್ಲಿ ಪರಮಹಂಸರು ಸುಮ್ಮನೆ ಕುಳಿತು ಕುಳಿತು ತಮ್ಮ ಅಂತರಂಗ ಭಕ್ತರನ್ನು ನೋಡಬೇಕೆಂಬ ವ್ಯಾಕು ಲತೆಯಿಂದ ಅಳುತ್ತಿರುತ್ತಾರೆ. ಅವರಿಗೆ ರಾತ್ರಿವೇಳೆ ನಿದ್ದೆ ಬರುತ್ತಿಲ್ಲ. ಭಗವತಿಗೆ ಹೇಳುತ್ತಾರೆ, "ಹೇ ತಾಯಿ, ಆತನಲ್ಲಿ ವಿಶೇಷವಾದ ಭಕ್ತಿ ಇದೆ, ಆತನನ್ನು ಆಕರ್ಷಿಸಿಬಿಡು; ತಾಯಿ, ಆತನನ್ನು ಇಲ್ಲಿಗೆ ಕರೆದು ಕೊಂಡು ಬಂದುಬಿಡು; ತಾಯಿ, ಒಂದು ಪಕ್ಷ ಆತ ಇಲ್ಲಿಗೆ ಬರಲಾಗ ದಿದ್ದರೆ, ನನ್ನನ್ನೇ ಅಲ್ಲಿಗೆ ಕರೆದುಕೊಂಡುಹೋಗು; ನಾನೇ ಹೋಗಿ ನೋಡಿಬರುತ್ತೇನೆ" ಅಂತ. ಅದಕ್ಕಾಗಿಯೆ ಬಲರಾಮನ ಮನೆಗೆ ಓಡಿ ಓಡಿ ಬರುತ್ತಾರೆ. ಜನರೊಡನೆ ಬರಿದೆ ಹೇಳುತ್ತಾರೆ, "ಬಲರಾಮನ ಮನೆಯಲ್ಲಿ ಶ್ರೀ ಜಗನ್ನಾಥನ ಪೂಜೆ ಪುರಸ್ಕಾರಗಳು ನಡೆಯುತ್ತಿವೆ; ಆತನ ಮನೆ ಅನ್ನ ಬಹಳ ಶುದ್ಧ ಅನ್ನ" ಅಂತ. ಇಲ್ಲಿಗೆ ಬಂದಾಗಲೆಲ್ಲ ಬಲರಾಮನ ಮೂಲಕ ತಮ್ಮ ಭಕ್ತರಿಗೆ ನಿಮಂತ್ರಣ ಕಳುಹಿಸುತ್ತಾರೆ. ಬಲರಾಮನಿಗೆ ಹೇಳುತ್ತಾರೆ, "ಹೋಗು — ನರೇಂದ್ರ, ಭವನಾಥ,

ರಾಖಾಲ ಇವರಿಗೆಲ್ಲ ನಿಮಂತ್ರಣ ಕೊಟ್ಟು ಬಾ. ಇವರಿಗೆ ಅನ್ನ ಹಾಕಿದರೆ ಶ್ರೀಮನ್ನಾರಾಯಣನಿಗೇ ಅನ್ನ ಹಾಕಿದಂತೆ. ಇವರು ಸಾಮಾನ್ಯ ಪುರುಷರಲ್ಲ. ಇವರು ಭಗವದಂಶಸಂಭೂತರು. ಇವರಿಗೆ ಅನ್ನ ಹಾಕಿದರೆ ನಿನಗೆ ಬಹಳ ಶ್ರೇಯಸ್ಸಾಗುತ್ತದೆ'' ಅಂತ.

ಬಲರಾಮನ ಮನೆಯಲ್ಲಿಯೇ ಗಿರೀಶಘೋಷ ಪರಮಹಂಸರ ಪ್ರಪ್ರಥಮ ದರ್ಶನ ಪಡೆದುದು ಮತ್ತು ಅವರೊಡನೆ ಮಾತುಕತೆಯಾಡಿದುದು. ಇಲ್ಲೇ ರಥಜಾತ್ರೆಯ ಸಮಯದಲ್ಲಿ ಕೀರ್ತನಾನಂದದ ಲಹರಿ ಏಳುತ್ತಿರುತ್ತದೆ. ಇಲ್ಲೇ ಲೆಕ್ಕವಿಲ್ಲದಷ್ಟುಸಾರಿ ಪ್ರೇಮದ ದರ್ಬಾರಿನಲ್ಲಿ ಆನಂದದ ಮೇಳ ನಡೆಯುತ್ತಿರುತ್ತದೆ.

ಮಾಸ್ಟರ್ ಈ ಮನೆಯ ಹತ್ತಿರವೆ ಇರುವ ವಿದ್ಯಾಸಾಗರನ ಶಾಲೆಯಲ್ಲಿ ಅಧ್ಯಾಪಕನಾಗಿದಾನೆ. ಇಂದು ಬೆಳಗಿನ ಹತ್ತು ಘಂಟೆಯ ಸಮಯಕ್ಕೆ ಪರಮಹಂಸರು ಬಲರಾಮನ ಮನೆಗೆ ಬರುತ್ತಾರೆ ಎಂಬುದಾಗಿ ಕೇಳಿದ್ದ. ತನಗೆ ಕ್ಲಾಸು ಇಲ್ಲದ ಸಮಯದಲ್ಲಿ — ಮಧ್ಯಾಹ್ನದ ಸಮಯದಲ್ಲಿ ಬಲರಾಮನ ಮನೆಗೆ ಬಂದಿದಾನೆ. ಬಂದ ಒಡನೆಯೆ ಪರಮಹಂಸರಿಗೆ ಪ್ರಣಾಮ ಮಾಡಿದ. ಅವರು ಊಟವಾದನಂತರ ಬೈಠಕ್‌ಖಾನೆಯಲ್ಲಿ ವಿಶ್ರಮಿಸಿಕೊಳ್ಳುತ್ತಿದಾರೆ. ಆಗಾಗ ತಟ್ಟೆಯಲ್ಲಿಟ್ಟಿದ್ದ ಮಸಾಲೆಗಳನ್ನು— ಲವಂಗ ಏಲಕ್ಕಿ ಮೊದಲಾದುವುಗಳನ್ನು ತಿನ್ನುತ್ತಿದಾರೆ. ಅಲ್ಪವಯಸ್ಕ ಭಕ್ತರು ಅವರ ಸುತ್ತಲೂ ಕುಳಿತಿದಾರೆ.

ಶ್ರೀರಾಮಕೃಷ್ಣರು ದಯಾರ್ದ್ರಹೃದಯದಿಂದ: ''ಏನು, ನೀನು ಈಗಲೆ ಬಂದುಬಿಟ್ಟೆ? ಸ್ಕೂಲಿಲ್ಲವೇನು?''

ಮಾಸ್ಟರ್: ''ಈಗ ನಾನು ಸ್ಕೂಲಿನಿಂದಲೆ ಬರುತ್ತಿದೇನೆ— ಈಗ ಅಲ್ಲಿ ನನಗೆ ವಿಶೇಷ ಕೆಲಸವೇನೂ ಇಲ್ಲ.''

ಒಬ್ಬ ಭಕ್ತ: ''ಮಹಾಶಯರೆ ಅದು ಹಾಗಲ್ಲ. ಸ್ಕೂಲಿಗೆ ಚಕ್ಕರ್ ಹೊಡೆದು ಬಂದಿದಾನೆ.'' (ಎಲ್ಲರೂ ನಗುತ್ತಾರೆ.)

ಮಾಸ್ಟರ್ ತನಗೆ ತಾನೇ ಹೇಳಿಕೊಂಡ, ''ಹೌದು, ನನ್ನನ್ನು ಇಲ್ಲಿಗೆ ಯಾವುದೊ ಒಂದು ಅನಿರ್ವಚನೀಯ ಶಕ್ತಿ ಕರೆದುಕೊಂಡುಬಂದುಬಿಟ್ಟಿದೆ'' ಅಂತ.

ಪರಮಹಂಸರು ಏನನ್ನೊ ಯೋಚಿಸುತ್ತಿರುವಂತೆ ತೋರಿತು. ಬಳಿಕ ಅವರು ಮಾಸ್ಟರನ್ನು ಹತ್ತಿರ ಕೂರಿಸಿಕೊಂಡು ಬಹಳ ಹೊತ್ತು ಮಾತನಾಡಿ

ದರು. ಅವರು ಮಾಸ್ಟರಿಗೆ ಹೇಳಿದರು, "ನನ್ನ ಸ್ನಾನದ ಚೌಕವನ್ನು ಹಿಂಡಿ ಬಿಸಲಿಗೆ ಹಾಕು. ನನ್ನ ಷರಟನ್ನೂ ಬಿಸಲಿಗೆ ಹಾಕು" ಎಂದು. ಮತ್ತೆ ಕೇಳಿದರು, "ನನ್ನ ಕಾಲು ಸ್ವಲ್ಪ ನೋಯುತ್ತಿದೆ. ಅವುಗಳ ಮೇಲೆ ಒಂದು ಸ್ವಲ್ಪ ಮೆಲ್ಲಗೆ ಕೈಯಾಡಿಸಲಾಗುವುದೆ?" ಅಂತ.

ಈ ರೀತಿಯಾಗಿ ಸೇವೆ ಮಾಡಲು ಪರಮಹಂಸರು ತನಗೆ ಅವಕಾಶ ಕೊಟ್ಟಿರುವುದಕ್ಕಾಗಿ ಮಾಸ್ಟರಿಗೆ ಬಹಳ ಆನಂದವಾಗಿಬಿಟ್ಟಿದೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈಗ ಕೆಲವು ಕಾಲದಿಂದ ನನಗೆ ಈ ವಿಧದ ಅವಸ್ಥೆ ಬಂದಿದೆಯಲ್ಲ ಏಕೆ ಹೇಳು ನೋಡೋಣ? ಲೋಹದ್ದು ಯಾವುದನ್ನೂ ಮುಟ್ಟೋಕಾಗುತ್ತಿಲ್ಲ. ಒಮ್ಮೆ ಒಂದು ಪಾತ್ರೆಯನ್ನು ಮುಟ್ಟಿದೆ;—ಮುಳ್ಳಿರೋ ಮೀನು ನನ್ನನ್ನು ಚುಚ್ಚಿದಂತಾಗಿ ಕೈ 'ಜುಮ್, ಜುಮ್' ಎನ್ನಲಾರಂಭಿಸಿತು. ಕಾಲುತಂಬಿಗೆಯನ್ನು ಉಪಯೋಗಿಸದಿರೋ ಕಾಗೋದಿಲ್ಲ. ಅದಕ್ಕಾಗಿ ಅದನ್ನು ಒಂದು ಬಟ್ಟೆಯಿಂದ ಹಿಡಿದು ಉಪಯೋಗಿಸೋಣ ಅಂತ ಪ್ರಯತ್ನಮಾಡಿದೆ. ಹಾಗೆ ಅದನ್ನು ಹಿಡಿಯಲು ಪ್ರಯತ್ನಮಾಡಿದುದೇ ತಡ ಒಡನೆಯೇ ಕೈ 'ಜುಮ್, ಜುಮ್' ಎನ್ನಲು ಆರಂಭವಾಯಿತು; ತಡೆಯಲಾರದ ವೇದನೆ. ಕೊನೆಗೆ ತಾಯಿಗೆ ಪ್ರಾರ್ಥನೆ ಮಾಡಿದೆ, 'ನಾನು ಮತ್ತೆ ಎಂದಿಗೂ ಹಾಗೆ ಮಾಡೋಕೆ ಹೋಗೋದಿಲ್ಲ, ದಯವಿಟ್ಟು ಈಸಲ ನನ್ನನ್ನು ಕ್ಷಮಿಸು' ಅಂತ.

"ಚಿಕ್ಕ ನರೇನ ಆಗಾಗ ಇಲ್ಲಿಗೆ ಬಂದು ಹೋಗುತ್ತಿದಾನೆ. ಅವನ ಮನೆಯವರು ಆಕ್ಷೇಪಣೆ-ಗೀಕ್ಷೇಪಣೆ ಮಾಡೋ ಸಂಭವ ಇದೆಯೇನು? ಅತನದು ಬಹಳ ಶುದ್ಧ ಹೃದಯ. ಹೆಂಗಸಿನ ಸುಖ ಅನ್ನೋದನ್ನೇ ಆತ ಕಾಣ."

ಮಾಸ್ಟರ್: "ಆತ ಒಂದು ದೊಡ್ಡ ನಿಧಿ."

ಶ್ರೀರಾಮಕೃಷ್ಣರು: "ಹೌದು, ವಾಸ್ತವ. ಆತ ಹೇಳಿದ, 'ಭಗವಂತನ ವಿಷಯವಾಗಿ ಏನನ್ನಾದರು ಒಮ್ಮೆ ಕಿವಿಯಿಂದ ಕೇಳಿದರೂ ಅದು ಹೋಗಿ ನನ್ನ ಮನಸ್ಸಿನಲ್ಲಿ ಅಚ್ಚಳಿಯದ ಹಾಗೆ ನೆಟ್ಟುಕೊಂಡು ಬಿಟ್ಟಿರುತ್ತದೆ' ಅಂತ. ಆತ ಮತ್ತೆ ಹೇಳಿದ, 'ಭಗವಂತ ನನಗೆ ದರ್ಶನ ಕೊಡುತ್ತಿಲ್ಲವಲ್ಲ ಅಂತ ಚಿಕ್ಕ ವಯಸ್ಸಿನಲ್ಲಿ ನಾನು ಸುಮ್ಮನೆ ಅಳುತ್ತಿದ್ದೆ' ಅಂತ."

ಈ ರೀತಿಯಾಗಿ ಪರಮಹಂಸರು ಚಿಕ್ಕ ನರೇನನ ಸಂಬಂಧವಾಗಿ

ಮಾಸ್ಟರೊಡನೆ ಮಾತನಾಡುತ್ತಿರುವಾಗ, ಅಲ್ಲಿ ಕುಳಿತಿದ್ದ ಭಕ್ತರಲ್ಲಿ ಒಬ್ಬ ಮಾಸ್ಟರಿಗೆ ಸ್ಕೂಲಿನ ಜ್ಞಾಪಕವನ್ನು ತಂದ.

ಶ್ರೀರಾಮಕೃಷ್ಣರು: "ಈಗ ಘಂಟೆ ಎಷ್ಟು?"

ಭಕ್ತ: "ಒಂದು ಘಂಟೆಗೆ ಹತ್ತು ನಿಮಿಷ ಬಾಕಿ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಳ್ಳೆಯದು, ಹೋಗಿ ಬಾ. ಇಲ್ಲದಿದ್ದರೆ ನಿನಗೆ ಹೊತ್ತಾಗುತ್ತದೆ. ನೀನು ನಿನ್ನ ಕೆಲಸ ಬಿಟ್ಟು ಬಂದಿದ್ದೀಯೆ. (ಲಾಟುವಿಗೆ) ರಾಖಾಲನೆಲ್ಲಿ?"

ಲಾಟು: "ಆತ ಮನೆಗೆ ಹೋಗಿಬಿಟ್ಟಿದಾನೆ."

ಶ್ರೀರಾಮಕೃಷ್ಣರು: "ನನ್ನನ್ನು ಹೇಳದೆ ಕೇಳದೆ?"

ಮಾಸ್ಟರ್ ಸ್ಕೂಲನ್ನು ಮುಗಿಸಿಕೊಂಡು ಮತ್ತೆ ಬಂದು ನೋಡಿದಾಗ, ಪರಮಹಂಸರು ಭಕ್ತರ ಮಧ್ಯೆ ಬಲರಾಮನ ಬೈಠಕ್‌ಖಾನೆಯಲ್ಲಿ ಕುಳಿತಿರುವುದನ್ನು ಕಂಡ. ಗಿರೀಶ, ಸುರೇಶ, ಬಲರಾಮ, ಲಾಟು, ಚುನಿಲಾಲ ಇವರೂ ಅಲ್ಲಿ ಕುಳಿತಿದಾರೆ. ಪರಮಹಂಸರ ಮುಖದಿಂದ ಮಂದಹಾಸ ಹೊರಸೂಸುತ್ತಿದೆ. ಆ ಮಂದಹಾಸ ಭಕ್ತರ ಮುಖದಿಂದಲೂ ಪ್ರತಿಬಿಂಬಿತವಾಗುತ್ತಿದೆ. ಮಾಸ್ಟರಿಗೆ ಪರಮಹಂಸರು ತಮ್ಮ ಹತ್ತಿರ ಕುಳಿತುಕೊಳ್ಳುವಂತೆ ಸನ್ನೆ ಮಾಡಿದರು.

ಶ್ರೀರಾಮಕೃಷ್ಣರು ಗಿರೀಶನಿಗೆ: "ನೀನು ಏನೊ ಹೇಳುತ್ತೀಯಲ್ಲ ಅದನ್ನು ನರೇಂದ್ರನೊಡನೆ ವಿಚಾರ ಮಾಡಿನೋಡು. ಆತ ಏನು ಹೇಳುತ್ತಾನೆ ಎಂಬುದನ್ನು ತಿಳಿ."

ಗಿರೀಶ ನಗುತ್ತ: "ನರೇಂದ್ರ ಹೇಳುತ್ತಾನೆ, 'ಭಗವಂತ ಅನಂತ; ನಾವು ಏನೇನನ್ನು ಕಣ್ಣಿನಿಂದ ನೋಡುವೆವೊ ಕಿವಿಯಿಂದ ಕೇಳುವೆವೊ—ವ್ಯಕ್ತಿ ಆದರೂ ಸರಿಯೆ, ವಸ್ತು ಆದರೂ ಸರಿಯೆ—ಅವೆಲ್ಲವೂ ಆತನ ಅಂಶ ಅಂತ ಹೇಳುವುದಕ್ಕೂ ಕೂಡ ನಮಗೆ ಸಾಧ್ಯವಾಗೋಹಾಗಿಲ್ಲ. ಅನಂತ ಅಂಶವಾಗುವುದೆಲ್ಲಿಂದಬಂತು? ಎಂದಿಗೂ ಆಗದು' ಅಂತ"

ಶ್ರೀರಾಮಕೃಷ್ಣರು: "ಭಗವಂತ ಅನಂತನೇ ಆಗಿರಲಿ ಅಥವಾ ಎಷ್ಟು ದೊಡ್ಡವ ಬೇಕಾದರೂ ಆಗಿರಲಿ,—ಆತ ಇಚ್ಛೆಪಟ್ಟರೆ, ಆತನ ಅಂತರ್ಯದ ಸಾರವಸ್ತು ಮಾನವನ ಮೂಲಕ ವ್ಯಕ್ತವಾಗಬಲ್ಲದು ಮತ್ತು ಆಗಿಯೂ ಆಗಿದೆ. ಆತ ಮಾನವನ ಮೂಲಕ ಅವತರಿಸುತ್ತಿದಾನೆ ಎಂಬದನ್ನು ಉಪಮಾನದ ಮೂಲಕ ಅರಿಯಲಾಗೋದಿಲ್ಲ. ಅದನ್ನು ತಾನೇ

ಸ್ವತಃ ಅನುಭವಿಸಬೇಕು; ಅದರ ಪ್ರತ್ಯಕ್ಷ ಅನುಭವವಾಗಬೇಕು. ಉಪಮಾನದ ಮೂಲಕ ಅದರ ಒಂದು ಕಿಂಚಿತ್ ಆಭಾಸವನ್ನು ಮಾತ್ರ ಪಡೆಯಬಹುದು. ಹಸುವಿನ ಕೊಂಬು ಮುಟ್ಟಿದರೂ ಹಸುವನ್ನು ಮುಟ್ಟಿದ ಹಾಗೆಯೆ, ಅದರ ಬಾಲ ಅದರ ಕಾಲು ಯಾವುದನ್ನು ಮುಟ್ಟಿದರೂ ಹಸುವನ್ನು ಮುಟ್ಟಿದ ಹಾಗೆಯೆ; ಆದರೆ ನಮಗೆ ಬೇಕಾಗಿರೋದು ಹಸುವಿನ ಅಂತರ್ಯವಲ್ಲಿರೋ ಸಾರವಸ್ತು—ಹಾಲು. ಅದು ಅದರ ಕೆಚ್ಚಲಿನ ಮೂಲಕ ಹೊರಕ್ಕೆ ಬರುತ್ತದೆ. ಅವತಾರಪುರುಷನನ್ನೇ ಭಗವಂತನ ಕೆಚ್ಚಲು ಅಂತ ಹೇಳಬಹುದು. ಜನರ ಹೃದಯದಲ್ಲಿ ಪ್ರೇಮ, ಭಕ್ತಿಯನ್ನು ಉಂಟುಮಾಡಲೋಸುಗ ಭಗವಂತ ಮಾನವದೇಹಧಾರಣೆ ಮಾಡಿಕೊಂಡು ಆಗಾಗ ಅವತರಿಸುತ್ತಾನೆ.''

ಗಿರೀಶ: ''ನರೇಂದ್ರ ಹೇಳುತ್ತಾನೆ, 'ಆತನನ್ನು ಪೂರ್ಣವಾಗಿ ಎಂದಿಗಾದರೂ ಅರಿಯಲಾಗುವುದೆ? ಆತ ಅನಂತ' ಅಂತ.''

ಶ್ರೀರಾಮಕೃಷ್ಣರು ಗಿರೀಶನಿಗೆ: ''ಭಗವಂತನನ್ನು ಯಾರು ತಾನೆ ಸಂಪೂರ್ಣವಾಗಿ ಅರಿಯಬಲ್ಲರು? ಆತನ ವ್ಯಕ್ತತೆ, ದೊಡ್ಡದೇ ಆಗಲಿ ಚಿಕ್ಕದೇ ಆಗಲಿ ಯಾವುದನ್ನೂ ಮನುಷ್ಯ ಅರಿಯಲಾರ. ಒಂದು ವಿಷಯ, ಆತನನ್ನು ಸಂಪೂರ್ಣವಾಗಿ ಅರಿಯುವುದರ ಆವಶ್ಯಕತೆ ತಾನೆ ಏನಿದೆ? ಆತನನ್ನು ಪ್ರತ್ಯಕ್ಷಮಾಡಿಕೊಂಡುಬಿಟ್ಟರೆಯೇ ಕಾರ್ಯ ಮುಗಿದ ಹಾಗೆ. ಆತನ ಅವತಾರದ ದರ್ಶನ ಮಾಡಿತು ಅಂದರೆ ಆತನ ದರ್ಶನ ಮಾಡಿದ ಹಾಗೆಯೆ. ಯಾರೇ ಆಗಲಿ ಗಂಗೆಯ ಬಳಿ ಹೋಗಿ ಅದನ್ನು ಸ್ಪರ್ಶಮಾಡಿ ಬಂದರೆ ಆತ ಹೇಳುತ್ತಾನೆ, 'ನಾನು ಗಂಗೆಯ ದರ್ಶನ ಸ್ಪರ್ಶನ ಮಾಡಿಬಂದೆ' ಅಂತ. ಹೀಗೆಂದುಹೇಳಲು ಆತ ಇಡೀ ಗಂಗೆಯನ್ನು— ಹರಿದ್ವಾರದಿಂದ ಹಿಡಿದು ಗಂಗಾ ಸಾಗರದ ವರೆಗೆ— ಮುಟ್ಟಿ ಬರಬೇಕಾಗಿಲ್ಲ. (ನಗು.)

''ನಿನ್ನ ಪಾದವನ್ನು ಯಾರಾದರು ಮುಟ್ಟಿದರು ಅಂದರೆ ಅವರು ನಿನ್ನನ್ನು ಮುಟ್ಟಿದ ಹಾಗೆಯೆ. (ನಗು.) ಸಮುದ್ರದ ಹತ್ತಿರ ಹೋಗಿ ಕೈಗೆ ಒಂದಷ್ಟು ನೀರು ತೆಗೆದುಕೊಂಡಿತು ಎಂದರೆ ಇಡೀ ಸಮುದ್ರಾನೆ ಮುಟ್ಟಿದಂತಾಗುತ್ತದೆ. ಅಗ್ನಿತತ್ತ್ವ ಎಲ್ಲಾ ಎಡೆಯಲ್ಲಿಯೂ ಇದೆ, ಆದರೆ ಕಟ್ಟಿಗೆಯಲ್ಲಿ ವಿಶೇಷ ಪ್ರಮಾಣದಲ್ಲಿದೆ.—''

ಗಿರೀಶ ನಗುತ್ತ ನಗುತ್ತ: "ಎಲ್ಲಿ ವಿಶೇಷ ಪ್ರಮಾಣದಲ್ಲಿ ಬೆಂಕಿ ದೊರಕುವುದೊ ಅಲ್ಲಿಗೇನೆ ನಾನು ಹೋಗಬೇಕೆಂದಿರೋದು."

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ಅಗ್ನಿತತ್ತ್ವ ಕಟ್ಟಿಗೆಯಲ್ಲಿ ವಿಶೇಷ ಪ್ರಮಾಣದಲ್ಲಿದೆ. ಈಶ್ವರತತ್ತ್ವಕ್ಕಾಗಿ ಹುಡುಕುತ್ತಿದ್ದರೆ ಅದನ್ನು ಮಾನವನಲ್ಲಿ ಹುಡುಕು. ಮಾನವನಲ್ಲಿ ಆತ ವಿಶೇಷವಾಗಿ ವ್ಯಕ್ತವಾಗಿದಾನೆ. ಯಾವ ಮನುಷ್ಯನಲ್ಲಿ ನೀನು ಊರ್ಜಿತಭಕ್ತಿಯನ್ನು, ಎಂದರೆ ಪ್ರೇಮಭಕ್ತಿ ಉಕ್ಕಿಹರಿಯುತ್ತಿರುವುದನ್ನು ನೋಡುವೆಯೊ, ಯಾರು ಭಗವಂತನಿಗಾಗಿ ಹುಚ್ಚನಾಗಿ ಹೋಗಿದಾನೊ, ಯಾರು ಆತನ ಪ್ರೇಮದಿಂದ ಮತ್ತನಾಗಿಬಿಟ್ಟಿದಾನೊ ಆತನ ಮೂಲಕ ಭಗವಂತ ನಿಸ್ಸಂದೇಹವಾಗಿ ಅವತರಿಸಿದಾನೆ ಎಂಬುದನ್ನು ತಿಳಿದುಕೊ.

(ಮಾಸ್ಟರಿಗೆ) "ಭಗವಂತ ಪ್ರತಿಯೊಂದರಲ್ಲಿಯೂ ಇದ್ದೇ ಇದಾನೆ; ಆದರೆ ಆತನ ಶಕ್ತಿ ಕೆಲವೆಡೆ ಅಧಿಕವಾಗಿ ಕೆಲವೆಡೆ ಕಡಮೆಯಾಗಿ ವ್ಯಕ್ತವಾಗಿದೆ, ಅಷ್ಟೆ. ಅವತಾರದ ಮೂಲಕ ಆತನ ಶಕ್ತಿ ವಿಶೇಷ ಪ್ರಮಾಣದಲ್ಲಿ ವ್ಯಕ್ತವಾಗುತ್ತದೆ; ಕೆಲವು ಅವತಾರಗಳಲ್ಲಿ ಒಮ್ಮೊಮ್ಮೆ ಆತನ ಶಕ್ತಿ ಪೂರ್ಣಪ್ರಮಾಣದಲ್ಲಿ ವ್ಯಕ್ತವಾಗುತ್ತದೆ. ಅದು ಇಡೀ ಶಕ್ತಿಯ ಅವತಾರವೇ."

ಗಿರೀಶ: "ನರೇಂದ್ರ ಹೇಳುತ್ತಾನೆ, 'ಭಗವಂತ ಅವಾಙ್ಮನಸಗೋಚರ' ಅಂತ."

ಶ್ರೀರಾಮಕೃಷ್ಣರು: "ಅದು ಪೂರ್ಣ ಸತ್ಯವಲ್ಲ. ಆತ ಮನಸ್ಸಿಗೆ ಅಗೋಚರನೇನೊ ನಿಜ—ಆದರೆ ಶುದ್ಧ ಮನಸ್ಸಿಗೆ ಗೋಚರನಾಗುತ್ತಾನೆ. ಈ ಬುದ್ಧಿಗೇನೋ ಆತ ಗೋಚರನಲ್ಲ—ಆದರೆ ಶುದ್ಧ ಬುದ್ಧಿಗೆ ಗೋಚರನಾಗುತ್ತಾನೆ. ಕಾಮಕಾಂಚನಾಸಕ್ತಿ ನಮ್ಮನ್ನು ಬಿಟ್ಟುತೊಲಗಿತು ಅಂದರೆ, ಮನಸ್ಸು ಮತ್ತು ಬುದ್ಧಿ ಶುದ್ಧವಾಗಿ ಬಿಡುತ್ತವೆ. ಆಗ ಶುದ್ಧ ಮನಸ್ಸು ಶುದ್ಧ ಬುದ್ಧಿ ಅನನ್ಯವಾಗಿಬಿಡುತ್ತವೆ. ಆತ ಶುದ್ಧ ಮನಸ್ಸಿಗೆ ಗೋಚರನಾಗುತ್ತಾನೆ. ಋಷಿಗಳು ಮುನಿಗಳು ಆತನ ದರ್ಶನ ಪಡೆಯಲಿಲ್ಲವೇನು? ಅವರು ತಮ್ಮ ವ್ಯಕ್ತಿಚೈತನ್ಯದ ಮೂಲಕ ವಿಭುಚೈತನ್ಯದ ಸಾಕ್ಷಾತ್ಕಾರ ಪಡೆದುಕೊಂಡರು."

ಗಿರೀಶ ನಗುತ್ತ: "ನರೇಂದ್ರ ನನ್ನೊಡನೆ ವಾದಿಸಿ ಸೋತುಬಿಟ್ಟ."

ಶ್ರೀರಾಮಕೃಷ್ಣರು: "ಇಲ್ಲ, ಸೋಲಲಿಲ್ಲ. ಆತ ನನಗೆ ಹೇಳಿದ,

'ಗಿರೀಶಘೋಷನಿಗೆ ಮಾನವರೂಪಿನಲ್ಲಿ ಭಗವಂತ ಅವತರಿಸುತ್ತಾನೆ ಎಂಬುದರಲ್ಲಿ ಬಹಳವಾಗಿ ವಿಶ್ವಾಸವಿರುವಾಗ, ಆತನಿಗೆ ಮತ್ತೆ ಬೇರೆ ಏನನ್ನು ತಾನೆ ಹೇಳೋಕೆ ಹೋಗಲಿ? ಅಂಥ ವಿಶ್ವಾಸವನ್ನು ಕದಲಿಸೋದು ಒಳ್ಳೆಯದಲ್ಲ' ಅಂತ."

ಗಿರೀಶ ನಗುತ್ತ: "ಮಹಾಶಯರೆ, ನಾವೆಲ್ಲರೂ ಸುಮ್ಮನೆ 'ಗಳಗಳ' ಅಂತ ಮಾತನಾಡುತ್ತಿದ್ದೇವೆ, ಆದರೆ ಮಾಸ್ಟರ್ ಮಾತ್ರ ಬಾಯಿ ಮುಚ್ಚಿ ಸುಮ್ಮನೆ ಕುಳಿತಿದಾನಲ್ಲ! ಏನನ್ನು ಅಳೆದು ಸುರಿಯುತ್ತಿರಬಹುದು? ಏಕೆ ಹೀಗೆ ಹೇಳಿ ನೋಡೋಣ!"

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ಒಂದು ಲೋಕೋಕ್ತಿ ಹೇಳುತ್ತದೆ: 'ಮಾತಾಳಿ, ಗುಮ್ಮನಗುಸುಕ, ಕಿವಿಗೆ ತುಳಸಿ ಸಿಕ್ಕಿಸಿಕೊಳ್ಳುವವ, ದೊಡ್ಡ ಮುಸುಕುಹಾಕಿಕೊಂಡಿರೋ ಹೆಂಗಸು, ಪಾಚಿ ಕಟ್ಟಿಕೊಂಡಿರೋ ಕೊಳದ ತಣ್ಣೀರು ಇವೆಲ್ಲ ಅನರ್ಥಕರವಾದುವು' ಅಂತ. (ನಗುತ್ತ) ಅದರೆ ಈತ ಅವುಗಳ ಗುಂಪಿಗೆ ಸೇರಿದವನಲ್ಲ,— ಈತ ಕೇವಲ ಗಂಭೀರಾತ್ಮ ಮಾತ್ರ." (ಎಲ್ಲರೂ ನಗುತ್ತಾರೆ.)

ಗಿರೀಶ: "ಈ ಲೋಕೋಕ್ತಿಯ ಸರಿಯಾದ ಅರ್ಥವೇನು?"

ಶ್ರೀರಾಮಕೃಷ್ಣರು: "ಈ ಕೆಲವು ವಸ್ತುಗಳ ಸಂಬಂಧವಾಗಿ ಬಹಳ ಎಚ್ಚರಿಕೆಯಿಂದ ಇರಬೇಕು: ಮೊದಲನೆಯದಾಗಿ ಮಾತಾಳಿ— ಲಂಗುಲಗಾಮಿಲ್ಲದೆ ಮಾತನಾಡತಕ್ಕವನು; ಎರಡನೆಯದಾಗಿ ಗುಮ್ಮನಗುಸುಕ— ಯಾವ ವ್ಯಕ್ತಿಯ ಮನಸ್ಸಿನ ಉದ್ದ ಆಳವನ್ನು ಕಂಡುಹಿಡಿಯಲು ಯಾವ ನಿಪುಣ ಮುಳುಕನಿಗೂ ಸಾಧ್ಯವಿಲ್ಲವೊ ಅಂಥವನು; ಮೂರನೆಯದಾಗಿ ಕಿವಿಗೆ ತುಳಸಿ ಸಿಕ್ಕಿಸಿಕೊಳ್ಳುವವನು— ತಾನೂ ಒಬ್ಬ ಭಕ್ತ ಅಂತ ತೋರಿಸಿಕೊಳ್ಳಲು ಕಿವಿಗೆ ತುಳಸಿ ಸಿಕ್ಕಿಸಿಕೊಳ್ಳುವವನು; ನಾಲ್ಕನೆಯದಾಗಿ ದೊಡ್ಡ ಮುಸುಕು ಹಾಕಿಕೊಂಡಿರೋ ಹೆಂಗಸು— ಜನರೇನೊ ಭಾವಿಸುಸುತ್ತಾರೆ ಆಕೆ ಒಬ್ಬ ಮಹಾ ಪತಿವ್ರತೆ ಅಂತ, ಆದರೆ ಅದು ಸತ್ಯವಲ್ಲ; ಐದನೆಯದಾಗಿ ಪಾಚಿ ಬೆಳದಿರೋ ಕೊಳದ ನೀರು— ಅದರಲ್ಲಿ ಸ್ನಾನ ಮಾಡಿತು ಅಂದರೆ, ಒಡನೆಯೇ ವಿಷಮಶೀತಜ್ವರ ಬಂದುಬಿಡುತ್ತದೆ." (ನಗು.)

ಚುನಿಲಾಲ: "ಈತನ (ಮಾಸ್ಟರನ) ಮೇಲೆ ದೂರು ಎದ್ದಿದೆ. ಚಿಕ್ಕ ನರೇನ, ಬಾಬುರಾಮ ಈತನ ವಿದ್ಯಾರ್ಥಿಗಳು; ಅದೇ ರೀತಿಯಾಗಿ

ನಾರಾಯಣ, ಪಲ್ಟು, ಪೂರ್ಣ, ತೇಜಚಂದ್ರ ಕೂಡ. ಈತ ಅವರನ್ನೆಲ್ಲ ಆಗಾಗ ಇಲ್ಲಿಗೆ ಕರೆದುಕೊಂಡುಬರುತ್ತಿದಾನೆ, ಅವರ ಓದುಬರಹಕ್ಕೆಲ್ಲ ಕಲ್ಲುಬೀಳುತ್ತಿದೆ, ಈತನೇ ಅದಕ್ಕೆಲ್ಲ ಹೊಣೆ ಎಂಬುದಾಗಿ ಈತನ ಮೇಲೆ ಜನ ದೂರು ಹೊರಿಸುತ್ತಿದಾರೆ.''

ಶ್ರೀರಾಮಕೃಷ್ಣರು: ''ಅವರ ಮಾತಿಗೆ ಯಾರು ತಾನೆ ಬೆಲೆ ಕೊಡುತ್ತಾರೆ?''

ಈ ರೀತಿಯಾದ ಮಾತುಕತೆಗಳಾಗುತ್ತಿರುವಾಗ, ನಾರಾಯಣ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಆತನ ಮೈ ಹೊಂಬಣ್ಣ. ವಯಸ್ಸು ಹದಿನೇಳೊ ಹದಿನೆಂಟೊ ಇರಬಹುದು. ಸ್ಕೂಲಿನಲ್ಲಿ ಓದುತ್ತಿದಾನೆ. ಆತನನ್ನು ಪರಮಹಂಸರು ಬಹಳವಾಗಿ ಪ್ರೀತಿಸುತ್ತಾರೆ. ಆತನನ್ನು ಆಗಾಗ ನೋಡಲು ಮತ್ತು ಆತನಿಗೆ ತಿಂಡಿ ತೀರ್ಥ ಕೊಡಲು ಅವರಿಗೆ ಬಲು ಇಷ್ಟ. ಆತನನ್ನು ನೋಡಬೇಕೆಂದು ಪರಮಹಂಸರು ಅನೇಕವೇಳೆ ದಕ್ಷಿಣೇಶ್ವರದ ದೇವಾಲಯದಲ್ಲಿ ಕುಳಿತು ಅತ್ತಿದಾರೆ. ಅವರು ಆತನನ್ನು ಸಾಕ್ಷಾತ್ ನಾರಾಯಣನೇ ಅಂತ ಭಾವಿಸುತ್ತಾರೆ.

ಗಿರೀಶ ನಾರಾಯಣನನ್ನು ನೋಡಿ: ''ಯಾರಪ್ಪ ಇವನಿಗೆ ಈ ಸಮಾಚಾರ ಕೊಟ್ಟವರು? ಇದಕ್ಕೆಲ್ಲ ಮೂಲಕಾರಣ ಮಾಸ್ಟರೇ ಅಂತ ಕಾಣುತ್ತೆ.'' (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ನಗುತ್ತ ನಗುತ್ತ: ''ನಿಲ್ಲಿಸು! ಬಾಯಿಮುಚ್ಚಿ ಕುಳಿತುಕೊ! ಆಗಲೆ ಇವನಿಗೆ (ಮಾಸ್ಟರಿಗೆ) ಕೆಟ್ಟ ಹೆಸರು ಬಂದಿದೆ.''

ಈಗ ನರೇಂದ್ರನ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಒಬ್ಬ ಭಕ್ತ: ''ಈಗ ಆತ ಇಲ್ಲಿಗೆ ಅಷ್ಟೊಂದಾಗಿ ಬರುತ್ತಿಲ್ಲವಲ್ಲ ಏಕೆ?''

ಶ್ರೀರಾಮಕೃಷ್ಣರು: '''ಅನ್ನಚಿಂತನೆ ಬಹಳ ಚಮತ್ಕಾರವಾದ್ದು; ಅದನ್ನು ವರ್ಣಿಸಲು ಕಾಳಿದಾಸನಿಗೂ ಸಾಧ್ಯವಿಲ್ಲ.''' (ಎಲ್ಲರೂ ನಗುತ್ತಾರೆ.)

ಬಲರಾಮ: ''ಆತ ಶಿವಗುಹನ ಮಗ ಅನ್ನದಾಗುಹನ ಹತ್ತಿರಕ್ಕೆ ಬಹಳವಾಗಿ ಬಂದುಹೋಗುತ್ತಿದಾನೆ.''

ಶ್ರೀರಾಮಕೃಷ್ಣರು: ''ಹೌದು, ಒಬ್ಬ ಆಫೀಸರ ಮನೆಗೆ ನರೇಂದ್ರ, ಅನದಾ ಇವರೆಲ್ಲ ಹೋಗುತ್ತಿದಾರೆ ಮತ್ತು ಅಲ್ಲಿ ಅವರೆಲ್ಲರೂ ಕೂಡಿ

ಒಂದು ಬ್ರಾಹ್ಮಸಮಾಜವನ್ನು ನಡೆಸುತ್ತಿದಾರೆ ಎಂಬ ಸಮಾಚಾರ ನನ್ನ ಕಿವಿಗೆ ಬಂದುಬಿದ್ದಿದೆ."

ಒಬ್ಬ ಭಕ್ತ: ಆ ಆಫೀಸರ ಹೆಸರು ತಾರಾಪದ ಅಂತ."

ಬಲರಾಮ ನಗುತ್ತ ನಗುತ್ತ: "ಅಗ್ರಹಾರದ ಬ್ರಾಹ್ಮಣರು ಹೇಳುತ್ತಿದಾರೆ, 'ಅನ್ನದಾಗುಹ ಒಬ್ಬ ದುರಹಂಕಾರಿ' ಅಂತ."

ಶ್ರೀರಾಮಕೃಷ್ಣರು: "ಬ್ರಾಹ್ಮಣರ ಆ ಮಾತಿಗೆಲ್ಲ ಬೆಲೆ ಕೊಡಬೇಡ. ಅವರ ವಿಷಯ ನಿನಗೆ ಚೆನ್ನಾಗಿ ಗೊತ್ತೇ ಇದೆ. ಅವರ ದೃಷ್ಟಿಯಿಂದ, ಯಾರು ಅವರಿಗೆ ದುಡ್ಡು ಕಾಸು ಕೊಡುತ್ತಾನೊ ಆತ ಒಳ್ಳೆಯವ, ಕೊಡದವ ಕೆಟ್ಟವ. (ಎಲ್ಲರೂ ನುಗುತ್ತಾರೆ.) ನನಗೆ ಅನ್ನದಾಗುಹನ ಪರಿಚಯವಿದೆ. ಆತ ಬಹಳ ಒಳ್ಳೆಯವ."

ಬಲರಾಮನ ಬೈಠಕ್‌ಖಾನೆಯಲ್ಲಿ ಜನ ತುಂಬಿದಾರೆ. ಕೆಲವು ಹಾಡುಗಳನ್ನು ಕೇಳಬೇಕೆಂದು ಪರಮಹಂಸರು ಇಚ್ಛೆಪಟ್ಟರು. ಅವರ ಇಚ್ಛೆಗನುಸಾರ ತಾರಾಪದ ಶ್ರೀಕೃಷ್ಣನ ಮೇಲಿನ ಹಾಡನ್ನು ಹಾಡಲಾರಂಭಿಸಿದ:

ರಾಗ — ದೇವಮಿಶ್ರ, ಏಕತಾಳ.

ದೀನರೊಳು ದಯೆ ತೋರೊ ಕೇಶವ, ಕುಂಜಕಾನನಚಾರೀ
ಮಾಧವ ಮನಮೋಹನ, ಮೋಹನ ಮುರಲೀಧಾರೀ . . . .
ವ್ರಜಕಿಶೋರ, ಕಾಲೀಯಹರ, ಕಾತರಭಯಭಂಜನಾ
ನಯನ ಬಾಣದಲಿ ನವಿಲುಗರಿಯೊಳಗೆ ರಾಧಿಕಹೃದಿರಂಜನಾ.
ಗೋವರ್ಧನಧಾರಣ—ವನಕುಸುಮಭೂಷಣ—ದಾಮೋದರ
ಕಂಸದರ್ಪಹಾರೀ, ಶ್ಯಾಮ ರಾಸರಸವಿಹಾರೀ . . . . . .

ಶ್ರೀರಾಮಕೃಷ್ಣರು ಗಿರೀಶನಿಗೆ: "ಆಹಾ! ಇದು ಬಹಳ ಒಳ್ಳೇ ಹಾಡು. ಇದನ್ನು ಕಟ್ಟಿದವರು, ಯಾರು ನೀನೊ?"

ಒಬ್ಬ ಭಕ್ತ: "ಹೌದು, ಈತನೆ ಚೈತನ್ಯಲೀಲೆಯ ಎಲ್ಲಾ ಹಾಡುಗಳನ್ನು ಕಟ್ಟಿದಾನೆ."

ಶ್ರೀರಾಮಕೃಷ್ಣರು ಗಿರೀಶನಿಗೆ: "ಈ ಹಾಡು ಬಹಳ ಚೆನ್ನಾಗಿ ಬಂದುಬಿಟ್ಟಿದೆ."

ಶ್ರೀರಾಮಕೃಷ್ಣರು ಗಾಯಕನಿಗೆ: "ನಿತಾಯಿಯ ಹಾಡನ್ನು ಹಾಡಬಲ್ಲೆಯಾ?"

ತಾರಾಪದ ನಿತಾಯಿ ಹಾಡಿದ ಎರಡು ಹಾಡುಗಳನ್ನು ಹಾಡಿದ. ಮೊದಲನೆಯದರಲ್ಲಿ ರಾಧೆ ಶ್ರೀಕೃಷ್ಣನಲ್ಲಿ ಇಟ್ಟಿರೋ ಪ್ರೇಮದಲ್ಲಿ ಭಾಗಿಗಳಾಗಲು ಜನರನ್ನು ಹುರಿದುಂಬಿಸುತ್ತಿದಾನೆ:

ಓ ಬನ್ನಿ, ಎಲ್ಲರು ಬನ್ನಿ
ರಾಧಾಪ್ರೇಮದ ಹೊಳೆಹರಿಯುತಿದೆ!
ಅತ್ತಲು ಇತ್ತಲು ಸುತ್ತಲು ಮುತ್ತಲು
ಶತಧಾರೆಯೊಳದು ಹರಿಯುತಿದೆ!

ಓ ಬನ್ನಿ, ಎಲ್ಲರು ಬನ್ನಿ
ತಡಮಾಡಿದರದು ಬತ್ತುವುದು,
ಈಗಲೆ ಬಂದರೆ ಬಿಂದಿಗೆ ತಂದರೆ
ಬಯಸಿದಷ್ಟು ಅದು ದೊರಕುವುದು.

ಓ ಬನ್ನಿ, ಎಲ್ಲರು ಬನ್ನಿ
ತಡಮಾಡದೆ ಬನ್ನಿ.
ಎಲ್ಲರಿಗಾಗಿಯೆ ಹರಿದಿದೆ ಬನ್ನಿ
ಈ ರಾಧೆಯ ಹೃದಯ!
ಬ್ರಹ್ಮಾನಂದದಿ ಮೀಯಲು ಬನ್ನಿ,
ಎಲ್ಲಾ ಅವಳ ದಯ!

ಓ ಬನ್ನಿ, ಎಲ್ಲರು ಬನ್ನಿ
ಹರಿನಾಮವ ನುತಿಸಲು ಬನ್ನಿ,
ರಾಧಾಪ್ರೇಮದ ಹೊಳೆಹರಿಯುತಿದೆ
ಶತಧಾರೆಯೊಳದು ಹರಿಯುತಿದೆ!

ಬಳಿಕ ತಾರಾಪದ ಗೌರಾಂಗನ ಸಂಬಂಧವಾದ ಹಾಡನ್ನು ಹಾಡಿದ:

ಯಾರೊ ನೀ ಗೌರಾಂಗವೇಷಿಯೆ, ತಪ್ತಕಾಂಚನ ಬಂಧುರ.
ನನ್ನ ಎದೆಗೀ ಸುಧೆಯ ಕರೆಯುವ ದಿವ್ಯಮೋಹನ ಸುಂದರ?
ಪ್ರೇಮಸಿಂಧುವಿನಲ್ಲಿ ನೀನೇ ಚಂಡಮರುತನ ಎಬ್ಬಿಸಿ
ನನ್ನ ದೋಣಿಯನೇತಕೀತರ ಕಾಡಿಸಿಹೆಯೋ ನೋಯಿಸಿ?
ಹಿಂದೆ ಬೃಂದಾವನದಿ ಗೋವನು ಕಾದವನು ನೀನಲ್ಲವೆ?
ಕೊಳಲನೂದುತ ಗೋಪಿಯರ ನೀ ಮರುಳುಗೊಳಿಸಿದೆಯಲ್ಲವೆ?

ಅಂದು ಗೋವರ್ಧನವನೆತ್ತುತ ವ್ರಜರ ಕೇಡನು ತವಿಸಿದೆ.
ನೊಂದ ಗೋಪೀವೃಂದಪದತಲದಲ್ಲಿ ಪ್ರೇಮದಿ ಕರಗಿದೆ!

ಎಲ್ಲರೂ ಕೂಡಿ ಮಾಸ್ಟರಿಗೆ ಒಂದು ಹಾಡು ಹಾಡುವಂತೆ ಕೇಳಿಕೊಂಡರು. ಆತನಿಗೆ ಒಂದು ಸ್ವಲ್ಪ ನಾಚಿಕೆ. ಆತ ಪಿಸುಗುಟ್ಟುತ್ತ ಕ್ಷಮಾಪಣೆ ಬೇಡುತ್ತಿದಾನೆ.

ಗಿರೀಶ ನಗುತ್ತ ಶ್ರೀರಾಮಕೃಷ್ಣರಿಗೆ: "ಮಹಾಶಯರೆ, ನಾವು ಎಷ್ಟೇ ಬಲಾತ್ಕರಿಸಿದರೂ ಈತ ಮಾತ್ರ ಹಾಡುತ್ತಿಲ್ಲ."

ಶ್ರೀರಾಮಕೃಷ್ಣರು ವಿರಕ್ತರಾಗಿ: "ಸ್ಕೂಲಿಗೆ ಹೋಯಿತು ಅಂದರೆ ತನ್ನ ಮೂವತ್ತೆರಡು ಹಲ್ಲುಗಳನ್ನೂ ಬಿಡುತ್ತಾನೆ; ಹಾಡು ಅಂದಾಗ ಮಾತ್ರ ಎಲ್ಲೂ ಇಲ್ಲದ ನಾಚಿಕೆ!"

ಮಾಸ್ಟರ್ ತಲೆ ತಗ್ಗಿಸಿ ಸ್ವಲ್ಪ ಹೊತ್ತು ಹಾಗೆಯೇ ಕುಳಿತುಕೊಂಡ.

ಸುರೇಶಮಿತ್ರ ಸ್ವಲ್ಪ ದೂರದಲ್ಲಿ ಕುಳಿತುಕೊಂಡಿದಾನೆ. ಪರಮಹಂಸರು ತಮ್ಮ ಪ್ರೇಮದೃಷ್ಟಿಯನ್ನು ಆತನಕಡೆ ಬೀರಿ ಆತನಿಗೆ ಗಿರೀಶನನ್ನು ತೋರಿಸಿ ನಗುತ್ತ ಹೇಳುತ್ತಿದಾರೆ, "ನಿನ್ನದು ಏನು? ಈತ (ಗಿರೀಶ) ನಿನಗಿಂತ—!"

ಸುರೇಂದ್ರ ನಗುತ್ತ ನಗುತ್ತ: "ಹೌದು, ನಿಜ, ಇದರಲ್ಲಿ ಆತ ನನ್ನ ದೊಡ್ಡಣ್ಣ." (ಎಲ್ಲರೂ ನಗುತ್ತಾರೆ.)

ಗಿರೀಶ ಶ್ರೀರಾಮಕೃಷ್ಣರಿಗೆ: "ಹೋಗಲಿ ಬಿಡಿ. ಮಹಾಶಯರೆ, ನಾನು ಚಿಕ್ಕವನಾಗಿದ್ದಾಗ ಸ್ವಲ್ಪವೂ ಓದುವುದರ ಅಥವಾ ಬರೆಯುವುದರ ತಂಟೆಗೇ ಹೋಗಲಿಲ್ಲ; ಆದರೂ ಜನ ಹೇಳುತ್ತಿದಾರಲ್ಲ, ನಾನೊಬ್ಬ ಘನ ವಿದ್ಯಾವಂತ ಅಂತ!"

ಶ್ರೀರಾಮಕೃಷ್ಣರು: "ಮಹಿಮಚರಣಚಕ್ರವರ್ತಿ ಬಹಳವಾಗಿ ಶಾಸ್ತ್ರ-ಗೀಸ್ತ್ರ ಓದಿದಾನೆ ಮತ್ತು ಕೇಳಿದಾನೆ; ಒಬ್ಬ ದೊಡ್ಡ ಮನುಷ್ಯನೆ. (ಮಾಸ್ಟರಿಗೆ) ಅಲ್ಲವೇನು?"

ಮಾಸ್ಟರ್: "ಹೌದು, ನಿಜ."

ಗಿರೀಶ: "ಏನು? ಪುಸ್ತಕಪಾಂಡಿತ್ಯವೆ? ಅದರ ಅನುಭವ ನನಗೆ ಬೇಕಾದಷ್ಟು ಆಗಿದೆ. ಇನ್ನು ನಾನು ಮೋಸಹೋಗೋನಲ್ಲ."

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ನನ್ನ ಅಭಿಪ್ರಾಯವೇನು ಗೊತ್ತೆ? ಶಾಸ್ತ್ರ, ಗ್ರಂಥ ಇವೆಲ್ಲ ಭಗವಂತನನ್ನು ಪಡೆಯೋಮಾರ್ಗ

ವನ್ನು ಮಾತ್ರ ತೋರಿಸಿಕೊಟ್ಟುಬಿಡುತ್ತವೆ. ಮಾರ್ಗವನ್ನು— ಉಪಾಯ ವನ್ನು ಅರಿತುಕೊಂಡಮೇಲೆ ಶಾಸ್ತ್ರ ಮತ್ತು ಗ್ರಂಥಗಳ ಆವಶ್ಯಕತೆಯೇ ನಿದೆ? ಆಗ, ತಾನೇ ಸ್ವತಃ ಕಾರ್ಯೋನ್ಮುಖನಾಗಬೇಕು.

"ಇಂಥಿಂಥ ಕೆಲವು ವಸ್ತುಗಳನ್ನು ತಮ್ಮ ಬಂಧುಗಳಿಗೆ ಬಳುವಳಿ ಯಾಗಿ ಕಳುಹಿಸಿಕೊಡಬೇಕಾಗಿದೆ ಅಂತ ಯಾರೋ ಒಬ್ಬನಿಗೆ ಆತನ ಸ್ವಂತ ಊರಿನಿಂದ ಒಂದು ಪತ್ರ ಬಂದಿತ್ತು. ಆ ವಸ್ತುಗಳನ್ನು ಕೊಂಡು ಕೊಂಡು ಬರಲು ಹೊರಟಾಗ ಹುಡುಕುತ್ತಾನೆ, ಆ ಪತ್ರ ಎಲ್ಲೋ ಸೇರಿ ಕೊಂಡುಬಿಟ್ಟಿದೆ. ಆತ ಬಹಳ ವ್ಯಸ್ತನಾಗಿ ಅದನ್ನು ಹುಡುಕಲು ಆರಂಭಿ ಸಿದ. ಬಹಳ ಹೊತ್ತಿನವರೆಗೆ ಅವನ ಮನೆಯವರೆಲ್ಲರೂ ಸೇರಿಕೊಂಡು ಹುಡುಕಿದರು. ಕೊನೆಗೆ ಅದು ದೊರೆತುಬಿಟ್ಟಿತು. ಆಗ ಆತನ ಆನಂದಕ್ಕೆ ಪಾರವೇ ಇಲ್ಲ. ಬಹಳ ಕುತೂಹಲದಿಂದ ಆ ಪತ್ರವನ್ನು ತೆರೆದು ಓದಿದ. ಐದು ಸೇರು ಸಂದೇಶವನ್ನು (ಸಿಹಿ ತಿಂಡಿ), ಒಂದು ಪಂಚೆಯನ್ನು ಮತ್ತು ಇನ್ನೂ ಏನೇನೊ ಬೇಕು ಅಂತ ಅದರಲ್ಲಿ ಬರೆದಿತ್ತು. ಓದಿತಿಳಿದು ಕೊಂಡಾದ ಮೇಲೆ ಇನ್ನು ಆ ಪತ್ರದ ಆವಶ್ಯಕತೆಯೇನಿದೆ. ಆತ ಅದನ್ನು ಕಸದಬುಟ್ಟಿಗೆ ಬಿಸಾಡಿ ಸಂದೇಶ, ಪಂಚೆ ಇನ್ನೂ ಕೆಲವು ವಸ್ತುಗಳನ್ನು ಕೊಂಡುಕೊಂಡುಬರಲು ಹೊರಟ. ಪತ್ರದ ಆವಶ್ಯಕತೆ ಎಲ್ಲಿಯವರೆಗೆ? ಅದರಲ್ಲಿ ಏನು ಬರೆದಿದೆ ಎಂಬುದನ್ನು ಅರಿಯುವವರೆಗೆ. ಬಳಿಕ ಅದನ್ನು ಪಡೆಯಲು ಪ್ರಯತ್ನ.

"ಶಾಸ್ತ್ರದಲ್ಲಿ ಆತನನ್ನು ಪಡೆಯುವುದಕ್ಕೆ ಮಾರ್ಗವೇನು ಎಂಬ ವಿಷಯವನ್ನು ಹೇಳಿದೆ. ಆದರೆ, ಅದನ್ನು ಸವಿಸ್ತಾರವಾಗಿ ತಿಳಿದು ಕಾರ್ಯಕ್ಕೆ ಕೈಹಚ್ಚಬೇಕು. ಆಗ ಮಾತ್ರವೇ ವಸ್ತುಲಾಭ.

"ಬರಿಯ ಪಾಂಡಿತ್ಯದಿಂದ ಏನು ಪ್ರಯೋಜನ? ಪಂಡಿತನಿಗೆ ಅನೇಕ ಶಾಸ್ತ್ರಗಳು, ಅನೇಕ ಶ್ಲೋಕಗಳು ಗೊತ್ತಿರಬಹುದು; ಆದರೆ ಆತ ನಿಗೆ ಇನ್ನೂ ಸಂಸಾರದಲ್ಲಿ ಆಸಕ್ತಿ ನೆಲಸಿ ಇದ್ದರೆ, ಆತ ತನ್ನ ಅಂತರ್ಯ ದಲ್ಲಿ ಕಾಮಕಾಂಚನವನ್ನು ಇನ್ನೂ ಪ್ರೀತಿಸುತ್ತ ಇದ್ದರೆ, ಆತ ಶಾಸ್ತ್ರಗಳನ್ನು ಸ್ವಲ್ಪವೂ ಜೀರ್ಣಮಾಡಿಕೊಂಡಿಲ್ಲ ಎಂಬುದು ಎದ್ದುಕಾಣುತ್ತದೆ. ಆತನ ಪಾಂಡಿತ್ಯ ಬರಿದೆ ವ್ಯರ್ಥ.

"ಪಂಚಾಂಗದಲ್ಲಿ ಬರೆದಿದೆ ಈ ವರ್ಷ ಇಪ್ಪತ್ತು ಕೊಳಗ ಮಳೆ ಯಾಗುತ್ತದೆ ಅಂತ. ಆದರೆ ಅದನ್ನು ಹಿಂಡಿದರೆ ಒಂದು ತೊಟ್ಟು ನೀರೂ

ಕೆಳಕ್ಕೆ ಬೀಳದು. ಹೋಗಲಿ, ಒಂದೇ ಒಂದು ತೊಟ್ಟಾದರೂ ಹೇಳು— ಇಲ್ಲ, ಒಂದುತೊಟ್ಟೂ ಬೀಳದು." (ಎಲ್ಲರೂ ನಗುತ್ತಾರೆ.)

ಗಿರೀಶ: "ಮಹಾಶಯರೆ, ಏನುಹೇಳುತ್ತೀರಿ ನೀವು? ಪಂಚಾಂಗ ಹಿಂಡಿದರೆ ಒಂದು ತೊಟ್ಟೂ ಬೀಳದೆ!" (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ನಗುತ್ತ: "ಪಂಡಿತರೇನೊ ದೊಡ್ಡದೊಡ್ಡ ವಿಷಯಗಳ ವಿಷಯವಾಗಿ ಮಾತಾಡುತ್ತಾರೆ, ಆದರೆ ಅವರ ದೃಷ್ಟಿ ಯಾವ ಕಡೆಗಿದೆ ಗೊತ್ತೆ? ಕಾಮಕಾಂಚನದ ಕಡೆಗೆ, ದೇಹಸುಖ ಮತ್ತು ಹಣದ ಕಡೆಗೆ. ರಣಹದ್ದು ಬಹಳ ಮೇಲಕ್ಕೇನೊ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಹೆಣದಗುಂಡಿಗಳ ಕಡೆಗೇ ಇರುತ್ತದೆ. ಅದು ಕೇವಲ ಹುಡುಕುತ್ತಿರುತ್ತದೆ ಎಲ್ಲಿ ಸತ್ತ ಪ್ರಾಣಿ ಬಿದ್ದಿದೆ, ಎಲ್ಲಿ ಹೆಣದಗುಂಡಿ ಇದೆ, ಎಲ್ಲಿ ಶವ ಬಿದ್ದಿದೆ ಅಂತ.

(ಗಿರೀಶನಿಗೆ) "ನರೇಂದ್ರ ಬಹಳ ಉಚ್ಚಶ್ರೇಣಿಗೆ ಸೇರಿದವ. ಆತ ಪ್ರತಿಯೊಂದರಲ್ಲಿಯೂ ನಿಪುಣ: ಹಾಡುವುದರಲ್ಲಿ, ಬಾಜಿಸುವುದರಲ್ಲಿ, ಓದುವುದರಲ್ಲಿ, ಬರೆಯುವುದರಲ್ಲಿ, ವಿದ್ಯಾರ್ಜನೆಯಲ್ಲಿ;—ಜೊತೆಗೆ ಜಿತೇಂದ್ರಿಯ ಸತ್ಯವಾದಿ. ವಿವೇಕವೈರಾಗ್ಯವೂ ಇದೆ. ಇಷ್ಟೊಂದು ಗುಣಗಳು ಒಬ್ಬನಲ್ಲಿಯೆ! (ಮಾಸ್ಟರಿಗೆ) ಏನು? ನಿನ್ನ ಅಭಿಪ್ರಾಯವೇನು? ಏನು, ಆತ ಬಹಳ ಉಚ್ಚಶ್ರೇಣಿಗೆ ಸೇರಿದವನಲ್ಲವೆ?"

ಮಾಸ್ಟರ್: "ಹೌದು, ನಿಜ. ಬಹಳ ಉಚ್ಚಶ್ರೇಣಿಗೆ ಸೇರಿದವ."

ಶ್ರೀರಾಮಕೃಷ್ಣರು ಮಾಸ್ಟರಿನ ಕಿವಿಯಲ್ಲಿ: "ನೋಡು, ಈತನಿಗೆ (ಗಿರೀಶನಿಗೆ) ಭಗವಂತನಲ್ಲಿ ಬಹಳ ವಿಶೇಷವಾದ ಅನುರಾಗ ಮತ್ತು ವಿಶ್ವಾಸ ಇದೆ."

ಮಾಸ್ಟರ್ ಆಶ್ಚರ್ಯಚಕಿತನಾಗಿ ಗಿರೀಶನ ಕಡೆ ನೋಡುತ್ತಿದಾನೆ. ಗಿರೀಶ ಶ್ರೀರಾಮಕೃಷ್ಣರ ಹತ್ತಿರ ಎಲ್ಲೋ ಕೆಲವು ದಿನಗಳಿಂದ ಮಾತ್ರ ಬರುತ್ತಿದಾನೆ. ಆದರೆ ಮಾಸ್ಟರ ಕಣ್ಣಿಗೆ ಆತ ಪೂರ್ವಪರಿಚಿತ ವ್ಯಕ್ತಿಯ ಹಾಗೆ, ಪರಮ ಆತ್ಮೀಯನ ಹಾಗೆ, ಒಂದೇ ಸೂತ್ರದಲ್ಲಿ ಪೋಣಿಸಿರೋ ಮಣಿಯ ಹಾಗೆ, ಪರಮಹಂಸರ ಭಕ್ತಮಣಿಗಣದಲ್ಲಿ ಒಂದು ಮಣಿ ಇರೋ ಹಾಗೆ ಕಂಡುಬರುತ್ತಿದಾನೆ.

ನಾರಾಯಣ ಪರಮಹಂಸರನ್ನು ತಾವು ಹಾಡುವುದಿಲ್ಲವೆ ಅಂತ ಕೇಳಿದ.

ಪರಮಹಂಸರು ತಮ್ಮ ಮಧುರ ಕಂಠದಿಂದ ಭಗವತಿಯ ಸಂಬಂಧವಾಗಿ ಹಾಡಲಾರಂಭಿಸಿದರು :

ಅಂತರಂಗದಲಿ ಶ್ರೀ ಘನಶ್ಯಾಮೆಯ
ಆದರಿಸೆಲೆ ಮನವೇ.
ನಮ್ಮಿಬ್ಬರ ಹೊರತಿನ್ನಾರೂ ತಿಳಿಯದ
ರೀತಿಯೊಳವಳೆಡೆ ಸಾಗುವೆವೇ !

ಬಯಕೆಸಂಕುಲವ ಬಾಗಿಲಾಚೆಗೇ
ನಿಲಿಸಿಬಾರೊ ಮನವೇ,
ಏಕಾಂತದಿ ನೀನಾಕೆಯ ಕಾಣಲು
'ಓ ತಾಯೀ' ಎಂದೆನ್ನುವ ರಸನೆಯ
ಜೊತೆಗೆ ಮಾತ್ರ ಕರೆತಾರೋ !

ಕುರುಚಿ, ಕುಮಂತ್ರವ ದೂರತಳ್ಳಿ ನೀ
ಬಾ ನಮ್ಮನು ನೋಡು.
ಜ್ಞಾನ ನಯನವನು ಪಹರೆ ನಿಲಿಸಿ ನೀ
ಒಳಗೆ ಬಂದು ಕೂಡು !

ಪರಮಹಂಸರು ತ್ರಿತಾಪದಿಂದ ತಪಿತರಾದ ಸಂಸಾರೀಜೀವರ ಭಾವವನ್ನು ಆರೋಪಿಸಿಕೊಂಡು ಭಗವತಿಯನ್ನು ಒಂದು ವಿಧವಾದ ಅಭಿಮಾನ ದೃಷ್ಟಿಯಿಂದ ನೋಡುತ್ತಿರುವಂತೆ ಹಾಡಲಾರಂಭಿಸಿದರು :

ನಿನ್ನ ನಿತ್ಯಾನಂದದಾಚೆಗೆ ತಳ್ಳದಿರು ನೀನೆನ್ನನು.
ನಿನ್ನ ಪಾದವನಲ್ಲದೀತನು ಬೇರೆ ಏನೂ ಕಾಣನು . . . .

ಬಳಿಕ ನಿತ್ಯಾನಂದಮಯಿಯ ಬ್ರಹ್ಮಾನಂದದ ಸಂಬಂಧವಾಗಿ ಹಾಡಲಾರಂಭಿಸಿದರು :

ಶಿವಸಂಗದೊಳಾನಂದದಿ ತಾಯಿ ಕುಣಿಯುತಿರುವಳು.
ದಿವ್ಯಮಧುವ ಕುಡಿದುಕೂಡ, ಹೆಜ್ಜೆ ತಪ್ಪದಿರುವಳು . . . .

ಭಕ್ತರು ನಿಶ್ಶಬ್ದರಾಗಿ ಕುಳಿತು ಹಾಡುಗಳನ್ನು ಕೇಳಿದರು. ಕೆಲವು ನಿಮಿಷಗಳಾದ ಮೇಲೆ ಪರಮಹಂಸರು ಹೇಳಿದರು, "ಇಂದು ನಾನು ಚೆನ್ನಾಗಿ ಹಾಡೋಕಾಗಲಿಲ್ಲ. ನನಗೆ ನೆಗಡಿಯಾಗಿದೆ" ಅಂತ.

ಕ್ರಮೇಣ ಸಾಯಂಕಾಲವಾಗುತ್ತ ಬಂದಿತು. ಯಾವಾಗ ಮಹಾ ಸಾಗರಗಳ ವಕ್ಷಸ್ಥಳಗಳ ಮೇಲೆ, ಅಂಬರಸ್ಪರ್ಶಿ ಪರ್ವತಶಿಖರಗಳ ಮೇಲೆ,

ವಾಯುವಿಕಂಪಿತ ನದೀತೀರಗಳ ಮೇಲೆ, ದಿಗ್ದಿಗಂತರವ್ಯಾಪಿ ಭೂಮಂಡಲದ ಮೇಲೆ ಅನಂತ ನೀಲಾಕಾಶದ ಛಾಯೆ ಬೀಳಲಾರಂಭಿಸಿತೊ, ಆಗ ಕ್ಷುದ್ರ ಮಾನವನ ಹೃದಯ ಸಹಜವಾಗಿಯೇ ಪರಿವರ್ತನೆಯನ್ನು ಹೊಂದ ಲಾರಂಭಿಸಿತು. ಈಗತಾನೆ ಚರಾಚರ ವಿಶ್ವವನ್ನೆಲ್ಲ ಬೆಳಗುತ್ತಿದ್ದ ಸೂರ್ಯ ಎಲ್ಲಿಗೆ ಹೊರಟು ಹೋದ ಎಂಬುದಾಗಿ ಬಾಲಕ ಭಾವಿಸುತ್ತಿದಾನೆ. ಅದೇ ರೀತಿಯಾಗಿ, ಬಾಲಕಸ್ವಭಾವಾಪನ್ನ ಮಹಾಪುರುಷನೂ ಭಾವಿಸು ತ್ತಿದಾನೆ. ಸಾಯಂಕಾಲವಾಗಿ ಬಿಟ್ಟಿತು. ಏನಾಶ್ಚರ್ಯ ಇದು! ಯಾರು ಸಾಯಂಕಾಲವಾಗುವಂತೆ ಮಾಡಿದರು? ಹಕ್ಕಿಗಳು ಗಿಡಮರಗಳ ಮೇಲೆ ಗುಂಪುಗೂಡಿ ಚಿಲಿಪಿಲಿಗುಟ್ಟುತ್ತಿವೆ. ಯಾವ ಮಾನವರ ಹೃದಯದಲ್ಲಿ ಚೈತನ್ಯ ಜಾಗ್ರತವಾಗಿದೆಯೋ, ಅವರು ಆದಿಕವಿಯಾದ, ಕಾರಣಕ್ಕೆ ಕಾರಣನಾದ ಪುರುಷೋತ್ತಮನ ನಾಮಸ್ಮರಣೆಮಾಡಲಾರಂಭಿಸಿದಾರೆ.

ಪರಮಹಂಸರು ದೇವದೇವಿಯರ ನಾಮಸಂಕೀರ್ತನೆ ಮಾಡು ತ್ತಿದಾರೆ. ಭಕ್ತರೆಲ್ಲರೂ ತಾವು ಕುಳಿತಲ್ಲಿಯೇ ಕುಳಿತು ಉದ್ಗ್ರೀವರಾಗಿ ಉತ್ಕರ್ಣರಾಗಿ ಅದನ್ನು ಕೇಳುತ್ತಿದಾರೆ. ಅವರು ಇಂದಿನಂಥ ಮಧುಮಯ ನಾಮಸಂಕೀರ್ತನೆಯನ್ನು ಎಂದೂ ಕೇಳಿರಲಿಲ್ಲ. ಅಮೃತದ ವರ್ಷಧಾರೆ ಯಾಗುತ್ತಿದೆಯೊ ಏನೊ ಎಂಬಂತ್ತಿತ್ತು. ಪರಮಹಂಸರು ನಾಮ ಸಂಕೀರ್ತನೆಯನ್ನು ಮುಗಿಸಿ ಪ್ರಾರ್ಥನೆ ಮಾಡಲಾರಂಭಿಸಿದಾರೆ. ಸಾಕ್ಷಾತ್ ಭಗವಂತನೇ, ಪ್ರೇಮವನ್ನೇ ದೇಹವನ್ನಾಗಿ ಮಾಡಿಕೊಂಡು ಯಾವ ರೀತಿಯಾಗಿ ಪ್ರಾರ್ಥನೆಮಾಡಬೇಕು ಎಂಬುದನ್ನು ಪರಮಹಂಸರ ಮೂಲಕ ತೋರಿಸುತ್ತಿರುವನೊ ಏನೊ ಎಂಬತ್ತಿತ್ತು. ಪರಮಹಂಸರು ಪ್ರಾರ್ಥಿಸುತ್ತಿದಾರೆ, "ಹೇ ತಾಯೆ, ನಾನು ನಿನ್ನಲ್ಲಿ ಶರಣಾಗತನಾಗಿದೇನೆ, ನಾನು ನಿನ್ನಲ್ಲಿ ಶರಣಾಗತನಾಗಿದೇನೆ. ದೇಹಸುಖ ಬೇಡ ತಾಯೆ; ಲೋಕ ಮಾನ್ಯತೆ ಬೇಡ ತಾಯೆ; ಅಣಿಮಾದಿ ಅಷ್ಟಸಿದ್ಧಿಗಳು ಬೇಡ ತಾಯೆ; ಕೇವಲ ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿ ಉಂಟಾಗುವಂತೆ ಮಾಡು. ನಿಷ್ಕಾಮ, ಅಮಲ, ಅಹೇತುಕಭಕ್ತಿ ಉಂಟಾಗುವಂತೆ ಮಾಡು" ಅಂತ.

ಪರಮಹಂಸರ ಅಂತರ್ಯದಿಂದ ಬಂದ ಈ ಪ್ರಾರ್ಥನೆಯ ಪ್ರತಿ ಯೊಂದು ಪದವೂ ಭಕ್ತರ ಮನಸ್ಸನ್ನು ಬಹಳವಾಗಿ ಕುಲುಕಿ ಅದನ್ನು ಪುನರುಜ್ಜೀವನಗೊಳಿಸಿಬಿಟ್ಟಿತು. ಅವರ ಕಂಠದ ಮಾಧುರ್ಯತೆ ಮತ್ತು

ಅವರ ಮುಖದ ಶಿಶುಸಹಜ ಸರಳತೆ ಭಕ್ತರ ಹೃದಯದ ಅಂತರಾಳವನ್ನು ಬಹಳ ಆಳದವರೆಗೆ ಮುಟ್ಟಿಬಿಟ್ಟಿತು.

ಇಂದೇ ಪರಮಹಂಸರು ತನ್ನ ಮನೆಗೆ ಬರಬೇಕೆಂದು ಗಿರೀಶ ಅವರನ್ನು ಪ್ರಾರ್ಥನೆಮಾಡಿಕೊಳ್ಳುತ್ತಿದಾನೆ.

ಶ್ರೀರಾಮಕೃಷ್ಣರು : "ರಾತ್ರಿಯಾಗಿಬಿಡೋದಿಲ್ಲವೆ ?"

ಗಿರೀಶ : "ಇಲ್ಲ. ನೀವು ಅಲ್ಲಿಗೆ ಕಾಲು ಹಾಕಿದನಂತರ ಯಾವಾಗ ಬೇಕು ಅಂದರೆ ಆವಾಗ ಹೊರಡಬಹುದು. ನಾನು ಇಂದೇ ಥಿಯೇಟರಿಗೆ ಹೋಗಬೇಕಾಗಿದೆ— ಅಲ್ಲಿ ಒಂದು ಜಗಳವನ್ನು ಇತ್ಯರ್ಥಮಾಡಬೇಕಾಗಿದೆ."

ಶ್ರೀರಾಮಕೃಷ್ಣರು ಗಿರೀಶನ ಮನೆಗೆ ಹೊರಡುವುದರಲ್ಲಿ ರಾತ್ರಿ ಒಂಬತ್ತು ಘಂಟೆಯಾಗಿಬಿಟ್ಟಿತು. ಬಲರಾಮ ಪರಮಹಂಸರ ರಾತ್ರಿಯ ಫಲಾಹಾರವನ್ನು ಆಗಲೇ ತಯಾರುಮಾಡಿದ್ದುದರಿಂದ ಆತನಿಗೆ ಹೇಳಿದರು, "ನೀನು ಗಿರೀಶನ ಮನೆಗೇ ಅದನ್ನು ಕಳುಹಿಸಿಬಿಡು. ನಾನು ಅಲ್ಲೇ ಅದನ್ನು ತೆಗೆದುಕೊಳ್ಳುತ್ತೇನೆ" ಅಂತ. ಬಲರಾಮನ ಮನಸ್ಸನ್ನು ನೋಯಿಸಲು ಅವರಿಗೆ ಇಚ್ಛೆಯಾಗಲಿಲ್ಲ.

ಪರಮಹಂಸರು ಬಲರಾಮನ ಮನೆಯ ಎರಡನೆಯ ಅಂತಸ್ತಿನಿಂದ ಕೆಳಕ್ಕೆ ಇಳಿಯುತ್ತಿದ್ದ ಹಾಗೆಯೆ ಭಾವಾವಿಷ್ಟರಾಗಿದಾರೆ. ಕುಡುಕನಂತೆ ಕೆಳಕ್ಕೆ ಇಳಿಯುತ್ತಿದಾರೆ. ಅವರ ಪಕ್ಕದಲ್ಲಿ ನಾರಾಯಣ ಮತ್ತು ಮಾಸ್ಟರ್ ಇಳಿದುಬರುತ್ತಿದಾರೆ. ಅವರ ಹಿಂದೆ ರಾಮು, ಚುನಿಲಾಲ ಮತ್ತು ಉಳಿದ ಭಕ್ತರು ಇಳಿಯುತ್ತಿದಾರೆ. ನೆಲದ ಅಂತಸ್ತನ್ನು ಮುಟ್ಟುವುದರೊಳಗಾಗಿ ಪರಮಹಂಸರು ಸಂಪೂರ್ಣವಾಗಿ ಭಾವೋನ್ಮತ್ತರಾಗಿಬಿಟ್ಟಿದಾರೆ. ಕೆಳಕ್ಕೆ ಬಿದ್ದುಬಿಡಬಹುದೆಂದು ಭಾವಿಸಿ ನಾರಾಯಣ ಅವರ ಕೈಯನ್ನು ಹಿಡಿದುಕೊಳ್ಳಲು ಹೋದ. ಅದನ್ನು ನೋಡಿ ಪರಮಹಂಸರಿಗೆ ಸ್ವಲ್ಪ ಅಸಮಾಧಾನವಾಯಿತು. ಕೆಲವು ನಿಮಿಷಗಳನಂತರ ನಾರಾಯಣನಿಗೆ ಪ್ರೀತಿಯಿಂದ ಹೇಳಿದರು, "ಹಾಗೆ ಬಂದು ನೀನು ಕೈ ಹಿಡಿದುಕೊಂಡರೆ ಜನ ಭಾವಿಸುತ್ತಾರೆ ನಾನೊಬ್ಬ ಕುಡುಕ ಅಂತ. ಆದ್ದರಿಂದ ನಾನೇ ನಡೆದು ಹೋಗುತ್ತೇನೆ" ಅಂತ.

ಗಿರೀಶನ ಮನೆ ಅಲ್ಲಿಂದೇನು ಅಷ್ಟು ದೂರದಲ್ಲಿರಲಿಲ್ಲ. ಪರಮಹಂಸರು ಬೋಸಪಾರದ ಕ್ರಾಸ್ ರೋಡನ್ನು ದಾಟಿ, ಇದ್ದಕ್ಕಿದ್ದ ಹಾಗೆ

ವೇಗವಾಗಿ ನಡೆಯಲಾರಂಭಿಸಿದರು. ಭಕ್ತರೆಲ್ಲರೂ ಹಿಂದೆ ಬಿದ್ದರು. ನರೇಂದ್ರ ಪರಮಹಂಸರ ಕಡೆಗೆ ಸ್ವಲ್ಪ ದೂರದಲ್ಲಿ ಬರುತ್ತಿದ್ದುದು ಕಂಡಿತು. ಉಳಿದ ಸಮಯಗಳಲ್ಲಿ ನರೇಂದ್ರನ ಯೋಚನೆಯೆ, ನರೇಂದ್ರನ ಹೆಸರೆ ಅವರಿಗೆ ಅಷ್ಟೊಂದು ಆನಂದವನ್ನು ತರುತ್ತಿತ್ತು; ಈಗ ಅದೇ ನರೇಂದ್ರ ಅವರ ಎದುರಿಗೇ ಬಂದು ನಿಂತಿದ್ದಾನೆ, ಆದರೂ ಆತನೊಡನೆ ಅವರು ಒಂದು ಮಾತನ್ನೂ ಆಡಲಿಲ್ಲ. ಬಹುಶಃ ಪರಮಹಂಸರು ಬೇರೆ ಭಾವ ದಲ್ಲಿ ಇದ್ದರು ಅಂತ ಕಾಣುತ್ತೆ.

ಪರಮಹಂಸರು ಮತ್ತು ಭಕ್ತರೆಲ್ಲರು ಗಿರೀಶ ವಾಸಮಾಡುತ್ತಿದ್ದ ಗಲ್ಲಿಯನ್ನು ಪ್ರವೇಶಿಸಿದೊಡನೆಯೆ ಪರಮಹಂಸರು ಮಾತನಾಡಲು ಆರಂಭಿಸಿದರು. ಅವರು ನರೇಂದ್ರನಿಗೆ ಹೇಳಿದರು, "ಏನು, ಆರೋಗ್ಯವೆ? ನೀನು ನನ್ನೆದುರಿಗೆ ಬಂದಾಗ ನಿನ್ನೊಡನೆ ಮಾತನಾಡಲಾಗಲಿಲ್ಲ" ಅಂತ. ಅವರ ಈ ಮಾತಿನ ಪ್ರತಿಯೊಂದು ಪದದಿಂದಲೂ ಮಧು ತೊಟ್ಟಿಕ್ಕುತ್ತಿತ್ತು. ಪರಮಹಂಸರು ಇನ್ನೂ ಗಿರೀಶನ ಮನೆಯ ಹತ್ತಿರಕ್ಕೆ ಬಂದಿರಲಿಲ್ಲ. ಆಗ ಥಟ್ಟನೆ ನಿಂತು ನರೇಂದ್ರನ ಕಡೆ ತಿರುಗಿ ಹೇಳಿದರು, "ನಾನು ನಿನಗೊಂದು ವಿಷಯವನ್ನು ತಿಳಿಸಬೇಕೆಂದಿದ್ದೇನೆ. 'ಇದು' ಒಂದು, 'ಅದು' ಬೇರೊಂದು" ಅಂತ. ಆ ಸಮಯದಲ್ಲಿ ಅವರ ಅಂತರ್ಯದ ಭಾವನೆ ಏನಾಗಿದ್ದಿತು ಎಂಬುದನ್ನು ಯಾರುತಾನೆ ಹೇಳ ಬಲ್ಲರು?

ಗಿರೀಶ ಶ್ರೀರಾಮಕೃಷ್ಣರನ್ನು ಎದುರುಗೊಳ್ಳಲು ತನ್ನ ಮನೆಯ ಬಾಗಿಲಹತ್ತಿರ ಬಂದು ನಿಂತಿದ್ದಾನೆ. ಪರಮಹಂಸರು ಆತನ ಮನೆಯ ಬಾಗಿಲನ್ನು ಮುಟ್ಟುವುದೇ ತಡ, ಒಡನೆಯೇ ಗಿರೀಶ ಸಾಷ್ಟಾಂಗಪ್ರಣಾಮ ಮಾಡಿ ಒಂದು ಮರದ ದಿಮ್ಮಿಯೋಪಾದಿಯಲ್ಲಿ ಅವರ ಪಾದಗಳ ಮೇಲೆ ಬಿದ್ದಿದ್ದಾನೆ. ಅವರು ಏಳು ಎಂದ ಮೇಲೆ ಮೇಲಕ್ಕೆ ಎದ್ದು ಅವರ ಪಾದ ಧೂಳಿಯನ್ನು ಸ್ವೀಕರಿಸಿದ. ಬಳಿಕ ತನ್ನ ಮನೆಯ ಎರಡನೆ ಅಂತಸ್ತಿನಲ್ಲಿದ್ದ ತನ್ನ ಬೈಠಕ್‌ಖಾನೆಗೆ ಅವರನ್ನು ಕರೆದುಕೊಂಡುಹೋದ. ಭಕ್ತರು ಅವರನ್ನು ಹಿಂಬಾಲಿಸಿ ಅವರ ಮುಖ ತಮಗೆ ಕಾಣುವ ರೀತಿಯಲ್ಲಿಯೂ ಮತ್ತು ಅವರ ಬಾಯಿಂದ ಬರುವುದನ್ನೆಲ್ಲ ಚೆನ್ನಾಗಿ ಕೇಳಲೋಸುಗ ಅವರ ಸಮೀಪದಲ್ಲಿ ಎಷ್ಟು ಹತ್ತಿರ ಹತ್ತಿರವಾಗಿ ಕುಳಿತುಕೊಳ್ಳಲು ಸಾಧ್ಯವೋ ಅಷ್ಟು ಹತ್ತಿರ ಹತ್ತಿರವಾಗಿ ಕುಳಿತುಕೊಳ್ಳಲು ಪ್ರಯತ್ನಪಟ್ಟರು.

ತಮಗಾಗಿ ಮೀಸಲಾಗಿಟ್ಟಿದ ಆಸನದಮೇಲೆ ಕುಳಿತುಕೊಳ್ಳಲು ಪರಮಹಂಸರು ಹೋದಾಗ ಅದರ ಹತ್ತಿರವೇ ಒಂದು ವಾರ್ತಾಪತ್ರಿಕೆ ಬಿದ್ದಿರುವುದು ಅವರ ಕಣ್ಣಿಗೆ ಬಿತ್ತು. ಅದನ್ನು ಬೇರೆ ಕಡೆಗೆ ತೆಗೆದಿಡು ವಂತೆ ಒಬ್ಬನಿಗೆ ಸಂಜ್ಞೆಮಾಡಿದರು. ವಾರ್ತಾಪತ್ರಿಕೆ ಪ್ರಾಪಂಚಿಕವಿಷಯ ಗಳನ್ನು — ಪರನಿಂದೆ, ಪರಚರ್ಚೆ ಇವುಗಳನ್ನು ಒಳಗೊಂಡಿರುವುದರಿಂದ ಅವರ ದೃಷ್ಟಿಯಿಂದ ಅದೊಂದು ಅಪವಿತ್ರ ವಸ್ತುವೇ ಆಗಿತ್ತು. ಆ ಪತ್ರಿಕೆ ಯನ್ನು ಅಲ್ಲಿಂದ ತೆಗೆದುಕೊಂಡುಹೋದನಂತರವೇ ಅವರು ಆ ಆಸನದಲ್ಲಿ ಮಂಡಿಸಿದರು. ನಿತ್ಯಗೋಪಾಲ ಅಲ್ಲಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದ.

ಶ್ರೀರಾಮಕೃಷ್ಣರು ; "ಏನು ಸಮಾಚಾರ? ಬಹಳ ದಿವಸದಿಂದ ನೀನು ದಕ್ಷಿಣೇಶ್ವರಕ್ಕೆ ಬರಲೇ ಇಲ್ಲವಲ್ಲ?"

ನಿತ್ಯಗೋಪಾಲ: "ಹೌದು, ಬಹಳ ದಿವಸದಿಂದ ಅಲ್ಲಿಗೆ ಬರಲಾಗ ಲಿಲ್ಲ. ನನ್ನ ಆರೋಗ್ಯ ಸರಿಯಾಗಿಲ್ಲ. ಮೈ ಕೈಯಲ್ಲೆಲ್ಲ ನೋವು."

ಶ್ರೀರಾಮಕೃಷ್ಣರು: "ಈಗ ಹೇಗಿದೆ?"

ನಿತ್ಯಗೋಪಾಲ: "ಇನ್ನೂ ಗುಣವಾಗಿಲ್ಲ."

ಶ್ರೀರಾಮಕೃಷ್ಣರು: "ನಿನ್ನ ಮನಸ್ಸನ್ನು ಒಂದೆರಡು ಹಂತ ಕೆಳಕ್ಕೆ ಇಳಿಸು."

ನಿತ್ಯಗೋಪಾಲ: "ಜನರ ಸಹವಾಸ ನನಗೆ ರುಚಿಸುತ್ತಿಲ್ಲ. ಅವರು ನನ್ನ ವಿಷಯವಾಗಿ ಏನೇನೊ ಮಾತನಾಡಿಕೊಳ್ಳುತ್ತಾರೆ. ಅದನ್ನು ಕೇಳಿ ದಾಗ ಸ್ವಲ್ಪ ಭಯವಾಗುತ್ತದೆ; ಆದರೆ ಒಮ್ಮೊಮ್ಮೆ ನನ್ನ ಹೃದಯಕ್ಕೆ ಬಹಳ ಧೈರ್ಯವೂ ಬಂದುಬಿಡುತ್ತದೆ."

ಶ್ರೀರಾಮಕೃಷ್ಣರು: "ಹಾಗಾಗುವುದು ಸ್ವಾಭಾವಿಕ. ನಿನ್ನ ಜೊತೆಗಾರನಾರು?"

ನಿತ್ಯಗೋಪಾಲ: "ತಾರಕ. ಆತ ಯಾವಾಗ ನೋಡಿದರೂ ನನ್ನೊಡನೆಯೇ ಇರುತ್ತಾನೆ. ಒಮ್ಮೊಮ್ಮೆ ಆತನ ಸಹವಾಸವೂ ನನಗೆ ರುಚಿಸುತ್ತಿಲ್ಲ."

ಶ್ರೀರಾಮಕೃಷ್ಣರು: "ತೋತಾಪುರಿ ಒಮ್ಮೆ ನನಗೆ ಹೇಳಿದ, 'ನಮ್ಮ ಮಠದಲ್ಲಿ ಸಿದ್ಧಿಗಳನ್ನು ಪಡೆದ ಒಬ್ಬ ಸಿದ್ಧ ಇದ್ದ. ಆತ ಯಾವಾಗ ನೋಡಿದರೂ ಆಕಾಶದಕಡೆಗೇ ತನ್ನ ದೃಷ್ಟಿಯನ್ನಿಟ್ಟು ಸಂಚರಿಸುತ್ತಿದ್ದ.

ಆದರೂ ಆತನ ಸಂಗಾತಿಗಳಲ್ಲೊಬ್ಬರು ಆತನನ್ನು ಬಿಟ್ಟುಹೋಗಲು ಆತನಿಗೆ ಬಹಳ ದುಃಖವಾಯಿತು—ಮನಶ್ಶಾಂತಿ ಇಲ್ಲದೆ ಹೋಯಿತು' ಎಂದು.''

ಹೀಗೆ ಮಾತನಾಡುತ್ತಿದ್ದ ಹಾಗೆಯೇ ಅವರಿಗೆ ಭಾವಾಂತರ ವಾಯಿತು. ಏನನ್ನೊ ಯೋಚಿಸುತ್ತ ನಿಶ್ಶಬ್ದರಾಗಿ ಕುಳಿತಿದಾರೆ. ಸ್ವಲ್ಪ ಹೊತ್ತಿನನಂತರ ಹೇಳಿದರು, ''ನೀನು ಇಲ್ಲಿಗೆ ಬಂದಿದ್ದೀಯೇನು? ನಾನೂ ಇಲ್ಲಿಗೆ ಬಂದಿದೇನೆ'' ಅಂತ. ಅವರು ಆಡಿದ ಈ ಮಾತುಗಳು ತಮಗೆ ಅರ್ಥವಾಯಿತು ಎಂದು ಯಾರು ತಾನೆ ನಟಿಸಬಲ್ಲರು? ಇದು ದೇವ ಭಾಷೆಯೇನು?

ನರೇಂದ್ರ, ಗಿರೀಶ, ರಾಮು, ಹರಿಪದ, ಚುನಿಲಾಲ, ಬಲರಾಮ ಮಾಸ್ಟರ್ ಇವರೇ ಮೊದಲಾದವರು ಗಿರೀಶನ ದಿವಾನ್‌ಖಾನಿಯಲ್ಲಿ ಕುಳಿತಿ ದಾರೆ. ಮನುಷ್ಯರೂಪಿನಲ್ಲಿ ಭಗವಂತ ಅವತರಿಸುತ್ತಾನೆ ಎಂಬುದರಲ್ಲಿ ನರೇಂದ್ರನಿಗೆ ವಿಶ್ವಾಸವಿಲ್ಲ. ಆದರೆ ಗಿರೀಶನಿಗೆ ಅದಕ್ಕೆ ವ್ಯತಿರಿಕ್ತವಾಗಿ, ಪ್ರತಿಯೊಂದು ಯುಗದಲ್ಲಿಯೂ ಭಗವಂತ ಮನುಷ್ಯದೇಹಧಾರಣೆ ಮಾಡಿ ಕೊಂಡು ಈ ಮರ್ತ್ಯಲೋಕಕ್ಕೆ ಅವತರಿಸಿಬರುತ್ತಾನೆ ಎಂಬುದರಲ್ಲಿ ಉಜ್ಜ್ವಲ ವಿಶ್ವಾಸ.

ಶ್ರೀರಾಮಕೃಷ್ಣರು ಗಿರೀಶನಿಗೆ ಹೇಳಿದರು, ''ನೀನು ಮತ್ತು ನರೇಂದ್ರ ಇದರ ಸಂಬಂಧವಾಗಿ ಇಂಗ್ಲಿಷಿನಲ್ಲಿ ವಾದಿಸುವುದನ್ನು ಕೇಳ ಬೇಕೆಂದಿದೇನೆ'' ಅಂತ.

ವಾದ ವಿವಾದ ಆರಂಭವಾಯಿತು. ಅವರು ಇಂಗ್ಲಿಷಿನಲ್ಲಿ ಮಾತ ನಾಡುವುದಕ್ಕೆ ಬದಲು ಬಂಗಾಳಿಯಲ್ಲಿ ಮಾತನಾಡುತ್ತಿದಾರೆ. ಎಲ್ಲೊ ಅಲ್ಲಿ ಇಲ್ಲಿ ಮಾತ್ರ ಒಂದೊಂದು ಇಂಗ್ಲಿಷು ಪದವನ್ನು ಉಪಯೋಗಿಸುತ್ತಿದಾರೆ. ನರೇಂದ್ರ ಹೇಳಿದ, ''ಭಗವಂತ ಅನಂತ. ಆತನನ್ನು ಗ್ರಹಿಸಲು ನಮ್ಮಿಂದ ಸಾಧ್ಯವೇ? ಆತ ಎಲ್ಲರ ಅಂತರ್ಯದಲ್ಲಿಯೂ ಇದಾನೆ. ಆತ ಕೇವಲ ಯಾರೊ ಒಬ್ಬನ ಮೂಲಕ ಮಾತ್ರವೇ ಆವಿರ್ಭವಿಸುತ್ತಾನೆ ಅಂತಲೇನೂ ಭಾವಿಸಬೇಕಾಗಿಲ್ಲ'' ಅಂತ.

ಶ್ರೀರಾಮಕೃಷ್ಣರು ಕೃಪಾದೃಷ್ಟಿಯಿಂದ: ''ನರೇಂದ್ರ ಹೇಳುವುದನ್ನು ನಾನು ಪೂರ್ಣವಾಗಿ ಒಪ್ಪುತ್ತೇನೆ. ನಿಜ, ಭಗವಂತ ಸರ್ವತ್ರವೂ ಇದಾನೆ. ಆದರೆ ಒಂದು ವಿಷಯ; ಶಕ್ತಿವಿಶೇಷತೆ ಇದೆ. ಕೆಲವೆಡೆ ಆತನ

ಅವಿದ್ಯಾಶಕ್ತಿಯು ವ್ಯಕ್ತತೆ, ಇನ್ನು ಕೆಲವೆಡೆ ಆತನ ವಿದ್ಯಾಶಕ್ತಿಯು ವ್ಯಕ್ತತೆ. ಕೆಲವುದರಲ್ಲಿ ಶಕ್ತಿ ವಿಶೇಷವಾಗಿ ವ್ಯಕ್ತವಾಗಿರುತ್ತದೆ, ಇನ್ನು ಕೆಲವುವರಲ್ಲಿ ಅದು ಕಡಮೆಯಾಗಿ ವ್ಯಕ್ತವಾಗಿರುತ್ತದೆ. ಆದ್ದರಿಂದ ಶಕ್ತಿ ವಿಶೇಷತೆಯ ದೃಷ್ಟಿಯಿಂದ ಎಲ್ಲಾ ಮನುಷ್ಯರೂ ಒಂದೇ ಸರಿಸಮಾನರಲ್ಲ."

ರಾಮ: "ಈ ವಿಧವಾದ ನಿರರ್ಥಕ ತರ್ಕದಿಂದ ಏನು ಪ್ರಯೋಜನ?"

ಶ್ರೀರಾಮಕೃಷ್ಣರು ತಟಕ್ಕನೆ: "ಇಲ್ಲ! ಇಲ್ಲ! ಇದರಲ್ಲಿ ಒಂದು ಪ್ರಯೋಜನವಿದೆ."

ಗಿರೀಶ: "ಆತ ಮಾನವದೇಹಧಾರಣೆ ಮಾಡಿಕೊಂಡು ಬರೋದಿಲ್ಲ ಎಂಬುದು ನಿನಗೆ ಗೊತ್ತಾದ ಬಗೆ ಹೇಗೆ?"

ನರೇಂದ್ರ: "ಆತ ಅವಾಙ್ಮನಸಗೋಚರ."

ಶ್ರೀರಾಮಕೃಷ್ಣರು: "ಅಲ್ಲ. ಅದು ಸರಿಯಲ್ಲ. ಆತ ಶುದ್ಧ ಬುದ್ಧಿಗೆ ಗೋಚರ. ಶುದ್ಧ-ಬುದ್ಧಿ ಎಂದರೂ ಒಂದೇ, ಶುದ್ಧ-ಆತ್ಮ ಎಂದರೂ ಒಂದೇ. ಋಷಿಗಳು ಶುದ್ಧ-ಬುದ್ಧಿ—ಶುದ್ಧ-ಆತ್ಮದ ಮೂಲಕ ಶುದ್ಧ ಆತ್ಮನ ಸಾಕ್ಷಾತ್ಕಾರವನ್ನು ಪಡೆದರು."

ಗಿರೀಶ ನರೇಂದ್ರನಿಗೆ: "ಭಗವಂತ ಮಾನವರೂಪಿನಲ್ಲಿ ಅವತರಿಸಿ ಬರದೇ ಇದ್ದರೆ ಆಧ್ಯಾತ್ಮವಿಷಯಗಳನ್ನು ಜನರಿಗೆ ತಿಳಿಸಿಕೊಡತಕ್ಕ ವರು ಬೇರೆ ಎಲ್ಲಿ ದೊರೆಯುತ್ತಾರೆ? ಮನುಷ್ಯನಿಗೆ ಜ್ಞಾನ ಭಕ್ತಿ ಇವನ್ನು ಉಪದೇಶಿಸಲೋಸುಗವೇ ಭಗವಂತ ದೇಹಧಾರಣೆಮಾಡಿ ಬರುತ್ತಾನೆ. ಆತ ಹಾಗೆ ಮಾಡದೆ ಇದ್ದರೆ ಬೇರೆ ಶಿಕ್ಷಕರೆಲ್ಲಿ ದೊರೆಯುತ್ತಾರೆ?"

ನರೇಂದ್ರ: "ಬೇರೆ ಯಾರು ಬೇಕು? ಆತ ನಮ್ಮ ಹೃದಯದಲ್ಲೇ ವಾಸಿಸುತ್ತಿದಾನೆ. ಆತ ಅಂತರ್ಯದಿಂದಲೇ ನಮಗೆ ತಿಳಿಸಿಕೊಡುತ್ತಾನೆ."

ಶ್ರೀರಾಮಕೃಷ್ಣರು ಅಕ್ಕರೆಯಿಂದ: "ಹೌದು, ಹೌದು. ಆತ ನಮ್ಮ ಅಂತರ್ಯಾಮಿಯ ರೂಪದಿಂದ ತಿಳಿಸಿಕೊಡುತ್ತಾನೆ."

ಬಳಿಕ ನರೇಂದ್ರನಿಗು ಮತ್ತು ಗಿರೀಶನಿಗು ಒಂದು ದೊಡ್ಡ ವಾಗ್ಯುದ್ಧವೇ ಆರಂಭವಾಗಿಬಿಟ್ಟಿತು. ಅನಂತನಲ್ಲಿ ಅಂಶವಿರಲು ಸಾಧ್ಯವೆ? ಹ್ಯಾಮಿಲ್ಟನ್ ಏನು ಹೇಳಿದಾನೆ? ಹರ್ಬರ್ಟ್‌ಸ್ಪೆನ್ಸರ್ ಏನು ಹೇಳಿದಾನೆ? ಟಿಂಡಲ್, ಹಕ್ಸಲಿ ಇವರೇ ಮೊದಲಾದವರ ಅಭಿಪ್ರಾಯವೇನು? ಈ ರೀತಿಯಾಗಿ ವಾದ ಬೆಳೆಯುತ್ತಾ ಹೋಯಿತು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡು, ನನಗೆ ಈ ವಿಧವಾದ

ವಾದ ಹಿಡಿಸೋದಿಲ್ಲ. ನನಗೆ ಎಲ್ಲವೂ ಆತನೆ ಆಗಿ ತೋರಿಬರುತ್ತಿದಾನೆ. ಆದ್ದರಿಂದ ಇನ್ನು ನನಗೆ ವಿಚಾರದಿಂದ ಆವಶ್ಯಕತೆಯೇನಿದೆ? ಎಲ್ಲವೂ ಆತನೇ ಆಗಿರೋದು ನನ್ನ ಕಣ್ಣಿಗೆ ಕಾಣಬರುತ್ತಿದೆ. ಎಲ್ಲವೂ ಆತನೆ ಆಗಿದಾನೆ. ಪ್ರತಿಯೊಂದೂ ಆತನೇ ಆಗಿದಾನೆ; ಮತ್ತೆ ಅದೇ ಸಮಯ ದಲ್ಲಿ ಇವುಗಳೆಲ್ಲಕ್ಕೂ ಅತೀತನೂ ಆಗಿದಾನೆ. ಒಂದು ಅವಸ್ಥೆಯಲ್ಲಿ ನನ್ನ ಮನಸ್ಸು, ಬುದ್ಧಿ ಅಖಂಡದಲ್ಲಿ ಲಯವಾಗಿಬಿಡುತ್ತವೆ. ನರೇಂದ್ರನನ್ನು ನೋಡಿದ ಒಡನೆಯೆ ನನ್ನ ಮನಸ್ಸು ಅಖಂಡದಲ್ಲಿ ಲಯವಾಗಿಬಿಡುತ್ತದೆ. (ಗಿರೀಶನಿಗೆ) ಇದಕ್ಕೆ ನಿನ್ನ ಉತ್ತರವೇನು ಹೇಳು ನೋಡೋಣ?''

ಗಿರೀಶ ನಗುತ್ತ ನಗುತ್ತ: ''ಇದೊಂದನ್ನು ಬಿಟ್ಟು ಉಳಿದುದನ್ನೆಲ್ಲ ಪ್ರಾಯಶಃ ನಾನು ಅರೆದು ಕುಡಿದುಬಿಟ್ಟಿದ್ದೇನಲ್ಲ ಅದಕ್ಕಾಗಿ ಈ ಪ್ರಶ್ನೆ!'' (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: ''ಸಮಾಧ್ಯವಸ್ಥೆಯಿಂದ ಒಂದೆರಡು ಹಂತ ಕೆಳಕ್ಕೆ ಇಳಿದು ಬರದೇ ಇದ್ದರೆ ನನ್ನ ಬಾಯಿಂದ ಮಾತೇ ಹೊರಡದು. ವೇದಾಂತದಲ್ಲಿ ಶಂಕರಾಚಾರ್ಯರು ಬೋಧಿಸಿರುವ ಅದ್ವೈತವನ್ನೂ ನೋಡಬಹುದು, ರಾಮಾನುಜಾಚಾರ್ಯರು ಬೋಧಿಸಿರುವ ವಿಶಿಷ್ಟಾದ್ವೈತ ವನ್ನೂ ನೋಡಬಹುದು.''

ನರೇಂದ್ರ: ''ವಿಶಿಷ್ಟಾದ್ವೈತ ವಾದ ಎಂಬುದು ಏನು?''

ಶ್ರೀರಾಮಕೃಷ್ಣರು; ''ಅದು ರಾಮಾನುಜಾಚಾರ್ಯರ ಮತ. ಅವರ ದೃಷ್ಟಿಯಿಂದ ತುತ್ತತುದಿಯ ಸತ್ಯ ಜೀವಜಗತ್‌ವಿಶಿಷ್ಟ ಬ್ರಹ್ಮ— ಇವು ಮೂರೂ ಸೇರಿ ಒಂದಾಗಿರುವುದು. ಉದಾಹರಣೆಗೆ ಬೇಲದ ಹಣ್ಣು ತೆಗೆದುಕೊಳ್ಳಿ. ಒಬ್ಬನಿಗೆ ಒಂದು ಬೇಲದ ಹಣ್ಣಿನ ತೂಕವನ್ನು ಕಂಡು ಹಿಡಿಯಲು ಇಚ್ಛೆಯಾಯಿತು. ಆತ ಅದನ್ನು ಒಡೆದು ಅದರ ಓಟೆ, ತಿರುಳು, ಬೀಜ ಇವನ್ನು ಪ್ರತ್ಯೇಕ ಪ್ರತ್ಯೇಕ ಮಾಡಿದ. ಈಗ ಬರೀ ತಿರುಳನ್ನು ಮಾತ್ರವೇ ತೂಗಿನೋಡಿದರೆ ಬೇಲದ ಹಣ್ಣಿನ ನಿಜವಾದ ತೂಕ ಸಿಕ್ಕುವುದೆ? ಓಟೆ, ಬೀಜ, ತಿರುಳು ಇವು ಮೂರನ್ನೂ ಒಟ್ಟಿಗೆ ಸೇರಿಸಿ ತೂಗಬೇಕು. ಯೋಚಿಸಿನೋಡಿದರೆ ಮೊಟ್ಟಮೊದಲು ನಮಗೆನಿಸುತ್ತದೆ ಬೇಲದ ಹಣ್ಣಿನ ಸಾರಪದಾರ್ಥ ಓಟೆಯೂ ಅಲ್ಲ, ಬೀಜವೂ ಅಲ್ಲ, ಬರಿ ತಿರುಳು ಮಾತ್ರವೇ ಅಂತ. ಆದರೆ ಇನ್ನೂ ಸ್ವಲ್ಪ ಪರಿಶೀಲಿಸಿ ನೋಡಿದರೆ ತೋರುತ್ತದೆ — ಯಾವ ವಸ್ತುವಿನಿಂದ ತಿರುಳು ಉತ್ಪನ್ನವಾಗಿರುವುದೊ,

ಅದೇ ವಸ್ತುವಿನಿಂದ ಓಟೆ ಮತ್ತು ಬೀಜವೂ ಉತ್ಪನ್ನವಾಗಿವೆ ಅಂತ. ಆಧ್ಯಾತ್ಮಿಕಜೀವನದ ಮೊದಲ ಹಂತಗಳಲ್ಲಿ, 'ನೇತಿ, ನೇತಿ': 'ಇದಲ್ಲ, ಇದಲ್ಲ' ಅಂತ ಮುಂದುವರಿಯಬೇಕು. ನಿಜವಾದ ವಸ್ತು ಜೀವವೂ ಅಲ್ಲ, ಜಗತ್ತೂ ಅಲ್ಲ; ನಿಜವಾದ ವಸ್ತು ಕೇವಲ ಬ್ರಹ್ಮನೇ, ಉಳಿದುದೆಲ್ಲ ಅವಸ್ತು ಅಂತ ವಿಚಾರಮಾಡಬೇಕು. ಬಳಿಕ ಅನುಭವವಾಗುತ್ತದೆ, ತಿರುಳು ಯಾರದೊ ಆತನದೇ ಓಟೆ ಮತ್ತು ಬೀಜ ಅಂತ; ಯಾವುದರಿಂದ ಬ್ರಹ್ಮನ ಭಾವನೆ ಉತ್ಪನ್ನವಾಗಿದೆಯೊ, ಅದರಿಂದಲೇ ಜೀವ ಜಗತ್ತಿನ ಭಾವನೆಯೂ ಉತ್ಪನ್ನವಾಗಿದೆ ಅಂತ; ನಿತ್ಯ ಯಾರದೊ, ಆತನದೇ ಲೀಲೆ ಅಂತ. ಅದಕ್ಕಾಗಿಯೇ ರಾಮಾನುಜಾಚಾರ್ಯರು ಹೇಳೋದು, ಬ್ರಹ್ಮ ಜೀವಜಗತ್‌ವಿಶಿಷ್ಟ ಅಂತ. ಇದಕ್ಕೇ ವಿಶಿಷ್ಟಾದ್ವೈತ ಅಂತ ಹೆಸರು.

(ಮಾಸ್ಟರಿಗೆ) "ನಾನು ಸಾಕ್ಷಾತ್ತಾಗಿ ಆತನನ್ನು ನೋಡುತ್ತಿದೇನೆ. ಹಾಗಿರುವಾಗ ಇನ್ನು ನನಗೆ ವಿಚಾರದ ಆವಶ್ಯಕತೆಯೇನಿದೆ? ಆತನೇ ಎಲ್ಲವೂ ಆಗಿರುವುದನ್ನು ಸಾಕ್ಷಾತ್ತಾಗಿ ನೋಡುತ್ತಿದೇನೆ.

"ಆದರೆ ಆತ ಜಾಗ್ರತಿ ಆಗದೆ ಇದ್ದರೆ ಆತನ ಸ್ವರೂಪವನ್ನು ಅರಿಯಲಾಗೋದಿಲ್ಲ. ವಿಚಾರದ ಆವಶ್ಯಕತೆ ಎಲ್ಲಿಯವರೆಗೆ? ಆತನ ಸಾಕ್ಷಾತ್ಕಾರವಾಗದವರೆಗೆ. ಎಲ್ಲವೂ ಆತನೇ ಆಗಿರೋದನ್ನ ನಾನೂ ಪ್ರತ್ಯಕ್ಷವಾಗಿ ನೋಡುತ್ತಿದೇನೆ ಅಂತ ಬರೀ ಬಾಯಿಮಾತಿನಲ್ಲಿ ಹೇಳಿಬಿಟ್ಟರಾಗೋದಿಲ್ಲ; ಆತನ ಕೃಪೆಯಿಂದ ಆತ್ಮಜಾಗ್ರತಿ ಉಂಟಾಗಬೇಕು. ಆತ್ಮಜಾಗ್ರತಿಗೊಂಡಿತು ಅಂದರೆ ಸಮಾಧಿಯುಂಟಾಗುತ್ತದೆ; ಆಗಾಗ ದೇಹಭಾವನೆ ಹೊರಟುಹೋಗುತ್ತದೆ; ಕಾಮುಕಾಂಚನಾಸಕ್ತಿ ಇರದು; ಭಗವದ್ವಿಷಯ ವಿನಾ ಬೇರೆ ಏನೂ ರುಚಿಸದು; ಪ್ರಾಪಂಚಿಕ ಮಾತುಕತೆಗಳು ಕಿವಿಗೆ ಬಿತ್ತು ಅಂದರೆ ಯಾತನೆಯಾಗುತ್ತದೆ. ಆತ್ಮ ಜಾಗ್ರತಿಗೊಂಡರೇನೇ ಭಗವಂತನನ್ನು ಅರಿಯಲು ಸಾಧ್ಯವಾಗುತ್ತದೆ."

ನರೇಂದ್ರ ಮತ್ತು ಗಿರೀಶನ ವಾಗ್ವಾದ ಕೊನೆಗಂಡಿತು. ಬಳಿಕ ಪರಮಹಂಸರು ಮಾಸ್ಟರಿಗೆ ಹೇಳಿದರು, "ನೋಡು, ಭಗವಂತನ ಸಂಬಂಧವಾಗಿ ವಿಚಾರದ ಮೂಲಕ ಒಂದು ವಿಧವಾದ ಅನುಭವ ದೊರೆಯುತ್ತದೆ, ಧ್ಯಾನದ ಮೂಲಕ ಬೇರೊಂದು ವಿಧವಾದ ಅನುಭವ ದೊರೆಯುತ್ತದೆ; ಆದರೆ ಆತ ತಾನಾಗಿಯೇ ಪ್ರತ್ಯಕ್ಷನಾಗಿಬಿಟ್ಟಾಗ, ಆಗ ದೊರೆ

ಯುವ ಅನುಭವವೇ ಬೇರೆ. ಆತ ತಾನಾಗಿಯೇ ಪ್ರತ್ಯಕ್ಷನಾಗಿಬಿಟ್ಟ ಅಂದರೆ—ಅವತಾರ ಎಂಬುದು ಇದೇನೆ,—ಆತ ತನ್ನ ಮಾನವ ಲೀಲೆಯನ್ನು ವ್ಯಕ್ತಗೊಳಿಸಿಕೊಂಡುಬಿಟ್ಟ ಅಂದರೆ, ಮತ್ತೆ ಭಕ್ತನಿಗೆ ವಿಚಾರದಲ್ಲಿ ತೊಡಗಿರಬೇಕಾದ ಆವಶ್ಯಕತೆಯೇನಿರೋದಿಲ್ಲ; ಆಗ ಆತನಿಗೆ ಯಾವ ವಿವರಣೆಯೂ ಬೇಕಾಗಿರೋದಿಲ್ಲ. ಇದು ಹೇಗೆ ಎಂಬುದು ನಿನಗೆ ಗೊತ್ತೆ? ಯಾರೋ ಒಬ್ಬ ಕತ್ತಲೆ ಕೊಠಡಿಯಲ್ಲಿ ಇದಾನೆ ಅಂತ ಭಾವಿಸಿಕೊ. ಬೆಂಕಿಕಡ್ಡಿಯನ್ನು ಗೀಚುತ್ತ ಗೀಚುತ್ತ ಇದ್ದಹಾಗೆ ಅದು ಥಟ್ಟನೆ 'ಧಗ್' ಎಂದು ಹೊತ್ತಿಕೊಂಡುಬಿಡುತ್ತದೆ. ಅದೇರೀತಿಯಾಗಿ ಭಗವಂತ ಇದ್ದಕ್ಕಿದ್ದಹಾಗೆ 'ಫಟ್' ಅಂತ ತೋರಿಸಿಕೊಳ್ಳುವುದಾದರೆ, ಆಗ ಸಕಲ ಸಂದೇಹಗಳೂ ನಿವೃತ್ತಿಯಾಗಿಹೋಗುತ್ತವೆ. ಬರೀ ವಿಚಾರದಿಂದ ಆತನನ್ನು ಅರಿಯಲಾಗುವುದೆ?''

ಪರಮಹಂಸರು ನರೇಂದ್ರನನ್ನು ಕರೆದು ತಮ್ಮ ಹತ್ತಿರ ಕೂರಿಸಿಕೊಂಡು, ಆತನ ಕ್ಷೇಮಸಮಾಚಾರವನ್ನೆಲ್ಲ ವಿಚಾರಿಸಿ ಬಹಳವಾಗಿ ಅಕ್ಕರೆ ತೋರಿಸುತ್ತಿದಾರೆ.

ನರೇಂದ್ರ ಶ್ರೀರಾಮಕೃಷ್ಣರಿಗೆ: ''ಏಕೆ ಹೀಗಾಯಿತು? ನಾನು ಕಾಳಿಯ ಧ್ಯಾನವನ್ನು ಮೂರು ನಾಲ್ಕು ದಿವಸ ಮಾಡಿದೆ. ಆದರೆ ಯಾವ ಫಲವೂ ನನಗೆ ದೊರೆಯಲೇ ಇಲ್ಲವಲ್ಲ!''

ಶ್ರೀರಾಮಕೃಷ್ಣರು: ''ಕ್ರಮೇಣ ದೊರೆಯುತ್ತದೆ. ಕಾಳಿ ಎಂಬುವಳು ಮತ್ತೆ ಬೇರೆ ಏನೂ ಅಲ್ಲ, ಯಾರು ಬ್ರಹ್ಮ ಅನಿಸಿಕೊಳ್ಳುತ್ತಾನೊ ಆತನೇ ಕಾಳಿ. ಕಾಳಿ ಎಂಬುವಳೇ ಆದ್ಯಾಶಕ್ತಿ. ಯಾವಾಗ ಭಗವಂತ ನಿಷ್ಕ್ರಿಯನೊ ಆಗ ಆತನಿಗೆ ಬ್ರಹ್ಮ ಅಂತ ಹೆಸರು; ಯಾವಾಗ ಆತ ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯಗಳನ್ನು ಮಾಡುತ್ತಾನೊ ಆಗ ಆತನಿಗೇ ಶಕ್ತಿ ಅಂತ ಹೆಸರು, ಕಾಳಿ ಅಂತ ಹೆಸರು. ಯಾರನ್ನು ನೀನು ಬ್ರಹ್ಮ ಅಂತ ಕರೆಯುತ್ತೀಯೊ, ಆತನನ್ನೇ ನಾನು ಕಾಳಿ ಅಂತ ಕರೆಯುತ್ತೇನೆ.

''ಬ್ರಹ್ಮ ಕಾಳಿ ಅಭೇದ. ಇವರಿಗಿರುವ ಸಂಬಂಧ ಅಗ್ನಿಗೂ ಮತ್ತು ಅದರ ದಾಹಕಶಕ್ತಿಗೂ ಇರುವ ಸಂಬಂಧದ ಹಾಗೆ. ಅಗ್ನಿಯ ಭಾವನೆಯೊಡನೆ ಅದರ ದಾಹಕಶಕ್ತಿಯ ಭಾವನೆಯನ್ನೂ ಮಾಡಲೇಬೇಕಾಗುತ್ತದೆ. ಬ್ರಹ್ಮನನ್ನು ಸ್ವೀಕರಿಸಿತು ಎಂದರೆ ಕಾಳಿಯನ್ನು ಸ್ವೀಕರಿಸಲೇಬೇಕು; ಕಾಳಿಯನ್ನು ಸ್ವೀಕರಿಸಿತು ಎಂದರೆ ಬ್ರಹ್ಮನನ್ನು ಸ್ವೀಕರಿಸಲೇ

ಬೇಕು. ಬ್ರಹ್ಮ ಶಕ್ತಿ ಅಭೇದ. ಬ್ರಹ್ಮನನ್ನೇ ಶಕ್ತಿ ಅಥವಾ ಕಾಳಿ ಅಂತ ನಾನು ಕರೆಯೋದು."

ಆಗಲೆ ರಾತ್ರಿ ಬಹಳವಾಗಿ ಮುಂದುವರಿದಿದೆ. ಗಿರೀಶ ಥಿಯೇಟರಿಗೆ ಹೋಗಬೇಕಾಗಿರುವುದರಿಂದ ಒಂದು ಕುದುರೆ ಗಾಡಿ ತರಲು ಗಿರೀಶ ಹರಿಪದನಿಗೆ ಹೇಳಿದ. ಹರಿಪದ ಇನ್ನೇನು ಕೊಠಡಿಯನ್ನು ಬಿಟ್ಟು ಹೊರಡುವುದರಲ್ಲಿದ್ದ. ಆಗ ಪರಮಹಂಸರು ನಗುತ್ತ, "ನೋಡಿಕೊ, ಗಾಡಿ ತರೋದನ್ನು ಮರೆತು-ಗಿರಿತು ಬಿಟ್ಟೀಯೆ!" ಅಂತ. (ಎಲ್ಲರೂ ನಗುತ್ತಾರೆ.)

ಹರಿಪದ ನಗುತ್ತ: "ನಾನು ಹೋಗುತ್ತಿರುವುದೇ ಅದಕ್ಕಾಗಿ. ಅದನ್ನು ತರೋದನ್ನು ಮರೆಯುವೆನೆ?"

ಗಿರೀಶ: "ನಿಮ್ಮನ್ನು ಬಿಟ್ಟು ನಾನು ಥಿಯೇಟರಿಗೆ ಹೋಗಬೇಕಾಗಿದೆಯಲ್ಲ!"

ಶ್ರೀರಾಮಕೃಷ್ಣರು: "ಅದು ಸರಿ. ನೀನು ಆ ಕಡೆಗೆ ಮತ್ತು ಈ ಕಡೆಗೆ ಎರಡು ಕಡೆಗೂ ಮನಸ್ಸನ್ನಿಡಬೇಕು. 'ಜನಕರಾಜ ಅದನೂ ಇದನೂ — ಎರಡನು ಹಿಡಿದು ಕುಡಿದನು ತುಂಬಿದ ಹಾಲ್‌ಬಟ್ಟಲನು!'" (ಎಲ್ಲರೂ ನಗುತ್ತಾರೆ.)

ಗಿರೀಶ: "ಥಿಯೇಟರ್-ಗಿಯೇಟರನ್ನು ಯುವಕರಿಗೆ ವಹಿಸಿಬಿಡಲು ಯೋಚಿಸಿದೇನೆ."

ಶ್ರೀರಾಮಕೃಷ್ಣರು: "ಬೇಡ, ಬೇಡ. ಹಾಗೆ ಮಾಡಬೇಡ. ನೀನು ನೋಡಿಕೊಳ್ಳುವುದೇ ಮೇಲು. ಅದರಿಂದ ಅನೇಕರಿಗೆ ಉಪಕಾರವಾಗುತ್ತಿದೆ."

ನರೇಂದ್ರ ಮೆಲ್ಲಗೆ: "ಈಗ ತಾನೆ ಈತ (ಗಿರೀಶ) ಇವರನ್ನು (ಪರಮಹಂಸರನ್ನು) ಭಗವಂತ, ಅವತಾರ ಅಂತ ಹೇಳುತ್ತಿದ್ದ; ಆಗಲೇ ಈತನಿಗೆ ಥಿಯೇಟರ್ ಕಡೆ ಎಳೆತ!"

ಪರಮಹಂಸರು ನರೇಂದ್ರನನ್ನು ತಮ್ಮ ಹತ್ತಿರ ಕೂರಿಸಿಕೊಂಡು ಆತನ ಕಡೆಗೇ ದೃಷ್ಟಿಸಿನೋಡುತ್ತಿದಾರೆ. ಇದ್ದಕ್ಕಿದ್ದಹಾಗೆ ಇನ್ನೂ ಮುಂದಕ್ಕೆ ಸರಿದು ಆತನ ಪಕ್ಕದಲ್ಲಿಯೇ ಕುಳಿತುಕೊಂಡರು. ನರೇಂದ್ರನಿಗೆ ಭಗವಂತ ಅವತರಿಸುತ್ತಾನೆ ಎಂಬುದರಲ್ಲಿ ವಿಶ್ವಾಸವಿಲ್ಲ — ಅದರಿಂದೇನು ಆಕಾಶ ಕಳಚಿಬಿದ್ದುಹೋಗಿಬಿಡುತ್ತದೆಯೇನು? ಪರಮಹಂಸರ ಪ್ರೀತಿ

ಆತನ ಕಡೆಗೆ ಇನ್ನೂ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಹರಿದು ಉಕ್ಕಿ ಉಕ್ಕಿ ಬರುತ್ತಿದೆ. ಆತನ ಮೈಯನ್ನು ಸವರಿ ಒಂದು ಹಾಡಿನ ಚರಣವನ್ನು ಹಾಡಿದರು:

ನಮ್ಮಿಂದ ನಿನ್ನ ಬಿಂಕಕೆ ಭಂಗ ಬಂದಿತೇನು?
ಅಂತಾದರಂತೆಸರಿ; ನಮಗುಕೂಡಾ ಬಿಂಕ
ಉಂಟೆಂಬುದನು ನೀನು ತಿಳಿದಿಲ್ಲವೇನು?

ಬಳಿಕ ಶ್ರೀರಾಮಕೃಷ್ಣರು ನರೇಂದ್ರನಿಗೆ: "ಎಲ್ಲಿಯವರೆಗೆ ಮನುಷ್ಯ ವಿಚಾರದಲ್ಲಿಯೇ ಆಸಕ್ತನಾಗಿರುತ್ತಾನೊ ಅಲ್ಲಿಯವರೆಗೆ ಭಗವಂತ ಆತನ ಹತ್ತಿರವೇ ಸುಳಿಯಲೊಲ್ಲ. ನೀವಿಬ್ಬರು ವಿಚಾರದಲ್ಲಿ ತೊಡಗಿದ್ದಿರಿ. ಅದು ನನಗೆ ಸರಿದೋರಲಿಲ್ಲ.

"ಔತಣದ ಮನೆಯ ಜನಸಂದಣಿ ಶಬ್ದ ಎಲ್ಲಿಯವರೆಗೆ ಕೇಳಿ ಬರುತ್ತದೆ? ಊಟಕ್ಕೆ ಕೂರಿಸದವರೆಗೆ. ಯಾವಾಗ ಎಲೆಗೆ ಅನ್ನ ಸಾರು ಬೀಳುವುದೊ, ಆಗ ಮುಕ್ಕಾಲು ಭಾಗ ಶಬ್ದ ಅಡಗಿಹೋಗುತ್ತದೆ. (ಎಲ್ಲರೂ ನಗುತ್ತಿದಾರೆ.) ಉಳಿದ ಭಕ್ಷ್ಯಭೋಜ್ಯಗಳು ಬಿದ್ದನಂತರ ಇನ್ನೂ ಕಡಮೆಯಾಗಿಬಿಡುತ್ತದೆ. ಮಜ್ಜಿಗೆ ಹಾಕುತ್ತ ಇರೋವಾಗ, ಕೇವಲ 'ಸುಪ್, ಸುಪ್' ಎಂಬ ಶಬ್ದ ಕೇಳಿಬರಲಾರಂಭಿಸುತ್ತದೆ. ಊಟ ಮುಗಿಯಿತು ಅಂದರೆ ನಿದ್ರೆ.

"ಭಗವಂತನ ಕಡೆಗೆ ಮುಂದು ಮುಂದುವರಿದಂತೆಲ್ಲ, ಆತನ ಸಂಬಂಧವಾಗಿ ವಿಚಾರ-ಗಿಚಾರ ಮಾಡೋದೆಲ್ಲ ಕಡಮೆಯಾಗಿಬಿಡುತ್ತದೆ. ಆತನ ಸಾಕ್ಷಾತ್ಕಾರ ದೊರೆಯಿತು ಅಂದರೆ ಮತ್ತೆ ಶಬ್ದ-ಗಿಬ್ದ, ವಿಚಾರ-ಗಿಚಾರ ಏನೂ ಇರೋದಿಲ್ಲ. ಆಗ ನಿದ್ರೆ—ಸಮಾಧಿ."

ಪರಮಹಂಸರು ನರೇಂದ್ರನ ಮೈಯನ್ನು ಮೆದುವಾಗಿ ತಡವಿ, ಆತನ ಗಲ್ಲವನ್ನು ಅಕ್ಕರೆಯಿಂದ ಮುಟ್ಟಿ ಹೇಳಿದರು, "ಹರಿಃ ಓಂ! ಹರಿಃ ಓಂ! ಹರಿಃ ಓಂ!" ಅಂತ. ಕ್ರಮಕ್ರಮೇಣ ಅವರಿಗೆ ಬಾಹ್ಯ ಜಗತ್ತಿನ ಪ್ರಜ್ಞೆ ಕಡಮೆ ಕಡಮೆಯಾಗುತ್ತಾ ಬರಲಾರಂಭಿಸಿದೆ. ಅವರ ಕೈ ಇನ್ನೂ ನರೇಂದ್ರನ ಕಾಲಿನ ಮೇಲೇನೆ ಇದೆ. ಮತ್ತೆ ಅದೇ ಅವಸ್ಥೆಯಲ್ಲಿ ನರೇಂದ್ರನ ಮೈಕೈಯನ್ನೆಲ್ಲಾ ತಡವಲಾರಂಭಿಸಿದರು. ಕ್ರಮೇಣ ಅವರ ಅವಸ್ಥೆ ಭಾವಾಂತರವನ್ನು ಹೊಂದಿತು. ಅವರು ಕೈಮುಗಿದುಕೊಂಡು ನರೇಂದ್ರನಿಗೆ ಹೇಳುತ್ತಿದಾರೆ, "ದಯವಿಟ್ಟು ಒಂದು ಹಾಡನ್ನು ಹಾಡು; ಆಗ

ನನಗೆ ಸರಿಹೋಗಿಬಿಡುತ್ತದೆ. ಇಲ್ಲದೆ ಇದ್ದರೆ ನಾನು ನನ್ನ ಕಾಲಿನ ಮೇಲೆ ಎದ್ದು ನಿಲ್ಲೋ ಬಗೆ ಹೇಗೆ?" ಅಂತ. ಮತ್ತೆ ಸ್ವಲ್ಪ ಹೊತ್ತು ಅವರ ಬಾಯಿಂದ ಯಾವ ಮಾತೂ ಹೊರಡಲಿಲ್ಲ. ಪ್ರತಿಮೆಯೋಪಾದಿಯಲ್ಲಿ ಸುಮ್ಮನೆ ಕುಳಿತಿದಾರೆ. ಬಳಿಕ ಭಾವೋನ್ಮತ್ತರಾಗಿ ಹೇಳುತ್ತಿದಾರೆ, "ಕೃಷ್ಣಪ್ರೇಮದಿಂದ ಉನ್ಮತ್ತಳಾಗಿರೋ ಹೇ ರಾಧೆಯೇ! ನೋಡಿಕೊ, ಯಮುನೆಗೇನಾದರು ಕಾಲುತಪ್ಪಿ ಬಿದ್ದುಬಿಟ್ಟೀಯೆ!" ಅಂತ.

ಪರಮಹಂಸರು ಭಗವದ್ಭಾವನೆಯಿಂದ ತುಂಬಿತುಳುಕಾಡುತ್ತಿದಾರೆ. ಅವರು ಹಾಡೊಂದರ ಚರಣವನ್ನು ಹಾಡಿದರು :

ಹೃದಯವಲ್ಲಭನಿರುವ ಕದಂಬವನವೆನ್ನುವುದು
ಇನ್ನೆಷ್ಟು ದೂರವಿದೆ ಹೇಳು ಕೆಳದೀ?
ಕೃಷ್ಣಗಂಧವು ಇದೆಕೊ ಇಲ್ಲಿಗೂ ಬೀಸುತಿದೆ!
ನಡೆಯಲಾರೆನು ಮುಂದೆ; ಸೋತಿರುವೆನು.

ಪರಮಹಂಸರು ಈ ಚರಣವನ್ನು ಹಾಡಿದನಂತರ ಬಾಹ್ಯಪ್ರಪಂಚವೆಂಬುದೊಂದು ಇದೆ ಎಂಬುದನ್ನು ಸಂಪೂರ್ಣವಾಗಿ ಮರೆತುಬಿಟ್ಟದಾರೆ. ತಮ್ಮ ಮುಂದೆಯೇ ಕುಳಿತಿರುವ ನರೇಂದ್ರ ಮತ್ತು ಉಳಿದವರು ಯಾರೂ ಆ ಕೊಠಡಿಯಲ್ಲಿ ಇರುವಂತೆ ಅವರಿಗೆ ತೋರಿಬರುತ್ತಿಲ್ಲ. ತಾವು ಕುಳಿತಿರುವ ಸ್ಥಳ ಯಾವುದು ಎಂಬುದನ್ನೇ ಮರೆತುಬಿಟ್ಟದಾರೆ. ಅವರ ಪ್ರಾಣ ಭಗವಂತನಲ್ಲಿ ಲಯವಾಗಿಬಿಟ್ಟಿರುವಂತೆ ತೋರುತ್ತಿದೆ—ಮದ್ಗತ ಅಂತರಾತ್ಮ. ಅವರು ಇದ್ದಕ್ಕಿದ್ದ ಹಾಗೆ ಎದ್ದು ನಿಂತು ಕೂಗಿಕೊಂಡರು, "ಗಹನ ಪ್ರೇಮದಿಂದ ಉನ್ಮತ್ತ!" ಅಂತ. ಅವರು ಮತ್ತೆ ಕೆಳಕ್ಕೆ ಕುಳಿತುಕೊಂಡು ಮಟಗುಟ್ಟುತ್ತಿದಾರೆ, "ಒಂದು ಬೆಳಕು ಬರುತ್ತಿರೋದು ನನಗೆ ಕಾಣಬರುತ್ತಿದೆ;—ಆದರೆ ಅದು ಯಾವ ದಿಕ್ಕಿನಿಂದ ಬರುತ್ತಿದೆ ಎಂಬುದು ನನಗೆ ಇನ್ನೂ ಬಗೆಹರಿಯುತ್ತಿಲ್ಲ" ಎಂಬುದಾಗಿ.

ಈಗ ನರೇಂದ್ರ ಹಾಡಲಾರಂಭಿಸಿದ:

ಹರಿಯಿತೆನ್ನ ಬವಣೆ, ಪ್ರಭೂ
ಹರಿಯಿತೆನ್ನ ಬವಣೆಯು.
ನಿನ್ನ ವದನ ದರುಶನದಲಿ
ಸಕಲ ಶೋಕ ಹರಿಯಿತು.

ನಿನ್ನ ದಿವ್ಯ ರೂಪಕಾನು
ಮರುಳುಗೊಂಡು ನಿಂತೆನು
ಬೆರಗುಗೊಂಡು ನಿಂತೆನು !
ಸಪ್ತಲೋಕ ಶೋಕಮುಕ್ತ-
ವಹುದು ನಿನ್ನ ಕಾಣಲು.
ನಿನ್ನ ಕಂಡ ದೀನ ನಾನು !
ನನ್ನ ಮನದ ಪರಿಯ ನುಡಿಯ-
ಲೆನಗೆ ಬಾಯಿ ಬಾರದು !

ಪರಮಹಂಸರು ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದಹಾಗೆಯೇ ಮತ್ತೆ ಗಾಢಸಮಾಧಿಸ್ಥರಾಗಿದಾರೆ. ಅವರ ಕಣ್ಣುಗಳು ಮುಚ್ಚಿವೆ. ದೇಹ ಸ್ಪಂದಹೀನವಾಗಿದೆ.

ಪರಮಹಂಸರು ಪ್ರಕೃತಿಸ್ಥರಾಗಿ ಸುತ್ತಲೂ ದೃಷ್ಟಿಸಿ ನೋಡಿ ಕೇಳಿದರು, "ನನ್ನನ್ನು ಯಾರು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋಗುತ್ತಾರೆ?" ಅಂತ. ಅವರ ಮುಖ, ಜೊತೆಗಾರರು ತನ್ನನ್ನು ಬಿಟ್ಟುಹೋದ ಮಗುವಿನ ಮುಖದಂತೆ ಇತ್ತು.

ರಾತ್ರಿ ಬಹಳವಾಗಿ ಮುಂದುವರಿದುಬಿಟ್ಟಿದೆ. ಫಾಲ್ಗುಣ ಕೃಷ್ಣ ದಶಮಿಯ ಕತ್ತಲೆ ಹಬ್ಬಿದೆ. ಪರಮಹಂಸರನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋಗಲು ಗಾಡಿ ಬಂದುನಿಂತಿದೆ. ಭಕ್ತರು ಗಾಡಿಯ ಸುತ್ತಲೂ ನಿಂತಿದಾರೆ. ಪರಮಹಂಸರು ಇನ್ನು ಭಾವಾವಿಷ್ಟರಾಗಿಯೇ ಇರುವುದರಿಂದ ಭಕ್ತರು ಅವರನ್ನು ಬಹಳ ಜಾಗರೂಕತೆಯಿಂದ ಗಾಡಿಯಲ್ಲಿ ಕೂರಿಸಿದರು. ಗಾಡಿ ಮುಂದುವರಿದು ಕಣ್ಮರೆಯಾಯಿತು.

ಭಕ್ತರು ತಮ್ಮ ತಮ್ಮ ಸ್ವಗೃಹಗಳಿಗೆ ಹಿಂದಿರುಗಲಾರಂಭಿಸಿದರು. ದಕ್ಷಿಣದಿಕ್ಕಿನಿಂದ ಮಂದಮಾರುತ ಅವರ ಮುಖಕ್ಕೆ ತೀಡುತ್ತಿತ್ತು. ಕೆಲಕೆಲವರು ನರೇಂದ್ರ ಹಾಡಿದ ಹಾಡಿನ ಚರಣವೊಂದನ್ನು ಮೂಗಿನಲ್ಲಿ ಹಾಡುತ್ತ ಮುಂದುವರಿಯುತ್ತಿದಾರೆ.

ಅವರು ಹಾಡುತ್ತಿದ್ದ ಚರಣ:

ಹರಿಯಿತೆನ್ನ ಬವಣೆ, ಪ್ರಭೂ
ಹರಿಯಿತೆನ್ನ ಬವಣೆಯು,
ನಿನ್ನ ವದನ ದರುಶನದಲಿ
ಸಕಲ ಶೋಕ ಹರಿಯಿತು.

೩ನೆ ಏಪ್ರಿಲ್ ೧೮೮೫, ಚೈತ್ರ ಕೃಷ್ಣ ಸಪ್ತಮಿ, ಸೋಮವಾರ.

ಪರಮಹಂಸರು ಬಲರಾಮನ ದಿವಾನ್‌ಖಾನೆಯಲ್ಲಿ ಕುಳಿತು ಮಾಸ್ಟರೊಡನೆ ಮಾತುಕತೆಯಾಡುತ್ತಿದ್ದಾರೆ. ಸಮಯ ಮೂರಾಗಿದೆ. ಬಹಳ ಬಿಸಿಲು. ಅವರು ತಮ್ಮ ಯುವಕ ಭಕ್ತರನ್ನು ಸಂಧಿಸಲು ಮತ್ತು ದೇವೇಂದ್ರನ ಮನೆಗೆ ಹೋಗಿಬರಲು ಕಲ್ಕತ್ತಕ್ಕೆ ಬಂದಿದ್ದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಮೂರು ಘಂಟೆಗೆ ಬರುತ್ತೇನೆ ಅಂತ ಹೇಳಿದ್ದೆ; ಆದ್ದರಿಂದ ಬಂದುಬಿಟ್ಟೆ. ಆದರೆ ಬಹಳ ಬಿಸಿಲು."

ಮಾಸ್ಟರ್: "ಹೌದು, ಬಹಳ ಬಿಸಿಲು. ತಮಗೆ ಬಹಳ ಕಷ್ಟವಾಗಿರಬೇಕು."

ಭಕ್ತರು ಪರಮಹಂಸರಿಗೆ ಗಾಳಿ ಬೀಸುತ್ತಿದ್ದಾರೆ.

ಶ್ರೀರಾಮಕೃಷ್ಣರು: "ನಾನು ಇಲ್ಲಿಗೆ ಬಂದಿರೋದು ಚಿಕ್ಕ ನರೇನನ್ನು ಮತ್ತು ಬಾಬುರಾಮನನ್ನು ಸಂಧಿಸಲೋಸುಗ. ಪೂರ್ಣನನ್ನು ನೀನು ಏಕೆ ಕರೆದುಕೊಂಡುಬರಲಿಲ್ಲ?"

ಮಾಸ್ಟರ್: "ನಿಮ್ಮ ಸುತ್ತಲೂ ಹೆಚ್ಚು ಜನರು ನೆರೆದಿರುವಾಗ ಆತ ನಿಮ್ಮನ್ನು ನೋಡಲು ಇಚ್ಛಿಸುತ್ತಿಲ್ಲ. ನೀವು ಎಲ್ಲರ ಎದುರಿಗೂ ಆತನನ್ನು ಹೊಗಳಿಬಿಡಬಹುದು, ಮತ್ತೆ ಅದು ಆತನ ಮನೆಯವರ ಕಿವಿಗೆ ಹೋಗಿ ಬೀಳಬಹುದು ಎಂದು ಆತ ಹೆದರುತ್ತಿದ್ದಾನೆ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಇದುವರೆಗೆ ಹಾಗೆ ಮಾಡಿದ್ದರೂ ಇನ್ನು ಮುಂದೆ ಹಾಗೆ ಮಾಡೋದಿಲ್ಲ. ನೀನು ಪೂರ್ಣನಿಗೆ ಧಾರ್ಮಿಕ ವಿಷಯಗಳನ್ನು ಬೋಧಿಸುತ್ತಿರುವೆಯಂತೆ; ಅದು ಬಹಳ ಒಳ್ಳೆಯದೆ."

ಮಾಸ್ಟರ್: "ವಿದ್ಯಾಸಾಗರ ಬರೆದಿರೋ ಪಠ್ಯಪುಸ್ತಕಗಳೊಂದರಲ್ಲಿ ವಸ್ತುತಃ ಇದೇ ವಿಷಯವಾಗೇ ಬರೆದಿದೆ. ಅದು ಹೇಳುತ್ತದೆ:

ಆತ್ಮಪೂರ್ವಕವಾಗಿ ಈಶನ
ಭಕ್ತಿಯಲಿ ನೀ ಪೂಜಿಸು.—ನೆರೆ
ಹೊರೆಯನಂತೆಯೆ ಭಾವಿಸು!

ಇಂಥ ವಿಷಯಗಳನ್ನು ಮಕ್ಕಳಿಗೆ ಬೋಧಿಸಿತು ಎಂದರೆ, ಅವರ ತಂದೆತಾಯಿಗಳು ನಮ್ಮ ಮೇಲೆ ಕೋಪಿಸಿಕೊಂಡರೆ ಅದಕ್ಕೆ ನಾವೇನು ಮಾಡೋಣ?"

ಶ್ರೀರಾಮಕೃಷ್ಣರು: "ಪಠ್ಯಪುಸ್ತಕಗಳಲ್ಲಿ ಇಂಥ ವಿಷಯಗಳು ಯಥೇಚ್ಛವಾಗೇನೊ ಸಿಗುತ್ತವೆ, ಆದರೆ ಯಾರು ಅವನ್ನು ಬರೆದಿದಾರೊ, ಅವರೇ ಅವನ್ನು ರಕ್ತಗತಮಾಡಿಕೊಂಡಿರೋದಿಲ್ಲ. ಸಾಧುಸಂಗ ದೊರೆತರೆ ಅವು ರಕ್ತಗತವಾಗುತ್ತವೆ. ನಿಜವಾದ ತ್ಯಾಗೀಸಾಧು ಉಪದೇಶವೀಯುವು ದಾದರೆ, ಆಗ ಜನರು ಆತನ ಉಪದೇಶವನ್ನು ಸ್ವೀಕರಿಸುತ್ತಾರೆ. ಬರೀ ಪಂಡಿತ ಆ ವಿಷಯವಾಗಿ ಪುಸ್ತಕ ಬರೆದರೆ ಅಥವಾ ಉಪನ್ಯಾಸ ಕೊಟ್ಟರೆ ಅದು ಜನರ ಮನಸ್ಸನ್ನು ಆಕರ್ಷಿಸೋದಿಲ್ಲ. ಯಾರ ಹತ್ತಿರವೇ ಜೋನಿ ಬೆಲ್ಲದ ಗುಡಾಣ ಇರುವುದೊ, ಆತ ರೋಗಿಗೆ ಒಂದು ಪಕ್ಷ ಜೋನಿಬೆಲ್ಲ ತಿನ್ನಬೇಡ ಅಂತ ಹೇಳಿದರೆ, ರೋಗಿ ಆತನ ಮಾತಿಗೆ ಅಷ್ಟೊಂದು ಬೆಲೆ ಕೊಡೋದಿಲ್ಲ.

"ಒಳ್ಳೇದು, ಪೂರ್ಣನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು? ಆತನಿಗೆ ಭಾವ-ಗೀವ ಬರುತ್ತಿದೆಯೇನು?"

ಮಾಸ್ಟರ್: "ಭಾವಾವಸ್ಥೆಯ ಬಾಹ್ಯಚಿಹ್ನೆಗಳಾವೂ ಆತನಲ್ಲಿ ಕಂಡುಬರುತ್ತಿಲ್ಲ. ಒಂದು ದಿನ ನಿಮ್ಮ ಆ ಮಾತುಗಳನ್ನು ಆತನಿಗೆ ತಿಳಿಸಿದೆ."

ಶ್ರೀರಾಮಕೃಷ್ಣರು: "ಯಾವ ಮಾತನ್ನು?"

ಮಾಸ್ಟರ್: "ವ್ಯಕ್ತಿ 'ಚಿಕ್ಕ ಪಾತ್ರೆ' ಆಗಿದ್ದರೆ, ಆತ ಆಧ್ಯಾತ್ಮಿಕ ಭಾವಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಲಾರ; ಆದರೆ 'ದೊಡ್ಡ ಪಾತ್ರೆ' ಆಗಿದ್ದರೆ ಅಂತರ್ಯದಲ್ಲಿ ಅವನ್ನು ಯಥೇಷ್ಟವಾಗಿ ಅನುಭವಿ ಸುತ್ತಾನೆ, ಆದರೆ ಹೊರಗೆ ಮಾತ್ರ ಅವುಗಳ ಯಾವ ಕುರುಹೂ ಸಿಗೋದಿಲ್ಲ ಅಂತ ಹೇಳಿದ್ದಿರಿ. ಅದಕ್ಕೆ ಒಂದು ಉದಾಹರಣೆಯನ್ನೂ ಕೊಟ್ಟಿದ್ದಿರಿ. ಆನೆ ಒಂದು ದೊಡ್ಡ ಸರೋವರಕ್ಕೆ ಇಳಿದರೆ ಅದು ಅಲ್ಲೋಲಕಲ್ಲೋಲ ವಾಗದು; ಆದರೆ ಅದೇನಾದರು ಒಂದು ಚಿಕ್ಕ ಕಟ್ಟೆಗೆ ಇಳಿಯಿತು ಅಂದರೆ ಅದು ಬಹಳವಾಗಿ ಅಲ್ಲೋಲಕಲ್ಲೋಲವಾಗಿಬಿಡುತ್ತದೆ ಮತ್ತು ಅದರ ನೀರು ದಡಕ್ಕೆ 'ಧಪ್, ಧಪ್' ಅಂತ ಬಡಿಯಲಾರಂಭಿಸುತ್ತದೆ ಎಂದು ಹೇಳಿದ್ದಿರಿ."

ಶ್ರೀರಾಮಕೃಷ್ಣರು: "ಪೂರ್ಣನ ಭಾವ ಹೊರಕ್ಕೆ ವ್ಯಕ್ತವಾಗೋ ದಿಲ್ಲ; ಆತನ ಮಾನಸಿಕ ಸ್ಥಿತಿ ಪ್ರತ್ಯೇಕವಾದ್ದು. ಆತನ ಉಳಿದ ಲಕ್ಷಣ ಗಳು ಬಹಳ ಒಳ್ಳೆಯವು. ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ಆತನ ಕಣ್ಣುಗಳೆರಡೂ ಬಹಳ ಉಜ್ಜ್ವಲವಾಗಿವೆ ಮತ್ತು ಪ್ರಾಮುಖ್ಯವಾಗಿವೆ—ನೋಡಿದರೆ, ಕಿತ್ತುಕೊಂಡು ಹೊರಕ್ಕೆ ಬರುತ್ತಿರುವಂತೆ ಇವೆ."

ಶ್ರೀರಾಮಕೃಷ್ಣರು: "ಕಣ್ಣುಗಳೆರಡೂ ಉಜ್ಜ್ವಲವಾಗಿದ್ದು ಬಿಟ್ಟರೆಯೆ ಸಾಕಾಗದು. ಭಗವದ್ಭಕ್ತನ ಕಣ್ಣುಗಳೇ ಪ್ರತ್ಯೇಕ. ಒಳ್ಳೇದು, ಆತ ನನ್ನ ಪರಿಚಯಮಾಡಿಕೊಂಡಮೇಲೆ ಆತನಿಗೆ ಏನೇನು ಅನುಭವಾಯಿತು ಎಂಬುದನ್ನು ಆತನನ್ನು ಕೇಳಿದೀಯೇನು?"

ಮಾಸ್ಟರ್: "ಹೌದು ಅದರ ಸಂಬಂಧವಾಗಿ ನಾವು ಮಾತುಕತೆಗಳಾಡಿದೆವು. ಈಗ ಒಂದು ನಾಲ್ಕೈದು ದಿವಸಗಳಿಂದಲೂ ಹೇಳುತ್ತಿದಾನೆ, 'ಭಗವಂತನ ಧ್ಯಾನ ಮಾಡುವಾಗ—ಆತನ ನಾಮಗುಣ ಕೀರ್ತನೆ ಮಾಡುವಾಗ ನನ್ನ ಕಣ್ಣುಗಳಿಂದ ಪ್ರೇಮಾಶ್ರು ಸುರಿಯೋದು, ಶರೀರ ರೋಮಾಂಚವಾಗೋದು ಇವೇ ಮೊದಲಾದುವು ಆಗುತ್ತಿರುತ್ತಿವೆ' ಅಂತ."

ಶ್ರೀರಾಮಕೃಷ್ಣರು: "ನಿಜವಾಗಿಯೂ! ಅವನಿಗೆ ಬೇಕಾದ್ದೂ ಅದೇನೆ."

ಶ್ರೀರಾಮಕೃಷ್ಣರು ಮತ್ತು ಮಾಸ್ಟರ್ ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಬಳಿಕ ಮಾಸ್ಟರ್ ಹೇಳಿದ, "ಆತ ನಿಂತುಕೊಂಡಿದಾನೆ—" ಅಂತ.

ಶ್ರೀರಾಮಕೃಷ್ಣರು: "ಯಾರು?"

ಮಾಸ್ಟರ್: "ಪೂರ್ಣ;—ಬಹುಶಃ ತನ್ನ ಮನೆಯ ಬಾಗಿಲ ಹತ್ತಿರ ನಿಂತುಕೊಂಡಿರಬಹುದು. ನಾವು ಯಾರಾದರೂ ಆ ಮಾರ್ಗವಾಗಿ ಹೋದರೆ, ಆತ ಓಡಿ ಬಂದು ನಮಸ್ಕಾರಮಾಡಿ ಓಡಿಹೋಗಿಬಿಡುತ್ತಾನೆ."

ಶ್ರೀರಾಮಕೃಷ್ಣರು: "ಆಹಾ! ಆಹಾ!"

ಪರಮಹಂಸರು ಒಂದು ಒರಗುದಿಂಬನ್ನು ಒರಗಿಕೊಂಡು ವಿಶ್ರಮಿಸಿಕೊಳ್ಳುತ್ತಿದಾರೆ. ಮಾಸ್ಟರ್ ತನ್ನ ಸ್ಕೂಲಿನಲ್ಲಿ ಓದುತ್ತಿರೋ ಕ್ಷೀರೋದ ಎಂಬ ಒಬ್ಬ ಹನ್ನೆರಡು ವಯಸ್ಸಿನ ಹುಡುಗನನ್ನು ಜೊತೆಯಲ್ಲಿ ಕರೆದುಕೊಂಡು ಬಂದಿದಾನೆ.

ಮಾಸ್ಟರ್: "ಈತ ಬಹಳ ಒಳ್ಳೆಯ ಹುಡುಗ. ಭಗವದ್ವಿಷಯ ಗಳಲ್ಲಿ ಬಹಳ ಆಸಕ್ತನಾಗಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಕಣ್ಣುಗಳೆರಡೂ ಜಿಂಕೆ ಕಣ್ಣಿನ ಹಾಗೆ ಇವೆ."

ಆ ಹುಡುಗ ಪರಮಹಂಸರ ಪಾದಗಳನ್ನು ಸ್ಪರ್ಶಿಸಿ ಸಾಷ್ಟಾಂಗ ಪ್ರಣಾಮ ಮಾಡಿದ. ಅವರ ಪಾದಗಳನ್ನು ವಿಶೇಷವಾದ ಶ್ರದ್ಧಾಭಕ್ತಿ ಯಿಂದ ಒತ್ತಲು ಆರಂಭಿಸಿದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ರಾಖಾಲ ಈಗ ಮನೆಯಲ್ಲೆ ಇದಾನೆ. ಆತನಿಗೆ ಕುರು ಎದ್ದು ದೇಹ ಸೌಖ್ಯವಿಲ್ಲವಂತೆ. ಆತನಿಗೆ ಇನ್ನೇನು ಒಂದು ಮಗು ಆಗುವುದರಲ್ಲಿದೆ ಅಂತ ಯಾರೊ ಹೇಳಿದರು."

ಪಲ್ಟು ಮತ್ತು ವಿನೋದ ಪರಮಹಂಸರ ಎದುರಿಗೆ ಕುಳಿತಿದಾರೆ.

ಶ್ರೀರಾಮಕೃಷ್ಣರು ನಗುತ್ತ ಪಲ್ಟುವಿಗೆ: "ನೀನು ಹೋಗಿ ನಿನ್ನ ತಂದೆಗೆ ಏನು ಹೇಳಿದೆ? (ಮಾಸ್ಟರಿಗೆ) ಈತ ತಾನು ಇಲ್ಲಿಗೆ ಬರುತ್ತಿರು ವುದರ ಸಂಬಂಧವಾಗಿ ತನ್ನ ತಂದೆಗೆ ಏನೊ ಒಂದು ಜವಾಬು ಕೊಟ್ಟಿದಾ ನಂತೆ. (ಪಲ್ಟುವಿಗೆ) ನಿಮ್ಮ ತಂದೆಗೆ ಏನು ಜವಾಬು ಕೊಟ್ಟೆ?"

ಪಲ್ಟು: "ಜವಾಬು ಕೊಟ್ಟೆ, 'ಹೌದು ನಾನು ಪರಮಹಂಸರ ಹತ್ತಿರ ಹೋಗುತ್ತಿದೇನೆ; ಅದೇನು ತಪ್ಪುಕಾರ್ಯವೇನು?' ಅಂತ (ಪರಮಹಂಸರು ಮತ್ತು ಮಾಸ್ಟರ್ ನಗುತ್ತಿದಾರೆ.) ಅಂಥ ಆವಶ್ಯಕತೆ ಏನಾದರು ತೋರಿಬಂದರೆ ಇನ್ನೂ ಸ್ವಲ್ಪ ಬಿಸಿಯಾಗಿಯೆ ತಾಗಿಸಿಬಿಡು ತ್ತೇನೆ."

ಶ್ರೀರಾಮಕೃಷ್ಣರು ನಗುತ್ತ ಮಾಸ್ಟರಿಗೆ: "ಅದು ಸರಿಯಲ್ಲ. ಏನು ಮಗು, ಅಷ್ಟುದೂರ!"

ಮಾಸ್ಟರ್: "ಹೌದು, ಇದು ಸರಿಯಲ್ಲ. ಈತ ಅಷ್ಟುದೂರದ ವರೆಗೆ ಹೋಗಬಾರದು." (ಪರಮಹಂಸರು ನಗುತ್ತಿದಾರೆ.)

ಶ್ರೀರಾಮಕೃಷ್ಣರು ವಿನೋದನಿಗೆ: "ಏನು, ಸೌಖ್ಯವೆ? ನೀನು ದಕ್ಷಿಣೇಶ್ವರಕ್ಕೆ ಬರಲೇ ಇಲ್ಲವಲ್ಲ?"

ವಿನೋದ: "ಬರಬೇಕೆಂತಲೇನೊ ಯೋಚಿಸಿದೆ, ಆದರೆ ಮತ್ತೆ ಕಾಯಿಲೆಬಿದ್ದುಬಿಡವೆನೊ ಏನೊ ಎಂದು ಹೆದರಿ ಬರಲಿಲ್ಲ. ನನಗೆ ಸ್ವಲ್ಪ ಕಾಯಿಲೆ ಆಗಿತ್ತು. ಇನ್ನೂ ದೇಹಾರೋಗ್ಯ ಸರಿಯಾಗಿಲ್ಲ."

ಶ್ರೀರಾಮಕೃಷ್ಣರು: "ನನ್ನೊಡನೆ ದಕ್ಷಿಣೇಶ್ವರಕ್ಕೆ ಬಂದುಬಿಡು. ಅಲ್ಲಿ ಒಳ್ಳೇ ಹವ; ಬೇಗ ಗುಣವಾಗಿಬಿಡುತ್ತದೆ."

ಚಿಕ್ಕ ನರೇನ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರು ಕೈ ಕಾಲು ತೊಳೆದುಕೊಳ್ಳಲು ಹೊರಗಡೆಗೆ ಹೋಗುತ್ತಿದಾರೆ. ಚಿಕ್ಕ ನರೇನ ಕೈ ಒರಸೋ ಚೌಕ ತೆಗೆದುಕೊಂಡು ಪರಮಹಂಸರ ಕೈಗೆ ನೀರು ಹಾಕಲು ಅವರ ಹಿಂದೆ ಹೋಗುತ್ತಿದಾನೆ. ಮಾಸ್ಟರೂ ಅವರನ್ನು ಹಿಂಬಾಲಿಸುತ್ತಿದಾನೆ.

ಶ್ರೀರಾಮಕೃಷ್ಣರು: "ಇಂದು ಬಹಳ ಬಿಸಿಲು."

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ನೀನು ನಿನ್ನ ಆ ಇಷ್ಟಗಲ ಜಾಗದೊಳಗೆ ಹೇಗೆ ವಾಸಿಸುತ್ತಿದೀಯೆ? ಮೇಲ್ಮಹಡಿ ಬಹಳವಾಗಿ ಕಾದುಹೋಗೋದಿಲ್ಲವೆ?"

ಮಾಸ್ಟರ್: "ಹೌದು ಬಹಳವಾಗಿ ಕಾದುಬಿಡುತ್ತದೆ."

ಶ್ರೀರಾಮಕೃಷ್ಣರು: "ಇದರ ಜೊತೆಗೆ ನಿನ್ನ ಹೆಂಡತಿಗೆ ಬುದ್ಧಿ ಭ್ರಮಣೆ ಬೇರೆ ಇದೆ. ಆದ್ದರಿಂದ ಆಕೆಗೆ ಸ್ವಲ್ಪ ತಣ್ಣಗಿರೋ ಕೊಠಡಿಯನ್ನು ಕೊಡು."

ಮಾಸ್ಟರ್: "ನೀವು ಹೇಳುವುದು ಸರಿ. ಕೆಳಗಿನ ಕೊಠಡಿಯಲ್ಲಿ ಮಲಗುವಂತೆ ಹೇಳಿದೇನೆ."

ಪರಮಹಂಸರು ಮತ್ತೆ ಬಂದು ಬೈಠಕ್‌ಖಾನೆಯಲ್ಲಿ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಕಳೆದ ಭಾನುವಾರ ನೀನು ಏಕೆ ದಕ್ಷಿಣೇಶ್ವರಕ್ಕೆ ಬರಲಿಲ್ಲ?"

ಮಾಸ್ಟರ್: "ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಆಕೆಗೆ ದೇಹ ಸರಿಯಾಗಿರಲಿಲ್ಲ. ಆಕೆಯನ್ನು ನೋಡಿಕೊಳ್ಳೋಕೆ ಬೇರೆ ಯಾರೂ ಇರಲಿಲ್ಲ."

ಪರಮಹಂಸರು ನಿಮುಗೋಸ್ವಾಮಿಯ ಗಲ್ಲಿಯಲ್ಲಿರೋ ದೇವೇಂದ್ರನ ಮನೆಗೆ ಗಾಡಿಯಲ್ಲಿ ಕುಳಿತು ಹೋಗುತ್ತಿದಾರೆ. ಅವರೊಡನೆ ಚಿಕ್ಕ ನರೇನ, ಮಾಸ್ಟರ್, ಇನ್ನೂ ಒಬ್ಬಿಬ್ಬರು ಭಕ್ತರು ಇದಾರೆ. ಅವರು ಪೂರ್ಣನ

ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ. ಆತನನ್ನು ನೋಡಬೇಕೆಂದು ಬಹಳವಾಗಿ ಕಾತರರಾಗಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಆತ ಒಬ್ಬ ಮಹಾ ವ್ಯಕ್ತಿ! ಅದು ಹಾಗಿಲ್ಲದೆ ಇದ್ದರೆ, ಆತನ ಶ್ರೇಯಸ್ಸಿಗಾಗಿ ಆತ ನನ್ನ ಕೈಯಿಂದ ಜಪಮಾಡಿಸಲು ಎಲ್ಲಿ ಸಾಧ್ಯವಾಗುತ್ತಿತ್ತು? ಆದರೆ ಆತನಿಗೆ ನಾನು ಹಾಗೆ ಮಾಡಿರೋದರ ವಿಚಾರ ಗೊತ್ತಿಲ್ಲ."

ಪರಮಹಂಸರು ಪೂರ್ಣನಿಗೋಸ್ಕರ ಬೀಜಮಂತ್ರವನ್ನು ಜಪಿಸಿದರು ಎಂಬುದನ್ನು ಕೇಳಿ ಮಾಸ್ಟರ್ ಮತ್ತು ಉಳಿದ ಭಕ್ತರು ಆಶ್ಚರ್ಯಚಕಿತ ರಾದರು.

ಶ್ರೀರಾಮಕೃಷ್ಣರು: "ಇಂದು ನೀನು ಆತನನ್ನು ಇಲ್ಲಿಗೆ ಕರೆದು ಕೊಂಡು ಬಂದಿದ್ದರೆ ಚೆನ್ನಾಗಿತ್ತು. ಏಕೆ ಕರೆದುಕೊಂಡುಬರದೆ ಹೋದೆ?"

ಚಿಕ್ಕ ನರೇನ ನಗುತ್ತಿರುವುದನ್ನು ನೋಡಿ ಪರಮಹಂಸರೂ ನಗುತ್ತಿ ದಾರೆ. ಉಳಿದ ಭಕ್ತರೂ ನಗುತ್ತಿದಾರೆ. ಪರಮಹಂಸರು ಆನಂದಭರಿತ ರಾಗಿ ಚಿಕ್ಕ ನರೇನನ ಕಡೆ ಬೆರಳುಮಾಡಿ ಮಾಸ್ಟರಿಗೆ ಹೇಳುತ್ತಿದಾರೆ, "ನೋಡು! ಅಲ್ಲಿ ನೋಡು! ಏನೂ ಅರಿಯದ ಹಸುಳೆಯಂತೆ ಆತ ನಗುತ್ತಿ ರೋದನ್ನು ನೋಡು! ಇವು ಮೂರರ ಆಸಕ್ತಿ—ಆಸ್ತಿ, ಹೆಂಡತಿ, ಹಣ— ಆತನ ಹೃದಯದಲ್ಲಿ ಒಂದು ಕಿಂಚಿತ್ತೂ ಇಲ್ಲ. ಕಾಮಕಾಂಚನಾಸಕ್ತಿ ಒಮ್ಮೆಗೆಯೆ ಹೃದಯವನ್ನು ಬಿಟ್ಟು ತೊಲಗಿಹೋಗದೆ ಇದ್ದರೆ ಭಗವಂತನ ಸಾಕ್ಷಾತ್ಕಾರ ದೊರೆಯದು" ಎಂದು.

ಗಾಡಿ ದೇವೇಂದ್ರನ ಮನೆಯ ಕಡೆ ಮುಂದುವರಿಯುತ್ತಿದೆ. ಒಮ್ಮೆ ಪರಮಹಂಸರು ದಕ್ಷಿಣೇಶ್ವರದಲ್ಲಿ ದೇವೇಂದ್ರನಿಗೆ ಹೇಳಿದ್ದರು, "ಒಂದು ದಿನ ನಿನ್ನ ಮನೆಗೆ ಬರಬೇಕೆಂದಿದೇನೆ" ಅಂತ. ಆಗ ದೇವೇಂದ್ರ ಹೇಳಿದ್ದ, "ತಾವು ನಮ್ಮ ಮನೆಗೆ ಒಂದು ದಿನ ದಯಮಾಡಿಸಬೇಕೆಂದು ಪ್ರಾರ್ಥನೆಮಾಡಿಕೊಳ್ಳಲೋಸುಗವಾಗಿಯೆ ನಾನು ಇಂದು ಇಲ್ಲಿಗೆ ಬಂದೆ. ಮುಂದಿನ ಭಾನುವಾರ ತಾವು ಕೃಪೆಮಾಡಬೇಕು" ಅಂತ. ಪರಮ ಹಂಸರು ಹೇಳಿದ್ದರು, "ಆದರೆ ಒಂದು ವಿಷಯ. ನಿನಗೆ ಬರೋ ವರ ಮಾನ ಬಹಳ ಕಡಮೆ. ಹೆಚ್ಚು ಜನರನ್ನು ಊಟಕ್ಕೆ ಕರೆಯಬೇಡ. ಗಾಡಿ ಬಾಡಿಗೆ ಕೂಡ ಅಧಿಕವಾಗಿಬಿಡುತ್ತದೆ" ಅಂತ. ಆಗ ದೇವೇಂದ್ರ ನಗುತ್ತ ಹೇಳಿದ್ದ, "ವರಮಾನ ಕಡಮೆಯಾಗಿದ್ದರೂ ಹೆದರೋದು ಏಕೆ?

'ಋಣಂ ಕೃತ್ವಾ ಘೃತಂ ಪಿಬೇತ್.' ಸಾಲ ಮಾಡಿ ಚೆನ್ನಾಗಿ ತಿಂದ ರಾಯಿತು!" ಅಂತ. ಆತನ ಆ ಮಾತನ್ನು ಕೇಳಿ ಪರಮಹಂಸರು ಅಂದು ಬಹಳ ಹೊತ್ತು ನಕ್ಕಿದ್ದರು.

ಗಾಡಿ ದೇವೇಂದ್ರನ ಮನೆಯನ್ನು ತಲುಪಿತು. ಗಾಡಿಯಿಂದ ಇಳಿದೊಡನೆಯೆ ಪರಮಹಂಸರು ದೇವೇಂದ್ರನಿಗೆ ಹೇಳಿದರು, "ನನಗಾಗಿ ವಿಶೇಷವಾಗಿ ಏನೂ ತಯಾರುಮಾಡೋದು ಬೇಡ; ಸಾಮಾನ್ಯ ಅಡಿಗೆಯೆ ಯಥೇಷ್ಟ. ಇಂದು ನನ್ನ ಶರೀರಾರೋಗ್ಯ ಅಷ್ಟು ಚೆನ್ನಾಗಿಲ್ಲ" ಅಂತ.

ಪರಮಹಂಸರು ದೇವೇಂದ್ರನ ಮನೆಯ ನೆಲದ ಅಂತಸ್ತಿನಲ್ಲಿದ್ದ ದಿವಾನ್‌ಖಾನೆಯಲ್ಲಿ ಕುಳಿತಿದಾರೆ. ಭಕ್ತರು ಅವರ ಸುತ್ತಲೂ ಕುಳಿತಿದಾರೆ. ಆಗಲೆ ಸಾಯಂಕಾಲವಾಗಿಬಿಟ್ಟಿದೆ. ಕೊಠಡಿಯಲ್ಲಿ ದೀಪ ಉರಿಯುತ್ತಿದೆ. ಚಿಕ್ಕ ನರೇನ, ರಾಮು, ಮಾಸ್ಟರ್, ಗಿರೀಶ, ದೇವೇಂದ್ರ, ಅಕ್ಷಯ, ಉಪೇಂದ್ರ ಮತ್ತು ಇನ್ನೂ ಕೆಲವರು ಕೊಠಡಿಯಲ್ಲಿ ಕುಳಿತಿದಾರೆ. ಅವರ ದೃಷ್ಟಿ ಒಬ್ಬ ಯುವಕನ ಮೇಲೆ ಬಿದ್ದೊಡನೆಯೆ, ಅವರ ಮುಖದಿಂದ ಆನಂದ ಹೊರಸೂಸಲಾರಂಭಿಸಿತು. ಆತನ ಕಡೆ ಬೆರಳು ಮಾಡಿ ಪರಮಹಂಸರು ಭಕ್ತರಿಗೆ ಹೇಳುತ್ತಿದಾರೆ, "ಮನುಷ್ಯನನ್ನು ಸಂಸಾರಕ್ಕೆ ಕಟ್ಟಿಹಾಕುವ ಇವು ಮೂರು — ಜಮೀನು, ಹೆಂಡತಿ, ಹಣದ ಆಸಕ್ತಿ ಈತನಲ್ಲಿ ಒಂದು ಕಿಂಚಿತ್ತೂ ಇಲ್ಲ. ಇವು ಮೂರರ ಮೇಲೆ ಮನಸ್ಸನ್ನು ಇಟ್ಟಿತು ಅಂದರೆ, ಅದನ್ನು ಮತ್ತೆ ಭಗವಂತನ ಕಡೆ ತಿರುಗಿಸಿಡಲಾಗೋದಿಲ್ಲ. ಈತನಿಗೆ ಒಂದು ಅಲೌಕಿಕ ದರ್ಶನ ಕೂಡ ದೊರೆತಿರುವುದಂತೆ! (ಆ ಯುವಕಭಕ್ತನಿಗೆ) ಹೇಳು, ಏನನ್ನು ಕಂಡೆ?" ಎಂಬುದಾಗಿ.

ಯುವಕಭಕ್ತ ನಗುತ್ತ: "ನಾನು ಗೊಬ್ಬರದ ರಾಶಿಯೊಂದನ್ನು ಕಂಡೆ. ಕೆಲವರು ಅದರಮೇಲೆ ಕುಳಿತುಕೊಂಡಿದ್ದರು, ಇನ್ನು ಕೆಲವರು ಅದನ್ನು ಬಿಟ್ಟು ಸ್ವಲ್ಪ ದೂರದಲ್ಲಿ ಕುಳಿತುಕೊಂಡಿದ್ದರು."

ಶ್ರೀರಾಮಕೃಷ್ಣರು: "ಈತ ಕಂಡದ್ದು ಭಗವಂತನನ್ನು ಮರೆತ ಸಂಸಾರಿಗಳು ಯಾವ ದುರ್ದಶೆಗೆ ಇಳಿಯುತ್ತಾರೆ ಎಂಬುದನ್ನು ಮತ್ತು ಸಂಸಾರಾಸಕ್ತಿ ಈತನ ಮನಸ್ಸನ್ನು ಬಿಟ್ಟು ಹೊರಟುಹೋಗುತ್ತಿದೆ ಎಂಬುದನ್ನು ಸೂಚಿಸುತ್ತಿದೆ. ಕಾಮಕಾಂಚನಾಸಕ್ತಿ ಮನಸ್ಸನ್ನು ಬಿಟ್ಟು ತೊಲಗಿಹೋಗಿಬಿಟ್ಟಿತು ಅಂದರೆ ಇನ್ನು ಯೋಚನೆ ಏಕೆ? ಏನಾಶ್ಚರ್ಯ

ಇದು ! ನಾನು ಎಷ್ಟೊಂದು ಜಪ ತಪ ಮಾಡಿದ ಮೇಲೆ ಆ ಆಸಕ್ತಿ ನನ್ನನ್ನು ಬಿಟ್ಟುತೊಲಗಿತು; ಈತ ಆದರಿಂದ ಎಷ್ಟು ಬೇಗ ಮುಕ್ತನಾಗಿ ಹೋಗಿ ಬಿಟ್ಟಿದಾನೆ! ಕಾಮಾಸಕ್ತಿ ಒಮ್ಮೆಗೆಯೆ ಬಿಟ್ಟುತೊಲಗಿಹೋಗೋದು ಏನು ಸಾಮಾನ್ಯ ವ್ಯಾಪಾರವೆ? ನಾನು ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿದ ಆರು ತಿಂಗಳನಂತರ ನನಗೂ ಇದರ ಸಂಬಂಧವಾದ ಒಂದು ವಕ್ರ ಭಾವನೆ ಬಂದಿತು. ಆಗ ಒಂದು ಮರದ ಕೆಳಗೆ ಮಲಗಿ ಸುಮ್ಮನೆ ಅಳಲಾರಂಭಿಸಿದೆ. ನಾನು ಭಗವತಿಗೆ ಮೊರೆಯಿಟ್ಟೆ, 'ನೋಡು ತಾಯೆ, ನನಗೇನಾದರು ಆ ದುಸ್ಥಿತಿ ಬಂದಿತು ಅಂದರೆ ಕತ್ತಿ ತೆಗೆದುಕೊಂಡು ಕತ್ತು ಕತ್ತರಿಸಿಕೊಂಡುಬಿಡುತ್ತೇನೆ' ಅಂತ.

(ಭಕ್ತರಿಗೆ) "ಕಾಮಕಾಂಚನಾಸಕ್ತಿ ಮನಸ್ಸನ್ನು ಬಿಟ್ಟು ತೊಲಗಿ ಹೋಯಿತು ಅಂದರೆ ಇನ್ನು ತಡೆಯಾಗಿ ಉಳಿದುಕೊಂಡಿರೋದು ಬೇರೆ ಏನಿದೆ? ಬಳಿಕ ಕೇವಲ ಬ್ರಹ್ಮಾನಂದ, ಬ್ರಹ್ಮಾನಂದ."

ಶಶಿ ಆಗತಾನೆ ಒಂದು ಕೆಲವು ದಿವಸಗಳಿಂದ ಪರಮಹಂಸರ ಹತ್ತಿರ ಬರೋದು ಹೋಗೋದು ಮಾಡುತ್ತಿದಾನೆ. ಆತ ವಿದ್ಯಾಸಾಗರನ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಯ ಮೊದಲನೆ ತರಗತಿಯಲ್ಲಿ ಓದುತ್ತಿದಾನೆ. ಪರಮಹಂಸರು ಈಗ ಆತನ ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ನೋಡಿ, ಅಲ್ಲಿ ಹೋಗುತ್ತಿದಾನಲ್ಲ ಆ ಹುಡುಗ, ಆತನಿಗೆ ಇನ್ನೂ ಸ್ವಲ್ಪ ಕಾಲ ಹಣದ ಮೇಲಿನ ಆಸಕ್ತಿ ಇರುತ್ತದೆ. ಆದರೆ ಬೇರೆ ಕೆಲವರಿದಾರೆ ಅವರಿಗೆ ಆ ಭಾವನೆಯೇ ಇಲ್ಲ. ಇಲ್ಲಿಗೆ ಬರೋ ಕೆಲವು ಯುವಕರು ವಿವಾಹವಾಗೋದಿಲ್ಲ."

ಭಕ್ತರು ಪರಮಹಂಸರ ಈ ಮಾತನ್ನು ನಿಶ್ಶಬ್ದರಾಗಿ ಕುಳಿತು ಕೇಳುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಮನಸ್ಸಿನಿಂದ ಕಾಮಕಾಂಚನಾಸಕ್ತಿ ಸಂಪೂರ್ಣವಾಗಿ ಬಿಟ್ಟು ತೊಲಗಿ ಹೋಗದೆ ಇದ್ದರೆ, ಅವತಾರ ಪುರುಷರನ್ನು ಗುರುತಿಸಲು ಮನಸ್ಸಿಗೆ ಬಹಳ ಕಷ್ಟವಾಗಿ ತೋರುತ್ತದೆ. ಯಾರೊ ಒಬ್ಬ ಒಂದು ವಜ್ರವನ್ನು ತೆಗೆದುಕೊಂಡುಹೋಗಿ ಒಬ್ಬ ಬದನೆ ಕಾಯಿ ಮಾರುವವನನ್ನು ಕೇಳಿದ, 'ಇದಕ್ಕೆ ಬೆಲೆ ಎಷ್ಟು?' ಅಂತ. ಆತ ಹೇಳಿದ, 'ನಾನು ಇದಕ್ಕೆ ಒಂಬತ್ತು ಸೇರು ಬದನೆ ಕಾಯಿ ಮಾತ್ರ

ಕೊಡಬಲ್ಲೆ. ಅದರ ಮೇಲೆ ಒಂದು ಕಾಯನ್ನೂ ಅಧಿಕವಾಗಿ ಕೊಡಲಾರೆ' ಅಂತ."

ಇದನ್ನು ಕೇಳಿ ಭಕ್ತರೆಲ್ಲರೂ ನಗಲಾರಂಭಿಸಿದರು. ಚಿಕ್ಕ ನರೇನ ಬಹಳ ಗಟ್ಟಿಯಾಗಿ ನಗಲಾರಂಭಿಸಿದ. ಚಿಕ್ಕ ನರೇನ ಇದರ ಅರ್ಥವನ್ನು ಒಡನೆಯೆ ಗ್ರಹಿಸಿಬಿಟ್ಟಿದಾನೆ ಎಂಬ ಭಾವನೆ ಪರಮಹಂಸರಿಗೆ ಬಂದಿತು.

ಶ್ರೀರಾಮಕೃಷ್ಣರು: "ಈತನದು ಎಂಥಾ ಚುರುಕು ಬುದ್ಧಿ! ತೋತಾಪುರಿ ಕೂಡ ಇದೇ ರೀತಿಯಾಗಿ ವಿದ್ಯುದ್ವೇಗದಲ್ಲಿ ಗೀತೆ, ಭಾಗವತ ಮತ್ತಿತರ ಶಾಸ್ತ್ರಗಳ ಸಾರವನ್ನು ಗ್ರಹಿಸಿಬಿಡುತ್ತಿದ್ದ.

"ಬಾಲ್ಯದಿಂದಲೆ ಕಾಮಕಾಂಚನ ತ್ಯಾಗ! ಬಹಳ ಅದ್ಭುತವಾದ್ದೆ! ಇದು ಎಲ್ಲೋ ಕೆಲವರಿಗೆ ದೊರೆಯುವ ಭಾಗ್ಯ ಮಾತ್ರ. ಈ ರೀತಿಯಾದ ತ್ಯಾಗವಿಲ್ಲದವನನ್ನು ಆಲಿಕಲ್ಲು ತಾಕಿದ ಮಾವಿನ ಹಣ್ಣಿಗೆ ಹೋಲಿಸಬಹುದು. ಅದನ್ನು ದೇವರಿಗಂತು ಅರ್ಪಿಸೋಕೆ ಆಗೋದೇ ಇಲ್ಲ, ಜನರೂ ಕೂಡ ಹಿಂಜರಿಯುತ್ತಾರೆ ಅದನ್ನು ತಿನ್ನೋಕೆ.

"ಯೌವನದಲ್ಲಿ ಅನೇಕ ದುಷ್ಕಾರ್ಯಗಳನ್ನು ಮಾಡಿ ವೃದ್ಧಾಪ್ಯದಲ್ಲಿ ಭಗವನ್ನಾಮಜಪದಲ್ಲಿ ಕಾಲ ಕಳೆಯೋ ಜನರೂ ಈ ಜಗತ್ತಿನಲ್ಲಿ ಇದಾರೆ. ಇವರು ಅಧಮರಲ್ಲಿ ಮೇಲು.

"ಯಾರೋ ಒಬ್ಬ ಮಲ್ಲಿಕನ ತಾಯಿ ಒಂದು ದೊಡ್ಡ ಮನೆತನಕ್ಕೆ ಸೇರಿದವಳು. ಆಕೆ ವೇಶ್ಯೆಯರ ಸಂಬಂಧವಾಗಿ ನನ್ನನ್ನು ಕೇಳಿದಳು, 'ಏನು, ಮುಕ್ತರಾಗಲು ಅವರಿಗೆ ಯಾವ ಮಾರ್ಗವೂ ಇಲ್ಲವೇನು?' ಅಂತ. ಆಕೆ ಹಿಂದೆ ತಾನೇ ಆ ವಿಧವಾದ ಜೀವನವನ್ನು ನಡೆಸಿದ್ದಳು; ಅದಕ್ಕಾಗಿಯೇ ಅವಳ ಬಾಯಿಂದ ಆ ಪ್ರಶ್ನೆ. ನಾನು ಆಕೆಗೆ ಹೇಳಿದೆ, 'ಹೌದು, ಸಾಧ್ಯ. ಅವರಿಗೂ ದೊರೆಯುತ್ತದೆ. ಆದರೆ, ಅವರು ಮತ್ತೆ ಅಂಥ ಕಾರ್ಯಗಳನ್ನು ಇನ್ನೆಂದಿಗೂ ಮಾಡೋದಿಲ್ಲ ಅಂತ ಶಪಥಮಾಡಿ ಹೃತ್ಪೂರ್ವಕವಾದ ವ್ಯಾಕುಲತೆಯಿಂದ ಆತನ ಸಾಕ್ಷಾತ್ಕಾರಕ್ಕಾಗಿ ಅತ್ತರೆ ಮಾತ್ರ. ಬರಿದೆ ಹರಿನಾಮವನ್ನು ಜಪಿಸಿದರೆ ಏನಾಗುತ್ತದೆ, ಹೃತ್ಪೂರ್ವಕವಾಗಿ ಅಳಬೇಕು."

**ಈಗ ತಾಳಮೃದಂಗಗಳೊಡನೆ ಸಂಕೀರ್ತನೆ ಆರಂಭವಾಯಿತು. ಕೇಶವಭಾರತಿಯಿಂದ ಗೌರಾಂಗ ಸನ್ಯಾಸ ಸ್ವೀಕರಿಸಿದುದರ ಸಂಬಂಧವಾಗಿ ಕೀರ್ತನಗಾರ ಹಾಡುತ್ತಿದಾನೆ.**

ಓ ಎಂಥ ನೋಟವ ಕಂಡೆನು !
ಕೇಶವಭಾರತಿಯ ಕುಟಿಯೊಳಗೆ, ನಾ-
ನೆಂಥ ನೋಟವ ಕಂಡೆನು !

ಅಲ್ಲಿ ಶ್ರೀ ಗೌರಾಂಗದೇವನು
ಮತ್ತಮಾತಂಗದೊಲು ನರ್ತಿಸಿ
ದಿವ್ಯ ಮಧುವನು ಕುಡಿದು ಮರುಳಾ-
ಗುತ್ತ ಕಂಬನಿಗರೆಯುತ,
ಹೊರಳಿ, ಕಂಠೀರವದಿ ಹರಿಯನು
ನುತಿಸಿ ದಿವವನು ತಿವಿಯುತ
ದಿವ್ಯಲೀಲೆಯೊಳಿದ್ದನು !

ಇಂಥ ಪದವನು ಪಡೆದರೂ, ಅವ-
ನೆಂತು ಮನೆಮನೆಬಾಗಿಲಲಿ, ಅದೊ
ಮನುಜರೊಲ್ಮೆಯ ಬೇಡಿ ನಡೆವನು
ತಾನು ದೇವರ ದಾಸನೆನ್ನುವ
ಅರಿವ ಪಡೆಯುವ ಬಗೆಯಲಿ !
ಎಂಥ ನಿಷ್ಠುರವಾದ ಎದೆಯೂ
ಕರಗಿ ಹೋಗಿದೆ, ಯೋಗಿವೇಷದೊ-
ಳಿರುವ ಶ್ರೀ ಗೌರಾಂಗದೇವನ
ಮುಖವ ಕಂಡಾಕ್ಷಣದಲಿ !

ಇಂಥ ಶ್ರೀ ಗೌರಾಂಗದೇವನ
ದಾಸನಾಗುವ ಪುಣ್ಯವೆಂದಿಗೆ,
ಎನುವನಿದೊ ಈ ಪ್ರೇಮದಾಸನು
ಗೌರಾಂಗದೇವನ ಭಕ್ತನು !

ಪರಮಹಂಸರು ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದಹಾಗೆಯೇ ಭಾವಾವಿಷ್ಟರಾಗಿದಾರೆ. ಶ್ರೀಕೃಷ್ಣನ ವಿರಹದಿಂದ ಬಹಳವಾಗಿ ದುಃಖಕ್ಕೀಡಾಗಿರುವ ಒಬ್ಬ ವ್ರಜಗೋಪಿಯ ಮಾನಸಿಕ ಅವಸ್ಥೆಯನ್ನು ಗಾಯಕ ವರ್ಣಿಸುತ್ತಿದಾನೆ. ಆಕೆ ಮಾಧವಿ ಲತಾಗೃಹದಲ್ಲಿ ಶ್ರೀಕೃಷ್ಣನನ್ನು ಹುಡುಕುತ್ತಿದಾಳೆ.

ನನ್ನಾಮಾಧವನನು ಕೊಡು ಮಾಧವಿ ನನಗೆ.
ನನ್ನೊಲವನು, ನನ್ನಿನಿಯನ ಕೊಡು ನನಗೆ.
ನೀನವನನು ಕೊಟ್ಟರೆ, ದಾಸಿಯವೋಲಿರುವೆನು, ನಾ
ನಿನ್ನಯ ಮನೆಯೊಳಗೆ!

ನಿನ್ನೆದೆಯೊಳಗವನನ್ನೇತಕೆ ಬಚ್ಚಿಟ್ಟಹೆ ಮಾಧವಿ?
ಕೊಡು ನನ್ನಿನಿಯನ ನನಗೆ.
ನಾ ಮುಗ್ಧಳು; ನನ್ನೊಳಗೇತಕೆ
ನಿನಗೀತೆರದ ಹಗೆ?

ಮೀನಿಗೆ ನೀರಂತಂತೆಯೆ
ನನಗವನೇ ಆಧಾರ!
ಅವನಿಲ್ಲದೆ, ಜೀವಿಸೆ ನಾ,
ಜೀವನವೇ ನಿಸ್ಸಾರ!

ಓ, ಕೊಡು ಮಾಧವಿ, ಬೇಡುವೆ
ನನ್ನಾಮಾಧವನನು ನನಗೆ
ಕೊಡು ಹಿಂದಕೆ
ನನ್ನಿನಿಯನ ನನಗೆ!

ಆಗಾಗ ಪರಮಹಂಸರು ಆಶುಕವಿತೆಗಳನ್ನು ಮಾಡುತ್ತ ಗಾಯಕನೊಡನೆ ಹಾಡಿದರು:

ಪ್ರಾಣವಲ್ಲಭ ಶ್ಯಾಮಸುಂದರನು ನೆಲಸಿರುವ
ಆ ಮಧುರೆಗಿಲ್ಲಿಂದ ಎನಿತು ದೂರ?

ಪರಮಹಂಸರು ಸಮಾಧಿಸ್ಥರಾಗಿದಾರೆ. ಅವರ ದೇಹ ಸ್ಪಂದಹೀನವಾಗಿದೆ. ಆ ಸ್ಥಿತಿಯಲ್ಲೇ ಅವರು ಬಹಳ ಹೊತ್ತು ಇದ್ದರು.

ಈಗ ಪರಮಹಂಸರು ಒಂದು ಕಿಂಚಿತ್ ಪ್ರಕೃತಿಸ್ಥರಾಗಿದಾರೆ. ಇನ್ನೂ ಭಾವಾವಿಷ್ಟರಾಗಿಯೆ, ಕೆಲವು ವೇಳೆ ಭಕ್ತರನ್ನು ಸಂಬೋಧಿಸಿ, ಇನ್ನು ಕೆಲವು ವೇಳೆ ಭಗವತಿಯನ್ನು ಸಂಬೋಧಿಸಿ ಮಾತನಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಹೇ ತಾಯಿ, ನೀನು ಆತನನ್ನು ಆಕರ್ಷಿಸಿಬಿಡು. ನಾನು ಆತನಿಗಾಗಿ ಇನ್ನು ಹೆಚ್ಚು ಶ್ರಮಪಡಲಾರೆ. (ಮಾಸ್ಟರಿಗೆ) ನನ್ನ ಮನಸ್ಸು ನಿನ್ನ ಬಂಧುವಿನ ಕಡೆ ಸ್ವಲ್ಪ ಎಳೆಯುತ್ತಿದೆ.

(ಗಿರೀಶನಿಗೆ) "ನೀನು ಬಹಳವಾಗಿ ಬಯ್ಯೋದು ಮತ್ತು ನಿಂದ ನೀಯವಾದ ಮಾತುಗಳನ್ನಾಡೋದು ಉಂಟು; ಅದಕ್ಕಾಗಿ ನೀನೇನು ಚಿಂತಿಸಬೇಕಾಗಿಲ್ಲ. ಅವೆಲ್ಲ ಹೊರಕ್ಕೆ ಬಂದುಬಿಡುವುದೆ ಮೇಲು. ಕೆಲ ಕೆಲವರ ದೇಹಕ್ಕೆ ಕೆಟ್ಟ ರಕ್ತ ಸೇರಿಕೊಂಡು ಅದು ಅವರಿಗೆ ಏನೇನೊ ರೋಗವನ್ನು ತರುತ್ತದೆ. ಅದು ಹೊರಕ್ಕೆ ಬಂದಷ್ಟೂ ಮೇಲು. ಸೌದೆ ಉರಿಯೋವಾಗ 'ಚಟಪಟ' ಅಂತ ಶಬ್ದ ಮಾಡುತ್ತದೆ; ಉರಿದು ಮುಗಿದ ಮೇಲೆ ಯಾವ ಶಬ್ದವೂ ಇರದು. ಹಾಗೇನೆ ಮನುಷ್ಯನ ಉಪಾಧಿ ನಾಶವಾಗುವಾಗ ಅದೂ ಒಂದು ಸ್ವಲ್ಪ ಗಲಾಟೆ, ಶಬ್ದ ಮಾಡುತ್ತದೆ; ಬಳಿಕ ಶಾಂತಿ.

"ನೀನು ದಿವಸ ದಿವಸಕ್ಕೂ ಶುದ್ಧ ಶುದ್ಧನಾಗುತ್ತಾ ಮುಂದುವರಿ ಯುವೆ. ದಿನಂಪ್ರತಿದಿನ ನಿನಗೆ ಬಹಳ ಬಹಳವಾಗಿ ಉನ್ನತಿ ಬರುತ್ತಾ ಹೋಗುತ್ತದೆ. ಇದನ್ನು ನೋಡಿ ಜನರು ಸುಮ್ಮನೆ ಅಚ್ಚರಿಗೊಳ್ಳುತ್ತಾರೆ.

"ನಾನು ಇನ್ನು ಅನೇಕ ವೇಳೆ ಬರಲಾರೆ; ಅದಕ್ಕಾಗಿ ನೀನು ಯೋಚಿಸಬೇಕಾಗಿಲ್ಲ. ಯಾರ ಸಹಾಯವೂ ಇಲ್ಲದೆ ನಿನಗೆ ದೊರೆತು ಬಿಡುತ್ತದೆ."

ಪರಮಹಂಸರ ಭಾವ ಮತ್ತೆ ಗಾಢವಾಯಿತು. ಮತ್ತೆ ಭಗವತಿ ಯೊಡನೆ ಮಾತನಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಹೇ ತಾಯಿ, ಯಾರು ಆಗಲೆ ಒಳ್ಳೆಯವ ನಾಗಿರುವನೊ ಆತನನ್ನು ಒಳ್ಳೆಯವನನ್ನಾಗಿ ಮಾಡೋದರಲ್ಲಿ ವಿಶೇಷತೆ ಏನಿದೆ? ಆಗಲೇ ಸತ್ತವನನ್ನು ಕೊಲ್ಲೋದರಿಂದ ದೊರಕೋ ಫಲವೇನು? ಯಾರು ಗಟ್ಟಿಮುಟ್ಟಾಗಿ ನಿಂತುಕೊಂಡಿದ್ದಾನೊ ಆತನನ್ನು ನೀನು ಕೊಲ್ಲೋದಾದರೆ, ಆಗ ತಾನೆ ನಿನ್ನ ಶೌರ್ಯ ಏನು ಎಂಬುದು ಗೊತ್ತಾ ಗೋದು."

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಥಟ್ಟನೆ ಉಚ್ಚ ಕಂಠದಿಂದ ಹೇಳುತ್ತಿದ್ದಾರೆ, "ದಕ್ಷಿಣೇಶ್ವರದಿಂದ ಬಂದಿದ್ದೇನೆ. ಹೋಗು ತ್ತೇನೆ ತಾಯೇ!" ಅಂತ. ಇದು, ಒಂದು ಚಿಕ್ಕ ಮಗು ದೂರದಿಂದ ಬಂದ ತನ್ನ ತಾಯಿ ಕರೆಗೆ ಉತ್ತರ ಕೊಟ್ಟಂತೆ ಇತ್ತು. ಮತ್ತೆ ಅವರ ದೇಹ ಸ್ಪಂದಹೀನವಾಗಿ ತೋರುತ್ತಿದೆ. ಸಮಾಧಿಸ್ಥರಾಗಿದ್ದಾರೆ. ಭಕ್ತ ರೆಲ್ಲಾ ಎವೆಯಿಕ್ಕದೆ ಅವರನ್ನು ನೋಡುತ್ತಾ ಕುಳಿತಿದ್ದಾರೆ. ಇನ್ನೂ

ಭಾವಾವಿಷ್ಟರಾಗಿಯೆ ಪರಮಹಂಸರು ಹೇಳುತ್ತಿದಾರೆ, "ನನಗೆ ಇನ್ನು ಪೂರಿ ಬೇಡ" ಅಂತ. ಅಕ್ಕಪಕ್ಕದಿಂದ ಬಂದಿದ್ದ ಒಬ್ಬಿಬ್ಬರು ಗೋಸ್ವಾಮಿಗಳು ಈಗ ಎದ್ದು ಹೊರಟುಹೋದರು.

ಪರಮಹಂಸರು ಭಕ್ತರೊಡನೆ ಬಹಳ ಆನಂದದಿಂದ ಮಾತುಕತೆಗಳಾಡುತ್ತಿದಾರೆ. ಇದು ಚೈತ್ರಮಾಸವಾಗಿದ್ದುದರಿಂದ ಬಹಳ ಧಗೆ. ದೇವೇಂದ್ರ ಐಸ್‌ಕ್ರೀಮ್ ತಯಾರಿಸಿದಾನೆ. ಅದನ್ನು ಆತ ಪರಮಹಂಸರಿಗೂ ಮತ್ತು ಭಕ್ತರಿಗೂ ಹಂಚಿದ. ಭಕ್ತರೆಲ್ಲಾ ಅದನ್ನು ಬಹಳ ಆನಂದದಿಂದ ತಿನ್ನುತ್ತಿದಾರೆ. ಮಾಸ್ಟರ್ ಮೆತ್ತಗೆ ಹೇಳಿದ, "ಇನ್ನು ಸ್ವಲ್ಪ ಇದ್ದರೆ" ಅಂತ. ಎಲ್ಲರೂ ನಗಲಾರಂಭಿಸಿದರು. ಪರಮಹಂಸರಿಗೆ ಐಸ್‌ಕ್ರೀಮನ್ನು ನೋಡಿಯೆ ಬಾಲಕನ ಹಾಗೆ ಆನಂದ ಉಂಟಾಗಿಬಿಟ್ಟಿದೆ.

ಶ್ರೀರಾಮಕೃಷ್ಣರು: "ಕೀರ್ತನೆ ಬಹಳ ಚೆನ್ನಾಗಿ ಆಯಿತು. ಗೋಪಿಯರ ಮಾನಸಿಕ ಅವಸ್ಥೆಯ ಭಾಗವನ್ನು ಆತ ಬಹಳ ಚೆನ್ನಾಗಿ ಹಾಡಿದ: 'ನನ್ನಾ ಮಾಧವನನು ಕೊಡು ಮಾಧವಿ ನನಗೆ!' ಗೋಪಿಯರದು ಪ್ರೇಮೋನ್ಮಾದ ಅವಸ್ಥೆ. ಏನಾಶ್ಚರ್ಯ ಇದು, ಕೃಷ್ಣನಿಗಾಗಿ ಪ್ರೇಮೋನ್ಮತ್ತರಾಗೋದು!"

ಒಬ್ಬ ಭಕ್ತ ಇನ್ನೊಬ್ಬ ಭಕ್ತನನ್ನು ತೋರಿಸಿ ಹೇಳಿದ, "ಈತನದು ಸಖೀಭಾವ—ಗೋಪಿಯರ ಭಾವ" ಅಂತ.

ರಾಮ: "ಇಲ್ಲ ಈತನಿಗೆ ಎರಡೂ ಉಂಟು—ಮಧುರ ಭಾವ ಮತ್ತು ಜ್ಞಾನದ ಕಠೋರ ಭಾವ."

ಶ್ರೀರಾಮಕೃಷ್ಣರು: "ಏನು ನೀವು ಮಾತಾಡಿಕೊಳ್ಳುತ್ತಿರೋದು?"

ಪರಮಹಂಸರು ಈಗ ಸುರೇಂದ್ರನ ಮಾತು ಎತ್ತಿದರು.

ರಾಮ: "ನಾನು ಆತನಿಗೆ ತಿಳಿಸಿದ್ದೆ, ಆದರೆ ಏಕೊ ಬರಲಿಲ್ಲ."

ಶ್ರೀರಾಮಕೃಷ್ಣರು: "ಆಫೀಸಿನಿಂದ ಹಿಂದಿರುಗುವುದರಲ್ಲಿಯೆ ಆತ ಸುಸ್ತಾಗಿಬಿಟ್ಟಿರುತ್ತಾನೆ."

ಒಬ್ಬ ಭಕ್ತ: "ರಾಮಬಾಬು ತಮ್ಮ ವಿಷಯವಾಗಿ ಬರೆಯುತ್ತಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಏನು ಬರೆಯುತ್ತಿದಾನೆ?"

ಭಕ್ತ: “‘ಪರಮಹಂಸರ ಭಕ್ತಿ’ ಅಂತ ಒಂದು ಲೇಖನ ಬರೆಯುತ್ತಿದಾನೆ.”

ಶ್ರೀರಾಮಕೃಷ್ಣರು ನಗುತ್ತ: “ಮತ್ತೆ ಇನ್ನೇನು ಬೇಕು! ಅದು ರಾಮನನ್ನು ಸುಪ್ರಸಿದ್ಧನನ್ನಾಗಿ ಮಾಡಿಬಿಡುತ್ತದೆ.”

ಗಿರೀಶ ನಗುತ್ತ: “ಆತ ತಮ್ಮ ಶಿಷ್ಯ ಅಂತ ಹೇಳಿಕೋತಿದಾನೆ.”

ಶ್ರೀರಾಮಕೃಷ್ಣರು: “ನನಗೆ ಶಿಷ್ಯ-ಗಿಷ್ಯ ಯಾರೂ ಇಲ್ಲ. ನಾನು ರಾಮನ ದಾಸಾನುದಾಸ.”

ಅಕ್ಕಪಕ್ಕದವರು ಯಾರೊ ಕೆಲವರು ಬಂದಿದ್ದರು; ಅವರ ನಡೆ ನುಡಿ ವ್ಯವಹಾರ ಪರಮಹಂಸರಿಗೆ ಸರಿದೋರಿಬರಲಿಲ್ಲ. ಆಗ ಅವರು ಹೇಳಿದರು, “ಇದೆಂಥ ಜಾಗ ಇದು? ಒಬ್ಬ ಧಾರ್ಮಿಕನೂ ನನ್ನ ಕಣ್ಣಿಗೆ ಬೀಳುತ್ತಿಲ್ಲವಲ್ಲ!” ಅಂತ.

ಪರಮಹಂಸರಿಗೆ ಫಲಾಹಾರಮಾಡಿಸಲು ದೇವೇಂದ್ರ ಅವರನ್ನು ಮನೆಯ ಒಳಕ್ಕೆ ಕರೆದುಕೊಂಡು ಹೋದ. ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ಹಸನ್ಮುಖರಾಗಿ ಮತ್ತೆ ದಿವಾನ್‌ಖಾನೆಗೆ ಹಿಂದಿರುಗಿ ಬಂದು ಕುಳಿತುಕೊಂಡರು. ಭಕ್ತರೆಲ್ಲ ಅವರ ಸುತ್ತಲೂ ಕುಳಿತುಕೊಂಡರು. ಉಪೇಂದ್ರ ಮತ್ತು ಅಕ್ಷಯ ಅವರ ಎರಡು ಪಾರ್ಶ್ವಗಳಲ್ಲಿಯೂ ಕುಳಿತು ಅವರ ಪಾದಗಳನ್ನು ಒತ್ತಲಾರಂಭಿಸಿದರು. ಪರಮಹಂಸರು ದೇವೇಂದ್ರನ ಮನೆಯ ಹೆಂಗಸರ ಸಂಬಂಧವಾಗಿ ಹೇಳುತ್ತಿದಾರೆ, “ಒಳ್ಳೆ ಗುಣಶಾಲಿ ಹೆಂಗಸರು! ಇವರು ಹಳ್ಳಿಯ ಹೆಂಗಸರಲ್ಲವೆ; ಆದ್ದರಿಂದ ಅತ್ಯಂತ ಒಳ್ಳೆಯ ಭಕ್ತಿಮತಿಯರು!” ಅಂತ.

ಪರಮಹಂಸರು ಆತ್ಮಾರಾಮರು. ಆನಂದದಿಂದ ತುಂಬಿತುಳುಕಾಡುತ್ತ ಹಾಡಲಾರಂಭಿಸಿದಾರೆ:

ಸಹಜಮಾನಸನಾಗದಿರೆ ನೀ
ಸಹಜಸುಂದರ ದೇವನೊಲುಮೆಯ
ಗಳಿಪುದೆಂತೀ ಲೋಕದಿ?

ಮತ್ತೆ ಹಾಡಿದರು:

ಭಿಕ್ಷಾಪಾತ್ರೆಯ ಹಿಡಿದು ಸುತ್ತುತಿಹ
ಓ ಪರಿವ್ರಾಜಕ, ನಿಲ್ಲು ಒಂದು ಚಣ ಬಾಗಿಲಲಿ.

ನಿನ್ನ ಕಾಂತಿಯುತ ಮುಖಮಂಡಲವನು
ನೋಡುವೆನೊಮ್ಮೆಗೆ ಸನಿಹದಲಿ.

ಮತ್ತೆ ಹಾಡಿದರು :

ನಿರಂತರವು ಹರಿಯೊಲವಿನೊಳದ್ದಿದ
ಫಕೀರನೊಬ್ಬನು ಬಂದಿಹನು.
ಹಿಂದೂ ಮುಸ್ಲಿಮರೊಂದೇ ಎನ್ನುವ
ಪವಿತ್ರ ಭಾವದಿ ನೋಡುವನು.

ಗಿರೀಶ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಪರಮಹಂಸರೂ ಗಿರೀಶನಿಗೆ ನಮಸ್ಕಾರ ಮಾಡಿದರು. ದೇವೇಂದ್ರಾದಿ ಭಕ್ತರು ಪರಮಹಂಸರನ್ನು ಗಾಡಿಗೆ ಹತ್ತಿಸಿದರು. ತನ್ನ ಮನೆ ಅಂಗಳ ದಲ್ಲಿ ಹಾಕಿದ್ದ ಒಂದು ಬೆಂಚಿನ ಮೇಲೆ ನೆರೆಮನೆಯವನೊಬ್ಬ ಇನ್ನೂ ನಿದ್ರಿಸುತ್ತಿರುವುದನ್ನು ನೋಡಿ ದೇವೇಂದ್ರ ಆತನನ್ನು ಎಬ್ಬಿಸಿದನು. ಆತ ಕಣ್ಣುಗಳನ್ನು ಒರಸಿಕೊಳ್ಳುತ್ತ ಕೇಳಿದ, "ಏನು, ಪರಮಹಂಸರು ಬಂದರೇನು ?" ಅಂತ. ಎಲ್ಲರೂ ಗಹಗಹಿಸಿ ಹೊಟ್ಟೆ ಹುಣ್ಣಾಗುವ ವರೆಗೆ ನಕ್ಕರು. ಆತ ಪರಮಹಂಸರನ್ನು ನೋಡಬೇಕು ಎಂದು ಬಹಳ ಹೊತ್ತಿಗೆ ಮುಂಚೆಯೆ ಅಲ್ಲಿಗೆ ಬಂದಿದ್ದ. ಬಹಳ ಸೆಖೆಯಾಗಿದ್ದುದರಿಂದ ಬೆಂಚಿನ ಮೇಲೆ ಒಂದು ಮುಂದಲಿಗೆ ಹಾಸಿ ಅದರ ಮೇಲೆ ಸುಮ್ಮನೆ ಮಲಗಿ ಕೊಂಡಿದ್ದ. ಆದರೆ ನಿದ್ರಾದೇವಿ ಆತನಿಗೆ ಒಲಿದುಬಿಟ್ಟಿದ್ದಳು.

ಪರಮಹಂಸರ ಗಾಡಿ ದಕ್ಷಿಣೇಶ್ವರದ ಕಡೆ ಮುಂದುವರಿಯಿತು. ಅವರು ಆನಂದದಿಂದ ಮಾಸ್ಟರಿಗೆ ಹೇಳುತ್ತಿದಾರೆ, "ನಾನು ಇಂದು ಬಹಳವಾಗಿ ಐಸ್‌ಕ್ರೀಮ್ ತಿಂದುಬಿಟ್ಟೆ. ನೀನು ಮತ್ತೆ ದಕ್ಷಿಣೇಶ್ವರಕ್ಕೆ ಬರೋವಾಗ ಒಂದು ನಾಲ್ಕೈದು ತುಂಡು ಐಸ್‌ಕ್ರೀಮನ್ನು ನನಗೋಸ್ಕರ ತೆಗೆದುಕೊಂಡು ಬಾ" ಅಂತ. ಅವರು ಮತ್ತೆ ಮಾಸ್ಟರಿಗೆ ಹೇಳಿದರು, "ಈ ಕೆಲವು ಯುವಕರ ಕಡೆ ನನ್ನ ಮನಸ್ಸು ಎಳೆಯುತ್ತಿದೆ: ಚಿಕ್ಕ ನರೇನ, ಪೂರ್ಣ ಮತ್ತು ನಿನ್ನ ಆ ಸಂಬಂಧಿ ಇವರ ಕಡೆ" ಅಂತ.

ಮಾಸ್ಟರ್: "ಏನು, ದ್ವಿಜನೇನು?"

ಶ್ರೀರಾಮಕೃಷ್ಣರು: "ಅಲ್ಲ. ಆತನೇನೊ ನನ್ನ ಮನಸ್ಸಿನಲ್ಲಿ ಇದ್ದೇ ಇದಾನೆ. ಆತನ ಅಣ್ಣ."

ಮಾಸ್ಟರ್: "ಓ, ಆತನೆ?"

ಪರಮಹಂಸರು ಆನಂದದಿಂದ ಗಾಡಿಯಲ್ಲಿ ಮುಂದುವರಿಯು ತ್ತಿದಾರೆ.

# ಶ್ರೀರಾಮಕೃಷ್ಣರ ಜೀವನಸ್ಮೃತಿ

೧೨ನೆ ಏಪ್ರಿಲ್ ೧೮೮೫, ಚೈತ್ರ ಕೃಷ್ಣ ತ್ರಯೋದಶಿ, ಭಾನುವಾರ.

ಪರಮಹಂಸರು ಕಲ್ಕತ್ತದಲ್ಲಿರುವ ಬಲರಾಮನ ಮನೆಯಲ್ಲಿ ಭಕ್ತರೊಡನೆ ಕುಳಿತಿದಾರೆ. ಮಾಸ್ಟರ್ ಅಲ್ಲಿಗೆ ಅಪರಾಹ್ನ ಮೂರು ಘಂಟೆಯ ಸಮಯಕ್ಕೆ ಬಂದಿದಾನೆ. ಗಿರೀಶ, ಬಲರಾಮ, ಚಿಕ್ಕ ನರೇನ, ಪಲ್ಟು, ದ್ವಿಜ, ಪೂರ್ಣ, ಮಹೇಂದ್ರಮುಖರ್ಜಿ ಮತ್ತು ಇನ್ನೂ ಕೆಲವು ಮಂದಿ ಭಕ್ತರು ನೆರೆದಿದಾರೆ. ಕ್ರಮೇಣ ಬ್ರಾಹ್ಮಸಮಾಜದ ತ್ರೈಲೋಕ್ಯಸನ್ಯಾಲ, ಜಯಗೋಪಾಲಸೇನ, ಇನ್ನೂ ಕೆಲವು ಮಂದಿ ಬ್ರಾಹ್ಮಸಮಾಜದ ಭಕ್ತರು ಅಲ್ಲಿಗೆ ಬಂದರು. ಅನೇಕ ಮಂದಿ ಭಕ್ತೆಯರೂ ಬಂದಿದಾರೆ. ಅವರು ಪರದೆ ಹಿಂದೆ ಕುಳಿತು ಪರಮಹಂಸರ ದರ್ಶನ ಪಡೆಯುತ್ತಿದಾರೆ. ಮೋಹಿನಿಯ ಹೆಂಡತಿಯೂ ಬಂದಿದಾಳೆ. ಆಕೆ ಪುತ್ರಶೋಕದಿಂದ ಬಹುಮಟ್ಟಿಗೆ ಹುಚ್ಚಿಯಂತೆಯೇ ಆಗಿಬಿಟ್ಟಿದಾಳೆ. ಆಕೆಯಂತೆ ದುಃಖಕ್ಕೀಡಾದ ಇನ್ನೂ ಕೆಲವರು ಮನಶ್ಶಾಂತಿಯನ್ನು ಪಡೆಯಲೋಸುಗ ಅಲ್ಲಿಗೆ ಬಂದಿದಾರೆ.

ಪರಮಹಂಸರು ತಮ್ಮ ಸಾಧನೆಯ ಮತ್ತು ಆಧ್ಯಾತ್ಮಿಕ ಅನುಭವಗಳ ಸಂಬಂಧವಾಗಿ ಭಕ್ತರಿಗೆ ವರ್ಣನೆಮಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು: "ನನ್ನ ಸಾಧನೆಯ ಸಮಯದಲ್ಲಿ ನಾನು ಧ್ಯಾನಕ್ಕೆ ಕುಳಿತಾಗ ನಿಜವಾಗಿಯೂ ಅಸ್ತಿಮಾಂಸಗಳಿಂದ ಕೂಡಿದ ಮತ್ತು ತ್ರಿಶೂಲಧಾರಿಯಾದ ಒಬ್ಬ ಅಪರಿಚಿತ ನನ್ನ ಪಕ್ಕದಲ್ಲಿಯೇ ಕುಳಿತುಕೊಂಡಿರೋದನ್ನು ನಾನು ನೋಡುತ್ತಿದ್ದೆ. ನಾನೇನಾದರು ಭಗವಂತನ ಪಾದಪದ್ಮಗಳಲ್ಲಿ ನನ್ನ ಮನಸ್ಸನ್ನು ಇಡದೇ ಹೋಗಿಬಿಟ್ಟಿತು ಎಂದರೆ ನನ್ನನ್ನು ತ್ರಿಶೂಲದಿಂದ ತಿವಿದೇಬಿಡುತ್ತೇನೆಂದೂ, ನನ್ನ ಮನಸ್ಸೇನಾದರೂ ಭಗವಂತನನ್ನು ಬಿಟ್ಟು ಅಲುಗಿತು ಎಂದರೆ ಎದೆಯನ್ನು ಸೀಳಿಯೇಬಿಡುತ್ತೇನೆಂದೂ ಆತ ಹೆದರಿಸುತ್ತಿದ್ದ.

"ಭಗವತಿ ನನ್ನನ್ನು ಅಂಥ ಅವಸ್ಥೆಯಲ್ಲಿ ಇಡುತ್ತಿದ್ದಳು. ಅದರ ದೆಸೆಯಿಂದ ಮನಸ್ಸು ನಿತ್ಯದಿಂದ ಲೀಲೆಗೆ ಇಳಿದುಬರುತ್ತಿತ್ತು ; ಮತ್ತೆ ಕೆಲವು ವೇಳೆ ಅದು ಲೀಲೆಯಿಂದ ನಿತ್ಯಕ್ಕೆ ಹತ್ತಿಹೋಗುತ್ತಿತ್ತು.

"ನನ್ನ ಮನಸ್ಸು ಲೀಲೆಗೆ ಇಳಿದುಬಂದಾಗ ಒಮ್ಮೊಮ್ಮೆ ಹಗಲಿರುಳೂ ಸೀತಾರಾಮರ ಚಿಂತನೆ ಮಾಡುತ್ತಿದ್ದೆ. ಆಗ ನನಗೆ ಸರ್ವದಾ ಸೀತಾರಾಮರ ದರ್ಶನ ಆಗುತ್ತಿತ್ತು. ಆಗ ರಾಮಲಾಲ[1] ನನ್ನ ಎಡೆಬಿಡದ ಸಂಗಾತಿಯಾಗುತ್ತಿದ್ದ. ನಾನು ಆತನಿಗೆ ಕೆಲವು ವೇಳೆ ಸ್ನಾನಮಾಡಿಸುತ್ತಿದ್ದೆ, ಇನ್ನು ಕೆಲವು ವೇಳೆ ಅನ್ನಪಾನಾದಿಗಳನ್ನು ಕೊಡುತ್ತಿದ್ದೆ.

"ಕೆಲವು ವೇಳೆ ರಾಧಾಕೃಷ್ಣರ ಭಾವದಲ್ಲಿ ಇರುತ್ತಿದ್ದೆ. ಅವರ ದರ್ಶನವೂ ನನಗೆ ಸತತ ಆಗುತ್ತಿತ್ತು. ಮತ್ತೆ ಕೆಲವು ವೇಳೆ ಗೌರಾಂಗನ ಭಾವದಲ್ಲಿ ಇರುತ್ತಿದ್ದೆ. ಆತ ಈ ಎರಡು ಭಾವಗಳ— ಪ್ರಕೃತಿ ಪುರುಷರ ಭಾವಗಳ ಸಮನ್ವಯ. ಆ ಅವಸ್ಥೆಯಲ್ಲಿ ಸರ್ವದಾ ನನಗೆ ಗೌರಾಂಗನ ದರ್ಶನವಾಗುತ್ತಿತ್ತು.

"ತರುವಾಯ ನನ್ನ ಅವಸ್ಥೆ ಬದಲಾವಣೆಯನ್ನು ಹೊಂದಿತು, ಆಗ ನನ್ನ ಮನಸ್ಸು ಲೀಲೆಯನ್ನು ಬಿಟ್ಟು ನಿತ್ಯಕ್ಕೆ ಹತ್ತಿಬಿಟ್ಟಿತು. ತುಳಸಿ ದಳ ನುಗ್ಗೆ ಎಲೆ ಪವಿತ್ರತೆಯಲ್ಲಿ ಒಂದೇಸಮನಾಗಿ ತೋರಿದವು. ಭಗವಂತನ ಸಾಕಾರ ರೂಪು ಆ ಬಳಿಕ ಹಿಡಿಸದೆ ಹೋಯಿತು. ಆಗ ನನಗೆ ನಾನೇ ಹೇಳಿಕೊಂಡೆ, 'ಇವೆಲ್ಲಾ ಬಂದು ಹೋಗುತ್ತವೆ' ಅಂತ. ನನ್ನ ಮನಸ್ಸನ್ನು ಇವುಗಳಿಂದ ಮೇಲಕ್ಕೆ ಎತ್ತಿದೆ. ಕೊಠಡಿಯಲ್ಲಿ ಇದ್ದ ದೇವದೇವಿಯರ ಪಟ ಫೋಟೊ ಎಲ್ಲವನ್ನೂ ತೆಗೆದುಹಾಕಿಬಿಟ್ಟೆ. ಬಳಿಕ ದಾಸೀಭಾವವನ್ನು ಆರೋಪಿಸಿಕೊಂಡು — ಆದಿಪುರುಷನ ದಾಸಿ ಎಂದು ಭಾವಿಸಿಕೊಂಡು ಕೇವಲ ಆ ಅಖಂಡಸಚ್ಚಿದಾನಂದನ, ಆ ಆದಿಪುರುಷನ ಚಿಂತನೆಯಲ್ಲಿಯೇ ಕಾಲ ಕಳೆಯಲಾರಂಭಿಸಿದೆ.

"ನಾನು ಎಲ್ಲಾ ವಿಧದ ಸಾಧನೆಗಳನ್ನೂ ಮಾಡಿದೇನೆ. ಸಾಧನೆಗಳಲ್ಲಿ ಮೂರು ವಿಧ: ಸಾತ್ವಿಕ, ರಾಜಸಿಕ, ತಾಮಸಿಕ. ಸಾತ್ತ್ವಿಕ

---

1. ಅಷ್ಟಧಾತುವಿನಿಂದ ನಿರ್ಮಿತವಾದ ಬಾಲಕ ರಾಮಚಂದ್ರನ ವಿಗ್ರಹ. ಪರಮಹಂಸರು ಸಾಧನಾವಸ್ಥೆಯಲ್ಲಿದ್ದಾಗ ಒಬ್ಬ ವೈಷ್ಣವ ಬೈರಾಗಿ ಅದನ್ನು ಅವರಿಗೆ ಕೊಟ್ಟುಹೋಗಿದ್ದ.

ಸಾಧನೆಯಲ್ಲಿ ಭಕ್ತ ಭಗವಂತನನ್ನು ವ್ಯಾಕುಲಚಿತ್ತದಿಂದ ಕರೆಯುತ್ತಾನೆ ಅಥವಾ ಕೇವಲ ಆತನ ನಾಮಜಪದಲ್ಲೆ ನಿರತನಾಗಿರುತ್ತಾನೆ; ಆತನ ಹೃದಯದಲ್ಲಿ ಯಾವ ಫಲಾಕಾಂಕ್ಷೆಯೂ ಇರದು. ರಾಜಸಿಕ ಸಾಧನೆಯಲ್ಲಿ ಹಲವಾರು ವಿಧದ ಪ್ರಕ್ರಿಯೆಗಳನ್ನು,— ಇಷ್ಟು ಸಲ ಪುರಶ್ಚರಣೆ, ಇಷ್ಟು ಸಲ ತೀರ್ಥಯಾತ್ರೆ, ಇಷ್ಟು ಸಲ ಪಂಚತಪ, ಇಷ್ಟು ಸಲ ಷೋಡಶೋಪಚಾರ ಪೂಜೆ ಇವೇ ಮೊದಲಾದುವನ್ನು ಮಾಡಬೇಕು ಎಂಬ ನಿಯಮವಿದೆ. ತಾಮಸಿಕ ಸಾಧನೆ, ಅಂದರೆ ತಮಸ್ಸಿನ ಸಹಾಯದಿಂದ ಭಗವಂತನ ಪೂಜೆ ಮಾಡೋದು. ತಾಮಸಿಕ ಭಕ್ತನ ಭಾವನೆ: 'ಜೈ ಕಾಳಿ! ಏನು, ನೀನು ನನಗೆ ದರ್ಶನ ಕೊಡಲೊಲ್ಲೆಯಾ? ನೋಡು, ನೀನು ದರ್ಶನ ಕೊಡದೆ ಇದ್ದರೆ, ಇಗೋ ಕುತ್ತಿಗೆಗೆ ಚೂರಿ ಹಾಕಿಕೊಂಡು ಬಿಡುತ್ತೇನೆ!' ಅಂತ. ಯಾವ ರೀತಿಯಾಗಿ ತಾಂತ್ರಿಕ ಸಾಧನೆಗಳಲ್ಲಿ ಶುದ್ಧಾಚಾರಗಳೇನೂ ಇಲ್ಲವೊ, ಅದೇ ರೀತಿಯಾಗಿ ಇದರಲ್ಲೂ ಕೂಡ.

"ನನ್ನ ಸಾಧನೆ ಸಮಯದಲ್ಲಿ ನನಗೆ ಅದ್ಭುತ ಅದ್ಭುತ ದರ್ಶನಗಳಾಗುತ್ತಿದ್ದುವು. ನಾನು ಆತ್ಮನ ವಿಲಾಸವನ್ನು ಪ್ರತ್ಯಕ್ಷವಾಗಿ ನೋಡಿದೇನೆ. ನನ್ನಂಥ ರೂಪಿನವನೇ ಒಬ್ಬ ನನ್ನ ಶರೀರವನ್ನು ಪ್ರವೇಶಿಸಿ, ಸುಷುಮ್ನೆಯಲ್ಲಿರೋ ಆರು ಪದ್ಮಗಳೊಡನೆಯೂ ಕ್ರೀಡಿಸಲು ಆರಂಭಿಸಿದ. ಆ ಆರು ಪದ್ಮಗಳೂ ಮುಚ್ಚಿಕೊಂಡಿದ್ದುವು; ಆದರೆ ಆತ ಪ್ರತಿಯೊಂದರೊಡನೆಯೂ ಕ್ರೀಡಿಸಿದೊಡನೆಯೇ, ಸೊರಗಿ ಬಾಗಿದ್ದ ಪ್ರತಿಯೊಂದೂ ಅರಳಿ ಅರಳಿ ಊರ್ಧ್ವಮುಖವಾಗಿ ಎದ್ದು ನಿಂತುವು. ಈ ರೀತಿಯಾಗಿ ಮೂಲಾಧಾರ, ಸ್ವಾಧಿಷ್ಠಾನ, ಅನಾಹತ, ವಿಶುದ್ಧ, ಆಜ್ಞ, ಸಹಸ್ರಾರ ಚಕ್ರಗಳಲ್ಲಿದ್ದ ಪದ್ಮಗಳೆಲ್ಲವೂ ಅರಳಿದುವು. ಅಧೋಮುಖವಾಗಿದ್ದ ಇವೆಲ್ಲವೂ ಊರ್ಧ್ವಮುಖವಾಗಿ ಎದ್ದು ನಿಂತುವು. ನಾನು ಇವನ್ನೆಲ್ಲಾ ಪ್ರತ್ಯಕ್ಷವಾಗಿ ನೋಡಿದೇನೆ.

"ನಾನು ನನ್ನ ಸಾಧನೆ ಸಮಯದಲ್ಲಿ ಧ್ಯಾನಮಾಡುತ್ತಿದ್ದಾಗ ಒಂದು ಕಿಂಚಿತ್ತೂ ಗಾಳಿಯೇ ಇಲ್ಲದ ಜಾಗದಲ್ಲಿ ಸ್ವಲ್ಪವೂ ಅಲುಗದೆ ಉರಿಯುತ್ತಿರೋ ದೀಪದಕುಡಿಯ ಭಾವನೆಯನ್ನು ಆರೋಪಿಸಿಕೊಳ್ಳುತ್ತಿದ್ದೆ.

"ಧ್ಯಾನ ಗಾಢವಾದಾಗ ಸಾಧಕನ ಬಾಹ್ಯಜ್ಞಾನ ಶೂನ್ಯವಾಗಿ ಬಿಡುತ್ತದೆ. ಒಬ್ಬ ವ್ಯಾಧ ಒಂದು ಹಕ್ಕಿಗೆ ಗುರಿಯಿಟ್ಟು ನಿಂತಿದ್ದ ವರನ ಸಂಬಂಧಿಗಳು, ಆತನ ಸ್ನೇಹಿತರು, ಸಾರೋಟು

ಕುದುರೆಗಳು, ಸಂಗೀತ ಇವುಗಳಿಂದ ಕೂಡಿದ ಒಂದು ಮದುವೆಯ ಮೆರವಣಿಗೆ ಆತನ ಪಕ್ಕದಲ್ಲಿಯೇ ಮುಂದುವರಿಯಿತು. ಆ ವ್ಯಾಧನನ್ನು ದಾಟಿಹೋಗಲು ಆ ಮೆರವಣಿಗೆಗೆ ಬಹಳ ಸಮಯವೇ ಹಿಡಿಯಿತು ಆದರೂ ಆ ವ್ಯಾಧನಿಗೆ ಅದು ಗೊತ್ತೇ ಆಗಲಿಲ್ಲ. ತನ್ನ ಪಕ್ಕದಲ್ಲಿಯೇ ಒಬ್ಬ ಮದವಣಿಗ ನಡೆದುಹೋದುದು ಆತನಿಗೆ ಗೊತ್ತೇ ಆಗಲಿಲ್ಲ.

"ಒಬ್ಬ ಒಂಟಿಯಾಗಿ ಒಂದು ಕೆರೆಯ ದಡದಲ್ಲಿ ಕುಳಿತು ಮೀನು ಹಿಡಿಯುತ್ತಿದ್ದ. ಗಾಳವನ್ನು ಬೀಸಿದ ಎಷ್ಟೋ ಹೊತ್ತಿನ ಮೇಲೆ ಗಾಳದ ಬೆಂಡು ಅಲುಗಲಾರಂಭಿಸಿತು. ಒಮ್ಮೊಮ್ಮೆ ಆ ಬೆಂಡು ನೀರಿನೊಳಕ್ಕೆ ಸ್ವಲ್ಪ ಸ್ವಲ್ಪ ಮುಳುಗುತ್ತಿತ್ತು. ಅದನ್ನು ನೋಡಿ ಮೀನು ಹಿಡಿಯುತ್ತಿದ್ದವ ಗಾಳದ ಕಡ್ಡಿಯನ್ನು ಎತ್ತಲು ಸಿದ್ಧನಾಗುತ್ತಿದ್ದ. ಆ ಸಮಯಕ್ಕೆ ಸರಿಯಾಗಿ ಒಬ್ಬ ದಾರಿಹೋಕ ಆತನ ಹತ್ತಿರಕ್ಕೆ ಬಂದು ಕೇಳಿದ, 'ಮಹಾಶಯ, ಶ್ರೀಮಾನ್ ಬ್ಯಾನರ್ಜಿಯ ಮನೆ ಎಲ್ಲಿದೆ ಎಂಬುದು ನಿಮಗೆ ಗೊತ್ತೆ?' ಅಂತ. ಆಗ ಆತ ಗಾಳದ ಕಡ್ಡಿಯನ್ನು ಮೇಲಕ್ಕೆ ಎತ್ತೋ ಕಾರ್ಯದಲ್ಲಿ ತನ್ಮಯನಾಗಿದ್ದುದರಿಂದ ಆತನಿಗೆ ಯಾವ ಉತ್ತರವನ್ನೂ ಕೊಡಲಾಗಲಿಲ್ಲ. ಮತ್ತೆ ಮತ್ತೆ ಆ ದಾರಿಹೋಕ ತಾರಸ್ವರದಿಂದ ಕೇಳಿದ, 'ಶ್ರೀಮಾನ್ ಬ್ಯಾನರ್ಜಿಯ ಮನೆ ಎಲ್ಲಿದೆ ಎಂಬುದು ನಿಮಗೆ ಗೊತ್ತೆ?' ಅಂತ. ಆ ಮೀನು ಹಿಡಿಯುವವನಿಗೆ ಬೇರೆ ಯಾವುದರ ಮೇಲೂ ಪ್ರಜ್ಞೆಯೇ ಇಲ್ಲ. ಆತನ ಕೈ ಸುಮ್ಮನೆ ನಡುಗುತ್ತಿತ್ತು. ಆತನ ದೃಷ್ಟಿಯೆಲ್ಲಾ ಆ ಬೆಂಡಿನ ಕಡೆಗೇ ಇತ್ತು. ಇದನ್ನು ನೋಡಿ ದಾರಿಹೋಕ ಬೇಸರಗೊಂಡು ಹೊರಟುಹೋದ. ಆತ ಸ್ವಲ್ಪ ಹೆಚ್ಚು ದೂರವೇ ಮುಂದುವರಿದನಂತರ ಆ ಬೆಂಡು ಸಂಪೂರ್ಣವಾಗಿ ನೀರಿನೊಳಕ್ಕೆ ಮುಳಗಿತು. ಒಡನೆಯೇ ಆ ಮೀನು ಹಿಡಿಯುವವ ಗಾಳದ ಕಡ್ಡಿಯನ್ನು ಮೇಲಕ್ಕೆ ಎತ್ತಿ ಮೀನನ್ನು ಹಿಡಿದು ದಡಕ್ಕೆ ಹಾಕಿದ. ಬಳಿಕ ಕರವಸ್ತ್ರದಿಂದ ಮುಖದ ಬೆವರು ಒರಸಿಕೊಂಡು ಆ ದಾರಿಹೋಕನನ್ನು ಕೂಗಲಾರಂಭಿಸಿದ: 'ಏನ್ರೀ! 'ಯಾರಲ್ಲಿ ಹೋಗ್ತಾ ಇರೋದು! ಬನ್ರೀ! ಇಲ್ಲಿಗೆ ಸ್ವಲ್ಪ ಬಂದು ಹೋಗಿ!' ಅಂತ. ದಾರಿಹೋಕನಿಗೆ ಹಿಂದಿರುಗಿಬರಲು ಇಚ್ಛೆಯಿಲ್ಲ. ಮೀನು ಹಿಡಿಯವವ ಬಹಳವಾಗಿ ಕೂಗಿ ಕರೆದನಂತರ ಆತ ಹಿಂದಿರುಗಿಬಂದು ಕೇಳಿದ, 'ಏಕೆ ಸುಮ್ಮನೆ ಗಂಟಲು ಕಿತ್ತುಕೊಳ್ಳುತ್ತಾ ಇದ್ದೀಯೆ?' ಅಂತ. ಆಗ ಮೀನು ಹಿಡಿ

ಯುವವ ಕೇಳಿದ, 'ನನ್ನನ್ನು ಏನು ಕೇಳುತ್ತಿದ್ದಿರಿ?' ಅಂತ. ದಾರಿಹೋಕ ಹೇಳಿದ, 'ಆಗ ನಿನ್ನನ್ನು ಎಷ್ಟೊಂದು ಸಲ ಕೇಳಿದೆ, ಈಗ ನೀನು ನನಗೇನು ಬೇಕು ಅಂತ ಕೇಳುತ್ತಾ ಇದ್ದೀಯಲ್ಲ!' ಅಂತ. ಬಳಿಕ ಮೀನು ಹಿಡಿಯುವವ ಹೇಳಿದ, 'ಆಗ ನನ್ನ ಗಾಳದ ಬೆಂಡು ಇನ್ನೇನು ಮುಳುಗುವುದರಲ್ಲಿತ್ತು; ಆ ಕಾರಣದಿಂದ ನೀವು ಕೇಳಿದ ಪ್ರಶ್ನೆಯ ಒಂದು ಪದವೂ ನನ್ನ ಕಿವಿಗೆ ಬೀಳಲಿಲ್ಲ' ಎಂದು.

"ಧ್ಯಾನದ ಸಮಯದಲ್ಲಿ ಮನಸ್ಸು ಅಂಥ ಏಕಾಗ್ರತೆಯನ್ನು ಹೊಂದಿರುತ್ತದೆ, ಆಗ ಏನನ್ನೂ ನೋಡೋಕೂ ಆಗೋದಿಲ್ಲ, ಕೇಳೋಕೂ ಆಗೋದಿಲ್ಲ. ಸ್ಪರ್ಶದ ಬೋಧೆ ಕೂಡ ಆಗೋದಿಲ್ಲ. ಹಾವು ಮೈಮೇಲೆ ಹರಿದುಹೋದರೂ ಅದು ಗೊತ್ತಾಗುವುದೇ ಇಲ್ಲ. ಧ್ಯಾನಸ್ಥನಿಗೆ ಹಾವು ತನ್ನ ಮೈಮೇಲೆ ಹರಿದುಹೋದುದು ಗೊತ್ತಾಗದು. ಅದೇ ರೀತಿಯಾಗಿ ಹಾವಿಗೂ ತಾನು ಮನುಷ್ಯನ ದೇಹದ ಮೇಲೆ ಹರಿದುಹೋಗುತ್ತಿದೇನೆ ಎಂಬ ಭಾವನೆಯೇ ಉಂಟಾಗದು.

"ಗಾಢಧ್ಯಾನದಲ್ಲಿ ಇಂದ್ರಿಯವ್ಯಾಪಾರ ಸಂಪೂರ್ಣವಾಗಿ ನಿಂತುಹೋಗಿಬಿಡುತ್ತದೆ. ಆಗ ಮನಸ್ಸು ಬಹಿರ್ಮುಖವಾಗಿರದು. ಇದು ಬೀದಿ ಬಾಗಿಲನ್ನು ಹಾಕಿ ಒಳಗೆ ಕುಳಿತಂತೆ. ಇಂದ್ರಿಯಗಳ ಐದು ವಸ್ತುಗಳೂ—ರೂಪ, ರಸ, ಗಂಧ, ಸ್ಪರ್ಶ, ಶಬ್ದ—ಜಗಲಿ ಮೇಲೆ ಬಿದ್ದಿರಬೇಕಾಗುತ್ತದೆ.

"ಧ್ಯಾನಜೀವನಕ್ಕೆ ಕಾಲಿಟ್ಟಾಗ ಮೊದಲು ಮೊದಲು ವಿಷಯ ವಸ್ತುಗಳೆಲ್ಲವೂ ಸಾಧಕನ ಎದುರಿಗೆ ಬಂದು ನಿಲ್ಲುವುವು. ಧ್ಯಾನ ಗಾಢವಾಯಿತು ಅಂದರೆ ಮತ್ತೆ ಅವು ಎದುರಿಗೆ ಬಂದು ನಿಲ್ಲವು;—ಎಲ್ಲೋ ಒಂದು ಕಡೆ ಹೊರಗೆ ಬಿದ್ದಿರುತ್ತವೆ. ಧ್ಯಾನವನ್ನು ಮುಂದುವರಿಸುತ್ತ ಮುಂದುವರಿಸುತ್ತ ಹೋಗುತ್ತಿದ್ದಹಾಗೆ ನನಗೆ ಏನೇನೊ ದರ್ಶನಗಳಾದುವು. ಒಮ್ಮೆ ನಾನು ಪ್ರತ್ಯಕ್ಷವಾಗಿ ನನ್ನ ಮುಂದೆ ಒಂದು ಹಣದ ರಾಶಿ, ಒಂದು ಶಾಲು, ಒಂದು ತಟ್ಟೆ ಲಾಡು ಇಟ್ಟಿರೋದನ್ನು ಮತ್ತು ಮುಕರ ಇಟ್ಟುಕೊಂಡಿದ್ದ ಇಬ್ಬರು ಹೆಂಗಸರು ನಿಂತಿರೋದನ್ನು ನೋಡಿದೆ. ಆಗ ನನ್ನ ಮನಸ್ಸನ್ನು ಕೇಳಿದೆ, 'ಹೇ ಮನಸ್ಸೆ, ನಿನಗೇನಾದರು ಆಸೆ ಇದೆಯೆ? ಇವುಗಳಲ್ಲಿ ಯಾವುದನ್ನಾದರು ಅನುಭೋಗಿಸಬೇಕು ಅಂತ ಇಚ್ಛೆ ಇದೆಯೆ?' ಅಂತ. ಮನಸ್ಸು ಹೇಳಿತು, 'ಬೇಡ. ಇದೊಂದೂ ಬೇಡ. ಭಗವಂತನ ಪಾದಪದ್ಮವೊಂದು ಹೊರತು ಬೇರೆ ಏನೂ ಬೇಡ'

ಅಂತ. ಯಾವ ರೀತಿಯಾಗಿ ಗಾಜಿನ ಮನೆಯೊಳಗೆ ಇರೋದನ್ನು ಅದರ ಹೊರಗೆ ನಿಂತೇ ನೋಡಬಹುದೊ, ಹಾಗೇನೆ ಹೆಂಗಸಿನ ಒಳಗೆ ಹೊರಗೆ ಇರುವುದೆಲ್ಲವನ್ನೂ ನೋಡಲಾರಂಭಿಸಿದೆ. ಅವರ ದೇಹದೊಳಗಿರೋ ಕರುಳು, ಜಠರ, ರಕ್ತ, ಮಲ, ಮೂತ್ರ, ಕ್ರಿಮಿ, ಕಫ ಇವೇ ಮೊದಲಾದುವುಗಳನ್ನೆಲ್ಲಾ ನೋಡಿದೆ."

ಗಿರೀಶ್ಚಂದ್ರಘೋಷ ಆಗಾಗ ಹೇಳುತ್ತಿದ್ದ ತಾನು ಪರಮಹಂಸರ ನಾಮ ಬಲದಿಂದ ರೋಗಗಳನ್ನು ಗುಣಮಾಡಬಲ್ಲೆ ಅಂತ.

ಶ್ರೀರಾಮಕೃಷ್ಣರು ಗಿರೀಶ ಮೊದಲಾದವರಿಗೆ: "ಯಾರದು ಕ್ಷುದ್ರ ಬುದ್ಧಿಯೊ ಅವರು ರೋಗವನ್ನು ಗುಣಪಡಿಸೋ, ಮೊಕದ್ದಮೆಯಲ್ಲಿ ಜಯಶೀಲನಾಗೋ, ನೀರಿನ ಮೇಲೆ ನಡೆಯೋ ಇವೇ ಮೊದಲಾದ ಸಿದ್ಧಿಗಳನ್ನು ಪಡೆಯಲು ಆಶಿಸುತ್ತಾರೆ. ಆದರೆ ಯಾರು ಶುದ್ಧ ಭಕ್ತರೊ ಅವರು ಭಗವಂತನ ಪಾದಪದ್ಮವನ್ನು ಹೊರತು ಬೇರೆ ಏನನ್ನೂ ಆಶಿಸರು. ಒಂದು ದಿನ ಹೃದೆ ನನಗೆ ಹೇಳಿದ, 'ಮಾವ, ಭಗವತಿಯನ್ನು ಕೆಲವು ಶಕ್ತಿಗಳಾಗಿ, ಕೆಲವು ಸಿದ್ಧಿಗಳಾಗಿ ಪ್ರಾರ್ಥನೆ ಮಾಡಿ' ಅಂತ. ನನ್ನದು ಮಗುವಿನ ಸ್ವಭಾವ. ಕಾಳೀದೇವಾಲಯದಲ್ಲಿ ಜಪಮಾಡುತ್ತ ಕುಳಿತಿದ್ದಾಗ ತಾಯಿಗೆ ಹೇಳಿದೆ, 'ಹೇ ತಾಯಿ, ಹೃದೆ ಹೇಳಿದಾನೆ ನಾನು ನಿನ್ನನ್ನು ಕೆಲವು ಶಕ್ತಿಗಳಿಗಾಗಿ, ಕೆಲವು ಸಿದ್ಧಿಗಳಿಗಾಗಿ ಪ್ರಾರ್ಥನೆಮಾಡಿಕೋಬೇಕು ಅಂತ' ಎಂದು. ಭಗವತಿ ಒಡನೆಯೆ ನನಗೆ ಒಂದು ದೃಶ್ಯವನ್ನು ತೋರಿಸಿಬಿಟ್ಟಳು. ಹತ್ತಿರ ಹತ್ತಿರ ನಲವತ್ತು ವರ್ಷ ವಯಸ್ಸಿನ ಒಬ್ಬ ವೇಶ್ಯೆ ನನ್ನ ಕಡೆಗೆ ಬೆನ್ನು ಹಾಕಿ ನನ್ನ ಮುಂದೆಯೇ ಕುಕ್ಕರಗಾಲಿನಲ್ಲಿ ಕುಳಿತುಕೊಂಡಳು. ಆಕೆಗೆ ಬಹಳ ಅಗಲವಾದ ಕುಂಡೆಗಳಿದ್ದುವು; ಕರಿ ಅಂಚಿನ ಸೀರೆ ಉಟ್ಟುಕೊಂಡಿದ್ದಳು. 'ಬಡ, ಬಡ' ಅಂತ ಮಲ ವಿಸರ್ಜನೆ ಮಾಡಲಾರಂಭಿಸಿದಳು. ಸಿದ್ಧಿ ಎಂಬುದು ಈ ಮುಪ್ಪಿನ ವೇಶ್ಯೆಯ ಮಲಕ್ಕೆ ಸರಿಸಮಾನ ಅಂತ ಭಗವತಿ ನನಗೆ ತೋರಿಸಿಬಿಟ್ಟಳು. ತರುವಾಯ ನಾನು ಹೃದೆಯನ್ನು ಸಂಧಿಸಿ ಆತನನ್ನು ಗದರಿಸಿ ಹೇಳಿದೆ, 'ನೀನು ನನಗೇಕೆ ಈ ವಿಧವಾದ ಸಲಹೆಯಿನ್ನಿತ್ತೆ? ನಿನ್ನ ದೆಸೆಯಿಂದ ತಾನೆ ನನ್ನ ಮುಖಕ್ಕೆ ಈ ವಿಧವಾದ ಮಂಗಳಾರತಿ ದೊರೆಯಿತು' ಅಂತ.

"ಯಾರಿಗೆ ಒಂದು ಕಿಂಚಿತ್ ಸಿದ್ಧಿ ದೊರೆತಿರುವುದೊ ಅವರಿಗೆ ಹೆಸರು, ಕೀರ್ತಿ ಇವೆಲ್ಲ ಬಂದುಬಿಡುತ್ತವೆ. ಅಂಥವರಲ್ಲಿ ಅನೇಕರಿಗೆ ಗುರುಗಿರಿಯನ್ನು ಮಾಡಲು, ಒಂದು ಹತ್ತಾರು ಜನಗಳಿಂದ ಹೊಗಳಿಸಿ

ಕೊಳ್ಳಲು, ಶಿಷ್ಯರನ್ನು ಮತ್ತು ಭಕ್ತರನ್ನು ಸಂಪಾದಿಸಿಕೊಳ್ಳಲು ಇಚ್ಛೆಯಾಗುತ್ತದೆ. ಜನರು ಇಂಥ ಗುರುವಿನ ಸಂಬಂಧವಾಗಿ ಹೇಳುತ್ತಾರೆ, 'ಅಹಾ! ಇವರು ಎಂಥ ಆನಂದದ ಜೀವನವನ್ನು ನಡೆಯಿಸಿಕೊಂಡು ಹೋಗುತ್ತಿದಾರೆ! ಇವರನ್ನು ನೋಡಲು ಎಷ್ಟೊಂದು ಜನ ಬಂದುಹೋಗುತ್ತಿದಾರೆ! ಇವರಿಗೆ ಎಷ್ಟೊಂದು ಜನ ಶಿಷ್ಯರು ಭಕ್ತರು ಆಗಿಬಿಟ್ಟಿದಾರೆ! ಇವರ ಆಶ್ರಮ ಎಷ್ಟೊಂದು ಕುರ್ಚಿ-ಮೇಜಗಳಿಂದ, ಪಾತ್ರೆ-ಪದಾರ್ಥಗಳಿಂದ, ಮನೆ-ಮುಟ್ಟುಗಳಿಂದ ತುಂಬಿಹೋಗಿಬಿಟ್ಟಿದೆ! ಎಷ್ಟೊಂದು ಜನ ಏನೇನು ವಸ್ತುಗಳನ್ನು ಇವರಿಗೆ ತಂದುಕೊಡುತ್ತಿದಾರೆ! ಇವರೇನಾದರು ಇಚ್ಛೆಪಟ್ಟುಬಿಟ್ಟರೆ—ಇವರಿಗೆ ಅಂಥಾ ಶಕ್ತಿಯೂ ಇದೆ—ಬೇಕಾದಷ್ಟು ಜನಕ್ಕೆ ಅನ್ನ ಹಾಕಬಲ್ಲರು' ಅಂತ.

"ಗುರುಗಿರಿ ವೇಶ್ಯಾವೃತ್ತಿಗೆ ಸರಿಸಮಾನವಾದ್ದು. ಇದು ಒಂದೆರಡು ಕಾಸು, ಹೆಸರು, ಕೀರ್ತಿ, ದೈಹಿಕ ಸುಖ ಇವುಗಳಿಗಾಗಿ ತನ್ನನ್ನು ತಾನೇ ಮಾರಿಕೊಂಡ ಹಾಗೆ. ಯಾವ ಶರೀರ, ಮನಸ್ಸು, ಆತ್ಮ ಇವುಗಳಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದೊ, ಅವನ್ನು ತೆಗೆದುಕೊಂಡುಹೋಗಿ ಈ ಸಾಮಾನ್ಯ ಐಹಿಕ ವಸ್ತುಗಳಿಗಾಗಿ ಮಾರೋದು ಒಳ್ಳೆಯದಲ್ಲ. ಒಬ್ಬ ಹೆಂಗಸಿನ ಸಂಬಂಧವಾಗಿ ಒಬ್ಬ ಹೇಳಿದ, 'ಆಹ! ಈಗ ಆಕೆಯ ಜೀವನ ಬಹಳ ಆನಂದದಿಂದ ತುಂಬಿತುಳುಕಾಡುತ್ತಿದೆ. ಈಗ ಆಕೆಗೆ ದೆಸೆ ಖುಲಾಯಿಸಿಬಿಟ್ಟಿದೆ. ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದಾಳೆ. ಅದನ್ನು ಮಂಚ, ಸುಪ್ಪತ್ತಿಗೆ, ದಿಂಬು, ಇವೇ ಮೊದಲಾದುವುಗಳಿಂದ ಬಹಳ ಚೆನ್ನಾಗಿ ಸಜ್ಜುಗೊಳಿಸಿದಾಳೆ. ಆಕೆ ಎಷ್ಟೊಂದು ಜನರನ್ನು ತನ್ನ ವಶ ಮಾಡಿಕೊಂಡುಬಿಟ್ಟಿದಾಳೆ ಏನು ಕತೆ! ಅವರು ಬಂದು ಹೋಗುತ್ತಲೇ ಇದಾರೆ' ಅಂತ. ಅಂದರೆ ನೇರವಾಗಿ ಹೇಳೋದಾದರೆ ಆಕೆ ವೇಶ್ಯಾವೃತ್ತಿಯನ್ನು ಕೈಗೊಂಡಿದಾಳೆ; ಆದ್ದರಿಂದ ಈಗ ಆಕೆಯ ಆನಂದಕ್ಕೆ ಪಾರವೇ ಇಲ್ಲ ಅಂತ. ಹಿಂದೆ ಆಕೆ ಒಬ್ಬ ದೊಡ್ಡ ಮನುಷ್ಯನ ಮನೆಯಲ್ಲಿ ದಾಸಿ ಕೆಲಸ ಮಾಡಿಕೊಂಡಿದ್ದಳು; ಈಗ ವೇಶ್ಯೆ ಆಗಿದಾಳೆ! ಸಾಮಾನ್ಯಸುಖಗಳಿಗಾಗಿ ತನ್ನನ್ನು ತಾನೇ ನಾಶಪಡಿಸಿಕೊಂಡಿದಾಳೆ.

"ನಾನು ನನ್ನ ಸಾಧನಾವಸ್ಥೆಯಲ್ಲಿ ಧ್ಯಾನಮಾಡುತ್ತ ಧ್ಯಾನ ಮಾಡುತ್ತ ಇನ್ನೂ ಏನೇನೊ ದರ್ಶನಗಳನ್ನು ಕಂಡೆ. ನಾನು ಒಮ್ಮೆ ಬಿಲ್ವ

ವೃಕ್ಷದ ಕೆಳಗೆ ಧ್ಯಾನ ಮಾಡುತ್ತಿದ್ದಾಗ ಪಾಪಪುರುಷ ನನ್ನ ಎದುರಿಗೆ ಬಂದು ಹಲವಾರು ವಿಧದಿಂದ ನನ್ನನ್ನು ಲೋಭಪಡಿಸಲು ಪ್ರಯತ್ನಿಸಿದ. ಆತ ಆಂಗ್ಲ ಸಿಪಾಯಿಯ ವೇಷ ಧರಿಸಿ ಬಂದಿದ್ದ. ಆತ ನನಗೆ ಹಣ, ಕೀರ್ತಿ, ಹೆಂಗಸಿನ ಸುಖ, ಅನೇಕ ವಿಧವಾದ ಶಕ್ತಿಗಳು ಇವೇ ಮೊದಲಾದುವುಗಳನ್ನು ದೊರಕಿಸಿಕೊಡಲಿಚ್ಛಿಸಿದ. ಆಗ ಭಗವತಿಗೆ ಪ್ರಾರ್ಥನೆ ಮಾಡಲಾರಂಭಿಸಿದೆ. ಇವೆಲ್ಲ ಬಹಳ ಗೋಪ್ಯವಾದ ವಿಷಯಗಳು. ಭಗವತಿ ಕಾಣಿಸಿಕೊಂಡಳು. ನಾನು ಆಕೆಗೆ ಹೇಳಿದೆ, 'ತಾಯೆ, ಆತ ನನ್ನು ಕತ್ತರಿಸಿಹಾಕು!' ಅಂತ. ಭಗವತಿಯ ಆ ರೂಪು—ಆ ಭುವನ ಮೋಹನ ರೂಪು—ಇನ್ನೂ ನನ್ನ ಕಣ್ಣಿಗೆ ಕಟ್ಟಿದ ಹಾಗೇ ಇದೆ. ಆಕೆ ಕೃಷ್ಣಮಯಿಯ[1] ರೂಪನ್ನು ಧರಿಸಿ ನನ್ನ ಎದುರಿಗೆ ಬಂದಿದ್ದಳು. ಆದರೆ ಆಕೆಯ ದೃಷ್ಟಿ ಈ ಜಗತ್ತನ್ನೇ ನಡುಗಿಸುತ್ತಿರುವಂತೆ ತೋರುತ್ತಿತ್ತು."

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಮತ್ತೆ ಹೇಳಿದರು: "ಇನ್ನೂ ಎಷ್ಟೋ ಬೇರೆ ಬೇರೆಯ ದರ್ಶನಗಳನ್ನು ಕಂಡೆ! ಆದರೆ ಹೇಳಲು ಆಗುತ್ತಿಲ್ಲ—ಯಾರೋ ನನ್ನ ಬಾಯನ್ನು ಮುಚ್ಚಿ ಹಿಡಿದಂತೆ ಅನುಭವವಾಗುತ್ತಿದೆ. ನುಗ್ಗೆ ಎಲೆ ತುಳಸಿ ಪತ್ರೆ ಪಾವಿತ್ರ್ಯತೆಯಲ್ಲಿ ಒಂದೇ ಸರಿಸಮಾನವಾಗಿ ತೋರುತ್ತಿದ್ದುವು. ಭೇದ ಬುದ್ಧಿ ಸಂಪೂರ್ಣವಾಗಿ ನಾಶವಾಗಿಬಿಟ್ಟಿತ್ತು. ಒಮ್ಮೆ ನಾನು ಆಲದ ಮರದ ಕೆಳಗೆ ಕುಳಿತು ಧ್ಯಾನ ಮಾಡುತ್ತಿದ್ದಾಗ ಭಗವತಿ ನನಗೆ ಉದ್ದವಾದ ಗಡ್ಡವಿದ್ದ ಒಬ್ಬ ಮುಸಲ್ಮಾನನನ್ನು[2] ತೋರಿಸಿದಳು. ಆತ ಒಂದು ಮಣ್ಣಿನ ತಟ್ಟೆಯಲ್ಲಿ ಅನ್ನ ತುಂಬಿಕೊಂಡು ನನ್ನ ಹತ್ತಿರಕ್ಕೆ ಬಂದ. ಅದನ್ನು ಕೆಲವು ಮುಸಲ್ಮಾನರಿಗೆ ಹಂಚಿ ನನಗೂ ಒಂದು ಸ್ವಲ್ಪ ಕೊಟ್ಟು ಹೋದ. ಭಗವತಿ ನನಗೆ ತೋರಿಸಿದಳು ನಿಜವಾಗಿ ಇರೋದು ಒಂದಲ್ಲದೆ ಎರಡಲ್ಲ ಅಂತ—ಕೇವಲ ಸಚ್ಚಿದಾನಂದನೇ ಈ ಎಲ್ಲಾ ರೂಪುಗಳನ್ನೂ ಧರಿಸಿದಾನೆ; ಆತನೇ ಈ ಜೀವಜಗತ್ತಾಗಿದಾನೆ; ಆತನೇ ಅನ್ನ ಆಗಿವಾನೆ ಅಂತ.

(ಗಿರೀಶ, ಮಾಸ್ಟರ್ ಮೊದಲಾದವರಿಗೆ) "ನನ್ನದು ಬಾಲಕನ ಸ್ವಭಾವ. ಹೃದೆ ಹೇಳಿದ, 'ಮಾವ, ಭಗವತಿಯನ್ನು ಸ್ವಲ್ಪ ಶಕ್ತಿಗಾಗಿ

1. ಬಲರಾಮವಸುವಿನ ಕುಮಾರಿ.

2. ಬಹುಶಃ ಇದು ಮುಹಮ್ಮದ್ ಪೈಗಂಬರನ ದರ್ಶನವಾಗಿರಬೇಕು.

ಪ್ರಾರ್ಥಿಸಿಕೊಳ್ಳಿ' ಅಂತ. ಒಡನೆಯೇ ಅವನ್ನು ಬೇಡಲು ತಾಯಿ ಹತ್ತಿರ ಹೋದೆ. ಭಗವತಿ ನನ್ನನ್ನು ಅಂಥಾ ಅವಸ್ಥೆಯಲ್ಲಿ ಇಟ್ಟಿದಾಳೆ, ಯಾರು ನನ್ನ ಹತ್ತಿರ ಇರುತ್ತಾನೊ ಆತ ಹೇಳಿದಂತೆ ನಡೆದುಕೊಂಡುಬಿಡಬೇಕಾಗುತ್ತದೆ. ಯಾವ ರೀತಿಯಾಗಿ ಚಿಕ್ಕ ಮಕ್ಕಳ ಹತ್ತಿರ ಯಾರೂ ಇಲ್ಲದೆ ಇದ್ದರೆ ಅವಕ್ಕೆ ದಿಕ್ಕೇ ತೋರದಂತಾಗುತ್ತದೆಯೊ, ನನಗೂ ಹಾಗೆಯೇ ಆಗುತ್ತಿತ್ತು. ಹೃದೆ ನನ್ನ ಬಳಿಯಲ್ಲಿ ಇಲ್ಲದೆ ಇದ್ದರೆ ಪ್ರಾಣ ಇನ್ನೇನು ಹೊರಟು ಹೋಗುವುದೊ ಏನೂ ಎಂಬಂತಾಗುತ್ತಿತ್ತು. ಅಗೋ ನೋಡು, ಮತ್ತೆ ನನಗೆ ಆ ಅವಸ್ಥೆ ಬಂದುಬಿಡುತ್ತಾ ಇದೆ—ನಿಮ್ಮೊಡನೆ ಮಾತಾಡುತ್ತ ಮಾತಾಡುತ್ತ ಇದ್ದ ಹಾಗೆಯೇ ನನಗೆ ಭಗವಂತನ ಸಂಬಂಧವಾಗಿ ಉದ್ದೀಪನೆ ಆಗಿಬಿಡುತ್ತಾ ಇದೆ.''

ಪರಮಹಂಸರು ಹೀಗೆ ಹೇಳುತ್ತ ಹೇಳುತ್ತ ಇದ್ದ ಹಾಗೆಯೆ ಭಾವಾವಿಷ್ಟರಾಗುತ್ತಿದಾರೆ. ದೇಶದ ಮತ್ತು ಕಾಲದ ಭಾವನೆ ಅವರನ್ನು ಬಿಟ್ಟು ತೊಲಗಿಹೋಗುತ್ತಾ ಇದೆ. ಬಹಳ ಪ್ರಯಾಸದಿಂದ ತಮ್ಮ ಭಾವವನ್ನು ತಮ್ಮ ಹತೋಟಿಯಲ್ಲಿಡಲು ಪ್ರಯತ್ನ ಮಾಡುತ್ತಾ ಇದಾರೆ. ಭಾವಾವಸ್ಥೆಯಲ್ಲಿಯೇ ಹೇಳುತ್ತಿದಾರೆ, ''ಇನ್ನೂ ನೀವೆಲ್ಲರೂ ನನ್ನ ಕಣ್ಣಿಗೆ ಕಾಣಿಸಿಕೊಳ್ಳುತ್ತಾ ಇದ್ದೀರಿ; — ಆದರೆ ನೀವು ಚಿರಕಾಲದಿಂದಲೂ ಇಲ್ಲೇ ಕುಳಿತಿದ್ದಂತೆ ಬೋಧೆಯಾಗುತ್ತಿದೆ; — ನೀವು ಯಾವಾಗ ಬಂದಿರಿ, ಎಲ್ಲಿಗೆ ಬಂದಿದೀರಿ ಇವೇ ಮೊದಲಾದ ಭಾವನೆಗಳು ನನ್ನ ಮನಸ್ಸನ್ನು ಬಿಟ್ಟು ತೊಲಗಿಹೋಗಿಬಿಟ್ಟವೆ'' ಅಂತ.

ಪರಮಹಂಸರು ಸ್ವಲ್ಪ ಹೊತ್ತು ಯಾವ ಚಲನೆಯೂ ಇಲ್ಲದೆ ಕುಳಿತಿದ್ದರು. ಈಗ ಕಿಂಚಿತ್ ಪ್ರಕೃತಿಸ್ಥರಾಗಿ ಹೇಳುತ್ತಿದಾರೆ, ''ನನಗೆ ಕುಡಿಯೋ ನೀರು ಬೇಕು'' ಅಂತ. ಸಮಾಧಿ ಇಳಿಮುಖವಾದನಂತರ ತಮ್ಮ ಮನಸ್ಸನ್ನು ಬಾಹ್ಯ ಜಗತ್ತಿನ ಅಂತಸ್ತಿಗೆ ತೆಗೆದುಕೊಂಡು ಬರಲು ಪ್ರಾಯಶಃ ಹೀಗೆಯೇ ಹೇಳುತ್ತಿದ್ದರು. ಗಿರೀಶ ಹೊಸದಾಗಿ ಬಂದಿದಾನೆ. ಇದೆಲ್ಲ ಆತನಿಗೆ ಗೊತ್ತಿಲ್ಲ. ಎದ್ದು ನೀರು ತರಲು ಹೊರಟ. ಪರಮಹಂಸರು ತರಬೇಡವೆಂದು ಸಂಜ್ಞೆಮಾಡಿ ಆತನಿಗೆ ಹೇಳಿದರು, ''ಬೇಡಪ್ಪ, ಈಗ ಕುಡಿಯೋಕಾಗೋದಿಲ್ಲ'' ಅಂತ.

ಪರಮಹಂಸರು ಮತ್ತು ಭಕ್ತರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಈಗ ಪರಮಹಂಸರು ಮಾತನಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಏನು, ಈ ಗೋಪ್ಯ ವಿಷಯಗಳನ್ನೆಲ್ಲ ನಿಮಗೆ ತಿಳಿಸಿಬಿಟ್ಟದ್ದರಿಂದ ನಾನು ತಪ್ಪುಮಾಡಿದಹಾಗಾಯಿತೇನು ?"

ಮಾಸ್ಟರ್ ಇದಕ್ಕೆ ಏನು ಉತ್ತರವನ್ನು ತಾನೆ ಕೊಡಬಲ್ಲ, ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಇಲ್ಲ. ತಪ್ಪುಮಾಡಿದಂತೆ ಏಕೆ ಆದೀತು ? ಜನರ ಹೃದಯದಲ್ಲಿ ಭಗವಂತನ ಸಂಬಂಧವಾಗಿ ನಂಬಿಕೆ ಹುಟ್ಟಲಿ ಅಂತ ನಾನು ಇವನ್ನೆಲ್ಲ ಹೇಳುತ್ತಿರೋದು."

ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ಬಹಳ ನಮ್ರತೆಯಿಂದ ಮಾಸ್ಟರಿಗೆ ಹೇಳುತ್ತಿದಾರೆ, "ಆತನನನ್ನು ದಯವಿಟ್ಟು ಇಲ್ಲಿಗೆ ಕರೆದು ಕೊಂಡು ಬರುತ್ತೀಯಾ?" ಅಂತ. ಆತನನ್ನು ಎಂದರೆ ಪೂರ್ಣನನ್ನು.

ಮಾಸ್ಟರ್ ಸ್ವಲ್ಪ ಹೊತ್ತು ಯೋಚಿಸಿ: "ಆಗಲಿ, ಈಗಲೇ ಹೇಳಿ ಕಳುಹಿಸುತ್ತೇನೆ."

ಶ್ರೀರಾಮಕೃಷ್ಣರು ಉತ್ಸುಕತೆಯಿಂದ: "ಪೂರ್ಣನಲ್ಲಿ ನಾನು ನನ್ನ ಗುರಿಯನ್ನು ಮುಟ್ಟಿಬಿಟ್ಟದೇನೆ."

ತಮ್ಮ ಅಂತರಂಗ ಭಕ್ತರಲ್ಲಿ ಪೂರ್ಣನೇ ಕೊನೆಯವನು, ಇನ್ನು ಬೇರೆ ಯಾರೂ ಇಲ್ಲ ಅಂತ ಸೂಚಿಸಿದರೇನು ?

ಬಳಿಕ ಪರಮಹಂಸರು ಗಿರೀಶ, ಮಾಸ್ಟರ್ ಮೊದಲಾದವರನ್ನು ಸಂಬೋಧಿಸಿ ತಮ್ಮ ಮಹಾಭಾವದ ಅವಸ್ಥೆಯ ಸಂಬಂಧವಾಗಿ ವರ್ಣಿಸಲಾರಂಭಿಸಿದರು.

ಶ್ರೀರಾಮಕೃಷ್ಣರು ಭಕ್ತರಿಗೆ: "ಆ ಅನುಭವವನ್ನು ಪಡೆದ ಮೇಲೆ ದೊರೆತ ಆನಂದ ನಾನು ಹಿಂದೆ ಪಟ್ಟಿದುದರ ಕಷ್ಟಕ್ಕೆ ಸರಿಸಮನಾಗಿತ್ತು. ಮಹಾಭಾವ ಎಂಬುದು ಭಗವಂತನ ಭಾವ; ಅದು ದೇಹ ಮತ್ತು ಮನಸ್ಸನ್ನು ಅವುಗಳ ಬುಡದವರೆಗೂ ಅಲುಗಾಡಿಸಿಬಿಡುತ್ತದೆ. ಒಂದು ಭಾರಿ ಆನೆ ಒಂದು ಪುಟ್ಟ ಗುಡಿಸಿಲನ್ನು ಹೊಕ್ಕರೆ ಹೇಗೊ ಹಾಗೆ ಇದು. ಆ ಗುಡಿಸಿಲಿನ ಅಸ್ತಿಭಾರವೆಲ್ಲ ಸುಮ್ಮನೆ ಅದುರಲಾರಂಭಿಸುತ್ತದೆ. ಬಹುಶಃ ಆ ಗುಡಿಸಲು ಕೆಳಕ್ಕೆ ಬಿದ್ದು ಪುಡಿಪುಡಿಯಾದರೂ ಆಗಿ ಬಿಡಬಹುದು.

"ಭಗವಂತನ ವಿರಹದಿಂದುಂಟಾಗೋ ತಾಪ ಸಾಮಾನ್ಯವಾದ್ದೇ ನಲ್ಲ. ಯಾವ ಮರದ ಕೆಳಗೆ ರೂಪ ಮತ್ತು ಸನಾತನ ಕುಳಿತುಕೊಳ್ಳು ತ್ತಿದ್ದರೊ, ಆ ಮರದ ಎಲೆ ಅವರ ವಿರಹತಾಪದಿಂದ ಸೀದು ಕಪ್ಪಾಗಿ ಹೋಗುತ್ತಿದ್ದಿತಂತೆ. ನನ್ನ ಆ ಅವಸ್ಥೆಯಲ್ಲಿ ಮೂರು ದಿವಸಗಳ ವರೆಗೆ ಪ್ರಜ್ಞೆಯೇ ಇಲ್ಲದವನ ಹಾಗೆ ಬಿದ್ದಿದ್ದೆ. ಕೈ ಕಾಲು ಅಲ್ಲಾಡಿಸಲೂ ಸಹ ಆಗುತ್ತಿರಲಿಲ್ಲ. ಬಿದ್ದ ಜಾಗದಲ್ಲಿಯೇ ಸುಮ್ಮನೆ ಬಿದ್ದಿರುತ್ತಿದ್ದೆ. ಪ್ರಜ್ಞೆ ಬಂದನಂತರ ಭೈರವಬ್ರಾಹ್ಮಣಿ ನನಗೆ ಸ್ನಾನ ಮಾಡಿಸೋಕೆ ಕೈ ಹಿಡಿದು ಕರೆದುಕೊಂಡು ಹೋದಳು. ಆದರೆ ತಾಪದ ದೆಸೆಯಿಂದ ನೇರ ವಾಗಿ ಆಕೆ ನನ್ನ ಕೈಯನ್ನು ಹಿಡಿದುಕೊಳ್ಳಲಾಗಲಿಲ್ಲ. ಅದಕ್ಕಾಗಿ ಆಕೆ ನನ್ನ ಶರೀರವನ್ನು ಮಂದವಾದ ಬಟ್ಟೆಯಿಂದ ಹೊದ್ದಿಸಿ, ಅದರ ಮೇಲೆ ತನ್ನ ಕೈಯನ್ನಿಟ್ಟು ನನ್ನನ್ನು ಹಿಡಿದುಕೊಂಡು ಸ್ನಾನಘಟ್ಟಕ್ಕೆ ಕರೆದು ಕೊಂಡು ಹೋದಳು. ನನ್ನ ಶರೀರಕ್ಕೆ ಅಂಟಿಕೊಂಡಿದ್ದ ಮಣ್ಣು ಸುಮ್ಮನೆ ಸುಟ್ಟುಹೋಗಿದ್ದಿತು.

"ಆ ಅವಸ್ಥೆಯಲ್ಲಿ ನನ್ನ ಬೆನ್ನುಹುರಿಯ ಮೂಲಕ ನೇಗಿಲು ಹರಿದು ಹೋಗುತ್ತಿರುವಂತೆ ಅನುಭವವಾಗುತ್ತಿತ್ತು. ಆಗ ಕೂಗಿಕೊಳ್ಳುತ್ತಿದ್ದೆ, 'ನನ್ನ ಪ್ರಾಣ ಹೋಗುತ್ತಿದೆ! ನನ್ನ ಪ್ರಾಣ ಹೋಗುತ್ತಿದೆ!' ಅಂತ. ಆದರೆ, ಬಳಿಕ ಬಹಳ ಆನಂದದಿಂದ ಇದ್ದೆ."

ಭಕ್ತರೆಲ್ಲರು ಪರಮಹಂಸರು ಅನುಭವಿಸಿದ ಮಹಾಭಾವಾವಸ್ಥೆಯ ವರ್ಣನೆಯನ್ನು ಉಸಿರೇ ನಿಂತುಹೋದವರಂತೆ ಕೇಳಿದರು.

ಶ್ರೀರಾಮಕೃಷ್ಣರು ಗಿರೀಶನಿಗೆ: "ನೀವೆಲ್ಲ ಅಷ್ಟು ದೂರ ಹೋಗ ಬೇಕಾದ ಆವಶ್ಯಕತೆಯೇನಿಲ್ಲ. ನನ್ನ ಅನುಭವಗಳು ಒಂದು ಆದರ್ಶಕ್ಕಾಗಿ ಮಾತ್ರವೆ. ನಿಮ್ಮ ಮನಸ್ಸು ಒಂದು ಹತ್ತಾರು ವಸ್ತುಗಳ ಕಡೆಗೆ ಹರಿದು ಹೋಗುತ್ತಿದೆ, ನನ್ನದು ಒಂದರ ಕಡೆಗೇನೆ. ನನಗೆ ಭಗವಂತನೊಬ್ಬನು ವಿನಾ ಬೇರೆ ಏನೂ ಬೇಕಾಗಿಲ್ಲ. ಇದೆಲ್ಲಾ ಆತನ ಕೃಪೆ ಮಾತ್ರ. (ನಗುತ್ತ) ಕಾಡಿನಲ್ಲಿ ಕೊಂಬೆಯನ್ನೇ ಒಡೆಯದೆ ನೇರವಾಗಿ ಬೆಳೆದು ಕೊಂಡುಹೋಗಿರೋ ಮರಗಳೂ ಇವೆ, ಒಂದು ಹತ್ತಾರು ಕೊಂಬೆಗಳಿಂದ ಕೂಡಿದ ಮರಗಳೂ ಇವೆ. (ಎಲ್ಲರೂ ನಗುತ್ತಿದಾರೆ.)

"ಹೌದು, ನನ್ನ ಅನುಭವಗಳು ಒಂದು ಆದರ್ಶಕ್ಕಾಗಿ ಮಾತ್ರವೆ. ಆದರೆ ನೀವು ಮಾತ್ರ ಸಂಸಾರದಲ್ಲಿ ಅನಾಸಕ್ತರಾಗಿ ಇರಬೇಕು. ಸಂಸಾ

ಕರದ ಬಗ್ಗಡ ಶರೀರಕ್ಕೇನೊ ತಾಗಿಯೇ ತಾಗುತ್ತದೆ, ಆದರೆ ಬದಿಯಲ್ಲಿ ವಾಸಿಸೋ ಮೀನಿನೋಪಾದಿಯಲ್ಲಿ ಅದನ್ನು ತೊಳೆದುಕೊಂಡುಬಿಡಬೇಕು. ಇಚ್ಛೆಯಾದರೆ ಈ ಸಂಸಾರವೆಂಬ ಕಳಂಕ ಸಾಗರದಲ್ಲಿ ಈಜಾಡಿ, ಆದರೆ ಮಾತ್ರ ನೋಡಿಕೊಳ್ಳಿ ಆ ಕಳಂಕ ನಿಮ್ಮ ಶರೀರವನ್ನು ಕರೆಮಾಡದ ಹಾಗೆ."

ಗಿರೀಶ ನಗುತ್ತ: "ನೀವೂ ವಿವಾಹವಾಗಬೇಕಾಗಿ ಬಂದಿತಲ್ಲ." (ನಗು.)

ಶ್ರೀರಾಮಕೃಷ್ಣರು ನಗುತ್ತ: "ಸಂಸ್ಕಾರ ಪಡೆಯುವುದಕ್ಕಾಗಿ ವಿವಾಹವಾಗಬೇಕಾಗುತ್ತದೆ. ಆದರೆ ನಾನು ಸಂಸಾರಿಯ ಜೀವನವನ್ನು ನಡೆಸೋ ಬಗೆ ಹೇಗೆ? ನನ್ನ ಭಗವದ್ಭಾವನೆ ಅಂಥದು ಎಷ್ಟೊಂದು ಸಲ ಯಜ್ಞೋಪವೀತವನ್ನು ಸರಿಯಾಗಿ ಹಾಕಿಕೊಂಡರೂ ಅದು ಬಿದ್ದು ಬಿದ್ದು ಹೋಗುತ್ತಲೇ ಇರುತ್ತಿತ್ತು. ಸಂಸ್ಕಾರಾರ್ಥವಾಗಿ ಶುಕದೇವನಿಗೂ ಕೂಡ ವಿವಾಹವಾಗಿತ್ತು ಅಂತ ಕೆಲವರು ಹೇಳುತ್ತಾರೆ. ಆತನಿಗೆ ಒಬ್ಬ ಮಗಳೂ ಕೂಡ ಇದ್ದಳು ಅಂತ ಅವರು ಹೇಳೋದುಂಟು. (ಎಲ್ಲರೂ ನಗುತ್ತಾರೆ.)

"ಕಾಮಕಾಂಚನವೇ ಸಂಸಾರ. ಅವು ಭಗವಂತನನ್ನು ಮರೆಯುವಂತೆ ಪ್ರೇರೇಪಿಸುತ್ತವೆ."

ಗಿರೀಶ: "ಎಲ್ಲಿ, ಕಾಮಕಾಂಚನ ನಮ್ಮನ್ನು ಬಿಡಲೊಲ್ಲದಲ್ಲ?"

ಶ್ರೀರಾಮಕೃಷ್ಣರು: "ವ್ಯಾಕುಲ ಚಿತ್ತದಿಂದ ಆತನನ್ನು ಪ್ರಾರ್ಥಿಸು. ವಿವೇಕಕ್ಕಾಗಿ ಆತನಿಗೆ ಪ್ರಾರ್ಥನೆ ಮಾಡಿಕೊ. 'ಭಗವಂತನೊಬ್ಬನೇ ಸತ್ಯ, ಉಳಿದುದೆಲ್ಲ ಅನಿತ್ಯ'— ವಿವೇಕ ಎಂಬುದು ಇದೇನೆ. ನೀರು ಸೋಸೊ ಯಂತ್ರದಿಂದ ನೀರನ್ನು ಶೋಧಿಸಿ ತೆಗೆದುಕೊಳ್ಳಬೇಕು. ಕೊಳೆಯನ್ನು ಹಿಂದೆ ಬಿಟ್ಟು ಶುದ್ಧವಾದ ನೀರು ಆ ಯಂತ್ರದಿಂದ ಹೊರಕ್ಕೆ ಬರುತ್ತದೆ. ವಿವೇಕವೆಂಬ ನೀರು-ಸೋಸೊ ಯಂತ್ರವನ್ನು ಈ ಸಂಸಾರ ಸಾಗರದಲ್ಲಿ ಉಪಯೋಗಿಸು. ಮೊದಲು ಆತನ ಸಾಕ್ಷಾತ್ಕಾರವನ್ನು ಪಡೆದು ಬಳಿಕ ಬೇಕಾದರೆ ಸಂಸಾರದಲ್ಲಿ ಇರು. ಆಗ ಅದು ವಿದ್ಯೆಯ ಸಂಸಾರವಾಗುತ್ತದೆ.

"ಹೆಂಗಸರ, ಎಂದರೆ ಅವಿದ್ಯಾರೂಪಿಣಿ ಹೆಂಗಸರ ಮೋಹಿನೀಶಕ್ತಿಯನ್ನು ನೋಡು! ಅವರು ಪುರುಷರ ಮೇಲೆ ಮಂಕುಬೂದಿ ಎರಚಿ,

ಅವರ ಸತ್ತ್ವವನ್ನೆಲ್ಲಾ ಹೀರಿ, ಅವರನ್ನು ಯಾವ ಕೆಲಸಕ್ಕೂ ಬಾರದವರ ನ್ನಾಗಿ ಮಾಡಿಬಿಡುತ್ತಾರೆ. ಗಂಡಸು ಹೆಂಗಸು ಇಬ್ಬರೂ ಒಟ್ಟಿಗೆ ಕುಳಿತಿರುವುದನ್ನು ನೋಡಿದೊಡನೆಯೇ, ಆಗ ನನಗೆ ನಾನೇ ಹೇಳಿಕೊಳ್ಳುತ್ತೇನೆ, 'ಹಾ! ದೇವರೆ, ಇವರ ಗತಿ ಮುಗಿಯಿತು!' ಅಂತ. (ಮಾಸ್ಟರ್ ಕಡೆ ನೋಡುತ್ತ) ಹಾರು ಎಂಥ ಒಳ್ಳೆಯ ಹುಡುಗ. ಆತನನ್ನು ಒಂದು ಹೆಣ್ಣುದೆವ್ವ ಮೆಟ್ಟಿಕೊಂಡುಬಿಟ್ಟಿದೆ. ಹಾರು ಎಲ್ಲಿ, ಹಾರು ಎಲ್ಲಿ ಅಂತ ಹುಡುಕಿ ನೋಡಿದಾಗ ಅವನು ಇನ್ನು ಬೇರೆ ಎಲ್ಲಿ ಇರುತ್ತಾನೆ! ಹೋಗಿ ನೋಡಿದರೆ, ಆತ ಆ ಆಲದ ಮರದ ಕೆಳಗೆ ಸುಮ್ಮನೆ ಕುಳಿತಿದಾನೆ. ಆತನ ಮುಖದಲ್ಲಿ ಹಿಂದಿನ ತೇಜಸ್ಸಿಲ್ಲ, ಆನಂದವಿಲ್ಲ, ರೂಪಿಲ್ಲ. ಹಾ! ದೇವರೆ, ಆತನನ್ನು ಆ ಆಲದ ಮರದಲ್ಲಿ ವಾಸಿಸೋ ಹೆಣ್ಣುದೆವ್ವ ಮೆಟ್ಟಿಕೊಂಡುಬಿಟ್ಟಿದೆಯಲ್ಲ!

"ಹೆಂಗಸೇನಾದರು ತನ್ನ ಪತಿಗೆ ಹೇಳಿದರೆ, 'ಅಲ್ಲಿಗೆ ಹೋಗಿ ಬನ್ನಿ' ಅಂತ, ಆತ ಎದ್ದು ಒಡನೆಯೇ ಅಲ್ಲಿಗೆ ಹೊರಡಲು ಸಿದ್ಧನಾಗುತ್ತಾನೆ. ಆಕೆ ಹೇಳಿದರೆ, 'ಇಲ್ಲಿ ಕುಳಿತಿರಿ' ಅಂತ, ಒಡನೆಯೇ ಅಲ್ಲಿ ಕುಳಿತಿರಲು ಪ್ರಯತ್ನಿಸುತ್ತಾನೆ.

"ಯಾರೋ ಒಬ್ಬ ಉಮೇದುವಾರನಿಗೆ ಯಾವುದಾದರೂ ಒಂದು ಕೆಲಸಕ್ಕಾಗಿ ಎಂದು ಒಬ್ಬ ಆಫೀಸರ ಹತ್ತಿರಕ್ಕೆ ಅಲೆದು ಅಲೆದು ಸಾಕಾಗಿ ಹೋಗಿಬಿಟ್ಟಿದೆ. ಆದರೂ ಆತನಿಗೆ ಯಾವ ಉದ್ಯೋಗವೂ ದೊರೆಯುತ್ತಿಲ್ಲ. ಆತ ಆಫೀಸರನ್ನು ಸಂಧಿಸಿದಾಗಲೆಲ್ಲ ಆ ಆಫೀಸರು ಹೇಳುತ್ತಿದ್ದ, 'ಈಗ ಇಲ್ಲಿ ಯಾವ ಕೆಲಸವೂ ಖಾಲಿ ಇಲ್ಲ; ಆದರೆ ಆಗಾಗ ಬಂದು ನನ್ನನ್ನು ನೋಡಿ ಹೋಗುತ್ತಿರು' ಅಂತ. ಈ ರೀತಿಯಾಗೇ ಬಹಳ ಕಾಲ ಉರುಳಿಹೋಯಿತು. ಕೊನೆಗೆ ಉಮೇದುವಾರ ಅತ್ಯಂತ ನಿರಾಶನಾಗಿಬಿಟ್ಟ. ಒಂದು ದಿನ ಆತ ತನ್ನ ಸ್ನೇಹಿತನ ಮುಂದೆ ಕುಳಿತು ತನ್ನ ದುಃಖವನ್ನು ಬಸಿದುಕೊಂಡ. ಆಗ ಸ್ನೇಹಿತ ಹೇಳಿದ, 'ನೀನು ಎಂಥ ಮಂಕುದಿಣ್ಣೆ! ಆತನ ಹತ್ತಿರಕ್ಕೆ ಅಲೆದು ಅಲೆದು ಏಕೆ ಕಾಲನ್ನು ಸವೆಯಿಸಿಕೊಂಡೆ? ಹೋಗಿ ಗುಲಾಬಮ್ಮನ ಕಾಲು ಹಿಡಿ. ನಿನಗೆ ನಾಳೆ ದಿನವೇ ಅಲ್ಲಿ ಕೆಲಸ ದೊರಕಿಬಿಡುತ್ತದೆ' ಅಂತ. ಉಮೇದುವಾರ ಹೇಳಿದ, 'ಹಾಗೇನು! ನೋಡು, ಈಗಲೇ ಹೊರಟೆ' ಅಂತ. ಗುಲಾಬಮ್ಮ ಆ ಆಫೀಸರ ಉಪಪತ್ನಿ. ಉಮೇದುವಾರ ಆಕೆಯನ್ನು ಕಂಡು ಹೇಳಿದ,

'ತಾಯಿ, ನಾನು ಮಹಾ ವಿಪತ್ತಿಗೆ ಸಿಕ್ಕಿಕೊಂಡಿದೇನೆ. ತಾವು ಹೇಗಾದರು ಮಾಡಿ ನನ್ನನ್ನು ಅದರಿಂದ ಪಾರುಮಾಡಿಸಬೇಕು. ನಾನು ಒಬ್ಬ ಬಡ ಬ್ರಾಹ್ಮಣ. ಬೇರೆಲ್ಲಿಗೆ ತಾನೆ ನಾನು ಸಹಾಯಕ್ಕಾಗಿ ಹೋಗಲಿ? ಬಹಳ ದಿನಗಳಿಂದ ಯಾವ ಕೆಲಸಕಾರ್ಯವೂ ಸಿಕ್ಕದೆ ಸುಮ್ಮನೆ ಅಲೆಯುತ್ತಿದೇನೆ. ಮಕ್ಕಳು ಮರಿಗಳು ಹೊಟ್ಟೆಗಿಲ್ಲದೆ ಸಾಯುತ್ತಿದಾರೆ. ತಾವು ಒಂದು ಮಾತು ಹೇಳಿಬಿಟ್ಟರೆಯೇ ಸಾಕು ನನಗೆ ಉದ್ಯೋಗ ದೊರೆತುಬಿಡುತ್ತದೆ' ಅಂತ. ಗುಲಾಬಮ್ಮ ಕೇಳಿದಳು, 'ಮಗು, ನಾನು ಯಾರಿಗೆ ಹೇಳಬೇಕು?' ಅಂತ. ಆಕೆ ತನಗೆ ತಾನೇ ಹೇಳಿಕೊಂಡಳು, 'ಅಯ್ಯೋ ಪಾಪ, ಬಡ ಬ್ರಾಹ್ಮಣ! ಬಹಳ ಕಷ್ಟದಲ್ಲಿ ಸಿಕ್ಕಿಕೊಂಡಿದಾನೆ' ಅಂತ. ಉಮೇದುವಾರ ಹೇಳಿದ, 'ತಾವು ಆಫೀಸರ ಕಿವಿಗೆ ಒಂದು ಮಾತು ಹಾಕಿದರೆಯೇ ಸಾಕು ನನಗೆ ಕೆಲಸ ನಿಶ್ಚಯವಾಗಿ ದೊರೆತುಬಿಡುತ್ತದೆ' ಅಂತ. ಗುಲಾಬಮ್ಮ ಹೇಳಿದಳು, 'ನಾನು ಇಂದೇ ಆಫೀಸರಿಗೆ ಹೇಳಿ ನಿನಗೊಂದು ಕೆಲಸ ಮಾಡಿಸಿಕೊಟ್ಟುಬಿಡುತ್ತೇನೆ' ಅಂತ. ಆ ಮಾರನೇ ದಿನವೇ ಆತನ ಮನೆಗೆ ಆಫೀಸಿನಿಂದ ಒಬ್ಬ ಜವಾನ ಬಂದು ಹೇಳಿದ, 'ನೀನು ಇಂದಿನಿಂದಲೇ ಆಫೀಸಿನಲ್ಲಿ ಕೆಲಸ ಮಾಡಬೇಕಾಗಿದೆ' ಅಂತ. ಆ ಆಫೀಸರು ತನ್ನ ಆಂಗ್ಲ-ದಣಿಗೆ ಹೇಳಿದ, 'ಈ ಮನುಷ್ಯ ಬಹಳ ಸಮರ್ಥನಾದ ಉದ್ಯೋಗಿ. ನಾನು ಈತನನ್ನು ಕೆಲಸಕ್ಕೆ ತೆಗೆದುಕೊಂಡಿದೇನೆ. ನಮ್ಮ ಕಂಪೆನಿ ಈತನಿಂದ ಬಹಳ ಮೇಲ್ಮೆಗೆ ಬರುತ್ತದೆ' ಅಂತ.

"ಎಲ್ಲರೂ ಕಾಮಕಾಂಚನದಿಂದ ಮೋಹಿತರಾಗಿ ಹೋಗಿದಾರೆ. ಆದರೆ ನನಗೆ ಮಾತ್ರ ಅವೆಲ್ಲ ಒಂದು ಕಿಂಚಿತ್ತೂ ರುಚಿಸುತ್ತಿಲ್ಲ. ಬೇಕಾದರೆ ನಾನು ಆಣೆಯಿಟ್ಟು ಹೇಳುತ್ತೇನೆ ಭಗವಂತನೊಬ್ಬನು ವಿನಾ ನನಗೆ ಬೇರೆ ಏನೂ ಗೊತ್ತಿಲ್ಲ ಅಂತ."

ಒಬ್ಬ ಭಕ್ತ: "ಮಹಾಶಯರೆ, 'ನವ ಹುಲ್ಲೋಲ' ಎಂಬ ಹೆಸರಿನ ಒಂದು ಮತ ಈಗ ಹುಟ್ಟಿದೆ. ಲಲಿತಚಟ್ಟೋಪಾಧ್ಯಾಯ ಆದರ ಒಬ್ಬ ಸದಸ್ಯ."

ಶ್ರೀರಾಮಕೃಷ್ಣರು: "ಮತಗಳು ಅನೇಕವಾಗಿ ಇವೆ. ಮತವಿದ್ದಂತೆ ಪಥ. ಆದರೆ ಪ್ರತಿಯೊಬ್ಬನೂ ಭಾವಿಸುತ್ತಾನೆ ತನ್ನ ಮತವೇ ಸರಿ, ತನ್ನ ಗಡಿಯಾರವೇ ಸರಿಯಾಗಿ ನಡೆದುಕೊಂಡು ಹೋಗುತ್ತಿದೆ ಅಂತ."

ಗಿರೀಶ ಮಾಸ್ಟರಿಗೆ : "ಇದರ ಸಂಬಂಧವಾಗಿ ಪೋಪು ಏನು ಹೇಳು ತ್ತಾನೆ ಎಂಬುದು ನಿನಗೆ ಗೊತ್ತೇನು ?

'Tis with our judgements as our watches, none
Go just alike, yet each believes his own."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇದರ ಅರ್ಥವೇನು ?"

ಮಾಸ್ಟರ್ : "ಪ್ರತಿಯೊಬ್ಬನೂ ಭಾವಿಸುತ್ತಾನೆ ತನ್ನ ಗಡಿಯಾರ ಸರಿಯಾಗಿ ನಡೆದುಕೊಂಡು ಹೋಗುತ್ತಿದೆ ಅಂತ. ಆದರೆ ಯಾವ ಎರಡು ಗಡಿಯಾರ ತೆಗೆದುಕೊಂಡು ನೋಡಿದರೂ ಅವು ತೋರಿಸೋ ಸಮಯದಲ್ಲಿ ಪರಸ್ಪರ ಭೇದ ಇದ್ದೇ ಇರುತ್ತದೆ."

ಶ್ರೀರಾಮಕೃಷ್ಣರು : "ಗಡಿಯಾರಗಳು ಎಷ್ಟೇ ತಪ್ಪಾಗಿ ನಡೆದು ಕೊಂಡು ಹೋದರೂ, ಸೂರ್ಯ ಮಾತ್ರ ಸಮಯಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತಿದಾನೆ. ಆದ್ದರಿಂದ ಪ್ರತಿಯೊಬ್ಬನೂ ಸೂರ್ಯನನ್ನು ಅನುಸರಿಸಿ ತನ್ನ ಗಡಿಯಾರವನ್ನು ಸರಿಪಡಿಸಿಕೋಬೇಕು."

ಒಬ್ಬ ಭಕ್ತ : "ಆ ಆಸಾಮಿ ಬಹಳವಾಗಿ ಸುಳ್ಳು ಹೇಳುತ್ತಾನೆ."

ಶ್ರೀರಾಮಕೃಷ್ಣರು : "ಸತ್ಯವಚನವೇ ಕಲಿಯುಗದ ತಪಸ್ಸು. ಈ ಯುಗದಲ್ಲಿ ಬೇರೆ ವಿಧದ ತಪಸ್ಸುಗಳನ್ನು ಮಾಡಲು ಬಹಳ ಕಠಿನ. ಸತ್ಯಾರ್ಥಿಗೆ ಭಗವಂತ ದೊರೆತುಬಿಡುತ್ತಾನೆ. ತುಳಸೀದಾಸ ಹೇಳ್ತಾನೆ, 'ಸತ್ಯವಚನ, ಭಗವದಧೀನತೆ, ಪರಸ್ತ್ರೀಯಲ್ಲಿ ಮಾತೃದರ್ಶನ ಇವು ಮೂರು ಮಹಾ ಸದ್ಗುಣಗಳು. ಇವುಗಳ ಅನುಷ್ಠಾನದಿಂದ ಒಂದು ಪಕ್ಷ ಭಗವಂತನ ಸಾಕ್ಷಾತ್ಕಾರ ದೊರೆಯದೆ ಇದ್ದರೆ ತುಳಸೀದಾಸನನ್ನು ಮಿಥ್ಯಾವಾದಿ ಅಂತ ಕರೆಯಿರಿ' ಎಂದು.

"ಕೇಶವಸೇನ ಯಾವ ಆಧಾರಪ್ರಮಾಣಗಳಿಲ್ಲದಿದ್ದರೂ ತಂದೆಯ ಸಾಲವನ್ನು ಹೊತ್ತುಕೊಂಡ; ಬೇರೆಯವರಾಗಿದ್ದರೆ ಎಂದಿಗೂ ಹಾಗೆ ಮಾಡುತ್ತಿರಲಿಲ್ಲ. ನಾನು ಒಮ್ಮೆ ಜೊರಾಸಂಕೊ ಎಂಬ ಸ್ಥಳದಲ್ಲಿರೋ ದೇವೇಂದ್ರನ ಸಮಾಜಕ್ಕೆ ಹೋಗಿದ್ದೆ. ಅಲ್ಲಿ ಕೇಶವಸೇನ ವೇದಿಕೆಯ ಮೇಲೆ ಕುಳಿತು ಧ್ಯಾನಮಾಡುತ್ತಿದ್ದ. ಆಗ ಆತ ಇನ್ನೂ ಯುವಕ. ನಾನು ಮಥುರಬಾಬುವಿಗೆ ಹೇಳಿದೆ, 'ಇಲ್ಲಿ ಧ್ಯಾನ ಮಾಡುತ್ತ ಕುಳಿತಿರುವರಲ್ಲಿ ಈತನ ಗಾಳದ ಬೆಂಡು ನೀರಿನಲ್ಲಿ ಮುಳುಗಿಬಿಟ್ಟಿದೆ. ಗಾಳದ ಹುಳುವನ್ನು ಮೀನು ತಿನ್ನುತ್ತಾ ಇದೆ' ಅಂತ.

"ಒಬ್ಬ — ಆತನ ಹೆಸರು ಹೇಳೋಲ್ಲ — ಹತ್ತು ಸಾವಿರ ರೂಪಾಯಿಗಾಗಿ ಸುಳ್ಳು ಸಾಕ್ಷಿ ಕೊಟ್ಟಿದ್ದಾನೆ. ಆ ವ್ಯಾಜ್ಯದಲ್ಲಿ ಗೆಲ್ಲಲು ನನ್ನ ಮುಖಾಂತರ ಭಗವತಿ ಕಾಳಿಗೆ ಅರ್ಘ್ಯ ಕೊಡಿಸಿದ್ದಾನೆ. ಆತ ಬಂದು ನನಗೆ ಹೇಳಿದ, 'ದಯವಿಟ್ಟು ಈ ಅರ್ಘ್ಯವನ್ನು ಭಗವತಿಗೆ ಅರ್ಪಿಸಿಬಿಡಿ' ಅಂತ. ನಾನು ಬಾಲಕನ ಹಾಗೆ ಆತ ಹೇಳಿದ ಹಾಗೆ ಕೇಳಿಬಿಟ್ಟೆ."

ಭಕ್ತ: "ಆತ ಒಳ್ಳೇ ಮಂತಾನಸ್ಥನೆ!"

ಶ್ರೀರಾಮಕೃಷ್ಣರು: "ಆದರೆ ಆತನಿಗೆ ನನ್ನಲ್ಲಿ ಅಂಥಾ ವಿಶ್ವಾಸ, ನಾನು ಅರ್ಘ್ಯವನ್ನು ಕೊಟ್ಟರೆ ಭಗವತಿ ತನ್ನ ಮನೋರಥವನ್ನು ಈಡೇರಿಸಿಬಿಡುತ್ತಾಳೆ ಎಂಬುದಾಗಿ ಆತ ದೃಢವಾಗಿ ನಂಬಿದ್ದ."

ಲಲಿತಬಾಬುವಿನ ಮಾತು ಎತ್ತಿ ಪರಮಹಂಸರು ಹೇಳುತ್ತಿದ್ದಾರೆ, "ಅಹಂಕಾರ ಬಡಪಟ್ಟಿಗೆ ನಮ್ಮನ್ನು ಬಿಟ್ಟು ತೊಲಗುವುದೆ? ಎಲ್ಲೋ ಅಲ್ಲಿ ಇಲ್ಲಿ ಒಬ್ಬಿಬ್ಬರನ್ನು ಮಾತ್ರ ನೋಡಬಹುದು. ಬಲರಾಮನಿಗೆ ಅಹಂಕಾರವೆಂಬುದು ಇರಲಿಲ್ಲ. (ಒಬ್ಬ ಭಕ್ತನನ್ನು ತೋರಿಸಿ) ಈತನಿಗೂ ಇಲ್ಲ. ಈತನಿಗೆ ದೊರೆತಿರೋ ಸ್ಥಿತಿ ಬೇರೆ ಯಾರಿಗಾದರು ದೊರೆತಿದ್ದರೆ, ಇಷ್ಟರಲ್ಲಿ ಅವರು ಅಹಂಕಾರದಿಂದ ಕೊಬ್ಬಿಹೋಗುತ್ತಿದ್ದರು. ಕ್ರಾಪು-ಗೀಪನ್ನು ಬಿಡಿಸಿ ಇನ್ನೂ ಏನೇನೊ ತಮಃಪ್ರಧಾನ ಕಾರ್ಯಗಳಲ್ಲಿ ತೊಡಗಿಬಿಡುತ್ತಾ ಇದ್ದರು. ತಮ್ಮ ಪಾಂಡಿತ್ಯದ ಪ್ರತಿಭೆಯನ್ನು ತೋರಿಸಿಬಿಡುತ್ತಿದ್ದರು. ಆ ದಪ್ಪ ಬ್ರಾಹ್ಮಣನಲ್ಲಿ (ಪ್ರಾಣಕೃಷ್ಣನಲ್ಲಿ) ಇನ್ನೂ ಸ್ವಲ್ಪ ಇದೆ. (ಮಾಸ್ಟರಿಗೆ) ಮಹಿಮಚಕ್ರವರ್ತಿ ಅನೇಕ ಪುಸ್ತಕಗಳನ್ನು ಓದಿದ್ದಾನೆ, ಅಲ್ಲವೆ?" ಅಂತ.

ಮಾಸ್ಟರ್: "ಹೌದು, ಆತ ಅನೇಕ ಪುಸ್ತಕಗಳನ್ನು ಓದಿದ್ದಾನೆ."

ಶ್ರೀರಾಮಕೃಷ್ಣರು ನಗುತ್ತ: "ಈತ ಮತ್ತು ಗಿರೀಶ ಒಂದು ಕಡೆ ಸೇರುವುದಾದರೆ ಎಷ್ಟು ಚೆನ್ನಾಗಿರುತ್ತದೆ! ಆಗ ಇಬ್ಬರೂ ವಿಚಾರದಲ್ಲಿ ತೊಡಗೋದನ್ನು ಕೇಳಿ ಆನಂದಪಡಬಹುದು."

ಗಿರೀಶ: "ಸಾಧನೆಯ ಮೂಲಕ ಎಲ್ಲರೂ ಶ್ರೀಕೃಷ್ಣನಂತೆ ಆಗಿಬಿಡಬಹುದು ಎಂದು ಆತ ಹೇಳುತ್ತಿದ್ದಾನಲ್ಲವೆ?"

ಶ್ರೀರಾಮಕೃಷ್ಣರು: "ತದ್ವತ್ ಅಲ್ಲ; ಆದರೆ ಅದರ ಹಾಗೆ."

ಭಕ್ತ: "ಒಳ್ಳೇದು, ಎಲ್ಲರೂ ಶ್ರೀಕೃಷ್ಣನಂತಾಗಲಾಗುವುದೆ?"

ಶ್ರೀರಾಮಕೃಷ್ಣರು: "ಅವತಾರಪುರುಷನನ್ನು ಅಥವಾ ಅವತಾ

ರಾಂಶಸಂಭೂತನನ್ನು ಈಶ್ವರಕೋಟಿ ಅಂತ ಕರೆಯುತ್ತಾರೆ. ಸಾಮಾನ್ಯ ಮನುಷ್ಯನನ್ನು ಜೀವ ಅಥವಾ ಜೀವಕೋಟಿ ಅಂತ ಕರೆಯುತ್ತಾರೆ. ಯಾರು ಜೀವಕೋಟಿಗಳೊ ಅವರು ಸಾಧನೆಯ ಮೂಲಕ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಲ್ಲರು; ಆದರೆ ಸಮಾಧಿ ದೊರೆತನಂತರ ಮತ್ತೆ ಹಿಂದಿರುಗಿ ಬರಲಾರರು.

"ಈಶ್ವರಕೋಟಿಗಳನ್ನು ರಾಜಕುಮಾರನಿಗೆ ಹೋಲಿಸಬಹುದು. ಅರಮನೆಯ ಏಳು ಅಂತಸ್ತಿನ ಬೀಗದಕೈಗಳೂ ಆತನ ಹತ್ತಿರವೆ. ಆತ ಆ ಏಳು ಅಂತಸ್ತುಗಳಿಗೂ ಹತ್ತಿಹೋಗಬಲ್ಲ ಮತ್ತು ಇಚ್ಛೆ ಬಂದಾಗ ಕೆಳಕ್ಕೂ ಇಳಿದುಬರಬಲ್ಲ. ಜೀವಕೋಟಿಯನ್ನು ಒಬ್ಬ ಸಾಮಾನ್ಯ ಉದ್ಯೋಗಸ್ಥನಿಗೆ ಹೋಲಿಸಬಹುದು. ಆತ ಅರಮನೆಯ ಎಲ್ಲೋ ಕೆಲವು ಕೊಠಡಿಗಳಿಗೆ ಮಾತ್ರ ಹೋಗಿ ಬರಬಲ್ಲ; ಅವನಿಗಿರೋ ಅವಕಾಶ ಅಷ್ಟು ಮಾತ್ರವೇ.

"ಜನಕ ಜ್ಞಾನಿ. ಸಾಧನೆಯ ಮೂಲಕ ಬ್ರಹ್ಮಜ್ಞಾನವನ್ನು ಪಡೆದ. ಆದರೆ ಶುಕದೇವ ಜ್ಞಾನದ ಮೂರ್ತಿಯೇ."

ಗಿರೀಶ: "ಆಹಾ!"

ಶ್ರೀರಾಮಕೃಷ್ಣರು: "ಶುಕದೇವ ಸಾಧನೆಯ ಮೂಲಕ ಬ್ರಹ್ಮ ಜ್ಞಾನವನ್ನು ಪಡೆಯಬೇಕಾಗಿ ಏನೂ ಬರಲಿಲ್ಲ. ಶುಕದೇವನ ಹಾಗೆ ನಾರದನಿಗೂ ಬ್ರಹ್ಮಜ್ಞಾನವಿತ್ತು. ಆದರೆ ಆತ ಲೋಕಶಿಕ್ಷಣಾರ್ಥಕ್ಕಾಗಿ ಭಕ್ತನಾಗಿಯೇ ಉಳಿದಿದ್ದ. ಪ್ರಹ್ಲಾದ ಕೆಲವು ವೇಳೆ 'ಸೋऽಹಂ' ಭಾವ ದಲ್ಲಿ, ಕೆಲವು ವೇಳೆ ದಾಸ್ಯಭಾವದಲ್ಲಿ, ಕೆಲವು ವೇಳೆ ಸಂತಾನಭಾವದಲ್ಲಿ ಇರುತ್ತಿದ್ದ. ಹನುಮಂತನದೂ ಇದೇ ಅವಸ್ಥೆ.

"ಇಚ್ಛೆಪಟ್ಟರೆಯೇ ಈ ಅವಸ್ಥೆ ಎಲ್ಲರಿಗೂ ದೊರೆಯದು. ಕೆಲವು ಬಂಬುಗಳು ಇನ್ನು ಕೆಲವಕ್ಕಿಂತ ಹೆಚ್ಚು ಟೊಳ್ಳಾಗಿರುತ್ತವೆ; ಇನ್ನು ಕೆಲವು ಬಂಬುಗಳು ಮತ್ತೆ ಕೆಲವಕ್ಕಿಂತ ಹೆಚ್ಚು ಗಟ್ಟಿಯಾಗಿರುತ್ತವೆ."

ಒಬ್ಬ ಭಕ್ತ: "ನಿಮ್ಮ ಆಧ್ಯಾತ್ಮಿಕ ಅನುಭವಗಳೆಲ್ಲ ಇತರರ ಆದರ್ಶ ಕ್ಕಾಗಿ ಎಂದು ತಾವು ತಿಳಿಸಿದೀರಿ. ಆದ್ದರಿಂದ ನಾವು ಏನು ಮಾಡಬೇಕು ಎಂಬುದನ್ನು ದಯವಿಟ್ಟು ತಿಳಿಸಿ."

ಶ್ರೀರಾಮಕೃಷ್ಣರು: "ಭಗವಂತನ ಸಾಕ್ಷಾತ್ಕಾರ ದೊರಕಬೇಕಾ ದರೆ ತೀವ್ರ ವೈರಾಗ್ಯ ಅತ್ಯಂತ ಆವಶ್ಯಕ. ಯಾವಾವುದು ಭಗವಂತನ

ಸಾಕ್ಷಾತ್ಕಾರಕ್ಕೆ ತಡೆಯಾಗಿ ತೋರಿಬರುವುವೊ ಅವನ್ನೆಲ್ಲ ಒಡನೆಯೇ ತ್ಯಾಗ ಮಾಡಿಬಿಡಬೇಕು. ಮುಂದೆ ನೋಡಿಕೊಳ್ಳೋಣ ಅಂತ ಸುಮ್ಮನೆ ಕೈ ಕಟ್ಟಿ ಕುಳಿತಿರಬಾರದು. ಕಾಮಕಾಂಚನವೇ ಭಗವಂತನ ಸಾಕ್ಷಾತ್ಕಾರಕ್ಕೆ ಅಡ್ಡಲಾಗಿ ಬಿದ್ದಿರುವ ತಡೆ. ಮನಸ್ಸನ್ನು ಅದರ ಕಡೆಯಿಂದ ಎಳೆದುಕೊಂಡುಬಿಡಬೇಕು.

"ಮೈಗಳ್ಳತನವಿದ್ದರೆ ಆಗದು. ಒಬ್ಬ ಹೆಗಲ ಮೇಲೆ ಒಂದು ಚೌಕ ಹಾಕಿಕೊಂಡು ಸ್ನಾನಕ್ಕೆ ಹೋಗುತ್ತಿದ್ದ. ಆಗ ಹೆಂಡತಿ ಹೇಳಿದಳು, 'ನೀವು ಯಾವ ಕೆಲಸಕ್ಕೂ ಬಂದವರಲ್ಲ. ದಿವಸ ದಿವಸಕ್ಕೂ ಮುಪ್ಪಾಗುತ್ತ ಬರುತ್ತಿದೀರಿ. ಆದರೂ ನೀವು ನಿಮ್ಮ ಹಿಂದಿನ ಚಾಳಿಗಳನ್ನು ಇನ್ನೂ ಬಿಟ್ಟಿಲ್ಲ. ನನ್ನನ್ನು ಅಗಲಿ ಒಂದು ದಿನವೂ ನೀವು ಜೀವಸಹಿತ ಬದುಕಿರಲಾರಿರಿ. ಆದರೆ ಅವನನ್ನು ನೋಡಿ, ಎಂಥ ತ್ಯಾಗಿ!' ಅಂತ.

"ಪತಿ: 'ಅದು ಹೇಗೆ? ಆತ ಅಂಥ ತ್ಯಾಗದ ಕೆಲಸ ಏನು ಮಾಡಿದಾನೆ?'

"ಪತ್ನಿ: 'ಆತನಿಗೆ ಹದಿನಾರು ಜನ ಹೆಂಡತಿಯರು. ಒಬ್ಬೊಬ್ಬಳನ್ನಾಗಿ ತ್ಯಜಿಸುತ್ತಾ ಬರುತ್ತಿದಾನೆ. ನಿಮ್ಮ ಕೈಯಲ್ಲಿ ಆ ಕಾರ್ಯ ಎಂದಿಗೂ ಆಗದ ಮಾತು.'

"ಪತಿ: 'ಒಬ್ಬೊಬ್ಬಳನ್ನಾಗಿ ತ್ಯಜಿಸೋದು! ನಿನಗೆಲ್ಲೊ ಹುಚ್ಚು. ಅವನ ಕೈಯಲ್ಲಿ ತ್ಯಜಿಸೋಕೆ ಆಗೋಹಾಗೆಯೇ ಇಲ್ಲ. ಯಾರು ತ್ಯಾಗಿಯಾಗಬೇಕೆಂದು ಬಯಸುತ್ತಾನೊ ಆತ ಕಿಂಚಿತ್ ಕಿಂಚಿತ್ತಾಗಿ ತ್ಯಜಿಸುತ್ತಾ ಹೋಗುತ್ತಾನೇನು?'

"ಪತ್ನಿ ನಗುತ್ತ: 'ಆದರೂ ಆತ ನಿಮಗಿಂತ ಎಷ್ಟೋ ಮೇಲು.'

"ಪತಿ: 'ನೀನೊಬ್ಬಳು ಮಂಕು; ನಿನಗೆ ಅರ್ಥವಾಗುತ್ತಿಲ್ಲ. ಆತನ ಕೈಯಲ್ಲಿ ತ್ಯಜಿಸೋಕಾಗೋದಿಲ್ಲ, ಆದರೆ ನಾನು ತ್ಯಜಿಸಬಲ್ಲೆ. ಇಗೋ ನೋಡು! ಹೊರಟೇಬಿಟ್ಟೆ!'"

ಪರಮಹಂಸರು ಮತ್ತೆ ಮಾತು ಮುಂದುವರಿಸಿದರು: "ತೀವ್ರ ವೈರಾಗ್ಯ ಎಂಬುದು ಇದೇನೆ. ವಿವೇಕ ಬಂದೊಡನೆಯೇ ತ್ಯಜಿಸಿಬಿಟ್ಟ. ಹೆಗಲ ಮೇಲೆ ಬರೀ ಒಂದು ಚೌಕ ಹಾಕಿಕೊಂಡಿದ್ದವನು ಹಾಗೆಯೇ ಹೊರಟುಹೋದ. ಸಂಸಾರದ ವ್ಯವಸ್ಥೆ-ಗಿವಸ್ಥೆ ಮಾಡಿಹೋಗೋಕೂ

ಮನೆಗೆ ಹಿಂದಿರುಗಿ ಕಾಲು ಹಾಕಲಿಲ್ಲ. ಹಿಂದಕ್ಕೆ ತಿರುಗಿ ಒಮ್ಮೆ ಯಾದರೂ ಮನೆಯ ಕಡೆಗೆ ದೃಷ್ಟಿಹಾಕಲಿಲ್ಲ.

"ಯಾರು ತ್ಯಾಗಿಯಾಗಬೇಕು ಅಂತಾನೊ ಆತನಿಗೆ ಬಹಳ ಬಲ ಯುತವಾದ ಮನಸ್ಸು ಬೇಕು. ಡಕಾಯಿತರ ಹಾಗೆ ಯಾವುದಕ್ಕೂ ಅಂಜದ ಧೈರ್ಯವಿರಬೇಕು. ಅವರು ಮನೆಯನ್ನು ಲೂಟಿಮಾಡಲು ಮುನ್ನ ಅಬ್ಬರಿಸುತ್ತಾರೆ, 'ಹೊಡಿ! ಬಡಿ! ಕಡಿ!' ಅಂತ.

"ಆತನ ಪಾದಪದ್ಮಗಳಲ್ಲಿ ಭಕ್ತಿ, ಪ್ರೇಮ ಉಂಟಾಗುವಂತೆ ವ್ಯವ ಹರಿಸುತ್ತಾ ಕಾಲ ಕಳೆಯಿರಿ. ಮತ್ತೆ ಬೇರೆ ಇನ್ನೇನು ತಾನೆ ಸಾಧ್ಯ ನಿಮ್ಮ ಕೈಯಲ್ಲಿ? ಶ್ರೀಕೃಷ್ಣ ಮಥುರೆಗೆ ಹೊರಟುಹೋದ ಮೇಲೆ ಆತನ ದರ್ಶನ ದೊರೆಯದೆ ಹೋದುದರಿಂದ ಯಶೋದೆ ತೀರ ಹುಚ್ಚಿಯಂತೆಯೇ ಆಗಿ ಶ್ರೀಮತಿಯ ಪತ್ತಿರಕ್ಕೆ ಹೋದಳು. ಯಶೋದೆಯ ದುಃಖವನ್ನು ನೋಡಿ, ಶ್ರೀಮತಿ ಆದ್ಯಾಶಕ್ತಿಯ ರೂಪವನ್ನು ಧರಿಸಿ ಆಕೆಗೆ ದರ್ಶನಕೊಟ್ಟು ಹೇಳಿದಳು, 'ಮಗು, ನನ್ನಿಂದ ಒಂದು ವರವನ್ನು ಬೇಡಿಕೊ' ಅಂತ. ಯಶೋದೆ ಹೇಳಿದಳು, 'ಹೇ ತಾಯಿ, ನಾನು ಮತ್ತೆ ಬೇರೆ ಯಾವುದಕ್ಕೆ ಪ್ರಾರ್ಥಿಸಲಿ? ಆದರೆ, ನಾನು ಕಾಯಾ ಮನಸಾ ವಾಚಾ ಶ್ರೀಕೃಷ್ಣನ ಸೇವೆಯನ್ನು ಮಾಡುವಂತೆಯೂ; ಈ ಕಣ್ಣುಗಳಿಂದ ಆತನ ಭಕ್ತರ ದರ್ಶನ ಮಾಡುವಂತೆಯೂ; ಎಲ್ಲೆಲ್ಲಿ ಆತ ಕ್ರೀಡಿಸುವನೊ ಅಲ್ಲಿಗೆ ಈ ಪಾದ ಗಳಿಂದ ನಡೆದುಹೋಗುವಂತೆಯೂ; ಈ ಕೈಗಳಿಂದ ಆತನ ಮತ್ತು ಆತನ ಭಕ್ತರ ಸೇವೆಯನ್ನು ಮಾಡುವಂತೆಯೂ; ಪ್ರತಿಯೊಂದು ಇಂದ್ರಿಯವೂ ಕೇವಲ ಆತನ ಕೆಲಸದಲ್ಲಿಯೇ ನಿರತವಾಗಿರುವಂತೆಯೂ ಕರುಣಿಸು' ಅಂತ."

ಪರಮಹಂಸರು ಈ ಮಾತುಗಳನ್ನು ಆಡುತ್ತ ಆಡುತ್ತ ಇದ್ದಹಾಗೆಯೆ ಮತ್ತೆ ಭಾವಾವಿಷ್ಟರಾಗುತ್ತಿದಾರೆ. ಇದ್ದಕ್ಕಿದ್ದಹಾಗೆ ತಮ್ಮಷ್ಟಕ್ಕೆ ತಾವೇ ಹೇಳಿಕೊಳ್ಳುತ್ತಿದಾರೆ, "ಸಂಹಾರಮೂರ್ತಿ ಕಾಳಿ! ಅಲ್ಲ, ನಿತ್ಯಕಾಳಿ!" ಅಂತ. ಬಹಳ ಪ್ರಯಾಸಪಟ್ಟು ತಾವು ಭಾವಾವಿಷ್ಟರಾಗುತ್ತಿದ್ದುದನ್ನು ತಡೆದು ನಿಲ್ಲಿಸಿದರು. ಈಗ ಸ್ವಲ್ಪ ನೀರು ಕುಡಿದರು. ಮತ್ತೆ ಯಶೋದೆಯ ಮಾತನ್ನು ಎತ್ತಿದರು. ಅಷ್ಟರಲ್ಲಿ ಮಹೇಂದ್ರಮುಖರ್ಜಿ ಕೊಠಡಿಯನ್ನು ಪ್ರವೇಶಿಸಿದನು. ಈತ ಮತ್ತು ಈತನ ತಮ್ಮ ಪ್ರಿಯ ಮುಖರ್ಜಿ ಈಗತಾನೆ ಕೆಲವು ಕಾಲದಿಂದ ಪರಮಹಂಸರ ಹತ್ತಿರ ಬಂದು

ಹೋಗುತ್ತಿದಾರೆ. ಮಹೇಂದ್ರನಿಗೆ ಒಂದು ಹಿಟ್ಟಿನ ಮಿಲ್ಲು ಇದೆ ಮತ್ತು ಬೇರೆ ವ್ಯಾಪಾರಗಳೂ ಇವೆ. ಪ್ರಿಯಮುಖರ್ಜಿಗೆ ಎಂಜಿನೀಯರ್ ಕೆಲಸ ಇದೆ. ಇವರ ಕೈಕೆಳಗಿನವರು ಬಹಳ ದಕ್ಷರಾಗಿದ್ದುದರಿಂದ ಇವರಿಗೆ ಹೆಚ್ಚು ವಿರಾಮ ದೊರೆಯುತ್ತಿದ್ದಿತು. ಮಹೇಂದ್ರನ ವಯಸ್ಸು ಮೂವತ್ತಾರೊ ಮೂವತ್ತೇಳೊ ಆಗಿದ್ದಿತು. ಪ್ರಿಯಮುಖರ್ಜಿಯ ವಯಸ್ಸು ಈತನಿಗಿಂತ ಎರಡು ವರ್ಷ ಕಡಮೆ. ಇವರ ಸ್ವಂತ ಮನೆ ಕೇದೇಟಿ ಎಂಬ ಗ್ರಾಮದಲ್ಲಿದೆ. ಇವರಿಗೆ ಕಲ್ಕತ್ತದಲ್ಲಿಯೂ ಬಾಗ್‌ಬಸಾರಿನಲ್ಲಿ ಒಂದು ವಾಸದ ಮನೆ ಇದೆ. ಇವರು ಪರಮಹಂಸರನ್ನು ನೋಡಲು ಬಂದಾಗಲೆಲ್ಲ ಹರಿ ಎಂಬ ಹೆಸರಿನ ಒಬ್ಬ ಯುವಕನೂ ಇವರನ್ನು ಹಿಂಬಾಲಿಸುತ್ತಾ ಇದಾನೆ. ಆತನಿಗೆ ವಿವಾಹವಾಗಿದೆ. ಪರಮಹಂಸರನ್ನು ವಿಶೇಷವಾದ ಶ್ರದ್ಧಾಭಕ್ತಿಯಿಂದ ಕಾಣುತ್ತಿದಾನೆ. ಮಹೇಂದ್ರನಿಗೆ ಬಹಳ ದಿನಗಳಿಂದ ದಕ್ಷಿಣೇಶ್ವರಕ್ಕೆ ಬಂದು ಪರಮಹಂಸರನ್ನು ನೋಡಲಾಗಲಿಲ್ಲ. ಅವರು ಬರದೆ ಇದ್ದುದರಿಂದ ಹರಿಗೂ ಬರೋಕಾಗಲಿಲ್ಲ. ಇಂದು ಅವರಿಬರೂ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು.

ಶ್ರೀರಾಮಕೃಷ್ಣರು: "ಏನು ಸಮಾಚಾರ, ಬಹಳ ದಿವಸಗಳಿಂದ ದಕ್ಷಿಣೇಶ್ವರಕ್ಕೆ ಬರಲೇ ಇಲ್ಲವಲ್ಲ?"

ಮಹೇಂದ್ರ: "ಕಲ್ಕತ್ತದಲ್ಲಿ ಇರಲಿಲ್ಲ. ಕೇದೇಟಿಗೆ ಹೋಗಿದ್ದೆ."

ಶ್ರೀರಾಮಕೃಷ್ಣರು: "ಏನಪ್ಪ ಇದು! ನಿನಗೆ ಮಕ್ಕಳೂ ಇಲ್ಲ ಮರಿಯೂ ಇಲ್ಲ. ನೀನು ಬೇರೆಯವರ ಕೈಕೆಳಗೆ ಕೆಲಸಮಾಡಬೇಕಾಗೂ ಇಲ್ಲ. ಆದರೂ ನಿನಗೆ ಸಮಯವಿಲ್ಲವಲ್ಲ! ಹಾ ಭಗವಂತ, ಏನು ನಿನ್ನ ಸೃಷ್ಟಿ!"

ಭಕ್ತರೆಲ್ಲರು ಸುಮ್ಮನೆ ಕುಳಿತಿದಾರೆ. ಮಹೇಂದ್ರನಿಗೆ ಕಿಂಚಿತ್ ದಿಗ್ಭ್ರಮೆ ಹಿಡಿದಂತೆ ಆಗಿದೆ.

ಶ್ರೀರಾಮಕೃಷ್ಣರು ಮಹೇಂದ್ರನಿಗೆ: "ಇದನ್ನೆಲ್ಲ ನಿನಗೆ ನಾನೇಕೆ ಹೇಳುತ್ತಿದೇನೆ ಗೊತ್ತೆ? ನಿನ್ನದು ಸರಳ ಹೃದಯ ಮತ್ತು ಉದಾರ ಸ್ವಭಾವ. ಜೊತೆಗೆ ನೀನು ಭಗವದ್ಭಕ್ತ."

ಮಹೇಂದ್ರ: "ಹೌದು, ತಾವು ಇದನ್ನೆಲ್ಲ ನಮ್ಮ ಶ್ರೇಯಸ್ಸಿಗಾಗೇ ಹೇಳುತ್ತಿರೋದು."

ಶ್ರೀರಾಮಕೃಷ್ಣರು ನಗುತ್ತ: "ನಮ್ಮ ಜಾಗದಲ್ಲಿ (ದಕ್ಷಿಣೇಶ್ವರ

ದಲ್ಲಿ) ನಡೆಯೋ ಬಯಲು ನಾಟಕಕ್ಕೆ ಯಾರೂ ದುಡ್ಡುಕೊಟ್ಟು ಒಳಕ್ಕೆ ಬರಬೇಕಾಗಿಲ್ಲ. ಅದಕ್ಕಾಗಿಯೆ ಯದುಮಲ್ಲಿಕನ ತಾಯಿ ಹೇಳಿದಳು, 'ಉಳಿದ ಸಾಧುಗಳ ಹತ್ತಿರ ಹೋದರೆ ಅವರು ಯಾವಾಗ ನೋಡಿದರೂ ಕೊಡು ಕೊಡು ಅಂತಲೇ ಇರುತ್ತಾರೆ; ಆದರೆ ನಿಮ್ಮ ಹತ್ತಿರ ಬಂದರೆ ಅಂಥ ತೊಂದರೆಯೇನಿಲ್ಲ' ಅಂತ. ಪ್ರಾಪಂಚಿಕರಿಗೆ ದುಡ್ಡಿನ ಚೀಲ ಬಿಚ್ಚಬೇಕಾಗಿ ಬಂತು ಅಂದರೆ ಒಂದು ವಿಧವಾದ ಸಂಕಟ.

"ಒಂದು ಜಾಗದಲ್ಲಿ ಒಂದು ಬಯಲು ನಾಟಕ ನಡೆಯುತ್ತಿತ್ತು. ಒಬ್ಬನಿಗೆ ಅದನ್ನು ನೋಡಬೇಕು ಅಂತ ಬಹಳ ಇಚ್ಛೆ. ಇಣಕಿ ನೋಡು ತ್ತಾನೆ, ದುಡ್ಡುಕೊಟ್ಟು ಒಳಕ್ಕೆ ಹೋಗಬೇಕಾಗಿದೆ. ಆದ್ದರಿಂದ ಅಲ್ಲಿಂದ ಮೆತ್ತಗೆ ಸರಿದುಬಂದುಬಿಟ್ಟ. ಇನ್ನೊಂದು ಜಾಗದಲ್ಲಿಯೂ ಒಂದು ಬಯಲು ನಾಟಕ ನಡೆಯುತ್ತಿತ್ತು. ಅಲ್ಲಿ ವಿಚಾರಮಾಡಿ ನೋಡಲಾಗಿ ಆತನಿಗೆ ಗೊತ್ತಾಯಿತು ಅಲ್ಲಿ ಒಳಕ್ಕೆ ಹೋಗಲು ದುಡ್ಡು-ಗಿಡ್ಡು ಏನೂ ಕೊಡಬೇಕಾಗಿಲ್ಲ ಅಂತ. ಜನ ಕಿಕ್ಕಿರಿದು ತುಂಬಿದ್ದರು. ಆತ ಜನರನ್ನು ತಳ್ಳಿ-ಗಿಳ್ಳಿ ಗುಂಪಿನ ಮಧ್ಯಕ್ಕೆ ಹೋಗಿ ಒಂದು ಒಳ್ಳೆ ಜಾಗವನ್ನು ಪತ್ತೆ ಮಾಡಿಕುಳಿತು ಮೀಸೆ ಹುರಿಮಾಡುತ್ತ ನಾಟಕ ನೋಡಲಾರಂಭಿಸಿದ. (ಎಲ್ಲರೂ ನಗುತ್ತಾರೆ.)

"ನಿನ್ನ ಮನಸ್ಸನ್ನು ವಿಕ್ಷೇಪಗೊಳಿಸಲು ನಿನಗೆ ಮಕ್ಕಳು ಮರಿ ಯಾವೂ ಇಲ್ಲ. ತಿಂಗಳಿಗೆ ಎಂಟುನೂರು ಸಂಬಳ ಬರೋ ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ನನಗೆ ಗೊತ್ತುಂಟು. ಆತ ಕೇಶವಸೇನನ ಮನೆ ಯಲ್ಲಿ ನಡೆದ 'ನವಬೃಂದಾವನ' ಎಂಬ ನಾಟಕ ನೋಡಲು ಬಂದಿದ್ದ. ನಾನೂ ಅಲ್ಲಿಗೆ ಹೋಗಿದ್ದೆ. ನನ್ನೊಡನೆ ರಾಖಾಲ ಮತ್ತು ಇನ್ನೂ ಕೆಲ ವರು ಬಂದಿದ್ದರು. ಅವರು ನನ್ನ ಪಕ್ಕದಲ್ಲಿಯೇ ಕುಳಿತಿದ್ದರು. ರಾಖಾಲ ಯಾವುದಕ್ಕೋ ಎದ್ದು ಸ್ವಲ್ಪ ಹೊರಕ್ಕೆ ಹೋದ. ಆ ಡೆಪ್ಯುಟಿ ಮ್ಯಾಜಿ ಸ್ಟ್ರೇಟ್ ಅಲ್ಲಿಗೆ ಬಂದು ತನ್ನ ಮಗನನ್ನು ರಾಖಾಲ ಕುಳಿತಿದ್ದ ಜಾಗದಲ್ಲಿ ಕೂರಿಸಿ ತಾನೂ ಹತ್ತಿರ ಕುಳಿತುಕೊಂಡ. ನಾನು ಆತನಿಗೆ ಹೇಳಿದೆ, 'ಇಲ್ಲಿ ಆತನನ್ನು ಕೂರಿಸೋದು ಬೇಡ' ಅಂತ. ಆಗ ನನ್ನ ಅವಸ್ಥೆ ಅಂಥದು, ಹತ್ತಿರ ಇರೋರು ಏನು ಹೇಳಿದರೂ ನಾನು ಅದರಂತೆ ಮಾಡ ಬೇಕಾಗಿ ಬರುತ್ತಿತ್ತು; ಅದಕ್ಕಾಗಿ ನಾನು ರಾಖಾಲನನ್ನು ಹತ್ತಿರ ಕೂರಿಸಿ ಕೊಂಡಿದ್ದೆ. ನಾಟಕ ಮುಗಿಯುವವರೆಗೆ ಆ ಡೆಪ್ಯುಟಿ ತನ್ನ ಮಗನೊಡನೆ

ಕಿಚಿಪಿಚಿಗುಟ್ಟುತ್ತಲೇ ಇದ್ದ. ಆ ನೀಚ ಒಮ್ಮೆಯೂ ಕೂಡ ನಾಟಕದ ಕಡೆ ಕಣ್ಣು ಹಾಕಲೇ ಇಲ್ಲ. ಬಳಿಕ ಗೊತ್ತಾಯಿತು ಆತ ತನ್ನ ಹೆಂಡತಿಯ ದಾಸನೂ ಆಗಿದಾನೆ ಅಂತ. ಆಕೆ, ಏಳು ಅಂದರೆ ಏಳುತ್ತಾನಂತೆ, ಕೂರು ಅಂದರೆ ಕೂರುತ್ತಾನಂತೆ. ಆ ಕೋತಿ ಮುಖದ ಹುಡುಗನ ದೆಸೆಯಿಂದ ಆತನಿಗೆ ನಾಟಕ ನೋಡೋಕೆ ಆಗಲೇ ಇಲ್ಲ.

(ಮಹೇಂದ್ರನಿಗೆ) "ನೀನು ಧ್ಯಾನ-ಗೀನ ಮಾಡುತ್ತ ಇದ್ದೀಯೇನು?"

ಮಹೇಂದ್ರ: "ಹೌದು, ಎಲ್ಲೋ ಅಲ್ಪಸ್ವಲ್ಪ."

ಶ್ರೀರಾಮಕೃಷ್ಣರು: "ಒಮ್ಮೊಮ್ಮೆ ಅಲ್ಲಿಗೆ ಬಾ."

ಮಹೇಂದ್ರ ನಗುತ್ತ: "ಆಗಲಿ, ಬರುತ್ತೇನೆ. ನನ್ನಲ್ಲಿ ತಂಗು-ತಡೆಗಳು ತಿರುಚು-ಮುರುಚುಗಳು ಎಲ್ಲೆಲ್ಲಿವೆ ಎಂಬುದು ನಿಮಗೆ ಗೊತ್ತು. ದಯವಿಟ್ಟು ಆಗ ನೀವು ಅವನ್ನು ಸರಿಪಡಿಸಿಬಿಡೋರಂತೆ."

ಶ್ರೀರಾಮಕೃಷ್ಣರು ನಗುತ್ತ: "ಮೊದಲು ನೀನು ಅಲ್ಲಿಗೆ ಬಾ; ತರುವಾಯ ಅವು ಎಲ್ಲೆಲ್ಲಿ ಇವೆ ಎಂಬುದನ್ನು ನಿನ್ನ ಅಂಗಾಂಗಗಳನ್ನೆಲ್ಲ ಹಿಸುಕಿ ಪತ್ತೆಮಾಡುತ್ತೇನೆ. ಹಾಗಾದರೆ, ಏಕೆ ಅಲ್ಲಿಗೆ ಬರುತ್ತಿಲ್ಲ?"

ಮಹೇಂದ್ರ: "ಕೆಲಸಕಾರ್ಯಗಳ ಒತ್ತಡದಿಂದ ಬರೋಕಾಗುತ್ತಿಲ್ಲ. ಜೊತೆಗೆ ನಾನು ಆಗಾಗ ಕೇದೇಟಿಯಲ್ಲಿರೋ ಮನೆಗೂ ಹೋಗಿ ಬರಬೇಕಾಗಿದೆ."

ಶ್ರೀರಾಮಕೃಷ್ಣರು ಭಕ್ತರ ಕಡೆ ಬೆರಳು ಮಾಡಿ ಮಹೇಂದ್ರನಿಗೆ: "ಇವರಿಗೆಲ್ಲ ಮನೆಮಠಗಳೇ ಆಗಲಿ, ಕೆಲಸಕಾರ್ಯಗಳೇ ಆಗಲಿ ಇಲ್ಲವೇನು? ಇವರು ಬರುತ್ತಾ ಇದಾರಲ್ಲ, ಅದು ಹೇಗೆ?

(ಹರಿಗೆ) "ನೀನೇಕೆ ದಕ್ಷಿಣೇಶ್ವರಕ್ಕೆ ಬರುತ್ತಿಲ್ಲ? ಬಹುಶಃ ಮನೆಗೆ ಹೆಂಡತಿ ಬಂದಿರಬಹುದು ಅಂತ ಕಾಣುತ್ತೆ?"

ಹರಿ: "ಇಲ್ಲ, ಇಲ್ಲ."

ಶ್ರೀರಾಮಕೃಷ್ಣರು: "ಹಾಗಾದರೆ ನನ್ನನ್ನು ಏಕೆ ಮರೆತುಬಿಟ್ಟೆ?"

ಹರಿ: "ದೇಹಾರೋಗ್ಯ ಸರಿಯಾಗಿರಲಿಲ್ಲ."

ಶ್ರೀರಾಮಕೃಷ್ಣರು ಭಕ್ತರಿಗೆ: "ದುರ್ಬಲನಾಗಿ ಕಾಣುತ್ತಿದಾನೆ. ಈತನ ಭಕ್ತಿ ಕಡಮೆ ದರ್ಜೆಯದೇನಲ್ಲ; ಸುಮ್ಮನೆ ಉಕ್ಕಿ ಹರಿಯುತ್ತಿದೆ. ಆದರೆ ಅದು ಉತ್ಪಾತ-ಭಕ್ತಿ." (ನಗು.)

ಪರಮಹಂಸರು ತಮ್ಮ ಒಬ್ಬ ಭಕ್ತನ ಹೆಂಡತಿಯನ್ನು "ಹಾಬೀ ತಾಯಿ" ಅಂತ ಕರೆಯುತ್ತಿದ್ದರು. ಆಕೆಯ ತಮ್ಮ ಬಂದಿದಾನೆ. ಕಾಲೇಜಿನಲ್ಲಿ ಓದುತ್ತಿದಾನೆ. ವಯಸ್ಸು ಸುಮಾರು ಇಪ್ಪತ್ತು. ಕ್ರಿಕೆಟ್ಟು ಆಟಕ್ಕೆ ಹೋಗಲು ಎದ್ದು ನಿಂತ. ಆತನ ತಮ್ಮ ದ್ವಿಜ ಪರಮಹಂಸರ ಭಕ್ತ. ಆತನೂ ಅಣ್ಣನೊಡನೆ ಎದ್ದು ನಿಂತ. ಸಹೋದರರಿಬ್ಬರೂ ಕೊಠಡಿಯನ್ನು ಬಿಟ್ಟು ಹೊರಕ್ಕೆ ಹೋದರು. ಕೆಲವು ನಿಮಿಷಗಳಾದ ನಂತರ ದ್ವಿಜ ಹಿಂದಿರುಗಿ ಕೊಠಡಿಗೆ ಬಂದುಬಿಟ್ಟ. ಪರಮಹಂಸರು ಆತನನ್ನು ಕೇಳಿದರು, "ಏಕೆ ಹಿಂದಿರುಗಿ ಬಂದುಬಿಟ್ಟೆ?" ಅಂತ. ಆಗ ಒಬ್ಬ ಭಕ್ತ ಹೇಳಿದ, "ಬಹುಶಃ ಈತನಿಗೆ ಸಂಗೀತ ಕೇಳಲು ಇಚ್ಛೆಯಾಗಿರಬೇಕು. ಅದಕ್ಕಾಗಿ ಹಿಂದಿರುಗಿ ಬಂದಿದಾನೆ ಅಂತ ಕಾಣುತ್ತೆ" ಅಂತ.

ಇಂದು ಇಲ್ಲಿ ಬ್ರಾಹ್ಮಸಮಾಜದ ತ್ರೈಲೋಕ್ಯ ಹಾಡುವನು. ಪಲ್ಟು ಕೂಡ ಬಂದುಬಿಟ್ಟ. ಪರಮಹಂಸರು ಹೇಳಿದರು: "ಯಾರಿವನು? ಓಹೋ! ಪಲ್ಟೂ!" ಅಂತ.

ಇನ್ನೊಬ್ಬ ಯುವಕಭಕ್ತ ಪೂರ್ಣನೂ ಬಂದುಬಿಟ್ಟ. ಪರಮಹಂಸರು ಬಹಳ ಕಷ್ಟ ತೆಗೆದುಕೊಂಡು ಆತನನ್ನು ಬರಮಾಡಿಕೊಂಡಿದಾರೆ. ಪೂರ್ಣನ ಮನೆಯವರು ಆತನನ್ನು ಪರಮಹಂಸರ ಹತ್ತಿರ ಕಳಿಸೋಕೆ ಸ್ವಲ್ಪವೂ ಇಚ್ಛೆಪಡುತ್ತಿಲ್ಲ. ಮಾಸ್ಟರ್ ಅಧ್ಯಾಪಕನಾಗಿರೋ ಸ್ಕೂಲಿನಲ್ಲಿ ಆತ ಐದನೆ ತರಗತಿಯಲ್ಲಿ ಓದುತ್ತಿದಾನೆ. ಬಂದೊಡನೆಯೇ ಪೂರ್ಣ ಪರಮಹಂಸರಿಗೆ ಪ್ರಣಾಮಮಾಡಿದ. ಅವರು ಆತನನ್ನು ತಮ್ಮ ಹತ್ತಿರ ಕೂರಿಸಿಕೊಂಡು ಆತನೊಡನೆ ಮೆತ್ತ ಮೆತ್ತಗೆ ಮಾತನಾಡುತ್ತಿದಾರೆ. ಮಾಸ್ಟರ್ ಮಾತ್ರ ಅವರ ಹತ್ತಿರ ಕುಳಿತಿದಾನೆ. ಉಳಿದ ಭಕ್ತರು ಅನ್ಯಮನಸ್ಕರಾಗಿದಾರೆ. ಗಿರೀಶ ಕೊಠಡಿಯಲ್ಲಿ ಒಂದು ಕಡೆ ಕುಳಿತು ಕೇಶವನ ಜೀವನ ಚರಿತ್ರೆಯನ್ನು ಓದುತ್ತಿದಾನೆ.

ಶ್ರೀರಾಮಕೃಷ್ಣರು ಪೂರ್ಣನಿಗೆ: "ಇನ್ನೂ ಹತ್ತಿರ ಬಂದು ಕುಳಿತುಕೊ."

ಗಿರೀಶ ಮಾಸ್ಟರಿಗೆ: "ಈ ಹುಡುಗ ಯಾರು?"

ಗಿರೀಶನಿಗೆ ನೇರವಾಗಿ ಉತ್ತರ ಕೊಟ್ಟರೆ, ಪರರ ಮೂಲಕ ಪೂರ್ಣ ಇಲ್ಲಿಗೆ ಬಂದಿದ್ದುದು ಆತನ ಮನೆಯವರಿಗೆ ಗೊತ್ತಾಗಬಹುದು ಎಂಬ

ಭಯ ಮಾಸ್ಟರಿಗೆ. ಅದಕ್ಕಾಗಿ ಆತ ಗಿರೀಶನಿಗೆ ಹೇಳಿದ, "ಆತನೆ? ಒಬ್ಬ ಹುಡುಗ" ಅಂತ.

ಗಿರೀಶ ನಗುತ್ತ: "ಅದನ್ನು ಹೇಳೋಕೆ ಒಂದು ಭೂತ-ಗೀತವೇನು ಬೇಕಾಗಿಲ್ಲ."

ಪರಮಹಂಸರು ಮತ್ತು ಪೂರ್ಣ ಮೆಲ್ಲ ಮೆಲ್ಲಗೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನಾನು ಹೇಳಿದ ಹಾಗೆಲ್ಲ ನಡೆದುಕೊಳ್ಳುತ್ತಾ ಇದೀಯೇನು?"

ಪೂರ್ಣ: "ಹೌದು, ನಡೆದುಕೊಳ್ಳುತ್ತಾ ಇದೇನೆ."

ಶ್ರೀರಾಮಕೃಷ್ಣರು: "ನಿನಗೆ ಸ್ವಪ್ನ ಬೀಳುತ್ತದೆಯೇನು? ಅದರಲ್ಲಿ ನೀನು ಬೆಂಕಿಯ ಜ್ವಾಲೆ, ಪಂಜಿನ ಬೆಳಕು, ಮುತ್ತೈದೆ, ಸ್ಮಶಾನ ಇವನ್ನೆಲ್ಲ ಕಂಡಿದೀಯೇನು? ಇವನ್ನೆಲ್ಲ ಸ್ವಪ್ನದಲ್ಲಿ ಕಾಣೋದು ಶುಭಸೂಚಕವಾದ್ದು."

ಪೂರ್ಣ: "ನಿಮ್ಮನ್ನು ನೋಡಿದೇನೆ. ನೀವು ಕುಳಿತುಕೊಂಡು ನನಗೆ ಏನೋ ಹೇಳುತ್ತಿದ್ದಿರಿ."

ಶ್ರೀರಾಮಕೃಷ್ಣರು: "ಏನು, ಉಪದೇಶ-ಗಿಪದೇಶವೇನು? ಎಲ್ಲಿ, ಸ್ವಲ್ಪ ಹೇಳು ನೋಡೋಣ."

ಪೂರ್ಣ: "ಜ್ಞಾಪಕದಲ್ಲಿಲ್ಲ."

ಶ್ರೀರಾಮಕೃಷ್ಣರು: "ಹೋಗಲಿ ಬಿಡು. ಅದು ಬಹಳ ಒಳ್ಳೆಯ ಸ್ವಪ್ನ. ನೀನು ಮುಂದುವರಿಯುತ್ತೀಯೆ. ನನ್ನ ಕಡೆಗೆ ತಾನೆ ನಿನ್ನ ಮನಸ್ಸು ಎಳೆಯುತ್ತಿರೋದು?"

ಕೆಲವು ನಿಮಿಷಗಳನಂತರ ಪರಮಹಂಸರು ಪೂರ್ಣನಿಗೆ ಹೇಳಿದರು, "ಏನು, ನೀನು ಅಲ್ಲಿಗೆ ಹೋಗೋದಿಲ್ಲ?" ಅಂತ. ಅಲ್ಲಿಗೆ ಅಂದರೆ ದಕ್ಷಿಣೇಶ್ವರಕ್ಕೆ. ಪೂರ್ಣ ಹೇಳಿದ, "ನಾನು ಮಾತು ಕೊಡಲಾರೆ" ಅಂತ.

ಶ್ರೀರಾಮಕೃಷ್ಣರು: "ಏಕೆ? ಅಲ್ಲಿ ನಿನ್ನ ಸಂಬಂಧಿಗಳು ಯಾರೊ ಒಬ್ಬರು ಇದಾರೆ, ಅಲ್ಲವೆ?"

ಪೂರ್ಣ: "ಹೌದು, ಇದಾರೆ. ಆದರೆ ಅಲ್ಲಿಗೆ ಹೋಗೋದು ಸರಿಯಲ್ಲ."

ಗಿರೀಶ ಕೇಶವಸೇನನ ಜೀವನ ಚರಿತ್ರೆ ಓದುತ್ತಿದಾನೆ. ಅದನ್ನು

ಬ್ರಾಹ್ಮಸಮಾಜದ ತ್ರೈಲೋಕ್ಯ ಬರೆದಿದಾನೆ. ಅದರಲ್ಲಿ ತ್ರೈಲೋಕ್ಯ ಒಂದು ಕಡೆ ಬರೆದಿದಾನೆ: ಹಿಂದೆ ಪರಮಹಂಸರು ಸಂಸಾರವನ್ನು ಒಂದು ವಿಶೇಷವಾದ ವಿರಕ್ತದೃಷ್ಟಿಯಿಂದ ನೋಡುತ್ತಿದ್ದರು; ಆದರೆ ಕೇಶವಸೇನನೊಡನೆ ಬೆರೆತು ಮಾಡಿ ಅವರು ತಮ್ಮ ದೃಷ್ಟಿಯನ್ನು ಬದಲಾಯಿಸಿಕೊಂಡಿದಾರೆ. ಈಗ ಅವರು ಹೇಳುತ್ತಿದಾರೆ, ಸಂಸಾರದಲ್ಲಿ ಇದ್ದರೂ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಬಹುದು ಅಂತ. ತ್ರೈಲೋಕ್ಯ ಹೀಗೆ ಬರೆದಿರೋದನ್ನು ಅನೇಕರು ಓದಿ ಅದನ್ನು ಪರಮಹಂಸರಿಗೆ ತಿಳಿಸಿದ್ದರು. ಇಂದು ಅದನ್ನು ಪರಮಹಂಸರ ಮುಂದೆಯೂ ಭಕ್ತರು ಓದಿದರು. ಭಕ್ತರು ಇಚ್ಛೆಪಟ್ಟಿದಾರೆ ಇಂದು ಆ ವಿಷಯವಾಗಿ ತ್ರೈಲೋಕ್ಯನೊಡನೆ ಮಾತುಕತೆಯಾಡಬೇಕೆಂದು.

ಆ ಪುಸ್ತಕ ಗಿರೀಶನ ಕೈಯಲ್ಲಿ ಇರೋದನ್ನು ನೋಡಿ ಪರಮಹಂಸರು ಗಿರೀಶ, ಮಾಸ್ಟರ್, ರಾಮ ಮೊದಲಾದ ಭಕ್ತರಿಗೆ ಹೇಳುತ್ತಿದಾರೆ, “ಇವರು ಸಂಸಾರದಲ್ಲಿಯೇ ನಿರತರಾಗಿದಾರೆ. ಅದಕ್ಕಾಗಿಯೇ ಇವರು ‘ಸಂಸಾರ, ಸಂಸಾರ’ ಅಂತ ಹೊಡೆದುಕೊಳ್ಳುತ್ತಿರೋದು. ಇವರು ಕಾಮಕಾಂಚನದಲ್ಲೇ ಮುಳುಗಿಹೋಗಿದಾರೆ. ಆದರೆ ಭಗವಂತನ ಸಾಕ್ಷಾತ್ಕಾರ ದೊರೆತ ಮೇಲೆ ಈ ವಿಧವಾದ ಮಾತುಗಳು ಇವರ ಬಾಯಿಂದ ಬರೋದಿಲ್ಲ. ಭಗವದಾನಂದ ದೊರೆತಮೇಲೆ ಸಂಸಾರದಾನಂದ ಕಾಕವಿಷ್ಟದೋಪಾದಿಯಲ್ಲಿ ತೋರಿಬರುತ್ತದೆ. ನಾನು ಪ್ರಾರಂಭದಲ್ಲಿಯೇ ಎಲ್ಲವನ್ನೂ ತ್ಯಜಿಸಿಬಿಟ್ಟೆ. ಪ್ರಾಪಂಚಿಕರ ಸಹವಾಸವನ್ನೇನೊ ತ್ಯಜಿಸಿಯೇ ಬಿಟ್ಟೆ, ಆದರೆ ಒಮ್ಮೆ ಭಕ್ತರ ಸಂಗ-ಗಿಂಗವನ್ನೂ ತ್ಯಜಿಸಿಬಿಟ್ಟಿದ್ದೆ. ಆಗ ನೋಡುತ್ತೇನೆ, ಭಕ್ತರು ಒಬ್ಬೊಬ್ಬರಾಗಿ ಸತ್ತುಹೋಗುತ್ತಿದಾರೆ. ಅದನ್ನು ನೋಡಿ ನನಗೆ ತಾಳಲಾರದ ದುಃಖವಾಯಿತು. ಆದರೆ ಈಗ ಕೆಲವು ಮಂದಿ ಭಕ್ತರೊಡನೆ ಬೆರೆಯುತ್ತಿದೇನೆ” ಅಂತ.

ಹಿಂದಿರುಗಿ ಬರುತ್ತೇನೆ ಎಂದು ಹೇಳಿ ಗಿರೀಶ ಮನೆಗೆ ಹೋದ.

ಜಯಗೋಪಾಲಸೇನನನ್ನು ಕರೆದುಕೊಂಡು ತ್ರೈಲೋಕ್ಯ ಬಂದಿದಾನೆ. ಅವರು ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು. ಪರಮಹಂಸರು ಅವರ ಕ್ಷೇಮಸಮಾಚಾರವನ್ನು ವಿಚಾರಿಸಿದರು. ಚಿಕ್ಕನರೇನ ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಅವರು ಆತನನ್ನು ಕೇಳಿದರು, “ನೀನು ಕಳೆದ ಶನಿವಾರ ಏಕೆ ಬರಲಿಲ್ಲ?” ಅಂತ.

ತ್ರೈಲೋಕ್ಯ ಹಾಡಲು ಸಿದ್ಧನಾಗುತ್ತಿದಾನೆ.

ಶ್ರೀರಾಮಕೃಷ್ಣರು: "ಆಹ! ಅಂದು ನೀನು ಆನಂದಮಯಿಯ ಹಾಡನ್ನು ಹಾಡಿದೆ. ಎಷ್ಟು ಮಧುರವಾಗಿತ್ತು! ಉಳಿದವರು ಹಾಡಿದಾಗ ಅವರದು ನನಗೆ ಸಪ್ಪೆಯಾಗಿ ತೋರುತ್ತದೆ. ಅಂದು ನರೇಂದ್ರನ ಹಾಡೂ ಸಪ್ಪೆಯಾಗಿ ಕಂಡಿತು. ಅದೇ ಹಾಡುಗಳು ಇಂದೂ ನಡೆಯಲಿ."

ತ್ರೈಲೋಕ್ಯ ಹಾಡುತ್ತಿದಾನೆ:

ಜಯ ಶಚಿನಂದನ ಗೌರ ಗುಣಾಕರ
ಪ್ರೇಮ ಪರುಶಮಣಿ ರಸಜಲಧಿ.
ಕನಕವರ್ಣದಲಿ ಕಣ್ಗಳಮೋಹಿಸ
ಸುಂದರ ಮೂರುತಿ ಪರಮನಿಧಿ.

ಆಜಾನುಲಂಬಿತ ಮೃಣಾಲ ಕೋಮಲ
ಪ್ರೇಮಪ್ರಸಾರಿತ ಕರಯುಗಲ.
ಅನುಪಮ ತೇಜದಿ ಅಮೃತವ ಸೂಸುವ
ಪ್ರೇಮಪೂರ್ಣವೀ ಮುಖಕಮಲ.

ತುಂಬುಗೆನ್ನೆಯಲಿ ಇಳಿದ ಕುಂತಲದಿ
ಪ್ರೇಮ ವಿಹ್ವಲನು ಶೋಭಿಪನು.
ಮಹಾಭಾವದಲಿ ನಿತ್ಯಮಂಡಿತನು
ಹರಿನುತಿಯಲಿ ಮುಳುಗೇಳುವನು.

ಮದಿಸಿದಾನೆಯೊಲು ನರ್ತಿಸುವೀತನು
ಸಾಧುಗಳೆದೆಯಲಿ ರಂಜಿಪನು.
ಹರಿಗುಣಗಾಯಕ ಪ್ರೇಮಾಬ್ಧಿನಾಯಕ
ಅಲೋಕಸಾಮಾನ್ಯ ಚೈತನ್ಯನು.

'ಹರಿ ಹರಿ' ಎನ್ನುತ ಇರವನೆ ಮರೆಯುತ
ಅಸ್ಪೃಶ್ಯರನೆದೆಗಪ್ಪುವನು.
'ನನ್ನ ಹೃದಯನಿಧಿ ಎಲ್ಲಿರುವನು ಹರಿ?'
ಎನ್ನುತ ಅಳುವನು ಹೊರಳುವನು!

ಕದಂಬಕುಸುಮಗಳರಳಿದಂತೆ, ಅದೊ
ರೋಮರೋಮವೂ ನಿಂತಿಹುದು !
ತನ್ನ ಇರವನೇ ಮರೆತಾ ದೇಹವು
ಧೂಳಿಯೊಳೆಂತಹ ಹೊರಳುವುದು !

ಜಯ ಗೌರಾಂಗನೆ, ಹರಿಲೀಲಾಸ್ಪದ,
ಪ್ರೇಮದೂಟೆ ನೀನಾಗಿರುವೆ.
ದೀನಜನಾಶ್ರಿತ, ಭಕ್ತಹೃದಯದಲಿ
ಚಂದಿರನಂದದಿ ರಾಜಿಸುವೆ !

ಪರಮಹಂಸರು ಒಂದೆರಡು ನಿಮಿಷಗಳ ಮಟ್ಟಿಗೆ ಎದ್ದು ಕೊಠಡಿಯಿಂದ ಹೊರಕ್ಕೆ ಹೋದರು. ಪರದೆಯ ಹಿಂದೆ ಕುಳಿತಿದ್ದ ಭಕ್ತೆಯರು ಪರಮಹಂಸರ ದರ್ಶನ ಪಡೆಯಲು ಬಹಳ ಕಾತರರಾಗಿದ್ದಾರೆ. ಅವರಿಗೆ ದರ್ಶನ ಕೊಟ್ಟು ಬರುತ್ತಾರೆ. ತ್ರೈಲೋಕ್ಯನ ಹಾಡುಗಾರಿಕೆ ಮುಂದುವರಿಯುತ್ತಿದೆ.

ಪರಮಹಂಸರು ಮತ್ತೆ ಕೊಠಡಿಗೆ ಹಿಂದಿರುಗಿ ಬಂದು ತ್ರೈಲೋಕ್ಯನಿಗೆ ಹೇಳಿದರು, "ಸ್ವಲ್ಪ ಹೊತ್ತು ಆನಂದಮಯಿಯ ಮೇಲಿನ ಹಾಡನ್ನು ಹಾಡು" ಅಂತ.

ತ್ರೈಲೋಕ್ಯ ಹಾಡುತ್ತಿದಾನೆ:

ಮಾನವ ಸಂತಾನದೆಡೆಗೆ ಎನಿತು ಕರುಣೆ ನಿನ್ನದು !
ಅದ ನೆನೆಯಲು ಕಂಬನಿಯೇ ಕೋಡಿಯೊಡೆದು ಹರಿವುದು ! . . .

ಹಾಡನ್ನು ಕೇಳುತ್ತ ಕೇಳುತ್ತ ಇದ್ದಹಾಗೆಯೆ ಚಿಕ್ಕ ನರೇನ ಗಾಢ ಧ್ಯಾನದಲ್ಲಿ ಮುಳುಗಿಹೋಗಿದಾನೆ. ಆತ ಒಂದು ಮರದ ದಿಮ್ಮಿಯೋಪಾದಿಯಲ್ಲಿ ಅಲುಗಾಡದೆ ಕುಳಿತಿದಾನೆ. ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ, "ನೋಡು, ಆತನದು ಎಂಥ ಗಾಢವಾದ ಧ್ಯಾನ! ಸಂಪೂರ್ಣ ಬಾಹ್ಯಜ್ಞಾನ ಶೂನ್ಯನಾಗಿದಾನೆ!" ಅಂತ.

ತ್ರೈಲೋಕ್ಯ ಆ ಹಾಡನ್ನು ಹಾಡಿ ಮುಗಿಸಿದ. ಪರಮಹಂಸರ ಇಚ್ಛೆಗನುಸಾರ ತ್ರೈಲೋಕ್ಯ ಈಗ ಈ ಹಾಡನ್ನು ಹಾಡಲಾರಂಭಿಸಿದಾನೆ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ ! . . . .

ರಾಮ ಹೇಳಿದ, "ಒಂದು ಸ್ವಲ್ಪ ಹೊತ್ತು ಹರಿನಾಮ ಭಜನೆ ನಡೆಯಲಿ" ಅಂತ. ತ್ರೈಲೋಕ್ಯ ಹಾಡುತ್ತಿದಾನೆ:

ಹರಿನಾಮವ ಜಪಿಸೋ ಮನ
ಹರಿನಾಮವ ನುತಿಸೋ ಮನ
ಹರಿನಾಮವ ಗಾಯನಗೈ ಓ ಮನವೆ.
ನೆಲದಲಿ ಜಲದಲಿ
ಗಾಳಿ ಬೆಂಕಿಯಲಿ
ಸೂರ್ಯ ಚಂದ್ರರಲಿ
ಅಖಂಡ ವಿಶ್ವದಿ ಹರಿಯಿರಲು,
ಹರಿನಾಮವ ನುತಿಸುತ ಸೀ
ಭವಸಾಗರವನು ದಾಟೋ ಮನವೆ.

ಮಾಸ್ಟರ್ ಮೆತ್ತ ಮೆತ್ತಗೆ ತ್ರೈಲೋಕ್ಯನಿಗೆ ಹೇಳುತ್ತಿದಾನೆ, "ದಯ ವಿಟ್ಟು— 'ಗೌರಾಂಗ ನಿತ್ಯಾನಂದರೆನ್ನುವ' ಹಾಡನ್ನ" ಅಂತ.

ಪರಮಹಂಸರೂ ಕೂಡ ತ್ರೈಲೋಕ್ಯನಿಗೆ ಅದೇ ಹಾಡನ್ನು ಹಾಡು ವಂತೆ ಹೇಳಿದರು. ತ್ರೈಲೋಕ್ಯ ಮತ್ತು ಭಕ್ತರೆಲ್ಲರೂ ಕೂಡಿ ಆ ಹಾಡನ್ನು ಹಾಡುತ್ತಿದಾರೆ. ಪರಮಹಂಸರೂ ಕೂಡ ಅವರೊಡನೆ ಸೇರಿಕೊಂಡು ಹಾಡಿದರು. ಆ ಹಾಡನ್ನು ಹಾಡಿ ಮುಗಿಸಿದನಂತರ ಪರಮಹಂಸರು ಹಾಡಲಾರಂಭಿಸಿದಾರೆ:

ಹರಿನಾಮವನು ನುತಿಸಿ ಆನಂದಬಾಷ್ಪವನು
ಕರೆವಣ್ಣತಮ್ಮದಿರು, ಇವರು ನೋಡು!......

ಪರಮಹಂಸರ ಮತ್ತೆ ಹಾಡಿದರು:

ಗೌರಾಂಗನು ಹುಟ್ಟಿದೂರು
ಅವನ ಪ್ರೇಮ ಹಿಲ್ಲೋಲದಿ
ಸ್ಪಂದಿಸುತಿದೆ ಮೋದದಿ!

ಮತ್ತೆ:

ಯಾರವರು? ಹರಿನಾಮವನು ನುತಿಸುತ್ತ
ಬೀದಿಯಲಿ ನಡೆಯುವವರು!
ಓ, ನೋಡು; ಗೌರಾಂಗ ನಿತ್ಯಾನಂದರೆನ್ನುವ

ದಿವ್ಯ ಸೋದರವರ್ಯರು !
ಮಂಡೆ ಬೋಳಿಸಿಕೊಂಡು, ತುಂಡು ಅರಿವೆಯನುಟ್ಟು
ಪುಚ್ಚರಂದದಿ ಅವರು ಅಲೆಯುತಿಹರು !

ಚಿಕ್ಕ ನರೇನ ಇನ್ನೇನು ಹೊರಡುವುದರಲ್ಲಿದಾನೆ.

ಶ್ರೀರಾಮಕೃಷ್ಣರು: "ನೀನು ನಿನ್ನ ತಂದೆತಾಯಿಗಳಿಗೆ ವಿಶೇಷವಾದ ರೀತಿಯಲ್ಲಿ ಶ್ರದ್ಧಾಭಕ್ತಿಯನ್ನು ತೋರಿಸು; ಆದರೆ ಅವರು ನಿನ್ನ ಭಗವಂತನ ದಾರಿಗೆ ಅಡ್ಡಲಾಗಿ ಬಂದರು ಅಂದರೆ, ಅವರ ಮಾತನ್ನು ನೀನು ಸ್ವಲ್ಪವೂ ಕೇಳಬೇಕಾಗಿಲ್ಲ. ಆಗ ಧೈರ್ಯವಾಗಿ ಎದ್ದುನಿಂತು ಸೊಂಟಕಟ್ಟಿ, 'ಈ ನೀಚ ತಂದೆ!–' ಅಂತ ಹೇಳಲೂ ಸಿದ್ಧನಾಗಿರಬೇಕು."

ಚಿಕ್ಕ ನರೇನ: "ನಿಜವಾಗಿಯೂ ನನಗೆ ಭಯ ಎಂಬುದೇ ಇಲ್ಲ."

ಗಿರೀಶ ಮತ್ತೆ ಹಿಂದಿರುಗಿ ಬಂದಿದಾನೆ. ಪರಮಹಂಸರು ತ್ರೈಲೋಕ್ಯನಿಗೆ ಆತನ ಪರಿಚಯವನ್ನು ಮಾಡಿಕೊಟ್ಟರು. ಬಳಿಕ ಅವರಿಬ್ಬರಿಗೂ ಹೇಳಿದರು, "ನೀವಿಬ್ಬರೂ ಸ್ವಲ್ಪ ಹೊತ್ತು ಮಾತುಕತೆಗಳಾಡುತ್ತಿರಿ" ಅಂತ. ಒಂದು ಸ್ವಲ್ಪ ಹೊತ್ತಾದ ಮೇಲೆ ತ್ರೈಲೋಕ್ಯನಿಗೆ ಹೇಳಿದರು, "ದಯವಿಟ್ಟು ಆ ಹಾಡನ್ನು ಮತ್ತೆ" ಅಂತ.

ತ್ರೈಲೋಕ್ಯ ಹಾಡುತ್ತಿದಾನೆ:

ಜಯ ಶಚಿನಂದನ ಗೌರ ಗುಣಾಕರ
ಪ್ರೇಮ ಪರುಶಮಣಿ ರಸಜಲಧಿ . . . . . .

ಪರಮಹಂಸರು ಈ ಹಾಡನ್ನು ಕೇಳುತ್ತಿದ್ದ ಹಾಗೆಯೆ ಭಾವಾವಿಷ್ಟರಾಗಿ ಎದ್ದು ನಿಂತು ಸಮಾಧಿಸ್ಥರಾಗಿ ಬಿಟ್ಟಿದಾರೆ.

ಕಿಂಚಿತ್ ಪ್ರಕೃತಿಸ್ಥರಾಗಿ ತ್ರೈಲೋಕ್ಯನನ್ನು ವಿನಯದಿಂದ ಕೇಳಿಕೊಳ್ಳುತ್ತಿದಾರೆ, "ದಯವಿಟ್ಟು—'ಓ! ಎಂಥ ನೋಟವ ಕಂಡೆನು!' ಎಂಬ ಹಾಡನ್ನು" ಅಂತ.

ತ್ರೈಲೋಕ್ಯ ಹಾಡುತ್ತಿದಾನೆ:

ಓ! ಎಂಥ ನೋಟವ ಕಂಡೆನು!
ಕೇಶವ ಭಾರತಿಯ ಕುಟಿಯೊಳಗೆ ನಾ-
ನೆಂಥ ನೋಟವ ಕಂಡೆನು! . . . . . . . .

ಹಾಡುವುದು ಮುಗಿಯಿತು. ಸಾಯಂಕಾಲವಾಗಲಿದೆ. ಭಕ್ತರು ಇನ್ನೂ ಪರಮಹಂಸರನ್ನು ಸುತ್ತುಗಟ್ಟಿ ಕುಳಿತಿದಾರೆ.

ಶ್ರೀರಾಮಕೃಷ್ಣರು ರಾಮನಿಗೆ: "ಇಂದು ಯಾವ ಪಕ್ಕವಾದ್ಯವೂ ಇರಲಿಲ್ಲ. ಒಳ್ಳೆ ಪಕ್ಕವಾದ್ಯಗಳಿದ್ದರೆ ಆಗ ಸಂಗೀತ ಬಹಳವಾಗಿ ಕಳೆ ಗೂಡುತ್ತದೆ. (ನಗುತ್ತ) ಬಲರಾಮ ಯಾವರೀತಿಯಾಗಿ ಉತ್ಸವದ ವ್ಯವಸ್ಥೆ ಮಾಡುತ್ತಾನೆ ಎಂಬುದು ಗೊತ್ತೆ? ಆತನನ್ನು ಬ್ರಾಹ್ಮಣನ ಹಸುವಿಗೆ ಹೋಲಿಸಬಹುದು: ಅದು ಕಡಮೆಯಾಗಿ ತಿಂದು ಧಾರಾಕಾರ ವಾಗಿ ಹಾಲು ಕರೆಯಬೇಕು. (ಎಲ್ಲರೂ ನಗುತ್ತಿದಾರೆ.) ಬಲರಾಮನ ಭಾವನೆ, ಗಾಯಕನೇ ಡೋಲನ್ನೂ ಬಾರಿಸಿಕೋಬೇಕು ಮತ್ತು ಹಾಡಲೂ ಬೇಕು ಅಂತ!" (ಎಲ್ಲರೂ ನಗುತ್ತಿದಾರೆ.)

ಸಾಯಂಕಾಲವಾಗಿದೆ. ಬಲರಾಮನ ಬೈಠಕ್‌ಖಾನೆಗು ಮತ್ತು ವರಾಂಡಕ್ಕು ದೀಪ ಹಚ್ಚಿ ಇಟ್ಟಿದಾರೆ. ಪರಮಹಂಸರು ಜಗನ್ಮಾತೆಗೆ ಪ್ರಣಾಮಮಾಡಿ ಭಗವಂತನ ನಾಮಜಪ ಮಾಡಲಾರಂಭಿಸಿದಾರೆ. ಭಕ್ತ ರೆಲ್ಲರು ಅವರ ಸುತ್ತಲು ಕುಳಿತು ಅವರು ಮಾಡುತ್ತಿದ್ದ ಮಧುರ ನಾಮ ಜಪವನ್ನು ಕೇಳುತ್ತಿದಾರೆ. ಪ್ರಾಪಂಚಿಕಜೀವನದ ಸಂಬಂಧವಾಗಿ ಪರಮ ಹಂಸರ ಭಾವನೆ ಪರಿವರ್ತನೆ ಹೊಂದಿರುವುದರ ವಿಷಯವಾಗಿ ತ್ರೈಲೋಕ್ಯ ನೊಡನೆ ಮಾತುಕತೆಯಾಡಬೇಕೆಂದು ಭಕ್ತರು ನಿರ್ಧರಿಸಿದಾರೆ. ಗಿರೀಶ ಆ ಮಾತು ಎತ್ತಿದ.

ಗಿರೀಶ ತ್ರೈಲೋಕ್ಯನಿಗೆ: "ಪರಮಹಂಸರು ಕೇಶವಚಂದ್ರಸೇನ ನೊಡನೆ ಪರಿಚಯ ಮಾಡಿಕೊಂಡನಂತರ, ಸಂಸಾರದ ಸಂಬಂಧವಾಗಿ ಅವರಿಗಿದ್ದ ಭಾವನೆ ಪರಿವರ್ತನೆ ಹೊಂದಿತು ಎಂಬುದಾಗಿ ನೀನು ಕೇಶವ ಚಂದ್ರಸೇನನ ಜೀವನ ಚರಿತ್ರೆಯಲ್ಲಿ ಬರೆದಿದೀಯೆ; ಆದರೆ ಅದು ಸತ್ಯವಾದುದಲ್ಲ."

ಶ್ರೀರಾಮಕೃಷ್ಣರು ತ್ರೈಲೋಕ್ಯ ಮೊದಲಾದವರಿಗೆ: "ಭಗವದಾನಂದ ದೊರೆಯಿತು ಅಂದರೆ ಸಂಸಾರದಾನಂದ ರುಚಿಸದು. ಭಗವದಾನಂದ ವನ್ನು ಸವಿಯಿತು ಅಂದರೆ, ಸಂಸಾರ ಬಹಳ ಸಪ್ಪೆಯಾಗಿ ತೋರುತ್ತದೆ. ಕಾಶ್ಮೀರದ ಶಾಲೇ ದೊರೆಯುತ್ತಿರುವಾಗ ಯಾರಿಗೆ ತಾನೆ ದುಪ್ಪಟಿ ಬೇಕು."

ತ್ರೈಲೋಕ್ಯ: "ಯಾರು ಸಂಸಾರಿಗಳಾಗಬೇಕೆಂದು ಇಚ್ಛೆ ಪಡುತ್ತಾರೊ ಅವರಿಗಾಗಿ ನಾನು ಹಾಗೆ ಬರೆದಿರೋದು; ಅದು ತ್ಯಾಗಿ ಗಳಿಗೆ ಸಂಬಂಧಪಟ್ಟಿದುದಲ್ಲ."

ಶ್ರೀರಾಮಕೃಷ್ಣರು: "ಏನು ನೀನು ಮಾತಾಡೋದು? ಸಂಸಾರದಲ್ಲಿ ಇದ್ದುಕೊಂಡು ಆಧ್ಯಾತ್ಮಿಕ ಉನ್ನತಿಪಡೆಯಬಹುದು ಅಂತ ಯಾರು ಹೇಳುತ್ತಿದಾರೊ ಅವರಿಗೇನಾದರು ಒಮ್ಮೆ ಭಗವದಾನಂದ ದೊರೆತುದೇ ಆದರೆ ಬಳಿಕ ಅವರಿಗೆ ಅದು ವಿನಾ ಬೇರೆ ಏನೂ ರುಚಿಸದು. ಅವರ ಸಾಂಸಾರಿಕ ಕೆಲಸಕಾರ್ಯಗಳ ಮೇಲಿನ ಆಸಕ್ತಿ ಕಡಮೆಕಡಮೆಯಾಗುತ್ತಾ ಬರಲಾರಂಭಿಸುತ್ತದೆ. ಕ್ರಮೇಣ ಅವರ ಭಗವದಾನಂದ ಆ ರೀತಿಯಾಗಿ ವೃದ್ಧಿವೃದ್ಧಿಯಾಗುತ್ತಾ ಬರುತ್ತದೆ ಬಳಿಕ ಅವರ ಕೈಯಲ್ಲಿ ಯಾವ ಸಾಂಸಾರಿಕ ಕೆಲಸಕಾರ್ಯಗಳು ಸಾಗೋಹಾಗೆಯೇ ಇಲ್ಲ. ಕೇವಲ ಆ ಆನಂದಕ್ಕಾಗಿಯೇ ಹುಡುಕಾಡುತ್ತಿರುತ್ತಾರೆ. ಭಗವದಾನಂದದ ಎದುರು ವಿಷಯಾನಂದ, ಸಂಭೋಗಾನಂದವೆ! ಅವರೇನಾದರು ಒಮ್ಮೆ ಭಗವದಾನಂದದ ಸವಿಯನ್ನು ಸವಿದರು ಅಂದರೆ, ಅವರು ಎಂದೆಂದಿಗೂ ಅದರ ಹಿಂದೆಯೇ ಓಡುತ್ತಿರುತ್ತಾರೆ. ಅಂಥವರಿಗೆ ಈ ಸಂಸಾರ ಇದ್ದರೂ ಒಂದೆ ಸತ್ತರೂ ಒಂದೆ.

"ಚಾತಕಪಕ್ಷಿಯ ಗಂಟಲು ತೃಷೆಯಿಂದ ಒಣಗಿಹೋಗಿ ಅದು ಇನ್ನೇನು ಸಾಯುವುದರಲ್ಲಿದೆ. ಅದರ ಸುತ್ತಲೂ ಎಷ್ಟೊಂದು ಪುಷ್ಕರಣಿಗಳಿವೆಯೊ ಎಷ್ಟೊಂದು ನದಿಗಳಿವೆಯೊ ಅಲ್ಲೆಲ್ಲಾ ಮತ್ತು ಏಳು ಸಮುದ್ರಗಳಲ್ಲೂ ನೀರು ಸುಮ್ಮನೆ ತುಂಬಿದೆ. ಆದರೂ ಅದು ಅವುಗಳ ನೀರನ್ನು ಮುಟ್ಟದು. ಗಂಟಲು ಒಡೆದು ಒಣಗಿಹೋಗುತ್ತಿದೆ, ಆದರೂ ಕುಡಿಯದು. ಸ್ವಾತಿ ನಕ್ಷತ್ರದ ಮಳೆಯ ನೀರಿಗಾಗಿಯೇ 'ಹಾ' ಎಂದು ಬಾಯಿ ತೆರೆದುಕೊಂಡು ಕಾದುಕುಳಿತಿರುತ್ತದೆ. 'ಚಾತಕಪಕ್ಷಿಗೆ ಸ್ವಾತಿ ಮಳೆಯ ನೀರು ವಿನಾ ಉಳಿದ ನೀರೆಲ್ಲ ಬರೀ ಧೂಳು ಇದ್ದಹಾಗೆ.'

"ಜನರು ತಾವು—ಸಂಸಾರ ಮತ್ತು ಭಗವಂತ—ಎರಡು ಕಡೆಗೂ ಮನಸ್ಸನ್ನಿಡುತ್ತೇವೆ ಅಂತ ಹೇಳುತ್ತಾರೆ. ಎಲ್ಲೋ ಒಂದು ಚಟಾಕು ಮದ್ಯವನ್ನು ಮಾತ್ರ ಕುಡಿದರೆ ಬಹುಶಃ ಮತ್ತನೂ ಆಗಿ ಜೊತೆಗೆ ಬಾಹ್ಯಪ್ರಜ್ಞೆಯನ್ನೂ ಇಟ್ಟುಕೊಂಡಿರಲು ಮನುಷ್ಯನಿಗೆ ಸಾಧ್ಯವಾಗಬಹುದು; ಆದರೆ ಚೆನ್ನಾಗಿ ಕುಡಿದವನಿಗೆ ಈ ಎರಡೂ ಸಾಧ್ಯವಾಗುವುದೆ?

"ಭಗವದಾನಂದ ದೊರೆತ ಮೇಲೆ, ಬೇರೆ ಯಾವುದೂ ರುಚಿಸದು. ಬಳಿಕ ಕಾಮಕಾಂಚನದ ಮಾತು ಕಿವಿಗೆ ಬಿತ್ತು ಅಂದರೆ, ಯಾರೊ ಎದೆಯನ್ನು ಗುದ್ದಿದ ಹಾಗೆ ಆಗುತ್ತದೆ. (ಕೀರ್ತನೆಯ ಸ್ವರದಿಂದ) 'ಪ್ರಾಪಂಚಿ

ಕರಸಾಂಸಾರಿಕ ಮಾತು ನನಗೆ ರುಚಿಸುತ್ತಿಲ್ಲ.' ಯಾವಾಗ ಮನುಷ್ಯ ಭಗವಂತನ ದರ್ಶನಕ್ಕಾಗಿ ಹುಚ್ಚನಾಗಿಬಿಡುತ್ತಾನೊ, ಆಗ ಆತನಿಗೆ ದುಡ್ಡುಗಿಡ್ಡು ಯಾವುದೂ ಮನಸ್ಸಿಗೆ ಬೇಕಾಗದು."

ತ್ರೈಲೋಕ್ಯ: "ಮಹಾಶಯರೆ, ಮನುಷ್ಯ ಸಂಸಾರದಲ್ಲಿ ಇರಬೇಕಾದರೆ ಆತನಿಗೆ ದುಡ್ಡು ಬೇಕೇಬೇಕು ಮತ್ತು ಸಂಚಯ ಮಾಡಿಯೂ ಇಟ್ಟುಕೋಬೇಕು. ಆತ ದಾನ ಧರ್ಮಾದಿ—"

ಶ್ರೀರಾಮಕೃಷ್ಣರು: "ಏನು, ಮೊದಲು ಹಣ ಸಂಚಯ ಬಳಿಕ ಭಗವಂತನೊ? ಜೊತೆಗೆ ನೀನು ದಾನ ಧ್ಯಾನ ದಯೆಯ ಕಾರ್ಯಗಳು ಎಂದು ಬೇರೆ ಹೇಳುತ್ತಿದೀಯೆ! ಸಂಸಾರಿ ತನ್ನ ಮಗಳ ಮದುವೆಗಾಗಿ ಸಹಸ್ರ ಸಹಸ್ರ ರೂಪಾಯಿ ಖರ್ಚುಮಾಡುತ್ತಿರುತ್ತಾನೆ. ಅದೇ ಸಮಯದಲ್ಲಿ ಪಕ್ಕದ ಮನೆಯವರು ಹೊಟ್ಟೆಗಿಲ್ಲದೆ ಸಾಯುತ್ತಿರಬಹುದು. ಅವರಿಗೆ ಒಂದು ಹಿಡಿ ಅಕ್ಕಿ ಕೊಡೋಕೂ ಆತನಿಗೆ ಬಹಳ ಕಷ್ಟವಾಗಿ ಕಾಣುತ್ತದೆ. ಒಂದುಪಕ್ಷ ಕೊಟ್ಟರೂ ಬಹಳವಾಗಿ ಲೆಕ್ಕಾಚಾರ ಹಾಕಿ ಕೊಡುತ್ತಾನೆ. ಆತನ ಸುತ್ತಮುತ್ತಲು ಇರೋ ಜನರಿಗೆ ಹೊಟ್ಟೆಬಟ್ಟೆಗೆ ಗತಿಯಿಲ್ಲ; ಅದನ್ನು ಕಟ್ಟಿಕೊಂಡು ಇವನಿಗೇನು? ಆತ ತನಗೆ ತಾನೇ ಹೇಳಿಕೋತಾನೆ, 'ಈ ಜಗಕೆಲ್ಲ ಹಾಸಿಗೆ ಹಾಕಲಾಗುವುದೆ? ಈ ದಟ್ಟದರಿದ್ರರು ಸತ್ತರೆ ಸಾಯಲೇಳು, ಇದ್ದರೆ ಇರಲೇಳು. ನಾನು ಮತ್ತು ನನ್ನ ಮನೆಯವರೆಲ್ಲರು ಸುಖಸೌಖ್ಯದಿಂದ ಇದ್ದರೆ ಸಾಕು' ಅಂತ. ಇಂಥವರ ಬಾಯಿಂದ ಸಕಲ ಜೀವಿಗಳ ಹಿತಚಿಂತನೆ ಎಂಬ ಮಾತು!"

ತ್ರೈಲೋಕ್ಯ: "ಸಂಸಾರಿಗಳಲ್ಲಿಯೂ ಒಳ್ಳೆಯವರಿದಾರೆ. ಉದಾಹರಣೆಗೆ ಚೈತನ್ಯದೇವನ ಭಕ್ತ ಪುಂಡರೀಕ ವಿದ್ಯಾನಿಧಿಯನ್ನು ತೆಗೆದುಕೊಳ್ಳಿ. ಸಂಸಾರದಲ್ಲಿ ಇದ್ದನಲ್ಲ."

ಶ್ರೀರಾಮಕೃಷ್ಣರು: "ಆತ ಭಗವಂತನ ಮದ್ಯವನ್ನು ಗಂಟಲಿನವರೆಗೆ ಮಾತ್ರ ಕುಡಿದಿದ್ದ. ಆತನೇನಾದರು ಇನ್ನು ಸ್ವಲ್ಪ ಜಾಸ್ತಿಯಾಗಿ ಕುಡಿದಿದ್ದರೆ ಸಾಂಸಾರಿಕನಾಗಿ ಇರೋಕಾಗುತ್ತಿರಲಿಲ್ಲ."

ತ್ರೈಲೋಕ್ಯ ಒಂದು ಶಬ್ದವನ್ನೂ ಮಾಡದೆ ಸುಮ್ಮನೆ ಕುಳಿತುಕೊಂಡ. ಮಾಸ್ಟರ್ ಗಿರೀಶನಿಗೆ ಗುಟ್ಟಾಗಿ ತಿಳಿಸಿದ, "ಹಾಗಾದರೆ ಆತ ಬರೆದಿರೋದು ಸರಿಯಲ್ಲ" ಅಂತ.

ಗಿರೀಶ ತ್ರೈಲೋಕ್ಯನಿಗೆ: "ಹಾಗಾದರೆ ನೀನು ಬರೆದಿರೋದು ಸರಿಯಲ್ಲ ತಾನೆ?"

ತ್ರೈಲೋಕ್ಯ: "ಏಕೆ ಸರಿಯಲ್ಲ? ಸಂಸಾರದಲ್ಲಿದ್ದು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಬಹುದು ಎಂಬುದನ್ನು ಇವರು (ಪರಮಹಂಸರು) ಒಪ್ಪುತ್ತಿಲ್ಲವೇನು?"

ಶ್ರೀರಾಮಕೃಷ್ಣರು: "ಹೌದು, ಸಾಧ್ಯ. ಆದರೆ ಮೊದಲು ಜ್ಞಾನವನ್ನು ಪಡೆದು—ಭಗವಂತನ ಸಾಕ್ಷಾತ್ಕಾರವನ್ನು ಪಡೆದು ಸಂಸಾರದಲ್ಲಿ ಇರಬೇಕಾಗುತ್ತದೆ. ಬಳಿಕ 'ಆತ ಈ ಕಳಂಕ ಸಂಸಾರದಲ್ಲಿ ಈಜಾಡಿದರೂ, ಕಳಂಕ ಮಾತ್ರ ಆತನ ಶರೀರಕ್ಕೆ ತಾಗದು.' ಬಳಿಕ ಆತ ಬದಿಯಲ್ಲಿ ವಾಸಿಸೋ ಮೀನಿನೋಪಾದಿಯಲ್ಲಿ ವಾಸಿಸಬಲ್ಲ. ಭಗವಂತನ ಸಾಕ್ಷಾತ್ಕಾರವನ್ನು ಪಡೆದನಂತರ ಅತ ವಾಸಿಸೋ ಸಂಸಾರ ವಿದ್ಯೆಯ ಸಂಸಾರವಾಗಿ ಪರಿಣಮಿಸುತ್ತದೆ. ಅದರಲ್ಲಿ ಕಾಮಕಾಂಚನದ ಗಂಧವೇ ಇರದು. ಆಗ ಆತನ ಕಣ್ಣಿಗೆ ಕಾಣಿಸಿಕೊಳ್ಳೋದು ಕೇವಲ ಭಕ್ತಿ ಭಕ್ತ ಭಗವಾನ್ ಮಾತ್ರವೇ. ನೋಡು, ನನಗೂ ಒಬ್ಬಳು ಪತ್ನಿ ಇದಾಳೆ, ಕೆಲವು ಪಾತ್ರೆ ಪದಾರ್ಥಗಳೂ ಇವೆ; ನಾನೂ ಕೆಲವು ಭಿಕ್ಷುಬಿಕಾರಿಗಳಿಗೆ ಅನ್ನ ಹಾಕುತ್ತೇನೆ; ನಾನೂ ಭಕ್ತರಿಗಾಗಿ—ಉದಾಹರಣೆಗೆ ಹಾಬಿಯ ತಾಯಿ—ಇಲ್ಲಿಗೆ ಬಂದಾಗ ಚಿಂತನೆ ಮಾಡುತ್ತೇನೆ."

ಒಬ್ಬ ಭಕ್ತ ತ್ರೈಲೋಕ್ಯನಿಗೆ: "ನಿಮ್ಮ ಪುಸ್ತಕದಲ್ಲಿ ಓದಿದೆ ತಮಗೆ ಅವತಾರದಲ್ಲಿ ನಂಬಿಕೆ ಇಲ್ಲ ಅಂತ. ನೀವು ಚೈತನ್ಯದೇವನ ಸಂಬಂಧವಾಗಿ ಬರೆಯೋವಾಗ ಹಾಗೆ ಬರೆದಿದೀರಿ."

ತ್ರೈಲೋಕ್ಯ: "ಚೈತನ್ಯದೇವನೇ ಆ ಭಾವನೆಗೆ ವಿರುದ್ಧವಾಗಿ ಮಾತಾಡಿದಾನೆ. ಒಮ್ಮೆ ಪೂರಿಯಲ್ಲಿ ಅದ್ವೈತನೇ ಮೊದಲಾದ ಭಕ್ತರು 'ಚೈತನ್ಯದೇವನೇ ಭಗವಂತ' ಎಂಬ ಅರ್ಥವನ್ನು ಕೊಡೋ ಹಾಗೆ ಒಂದು ಹಾಡನ್ನು ಚೈತನ್ಯದೇವನ ಎದುರು ಹಾಡಿದರು. ಅದನ್ನು ಕೇಳಿ ಚೈತನ್ಯದೇವ ಕೊಠಡಿಯ ಬಾಗಿಲು-ಗೀಗಿಲುಗಳನ್ನೆಲ್ಲ ಹಾಕಿಕೊಂಡು ಒಳಗೆ ಕುಳಿತುಬಿಟ್ಟಿದ್ದ. ಭಗವಂತನ ಐಶ್ವರ್ಯಕ್ಕೆ ಮಿತಿ ಅಂಬೋದೇ ಇಲ್ಲ. ಇವರೂ (ಪರಮಹಂಸರೂ) ಹೇಳುತ್ತಾರಲ್ಲ ಭಕ್ತ ಎಂಬೋನು ಭಗವಂತನ ಬೈಠಕ್ ಖಾನೆ ಅಂತ. ಯಾರೊ ಒಬ್ಬರು ತಮ್ಮ ಬೈಠಕ್‌ಖಾನೆಯನ್ನು ಬಹಳ

ಚೆನ್ನಾಗಿ ಸಜ್ಜುಗೊಳಿಸಿದ್ದ ಮಾತ್ರಕ್ಕೇ, ಅವರ ಹತ್ತಿರ ಇನ್ನು ಬೇರೆ ಐಶ್ವರ್ಯವೇ ಇಲ್ಲ ಅಂತ ಅರ್ಥವೇನು?"

ಗಿರೀಶ: "ಇವರು (ಪರಮಹಂಸರು) ಹೇಳುತ್ತಾರೆ, ಪ್ರೇಮವೇ ಭಗವಂತನ ಸಾರವಸ್ತು; ಯಾರ ಮೂಲಕ ಈ ಪ್ರೇಮ ಹೊರಸೂಸುವುದೊ, ಅವರು ಮಾತ್ರವೇ ನಮಗೆ ಬೇಕು ಅಂತ. ಇವರು ಮತ್ತೆ ಹೇಳುತ್ತಾರೆ, ಹಸುವಿನ ಹಾಲು ಅದರ ಕೆಚ್ಚಲಿನ ಮುಖಾಂತರ ಹೊರಕ್ಕೆ ಬರುತ್ತದೆ; ಆದ್ದರಿಂದ ನಮಗೆ ಬೇಕಾಗಿರೋದು ಕೆಚ್ಚಲು ಮಾತ್ರ; ನಮಗೆ ಹಸುವಿನ ಉಳಿದ ಅಂಗಗಳು—ಕಾಲು, ಬಾಲ, ಕೊಂಬು ಇವೇ ಮೊದಲಾದುವುಗಳು ಬೇಕಾಗಿಲ್ಲ ಅಂತ."

ತ್ರೈಲೋಕ್ಯ: "ಆತನ ಪ್ರೇಮವೆಂಬ ಹಾಲು ಅನೇಕ ನಾಳಿಗಳ ಮೂಲಕ ಹರಿದು ಹೊರಕ್ಕೆ ಬರುತ್ತದೆ. ಆತ ಅನಂತ ಶಕ್ತಿಮಾನ್."

ಗಿರೀಶ: "ಆದರೆ ಪ್ರೇಮದ ಎದುರು ಬೇರೆ ಯಾವ ಶಕ್ತಿತಾನೆ ನಿಲ್ಲಬಲ್ಲದು?"

ತ್ರೈಲೋಕ್ಯ: "ಶಕ್ತಿ ಯಾರದೊ, ಆತ ಇಚ್ಛೆಪಟ್ಟರೆ ಸಾಧ್ಯ. ಸಕಲ ಶಕ್ತಿಗಳೂ ಆತನ ಕೈಯಲ್ಲೇ."

ಗಿರೀಶ: "ಸಕಲ ಶಕ್ತಿಗಳೂ ಆತನ ಕೈಯಲ್ಲೇ ಎಂಬುದನ್ನೇನೊ ನಾನು ಒಪ್ಪುತ್ತೇನೆ. ಆದರೆ ಅವಿದ್ಯಾ ಶಕ್ತಿ ಎಂಬುದೊಂದು ವಸ್ತು ಇದೆಯಲ್ಲ ಅದು?"

ತ್ರೈಲೋಕ್ಯ: "ಅವಿದ್ಯೆ ಎಂಬುದು ಒಂದು ವಸ್ತುವೇನು? ಅವಿದ್ಯೆ ಎಂಬತಕ್ಕಂಥ ಒಂದು ವಸ್ತುವೇನಾದರು ಇದೆಯೇನು? ಬೆಳಕಿನ ಅಭಾವವೇ ಕತ್ತಲೆ. ಹಾಗೆ ಇದೂ ಒಂದರ ಅಭಾವ ಮಾತ್ರ. ಆತನ ಪ್ರೇಮಕ್ಕೆ ನಾವು ಹೆಚ್ಚು ಬೆಲೆಯನ್ನು ಕಟ್ಟುತ್ತಿರುವುದೇನೊ ನಿಜ—ಆತನ ಬಿಂದು ನಮ್ಮ ಸಿಂಧು. ಕೇವಲ ಪ್ರೇಮವೇ ಭಗವಂತನ ಸಾರವಸ್ತು ಅಂತ ಹೇಳುವುದಾದರೆ, ನಾವು ಆತನನ್ನು ಸೀಮಾಬದ್ಧನನ್ನಾಗಿ ಮಾಡಿದ ಹಾಗೆ ಆಗುತ್ತದೆ."

ಶ್ರೀರಾಮಕೃಷ್ಣರು ತ್ರೈಲೋಕ್ಯ ಮೊದಲಾದವರಿಗೆ: "ಹೌದು, ಹೌದು, ಅದು ನಿಜ. ಆದರೆ ಒಂದು ಚಟಾಕು ಮದ್ಯವೇ ನನ್ನನ್ನು ಮತ್ತನನ್ನಾಗಿ ಮಾಡಿಬಿಡುತ್ತದೆ. ಅಂಥಾದ್ದರಲ್ಲಿ ಸಾರಾಯಿ ಅಂಗಡಿಯಲ್ಲಿ ಎಷ್ಟೊಂದು ಸೇರು ಮದ್ಯ ಇದೆ ಎಂದು ಲೆಕ್ಕಹಾಕೋ ಆವಶ್ಯಕತೆ

ಯೇನಿದೆ ನನಗೆ? ಆತನ ಅನಂತ ಶಕ್ತಿಯ ಸಂಬಂಧವಾಗಿ ಅರಿತುಕೊಳ್ಳು ವುದರ ಆವಶ್ಯಕತೆ ತಾನೆ ಏನಿದೆ ನನಗೆ?''

ಗಿರೀಶ ತ್ರೈಲೋಕ್ಯನಿಗೆ: ''ನೀವು ಭಗವಂತ ಅವತರಿಸುತ್ತಾನೆ ಎಂಬುದನ್ನು ಒಪ್ಪಿಕೊಳ್ಳುವಿರೇನು?''

ತ್ರೈಲೋಕ್ಯ: ''ಭಕ್ತರ ಮೂಲಕವೇ ಭಗವಂತ ಅವತರಿಸುತ್ತಾನೆ. ಅನಂತ ಶಕ್ತಿಯ ಆವಿರ್ಭಾವ ಎಂದಿಗೂ ಆಗದು. ಅದು ಸಾಧ್ಯವೇ ಇಲ್ಲ. ಯಾವ ಮಾನವನ ಮೂಲಕವೂ ಆತನ ಅನಂತ ಶಕ್ತಿ ಎಂದಿಗೂ ಆವಿರ್ಭಾವವಾಗಲಾರದು.''

ಗಿರೀಶ: ''ನಿನ್ನ ಮಕ್ಕಳನ್ನು ನೀನು 'ಬ್ರಹ್ಮಗೋಪಾಲ' ಅಂತ ಪೂಜಿಸಬಹುದಂತೆ, ಮಹಾಪುರುಷರನ್ನು ಭಗವಂತ ಅಂತ ಪೂಜಿಸೋ ಕಾಗೋದಿಲ್ಲವೊ?''

ಶ್ರೀರಾಮಕೃಷ್ಣರು ತ್ರೈಲೋಕ್ಯನಿಗೆ: ''ಅನಂತದ ವಿಷಯವಾಗಿ ಏಕೆ ಇಷ್ಟೊಂದು ಮಾತುಕತೆ? ನಾನು ನಿನ್ನನ್ನು ಮುಟ್ಟಬೇಕಾದರೆ, ನಿನ್ನ ಶರೀರವನ್ನೆಲ್ಲ ಮುಟ್ಟಬೇಕೇನು? ನೀನು ಗಂಗೆಯನ್ನು ಮುಟ್ಟಬೇಕಾದರೆ ಹರಿದ್ವಾರದಿಂದ ಹಿಡಿದು ಗಂಗಾಸಾಗರದವರೆಗೂ ಅದನ್ನು ಮುಟ್ಟುತ್ತಲೇ ಹೋಗಬೇಕೇನು?

'''ಅಹಂ ಎಂಬುದು ಸತ್ತಿತು ಎಂದರೆ, ಎಲ್ಲಾ ತೊಂದರೆಗಳು ಕೊನೆಯಾಗುವುವು.' ಎಲ್ಲಿಯವರೆಗೆ 'ಅಹಂ' ಎಂಬುದು ಇರುವುದೊ, ಅಲ್ಲಿಯವರೆಗೆ ಭೇದ ಬುದ್ಧಿ ಇದ್ದೇ ಇರುತ್ತದೆ. 'ಅಹಂ' ಎಂಬುದು ಸತ್ತ ಬಳಿಕ ಏನಿರುತ್ತದೆ ಎಂಬುದು ಯಾರಿಗೂ ಗೊತ್ತಾಗೋದಿಲ್ಲ; ಅದನ್ನು ಬಾಯಿಂದ ವರ್ಣನೆ ಮಾಡೋಕಾಗೋದಿಲ್ಲ. ಯಾವುದು ಇದೆಯೊ ಅದು ಇದ್ದೇ ಇರುತ್ತದೆ. 'ಅಹಂ' ಎಂಬುದು ಸತ್ತ ಬಳಿಕ, ಏನಿದೆಯೊ ಅದರ ಒಂದು ಭಾಗ ಈತನ ಮೂಲಕ, ಉಳಿದುದೆಲ್ಲ ಆತನ ಮೂಲಕ ವ್ಯಕ್ತ ವಾಗಿದೆ ಅಂತ ಬಾಯಿಂದ ಹೇಳೋಕಾಗೋದಿಲ್ಲ. ಸಚ್ಚಿದಾನಂದ ಎಂಬುದು ಒಂದು ಮಹಾ ಸಾಗರವಿದ್ದ ಹಾಗೆ. ಅದರೊಳಗೆ 'ಅಹಂ' ಎಂಬ ಘಟ ಮುಳುಗಿಕೊಂಡಿದೆ. ಘಟ ಎಂಬುದು ಎಲ್ಲಿಯವರೆಗೆ ಇರು ವುದೊ, ಅಲ್ಲಿಯವರೆಗೆ ನೀರು ಇಬ್ಭಾಗವಾಗಿರುವಂತೆ ಕಾಣುತ್ತದೆ: ನೀರಿನ ಒಂದು ಭಾಗ ಘಟದೊಳಗೆ, ಇನ್ನೊಂದು ಭಾಗ ಘಟದ ಹೊರಗೆ. ಆದರೆ ಘಟ ಎಂಬುದು ಒಡೆದು ಪುಡಿಪುಡಿಯಾಯಿತು ಎಂದರೆ ಆಗ ಉಳಿ

ಯೋದು ಒಂದೇ ಒಂದು ಅನಂತ ಜಲರಾಶಿ. ಅದು ಒಂದೇ ಒಂದು ಅನಂತ ಜಲರಾಶಿ ಅಂತಲೂ ಹೇಳೋಕಾಗೋದಿಲ್ಲ. ಹಾಗೆ ಹೇಳೋಕೆ ಯಾರು ತಾನೆ ಉಳಿದುಕೊಂಡಿರುತ್ತಾರೆ?"

ಈ ರೀತಿಯಾಗಿ ಸಂಭಾಷಣೆ ಮುಗಿದನಂತರ ಪರಮಹಂಸರು ತ್ರೈಲೋಕ್ಯನೊಡನೆ ಆನಂದದಿಂದ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನೀನು ಆನಂದದಿಂದ ಇದ್ದೀಯೆ, ಅಲ್ಲವೆ?"

ತ್ರೈಲೋಕ್ಯ: "ಆದರೆ ಈ ಸ್ಥಳವನ್ನು ಬಿಟ್ಟು ಹೊರಟೆ ಎಂದರೆ ಮತ್ತೆ ನಾನು ಎಂದಿನ ಮೂರ್ತಿಯೇ ಆಗಿಬಿಡುತ್ತೇನೆ. ಇಲ್ಲಿ ನನಗೆ ಬಹಳವಾಗಿ ಭಗವದ್ಭಾವನೆಯ ಉದ್ದೀಪನೆಯಾಗುತ್ತದೆ."

ಶ್ರೀರಾಮಕೃಷ್ಣರು: "ಕಾಲಿಗೆ ಮೆಟ್ಟು ಹಾಕಿಕೊಂಡಿದ್ದರೆ ಮುಳ್ಳಿನ ಕಾಡಿನಲ್ಲಿ ನಡೆಯಲು ಹೆದರಬೇಕಾದ್ದೇನಿಲ್ಲ. 'ಭಗವಂತ ನೊಬ್ಬನೆ ಸತ್ಯ ಉಳಿದುದೆಲ್ಲ ಅನಿತ್ಯ' ಎಂಬ ಬೋಧೆಯಿತ್ತು ಅಂದರೆ ಕಾಮಕಾಂಚನಕ್ಕೆ ಹೆದರಬೇಕಾಗಿಲ್ಲ."

ತ್ರೈಲೋಕ್ಯನಿಗೆ ಫಲಾಹಾರ ಮಾಡಿಸಲೋಸುಗ ಬಲರಾಮ ಆತನನ್ನು ಬೇರೊಂದು ಕೊಠಡಿಗೆ ಕರೆದುಕೊಂಡುಹೋದ. ಪರಮಹಂಸರು ತ್ರೈಲೋಕ್ಯನ ಮತ್ತು ಆತನಂಥವರ ಮಾನಸಿಕ ಅವಸ್ಥೆಯ ಸಂಬಂಧವಾಗಿ ಭಕ್ತರೆದುರು ವರ್ಣನೆಮಾಡುತ್ತಿದಾರೆ. ಈಗ ಘಂಟೆ ರಾತ್ರಿ ಒಂಬತ್ತು.

ಶ್ರೀರಾಮಕೃಷ್ಣರು ಗಿರೀಶ, ಮಾಸ್ಟರ್ ಮತ್ತು ಉಳಿದ ಭಕ್ತರಿಗೆ "ಇವರು ಯಾವ ರೀತಿಯ ಮನುಷ್ಯರು ಎಂಬುದು ಗೊತ್ತೆ? ಇವರನ್ನು ಎಂದೂ ನೆಲವನ್ನೇ ಕಾಣದ ಬಾವಿ ಕಪ್ಪೆಗೆ ಹೋಲಿಸಬಹುದು. ಬಾವಿ ಕಪ್ಪೆಗೆ ತನ್ನ ಬಾವಿ ಇರುವುದು ಮಾತ್ರವೇ ಗೊತ್ತಿದೆ; ಅದಕ್ಕಾಗಿ ಅದು ನೆಲ ಎಂಬುದೊಂದು ಇದೆ ಎಂಬುದನ್ನು ನಂಬೋದೇ ಇಲ್ಲ. ಅದೇ ರೀತಿಯಾಗಿ, ಇವರಿಗೆ ಭಗವದಾನಂದವನ್ನು ಸವಿಯೋ ಸೌಲಭ್ಯವೇ ದೊರೆಯದೆ ಇರುವುದರಿಂದ 'ಸಂಸಾರ, ಸಂಸಾರ,' ಅಂತ ತಲೆ ಚಚ್ಚಿಕೊಳ್ಳುತ್ತಿರುತ್ತಾರೆ.

(ಗಿರೀಶನಿಗೆ) "ನೀನು ಇಂಥವರೊಡನೆ ಏಕೆ ಇಷ್ಟೊಂದು ಚರ್ಚಿಸುತ್ತಿದ್ದೀಯೆ? ಇವರಿಗೆ ಎರಡೂ—ಸಂಸಾರ, ಭಗವಂತ—ಬೇಕು. ಭಗವದಾನಂದವನ್ನು ಸವಿಯದ ಹೊರತು ಅದರ ಸಂಬಂಧವಾದ ಮಾತುಕತೆ ಯಾರಿಗೂ ಅರ್ಥವಾಗದು. ಐದು ವರ್ಷದ ಬಾಲಕನಿಗೆ ಪತ್ನಿಯ ಸಹ

ವಾಸದ ಸುಖ ಏನು ಎಂಬುದನ್ನು ವರ್ಣಿಸಲಾಗುವುದೆ? ಪ್ರಾಪಂಚಿಕರ ಭಗವಂತನ ಸಂಬಂಧವಾದ ಮಾತುಕತೆಗಳೆಲ್ಲ ಬರೀ ಕೇಳಿಕೆಯ ಮಾತುಗಳೇ. ಇವು ಮನೆಯಲ್ಲಿ ಚಿಕ್ಕಮ್ಮ, ದೊಡ್ಡಮ್ಮ ಪರಸ್ಪರ ಜಗಳ ಕಾಯೋವಾಗ ಉಪಯೋಗಿಸೋ ಮಾತುಗಳನ್ನು ಕೇಳಿಕೊಂಡಿದ್ದು, ತಾವೂ ಜಗಳ ಮಾಡುವಾಗ, 'ನಮ್ಮ ದೇವರಿದಾನೆ', 'ದೇವರಾಣೆಯಾಗಿಯೂ' ಎಂಬಿವೇ ಮೊದಲಾದ ಮಾತುಗಳನ್ನು ಮಕ್ಕಳು ಉಪಯೋಗಿಸೋ ಹಾಗೆ.

"ಚಿಂತೆಯಿಲ್ಲ. ಇದು ಅವರ ತಪ್ಪಲ್ಲ. ಎಲ್ಲರೂ ಆ ಅಖಂಡ ಸಚ್ಚಿದಾನಂದನನ್ನು ಅರಿತುಕೊಳ್ಳೋ ಸ್ಥಿತಿಯಲ್ಲಿದಾರೇನು? ರಾಮಚಂದ್ರ ಯಾರು ಎಂಬುದು ಕೇವಲ ಹನ್ನೆರಡು ಜನ ಋಷಿಗಳಿಗೆ ಮಾತ್ರ ಗೊತ್ತಿತ್ತು. ಅವತಾರಪುರುಷನನ್ನು ಗುರುತಿಸಲು ಎಲ್ಲರ ಕೈಯಿಂದಲೂ ಸಾಧ್ಯವಿಲ್ಲ. ಕೆಲವರು ಆತನನ್ನು ಸಾಮಾನ್ಯ ಮನುಷ್ಯನೆಂದು, ಇನ್ನು ಕೆಲವರು ಸಾಧು ಎಂದು ಗಣಿಸುತ್ತಾರೆ. ಆದರೆ ಎಲ್ಲೋ ಕೆಲವರು ಮಾತ್ರವೇ ಆತನನ್ನು ಒಬ್ಬ ಅವತಾರಪುರುಷನೆಂದು ಗುರುತಿಸಬಲ್ಲರು.

"ಯಾರ್ಯಾರದು ಯಾವ್ಯಾವ ತರದ ಬಂಡವಾಳವೊ ಅದಕ್ಕನುಗುಣವಾಗಿ ಅವರು ವಸ್ತುಗಳಿಗೆ ಬೆಲೆ ಕಟ್ಟುತ್ತಾರೆ. ಒಬ್ಬ ಧನಿಕ ತನ್ನ ಸೇವಕನಿಗೆ ಹೇಳಿದ, 'ನೀನು ಈ ವಜ್ರವನ್ನು ಪೇಟೆಗೆ ತೆಗೆದುಕೊಂಡುಹೋಗಿ ಇದಕ್ಕೆ ಯಾರ್ಯಾರು ಎಷ್ಟೆಷ್ಟು ಬೆಲೆ ಕಟ್ಟುತ್ತಾರೆ ಎಂಬುದನ್ನು ತಿಳಿದುಕೊಂಡು ಬಾ. ಮೊದಲು ಇದನ್ನು ಬದನೆ ಕಾಯಿ ಮಾರೋನ ಹತ್ತಿರ ತೆಗೆದುಕೊಂಡು ಹೋಗು' ಅಂತ. ಆ ಸೇವಕ ಮೊದಲು ಆ ವಜ್ರವನ್ನು ಬದನೆ ಕಾಯಿ ಮಾರೋನ ಹತ್ತಿರಕ್ಕೆ ತೆಗೆದುಕೊಂಡು ಹೋದ. ಆತ ಆ ವಜ್ರವನ್ನು ತಿರುಗಿಸಿ-ಗಿರುಗಿಸಿ ನೋಡಿ - ಮಾಡಿ ಹೇಳಿದ, 'ನೋಡು, ನಾನು ಇದಕ್ಕೆ ಒಂಬತ್ತು ಸೇರು ಬದನೆ ಕಾಯನ್ನು ಕೊಡಬಲ್ಲೆ' ಅಂತ. ಸೇವಕ ಕೇಳಿದ, 'ಅದಕ್ಕಿಂತ ಇನ್ನೂ ಸ್ವಲ್ಪ ಜಾಸ್ತಿಯಾಗಿ—ಹೋಗಲಿ ಹತ್ತು ಸೇರು?' ಅಂತ. ಅಂಗಡಿಯವ ಹೇಳಿದ, 'ಇಲ್ಲ. ನಾನು ಆಗಲೆ ಪೇಟೆ ಧಾರಣೆಗಿಂತ ಸ್ವಲ್ಪ ಅಧಿಕವಾಗಿಯೇ ಕೇಳಿಬಿಟ್ಟೆ. ನಿನಗೆ ಸಮ್ಮತವಾದರೆ ಕೊಟ್ಟುಹೋಗು, ಇಲ್ಲದಿದ್ದರೆ ಹಾಗೇ ಹೋಗು' ಅಂತ. ಸೇವಕ ನಗುತ್ತ ನಗುತ್ತ ಆ ವಜ್ರವನ್ನು ವಾಪಸು ತೆಗೆದುಕೊಂಡು ಬಂದು ಯಜಮಾನನಿಗೆ ತಿಳಿಸಿದ, 'ಸ್ವಾಮಿ, ಬದನೆ ಕಾಯಿ ಮಾರೋನಿಗೆ ಒಂಬತ್ತು ಸೇರು ಬದನೆ ಕಾಯಿಗಿಂತ ಅಧಿಕವಾಗಿ ಏನನ್ನೂ ಕೊಡಲಾಗುವು

ದಿಲ್ಲವಂತೆ ಮತ್ತು ಆತ ಪೇಟೆ ಧಾರಣೆಗಿಂತ ಅಧಿಕವಾಗಿಯೇ ಕೇಳಿಬಿಟ್ಟಿದಾನಂತೆ' ಅಂತ. ಯಜಮಾನ ನಕ್ಕು ಹೇಳಿದ, 'ಹೋಗಲಿ ಈಗ ಜವಳಿ ವ್ಯಾಪಾರಿಯ ಹತ್ತಿರ ಹೋಗಿ ಬಾ. ಈಗ ನೀನು ತೋರಿಸಿ ಬಂದವನು ಬರೀ ಬದನೆಕಾಯ ವ್ಯಾಪಾರಿ. ಆತನಿಗೆ ವಜ್ರದ ಬೆಲೆ ಏನು ಗೊತ್ತು? ಜವಳಿ ವ್ಯಾಪಾರಿಯು ಬಂಡವಾಳ ಈತನದಕ್ಕಿಂತ ಸ್ವಲ್ಪ ಹೆಚ್ಚಿನದು. ನೋಡೋಣ ಆತ ಇದಕ್ಕೆ ಏನು ಬೆಲೆ ಕಟ್ಟುತ್ತಾನೆ' ಅಂತ. ಸೇವಕ ಜವಳಿ ವ್ಯಾಪಾರಿಯ ಹತ್ತಿರ ಹೋಗಿ ಕೇಳಿದ, 'ಏನು, ನಿನಗೆ ಇದು ಬೇಕೇನು? ಇದಕ್ಕೆ ಏನು ಕೊಡಬಲ್ಲೆ?' ಅಂತ. ಆತ ಹೇಳಿದ, 'ಹೌದು, ಇದು ಸ್ವಲ್ಪ ಬೆಲೆ ಬಾಳೋದೆ. ಇದರಿಂದ ಒಳ್ಳೆ ಒಡವೆ ಮಾಡಿಸಬಹುದು. ನಾನು ಇದಕ್ಕೆ ಒಂಬೈನೂರು ರೂಪಾಯಿ ಕೊಡಬಲ್ಲೆ' ಅಂತ. ಸೇವಕ ಹೇಳಿದ, 'ನೀನು ಇನ್ನು ಸ್ವಲ್ಪ ಜಾಸ್ತಿಯಾಗಿ ಏನಾದರು ಕೊಡುವುದಾದರೆ, ನಿನಗೇ ಮಾರಿಬಿಟ್ಟುಹೋಗುತ್ತೇನೆ. ಹೋಗಲಿ, ಒಂದು ಸಾವಿರ ರೂಪಾಯಿ ಕೊಡಬಲ್ಲೆಯಾ?' ಅಂತ. ಜವಳಿ ವ್ಯಾಪಾರಿ ಉತ್ತರ ಕೊಟ್ಟ, 'ಇನ್ನು ಹೆಚ್ಚಾಗಿ ಆಸೆಪಡಬೇಡ. ನಾನು ಆಗಲೆ ಪೇಟೆ ಧಾರಣೆಗಿಂತ ಸ್ವಲ್ಪ ಅಧಿಕವಾಗಿಯೇ ಬೆಲೆ ಕಟ್ಟಿಬಿಟ್ಟಿದೇನೆ. ಇದರ ಮೇಲೆ ಒಂದು ರೂಪಾಯನ್ನು ಕೂಡ ಜಾಸ್ತಿಯಾಗಿ ಕೊಡಲಾರೆ. ಇಚ್ಛೆಯಿದ್ದರೆ ಕೊಟ್ಟುಹೋಗು' ಅಂತ. ಸೇವಕ ಆ ವಜ್ರವನ್ನು ಹಿಂದಕ್ಕೆ ತೆಗೆದುಕೊಂಡು ನಗುತ್ತ ನಗುತ್ತ ಯಜಮಾನನ ಹತ್ತಿರಕ್ಕೆ ಬಂದು ಹೇಳಿದ, 'ಈತ ಒಂಬೈನೂರಿಗಿಂತ ಜಾಸ್ತಿಯಾಗಿ ಒಂದು ರೂಪಾಯನ್ನೂ ಕೊಡಲಾರನಂತೆ ಮತ್ತು ಈತನೂ ಆಗಲೆ ಪೇಟೆ ಧಾರಣೆಗಿಂತ ಜಾಸ್ತಿ ಬೆಲೆಯನ್ನು ಕಟ್ಟಿಬಿಟ್ಟಿದಾನಂತೆ' ಅಂತ. ಯಜಮಾನ ನಗುತ್ತ ಹೇಳಿದ, 'ಈಗ ಇದನ್ನು ಒಬ್ಬ ರತ್ನ ವ್ಯಾಪಾರಿಯ ಹತ್ತಿರ ತೆಗೆದುಕೊಂಡು ಹೋಗು. ಆತ ಏನು ಬೆಲೆ ಕಟ್ಟುತ್ತಾನೆ ನೋಡೋಣ' ಅಂತ. ಸೇವಕ ರತ್ನ ವ್ಯಾಪಾರಿಯ ಹತ್ತಿರಕ್ಕೆ ಬಂದು ತೋರಿಸಿದ. ಆತ ಅದರ ಕಡೆಗೆ ಕಣ್ಣು ಹಾಕಿದೊಡನೆಯೆ ಹೇಳಿದ, 'ಇದಕ್ಕೆ ನಾನು ಒಂದು ಲಕ್ಷ ರೂಪಾಯಿ ಕೊಡುತ್ತೇನೆ' ಅಂತ.

"ಇವರೆಲ್ಲ ಸಂಸಾರದಲ್ಲಿದ್ದು ಅಧ್ಯಾತ್ಮಜೀವನದಲ್ಲಿ ಮುಂದುವರಿಯೋದರ ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ. ಒಬ್ಬ ಒಂದು ಕೊಠಡಿಯಲ್ಲಿದಾನೆ ಅಂತ ಇಟ್ಟುಕೊಳ್ಳಿ. ಕಿಟಕಿಬಾಗಿಲುಗಳೆಲ್ಲ

ಮುಚ್ಚಿವೆ, ಚಾವಣಿಯಲ್ಲಿರೋ ಒಂದು ಪುಟ್ಟ ಕಂಡಿಯಿಂದ ಎಲ್ಲೋ ಕಿಂಚಿತ್ ಸೂರ್ಯನ ಬೆಳಕು ಬರುತ್ತಿದೆ ಅಂತ ಇಟ್ಟುಕೊಳ್ಳಿ. ಆತನ ತಲೆಯ ಮೇಲೆ ಆ ಚಾವಣಿ ಇರೋವರಗೆ ಆತ ಸೂರ್ಯನನ್ನು ನೋಡಲಾಗುವುದೆ? ಆ ಕಿಂಚಿತ್ ಬೆಳಕು ಯಾವ ಪ್ರಯೋಜನಕ್ಕೆ ಬಂದದ್ದು? ಕಾಮಕಾಂಚನವೇ ಮೇಲ್ಚಾವಣಿ. ಮೇಲ್ಚಾವಣಿಯನ್ನು ಕಿತ್ತುಬಿಸಾಡದ ಹೊರತು ಸೂರ್ಯನನ್ನು ನೋಡಲು ಸಾಧ್ಯವಾಗುವುದೆ? ಸಂಸಾರಿಗಳು ಇಂಥ ಕೊಠಡಿಗಳಲ್ಲಿ ಬಂಧಿಸಲ್ಪಟ್ಟವರ ಹಾಗೆ ವಾಸಿ ಸುತ್ತಿರುತ್ತಾರೆ.

"ಅವತಾರಾದಿಗಳು ಈಶ್ವರಕೋಟಿಗಳು. ಅವರು ತೆರೆದ ಪ್ರದೇಶ ಗಳಲ್ಲಿ ಸುತ್ತಾಡುತ್ತಿರುತ್ತಾರೆ. ಅವರು ಎಂದಿಗೂ ಈ ಸಂಸಾರದ ಬಲೆಗೆ ಬಿದ್ದವರಲ್ಲ; ಅದರ ಕೈಗೆ ಎಂದೂ ಸಿಕ್ಕಿದವರಲ್ಲ. ಅವರ 'ಅಹಂ' ಸಂಸಾರಿಗಳದರಹಾಗೆ ಘನೀಭೂತವಾದುದಲ್ಲ. ಸಂಸಾರಿಗಳ 'ಅಹಂ', ಸಂಸಾರಿಗಳ 'ನಾನು' ಎಂಬುದು ನಾಲ್ಕು ಕಡೆಗೂ ಗೋಡೆ ಹಾಕಿ ಮೇಲೆ ಚಾವಣಿ ಹೊದ್ದಿಸಿದ ಹಾಗೆ: ಅದರೊಳಗಿರುವವನಿಗೆ ಬಹಿರ್ಜಗತ್ತಿನದು ಏನೂ ಕಾಣೋದಿಲ್ಲ. ಅವತಾರಾದಿಗಳ 'ಅಹಂ' ಎಂಬುದು ಬಹಳ ಶಿಥಿಲ ವಾದ್ದು. ಅದರ ಮೂಲಕ ಸರ್ವದಾ ಭಗವಂತನನ್ನು ನೋಡಲು ಸಾಧ್ಯ. ಗೋಡೆಯ ಎರಡು ಕಡೆಗೂ ಅನಂತವಿಸ್ತೀರ್ಣದ ಬಯಲುಳ್ಳ ಒಂದು ಗೋಡೆಯ ಪಕ್ಕದಲ್ಲಿ ನಿಂತಿರೋ ಒಬ್ಬ ಮನುಷ್ಯನನ್ನು ಉದಾಹರಣೆಗೆ ತೆಗೆದುಕೊಳ್ಳಿ. ಆ ಗೋಡೆಯಲ್ಲಿ ಒಂದು ಕಂಡಿ ಇರುವುದಾದರೆ, ಆತ ಗೋಡೆಯ ಆ ಪಕ್ಕದಲ್ಲಿರುವುದನ್ನೆಲ್ಲ ಅದರ ಮೂಲಕ ನೋಡಬಲ್ಲ. ಆ ಕಂಡಿ ಏನಾದರು ಒಂದು ಸ್ವಲ್ಪ ಅಗಲವಾದುದೇ ಆಗಿದ್ದರೆ ಅದರ ಮೂಲಕ ಆ ಪಕ್ಕಕ್ಕೆ ಹೋಗಿಬರಬಲ್ಲ. ಅವತಾರಾದಿಗಳ 'ಅಹಂ' ಎಂಬುದನ್ನು ಈ ರೀತಿಯಾಗಿ ಕಂಡಿಯಿರೋ ಗೋಡೆಗೆ ಹೋಲಿಸಬಹುದು. ಅವರು ಗೋಡೆಯ ಈ ಕಡೆ ಇದ್ದರೂ, ಅದರ ಆ ಕಡೆಯಲ್ಲೂ ಇರೋ ಅನಂತವಿಸ್ತೀರ್ಣದ ಬಯಲನ್ನು ನೋಡಬಲ್ಲರು. ಅಂದರೆ, ಅವರು ದೇಹಧಾರಣೆ ಮಾಡಿಕೊಂಡಿದ್ದರೂ ಸರ್ವದಾ ಭಗವಂತನೊಡನೆ ಐಕ್ಯ ವಾಗೇ ಇರುತ್ತಾರೆ. ಇಚ್ಛೆಯಾದರೆ, ಆ ದೊಡ್ಡ ಕಂಡಿಯ ಮೂಲಕ ಆ ಪಕ್ಕಕ್ಕೆ ಹೋಗಿ ಸಮಾಧಿಸ್ಥರಾಗುತ್ತಾರೆ. ಆ ಕಂಡಿ ಸಾಕಾದಷ್ಟು

ದೊಡ್ಡದಾಗಿದ್ದರೆ ಆ ಪಕ್ಕಕ್ಕೆ ಹೋಗಿಬರುತ್ತಲೂ ಇರುತ್ತಾರೆ. ಅಂದರೆ, ಸಮಾಧಿಯನ್ನು ಪಡೆದ ಮೇಲೂ ಮತ್ತೆ ಈ ಜಗತ್ತಿನ ಅಂತಸ್ತಿಗೆ ಇಳಿದು ಬರಬಲ್ಲರು.''

ಭಕ್ತರು ಆಶ್ಚರ್ಯಚಕಿತರಾಗಿ ಪರಮಹಂಸರ ಬಾಯಿಂದ ಬಂದ ಈ ಅವತಾರತತ್ತ್ವವನ್ನು ಕೇಳಿದರು.



೪೦

# ಬಲರಾಮ ಮತ್ತು ಗಿರೀಶರ ಮನೆಗಳಲ್ಲಿ

೨೪ನೆ, ಏಪ್ರಿಲ್ ೧೮೮೫ ವೈಶಾಖ ಶುಕ್ಲ ದಶಮಿ, ಶುಕ್ರವಾರ.

ಪರಮಹಂಸರು ಇಂದು ಕಲ್ಕತ್ತಕ್ಕೆ ಬಂದಿದಾರೆ. ಸುಮಾರು ಅಪರಾಹ್ನ ಒಂದು ಘಂಟೆಯ ಸಮಯದಲ್ಲಿ ಮಾಸ್ಟರ್ ಬಲರಾಮನ ಮನೆಯ ಬೈಠಕ್‌ಖಾನೆಗೆ ಹೋಗಿ ನೋಡುತ್ತಾನೆ, ಪರಮಹಂಸರು ನಿದ್ರೆಮಾಡುತ್ತಿದಾರೆ, ಒಬ್ಬಿಬ್ಬರು ಭಕ್ತರು ಅವರ ಹತ್ತಿರದಲ್ಲೆ ವಿಶ್ರಮಿಸಿಕೊಳ್ಳುತ್ತಿದಾರೆ. ಮಾಸ್ಟರ್ ಪರಮಹಂಸರ ಒಂದು ಪಾರ್ಶ್ವದಲ್ಲಿ ಕುಳಿತು ಆ ಸುಪ್ತ ಬಾಲಕ-ಮೂರ್ತಿಯನ್ನು ಎವೆಯಿಕ್ಕದೆ ನೋಡುತ್ತಿದಾನೆ. ಭಾವಿಸುತ್ತಿದಾನೆ: ಏನಾಶ್ಚರ್ಯ! ಇವರು ಮಹಾಪುರುಷರು! ಇವರೂ ಸಾಮಾನ್ಯ ಜನರೋಪಾದಿಯಲ್ಲಿ ನಿದ್ರಾಪರವಶರಾಗಿ ಮಲಗಿದಾರಲ್ಲ! ಇವರೂ ಜೀವಕೋಟಿಗಳ ಧರ್ಮಗಳಿಂದ ಆವೃತರಾಗಿದಾರಲ್ಲ! ಅಂತ. ಆತ ಒಂದು ಬೀಸಣಿಗೆಯನ್ನು ತೆಗೆದುಕೊಂಡು ಪರಮಹಂಸರಿಗೆ ಮೆತ್ತಮೆತ್ತಗೆ ಬೀಸಲಾರಂಭಿಸಿದ. ಸ್ವಲ್ಪ ಹೊತ್ತಿನ ಮೇಲೆ ಪರಮಹಂಸರು ನಿದ್ರೆಯಿಂದ ಎಚ್ಚೆತ್ತರು. ಅವರು ಉಟ್ಟಿದ್ದ ಪಂಚೆ ಸಿಕ್ಕಿಸಿಕ್ಕಿದ ಕಡೆ ಹರಡಿದ್ದರೀತಿಯಲ್ಲೇ ಎದ್ದು ಕುಳಿತುಕೊಂಡರು. ಮಾಸ್ಟರ್ ಅವರಿಗೆ ಸಾಷ್ಟಾಂಗಪ್ರಣಾಮಮಾಡಿ ಅವರ ಪಾದಧೂಳಿಯನ್ನು ಸ್ವೀಕರಿಸಿದ.

ಶ್ರೀರಾಮಕೃಷ್ಣರು ಪ್ರೇಮದೃಷ್ಟಿಯಿಂದ ಮಾಸ್ಟರಿಗೆ: "ಸೌಖ್ಯವೆ? ನನ್ನ ಗಂಟಲು ಹುಣ್ಣಾಗಿದೆ. ಇದು ಏಕೊ ಏನೊ ಯಾರಿಗೆ ಗೊತ್ತು? ಬೆಳಗಿನ ಜಾವ ಬಹಳ ಕಷ್ಟ ಕೊಡುತ್ತಿದೆ. ಹೇಗಪ್ಪ ಇದರಿಂದ ಗುಣ ಹೊಂದೋದು? (ಚಿಂತಿತರಾಗಿ) ಅವರು ಮಾವಿನ ಕಾಯಿ ಚಟ್ನಿ ಮಾಡಿದ್ದರು. ಅದನ್ನು ಸ್ವಲ್ಪ ತಿಂದುಬಿಟ್ಟೆ.

"ನಿನ್ನ ಹೆಂಡತಿಯ ಆರೋಗ್ಯ ಹೇಗೆ? ಅಂದು ಆಕೆ ಬಹಳ ಇಳಿದು ಹೋಗಿಬಿಟ್ಟ ಹಾಗೆ ಕಂಡಳು. ಆಕೆಗೆ ಸ್ವಲ್ಪ ತಂಪು ತಂಪಾದ ವಸ್ತುಗಳನ್ನೇ ಕೊಡುತ್ತಿರು."

ಮಾಸ್ಟರ್: "ಒಳ್ಳೆಯದು, ಎಳನೀರು-ಗಿಳನೀರು?"



MAHENDRANATH GUPTHA or M

The recorder of *The Gospel of Sri Ramakrishna* in Bengali

ಮಹೇಂದ್ರನಾಥ ಗುಪ್ತ

ಶ್ರೀರಾಮಕೃಷ್ಣರು: "ಹೌದು, ಅಂಥವು. ಸಕ್ಕರೆ ಪಾನಕವೂ ಒಳ್ಳೆಯದೆ."

ಮಾಸ್ಟರ್: "ನಾನು ಕಳೆದ ಭಾನುವಾರ ಸ್ವಂತ ಮನೆಗೇ ಬಂದು ಬಿಟ್ಟೆ."

ಶ್ರೀರಾಮಕೃಷ್ಣರು: "ಬಹಳ ಒಳ್ಳೇದು ಮಾಡಿದೆ. ಇದರಿಂದ ನಿನಗೆ ಅನುಕೂಲ ಹೆಚ್ಚಾಗುತ್ತದೆ. ಮನೆಯಲ್ಲಿ ತಂದೆತಾಯಿಗಳಿರುತ್ತಾರೆ. ನೀನು ನಿನ್ನ ಹೆಂಡತಿಯ ಕಡೆ ಅಷ್ಟೊಂದು ಗಮನಕೊಡೋ ಆವಶ್ಯಕತೆಯೇನಿರೋದಿಲ್ಲ."

ಪರಮಹಂಸರು ಹೀಗೆ ಮಾತಾಡುತ್ತ ಇದ್ದಹಾಗೆ ಅವರ ಗಂಟಲು ಒಣಗಲಾರಂಭಿಸಿತು. ಆಗ ಒಂದು ಮಗುವಿನೋಪಾದಿಯಲ್ಲಿ ಮಾಸ್ಟರನ್ನು ಕೇಳುತ್ತಿದ್ದಾರೆ, "ನನ್ನ ಬಾಯಿ ಒಣಗಲಾರಂಭಿಸಿದೆ. ನಿಮ್ಮೆಲ್ಲರಿಗೂ ಹಾಗೇ ಆಗುತ್ತಿರುವುದೇನು?" ಅಂತ.

ಮಾಸ್ಟರ್ ಯೋಗೀಂದ್ರನಿಗೆ: "ಏನು, ನಿನಗೂ ಬಾಯಿ ಒಣಗುತ್ತಿರೋ ಹಾಗೆ ಆಗುತ್ತಿದೆಯೇನು?"

ಯೋಗೀಂದ್ರ: "ಇಲ್ಲ, ನನಗೆ ಹಾಗಾಗುತ್ತಿಲ್ಲ. ಬಿಸಿಲಿನ ಝಳಕ್ಕಾಗಿ ಹಾಗಾಗುತ್ತಿರಬಹುದು."

ಅರಿಯುದಹದ ಯೋಗೀಂದ್ರ ಪರಮಹಂಸರ ಅಂತರಂಗ ಭಕ್ತರಲ್ಲಿ ಒಬ್ಬ. ಆತ ಒಬ್ಬ ತ್ಯಾಗೀ ಭಕ್ತ.

ಪರಮಹಂಸರು ಇನ್ನೂ ತಮ್ಮ ಮೈಮೇಲಿನ ಬಟ್ಟೆಯನ್ನು ಸರಿಪಡಿಸಿಕೊಂಡಿಲ್ಲ. ಅದನ್ನು ನೋಡಿ ಭಕ್ತರಲ್ಲಿ ಕೆಲಕೆಲವರು ನಗುತ್ತಿದ್ದಾರೆ.

ಶ್ರೀರಾಮಕೃಷ್ಣರು: "ನಾನು ತಾಯಿ ಮಗುವಿಗೆ ಹಾಲು ಕೊಡೋ ಹಾಗೆ ಕುಳಿತಿದ್ದೇನೆ. (ಎಲ್ಲರೂ ನಗುತ್ತಿದ್ದಾರೆ.) ಒಳ್ಳೇದು, ನನ್ನ ಬಾಯಿ ಒಣಗಿಬರುತ್ತಾ ಇದೆ. ನಾನು ಪೇರು ಹಣ್ಣನ್ನು ತಿನ್ನಲೊ ಅಥವಾ ಜಾಮ್ರೂಲು ಹಣ್ಣನ್ನು ತಿನ್ನಲೊ?"

ಬಾಬುರಾಮ: "ನಾನು ಹೋಗಿ ಜಾಮ್ರೂಲು ಹಣ್ಣನ್ನು ಕೊಂಡುಕೊಂಡು ಬರುತ್ತೇನೆ."

ಶ್ರೀರಾಮಕೃಷ್ಣರು: "ಈ ಬಿಸಿಲಿನಲ್ಲಿ ಹೊರಕ್ಕೆ ಹೋಗಬೇಡ."

ಮಾಸ್ಟರ್ ಅವರಿಗೆ ಇನ್ನೂ ಬೀಸುತ್ತಲೇ ಇದ್ದಾನೆ.

ಶ್ರೀರಾಮಕೃಷ್ಣರು: "ಈಗ ಸಾಕು. ಬಹಳ ಹೊತ್ತಿನಿಂದ ಬೀಸುತ್ತಲೇ ಇದ್ದೀಯೆ."

ಮಾಸ್ಟರ್: "ನನಗೇನು ಸಾಕಾಗಿಲ್ಲ."

ಶ್ರೀರಾಮಕೃಷ್ಣರು ಪ್ರೇಮದೃಷ್ಟಿಯಿಂದ: "ಸಾಕಾಗಿಲ್ಲ?"

ಮಾಸ್ಟರ್ ಬಲರಾಮನ ಮನೆಯ ಹತ್ತಿರವೆ ಇರೋ ಸ್ಕೂಲಿನಲ್ಲಿ ಅಧ್ಯಾಪಕನಾಗಿದಾನೆ. ಆತನಿಗೆ ಮಧ್ಯಾಹ್ನ ಒಂದು ಘಂಟೆ ಸಮಯದಲ್ಲಿ ವಿರಾಮವಿದೆ. ಈಗ ಮತ್ತೆ ಆತ ಸ್ಕೂಲಿಗೆ ಹಿಂದಿರುಗಿ ಹೋಗಬೇಕಾಗಿದೆ. ಆತ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈಗಲೆ ಹೋಗಬೇಕೇನು?"

ಒಬ್ಬ ಭಕ್ತ: "ಸ್ಕೂಲು ಇನ್ನೂ ಕ್ಲೋಸಾಗಿಲ್ಲ. ವಿರಾಮಕಾಲದಲ್ಲಿ ಇಲ್ಲಿಗೆ ಬಂದಿದಾನೆ."

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ಈತ ಏಳೆಂಟು ಮಕ್ಕಳ ಹೆತ್ತುಕೊಂಡಿರೋ ತಾಯಿಯ ಹಾಗಿದಾನೆ. ಆಕೆಗೆ ಹಗಲೂ ಇರುಳು ಮನೆಗೆಲಸ ಇದ್ದೇ ಇರುತ್ತದೆ. ಆದರೂ ಒಮ್ಮೊಮ್ಮೆ ಬಂದು ತನ್ನ ಪತಿ ಸೇವೆ ಮಾಡಿ ಹೋಗುತ್ತಾಳೆ." (ಎಲ್ಲರೂ ನಗುತ್ತಿದಾರೆ.)

ಮಾಸ್ಟರ ಸ್ಕೂಲು ಸಾಯಂಕಾಲ ನಾಲ್ಕು ಘಂಟೆಗೆ ಕ್ಲೋಸಾಯಿತು. ಆತ ಮತ್ತೆ ಬಲರಾಮನ ಮನೆಗೆ ಬಂದು ನೋಡಿದಾಗ ಪರಮಹಂಸರು ನಗುಮುಖರಾಗಿ ಬೈಠಕ್‌ಖಾನೆಯಲ್ಲಿ ಕುಳಿತಿರುವುದನ್ನು ಕಂಡ. ಭಕ್ತರು ಒಬ್ಬೊಬ್ಬರಾಗಿ ಬಂದು ಸೇರುತ್ತಿದಾರೆ. ಚಿಕ್ಕ ನರೇನ ಮತ್ತು ರಾಮ ಬಂದಿದಾರೆ. ನರೇಂದ್ರನೂ ಬಂದಿದಾನೆ. ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ. ಬಲರಾಮ ಪರಮಹಂಸರಿಗಾಗಿ ಕೇಸರಿಭಾತನ್ನು ತಯಾರುಮಾಡಿಸಿ ತಟ್ಟೆಯಲ್ಲಿ ಹಾಕಿಕೊಂಡು ತಂದಿದಾನೆ. ಗಂಟಲು ಹುಣ್ಣಾಗಿರೋದರಿಂದ ಅವರು ಬೇರೆ ಯಾವ ಗಟ್ಟಿಯಾದ ಆಹಾರವನ್ನೂ ತಿನ್ನಲಾರರು.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ಒಳ್ಳೆ ಸೊಗಸಾದ ಪದಾರ್ಥವೇ ಬಂದಿದೆ! ಒಳ್ಳೆ ಸೊಗಸಾದ ಪದಾರ್ಥ! ಬಹಳ ಒಳ್ಳೆ ಸೊಗಸಾದ ಪದಾರ್ಥ! ತಿನ್ನು! ಅಪ್ಪಳಿಸು!" (ಎಲ್ಲರೂ ನಗುತ್ತಾರೆ.)

ಮುಚ್ಚಂಜೆ ಭೂಮಿಗೆ ಕಾಲಿಕ್ಕುತ್ತಿದೆ. ಪರಮಹಂಸರು ಇಂದು ತನ್ನ ಮನೆಗೆ ಬರುವರೆಂದು ಗಿರೀಶ ಒಂದು ದೊಡ್ಡ ಔತಣವನ್ನೇ ಏರ್ಪಡಿ

ಸಿದಾನೆ. ಪರಮಹಂಸರು ಇನ್ನೇನು ಗಿರೀಶನ ಮನೆಗೆ ಹೊರಡುವುದರಲ್ಲಿ ದಾರೆ. ಈಗ ಅವರು ಬಲರಾಮನ ಮನೆಯ ಎರಡನೆಯ ಅಂತಸ್ತಿನಿಂದ ಮಾಸ್ಟರ್ ಮತ್ತು ಇನ್ನೂ ಕೆಲವು ಭಕ್ತರೊಡನೆ ಕೆಳಕ್ಕೆ ಇಳಿಯುತ್ತಿದಾರೆ. ಗೇಟಿನ ಹತ್ತಿರಕ್ಕೆ ಬಂದು ನೋಡಿದಾಗ, ಒಬ್ಬ ಹಿಂದೂಸ್ಥಾನಿ ಭಿಕ್ಷುಕ ರಾಮನಾಮ ಹಾಡುತ್ತಿರುವುದನ್ನು ಕಂಡು, ಅವರು ಅಲ್ಲೇ ಸ್ವಲ್ಪ ಹೊತ್ತು ನಿಂತು ಕೇಳಿದರು. ಅವರ ಮನಸ್ಸು ಅಂತರ್ಮುಖವಾಗುತ್ತಿರುವಂತೆ ಕಂಡಿತು. ಬಳಿಕ ಅವರು ಮಾಸ್ಟರಿಗೆ ಹೇಳಿದರು, "ಈತನ ಕಂಠ ಬಹಳ ಚೆನ್ನಾಗಿದೆ" ಅಂತ. ಒಬ್ಬ ಭಕ್ತ ಆತನಿಗೆ ಒಂದಾಣೆ ಕೊಟ್ಟ.

ಪರಮಹಂಸರು ವಸುಪಾರಾ ಗಲ್ಲಿಯನ್ನು ಪ್ರವೇಶಿಸಿದರು. ಅವರು ನಗುತ್ತ ನಗುತ್ತ ಮಾಸ್ಟರಿಗೆ ಹೇಳಿದರು, "ಇವರು ಏನು ಹೇಳುತ್ತಿದಾರೆ ನೋಡು! 'ಪರಮಹಂಸರ ದಂಡು ಬರುತ್ತಿದೆ' ಅಂತ ಹೇಳೋದ ನೋಡು! ಇವರ ಎದೆ ಕಿಚ್ಚು ಎಷ್ಟು ಇರಬೇಕು ಎಂಬುದನ್ನು ನೋಡು!" ಅಂತ. (ಎಲ್ಲರೂ ನಗುತ್ತಾರೆ.)

ಪರಮಹಂಸರು ಗಿರೀಶನ ಮನೆಯನ್ನು ಮುಟ್ಟಿದರು. ಆತ ಅನೇಕ ಮಂದಿ ಭಕ್ತರಿಗೆ ಆಹ್ವಾನವಿತ್ತಿದಾನೆ. ಅವರಲ್ಲಿ ಅನೇಕರು ಆಗಲೇ ಬಂದು ಸೇರಿದಾರೆ. ಅವರೆಲ್ಲರೂ ಎದ್ದು ನಿಂತು ಪರಮಹಂಸರನ್ನು ಎದುರುಗೊಂಡರು. ಅವರು ಮಂದಹಾಸವನ್ನು ಬೀರುತ್ತ ತಮಗಾಗಿ ಸಜ್ಜುಗೊಳಿಸಿದ್ದ ಆಸನದಲ್ಲಿ ಕುಳಿತುಕೊಂಡರು. ಭಕ್ತರು ಅವರ ಸುತ್ತಲೂ ಕುಳಿತುಕೊಂಡರು. ಅಲ್ಲಿ ಗಿರೀಶ, ಮಹಿಮಚರಣ, ಭವನಾಥ ಇವರೇ ಮೊದಲಾದವರೂ ಅಲ್ಲದೆ, ಪರಮಹಂಸರೊಡನೆ ಬಂದ ಬಾಬುರಾಮ, ನರೇಂದ್ರ, ಯೋಗೀಂದ್ರ, ಚಿಕ್ಕ ನರೇನ, ಚುಣಿಲಾಲ, ಬಲರಾಮ, ಮಾಸ್ಟರ್ ಇವರೇ ಮೊದಲಾದವರೂ ಕುಳಿತಿದಾರೆ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ನಾನು ಗಿರೀಶನಿಗೆ ನಿನ್ನ ಸಂಬಂಧವಾಗಿ ಹೇಳಿದೇನೆ, 'ಒಬ್ಬ ಇದಾನೆ, ಆತನ ಆಳ ಬಹಳ ವಿಪರೀತ. ಆದರೆ ನಿನ್ನ ಆಳ ಒಂದು ಮೊಣಕಾಲುದ್ದವೆ' ಅಂತ. ನನ್ನ ಮಾತನ್ನು ನೀನು ಉಳಿಸಿಬಿಡು ನೋಡೋಣ. ನೀವಿಬ್ಬರೂ ವಿಚಾರ ಮಾಡೋದನ್ನು ನಾನು ನೋಡಬೇಕೆಂದಿದೇನೆ. ನೋಡು, ಬಡಪಟ್ಟಿಗೆ ಬಗ್ಗಬೇಡ." (ಎಲ್ಲರೂ ನಗುತ್ತಾರೆ.)

ಗಿರೀಶ ಮತ್ತು ಮಹಿಮಚರಣ ವಿಚಾರದಲ್ಲಿ ತೊಡಗಿದಾರೆ. ಚರ್ಚೆ ಆರಂಭವಾಯಿತೊ ಇಲ್ಲವೊ ಎನ್ನುವಷ್ಟರಲ್ಲಿಯೆ ರಾಮ ಹೇಳಿದ, "ಓ, ಇದೆಲ್ಲ ಬೇಡಿ, ಕೀರ್ತನೆ ನಡೆಯಲಿ" ಅಂತ.

ಶ್ರೀರಾಮಕೃಷ್ಣರು ರಾಮನಿಗೆ: "ಬೇಡ, ಇದೇ ನಡೆಯಲಿ. ಇದರಲ್ಲಿ ಒಂದು ಉದ್ದೇಶವಿದೆ. ಇವರು 'ಇಂಗ್ಲಿಷ್ ಮ್ಯಾನ್.' ಇವರು ಹೇಗೆ ಮಾತಾಡುತ್ತಾರೆ ನೋಡೋಣ."

ಸಾಧನೆಯ ಮೂಲಕ ಎಲ್ಲರೂ ಶ್ರೀಕೃಷ್ಣನಾಗಬಹುದು ಎಂಬುದು ಮಹಿಮಚರಣನ ಅಭಿಪ್ರಾಯ. ಆದರೆ ಗಿರೀಶನ ಅಭಿಪ್ರಾಯ: ಶ್ರೀಕೃಷ್ಣ ಅವತಾರಪುರುಷ. ಮನುಷ್ಯ ಎಷ್ಟೇ ಸಾಧನೆ ಮಾಡಿದರೂ ಅವತಾರ ಪುರುಷನಾಗಲಾರ ಅಂತ.

ಮಹಿಮಚರಣ: "ಇದು ಹೇಗೆ ಗೊತ್ತೆ? ಉದಾಹರಣೆಗಾಗಿ, ಇರೋ ಪ್ರತಿಬಂಧಕಗಳನ್ನು ತೆಗೆದುಹಾಕಿಬಿಟ್ಟತು ಅಂದರೆ ಬಿಲ್ವ ಮರ ಮಾವಿನ ಮರವಾಗಿಬಿಡಬಲ್ಲದು. ಯೋಗಾಭ್ಯಾಸದ ಮೂಲಕ ಪ್ರತಿ ಬಂಧಕ ಹೊರಟು ಹೋಗುತ್ತದೆ."

ಗಿರೀಶ: "ಮಹಾಶಯ, ನೀನು ಏನು ಬೇಕಾದರೂ ಹೇಳಿಕೊ, ಯೋಗದಿಂದಲೂ ಸಾಧ್ಯವಿಲ್ಲ. ಕೃಷ್ಣ ಮಾತ್ರನೆ ಕೃಷ್ಣನಾಗಬಲ್ಲ. ಯಾರಲ್ಲೆ ಆಗಲಿ ಬೇರೊಬ್ಬರ ಸಕಲ ಗುಣಗಳೆಲ್ಲ, ಉದಾಹರಣೆಗೆ ರಾಧೆಯ ಗುಣಗಳೆಲ್ಲ ಇರುವುದಾದರೆ, ಆ ವ್ಯಕ್ತಿ ಸ್ವಯಂ ರಾಧೆಯೇ ಅಲ್ಲದೆ ಬೇರೆ ಯಾರೂ ಅಲ್ಲ. ಯಾರಲ್ಲೆ ಆಗಲಿ ಶ್ರೀಕೃಷ್ಣನ ಸಮಸ್ತ ಗುಣಗಳೆಲ್ಲ ಕಂಡು ಬರುವುದಾದರೆ, ನನ್ನ ಸಿದ್ಧಾಂತ ನಾನು ನೋಡು ತ್ತಿರೋದು ಸಾಕ್ಷಾತ್ ಶ್ರೀಕೃಷ್ಣನನ್ನೇ ಅಂತ."

ಮಹಿಮಚರಣ ಮುಂದಕ್ಕೆ ವಾದಿಸಲಾರದೆ ಹೋದ. ಕೊನೆಗೆ ಆತ ಒಂದು ವಿಧವಾಗಿ ಗಿರೀಶನ ಅಭಿಪ್ರಾಯವನ್ನೇ ಒಪ್ಪಿಕೊಳ್ಳಬೇಕಾಗಿ ಬಂತು.

ಮಹಿಮಚರಣ ಗಿರೀಶನಿಗೆ: "ಹೌದು, ನಮ್ಮಿಬ್ಬರ ಅಭಿಪ್ರಾಯವೂ ಸರಿಯಾದುವೆ. ಭಗವಂತ ಜ್ಞಾನಮಾರ್ಗವನ್ನೂ ಸೃಷ್ಟಿಸಿದಾನೆ, ಭಕ್ತಿ ಮಾರ್ಗವನ್ನೂ ಸೃಷ್ಟಿಸಿದಾನೆ. ಇವರು (ಪರಮಹಂಸರು) ಹೇಳೋ ಹಾಗೆ ವಿವಿಧ ಪಥಗಳಿಂದ ಒಂದೇ ಜಾಗವನ್ನು ಮುಟ್ಟಬಹುದು."

ಶ್ರೀರಾಮಕೃಷ್ಣರು ಮಹಿಮಚರಣನನ್ನು ಒಂದು ಕಡೆಗೆ ಕರೆದು: "ನೋಡಿದೆಯಾ, ನಾನು ಹೇಳಿದ್ದು ಸರಿಯಲ್ಲವೆ?"

ಮಹಿಮಚರಣ: "ಹೌದು, ನೀವು ಹೇಳಿರೋ ಹಾಗೆ ಎರಡು ಮಾರ್ಗವೂ ಸರಿಯಾದುವೆ."

ಶ್ರೀರಾಮಕೃಷ್ಣರು ಗಿರೀಶನನ್ನು ತೋರಿಸಿ: "ಈತನ ವಿಶ್ವಾಸ ಎಷ್ಟು ಗಾಢವಾದುದು ಎಂಬುದನ್ನು ಈಗ ನೀನೆ ನೋಡಿದೆ ತಾನೆ? ಫಲಾಹಾರ ತೆಗೆದುಕೊಳ್ಳುವುದನ್ನೂ ಮರೆತುಬಿಟ್ಟ! ಆತ ಹೇಳೋದನ್ನು ಒಂದು ಪಕ್ಷ ನೀನೇನಾದರು ಒಪ್ಪಿಕೊಳ್ಳದೆ ಹೋಗಿಬಿಟ್ಟಿದ್ದರೆ, ನಾಯಿಯ ಹಾಗೆ ನಿನ್ನ ಕುತ್ತಿಗೆ ಹಿಡಿದು ಅಲುಬಿಬಿಡುತ್ತಿದ್ದ. ಚರ್ಚೆ ಬಹಳ ಚೆನ್ನಾಗೇ ಆಯಿತು. ಇದರಿಂದ ನಿಮ್ಮಿಬ್ಬರಿಗು ಒಬ್ಬರಿಗೊಬ್ಬರ ಪರಿಚಯವಾದ ಹಾಗಾಯಿತು ಮತ್ತು ನನಗೂ ಅನೇಕ ವಿಷಯ ಗೊತ್ತಾದ ಹಾಗಾಯಿತು."

ಕೀರ್ತನಗಾರ ತನ್ನ ಪಾರ್ಟಿಯೊಡನೆ ಬಂದು ಕೊಠಡಿಯ ಮಧ್ಯ ಪ್ರದೇಶದಲ್ಲಿ ಕುಳಿತುಕೊಂಡ. ಪರಮಹಂಸರು ಅನುಜ್ಞೆಕೊಡುವುದೆ ತಡ, ಕೀರ್ತನೆ ಆರಂಭವಾಗಿಬಿಡುತ್ತದೆ. ಅವರು ಅನುಮತಿ ಕೊಟ್ಟರು.

ರಾಮ ಶ್ರೀರಾಮಕೃಷ್ಣರಿಗೆ: "ಇವರು ಏನು ಹಾಡಬೇಕೆಂಬುದನ್ನು ದಯವಿಟ್ಟು ತಿಳಿಸಿ."

ಶ್ರೀರಾಮಕೃಷ್ಣರು: "ಯಾವುದನ್ನು ಹಾಡು ಅಂತ ಹೇಳಲಿ? (ಸ್ವಲ್ಪ ಹೊತ್ತು ಚಿಂತಿಸಿ) ಒಳ್ಳೆಯದು, ಅನುರಾಗವನ್ನು (ಶ್ರೀಕೃಷ್ಣನನ್ನು ಸಂಧಿಸಲು ಮುನ್ನ ರಾಧೆಗೆ ಇದ್ದ ಮಾನಸಿಕ ಸ್ಥಿತಿಯನ್ನು ವರ್ಣಿಸೋ ಕೀರ್ತನೆಯನ್ನು) ಹಾಡಲಿ."

ಕೀರ್ತನಗಾರ ಪೂರ್ವರಾಗವನ್ನು ಹಾಡುತ್ತಿದಾನೆ:

ನನ್ನ ನಿಧಿ ಗೌರಾಂಗ, ದ್ವಿಜಶಿರೋಮಣಿ, ಎಂತು
ರಾಧೆಯನು ನೆನೆ ನೆನೆದು ಅಳುತಿರುವನು!
ಪ್ರೇಮಪೂರಿತನಯನದಿಂದಿಳಿಯುತಿದೆ ಕಣ್ಣೀರು;
ರಾಧೆಯೊಲವನು ಜಪಿಸಿ ಹೊರಳುತಿಹನು.
'ರಾಧಾ'—ಎನ್ನುತ ಒಂದೊಂದು ಸಲ ಅವನು
ಮೈಮರೆದು ಉರುಳುವನು ನೆಲದ ಮೇಲೆ.

ಪುಲಕ ಗದ್ಗದದಲ್ಲಿ ' ರಾಧಾ ' ಎಂಬುದ ಹೊರತು
ಮತ್ತೇನನೂ ಅವನು ನುಡಿಯಲಾರ!

ಕೀರ್ತನೆ ಮುಂದುವರಿಯುತ್ತಿದೆ.

ಶ್ರೀಮತಿ (ರಾಧೆ) ಯಮುನಾತಟದಲ್ಲಿರೋ ಕದಂಬ ವೃಕ್ಷದ ಕೆಳಗೆ ಮೊಟ್ಟಮೊದಲು ಶ್ರೀಕೃಷ್ಣನನ್ನು ಸಂಧಿಸಿದಾಗ, ಆಕೆಯ ಮಾನಸಿಕ ಸ್ಥಿತಿ ಹೇಗಿತ್ತು ಎಂಬುದನ್ನು ಆಕೆಯ ಸಖಿಯರು ವರ್ಣಿಸುತ್ತಿದಾರೆ:

ಘಳಿಗೆ ಘಳಿಗೆಗೆ ನೂರು ಸಲ, ಮನೆ-
ಯೊಳಗು ಹೊರಗೂ ಅಲೆವಳು.
ಕಾತರದ ನಿಟ್ಟುಸಿರಿಟ್ಟು ನೋಟವ
ಕದಂಬವನದೆಡೆ ಸಲಿಪಳು.
ಮನೆಯ ಹಿರಿಯರಿಗಂಜಿಹಳೊ, ಮೇಣ್
ಭೂತಗ್ರಸ್ತಳೊ, ತಿಳಿಯದು!
ಉಡುಪು ಅಸ್ತವ್ಯಸ್ತವಾದರು, ಸರಿ-
ಪಡಿಸಿಕೊಳ್ಳದ ಕಾತರ!
ಒಡವೆಗಿಡವೆಗಳಿಲ್ಲೊ ಉದುರಿವೆ
ನಡುಗುತಿಹಳಿದೊ ತರತರ!

ಅಯ್ಯೊ, ನೋಡಿರಿ: ಅವಳು ಇನ್ನೂ
ಎಳೆಯಳು !
ಹುಟ್ಟುರಾಜಕುಮಾರಿ, ಅಲ್ಲದೆ ಮದುವೆ-
ಯಾಗಿಹ ಗರತಿಯು !
ಆದರೂ ಇಂತೇತಕೀತರ ನಮೆವಳು ?
ಅವಳ ನಡೆನುಡಿ ರೀತಿನೀತಿಗ-
ಳೊಂದು ನಮಗೂ ತಿಳಿಯದು.
ಚಂದ್ರನೆಡೆ ಕೈಚಾಚುತಿರುವೀ
ಸುಂದರಿಯು ಶ್ರೀಕೃಷ್ಣನ
ಬಲೆಗೆ ಬಿದ್ದಾ ರಾಧೆಯಲ್ಲವೆ
ಎಂದು ಊಹಿಪುದೀ ಮನ !

ಕೀರ್ತನೆ ಮುಂದುವರಿಯುತ್ತಿದೆ. ರಾಧೆಯ ಸಖಿಯರು ಆಕೆಗೆ ಹೇಳುತ್ತಿದಾರೆ:

ಏಕೀ ವಿಷಾದವು ರಾಧೆ, ಓ ಸೌಮ್ಯ ಶಶಿವದನೆ,
ಏಕೆ ಮರುಳಿನ ತೆರದಿ ಹೊರಳುತಿರುವೆ?
ಕನಕವರ್ಣದ ಕಾಯ ಬೂದಿಯೊಲು ಮಂಕಾಯ್ತು;
ಹೊದ್ದ ಸೆರಗೂ ಜಾರಿದರಿವಿಲ್ಲವೆ?

ಹಗಲು ಇರುಳೂ ಅತ್ತು ಕೆಂಪಗಾಗಿವೆ ಕಣ್ಣು;
ಬಾಡಿಹುದು ಸುಕುಮಾರ ಕಮಲವದನ.
ನಮ್ಮ ಎದೆಯೂ ಕೂಡ ಒಡೆಯಬಹುದೋ ಏನೊ,
ನೀನು ಹೇಳದೆ ಇರಲು ನಿನ್ನ ವ್ಯಸನ!

ರಾಧೆ ತನ್ನ ಸಖಿಯರಿಗೆ ಹೇಳುತ್ತಾಳೆ:

ಯದುನಂದನ ಮುಖದರ್ಶನ ಕಾತುರೆ ನಾ.

ಕೀರ್ತನಗಾರ ಮತ್ತೆ ಹಾಡಲು ಆರಂಭಿಸಿದ:

ಶ್ರೀಮತಿ ಶ್ರೀಕೃಷ್ಣನ ವೇಣುನಾದವನ್ನು ಕೇಳಿ ತೀರ ಹುಚ್ಚಿಯಂತೆ ಆಗಿಬಿಟ್ಟಿದ್ದಾಳೆ. ಆಕೆ ತನ್ನ ಸಖಿಯರಿಗೆ ಹೇಳುತ್ತಾಳೆ:

ಯಾರು ಈ ಗಾರುಡಿಗ, ಕದಂಬವನದಲಿ ಕುಳಿತು
ಕೊಳಲನೂದುತ ಮನವ ಮರುಳುಮಾಡಿ,
ಎದೆಯೊಳಗನೇ ಕಡೆದು, ಆತ್ಮವನೆ ಕೊರೆಕೊರೆದು
ಕೊಳಲಿನುಲಿಯೊಳಿ ಗೈವನೆಂಥಮೋಡಿ!

ತುಡಿ ತುಡಿವ ಎದೆಯಲ್ಲಿ, ಸುರಿವ ಕಂಬನಿಯಲ್ಲಿ
ಉಸಿರಿಡದ ಮೌನದಲಿ ಆಲಿಸಿಹೆನು!
ಅಃ, ಅದೋ ಕೊಳಲದನಿ! ಮಿಂಚುವೊಳೆ ಎದೆಯೊಳಗೆ!
ಮನೆಯೊಳಿರಲಾರೆ ನಾ; ಎಲ್ಲಿ ಅವನು?

ಎದೆಯು ಹಂಬಲಿಸಿಹುದು, ನನ್ನ ಆ ಪ್ರಿಯತಮನ
ಮತ್ತೊಮ್ಮೆ ಕಾಣದಿರೆ ಬದುಕಲಾರೆ.
ನುಡಿವನುದ್ಧವದಾಸ: ಓ ರಾಧೆ ನೀನವನ
ಕಂಡ ಮರು ಚಣದಲ್ಲೆ ಬದುಕಲಾರೆ!

ಕೀರ್ತನೆ ಮುಂದುವರಿಯಿತು.

ಶ್ರೀಕೃಷ್ಣನ ದರ್ಶನಕ್ಕಾಗಿ ರಾಧೆಯ ಹೃದಯ ಸುಮ್ಮನೆ ತವಕ ಪಡುತ್ತಿದೆ. ಆಕೆ ತನ್ನ ಸಖಿಯರಿಗೆ ಹೇಳುತ್ತಾಳೆ:

ಮೊದಲು ಕೇಳಿದೆನವನ ಮಾಟದ
ಕೊಳಲಿನುಲಿಯನು ದೂರದಿ,
ಬಳಿಕ ಆತನ ಹಾಡು ಮನವನು
ತಟ್ಟಿ ಆತನ ವಿಷಯವೆಲ್ಲವ-
ನೊರೆದುದೆನ್ನೀ ಕಿವಿಯಲಿ.
ಮತ್ತೆ ನೀನೇ ಬಂದು ಓ ಸಖಿ,
ಹೆಸರನುಸಿರಿದೆ ಕಿವಿಯಲಿ.
'ಕೃಷ್ಣ'—ಎನ್ನುವ ಹೆಸರು ಜೇನನು
ಕರೆವುದೆನ್ನೀ ಎದೆಯಲಿ!
ಅವನ ಅಗಣಿತ ಗುಣವನೊರೆದರು
ಅವನನರಿತಿಹ ಹಿರಿಯರು.
ನಾನು ಅಬಲೆಯು, ಮತ್ತೆ ಕುಲವಧು;
ಕಠಿಣರೆನ್ನೀ ಹಿರಿಯರು.
ದಿನವು ದಿನವೂ ಪ್ರಿಯನ ಒಲವಿಗೆ
ಇಂತು ತುಡಿದರೆ ನನ್ನೆದೆ
ನಾನು ಜೀವವ ಬಿಡುವುದೊಳ್ಳಿತು,
ಬೇರೆ ಹಾದಿಯು ಏನಿದೆ?
ಹೇಳು ಕೆಳದೀ ನನ್ನ ಕೃಷ್ಣನ
ಕಾಣಲಾವುದು ಪಥವಿದೆ?

"'ಕೃಷ್ಣ'—ಎನ್ನುವ ಹೆಸರು ಜೇನನು ಕರೆವುದೆನ್ನೀ ಎದೆಯಲಿ!" ಎಂಬ ಚರಣವನ್ನು ಪರಮಹಂಸರು ಕೇಳಿದೊಡನೆಯೆ, ಅವರ ಕೈಯಲ್ಲಿ ಸುಮ್ಮನೆ ಕುಳಿತಿರಲಾಗಲಿಲ್ಲ. ಎದ್ದು ನಿಂತು ಸಮಾಧಿಸ್ಥರಾಗಿಬಿಟ್ಟದಾರೆ ಚಿಕ್ಕ ನರೇನ ಅವರ ಬಲಭಾಗದಲ್ಲಿ ನಿಂತಿದಾನೆ.

ಕಿಂಚಿತ್ ಪ್ರಕೃತಿಸ್ಥರಾಗಿ ತಮ್ಮ ಮಧುರ ಕಂಠದಿಂದ "ಕೃಷ್ಣ", "ಕೃಷ್ಣ" ಅಂತ ಹೇಳುತ್ತಿದಾರೆ. ಕಣ್ಣಿನಿಂದ ಪ್ರೇಮಾಶ್ರು ಸುರಿಯುತ್ತಿದೆ. ಅವರು ಮತ್ತೆ ಕೆಳಗೆ ಕುಳಿತುಕೊಂಡರು. ಕೀರ್ತನಗಾರ ಕೀರ್ತನೆಯನ್ನು ಮುಂದುವರಿಸುತ್ತಿದಾನೆ.

ರಾಧೆಯ ಸಖಿ ವಿಶಾಖೆ ಎಂಬುವಳು ಓಡಿಹೋಗಿ ಶ್ರೀಕೃಷ್ಣನ ಪಟವೊಂದನ್ನು ತಂದು ರಾಧೆಯ ಮುಂದೆ ಹಿಡಿಯುತ್ತಾಳೆ. ರಾಧೆ ಅದನ್ನು ನೋಡಿ ಹೇಳುತ್ತಾಳೆ, "ಈ ಪಟದಲ್ಲಿ ಯಾರು ಕಾಣುತ್ತಿದಾನೊ, ಆತನನ್ನು ಯಮುನಾದಡದಲ್ಲಿ ನೋಡಿದಂದಿನಿಂದ ನನಗೆ ಈ ದಶೆ ಬಂದುಬಿಟ್ಟದೆ" ಅಂತ.

ಯಮುನಾ ನದೀ ತಟದಿ ನಾಕಂಡ ಸುಂದರನ
ಚಿತ್ರಪಟವಿದು ನೋಡು, ಎನಿತು ಚೆಲುವು !
ಯಾರ ಶುಭನಾಮವನು ಸಖಿ ವಿಶಾಖೆಯು ಅಂದು
ಹೇಳಿದಳೊ, ಆತನೇ ಇಲ್ಲಿರುವನು !
ಕೊಳಲನೂದುತ ನನ್ನ ಹೃದಯವನು ಸೆರೆಗೊಂಡ
ನನ್ನ ಮೋಹದ ಮೂರ್ತಿ ಇಲ್ಲಿರುವನೇ.
ಯಾರ ಗುಣಗಣಗಳನು ಚಾರಣರು ಹಾಡಿದರೊ
ಆ ನನ್ನ ಪ್ರಿಯತಮನು ಇವನಲ್ಲವೇ?
ಹೀಗೆನುತ ಮೈಮರೆತು ತಿರೆಗೆ ಉರುಳಿದ ರಾಧೆ,
ಸಖಿಯರುಪಚಾರದಲಿ ಎಚ್ಚರಾಗಿ,
'ನನ್ನ ಹೃದಯದೊಳಿಂತು ಮಾರ್ಪೊಳೆವ ಮೂರುತಿಯ
ತೋರಿರೇ ಸಖಿ'— ಎಂದು ಬೇಡಲಾಗಿ
ಅವಳ ಇರವಿಗೆ ಮರುಗಿ ಭಾಷೆಯಿತ್ತರು ಅವರು
ಅವಳ ನಲ್ಲನ ಬಳಿಗೆ ಒಯ್ಯುವದಾಗಿ !

ಈಗ ಶ್ರೀರಾಮಕೃಷ್ಣರು ನರೇಂದ್ರಾದಿ ಭಕ್ತರೊಡನೆ ಉಚ್ಚ ಕಂಠದಿಂದ ಸಂಕೀರ್ತನೆ ಮಾಡಲಾರಂಭಿಸಿದಾರೆ. ಅವರು ಹಾಡಿದರು:

ಹರಿನಾಮವನು ನುತಿಸಿ, ಆನಂದ ಬಾಷ್ಪವನು
ಕರೆವಣ್ಣತಮ್ಮದಿರು, ಇವರು ನೋಡು ! . . . . . .

ಅವರು ಹಾಡುವುದನ್ನು ಮುಂದುವರಿಸಿದರು:

ಗೌರಾಂಗನು ಹುಟ್ಟಿದೂರು
ಅವನ ಪ್ರೇಮ ಹಿಲ್ಲೋಲದಿ
ಸ್ಪಂದಿಸುತಿದೆ ಮೋದದಿ !

ಮತ್ತೆ ಪರಮಹಂಸರು ಸಮಾಧಿಸ್ಥರಾದರು. ಬಾಹ್ಯ ಪ್ರಜ್ಞೆಯನ್ನು

ಪಡೆದನಂತರ ತಮ್ಮ ಸ್ವಸ್ಥಾನಕ್ಕೆ ಬಂದು ಕುಳಿತುಕೊಂಡರು. ಅವರು ಮಾಸ್ಟರಿನ ಕಡೆಗೆ ತಿರುಗಿ ಹೇಳಿದರು, "ನಾನು ಮೊದಲು ಯಾವ ಕಡೆಗೆ ಮುಖ ಹಾಕಿಕೊಂಡು ಕುಳಿತಿದ್ದೆ ಎಂಬುದನ್ನು ಈಗ ಮರೆತುಬಿಟ್ಟಿದೇನೆ" ಅಂತ. ಬಳಿಕ ಭಕ್ತರೊಡನೆ ಮಾತುಕತೆಯಾಡಲು ಆರಂಭಿಸಿದರು.

ನರೇಂದ್ರ ಶ್ರೀರಾಮಕೃಷ್ಣರಿಗೆ: "ಹಾಜರಾ ಈಗ ಒಳ್ಳೆಯವನಾಗಿ ಬಿಟ್ಟಿದಾನೆ."

ಶ್ರೀರಾಮಕೃಷ್ಣರು: "ಆತನ ನಿಜ ಸ್ವರೂಪ ಎಂಥದು ಎಂಬುದು ನಿನಗೆ ಗೊತ್ತಿಲ್ಲ. ಕೈಯಲ್ಲಿ ಶರಣಾರತಿಯನ್ನು ತೋರಿಸುತ್ತ ಕಂಕುಳಲ್ಲಿ ದೊಣ್ಣೆ ಇಟ್ಟುಕೊಂಡಿರೋ ಜನರೂ ಈ ಜಗತ್ತಿನಲ್ಲಿದಾರೆ."

ನರೇಂದ್ರ: "ಅಲ್ಲ, ಅಲ್ಲ. ಆತ ಅಂಥವನಲ್ಲ. ಜನರು ಆತನ ಮೇಲೆ ಮಾಡೋ ದೋಷಾರೋಪಣೆಯ ಸಂಬಂಧವಾಗಿ ಆತನನ್ನು ಕೇಳಿದೆ. ಅದೆಲ್ಲ ಶುದ್ಧ ಸುಳ್ಳು ಅಂತ ಆತ ಹೇಳಿದ."

ಶ್ರೀರಾಮಕೃಷ್ಣರು: "ಆತ ನಿಷ್ಠಾವಂತನೆ; ಸ್ವಲ್ಪ ಜಪತಪ ಮಾಡುತ್ತಾನೆ. ಆದರೆ ವಕ್ರತೆಯೂ ಇದೆ. ಗಾಡಿಯವನಿಗೆ ಬಾಡಿಗೆ ಕೊಡೋದಿಲ್ಲ."

ನರೇಂದ್ರ: "ಇಲ್ಲವಂತೆ, ಕೊಟ್ಟಿದಾನಂತೆ."

ಶ್ರೀರಾಮಕೃಷ್ಣರು: "ದುಡ್ಡು ಎಲ್ಲಿಂದ ದೊರೆಯಿತು?"

ನರೇಂದ್ರ: "ಬಹುಶಃ ರಾಮಲಾಲ-ಗೀಮಲಾಲನಿಂದ ಸಾಲ ತೆಗೆದು ಕೊಟ್ಟಿರಬೇಕು."

ಶ್ರೀರಾಮಕೃಷ್ಣರು: "ಇವುಗಳ ಸಂಬಂಧವಾಗಿ ಆತನನ್ನು ವಿಶದವಾಗಿ ಕೇಳಿದೆಯೇನು? ಒಮ್ಮೆ ನಾನು ಭಗವತಿಗೆ ಪ್ರಾರ್ಥನೆ ಮಾಡಿದೆ, 'ತಾಯೆ, ಹಾಜರಾ ಒಬ್ಬ ಆಷಾಢಭೂತಿಯಾಗಿದ್ದರೆ, ಆತನನ್ನು ಇಲ್ಲಿಂದ ತೆಗೆದುಬಿಡು' ಅಂತ. ಬಳಿಕ ನಾನು ಮಾಡಿದ ಪ್ರಾರ್ಥನೆಯನ್ನು ಆತನಿಗೆ ತಿಳಿಸಿಬಿಟ್ಟೆ. ಆತ ಕೆಲವು ದಿವಸಗಳಾದ ಮೇಲೆ ಬಂದು ನನ್ನ ಹತ್ತಿರ ಹೇಳಿದ, 'ನೋಡಿ, ನಾನು ಇನ್ನೂ ಇಲ್ಲೇ ಇದೇನೆ' ಅಂತ. (ಪರಮಹಂಸರು ಮತ್ತೆಲ್ಲರೂ ನಗುತ್ತಿದಾರೆ.) ಆದರೆ ಆ ಬಳಿಕ ಕೆಲವು ದಿವಸಗಳಲ್ಲೇ ಈ ಸ್ಥಳವನ್ನು ಬಿಟ್ಟುಹೋದ.

"ಹಾಜರಾ ತನ್ನ ಊರಿಗೆ ಹೋಗಿಬರುವಂತೆ ನಾನು ಆತನಿಗೆ ಹೇಳಬೇಕೆಂದು ಆತನ ತಾಯಿ ರಾಮಲಾಲನ ಮೂಲಕ ನನಗೆ ಹೇಳಿಕಳುಹಿ

ಸಿದ್ದಳು. ಆಕೆ ಆತನಿಗಾಗಿ ಅತ್ತು ಅತ್ತು ಬಹುಮಟ್ಟಿಗೆ ಕುರುಡಿಯೇ ಆಗಿಬಿಟ್ಟಿದ್ದಳು. ಆಕೆಯನ್ನು ಆತ ನೋಡಿಬರಲೆಂದು ನಾನು ನನ್ನ ಕೈಯಲ್ಲಾದ ಪ್ರಯತ್ನಗಳನ್ನೆಲ್ಲಾ ಮಾಡಿ ನೋಡಿಬಿಟ್ಟೆ. ಆತನಿಗೆ ಹೇಳಿದೆ, 'ನಿನ್ನ ತಾಯಿ ಮುದುಕಿಯಾಗಿದಾಳೆ. ಹೋಗಿ ಆಕೆಯನ್ನು ಒಮ್ಮೆ ನೋಡಿಕೊಂಡು ಬಾ' ಅಂತ. ನನ್ನ ಪ್ರಯತ್ನವೆಲ್ಲಾ ವಿಫಲವಾಯಿತು. ಕೊನೆಗೆ ಆತನ ತಾಯಿ ಅತ್ತು ಅತ್ತೇ ಸತ್ತುಹೋದಳು."

ನರೇಂದ್ರ: "ಈ ಸಲ ಆತ ಊರಿಗೆ ಹೋಗುತ್ತಾನೆ."

ಶ್ರೀರಾಮಕೃಷ್ಣರು: "ಹೌದು, ಹೌದು! ಈಗ ಊರಿಗೆ ಹೋಗುತ್ತಾನೆ! ಆತ ಒಬ್ಬ ನೀಚ. ಆತನ ಸ್ವರೂಪ ನಿನಗೆ ಗೊತ್ತಿಲ್ಲ. ಹಾಜರಾ ಕೆಲವುದಿನಗಳನ್ನು ಸಿಂಥಿಯಲ್ಲಿ ಕಳೆದ ಅಂತ ಗೋಪಾಲ ಹೇಳಿದ. ಅಲ್ಲಿನ ಜನರು ಆತನಿಗೆ ಅಕ್ಕಿ, ಬೇಳೆ, ತುಪ್ಪ ಇವೇ ಮೊದಲಾದ ಆಹಾರಪದಾರ್ಥಗಳನ್ನು ಕೊಡುತ್ತಿದ್ದರಂತೆ. ಆತ ಹೇಳುತ್ತಿದ್ದನಂತೆ, ಇಂಥ ದಪ್ಪಕ್ಕಿಯನ್ನು, ಇಂಥ ಕೆಟ್ಟ ತುಪ್ಪವನ್ನು ತನ್ನ ಕೈಯಲ್ಲಿ ತಿನ್ನಲಾಗುವುದೆ ಅಂತ. ನೋಡು ಆತನ ದುರಹಂಕಾರವನ್ನ! ಅವನೊಡನೆ ಅಲ್ಲಿಗೆ ಭಾಟಪಾರಾದ ಈಶಾನ ಹೋಗಿದ್ದನಂತೆ. ಹಾಜರಾ ಆತನಿಗೆ ಕಾಲುತಂಬಿಗೆಯಲ್ಲಿ ನೀರು ತರುವಂತೆ ಆಜ್ಞೆಮಾಡಿದನಂತೆ. ಆತನ ಈ ವರ್ತನೆ ಉಳಿದ ಬ್ರಾಹ್ಮಣರಿಗೆ ಕೋಪವನ್ನುಂಟುಮಾಡಿಬಿಟ್ಟಿತಂತೆ."

ನರೇಂದ್ರ: "ಈ ವಿಷಯವಾಗಿಯೂ ನಾನು ಆತನನ್ನು ಕೇಳಿದೆ. ಇಲ್ಲವಂತೆ, ಈಶಾನಬಾಬು ತಾನಾಗಿಯೇ ಮುಂದೆ ಬಂದು ನೀರು ತಂದು ಕೊಟ್ಟನಂತೆ. ಜೊತೆಗೆ ಭಾಟಪಾರಾದ ಬ್ರಾಹ್ಮಣರು ಆತನಿಗೆ ಸನ್ಮಾನ ತೋರಿಸಿದರಂತೆ."

ಶ್ರೀರಾಮಕೃಷ್ಣರು ನಗುತ್ತ ನಗುತ್ತ: "ಇದೊಂದಿಷ್ಟು ಆತನ ಜಪತಪದ ಫಲ. ನೋಡು, ದೈಹಿಕ ಲಕ್ಷಣಗಳೂ ತಮ್ಮ ಪ್ರಭಾವವನ್ನು ಬೀರುತ್ತವೆ. ಗಿಡ್ಡುಗಿಡ್ಡಾಗಿರೋ, ಗಂಟುಗಂಟಾಗಿರೋ ದೇಹ ಒಳ್ಳೆಯ ಲಕ್ಷಣವಲ್ಲ. ಇಂಥವರ ಆತ್ಮಜಾಗ್ರತಿ ಬಹಳ ಸಾವಕಾಶವಾಗಿ ಆಗುತ್ತದೆ."

ಭವನಾಥ: "ಇಂಥ ಮಾತುಕತೆಗಳು ಇಲ್ಲಿಗೇ ಸಾಕು."

ಶ್ರೀರಾಮಕೃಷ್ಣರು: "ನನ್ನನ್ನು ತಪ್ಪಾಗಿ ತಿಳಿದುಕೋಬೇಡ. (ನರೇಂದ್ರನಿಗೆ) ಜನರು ಎಂಥವರು ಎಂಬುದು ನಿನಗೆ ಗೊತ್ತಾಗಿಬಿಡು

ತ್ತದೆ ಅಂತ ನೀನು ಹೇಳುತ್ತಿದೀಯೆ; ಅದಕ್ಕಾಗಿಯೇ ನಾನು ಇದನ್ನೆಲ್ಲ ನಿನಗೆ ತಿಳಿಸುತ್ತಿರೋದು. ಹಾಜರಾನಂಥ ಜನರನ್ನು ನಾನು ಯಾವ ದೃಷ್ಟಿಯಿಂದ ನೋಡುತ್ತೇನೆ ಎಂಬುದು ನಿನಗೆ ಗೊತ್ತೇ? ನನಗೆ ಗೊತ್ತಾಗಿದೆ, ಭಗವಂತ ಸಾಧುಸತ್ಪುರುಷರ ರೂಪವನ್ನು ಧರಿಸಿರುವಂತೆ, ಆಷಾಢಭೂತಿಗಳ ಮತ್ತು ನೀಚರ ರೂಪವನ್ನೂ ಧರಿಸಿದಾನೆ ಅಂತ. (ಮಹಿಮಚರಣನಿಗೆ) ನೀನು ಏನು ಹೇಳುತ್ತೀಯೆ? ಎಲ್ಲರೂ ಭಗವಂತನೆ.''

ಮಹಿಮಚರಣ: ''ಹೌದು, ಎಲ್ಲರೂ ಭಗವಂತನೆ.''

ಗಿರೀಶ ಶ್ರೀರಾಮಕೃಷ್ಣರಿಗೆ: ''ಮಹಾಶಯರೆ, ಯಾವುದಕ್ಕೆ ಏಕಾಂಗಿ ಪ್ರೇಮ ಅಂತ ಹೇಳುತ್ತಾರೆ?''

ಶ್ರೀರಾಮಕೃಷ್ಣರು: ''ಏಕಾಂಗಿ ಪ್ರೇಮ ಅಂದರೆ, ಒಕ್ಕಡೆಯ ಪ್ರೇಮ. ಉದಾಹರಣೆಗೆ ಬಾತು ನೀರನ್ನು ಅರಸಿಕೊಂಡು ಹೋಗುತ್ತದೆಯೇ ವಿನಾ, ನೀರು ಬಾತನ್ನು ಅರಸಿಕೊಂಡು ಹೋಗೋದಿಲ್ಲ. ಜೊತೆಗೆ ಸಾಧಾರಣ, ಸಮಂಜಸ, ಸಮರ್ಥ ಪ್ರೇಮಗಳೂ ಇವೆ. ಮೊದಲನೆಯದರಲ್ಲಿ, ನಿನಗೆ ಸುಖ ಸಿಗಲಿ ಬಿಡಲಿ, ನನಗೆ ಸಿಕ್ಕಿಬಿಟ್ಟರೆ ಸಾಕು ಎಂಬ ಮನೋವೃತ್ತಿ. ಉದಾಹರಣೆಗೆ ಚಂದ್ರಾವಳಿಯ ಭಾವ. ಎರಡನೆಯದರಲ್ಲಿ, ನಿನಗೂ ಸುಖ ದೊರಕಲಿ ನನಗೂ ಸುಖ ದೊರಕಲಿ ಎಂಬ ಭಾವ. ಇದು ಬಹಳ ಒಳ್ಳೆಯ ಮಾನಸಿಕ ಸ್ಥಿತಿ. ಇವೆಲ್ಲಕ್ಕಿಂತಲೂ ಉತ್ತಮವಾದುದು ಮೂರನೆಯದು. ಉದಾಹರಣೆಗೆ ಶ್ರೀಮತಿ (ರಾಧೆ) ಭಾವ. ಕೃಷ್ಣಸುಖೇ ಸುಖಿ, ಎಂಬ ಭಾವ. ನನಗೇನಾದರೂ ಆಗಲಿ, ನಿನಗೆ ಸುಖ ದೊರೆತರೆ ಸಾಕು ಎಂಬ ಭಾವ. ಗೋಪಿಯರದು ಈ ಅತ್ಯಂತ ಉಚ್ಚ ಭಾವ.

''ಗೋಪಿಯರು ಯಾರು ಎಂಬುದು ನಿನಗೆ ಗೊತ್ತೆ? ಶ್ರೀರಾಮಚಂದ್ರ ಕಾಡು ವನ ಇವಲ್ಲೆಲ್ಲಾ ಅಲೆಯುತ್ತಿದ್ದಾಗ ಅಲ್ಲೆಲ್ಲಾ ಅರವತ್ತು ಸಾವಿರ ಋಷಿಗಳು ವಾಸವಾಗಿದ್ದರು. ಅವರೆಲ್ಲರೂ ಶ್ರೀರಾಮಚಂದ್ರನ ದರ್ಶನ ಪಡೆಯಲು ಬಹಳ ಕಾತರರಾಗಿದ್ದರು. ಅವರೆಲ್ಲರ ಕಡೆಗೂ ಆತ ತನ್ನ ಪ್ರೇಮದೃಷ್ಟಿಯನ್ನು ಬೀರಿದ್ದ. ಅವರೇ ಗೋಪಿಯರು ಎಂಬುದಾಗಿ ಯಾವುದೋ ಒಂದು ಪುರಾಣ ಹೇಳುತ್ತಿದೆ.''

ಒಬ್ಬ ಭಕ್ತ: ''ಮಹಾಶಯರೆ, ಯಾರನ್ನು ಅಂತರಂಗ ಭಕ್ತ ಅಂತ ಕರೆಯಬಹುದು?''

ಶ್ರೀರಾಮಕೃಷ್ಣರು : "ಉದಾಹರಣೆಗೆ ನಾಟ್ಯಮಂದಿರವನ್ನು ತೆಗೆದುಕೊ. ಅದರ ಒಳಗಡೆ ಮತ್ತು ಹೊರಗಡೆ ಕಂಬಗಳಿವೆ. ಅಂತರಂಗ ಎಂಬೋನು ಒಳಗಿನ ಕಂಬ ಇದ್ದಹಾಗೆ. ಯಾರು ಸರ್ವದಾ ಗುರುವಿನೊಡನೆಯೇ ಇರುವರೊ, ಅವರೇ ಅಂತರಂಗ ಭಕ್ತರು.

(ಮಹಿಮಚರಣನಿಗೆ) "ಭಗವಂತನ ಸಾಕಾರ ರೂಪವೇ ಆಗಲಿ ಅಥವಾ ಆತನ ಅವತಾರವೇ ಆಗಲಿ ಜ್ಞಾನಿಗೆ ಬೇಕಾಗಿಲ್ಲ. ಶ್ರೀರಾಮಚಂದ್ರ ಕಾಡಿನಲ್ಲಿ ಗೊತ್ತುಗುರಿಯಿಲ್ಲದೆ ಪರ್ಯಟನಮಾಡುತ್ತ ಇದ್ದಾಗ ಆತ ಅನೇಕ ಋಷಿಗಳನ್ನು ಸಂಧಿಸಿದ. ಅವರೆಲ್ಲರೂ ಆತನನ್ನು ತಮ್ಮ ತಮ್ಮ ಆಶ್ರಮಗಳಿಗೆ ಕರೆದುಕೊಂಡು ಹೋಗಿ ಬಹಳವಾಗಿ ಆದರಸತ್ಕಾರ ಮಾಡಿದರು. ಆಗ ಅವರು ಹೇಳಿದರು, 'ಹೇ ರಾಮ, ಇಂದು ನಾವು ನಿನ್ನ ದರ್ಶನ ಪಡೆದು ಧನ್ಯರಾದೆವು. ನೀನು ದಶರಥನ ಮಗ ಎಂಬುದು ನಮಗೆ ಗೊತ್ತಿದೆ. ಆದರೆ ಭಾರದ್ವಾಜಾದಿ ಋಷಿಗಳು ನಿನ್ನನ್ನು ಅವತಾರಪುರುಷನೆಂದು ಕರೆಯುತ್ತಾರೆ; ನಾವು ಮಾತ್ರ ಹಾಗೆ ಭಾವಿಸುತ್ತಿಲ್ಲ. ನಾವು ಅಖಂಡಸಚ್ಚಿದಾನಂದನ ಧ್ಯಾನ ಮಾಡುತ್ತಿದೇವೆ' ಅಂತ. ರಾಮ ಪ್ರಸನ್ನಚಿತ್ತನಾಗಿ ನಗಲಾರಂಭಿಸಿದ.

"ನನಗೆ ಎಂಥೆಂಥ ಮಾನಸಿಕ ಅವಸ್ಥೆಗಳು ಬಂದಿದ್ದುವು ಏನು ಕತೆ! ಮನಸ್ಸು ಅಖಂಡದಲ್ಲಿ ಲಯವಾಗಿಬಿಡುತ್ತಿತ್ತು. ಆ ರೀತಿಯಾಗೇ ಎಷ್ಟೊಂದೊ ದಿವಸಗಳನ್ನು ಕಳೆದಿದೇನೆ! ಆಗ ಭಕ್ತಿ ಭಕ್ತರನ್ನು ತ್ಯಾಗ ಮಾಡಿಬಿಟ್ಟದ್ದೆ. ಜಡನಂತಾಗಿಬಿಟ್ಟದ್ದೆ. ಶಿರಸ್ಸಿನ ಅರಿವೇ ನನಗಿರುತ್ತಿರಲಿಲ್ಲ. ಪ್ರಾಣ ಹೋಗುವಂತಾಗುತ್ತಿತ್ತು. ಹಾಸಿಗೆಯ ಬಳಿ ರಾಮಲಾಲನ ಚಿಕ್ಕಮ್ಮ ಇರೋದು ಒಳ್ಳೆಯದು ಅಂತ ಅನ್ನಿಸಿಬಿಟ್ಟಿತ್ತು.

"ಕೊಠಡಿಯಲ್ಲಿ ಪಟ-ಗಿಟ ಏನಿತ್ತೊ ಅವೆಲ್ಲವನ್ನೂ ಹೊರಕ್ಕೆ ತೆಗೆದು ಹಾಕಿಬಿಡುವಂತೆ ಹೇಳಿದೆ. ನನಗೆ ಬಾಹ್ಯಪ್ರಜ್ಞೆ ಬಂದಾಗ, ನನ್ನ ಮನಸ್ಸು ಈ ಜಗತ್ತಿನ ಅಂತಸ್ತಿಗೆ ಇಳಿದಾಗ, ನನ್ನ ಪ್ರಾಣ ನೀರಿನಲ್ಲಿ ಮುಳುಗಿ ಸಾಯುತ್ತಿರೋ ಮನುಷ್ಯನೋಪಾದಿಯಲ್ಲಿ ಚಟಪಟಗುಟ್ಟುತ್ತಿತ್ತು. ಕೊನೆಗೆ ನನಗೆ ನಾನೇ ಹೇಳಿಕೊಂಡೆ, 'ಜನ ನನ್ನೊಡನೆ ಬೆರೆಯಲು ನಾನು ಬಿಟ್ಟುಕೊಡದಿದ್ದರೆ, ನಾನು ಬದುಕಿಕೊಂಡಿರೋ ಬಗೆ ಹೇಗೆ?' ಅಂತ. ಆ ಬಳಿಕ ಮನಸ್ಸು ಭಕ್ತಿ ಭಕ್ತರ ಕಡೆ ಹರಿಯಲಾರಂಭಿಸಿತು. ಆಗ ಜನರನ್ನೆಲ್ಲಾ ಕೇಳುತ್ತಾ ಹೋದೆ, 'ನನಗೇನವಸ್ಥೆ ಬಂದುಬಿಟ್ಟದೆ?' ಅಂತ.

ಭೋಲಾನಾಥ[1] ಹೇಳಿದ, 'ಈ ವಿಧವಾದ ಅವಸ್ಥೆ ಮಹಾಭಾರತದಲ್ಲಿ ವರ್ಣಿತವಾಗಿದೆ' ಅಂತ. ಸಮಾಧಿಯಿಂದ ಕೆಳಕ್ಕೆ ಇಳಿದುಬಂದನಂತರ ಮನುಷ್ಯ ಯಾವುದರ ಆಶ್ರಯವೂ ಇಲ್ಲದೆ ಹೇಗೆ ಬದುಕಿರಬಲ್ಲ ? ಅದಕ್ಕಾಗಿ ಆತನಿಗೆ ಭಕ್ತಿ ಭಕ್ತರು ಬೇಕೇಬೇಕು. ಇಲ್ಲದೆ ಇದ್ದರೆ ಆತನ ಮನಸ್ಸು ಬೇರೆ ಯಾವುದರ ಮೇಲೆ ತಾನೆ ನಿಲ್ಲಬಲ್ಲದು ?"

ಮಹಿಮಚರಣ ಶ್ರೀರಾಮಕೃಷ್ಣರಿಗೆ : "ಮಹಾಶಯರೆ, ಸಮಾಧಿಸ್ಥ ಪುರುಷ ಹಿಂದಿರುಗಿ ಬರಬಲ್ಲನೆ ?"

ಶ್ರೀರಾಮಕೃಷ್ಣರು ಮಹಿಮಚರಣನಿಗೆ ಮೆತ್ತಗೆ : "ನೀನು ಒಬ್ಬನೆ ಇರುವಾಗ ಅದನ್ನು ನಿನಗೆ ತಿಳಿಸುತ್ತೇನೆ. ಅದಕ್ಕೆ ತಕ್ಕ ಅಧಿಕಾರಿ ನೀನೊಬ್ಬನೆ.

"ಕುವರಸಿಂಗನೂ ನನಗೆ ಇದೇ ಪ್ರಶ್ನೆಯನ್ನು ಹಾಕಿದ. ನೋಡು, ಜೀವನಿಗು ಮತ್ತು ಭಗವಂತನಿಗು ಅಜಗಜಾಂತರ ವ್ಯತ್ಯಾಸ. ಜೀವ ಅತಿ ಹೆಚ್ಚೆಂದರೆ ಸಾಧನೆ ಭಜನೆ ಮೂಲಕ ಸಮಾಧಿಯನ್ನು ಪಡೆಯಬಲ್ಲ; ಆದರೆ ಆತ ಆ ಸ್ಥಿತಿಯಿಂದ ಕೆಳಕ್ಕೆ ಇಳಿದುಬರಲಾರ. ಅದಕ್ಕೆ ವ್ಯತಿರಿಕ್ತವಾಗಿ ಭಗವಂತ ಅವತರಿಸಿದ ಅಂದರೆ, ಆತ ಸಮಾಧಿಯಿಂದ ಹಿಂದಿರುಗಿ ಬರಬಲ್ಲ. ಜೀವನನ್ನು ಅರಮನೆಯ ಉದ್ಯೋಗಸ್ಥನಿಗೆ ಹೋಲಿಸಬಹುದು. ಆತ ಅರಮನೆಯ ಹೊರ ಅಂಗಳದವರೆಗೆ ಮಾತ್ರ ಹೋಗಬಲ್ಲ. ಆದರೆ ರಾಜಕುಮಾರ ಅರಮನೆಯ ಏಳು ಅಂತಸ್ತುಗಳಲ್ಲಿ ಎಲ್ಲಿಗೆ ಅಂದರೆ ಅಲ್ಲಿಗೆ ಹೋಗಬಲ್ಲ; ಮತ್ತೆ ಇಚ್ಛೆಬಂದಾಗ ಹೊರಕ್ಕೂ ಬರಬಲ್ಲ. ಪ್ರತಿಯೊಬ್ಬರೂ ಹೇಳುತ್ತಾರೆ, ಸಮಾಧಿಯನ್ನು ಪಡೆದನಂತರ ಯಾರೂ ಹಿಂದಿರುಗಿ ಬರೋಕಾಗೋದಿಲ್ಲ ಅಂತ. ಇದು ಸತ್ಯವಾಗಿದ್ದರೆ ಶಂಕರಾಚಾರ್ಯರು, ರಾಮಾನುಜಾಚಾರ್ಯರು ಇವರೆಲ್ಲ ಯಾರು ಮತ್ತೆ? ಇವರು 'ವಿದ್ಯೆಯ ಅಹಂ' ಎಂಬುದನ್ನು ಇಟ್ಟುಕೊಂಡಿದ್ದರು."

ಮಹಿಮಚರಣ: "ನೀವು ಹೇಳೋದೆ ಸರಿ. ಇಲ್ಲದೆ ಇದ್ದರೆ ಅವರು ಪುಸ್ತಕಗಳನ್ನು ಬರೆದ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಮತ್ತೆ ಪ್ರಹ್ಲಾದ, ನಾರದ, ಹನುಮಂತ ಇವರ ಕಡೆ ನೋಡು. ಇವರೂ ಸಮಾಧಿ ದೊರೆತನಂತರ ಭಕ್ತರಾಗಿ ಉಳಿದುಕೊಂಡಿದ್ದರು."

1. ದಕ್ಷಿಣೇಶ್ವರದ ದೇವಾಲಯದಲ್ಲಿನ ಒಬ್ಬ ಗುಮಾಸ್ತ.

ಮಹಿಮಾಚರಣ: "ಮಹಾಶಯರೆ, ಅದೇನೊ ನಿಜ."

ಶ್ರೀರಾಮಕೃಷ್ಣರು: "ಕೆಲಕೆಲವರು ತಾವು ಜ್ಞಾನಚರ್ಚೆಯನ್ನು ಮಾಡುತ್ತಿರುವುದರಿಂದಲೇ ತುಷ್ಟರಾಗಿ, ತಮಗೆಂಥ ಅದ್ಭುತಾವಸ್ಥೆ ಬಂದು ಬಿಟ್ಟಿದೆ ಅಂತ ಭಾವಿಸಿಕೋತಾರೆ. ಬಹುಶಃ ಅವರು ಎಲ್ಲೋ ಒಂದು ಕಿಂಚಿತ್ ವೇದಾಂತಾಧ್ಯಯನವನ್ನು ಮಾಡಿರಬಹುದು. ಆದರೆ ನಿಜ ವಾದ ಜ್ಞಾನ ದೊರೆತರೆ ವ್ಯಕ್ತಿ ಅಹಂಕಾರಿಯಾಗಲಾರ. ಅದಕ್ಕೆ ಬದಲು ವ್ಯಕ್ತಿಗೆ ನಿಜವಾದ ಸಮಾಧಿ ದೊರೆತುದೇ ಆದರೆ, ಆಗ ವ್ಯಕ್ತಿ ಭಗವಂತನೊಡನೆ ಐಕ್ಯತೆಯನ್ನು ಹೊಂದಿ ತನ್ನ ಅಹಂಕಾರವನ್ನು ಕಳೆದು ಕೊಂಡುಬಿಡುತ್ತಾನೆ. ಸಮಾಧಿ ದೊರಕದ ಹೊರತು ಸರಿಯಾದ ಜ್ಞಾನ ದೊರೆಯೋ ಹಾಗಿಲ್ಲ. ಸಮಾಧಿ ದೊರೆತಾಗ ವ್ಯಕ್ತಿ ಭಗವಂತನೊಡನೆ ಐಕ್ಯವಾಗಿಬಿಡುತ್ತಾನೆ. ಬಳಿಕ 'ಅಹಂ' ಎಂಬುದು ಇರದು.

"ಇದು ಹೇಗೆ ಎಂಬುದು ನಿನಗೆ ಗೊತ್ತೇನು? ಮಟ್ಟ ಮಧ್ಯಾಹ್ನಕ್ಕೆ ಸರಿಯಾಗಿ ಸೂರ್ಯ ನೆತ್ತಿಯ ಮೇಲಕ್ಕೆ ಬರುತ್ತಾನೆ. ಆಗ ಯಾವ ಕಡೆಗೆ ದೃಷ್ಟಿಹಾಕಿ ನೋಡಿದರೂ ಮನುಷ್ಯನಿಗೆ ಆತನ ನೆರಳೇ ಕಾಣಿಸದು. ಅದೇ ರೀತಿಯಾಗಿ ಬ್ರಹ್ಮಜ್ಞಾನ ದೊರೆಯಿತು ಎಂದರೆ, ಸಮಾಧಿ ದೊರೆ ಯಿತು ಎಂದರೆ ಅಹಂರೂಪದ ನೆರಳು ಕಾಣಿಸಿಕೊಳ್ಳದು.

"ನಿಜವಾದ ಜ್ಞಾನ ದೊರೆತಮೇಲೂ 'ಅಹಂ' ಎಂಬುದು ಉಳಿದು ಕೊಂಡಿರುವುದಾದರೆ, ಅದು ಕೇವಲ 'ವಿದ್ಯೆಯ ಅಹಂ,' 'ಭಕ್ತಿಯ ಅಹಂ,' 'ದಾಸನ ಅಹಂ' ಮಾತ್ರವೆ. ಅದು 'ಅವಿದ್ಯೆಯ ಅಹಂ' ಅಲ್ಲ.

"ಜ್ಞಾನ ಭಕ್ತಿ ಎರಡೂ ಮಾರ್ಗಗಳೇ. ಯಾವ ಮಾರ್ಗದಿಂದ ಹೋದರೂ ಭಗವಂತನನ್ನು ಪಡೆಯಬಹುದು. ಭಗವಂತನನ್ನು ಜ್ಞಾನಿ ಒಂದು ದೃಷ್ಟಿಯಿಂದ ನೋಡುತ್ತಾನೆ. ಜ್ಞಾನಿಯ ಭಗವಂತ ತೇಜೋ ಮಯ, ಭಕ್ತನ ಭಗವಂತ ರಸಮಯ."

ಪರಮಹಂಸರ ಹತ್ತಿರ ಕುಳಿತು ಭವನಾಥ ಈ ಮಾತುಗಳನ್ನೆಲ್ಲ ಕೇಳುತ್ತಿದ್ದ.

ಭವನಾಥ ಶ್ರೀರಾಮಕೃಷ್ಣರಿಗೆ: "ಮಹಾಶಯರೆ, ನನ್ನದೊಂದು ಪ್ರಶ್ನೆ. ನನಗೆ 'ಚಂಡಿ' ಸರಿಯಾಗಿ ಅರ್ಥವಾಗುತ್ತಿಲ್ಲ. ಅದರಲ್ಲಿ ಬರೆ

ದಿದೆ, ಚಂಡಿ ಎಲ್ಲಾ ಜೀವಿಗಳನ್ನು 'ಛಟ್, ಛಟ್' ಅಂತ ಕೊಂದು ಹಾಕುತ್ತಾಳೆ ಎಂಬುದಾಗಿ. ಇದರ ಸರಿಯಾದ ಅರ್ಥವೇನು?''

ಶ್ರೀರಾಮಕೃಷ್ಣರು: ''ಇದೆಲ್ಲಾ ಆಕೆಯ ಲೀಲೆ. ಇದೇ ಸಂದೇಹ ನನ್ನನ್ನೂ ಸ್ವಲ್ಪ ಕಾಲ ಬಾಧಿಸಿತು. ಬಳಿಕ ನನಗೆ ಗೊತ್ತಾಯಿತು, ಇದೆಲ್ಲ ಬರೀ ಮಾಯೆ ಅಂತ. ಆಕೆಯ ಸೃಷ್ಟಿಯೂ ಮಾಯೆ, ಆಕೆಯ ಸಂಹಾರವೂ ಮಾಯೆ.''

ಮನೆಯ ಪಶ್ಚಿಮ ದಿಕ್ಕಿನ ಚಾವಣಿ ಮೇಲೆ ಎಲೆ ಹಾಕಾಗಿದೆ. ಈಗ ಗಿರೀಶ ಪರಮಹಂಸರನ್ನೂ ಮತ್ತು ಭಕ್ತರನ್ನೂ ಅಲ್ಲಿಗೆ ಕರೆದು ಕೊಂಡು ಹೋಗುತ್ತಿದಾನೆ. ಇಂದು ವೈಶಾಖ ಶುಕ್ಲ ದಶಮಿಯ ಚಂದ್ರ ಉದಯಿಸಿದಾನೆ. ಇಡೀ ಜಗತ್ತಾದ ಜಗತ್ತೇ ಆತನ ಬೆಳಕಿನಿಂದ ನಗು ತ್ತಿದೆ. ಭಕ್ತರೆಲ್ಲರು ಬಹಳ ಆನಂದದಿಂದ ಕೂಡಿದವರಾಗಿ ಪರಮಹಂಸ ರನ್ನು ತಮ್ಮ ಮುಂದೆ ಕೂರಿಸಿ ತಾವೂ ಕುಳಿತುಕೊಂಡು ಪ್ರಸಾದ ಸ್ವೀಕರಿಸುತ್ತಾ ಇದಾರೆ.

ನರೇಂದ್ರನನ್ನು ಕಂಡರೆ ಪರಮಹಂಸರಿಗೆ ಬಹಳ ಆನಂದ. ಆತ ಎದುರು ಪಂಕ್ತಿಯಲ್ಲಿ ಭಕ್ತರೊಡನೆ ಕುಳಿತು ಪ್ರಸಾದ ಸ್ವೀಕರಿಸುತ್ತಿದಾನೆ. ನರೇಂದ್ರನ ಊಟ ಯಾವ ರೀತಿಯಾಗಿ ಮುಂದುವರಿಯುತ್ತಿದೆ ಅಂತ ಆಗಾಗ ಕೇಳುತ್ತಲೇ ಇದಾರೆ. ಅರ್ಧ ಊಟ ಮುಗಿಯಿತೊ ಇಲ್ಲವೊ ಎನ್ನುವಷ್ಟರಲ್ಲಿಯೇ ಪರಮಹಂಸರು ಇದ್ದಕ್ಕಿದ್ದಹಾಗೆ ಎದ್ದು, ತಮ್ಮ ಎಲೆಯ ಹತ್ತಿರವಿದ್ದ ಕಲ್ಲಂಗಡಿ ಹಣ್ಣಿನ ಶರಬತ್ತು ಮತ್ತು ಮೊಸರಿನ ದೊನ್ನೆ ಇವನ್ನು ತಂದು ನರೇಂದ್ರನ ಹತ್ತಿರ ಇಟ್ಟು ಹೇಳಿದರು, ''ಇದೊಂದಿಷ್ಟನ್ನೂ ತೆಗೆದುಕೊ'' ಅಂತ. ಬಳಿಕ ಚಿಕ್ಕ ಮಗುವಿನೋ ಪಾದಿಯಲ್ಲಿ ಮತ್ತೆ ಹೋಗಿ ತಮ್ಮ ಎಲೆಯ ಮುಂದೆ ಕುಳಿತುಕೊಂಡರು.

೯ ನೆ ಮೇ ೧೮೮೫, ವೈಶಾಖ ಕೃಷ್ಣ ದಶಮಿ, ಶನಿವಾರ.

ಅಪರಾಹ್ನ ಮೂರರ ಸಮಯ. ಪರಮಹಂಸರು ನಗುಮುಖರಾಗಿ ಬಲರಾಮನ ಮನೆಯ ಎರಡನೆ ಅಂತಸ್ತಿನಲ್ಲಿರೋ ಬೈಠಕ್‌ಖಾನೆಯಲ್ಲಿ ಕುಳಿತು ಮಾತುಕತೆಯಾಡುತ್ತಿದಾರೆ. ನರೇಂದ್ರ, ಮಾಸ್ಟರ್, ಭವನಾಥ, ಪೂರ್ಣ, ಪಲ್ಟು, ಚಿಕ್ಕ ನರೇನ, ಗಿರೀಶ, ರಾಮಬಾಬು, ದ್ವಿಜ, ವಿನೋದ ಮತ್ತೆ ಇನ್ನೂ ಅನೇಕ ಭಕ್ತರು ಪರಮಹಂಸರ ಸುತ್ತಲೂ ಕುಳಿತಿದಾರೆ.

ಬಲರಾಮ ಮನೆಯಲ್ಲಿ ಇಲ್ಲ. ಶರೀರಾರೋಗ್ಯ ಸರಿಯಾಗಿಲ್ಲದೆ ಇದ್ದುದರಿಂದ ಹವ ಬದಲಾವಣೆಗಾಗಿ ಮೂಂಗೇರಿ ಎಂಬ ಸ್ಥಳಕ್ಕೆ ಹೋಗಿದಾನೆ. ಆತನ ಹಿರಿಯ ಮಗಳು ಪರಮಹಂಸರನ್ನು ಮತ್ತು ಭಕ್ತರನ್ನು ಆಹ್ವಾನಿಸಿ ಅವರೆಲ್ಲರಿಗು ಒಂದು ಔತಣವನ್ನು ಏರ್ಪಡಿಸಿದ್ದಳು. ಪರಮಹಂಸರು ಊಟೋಪಚಾರಗಳಾದನಂತರ ವಿಶ್ರಮಿಸಿಕೊಳ್ಳುತ್ತಿದಾರೆ.

ಪರಮಹಂಸರು ಪುನಃಪುನಃ ಮಾಸ್ಟರಿಗೆ ಈ ಪ್ರಶ್ನೆ ಹಾಕುತ್ತಿದಾರೆ: "ಏನು, ನಾನೊಬ್ಬ ಉದಾರಿಯೆ? ನಿನ್ನ ಅಭಿಪ್ರಾಯವೇನು?" ಅಂತ.

ಭವನಾಥ ನಗುತ್ತ: "ಅವನಿಗೇಕೆ ಈ ಪ್ರಶ್ನೆ ಹಾಕುತ್ತೀರಿ? ಆತ ಸುಮ್ಮನೆ ಬಾಯಿಮುಚ್ಚಿ ಕುಳಿತಿರುತ್ತಾನೆ."

ಒಬ್ಬ ಹಿಂದೂಸ್ಥಾನಿ ಭಿಕ್ಷುಕ ಕೊಠಡಿಯನ್ನು ಪ್ರವೇಶಿಸಿದ. ಆತನಿಗೆ ಹಾಡಲು ಇಚ್ಛೆ. ಭಕ್ತರು ಆತನ ಒಂದೆರಡು ಹಾಡುಗಳನ್ನು ಆಲಿಸಿದರು. ನರೇಂದ್ರನಿಗೆ ಆತನ ಹಾಡುಗಳು ಬಹಳವಾಗಿ ಹಿಡಿಸಿದುವು. ಅದಕ್ಕಾಗಿ ಆತ ಆ ಭಿಕ್ಷುಕನಿಗೆ ಹೇಳಿದ, ಇನ್ನೂ ಒಂದೆರಡು ಹಾಡುಗಳನ್ನು ಹಾಡು ಅಂತ.

ಶ್ರೀರಾಮಕೃಷ್ಣರು: "ಬೇಡ! ಬೇಡ! ಇನ್ನು ಹಾಡುವುದು ಬೇಡ. ದುಡ್ಡೆಲ್ಲಿದೆ? (ನರೇಂದ್ರನಿಗೆ) ನೀನೇನೊ ಹಾಡಿಸಿಬಿಡಬಹುದು, ಆದರೆ ದುಡ್ಡು ಕೊಡೋರ್ಯಾರು?"

ಒಬ್ಬ ಭಕ್ತ ನಗುತ್ತ: "ನೀವು ಆ ದೊಡ್ಡ ಒರಗುದಿಂಬನ್ನು ಒರಗಿಕೊಂಡಿರೋ ಠೀವಿಯನ್ನು ನೋಡಿ, ಆ ಭಿಕ್ಷುಕ ನಿಮ್ಮನ್ನು ಒಬ್ಬ ಅಮೀರನೆಂದೇ ಭಾವಿಸಬಹುದು." (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ನಗುತ್ತ: "ಕಾಯಿಲೆಯಾಗಿರಬೇಕೆಂತಲೂ ಭಾವಿಸಬಹುದು."

ಹಾಜರಾನ ಅಹಂಕಾರದ ಸಂಬಂಧವಾಗಿ ಮಾತು ಆರಂಭವಾಯಿತು. ಆತ ಯಾವುದೊ ಕಾರಣದಿಂದ ದಕ್ಷಿಣೇಶ್ವರವನ್ನು ಬಿಟ್ಟುಹೋಗಬೇಕಾಗಿ ಬಂದು, ಆಗಲೆ ಹೊರಟುಹೋಗಿದಾನೆ.

ನರೇಂದ್ರ: "ಹಾಜರಾ ಈಗ ಒಪ್ಪಿಕೊಳ್ಳುತ್ತಿದಾನೆ, ತಾನು ಹಿಂದೆ ಅಹಂಕಾರಿಯಾಗಿದ್ದೆ" ಅಂತ.

ಶ್ರೀರಾಮಕೃಷ್ಣರು: "ಆತನನ್ನು ನಂಬಬೇಡ. ಮತ್ತೆ ದಕ್ಷಿ

ಣೇಶ್ವರಕ್ಕೆ ಹಿಂದಿರುಗಿಬರಲು ಆತ ಹಾಗೆ ಹೇಳುತ್ತಿದಾನೆ. (ಭಕ್ತರಿಗೆ) ನರೇಂದ್ರ ಯಾವಾಗ ನೋಡಿದರೂ ಹೇಳುತ್ತಿದಾನೆ ಆತ ಬಹಳ ಒಳ್ಳೆಯವ ಅಂತ.''

ನರೇಂದ್ರ : ''ಈಗಲೂ ನಾನು ಹಾಗೆಯೇ ಹೇಳುತ್ತೇನೆ.''

ಶ್ರೀರಾಮಕೃಷ್ಣರು : ''ಏಕೆ ? ಇಷ್ಟೊಂದು ಆತನ ಸಂಬಂಧವಾಗಿ ಕೇಳಿಯೂ ? ''

ನರೇಂದ್ರ : ''ಆತನಲ್ಲಿ ದೋಷಗಳು ಎಲ್ಲೊ ಅಲ್ಪ, ಆದರೆ ಸುಗುಣಗಳು ಅನೇಕ.''

ಶ್ರೀರಾಮಕೃಷ್ಣರು : ''ಆತ ನಿಷ್ಠಾವಂತನೆಂಬುದನ್ನೇನೊ ನಾನು ಒಪ್ಪಿಕೊಳ್ಳುತ್ತೇನೆ. ಒಮ್ಮೆ ಆತ ನನಗೆ ಹೇಳಿದ, 'ಈಗೇನೊ ನಿಮಗೆ ನನ್ನ ಕಂಡರೆ ಆಗುತ್ತಿಲ್ಲ, ಆದರೆ ಮುಂದೆ ನೀವು ನನ್ನ ಸಹಾಯವನ್ನು ಕೋರಬೇಕಾಗಿಬರುತ್ತದೆ' ಅಂತ. ಅದ್ವೈತಗೋಸ್ವಾಮಿಯ ವಂಶಜರಲ್ಲೊಬ್ಬ ಶ್ರೀರಾಮಪುರದಿಂದ ದಕ್ಷಿಣೇಶ್ವರಕ್ಕೆ ಬಂದಿದ್ದ. ಆತನಿಗೆ ಇಚ್ಛೆ ಇತ್ತು ಅಲ್ಲಿ ಒಂದೆರಡು ದಿನಗಳನ್ನು ಕಳೆಯಬೇಕೆಂದು. ನಾನು ಸಂತೋಷದಿಂದ ಇರಲು ಹೇಳಿದೆ. ಆಗ ಹಾಜರಾ ನನಗೆ ಕೊಟ್ಟ ಸಲಹೆಯೇನು ಗೊತ್ತೆ ? ಆತ ಹೇಳಿದ, 'ಆತನನ್ನು ಖಜಾಂಚಿಯ ಹತ್ತಿರಕ್ಕೆ ಕಳುಹಿಸಿಬಿಡಿ' ಅಂತ. ಆತನ ಮನಸ್ಸಿನಲ್ಲಿದ್ದುದೇನೆಂದರೆ, ಗೋಸ್ವಾಮಿ ಹಾಲುಗೀಲು ಬೇಕು ಅಂತ ಕೇಳಿದರೆ, ಆಗ ತನಗೆ ಬರೋ ಪಾಲು ಕಡಮೆಯಾಗಿಬಿಡುತ್ತದೆಯಲ್ಲ ಅಂತ ಸಂಕಟ. ಆಗ ನಾನು ಹೇಳಿದೆ, 'ಎಲೋ ನೀಚ ! ಆತ ಅದ್ವೈತಗೋಸ್ವಾಮಿಯ ವಂಶಿಕನಾಗಿರೋದರಿಂದ ಆತನಿಗೆ ಸಾಷ್ಟಾಂಗಪ್ರಣಾಮ ಮಾಡಲು ನಾನೂ ಸಿದ್ಧನಾಗಿದೇನೆ. ನೀನು ಸಂಸಾರಿಯಾಗಿದ್ದು ಕಾಮಕಾಂಚನ ರಾಜ್ಯದಲ್ಲಿ ಬಹಳವಾಗಿ ವಿಹರಿಸಿದ ಬಳಿಕವೂ, ಈಗ ಎಲ್ಲೋ ಒಂದು ಕಿಂಚಿತ್ ಜಪ ಮಾಡುತ್ತಿರುವುದರ ದೆಸೆಯಿಂದ ಇಷ್ಟು ದುರಹಂಕಾರಿಯಾಗುವುದೆ ! ಏನು ನಿನಗೆ ನಾಚಿಕೆಯಾಗುತ್ತಿಲ್ಲವೆ ? ' ಅಂತ.

''ಸತ್ತ್ವಗುಣ ಭಗವಂತನ ಸಾಕ್ಷಾತ್ಕಾರವನ್ನು ದೊರಕಿಸಿಕೊಡುತ್ತದೆ. ಆದರೆ ರಜಸ್ಸು ಮತ್ತು ತಮಸ್ಸು ಮನುಷ್ಯನನ್ನು ಭಗವದ್ವಿಮುಖನನ್ನಾಗಿ ಮಾಡಿಬಿಡುತ್ತವೆ. ಶಾಸ್ತ್ರಗಳು ಸತ್ತ್ವಗುಣವನ್ನು ಬಿಳಿಯ ಬಣ್ಣಕ್ಕು, ರಜೋಗುಣವನ್ನು ಕೆಂಪು ಬಣ್ಣಕ್ಕು, ತಮೋಗುಣವನ್ನು ಕಪ್ಪು

ಬಣ್ಣಕ್ಕೆ ಹೋಲಿಸಿವೆ. ಒಂದು ದಿನ ನಾನು ಹಾಜರಾನನ್ನು ಕೇಳಿದೆ 'ಇಲ್ಲಿಗೆ ಬರುತ್ತಿರೋ ಜನಗಳಿಗೆ ಯಾರ್ಯಾರಿಗೆ ಎಷ್ಟೆಷ್ಟುಮಟ್ಟಿನ ಸತ್ತ್ವ, ಗುಣ ಉಂಟಾಗಿದೆ ಹೇಳು ನೋಡೋಣ?' ಅಂತ. ಆತ ಹೇಳಿದ, 'ನರೇಂದ್ರನಿಗೆ ಶೇಕಡ ನೂರರಷ್ಟು, ನನಗೆ ನೂರಹತ್ತರಷ್ಟು' ಅಂತ. ಮತ್ತೆ ಕೇಳಿದೆ, 'ನನಗೆ?' ಅಂತ. ಆಗ ಆತ ಹೇಳಿದ, 'ನಿಮ್ಮಲ್ಲಿ ಇನ್ನೂ ಸ್ವಲ್ಪ ಕೆಂಪು ಇದೆ. ನಿಮಗೆ ಶೇಕಡ ಎಪ್ಪತ್ತೈದರಷ್ಟು' ಅಂತ. (ಎಲ್ಲರೂ ನಗುತ್ತಾರೆ.)

"ಹಾಜರಾ ದಕ್ಷಿಣೇಶ್ವರದಲ್ಲಿ ಕುಳಿತು ಜಪ ಮಾಡುತ್ತಿದ್ದ. ಮಾಲೆ ತಿರುಗಿಸುತ್ತಲೆ ದಳ್ಳಾಳಿ ಕೆಲಸವನ್ನೂ ಮಾಡುತ್ತಿದ್ದ. ಆತನಿಗೆ ಕೆಲವು ಸಾವಿರ ರೂಪಾಯಿಗಳ ಸಾಲವಿದೆ. ಅದನ್ನು ಆತ ಹೇಗೊ ಮಾಡಿ ತೀರಿಸಬೇಕಾಗಿದೆ. ಕಾಳೀದೇವಾಲಯದ ಬ್ರಾಹ್ಮಣ - ಅಡಿಗೆಯವರ ಸಂಬಂಧವಾಗಿ ಆತ ಹೇಳುತ್ತಿದ್ದ, ಈ ವಿಧದ ಜನರೊಡನೆ ನಾವು ಮಾತು ಕತೆಯಾಡೋದೆ? ಅಂತ.

"ಸತ್ಯವೇನೆಂದರೆ, ಕಾಮನೆ ಒಂದು ಕಿಂಚಿತ್ತು ಇದ್ದರೂ ಭಗವಂತ ನನ್ನು ಪಡೆಯೋಕಾಗೋದಿಲ್ಲ. ಧಾರ್ಮಿಕ ಗತಿ ಬಹಳ ಸೂಕ್ಷ್ಮವಾದ್ದು. ದಾರವನ್ನು ಸೂಜಿಗೆ ಪೋಣಿಸೋವಾಗ, ದಾರದ ಮೊನೆಗೆ ಕೇವಲ ಒಂದೆರಡು ಎಳೆ ಅಂಟಿಕೊಂಡಿದ್ದರೂ ಅದನ್ನು ಸೂಜಿಗೆ ಪೋಣಿಸ ಲಾಗೋದಿಲ್ಲ.

"ಒಮ್ಮೊಮ್ಮೆ ಮೂವತ್ತು ವರ್ಷಗಳ ಕಾಲ ಜಪತಪ ಮಾಡಿಯೂ ಯಾವ ಉನ್ನತಿಯನ್ನೂ ಹೊಂದದವರಿದಾರೆ. ಇದಕ್ಕೆ ಕಾರಣ? ಏಡಿ ಹುಣ್ಣಿಗೆ ಉಗ್ರಚಿಕಿತ್ಸೆ ಮಾಡಬೇಕಾಗುತ್ತದೆ. ಸಾಮಾನ್ಯ ಔಷಧಕ್ಕೆ ಅದು ಬಗ್ಗದು.

"ಹೃದಯದಲ್ಲಿ ಕಾಮನೆ ಇತ್ತು ಎಂದರೆ, ಎಷ್ಟೇ ಸಾಧನೆ ಮಾಡಿ ದರೂ ಭಗವಂತನ ಸಾಕ್ಷಾತ್ಕಾರ ಖಂಡಿತ ದೊರೆಯದು. ಆದರೆ ಒಂದು ವಿಷಯ. ಆತನ ಕೃಪೆಯೊಂದು ದೊರೆತುಬಿಟ್ಟದ್ದೇ ಆದರೆ, ಆತ ಮಾತ್ರ ಕರುಣಿಸುವುದೇ ಆದರೆ ಈಕ್ಷಣವೇ ಆತನ ಸಾಕ್ಷಾತ್ಕಾರ ದೊರೆತುಬಿಡು ತ್ತದೆ. ಉದಾಹರಣೆಗೆ, ಸಹಸ್ರಾರು ವರ್ಷಗಳಿಂದ ಕತ್ತಲೆಯಾಗಿದ್ದ ಕೊಠಡಿಗೆ, ಹಠಾತ್ತಾಗಿ ಯಾರಾದರು ದೀಪ ತಂದರು ಎಂದರೆ, ಅದು ಒಡನೆಯೆ ಬೆಳಕಾಗಿಬಿಡುತ್ತದೆ.

"ಒಂದು ಪಕ್ಷ ಒಬ್ಬ ಬಡ ಹುಡುಗನ ಮೇಲೆ ಶ್ರೀಮಂತನೊಬ್ಬನ ಕಣ್ಣು ಬಿದ್ದು, ಆತ ಆ ಹುಡುಗನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದ ಅಂತ ಇಟ್ಟುಕೊಳ್ಳಿ. ಒಡನೆಯೆ ಆ ಹುಡುಗನಿಗೆ ಎತ್ತು ಗಾಡಿ, ದಾಸ ದಾಸಿ, ಬಟ್ಟೆ ಬರೆ, ಮನೆ ಮಠ ಎಲ್ಲ ದೊರೆತುಬಿಡುತ್ತವೆ."

ಒಬ್ಬ ಭಕ್ತ: "ಮಹಾಶಯರೆ, ಭಗವಂತನ ಕೃಪೆಯನ್ನು ದೊರಕಿಸಿಕೊಳ್ಳೋ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಭಗವಂತನದು ಬಾಲಕನ ಸ್ವಭಾವ. ಉದಾಹರಣೆಗೆ ಒಬ್ಬ ಬಾಲಕ ತನ್ನ ಷರಟಿನ ಮಡಲಿನಲ್ಲಿ ರತ್ನಗಳನ್ನು ಹಾಕಿಕೊಂಡು ಕುಳಿತಿದಾನೆ ಅಂತ ಇಟ್ಟುಕೊಳ್ಳಿ. ಆತನ ಪಕ್ಕದಲ್ಲಿ ಹೋದವರಲ್ಲನೇಕರು ಅವುಗಳಿಗಾಗಿ ಆತನನ್ನು ಬೇಡಬಹುದು. ಆದರೆ ಆ ಬಾಲಕ ಅವನ್ನು ಬಟ್ಟೆಯಿಂದ ಮುಚ್ಚಿ, ಮುಖವನ್ನು ಬೇರೆ ಕಡೆಗೆ ತಿರುಗಿಸಿ ಹೇಳುತ್ತಾನೆ, 'ಇಲ್ಲ, ನಾನು ಒಂದನ್ನೂ ಕೊಡೋದಿಲ್ಲ' ಅಂತ. ಆದರೆ ಇನ್ನೊಬ್ಬ ಅದೇ ಮಾರ್ಗವಾಗಿ ಬಂದು ರತ್ನಗಳನ್ನು ಯಾಚಿಸದೆ ಸುಮ್ಮನೆ ನೇರವಾಗಿ ಹೊರಟುಹೋಗುತ್ತಿರಬಹುದು. ಬಾಲಕ ಆತನ ಹಿಂದೆ ಓಡಿಹೋಗಿ ಬಲಾತ್ಕರಿಸಿ ಆತನಿಗೆ ಅವನ್ನು ಕೊಟ್ಟುಬಿಡುತ್ತಾನೆ.

"ತ್ಯಾಗ ಮಾಡದ ಹೊರತು ಭಗವಂತನನ್ನು ಪಡೆಯೋಕಾಗೋದಿಲ್ಲ. ನನ್ನ ಮಾತಿಗೆ ಕಿವಿಗೊಡೋರು ಯಾರು? ನನ್ನ ಭಾವಕ್ಕನುಗುಣನಾದ ಒಬ್ಬ ಜೊತೆಗಾರನಿಗಾಗಿ ನಾನು ಹುಡುಕುತ್ತಿದೇನೆ. ಒಳ್ಳೆ ಭಕ್ತನನ್ನು ನೋಡಿ ಭಾವಿಸುತ್ತೇನೆ ಬಹುಶಃ ಈತ ನನ್ನ ಭಾವಕ್ಕನುಗುಣನಾದವನಾಗಬಹುದು ಎಂದು.

"ಒಂದು ಭೂತ ಒಬ್ಬ ಜೊತೆಗಾರನಿಗಾಗಿ ಹುಡುಕುತ್ತಿತ್ತು. ಶನಿವಾರ, ಮಂಗಳವಾರ ಅಪಘಾತ ಮೃತ್ಯುವನ್ನು ಹೊಂದಿದವರು ಭೂತವಾಗುತ್ತಾರೆ. ಈ ಎರಡು ವಾರ ಯಾರಾದರು ಅಪಘಾತಕ್ಕೆ ಈಡಾದರು ಎಂದರೆ, ಒಡನೆಯೆ ಆ ಭೂತ ತನಗೊಬ್ಬ ಸಂಗಾತಿ ದೊರೆಯಬಹುದೆಂದು ಅವರ ಹತ್ತಿರ ಓಡಿಹೋಗುತ್ತಿತ್ತು. ಆದರೆ ಅದು ಅವರ ಹತ್ತಿರ ಹೋಗುವುದೇ ತಡ ಅವರು ಬದುಕಿ ಏಳುತ್ತಿದ್ದರು. ಅವರು ಒಂದು ಪಕ್ಷ ಮೇಲ್ಛಾವಣಿಯ ಮೇಲಿಂದ ಬಿದ್ದು ಮೂರ್ಛಿತರಾಗಿದ್ದರೂ, ಮತ್ತೆ ಬದುಕಿ ಎದ್ದುಬಿಡುತ್ತಿದ್ದರು.

"ಮಥುರಬಾಬುವಿಗೆ ಒಮ್ಮೆ ಭಾವಾವಸ್ಥೆ ಬಂದಿತ್ತು. ಆಗ

ಯಾವಾಗ ನೋಡಿದರೂ ಉನ್ಮತ್ತನಂತೆ ವರ್ತಿಸುತ್ತಿದ್ದ ; ಯಾವ ಕೆಲಸ ಕಾರ್ಯಗಳ ಕಡೆಗೂ ಮನಸ್ಸು ಕೊಡಲಾಗುತ್ತಿರಲಿಲ್ಲ. ಇದನ್ನು ನೋಡಿ ಜನ ಹೇಳಲಾರಂಭಿಸಿದರು, 'ಈತನ ಗತಿ ಹೀಗಾಗಿಬಿಟ್ಟಿತು ಎಂದರೆ, ಈತನ ಭೂಮಿಕಾಣಿಗಳನ್ನು ನೋಡಿಕೊಳ್ಳೋರ್‍ಯಾರು ? ಆ ಚಿಕ್ಕ ಪೂಜಾರಿ (ಶ್ರೀರಾಮಕೃಷ್ಣರು) ನಿಶ್ಚಯವಾಗಿಯೂ ಏನೊ ಮಂತ್ರ-ಗಿಂತ್ರ ಹಾಕಿರಬೇಕು' ಅಂತ.

"ನರೇಂದ್ರ ಮೊದಲು ಮೊದಲು ಇಲ್ಲಿಗೆ ಬರುತ್ತಿದ್ದಾಗ ಒಂದು ದಿನ ನಾನು ಆತನ ಎದೆಯನ್ನು ಮುಟ್ಟಿದೊಡನೆಯೆ ಬಾಹ್ಯಜ್ಞಾನಶೂನ್ಯನಾಗಿ ಬಿಟ್ಟ. ಪ್ರಜ್ಞೆ ಬಂದನಂತರ ಅಳುತ್ತ ಹೇಳಲಾರಂಭಿಸಿದ, 'ಅಯ್ಯೋ! ನನಗೇಕೆ ನೀವು ಹಾಗೆಮಾಡಿಬಿಟ್ಟಿರಿ ? ನನಗೆ ತಂದೆ ಇದಾನೆ ! ತಾಯಿ ಇದಾಳೆ !' ಅಂತ. 'ಅಹಂಕಾರ', 'ಮಮಕಾರ' ಅಜ್ಞಾನಜನ್ಯ.

"ಒಬ್ಬ ಗುರು ತನ್ನ ಶಿಷ್ಯನಿಗೆ ಹೇಳಿದ, 'ಸಂಸಾರ ಎಂಬುದು ಮಿಥ್ಯಾ. ನೀನು ನನ್ನೊಡನೆ ಬಂದುಬಿಡು' ಅಂತ. ಶಿಷ್ಯ ಹೇಳಿದ, 'ಪೂಜ್ಯರೆ, ನನ್ನ ತಂದೆ, ತಾಯಿ, ಹೆಂಡತಿ ಇವರೆಲ್ಲ ನನ್ನನ್ನು ಬಹಳವಾಗಿ ಪ್ರೀತಿಸುತ್ತಿದಾರೆ, ಇವರನ್ನು ತ್ಯಜಿಸಿಬಿಟ್ಟು ನಾನು ಹೇಗೆ ಬರಲಿ? ಅಂತ. ಗುರು ಹೇಳಿದ, 'ಈಗ ನೀನು "ನಾನು", "ನನ್ನದು" ಅಂತಲೇನೊ ಹೇಳುತ್ತಿದೀಯೆ ಮತ್ತು ಭಾವಿಸುತ್ತಿದೀಯೆ, ಅವರು ನಿನ್ನನ್ನು ಬಹಳವಾಗಿ ಪ್ರೀತಿಸುತ್ತಿದಾರೆ ಅಂತ ; ಆದರೆ ಇದೆಲ್ಲ ಕೇವಲ ನಿನ್ನ ಮಾನಸಿಕ ಭ್ರಾಂತಿ ಮಾತ್ರ. ನಾನು ನಿನಗೊಂದು ಯುಕ್ತಿ ಹೇಳಿಕೊಡುತ್ತೇನೆ. ಅದರಿಂದ ನಿನಗೆ ಗೊತ್ತಾಗುತ್ತದೆ ಅವರು ನಿನ್ನನ್ನು ನಿಜವಾಗಿ ಪ್ರೀತಿಸುತ್ತಾರೊ ಇಲ್ಲವೊ ಎಂಬುದು' ಅಂತ. ಹೀಗೆಂದು ತಿಳಿಸಿ ಒಂದು ಔಷಧದ ಗುಳಿಗೆಯನ್ನು ಆತನ ಕೈಲಿಟ್ಟು ಹೇಳಿದ, 'ನೀನು ಮನೆಗೆ ಹೋಗಿ ಇದನ್ನು ನುಂಗಿ ಮಲಗಿಕೊ. ನೋಡೋಕೆ ಸತ್ತವನ ಹಾಗೆ ಕಂಡುಬರುತ್ತೀಯೆ, ಆದರೆ ನಿನಗೆ ಪ್ರಜ್ಞೆ ಮಾತ್ರ ತಪ್ಪಿಹೋಗೋದಿಲ್ಲ. ನೀನು ಎಲ್ಲವನ್ನೂ ಕೇಳಬಲ್ಲೆ, ಎಲ್ಲವನ್ನೂ ನೋಡಬಲ್ಲೆ. ಆ ಬಳಿಕ ನಿನ್ನ ಮನೆಗೆ ನಾನು ಬರುತ್ತೇನೆ. ಕ್ರಮಕ್ರಮೇಣ ನೀನು ನಿನ್ನ ಪೂರ್ವಾವಸ್ಥೆಗೆ ಬಂದುಬಿಡುತ್ತೀಯೆ' ಅಂತ.

"ಗುರು ಹೇಳಿದ ಹಾಗೆಯೆ ಶಿಷ್ಯ ನಡೆದುಕೊಂಡ. ಆತನ ಮನೆಯಾದ ಮನೆಯಲ್ಲೆಲ್ಲಾ ಗೊಳೋ ಎಂಬ ಶಬ್ದವೇ. ಆತನ ತಾಯಿ,

ಹೆಂಡತಿ ಎಲ್ಲರೂ ನೆಲದ ಮೇಲೆ ಬಿದ್ದು ಹೊರಳಾಡುತ್ತಾ ಅಳುತ್ತಿದಾರೆ. ಆ ಸಮಯಕ್ಕೆ ಸರಿಯಾಗಿ ಒಬ್ಬ ಬ್ರಾಹ್ಮಣ ಆ ಮನೆಗೆ ಬಂದು ಕೇಳಿದ, 'ಏನು ಸಮಾಚಾರ?' ಅಂತ. ಅಲ್ಲಿದ್ದವರೆಲ್ಲಾ ಹೇಳಿದರು, 'ಈ ಯುವಕ ಸತ್ತುಹೋಗಿಬಿಟ್ಟಿದಾನೆ' ಅಂತ. ಆ ಬ್ರಾಹ್ಮಣ ಆ ಯುವಕನ ನಾಡಿ ನೋಡಿ ಹೇಳಿದ, 'ಏನು ನೀವು ಹೇಳುತ್ತಿರೋದು? ಈತ ಸತ್ತಿಲ್ಲ. ನಾನು ಒಂದು ಔಷಧ ಕೊಡುತ್ತೇನೆ. ಅದನ್ನು ತಿಂದೊಡನೆಯೆ ಈತನಿಗೆ ಪೂರ್ಣ ಗುಣವಾಗಿಬಿಡುತ್ತದೆ' ಅಂತ. ಆಗ ಮನೆಯವರಿಗೆಲ್ಲ ಸ್ವರ್ಗವೇ ಕೈಗೆ ನಿಲುಕಿದಂತಾಯಿತು. ಆ ಬ್ರಾಹ್ಮಣ ಅವರಿಗೆ ಮತ್ತೆ ಹೇಳಿದ, 'ಆದರೆ ಒಂದು ವಿಷಯ. ಮೊದಲು ನಿಮ್ಮಲ್ಲಿ ಯಾರಾದರು ಆ ಔಷಧದ ಸ್ವಲ್ಪ ಭಾಗವನ್ನು ತಿಂದು, ಉಳಿದುದನ್ನು ಈತನಿಗೆ ಕೊಡಬೇಕು. ಆದರೆ ಯಾರು ಅದರ ಅಗ್ರಭಾಗವನ್ನು ತಿನ್ನುತ್ತಾರೊ ಅವರು ಮಾತ್ರ ಸತ್ತುಹೋಗಿಬಿಡುತ್ತಾರೆ. ಇಲ್ಲಿ ಈತನ ಅನೇಕ ಆಪ್ತಬಂಧುಗಳಿರೋದು ನನ್ನ ಕಣ್ಣಿಗೆ ಬೀಳುತ್ತಿದೆ; ಒಬ್ಬರಲ್ಲ ಒಬ್ಬರು ಮುಂದೆ ಬಂದು ಅದರ ಅಗ್ರಭಾಗವನ್ನು ತಿಂದೇಬಿಡುವಿರಿ ಎಂದು ಭಾವಿಸಿದೇನೆ. ಈ ಹುಡುಗನ ಹೆಂಡತಿ ಮತ್ತು ತಾಯಿ ಬಹಳವಾಗಿ ಅಳುತ್ತಿದಾರೆ. ಇವರಿಗೆ ಅದನ್ನು ತಿನ್ನಲು ಖಂಡಿತ ಸಾಧ್ಯ ಎಂಬುದಾಗಿ ಕಾಣುತ್ತಿದೆ' ಅಂತ.

"ಒಡನೆಯೆ ಎಲ್ಲರೂ ಅಳೋ-ಗಿಳೋದನ್ನೆಲ್ಲ ಬಿಟ್ಟು ಸುಮ್ಮನೆ ಕುಳಿತುಕೊಂಡರು. ತಾಯಿ ಆ ಬ್ರಾಹ್ಮಣನಿಗೆ ಹೇಳಿದಳು, 'ನಮ್ಮದು ಒಂದು ದೊಡ್ಡ ಕುಟುಂಬ. ನಾನು ಸತ್ತೆನೆಂದರೆ ಅದನ್ನು ನೋಡಿಕೊಳ್ಳೋರ್‍ಯಾರು?' ಅಂತ. ಬಳಿಕ ಚಿಂತಾಕ್ರಾಂತಳಾಗಿ ಯೋಚಿಸಲಾರಂಭಿಸಿದಳು. ಆತನ ಹೆಂಡತಿ ಈಗೊಂದು ನಿಮಿಷದ ಹಿಂದೆ ಅಳುತ್ತ ಹೇಳುತ್ತಿದ್ದಳು, 'ಅಯ್ಯೋ! ನನ್ನ ಹಣೆಯಲ್ಲಿ ಏನು ಬರೆದು ಕಳುಹಿಸಿದನಪ್ಪ ಬ್ರಹ್ಮ!' ಅಂತ. ಆಕೆ ಹೇಳಿದಳು, 'ಅವರೇನೊ ಮರ್ತ್ಯನ ದಾರಿ ಹಿಡಿದುಬಿಟ್ಟರು. ನನಗೆ ಈ ಎರಡೂ ಮೂರು ಎಳೆ ಗಂಡು ಹೆಣ್ಣು ಮಕ್ಕಳಿವೆ. ನಾನು ಸತ್ತುಹೋಗಿಬಿಟ್ಟರೆ ಇವರನ್ನು ನೋಡಿಕೊಳ್ಳೋರ್‍ಯಾರು?' ಅಂತ.

"ಶಿಷ್ಯ ನಡೆದುದನ್ನೆಲ್ಲ ಕಣ್ಣಾರ ನೋಡಿದ, ಕಿವಿಯಾರ ಕೇಳಿದ. ಆತ ಥಟ್ಟನೆ ಹಾಸಿಗೆಯಿಂದ ಎದ್ದು ಗುರುವಿಗೆ ಹೇಳಿದ, 'ಪೂಜ್ಯರೆ, ಬನ್ನಿ ಹೊರಡೋಣ. ನಾನು ನಿಮ್ಮನ್ನು ಹಿಂಬಾಲಿಸುತ್ತೇನೆ' ಅಂತ. (ಎಲ್ಲರೂ ನಗುತ್ತಿದಾರೆ.)

“ಇನ್ನೊಬ್ಬ ಶಿಷ್ಯ ತನ್ನ ಗುರುವಿಗೆ ಹೇಳಿದ, ‘ನನ್ನ ಹೆಂಡತಿ ನನ್ನನ್ನು ಬಹಳವಾಗಿ ಆದರಿಸಿ ಪ್ರೀತಿಸುತ್ತಿದಾಳೆ. ಆಕೆಗಾಗಿ ನಾನು ಈ ಸಂಸಾರವನ್ನು ತ್ಯಜಿಸಲಾಗುತ್ತಿಲ್ಲ’ ಅಂತ. ಶಿಷ್ಯ ಹಠಯೋಗಾಭ್ಯಾಸ ಮಾಡುತ್ತಿದ್ದ. ಗುರು ಆತನಿಗೂ ತನ್ನ ಹೆಂಡತಿಯ ಪ್ರೇಮ ಎಂಥದು ಎಂಬುದನ್ನು ಅರಿತುಕೊಳ್ಳಲು ಒಂದು ಉಪಾಯವನ್ನು ಹೇಳಿಕೊಟ್ಟ. ಒಂದು ದಿನ ಆ ಶಿಷ್ಯನ ಮನೆಯಲ್ಲಿಯೂ ಒಂದು ದೊಡ್ಡ ಗೋಳಾಟ. ನೆರೆಹೊರೆಯವರೆಲ್ಲಾ ಅಲ್ಲಿಗೆ ಬಂದು ನೋಡುತಾರೆ, ಆ ಹಠಯೋಗಿ ಯಾವುದೊ ಒಂದು ಆಸನದಲ್ಲಿ ಕುಳಿತಿದಾನೆ; ಆತನ ಅಂಗಾಂಗಗಳೆಲ್ಲ ವಕ್ರ ವಕ್ರವಾಗಿ ತಿರುಗಿ ನಿಸ್ಸತ್ವಗೊಂಡಿವೆ. ಅವರು ಭಾವಿಸಿದರು ಆತನ ಪ್ರಾಣಪಕ್ಷಿ ಹಾರಿಹೊರಟುಹೋಗಿಬಿಟ್ಟದೆ ಅಂತ. ಆತನ ಹೆಂಡತಿ ಆರ್ತ ನಾದವನ್ನು ಮಾಡುತ್ತ ನೆಲದಮೇಲೆ ಬಿದ್ದು ಹೊರಳಾಡುತ್ತಾ ಅಳುತ್ತಿದಾಳೆ, ‘ಅಯ್ಯೋ ದೈವವೇ! ನನ್ನ ಹಣೆಯಲ್ಲಿ ಏನು ಬರೆದೆ! ಮುಂದಿನ ಗತಿಯೇನು? ಗೆಳತಿಯರಾ, ನನ್ನ ಹಣೆಯಲ್ಲಿ ಹೀಗೆ ಬರೆದಿದೆ ಎಂಬುದನ್ನು ನಾನು ಸ್ವಪ್ನದಲ್ಲಿಯೂ ಕಾಣಲಿಲ್ಲವಲ್ಲ, ಅಯ್ಯೋ!’ ಅಂತ.

“ಇಷ್ಟರಲ್ಲಿ ಆತನ ಬಂಧುಗಳು ಚಟ್ಟ ತಯಾರಿಸಿ ಆತನ ಶವವನ್ನು ಮನೆಯಿಂದ ಹೊರಕ್ಕೆ ತೆಗೆಯುವ ಪ್ರಯತ್ನದಲ್ಲಿದಾರೆ. ಅದನ್ನು ಬಾಗಿಲ ಹತ್ತಿರಕ್ಕೆ ತಂದಾಗ ಒಂದು ಸಮಸ್ಯೆ ಏಳುತ್ತದೆ. ಶವದ ಕೈಕಾಲುಗಳು ವಕ್ರ ವಕ್ರವಾಗಿ ತಿರುಗಿಕೊಂಡು ಸೆಡೆತುಕೊಂಡಿರೋದರಿಂದ ಶವ ಬಾಗಿಲನ್ನು ಬಿಟ್ಟು ಹೊರಕ್ಕೆ ಬರುತ್ತಿಲ್ಲ. ಆಗ ನೆರೆಮನೆಯವ ಓಡಿಹೋಗಿ ಒಂದು ಕೊಡಲಿ ತಂದು ನಿಲುವನ್ನು ಕತ್ತರಿಸಲಾರಂಭಿಸಿದ. ಇದುವರೆಗೆ ಬಹಳವಾಗಿ ಅಳುತ್ತಿದ್ದ ಆತನ ಹೆಂಡತಿ ಕೊಡಲಿಯ ‘ಧಪ್, ದಪ್’ ಎಂಬ ಶಬ್ದವನ್ನು ಕೇಳಿದೊಡನೆಯೆ ಬಾಗಿಲ ಹತ್ತಿರಕ್ಕೆ ಓಡಿಬಂದು, ಇನ್ನೂ ಅಳುತ್ತ ಅಳುತ್ತಲೆ ಕೇಳಿದಳು, ‘ಏನು ಸಮಾಚಾರ?’ ಅಂತ. ಪಕ್ಕದ ಮನೆಯವ ಹೇಳಿದ, ‘ಶವ ಹೊರಕ್ಕೆ ಬರುತ್ತಿಲ್ಲ; ಅದಕ್ಕಾಗಿ ನಿಲುವನ್ನು ಕತ್ತರಿಸಿಹಾಕುತ್ತಿದೇವೆ’ ಅಂತ.

“ಆಗ ಆ ಹೆಂಗಸು ಹೇಳಿದಳು, ‘ದಯವಿಟ್ಟು ಹಾಗೇನು ಮಾಡಬೇಡಿ. ಈಗ ನಾನು ವಿಧವೆಯಾಗಿಬಿಟ್ಟಿದೇನೆ; ನನ್ನ ಯೋಗಕ್ಷೇಮ ನೋಡಿಕೊಳ್ಳೋರು ಬೇರೆ ಯಾರೂ ಇಲ್ಲ. ಈ ಎಳೆ ಮಕ್ಕಳನ್ನು ಬೆಳೆಸ

ಬೇಕಾಗಿದೆ. ಈ ನಿಲುವನ್ನು ನೀವು ಕತ್ತರಿಸಿಹಾಕಿಬಿಟ್ಟರೆ, ಹೊಸದನ್ನು ಮಾಡಿಸಲು ನನಗೆ ಶಕ್ತಿಯಿಲ್ಲ. ಒಂದಲ್ಲ ಒಂದು ದಿವಸ ಎಲ್ಲರೂ ಸಾಯಲೇ ಬೇಕು. ನನ್ನ ಪತಿ ಮತ್ತೆ ಜೀವಂತನಾಗೋ ಹಾಗಿಲ್ಲ. ಕೈಕಾಲುಗಳನ್ನು ಕತ್ತರಿಸಿಯೇ ಹೊರಕ್ಕೆ ತೆಗೆಯಿರಿ' ಅಂತ. ಅಷ್ಟರಲ್ಲಿ ಆ ಹಠಯೋಗಿ ತೆಗೆದುಕೊಂಡಿದ್ದ ಔಷಧದ ಮತ್ತು ಇಳಿದುಹೋಗಿತ್ತು ಆತ ಒಡನೆಯೆ ಎದ್ದು ನಿಂತು ತನ್ನ ಸತಿಗೆ ಹೇಳಿದ, 'ಏ ಪಿಶಾಚಿ! ನನ್ನ ಕೈಕಾಲು ಕತ್ತರಿಸಿಹಾಕಲು ಯೋಚಿಸಿದೆಯಲ್ಲವೆ ನೀನು?' ಅಂತ. ಹೀಗೆಂದು ಹೇಳಿ ಮನೆಯನ್ನು ತ್ಯಜಿಸಿ ಗುರುವಿನೊಡನೆ ಹೊರಟುಹೋದ. (ಎಲ್ಲರೂ ನಗುತ್ತಾರೆ.)

"ಅನೇಕ ಹೆಂಗಸರು ಬಹಳ ಶೋಕಾನ್ವಿತರಾಗಿರೋ ಹಾಗೆ ಸುಮ್ಮನೆ ನಟಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ತಾವು ಅಳಲೇಬೇಕಾಗಿದೆ ಎಂದು ಮೊದಲೇ ಯೋಚಿಸಿ, ತಮ್ಮ ಮುಕರ ಮತ್ತು ಉಳಿದ ನಗಗಳನ್ನೆಲ್ಲಾ ಕಳೆದು ಭದ್ರವಾಗಿ ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿ, ಬಳಿಕ ಬಂದು ನೆಲದ ಮೇಲೆ ಬಿದ್ದು ಹೊರಳಾಡುತ್ತಾ ಅಳುತ್ತಾರೆ, 'ಗೆಳತಿಯಿರಾ, ಬ್ರಹ್ಮ ನನ್ನ ಹಣೆಯಲ್ಲಿ ಏನು ಬರೆದುಬಿಟ್ಟಿದ್ದ ಹಾಳಾದವನು! ಅಯ್ಯೋ, ನನಗೆ ಹೀಗಾಗಿಬಿಟ್ಟಿತಲ್ಲ!' ಅಂತ."

ನರೇಂದ್ರ: "ಯಾವ ಪ್ರಮಾಣವೂ ಇಲ್ಲದೆ ಭಗವಂತ ಮಾನವ ದೇಹ ಧಾರಣೆಮಾಡಿಕೊಂಡುಬರುತ್ತಾನೆ ಎಂಬುದರಲ್ಲಿ ವಿಶ್ವಾಸವಿಡೋ ಬಗೆ ಹೇಗೆ?"

ಗಿರೀಶ: "ವಿಶ್ವಾಸವೇ ಯಥೇಷ್ಟ ಪ್ರಮಾಣ. ಈ ವಸ್ತುಗಳು ಇಲ್ಲಿ ಇವೆ ಎಂಬುದಕ್ಕೆ ಇರೋ ಪ್ರಮಾಣವೇನು? ವಿಶ್ವಾಸವೇ ಪ್ರಮಾಣ."

ಒಬ್ಬ ಭಕ್ತ: "ಈ ಬಹಿರ್ಜಗತ್ತೆಂಬುದು ನಮ್ಮಿಂದ ಹೊರಗೆ ಇದೆ ಎಂಬುದನ್ನು ಯಾವ ದಾರ್ಶನಿಕನೇ ಆಗಲಿ ಪ್ರಮಾಣೀಕರಿಸಿರುವನೇನು? ಆದರೆ ಅದರ ಇರುವಿಕೆಯಲ್ಲಿ ನಮಗೆ ದೃಢ ವಿಶ್ವಾಸವಿದೆ ಎಂದು ಮಾತ್ರ ಅವರು ಹೇಳಿದಾರೆ."

ಗಿರೀಶ ನರೇಂದ್ರನಿಗೆ: "ಭಗವಂತನೇ ಪ್ರತ್ಯಕ್ಷವಾಗಿ ನಿನ್ನೆದುರು ಬಂದು ನಿಂತರೂ ನೀನು ಆತನನ್ನು ನಂಬೋದಿಲ್ಲ. ಆತನೇ ನಿನಗೆ ಹೇಳ ಬಹುದು, ತಾನು ಭಗವಂತ, ಮನುಷ್ಯದೇಹಧಾರಣೆಮಾಡಿಕೊಂಡು

ಬಂದಿದೇನೆ ಅಂತ. ಆದರೂ ನೀನು ಹೇಳಿಬಿಡಬಹುದು, ನೀನು ಒಬ್ಬ ಮಿಥ್ಯಾವಾದಿ, ಕಪಟಿ ಅಂತ."

ದೇವತೆಗಳ ಅಮರತ್ವದ ಸಂಬಂಧವಾಗಿ ಈಗ ಮಾತುಕತೆ ಆರಂಭವಾಯಿತು.

ನರೇಂದ್ರ: "ಅವರು ಅಮರರು ಎಂಬುದಕ್ಕೆ ಪ್ರಮಾಣಗಳೇನು?"

ಗಿರೀಶ: "ಅವರೇ ನಿನ್ನ ಎದುರಿಗೆ ಬಂದು ನಿಂತರೂ, ನೀನು ಅವರನ್ನು ನಂಬೋದಿಲ್ಲ."

ನರೇಂದ್ರ: "ಅಮರರು ಅನಾದಿಕಾಲದಿಂದ ಇದ್ದರು ಎಂಬುದಕ್ಕೆ ನನಗೆ ಪ್ರಮಾಣಬೇಕು."

ಮಾಸ್ಟರ್ ಪಲ್ಟುವಿನ ಕಿವಿಯಲ್ಲಿ ಏನನ್ನೊ ಪಿಸುಗುಟ್ಟುತ್ತಿದಾನೆ.

ಪಲ್ಟು ನಗುತ್ತ ನರೇಂದ್ರನಿಗೆ: "ಅವರು ಅನಾದಿಕಾಲದಿಂದ ಇರಬೇಕಾಗಿರೋ ಆವಶ್ಯಕತೆಯೇನಿದೆ? ಅನಂತಕಾಲದವರೆಗೆ ಇರೋದೆ ಬೇಕಾಗಿರೋದು."

ಶ್ರೀರಾಮಕೃಷ್ಣರು ನಗುತ್ತ: "ನರೇಂದ್ರ ವಕೀಲನ ಮಗ, ಆದರೆ ಪಲ್ಟು ಡೆಪ್ಯುಟಿ ಮ್ಯಾಜಿಸ್ಟ್ರೇಟಿನ ಮಗ." (ಎಲ್ಲರೂ ನಗುತ್ತಾರೆ.)

ಎಲ್ಲರೂ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು.

ಯೋಗೀಂದ್ರ ನಗುತ್ತ ಗಿರೀಶಾದಿ ಭಕ್ತರಿಗೆ: "ಇವರು (ಪರಮಹಂಸರು) ಇನ್ನು ಮುಂದೆ ನರೇಂದ್ರನ ಮಾತುಗಳಿಗೆ ಬೆಲೆ ಕೊಡಲು ಹೋಗರು."

ಶ್ರೀರಾಮಕೃಷ್ಣರು ನಗುತ್ತ: "ಒಂದು ದಿನ ನಾನು ಹೇಳಿದ್ದೆ, ಚಾತಕಪಕ್ಷಿ ಆಕಾಶದಿಂದ ಬೀಳೋ ಮಳೆ ನೀರನ್ನು ವಿನಾ ಬೇರೆ ಏನನ್ನೂ ಕುಡಿಯೋದಿಲ್ಲ ಅಂತ. ನರೇಂದ್ರ ಹೇಳಿದ, 'ಅದು ಸಾಮಾನ್ಯ ನೀರನ್ನೂ ಕುಡಿಯುತ್ತದೆ' ಅಂತ. ಆಗ ಭಗವತಿಯನ್ನು ಕೇಳಿದೆ, 'ಹಾಗಾದರೆ ಇದು ಸತ್ಯವಲ್ಲವೇನು?' ಅಂತ. ನರೇಂದ್ರನ ಮಾತು ಕೇಳಿ ನನಗೆ ಬಹಳ ಯೋಚನೆ ಹತ್ತಿಬಿಟ್ಟಿತ್ತು. ಇನ್ನೊಂದು ದಿನ ನರೇಂದ್ರ ಅಲ್ಲಿಗೆ ಬಂದಿದ್ದಾಗ, ಕೆಲವು ಹಕ್ಕಿಗಳು ಕೊಠಡಿಯಲ್ಲಿ ಹಾರಾಡುತ್ತಿದ್ದುವು. ಆಗ ನರೇಂದ್ರ ಕೂಗಿಕೊಂಡ, 'ನೋಡಿ, ಅಲ್ಲಿ ಹಾರಾಡುತ್ತಿದೆ. ಅದು! ಅದು!' ಅಂತ. ನಾನು ಕೇಳಿದೆ, 'ಏನು?' ಅಂತ. ಆತ ಹೇಳಿದ, 'ನಿಮ್ಮ ಆ ಚಾತಕಪಕ್ಷಿ! ನಿಮ್ಮ ಆ ಚಾತಕಪಕ್ಷಿ!' ಅಂತ. ನೋಡುತ್ತೇನೆ,

ಅವೆಲ್ಲ ತೋಲಿ ಹಕ್ಕಿಗಳು! ಅಂದಿನಿಂದ ನಾನು ಆತನ ಮಾತಿಗೆ ಬೆಲೆ ಕೊಡುತ್ತಿಲ್ಲ. (ಎಲ್ಲರೂ ನಗುತ್ತಾರೆ.)

"ಯದುಮಲ್ಲಿಕನ ತೋಟದಲ್ಲಿ ನರೇಂದ್ರ ನನಗೆ ಹೇಳಿದ, 'ನೀವು ನೋಡುತ್ತಿರೋ ಭಗವಂತನ ರೂಪು-ಗೀಪುಗಳೆಲ್ಲ ನಿಮ್ಮ ಮಾನಸಿಕ ಭ್ರಾಂತಿ ಮಾತ್ರ' ಅಂತ. ಆಶ್ಚರ್ಯಚಕಿತನಾಗಿ ಆತನಿಗೆ ಹೇಳಿದೆ, 'ಆದರೆ ಮಾತೂ ಆಡುತ್ತವಲ್ಲ?' ಅಂತ. ನರೇಂದ್ರ ಹೇಳಿದ, 'ಹಾಗೆ ಭಾವನೆ ಆಗುತ್ತದೆ' ಅಂತ. ಆಗ ನಾನು ಭಗವತಿಯನ್ನು ಸಮೀಪಿಸಿ ಅಳುತ್ತ ಆಕೆಗೆ ಹೇಳಿದೆ, 'ಹೇ ತಾಯೆ, ಏನು ಸಮಾಚಾರ? ಹಾಗಾದರೆ ಇವೆಲ್ಲ ಮಿಥ್ಯವೇ? ನರೇಂದ್ರ ಹಾಗೆ ಹೇಳಿಬಿಟ್ಟನಲ್ಲ?' ಅಂತ. ಒಡನೆಯೆ ಭಗವತಿ ನನಗೆ ಒಂದು ಅಲೌಕಿಕ ದರ್ಶನ ತೋರಿಸಿದಳು. ನಾನು ಚೈತನ್ಯನನ್ನು—ಅಖಂಡಚೈತನ್ಯನನ್ನು—ಮತ್ತು ಆತನಿಂದ ಉದ್ಭವಿಸಿದ ಒಂದು ಚೈತನ್ಯಮಯ ಮೂರ್ತಿಯನ್ನು ಕಂಡೆ. ಬಳಿಕ ಹೇಳಿದಳು, 'ಅವೆಲ್ಲಾ ಮಿಥ್ಯವಾಗಿದ್ದರೆ, ನಿಜಸ್ಥಿತಿಯೊಡನೆ ಅವು ತಾಳೆಯಾಗುವುದೆಂತು?' ಅಂತ. ಬಳಿಕ ನಾನು ನರೇಂದ್ರನಿಗೆ ಹೇಳಿದೆ, 'ತುಂಟ! ನೀನು ನನ್ನ ಹೃದಯದಲ್ಲಿ ಅವಿಶ್ವಾಸದ ಬೀಜ ಬಿತ್ತಲು ಪ್ರಯತ್ನಿಸಿದೆಯಾ! ನೀನು ಇಲ್ಲಿಗೆ ಮತ್ತೆ ಬರಬೇಡ' ಅಂತ."

ಮತ್ತೆ ವಿಚಾರ ಮುಂದುವರಿಯಿತು. ನರೇಂದ್ರ ಚರ್ಚಿಸುತ್ತಿದಾನೆ. ಆಗ ನರೇಂದ್ರನಿಗೆ ಇಪ್ಪತ್ತೆರಡು ವರ್ಷ ನಾಲ್ಕು ತಿಂಗಳು.

ನರೇಂದ್ರ ಗಿರೀಶ, ಮಾಸ್ಟರ್ ಮೊದಲಾದವರಿಗೆ: "ನಾನು ಶಾಸ್ತ್ರಗಳಲ್ಲಿ ತಾನೆ ಹೇಗೆ ವಿಶ್ವಾಸವಿಡಲಿ? ಮಹಾನಿರ್ವಾಣ ತಂತ್ರದಲ್ಲಿ ಒಂದು ಕಡೆ ಹೇಳಿದೆ, ಬ್ರಹ್ಮಜ್ಞಾನ ದೊರೆಯದೆ ಇದ್ದರೆ ನರಕಪ್ರಾಪ್ತಿಯಾಗುತ್ತದೆ ಅಂತ. ಅದರಲ್ಲೇ ಇನ್ನೊಂದು ಕಡೆ ಹೇಳಿದೆ, ಪಾರ್ವತಿಯ ಉಪಾಸನೆ ಬಿಟ್ಟರೆ ಮುಕ್ತಿಗೆ ಬೇರೆ ಮಾರ್ಗವೇ ಇಲ್ಲ ಅಂತ. ಮನು ಸಂಹಿತೆಯಲ್ಲಿ ಮನು ತನ್ನ ವಿಷಯವಾಗೇ ಬರೆದುಕೊಂಡಿದಾನೆ. ಮೋಸಸ್ 'ಪೆಂಟಟ್ಯೂಕ್' ನಲ್ಲಿ ತನ್ನ ಮರಣದ ವರ್ಣನೆ ಮಾಡಿದಾನೆ.

"ಸಾಂಖ್ಯಶಾಸ್ತ್ರ ಹೇಳುತ್ತದೆ, 'ಈಶ್ವರಾಸಿದ್ಧೇಃ' ಅಂತ. ಅಂದರೆ, ಭಗವಂತನ ಇರುವಿಕೆಗೆ ಯಾವ ಪ್ರಮಾಣವೂ ಇಲ್ಲದೆ ಇರುವುದರಿಂದ ಆತ ಇಲ್ಲ ಅಂತ. ಮತ್ತೆ ಅದೇ ಹೇಳುತ್ತದೆ, ವೇದಗಳನ್ನು ಒಪ್ಪಬೇಕು, ಅವು ನಿತ್ಯ ಅಂತ.

"ಹಾಗೆಂದು ಇವೆಲ್ಲ ಸತ್ಯವಲ್ಲ ಅಂತ ನಾನು ಹೇಳುತ್ತಿಲ್ಲ. ನನಗೆ ಇವು ಅರ್ಥವಾಗುತ್ತಿಲ್ಲ; ಅರ್ಥವಾಗುವಂತೆ ನನಗೆ ವಿವರಿಸಿ ಹೇಳಿ. ಶಾಸ್ತ್ರಗಳನ್ನು ಜನ ತಮ್ಮ ತಮ್ಮ ದೃಷ್ಟಿಯಿಂದ ವಿವರಿಸಿ ಹೇಳಿದಾರೆ. ಆದ್ದರಿಂದ ಯಾವುದನ್ನು ಸರಿ ಅಂತ ಒಪ್ಪಿಕೊಳ್ಳೋಣ? ಬೆಳಕು ಕೆಂಪು ಗ್ಲಾಸಿನ ಮೂಲಕ ಕೆಂಪಾಗಿಯೂ, ಹಸುರುಗ್ಲಾಸಿನ ಮೂಲಕ ಹಸು ರಾಗಿಯೂ ಕಾಣಿಸಿಕೊಳ್ಳುತ್ತದೆ."

ಒಬ್ಬ ಭಕ್ತ: "ಗೀತೆ ಭಗವದುಕ್ತಿಗಳನ್ನು ಒಳಗೊಂಡಿದೆ."

ಶ್ರೀರಾಮಕೃಷ್ಣರು: "ಗೀತೆ ಎಲ್ಲಾ ಶಾಸ್ತ್ರಗಳ ಸಾರ. ಸನ್ಯಾಸಿಯ ಹತ್ತಿರ ಇನ್ನು ಬೇರೆ ಯಾವ ಪುಸ್ತಕವಿಲ್ಲದಿದ್ದರೂ, ಗೀತೆಯ ಪುಟ್ಟ ಪ್ರತಿ ಯೊಂದಾದರೂ ಇದ್ದೇ ಇರುತ್ತದೆ."

ಒಬ್ಬ ಭಕ್ತ: "ಗೀತೆ ಶ್ರೀಕೃಷ್ಣನ ಉಕ್ತಿಗಳನ್ನು ಒಳಗೊಂಡಿದೆ."

ನರೇಂದ್ರ: "ಶ್ರೀಕೃಷ್ಣನದನ್ನೊ ಅಥವಾ ಬೇರೆ ಯಾವ ಉಂಡಾಡ ಭಟ್ಟನದನ್ನೊ!"

ನರೇಂದ್ರನ ಈ ಮಾತುಗಳನ್ನು ಕೇಳಿ ಪರಮಹಂಸರು ಆಶ್ಚರ್ಯ ಚಕಿತರಾದರು.

ಶ್ರೀರಾಮಕೃಷ್ಣರು: "ಈ ವಿಧವಾದ ಚರ್ಚೆ ಬಹಳ ಒಳ್ಳೆಯದು. ಶಾಸ್ತ್ರಗಳಿಗೆ ಎರಡು ವಿಧವಾದ ಅರ್ಥಗಳಿವೆ: ಶಬ್ದಾರ್ಥ ಮತ್ತು ಮರ್ಮಾರ್ಥ. ನಾವು ಮರ್ಮಾರ್ಥವನ್ನು, ಎಂದರೆ ಭಗವದುಕ್ತಿಗಳೊಡನೆ ತಾಳೆಯಾಗುವುದನ್ನು ಸ್ವೀಕರಿಸಬೇಕು. ಏನನ್ನೇ ಆಗಲಿ ಬರವಣಿಗೆಯ ಮೂಲಕ ವ್ಯಕ್ತಪಡಿಸುವುದಕ್ಕೂ, ಬಾಯಿಂದ ನೇರವಾಗಿ ಹೇಳುವುದಕ್ಕೂ ಬಹಳ ವ್ಯತ್ಯಾಸವಿದೆ. ಶಾಸ್ತ್ರಗಳು ಬರವಣಿಗೆಯ ಮೂಲಕ ವ್ಯಕ್ತವಾದ ಮಾತು. ಭಗವದ್ವಾಣಿ ನೇರವಾಗಿ ಭಗವನ್ಮುಖದಿಂದ ಬಂದ ಮಾತು. ಭಗವತಿಯ ಉಕ್ತಿಗಳೊಡನೆ ತಾಳೆಯಾಗದ ಯಾವುದನ್ನೂ ನಾನು ಸ್ವೀಕರಿಸೋದಿಲ್ಲ."

ಈಗ ಅವತಾರಪುರುಷರ ಸಂಬಂಧವಾಗಿ ಮಾತುಕತೆ ಆರಂಭ ವಾಯಿತು.

ನರೇಂದ್ರ: "ಭಗವಂತನೆಂಬುವನೊಬ್ಬನಿದಾನೆ ಎಂಬುದರಲ್ಲಿ ನಂಬಿಕೆ ಇದ್ದರೇ ಬೇಕಾದಷ್ಟು. ಬಳಿಕ ಆತ ಎಲ್ಲಿ ನೇಣುಹಾಕಿಕೊಳ್ಳು ತ್ತಾನೆ, ಎಲ್ಲಿ ಸಾಯುತ್ತಾನೆ ಎಂಬುದನ್ನು ಕಟ್ಟಿಕೊಂಡು ನಮಗೇನು?

ಈ ಬ್ರಹ್ಮಾಂಡ ಅನಂತವಾದ್ದು; ಅವತಾರಗಳೂ ಅನಂತವೇ.''

ಪರಮಹಂಸರ ಕಿವಿಗೆ, ''ಈ ಬ್ರಹ್ಮಾಂಡ ಅನಂತವಾದ್ದು; ಅವತಾರಗಳೂ ಅನಂತವೇ,'' ಎಂಬ ಮಾತು ಬಿದ್ದೊಡನೆಯೆ ಅವರು ಕೈ ಮುಗಿದು ಹೇಳಿದರು, ''ಆಹಾ!'' ಅಂತ.

ಮಾಸ್ಟರ್ ಏನನ್ನೋ ಭವನಾಥನ ಕಿವಿಯಲ್ಲಿ ಹೇಳುತ್ತಿದಾನೆ.

ಭವನಾಥ: ''ಮಾಸ್ಟರ್ ಹೇಳುತ್ತಿದಾನೆ, 'ನಾನು ಆನೆಯನ್ನೇ ಎಂದೂ ನೋಡದೆ ಇರೋವಾಗ, ಅದು ಸೂಜಿಯ ಕಣ್ಣಿನಮೂಲಕ ಹಾದು ಹೋಗಬಲ್ಲದೊ ಇಲ್ಲವೊ ಎಂಬುದನ್ನು ಹೇಳುವ ಬಗೆ ಹೇಗೆ? ಭಗವಂತನಾರು ಎಂಬುದು ನನಗೆ ಗೊತ್ತಿಲ್ಲ; ಅಂಥಾದ್ದರಲ್ಲಿ ಆತ ಮಾನವರೂಪಿನಲ್ಲಿ ಅವತರಿಸಿರಬಲ್ಲನೆ ಇಲ್ಲವೆ ಎಂಬುದನ್ನು ವಿಚಾರದ ಮೂಲಕ ಅರಿಯುವ ಬಗೆ ಹೇಗೆ?' ಅಂತ.''

ಶ್ರೀರಾಮಕೃಷ್ಣರು: ''ಭಗವಂತನಿಗೆ ಎಲ್ಲವೂ ಸಾಧ್ಯ. ಆತ ಮೋಡಿ ಹಾಕಿಬಿಡುತ್ತಾನೆ. ಐಂದ್ರಜಾಲಿಕ ಕತ್ತಿಯನ್ನು ನುಂಗಿಕೊಂಡು ಮತ್ತೆ ಅದನ್ನು ಹೊರಕ್ಕೆ ತೆಗೆದುಬಿಡುತ್ತಾನೆ. ಆತ ಕಲ್ಲು ಇಟ್ಟಿಗೆಚೂರು ಇವನ್ನೂ ತಿಂದುಬಿಡುತ್ತಾನೆ.''

ಒಬ್ಬ ಭಕ್ತ: ''ಬ್ರಾಹ್ಮಸಮಾಜದವರು ಹೇಳುತ್ತಾರೆ, ಸಾಂಸಾರಿಕ ಕೆಲಸಕಾರ್ಯಗಳು ಕರ್ತವ್ಯಕರ್ಮಗಳು; ಅವನ್ನು ತ್ಯಜಿಸಕೂಡದು ಅಂತ.''

ಗಿರೀಶ: ''ಈ ರೀತಿಯಾಗಿ 'ಸುಲಭ ಸಮಾಚಾರ' ಎಂಬ ಪತ್ರಿಕೆಯಲ್ಲಿ ಅವರು ಬರೆದಿರೋದನ್ನು ನೋಡಿದೆ. ಭಗವಂತನ ಸಾಕ್ಷಾತ್ಕಾರಕ್ಕೆ ಮಾಡಬೇಕಾಗೋ ಕೆಲಸಕಾರ್ಯಗಳನ್ನು ಮಾಡಿಮುಗಿಸೋಕೇ ಮನುಷ್ಯನಿಗೆ ಕಷ್ಟವಾಗಿರುವಾಗ, ಅದರ ಜೊತೆಗೆ ಆತ ಸಾಂಸಾರಿಕ ಕೆಲಸಗಳನ್ನೂ ಮಾಡಬೇಕು ಅನ್ನೋದು!''

ಪರಮಹಂಸರು ಒಂದು ಕಿಂಚಿತ್ ನಕ್ಕು ಮಾಸ್ಟರಿನ ಕಡೆ ನೋಡಿ ತಮ್ಮ ಕಣ್ಣುಗಳಿಂದ ಸಂಜ್ಞೆಮಾಡಿದರು, ''ಆತ ಹೇಳೋದು ಸರಿ'' ಎನ್ನೋ ಹಾಗೆ.

ಮಾಸ್ಟರ್ ಅರಿತುಕೊಂಡ, ಕರ್ಮಕಾಂಡ ಬಹಳ ಕಠಿನವಾದ್ದು ಅಂತ.

ಪೂರ್ಣ ಬಂದಿದಾನೆ.

ಶ್ರೀರಾಮಕೃಷ್ಣರು: "ನಾವು ಇಲ್ಲಿಗೆ ಬಂದಿರೋ ಸಮಾಚಾರವನ್ನು ನಿನಗೆ ಕೊಟ್ಟವರಾರು?"

ಪೂರ್ಣ: "ಶಾರದಾಪ್ರಸನ್ನ."

ಶ್ರೀರಾಮಕೃಷ್ಣರು ಭಕ್ತರಿಗೆ: "ನೋಡಿ, ಈತನಿಗೆ (ಪೂರ್ಣನಿಗೆ) ಸ್ವಲ್ಪ ಫಲಾಹಾರ ಕೊಡಿ."

ಈಗ ನರೇಂದ್ರ ಹಾಡಲು ಸಿದ್ಧನಾಗುತ್ತಿದಾನೆ. ಪರಮಹಂಸರು ಮತ್ತು ಭಕ್ತರು ಆತನ ಹಾಡುಗಳನ್ನು ಕೇಳಲು ಬಹಳ ಕಾತರರಾಗಿದಾರೆ. ಈಗ ನರೇಂದ್ರ ಹಾಡುತ್ತಿದಾನೆ:

ಗಿರಿಶಿರದಲಿ ವ್ಯೋಮದಲ್ಲಿ
ಹುಲ್ಲುಗಾವಲಲ್ಲಿ
ಎಲ್ಲೆಲ್ಲಿಯು ನಿನ್ನ ವಜ್ರಡಮರುನಾದದಬ್ಬರ!
ಓಹೊ ರುದ್ರ ಮಹಾಕಾಲ ಶಿವಶಂಕರಪಾಪಹರ
ದೇವದೇವ ಮಹಾದೇವ ನನ್ನ ಹೃದಯತಾಪಹರ!

ಮತ್ತೆ ಹಾಡುತ್ತಿದಾನೆ:

ಬಲುಮಧುರವೊ ನಿನ್ನ ಹೆಸರು
ಕಿವಿಗೆ ಸುಧೆಯ ಕರೆವುದು!
ದೀನಶರಣ ಪ್ರಾಣರಮಣ
ಅಮೃತಭವನ ಧನವಿದು.
ನಿನ್ನ ಹೆಸರ ಕೀರ್ತಿಸಿದರೆ
ನಾವು ಅಮರರಪ್ಪೆವೊ!
ಚಿಂತೆಗಡಲು ನಿಮಿಷದಲ್ಲಿ
ಬತ್ತುತ ಬಯಲಪ್ಪುದೊ!
ಹೃದಯದಲ್ಲಿ ನಿನ್ನ ಮಧುರ
ಗಾಯನವನೆ ಗೈವೆವು!
ಹೃದಯನಾಥ, ಚಿದಾನಂದ;
ನಿರುತ ನಿನ್ನ ನೆನೆವೆವು.

ಮತ್ತೆ ಹಾಡುತ್ತಿದಾನೆ:

ಸಕಲಭಯತಲ್ಲಣವ ಪರಿಹರಿಪ ಮಹಿಮನನು
ಒಮ್ಮೆಯೂ ನರರು ಏಕೆ ಕರೆಯದಿರುವೆ?

ಭವಘೋರ ಭ್ರಮೆಯಲ್ಲಿ ನಿನ್ನ ನೀನೇ ಮರೆದೆ!
ಏನೀ ವಿಡಂಬನೆಯು, ನಿನಗೆ ತರವೆ?
ಜನಧನದ ಸಂಗದಲಿ ಅವನ ಮರೆಯದ ತೆರದಿ
ಎಚ್ಚರಿರು; ಭ್ರಮೆಯನ್ನು ಅತ್ತದೂಡು.
ನಿಜವನಾರಾಧಿಸಲು ಸರ್ವಪಾಪವಿಮುಕ್ತ;
ನನ್ನ ಮಾತಿನ ನಿಜವನಳೆದುನೋಡು.
ಭವಜಲಧಿಯನುದಾಟ ನಡೆವ ಮನವಿರೆ ನಿನಗೆ
ಅಳಿಯಾಸೆಗಳ ತೊರೆದು ಹರಿಯ ನುತಿಸು.
ದೇಹಮನಪ್ರಾಣಗಳ ಅವನಿಗರ್ಪಿತಮಾಡಿ
ಪ್ರೇಮದಾರಾಧನೆಗೆ ಮನವ ಸಲಿಸು!

ಪಲ್ಟು: "ಆ ಹಾಡನ್ನು ಹಾಡೋದಿಲ್ಲವೆ?"

ನರೇಂದ್ರ: "ಯಾವುದನ್ನು?"

ಪಲ್ಟು: "'ನಿನ್ನ ಅನುಪಮ ಪ್ರೇಮಕಾಂತಿಯ' ಎಂಬ ಹಾಡನ್ನು."

ನರೇಂದ್ರ ಹಾಡುತ್ತಿದಾನೆ:

ನಿನ್ನ ಅನುಪಮ ಪ್ರೇಮಕಾಂತಿಯ
ವದನ ದರುಶನವಾಗಲು
ಜಗದ ಜಂಜಡ ದುಗುಡಗಳ ಭಯ
ನನ್ನ ಬಳಿಗೇ ಬಾರದು!
ಉದಯಸೂರ್ಯನ ಮೊದಲ ಕಿರಣವು
ಕತ್ತಲೆಯ ಕಳೆವಂದದಿ
ನಮ್ಮ ಎದೆಯೊಳು ನಿನ್ನ ಬೆಳಕೇ
ಮೂಡಿ ನೋವನು ನೀಗಿ ಮನದೊಳು
ನಿನ್ನ ಪ್ರೇಮವನೆರೆವುದು!
ನಿನ್ನ ಕರುಣಾಪ್ರೇಮಗಳ ನಾ
ನನ್ನ ಮನದಲಿ ನೆನೆದರೆ
ಹರ್ಷಬಾಷ್ಪದ ಹೊನಲು ಹರಿವುದು
ಯಾವ ತಡೆಯೂ ಇಲ್ಲದೆ.
ಜಯವು ಕರುಣಾಮಯನೆ ನಿರುತವು

ನಿನ್ನ ಒಲವನೆ ಸಾರುವೆ.
ನಿನ್ನ ಕರ್ಮದಿ ನನ್ನ ಪ್ರಾಣವು
ಸವೆಯಲೆನ್ನುತ ಬೇಡುವೆ !

ಮಾಸ್ಟರ ಇಚ್ಛೆಗನುಸಾರ ನರೇಂದ್ರ ಮತ್ತೆ ಹಾಡುತ್ತಿದಾನೆ. ಮಾಸ್ಟರ್ ಮತ್ತು ಉಳಿದ ಭಕ್ತರು ಕೈಮುಗಿದುಕೊಂಡು ಕೇಳುತ್ತಿದಾರೆ:

ಹರಿರಸಮದಿರೆಯ ಕುಡಿದು ನಿರಂತರ
ಉನ್ಮತ್ತನ ತೆರ ನೀನಿರುತ
ಹರಿಮಧುನಾಮವ ನುತಿಸಿ ಕಂಬನಿಯ
ಕರೆದು ಧೂಳಿನಲಿ ಹೊರಳುತ್ತ
ಹರಿಕಂಠದ ಹರಿನಾಮದ ನುತಿಯೊಳು
ಗಗನ ದೇಶವನು ತುಂಬಿಸುತ
ಹರಿನುತಿಯಾನಂದದಿ ನರ್ತಿಸಿ
ಜಗಕಾನಂದವ ಸಿಂಪಿಸುತ
ಹಗಲಿರುಳೂ ಹರಿನಾಮದ ಕಡಲಲಿ
ಈಜುತ, ಬಯಕೆಯ ಸೀಳುತ್ತ
ಇರುನೀ ಜೀವನದೊಳ್ಪನು ಸಾಧಿಸುತ!

ನರೇಂದ್ರ ಮತ್ತೆ ಹಾಡುತ್ತಿದಾನೆ:

ನಿರಂಜನ ಹರಿಚಿದ್ಘನಮೂರುತಿಯನು ನೆನೆಯೊ
ನಿರಂತರ— ಮೋಹನ ಮೂರುತಿಯನು ನೆನೆಯೊ.—
ಅನುಪಮತೇಜನ, ಸುಂದರರೂಪನ
ಭಕ್ತರ ಎದೆಯಲಿ ರಂಜಿಪನ,
ಕೋಟಿಚಂದ್ರಸಮ ಕಾಂತಿಯನಾಚಿಸಿ
ಮಿಂಚಿನಂತೆ ನಮ್ಮೆದೆಯೊಳು ರಂಜಸಿ
ಮೋಹಿಪನ—
ನಿರಂಜನ ಹರಿಚಿದ್ಘನಮೂರುತಿಯನು ನೆನೆಯೋ
ನಿರಂತರ— ಮೋಹನ ಮೂರುತಿಯನು ನೆನೆಯೋ!

ಹೃದಯಪದ್ಮದಲಿ ಪೂಜಿಸು ಆತನ
ಶಾಂತಮಾನಸದಿ ಜ್ಞಾನನಯನದಲಿ
ಅಪೂರ್ವದರ್ಶನ ಮೋಹನನ

ಭಕ್ತಿಯೋಗದಾವೇಶದಿ ಮುಳುಗಿಪ
ಚಿದಾನಂದ ರಸ ಸಾಗರನ—
ನಿರಂಜನ ಹರಿಚಿದ್ಘನಮೂರುತಿಯನು ನೆನೆಯೊ
ನಿರಂತರ— ಮೋಹನಮೂರುತಿಯನು ನೆನೆಯೊ !

ನರೇಂದ್ರ ಇನ್ನೊಂದು ಹಾಡು ಹಾಡುತ್ತಿದಾನೆ :

ಮನವ ಬೆರಗುಗೊಳಿಪ'ನಂತ ವಿಶ್ವರಚನೆ ನಿನ್ನದೇ.
ನಿನ್ನ ಪ್ರೇಮ ಚೆಲುವುಗಳಲಿ ಜಗವೆಲ್ಲವು ತುಂಬಿದೆ.
ಕೊರಳಸರದಿ ಹೊಳೆವ ವಜ್ರದಂತೆ ತಾರೆ ಮೇಲ್ಗಡೆ
ಹೊಳೆಯುತಿಹವು ಸೂರ್ಯ-ಚಂದ್ರರೊಡನೆ ಲೆಕ್ಕವಿಲ್ಲದೆ.
ನಿರಂತರವು ಧನಧಾನ್ಯದಿ ನೀನು ಜಗವ ತುಂಬುವೆ.
ಧನ್ಯ ಧನ್ಯ ಮಹಾದೇವ ಎಂದು ನಾನು ನುತಿಸುವೆ !

ಮತ್ತೆ ಹಾಡುತ್ತಿದಾನೆ :

ಬಾನ ತಳಿಗೆಯೊಳಿಟ್ಟ ಹಣತೆಗಳ ರೀತಿಯಲಿ
ರವಿಶಶಿಗಳಾರತಿಯ ಬೆಳಗುತಿರಲು,
ನಿನ್ನ ರೂಪವ ದಿನವು ಸಿಂಗರಿಪ ತೊಡವಿನೊಲು
ಲಕ್ಷ ನಕ್ಷತ್ರಗಳು ರಾಜಿಸಿರಲು
ಮಂದ ಮಂದಾನಿಲನು ಧೂಪದೊಲು ತೀಡುತಿರೆ,
ಗಾಳಿ ಚಾಮರಸೇವೆ ಗೈಯುತಿರಲು
ಸಕಲವನರಾಜಿಗಳು ಹೂವಿನಾರತಿ ಎತ್ತಿ
ನಿತ್ಯವೂ ನಿನಗಾಗಿ ಶೋಭಿಸಿರಲು —
ಏನು ಅದ್ಭುತ ಪೂಜೆ ಸಲ್ಲುತಿದೆ ನಿತ್ಯವೂ
ಭವದುಃಖವನು ಕೊಂದ ಗುರುವೆ ನಿನಗೆ !
ಓಂಕಾರನಾದವಿದೊ ಗುಡುಗಿನೊಲು ಮೊಳಗುತಿದೆ
ಸಕಲ ಸಚರಾಚರದ ಎದೆಯ ಒಳಗೆ !
ಓ ಅಪೂರ್ವನೆ ನಿನ್ನ ಕರುಣೆಯನು ಕರೆಯಯ್ಯ
ಬೇಡುವೀ ನಾನಕನ ಹೃದಯದೊಳಗೆ !

ಮತ್ತೆ ಹಾಡುತ್ತಿದಾನೆ :

ಏಕ ಪುರಾತನ ಪುರುಷ ನಿರಂಜನ
ಪಾದದಿ ಚಿತ್ತವ ನಿಲಿಸೋ ........

ನಾರಾಯಣನ ಕೋರಿಕೆಯ ಪ್ರಕಾರ ನರೇಂದ್ರ ಹಾಡುತ್ತಿದಾನೆ:

ದಯಮಾಡಿಸು ದಯಮಾಡಿಸು
ಹೃದಯಕಮಲಪೀಠದಿ
ಬಂದು ಮೊಗವ ತೋರು ತಾಯೆ
ಹೃದಯಪ್ರಾಣ ಪುತ್ಥಲೀ!
ಹುಟ್ಟಿದಂದಿನಿಂದ ನಾನು
ಎನಿತೊ ನೋವ ನುಂಗಿದೆ.
ನೀನು ಬಲ್ಲೆ; ನಿನ್ನ ಬರವಿ-
ಗಾಗಿ ನಾನು ಕಾದಿಹೆ.
ಹೃದಯಕಮಲವರಳಿಸಿ ನೀ
ದಯಮಾಡಿಸು ಬೇಗನೆ.

ನರೇಂದ್ರ ಈಗ ತನ್ನ ಮೆಚ್ಚಿನ ಹಾಡನ್ನು ಹಾಡುತ್ತಿದಾನೆ:

ಮಿರುಗುತಿದೆ ನಿನ್ನ ಅರೂಪ ರಾಶಿ ನಿಬಿಡಾಂಧಕಾರದಲ್ಲಿ
ನಿನ್ನನದರಿಂದಲೇ ನೆನೆವರೌ ಯೋಗಿಗಳು ಗಿರಿಗುಹೆಗಳಲ್ಲಿ! . . . .

ಸಮಾಧಿಯ ವರ್ಣನೆಯನ್ನೊಳಗೊಂಡ ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ ಪರಮಹಂಸರು ಸಮಾಧಿಸ್ಥರಾಗಿದಾರೆ.

ನರೇಂದ್ರ ಮತ್ತೆ ಹಾಡುತ್ತಿದಾನೆ:

ಹರಿರಸಮದಿರೆಯ ಕುಡಿದು ನಿರಂತರ
ಉನ್ಮತ್ತನ ತೆರ ನೀನಿರುತ . . . . . .

ಪರಮಹಂಸರು ಇನ್ನೂ ಸಮಾಧಿಸ್ಥರಾಗೇ ಇದಾರೆ. ಅವರು ಗೋಡೆಯನ್ನು ಒರಗಿಕೊಂಡು, ಕಾಲುಗಳನ್ನು ಇಳಿಬಿಟ್ಟುಕೊಂಡು, ಉತ್ತರಾಭಿಮುಖರಾಗಿ ಒಂದು ದಿಂಬಿನ ಮೇಲೆ ಕುಳಿತುಕೊಂಡಿದಾರೆ. ಭಕ್ತರೆಲ್ಲರು ಅವರ ಸುತ್ತಲೂ ಕುಳಿತುಕೊಂಡಿದಾರೆ.

ಪರಮಹಂಸರು ಭಾವಾವಿಷ್ಟರಾಗಿ ಭಗವತಿಯೊಡನೆ ಮಾತಾಡುತ್ತಿದಾರೆ. ಅವರು ಹೇಳುತ್ತಿದಾರೆ, "ಈಗ ನಾನು ಊಟಮಾಡಿ ಹೋಗುತ್ತೇನೆ. ನೀನು ಬಂದೆಯಾ? ನಿನ್ನ ಗಂಟುಮೂಟೆಗಳನ್ನು ಸುಭದ್ರವಾಗಿ ಬಿಡಾರದಲ್ಲಿ ಇಟ್ಟು, ಬಳಿಕ ಹೊರಕ್ಕೆ ಬಂದಿದೀಯೇನು?" ಅಂತ. ಮತ್ತೆ ಹೇಳುತ್ತಿದಾರೆ "ಈಗ ನನಗೆ ಯಾರ ಜೊತೆಯೂ ರುಚಿಸುತ್ತಿಲ್ಲ. ಹೇ ತಾಯೆ, ಈಗ ನಾನು ಹಾಡನ್ನು ಏಕೆ ಆಲಿಸಬೇಕು? ಹಾಗೆ ಮಾಡಿದರೆ

ಅದು ನನ್ನ ಮನಸ್ಸಿನ ಕಿಂಚಿತ್ ಭಾಗವನ್ನು ಹೊರ ಜಗತ್ತಿಗೆ ಎಳೆದು ತಂದುಬಿಡುತ್ತದೆ'' ಅಂತ.

ಕ್ರಮಕ್ರಮೇಣ ಪರಮಹಂಸರು ಅಧಿಕಾಧಿಕವಾಗಿ ಬಾಹ್ಯ ಪ್ರಜ್ಞೆಯನ್ನು ಹೊಂದುತ್ತಿದಾರೆ. ಭಕ್ತರ ಕಡೆ ದೃಷ್ಟಿಸಿ ಹೇಳುತ್ತಿದಾರೆ, ''ಹಿಂದೆ ಜನರು ಮೀನನ್ನು ನೀರು ತುಂಬಿದ ಮಡಕೆಗಳಲ್ಲಿ ಬೆಳೆಸುತ್ತಿದ್ದುದನ್ನು ನೋಡಿ ಆಶ್ಚರ್ಯಪಡುತ್ತಿದ್ದೆ. ನನಗೆ ನಾನೆ ಹೇಳಿಕೊಳ್ಳುತ್ತಿದೆ, 'ಇವರು ಎಂಥ ನಿರ್ದಯಿಗಳು ? ಕೊನೆಗೆ ಇವರು ಇವನ್ನು ಸಾಯಿಸಿಬಿಡುತ್ತಾರೆ' ಅಂತ. ಆದರೆ ಯಾವಾಗ ನನ್ನ ಮಾನಸಿಕ ಅವಸ್ಥೆ ಪರಿವರ್ತನೆಯನ್ನು ಹೊಂದಲಾರಂಭಿಸಿತೊ ಆಗ ನನಗೆ ಅನುಭವವಾಯಿತು ಶರೀರಗಳೆಂಬುವು ದಿಂಬಿನ ಚೀಲಗಳಿದ್ದ ಹಾಗೆ, ಅವು ಇದ್ದರೂ ಒಂದೆ ಸತ್ತರೂ ಒಂದೆ'' ಅಂತ.

ಭವನಾಥ: ''ಹಾಗಾದರೆ ಮನುಷ್ಯನನ್ನು ಹಿಂಸಿಸಬಹುದಲ್ಲವೆ? ಕೊಂದುಹಾಕಿಬಿಡಬಹುದಲ್ಲವೆ ? ''

ಶ್ರೀರಾಮಕೃಷ್ಣರು : ''ಹೌದು, ಆ ಅವಸ್ಥೆ ಬಂದಾಗ ಬಹುಶಃ ಸಾಧ್ಯವಾಗಬಹುದು. ಆ ಅವಸ್ಥೆ ಎಲ್ಲರಿಗೂ ಬರೋದಿಲ್ಲ. ಅದು ಬ್ರಹ್ಮ ಜ್ಞಾನಾವಸ್ಥೆ.

''ಸಮಾಧ್ಯವಸ್ಥೆಯಿಂದ ಒಂದೆರಡು ಹಂತ ಕೆಳಗೆ ಇಳಿದನಂತರವೇ ಭಕ್ತಿ ಭಕ್ತರ ಸಹವಾಸ ರುಚಿಸುತ್ತದೆ.

''ಭಗವಂತನಲ್ಲಿ ವಿದ್ಯೆ ಅವಿದ್ಯೆ ಎರಡೂ ಇವೆ. ವಿದ್ಯಾಮಾಯೆ ಮನುಷ್ಯನನ್ನು ಭಗವಂತನ ಕಡೆ ಕರೆದೊಯ್ಯುತ್ತದೆ, ಅವಿದ್ಯಾಮಾಯೆ ಆತನನ್ನು ಭಗವದ್ವಿಮುಖನನ್ನಾಗಿ ಮಾಡುತ್ತದೆ. ಜ್ಞಾನ, ಭಕ್ತಿ, ದಯೆ, ವೈರಾಗ್ಯ ಇವೆಲ್ಲ ವಿದ್ಯಾರಾಜ್ಯಕ್ಕೆ ಸೇರಿವೆ. ಇವನ್ನು ಆಶ್ರಯಿಸಿದರೆ ಭಗವಂತನ ಹತ್ತಿರಕ್ಕೆ ಹೋಗಬಹುದು. ಅಲ್ಲಿಂದ ಮುಂದಕ್ಕೆ ಒಂದು ಹೆಜ್ಜೆ ಹಾಕಿತು ಎಂದರೆ ಭಗವಂತ ದೊರೆತುಬಿಡುತ್ತಾನೆ; ಬ್ರಹ್ಮಜ್ಞಾನ ದೊರೆತುಬಿಡುತ್ತದೆ. ಆ ಅವಸ್ಥೆಯಲ್ಲಿ ಎಲ್ಲವೂ ಆತನೇ ಆಗಿರುವುದನ್ನು ಅನುಭವಿಸಬಹುದು ಮತ್ತು ನೋಡಬಹುದು. ಆಗ ತ್ಯಾಜ್ಯ ಗ್ರಾಹ್ಯದ ಮಾತೇ ಇಲ್ಲ. ಬೇರೊಬ್ಬರ ಮೇಲೆ ಕೋಪಿಸಿಕೊಳ್ಳುವಂತೆಯೇ ಇಲ್ಲ.

''ಒಂದು ದಿನ ನಾನು ಗಾಡಿಯಲ್ಲಿ ಕುಳಿತು ಹೋಗುತ್ತಿದ್ದೆ. ಒಂದು ಜಗಲಿಯ ಮೇಲೆ ಇಬ್ಬರು ವೇಶ್ಯೆಯರು ನಿಂತಿರೋದು ನನ್ನ ಕಣ್ಣಿಗೆ ಬಿತ್ತು.

ಅವರು ಸಾಕ್ಷಾತ್ ಭಗವತಿಯೇ ಆಗಿ ಕಂಡರು. ಅವರಿಗೆ ಪ್ರಣಾಮ ಮಾಡಿದೆ.

"ನನಗೆ ಉಚ್ಚ ಅವಸ್ಥೆ ಬಂದನಂತರ ಕಾಳಿಯ ಪೂಜೆ ಮಾಡಲಾಗಲಿ ಅಥವಾ ಆಕೆಗೆ ನೈವೇದ್ಯ ಅರ್ಪಿಸಲಾಗಲಿ ನನ್ನ ಕೈಯಲ್ಲಾಗಲಿಲ್ಲ. ಅದಕ್ಕಾಗಿ ಖಜಾಂಚಿ ನನ್ನನ್ನು ಹೀಯಾಳಿಸಿದ ಎಂದು ಹಲಧಾರಿ ಮತ್ತು ಹೃದೆ ನನಗೆ ತಿಳಿಸಿದರು. ಅದನ್ನು ಕೇಳಿ ನಾನು ಸುಮ್ಮನೆ ನಕ್ಕುಬಿಟ್ಟೆ; ಒಂದು ಕಿಂಚಿತ್ತೂ ಕೋಪ ಬರಲಿಲ್ಲ. ಮೊದಲು ಬ್ರಹ್ಮಜ್ಞಾನ ಪಡೆದುಕೊಂಡು ಬಳಿಕ ಆತನ ಲೀಲಾಸ್ವಾದನೆಮಾಡುತ್ತ ಆನಂದಪಡು. ಒಬ್ಬ ಸಾಧು ಒಂದು ಪಟ್ಟಣಕ್ಕೆ ಬಂದು ಅದರ ಸೊಬಗನ್ನು ನೋಡುತ್ತ ಸುತ್ತಾಡುತ್ತಿದ್ದ. ಆತ ತನಗೆ ಗೊತ್ತಿರೋ ಇನ್ನೊಬ್ಬ ಸಾಧುವನ್ನು ಒಂದು ಕಡೆ ನೋಡಿದ. ಆ ಸಾಧು ಈತನನ್ನು ಕೇಳಿದ, 'ನೀನು ಆನಂದದಿಂದ ಅಲೆದಾಡುತ್ತಿರುವಂತೆ ತೋರುತ್ತಿದೆ. ನಿನ್ನ ಗಂಟುಮೂಟೆಗಳೆಲ್ಲ ಎಲ್ಲಿ? ಅವನ್ನು ಯಾರೂ ಕದ್ದು-ಗಿದ್ದು ಬಿಡಲಿಲ್ಲ ತಾನೆ?' ಅಂತ. ಮೊದಲನೆಯ ಸಾಧು ಹೇಳಿದ, 'ಹಾಗೇನು ಆಗಿಲ್ಲ. ಮೊದಲು ಇಳಿದುಕೊಳ್ಳೋ ಜಾಗ ಪತ್ತೆಮಾಡಿ, ಗಂಟುಮೂಟೆಗಳನ್ನೆಲ್ಲ ಒಂದು ಕೊಠಡಿಯಲ್ಲಿ ಇಟ್ಟು, ಅದಕ್ಕೆ ಬೀಗ ಹಾಕಿ, ಈಗ ಆನಂದದಿಂದ ಪಟ್ಟಣದಲ್ಲಿ ಸುತ್ತಾಡುತ್ತಾ ಇದೇನೆ' ಅಂತ." (ಎಲ್ಲರೂ ನಗುತ್ತಿದಾರೆ.)

ಭವನಾಥ: "ಇವೆಲ್ಲ ಬಹಳ ಗಹನವಾದ ವಿಷಯಗಳು."

ಮಾಸ್ಟರ್ ತನಗೆ ತಾನೇ: "ಬ್ರಹ್ಮಜ್ಞಾನ ಪಡೆದ ಮೇಲೆ ಭಗವಂತನ ಲೀಲಾಸ್ವಾದನೆ! ಸಮಾಧ್ಯವಸ್ಥೆಯಿಂದ ಕೆಳಕ್ಕೆ ಇಳಿಯೋದು!"

ಶ್ರೀರಾಮಕೃಷ್ಣರು ಮಾಸ್ಟರ್ ಮೊದಲಾದವರಿಗೆ: "ಬ್ರಹ್ಮಜ್ಞಾನ ಸಹಜವಾಗಿ ದೊರೆತುಬಿಡುತ್ತದೆಯೆ? ಮನೋನಾಶವಾಗದ ಹೊರತು ದೊರೆಯದು. ಒಬ್ಬ ಗುರು ತನ್ನ ಶಿಷ್ಯನಿಗೆ ಹೇಳಿದ, "ನೀನು ನಿನ್ನ ಮನಸ್ಸನ್ನು ನನಗೆ ಅರ್ಪಿಸಿಬಿಡು, ನಾನು ನಿನಗೆ ಬ್ರಹ್ಮಜ್ಞಾನವನ್ನು ಕೊಟ್ಟುಬಿಡುತ್ತೇನೆ' ಅಂತ. ತೋತಾಪುರಿ ಹೇಳುತ್ತಿದ್ದ, 'ಮನಸ್ಸನ್ನು ವಿಕ್ಷೇಪಮಾಡಕೂಡದು' ಅಂತ. ಬ್ರಹ್ಮಜ್ಞಾನಾವಸ್ಥೆಯಲ್ಲಿ ಕೇವಲ ಭಗವದ್ವಿಷಯ ಮತ್ತು ಭಕ್ತರ ಸಹವಾಸ ಇವು ಮಾತ್ರವೇ ರುಚಿಸುತ್ತವೆ.

(ರಾಮನಿಗೆ) "ನೀನೊಬ್ಬ ಡಾಕ್ಟರ್. ಔಷಧ ರಕ್ತಗತವಾದಾಗ ತಾನೆ ಅದು ಗುಣಕಾರಿಯಾಗುತ್ತದೆ. ಅದೇ ರೀತಿಯಾಗಿ ಬ್ರಹ್ಮಜ್ಞಾನಾ

ವಸ್ಥೆಯಲ್ಲಿ ಒಳಗೆ ಹೊರಗೆ ಎಲ್ಲೆಲ್ಲೂ ಭಗವಂತನೇ ಕಾಣಿಸಿಕೊಳ್ಳುತ್ತಾನೆ. ಆಗ ಆತನೇ ದೇಹ, ಮನಸ್ಸು, ಪ್ರಾಣ, ಜೀವ ಇವೆಲ್ಲಾ ಆಗಿರೋದು ಕಂಡು ಬರುತ್ತದೆ."

ಮಾಸ್ಟರ್ ತನಗೆ ತಾನೇ: "ರಕ್ತಗತವಾಗುವಿಕೆ!"

ಶ್ರೀರಾಮಕೃಷ್ಣರು: "ಮನೋನಾಶವಾದೊಡನೆಯೆ ಬ್ರಹ್ಮಜ್ಞಾನ ದೊರೆತುಬಿಡುತ್ತದೆ. ಮನೋನಾಶದೊಡನೆಯೆ 'ನಾನು', 'ನಾನು' ಎಂದು ಹೇಳೋ 'ಅಹಂ' ನಾಶವಾಗಿಬಿಡುತ್ತದೆ. ಬ್ರಹ್ಮಜ್ಞಾನ ಭಕ್ತಿ ಮಾರ್ಗದಿಂದಲೂ ದೊರೆಯುತ್ತದೆ; ಮತ್ತೆ ಜ್ಞಾನಮಾರ್ಗದಿಂದಲೂ, ಎಂದರೆ ವಿಚಾರ ಮಾರ್ಗದಿಂದಲೂ ದೊರೆಯುತ್ತದೆ. ಜ್ಞಾನಮಾರ್ಗಿಗಳು 'ನೇತಿ', 'ನೇತಿ', ಎಂದರೆ 'ಇದೆಲ್ಲಾ ಮಾಯೆ, ಸ್ವಪ್ನವತ್' ಎಂಬುದಾಗಿ ವಿಚಾರಮಾಡುತ್ತಾರೆ. ಅವರು 'ನೇತಿ', 'ನೇತಿ' ಮಾರ್ಗದಿಂದ ಈ ಜಗತ್ತನ್ನು ವಿಭಜಿಸಿನೋಡಿ ಕೊನೆಗೆ ಅದು ಬರೀ ಮಾಯೆ ಎಂಬ ಅನುಭವವನ್ನು ಪಡೆಯುತ್ತಾರೆ. ಜಗತ್ತು ಮಿಥ್ಯಾ ಎಂಬ ಅನುಭವವಾದಮೇಲೆ, ಇನ್ನು ಉಳಿದುಕೊಂಡಿರೋದು ಅಹಂರೂಪ ಘಟಮಧ್ಯವರ್ತಿ ಜೀವಗಳು ಮಾತ್ರ.

"ಇಲ್ಲಿ ನೀರಿನಿಂದ ತುಂಬಿದ ಹತ್ತು ಘಟಗಳಿವೆ, ಅವುಗಳಲ್ಲೆಲ್ಲಾ ಸೂರ್ಯನ ಪ್ರತಿಬಿಂಬ ಬಿದ್ದಿದೆ ಅಂತ ಭಾವಿಸಿಕೊಳ್ಳಿ. ಆಗ ನಾವು ಎಷ್ಟು ಸೂರ್ಯರನ್ನು ನೋಡಬಹುದು?"

ಒಬ್ಬ ಭಕ್ತ: "ಹತ್ತು ಪ್ರತಿಬಿಂಬಗಳು. ಜೊತೆಗೆ ನಿಜವಾದ ಸೂರ್ಯ ಇದ್ದೇ ಇದಾನೆ."

ಶ್ರೀರಾಮಕೃಷ್ಣರು: "ನೀನು ಒಂದು ಘಟವನ್ನು ಒಡೆದುಹಾಕಿದೆ ಅಂತ ಇಟ್ಟುಕೊ. ಆಗ ಉಳಿದುಕೊಳ್ಳೋ ಸೂರ್ಯರೆಷ್ಟು?"

ಭಕ್ತ: "ಒಂಬತ್ತು ಪ್ರತಿಬಿಂಬಗಳು. ಆದರೆ ನಿಜವಾದ ಸೂರ್ಯ ಇದ್ದೇ ಇದಾನಲ್ಲ."

ಶ್ರೀರಾಮಕೃಷ್ಣರು: "ಒಳ್ಳೇದು, ಒಂಬತ್ತು ಘಟಗಳನ್ನು ಒಡೆದು ಹಾಕಿಬಿಟ್ಟೆ ಅಂತ ಇಟ್ಟುಕೊ. ಆಗ ಉಳಿದುಕೊಳ್ಳೋ ಸೂರ್ಯರೆಷ್ಟು?"

ಭಕ್ತ: "ಒಂದು ಪ್ರತಿಬಿಂಬ. ನಿಜವಾದ ಸೂರ್ಯನೊಬ್ಬ ಇದ್ದೇ ಇದಾನೆ."

ಶ್ರೀರಾಮಕೃಷ್ಣರು ಗಿರೀಶನಿಗೆ: "ಆ ಕೊನೇ ಘಟವನ್ನೂ ಒಡೆದು

ಹಾಕಿದ ಮೇಲೆ ಉಳಿದುಕೊಳ್ಳೋದೇನು ?"

ಗಿರೀಶ: "ನಿಜವಾದ ಸೂರ್ಯ ಮಾತ್ರ."

ಶ್ರೀರಾಮಕೃಷ್ಣರು: "ಅದು ಸರಿಯಲ್ಲ, ಏನು ಉಳಿದುಕೊಳ್ಳುತ್ತದೆಯೋ ಅದನ್ನು ಬಾಯಿಂದ ವರ್ಣಿಸಲಾಗೋದಿಲ್ಲ. ಏನಿದೆಯೊ ಅದೇ ಇರುತ್ತದೆ. ಸೂರ್ಯನ ಪ್ರತಿಬಿಂಬ ಇಲ್ಲದೆ ಇದ್ದರೆ, ನಿಜವಾದ ಸೂರ್ಯನೊಬ್ಬನಿದಾನೆ ಎಂಬುದನ್ನು ಅರಿಯೋ ಬಗೆ ಹೇಗೆ? ಸಮಾಧಿ ದೊರೆತಾಗ 'ಅಹಂ' ತತ್ತ್ವ ನಾಶವಾಗಿಬಿಡುತ್ತದೆ. ಸಮಾಧಿಸ್ಥ ವ್ಯಕ್ತಿ ಈ ಬಾಹ್ಯ ಜಗತ್ತಿನ ಅಂತಸ್ತಿಗೆ ಇಳಿದು ಬಂದಾಗ, ಸಮಾಧಿಯಲ್ಲಿ ಏನು ನೋಡಿದ ಎಂಬುದನ್ನು ಆತ ಬಾಯಿಂದ ವರ್ಣಿಸಲಾರ."

ಸಾಯಂಕಾಲವಾಗಿ ಆಗಲೆ ಬಹಳ ಹೊತ್ತಾಗಿದೆ. ಬೈಠಕ್ ಖಾನೆಯಲ್ಲಿ ದೀಪ ಉರಿಯುತ್ತಿದೆ. ಪರಮಹಂಸರು ಇನ್ನೂ ಭಾವಾವಿಷ್ಟರಾಗಿಯೇ ಇದಾರೆ. ಭಕ್ತರು ಅವರ ಸುತ್ತಲೂ ಕುಳಿತಿದಾರೆ.

ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿಯೇ: "ಇಲ್ಲಿ ಬೇರೆ ಯಾರೂ ಇಲ್ಲ; ಆದಕ್ಕಾಗಿ ನಾನು ಇದನ್ನು ನಿಮಗೆ ತಿಳಿಸುತ್ತಿದೇನೆ. ಯಾರು ಹೃತ್ಪೂರ್ವಕವಾಗಿ ಭಗವಂತನ ಸಾಕ್ಷಾತ್ಕಾರ ಪಡೆಯಲು ಪ್ರಯತ್ನಿಸುತ್ತಾನೆಯೊ ಆತನಿಗೆ ಆತ ದೊರೆತೇ ದೊರೆಯುತ್ತಾನೆ. ಆತನಿಗೆ ಆತ ದೊರೆತೇ ದೊರೆಯಬೇಕು. ಯಾರಿಗೆ ಭಗವಂತನೊಬ್ಬನು ವಿನಾ ಬೇರೆ ಏನೂ ಬೇಕಾಗದೊ, ಯಾರು ಆತನಿಗಾಗಿ ಅತ್ಯಂತ ವ್ಯಾಕುಲನಾಗಿದಾನೊ, ಆತನಿಗೆ ನಿಸ್ಸಂದೇಹವಾಗಿ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ.

"ಇಲ್ಲಿಗೆ ಸೇರಿದವರು (ಅಂತರಂಗ ಭಕ್ತರು) ಆಗಲೇ ಬಂದುಬಿಟ್ಟಿದಾರೆ. ಮುಂದಕ್ಕೆ ಬರೋರೆಲ್ಲ ಹೊರಗಿನವರು. ಅವರು ಆಗಾಗ ಬಂದುಹೋಗುತ್ತಾರೆ. ಭಗವತಿ ಅವರಿಗೆ ಹೇಳಿಕೊಡುತ್ತಾಳೆ, 'ಹೀಗೀಗೆ ಮಾಡಿ, ಹೀಗೀಗೆ ಭಗವಂತನನ್ನು ಕರೆಯಿರಿ' ಅಂತ.

"ಜೀವನ ಮನಸ್ಸು ಭಗವಂತನ ಕಡೆಗೆ ಏಕೆ ಹರಿಯುತ್ತಿಲ್ಲ? ನೋಡಿ, ಭಗವಂತನಿಗಿಂತ ಆತನ ಮಾಯೆಗೇ ಹೆಚ್ಚಿನ ಬಲ. ಜಡ್ಜಿಗಿಂತ ಆತನ ಜವಾನನಿಗೇ ಹೆಚ್ಚಿನ ಅಧಿಕಾರ. (ಎಲ್ಲರೂ ನಗುತ್ತಿದಾರೆ.)

"ಶ್ರೀರಾಮ ನಾರದನಿಗೆ ಹೇಳಿದ, 'ನಾನು ನಿನ್ನ ಪ್ರಾರ್ಥನೆಯನ್ನು ಬಹಳವಾಗಿ ಮೆಚ್ಚಿದೇನೆ. ನನ್ನಿಂದ ಒಂದು ವರವನ್ನು ಪಡೆದುಕೊ'

ಅಂತ. ನಾರದ ಹೇಳಿದ, 'ಹೇ ರಾಮ, ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಉಂಟಾಗುವಂತೆ ಮಾಡು. ನಿನ್ನ ಭುವನಮೋಹಿನಿ ಮಾಯೆಯಿಂದ ನಾನು ಮುಗ್ಧನಾಗದ ಹಾಗೆ ಮಾಡು' ಅಂತ. ರಾಮ ಹೇಳಿದ, 'ತಥಾಸ್ತು. ಬೇರೆ ಇನ್ನ್ಯಾವುದಾದರು ಒಂದು ವರ ಬೇಡಿಕೊ' ಅಂತ. ನಾರದ ಹೇಳಿದ, 'ಹೇ ರಾಮ, ನನಗೆ ಇನ್ನು ಏನೂ ಬೇಡ' ಅಂತ.

"ಈ ಭುವನಮೋಹಿನಿ ಮಾಯೆಯಿಂದ ಎಲ್ಲರೂ ಮುಗ್ಧರಾಗಿ ಹೋಗಿದಾರೆ. ಭಗವಂತ ಮನುಷ್ಯದೇಹಧಾರಣೆಮಾಡಿಕೊಂಡು ಬಂದಾಗ ಆತನೂ ಅದರಿಂದ ಮುಗ್ಧನಾಗಿಹೋಗಿಬಿಡುತ್ತಾನೆ. ಶ್ರೀರಾಮ ಸೀತಾ ದೇವಿಗಾಗಿ ಅತ್ತು ಅತ್ತು ಹುಚ್ಚನಂತೆ ಅಲೆದಾಡಿದ. 'ಬ್ರಹ್ಮ ಪಂಚ ಭೂತಗಳ ಬಲೆಗೆ ಸಿಕ್ಕಿಕೊಂಡು ಸುಮ್ಮನೆ ಬಿಕ್ಕಿ ಬಿಕ್ಕಿ ಅಳುತ್ತಿದಾನೆ.' ಆದರೆ ಒಂದು ವಿಷಯ: ಆತ ತನ್ನ ಇಚ್ಛಾಮಾತ್ರದಿಂದಲೇ ಅದರಿಂದ ಮುಕ್ತನಾಗಿಬಿಡಬಲ್ಲ."

ಭವನಾಥ: "ರೈಲ್ವೆ ಗಾರ್ಡ್ ಇಚ್ಛೆಪಟ್ರೇ ರೈಲ್ವೆ ಗಾಡಿಯೊಳಗೆ ಬಾಗಿಲು ಹಾಕಿಕೊಂಡು ಕುಳಿತುಕೊಳ್ಳುತ್ತಾನೆ; ಇಚ್ಛೆ ಬಂದಾಗಲೆಲ್ಲಾ ಆತ ಅದರಿಂದ ಹೊರಕ್ಕೆ ಬರಬಲ್ಲ."

ಶ್ರೀರಾಮಕೃಷ್ಣರು: "ಈಶ್ವರಕೋಟಿಗಳು — ಉದಾಹರಣೆಗೆ, ಅವತಾರಾದಿಗಳು — ಇಚ್ಛೆಪಟ್ಟರೆ ಮುಕ್ತರಾಗಬಲ್ಲರು; ಆದರೆ ಯಾರು ಜೀವಕೋಟಿಗಳೊ ಅವರ ಕೈಯಲ್ಲಿ ಇದು ಸಾಧ್ಯವಿಲ್ಲ. ಜೀವರು ಕಾಮ ಕಾಂಚನದಿಂದ ಬದ್ಧರಾಗಿದಾರೆ. ಕೊಠಡಿಯ ಕಿಟಕಿಬಾಗಿಲುಗಳೆಲ್ಲ ಸ್ಕ್ರೂ ಮೊಳೆಗಳಿಂದ ಭದ್ರಪಡಿಸಲ್ಪಟ್ಟಿದ್ದರೆ, ಅದರಿಂದ ಹೊರಕ್ಕೆ ಬರೋ ಬಗೆ ಹೇಗೆ?"

ಭವನಾಥ ನಗುತ್ತ: "ಉದಾಹರಣೆಗೆ, ರೈಲ್ವೆಯ ಮೂರನೆ ತರ ಗತಿ ಪ್ರಯಾಣಿಕರನ್ನು ತೆಗೆದುಕೊಳ್ಳಿ. ಅವರ ಗಾಡಿಯ ಬಾಗಿಲಿಗೆ ಬೀಗ ಹಾಕಿಬಿಟ್ಟಿತು ಎಂದರೆ ಹೊರಕ್ಕೆ ಬರೋ ಹಾಗೆಯೇ ಇಲ್ಲ."

ಗಿರೀಶ: "ಜೀವ ಈ ರೀತಿಯಾಗಿ ಎಲ್ಲಾ ವಿಧದಿಂದಲೂ ಬಿಗಿಯಲ್ಪಟ್ಟಿದ್ದರೆ, ಆತ ಅವುಗಳಿಂದ ಮುಕ್ತನಾಗಲು ಉಪಾಯ?"

ಶ್ರೀರಾಮಕೃಷ್ಣರು: "ಆದರೆ, ಭಗವಂತ ಗುರುವಿನ ರೂಪವನ್ನು ಧರಿಸಿ, ತಾನೇ ಮುಂದೆ ಬಂದು ಜೀವಿಯ ಪಾಶವನ್ನು ಕತ್ತರಿಸಿಹಾಕುವುದಾದರೆ, ಆಗ ಜೀವಿ ಭಯಪಡಬೇಕಾದ್ದೇನಿಲ್ಲ."

## ೪೧

## ರಾಮಚಂದ್ರದತ್ತನ ಮನೆಯಲ್ಲಿ

೨೩ ನೆ ಮೇ ೧೮೮೫, ಜ್ಯೇಷ್ಠ ಶುಕ್ಲ ದಶಮಿ, ಶನಿವಾರ.

ಪರಮಹಂಸರು ರಾಮಚಂದ್ರದತ್ತನ ಮನೆಯ ನೆಲದಂತಸ್ತಿನಲ್ಲಿರೋ ಬೈಠಕ್‌ಖಾನೆಯಲ್ಲಿ ಕುಳಿತುಕೊಂಡು ಭಕ್ತರೊಡನೆ ಆನಂದದಿಂದ ಮಾತು ಕತೆಗಳನ್ನಾಡುತ್ತಿದಾರೆ. ಅವರ ಮುಂದುಗಡೆ ಮಹಿಮಚರಣ, ಪಕ್ಕದಲ್ಲಿ ಮಾಸ್ಟರ್ ಕುಳಿತುಕೊಂಡಿದಾರೆ. ಅವರ ಸುತ್ತಮುತ್ತಲೂ ಪಲ್ಟು, ಭವನಾಥ, ನಿತ್ಯಗೋಪಾಲ, ಹರಮೋಹನ ಮತ್ತು ಇನ್ನೂ ಕೆಲವು ಭಕ್ತರು ಕುಳಿತಿದಾರೆ. ಸಮಯ ಆಗ ಸಾಯಂಕಾಲ ಐದು. ಪರಮಹಂಸರು ಭಕ್ತರ ಕ್ಷೇಮಸಮಾಚಾರವನ್ನು ವಿಚಾರಿಸುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇನ್ನೂ ಚಿಕ್ಕ ನರೇನ ಬರಲಿಲ್ಲ ವೇನು?"

ಕೆಲವು ನಿಮಿಷಗಳಾದನಂತರ ಚಿಕ್ಕ ನರೇನ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ.

ಶ್ರೀರಾಮಕೃಷ್ಣರು: "ಅವನು ಬರಲಿಲ್ಲವೇನು?"

ಮಾಸ್ಟರ್: "ಯಾರು?"

ಶ್ರೀರಾಮಕೃಷ್ಣರು: "ಕಿಶೋರಿ. ಗಿರೀಶಘೋಷ ಬರೋದಿಲ್ಲ ವೇನು? ನರೇಂದ್ರನ ಸಮಾಚಾರವೇನು?"

ಕೆಲವು ನಿಮಿಷಗಳಾದನಂತರ ನರೇಂದ್ರ ಕೊಠಡಿಯನ್ನು ಪ್ರವೇಶಿಸಿ ಪರಮ ಹಂಸರಿಗೆ ಪ್ರಣಾಮಮಾಡಿದ.

ಶ್ರೀರಾಮಕೃಷ್ಣರು ಭಕ್ತರಿಗೆ: "ಕೇದಾರ ಇಲ್ಲಿ ಇದ್ದಿದ್ದರೆ ಬಹಳ ಚೆನ್ನಾಗಿತ್ತು. ಗಿರೀಶನಿಗು ಆತನಿಗು ಒಳ್ಳೇ ಹೊಂದಿಕೆ. (ನಗುತ್ತ ಮಹಿಮಚರಣನಿಗೆ) ಆತನೂ ಹಾಗೇ ಹೇಳುತ್ತಾನೆ.[1]"

ಕೊಠಡಿಯಲ್ಲಿ ಕೀರ್ತನೆ ನಡೆಯೋ ಹಾಗೆ ರಾಮ ವ್ಯವಸ್ಥೆಮಾಡಿ ದಾನೆ. ಕೀರ್ತನಕಾರ ಅಂಜಲಿಬದ್ಧನಾಗಿ ಪರಮಹಂಸರಿಗೆ ತಿಳಿಸಿದ,

1. ಪರಮಹಂಸರು ಅವತಾರಪುರುಷರು ಎಂದು ಕೇದಾರ ಹೇಳುತ್ತಿದಾನೆ.

“ ತಾವು ಅಪ್ಪಣೆಕೊಡಿಸುವುದಾದರೆ ಕೀರ್ತನೆ ಆರಂಭಮಾಡುತ್ತೇನೆ” ಅಂತ.

ಪರಮಹಂಸರು ಸ್ವಲ್ಪ ನೀರನ್ನು ಕುಡಿದ ಬಳಿಕ ತಮ್ಮ ಮಸಾಲೆ ಚೀಲದಿಂದ ಕಿಂಚಿತ್ ಮಸಾಲೆಯನ್ನು ತೆಗೆದುಕೊಂಡರು. ಅನಂತರ ಮಾಸ್ಟರಿಗೆ ಆ ಚೀಲವನ್ನು ಕಟ್ಟಿಡುವಂತೆ ಹೇಳಿದರು.

ಕೀರ್ತನೆ ನಡೆಯುತ್ತಿದೆ. ಮೃದಂಗದ ಶಬ್ದವನ್ನು ಕೇಳಿ ಪರಮಹಂಸರು ಭಾವಾವಿಷ್ಟರಾಗಿದ್ದಾರೆ. ಪೀಠಿಕೆಯನ್ನು ಕೇಳುತ್ತ ಕೇಳುತ್ತ ಇದ್ದಹಾಗೆ ಅವರು ಗಾಢಸಮಾಧಿಸ್ಥರಾಗಿಬಿಟ್ಟಿದ್ದಾರೆ. ಹತ್ತಿರವೆ ಕುಳಿತಿದ್ದ ನಿತ್ಯಗೋಪಾಲನ ತೊಡೆಯ ಮೇಲೆ ತಮ್ಮ ಕಾಲನ್ನು ನೀಡಿಬಿಟ್ಟಿದ್ದಾರೆ. ನಿತ್ಯಗೋಪಾಲನೂ ಭಾವೋನ್ಮತ್ತನಾಗಿ ಅಳುತ್ತಿದ್ದಾನೆ. ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿ ನೆಟ್ಟದೃಷ್ಟಿಯಿಂದ ಪರಮಹಂಸರ ಸಮಾಧ್ಯವಸ್ಥೆಯನ್ನು ನೋಡುತ್ತಿದ್ದಾರೆ.

ಪರಮಹಂಸರು ಕಿಂಚಿತ್ ಪ್ರಕೃತಿಸ್ಥರಾಗಿ ಮಾತಾಡುತ್ತಿದ್ದಾರೆ. ಅವರು ಹೇಳುತ್ತಿದ್ದಾರೆ, “ ನಿತ್ಯದಿಂದ ಲೀಲೆಗೆ, ಲೀಲೆಯಿಂದ ನಿತ್ಯಕ್ಕೆ. (ನಿತ್ಯಗೋಪಾಲನಿಗೆ) ನಿನ್ನ ಆದರ್ಶ ಯಾವುದು ? ” ಅಂತ.

ನಿತ್ಯಗೋಪಾಲ ವಿನಯದಿಂದ : “ ಎರಡೂ ಒಳ್ಳೆಯವೆ. ”

ಶ್ರೀರಾಮಕೃಷ್ಣರು ತಮ್ಮ ಕಣ್ಣನ್ನು ಮುಚ್ಚಿ : “ ಇದು ಸತ್ಯವೇ ? ಭಗವಂತ ಕಣ್ಣನ್ನು ಮುಚ್ಚಿದಾಗ ಮಾತ್ರ ಇರುತ್ತಾನೆ, ತೆರೆದಾಗ ಇಲ್ಲ ಅಂತಲೇನು ? ಯಾರದು ನಿತ್ಯವೊ, ಆತನದೆ ಲೀಲೆ; ಯಾರದು ಲೀಲೆಯೊ, ಆತನದೆ ನಿತ್ಯ. (ಮಹಿಮಚರಣನಿಗೆ) ನೋಡು, ನಿನಗೆ ಒಂದು ವಿಷಯ ತಿಳಿಸಬೇಕು ಅಂತ ಇದ್ದೇನೆ.— ”.

ಮಹಿಮಚರಣ : “ ಮಹಾಶಯರೆ, ಎರಡೂ ಆತನ ಇಚ್ಛೆಗೆ ಅನುಸಾರವಾದುವೆ. ”

ಶ್ರೀರಾಮಕೃಷ್ಣರು : “ ಕೆಲವರು ಮನೆಯ ಏಳನೆ ಅಂತಸ್ತಿನವರೆಗೆ ಹತ್ತಿಬಿಡಬಲ್ಲರು, ಆದರೆ ಕೆಳಕ್ಕೆ ಇಳಿಯಲಾರರು ; ಆದರೆ ಕೆಲವರು ಅಲ್ಲಿಯವರೆಗೆ ಹತ್ತಿದನಂತರ ಇಚ್ಛೆಬಂದಾಗ ಕೆಳಗಿನ ಅಂತಸ್ತುಗಳಿಗೆ ಬಂದುಹೋಗಿ ಮಾಡಬಲ್ಲರು.

“ ಉದ್ಧವ ಗೋಪಿಯರಿಗೆ ಹೇಳಿದ, ‘ ನೀವು ಯಾರನ್ನು ಕೃಷ್ಣ ಅಂತ ಕರೆಯುತ್ತೀರೊ ಆತ ಸರ್ವ ಭೂತಗಳಲ್ಲಿಯೂ ಅಂತರ್ಯಾಮಿ

ಯಾಗಿ ಇದಾನೆ; ಆತನೇ ಜೀವಜಗತ್ತೂ ಆಗಿದಾನೆ' ಅಂತ.

"ಅದಕ್ಕಾಗೇ ನಾನು ಹೇಳೋದು, ಕಣ್ಣು ಮುಚ್ಚಿಕೊಂಡಿರೋವಾಗ ಮಾತ್ರ ಆತನ ಧ್ಯಾನ ಸಾಧ್ಯ, ತೆರೆದಾಗ ಇಲ್ಲ ಅಂತಲೇನು?"

ಮಹಿಮಚರಣ: "ನನ್ನದೊಂದು ಪ್ರಶ್ನೆ. ಭಕ್ತನಿಗೂ ಒಂದಲ್ಲ ಒಂದು ದಿನ ನಿರ್ವಾಣ ಬೇಕೇಬೇಕಾಗುತ್ತದೆ, ಅಲ್ಲವೆ?"

ಶ್ರೀರಾಮಕೃಷ್ಣರು: "ಆತನಿಗೆ ನಿರ್ವಾಣ ಬೇಕೇಬೇಕಾಗುತ್ತದೆ ಎಂಬ ನಿಯಮವೇನಿಲ್ಲ. ಕೆಲವರ ಅಭಿಮತ—ನಿತ್ಯ-ಕೃಷ್ಣನಿದಾನೆ, ಆತನೊಡನೆ ನಿತ್ಯ-ಭಕ್ತರೂ ಇದಾರೆ ಅಂತ. ಆತ ಚಿನ್ಮಯ ಶ್ಯಾಮ, ಆತನದು ಚಿನ್ಮಯ ಧಾಮ ಅಂತ. ಚಂದ್ರನೊಡನೆಯೇ ನಕ್ಷತ್ರಗಳೂ ಇರೋ ಹಾಗೆ, ನಿತ್ಯ-ಕೃಷ್ಣನೊಡನೆ ನಿತ್ಯ-ಭಕ್ತರೂ ಇದಾರೆ. ನೀನೇ ಹೇಳುತ್ತೀಯೆ, 'ಒಳಗೂ ಹೊರಗೂ ಆತನ ಕಾಣದ ಈ ಜಪತಪದಿಂದೇನು?' ಅಂತ. ನಾನು ನಿನಗಾಗಲೆ ತಿಳಿಸಿದೇನೆ, ವಿಷ್ಣುವಿನ ಅಂಶದಿಂದ ಜನ್ಮವೆತ್ತಿರುವವರ ಹೃದಯವನ್ನು ಭಕ್ತಿ ಸಮೂಲಾಗ್ರವಾಗಿ ಬಿಟ್ಟುಹೋಗದು ಅಂತ. ನಾನು ಒಮ್ಮೆ ಒಬ್ಬ ಜ್ಞಾನಿಯ (ತೋತಾಪುರಿಯ) ಕೈಗೆ ಸಿಕ್ಕಿಬಿದ್ದೆ. ಆತ ನನಗೆ ಹನ್ನೊಂದು ತಿಂಗಳಕಾಲ ವೇದಾಂತಶ್ರವಣ ಮಾಡಿಸಿದ. ಆದರೂ ಭಕ್ತಿಯ ಬೀಜ ಮಾತ್ರ ನನ್ನ ಹೃದಯವನ್ನು ಬಿಟ್ಟುಹೋಗಲಿಲ್ಲ. ನನ್ನ ಮನಸ್ಸನ್ನು ಯಾವ ಕಡೆಗೆ ಒಯ್ದರೂ ಅದು ಮತ್ತೆ ಮತ್ತೆ ಭಗವತಿಯ ಪಾದಪದ್ಮಗಳ ಕಡೆಗೆ ಓಡಿ ಓಡಿ ಬರುತ್ತಿತ್ತು. ನಾನು ಭಗವತಿಯ ಸಂಬಂಧವಾಗಿ ಹಾಡಿದಾಗಲೆಲ್ಲ, ಆತ ಪ್ರೇಮಾಶ್ರುವನ್ನು ಸುರಿಸುತ್ತ ಹೇಳುತ್ತಿದ್ದ, 'ಅಃ! ಏನಿದು?' ಅಂತ. ನೋಡಿ, ಆತ ಬಹಳ ಉಚ್ಚಮಟ್ಟದ ಜ್ಞಾನಿ; ಆದರೂ ಅತ್ತುಬಿಡುತ್ತಿದ್ದನಲ್ಲ! (ಚಿಕ್ಕ ನರೇನ ಮೊದಲಾದವರಿಗೆ) 'ಅಲೇಕ' ಎಂಬ ಬಳ್ಳಿಯ ರಸವನ್ನು ಕುಡಿದರೆ ಅದು ಹೊಟ್ಟೆಯಲ್ಲಿ ಗಿಡವಾಗಿ ಬೆಳೆಯುತ್ತದೆ ಎಂಬ ನಾಣ್ನುಡಿಯನ್ನು ಚೆನ್ನಾಗಿ ಜ್ಞಾಪಕದಲ್ಲಿ ಇಟ್ಟುಕೊಳ್ಳಿ. ಒಮ್ಮೆ ಭಕ್ತಿಯ ಬೀಜ ಹೃದಯಕ್ಕೆ ಬಿತ್ತು ಎಂದರೆ, ಅದು ಫಲಕಾರಿ ಆಗಲೇಬೇಕು. ಕ್ರಮೇಣ ಅದು ಮರವಾಗಿ ಬೆಳೆದು ಹೂವುಬಿಟ್ಟು ಫಲಕೊಡುತ್ತದೆ.

"ನೀನು ಯಥೇಷ್ಟವಾಗಿ ಜ್ಞಾನವಿಚಾರದಲ್ಲಿ ತೊಡಗಬಹುದು, ಆದರೆ ನಿನ್ನ ಅಂತರ್ಯದಲ್ಲಿ ಭಕ್ತಿಯ ಬೀಜವಿರುವುದಾದರೆ, ಮತ್ತೆ ಮತ್ತೆ ನಿನ್ನ ಮನಸ್ಸು ಹರಿಯ ಪಾದಪದ್ಮಗಳ ಕಡೆ ಓಡಿ ಓಡಿ ಬಂದುಬಿಡುತ್ತದೆ."

ಭಕ್ತರು ಪರಮಹಂಸರ ಬಾಯಿಂದ ಬಂದುದನ್ನೆಲ್ಲ ಕಿವಿಗೊಟ್ಟು ಕೇಳಿದರು. ಶ್ರೀರಾಮಕೃಷ್ಣರು ನಗುತ್ತ ನಗುತ್ತ ಮಹಿಮಚರಣನನ್ನು ಕೇಳುತ್ತಿದಾರೆ, "ನಿನಗೆ ಅತ್ಯಂತವಾಗಿ ರುಚಿಸೋದು ಯಾವುದು?" ಅಂತ.

ಮಹಿಮಚರಣ ನಗುತ್ತ: "ಬೇರೆ ಯಾವುದೂ ಇಲ್ಲ; ಮಾವಿನ ಹಣ್ಣು ಮಾತ್ರ ಚೆನ್ನಾಗಿ ರುಚಿಸುತ್ತದೆ."

ಶ್ರೀರಾಮಕೃಷ್ಣರು ನಗುತ್ತ: "ಎಲ್ಲವನ್ನೂ ನೀನೊಬ್ಬನೇ ತಿಂದು ಬಿಡುವೆಯೊ ಅಥವಾ ಉಳಿದವರಿಗೂ ಹಂಚಿ ತಿನ್ನುವೆಯೊ?"

ಮಹಿಮಚರಣ ನಗುತ್ತ: "ಎಲ್ಲರಿಗೂ ಹಂಚಿ ತಿನ್ನಬೇಕು ಎಂಬ ಆಕಾಂಕ್ಷೆ ಅಷ್ಟೊಂದಾಗೇನಿಲ್ಲ. ಒಬ್ಬನೇ ಎಲ್ಲವನ್ನೂ ತಿಂದುಬಿಟ್ಟರೂ ತಿಂದುಬಿಟ್ಟೆ."

ಶ್ರೀರಾಮಕೃಷ್ಣರು: "ನನ್ನ ಮನೋಭಾವವೇನು ಗೊತ್ತೆ? ನಾನು ನಿತ್ಯ ಲೀಲೆ ಎರಡನ್ನೂ ಸ್ವೀಕರಿಸುತ್ತೇನೆ. ಕಣ್ಣು ತೆರೆದು ನೋಡಿದರೆ ಭಗವಂತ ಹಾರಿಹೋಗಿಬಿಡುತ್ತಾನೆ ಅಂತಲೇನು? ಆತನ ಸಾಕ್ಷಾತ್ಕಾರ ದೊರೆತನಂತರ ಗೊತ್ತಾಗುತ್ತದೆ, ಆತನೇ ಸ್ವರಾಟನೂ ಹೌದು ವಿರಾಟನೂ ಹೌದು ಅಂತ. ಆತನೇ ಅಖಂಡಸಚ್ಚಿದಾನಂದನೂ ಆಗಿದಾನೆ. ಮತ್ತೆ ಆತನೇ ಜೀವಜಗತ್ತೂ ಆಗಿದಾನೆ.

"ಬರೀ ಶಾಸ್ತ್ರಾಧ್ಯಯನವೇ ಸಾಕಾಗದು, ಸಾಧನೆಯನ್ನೂ ಮಾಡಬೇಕು. ವಿದ್ಯಾಸಾಗರನ ಅಂತರ್ಯವನ್ನು ಒಳಹೊಕ್ಕು ನೋಡಿದೆ. ಆತ ದೊಡ್ಡ ವಿದ್ವಾಂಸನೇನೊ ಆಗಿದ್ದ, ಆದರೆ ತನ್ನ ಅಂತರ್ಯದಲ್ಲಿ ಏನಿದೆ ಎಂಬುದನ್ನು ಅರಿತುಕೊಂಡಿರಲಿಲ್ಲ. ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವುದರಲ್ಲೇ ಉತ್ಸಾಹಭರಿತನಾಗಿದ್ದ. ಭಗವದಾನಂದದ ಆಸ್ವಾದನೆ ಆತನಿಗೆ ದೊರೆತಿರಲಿಲ್ಲ. ಬರೀ ಪಾಂಡಿತ್ಯದಿಂದಲೆ ಆಗೋದೇನು? ಶಾಸ್ತ್ರಗಳ ಅನುಷ್ಠಾನವೆಲ್ಲಿ? ಪಂಚಾಂಗದಲ್ಲಿ ಬರೆದಿದೆ ಇಪ್ಪತ್ತು ಕೊಳಗ ಮಳೆ ಆಗುತ್ತೆ ಅಂತ; ಆದರೆ ಅದರ ಪುಟಗಳನ್ನು ಹಿಂಡಿನೋಡಿತು ಅಂದರೆ ಒಂದು ತೊಟ್ಟು ನೀರೂ ಕೆಳಕ್ಕೆ ಬೀಳದು."

ಮಹಿಮಚರಣ: "ಸಂಸಾರಿಗಳಿಗೆ ಅನೇಕ ಕೆಲಸಕಾರ್ಯಗಳು. ಸಾಧನೆಗೆ ಸಮಯವೆಲ್ಲಿ?"

ಶ್ರೀರಾಮಕೃಷ್ಣರು: "ಹಾಗೇಕೆ ಹೇಳುತ್ತೀಯೆ? ಈ ಜಗತ್ತು

ಸ್ವಪ್ನವತ್ ಅಂತ ನೀನೇ ಹೇಳುತ್ತೀಯಲ್ಲ.

"ತಮಗೆ ತಡೆಯಾಗಿ ಸಮುದ್ರ ನಿಂತಿರೋದನ್ನು ನೋಡಿ, ಲಕ್ಷ್ಮಣ ಕುಪಿತನಾಗಿ, ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದು ರಾಮನಿಗೆ ಹೇಳಿದ, 'ಈ ಸಮುದ್ರ ನಮ್ಮನ್ನು ಲಂಕೆಗೆ ಬಿಟ್ಟುಕೊಡುತ್ತಿಲ್ಲ. ನಾನು ವರುಣನನ್ನು ಕೊಂದೇಹಾಕಿಬಿಡುತ್ತೇನೆ' ಅಂತ. ರಾಮ ಆತನಿಗೆ ಬುದ್ಧಿವಾದ ವಿತ್ತ, 'ಹೇ ಲಕ್ಷ್ಮಣ, ನಿನ್ನ ದೃಷ್ಟಿಗೆ ಗೋಚರವಾಗುತ್ತಿರುವುದೆಲ್ಲ ಸ್ವಪ್ನವತ್ ಅನಿತ್ಯ. ಸಮುದ್ರವೂ ಅನಿತ್ಯ; ನಿನ್ನ ಕೋಪವೂ ಅನಿತ್ಯ; ಮಿಥ್ಯವನ್ನು ಮಿಥ್ಯದ ಮೂಲಕ ಕೊಂದುಹಾಕೋದೂ ಮಿಥ್ಯವೆ' ಅಂತ."

ಮಹಿಮಚರಣ ಸುಮ್ಮನೆ ಕುಳಿತುಕೊಂಡ. ಆತನಿಗೆ ಅನೇಕ ಕೆಲಸಕಾರ್ಯಗಳು. ಪರೋಪಕಾರಾರ್ಥವಾಗಿ ಒಂದು ಹೊಸ ಸ್ಕೂಲನ್ನು ತೆರೆದಿದಾನೆ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಒಮ್ಮೆ ಶಂಭುಮಲ್ಲಿಕ ನನಗೆ ಹೇಳಿದ, 'ನನ್ನಲ್ಲಿರೋ ಹಣವನ್ನು ಸತ್ಕಾರ್ಯಗಳಿಗೆ ಉಪಯೋಗಿಸಬೇಕೆಂದು ಸಂಕಲ್ಪಿಸಿದೇನೆ. ಸ್ಕೂಲು, ಡಿಸ್ಪೆನ್ಸರಿ, ರಸ್ತೆ, ಸ್ನಾನ-ಘಟ್ಟ ಇವೇ ಮೊದಲಾದುವುಗಳನ್ನು ನಿರ್ಮಿಸಬೇಕೆಂದಿದೇನೆ' ಅಂತ. ನಾನು ಹೇಳಿದೆ 'ನೀನು ಈ ಕಾರ್ಯಗಳನ್ನೆಲ್ಲ ನಿಷ್ಕಾಮಭಾವನೆಯಿಂದ ಮಾಡುವುದಾದರೇನೊ ಅದು ಬಹಳ ಒಳ್ಳೆಯದೆ, ಆದರೆ ಹಾಗೆ ಮಾಡೋದು ಬಹಳ ಕಠಿನ. ಯಾವ ಕಡೆಯಿಂದಲೊ ಕಾಮನೆ ನಮ್ಮ ಹೃದಯವನ್ನು ಹೊಕ್ಕಿ ಬಿಡುತ್ತದೆ. ನಿನಗೊಂದು ಪ್ರಶ್ನೆ ಹಾಕಬೇಕೆಂದಿದೇನೆ. ಒಂದು ಪಕ್ಷ ನಿನ್ನ ಎದುರು ಭಗವಂತ ಬಂದು ನಿಲ್ಲೋದಾದರೆ, ಆತನನ್ನು ಕೆಲವು ಸ್ಕೂಲು, ಡಿಸ್ಪೆನ್ಸರಿ, ಆಸ್ಪತ್ರೆ ಇವುಗಳಿಗಾಗಿ ಪ್ರಾರ್ಥನೆಮಾಡಿಕೊಳ್ಳುತ್ತೀಯಾ?' ಅಂತ."

ಒಬ್ಬ ಭಕ್ತ: "ಮಹಾಶಯರೆ, ಸಂಸಾರಿಗಳಿಗೆ ಉಪಾಯವೇನು?"

ಶ್ರೀರಾಮಕೃಷ್ಣರು: "ಸಾಧು ಸಂಗ ಮಾಡುತ್ತಿರಬೇಕು; ಆಧ್ಯಾತ್ಮಿಕ ವಿಷಯಗಳನ್ನು ಸತತ ಕೇಳುತ್ತಿರಬೇಕು. ಅವರು ಕಾಮಕಾಂಚನದ ಮತ್ತಿನಿಂದ ಉನ್ಮತ್ತರಾಗಿದಾರೆ. ಉನ್ಮತ್ತನಿಗೆ ಅಕ್ಕಿ ತೊಳೆದ ನೀರನ್ನು ಸ್ವಲ್ಪ ಸ್ವಲ್ಪವಾಗಿ ಕೊಡುತ್ತ ಕೊಡುತ್ತ ಬಂದ ಹಾಗೆ ಕ್ರಮಕ್ರಮೇಣ ಸರಿಯಾದ ಪ್ರಜ್ಞೆಯುಂಟಾಗಿಬಿಡುತ್ತದೆ.

"ಸಂಸಾರಿ ಸದ್ಗುರುವಿನಿಂದ ಉಪದೇಶ ಪಡೆಯಬೇಕು. ಸದ್ಗುರು

ವಿಗೆ ಲಕ್ಷಣಗಳಿವೆ. ಯಾರು ಕಾಶಿಗೆ ಹೋಗಿ ಅದನ್ನು ಚೆನ್ನಾಗಿ ನೋಡಿ ಬಂದಿರುವರೊ, ಅವರಿಂದ ಕಾಶಿ ವಿಷಯವಾಗಿ ಕೇಳಿ ತಿಳಿದುಕೋಬೇಕು. ಬರೀ ಪುಸ್ತಕ ಪಾಂಡಿತ್ಯ ಯಾವ ಪ್ರಯೋಜನಕ್ಕೂ ಬರದು. ಯಾರಿಗೆ ಈ ಸಂಸಾರ ಅನಿತ್ಯ ಎಂಬ ಬೋಧೆಯಾಗಿಲ್ಲವೊ, ಅಂಥ ಪಂಡಿತನಿಂದ ಉಪದೇಶ ಸ್ವೀಕರಿಸೋದು ಯುಕ್ತವಾದುದಲ್ಲ. ಪಂಡಿತ ವಿವೇಕ ವೈರಾಗ್ಯ ಸಂಪನ್ನನಾಗಿದ್ದರೆ ತಾನೆ ಆತ ಉಪದೇಶಕೊಡಲರ್ಹನಾಗುತ್ತಾನೆ.

"ಸಮಾಧ್ಯಾಯಿ ಹೇಳಿದ, 'ಭಗವಂತ ನೀರಸ' ಅಂತ. ಯಾರು ರಸಸ್ವರೂಪನೊ ಆತನನ್ನು ನೀರಸ ಅಂತ ಹೇಳೋದು! ಒಬ್ಬ ಹೇಳಿದ ನಂತೆ, 'ನಮ್ಮ ಸೋದರಮಾವನ ಕೊಟ್ಟಿಗೆ ತುಂಬ ಕುದುರೆಗಳು ಇವೆ!' ಅಂತ. ಇದೂ ಹಾಗೇನೆ. (ಎಲ್ಲರೂ ನಗುತ್ತಿದಾರೆ.)

"ಸಂಸಾರಿ ಉನ್ಮಾದಾವಸ್ಥೆಯಲ್ಲಿ ಇರುತ್ತಾನೆ. ಯಾವಾಗ ನೋಡಿ ದರೂ ತನಗೆ ತಾನೇ ಹೇಳಿಕೊಳ್ಳುತ್ತಿರುತ್ತಾನೆ, 'ಪ್ರತಿಯೊಂದನ್ನೂ ಮಾಡೋನು ನಾನೆ. ಮನೆ ಮಠ ಕುಟುಂಬ ಎಲ್ಲವೂ ನನಗೆ ಸೇರಿದುವೆ' ಅಂತ. ಹಲ್ಲುಬಿಟ್ಟುಕೊಂಡು ಹೇಳುತ್ತಾನೆ, ಇವರ (ಹೆಂಡತಿ ಮಕ್ಕಳ) ಗತಿಯೇನು? ನಾನಿಲ್ಲದಿದ್ದರೆ ಇವರನ್ನು ನೋಡಿಕೊಳ್ಳೋರಾರು? ಇವರ ಜೀವನ ನಡೆಯೋ ಬಗೆ ಹೇಗೆ?' ಅಂತ. ಒಂದು ದಿನ ರಾಖಾಲ ಹೇಳಿದ, 'ನನ್ನ ಹೆಂಡತಿ ಗತಿಯೇನು?' ಅಂತ."

ಹರಮೋಹನ: "ರಾಖಾಲ ಹಾಗೆ ಹೇಳಿದನೇನು?"

ಶ್ರೀರಾಮಕೃಷ್ಣರು: "ಆತ ಹಾಗೆ ಹೇಳದೆ ಮತ್ತೇನು ಮಾಡಿ ಯಾನು? ಯಾರಲ್ಲಿ ಜ್ಞಾನವಿರುತ್ತದೆಯೊ ಅವರಲ್ಲಿ ಅಜ್ಞಾನವೂ ಇರು ತ್ತದೆ. ಲಕ್ಷ್ಮಣ ರಾಮನಿಗೆ ಹೇಳಿದ, 'ಹೇ ರಾಮ, ಏನಾಶ್ಚರ್ಯ! ಪುತ್ರ ಶೋಕದಿಂದ ಅಂಥ ವಸಿಷ್ಠಋಷಿಯೂ ನರಳುತ್ತಿದಾನಲ್ಲ!' ಅಂತ. ರಾಮ ಹೇಳಿದ, 'ಸೋದರ, ಯಾರಲ್ಲಿ ಜ್ಞಾನವಿರುವುದೊ ಅವರಲ್ಲಿ ಅಜ್ಞಾನವೂ ಇರುತ್ತದೆ. ಆದ್ದರಿಂದ ನೀನು ಜ್ಞಾನಾಜ್ಞಾನಗಳನ್ನು ದಾಟಿಹೋಗು' ಅಂತ.

"ಯಾರ ಕಾಲಿಗೇ ಆಗಲಿ ಒಂದು ಮುಳ್ಳು ಚುಚ್ಚಿಕೊಂಡರೆ, ಅದನ್ನು ತೆಗೆದು ಹಾಕಲು ಅವರು ಬೇರೊಂದು ಮುಳ್ಳನ್ನು ಹುಡುಕಿ ತಂದು, ಅದರ ಸಹಾಯದಿಂದ ಅದನ್ನು ತೆಗೆದುಹಾಕಿ, ಬಳಿಕ ಎರಡು ಮುಳ್ಳನ್ನೂ ಬಿಸಾಡಿಬಿಡುತ್ತಾರೆ. ಅಜ್ಞಾನವೆಂಬ ಮುಳ್ಳನ್ನು ತೆಗೆದು

ಹಾಕಲು ಜ್ಞಾನವೆಂಬ ಮುಳ್ಳನ್ನು ಉಪಯೋಗಿಸಬೇಕು. ಬಳಿಕ ಎರಡು ಮುಳ್ಳನ್ನೂ ಬಿಸಾಡಿಬಿಟ್ಟರೆ ವಿಜ್ಞಾನ ದೊರೆಯುತ್ತದೆ. ಭಗವಂತನಿದಾನೆ ಎಂಬುದನ್ನು ತಿಳಿದು, ಆತನನ್ನು ವಿಶೇಷರೂಪದಿಂದ ಸಾಕ್ಷಾತ್ಕಾರಮಾಡಿ ಕೊಂಡು, ಆತನೊಡನೆ ವಿಶೇಷರೂಪದಿಂದ ಬೆರೆಯಬೇಕು. ಇದಕ್ಕೇನೆ 'ವಿಜ್ಞಾನ' ಅಂತ ಹೆಸರು. ಈ ಕಾರಣದಿಂದಲೆ ಶ್ರೀಕೃಷ್ಣ ಅರ್ಜುನನಿಗೆ ಹೇಳಿದುದು, 'ತ್ರಿಗುಣಾತೀತನಾಗು' ಅಂತ.

"ಈ ವಿಜ್ಞಾನವನ್ನು ಪಡೆಯಲೋಸುಗ ವಿದ್ಯಾಮಾಯೆಯನ್ನು ಆಶ್ರಯಿಸಬೇಕಾಗುತ್ತದೆ. ಭಗವಂತನೊಬ್ಬನೆ ಸತ್ಯ, ಜಗತ್ತು ಅನಿತ್ಯ ಎಂಬ ವಿಚಾರ— ಅಂದರೆ ವಿವೇಕ ವೈರಾಗ್ಯ. ಭಗವಂತನ ನಾಮಗುಣ ಕೀರ್ತನೆ, ಧ್ಯಾನ, ಸಾಧುಸಂಗ, ಪ್ರಾರ್ಥನೆ ಇವೆಲ್ಲ ವಿದ್ಯಾಮಾಯೆಯ ಎಲ್ಲೆಯೊಳಗೇ ಇವೆ. ಚಾವಣಿಯನ್ನು ಮುಟ್ಟೋ ಮುನ್ನ ಸಿಗೋ ಕೊನೆಯ ಕೆಲವು ಮೆಟ್ಟಿಲುಗಳಿಗೆ ವಿದ್ಯಾಮಾಯೆಯನ್ನು ಹೋಲಿಸಬಹುದು. ಅವನ್ನು ಹತ್ತಿದೊಡನೆಯೇ ಚಾವಣಿ— ಭಗವಂತನ ಸಾಕ್ಷಾತ್ಕಾರ.

"ಪ್ರಾಪಂಚಿಕರು ಕಾಮಕಾಂಚನದಿಂದ ಮತ್ತರಾಗಿದಾರೆ; ಆಧ್ಯಾತ್ಮಿಕ ಭಾವನೆಗಳು ಆವರ ತಲೆಯನ್ನು ಹೊಗವು. ಅದಕ್ಕಾಗಿಯೆ ನನಗೆ ಯುವಕರನ್ನು ಕಂಡರೆ ಬಲು ಪ್ರೀತಿ. ಅವರ ಅಂತರ್ಯವನ್ನು ಕಾಮ ಕಾಂಚನ ಇನ್ನೂ ಹೊಕ್ಕಿಲ್ಲೋದಿಲ್ಲ. ಅವರು ಒಳ್ಳೆಯ ಪಾತ್ರೆ: ಭಗ ವಂತನ ಕೆಲಸಕಾರ್ಯಗಳಿಗೆ ಒದಗಬಹುದು. ಆದರೆ ಪ್ರಾಪಂಚಿಕರ ಅಂತರ್ಯದಲ್ಲಿರೋ ಕೆಲಸಕ್ಕೆ ಬಾರದ ವಸ್ತುಗಳನ್ನು ಬೇರ್ಪಡಿಸುತ್ತಾ ಹೋಯಿತು ಅಂದರೆ ಕೊನೆಗೆ ಅವರ ಅಂತರ್ಯವೇ ಖಾಲಿಯಾಗಿಬಿಡು ತ್ತದೆ. ಅವರನ್ನು ಒಂದು ವಿಧದ ಮೂಳೆ ಪ್ರಾಧಾನ್ಯವಾಗಿರೋ ಮೀನಿಗೆ ಹೋಲಿಸಬಹುದು. ಅದರಲ್ಲಿರೋ ಮಾಂಸದ ಭಾಗ ಅಷ್ಟು ಅಲ್ಪ, ಮಾಂಸ ಇಲ್ಲ ಅಂತಲೇ ಬೇಕಾದರೆ ಹೇಳಬಹುದು."

ಒಬ್ಬ ಥಿಯಾಸೊಫಿ ಅನುಯಾಯಿ, ಅಶ್ವಿನಿಕುಮಾರದತ್ತ ಮತ್ತು ಬಿಹಾರಿಬಾದೂರಿಯ ಮಗ ಇವರೊಡನೆ ಅಲ್ಲಿಗೆ ಬಂದ. ಮುಖರ್ಜಿ ಸೋದರರು ಬಂದು ಪರಮಹಂಸರಿಗೆ ಪ್ರಣಾಮಮಾಡಿದರು. ಸಂಕೀರ್ತನೆ ಅಂಗಳದಲ್ಲಿ ನಡೆಯೋ ಹಾಗೆ ವ್ಯವಸ್ಥೆ ಆಗಿದೆ. ಮೃದಂಗದ ಶಬ್ದ ಕೇಳಿ ದೊಡನೆಯೆ ಪರಮಹಂಸರು ಅಂಗಳಕ್ಕೆ ಹೋಗಿ ಕುಳಿತುಕೊಂಡರು. ಭಕ್ತರು ಅವರ ಸುತ್ತಲೂ ಕುಳಿತುಕೊಂಡಿದಾರೆ.

ಭವನಾಥ ಪರಮಹಂಸರಿಗೆ ಅಶ್ವಿನಿಕುಮಾರನ ಪರಿಚಯ ಮಾಡಿಕೊಟ್ಟ. ಪರಮಹಂಸರು ಮಾಸ್ಟರಿಗೆ ಆತನ ಪರಿಚಯಮಾಡಿಕೊಟ್ಟರು. ಬಳಿಕ ಮಾಸ್ಟರ್ ಮತ್ತು ಅಶ್ವಿನಿಕುಮಾರದತ್ತ ಮಾತುಕತೆಗಳಾಡಲಾರಂಭಿಸಿದರು. ಈಗ ನರೇಂದ್ರನೂ ಅಲ್ಲಿಗೆ ಬಂದು ಕುಳಿತುಕೊಂಡಿದ್ದಾನೆ. ಪರಮಹಂಸರು ಅಶ್ವಿನಿಕುಮಾರನಿಗೆ ಹೇಳಿದರು, "ಈತನ ಹೆಸರೇ ನರೇಂದ್ರ" ಅಂತ.

೧೩ ನೆ ಜೂನ್ ೧೮೮೫, ಜ್ಯೇಷ್ಠ ಶುಕ್ಲ ಪಾಡ್ಯಮಿ, ಶನಿವಾರ.

ಘಂಟೆ ಮೂರರ ಹತ್ತಿರ. ಮಧ್ಯಾಹ್ನದ ಊಟ ಮುಗಿಸಿಕೊಂಡು ಪರಮಹಂಸರು ತಮ್ಮ ಕೊಠಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾರೆ. ಒಬ್ಬ ಪಂಡಿತ ನೆಲದ ಮೇಲೆ ಹಾಸಿದ್ದ ಮಂದಲಿಗೆ ಮೇಲೆ ಕುಳಿತಿದ್ದಾನೆ. ತನ್ನ ಏಕಮಾತ್ರ ಪುತ್ರಿಯನ್ನು ಕಳೆದುಕೊಂಡು ಶೋಕಾನ್ವಿತಳಾಗಿರೋ ಒಬ್ಬ ಹೆಂಗಸು ಕೊಠಡಿಯ ಉತ್ತರದ ಬಾಗಿಲ ಹತ್ತಿರ ನಿಂತಿದ್ದಾಳೆ. ಕಿಶೋರಿ ಕೊಠಡಿಯಲ್ಲಿ ಕುಳಿತಿದ್ದಾನೆ. ಮಾಸ್ಟರ್, ದ್ವಿಜ ಮೊದಲಾದವರೊಡನೆ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿದ.

ಪರಮಹಂಸರಿಗೆ ದೇಹಾರೋಗ್ಯ ಸರಿಯಾಗಿಲ್ಲ. ಅವರು ಗಂಟಲು ನೋವಿನಿಂದ ನರಳುತ್ತಿದ್ದಾರೆ. ಬೇಸಿಗೆಕಾಲವಾಗಿರೋದರಿಂದ ಮಾಸ್ಟರ ದೇಹಾರೋಗ್ಯವೂ ಸರಿಯಾಗಿಲ್ಲ. ಈಗ ಸ್ವಲ್ಪ ದಿವಸಗಳಿಂದ ಆಗಾಗ ಬಂದು ಪರಮಹಂಸರ ದರ್ಶನ ಪಡೆಯಲು ಆತನಿಗೆ ಸಾಧ್ಯವಾಗುತ್ತಿಲ್ಲ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಓ, ಬಂದೆಯಾ. ನೀನು ಕಳುಹಿಸಿದ ಬೇಲದ ಹಣ್ಣು ಬಹಳ ಚೆನ್ನಾಗಿತ್ತು. ಈಗ ನಿನ್ನ ಆರೋಗ್ಯ ಹೇಗೆ?"

ಮಾಸ್ಟರ್: "ಈಗ ಸ್ವಲ್ಪ ಮೇಲು."

ಶ್ರೀರಾಮಕೃಷ್ಣರು: "ಧಗೆ ಹೆಚ್ಚಿಬಿಟ್ಟಿದೆ. ಆಗಾಗ ಸ್ವಲ್ಪ ಐಸನ್ನು ತಿನ್ನು. ಸೆಕೆ ಹೆಚ್ಚಾಗಿಬಿಟ್ಟಿರೋದರಿಂದ ನನಗೂ ಕಷ್ಟವಾಗುತ್ತಿದೆ; ಅದಕ್ಕಾಗೇ ಐಸ್‌ಕ್ರೀಮನ್ನು ತಿಂದೆ. ಅದರ ಫಲವಾಗಿ ನನಗೆ ಗಂಟಲಿನಲ್ಲಿ ಹುಣ್ಣು ಆಗಿಬಿಟ್ಟಿದೆ. ಉಗುಳು ದುರ್ವಾಸನೆ ಕೊಡುತ್ತಿದೆ.

"ಭಗವತಿಗೆ ಹೇಳಿದೆ, 'ನನ್ನ ಆರೋಗ್ಯವನ್ನು ಸರಿಪಡಿಸಿಬಿಡು. ಇನ್ನು ಮುಂದೆ ಐಸ್‌ಕ್ರೀಮನ್ನು ತಿನ್ನೋಕೆ ಹೋಗೋದಿಲ್ಲ' ಅಂತ. ಮತ್ತೆ ಐಸನ್ನೂ ತಿನ್ನೋದಿಲ್ಲ ಅಂತ ಹೇಳಿಬಿಟ್ಟೆ. ನಾನು ಆ ರೀತಿಯಾಗಿ

ತಾಯಿಗೆ ವಾಗ್ದಾನಮಾಡಿಬಿಟ್ಟಿರೋದರಿಂದ ನಾನು ಇನ್ನೆಂದಿಗೂ ಅವನ್ನು ತಿನ್ನಲು ಹೋಗೆನು. ಆದರೆ ಕೆಲವು ವೇಳೆ ನನಗೆ ಮರವು ಬಂದುಬಿಡುತ್ತದೆ. ಭಾನುವಾರ ಮೀನು ತಿನ್ನೋದಿಲ್ಲ ಅಂತ ನಾನು ತಿಳಿಸಿದ್ದೆ; ಆದರೆ ಒಂದು ಭಾನುವಾರ ಮರೆತು ತಿಂದುಬಿಟ್ಟೆ. ಉದ್ದೇಶಪೂರ್ವಕವಾಗಿ ಹಾಗೆಂದಿಗೂ ಮಾಡಲಾರೆ. ಅಂದು ನಾನು ಒಬ್ಬನಿಗೆ ದೇವದಾರು ವೃಕ್ಷಗಳ ಕಡೆಗೆ ಕಾಲುತಂಬಿಗೆ ತರುವಂತೆ ಹೇಳಿದ್ದೆ. ಆತ ಎಲ್ಲಿಗೊ ಹೋಗಿದ್ದುದರಿಂದ ಬೇರೊಬ್ಬ ಅದನ್ನು ಅಲ್ಲಿಗೆ ತಂದ. ನಾನು ಅದನ್ನು ಉಪಯೋಗಿಸಲಾಗಲಿಲ್ಲ. ಬೇರೆ ವಿಧಿಯೇ ಇಲ್ಲದೆ ನಾನು ಯಾರಿಗೆ ಮೊದಲು ಹೇಳಿದ್ದೆನೊ ಆತನೇ ಬಂದು ನೀರು ತರೋವರೆಗೆ ಹಾಗೆಯೇ ನಿಂತಿದ್ದೆ.

"ಭಗವತಿಯ ಪಾದಪದ್ಮಗಳಿಗೆ ಹೂವನ್ನು ಅರ್ಪಿಸುವುದರ ಮೂಲಕ ನಾನು ನನ್ನ ಸರ್ವಸ್ವವನ್ನು ಭಗವತಿಗೆ ಅರ್ಪಿಸಿಬಿಟ್ಟಾಗ ಆಕೆಗೆ ಪ್ರಾರ್ಥನೆ ಮಾಡಿದೆ, 'ಹೇ ತಾಯೆ, ಇಗೋ ತೆಗೆದುಕೊ ನಿನ್ನ ಶುಚಿಯನ್ನು, ಇಗೋ ತೆಗೆದುಕೊ ನಿನ್ನ ಅಶುಚಿಯನ್ನು; ಇಗೋ ತೆಗೆದುಕೊ ನಿನ್ನ ಧರ್ಮವನ್ನು, ಇಗೋ ತೆಗೆದುಕೊ ನಿನ್ನ ಅಧರ್ಮವನ್ನು; ಇಗೋ ತೆಗೆದುಕೊ ನಿನ್ನ ಪಾಪವನ್ನು, ಇಗೋ ತೆಗೆದುಕೊ ನಿನ್ನ ಪುಣ್ಯವನ್ನು; ಇಗೋ ತೆಗೆದುಕೊ ನಿನ್ನ ಒಳ್ಳೆಯದನ್ನು, ಇಗೋ ತೆಗೆದುಕೊ ನಿನ್ನ ಕೆಟ್ಟದ್ದನ್ನು. ನನಗೆ ಶುದ್ಧ ಭಕ್ತಿಯನ್ನು ಕೊಡು' ಅಂತ. ಆದರೆ, 'ಹೇ ತಾಯೆ, ಇಗೋ ನಿನ್ನ ಸತ್ಯವನ್ನು ತೆಗೆದುಕೊ, ಇಗೋ ನಿನ್ನ ಮಿಥ್ಯವನ್ನು ತೆಗೆದುಕೊ' ಅಂತ ಪ್ರಾರ್ಥನೆ ಮಾಡಲಾಗಲಿಲ್ಲ."

ಒಬ್ಬ ಭಕ್ತ ಐಸ್ ತಂದಿದಾನೆ. ಮತ್ತೆ ಮತ್ತೆ ಪರಮಹಂಸರು ಮಾಸ್ಟರನ್ನು ಕೇಳಿದರು, "ತಿನ್ನಲೇನು?" ಅಂತ.

ಮಾಸ್ಟರ್ ವಿನಯದಿಂದ ಹೇಳಿದ, "ಭಗವತಿಯ ಅನುಜ್ಞೆಯನ್ನು ಪಡೆಯದೆ ತಿನ್ನಬೇಡಿ" ಅಂತ. ಕಟ್ಟಕಡೆಗೆ ಪರಮಹಂಸರಿಗೆ ಅದನ್ನು ತಿನ್ನಲಾಗಲಿಲ್ಲ.

ಶ್ರೀರಾಮಕೃಷ್ಣರು: "ಇದು ಶುಚಿ ಅದು ಅಶುಚಿ ಅಂತ ವಿವೇಚಿಸುವವರು ಭಕ್ತರೇ ವಿನಾ ಜ್ಞಾನಿಗಳಲ್ಲ. ವಿಜಯನ ಅತ್ತೆ ನನಗೆ ಹೇಳಿದಳು, 'ಎಲ್ಲಿ, ನಾನು ಅಧ್ಯಾತ್ಮಜೀವನದಲ್ಲಿ ಮುಂದುವರಿದಿರುವುದೆಲ್ಲಿ? ಈಗಲೂ ಎಲ್ಲರ ಕೈಯಿಂದಲೂ ಊಟಮಾಡಲಾರೆ!' ಅಂತ. ನಾನು ಹೇಳಿದೆ, 'ಎಲ್ಲರ ಕೈಯಿಂದಲೂ ಅನ್ನ ತಿಂದಾಕ್ಷಣಕ್ಕೆ ಜ್ಞಾನ ದೊರೆತುಬಿಡುವುದೆ?

ನಾಯಿ ಸಿಕ್ಕಿಸಿಕ್ಕಿದುದನ್ನೆಲ್ಲ ತಿಂದುಬಿಡುತ್ತದೆ; ಹಾಗೆಂದು ಅದು ಜ್ಞಾನಿಯಾಗಿಬಿಡುವುದೆ?' ಅಂತ.

(ಮಾಸ್ಟರಿಗೆ) "ನಾನು ವಿವಿಧ ಭೋಜ್ಯಗಳನ್ನು ತಿನ್ನುತ್ತಿರುವುದೇಕೆ? ಒಂದೇ ರಾಗವನ್ನು ಊದೋನಹಾಗೆ ಆಗದೆ ಇರಲು. ಅಂಥವನಾದರೆ ಭಕ್ತರು ನನ್ನನ್ನು ಸಮೀಪಿಸೋ ಹಾಗೆಯೇ ಇಲ್ಲದಂತಾಗುತ್ತದೆ.

"ನಾನು ಕೇಶವಸೇನನಿಗೆ ಹೇಳಿದೆ, 'ಇನ್ನೂ ಉಚ್ಚ ಮಟ್ಟದ ದೃಷ್ಟಿಯಿಂದ ನಿನಗೆ ತಿಳುವಳಿಕೆ ಕೊಡುವುದಾದರೆ, ನಿನ್ನ ದಳ-ಗಿಳಗಳೊಂದೂ ಬದುಕವು. ಜ್ಞಾನಾವಸ್ಥೆಯ ದೃಷ್ಟಿಯಿಂದ ದಳ-ಗಿಳಗಳೆಲ್ಲ ಸ್ವಪ್ನದೋಪಾದಿಯಲ್ಲಿ ಮಿಥ್ಯಾ' ಅಂತ.

"ಒಂದು ಕಾಲದಿಂದ ನಾನು ಮೀನು ತಿನ್ನೋದನ್ನು ಬಿಟ್ಟುಬಿಟ್ಟೆ. ಮೊದಲು ಮೊದಲು ಸ್ವಲ್ಪ ಕಾಲ ಕಷ್ಟವಾಗಿ ಕಂಡಿತು; ಬಳಿಕ ಅಷ್ಟು ಕಷ್ಟವಾಗಿ ಏನೂ ತೋರಿಬರಲಿಲ್ಲ. ಹಕ್ಕಿಯ ಗೂಡನ್ನು ಸುಟ್ಟುಹಾಕಿಬಿಟ್ಟರೆ ಅದು ಅದರ ಸುತ್ತಲೂ ಸ್ವಲ್ಪ ಹೊತ್ತು ಹಾರಾಡುತ್ತದೆ; ಆ ಬಳಿಕ ಅದು ಆಕಾಶಕ್ಕೆ ಹಾರಿಹೋಗುತ್ತದೆ. ದೇಹ, ಜಗತ್ತು ಮಿಥ್ಯಾ ಎಂಬ ಬೋಧೆ ಬಂದುಬಿಟ್ಟರೆ, ಆಗ ಆತ್ಮ ಸಮಾಧಿಸ್ಥವಾಗುತ್ತದೆ.

"ಹಿಂದೆ ನನಗೆ ಜ್ಞಾನಿಯ ಅವಸ್ಥೆ ಬಂದಿತ್ತು. ಜನರ ಸಹವಾಸ ಆಗ ನನಗೆ ರುಚಿಸುತ್ತಿರಲಿಲ್ಲ. ಹಾಟ್ಖೋಲ ಎಂಬ ಜಾಗದಲ್ಲಿ ಯಾರೊ ಒಬ್ಬ ಜ್ಞಾನಿ, ಯಾರೊ ಒಬ್ಬ ಭಕ್ತ ಇದಾರೆ ಅಂತ ಆಗ ಕೇಳಿದ್ದೆ; ಆದರೆ ಸ್ವಲ್ಪ ದಿವಸಗಳೊಳಗಾಗಿಯೆ ಆಗ ಯಾರೊ ಹೇಳಿದರು ಅವರು ಸತ್ತುಹೋದರು ಅಂತ. ಎಲ್ಲವೂ ಅನಿತ್ಯವಾಗಿ ಕಂಡುಬಂದಿತು; ಅದಕ್ಕಾಗಿ ನನಗೆ ಜನರ ಸಹವಾಸ ಆಗ ರುಚಿಸುತ್ತಿರಲಿಲ್ಲ. ಬಳಿಕ ಭಗವತಿ ನನ್ನ ಮನಸ್ಸನ್ನು ಕೆಳಗಿನ ಅಂತಸ್ತಿಗೆ ಇಳಿಸಿದಳು; ಭಕ್ತಿ ಭಕ್ತರ ಕಡೆ ಮನಸ್ಸು ಹರಿಯುವಂತೆ ಮಾಡಿದಳು."

ಈಗ ಪರಮಹಂಸರು ಭಗವಂತ ಮಾನವ ರೂಪನ್ನು ಧರಿಸಿ ಏಕೆ ಅವತರಿಸಿಬರುತ್ತಾನೆ ಎಂಬುದರ ವಿಷಯವಾಗಿ ಮಾತಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಭಗವಂತ ಮಾನವ ರೂಪಿನಲ್ಲಿ ಏಕೆ ಅವತರಿಸಿಬರುತ್ತಾನೆ ಎಂಬುದು ನಿನಗೆ ಗೊತ್ತೆ? ಭಗವದ್ವಾಣಿಯನ್ನು ಈ ಮಾನವ ಶರೀರದ ಮೂಲಕ ಕೇಳಲು ಸಾಧ್ಯವಾಗೋದರಿಂದ. ಅವತಾರದ ಮೂಲಕ ಆತ ವಿಲಾಸದಲ್ಲಿ ತೊಡಗುತ್ತಾನೆ; ಅದರ ಮೂಲಕ

ಆತ ರಸಾಸ್ವಾದನೆ ಮಾಡುತ್ತಾನೆ. ಆದರೆ ಆತ ತನ್ನ ಉಳಿದ ಭಕ್ತರ ಮೂಲಕ ಎಲ್ಲೋ ಅಲ್ಪವಾಗಿ ಮಾತ್ರ ತನ್ನ ವೈಭವವನ್ನು ಪ್ರಕಾಶಗೊಳಿಸುತ್ತಾನೆ. ಬಹಳವಾಗಿ ಚೀಪಿದನಂತರ ಒಂದು ತೊಟ್ಟು ರಸ ಸಿಕ್ಕೋ ವಸ್ತುಗಳಿಗೆ ಇವರನ್ನು ಹೋಲಿಸಬಹುದು. ಉದಾಹರಣೆಗೆ ಹೂವು: ಎಷ್ಟೋ ಚೀಪಿದನಂತರ ಒಂದು ತೊಟ್ಟು ಮಧು ದೊರೆಯುತ್ತದೆ. (ಮಾಸ್ಟರಿಗೆ) ಅರ್ಥವಾಯಿತೇನು?"

ಮಾಸ್ಟರ್: "ಬಹಳ ಚೆನ್ನಾಗಿ."

ಪರಮಹಂಸರು ದ್ವಿಜನೊಡನೆ ಮಾತುಕತೆಯಾಡಲಾರಂಭಿಸಿದರು. ಆತನಿಗೆ ವಯಸ್ಸು ಹದಿನೈದೊ ಅಥವಾ ಹದಿನಾರೊ. ಆತನ ತಂದೆ ಎರಡನೆ ಸಲ ಮದುವೆಯಾಗಿದಾನೆ. ದ್ವಿಜ ಆಗಿಂದಾಗ್ಗೆ ಮಾಸ್ಟರೊಡನೆ ದಕ್ಷಿಣೇಶ್ವರಕ್ಕೆ ಬರೋ ವಾಡಿಕೆ. ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿಸುತ್ತಿದಾರೆ. ಆ ಹುಡುಗ ಹೇಳಿದ, ಅವನು ದಕ್ಷಿಣೇಶ್ವರಕ್ಕೆ ಬರೋದು ಆತನ ತಂದೆಗೆ ಇಚ್ಛೆಯಿಲ್ಲ ಅಂತ.

ಶ್ರೀರಾಮಕೃಷ್ಣರು: "ನಿನ್ನ ಸಹೋದರರಿಗೂ? ಅವರೂ ನನ್ನನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಿರುವರೇನು?"

ದ್ವಿಜ ಯಾವ ಉತ್ತರವನ್ನೂ ಕೊಡದೆ ಸುಮ್ಮನೆ ಕುಳಿತಿದ್ದ.

ಮಾಸ್ಟರ್ ಶ್ರೀರಾಮಕೃಷ್ಣರಿಗೆ: "ಸಂಸಾರದ ಒಂದೆರಡು ಬಲವಾದ ಪೆಟ್ಟು ಬಿದ್ದಿತೆಂದರೆ ಅವರು ನೇರ ಆಗಿಬಿಡುತ್ತಾರೆ."

ಶ್ರೀರಾಮಕೃಷ್ಣರು ದ್ವಿಜನ ಸಹೋದರರ ಸಂಬಂಧವಾಗಿ: "ಅವರ ಯೋಗಕ್ಷೇಮ ನೋಡಿಕೊಳ್ಳೋಳು ಅವರ ಮಲತಾಯಿ. ಆದ್ದರಿಂದ ಅವರಿಗೆ ಏಟು ಆಗಲೇ ಬೀಳುತ್ತಿದೆ."

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಕುಳಿತಿದ್ದರು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈತನಿಗೆ (ದ್ವಿಜನಿಗೆ) ಒಮ್ಮೆ ಪೂರ್ಣನ ಪರಿಚಯ ಮಾಡಿಕೊಡು."

ಮಾಸ್ಟರ್: "ಆಗಲಿ. (ದ್ವಿಜನಿಗೆ) ನೀನು ಪಾನಿಹಾಟಿಗೆ ಹೋಗಿ ಬಾ."

ಶ್ರೀರಾಮಕೃಷ್ಣರು: "ಇವನ್ನ ಅಲ್ಲಿಗೆ ಕಳುಹಿಸು, ಅವನ್ನೂ ಅಲ್ಲಿಗೆ ಕಳುಹಿಸು ಅಂತ ನಾನು ಪ್ರತಿಯೊಬ್ಬರಿಗೂ ಹೇಳುತ್ತಲಿದೇನೆ. (ಮಾಸ್ಟರಿಗೆ) ನೀನು ಅಲ್ಲಿಗೆ ಹೋಗೋದಿಲ್ಲವೇನು?"

ಪರಮಹಂಸರು ಪಾನಿಹಾಟಿಯ ಮಹೋತ್ಸವಕ್ಕೆ ಹೋಗಲಿದಾರೆ; ಅದಕ್ಕಾಗೇ ಭಕ್ತರಿಗೂ ಅಲ್ಲಿಗೆ ಹೋಗಲು ಹೇಳುತ್ತಿದಾರೆ.

ಮಾಸ್ಟರ್ : "ಹೋಗಬೇಕು ಅಂತ ಇಚ್ಛೆ ಇದೆ."

ಶ್ರೀರಾಮಕೃಷ್ಣರು: "ಒಂದು ದೊಡ್ಡ ದೋಣಿಯನ್ನೇ ಗೊತ್ತು ಮಾಡೋಣ; ಅದು ಕೆಳಕ್ಕು ಮೇಲಕ್ಕು ಹೊಯ್ದಾಡದು. ಗಿರೀಶಘೋಷ ಅಲ್ಲಿಗೆ ಬರುವನೇ?"

ಪರಮಹಂಸರು ದ್ವಿಜನ ಕಡೆಗೆ ದೃಷ್ಟಿಸಿನೋಡುತ್ತಿದಾರೆ.

ಶ್ರೀರಾಮಕೃಷ್ಣರು: "ಈ ನಗರದಲ್ಲಿ ಬೇಕಾದಷ್ಟು ಯುವಕರಿದಾರೆ; ಆದರೆ ಈತ ಮಾತ್ರ ಇಲ್ಲಿಗೆ ಬರಲು ಕಾರಣವೇನು? (ಮಾಸ್ಟರಿಗೆ) ಹೇಳು ನೋಡೋಣ. ಹಿಂದಿನ ಜನ್ಮದ ಸುಸಂಸ್ಕಾರ ಸ್ವಲ್ಪ ಇದ್ದೇ ಇರಬೇಕು"

ಮಾಸ್ಟರ್ : "ಹೌದು, ಇದ್ದೇ ಇರಬೇಕು."

ಶ್ರೀರಾಮಕೃಷ್ಣರು: "ಸಂಸ್ಕಾರವೆಂಬುದೊಂದಿದೆ. ಹಿಂದಿನ ಜನ್ಮಗಳಲ್ಲಿ ಸತ್ಕಾರ್ಯಗಳನ್ನು ಮಾಡಿದ್ದರೆ ಕೊನೆಯ ಜನ್ಮದಲ್ಲಿ ಮನುಷ್ಯ ಸರಳಸ್ವಭಾವಿಯಾಗುತ್ತಾನೆ. ಕೊನೆಯ ಜನ್ಮದಲ್ಲಿ ಹತ್ತಿರ ಹತ್ತಿರ ಹುಚ್ಚನ ಹಾಗೇ ವರ್ತಿಸುತ್ತಾನೆ.

"ಸತ್ಯವೇನೆಂದರೆ, ಎಲ್ಲವೂ ಆತನ ಇಚ್ಛೆಗನುಸಾರವಾಗಿ ನಡೆಯುತ್ತಿದೆ. ಆತ 'ಹ್ಞೂ' ಎಂದೊಡನೆಯೆ ಜಗತ್ತಿನ ಪ್ರತಿಯೊಂದೂ ಸಂಭವಿಸಲಾರಂಭಿಸುತ್ತದೆ; ಆತ 'ಉಹ್ಞೂ' ಎಂದೊಡನೆಯೆ ಪ್ರತಿಯೊಂದೂ ನಿಂತಲ್ಲಿಯೇ ನಿಂತುಬಿಡುತ್ತದೆ.

"ಮನುಷ್ಯ ಆಶೀರ್ವಾದಮಾಡಕೂಡದು ಎಂಬುದಕ್ಕೆ ಕಾರಣವೇನು? ಆತನ ಇಚ್ಛೆಯಂತೆ ಏನೂ ಘಟಿಸದು; ಆದರೆ ಭಗವಂತನ ಇಚ್ಛೆಯಂತೆ ಎಲ್ಲವೂ ಘಟಿಸುತ್ತವೆ ಮತ್ತು ನಶಿಸುತ್ತವೆ.

"ಅಂದು ನಾನು ಕ್ಯಾಪ್ಟನ್ನನ ಮನೆಗೆ ಹೋಗುತ್ತಿದ್ದಾಗ ರಸ್ತೆಯಲ್ಲಿ ಕೆಲವು ಯುವಕರು ಹೋಗುತ್ತಿದ್ದುದನ್ನು ನೋಡಿದೆ. ಅವರು ಬೇರೆಯ ಶ್ರೇಣಿಗೆ ಸೇರಿದವರಾಗಿ ಕಂಡರು. ಅವರಲ್ಲೊಬ್ಬ—ಹತ್ತೊಂಬತ್ತೊ ಇಪ್ಪತ್ತೊ ವಯಸ್ಸು ಇರಬೇಕು—ಕ್ರಾಪು ಬಿಡಿಸಿಕೊಂಡಿರೋದನ್ನು ನೋಡಿದೆ. ಆತ ಸಿಳ್ಳುಹಾಕುತ್ತ ಮುಂದುವರಿಯುತ್ತಿದ್ದ.

“ಕೆಲವರು ಘೋರ ತಮೋಗುಣಿಗಳು. ಒಂದಷ್ಟು ಕೊಳಲೂ ಡೋಕೆ ಬಂತು ಅಂದರೆ, ಅಷ್ಟಕ್ಕೇ ಅಹಂಕಾರ.

(ದ್ವಿಜನಿಗೆ) “ಯಾರು ಜ್ಞಾನಸಂಪನ್ನರೊ ಅವರು ಪರರ ನಿಂದನೆಗಾಗಿ ಏಕೆ ಭಯಪಡಬೇಕು? ಕಮ್ಮಾರನ ಅಡಿಗಲ್ಲಿನಂತೆ ಅವರದು ಕೂಟಸ್ಥ ಬುದ್ಧಿ. ಅದರ ಮೇಲೆ ಎಷ್ಟೊಂದು ಕೊಡತಿಯ ಏಟುಗಳು ಬೀಳುತ್ತವೆ, ಆದರೂ ಅದು ಕಿಂಚಿತ್ತೂ ಜಗ್ಗದು, ನಿರ್ವಿಕಾರಿ.

“ಆ ವ್ಯಕ್ತಿಯ ತಂದೆ ರಸ್ತೆಯಲ್ಲಿ ಹೋಗುತ್ತಿದ್ದುದನ್ನು ಕಂಡೆ.”

ಮಾಸ್ಟರ್; “ಆತ ಬಹಳ ಸರಳ ಜೀವಿ.”

ಶ್ರೀರಾಮಕೃಷ್ಣರು: “ಆದರೆ ಆತನ ಕಣ್ಣುಗಳು ಕೆಂಪಾಗಿವೆ.”

ಪರಮಹಂಸರು ಕ್ಯಾಪ್ಟನ್ನನ ಮನೆಗೆ ಹೋಗಿದ್ದರು. ಅದರ ಸಂಬಂಧವಾಗಿ ಮಾತುಗಳಾಡುತ್ತಿದಾರೆ. ಪರಮಹಂಸರ ಹತ್ತಿರಕ್ಕೆ ಬರುತ್ತಿದ್ದ ಯುವಕರನ್ನು ಆತ ನಿಂದಿಸುತ್ತಿದ್ದ. ಬಹುಶಃ ಹಾಜರಾ ಆತನ ಮನಸ್ಸನ್ನು ಕೆಡಿಸಿರಬೇಕು.

ಶ್ರೀರಾಮಕೃಷ್ಣರು: “ಕ್ಯಾಪ್ಟನ್ನನೊಡನೆ ಮಾತುಕತೆಗಳನ್ನಾಡಿದೆ. ನಾನು ಹೇಳಿದೆ, ‘ಈ ಜಗತ್ತಿನಲ್ಲಿ ಪ್ರಕೃತಿಪುರುಷರು ವಿನಾ ಬೇರೊಂದೂ ಇಲ್ಲ. ನಾರದ ಶ್ರೀರಾಮನಿಗೆ ಹೇಳಿದ, “ಹೇ ರಾಮ, ಈ ಜಗತ್ತಿನಲ್ಲಿರೋ ಸಕಲ ಪುರುಷರೂ ನಿನ್ನ ಅಂಶದಿಂದ ಜನ್ಮವನ್ನೆತ್ತಿದಾರೆ; ಎಲ್ಲಾ ಸ್ತ್ರೀಯರೂ ಸೀತಾದೇವಿಯ ಅಂಶದಿಂದ ಜನ್ಮವೆತ್ತಿದಾರೆ” ಅಂತ’ ಎಂದು.

“ಕ್ಯಾಪ್ಟನ್ನನಿಗೆ ಬಹಳ ಆನಂದವಾಗಿಬಿಟ್ಟಿತು. ಆತ ಹೇಳಿದ, ‘ನಿಮಗೆ ಮಾತ್ರವೆ ಯಥಾರ್ಥ ಜ್ಞಾನ ದೊರೆತಿದೆ. ಎಲ್ಲಾ ಪುರುಷರೂ ರಾಮನ ಅಂಶದಿಂದ ಜನ್ಮತಾಳಿರೋದರಿಂದ ನಿಜವಾಗಿ ಎಲ್ಲರೂ ರಾಮರೆ; ಎಲ್ಲಾ ಸ್ತ್ರೀಯರೂ ಸೀತಾದೇವಿಯ ಅಂಶದಿಂದ ಜನ್ಮತಾಳಿರೋದರಿಂದ ನಿಜವಾಗಿ ಎಲ್ಲರೂ ಸೀತಾದೇವಿಯರೆ’ ಅಂತ.

“ಹೀಗೆಂದು ಹೇಳಿದ ಮರುಕ್ಷಣದಲ್ಲಿಯೇ ಯುವಕರನ್ನು ನಿಂದಿಸಲಾರಂಭಿಸಿದ. ಹೇಳಿದ, ‘ಅವರು ಇಂಗ್ಲಿಷು ಕಲಿಯುತ್ತಿದಾರೆ. ಸಿಕ್ಕಿ ಸಿಕ್ಕಿದುದನ್ನೆಲ್ಲ ತಿನ್ನುತ್ತಾರೆ. ಅಂಥ ಯುವಕರು ಸರ್ವದಾ ನಿಮ್ಮೊಡನೆ ಬೆರೆಯುತ್ತಿದಾರೆ. ಅದು ಒಳ್ಳೆಯದಲ್ಲ. ಅದರಿಂದ ನಿಮ್ಮ ಮನಸ್ಸು ಕೆಟ್ಟುಹೋಗಬಹುದು. ಹಾಜರಾ ಒಬ್ಬ ಗಣ್ಯ ವ್ಯಕ್ತಿ. ಆತ ಬಹಳ

ಒಳ್ಳೆಯವ. ಆ ಯುವಕರು ಬಂದು ನಿಮ್ಮೊಡನೆ ಅಷ್ಟೊಂದಾಗಿ ಬೆರೆಯಲು ಬಿಟ್ಟುಕೊಡಬೇಡಿ' ಅಂತ. ಮೊದಲು ಆದಕ್ಕೆ ಹೇಳಿದೆ, 'ತಾವಾಗೇ ಬರುತ್ತಾರಲ್ಲ ಅದಕ್ಕೆ ನಾನೇನು ಮಾಡಲಿ?' ಅಂತ. ಬಳಿಕ ಚೆನ್ನಾಗಿ ಕೊಟ್ಟೆ. ಅದನ್ನು ನೋಡಿ ಆತನ ಮಗಳು ನಕ್ಕುಬಿಟ್ಟಳು. ನಾನು ಆತನಿಗೆ ಹೇಳಿದೆ, 'ಯಾರಲ್ಲಿ ವಿಷಯಬುದ್ಧಿ ಇರುವುದೊ ಅವರಿಂದ ಬಹಳ ದೂರದಲ್ಲಿಯೇ ಭಗವಂತ ನಿಲ್ಲುತ್ತಾನೆ. ಆದರೆ ಯಾರಲ್ಲಿ ವಿಷಯಬುದ್ಧಿ ಇಲ್ಲವೊ ಅವರ ಅತ್ಯಂತ ಹತ್ತಿರವೇ, ಅಂದರೆ ಮೂರು ಮೊಳದೊಳಗೆಯೇ ನಿಲ್ಲುತ್ತಾನೆ' ಅಂತ. ಕ್ಯಾಪ್ಟನ್ ರಾಖಾಲನ ಮಾತೆತ್ತಿ ಹೇಳಿದ, 'ಆತ ಎಲ್ಲರ ಮನೆಯಲ್ಲಿಯೂ ಊಟಮಾಡುತ್ತಾನೆ' ಅಂತ. ಬಹುಶಃ ಇದನ್ನು ಹಾಜರಾನ ಮೂಲಕ ಕೇಳಿರಬೇಕು. ಆಗ ಹೇಳಿದೆ, 'ಜನರು ಬೇಕಾದಷ್ಟು ಜಪತಪ ಮಾಡಲಿ, ಆದರೆ ಅವರಲ್ಲಿ ವಿಷಯಬುದ್ಧಿ ಇನ್ನೂ ನೆಲಸಿರುವುದಾದರೆ ಅವರಿಗೆ ಏನೂ ದೊರೆಯದು. ಆದರೆ ಯಾರೆ ಆಗಲಿ ಹಂದಿ ಮಾಂಸ ತಿನ್ನುತ್ತಿದ್ದರೂ ಭಗವಂತನಲ್ಲಿ ಮನಸ್ಸನ್ನಿಟ್ಟಿರುವುದಾದರೆ, ಆತನೇ ಧನ್ಯ. ಆತನಿಗೆ ಕ್ರಮೇಣ ಭಗವಂತನ ಸಾಕ್ಷಾತ್ಕಾರ ದೊರೆತೇ ದೊರೆಯುತ್ತದೆ. ಹಾಜರಾ ಬಹಳವಾಗಿ ಜಪತಪ ಮಾಡುತ್ತಾನೆ, ಆದರೆ ಯಾವ ದಳ್ಳಾಳಿಯ ಕೆಲಸವೂ ತನ್ನಿಂದ ತಪ್ಪಿಸಿಕೊಳ್ಳದ ಹಾಗೆ ನೋಡಿಕೊಳ್ಳುತ್ತಿರುತ್ತಾನೆ' ಅಂತ.

"ಅದಕ್ಕೆ ಕ್ಯಾಪ್ಟನ್ ಹೇಳಿದ, 'ಹೌದು, ಹೌದು! ನೀವು ಹೇಳೋದು ಸರಿ' ಅಂತ. ಬಳಿಕ ನಾನು ಹೇಳಿದೆ, 'ಈಗ ತಾನೆ ನೀನೇ ಹೇಳಿದೆ ಎಲ್ಲಾ ಪುರುಷರೂ ರಾಮನ ಅಂಶ, ಸ್ತ್ರೀಯರೆಲ್ಲರೂ ಸೀತಾದೇವಿಯ ಅಂಶ ಅಂತ. ಈಗ ನೀನು ಹೀಗೆ ಮಾತನಾಡುತ್ತಿರುವೆಯಲ್ಲ!' ಅಂತ.

"ಕ್ಯಾಪ್ಟನ್ ಹೇಳಿದ, 'ಹೌದು, ಅದು ನಿಜ. ಆದರೆ ನೀವು ಎಲ್ಲರನ್ನೂ ಪ್ರೀತಿಸುತ್ತಿಲ್ಲವಲ್ಲ' ಅಂತ.

"ನಾನು ಹೇಳಿದೆ, '"ಆಪೋ ನಾರಾಯಣಃ". ನೀರನ್ನು ನಾವು ಎಲ್ಲೆಲ್ಲಿಯೂ ನೋಡುತ್ತೇವೆ. ಆದರೆ ಕೆಲವು ಕುಡಿಯಲು ಯೋಗ್ಯವಾಗಿವೆ, ಕೆಲವು ಸ್ನಾನಕ್ಕೆ ಯೋಗ್ಯವಾಗಿವೆ, ಕೆಲವು ಶೌಚಕ್ಕೆ ಯೋಗ್ಯವಾಗಿವೆ. ಇಲ್ಲಿ ನೋಡು, ಇಲ್ಲಿ ನಿನ್ನ ಹೆಂಡತಿ ಮತ್ತು ಮಗಳು

ಕುಳಿತಿದಾರೆ. ನನ್ನ ಕಣ್ಣಿಗೆ ಇವರು ಸಾಕ್ಷಾತ್ ಆನಂದಮಯಿಯರೇ ಆಗಿ ಕಾಣುತ್ತಿದಾರೆ' ಅಂತ.

"ಆಗ ಆತ ಹೇಳಿದ, 'ಹೌದು, ಹೌದು! ಅದು ಸತ್ಯ' ಅಂತ. ಬಳಿಕ ಮತ್ತೆ ನನ್ನ ಪಾದಗಳನ್ನು ಸ್ಪರ್ಶಿಸಿ ಕ್ಷಮೆಬೇಡಲು ಬಂದ."

ಹೀಗೆಂದು ಹೇಳಿ ಪರಮಹಂಸರು ನಗಲಾರಂಭಿಸಿದರು. ಬಳಿಕ ಕ್ಯಾಪ್ಟನ್ನನ ಸದ್ಗುಣಗಳ ಸಂಬಂಧವಾಗಿ ಮಾತನಾಡಲಾರಂಭಿಸಿದರು.

ಶ್ರೀರಾಮಕೃಷ್ಣರು: "ಕ್ಯಾಪ್ಟನ್ನನಲ್ಲಿ ಅನೇಕ ಸದ್ಗುಣಗಳಿವೆ. ಪ್ರತಿದಿವಸವೂ ನಿತ್ಯಕರ್ಮಗಳಲ್ಲಿ ನಿರತನಾಗಿರುತ್ತಾನೆ. ತಾನೇ ಮನೆ ದೇವರ ಪೂಜೆ ಮಾಡುತ್ತಾನೆ. ಅಭಿಷೇಕದ ಸಮಯದಲ್ಲಿ ಎಷ್ಟೊಂದು ಮಂತ್ರಗಳನ್ನು ಪಠಿಸುತ್ತಾನೆ ಏನುಕತೆ! ದೊಡ್ಡ ಕರ್ಮಕಾಂಡಿ. ಪೂಜೆ ಜಪ, ಮಂಗಳಾರತಿ, ಶಾಸ್ತ್ರಪಾಠ, ಸ್ತೋತ್ರಗಳ ಪಠನೆ ಇವೇ ಮೊದ ಲಾದ ನಿತ್ಯಕರ್ಮಗಳನ್ನು ಮಾಡುತ್ತಿದಾನೆ.

"ನಾನು ಆತನಿಗೆ ಗದರಿಸಿ ಹೇಳಿದೆ, 'ನೀನು ಅತಿಯಾಗಿ ಓದಿ ಬಿಟ್ಟು ತಲೆ ಕೆಡಿಸಿಕೊಂಡಿದೀಯೆ. ಇನ್ನು ಮುಂದಕ್ಕೆ ಓದುವುದನ್ನು ನಿಲ್ಲಿಸು' ಅಂತ.

"ನನ್ನ ಆಧ್ಯಾತ್ಮಿಕ ಉನ್ನತಿಯ ಸಂಬಂಧವಾಗಿ ಕ್ಯಾಪ್ಟನ್ ಹೇಳಿದ, 'ನಿಮ್ಮ ಜೀವಾತ್ಮ ರೆಕ್ಕೆಯನ್ನು ಬಿಚ್ಚಿಕೊಂಡು ಮೇಲಕ್ಕೆ ಹಾರಿಹೋಗಲು ಸತತ ಸಿದ್ಧವಾಗಿದೆ' ಅಂತ. ಜೀವಾತ್ಮ ಮತ್ತು ಪರಮಾತ್ಮ ಎಂಬ ಎರಡು ಅಸ್ತಿತ್ವಗಳಿವೆ. ಜೀವಾತ್ಮನನ್ನು ಆಕಾಶಕ್ಕೆ— ಚಿದಾಕಾಶಕ್ಕೆ— ಹೋಲಿಸಬಹುದು. ಕ್ಯಾಪ್ಟನ್ ಹೇಳಿದ, 'ನಿಮ್ಮ ಜೀವಾತ್ಮ ಚಿದಾ ಕಾಶಕ್ಕೆ ಹಾರಿಹೋಗಿಬಿಡುತ್ತದೆ. ಅದಕ್ಕಾಗೇ ನೀವು ಸಮಾಧಿಸ್ಥ ರಾಗೋದು' ಅಂತ.

(ನಗುತ್ತ) "ಆತ ಬಂಗಾಳಿಗಳನ್ನು ಖಂಡಿಸಲಾರಂಭಿಸಿದ. ಆತ ಹೇಳಿದ, 'ಬಂಗಾಳಿಗಳು ತಿಳಿಗೇಡಿಗಳು. ಅವರ ಹತ್ತಿರವೇ ಮಾಣಿಕ್ಯ (ಶ್ರೀರಾಮಕೃಷ್ಣರು) ಇದೆ, ಆದರೆ ಅದು ಅವರಿಗೆ ಗೊತ್ತೇ ಇಲ್ಲವಲ್ಲ' ಅಂತ.

"ಕ್ಯಾಪ್ಟನ್ನನ ತಂದೆ ಒಬ್ಬ ದೊಡ್ಡ ಭಕ್ತ. ಆಂಗ್ಲ-ಸೈನ್ಯದಲ್ಲಿ ಸುಬೇದಾರನಾಗಿದ್ದ. ರಣರಂಗದಲ್ಲಿಯೂ. ಸಕಾಲಕ್ಕೆ ಸರಿಯಾಗಿ ಪೂಜೆಮಾಡುತ್ತಿದ್ದನಂತೆ. ಒಂದು ಕೈಯಿಂದ ಶಿವಪೂಜೆಯನ್ನು

ಮಾಡುತ್ತ ಇನ್ನೊಂದರಿಂದ ಕತ್ತಿ ಬಂದೂಕಗಳನ್ನು ಹಿಡಿದು ಯುದ್ಧ ಮಾಡುತ್ತಿದ್ದನಂತೆ.

(ಮಾಸ್ಟರಿಗೆ) "ಆದರೆ ಕ್ಯಾಪ್ಟನ್ ಹಗಲೂ ಇರುಳು ಪ್ರಾಪಂಚಿಕ ಕೆಲಸಕಾರ್ಯಗಳಲ್ಲಿ ತೊಡಗಿರುತ್ತಾನೆ. ನಾನು ಆತನ ಮನೆಗೆ ಹೋದಾಗ ಲೆಲ್ಲ ಆತನ ಹೆಂಡತಿ ಮಕ್ಕಳು ಆತನನ್ನು ಸುತ್ತುಗಟ್ಟಿಕೊಂಡಿರೋದು ನನ್ನ ಕಣ್ಣಿಗೆ ಬೀಳುತ್ತಿರುತ್ತದೆ. ಇವೂ ಅಲ್ಲದೆ ಆತನ ಜನರು ಆಗಾಗ ಲೆಕ್ಕದ ಪುಸ್ತಕಗಳನ್ನು ತಂದು ತೋರಿಸುತ್ತಲೇ ಇರುತ್ತಾರೆ. ಆದರೂ ಒಮ್ಮೊಮ್ಮೆ ಆತನ ಮನಸ್ಸು ಭಗವಚ್ಚಿಂತನೆಯನ್ನೂ ಮಾಡುತ್ತಿರುತ್ತದೆ. ಆತನನ್ನು ಒಬ್ಬ ವಿಷಮಶೀತ ಜ್ವರದ ರೋಗಿಗೆ ಹೋಲಿಸಬಹುದು. ಸನ್ನಿ ಯಾವಾಗ ನೋಡಿದರೂ ಆತನನ್ನು ಮುಚ್ಚಿಕೊಂಡಿರುತ್ತದೆ. ಆದರೆ ಆಗಾಗ ಆತನಿಗೆ ಥಟ್ಟನೆ ಪ್ರಜ್ಞೆ ಬಂದು ಕೂಗಿಕೊಳ್ಳುತ್ತಾನೆ, 'ನೀರು ಕುಡಿಯ ಬೇಕು! ನೀರು ಕುಡಿಯಬೇಕು!' ಅಂತ. ಆತನಿಗೆ ನೀರನ್ನು ಕುಡಿಸುತ್ತಿದ್ದ ಹಾಗೆಯೆ ಮತ್ತೆ ಆತನನ್ನು ಸನ್ನಿ ಮುಚ್ಚಿಕೊಂಡುಬಿಡುತ್ತದೆ; ಬಾಹ್ಯ ಪ್ರಜ್ಞೆಯೇ ಇಲ್ಲದಂತಾಗುತ್ತದೆ. ನಾನು ಕ್ಯಾಪ್ಟನ್ನನಿಗೆ ಹೇಳಿದೆ, 'ನೀನು ಒಬ್ಬ ಕರ್ಮಕಾಂಡಿ' ಅಂತ. ಆತ ಹೇಳಿದ, 'ಹೌದು, ನಿಜ. ನನಗೆ ಪೂಜೆ ಪುರಸ್ಕಾರಗಳು ಎಂದರೆ ಬಹಳ ಉತ್ಸಾಹ. ಜೀವನಿಗೆ ಕರ್ಮಮಾರ್ಗ ವಿನಾ ಬೇರೆ ವಿಧಿಯೇ ಇಲ್ಲ' ಅಂತ.

"ನಾನು ಹೇಳಿದೆ, 'ಹಾಗೆಂದು ಚಿರಕಾಲವೂ ಈ ವಿಧವಾದ ಕರ್ಮಗಳಲ್ಲಿಯೇ ತೊಡಗಿರಬೇಕೇನು? ದುಂಬಿ ಎಲ್ಲಿಯವರೆಗೆ ಝೇಂಕರಿ ಸುತ್ತಿರುತ್ತದೆ? ಹೂವಿನ ಮೇಲೆ ಕೂರದ ವರೆಗೆ. ಜೇನು ಕುಡಿಯೋ ವಾಗ ಅದರ ಝೇಂಕೃತಿ-ಘೇಂಕೃತಿಯೆಲ್ಲ ನಿಂತುಹೋಗಿಬಿಡುತ್ತದೆ' ಅಂತ. ಆತ ಹೇಳಿದ, 'ಆದರೆ ನಿಮ್ಮ ಹಾಗೆ ನಾವು ಪೂಜೆ ಪುರಸ್ಕಾರಗಳನ್ನೆಲ್ಲ ಬಿಟ್ಟುಬಿಡಲಾಗುವುದೇನು?' ಅಂತ. ಆದಾಗ್ಯೂ ಆತನ ಮಾತುಕತೆಗಳಲ್ಲಿ ಒಂದು ಸ್ಥಿಮಿತ ಎಂಬುದು ಇಲ್ಲ. ಆತ ಕೆಲವು ವೇಳೆ ಹೇಳ್ತಾನೆ ಇದೆಲ್ಲ ಜಡ ಅಂತ, ಇನ್ನು ಕೆಲವು ವೇಳೆ ಇದೆಲ್ಲ ಚೈತನ್ಯ ಅಂತ. ನಾನು ಹೇಳು ತ್ತೇನೆ, 'ಜಡ ಎಂಬತಕ್ಕದ್ದೆಲ್ಲಿದೆ? ಎಲ್ಲವೂ ಚೈತನ್ಯವೇ' ಅಂತ."

ಪೂರ್ಣನ ಯೋಗಕ್ಷೇಮದ ಸಂಬಂಧವಾಗಿ ಪರಮಹಂಸರು ಮಾಸ್ಟರನ್ನು ಕೇಳುತ್ತಿದಾರೆ.

ಶ್ರೀರಾಮಕೃಷ್ಣರು : "ನಾನು ಇನ್ನೊಮ್ಮೆ ಪೂರ್ಣನನ್ನು

ನೋಡಲು ಸಾಧ್ಯವಾಗುವುದಾದರೆ, ಆತನಿಗಾಗಿ ನನಗಿರೋ ವ್ಯಾಕುಲತೆ ಸ್ವಲ್ಪ ಕಡಮೆಯಾಗುತ್ತದೆ. ಆತನೆಷ್ಟು ಚತುರ! ನನ್ನ ಮೇಲೆ ಆತನಿಗೆ ಬಹಳ ಪ್ರೀತಿ. ಆತ ಹೇಳುತ್ತಾನೆ, 'ನಿಮ್ಮನ್ನು ನೋಡಬೇಕೆಂದು ನನ್ನ ಹೃದಯ ಸುಮ್ಮನೆ ತಲ್ಲಣಿಸುತ್ತಿರುತ್ತದೆ' ಅಂತ. (ಮಾಸ್ಟರಿಗೆ) ಆತನ ಮನೆಯವರು ಆತನನ್ನು ನಿನ್ನ ಸ್ಕೂಲಿನಿಂದ ಬಿಡಿಸಿಬಿಟ್ಟಿದಾರೆ. ಅದರಿಂದ ನಿನಗೇನಾದರು ತೊಂದರೆಯಾಗಬಹುದೆ?"

ಮಾಸ್ಟರ್: "ನನ್ನ ದೆಸೆಯಿಂದ ಪೂರ್ಣನ ಮನೆಯವರು ಆತನನ್ನು ನಮ್ಮ ಸ್ಕೂಲಿಗೆ ಕಳುಹಿಸುತ್ತಿಲ್ಲ ಅಂತ ಒಂದು ಪಕ್ಷ ವಿದ್ಯಾಸಾಗರನೇನಾದರು ನನ್ನನ್ನು ಆಕ್ಷೇಪಿಸುವುದಾದರೆ, ನಾನು ಆತನಿಗೆ ಸರಿಯಾದ ಉತ್ತರ ಕೊಡಬಲ್ಲೆ."

ಶ್ರೀರಾಮಕೃಷ್ಣರು: "ನಿನ್ನ ಉತ್ತರವೇನು?"

ಮಾಸ್ಟರ್: "ಉತ್ತರಕೊಡುತ್ತೇನೆ, ಸಾಧು ಸತ್ಪುರುಷರ ಸಹವಾಸ ಮಾಡಿದರೆ ಭಗವದ್ಭಾವನೆಯ ಉದ್ದೀಪನೆಯಾಗುತ್ತದೆ; ಅದು ಕೆಟ್ಟದೇನಲ್ಲ ಅಂತ. ಮತ್ತೆ ನಾನು ಆತನಿಗೆ ಹೇಳುತ್ತೇನೆ, ಸ್ಕೂಲಿಗೆ ಇಟ್ಟಿರೋ ಟೆಕ್ಸ್ಟ್‌ಬುಕ್ಕಿನಲ್ಲಿಯೂ ಹೃತ್ಪೂರ್ವಕವಾಗಿ ಭಗವಂತನನ್ನು ಪ್ರೀತಿಸಬೇಕು ಎಂದು ಹೇಳಿದೆ ಅಂತ." (ಪರಮಹಂಸರು ನಗುತ್ತಿದಾರೆ.)

ಶ್ರೀರಾಮಕೃಷ್ಣರು: "ನಾನು ಕ್ಯಾಪ್ಟನ್ನನ ಮನೆಗೆ ಹೋಗಿದ್ದಾಗ ಅಲ್ಲಿಗೆ ಚಿಕ್ಕ ನರೇನನನ್ನು ಕರೆಸಿದೆ. ಆತನಿಗೆ ಹೇಳಿದೆ, 'ನಿನ್ನ ಮನೆ ಎಲ್ಲಿದೆ? ನಡಿ, ಹೋಗೋಣ' ಅಂತ. ಆತ ಹೇಳಿದ, 'ದಯವಿಟ್ಟು ಬನ್ನಿ' ಅಂತ. ನಾವು ಅಲ್ಲಿಗೆ ಹೋಗುತ್ತಿರೋದು ತನ್ನ ತಂದೆಗೆ ಗೊತ್ತಾಗಿಬಿಡಬಹುದೆಂದು ಹೆದರುತ್ತ ಹೆದರುತ್ತ ನಮ್ಮನ್ನು ಕರೆದುಕೊಂಡುಹೋದ. (ಎಲ್ಲರೂ ನಗುತ್ತಾರೆ.)

(ಒಬ್ಬ ಅಭ್ಯಾಗತನಿಗೆ) "ನೀನು ಬಹಳ ಕಾಲದಿಂದ ಬರಲೇ ಇಲ್ಲವಲ್ಲ! ಬಹುಶಃ ಏಳೆಂಟು ತಿಂಗಳೇ ಆಗಿರಬೇಕು."

ಅಭ್ಯಾಗತ: "ಒಂದು ವರ್ಷವಾಗಿ ಹೋಯಿತು."

ಶ್ರೀರಾಮಕೃಷ್ಣರು: "ನಿನ್ನ ಜೊತೆಯಲ್ಲಿ ಇನ್ನೊಬ್ಬ ಬರುತ್ತಿದ್ದನಲ್ಲವೆ?"

ಅಭ್ಯಾಗತ: "ಹೌದು ಆತನ ಹೆಸರು ನೀಲಮಣಿಬಾಬು ಅಂತ."

ಶ್ರೀರಾಮಕೃಷ್ಣರು: "ಆತನೇಕೆ ಬರುತ್ತಿಲ್ಲ? ಒಮ್ಮೆ ಇಲ್ಲಿಗೆ

ಬರುವಂತೆ ಆತನಿಗೆ ಹೇಳು. ನನಗೆ ಆತನನ್ನು ನೋಡಬೇಕು ಅಂತ ಇಚ್ಛೆಯಾಗುತ್ತಿದೆ. ನಿನ್ನೊಡನೆ ಬಂದಿರೋ ಈ ಹುಡುಗನಾರು ? ''

ಅಭ್ಯಾಗತ : '' ಈತ ಅಸ್ಸಾಮಿನಿಂದ ಬಂದಿದಾನೆ. ''

ಶ್ರೀರಾಮಕೃಷ್ಣರು : '' ಅಸ್ಸಾಮು ಎಲ್ಲಿದೆ ? ಯಾವ ದಿಕ್ಕಿನಲ್ಲಿದೆ ?''

ಆಶುವಿನ ಯೋಗಕ್ಷೇಮದ ಸಂಬಂಧವಾಗಿ ದ್ವಿಜ ಪರಮಹಂಸರಿಗೆ ತಿಳಿಸಲಾರಂಭಿಸಿದ. ಆಶುವಿನ ತಂದೆ ಆತನ ಮದುವೆಗೆ ಏರ್ಪಾಡು ನಡೆಸುತ್ತಿದಾನೆ, ಆದರೆ ಆತನಿಗೆ ಮಾತ್ರ ವಿವಾಹವಾಗಲು ಇಚ್ಛೆಯಿಲ್ಲ.

ಶ್ರೀರಾಮಕೃಷ್ಣರು : '' ನೋಡಿ, ನೋಡಿ! ಆತನಿಗೆ ಇಚ್ಛೆಯಿಲ್ಲ, ಆದರೂ ಬಲಾತ್ಕರಿಸಿ ವಿವಾಹಮಾಡುತ್ತಿದಾರೆ ! ''

ಹಿರಿಯ ಅಣ್ಣನನ್ನು ಪೂಜ್ಯ ದೃಷ್ಟಿಯಿಂದ ನೋಡಬೇಕು ಅಂತ ಪರಮಹಂಸರು ಒಬ್ಬ ಭಕ್ತನಿಗೆ ಹೇಳುತ್ತಿದಾರೆ. ಆತನಿಗೆ ಹೇಳಿದರು, '' ಹಿರಿಯ ಅಣ್ಣ ತಂದೆಗೆ ಸರಿಸಮಾನ. ಆತನನ್ನು ಗೌರವಯುತ ವಾಗಿ ಕಾಣಬೇಕು. '' ಅಂತ.

ಭಕ್ತರ ಮಧ್ಯದಲ್ಲಿ ಒಬ್ಬ ಪಂಡಿತ ಕುಳಿತಿದಾನೆ. ಆತ ಉತ್ತರ ಭಾರತವಾಸಿ.

ಶ್ರೀರಾಮಕೃಷ್ಣರು ನಗುತ್ತ ಮಾಸ್ಟರಿಗೆ: '' ಈತ ಒಬ್ಬ ದೊಡ್ಡ ಭಾಗವತಪಂಡಿತ. ''

ಮಾಸ್ಟರ್ ಮತ್ತು ಉಳಿದ ಭಕ್ತರು ಪಂಡಿತನ ಕಡೆ ಏಕದೃಷ್ಟಿಯಿಂದ ನೋಡಲಾರಂಭಿಸಿದರು.

ಶ್ರೀರಾಮಕೃಷ್ಣರು ಪಂಡಿತನಿಗೆ : '' ಒಳ್ಳೆಯದು, ಯೋಗಮಾಯೆ ಅಂದರೇನು ? ''

ಪಂಡಿತ ಒಂದು ಅಸಮರ್ಪಕ ಉತ್ತರ ಕೊಟ್ಟ.

ಶ್ರೀರಾಮಕೃಷ್ಣರು : '' ರಾಧಿಕೆಯನ್ನು ಏಕೆ ಯೋಗಮಾಯೆ ಅಂತ ಕರೆಯುತ್ತಿಲ್ಲ ? ''

ಪಂಡಿತ ಇದಕ್ಕೂ ಒಂದು ವಿಧವಾದ ಉತ್ತರ ಕೊಟ್ಟ.

ಶ್ರೀರಾಮಕೃಷ್ಣರು : '' ರಾಧಿಕೆ ವಿಶುದ್ಧಸತ್ತ್ವಸ್ವರೂಪಳು ; ಆಕೆ ಪ್ರೇಮಮಯಿ. ಯೋಗಮಾಯೆಯಲ್ಲಿ ಸತ್ತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳೂ ಇವೆ ; ಶ್ರೀಮತಿಯ (ರಾಧಿಕೆಯ) ಅಂತರ್ಯ ದಲ್ಲಿ ವಿಶುದ್ಧಸತ್ತ್ವ ವಿನಾ ಬೇರೆ ಏನೂ ಇಲ್ಲ.

(ಮಾಸ್ಟರಿಗೆ) " ನರೇಂದ್ರ ಈಗ ಶ್ರೀಮತಿಯನ್ನು ಅತ್ಯಂತ ಪೂಜ್ಯ ದೃಷ್ಟಿಯಿಂದ ನೋಡುತ್ತಿದಾನೆ. ಆತ ಹೇಳುತ್ತಿದಾನೆ, ಯಾರೇ ಆಗಲಿ ಸಚ್ಚಿದಾನಂದನನ್ನು ಯಾವ ರೀತಿಯಾಗಿ ಪ್ರೀತಿಸಬೇಕು ಎಂಬುದನ್ನು ಅರಿಯಬೇಕಾದರೆ, ಅದನ್ನು ಶ್ರೀಮತಿಯಿಂದ ಅರಿತುಕೋಬೇಕು ಅಂತ.

" ಸಚ್ಚಿದಾನಂದ ತಾನೇ ರಸಾಸ್ವಾದನೆ ಮಾಡಲೋಸುಗ ರಾಧಿಕೆಯನ್ನು ಸೃಷ್ಟಿಸಿದಾನೆ. ಸಚ್ಚಿದಾನಂದಕೃಷ್ಣನ ಅಂಗದಿಂದ ರಾಧಿಕೆ ಹೊರಹೊಮ್ಮಿದಾಳೆ. ಸಚ್ಚಿದಾನಂದಕೃಷ್ಣನೇ 'ಆಧಾರ,' ಮತ್ತೆ ಆತನೇ ರಾಧಿಕೆಯ ರೂಪಿನಲ್ಲಿ 'ಆಧೇಯ.' ಸಚ್ಚಿದಾನಂದ ತನ್ನ ರಸವನ್ನು ತಾನೇ ಆಸ್ವಾದಿಸಲು, ಅಂದರೆ ತನ್ನನ್ನೇ ತಾನು ಪ್ರೀತಿಸಿ ಆನಂದಪಡಲು ರಾಧಿಕೆಯ ರೂಪದಿಂದ ವ್ಯಕ್ತವಾಗಿದಾನೆ.

" ಅದಕ್ಕಾಗಿಯೆ ವೈಷ್ಣವ ಶಾಸ್ತ್ರದಲ್ಲಿ ಬರೆದಿದೆ, ರಾಧಿಕೆ ಜನ್ಮತಾಳಿದ ನಂತರ ಕಣ್ಣು ಬಿಡಲಿಲ್ಲ ಅಂತ. ಇವರ ಇಂಗಿತ ಆಕೆಗೆ ಬೇರೆ ಯಾವ ಮನುಷ್ಯನನ್ನೂ ನೋಡಲಿಚ್ಛೆಯಾಗಲಿಲ್ಲ ಅಂತ. ಯಶೋದೆ ಕಂಕುಳಿನಲ್ಲಿ ಶ್ರೀಕೃಷ್ಣನನ್ನು, ಎತ್ತಿಕೊಂಡು ರಾಧಿಕೆಯನ್ನು ನೋಡಲು ಬರಲು, ಶ್ರೀಕೃಷ್ಣನ ದರ್ಶನ ಪಡೆಯಲು ರಾಧಿಕೆ ಕಣ್ಣು ತೆರೆದಳು. ಶ್ರೀಕೃಷ್ಣ ಆಟವಾಡುತ್ತಾ ಹೋಗಿ ರಾಧಿಕೆಯ ಕಣ್ಣನ್ನು ಮುಟ್ಟಿದ. (ಅಸ್ವಾಮಿನ ಹುಡುಗನಿಗೆ) ಎಳೆ ಮಕ್ಕಳು ಪರಸ್ಪರ ಕಣ್ಣು ಮುಟ್ಟುವುದನ್ನು ನೀನು ನೋಡಿಲ್ಲವೇನು ? "

ಪಂಡಿತ ಪರಮಹಂಸರಿಂದ ಬೀಳ್ಕೊಳ್ಳಲುದ್ಯುಕ್ತನಾಗಿದಾನೆ.

ಪಂಡಿತ " ನಾನು ಮನೆಗೆ ಹೋಗಿಬರುತ್ತೇನೆ. "

ಶ್ರೀರಾಮಕೃಷ್ಣರು ಪ್ರೀತಿಯಿಂದ : " ಏನಾದರೂ ಒಂದು ಸ್ವಲ್ಪ ಸಂಪಾದನೆ ಆಯಿತೆ ? "

ಪಂಡಿತ : " ಧಾರಣೆವಾಸಿ ಇಳಿದುಹೋಗಿಬಿಟ್ಟಿದೆ. ಏನೂ ದೊರೆಯುಲಿಲ್ಲ. "

ಕೆಲವು ನಿಮಿಷಗಳ ಬಳಿಕ ಪಂಡಿತ ಪರಮಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಂಡ.

ಶ್ರೀರಾಮಕೃಷ್ಣರು ಮಾಸ್ಟರಿಗೆ: " ಯುವಕರಿಗೂ ಸಂಸಾರಿಗಳಿಗೂ ಇರೋ ಅಂತರವನ್ನು ನೀನೇ ನೋಡು. ಈ ಪಂಡಿತ ಹಗಲೂ ಇರುಳು ದುಡ್ಡು ದುಡ್ಡು ಅನ್ನುತ್ತಲೇ ಇದಾನೆ. ಹೊಟ್ಟೆ ಸಾಕೋಕೆ ಕಲ್ಕತ್ತಕ್ಕೆ

ಬಂದಿದಾನೆ; ಇಲ್ಲದೆ ಇದ್ದರೆ ಈತನ ಮನೆಯವರ ಹೊಟ್ಟೆ ತಾಳಹಾಕ ಬೇಕಾಗುತ್ತದೆ. ಅದಕ್ಕಾಗಿ ಈತ ಹಾಗೂ ಹೀಗೂ ಮಾಡಿ ಸಂಪಾದಿಸ ಬೇಕಾಗಿದೆ. ಮನಸ್ಸನ್ನು ಏಕಾಗ್ರಮಾಡಿ ಭಗವಚ್ಚಿಂತನೆ ಮಾಡೋಕೆ ಈತನಿಗೆ ಸಮಯವೆಲ್ಲಿ? ಆದರೆ ಯುವಕರ ಹೃದಯವನ್ನು ಕಾಮ ಕಾಂಚನ ಇನ್ನೂ ಸ್ಪರ್ಶಮಾಡಿಲ್ಲ; ಇಚ್ಛೆಪಟ್ಟರೆ ಅವರು ಭಗವಂತನ ಕಡೆ ಮನಸ್ಸನ್ನು ತಿರುಗಿಸಬಲ್ಲರು.

"ಯುವಕರಿಗೆ ಪ್ರಾಪಂಚಿಕರ ಸಹವಾಸ ರುಚಿಸದು. ರಾಖಾಲ ಆಗಾಗ ಹೇಳುತ್ತಿದ್ದ, 'ಪ್ರಾಪಂಚಿಕರನ್ನು ನೋಡಿದೊಡನೆಯೆ ನನಗೆ ಒಂದು ವಿಧವಾದ ಭಯ ಉಂಟಾಗುತ್ತದೆ' ಅಂತ. ನನಗೆ ಮೊದಲು ಮೊದಲು ಆಧ್ಯಾತ್ಮಿಕ ಅನುಭವಗಳು ಆಗಲು ಆರಂಭವಾದಾಗ ಪ್ರಾಪಂಚಿಕರು ನನ್ನನ್ನು ನೋಡಲು ಬಂದರು ಎಂದರೆ ಕಿಟಕಿ ಬಾಗಿಲು ಹಾಕಿ ಒಳಗೆ ಕುಳಿತುಬಿಡುತ್ತಿದ್ದೆ.

"ನನ್ನ ಬಾಲ್ಯದಲ್ಲಿ ನಾನು ಕಾಮಾರಪುಕುರಿನಲ್ಲಿದ್ದಾಗ ಜೊತೆಗಾರ ರಾಮಮಲ್ಲಿಕನನ್ನು ಬಹಳವಾಗಿ ಪ್ರೀತಿಸುತ್ತಿದ್ದೆ. ಆದರೆ ಕೆಲವು ವರ್ಷಗಳನಂತರ ಆತ ಇಲ್ಲಿಗೆ ಬಂದಾಗ ಆತನನ್ನು ಸ್ಪರ್ಶಿಸಲೂ ನನಗಾಗಲಿಲ್ಲ. ನಾವಿಬ್ಬರೂ ಬಾಲ್ಯದಲ್ಲಿ ಒಬ್ಬರಿಗೊಬ್ಬರು ಅಚ್ಚುಮೆಚ್ಚಿನ ಸ್ನೇಹಿತರಾಗಿದ್ದೆವು. ಹಗಲೂ ಇರುಳು ಒಟ್ಟಿಗೆ ಇರುತ್ತಿದ್ದೆವು. ಆಗ ನಮಗೆ ಹದಿನಾರೊ ಹದಿನೇಳೊ ವಯಸ್ಸು. ಜನ ಹೇಳುತ್ತಿದ್ದರು, 'ಇವರಿಬ್ಬರಲ್ಲಿ ಒಬ್ಬ ಹೆಂಗಸಾಗಿದ್ದರೆ, ಇಬ್ಬರಿಗೂ ವಿವಾಹವಾಗಿಬಿಡುತ್ತಿತ್ತು' ಅಂತ. ಇಬ್ಬರೂ ಅವನ ಮನೆಯಲ್ಲಿಯೇ ಆಟವಾಡುತ್ತಿದ್ದೆವು. ಆಗ ನಡೆದುದೆಲ್ಲ ನನಗೆ ಚೆನ್ನಾಗಿ ಜ್ಞಾಪಕದಲ್ಲಿದೆ. ಆತನ ಬಂಧುಗಳು ಪಲ್ಲಕ್ಕಿಯಲ್ಲಿ ಕುಳಿತುಬರುತ್ತಿದ್ದರು. ಅದನ್ನು ಹೊತ್ತುಬರುತ್ತಿದ್ದವರು 'ಒಹೊ! ಓಹೋ!' ಎಂದು ಕೂಗುತ್ತಾ ಮುಂದುವರಿಯುತ್ತಿದ್ದರು. ರಾಮಮಲ್ಲಿಕನನ್ನು ನೋಡಬೇಕೆಂದು ಅನೇಕ ವೇಳೆ ಜನರ ಕೈಯಲ್ಲಿ ಹೇಳಿಕಳುಹಿಸಿದ್ದೆ. ಈಗ ಆತ 'ಚಾನಾಕಾ' ಎಂಬ ಊರಿನಲ್ಲಿ ಅಂಗಡಿ ಇಟ್ಟಿದಾನೆ. ಅಂದು ಇಲ್ಲಿಗೆ ಬಂದು ಎರಡು ದಿನ ಇದ್ದು ಹೋದ. ರಾಮಮಲ್ಲಿಕ ನನಗೆ ಹೇಳಿದ, 'ನನಗೆ ಮಕ್ಕಳಾಗಲಿಲ್ಲ. ನನ್ನ ಅಣ್ಣನ ಮಗನನ್ನು ದತ್ತು ತೆಗೆದುಕೊಂಡಿದ್ದೆ. ಆತನೂ ಸತ್ತುಹೋಗಿಬಿಟ್ಟ' ಅಂತ. ಆ ಮಾತನ್ನು ಹೇಳುತ್ತ ಹೇಳುತ್ತ ಇದ್ದಹಾಗೆಯೆ ರಾಮಮಲ್ಲಿಕ ನಿಟ್ಟುಸಿರು

ಬಿಟ್ಟ. ಕಣ್ಣಿನಿಂದ ನೀರು ಸುರಿಯಲಾರಂಭಿಸಿತು. ತನ್ನ ದತ್ತು ಮಗನಿಗಾಗಿ ಆತ ಬಹಳವಾಗಿ ಶೋಕಾಕ್ರಾಂತನಾಗಿರುವಂತೆ ಕಂಡುಬಂದ. ಮತ್ತೆ ಹೇಳಿದ, 'ನಮಗೆ ಮಕ್ಕಳಿಲ್ಲದಿದ್ದುದರಿಂದ ನನ್ನ ಹೆಂಡತಿಯ ವಾತ್ಸಲ್ಯ ಪ್ರೇಮವೆಲ್ಲ ಆ ಹುಡುಗನ ಕಡೆ ತಿರುಗಿತ್ತು. ಈಗ ಆಕೆ ಶೋಕದಿಂದ ಕಂಗೆಟ್ಟುಹೋಗಿದಾಳೆ. ನಾನು ಆಕೆಗೆ ಹೇಳಿದೆ, "ಹುಚ್ಚಿ, ಸುಮ್ಮನೆ ಶೋಕಪಟ್ಟರೆ ದೊರೆಯೋದೇನು? ಕಾಶಿಯಾತ್ರೆ ಮಾಡಿಕೊಂಡು ಬರುವೆಯಾ?" ಅಂತ' ಎಂದು. ನೋಡು, ತನ್ನ ಹೆಂಡತಿಯನ್ನು ಆತ ಹುಚ್ಚಿ ಅಂತ ಸಂಬೋಧಿಸಿದ. ಆತ ದುಃಖದಿಂದ ಕರಗಿ ನೀರಾಗಿಹೋಗಿದಾನೆ; ಸತ್ತ್ವವೇ ಇಲ್ಲದಂತವನಾಗಿದಾನೆ. ಆತನನ್ನು ಸ್ಪರ್ಶಿಸೋಕೂ ನನ್ನ ಕೈಯಲ್ಲಾಗಲಿಲ್ಲ."

ಆ ಬ್ರಾಹ್ಮಣ ಹೆಂಗಸು ಇನ್ನೂ ಉತ್ತರದ ಬಾಗಿಲಿನ ಹತ್ತಿರವೇ ನಿಂತಿದ್ದಳು. ಆಕೆ ವಿಧವೆ. ತನ್ನ ಏಕಮಾತ್ರ ಪುತ್ರಿಯನ್ನು 'ರಾಜ' ಎಂಬ ಬಿರುದುಳ್ಳ ಒಬ್ಬ ಕಲ್ಕತ್ತದ ಜಮೀನುದಾರನಿಗೆ ಕೊಟ್ಟು ವಿವಾಹ ಮಾಡಿದ್ದಳು. ಆ ಹುಡುಗಿ ತೌರುಮನೆಗೆ ಬರುತ್ತಿದ್ದಾಗ ಸಿಪಾಯಿಗಳ ಸಿಬ್ಬಂದಿಯೊಡನೆ ಬರುತ್ತಿದ್ದಳು. ಅದನ್ನು ಈಕ್ಷಿಸಿದಾಗ ಆ ವಿಧವೆಯ ಹೃದಯ ಹತ್ತು ಮೊಳ ಮೇಲಕ್ಕೆ ನೆಗೆಯುತ್ತಿತ್ತು. ಆಕೆಯ ಆ ಕನ್ಯಾರತ್ನ ಕೆಲವು ದಿವಸಗಳ ಹಿಂದೆ ಇಹಲೋಕವನ್ನು ತ್ಯಜಿಸಿ ಹೊರಟುಹೋದಳು. ಇದು ಆ ವಿಧವೆಗೆ ಅತ್ಯಂತ ದುಃಖವನ್ನು ತಂದುಬಿಟ್ಟಿದೆ.

ಆ ವಿಧವೆ ತನ್ನ ಸಾಕುಮಗನಿಗಾಗಿ ರಾಮಮಲ್ಲಿಕ ದುಃಖಪಡುತ್ತಿರುವುದನ್ನು ನೋಡಿದಳು. ಆಕೆ ಕೆಲವು ದಿವಸಗಳಿಂದ ತೀರ ಹುಚ್ಚಿಯೋಪಾದಿಯಲ್ಲಿ ಪರಮಹಂಸರ ದರ್ಶನ ಪಡೆಯಲು ಅಲ್ಲಿಗೆ ಬಾಗ್‌ಬಸಾರಿನಿಂದ ಓಡಿ ಓಡಿ ಬರುತ್ತಿದ್ದಳು. ತನ್ನ ಈ ಕಡು ದುಃಖದಿಂದ ಪಾರಾಗಲು ಪರಮಹಂಸರು ಯಾವುದಾದರು ಒಂದು ಮಾರ್ಗವನ್ನು ತೋರಿಸಿಕೊಡಬಹುದೆಂದು ಆಕೆ ಅತ್ಯಂತ ಆಕಾಂಕ್ಷಿತಳಾಗಿದ್ದಳು. ಪರಮಹಂಸರು ಮಾತು ಮುಂದುವರಿಸಿದರು.

ಶ್ರೀರಾಮಕೃಷ್ಣರು: "ಅಂದು ಇಲ್ಲಿಗೆ ಒಬ್ಬ ಬಂದಿದ್ದ. ಒಂದು ಕಿಂಚಿತ್ ಕುಳಿತಿದ್ದು ಹೇಳಿದ, 'ಹೋಗಿ ನನ್ನ ಮುದ್ದು ಮಗುವಿನ ಚಂದ್ರಾನನ ನೋಡಿ ಬರುತ್ತೇನೆ' ಅಂತ. ನನಗೆ ಸುಮ್ಮನೆ ಕುಳಿತುಕೊಳ್ಳಲಾಗಲಿಲ್ಲ. ರೇಗಿದೆ, 'ಎಲೊ ನೀಚ, ಭಗವಂತನ ಚಂದ್ರಾನನ

ಕ್ಕಿಂತ ನಿನ್ನ ಮಗನ ಚಂದ್ರಾನನ ನಿನಗೆ ಪ್ರಿಯವಾಗಿ ತೋರುತ್ತಿರುವುದೆ ? ಹೊರಡು ಇಲ್ಲಿಂದ!' ಅಂತ.

(ಮಾಸ್ಟರಿಗೆ) "ಸತ್ಯವೇನೆಂದರೆ, ಭಗವಂತನೊಬ್ಬನೆ ಸತ್ಯ ಉಳಿದುದೆಲ್ಲ ಅನಿತ್ಯ. ಜೀವ, ಜಗತ್ತು, ಮನೆ, ಮಠ, ಮಕ್ಕಳು ಇವೆಲ್ಲ ಐಂದ್ರಜಾಲಿಕನ ಇಂದ್ರಜಾಲ. ಐಂದ್ರಜಾಲಿಕ ತನ್ನ ಯಕ್ಷಿಣಿ ದಂಡವನ್ನು ಸುತ್ತುತ್ತ ಹೇಳುತ್ತಾನೆ, 'ಬಾ! ಬಾ! ಬಾ!' ಅಂತ. ಬಳಿಕ ಪ್ರೇಕ್ಷಕರಿಗೆ ಹೇಳುತ್ತಾನೆ, 'ಮಡಕೆ ಮುಚ್ಚಳ ತೆಗೆದು ನೋಡಿ; ನೋಡಿ, ಅದರಿಂದ ಎಷ್ಟೊಂದು ಹಕ್ಕಿಗಳು ಆಕಾಶಕ್ಕೆ ಹಾರಿಹೋಗುತ್ತಿವೆ!' ಅಂತ. ಆದರೆ ವಾಸ್ತವವಾಗಿ ಐಂದ್ರಜಾಲಿಕನೇ ಸತ್ಯ, ಉಳಿದುದೆಲ್ಲಾ ಅನಿತ್ಯ. ಈಗಿದ್ದುದು ಈಗಿರೋಲ್ಲ.

"ಕೈಲಾಸದಲ್ಲಿ ಶಿವ ಕುಳಿತುಕೊಂಡಿದ್ದ. ಪಕ್ಕದಲ್ಲಿ ನಂದಿ ಕುಳಿತಿದ್ದ. ಇದ್ದಕ್ಕಿದ್ದ ಹಾಗೆ ಒಂದು ಭಾರಿ ಶಬ್ದ ಕೇಳಿಸಿತು. ಆಗ ನಂದಿ ಶಿವನನ್ನು ಕೇಳಿದ, 'ಇದು ಏತರ ಶಬ್ದ ?' ಅಂತ. ಶಿವ ಹೇಳಿದ, 'ರಾವಣ ಈಗ ಜನ್ಮ ತಳೆದಿದಾನೆ, ಅದಕ್ಕಾಗಿ ಈ ಶಬ್ದ' ಅಂತ. ಕೆಲವು ಕ್ಷಣಗಳೊಳಗಾಗಿಯೆ ಇನ್ನೊಂದು ಭಯಾನಕ ಶಬ್ದ ಕೇಳಿಬಂತು. ನಂದಿ ಕೇಳಿದ, 'ಇದು ಏತರ ಶಬ್ದ ?' ಅಂತ. ಶಿವ ನಗುತ್ತ ಹೇಳಿದ, 'ಈಗ ರಾವಣ ಸತ್ತುಹೋದ' ಅಂತ. ಜನ್ಮ-ಮೃತ್ಯು ಎಂಬುವು ಇಂದ್ರಜಾಲದ ಹಾಗೆ: ಈಗಿದ್ದುದು ಈಗಿರೋಲ್ಲ. ಭಗವಂತನೊಬ್ಬನೆ ಸತ್ಯ, ಉಳಿದುದೆಲ್ಲ ಅನಿತ್ಯ. ನೀರೇ ಸತ್ಯ; ನೀರಿನ ಗುಳ್ಳೆ ಈಗಿದ್ದುದು ಈಗಿರೋಲ್ಲ. ಗುಳ್ಳೆ ನೀರಿನೊಡನೆ ಬೆರೆತುಹೋಗುತ್ತದೆ. ಅದು ಯಾವ ನೀರಿನಿಂದ ಉದ್ಭವವಾಯಿತೊ, ಆದೇ ನೀರಿನಲ್ಲಿ ಲಯವಾಗಿಹೋಗುತ್ತದೆ.

"ಭಗವಂತನನ್ನು ಒಂದು ಮಹಾ ಸಮುದ್ರಕ್ಕೂ, ಜೀವಗಳನ್ನು ಅದರಲ್ಲಿ ತೇಲೋ ಗುಳ್ಳೆಗಳಿಗೂ ಹೋಲಿಸಬಹುದು. ಅವು ಆತನಲ್ಲಿಯೇ ಉದ್ಭವಿಸಿ ಆತನಲ್ಲಿಯೇ ಲಯವಾಗುತ್ತವೆ. ಮಕ್ಕಳುಮರಿಗಳೆಂಬುವನ್ನು ದೊಡ್ಡ ಗುಳ್ಳೆಯ ಸುತ್ತಲೂ ಸೇರಿಕೊಂಡಿರೋ ಚಿಕ್ಕ ಗುಳ್ಳೆಗಳಿಗೆ ಹೋಲಿಸಬಹುದು.

"ಭಗವಂತನೊಬ್ಬನೇ ಕೇವಲ ಸತ್ಯ. ಆತನ ಪಾದಪದ್ಮಗಳಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳುವ ಬಗೆ ಹೇಗೆ, ಆತನ ಸಾಕ್ಷಾತ್ಕಾರವನ್ನು

ಹೊಂದಲು ಉಪಾಯವೇನು ಎಂಬುವುಗಳ ಕಡೆ ನಿನ್ನ ಮನಸ್ಸನ್ನು ತಿರುಗಿಸು. ಸುಮ್ಮನೆ ಶೋಕಪಟ್ಟರೆ ಏನು ದೊರೆಯುತ್ತದೆ?"

ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ. ಆ ವಿಧವೆ ಹೇಳಿದಳು, "ನಾನು ಹೋಗಿಬರುತ್ತೇನೆ" ಅಂತ. ಪರಮಹಂಸರು ಆಕೆಯ ಕಡೆಗೆ ತಮ್ಮ ಪ್ರೇಮದೃಷ್ಟಿಯನ್ನು ಹಾಕಿ ಹೇಳಿದರು, "ನೀನು ಈಗಲೇ ಹೋಗಬೇಕು ಅಂತೀಯಾ? ಬಹಳ ಬಿಸಿಲಲ್ಲ. ಸ್ವಲ್ಪ ಹೊತ್ತಾದ ಮೇಲೆ ಭಕ್ತರೊಡನೆ ಗಾಡಿಯಲ್ಲಿ ಕುಳಿತು ಹೋಗು" ಅಂತ.

ಹಗಲು ಬಹಳ ಬಿಸಿಲಾಗಿದ್ದುದರಿಂದ ಒಬ್ಬ ಭಕ್ತ ಪರಮಹಂಸರಿಗೆ ಚಂದನಮರದಿಂದ ಮಾಡಿದ್ದ ಒಂದು ಹೊಚ್ಚ ಹೊಸ ಬೀಸಣಿಗೆ ತಂದು ಕೊಟ್ಟ. ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿತು. ಹೇಳಿದರು, "ಅಬ್ಬ! ಅಬ್ಬ! ಓಂ ತತ್-ಸತ್! ಕಾಳಿ!" ಅಂತ. ಮೊದಲು ಅದರಿಂದ ದೇವದೇವಿಯರ ಪಟಗಳಿಗೆ ಗಾಳಿ ಬೀಸಿದರು. ಬಳಿಕ ತಮಗೆ ಬೀಸಿಕೊಳ್ಳುತ್ತಾ ಮಾಸ್ಟರಿಗೆ ಹೇಳಿದರು, "ನೋಡು, ನೋಡು! ಎಂಥ ಸೊಗಸಾದ ಹವ ಬರುತ್ತಿದೆ!" ಅಂತ. ಮಾಸ್ಟರೂ ಆನಂದದಿಂದ ಪರಮಹಂಸರ ಕಡೆ ನೊಡುತ್ತಿದಾನೆ.

ಕ್ಯಾಪ್ಟನ್ ತನ್ನ ಮಕ್ಕಳೊಡನೆ ಅಲ್ಲಿಗೆಬಂದ.

ಶ್ರೀರಾಮಕೃಷ್ಣರು ಕಿಶೋರಿಗೆ ಹೇಳಿದರು, "ಈ ಮಕ್ಕಳಿಗೆ ದೇವಾಲಯಗಳನ್ನು ತೋರಿಸಿ ಬಾ" ಅಂತ. ಪರಮಹಂಸರು ಕ್ಯಾಪ್ಟನ್ನನೊಡನೆ ಮಾತುಕತೆಯಾಡಲಾರಂಭಿಸಿದರು. ಮಾಸ್ಟರ್, ದ್ವಿಜ ಇವರೇ ಮೊದಲಾದ ಭಕ್ತರು ನೆಲದ ಮೇಲೆ ಕುಳಿತಿದಾರೆ. ದಮ್‌ದಮ್‌ನ ಮಾಸ್ಟರೂ ಬಂದಿದಾನೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಉತ್ತರಾಭಿಮುಖರಾಗಿ ಕುಳಿತಿದಾರೆ. ಅವರು ಕ್ಯಾಪ್ಟನ್ನನಿಗೆ ತಮ್ಮ ಚಿಕ್ಕ ಮಂಚದ ಮೇಲೆಯೆ ತಮ್ಮ ಎದುರಿಗೆ ಕುಳಿತುಕೊಳ್ಳುವಂತೆ ಹೇಳಿದರು.

ಶ್ರೀರಾಮಕೃಷ್ಣರು: "ನಾನು ಇವರಿಗೆ ನಿನ್ನ ವಿಷಯವಾಗಿ ಮಾತಾಡುತ್ತ, ನಿನ್ನ ಅತಿಶಯವಾದ ಭಕ್ತಿ, ಪೂಜೆ ಮತ್ತು ವಿವಿಧ ಮಂಗಳಾರತಿಗಳು ಇವುಗಳ ಸಂಬಂಧವಾಗಿ ವರ್ಣನೆಮಾಡುತ್ತಿದ್ದೆ."

ಕ್ಯಾಪ್ಟನ್ ಲಜ್ಜಿತನಾಗಿ: "ಪೂಜೆ ಮತ್ತು ಮಂಗಳಾರತಿ ಇವು

ಗಳ ಸಂಬಂಧವಾಗಿ ನನಗೇನು ಗೊತ್ತಿದೆ? ನಾನು ಹತ್ತರಲ್ಲೊಬ್ಬ ಹನ್ನೊಂದು.''

ಶ್ರೀರಾಮಕೃಷ್ಣರು: ''ಕಾಮಕಾಂಚನದಲ್ಲಿ ಆಸಕ್ತವಾಗಿರೋ 'ಅಹಂ' ಮಾತ್ರ ಕೆಟ್ಟ 'ಅಹಂ.' ನಾನು ಭಗವಂತನ ದಾಸ ಎಂಬ 'ಅಹಂ' ಕೆಟ್ಟದೇನಲ್ಲ. ಬಾಲಕನ 'ಅಹಂ' ಕೂಡ ಕೆಟ್ಟದಲ್ಲ. ಆತ ಯಾವ ಗುಣಗಳಿಗೂ ವಶನಲ್ಲ. ಮಕ್ಕಳು ಈ ನಿಮಿಷ ಪರಸ್ಪರ ಜಗಳ ಕಾಯುತ್ತವೆ; ಮರು ನಿಮಿಷ ಒಂದಾಗುತ್ತವೆ. ಈ ಕ್ಷಣದಲ್ಲಿ ಬಹಳ ಕಷ್ಟಪಟ್ಟು ಆಟದ ಮನೆ ಕಟ್ಟುತ್ತವೆ; ಮರುಕ್ಷಣ ತಾವೇ ಅದನ್ನು ತುಳಿದುಹಾಕಿಬಿಡುತ್ತವೆ. ದಾಸನ 'ಅಹಂ', ಬಾಲಕನ 'ಅಹಂ' ಇವುಗಳಿಂದ ಯಾವ ಕೆಡಕೂ ಸಂಭವಿಸದು. ಯಾವ ರೀತಿಯಾಗಿ ಕಲ್ಲು ಸಕ್ಕರೆ ಸಿಹಿ ಪದಾರ್ಥಗಳ ಗುಂಪಿಗೆ ಸೇರಿಲ್ಲವೊ, ಅದೇ ರೀತಿಯಾಗಿ ಈ ವಿಧದ 'ಅಹಂ', 'ಅಹಂ' ಗುಂಪಿಗೆ ಸೇರಿಲ್ಲ. ಉಳಿದ ಸಿಹಿ ಪದಾರ್ಥಗಳು ಅನಾರೋಗ್ಯವನ್ನು ತರುತ್ತವೆ; ಆದರೆ ಕಲ್ಲು-ಸಕ್ಕರೆ ಅವ್ಲ್ಲ ಹಾರಿ. ಅಥವಾ ಇದು ಓಂಕಾರದ ಹಾಗೆ. ಅದು ಶಬ್ದಗಳ ಗುಂಪಿಗೆ ಸೇರಿಲ್ಲ.

''ಈ 'ಅಹಂ' ನಿಂದ ಸಚ್ಚಿದಾನಂದನನ್ನು ಪ್ರೀತಿಸಲು ಸಾಧ್ಯ. 'ಅಹಂ' ಎಂಬುದು ಬಡಪಟ್ಟಿಗೆ ನಮ್ಮನ್ನು ಬಿಟ್ಟು ತೊಲಗಲೊಲ್ಲದು. ಆದ್ದರಿಂದ ಅದು ತಾನು 'ಭಕ್ತನ ಅಹಂ', 'ದಾಸನ ಅಹಂ' ಎಂದು ಭಾವಿಸುವಂತೆ ಒತ್ತಾಯಪಡಿಸಬೇಕು. ಇಲ್ಲದಿದ್ದರೆ ಬೇರೆ ಏನನ್ನು ತಾನೆ ಆಶ್ರಯಿಸಿ ಬದುಕಿರಲಾದೀತು? ಗೋಪಿಯರು ಶ್ರೀಕೃಷ್ಣನಲ್ಲಿಟ್ಟದ್ದ ಪ್ರೇಮ ಎಷ್ಟು ಅಗಾಧವಾದ್ದು! (ಕ್ಯಾಪ್ಟನ್ನನಿಗೆ) ನೀನು ಭಾಗವತವನ್ನು ಬಹಳವಾಗಿ ಓದುತ್ತಿದೀಯೆ. ಗೋಪಿಯರ ಸಂಬಂಧವಾಗಿ ನಮಗೇನಾದರು ಸ್ವಲ್ಪ ಹೇಳು.''

ಕ್ಯಾಪ್ಟನ್: ''ಶ್ರೀಕೃಷ್ಣ ಯಾವ ರಾಜವೈಭವವೂ ಇಲ್ಲದೆ ಬೃಂದಾವನದಲ್ಲಿ ವಾಸಿಸುತ್ತಿದ್ದಾಗಲೂ, ಗೋಪಿಯರು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಆತನನ್ನು ಆದರಿಸಿ ಪ್ರೀತಿಸಿದರು. ಅದಕ್ಕಾಗಿ ಶ್ರೀಕೃಷ್ಣ ಹೇಳಿದ, 'ತಮ್ಮ ಸರ್ವಸ್ವವನ್ನೂ—ದೇಹ, ಮನಸ್ಸು, ಚಿತ್ತ—ನನಗೆ ಸಮರ್ಪಿಸಿಬಿಟ್ಟರೋ ಗೋಪಿಯರ ಋಣವನ್ನು ನಾನು ತೀರಿಸುವ ಬಗೆ ಹೇಗೆ?' ಅಂತ.''

ಕ್ಯಾಪ್ಟನ್ನನ ಈ ಮಾತು ಪರಮಹಂಸರ ಹೃದಯದಲ್ಲಿ ಶ್ರೀಕೃಷ್ಣನಿಗಾಗಿ ಅತ್ಯಂತ ತೀವ್ರವಾದ ಪ್ರೇಮೋದ್ದೀಪನೆಯನ್ನು ಮಾಡಿಬಿಟ್ಟಿತು. "ಗೋವಿಂದ! ಗೋವಿಂದ!" ಅಂತ ಹೇಳುತ್ತ ಭಾವಾವಿಷ್ಟರಾಗುವುದರಲ್ಲಿದಾರೆ. ಪ್ರಾಯಶಃ ಬಾಹ್ಯಜ್ಞಾನಶೂನ್ಯರಾಗಿಬಿಟ್ಟಿದಾರೆ. ಕ್ಯಾಪ್ಟನ್ ವಿಸ್ಮಯಗೊಂಡು ಹೇಳುತ್ತಿದಾನೆ, "ಧನ್ಯರು! ಧನ್ಯರು!" ಅಂತ.

ಕ್ಯಾಪ್ಟನ್ ಮತ್ತು ಉಳಿದ ಭಕ್ತರು ಪರಮಹಂಸರ ಈ ಅದ್ಭುತ ಪ್ರೇಮಾವಸ್ಥೆಯನ್ನು ನೋಡುತ್ತಿದಾರೆ. ಪರಮಹಂಸರು ಪ್ರಕೃತಿಸ್ಥರಾಗುವವರೆಗೆ ಭಕ್ತರು ಅವರನ್ನೇ ದೃಷ್ಟಿಸಿನೋಡುತ್ತಾ ಕುಳಿತುಕೊಂಡಿದ್ದರು.

ಶ್ರೀರಾಮಕೃಷ್ಣರು: "ಮುಂದುವರಿಸು."

ಕ್ಯಾಪ್ಟನ್: "ಶ್ರೀಕೃಷ್ಣ ಯೋಗಿಗಳಿಗೆ ಅಗಮ್ಯ, ನಿಮ್ಮಂಥ ಯೋಗಿಗಳಿಗೆ ಅಗಮ್ಯ; ಆದರೆ ಗೋಪಿಯರಿಗೆ ಗಮ್ಯ. ಆತನ ದರ್ಶನ ಪಡೆಯಲು ಯೋಗಿಗಳು ಎಷ್ಟೊಂದು ವರ್ಷಗಳ ಕಾಲ ತಪಸ್ಸು ಮಾಡಿದರು! ಆದರೂ ಅವರಿಗೆ ಆತನ ದರ್ಶನ ದೊರೆಯಲಿಲ್ಲ. ಆದರೆ ಗೋಪಿಯರು ಅನಾಯಾಸವಾಗಿ ಆತನನ್ನು ಪಡೆದುಕೊಂಡರು!"

ಶ್ರೀರಾಮಕೃಷ್ಣರು ನಗುತ್ತ: "ನಿಜ, ಗೋಪಿಯರ ಕೈಯಿಂದ ಆತ ತಿಂಡಿ ತೀರ್ಥಗಳನ್ನು ತಿಂದ, ಅವರಿಗಾಗಿ ಅತ್ತ, ಅವರೊಡನೆ ಕ್ರೀಡಿಸಿದ, ಅವರಿಂದ ಇನ್ನೂ ಏನೇನೊ ಪಡೆದ."

ಒಬ್ಬ ಭಕ್ತ: "ಬಂಕಿಮಚಂದ್ರ ಶ್ರೀಕೃಷ್ಣಚರಿತೆಯನ್ನು ಬರೆದಿದಾನೆ."

ಶ್ರೀರಾಮಕೃಷ್ಣರು: "ಬಂಕಿಮ ಶ್ರೀಕೃಷ್ಣನನ್ನು ಸ್ವೀಕರಿಸುತ್ತಾನೆ, ರಾಧಿಕೆಯನ್ನು ಸ್ವೀಕರಿಸುತ್ತಿಲ್ಲ."

ಕ್ಯಾಪ್ಟನ್: "ಶ್ರೀಕೃಷ್ಣ ಗೋಪಿಯರೊಡನೆ ನಡೆಸಿದ ಲೀಲೆಯನ್ನು ಆತ ಒಪ್ಪಿಕೊಳ್ಳುತ್ತಿಲ್ಲ ಅಂತ ಕಾಣುತ್ತೆ."

ಶ್ರೀರಾಮಕೃಷ್ಣರು: "ಕಾಮಾದಿಗಳು ಆವಶ್ಯಕ ಅಂತ ಹೇಳುತ್ತಾನಂತೆ."

ದಮ್‌ದಮ್‌ನ ಮಾಸ್ಟರ್: "ಬಂಕಿಮ 'ನವಜೀವನ' ಎಂಬ ತನ್ನ ಮಾಸಪತ್ರಿಕೆಯಲ್ಲಿ ಬರೆದಿದಾನೆ, ಧರ್ಮ ಶಾರೀರಿಕ, ಮಾನಸಿಕ,

ಆಧ್ಯಾತ್ಮಿಕ ಇವೇ ಮೊದಲಾದ ಪ್ರವೃತ್ತಿಗಳಿಗೆ ಸ್ಫೂರ್ತಿಯನ್ನು ಕೊಡುತ್ತದೆ. ಇದೇ ಅದರಿಂದಾಗೋ ಪ್ರಯೋಜನ ಅಂತ.''

ಕ್ಯಾಪ್ಟನ್: ''ಆತನ ದೃಷ್ಟಿಯಿಂದ ಕಾಮಾದಿಗಳು ಆವಶ್ಯಕ. ಆದರೆ ಆತ ಲೀಲೆಯನ್ನು ಒಪ್ಪುತ್ತಿಲ್ಲ. ಭಗವಂತ ಮನುಷ್ಯದೇಹ ಧಾರಣೆಮಾಡಿಕೊಂಡು ಬೃಂದಾವನಕ್ಕೆ ಬಂದಿದ್ದ, ಅಲ್ಲಿ ರಾಧೆ ಮತ್ತು ಗೋಪಿಯರೊಡನೆ ಆತ ಕ್ರೀಡಿಸಿದ ಎಂಬುದನ್ನು ಆತ ಒಪ್ಪುತ್ತಿಲ್ಲ.''

ಶ್ರೀರಾಮಕೃಷ್ಣರು: ''ಆ ವಿಷಯಗಳನ್ನೆಲ್ಲ ವಾರ್ತಾ ಪತ್ರಿಕೆಯಲ್ಲಿ ಹಾಕಿಲ್ಲ. ಆದ್ದರಿಂದ ಆತ ಅವನ್ನು ನಂಬೋ ಬಗೆ ಹೇಗೆ?

''ಒಬ್ಬ ತನ್ನ ಸ್ನೇಹಿತನಿಗೆ ಹೇಳಿದ, 'ನೋಡು, ನಿನ್ನೆ ಆ ಕೇರಿಯಲ್ಲಿ ಬರುತ್ತಿದ್ದೆ. ಆ ಮನೆ 'ಚಟ ಚಟ' ಅಂತ ಮುರಿದುಬಿತ್ತು' ಅಂತ. ಸ್ನೇಹಿತ ಹೇಳಿದ, 'ಒಂದು ನಿಮಿಷ ತಾಳು, ಪೇಪರಿನಲ್ಲಿ ಹಾಕಿದೆಯೆ ನೋಡಿಬರುತ್ತೇನೆ' ಅಂತ. ಆ ಮನೆ 'ಚಟ ಚಟ' ಅಂತ ಮುರಿದುಬಿದ್ದ ಸಮಾಚಾರವನ್ನು ಪೇಪರಿನಲ್ಲಿ ಹಾಕಿರಲಿಲ್ಲ. ಆಗ ಆ ಸ್ನೇಹಿತ ಹೇಳಿದ, 'ಎಲ್ಲಿ, ಪೇಪರಿನಲ್ಲಿ ಅದರ ಸುದ್ದಿಸಮಾಚಾರವೇ ಇಲ್ಲವಲ್ಲ! ಬಹುಶಃ ಸತ್ಯವಲ್ಲ ಅಂತ ಕಾಣುತ್ತೆ' ಅಂತ. ಆಗ ಮೊದಲನೆ ವ್ಯಕ್ತಿ ಹೇಳಿದ, 'ಏನು ಇದು ನೀನು ಹೇಳೋದು? ನಾನೆ ಕಣ್ಣಾರ ನೋಡಿ ಬಂದಿದೇನೆ' ಅಂತ. ಅದಕ್ಕೆ ಸ್ನೇಹಿತ ಹೇಳಿದ, 'ನೋಡಿದ್ದರೆ ನೋಡಿರು, ಪೇಪರಿನಲ್ಲಿ ಬರೋವರೆಗೆ ನಾನು ಅದನ್ನು ನಂಬೋದಿಲ್ಲ' ಅಂತ.

''ಭಗವಂತ ಮಾನವದೇಹಧಾರಣೆಮಾಡಿ ಲೀಲೆ ನಡೆಸುತ್ತಾನೆ ಎಂಬುದನ್ನು ಬಂಕಿಮ ನಂಬೋ ಬಗೆ ಹೇಗೆ? ಇಂಗ್ಲಿಷು ವಿದ್ಯಾಭ್ಯಾಸ ಕ್ರಮದಲ್ಲಿ ಈ ವಿಷಯ ಎಲ್ಲೂ ಬಂದಿಲ್ಲ. ಪೂರ್ಣ-ಅವತಾರ ಏನೆಂಬುದನ್ನು ಜನರಿಗೆ ಅರಿವಾಗುವಂತೆ ವಿವರಿಸಿಹೇಳೋದು ಬಹಳ ಕಠಿನ; ಏನು ಹೇಳುತ್ತೀಯ? ಈ ಮೂರುವರೆ ಮೊಳ ಉದ್ದವಿರೋ ಮಾನವದೇಹದಲ್ಲಿ ಅನಂತ ವ್ಯಕ್ತವಾಗುವಿಕೆ!''

ಕ್ಯಾಪ್ಟನ್: '''ಕೃಷ್ಣಸ್ತು ಭಗವಾನ್ ಸ್ವಯಂ.' ಆದರೆ ಆತನ ಸಂಬಂಧವಾಗಿ ವಿವರಿಸಿ ಹೇಳುವಾಗ ಮಾತ್ರ 'ಪೂರ್ಣ', 'ಅಂಶ' ಎಂಬ ಈ ಪದಗಳನ್ನು ಉಪಯೋಗಿಸಬೇಕಾಗುತ್ತದೆ.''

ಶ್ರೀರಾಮಕೃಷ್ಣರು: ''ಪೂರ್ಣ ಮತ್ತು ಅಂಶ ಎಂಬುವು ಬೆಂಕಿ

ಮತ್ತು ಅದರ ಕಿಡಿ ಇದ್ದ ಹಾಗೆ. ಭಗವಂತ ಅವತರಿಸೋದು ಭಕ್ತರಿಗಾಗಿ, ಜ್ಞಾನಿಗಳಿಗಾಗಿ ಅಲ್ಲ. ಅಧ್ಯಾತ್ಮರಾಮಾಯಣದಲ್ಲಿ ಹೇಳಿದೆ, ರಾಮನೇ ವ್ಯಾಪ್ಯ, ರಾಮನೇ ವ್ಯಾಪಕ ಅಂತ. 'ವಾಚ್ಯವಾಚಕಭೇದೇನ ತ್ವಮೇವ ಪರಮೇಶ್ವರಃ.' "

ಕ್ಯಾಪ್ಟನ್: " 'ವಾಚ್ಯ-ವಾಚಕ' ಅಂದರೆ 'ವ್ಯಾಪ್ಯ-ವ್ಯಾಪಕ' ಅಂತ."

ಶ್ರೀರಾಮಕೃಷ್ಣರು: "ಇಲ್ಲಿ ವ್ಯಾಪಕ ಎಂದರೆ ಒಂದು ಮಿತಿಯುಳ್ಳ ಆಕಾರ ಅಂತ. ಭಗವಂತನೇ ಮಾನವದೇಹಧಾರಣೆ ಮಾಡಿಕೊಂಡು ಬರುವಿಕೆ."

ಈ ರೀತಿಯಾಗಿ ಪರಮಹಂಸರು ಕ್ಯಾಪ್ಟನ್ನನೊಡನೆ ಮತ್ತು ಭಕ್ತರೊಡನೆ ಮಾತುಕತೆಗಳನ್ನಾಡುತ್ತಿದ್ದಾಗ, ಬ್ರಾಹ್ಮಸಮಾಜದ ಅನುಯಾಯಿಗಳು ತ್ರೈಲೋಕ್ಯ ಮತ್ತು ಜಯಸೇನಗೋಪಾಲ ಕೊಠಡಿಯನ್ನು ಪ್ರವೇಶಿಸಿದರು. ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು. ಪರಮಹಂಸರು ನಗುಮುಖದಿಂದ ತ್ರೈಲೋಕ್ಯನ ಕಡೆ ನೋಡುತ್ತ ತಮ್ಮ ಮಾತು ಮುಂದುವರಿಸಿದರು.

ಶ್ರೀರಾಮಕೃಷ್ಣರು: "ಅಹಂಕಾರವೆಂಬುದೊಂದು ಇರುವುದರ ದೆಸೆಯಿಂದ ಮನುಷ್ಯನಿಗೆ ಭಗವಂತನ ದರ್ಶನ ಆಗುತ್ತಿಲ್ಲ. ಭಗವದಾಲಯದ ದ್ವಾರಪ್ರದೇಶದಲ್ಲಿ ಈ ಅಹಂಕಾರವೆಂಬ ದೊಡ್ಡ ದಿಮ್ಮಿ ಬಿದ್ದುಕೊಂಡಿದೆ. ಇದನ್ನು ದಾಟಿಹೋಗದೆ ಇದ್ದರೆ ಆತನ ಆಲಯವನ್ನು ಪ್ರವೇಶಮಾಡಲಾಗೋದಿಲ್ಲ.

"ಒಬ್ಬನಿಗೆ ಭೂತಸಿದ್ಧಿ ದೊರೆತಿತ್ತು. ಒಂದು ದಿನ ಆತನ ಇಚ್ಛೆಗನುಸಾರ ಒಂದು ಭೂತ ಆತನ ಹತ್ತಿರಕ್ಕೆ ಬಂತು. ಅದು ಹೇಳಿತು, 'ನಾನು ಏನು ಕೆಲಸ ಮಾಡಬೇಕಾಗಿದೆ ಎಂಬುದನ್ನು ದಯವಿಟ್ಟು ತಿಳಿಸು. ನನಗೆ ನೀನು ಸಾಕಾದಷ್ಟು ಕೆಲಸ ಕೊಡಲಾರದೆ ಹೋದೆ ಅಂದರೆ, ನಿನ್ನ ಕತ್ತು ಮುರಿದುಹಾಕಿಬಿಡುತ್ತೇನೆ' ಅಂತ. ಏನೇನು ಕೆಲಸ ಆಗಬೇಕಾಗಿತ್ತೊ, ಆ ಕೆಲಸಗಳನ್ನೆಲ್ಲ ಆ ವ್ಯಕ್ತಿ ಆ ಭೂತದ ಕೈಯಿಂದ ಒಂದೊಂದನ್ನಾಗಿ ಮಾಡಿಸಿಬಿಟ್ಟ. ಬಳಿಕ ಭೂತಕ್ಕೆ ಬೇರೆ ಯಾವ ಕೆಲಸವೂ ದೊರೆಯಲಿಲ್ಲ. ಆಗ ಆ ಭೂತ ಆತನಿಗೆ ಹೇಳಿತು, 'ಈಗ ನಿನ್ನ ಕತ್ತು ಮುರಿದುಹಾಕಿಬಿಡುತ್ತೇನೆ' ಅಂತ. ಆ ವ್ಯಕ್ತಿ ಹೇಳಿದ, 'ಒಂದು

ನಿಮಿಷ ನಿಲ್ಲು, ಈಗಲೇ ಬರುತ್ತೇನೆ' ಅಂತ. ಆತ ತನ್ನ ಗುರುವಿನ ಹತ್ತಿರಕ್ಕೆ ಹೋಗಿ ಹೇಳಿದ, 'ಪೂಜ್ಯರೆ, ನಾನು ಒಂದು ದೊಡ್ಡ ವಿಪತ್ತಿಗೆ ಒಳಗಾಗಿದ್ದೇನೆ. ಸಮಾಚಾರ ಇದಿದು. ಈಗ ನಾನು ಏನು ಮಾಡಲಿ?' ಅಂತ. ಗುರು ಆಗ ಸಲಹೆಯಿತ್ತ, 'ನೀನು ಒಂದು ಕೆಲಸ ಮಾಡು. ಈ ತಿರುಚು ಮುರುಚು ಕೂದಲನ್ನು ನೆಟ್ಟಗೆ ಮಾಡುವಂತೆ ಅದಕ್ಕೆ ಹೇಳು' ಅಂತ. ಆ ಭೂತ ಹಗಲಿರುಳೆನ್ನದೆ ಆ ಕೂದಲನ್ನು ನೆಟ್ಟಗೆಮಾಡೋ ಕಾರ್ಯದಲ್ಲಿ ತೊಡಗಿತು. ಕೂದಲು ಎಂದಿಗಾದರೂ ನೆಟ್ಟಗಾಗುವುದೆ? ಅದು ಯಾವ ರೀತಿಯಾಗಿ ತಿರುಚು ಮುರುಚಿಕೊಂಡಿತ್ತೊ ಹಾಗೆಯೇ ಅದು ಉಳಿದುಕೊಂಡಿತು.

"ಅದೇ ರೀತಿಯಾಗಿ ಅಹಂಕಾರ ಈಗ ನಾಶವಾಗಿಹೋದಂತಾಗಿ ಮತ್ತೆ ತಲೆ ಎತ್ತುತ್ತದೆ. ಅಹಂಕಾರ ತ್ಯಾಗವಾಗಿಹೋಗದ ಹೊರತು, ಭಗವಂತನ ಕೃಪೆ ಬಂದೊದಗದು.

"ಒಬ್ಬನ ಮನೆಯಲ್ಲಿ ಒಂದು ಔತಣದ ಏರ್ಪಾಡು ನಡೆದಿದೆ, ಆ ಮನೆಯ ಯಜಮಾನ ಒಬ್ಬನನ್ನು ಉಗ್ರಾಣದಲ್ಲಿ ನೇಮಿಸಿದಾನೆ ಅಂತ ಇಟ್ಟುಕೊಳ್ಳಿ. ಎಲ್ಲಿಯವರೆಗೆ ಆತ ಆ ಕೆಲಸವನ್ನು ನಿರ್ವಹಿಸಿಕೊಂಡು ಹೋಗುತ್ತಿರುತ್ತಾನೊ ಅಲ್ಲಿಯವರೆಗೆ ಯಜಮಾನ ಆ ಕಡೆಗೆ ಸುಳಿಯೋದೇ ಇಲ್ಲ. ಆದರೆ ಉಗ್ರಾಣಿಕ ತಾನೇ ಆ ಕಾರ್ಯವನ್ನು ತ್ಯಜಿಸಿಬಿಟ್ಟು ಹೊರಟುಹೋದಾಗ ಮಾತ್ರ, ಯಜಮಾನ ಒಡನೆಯೇ ಅಲ್ಲಿಗೆ ಬಂದು ಉಗ್ರಾಣಕ್ಕೆ ಬೀಗಹಾಕಿ ಅದರ ಸ್ವಾಮ್ಯವನ್ನು ತಾನೇ ವಹಿಸಿಕೊಳ್ಳುತ್ತಾನೆ.

"ಅಪ್ರಾಪ್ತ ವಯಸ್ಕನಿಗೆ ಮಾತ್ರ ರಕ್ಷಕನನ್ನು ನಿಯಮಿಸುತ್ತಾರೆ. ಹುಡುಗ ತಾನೇ ತನ್ನ ಸ್ವತ್ತನ್ನು ಕಾಪಾಡಿಕೊಳ್ಳಲಾರ; ಆದ್ದರಿಂದ ದೊರೆ ಆತನ ಸಂರಕ್ಷಣೆಯ ಭಾರವನ್ನು ಹೊತ್ತುಕೊಳ್ಳುತ್ತಾನೆ. ನಾವು ನಮ್ಮ ಅಹಂಕಾರವನ್ನು ತ್ಯಜಿಸದ ಹೊರತು ಭಗವಂತ ನಮ್ಮಗಳ ಭಾರವನ್ನು ಹೊತ್ತುಕೊಳ್ಳಲೊಲ್ಲ.

"ವೈಕುಂಠದಲ್ಲಿ ಲಕ್ಷ್ಮಿ ಮತ್ತು ನಾರಾಯಣ ಕುಳಿತುಕೊಂಡಿದ್ದರು. ಇದ್ದಕ್ಕಿದ್ದಹಾಗೆ ನಾರಾಯಣ ಎದ್ದು ನಿಂತುಕೊಂಡ. ಲಕ್ಷ್ಮಿ ಆತನ ಪಾದಗಳನ್ನು ಒತ್ತುತ್ತಿದ್ದವಳು ಕೇಳಿದಳು, 'ಪ್ರಭು, ಎಲ್ಲಿಗೆ ಹೊರಟರಿ?' ಅಂತ. ನಾರಾಯಣ ಉತ್ತರವಿತ್ತ, 'ನನ್ನ ಒಬ್ಬ ಭಕ್ತ ದೊಡ್ಡ ವಿಪತ್ತಿ

ಗೊಳಗಾಗಿದಾನೆ. ಆತನಿಗೆ ರಕ್ಷಣೆ ನೀಡಲು ಹೊರಟಿದೇನೆ' ಅಂತ. ಹೀಗೆಂದು ಹೇಳಿ ನಾರಾಯಣ ವೈಕುಂಠವನ್ನು ಬಿಟ್ಟುಹೊರಟ. ಆದರೆ ಒಡನೆಯೆ ಹಿಂದಿರುಗಿ ಬಂದುಬಿಟ್ಟ. ಆಗ ಲಕ್ಷ್ಮಿ ಕೇಳಿದಳು, 'ಏನು ಸಮಾಚಾರ, ಇಷ್ಟು ಬೇಗ ಹಿಂದಿರುಗಿ ಬಂದುಬಿಟ್ಟಿರಲ್ಲ?' ಅಂತ. ನಾರಾಯಣ ನಗುತ್ತ ಹೇಳಿದ, 'ಆ ಭಕ್ತ ನನ್ನನ್ನು ಧ್ಯಾನಿಸುತ್ತ ಭಾವಪರವಶನಾಗಿ ದಾರಿಯಲ್ಲಿ ನಡೆದುಹೋಗುತ್ತಿದ್ದ. ಪಕ್ಕದಲ್ಲಿಯೇ ಇದ್ದ ಗರಿಕೆಯ ಮೇಲೆ ಅಗಸರು ಬಟ್ಟೆಗಳನ್ನು ಒಣಗುಹಾಕಿದ್ದರು. ಭಕ್ತ ಆ ಅವಸ್ಥೆಯಲ್ಲಿ ಅವುಗಳ ಮೇಲೆ ನಡೆದುಹೋಗಿಬಿಟ್ಟ. ಅದನ್ನು ನೋಡಿ ಅಗಸರು ದೊಣ್ಣೆ ತೆಗೆದುಕೊಂಡು ಆತನನ್ನು ಹೊಡೆಯಲು ಹೋಗುತ್ತಿದ್ದರು. ನಾನು ಹೊರಟಿದ್ದುದು ಆತನನ್ನು ಅವರಿಂದ ರಕ್ಷಿಸುವುದಕ್ಕಾಗಿ' ಅಂತ. ಲಕ್ಷ್ಮಿ ಮತ್ತೆ ಕೇಳಿದಳು, 'ಹಾಗಾದರೆ ಮತ್ತೆ ಏಕೆ ಹಿಂದಿರುಗಿಬಂದುಬಿಟ್ಟಿರಿ?' ಅಂತ. ನಾರಾಯಣ ನಗುನಗುತ್ತ ಹೇಳಿದ, 'ಆ ಭಕ್ತ ತಾನೇ ಆ ಅಗಸರನ್ನು ಹೊಡೆಯಲು ಇಟ್ಟಿಗೆ ಚೂರನ್ನು ಕೈಯಲ್ಲಿ ತೆಗೆದುಕೊಂಡಿದ್ದುದನ್ನು ನೋಡಿದೆ. (ಎಲ್ಲರೂ ನಗುತ್ತಿದಾರೆ.) ಅದಕ್ಕಾಗಿ ನಾನು ಹಿಂದಿರುಗಿ ಬಂದುಬಿಟ್ಟೆ' ಅಂತ.

"ನಾನು ಕೇಶವಸೇನನಿಗೆ ಹೇಳಿದೆ, '"ಅಹಂ" ಎಂಬುದನ್ನು ನೀನು ತ್ಯಾಗಮಾಡಬೇಕು' ಅಂತ. ಅದಕ್ಕೆ ಆತ ಉತ್ತರವಿತ್ತ, 'ಮಹಾಶಯರೆ, ನಾನು ಹಾಗೆ ಮಾಡಿಬಿಟ್ಟರೆ ನನ್ನ ಸಮಾಜ ನಡೆದುಕೊಂಡು ಹೋಗೋ ಬಗೆ ಹೇಗೆ?' ಅಂತ.

"ನಾನು ಹೇಳಿದೆ, 'ನಿನ್ನದು ಎಂಥಾ ಬುದ್ಧಿ! ನಾನು ನಿನಗೆ "ಅಪಕ್ವ ಅಹಂ" ಅಂದರೆ ಕಾಮಕಾಂಚನಾಸಕ್ತ "ಅಹಂ" ಅನ್ನು ತ್ಯಾಗಮಾಡು ಅಂತ ಹೇಳುತ್ತಿರುವೆನೇ ವಿನಾ, "ಪಕ್ವ ಅಹಂ" ಅಂದರೆ "ದಾಸ್ಯ ಅಹಂ", "ಭಕ್ತನ ಅಹಂ" ಅನ್ನು ತ್ಯಾಗಮಾಡು ಅಂತ ಹೇಳುತ್ತಿಲ್ಲ. ನಾನು ಭಗವಂತನ ದಾಸ, ನಾನು ಭಗವಂತನ ಸಂತಾನ ಎಂಬ "ಅಹಂ" ಗೇ "ಪಕ್ವ ಅಹಂ" ಅಂತ ಹೆಸರು. ಈ "ಅಹಂ" ನಿಂದ ಯಾವ ತೊಂದರೆಯೂ ಉಂಟಾಗದು' ಅಂತ."

ತ್ರೈಲೋಕ್ಯ: "ಅಹಂಕಾರದಿಂದ ಮುಕ್ತವಾಗೋದು ಬಹಳ ಕಠಿನ. ಜನ ಸುಮ್ಮನೆ ಭಾವಿಸುತ್ತಾರೆ, ತಾವು ಅದರಿಂದ ಮುಕ್ತರಾಗಿಬಿಟ್ಟಿದೇವೆ ಅಂತ."

ಶ್ರೀರಾಮಕೃಷ್ಣರು: "ತನಗೆ ಅಹಂಕಾರ ಬಂದುಬಿಡಬಹುದೆಂದು ಹೆದರಿ ಗೌರಿಪಂಡಿತ ತನ್ನ ಸಂಬಂಧವಾಗಿ 'ನಾನು' ಎಂಬ ಪದವನ್ನು ಉಪಯೋಗಿಸದೆ 'ಇದು' ಎಂಬ ಪದವನ್ನು ಉಪಯೋಗಿಸುತ್ತಿದ್ದ. ನಾನೂ ಆತನನ್ನು ಅನುಸರಿಸಿದೆ. 'ನಾನು ಊಟ ಮಾಡಿದೆ' ಅಂತ ಹೇಳೋಕೆ ಬದಲು, 'ಇದು ಊಟ ಮಾಡಿತು' ಅಂತ ಹೇಳಲಾರಂಭಿಸಿದೆ. ಅದನ್ನು ನೋಡಿ ಮಥುರಬಾಬು ಒಂದು ದಿನ ನನಗೆ ಹೇಳಿದ, 'ಇದೇನಿದು? ನೀವೂ ಏಕೆ ಹಾಗೆ ಹೇಳುತ್ತಿದೀರಿ? ಅವರು ಬೇಕಾದರೆ ಹಾಗೆ ಹೇಳಿಕೊಳ್ಳಲಿ. ಅವರಲ್ಲಿ ಅಹಂಕಾರ ಇದೆ. ನೀವು ಅಹಂಕಾರಶೂನ್ಯರು; ನಿಮಗೇನು ಅಂಥದರ ಆವಶ್ಯಕತೆಯೇನಿಲ್ಲ' ಅಂತ.

"ನಾನು ಕೇಶವಸೇನನಿಗೆ ಹೇಳಿದೆ, '"ಅಹಂ" ಎಂಬುದು ನಿಮ್ಮನ್ನು ಬಿಟ್ಟು ತೊಲಗಲ್ಲೊಲ್ಲದು. ಆದ್ದರಿಂದ ಅದು "ದಾಸನ ಅಹಂ" ಆಗಿ ಉಳಿದುಕೊಂಡಿರಲಿ' ಅಂತ. ಪ್ರಹ್ಲಾದನಿಗೆ ಎರಡು ಭಾವಗಳಿದ್ದುವು. ಕೆಲವು ವೇಳೆ 'ಸೋಽಹಮ್' ಭಾವ, ಎಂದರೆ, 'ನಾನೇ ನೀನು, ನೀನೇ ನಾನು' ಎಂಬ ಭಾವದಲ್ಲಿರುತ್ತಿದ್ದ. ಮತ್ತೆ ಆತನಲ್ಲಿ ಅಹಂಬುದ್ಧಿ ತಲೆ ಎತ್ತಿದಾಗ, ಆತ 'ದಾಸ್ಯ' ಭಾವದಲ್ಲಿ, ಎಂದರೆ, 'ನಾನು ದಾಸ, ನೀನು ಪ್ರಭು' ಎಂಬ ಭಾವದಲ್ಲಿರುತ್ತಿದ್ದ. 'ಸೋಽಹಮ್' ಭಾವದಲ್ಲಿ ಪರಿಪಕ್ವತೆಯನ್ನು ಹೊಂದಿದನಂತರ, 'ದಾಸ್ಯ' ಭಾವದಲ್ಲಿ ಇರಲು ಸಾಧ್ಯ.

(ಕ್ಯಾಪ್ಟನ್ನನಿಗೆ) "ಬ್ರಹ್ಮಜ್ಞಾನವನ್ನು ಪಡೆದ ವ್ಯಕ್ತಿಗಳಲ್ಲಿ ಕೆಲವು ಲಕ್ಷಣಗಳನ್ನು ಕಾಣಬಹುದು. ಅವರು ಬಾಲಕವತ್, ಜಡವತ್, ಉನ್ಮಾದವತ್, ಪಿಶಾಚವತ್ ಕಂಡುಬರುತ್ತಾರೆ ಅಂತ ಭಾಗವತದಲ್ಲಿ ಹೇಳಿದೆ. ಕೆಲವು ವೇಳೆ ಅವರಿಗೆ ಐದು ವರ್ಷದ ಮಗುವಿನ ಅವಸ್ಥೆ ಬರುತ್ತದೆ. ಇನ್ನು ಕೆಲವು ವೇಳೆ ಅವರು ಉನ್ಮತ್ತನಂತೆ ವ್ಯವಹರಿಸುತ್ತಾರೆ. ಮತ್ತೆ ಕೆಲವು ವೇಳೆ ಜಡವಸ್ತುವಿನೋಪಾದಿಯಲ್ಲಿ ಸುಮ್ಮನೆ ಒಂದು ಕಡೆ ಬಿದ್ದಿರುತ್ತಾರೆ. ಈ ಅವಸ್ಥೆಯಲ್ಲಿ ಅವರು ಯಾವ ಕರ್ಮವನ್ನೂ ಮಾಡಲಾರರು — ಎಲ್ಲಾ ಕರ್ಮಗಳೂ ಅವರನ್ನು ಬಿಟ್ಟು ತೊಲಗುತ್ತವೆ. ಜನಕಾದಿಗಳಂಥ ಜ್ಞಾನಿಗಳು ಕರ್ಮಗಳನ್ನು ಮಾಡುತ್ತಿದ್ದರಲ್ಲ, ಅದು ಹೇಗೆ ಅಂತ ನೀನು ಕೇಳಬಹುದು. ಸತ್ಯವೇನೆಂದರೆ, ಹಿಂದಿನಕಾಲದ

ಜನರು ತಮ್ಮ ಕೈಕೆಳಗಿನ ಅಧಿಕಾರಿಗಳಿಗೆ ಜವಾಬ್ದಾರಿಯನ್ನು ವಹಿಸಿ ತಾವು ನಿಶ್ಚಿಂತರಾಗಿದ್ದುಬಿಡುತ್ತಿದ್ದರು. ಅದೂ ಅಲ್ಲದೆ ಆಗಿನ ಕಾಲದ ಜನರು ಭಗವದ್ವಿಶ್ವಾಸಿಗಳಾಗಿದ್ದರು.''

ಪರಮಹಂಸರು ಕರ್ಮತ್ಯಾಗದ ಸಂಬಂಧವಾಗಿ ಮಾತನಾಡಲಾರಂಭಿಸಿದರು. ಯಾರು ಕರ್ಮಾಸಕ್ತರೊ ಅವರು ಅನಾಸಕ್ತತೆಯಿಂದ ಕರ್ಮ ಮಾಡಬೇಕು ಅಂತ ತಿಳಿಸಿದರು.

ಶ್ರೀರಾಮಕೃಷ್ಣರು: ''ಬ್ರಹ್ಮಜ್ಞಾನ ದೊರೆತಮೇಲೆ ಅಧಿಕವಾಗಿ ಕರ್ಮಗಳಲ್ಲಿ ತೊಡಗಿರಲಾಗೋದಿಲ್ಲ.''

ತ್ರೈಲೋಕ್ಯ: ''ಏಕೆ ಆಗೋದಿಲ್ಲ? ಪವಹರಿಬಾಬ ಬಹಳ ದೊಡ್ಡ ಯೋಗಿ. ಆದರೂ ಆತ ಜನರ ಜಗಳವನ್ನು ಫೈಸಲು ಮಾಡಿಕೊಡುತ್ತಾನೆ; ಅಷ್ಟೇ ಅಲ್ಲ ಮೊಕದ್ದಮೆಯನ್ನೂ ಕೂಡ.''

ಶ್ರೀರಾಮಕೃಷ್ಣರು: ''ಹೌದು, ಹೌದು. ಅದೇನೊ ನಿಜ. ಡಾಕ್ಟರ್ ದುರ್ಗಾಚರಣ ಒಬ್ಬ ದೊಡ್ಡ ಮದ್ಯಾಹಾರಿ. ಇಪ್ಪತ್ತನಾಲ್ಕು ಘಂಟೆಗಳ ಕಾಲವೂ ಮದ್ಯಸೇವನೆ ಮಾಡುತ್ತಲೇ ಇರುತ್ತಿದ್ದ. ಆದರೆ ಕೆಲಸದ ಸಮಯದಲ್ಲಿ, ಎಂದರೆ ಚಿಕಿತ್ಸೆಮಾಡುವಾಗ ಅತಿ ಕಟ್ಟುನಿಟ್ಟಿನಿಂದ ವರ್ತಿಸುತ್ತಿದ್ದ; ಯಾವ ವಿಧದಿಂದಲೂ ತಪ್ಪುಮಾಡುತ್ತಿರಲಿಲ್ಲ. ಭಕ್ತಿಯನ್ನು ಪಡೆದುಕೊಂಡನಂತರ ಕರ್ಮಗಳನ್ನು ಮಾಡಿದರೆ ಯಾವ ತೊಂದರೆಯೂ ಬರದು. ಆದರೆ ಅದು ಬಹಳ ಕಠಿನ. ಕಠೋರ ಸಾಧನೆ ಆವಶ್ಯಕ.

''ಭಗವಂತನೇ ಪ್ರತಿಯೊಂದನ್ನೂ ಮಾಡುತ್ತಿದಾನೆ. ನಾವು ಆತನ ಕೈಯ ಯಂತ್ರಗಳು ಮಾತ್ರ. ಕಾಳೀದೇವಾಲಯದ ಎದುರಿಗೆ ಕೆಲವು ಸಿಕ್ ಮತದವರು ನನಗೆ ಹೇಳಿದರು, 'ಭಗವಂತ ದಯಾಮಯ' ಅಂತ. ನಾನು ಕೇಳಿದೆ, 'ಯಾರಿಗೆ ಆತ ದಯಾಮಯ?' ಅಂತ. ಅವರು ಹೇಳಿದರು, 'ಏಕೆ ಪೂಜ್ಯರೆ, ನಮ್ಮೆಲ್ಲರಿಗೂ' ಅಂತ. ನಾನು ಹೇಳಿದೆ, 'ನಾವೆಲ್ಲರೂ ಆತನ ಮಕ್ಕಳು. ಮಕ್ಕಳ ಮೇಲೆ ತಂದೆ ದಯೆ ತೋರುವುದು ಎಂದರೇನು? ಮಕ್ಕಳ ಯೋಗಕ್ಷೇಮ ನೋಡಿಕೊಳ್ಳೋದು ತಂದೆಯ ಕರ್ತವ್ಯ; ಆತ ನೋಡಿಕೊಳ್ಳದೆ, ಪಕ್ಕದ ಕೇರಿಯವರು ಬಂದು ನೋಡಿಕೋತಾರೇನು? ಒಳ್ಳೆಯದು, ಯಾರು ಭಗವಂತ ದಯಾಮಯ

ಅಂತ ಹೇಳುತ್ತಾರೊ ಅವರ ತಲೆಗೆ, ತಾವು ಭಗವಂತನ ಮಕ್ಕಳೇ ವಿನಾ ಬೇರೆ ಯಾರ ಮಕ್ಕಳೂ ಅಲ್ಲ ಎಂಬ ಭಾವನೆ ಬರುತ್ತಿಲ್ಲವೇನು ?''

ಕ್ಯಾಪ್ಟನ್ : "ನಿಜ. ಅವರು ಭಗವಂತನನ್ನು ತಮ್ಮವ ಎಂದು ಭಾವಿಸುತ್ತಿಲ್ಲ.''

ಶ್ರೀರಾಮಕೃಷ್ಣರು : "ಹಾಗೆಂದು ನಾವು ಭಗವಂತನನ್ನು ದಯಾಮಯ ಅಂತ ಸಂಬೋಧಿಸಬಾರದೇನು ? ನಾವು ಸಾಧನಾವಸ್ಥೆಯಲ್ಲಿ ಇರೋವರೆಗೆ ಬೇಕಾದರೆ ಹಾಗೆ ಕರೆಯಬಹುದು. ಆದರೆ ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡೊಡನೆಯೆ, ಆತನೇ ನಮ್ಮ ಸ್ವಂತ ತಂದೆ ತಾಯಿ ಅಂತ ಬೋಧೆಯಾಗುತ್ತದೆ. ನಮಗೆ ಆತನ ಸಾಕ್ಷಾತ್ಕಾರವಾಗದ ವರೆಗೆ ನಮಗನಿಸುತ್ತದೆ ನಮಗೂ ಆತನಿಗು ಯಾವ ಸಂಬಂಧವೂ ಇಲ್ಲ, ನಾವು ಪರರ ಮಕ್ಕಳು ಅಂತ.

"ಸಾಧನಾವಸ್ಥೆಯಲ್ಲಿ ಆತನ ಎಲ್ಲಾ ಗುಣಗಳಿಂದಲೂ ಭಗವಂತನನ್ನು ಸಂಬೋಧಿಸಬೇಕು. ಹಾಜರಾ ಒಂದು ದಿನ ನರೇಂದ್ರನಿಗೆ ಹೇಳಿದ, 'ಭಗವಂತ ಅನಂತ, ಆತನ ಐಶ್ವರ್ಯ ಅನಂತ. ಆತ ನಾವು ಅರ್ಪಿಸೋ ಬಾಳೆ ಹಣ್ಣು, ತೆಂಗಿನ ಕಾಯಿ ಇವನ್ನು ತಿನ್ನಲು ಹೋಗುತ್ತಾನೇನು ? ನಾವು ಹಾಡೋ ಹಾಡುಗಳನ್ನು ಆಲಿಸಲು ಹೋಗುತ್ತಾನೇನು ? ಇವೆಲ್ಲ ನಮ್ಮ ಮಾನಸಿಕ ಭ್ರಾಂತಿ' ಅಂತ. ಇದನ್ನು ಕೇಳಿದೊಡನೆಯೆ ನರೇಂದ್ರ ಒಂದು ಹತ್ತು ಮೊಳ ಕೆಳಕ್ಕೆ ಇಳಿದುಹೋದ. ಅದನ್ನು ನೋಡಿ ನಾನು ಹಾಜರಾನಿಗೆ ಹೇಳಿದೆ, 'ನೀನು ಎಂಥ ದುರುಳ ! ಹುಡುಗರೊಂದಿಗೆಲ್ಲ ನೀನು ಹೀಗೆ ಮಾತಾಡಿದರೆ ಅವರ ಮುಂದಿನ ಗತಿಯೇನು?' ಅಂತ. ಭಕ್ತಿಯನ್ನು ಕಳೆದುಕೊಂಡುಬಿಟ್ಟರೆ ಮನುಷ್ಯ ಬದುಕಿರೋ ಬಗೆ ಹೇಗೆ ? ಭಗವಂತ ಅನಂತ ಐಶ್ವರ್ಯಸಂಪನ್ನನಾಗಿದ್ದರೂ ಭಕ್ತಪರಾಧೀನ. ಒಬ್ಬ ದೊಡ್ಡ ಮನುಷ್ಯನ ಮನೆ ದ್ವಾರಪಾಲಕ ತನ್ನ ಯಜಮಾನನ ಬೈಠಕ್ ಖಾನೆಗೆ ಬಂದು ಅತಿ ಸಂಕೋಚಭಾವದಿಂದ ಒಂದು ಕಡೆ ನಿಂತುಕೊಂಡಿದಾನೆ. ಬಟ್ಟೆಯಿಂದ ಮುಚ್ಚಿದ್ದ ಏನೋ ಒಂದು ವಸ್ತುವನ್ನು ಕೈಯಲ್ಲಿ ಹಿಡಿದುಕೊಂಡಿದಾನೆ. ಯಜಮಾನ ಕೇಳುತ್ತಾನೆ, 'ದ್ವಾರಪಾಲಕ, ಏನು ಸಮಾಚಾರ? ಕೈಯಲ್ಲಿ ಏನು ಹಿಡಿದುಕೊಂಡಿದೀಯೆ ?' ಅಂತ. ದ್ವಾರಪಾಲಕ ಅಂಜುತ್ತ ಒಂದು ಸೀತಾಫಲದ ಹಣ್ಣನ್ನು ಹೊರಕ್ಕೆ ತೆಗೆದು ಯಜಮಾನನ ಮುಂದಿಟ್ಟು ಹೇಳುತ್ತಾನೆ; 'ತಾವು ಇದನ್ನು ದಯವಿಟ್ಟು

ಸೇವಿಸಬೇಕು' ಅಂತ. ತನ್ನ ಸೇವಕನ ಭಕ್ತಿಯನ್ನು ನೋಡಿ ಯಜಮಾನ ಬಹಳವಾಗಿ ಆನಂದಪಡುತ್ತಾನೆ. ಆತ ಆ ಹಣ್ಣನ್ನು ಬಹಳ ಪ್ರೀತಿಯಿಂದ ತೆಗೆದುಕೊಂಡು ಹೇಳುತ್ತಾನೆ, 'ಆಃ! ಬಹಳ ಒಳ್ಳೆಯ ಸೀತಾಫಲದ ಹಣ್ಣು. ನೀನು ಎಲ್ಲಿಂದ ಇಷ್ಟು ಶ್ರಮ ವಹಿಸಿ ತಂದೆ?' ಅಂತ.

"ಭಗವಂತ ಭಕ್ತಪರಾಧೀನ. ಬಹಳವಾಗಿ ಆದರ ಸತ್ಕಾರ ತೋರಿಸಿ ದುರ್ಯೋಧನ ಶ್ರೀಕೃಷ್ಣನಿಗೆ ಹೇಳಿದ, 'ತಾವು ಇಲ್ಲಿಯೇ ಊಟೋಪಚಾರಗಳನ್ನು ಮಾಡಿ' ಅಂತ. ಆದರೆ ಶ್ರೀಕೃಷ್ಣ ಊಟಕ್ಕೆ ವಿದುರನ ಕುಟೀರಕ್ಕೆ ಹೋದ. ಆತ ಭಕ್ತವತ್ಸಲ. ವಿದುರ ಬಡಿಸಿದ ಅನ್ನ ಸೊಪ್ಪನ್ನು ಅಮೃತವೆಂದೇ ತಿಂದ.

"ಕೆಲವು ವೇಳೆ ಪೂರ್ಣಜ್ಞಾನಿ ಪಿಶಾಚಿಯ ಹಾಗೆ ವರ್ತಿಸುತ್ತಾನೆ. ಅನ್ನಪಾನಾದಿಗಳ ಸಂಬಂಧವಾಗಿ, ಶುಚಿ-ಅಶುಚಿಗಳ ಸಂಬಂಧವಾಗಿ ಆತನಿಗೆ ಯಾವ ಭೇದಭಾವನೆಯೂ ಇರದು. ಪೂರ್ಣಜ್ಞಾನಿ, ಪೂರ್ಣ ಮೂರ್ಖ ಇವರಿಬ್ಬರ ಬಾಹ್ಯ ಲಕ್ಷಣಗಳು ಒಂದೇತರ. ಪೂರ್ಣಜ್ಞಾನಿ ಗಂಗೆಯಲ್ಲಿ ಸ್ನಾನಮಾಡೋವಾಗ ಯಾವ ಮಂತ್ರವನ್ನೂ ಜಪಿಸದೆ ಸ್ನಾನ ಮಾಡಿಬಿಡಬಹುದು. ಪೂಜೆಮಾಡೋವಾಗ ಯಾವ ಮಂತ್ರ-ತಂತ್ರದ ಗೋಜಿಗೂ ಹೋಗದೆ ಭಗವಂತನ ಅಡಿದಾವರೆಗಳಲ್ಲಿ ಎಲ್ಲಾ ಹೂವುಗಳನ್ನೂ ಒಟ್ಟಿಗೆ ಅರ್ಪಿಸಿಬಂದುಬಿಡಬಹುದು.

"ಎಲ್ಲಿಯವರೆಗೆ ಸಂಸಾರ ಸುಖಗಳನ್ನು ಅನುಭವಿಸಬೇಕೆಂಬ ಇಚ್ಛೆಯಿರುವುದೊ, ಅಲ್ಲಿಯವರೆಗೆ ಕರ್ಮತ್ಯಾಗ ಮಾಡಲಾಗೋದಿಲ್ಲ. ಭೋಗಾಸಕ್ತಿ ಇರೋವರೆಗೆ ಕರ್ಮಮಾಡಬೇಕಾಗುತ್ತದೆ.

"ಒಂದು ಹಕ್ಕಿ ಅನ್ಯಮನಸ್ಕವಾಗಿ ಗಂಗಾನದಿಯಲ್ಲಿ ಬಿಟ್ಟಿದ್ದ ಒಂದು ಜಹಜಿನ ಧ್ವಜಸ್ತಂಭದ ಮೇಲೆ ಕುಳಿತುಕೊಂಡಿತ್ತು. ಕ್ರಮೇಣ ಆ ಜಹಜು ಸಾಗರದ ಮಧ್ಯಪ್ರದೇಶಕ್ಕೆ ಮುಂದುವರಿದುಬಿಟ್ಟಿತು. ಆ ಹಕ್ಕಿ ಎಚ್ಚೆತ್ತುಕೊಂಡಾಗ ಅದಕ್ಕೆ ಯಾವ ದಿಕ್ಕಿನಲ್ಲೂ ತೀರವೇ ಕಾಣಬರಲಿಲ್ಲ. ಭೂಪ್ರದೇಶಕ್ಕೆ ಬರಲೋಸುಗ ಅದು ಉತ್ತರ ದಿಕ್ಕಿಗೆ ಹಾರಿಹೋಯಿತು. ಬಹಳ ದೂರದವರೆಗೆ ಹಾರಿ ಹಾರಿ ಅದರ ರೆಕ್ಕೆ ಸೋತುಹೋಗಿಬಿಟ್ಟಿತು, ಆದರೂ ದಡವೇ ಅದರ ಕಣ್ಣಿಗೆ ಬೀಳಲಿಲ್ಲ. ಪಾಪ, ಇನ್ನೇನು ತಾನೆ ಮಾಡೀತು? ಹಿಂದಿರುಗಿ ಹಾರಿಬಂದು ಧ್ವಜಸ್ತಂಭದ ಮೇಲೆ ಕುಳಿತು

ಕೊಂಡಿತು. ಬಹಳ ಹೊತ್ತು ವಿಶ್ರಮಿಸಿಕೊಂಡು, ಅದು ಮತ್ತೆ ಈ ಸಲ ಪೂರ್ವ ದಿಕ್ಕಿನ ಕಡೆ ಹಾರಿಹೋಯಿತು. ಆ ದಿಕ್ಕಿನಲ್ಲಿಯೂ ಅದಕ್ಕೆ ದಡ-ಗಿಡ ಏನೂ ಕಾಣಬರಲಿಲ್ಲ. ನಾಲ್ಕು ದಿಕ್ಕಿಗೂ ಅನಂತಸಾಗರವೇ ಹರಡಿಕೊಂಡಿರೋದು ಕಂಡುಬಂದಿತು. ಬಹಳವಾಗಿ ಆಯಾಸಗೊಂಡು ಹಿಂದಿರುಗಿ ಹಾರಿಬಂದು ಜಹಜಿನ ಧ್ವಜಸ್ತಂಭದ ಮೇಲೆ ಕುಳಿತು ಕೊಂಡಿತು. ಮತ್ತೆ ಬಹಳ ಹೊತ್ತು ವಿಶ್ರಮಿಸಿಕೊಂಡು, ಒಮ್ಮೆ ಪಶ್ಚಿಮ ದಿಕ್ಕಿಗೆ ಇನ್ನೊಮ್ಮೆ ದಕ್ಷಿಣ ದಿಕ್ಕಿಗೆ ಹಾರಿ ನೋಡಿತು. ಯಾವ ದಿಕ್ಕಿನಲ್ಲಿಯೂ ಅದಕ್ಕೆ ದಡ ಎಂಬುದೇ ಕಾಣಬರದೆಹೋಗಲು ಅದು ಹಿಂದಿರುಗಿ ಹಾರಿ ಬಂದು ಅದೇ ಧ್ವಜಸ್ತಂಭದ ಮೇಲೆ ಕುಳಿತುಕೊಂಡಿತು. ಮತ್ತೆ ಅದು ಆ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಹಾರಿಹೋಗುವ ಪ್ರಯತ್ನವನ್ನೇ ಬಿಟ್ಟು ಅಲ್ಲೇ ಸುಮ್ಮನೆ ಕುಳಿತುಬಿಟ್ಟಿತು. ಬಳಿಕ ಅದರ ಮನಸ್ಸಿನಲ್ಲಿ ಯಾವ ವಿಧವಾದ ಅಶಾಂತಿಯೇ ಆಗಲಿ ವ್ಯಸ್ತತೆಯೇ ಆಗಲಿ ಇರಲಿಲ್ಲ. ನಿಶ್ಚಿಂತೆಯಿಂದ ಕುಳಿತುಕೊಂಡಿದ್ದುದರಿಂದ, ಅದು ಮತ್ತೆ ಬೇರೆ ಯಾವ ಪ್ರಯತ್ನವನ್ನೂ ಮಾಡಲಿಲ್ಲ.''

ಕ್ಯಾಪ್ಟನ್ : ''ಆಹ, ಇದು ಎಂಥ ದೃಷ್ಟಾಂತ !''

ಶ್ರೀರಾಮಕೃಷ್ಣರು : ''ಸಂಸಾರಿಗಳು ಸುಖ ಬೇಕೆಂದು ಈ ಜಗತ್ತಿನ ಮೂಲೆ ಮೂಲೆಗಳನ್ನೆಲ್ಲಾ ಹುಡುಕಿನೋಡಿಬಿಡುತ್ತಾರೆ. ಅದು ಅವರಿಗೆ ಎಲ್ಲಿಯೂ ದೊರೆಯದು ; ಬರಿದೆ ದಣಿದು ಸುಸ್ತಾಗುತ್ತಾರೆ. ಯಾವಾಗ ಅವರು ತಮ್ಮ ಕಾಮಕಾಂಚನಾಸಕ್ತಿಯ ದೆಸೆಯಿಂದ ಕೇವಲ ದುಃಖದಲ್ಲಿಯೇ ಮುಳುಗಿಹೋಗುವರೊ, ಆಗ ಅವರ ಮನಸ್ಸು ತ್ಯಾಗದ ಕಡೆಗೆ, ವೈರಾಗ್ಯದ ಕಡೆಗೆ ಹರಿಯಲಾರಂಭಿಸುತ್ತದೆ. ಅನೇಕರಿಗೆ ಕಾಮಕಾಂಚನವನ್ನು ಭೋಗಿಸದೆ ಅವನ್ನು ತ್ಯಜಿಸೋಕಾಗೋದಿಲ್ಲ. ಸಾಧಕರಲ್ಲಿ ಎರಡು ವಿಧ—ಕುಟೀಚಕ ಬಹೂದಕ. ಸಾಧಕರಲ್ಲಿ ಕೆಲವರಿದ್ದಾರೆ, ಅವರು ಬಹಳವಾಗಿ ತೀರ್ಥಯಾತ್ರೆ ಮಾಡುತ್ತಾರೆ. ಅವರು ಒಂದೇ ಜಾಗದಲ್ಲಿ ಬಹಳ ಕಾಲ ಇರಲಾರರು ; ಅವರು ಅನೇಕ ತೀರ್ಥಸ್ಥಾನಗಳ ನೀರನ್ನು ಕುಡಿಯಲೇ ಬೇಕು. ತೀರ್ಥಸ್ಥಾನಗಳನ್ನೆಲ್ಲ ಸುತ್ತಿ ಸುತ್ತಿ ತುಷ್ಟರಾದಾಗ, ಅವರು ಯಾವುದಾದರು ಒಂದು ಪ್ರದೇಶದಲ್ಲಿ ಕುಟೀರವನ್ನು ಕಟ್ಟಿಕೊಂಡು ವಾಸಿಸಲಾರಂಭಿಸುತ್ತಾರೆ. ಬಳಿಕ ನಿಶ್ಚಿಂತರಾಗಿ, ಚೇಷ್ಟಾಶೂನ್ಯರಾಗಿ ಭಗವಚ್ಚಿಂತನೆ ಮಾಡಲಾರಂಭಿಸುತ್ತಾರೆ.

"ಈ ಸಂಸಾರದಲ್ಲಿ ಸುಖಪಡಲು ಅಲ್ಲಿ ಇರೋದೇನು? ಕಾಮ ಕಾಂಚನವೆ? ಅದು ಈಗಿದ್ದುದು ಈಗಿರದು.

"ಈ ಸಂಸಾರದಾಗಸ ಯಾವಾಗ ನೋಡಿದರೂ ಮೋಡಗಟ್ಟಿ ಕೊಂಡು ಸತತ ಮಳೆ ಸುರಿಸುತ್ತಲೇ ಇರುತ್ತದೆ; ಸೂರ್ಯನ ಮುಖ ನೋಡೋಕೇ ಆಗೋದಿಲ್ಲ. ಅದರಲ್ಲಿ ದುಃಖದ ಭಾಗವೇ ಅಧಿಕ. ಕಾಮ ಕಾಂಚನದ ಮೋಡ ಸೂರ್ಯನ ನೋಡಲು ಬಿಟ್ಟುಕೊಡಲೊಲ್ಲದು. ಕೆಲಕೆಲವರು ನನ್ನನ್ನು ಕೇಳುತ್ತಾರೆ, 'ಮಹಾಶಯರೆ, ಭಗವಂತ ಏಕೆ ಈ ವಿಧವಾದ ಸಂಸಾರವನ್ನು ಸೃಷ್ಟಿಸಿದ. ನಮಗಾವ ಮಾರ್ಗವೂ ಇಲ್ಲವೇನು?' ಅಂತ. ನಾನು ಅವರಿಗೆ ಹೇಳುತ್ತೇನೆ, 'ಮಾರ್ಗವಿಲ್ಲದೆ ಏನು? ಆತನಿಗೆ ಶರಣಾಗತರಾಗಿ ಅನುಕೂಲವಾದ ಹವ ಬೀಸುವಂತೆ, ಶುಭಯೋಗ ಘಟಿಸುವಂತೆ ಆತನಿಗೆ ವ್ಯಾಕುಲಚಿತ್ತದಿಂದ ಪ್ರಾರ್ಥನೆ ಸಲ್ಲಿಸಿ. ವ್ಯಾಕುಲಚಿತ್ತದಿಂದ ಕರೆದರೆ ಆತ ನಿಮ್ಮ ಪ್ರಾರ್ಥನೆಯನ್ನು ಕೇಳಿಯೇ ಕೇಳುತ್ತಾನೆ' ಅಂತ.

"ಒಬ್ಬನ ಮಗ ರೋಗಗ್ರಸ್ತನಾಗಿ ಇನ್ನೇನು ಯಮನ ಬಾಯಿಗೆ ತುತ್ತಾಗೋದರಲ್ಲಿದ್ದ. ತಂದೆ ಅತ್ಯಂತ ವ್ಯಾಕುಲನಾಗಿ ತನ್ನ ಮಗನನ್ನು ಬದುಕಿಸಲು ಇವರ ಅವರ ಸಲಹೆ ಕೇಳುತ್ತಾ ಸುತ್ತಾಡಲಾರಂಭಿಸಿದ. ಒಬ್ಬ ಹೇಳಿದ, 'ನೋಡು, ನೀನು ಇವುಗಳನ್ನೆಲ್ಲ ಹವಣಿಸಿಕೊಳ್ಳೋದಾದರೆ ನಿನ್ನ ಮಗನಿಗೆ ಗುಣವಾಗಿಬಿಡುತ್ತದೆ: ಸ್ವಾತಿ ನಕ್ಷತ್ರದ ಮಳೆ ಹೊಯ್ದು ಅದು ಒಂದು ಕಪಾಲದಲ್ಲಿ ಶೇಖರವಾಗಬೇಕು; ಆ ನೀರನ್ನು ಕುಡಿಯಲು ಒಂದು ಕಪ್ಪೆ ಅಲ್ಲಿಗೆ ಬರಬೇಕು; ಒಂದು ಹಾವು ಅದನ್ನು ಅಟ್ಟಿಸಿ ಕೊಂಡು ಬರಬೇಕು; ಹಾವು ಆ ಕಪ್ಪೆಯನ್ನು ಇನ್ನೇನು ಕಚ್ಚಿಬಿಟ್ಟಿತು ಅನ್ನುವಷ್ಟರಲ್ಲಿ ಕಪ್ಪೆ ಕಪಾಲದ ಮೇಲೆ ನೆಗೆಯಬೇಕು, ಹಾವಿನ ವಿಷ ಕಪಾಲದೊಳಕ್ಕೆ ಬೀಳಬೇಕು; ಆ ವಿಷಮಿಶ್ರಿತ ನೀರನ್ನು ತಂದು ನಿನ್ನ ಮಗನಿಗೆ ಸ್ವಲ್ಪ ಕುಡಿಸಬೇಕು' ಅಂತ. ಆ ಮನುಷ್ಯ ಅತ್ಯಂತ ವ್ಯಾಕುಲ ಚಿತ್ತದಿಂದ ಆ ಔಷಧಕ್ಕಾಗಿ ಸ್ವಾತಿ ನಕ್ಷತ್ರ ಉದಯಿಸಿ ದೊಡನೆ ಮನೆ ಬಿಟ್ಟು ಹೊರಟ. ಸ್ವಾತಿ ಮಳೆ ಹೊಯ್ಯಲಾರಂಭಿ ಸಿತು. ಆತ ತೀವ್ರ ವ್ಯಾಕುಲತೆಯಿಂದ ಭಗವಂತನನ್ನು ಪ್ರಾರ್ಥಿಸಿದ, 'ಹೇ ಭಗವಂತ, ನನಗೊಂದು ಕಪಾಲವನ್ನು ದೊರಕಿಸಿಕೊಡು' ಅಂತ. ಹುಡುಕುತ್ತ ಹುಡುಕುತ್ತ ಇದ್ದ ಹಾಗೆ ಮಳೆ ನೀರಿನಿಂದ ತುಂಬಿದ ಒಂದು

ಕಪಾಲ ಆತನಿಗೆ ದೊರೆಯಿತು. ಮತ್ತೆ ಪ್ರಾರ್ಥನೆಮಾಡಿದ, 'ಹೇ ಭಗವಂತ, ನಿನಗೆ ಜಯವಾಗಲಿ! ಈ ಕೆಲವನ್ನು— ಹಾವು ಮತ್ತು ಕಪ್ಪೆ— ಹವಣಿಸಿಕೊಟ್ಟುಬಿಡು' ಅಂತ. ಆತನ ಪ್ರಾರ್ಥನೆ ಅಂಥಾ ಹೃತ್ಪೂರ್ವಕವಾದ್ದು ಎಲ್ಲವೂ ಬಂದೊದಗಿಬಿಟ್ಟವು. ಕಣ್ಣು ಮುಚ್ಚಿ ಕಣ್ಣು ಬಿಡುವುದರೊಳಗಾಗಿಯೇ ಒಂದು ಹಾವು ಕಪ್ಪೆಯೊಂದನ್ನು ಆ ಕಡೆಗೆ ಅಟ್ಟಿಸಿಕೊಂಡುಬರಲಾರಂಭಿಸಿತು. ಕಪ್ಪೆಯನ್ನು ಕಚ್ಚಲು ಹೋಗಿ ಆ ಹಾವಿನ ವಿಷ ಕಪಾಲದೊಳಕ್ಕೆ ಬಿದ್ದೇಹೋಯಿತು!

"ಭಗವಂತನಿಗೆ ಶರಣಾಗತನಾಗಿ, ಆತನನ್ನು ವ್ಯಾಕುಲ ಚಿತ್ತದಿಂದ ಕರೆದರೆ, ಆತ ನಮ್ಮ ಪ್ರಾರ್ಥನೆಯನ್ನು ಕೇಳಿಯೇ ಕೇಳುತ್ತಾನೆ; ಎಲ್ಲವೂ ಸುಗಮವಾಗುವಂತೆ ಮಾಡಿಕೊಡುತ್ತಾನೆ."

ಕ್ಯಾಪ್ಟನ್ "ಆಹ, ಇದು ಎಂಥಾ ಯುಕ್ತ ದೃಷ್ಟಾಂತ!"

ಶ್ರೀರಾಮಕೃಷ್ಣರು: "ಹೌದು, ಭಗವಂತ ಎಲ್ಲಾ ಸುಯೋಗಗಳನ್ನೂ ಕಲ್ಪಿಸಿಕೊಟ್ಟುಬಿಡುತ್ತಾನೆ. ಸಾಧಕ ವಿವಾಹವಾಗದೆ ಉಳಿದುಕೊಳ್ಳೋ ಹಾಗೆ ಆತ ಅನುಕೂಲತೆಗಳನ್ನು ಕಲ್ಪಿಸಬಹುದು. ಅದರಿಂದ ಸಾಧಕನಿಗೆ ತನ್ನ ಇಡಿಯ ಮನಸ್ಸನ್ನೆಲ್ಲ ಭಗವಂತನ ಕಡೆಗೆ ತಿರುಗಿಸಲು ಸಾಧ್ಯವಾಗಿಬಿಡುತ್ತದೆ. ಭಗವಂತನ ಕೃಪೆಯಿಂದ ಸಾಧಕನ ಅಣ್ಣ ತಮ್ಮಂದಿರು ಇಡೀ ಕುಟುಂಬದ ಯೋಗಕ್ಷೇಮವನ್ನು ನೋಡಿಕೊಂಡುಬಿಡಬಹುದು ಅಥವಾ ಒಬ್ಬ ಬೆಳೆದ ಪುತ್ರನೇ ತನ್ನ ಸಂಸಾರ ಭಾರವನ್ನು ಹೊತ್ತುಕೊಂಡುಬಿಡಬಹುದು. ಆಗ ಸಾಧಕ ತನ್ನ ಸಂಸಾರದ ವಿಷಯವಾಗಿ ಸ್ವಲ್ಪವೂ ಚಿಂತಿಸಬೇಕಾಗಿರೋದಿಲ್ಲ; ಆತ ತನ್ನ ಮನಸ್ಸಿನ ಶೇಕಡ ನೂರು ಭಾಗವನ್ನೂ ಭಗವಂತನಿಗೆ ಅರ್ಪಿಸಿಬಿಡಬಲ್ಲ.

"ಆದರೆ ಕಾಮಕಾಂಚನವನ್ನು ತ್ಯಾಗಮಾಡದ ಹೊರತು ಏನೂ ದೊರೆಯದು. ಅವನ್ನು ತ್ಯಾಗಮಾಡಿದನಂತರವೇ ಅವಿದ್ಯೆ, ಅಜ್ಞಾನ ನಾಶಹೊಂದುತ್ತದೆ. ಲೆನ್ಸಿನ ಮೇಲೆ ಬೀಳೋ ಸೂರ್ಯನ ಕಿರಣಗಳು ಅನೇಕ ವಸ್ತುಗಳನ್ನು ಸುಟ್ಟುಹಾಕಿಬಿಡಬಲ್ಲವು. ಆದರೆ ಕತ್ತಲೆ ಕೊಠಡಿಗೆ ಅದನ್ನು ತೆಗೆದುಕೊಂಡುಹೋಗಿ ಇಟ್ಟರೆ ಅಲ್ಲಿ ಅದು ಆ ಫಲ ಕೊಡಲಾರದು. ಲೆನ್ಸನ್ನು ಉಪಯೋಗಿಸಬೇಕಾದರೆ ಕೊಠಡಿಯಿಂದ ಹೊರಕ್ಕೆ ಬಂದು ನಿಲ್ಲಬೇಕು.

"ಆದರೆ ಕೆಲವರು ಬ್ರಹ್ಮಜ್ಞಾನ ದೊರೆತನಂತರವೂ ಸಂಸಾರದಲ್ಲಿ

ಇರುವುದುಂಟು. ಕೊಠಡಿಯ ಒಳಗು ಹೊರಗು ಎಲ್ಲವೂ ಅವರ ಕಣ್ಣಿಗೆ ಕಾಣುತ್ತದೆ. ಭಗವಂತನ ಜ್ಞಾನದ ಬೆಳಕು ಸಂಸಾರದ ಮೇಲೆ ಬೀಳುತ್ತದೆ. ಆ ಬೆಳಕಿನ ಸಹಾಯದಿಂದ ಅವರು ಈ ಸಂಸಾರದಲ್ಲಿ ಒಳ್ಳೆಯದಾವುದು, ಕೆಟ್ಟದಾವುದು; ನಿತ್ಯವಾವುದು, ಅನಿತ್ಯವಾವುದು ಇವೇ ಮೊದಲಾದುವನ್ನು ವಿಮರ್ಶಿಸಿ ನೋಡಬಲ್ಲರು. ಅಜ್ಞಾನಿಗಳಾಗಿದ್ದರೂ, ಎಂದರೆ ಭಗವಂತನ ಇರುವಿಕೆಯಲ್ಲಿ ವಿಶ್ವಾಸವಿಲ್ಲದವರಾಗಿದ್ದರೂ ಯಾರು ಸಂಸಾರಾಸಕ್ತರಾಗಿದಾರೊ ಅವರನ್ನು ನೆಲಮಾಳಿಗೆಯಲ್ಲಿ ವಾಸಿಸೋ ಜನರಿಗೆ ಹೋಲಿಸಬಹುದು. ಅದರಲ್ಲಿರೋ ಕ್ಷೀಣ ಬೆಳಕಿನಿಂದ ಕೇವಲ ಕೊಠಡಿಯ ಒಳಗನ್ನು ಮಾತ್ರ ಅವರು ನೋಡಬಲ್ಲರು. ಆದರೆ ಬ್ರಹ್ಮಜ್ಞಾನವನ್ನು ಪಡೆದನಂತರ, ಭಗವಂತನ ಸಾಕ್ಷಾತ್ಕಾರವನ್ನು ಪಡೆದನಂತರ ಯಾರು ಸಂಸಾರದಲ್ಲಿ ವಾಸಿಸುತ್ತಾರೊ ಅವರನ್ನು ಗ್ಲಾಸಿನ ಮನೆಯಲ್ಲಿ ವಾಸಿಸೋ ಜನರಿಗೆ ಹೋಲಿಸಬಹುದು. ಅವರು ಮನೆಯ ಒಳಗನ್ನೂ ನೋಡಬಲ್ಲರು, ಮನೆಯ ಹೊರಗಿರೋ ವಸ್ತುಗಳನ್ನೂ ನೋಡಬಲ್ಲರು. ಜ್ಞಾನ ಸೂರ್ಯನ ಬೆಳಕು ಮನೆಯ ಒಳಕ್ಕೆ ಬಹಳ ಚೆನ್ನಾಗಿ ಪ್ರವೇಶಿಸುತ್ತದೆ. ಅವರು ಮನೆಯ ಒಳಗಿರೋದನ್ನೆಲ್ಲ ಬಹಳ ಸ್ಪಷ್ಟವಾಗಿ ನೋಡಬಲ್ಲರು. ಒಳ್ಳೆಯದಾವುದು, ಕೆಟ್ಟದಾವುದು; ನಿತ್ಯವಾವುದು, ಅನಿತ್ಯವಾವುದು ಎಂಬುದು ಅವರಿಗೆ ಚೆನ್ನಾಗಿ ಗೊತ್ತಾಗುತ್ತದೆ.

"ಭಗವಂತನೊಬ್ಬನೇ ಕರ್ತ, ನಾವೆಲ್ಲರೂ ಆತನ ಯಂತ್ರಗಳು ಮಾತ್ರ. ಆದ್ದರಿಂದ ಜ್ಞಾನಿಗಳೂ ಅಹಂಕಾರಪಡೋ ಹಾಗಿಲ್ಲ. ಶಿವಮಹಿಮ್ನ ಸ್ತೋತ್ರವನ್ನು ಯಾರು ಬರೆದನೊ ಆತನಿಗೆ ಸ್ವಲ್ಪ ಅಹಂಕಾರ ಉಂಟಾಗಿತ್ತು. ಆದರೆ ಯಾವಾಗ ಶಿವನ ವಾಹನ ನಂದಿ ತನ್ನ ಬಾಯನ್ನು ತೆರೆದು ತನ್ನ ಹಲ್ಲನ್ನು ತೋರಿಸಿತೊ, ಆಗ ಆತನ ಅಹಂಕಾರವೆಲ್ಲ ನುಚ್ಚುನೂರಾಗಿ ಹೋಯಿತು. ಅದರ ಪ್ರತಿಯೊಂದು ಹಲ್ಲೂ ಒಂದೊಂದು ಮಂತ್ರವಾಗಿ ಕಂಡುಬಂದಿತು. ಇದರ ಇಂಗಿತವೇನು ಎಂಬುದು ನಿನಗೆ ಅರ್ಥವಾಯಿತೇನು? ಈ ಮಂತ್ರಗಳೆಲ್ಲ ಅನಾದಿಕಾಲದಿಂದಲೂ ಇದ್ದುಕೊಂಡು ಬಂದಿದ್ದುವು. ಗ್ರಂಥಕರ್ತ ಅದನ್ನು ಕೇವಲ ಪ್ರಕಾಶಕ್ಕೆ ತಂದ.

"ಗುರುಗಿರಿ ಒಳ್ಳೆಯದಲ್ಲ. ಭಗವಂತನ ಆದೇಶವನ್ನು ಪಡೆಯದೆ ಆಚಾರ್ಯನಾಗೋಕಾಗೋದಿಲ್ಲ. ಯಾರು ತನಗೆ ತಾನೇ ಗುರುಗಿರಿಯನ್ನು ಆರೋಪಿಸಿಕೊಳ್ಳುತ್ತಾನೊ ಆತ ಹೀನ ಬುದ್ಧಿಯುಳ್ಳವ. ನೀನು ತಕ್ಕಡಿ

ಯನ್ನು ನೋಡಿಲ್ಲವೇನು ? ಅದರ ಹಗುರವಾಗಿರೋ ತಟ್ಟೆ ಮೇಲಕ್ಕೆ ಹೋಗುತ್ತದೆ. ಯಾರು ತಾನೇ ಸ್ವತಃ ದೊಡ್ಡಸ್ತಿಕೆಯನ್ನು ಆರೋಪಿಸಿ ಕೊಳ್ಳುತ್ತಾನೊ ಆತ ಹಲ್ಕಾ ಮನುಷ್ಯ. ಪ್ರತಿಯೊಬ್ಬನಿಗೂ ಗುರು ಆಗ ಬೇಕೆಂಬ ಇಚ್ಛೆ; ಶಿಷ್ಯ ದೊರೆಯುತ್ತಿಲ್ಲ.''

ತ್ರೈಲೋಕ್ಯ ಚಿಕ್ಕ ಮಂಚದ ಉತ್ತರ ಅಂಚಿನಲ್ಲಿ ನೆಲದಮೇಲೆ ಕುಳಿತಿದಾನೆ. ಹಾಡಲು ಸಿದ್ಧನಾಗುತ್ತಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ, 'ಆಹ, ನೀನು ಎಷ್ಟು ಇಂಪಾಗಿ ಹಾಡಬಲ್ಲೆ !' ಅಂತ.

ತ್ರೈಲೋಕ್ಯ ತಂಬೂರಿಯನ್ನು ಮೀಟುತ್ತ ಹಾಡುತ್ತಿದಾನೆ :

ನನ್ನ ಮನವನು ನಿನಗೆ ಅರ್ಪಿಸಿರುವೆನು ಗುರುವೆ
ಇರುವುದೆಲ್ಲವು ನೀನೆ ಈ ಜಗದಲಿ !
ನಿನ್ನೊಬ್ಬನನೆ ಕಂಡೆ, ಮತ್ತೆ ಯಾರೂ ಇಲ್ಲ;
ನನ್ನಾತ್ಮ ಬಂಧು ನೀ ಸರ್ವಾಶ್ರಯ.

ನೀನಿರದ ಎಡೆಯಿಲ್ಲ; ಎಲ್ಲರೆದೆಯೊಳು ನೀನೆ,
ಪಂಡಿತನೊ ಪಾಮರನೊ ಎಲ್ಲರಲ್ಲೂ ;
ಸ್ವರ್ಗದಲೊ ನರಕದಲೊ, ಕಾಶಿಯಲೊ ಕಾಬದಲೊ
ಎಲ್ಲೆಲ್ಲಿಯೂ ನಿನ್ನ ಕಂಡಿರುವೆನು.

ನಿನ್ನ ನಾ ನೋಡಿರುವೆ, ಸಂದೇಹವಿನಿತಿಲ್ಲ.
ನೀನು ಅನುಪಮನಯ್ಯ ನನ್ನ ಗುರುವೆ.
ಭಕ್ತ ಜಾಪರನಿಂತು ನುಡಿಯುವನು ಕೇಳಯ್ಯ :
ಎಲ್ಲೆಲ್ಲಿಯೂ ನಿನಗೆ ತಲೆ ಬಾಗುವೆ !

ಆತ ಮತ್ತೆ ಹಾಡಿದ :

ನೀನೆನ್ನ ಸರ್ವಸ್ವ, ನನ್ನ ಜೀವದ ಜೀವ ನನ್ನೊಳಗಿನೊಳಗು . . . .

ಈ ಹಾಡುಗಳನ್ನು ಕೇಳಿ ಪರಮಹಂಸರು ಭಾವೋನ್ಮತ್ತರಾಗಿಬಿಟ್ಟಿದಾರೆ. ಹೇಳುತ್ತಿದಾರೆ, "ಆಹ ! ನೀನೇ ನನ್ನ ಸರ್ವಸ್ವ ! ಆಹ ! ಆಹ !'' ಅಂತ.

ಹಾಡುವುದು ಮುಗಿಯಿತು. ಘಂಟೆ ಸಾಯಂಕಾಲ ಆರಾಗಿದೆ. ಪರಮಹಂಸರು ದೇವದಾರು ವೃಕ್ಷಗಳ ಕಡೆಗೆ ಹೋಗುತ್ತಿದಾರೆ. ಮಾಸ್ಟರ್ ಅವರನ್ನು ಹಿಂಬಾಲಿಸುತ್ತಿದಾನೆ. ಪರಮಹಂಸರು ನಗುತ್ತ

ಮಾತುಕತೆಯಾಡುತ್ತ ಹೆಜ್ಜೆಹಾಕುತ್ತಿದಾರೆ. ಅವರು ಹಠಾತ್ತಾಗಿ ಮಾಸ್ಟರಿಗೆ ಹೇಳಿದರು, "ನೀನು ಏಕೆ ಫಲಾಹಾರ ತಿನ್ನಲಿಲ್ಲ? ಅವರೂ ತಿನ್ನಲಿಲ್ಲವಲ್ಲ ಏಕೆ?" ಅಂತ. ಭಕ್ತರಿಗೆ ಪ್ರಸಾದ ಕೊಡಲು ಅವರು ಬಹಳ ಆಕಾಂಕ್ಷಿತರಾಗಿದ್ದರು.

ಪರಮಹಂಸರು ಸಾಯಂಕಾಲವಾದ ಮೇಲೆ ಕಲ್ಕತ್ತಕ್ಕೆ ಹೋಗೋ ಸಂಭವ ಇದೆ. ದೇಪದಾರು ವೃಕ್ಷಗಳ ಕಡೆಯಿಂದ ಹಿಂದಿರುಗಿಬರುತ್ತಿರುವಾಗ ಮಾಸ್ಟರಿಗೆ ಹೇಳುತ್ತಿದಾರೆ, "ಯಾರ ಗಾಡಿಯಲ್ಲಿ ಕಲ್ಕತ್ತಕ್ಕೆ ಹೋಗೋದು ಎಂದು ಯೋಚಿಸುತ್ತಿದೇನೆ" ಅಂತ.

ಸಾಯಂಕಾಲವಾಗಿದೆ. ಪರಮಹಂಸರ ಕೊಠಡಿಗೆ ದೀಪ ಹಚ್ಚಿ ಧೂಪ ಹಾಕಿದಾರೆ. ದೇವಾಲಯಗಳಿಗೆಲ್ಲ ಮತ್ತು ಉಳಿದ ಕಟ್ಟಡಗಳಿಗೆಲ್ಲ ದೀಪ ಹಚ್ಚಿದಾರೆ. ನಹಬತ್‌ಖಾನೆಯಿಂದ ವಾದ್ಯಘೋಷ ಕೇಳಿಬರುತ್ತಿದೆ. ದೇವಾಲಯಗಳಲ್ಲಿ ಇನ್ನೇನು ಮಂಗಳಾರತಿ ಆರಂಭವಾಗುವುದರಲ್ಲಿದೆ.

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ದೇವದೇವಿಯರ ನಾಮಜಪ ಮಾಡಿದನಂತರ, ಭಗವತಿಯ ಧ್ಯಾನ ಮಾಡುತ್ತಿದಾರೆ. ಮಂಗಳಾರತಿ ಮುಗಿಯಿತು. ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ತಮ್ಮ ಕೊಠಡಿಯಲ್ಲಿ ಅಡ್ಡಾಡುತ್ತ ಆಗಾಗ ಭಕ್ತರೊಡನೆ ಒಂದೆರಡು ಮಾತು ಆಡುತ್ತಿದಾರೆ. ತಾವು ಕಲ್ಕತ್ತಕ್ಕೆ ಹೋಗುವುದರ ಸಂಬಂಧವಾಗಿ ಮಾಸ್ಟರೊಡನೆ ಮಾತುಕತೆಯಾಡುತ್ತಿದಾರೆ.

ಆ ಸಮಯಕ್ಕೆ ಸರಿಯಾಗಿ ಶರಚ್ಚಂದ್ರ ಮತ್ತು ನರೇಂದ್ರ ಒಬ್ಬಿಬ್ಬರು ಭಕ್ತರೊಡನೆ ಅಲ್ಲಿಗೆ ಬಂದರು. ಅವರೆಲ್ಲರೂ ಪರಮಹಂಸರಿಗೆ ಪ್ರಣಾಮ ಮಾಡಿದರು.

ನರೇಂದ್ರನನ್ನು ನೋಡಿದೊಡನೆಯೆ ಪರಮಹಂಸರ ಪ್ರೀತಿ ಉಕ್ಕಿ ಹರಿಯಲಾರಂಭಿಸಿತು. ಚಿಕ್ಕ ಮಕ್ಕಳನ್ನು ಮುದ್ದಿಸೋ ರೀತಿಯಲ್ಲಿ ಪರಮಹಂಸರು ನರೇಂದ್ರನ ಗಲ್ಲವನ್ನು ಮೃದುವಾಗಿ ಮುಟ್ಟಿ ಪ್ರೇಮಮಯ ಕಂಠದಿಂದ ಹೇಳಿದರು, "ಆಹ! ಬಂದೆಯಾ!" ಅಂತ.

ಪರಮಹಂಸರು ಗಂಗಾನದಿ ಕಡೆ ನೋಡುತ್ತ ಕೊಠಡಿಯಲ್ಲಿ ನಿಂತಿದಾರೆ. ನರೇಂದ್ರ ಮತ್ತು ಆತನ ಸ್ನೇಹಿತರು ಪೂರ್ವಾಭಿಮುಖರಾಗಿ ನಿಂತು ಅವರೊಡನೆ ಮಾತುಕತೆಯಾಡುತ್ತಿದಾರೆ. ಪರಮಹಂಸರು

ಮಾಸ್ಟರ್ ಕಡೆಗೆ ತಿರುಗಿ ಹೇಳುತ್ತಿದಾರೆ, "ನರೇಂದ್ರ ಬಂದಿದಾನೆ. ಈಗ ನಾನು ಕಲ್ಕತ್ತಕ್ಕೆ ಹೇಗೆ ಹೊರಡಲಿ? ಜನರ ಕೈಯಲ್ಲಿ ಹೇಳಿಕಳುಹಿಸಿ ಆತನನ್ನು ಕರೆಯಿಸಿದೇನೆ. ಆದ್ದರಿಂದ ಈಗ ನಾನು ಕಲ್ಕತ್ತಕ್ಕೆ ಹೇಗೆ ಹೋಗಲಿ? ನಿನ್ನ ಸಲಹೆ ಏನು?" ಅಂತ.

ಮಾಸ್ಟರ್: "ತಮ್ಮ ಚಿತ್ತ. ಹಾಗಾದರೆ ಇಂದು ಹೋಗೋದು ಬೇಡ."

ಶ್ರೀರಾಮಕೃಷ್ಣರು: "ಒಳ್ಳೆಯದು, ಗಾಡಿಯನ್ನೊ ದೋಣಿಯನ್ನೊ ಮಾಡಿಕೊಂಡು ನಾಳೆ ಹೋಗೋಣ. (ಭಕ್ತರಿಗೆ) ಆಗಲೆ ರಾತ್ರಿಯಾಗಿಬಿಟ್ಟಿದೆ. ನೀವು ಹೋಗಿ ಬನ್ನಿ."

ಭಕ್ತರೆಲ್ಲರು ಪರಮಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಂಡರು.



## ೪೨

# ಬಲರಾಮನ ಮನೆಯಲ್ಲಿ ಶ್ರೀಜಗನ್ನಾಥ ರಥೋತ್ಸವ

೧೪ನೆ ಜುಲೈ ೧೮೮೫, ಆಷಾಢ ಶುಕ್ಲ ಪಾಡ್ಯಮಿ, ಸೋಮವಾರ.

ಪರಮಹಂಸರು ಬಲರಾಮನ ಬೈಠಕ್‌ಖಾನೆಯಲ್ಲಿ ಭಕ್ತರೊಡನೆ ಕುಳಿತಿದಾರೆ. ಘಂಟೆ ಪ್ರಾತಃಕಾಲ ಒಂಬತ್ತು. ಮಾರನೆಯ ದಿನ ಬಲರಾಮನ ಮನೆಯಲ್ಲಿ ಶ್ರೀಜಗನ್ನಾಥ ರಥೋತ್ಸವ ನಡೆಯಲಿದೆ. ಆತನ ಮನೆ-ದೇವರಾದ ಶ್ರೀ ಜಗನ್ನಾಥನಿಗೆ ನಿತ್ಯವೂ ಪೂಜೆ ಪುರಸ್ಕಾರಗಳು ನಡೆಯುತ್ತಲಿವೆ. ಆತ ಒಂದು ಪುಟ್ಟ ರಥವನ್ನೂ ಮಾಡಿಸಿಟ್ಟದಾನೆ. ರಥೋತ್ಸವದ ದಿನ ಅದನ್ನು ಆತನ ಮನೆಯ ಹೊರಗಿನ ವರಾಂಡದಲ್ಲಿ ಎಳೆಯುತ್ತಾರೆ. ಬಲರಾಮ ಪರಮಹಂಸರಿಗೆ ವಿಶೇಷವಾದ ಆಹ್ವಾನವಿತ್ತು ಅವರನ್ನು ತನ್ನ ಮನೆಯ ರಥೋತ್ಸವಕ್ಕೆ ಕರೆದುಕೊಂಡು ಬಂದಿದಾನೆ.

ಪರಮಹಂಸರು ಮತ್ತು ಮಾಸ್ಟರ್ ಮಾತುಕತೆಯಾಡುತ್ತಿದಾರೆ. ನಾರಾಯಣ, ತೇಜಚಂದ್ರ, ಬಲರಾಮ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಕೊಠಡಿಯಲ್ಲಿ ಕುಳಿತಿದಾರೆ. ಪರಮಹಂಸರು ಪೂರ್ಣನ ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ. ಬಹುಶಃ ಆತನಿಗೆ ಈಗ ಹದಿನೈದಿರಬೇಕು. ಆತನನ್ನು ನೋಡಬೇಕೆಂದು ಅವರು ಬಹಳ ಉತ್ಸುಕರಾಗಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಳ್ಳೆಯದು, ಪೂರ್ಣ ಯಾವ ರಸ್ತೆಯಿಂದ ನನ್ನನ್ನು ನೋಡಲು ಬರುತ್ತಾನೆ? ಪೂರ್ಣನಿಗು ಮತ್ತು ದ್ವಿಜನಿಗು ನೀನು ಒಬ್ಬರಿಗೊಬ್ಬರ ಪರಿಚಯ ಮಾಡಿಕೊಡು.

"ಒಂದೇ ಆಂತರಿಕ ಪ್ರಕೃತಿಯ ಮತ್ತು ಒಂದೇ ವಯಸ್ಸಿನ ಹುಡುಗರನ್ನು ಕಂಡರೆ, ನಾನು ಅವರನ್ನು ಜೊತೆಮಾಡಿಸಿಬಿಡುತ್ತೇನೆ. ಇದರಲ್ಲಿ ಒಂದು ಉದ್ದೇಶವಿದೆ. ಆದರಿಂದ ಇಬ್ಬರೂ ಉನ್ನತಿಯನ್ನು ಹೊಂದಿಬಿಡುತ್ತಾರೆ. ಪೂರ್ಣನ ಅನುರಾಗ ಎಷ್ಟು ಅದ್ಭುತವಾದ್ದು ಎಂಬುದನ್ನು ನೋಡಿದ್ದೀಯೇನು?"

ಮಾಸ್ಟರ್: "ಹೌದು, ನೋಡಿದೇನೆ. ಒಂದು ದಿನ ನಾನು ಟ್ರ್ಯಾಮ್-ಬಂಡಿಯಲ್ಲಿ ಕುಳಿತು ಹೋಗುತ್ತಿದ್ದೆ. ಆತ ತಮ್ಮ ಮನೆಯ ಚಾವಣಿಯಿಂದ ನನ್ನನ್ನು ನೋಡಿ, ರಸ್ತೆಗೆ ಓಡಿ ಬಂದು ಅಲ್ಲಿಂದಲೇ ನನಗೆ ನಮಸ್ಕಾರ ಹಾಕಿದ."

ಶ್ರೀರಾಮಕೃಷ್ಣರು ಪ್ರೇಮಾಶ್ರುನಯನರಾಗಿ: "ಆಹ! ಆಹ! ಈತ ತನ್ನ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಹಾಯಕನಾಗಿದಾನೆ ಅಂತ ಆತ ನಿನಗೆ ಅಷ್ಟೊಂದು ಗೌರವ ತೋರಿಸುತ್ತಿದಾನೆ. ಭಗವಂತನಿಗಾಗಿ ತೀವ್ರ ವ್ಯಾಕುಲತೆ ಇಲ್ಲದಿದ್ದರೆ ಈ ರೀತಿಯಾಗಿ ವರ್ತಿಸಲಾಗೋದಿಲ್ಲ.

"ನರೇಂದ್ರ, ಚಿಕ್ಕ ನರೇನ, ಪೂರ್ಣ ಈ ಮೂರು ಮಂದಿಗಳದೂ ಪುರುಷ ಸ್ವಭಾವ. ಭವನಾಥನದು ಹಾಗಿಲ್ಲ. ಆತನದು ಸ್ತ್ರೀ ಸ್ವಭಾವ.

"ಪೂರ್ಣ ಅಂಥ ಉಚ್ಚ ಸ್ಥಿತಿಯಲ್ಲಿದಾನೆ, ಆತ ಇಲ್ಲವೆ ಶೀಘ್ರದಲ್ಲಿಯೇ ದೇಹತ್ಯಾಗ ಮಾಡಿಬಿಡುತ್ತಾನೆ — ಭಗವಂತನ ಸಾಕ್ಷಾತ್ಕಾರ ದೊರೆತ ಮೇಲೆ ಈ ಶರೀರ ಇದ್ದರೇನು ಹೋದರೇನು— ಇಲ್ಲದಿದ್ದರೆ ಆತನ ಅಂತರ್ಯಸ್ವರೂಪ ಕೆಲವು ದಿನಗಳಲ್ಲೇ ಚಿಮ್ಮಿ ಹೊರಹೊಮ್ಮಿಬಿಡುತ್ತದೆ.

"ಆತನದು ದೈವಿಕ ಸ್ವಭಾವ— ದೇವಪ್ರಕೃತಿ. ಇದು ಲೋಕಭಯವನ್ನು ಕಡಮೆಮಾಡುತ್ತದೆ. ಇಂಥವರ ಕೊರಳಿಗೆ ಹೂವಿನ ಹಾರ ಹಾಕಿದರೆ ಅಥವಾ ಶರೀರಕ್ಕೆ ಚಂದನ ಸವರಿದರೆ ಅಥವಾ ಮುಂದೆ ಸಾಂಬ್ರಾಣಿ ಅಥವಾ ಧೂಪದ ಹೊಗೆ ಹಾಕಿದರೆ ಇವರು ಸಮಾಧಿಸ್ಥರಾಗಿಬಿಡುತ್ತಾರೆ. ಆಗ ಇಂಥವರ ದೇಹದಲ್ಲಿ ಭಗವಂತ ಸ್ವಯಂ ಇದಾನೆ, ಆತನೇ ಇವರ ದೇಹವನ್ನು ಧರಿಸಿಬಂದಿದಾನೆ ಎಂಬುದು ಸ್ಪಷ್ಟವಾಗಿಹೋಗುತ್ತದೆ. ನಾನು ಈತ ಯಾರು ಎಂಬುದನ್ನು ಪತ್ತೆಹಚ್ಚಿಬಿಟ್ಟಿದೇನೆ.

"ನನಗೆ ಮೊಟ್ಟಮೊದಲು ದೈವೋನ್ಮಾದಾವಸ್ಥೆ ಬಂದನಂತರ ಸದ್ವಂಶಕ್ಕೆ ಸೇರಿದ ಒಬ್ಬ ಬ್ರಾಹ್ಮಣ ಹೆಂಗಸು ದಕ್ಷಿಣೇಶ್ವರಕ್ಕೆ ಬಂದಿದ್ದಳು. ಒಳ್ಳೆ ಸುಗುಣಿ ಮತ್ತು ಸುಲಕ್ಷಣಿ. ಆಕೆಯ ಕೊರಳಿಗೆ ಹೂವಿನಹಾರ ಹಾಕಿ, ಆಕೆ ಮುಂದೆ ಸಾಂಬ್ರಾಣಿ ಧೂಪದ ಹೊಗೆ ಹಾಕಿದೊಡನೆಯೇ ಆಕೆ ಸಮಾಧಿಸ್ಥಳಾಗಿಬಿಟ್ಟಳು. ಕೆಲವು ನಿಮಿಷಗಳೊಳಗಾಗಿಯೇ ಆನಂದ ಸಾಗರದಲ್ಲಿ ಈಜಾಡಲಾರಂಭಿಸಿದಳು. ಕಣ್ಣುಗಳಿಂದ ಪ್ರೇಮಾಶ್ರು ಸುರಿಯಲಾರಂಭಿಸಿತು. ಆಗ ನಾನು ಆಕೆಗೆ ಪ್ರಣಾಮಮಾಡಿ ಕೇಳಿ

ಕೊಂಡೆ, ' ತಾಯೆ, ನನಗೆ ದೊರಕುವುದೆ ? ' ಅಂತ. ಆಕೆ ಹೇಳಿದಳು, ' ದೊರಕುವುದು ' ಎಂದು.

" ಪೂರ್ಣನನ್ನು ಇನ್ನೊಮ್ಮೆ ನೋಡಬೇಕು ಅಂತ ಇಚ್ಛೆಯಾಗುತ್ತಿದೆ. ಆದರೆ ಅವಕಾಶವೆಲ್ಲಿ? ಆತ ಭಗವದ್ಕಲಾ ಅಂತ ಬೋಧೆಯಾಗುತ್ತಿದೆ. ಏನಾಶ್ಚರ್ಯ! ಆತ ಕೇವಲ ಅಂಶವಲ್ಲ, ಕಲಾ! ಆತನೆಷ್ಟು ಚತುರ! ವ್ಯಾಸಂಗದಲ್ಲಿ ಬಹಳ ಬುದ್ಧಿವಂತ ಅಂತ ಕೇಳಿದೇನೆ. ನಾನು ಸರಿಯಾಗಿ ಗುರುತಿಸಿಬಿಟ್ಟಿದೇನೆ.

" ಮನುಷ್ಯನ ತಪಃಪ್ರಭಾವಕ್ಕೆ ಸಿಕ್ಕಿ ಭಗವಂತ ಆತನ ಪುತ್ರನಾಗಿ ಜನ್ಮತಾಳುತ್ತಾನೆ. ಕಾಮಾರಪುಕುರಕ್ಕೆ ಹೋಗೋ ರಸ್ತೆ ಪಕ್ಕದಲ್ಲಿ ರಣಜಿತರಾಯನ ಕೆರೆ ಸಿಕ್ಕುತ್ತದೆ. ಭಗವತಿ ಸ್ವಯಂ ಆತನ ಪುತ್ರಿಯಾಗಿ ಜನಿಸಿದ್ದಳು. ಈಗಲೂ ಆಕೆಯ ಹೆಸರಿನಲ್ಲಿ ಚೈತ್ರ ಮಾಸದಲ್ಲಿ ಅಲ್ಲಿ ಜಾತ್ರೆ ನಡೆಯುತ್ತದೆ. ಅಲ್ಲಿಗೆ ಹೋಗಬೇಕೆಂದು ಬಹಳ ಇಚ್ಛೆಯಾಗುತ್ತಿದೆ. ಆದರೆ ಈಗ ಸಾಧ್ಯವಿಲ್ಲ.

" ರಣಜಿತರಾಯ ಅಲ್ಲಿನ ಒಬ್ಬ ಜಮೀನುದಾರ. ಆತ ತನ್ನ ತಪಃಪ್ರಭಾವದಿಂದ ಸ್ವಯಂ ಭಗವತಿಯನ್ನೇ ತನ್ನ ಪುತ್ರಿಯನ್ನಾಗಿ ಪಡೆದ. ಮಗಳನ್ನು ಬಹಳವಾಗಿ ಪ್ರೀತಿಸುತ್ತಿದ್ದ. ಆಕೆಯೂ ಆತನನ್ನು ಬಹಳವಾಗಿ ಪ್ರೀತಿಸುತ್ತಿದ್ದಳು ಮತ್ತು ಒಂದರಘಳಿಗೆಯೂ ಆತನನ್ನು ಬಿಟ್ಟು ಇರುತ್ತಿರಲಿಲ್ಲ. ಒಂದು ದಿನ ಆತ ತನ್ನ ಜಮೀನುದಾರಿಯ ಸಂಬಂಧವಾಗಿ ಯಾವುದೊ ಒಂದು ಕಾರ್ಯದಲ್ಲಿ ಬಹಳ ವ್ಯಸ್ತನಾಗಿದ್ದ. ಬಾಲಕಿ ಮಗುವಿನ ಸ್ವಭಾವಕ್ಕನುಗುಣವಾಗಿ ತಂದೆಯನ್ನು ಕೇಳಲಾರಂಭಿಸಿದಳು, ' ತಂದೆ, ಇದು ಏನು ? ಅದು ಏನು ? ' ಅಂತ. ತಂದೆ ವಾತ್ಸಲ್ಯಜನ್ಯ ನಯನುಡಿಗಳಿಂದ ಆಕೆಗೆ ಹೇಳಿದ, ' ಮಗು, ಈಗ ನನಗೆ ಯಾವ ತೊಂದರೆಯನ್ನೂ ಮಾಡಬೇಡ. ಒಂದು ದೊಡ್ಡ ಕೆಲಸದಲ್ಲಿ ನಿರತನಾಗಿದೇನೆ. ಹೊರಗೆ ಹೋಗಿ ಒಂದು ಸ್ವಲ್ಪಹೊತ್ತು ಆಡುತ್ತಿರು ' ಅಂತ. ಬಾಲಕಿ ಏನುಮಾಡಿದರೂ ಆತನನ್ನು ಬಿಟ್ಟುಹೋಗಲಿಲ್ಲ. ಕೊನೆಗೆ ತಂದೆ ಅನ್ಯಮನಸ್ಕನಾಗಿ ಆಕೆಯನ್ನು ಗದರಿಸಿದ, ' ಹೋಗು ಇಲ್ಲಿಂದ ಹೊರಕ್ಕೆ ! ' ಅಂತ. ಇದನ್ನೆ ಒಂದು ನಿಮಿತ್ತವನ್ನಾಗಿ ಮಾಡಿಕೊಂಡು ಆಕೆ ಮನೆಯನ್ನು ಬಿಟ್ಟು ಹೊರಟೇಹೋದಳು. ರಸ್ತೆಯಲ್ಲಿ ಒಬ್ಬ ಶಂಖದ ಸಾಮಾನು ಮಾರೋನನ್ನು ಕಂಡಳು. ಆತನಿಂದ ಒಂದು ಜೊತೆ ಶಂಖದ

ಬಳೆಗಳನ್ನು ಕೊಂಡುಕೊಂಡಳು. ಅದರ ದುಡ್ಡಿನ ಸಂಬಂಧವಾಗಿ ಆತನಿಗೆ ಹೇಳಿದಳು, 'ನಮ್ಮ ಮನೆಯಲ್ಲಿ ಇಂಥ ಭಾಗದಲ್ಲಿ, ಇಂಥ ಪೆಟ್ಟಿಗೆಯಲ್ಲಿ ದುಡ್ಡು ಇದೆ. ನೀನು ಅಲ್ಲಿಗೆ ಹೋಗಿ ಕೇಳಿ ತೆಗೆದುಕೊ' ಅಂತ. ಹೀಗೆಂದು ಹೇಳಿ ಆಕೆ ಅಲ್ಲಿಂದ ಮುಂದುವರಿದು ಕಣ್ಮರೆಯಾದಳು. ಮತ್ತೆ ಆಕೆ ಯಾರ ಕಣ್ಣಿಗೂ ಬೀಳಲಿಲ್ಲ. ಆ ಶಂಖದ ಸಾಮಾನು ಮಾರೋನು ರಣಜಿತರಾಯನ ಮನೆಗೆ ಬಂದು ದುಡ್ಡು ಕೇಳಿದ. ಮನೆಯಲ್ಲಿ ಬಾಲಕಿ ಇಲ್ಲದಿರುವುದನ್ನು ನೋಡಿ ಎಲ್ಲರೂ ಆಕೆಯನ್ನು ತುರಾತುರಿಯಾಗಿ ಹುಡುಕಲಾರಂಭಿಸಿದರು. ಆಕೆಯನ್ನು ಪತ್ತೆಮಾಡಲು ರಣಜಿತರಾಯ ಎಲ್ಲಾ ದಿಕ್ಕುಗಳಿಗೂ ಜನರನ್ನು ಕಳುಹಿಸಿದ. ಶಂಖದ ಸಾಮಾನು ಮಾರೋನಿಗೆ ಬರಬೇಕಾಗಿದ್ದ ಹಣ ಒಂದು ಕಾಸೂ ಹೆಚ್ಚುಕಡಮೆಯಿಲ್ಲದೆ ಆಕೆ ತಿಳಿಸಿದ್ದ ಪೆಟ್ಟಿಗೆಯಲ್ಲಿ ದೊರೆಯಿತು. ರಣಜಿತರಾಯ ಬಹಳವಾಗಿ ರೋದಿಸುತ್ತ ಅಲೆದಾಡುತ್ತಿರುವಾಗ, ಯಾರೊ ಬಂದು ಆತನಿಗೆ ಹೇಳಿದರು, ಏನೊ ಒಂದು ವಸ್ತು ಕೆರೆಯಲ್ಲಿ ಕಾಣುತ್ತಿದೆ ಅಂತ. ಎಲ್ಲರೂ ಅಲ್ಲಿಗೆ ಹೋಗಿ ನೋಡಲಾಗಿ ಶಂಖದ ಬಳೆಗಳನ್ನು ತೊಟ್ಟುಕೊಂಡಿದ್ದ ಕೈಗಳು ನೀರಿನ ಮೇಲೆ ಕಂಡವು. ಒಂದು ಕ್ಷಣದನಂತರ ಅವೂ ಅದೃಶ್ಯವಾದುವು. ಈಗಲೂ ಜಾತ್ರೆ ಸಮಯದಲ್ಲಿ — ಒಂದು ಪವಿತ್ರದಿನ — ಅಲ್ಲಿ ಭಗವತಿಯ ಪೂಜೆ ನಡೆಯುತ್ತಿದೆ. (ಮಾಸ್ಟರಿಗೆ) ಇದೆಲ್ಲ ಸತ್ಯ."

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ನರೇಂದ್ರನಿಗೆ ಈಗ ಇಂಥವುಗಳಲ್ಲೆಲ್ಲಾ ನಂಬಿಕೆ ಹುಟ್ಟುತ್ತಿದೆ.

"ಪೂರ್ಣ, ವಿಷ್ಣುವಿನ ಅಂಶದಿಂದ ಜನ್ಮವೆತ್ತಿದಾನೆ. ಆತನನ್ನು ಮಾನಸಿಕವಾಗಿ ಬಿಲ್ವ ದಳಗಳಿಂದ ಪೂಜಿಸಿದೆ; ಅದನ್ನು ಆತ ಸ್ವೀಕರಿಸಲಿಲ್ಲ. ಬಳಿಕ ತುಳಸಿ ದಳ ಮತ್ತು ಚಂದನದಿಂದ ಪೂಜಿಸಿದೆ. ಅವನ್ನು ಸ್ವೀಕರಿಸಿದ. ಭಗವಂತ ವಿವಿಧ ರೂಪುಗಳಿಂದ ಕಾಣಿಸಿಕೊಳ್ಳುತ್ತಾನೆ: ಕೆಲವು ವೇಳೆ ನರರೂಪದಿಂದ, ಕೆಲವು ವೇಳೆ ಚಿನ್ಮಯ ಭಗವದ್ರೂಪದಿಂದ. ಭಗವದ್ರೂಪದಲ್ಲಿ ವಿಶ್ವಾಸವಿಡಬೇಕು. ನೀನು ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ಕಾಮಾರಹಾಟಿಯ ಬ್ರಾಹ್ಮಣಿಗೆ (ಗೋಪಾಲನ ತಾಯಿ) ಅನೇಕ ಅಲೌಕಿಕ ದರ್ಶನಗಳಾಗುತ್ತಿವೆ. ಗಂಗಾ

ನದಿ ದಡದಲ್ಲಿರೋ ಒಂದು ತೋಟದಲ್ಲಿ ಒಂದು ಕುಟೀರ ಕಟ್ಟಿಕೊಂಡು ಏಕಾಂಗಿನಿಯಾಗಿ ವಾಸವಾಗಿದಾಳೆ. ಆಕೆ ತನ್ನ ಸಮಯವನ್ನೆಲ್ಲ ಜಪ ತಪಾದಿಗಳಲ್ಲೇ ಕಳೆಯುತ್ತಾಳೆ. ಗೋಪಾಲ ಆಕೆಯ ಮಗ್ಗುಲಿನಲ್ಲೇ ಮಲಗುತ್ತಾನೆ. (ಹೀಗೆಂದು ಹೇಳುತ್ತ ಹೇಳುತ್ತ ಇದ್ದಹಾಗೆಯೆ ಪರಮ ಹಂಸರು ಬೆಚ್ಚಿಬಿದ್ದರು.) ಇದು ಕಲ್ಪನೆಯಲ್ಲ, ವಾಸ್ತವ. ಗೋಪಾಲನ ಅಂಗೈ ಕೆಂಪಗಿರೋದನ್ನು ಆಕೆ ನೋಡಿದಾಳೆ. ಆಕೆಯೊಡನೆಯೆ ಆತ ಓಡಾಡುತ್ತಾನೆ. ಆಕೆ ಆತನಿಗೆ ತನ್ನ ಸ್ತನ ಪಾನಮಾಡಿಸುತ್ತಾಳೆ. ಪರಸ್ಪರ ಮಾತುಕತೆಗಳಾಡುತ್ತಾರೆ. ನರೇಂದ್ರ ಇದನ್ನು ಕೇಳಿ ಸುಮ್ಮನೆ ಅತ್ತುಬಿಟ್ಟ. ಹಿಂದೆ ನನಗೂ ಅನೇಕ ಅಲೌಕಿಕ ದರ್ಶನಗಳಾಗುತ್ತಿದ್ದುವು. ಈಗ ನಾನು ಭಾವಸ್ಥನಾಗಿರೋದರಿಂದ ಅಷ್ಟೊಂದು ದರ್ಶನಗಳಾಗುತ್ತಿಲ್ಲ. ಈಗ ನನ್ನಲ್ಲಿ ಪ್ರಕೃತಿಯ ಸ್ವಭಾವ ಕಡಮೆ ಕಡಮೆಯಾಗುತ್ತಾ ಬರುತ್ತಿದೆ; ಪುರುಷನ ಸ್ವಭಾವ ಅಧಿಕಾಧಿಕವಾಗಿ ಬೆಳೆಯುತ್ತಿದೆ. ಆದಕ್ಕಾಗಿ ನನ್ನ ಭಾವಗಳು ಅಂತರ್ಯದಲ್ಲೇ ಇರುತ್ತಿವೆ; ಅಷ್ಟೊಂದಾಗಿ ಹೊರಗಡೆ ವ್ಯಕ್ತವಾಗುತ್ತಿಲ್ಲ.

"ಚಿಕ್ಕ ನರೇನನದು ಪುರುಷಭಾವ. ಅದಕ್ಕಾಗಿ ಆತನ ಮನಸ್ಸು ಧ್ಯಾನದ ಸಮಯದಲ್ಲಿ ಸಂಪೂರ್ಣವಾಗಿ ಇಷ್ಟದೇವತೆಯಲ್ಲಿ ಲೀನವಾಗಿ ಬಿಡುತ್ತದೆ. ಆತ ತನ್ನ ಭಾವಗಳನ್ನು ಹೊರಗೆಡಹುತ್ತಿಲ್ಲ. ನಿತ್ಯಗೋಪಾಲನದು ಪ್ರಕೃತಿಭಾವ. ಅದಕ್ಕಾಗಿ ಆತ ಭಾವಸ್ಥನಾದಾಗ ಆತನ ದೇಹ ತಿರುಚು ಮುರುಚುಗೊಳ್ಳುತ್ತದೆ.

(ಮಾಸ್ಟರಿಗೆ) "ಒಳ್ಳೆಯದು, ಜನರು ಕಿಂಚಿತ್ ಕಿಂಚಿತ್ತಾಗಿ ತ್ಯಾಗ ಮಾಡೋದುಂಟು, ಆದರೆ ಈ ಯುವಕರ ಅವಸ್ಥೆ ಎಷ್ಟು ಅದ್ಭುತವಾದ್ದು!

"ವಿನೋದ ಹೇಳಿದ, 'ನಾನು ನನ್ನ ಹೆಂಡತಿಯೊಡನೆ ಮಲಗಿ ನಿದ್ರಿಸಬೇಕಾಗಿದೆ. ಅದು ನನ್ನ ಮನಸ್ಸನ್ನು ಕೆಡಿಸುತ್ತಿದೆ' ಅಂತ. ಸತಿಯೊಡನೆ ಸಹವಾಸ ಮಾಡಲಿ ಬಿಡಲಿ ಆಕೆಯೊಡನೆ ನಿದ್ರಿಸುವುದೂ ಸಾಧಕನಿಗೆ ಒಳ್ಳೆಯದಲ್ಲ. ಶರೀರ ಘರ್ಷಣೆಯ ಮತ್ತು ಶಾಖದ ಅನುಭವಗಳನ್ನು ಹೊಂದಲೇಬೇಕಾಗುತ್ತದೆ.

"ದ್ವಿಜ ಎಂಥ ಅದ್ಭುತ ಅವಸ್ಥೆಯಲ್ಲಿದಾನೆ! ಶರೀರವನ್ನು ತೂಗಾಡಿಸುತ್ತ ಕೇವಲ ನನ್ನ ಕಡೆಗೇ ದೃಷ್ಟಿಸಿ ನೋಡುತ್ತಿರುತ್ತಾನೆ.

ಇದೇನು ಕಡಮೆಯಾದುದೆ? ಯಾರೆ ಆಗಲಿ ತಮ್ಮ ಇಡೀ ಮನಸ್ಸನ್ನು ಕೇಂದ್ರೀಕರಿಸಿ ನನ್ನ ಕಡೆಗೆ ತಿರುಗಿಸುವುದಾದರೆ, ಅಂಥವರಿಗೆ ನಿಜವಾಗಿಯೂ ಎಲ್ಲವೂ ದೊರೆತುಬಿಡುತ್ತದೆ.

"ನಾನು ಯಾರು? ಎಲ್ಲವೂ ಆತನೆ. ನಾನು ಯಂತ್ರ, ಆತ ಯಂತ್ರಿ. ಇದರಲ್ಲಿ (ಪರಮಹಂಸರಲ್ಲಿ) ಕೇವಲ ಭಗವಂತನ ಸತ್ ಇದೆ. ಅದಕ್ಕಾಗಿ ಇದರ ಕಡೆ ಜನರ ಆಕರ್ಷಣೆ ಅಧಿಕಾಧಿಕವಾಗುತ್ತಾ ಬರುತ್ತಿದೆ. ಸ್ಪರ್ಶ ಮಾತ್ರದಿಂದಲೇ ಜನರ ಆಧ್ಯಾತ್ಮಿಕ ಜೀವನ ಚೇತನಗೊಳ್ಳುತ್ತಿದೆ. ಈ ಎಳೆತ, ಈ ಆಕರ್ಷಣೆ ಭಗವಂತನದೇ.

"ಬೇಲಘರದ ತಾರಕ ದಕ್ಷಿಣೇಶ್ವರದಿಂದ ತನ್ನ ಮನೆಗೆ ಹಿಂದಿರುಗುತ್ತಿದ್ದ. ಇದರಿಂದ (ಪರಮಹಂಸರ ಶರೀರದಿಂದ) ಜ್ವಾಲೆಯೋಪಾದಿಯ ಒಂದು ವಸ್ತು ಹೊರಕ್ಕೆ ಬಂದು ಆತನನ್ನು ಹಿಂಬಾಲಿಸಿದುದನ್ನು ನಾನು ಸ್ಪಷ್ಟವಾಗಿ ನೋಡಿದೆ. ಕೆಲವು ದಿನಗಳಾದನಂತರ ಮತ್ತೆ ತಾರಕ ದಕ್ಷಿಣೇಶ್ವರಕ್ಕೆ ಬಂದ. ಇದರೊಳಗಿರೋನು ಸಮಾಧಿಸ್ಥನಾಗಿ ಆತನ ಎದೆ ಮೇಲೆ ತನ್ನ ಪಾದಗಳನ್ನಿಟ್ಟ.

"ಒಳ್ಳೆಯದು, ಈ ರೀತಿಯ ಯುವಕರು ಇನ್ನೂ ಇದಾರೇನು?"

ಮಾಸ್ಟರ್: "ಮೋಹಿತ್ ಬಹಳ ಒಳ್ಳೆಯವ. ನಿಮ್ಮನ್ನು ಒಂದೆರಡು ಸಲ ನೋಡಿದಾನೆ. ಒಂದೇ ಸಲಕ್ಕೆ ಎರಡು ವಿಶ್ವವಿದ್ಯಾನಿಲಯದ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವಷ್ಟು ಪುಸ್ತಕಗಳನ್ನು ಓದುತ್ತಿದಾನೆ. ಆತನಿಗೆ ಭಗವಂತನಲ್ಲಿ ಅತ್ಯಂತ ಅನುರಾಗ."

ಶ್ರೀರಾಮಕೃಷ್ಣರು: "ಅದೆಲ್ಲ ಸರಿಯೆ. ಆದರೆ ಆತ ಉಚ್ಚ ಅಂತಸ್ತಿಗೆ ಸೇರಿದವನಲ್ಲ. ಆತನ ಶಾರೀರಿಕ ಲಕ್ಷಣಗಳು ಅಷ್ಟು ಒಳ್ಳೆಯವಲ್ಲ. ಆತನದು ಗೂಳಿ-ನಾಯಿಯಂಥ ಮುಖ. ಆದರೆ ಉಳಿದ ಈ ಯುವಕರು ಉಚ್ಚ ಅಂತಸ್ತಿಗೆ ಸೇರಿದವರು.

"ಶರೀರಧಾರಣೆ ಮಾಡಿತು ಅಂದರೆ ಅನೇಕ ಕಷ್ಟಗಳಿಗೆ ಗುರಿಯಾಗಬೇಕಾಗುತ್ತದೆ. ಯಾರೇ ಆಗಲಿ ಶಪಿತನಾದರಂತೂ ಆತ ಏಳು ಜನ್ಮಗಳನ್ನು ಎತ್ತಬೇಕಾಗುತ್ತದೆ. ಆದ್ದರಿಂದ ಬಹಳ ಎಚ್ಚರಿಕೆಯಿಂದ ಬದುಕಿರಬೇಕು. ಕಾಮನೆ ಇತ್ತು ಅಂದರೆ ಶರೀರಧಾರಣೆ ಮಾಡಬೇಕಾಗಿಬರುತ್ತದೆ."

ಒಬ್ಬ ಭಕ್ತ: "ಯಾರು ಅವತಾರಪುರುಷರೊ, ಎಂದರೆ ಮಾನವ

ದೇಹಧಾರಣೆಮಾಡಿಕೊಂಡು ಬಂದಿದಾರೊ, ಅವರಲ್ಲೇನು ಕಾಮನೆಗಳಿರುತ್ತವೆ?''

ಶ್ರೀರಾಮಕೃಷ್ಣರು ನಗುತ್ತ: ''ಎಲ್ಲಾ ಆಸೆಗಳೂ ನನ್ನನ್ನು ಪೂರ್ಣವಾಗಿ ಬಿಟ್ಟುಹೋಗಿಲ್ಲ. ಒಬ್ಬ ಸಾಧು ಒಂದು ವಿಧದ ಶಾಲನ್ನು ಹೊದ್ದುಕೊಂಡಿದ್ದುದನ್ನು ನೋಡಿ, ನನಗೂ ಅಂಥದೊಂದನ್ನು ಹೊದ್ದುಕೋಬೇಕು ಅಂತ ಭಾವನೆಯಾಯಿತು. ಆ ಆಸೆ ಇನ್ನೂ ಹಾಗೆಯೇ ಉಳಿದುಕೊಂಡಿದೆ. ಅದಕ್ಕಾಗಿ ನಾನು ಮತ್ತೆ ಜನ್ಮವೆತ್ತಬೇಕಾಗಿಬರುವುದೊ ಏನೊ ನನಗೆ ಗೊತ್ತಿಲ್ಲ.''

ಬಲರಾಮ ನಗುತ್ತ: ''ಕೇವಲ ಒಂದು ಶಾಲಿಗಾಗಿ ಮಾತ್ರವೇ ನೀವು ಮತ್ತೆ ಜನ್ಮವೆತ್ತುವಿರೇನು?'' (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ನಗುತ್ತ: ''ದೇಹತ್ಯಾಗವಾಗೋ ಸಮಯದಲ್ಲಿ ಚಿಂತನೆ ಮಾಡಲು ಯಾವುದಾದರು ಒಂದು ಸದ್ಕಾಮನೆಯನ್ನು ಉಳಿಸಿಕೊಂಡಿರಬೇಕು. ಸಾಧುಗಳು ನಾಲ್ಕು ಧಾಮಗಳಲ್ಲಿ ಒಂದು ಧಾಮಕ್ಕೆ ಮಾತ್ರ ಹೋಗದೆ ಉಳಿದುಕೊಳ್ಳುತ್ತಾರೆ. ಜಗನ್ನಾಥನ ಚಿಂತನೆ ಮಾಡುತ್ತ ಮಾಡುತ್ತ ದೇಹತ್ಯಾಗವಾಗಲೆಂದು ಅನೇಕ ಸಾಧುಗಳು ಜಗನ್ನಾಥ ಕ್ಷೇತ್ರಕ್ಕೆ ಹೋಗೋದಿಲ್ಲ.''

ಕಾಷಾಯವಸ್ತ್ರಧಾರಿಯಾದ ಒಬ್ಬ ವ್ಯಕ್ತಿ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿದ. ಪರಮಹಂಸರನ್ನು ಆತ ಅವರ ಹಿಂದೆ ಅಲ್ಲಗಳೆಯುತ್ತಿದ್ದ; ಅದಕ್ಕಾಗಿ ಬಲರಾಮ ನಗುತ್ತಿದಾನೆ. ಪರಮಹಂಸರು ಅಂತರ್ಯಾಮಿ. ಬಲರಾಮನಿಗೆ ಹೇಳುತ್ತಿದಾರೆ, ''ಚಿಂತೆ ಇಲ್ಲ. ನಾನು ಒಬ್ಬ ಠಕ್ಕ ಅಂತ ಬೇಕಾದರೂ ಹೇಳಲಿ'' ಎಂದು.

ಪರಮಹಂಸರು ತೇಜಚಂದ್ರನೊಡನೆ ಮಾತುಕತೆಗಳಾಡುತ್ತಿದಾರೆ.

ಶ್ರೀರಾಮಕೃಷ್ಣರು: ''ನಿನಗೆ ಅನೇಕಸಲ ಕರೆಕಳುಹಿಸಿದೇನೆ, ಆದರೂ ನೀನು ಬರುತ್ತಿರಲಿಲ್ಲವಲ್ಲ ಏಕೆ? ಒಳ್ಳೆಯದು, ನೀನು ಧ್ಯಾನ-ಗೀನ ಮಾಡುತ್ತಿರುವುದಾದರೆ ನನಗೆ ಬಹಳ ಆನಂದ. ನೀನು ನನಗೆ ಸೇರಿದವನು; ಅದಕ್ಕಾಗೇ ನಾನು ನಿನಗಾಗಿ ಕರೆಕಳುಹಿಸುತ್ತಿರೋದು.''

ತೇಜಚಂದ್ರ: ''ನನಗೆ ಆಫೀಸಿನ ಕೆಲಸ ಇದೆ. ಅಲ್ಲಿ ಬಹಳ ಹೆಚ್ಚು ಕೆಲಸ.''

ಮಾಸ್ಟರ್ ನಗುತ್ತ: "ಈತನ ಮನೆಯಲ್ಲಿ ಮದುವೆ ನಡೆಯಿತು. ಆಫೀಸಿನಿಂದ ಹತ್ತು ದಿನ ರಜ ತೆಗೆದುಕೊಂಡಿದ್ದ."

ಶ್ರೀರಾಮಕೃಷ್ಣರು: "ಹಾಗಾದರೆ! ಸಮಯವಿಲ್ಲ, ಸಮಯವಿಲ್ಲ! ಈಗ ತಾನೆ ಹೇಳಿದ ಸಂಸಾರವನ್ನು ತ್ಯಾಗಮಾಡಿಬಿಡುತ್ತೇನೆ ಅಂತ?"

ನಾರಾಯಣ: "ಮಾಸ್ಟರ್‌ಮಹಾಶಯ ಒಂದು ದಿನ ನಮಗೆ ಹೇಳಿದರು, 'ಈ ಸಂಸಾರ ಒಂದು ಘೋರಾರಣ್ಯ' ಅಂತ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಬ್ಬ ಶಿಷ್ಯ ಔಷಧವನ್ನು ಸೇವಿಸಿ ಪ್ರಜ್ಞೆಯಿಲ್ಲದೆ ತನ್ನ ಮನೆಯಲ್ಲಿ ಬಿದ್ದುಕೊಂಡಿರೋವಾಗ, ಅಲ್ಲಿಗೆ ಆತನ ಗುರು ಬಂದು ತಾನು ಕೊಡೋ ಗುಳಿಗೆಯನ್ನು ರೋಗಿಯ ಬಂಧು ಗಳಲ್ಲಿ ಯಾರಾದರೊಬ್ಬರು ತೆಗೆದುಕೊಳ್ಳೋದಾದರೆ ತಾನು ರೋಗಿಯನ್ನು ಬದುಕಿಸಬಲ್ಲೆನೆಂದು ಮತ್ತು ಆತನೇನೊ ಬದುಕಿಕೊಳ್ಳುತ್ತಾನೆ, ಆ ಗುಳಿಗೆಯನ್ನು ತಿಂದವರು ಮಾತ್ರ ಸತ್ತುಹೋಗುತ್ತಾರೆ ಎಂಬುದಾಗಿ ತಿಳಿಸಿದ ಆ ಕಥೆಯನ್ನು ಇವರಿಗೆ ಹೇಳು.

"ತನ್ನ ಪರಿವಾರದವರೇ ತನ್ನ ಪರಮ ಆಪ್ತರು ಎಂದು ತಿಳಿದು ಕೊಂಡಿದ್ದ ಒಬ್ಬ ಹಠಯೋಗಿ ತನ್ನ ಕೈ ಕಾಲುಗಳನ್ನು ತಿರುಚು ಮುರು ಚಾಗಿ ಮಾಡಿ ಕುಳಿತುಕೊಂಡು ಸತ್ತವನ ಹಾಗೆ ನಟಿಸಿದ ಕಥೆಯನ್ನೂ ಇವರಿಗೆ ಹೇಳು. ಈ ಕಥೆಗಳನ್ನು ಕೇಳೋದರಿಂದ ಇವರಿಗೆ ಉಪಕಾರ ವಾಗುತ್ತದೆ."

ಈಗ ಮಧ್ಯಾಹ್ನ. ಪರಮಹಂಸರು ಬಲರಾಮನ ಮನೆ - ದೇವರಾದ ಶ್ರೀ ಜಗನ್ನಾಥನ ಪ್ರಸಾದವನ್ನು ಸ್ವೀಕರಿಸಿದರು. ಪರಮಹಂಸರು ಆಗಾಗ ಹೇಳುತ್ತಲೇ ಇರುತ್ತಿದ್ದರು, ಆತನ ಮನೆಯ ಅನ್ನ ಬಹಳ ಶುದ್ಧವಾದುದು ಅಂತ. ಊಟವಾದನಂತರ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡರು.

ಸಾಯಂಕಾಲವಾಗಿದೆ. ಪರಮಹಂಸರು ಭಕ್ತರೊಡನೆ ಅದೇ ಬಲರಾಮನ ಬೈಠಕ್‌ಖಾನೆಯಲ್ಲಿ ಕುಳಿತಿದ್ದಾರೆ. ಕರ್ತಾಭಜ ಸಂಪ್ರ ದಾಯದ ಚಂದ್ರಬಾಬು ಮತ್ತು ಒಬ್ಬ ಬ್ರಾಹ್ಮಣ ವಿಕಟಕವಿ ಇವರಿಬ್ಬರೂ ಅಲ್ಲಿಗೆ ಬಂದಿದಾರೆ. ಆ ಬ್ರಾಹ್ಮಣ ಕೋಡಂಗಿ ಹಾಗೆ ಮಾತುಕತೆಗಳಾಡು ತ್ತಿದ್ದ; ಆತನ ಒಂದೊಂದು ಮಾತೂ ಎಲ್ಲರಿಗೂ ನಗು ತರುತ್ತಿತ್ತು.

ಘಂಟೆ ಆರು. ಗಿರೀಶನ ಸೋದರ ಅತುಲ ಮತ್ತು ತೇಜಚಂದ್ರನ ಸೋದರ ಬಂದಿದಾರೆ. ಪರಮಹಂಸರು ಭಾವಸಮಾಧಿಸ್ಥರಾಗಿದಾರೆ.

ಕೆಲವು ನಿಮಿಷಗಳಾದನಂತರ ಇನ್ನೂ ಭಾವಾವಿಷ್ಟರಾಗಿಯೆ ಹೇಳುತ್ತಿದಾರೆ, "ಚೈತನ್ಯನ ಧ್ಯಾನ ಮಾಡಿದರೆ ಮನುಷ್ಯ ಅಚೈತನ್ಯನಾಗುವನೆ? ಭಗವಂತನ ಧ್ಯಾನ ಮಾಡಿದರೆ ಮಿದುಳು ಕೆಟ್ಟುಹೋಗೋದುಂಟೆ? ಆತ ನಿತ್ಯ ಶುದ್ಧ ಬುದ್ಧ ಬೋಧಸ್ವರೂಪ" ಅಂತ.

ಆಗಂತುಕರಲ್ಲಿ ಯಾರಾದರು, ಭಗವಂತನ ಧ್ಯಾನಮಾಡಿ ಪರಮಹಂಸರ ತಲೆ ಕೆಟ್ಟುಹೋಗಿಬಿಟ್ಟಿದೆ ಅಂತ ಭಾವಿಸಿದ್ದರೇನು?

ಶ್ರೀರಾಮಕೃಷ್ಣರು ಆ ವಿಕಟಕವಿಗೆ: "ನೀನು ಸಾಮಾನ್ಯ ಐಹಿಕ ವಿಷಯಗಳಲ್ಲಿಯೇ ನಿರತನಾಗಿ, ಹಗಲಿರುಳೆನ್ನದೆ ಸುಮ್ಮನೆ ತಮಾಷೆ ಮಾಡುತ್ತ ಬರಿದೆ ಏಕೆ ನಿನ್ನ ಜೀವನವನ್ನು ಕಳೆದುಬಿಡುತ್ತಿದೀಯೆ? ನಿನ್ನ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿಬಿಡು. ಯಾರು ಉಪ್ಪಿನ ಸಂಬಂಧವಾಗಿ ಸರಿಯಾದ ಲೆಕ್ಕ ಇಡಬಲ್ಲನೊ, ಆತ ಸಕ್ಕರೆ ಸಂಬಂಧವಾಗಿಯೂ ಸರಿಯಾದ ಲೆಕ್ಕ ಇಡಬಲ್ಲ."

ವಿಕಟಕವಿ ನಗುತ್ತ: "ನನ್ನನ್ನೂ ಆಕರ್ಷಿಸಿಬಿಡಿ."

ಶ್ರೀರಾಮಕೃಷ್ಣರು: "ನನ್ನ ಕೈಯಲ್ಲಿ ಏನು ತಾನೆ ಸಾಧ್ಯ? ಎಲ್ಲವೂ ನಿನ್ನ ಸ್ವಪ್ರಯತ್ನದ ಮೇಲೆ ನಿಂತಿದೆ. ನಿನ್ನ ಮನಸ್ಸು ನಿನ್ನದೇ ವಿನಾ ನನ್ನದಲ್ಲ. ಈ ಕೋಡಂಗಿ ಚೇಷ್ಟೆಯನ್ನು ತ್ಯಜಿಸಿ ಭಗವಂತನ ಕಡೆಗೆ ಮುಂದುವರಿ. ಮುಂದು ಮುಂದುವರಿದಂತೆಲ್ಲ ಇನ್ನೂ ಒಳ್ಳೊಳ್ಳೆಯ ವಸ್ತುಗಳು ದೊರೆಯುತ್ತವೆ. ಒಬ್ಬ ಬ್ರಹ್ಮಚಾರಿ ಒಬ್ಬ ಸೌದೆ ಕಡಿಯುವವನಿಗೆ ಕಾಡಿನಲ್ಲಿ ಮುಂದು ಮುಂದಕ್ಕೆ ಹೋಗುವಂತೆ ಹೇಳಿದ. ಆತ ಸ್ವಲ್ಪ ಮುಂದಕ್ಕೆ ಹೋಗಿ ನೋಡುತ್ತಾನೆ, ಎಲ್ಲಿ ನೋಡಿದರೂ ಬರೀ ಚಂದನದ ಮರಗಳೆ. ಬಳಿಕ ಆತನಿಗೆ ಕ್ರಮಕ್ರಮವಾಗಿ ಬೆಳ್ಳಿಯ ಗಣಿ, ಚಿನ್ನದ ಗಣಿ, ಹೀರ ಮಾಣಿಕ್ಯಗಳ ಗಣಿ ಕಂಡುಬರುತ್ತವೆ."

ವಿಕಟಕವಿ: "ಈ ಮಾರ್ಗದಲ್ಲಿ ಕೊನೆ ಎಂಬುದೇ ಇಲ್ಲ."

ಶ್ರೀರಾಮಕೃಷ್ಣರು: "ಎಲ್ಲಿ ಶಾಂತಿ ದೊರೆಯುತ್ತದೆಯೊ ಅದೇ ಅದರ ಕೊನೆ."

ಒಬ್ಬ ಆಗಂತುಕನ ಸಂಬಂಧವಾಗಿ ಪರಮಹಂಸರು ಹೇಳುತ್ತಿದಾರೆ, "ಆತನಲ್ಲಿ ಒಂದು ಕಿಂಚಿತ್ ಸತ್ತ್ವವೂ ಇರಲಿಲ್ಲ. ಅವನು ಯಾವುದಕ್ಕೂ ಬಾರದವನಾಗಿ ಕಂಡುಬಂದ" ಅಂತ.

ಸಾಯಂಕಾಲವಾಗಿದೆ. ಕೊಠಡಿಗೆ ದೀಪ ಹಚ್ಚಿದಾರೆ. ಪರಮ

ಹಂಸರು ತಮ್ಮ ಸುಮಧುರ ಕಂಠದಿಂದ ಜಗನ್ಮಾತೆಯ ನಾಮಜಪಮಾಡುತ್ತ ಆಕೆಯ ಧ್ಯಾನ ಮಾಡುತ್ತಿದಾರೆ. ಭಕ್ತರು ಸುತ್ತಲೂ ಕುಳಿತಿದಾರೆ. ಬಲರಾಮನ ಮನೆಯಲ್ಲಿ ನಾಳೆ ಬೆಳಗ್ಗೆ ರಥೋತ್ಸವವಿರುವುದರಿಂದ, ಪರಮ ಹಂಸರು ಇಂದಿನ ರಾತ್ರಿಯನ್ನು ಆತನ ಮನೆಯಲ್ಲೇ ಕಳೆಯುತ್ತಾರೆ.

ಮನೆಯ ಒಳಕ್ಕೆ ಹೋಗಿ ಸ್ವಲ್ಪ ಫಲಾಹಾರವನ್ನು ಸ್ವೀಕರಿಸಿದ ನಂತರ ಪರಮಹಂಸರು ಮತ್ತೆ ಬೈಠಕ್ ಖಾನೆಗೆ ಹಿಂದಿರುಗಿದರು. ಆಗ ಘಂಟೆ ರಾತ್ರಿ ಹತ್ತು. ಪರಮಹಂಸರು ಮಾಸ್ಟರಿಗೆ ಹೇಳಿದರು, "ದಯ ವಿಟ್ಟು ಆ ಕೊಠಡಿಯಿಂದ ನನ್ನ ಚೌಕ ತೆಗೆದುಕೊಂಡು ಬಾ" ಅಂತ.

ಪಕ್ಕದ ಒಂದು ಚಿಕ್ಕ ಕೊಠಡಿಯಲ್ಲಿ ಪರಮಹಂಸರಿಗಾಗಿ ಹಾಸಿಗೆ ಯನ್ನು ಸಿದ್ಧಪಡಿಸಿದಾರೆ. ಹತ್ತೂವರೆ ಘಂಟೆಗೆ ಸರಿಯಾಗಿ ಪರಮ ಹಂಸರು ಹಾಸಿಗೆಯಲ್ಲಿ ಮಲಗಿಕೊಂಡರು. ಆಗ ಬೇಸಿಗೆ ಕಾಲ. ಮಾಸ್ಟ ರಿಗೆ ಹೇಳಿದರು, "ಒಂದು ಬೀಸಣಿಗೆ ತೆಗೆದುಕೊಂಡುಬಂದರೆ ಒಳ್ಳೆಯದು" ಅಂತ. ತಮಗೆ ಸ್ವಲ್ಪ ಗಾಳಿ ಬೀಸುವಂತೆ ಆತನಿಗೆ ಹೇಳಿದರು. ಪರಮ ಹಂಸರು ಅರ್ಧರಾತ್ರಿಯಲ್ಲಿ ಎಚ್ಚರಗೊಂಡರು. ಆಗ ಅವರು ಮಾಸ್ಟರಿಗೆ ಹೇಳಿದರು, "ಈಗ ನಿಲ್ಲಿಸು, ಚಳಿಯಾಗುತ್ತಿದೆ" ಅಂತ.

೧೪ನೆ ಜುಲೈ ೧೮೮೫, ಆಷಾಢ ಶುಕ್ಲ ಬಿದಿಗೆ, ಮಂಗಳವಾರ.

ಇಂದು ಪೂರಿಯಲ್ಲಿ ಶ್ರೀ ಜಗನ್ನಾಥ ರಥೋತ್ಸವ. ಪರಮಹಂಸರು ಮುಂಜಾನೆಯೇ ಹಾಸಿಗೆಯಿಂದ ಎದ್ದುಬಿಟ್ಟಿದಾರೆ. ಕೊಠಡಿಯಲ್ಲಿ ಒಬ್ಬರೆ ಏಕಾಕಿಯಾಗಿ ಭಗವನ್ನಾಮಜಪಮಾಡುತ್ತಾ ನರ್ತಿಸುತ್ತಿದಾರೆ. ಮಾಸ್ಟರ್ ಕೊಠಡಿಗೆ ಬಂದು ಅವರಿಗೆ ಪ್ರಣಾಮಮಾಡಿದ. ಉಳಿದ ಭಕ್ತರೂ ಕ್ರಮೇಣ ಒಬ್ಬೊಬ್ಬರಾಗಿ ಅಲ್ಲಿಗೆ ಬಂದು ಅವರಿಗೆ ಪ್ರಣಾಮಮಾಡಿ ಅವರ ಹತ್ತಿರ ಕುಳಿತುಕೊಂಡರು. ಪರಮಹಂಸರು ಪೂರ್ಣನಿಗಾಗಿ ಬಹಳ ವ್ಯಾಕುಲರಾಗಿದಾರೆ. ಅವರು ಮಾಸ್ಟರೊಡನೆ ಆತನ ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನೀನು ಪೂರ್ಣನಿಗೆ ಏನಾದರು ಉಪದೇಶ ಗಿಪದೇಶ ಕೊಟ್ಟೆಯೇನು?"

ಮಾಸ್ಟರ್: "ಹೌದು, ಚೈತನ್ಯನ ಜೀವನ ಚರಿತ್ರೆ ಓದುವಂತೆ ಹೇಳಿದೇನೆ. ಆತನ ಜೀವನದ ಸಂಬಂಧವಾಗಿ ಆತನಿಗೆ ಅನೇಕ ವಿಷಯ

ಗಳು ಗೊತ್ತಿವೆ. ಜನರು ಸತ್ಯಸಂಧರಾಗಿರಬೇಕು ಎಂಬುದಾಗಿ ನೀವು ಹೇಳೋದನ್ನು ನಾನು ಆತನಿಗೆ ತಿಳಿಸಿದೇನೆ."

ಶ್ರೀರಾಮಕೃಷ್ಣರು: "ಒಳ್ಳೆಯದು, ನನ್ನ ಸಂಬಂಧವಾಗಿ ನೀನು, 'ಅವರು ಒಬ್ಬ ಅವತಾರಪುರುಷರು' ಎಂದು ಹೇಳಿದಾಗ ಆತ ಅದನ್ನು ಹೇಗೆ ಸ್ವೀಕರಿಸಿದ?"

ಮಾಸ್ಟರ್: "ನಾನು ಆತನಿಗೆ ಹೇಳಿದೆ, 'ಚೈತನ್ಯದೇವನಂಥ ಒಬ್ಬ ವ್ಯಕ್ತಿಯನ್ನು ನೋಡಬೇಕೆಂದಿದ್ದರೆ ಬಾ ನನ್ನೊಡನೆ' ಅಂತ."

ಶ್ರೀರಾಮಕೃಷ್ಣರು: "ಇನ್ನೇನಾದರು?"

ಮಾಸ್ಟರ್: "ನಿಮ್ಮ ಆ ಮಾತು: ಆನೆ ಚಿಕ್ಕ ಕಟ್ಟೆಗೆ ಇಳಿಯಿತು ಎಂದರೆ ನೀರು ಅಲ್ಲೋಲಕಲ್ಲೋಲವಾಗಿ ದಡದ ಸುತ್ತಲೂ ಬಂದು ಅಪ್ಪಳಿಸುತ್ತದೆ; ಅದೇ ರೀತಿಯಾಗಿ 'ಚಿಕ್ಕ ಪಾತ್ರ' ದಿಂದಲೂ ಭಾವ ಉಕ್ಕಿ ಹೊರಹೊಮ್ಮಿಬಿಡುತ್ತದೆ.

"ಆತ ಮೀನು ತಿನ್ನೋದನ್ನು ಬಿಟ್ಟುಬಿಟ್ಟರೋದಕ್ಕಾಗಿ ನಾನು ಆತನಿಗೆ ಹೇಳಿದೆ, 'ಹಾಗೇಕೆ ಮಾಡಿದೆ? ಅದಕ್ಕಾಗಿ ನಿನ್ನ ಮನೆಯವರು ಒಂದು ದೊಡ್ಡ ಗಲಾಟೆಯನ್ನೇ ಎಬ್ಬಿಸಿಬಿಡುತ್ತಾರೆ' ಅಂತ."

ಶ್ರೀರಾಮಕೃಷ್ಣರು: "ಅದು ಸರಿ. ಭಾವಗಳನ್ನು ಅಂತರ್ಯದಲ್ಲಿ ಇಟ್ಟುಕೊಳ್ಳೋದೇ ಒಳ್ಳೆಯದು."

ಘಂಟೆ ಪ್ರಾತಃಕಾಲ ಆರೂವರೆ. ಬಲರಾಮನ ಮನೆಯಿಂದ ಹೊರಟು ಮಾಸ್ಟರ್ ಗಂಗಾಸ್ನಾನಕ್ಕೆ ಹೋಗುತ್ತಿದಾನೆ. ಆಗ ಇದ್ದಕ್ಕಿದ್ದ ಹಾಗೆ ಭೂಮಿ ಕಂಪಿಸಲಾರಂಭಿಸಿತು. ಒಡನೆಯೆ ಆತ ಪರಮಹಂಸರಿದ್ದ ಕೊಠಡಿಗೆ ಹಿಂದಿರುಗಿಬಂದುಬಿಟ್ಟ. ಅವರು ಬೈಠಕ್‌ಖಾನೆಯಲ್ಲಿ ನಿಂತಿದ್ದರು. ಭಕ್ತರು ಅವರ ಸುತ್ತಲೂ ನಿಂತಿದ್ದರು. ಅವರೆಲ್ಲರೂ ಭೂಕಂಪದ ವಿಷಯವಾಗಿ ಮಾತನಾಡುತ್ತಿದ್ದರು. ಇಂದಿನ ಭೂಮಿಯ ಕಂಪನೆ ಸ್ವಲ್ಪ ಬಲವಾದ್ದೆ ಆಗಿತ್ತು. ಭಕ್ತರಲ್ಲನೇಕರು ಹೆದರಿಬಿಟ್ಟಿದ್ದರು.

ಮಾಸ್ಟರ್: "ನೀವೆಲ್ಲರೂ ನೆಲ ಅಂತಸ್ತಿಗೆ ಇಳಿದುಬಂದುಬಿಡಬೇಕಾಗಿತ್ತು."

ಶ್ರೀರಾಮಕೃಷ್ಣರು: "ನಮ್ಮ ವಾಸಸ್ಥಾನ ಇಂಥ ದುರ್ದೆಸೆಗೆ ತುತ್ತಾಗುವ ಸಂಭವವಿದೆ; ಆದರೂ ಜನ ಮಾತ್ರ ಅಹಂಕಾರ ಬಿಡೋ

ಹಾಗಿಲ್ಲ. (ಮಾಸ್ಟರಿಗೆ) ಆ ಆಶ್ವೀಜ ಮಾಸದ—೫ನೆ ಅಕ್ಟೋಬರ್ ಗಲಟ್ಟಳ— ಚಂಡ ಮಾರುತ ನಿನ್ನ ಜ್ಞಾಪಕದಲ್ಲಿದೆಯೇನು ?''

ಮಾಸ್ಟರ್: ''ಹೌದು, ಜ್ಞಾಪಕದಲ್ಲಿದೆ. ಆಗ ನಾನು ಬಹಳ ಚಿಕ್ಕ ಹುಡುಗನಾಗಿದ್ದೆ—ಒಂಬತ್ತೊ ಹತ್ತೊ ವಯಸ್ಸು. ಆಗ ಮನೆ ಯಲ್ಲಿ ಬೇರೆ ಯಾರೂ ಇರಲಿಲ್ಲ, ನಾನೊಬ್ಬನೆ ಇದ್ದೆ. ಭಗವಂತನನ್ನು ಕರೆಯಲಾರಂಭಿಸಿದೆ.''

ಮಾಸ್ಟರ್ ಆಶ್ಚರ್ಯಚಕಿತನಾಗಿ ತನಗೆ ತಾನೇ ಹೇಳಿಕೊಳ್ಳುತ್ತಿದಾನೆ, ''ಪರಮಹಂಸರು ಇದ್ದಕ್ಕಿದ್ದಹಾಗೆ ಆ ಚಂಡ ಮಾರುತದ ವಿಷಯವಾಗಿ ನನಗೇಕೆ ಪ್ರಶ್ನೆ ಹಾಕಿದರು ? ನಾನೊಬ್ಬನೆ ಏಕಾಂಗಿಯಾಗಿ ಕೊಠಡಿಯಲ್ಲಿ ಕುಳಿತು ಕಣ್ಣೀರಿಡುತ್ತ ಅತ್ಯಂತ ವ್ಯಾಕುಲನಾಗಿ ಭಗವಂತನಿಗೆ ಮೊರೆ ಯಿಡುತ್ತಿದ್ದುದು ಇವರ ದಿವ್ಯ ದೃಷ್ಟಿಗೆ ಗೋಚರವಾಗಿಬಿಟ್ಟಿದೆಯೇನು ? ಅದನ್ನು ಇವರು ನನಗೆ ಜ್ಞಾಪಕಪಡಿಸುತ್ತಿರುವರೇ? ಆಜನ್ಮದಿಂದಲೇ ಇವರು ನನ್ನ ಗುರುವಾಗಿ ನನ್ನನ್ನು ರಕ್ಷಿಸುತ್ತಾ ಬಂದಿದಾರೇನು?'' ಅಂತ.

ಶ್ರೀರಾಮಕೃಷ್ಣರು: ''ದಕ್ಷಿಣೇಶ್ವರದಲ್ಲಿ ಆ ಚಂಡ ಮಾರುತ ಎದ್ದಾಗ ಆಗಲೇ ಹಗಲು ಬಹಳವಾಗಿ ಮುಂದುವರಿದಿತ್ತು. ಜನರು ಹೇಗೊ ಮಾಡಿ ಅನ್ನ ಬೇಯಿಸಿಕೊಂಡರು. ಮರಗಿಡಗಳೆಲ್ಲ ಬೇರುಸಹಿತ ಉರುಳಿಕೊಂಡುವು. ನೋಡು, ನಾವು ವಾಸಿಸೋ ಮನೆಗೆ ಈ ದುರ್ದೆಸೆ!

''ಆದರೆ ಪೂರ್ಣ ಜ್ಞಾನ ದೊರೆತನಂತರ ಸ್ವಾಭಾವಿಕ ಮರಣಕ್ಕು ಮತ್ತು ಕೊಲೆಯ ಮರಣಕ್ಕು ಯಾವ ಭೇದವೂ ತೋರದಂತಾಗುತ್ತದೆ; ಎಂದರೆ ಎರಡೂ ಮಿಥ್ಯಾ. ಮನುಷ್ಯ ಸತ್ತರೂ ಆತನ ನಿಜ ಸ್ವರೂಪ ಸಾಯೋದಿಲ್ಲ; ಆತನನ್ನು ಕೊಂದುಹಾಕಿದರೂ ಆತನ ನಿಜ ಸ್ವರೂಪ ಸಾಯೋದಿಲ್ಲ. ಯಾರದು ನಿತ್ಯವೊ, ಆತನದೇ ಲೀಲೆ. ಆತನೇ ಒಂದು ರೂಪದಲ್ಲಿ ನಿತ್ಯವಾಗಿದಾನೆ, ಇನ್ನೊಂದು ರೂಪದಲ್ಲಿ ಲೀಲೆಯಾಗಿದಾನೆ. ಲೀಲೆ ಕೊನೆಗಂಡಿತು ಎಂದರೆ ನಿತ್ಯ ಇದ್ದೇ ಇರುತ್ತದೆ. ನೀರು ಅಲೆಯ ರೂಪಿನಲ್ಲಿದ್ದರೂ ನೀರೆ, ಸುಮ್ಮನೆ ನಿಂತಿದ್ದರೂ ನೀರೆ; ಅಲೆ ನಿಂತು ಹೋಯಿತು ಎಂದರೆ ಅದು ಮತ್ತೆ ಎಂದಿನ ನೀರೆ.''

ಪರಮಹಂಸರು ಭಕ್ತರೊಡನೆ ಬೈಠಕ್ ಖಾನೆಯಲ್ಲಿ ಕುಳಿತುಕೊಂಡಿ ದಾರೆ. ಮಹೇಂದ್ರಮುಖರ್ಜಿ, ಹರಿ, ಚಿಕ್ಕ ನರೇನ ಮತ್ತು ಇನ್ನೂ ಕೆಲವು ಯುವಕಭಕ್ತರು ಅಲ್ಲಿ ಕುಳಿತುಕೊಂಡಿದಾರೆ. ಹರಿ ಏಕಾಂಗಿ

ಯಾಗಿ ವಾಸಿಸುತ್ತ ವೇದಾಂತಾಧ್ಯಯನ ಮಾಡುತ್ತಿದ್ದಾನೆ. ಆತನಿಗೆ ವಯಸ್ಸು ಇಪ್ಪತ್ತು - ಮೂರೊ, ಇಪ್ಪತ್ತು - ನಾಲ್ಕೊ. ವಿವಾಹವಾಗಿಲ್ಲ. ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿಸುತ್ತಿದ್ದಾರೆ. ಅವರ ಇಚ್ಛೆ ಆತ ಆಗಾಗ ಬಂದು ತಮ್ಮನ್ನು ನೋಡಿ ಹೋಗಬೇಕು ಅಂತ. ಆತನಿಗೆ ಏಕಾಂತವಾಸ ರುಚಿಸುತ್ತಿರೋದರಿಂದ ಆಗಾಗ ಬಂದು ಪರಮಹಂಸರನ್ನು ನೋಡಿಹೋಗಲು ಆತನಿಗಾಗುತ್ತಿಲ್ಲ.

ಶ್ರೀರಾಮಕೃಷ್ಣರು ಹರಿಗೆ: "ಏನು ಸಮಾಚಾರ, ಬಹಳದಿವಸ ದಿಂದ ಬರಲೇ ಇಲ್ಲವಲ್ಲ?

"ನೋಡು, ಭಗವಂತನೇ ಒಂದು ರೂಪದಲ್ಲಿ ನಿತ್ಯ, ಇನ್ನೊಂದು ರೂಪದಲ್ಲಿ ಲೀಲೆ. ವೇದಾಂತ ಏನನ್ನು ತಾನೆ ಬೋಧಿಸುತ್ತದೆ? ಬ್ರಹ್ಮ ಸತ್ಯ, ಜಗತ್ ಮಿಥ್ಯಾ ಅಂತ ತಾನೆ? ಎಲ್ಲಿಯುವರೆಗೆ ಭಗವಂತ ನಮ್ಮ ಹೃದಯದಲ್ಲಿ 'ಭಕ್ತನ ಅಹಂ' ಎಂಬುದನ್ನು ಇಟ್ಟಿರುತ್ತಾನೊ, ಅಲ್ಲಿಯ ವರೆಗೆ ಲೀಲೆಯೂ ಸತ್ಯ. ಯಾವಾಗ ಆತ ನಮ್ಮ 'ಅಹಂ' ಎಂಬು ದನ್ನು ಸಂಪೂರ್ಣವಾಗಿ ತೆಗೆದುಹಾಕಿಬಿಡುವನೊ, ಆಗ ಯಾವುದು ಇದೆಯೊ ಅದೇ ಇರುತ್ತದೆ. ಅದು ಏನು ಅಂತ ಬಾಯಿಂದ ಹೇಳ ಲಾಗೋದಿಲ್ಲ. ಎಲ್ಲಿಯುವರೆಗೆ ಆತ ನಮ್ಮಲ್ಲಿ 'ಅಹಂ' ಎಂಬುದನ್ನು ಇಟ್ಟಿರುವನೊ, ಅಲ್ಲಿಯುವರೆಗೆ ಎಲ್ಲವನ್ನೂ ಸ್ವೀಕರಿಸಬೇಕು. ಬಾಳೆ ಪಟ್ಟೆ ಗಳನ್ನು ಬೇರ್ಪಡಿಸಿದರೆ ದಿಂಡು ಸಿಗುತ್ತದೆ. ಬಾಳೆ ಗಿಡದಲ್ಲಿ ಪಟ್ಟೆಗಳಿರೋ ವರೆಗೆ, ಅದರೊಳಗೆ ದಿಂಡೂ ಇದ್ದೇ ಇರುತ್ತದೆ; ದಿಂಡು ಇರೋವರೆಗೆ ಪಟ್ಟೆಗಳೂ ಇದ್ದೇ ಇರುತ್ತವೆ. ಪಟ್ಟೆಗಳೊಡನೆ ದಿಂಡು, ದಿಂಡಿನೊಡನೆ ಪಟ್ಟೆಗಳು ಇದ್ದೇ ಇರುತ್ತವೆ. ನಿತ್ಯ ಎಂದೊಡನೆಯೆ, ಅದರೊಡನೆ ಲೀಲೆ ಇದ್ದೇ ಇದೆ ಅಂತ ಅರ್ಥ; ಲೀಲೆ ಎಂದೊಡನೆಯೆ ಅದರೊಡನೆ ನಿತ್ಯ ಇದ್ದೇ ಇದೆ ಅಂತ ಅರ್ಥ.

"ಆತನೇ ಜೀವಜಗತ್ತಾಗಿದ್ದಾನೆ; ಚತುರ್ವಿಂಶತಿ ತತ್ತ್ವಗಳಾಗಿ ದ್ದಾನೆ. ಯಾವಾಗ ಆತ ನಿಷ್ಕ್ರಿಯನೊ ಆಗ ಆತನಿಗೆ ಬ್ರಹ್ಮ ಅಂತಲೂ, ಯಾವಾಗ ಆತ ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುತ್ತಾನೊ ಆಗ ಆತನಿಗೆ ಶಕ್ತಿ ಅಂತಲೂ ಕರೆಯುತ್ತೇನೆ. ಬ್ರಹ್ಮ ಶಕ್ತಿ ಅಭೇದ. ನೀರು ಸ್ಥಿರವಾಗಿ ನಿಂತಿದ್ದರೂ ನೀರೆ, ಚಲಿಸುತ್ತಿದ್ದರೂ ನೀರೆ.

"'ಅಹಂ' ಎಂಬ ಬೋಧೆ ಸುಲಭವಾಗಿ ನಮ್ಮನ್ನು ಬಿಟ್ಟು

ಹೋಗೋದಿಲ್ಲ. ಎಲ್ಲಿಯವರೆಗೆ 'ಅಹಂ' ಎಂಬ ಬೋಧೆ ಇರುವುದೊ, ಅಲ್ಲಿಯವರೆಗೆ ಜಗತ್ತು ಮಿಥ್ಯಾ ಅಂತ ಹೇಳೋ ಹಾಗೇ ಇಲ್ಲ. ಬೇಲದ ಹಣ್ಣಿನ ಓಟೆ ಮತ್ತು ಬೀಜಗಳನ್ನು ಬಿಸುಟು ಬರೀ ತಿರುಳನ್ನು ಮಾತ್ರ ತೂಗಿನೋಡಿದರೆ, ಬೇಲದ ಹಣ್ಣಿನ ನಿಜವಾದ ತೂಕ ಸಿಕ್ಕೋದಿಲ್ಲ.

"ಯಾವ ಇಟ್ಟಿಗೆ, ಸುಣ್ಣ, ಮರಳು ಇವುಗಳಿಂದ ಮೆಟ್ಟಲಸಾಲು ನಿರ್ಮಿತವಾಗಿರುವುದೊ, ಅದೇ ಇಟ್ಟಿಗೆ, ಸುಣ್ಣ, ಮರಳು ಇವುಗಳಿಂದ ಮೇಲ್ಛಾವಣಿಯೂ ನಿರ್ಮಿತವಾಗಿದೆ. ಬ್ರಹ್ಮ ಎಂಬೋನು ಯಾರೊ ಆತನ ಸತ್ತ್ವದಿಂದಲೇ ಈ ಜೀವಜಗತ್ತು ಬದುಕಿಕೊಂಡಿದೆ.

"ಭಕ್ತರು — ಎಂದರೆ ವಿಜ್ಞಾನಿಗಳು — ಸಾಕಾರ ನಿರಾಕಾರ ಎರಡನ್ನೂ, ರೂಪ ಅರೂಪ ಎರಡನ್ನೂ ಸ್ವೀಕರಿಸುತ್ತಾರೆ. ಅಪಾರವಾದ ಮಹಾ ಸಾಗರದಲ್ಲಿ — ಅನಂತ ಜಲರಾಶಿಯಲ್ಲಿ — ಶೈತ್ಯದ ದೆಸೆಯಿಂದ ನೀರು ಅಲ್ಲಿ ಇಲ್ಲಿ ಹಿಮಗಡ್ಡೆಗಳಾಗಿ ಪರಿವರ್ತನೆ ಹೊಂದಿರೋದನ್ನು ನಾವು ನೋಡಬಹುದು. ಅದೇ ರೀತಿಯಾಗಿ ಭಕ್ತನ ಭಕ್ತಿ ಎಂಬ ಶೈತ್ಯದ ದೆಸೆಯಿಂದ ಆ ಅನಂತ ಸಾಂತವಾಗಿ, ಎಂದರೆ ಸಾಕಾರ ರೂಪವನ್ನು ತಾಳಿ ಭಕ್ತನಿಗೆ ಗೋಚರವಾಗುತ್ತದೆ. ಯಾವ ರೀತಿಯಾಗಿ ಸೂರ್ಯೋದಯವಾದನಂತರ ಹಿಮಗಡ್ಡೆ ಕರಗಿ ನೀರಾಗುವುದೊ, ಅದೇ ರೀತಿಯಾಗಿ ಜ್ಞಾನ-ಸೂರ್ಯೋದಯವಾದನಂತರ ಸಾಕಾರ ರೂಪು ಕರಗಿ ಎಂದಿನ ನಿರಾಕಾರ ಸ್ಥಿತಿಗೆ — ಅನಂತದ ಸ್ಥಿತಿಗೆ ಹಿಂದಿರುಗುತ್ತದೆ.

"ಎಲ್ಲಿಯವರೆಗೆ ಮನುಷ್ಯ ತನ್ನ ಮನಸ್ಸಿನ ಮೂಲಕ ವಿಚಾರದಲ್ಲಿ ತೊಡಗಿರುತ್ತಾನೊ, ಅಲ್ಲಿಯ ವರೆಗೆ ಆತ ನಿತ್ಯವನ್ನು ಮುಟ್ಟಲಾರ. ಮನಸ್ಸಿನ ಮೂಲಕ ವಿಚಾರಮಾಡಲು ಹೊರಟರೆ ಜಗತ್ತಿನ ಎಲ್ಲೆಯನ್ನು ಬಿಟ್ಟು ಮುಂದುವರಿಯೋ ಹಾಗಿಲ್ಲ — ರೂಪ, ರಸ, ಗಂಧ, ಸ್ಪರ್ಶ, ಶಬ್ದ ಈ ಇಂದ್ರಿಯ ವಸ್ತುಗಳ ಎಲ್ಲೆಯನ್ನು ಬಿಟ್ಟು ಮುಂದುವರಿಯೋ ಹಾಗಿಲ್ಲ. ವಿಚಾರ ನಿಂತ ಮೇಲೇನೆ ಬ್ರಹ್ಮಜ್ಞಾನ ದೊರೆಯಬೇಕಾದರೆ. ಈ ಮನಸ್ಸಿನ ಮೂಲಕ ಆತ್ಮನ ಸಾಕ್ಷಾತ್ಕಾರವನ್ನು ಪಡೆಯಲಾಗೋದಿಲ್ಲ. ಆತ್ಮನ ಮೂಲಕವಾಗಿ ಮಾತ್ರವೇ ಆತ್ಮನ ಸಾಕ್ಷಾತ್ಕಾರ ಸಾಧ್ಯ. ಶುದ್ಧ-ಮನಸ್ಸು, ಶುದ್ಧ-ಬುದ್ಧಿ, ಶುದ್ಧ-ಆತ್ಮ — ಇವು ಮೂರೂ ಒಂದೇ.

"ನಾವು ಯಾವುದಾದರು ಒಂದು ವಸ್ತುವನ್ನು ನೋಡಬೇಕಾದರೆ ನಮಗೆ ಎಷ್ಟೊಂದು ವಸ್ತುಗಳ ಆವಶ್ಯಕತೆ ಇದೆ ಎಂಬುದನ್ನು ಸ್ವಲ್ಪ

ಯೋಚಿಸಿ ನೋಡಿ. ನಮಗೆ ಕಣ್ಣು ಬೇಕು; ಬೆಳಕು ಬೇಕು; ಮನಸ್ಸು ಬೇಕು. ಈ ಮೂರರಲ್ಲಿ ಯಾವುದೊಂದು ಇಲ್ಲದಿದ್ದರೂ ವಸ್ತುವನ್ನು ನೋಡೋಕಾಗೋದಿಲ್ಲ. ಈ ಮನಸ್ಸೆಂಬುದು ಎಲ್ಲಿಯವರೆಗೆ ಕೆಲಸಮಾಡಿ ಕೊಂಡು ಮುಂದುವರಿಯುತ್ತಿರುವುದೊ, ಅಲ್ಲಿಯವರೆಗೆ ಈ ಜಗತ್ತೆಂಬುದು ಇಲ್ಲ, ನಾನು ಎಂಬುದು ಇಲ್ಲ ಅಂತ ಹೇಳಲಾದೀತೆ?

"ಮನಸ್ಸು ನಾಶವಾಗಿಹೋದರೆ, ಸಂಕಲ್ಪ ವಿಕಲ್ಪ ನಿಂತುಹೋದರೆ ಸಮಾಧಿಯುಂಟಾಗುತ್ತದೆ, ಬ್ರಹ್ಮಜ್ಞಾನ ದೊರೆಯುತ್ತದೆ. ಸ, ರಿ, ಗ, ಮ, ಪ, ಧ, ನಿ ಎಂಬ ಸ್ವರಗಳನ್ನು ಹಾಡುವಾಗ 'ನಿ' ಅಲ್ಲಿ ಕಂಠವನ್ನು ಹೆಚ್ಚು ಹೊತ್ತು ಇಡಲಾಗೋದಿಲ್ಲ."

ಚಿಕ್ಕ ನರೇನನ ಕಡೆ ತಿರುಗಿ ಪರಮಹಂಸರು ಹೇಳುತ್ತಿದಾರೆ, "ಭಗ ವಂತನಿದಾನೆ ಎಂಬುದಾಗಿ ಕೇವಲ ಅಂತರ್ಬೋಧೆಯನ್ನು ಹೊಂದಿಬಿಟ್ಟ ಮಾತ್ರಕ್ಕೇ ಏನು ಆದಹಾಗಾಯಿತು? ಆತನ ಅಲೌಕಿಕ ದರ್ಶನ ದೊರೆ ತರೇ ಎಲ್ಲಾ ದೊರೆತಂತಾಗೋದಿಲ್ಲ. ಆತನನ್ನು ಹೃದಯ ಮಂದಿರಕ್ಕೆ ಕರೆದುಕೊಂಡು ಬಂದು ಆತನೊಡನೆ ಮಾತುಕತೆಯಾಡಬೇಕು.

"ಕೆಲವರು ಹಾಲಿನ ಸಂಬಂಧವಾಗಿ ಕೇಳಿದಾರೆ, ಇನ್ನು ಕೆಲವರು ಅದನ್ನು ನೋಡಿದಾರೆ, ಮತ್ತೆ ಕೆಲವರು ಅದನ್ನು ಕುಡಿದಿದಾರೆ. ಜನರಲ್ಲಿ ಕೆಲಕೆಲವರೇನೊ ದೊರೆಯನ್ನು ನೋಡಿದಾರೆ, ಆದರೆ ಅವರಲ್ಲಿ ಎಲ್ಲೊ ಒಬ್ಬಿಬ್ಬರು ಮಾತ್ರ ಆತನನ್ನು ತಮ್ಮ ಮನೆಗೆ ಕರೆತಂದು ಅತಿಥಿಸತ್ಕಾರ ಮಾಡಬಲ್ಲರು" ಅಂತ.

ಮಾಸ್ಟರ್ ಸ್ನಾನಮಾಡಲು ಮತ್ತೆ ಗಂಗಾ ನದಿಗೆ ಹೊರಟ. ಘಂಟೆ ಹತ್ತಾಗಿದೆ. ಪರಮಹಂಸರು ಇನ್ನೂ ಭಕ್ತರೊಡನೆ ಮಾತುಕತೆಗಳನ್ನಾ ಡುತ್ತಿದಾರೆ. ಮಾಸ್ಟರ್ ಸ್ನಾನ ಮುಗಿಸಿಕೊಂಡು ಮತ್ತೆ ಬಲರಾಮನ ಮನೆಗೆ ಹಿಂದಿರುಗಿ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಅವರ ಹತ್ತಿರ ಕುಳಿತುಕೊಂಡ.

ಪರಮಹಂಸರು ಭಾವಪರವಶರಾಗಿದಾರೆ. ಅವರ ಮುಖದಿಂದ ಜ್ಞಾನಪ್ರವಾಹಿನಿ ಸುಮ್ಮನೆ ಹರಿಯುತ್ತಿದೆ. ಆಗಾಗ ತಮ್ಮ ಅತಿ ಗುಹ್ಯ ಆಧ್ಯಾತ್ಮಿಕ ಅನುಭವಗಳ ಸಂಬಂಧವಾಗಿ ಭಕ್ತರಿಗೆ ತಿಳಿಸುತ್ತಿದಾರೆ.

ಶ್ರೀರಾಮಕೃಷ್ಣರು: "ನಾನು ಮಥುರಬಾಬುವಿನೊಡನೆ ಕಾಶಿಗೆ ಹೋಗಿದ್ದೆ. ನಾವು ಕುಳಿತಿದ್ದ ದೋಣಿ ಮಣಿಕರ್ಣಿಕ ಘಟ್ಟದ ಹತ್ತಿರ

ಹೋಗುತ್ತಿತ್ತು. ಆಗ ಇದ್ದಕ್ಕಿದ್ದ ಹಾಗೆ ನನಗೆ ಶಿವನ ದರ್ಶನವಾಯಿತು. ನಾನು ಆ ದೋಣಿಯ ಅಂಚಿಗೆ ಬಂದು ನಿಂತುಕೊಂಡು ಸಮಾಧಿಸ್ಥನಾಗಿ ಬಿಟ್ಟೆ. ನಾನು ನದಿಗೆ ಬಿದ್ದುಹೋಗಿಬಿಡಬಹುದೆಂದು ಹೆದರಿ ಅಂಬಿಗ ಹೃದಯನಿಗೆ ಕೂಗಿ ಹೇಳಿದ, 'ಹಿಡಿಯಿರಿ! ಹಿಡಿಯಿರಿ!' ಅಂತ. ಈ ಜಗತ್ತಿನ ಜವಾಬ್ದಾರಿಯೇ ಮೂರ್ತಿಮತ್ತವಾದಂತೆ ಶಿವ ಆ ಘಟ್ಟದ ಮೇಲೆ ನಿಂತುಕೊಂಡಿದ್ದ. ಮೊದಲು ಆತ ಸ್ವಲ್ಪ ದೂರದಲ್ಲಿ ನಿಂತಿರುವಂತೆ ಕಂಡೆ; ಬಳಿಕ ಆತ ನನ್ನ ಹತ್ತಿರ ಹತ್ತಿರ ಬರಲಾರಂಭಿಸಿದ. ಕೊನೆಗೆ ನನ್ನಲ್ಲಿ ಐಕ್ಯನಾಗಿಬಿಟ್ಟ.

"ಒಮ್ಮೆ ಒಬ್ಬ ಸನ್ಯಾಸಿ ನನ್ನ ಕೈ ಹಿಡಿದು ಕರೆದುಕೊಂಡು ಹೋಗುತ್ತಿದ್ದ ಹಾಗೆ ಭಾವದಲ್ಲಿ ಕಂಡೆ. ಇಬ್ಬರೂ ಒಂದು ದೇವಾಲಯಕ್ಕೆ ಹೋದೆವು. ಅಲ್ಲಿ ಸುವರ್ಣ ನಿರ್ಮಿತ ಅನ್ನಪೂರ್ಣೆಯ ದರ್ಶನವಾಯಿತು.

"ಭಗವಂತನೆ ಈ ಎಲ್ಲವೂ ಆಗಿದಾನೆ; ಆದರೆ ಕೆಲಕೆಲವಲ್ಲಿ ಆತ ಹೆಚ್ಚು ವ್ಯಕ್ತವಾಗಿದಾನೆ.

(ಮಾಸ್ಟರಿಗೆ) "ಬಹುಶಃ ನಿಮಗೆ ಸಾಲಗ್ರಾಮದಲ್ಲಿ ನಂಬಿಕೆ ಇಲ್ಲ ಅಂತ ಕಾಣುತ್ತೆ. ಇಂಗ್ಲಿಷುಮೆನ್ನುಗಳು ಅದನ್ನು ನಂಬೋದಿಲ್ಲ. ನೀವು ಬೇಕಾದರೆ ನಂಬಿ ಸಾಕಾದರೆ ಬಿಡಿ ಅದರಿಂದೇನು ಆಕಾಶ ಕಳಚಿಬಿದ್ದು ಹೋಗೋದಿಲ್ಲ. ಒಳ್ಳೆ ಸಾಲಗ್ರಾಮದಲ್ಲಿ ಸ್ಪಷ್ಟವಾದ ಚಕ್ರ ಇದೇ ಮೊದಲಾದವುಗಳ ಚಿಹ್ನೆ ಇದ್ದೇ ಇರಬೇಕು; ಆಗ ಮಾತ್ರವೇ ಅದನ್ನು ಒಂದು ಭಗವಂತನ ಪ್ರತೀಕ ಅಂತ ಪೂಜಿಸಲು ಸಾಧ್ಯ."

ಮಾಸ್ಟರ್: "ನಿಜ, ಇದು ಸುಲಕ್ಷಣ ಮನುಷ್ಯನಲ್ಲಿ ಭಗವಂತ ವಿಶೇಷವಾಗಿ ವ್ಯಕ್ತವಾಗಿರೋ ಹಾಗೆ."

ಶ್ರೀರಾಮಕೃಷ್ಣರು: "ಹಿಂದೆ ನರೇಂದ್ರ ಹೇಳುತ್ತಿದ್ದ, ಇವೆಲ್ಲ ನನ್ನ ಮಾನಸಿಕ ಭ್ರಾಂತಿ ಅಂತ; ಆದರೆ ಈಗ ಎಲ್ಲವನ್ನೂ ಒಪ್ಪಿಕೊಳ್ಳುತ್ತಿದಾನೆ."

ಭಗವದ್ದರ್ಶನದ ಸಂಬಂಧವಾಗಿ ಮಾತಾಡುತ್ತಿದ್ದ ಹಾಗೆಯೆ ಪರಮಹಂಸರು ಭಾವಸಮಾಧಿಸ್ಥರಾಗಿಬಿಟ್ಟಿದಾರೆ. ಭಕ್ತರೆಲ್ಲರೂ ನೆಟ್ಟದೃಷ್ಟಿಯಿಂದ ಅವರ ಕಡೆ ನೋಡುತ್ತಿದಾರೆ. ಬಹಳ ಹೊತ್ತಾದ ಮೇಲೆ ಅವರು ಪ್ರಕೃತಿಸ್ಥರಾದರು. ಈಗ ಭಕ್ತರೊಡನೆ ಮಾತುಕತೆಗಳಾಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಾನು ಏನನ್ನು ಕಂಡೆ ಎಂಬು

ದನ್ನು ನೀನು ಊಹಿಸಬಲ್ಲೆಯಾ? ಇಡಿಯ ಬ್ರಹ್ಮಾಂಡವೇ ಒಂದು ಸಾಲಗ್ರಾಮವಾಗಿರುವಂತೆಯೂ, ಅದರೊಳಗೆ ನಿನ್ನ ಎರಡು ಕಣ್ಣುಗಳು ಇರುವಂತೆಯೂ ಕಂಡೆ."

ಪರಮಹಂಸರು ತಮ್ಮ ಈ ಅದ್ಭುತ ದರ್ಶನದ ಸಂಬಂಧವಾಗಿ ಕೊಟ್ಟ ವರ್ಣನೆಯನ್ನು ಮಾಸ್ಟರ್ ಮತ್ತು ಭಕ್ತರು ಆಶ್ಚರ್ಯಚಕಿತರಾಗಿ ಕೇಳುತ್ತಿದಾರೆ. ಆ ಸಮಯಕ್ಕೆ ಸರಿಯಾಗಿ ಇನ್ನೊಬ್ಬ ಯುವಕಭಕ್ತ ಶಾರದಾಪ್ರಸನ್ನ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮ ಮಾಡಿ ಒಂದು ಕಡೆ ಕುಳಿತುಕೊಂಡ.

ಶ್ರೀರಾಮಕೃಷ್ಣರು ಶಾರದಾಪ್ರಸನ್ನನಿಗೆ: "ನೀನು ದಕ್ಷಿಣೇಶ್ವರಕ್ಕೆ ಏಕೆ ಬರುತ್ತಿಲ್ಲ? ನಾನು ಕಲ್ಕತ್ತಕ್ಕೆ ಬಂದಾಗ ಏಕೆ ಬಂದು ನನ್ನನ್ನು ನೋಡಬಾರದು?"

ಶಾರದಾಪ್ರಸನ್ನ: "ನನಗೆ ಸಮಾಚಾರ ಗೊತ್ತಾಗುತ್ತಿಲ್ಲ."

ಶ್ರೀರಾಮಕೃಷ್ಣರು: "ಮುಂದಿನ ಸಲ ಬರೋವಾಗ ಮೊದಲೇ ನಿನಗೆ ತಿಳಿಸುತ್ತೇನೆ. (ನಗುತ್ತ ಮಾಸ್ಟರಿಗೆ) ಈ ಯುವಕರ ಒಂದು ಪಟ್ಟಿ ಮಾಡು." (ಮಾಸ್ಟರು ಮತ್ತು ಭಕ್ತರು ನಗುತ್ತಾರೆ.)

ಶಾರದಾಪ್ರಸನ್ನ: "ಮನೆಯಲ್ಲಿ ನನಗೆ ವಿವಾಹಮಾಡಬೇಕು ಅಂತ ಇದಾರೆ. (ಮಾಸ್ಟರನ್ನು ತೋರಿಸಿ) ವಿವಾಹದ ಸಂಬಂಧವಾಗಿ ಇವರು ಎಷ್ಟೊಂದಾಗಿ ನಮಗೆ ಎಚ್ಚರಿಕೆ ಕೊಟ್ಟಿದಾರೆ!"

ಶ್ರೀರಾಮಕೃಷ್ಣರು: "ಈಗ ಏಕೆ ನಿನಗೆ ಮದುವೆ? (ಮಾಸ್ಟರಿಗೆ) ಶಾರದಾಪ್ರಸನ್ನ ಈಗ ಮಾನಸಿಕವಾಗಿ ಒಳ್ಳೆ ಅವಸ್ಥೆಯಲ್ಲಿದಾನೆ. ಹಿಂದೆ ಈತನ ಮುಖದಲ್ಲಿ ಒಂದು ವಿಧವಾದ ಶಂಕೆ ಕಾಣಿಸುತ್ತಿತ್ತು; ಈಗ ಆನಂದದಿಂದ ನಲಿಯುತ್ತಿದೆ."

ಪರಮಹಂಸರು ಒಬ್ಬ ಭಕ್ತನಿಗೆ ಹೇಳಿದರು, "ನೀನು ಹೋಗಿ ಪೂರ್ಣನನ್ನು ಕರೆದುಕೊಂಡು ಬರುವೆಯಾ?" ಅಂತ.

ಈಗ ನರೇಂದ್ರ ಬಂದ. ಪರಮಹಂಸರು ಒಬ್ಬ ಭಕ್ತನಿಗೆ ಹೇಳಿದರು ಆತನಿಗೆ ಸ್ವಲ್ಪ ಫಲಾಹಾರವನ್ನು ಕೊಡು ಅಂತ. ಆತನನ್ನು ನೋಡಿ ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ. ನರೇಂದ್ರನಿಗೆ ತಿಂಡಿ ತೀರ್ಥಗಳನ್ನು ಕೊಟ್ಟಾಗ ತಾವು ಸಾಕ್ಷಾತ್ ನಾರಾಯಣನ ಸೇವೆಯನ್ನೇ

ಮಾಡುತ್ತಿರುವಂತೆ ಅವರು ಭಾವಿಸುತ್ತಿದ್ದರು. ಅವರು ನರೇಂದ್ರನ ಮೈ ಕೈಗಳನ್ನು ಆದರದಿಂದ ಸವರುತ್ತಿದಾರೆ.

ಗೋಪಾಲನ ತಾಯಿ ಕೊಠಡಿಯನ್ನು ಪ್ರವೇಶಿಸಿದಳು. ಆಕೆ ಬಾಲ ಗೋಪಾಲನ ಪರಮಭಕ್ತೆ. ಕಾಮಾರಹಾಟಿಯಿಂದ ಆಕೆಯನ್ನು ಕರೆಸುವಂತೆ ಪರಮಹಂಸರು ಬಲರಾಮನಿಗೆ ಹೇಳಿದ್ದರು. ಆಕೆ ಬಂದಿದಾಳೆ. ಆಕೆ ಕೊಠಡಿಯನ್ನು ಪ್ರವೇಶಿಸಿದೊಡನೆಯೆ ಹೇಳುತ್ತಿದಾಳೆ, "ಆನಂದದಿಂದ ನನ್ನ ಕಣ್ಣಿನಲ್ಲಿ ಪ್ರೇಮಾಶ್ರು ಸುರಿಯುತ್ತಿದೆ" ಅಂತ. ಹೀಗೆಂದು ಹೇಳುತ್ತ ತನ್ನ ಹಣೆಯನ್ನು ಭೂಮಿಗೆ ಮುಟ್ಟಿಸಿ ಪರಮಹಂಸರಿಗೆ ಪ್ರಣಾಮಮಾಡಿದಳು.

ಶ್ರೀರಾಮಕೃಷ್ಣರು: "ಏನು ನೀನು ಮಾಡುತ್ತಾ ಇರೋದು? ನೀನು ನನ್ನನ್ನು 'ಗೋಪಾಲ' ಅಂತ ಕರೆಯುತ್ತಿರುವೆ ಮತ್ತು ನನಗೆ ಪ್ರಣಾಮಮಾಡುತ್ತಿರುವೆಯಲ್ಲ! ಹೋಗಲಿ, ಈಗ ಅಡಿಗೆ ಮನೆಗೆ ಪೋಗಿ ನನಗೊಂದು ಒಳ್ಳೆ ಪಲ್ಯ ತಯಾರುಮಾಡು. ಅದಕ್ಕೆ ಅಂಥ ಸೊಗಸಾದ ಒಗ್ಗರಣೆ ಹಾಕಬೇಕು ಅದರ ಘಾಟು ಇಲ್ಲಿಯವರೆಗೂ ಬಂದುಬಿಡಬೇಕು." (ಎಲ್ಲರೂ ನಗುತ್ತಾರೆ.)

ಗೋಪಾಲನ ತಾಯಿ: "ಇವರು (ಈ ಮನೆಯವರು) ಅನ್ಯಥಾ ಭಾವಿಸಬಹುದು."

ನಾನು ಹೊಸದಾಗಿ ಇಲ್ಲಿಗೆ ಬಂದಿದೇನೆ. ಪ್ರತ್ಯೇಕವಾಗಿ ಅಡಿಗೆಮಾಡುತ್ತೇನೆ ಅಂದರೆ ಮನೆಯವರಿಗೆ ಅಸಮಾಧಾನವಾಗಬಹುದು ಅಂತ ಭಾವಿಸಿರಬಹುದು.

ಆಕೆ ಮನೆಯ ಒಳಕ್ಕೆ ಹೋಗಲು ಮುನ್ನ ಕಾತರಸ್ವರದಿಂದ ನರೇಂದ್ರನನ್ನು ಸಂಬೋಧಿಸಿ ಕೇಳುತ್ತಿದಾಳೆ, "ಮಗು, ನಾನು ಗುರಿಯನ್ನು ಮುಟ್ಟಿರುವೆನೆ ಅಥವಾ ಮುಟ್ಟಬೇಕಾಗಿದೆಯೆ?" ಅಂತ.

ಇಂದೇ ರಥೋತ್ಸವ; ಆದ್ದರಿಂದ ಪೂಜೆ ಸ್ವಲ್ಪ ಹೆಚ್ಚು ಸಮಯ ತೆಗೆದುಕೊಂಡಿತು. ಈಗ ಪರಮಹಂಸರನ್ನು ಊಟಕ್ಕೆ ಏಳಿಸಿದಾರೆ. ಅವರು ಮನೆಯ ಒಳಕ್ಕೆ ಹೋಗುತ್ತಿದಾರೆ. ಅವರಿಗೆ ಪ್ರಣಾಮಮಾಡಲು ಮತ್ತು ಅವರ ದರ್ಶನಪಡೆಯಲು ಭಕ್ತೆಯರು ಬಹಳ ಉತ್ಸುಕರಾಗಿದಾರೆ.

ಪರಮಹಂಸರಿಗೆ ಅನೇಕ ಮಂದಿ ಭಕ್ತೆಯರಿದಾರೆ, ಆದರೆ ಅವರ ಸಂಬಂಧವಾಗಿ ಭಕ್ತರೊಡನೆಯೇನು ಹೆಚ್ಚಾಗಿ ಪ್ರಸ್ತಾಪಮಾಡುತ್ತಿರಲಿಲ್ಲ.

ಯಾರಾದರು ಭಕ್ತೆಯರೊಡನೆ ಹೆಚ್ಚಾಗಿ ಬೆರೆಯುತ್ತಿದ್ದರೆ ಅವರು ಎಚ್ಚರಿಕೆ ಕೊಡುತ್ತಿದ್ದರು, "ಅತಿಯಾಗಿ ಬೆರೆಯಬೇಡಿ; ಹಳ್ಳಕ್ಕೆ ಬೀಳುವಿರಿ" ಅಂತ. ಕೆಲಕೆಲವು ವೇಳೆ ಹೇಳುತ್ತಿದ್ದರು, "ಹೆಂಗಸು ಭಕ್ತಿಪರವಶಳಾಗಿ ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದರೂ ಆಕೆಯೊಡನೆ ಬೆರೆಯಬೇಡಿ" ಅಂತ. ಭಕ್ತರು ಮತ್ತು ಭಕ್ತೆಯರು ದೂರದೂರವಾಗಿರಬೇಕು; ಅದರಿಂದ ಇಬ್ಬರಿಗೂ ಮಂಗಳ ಎಂಬುದು ಪರಮಹಂಸರ ಅಭಿಮತವಾಗಿತ್ತು. ಮತ್ತೆ ಹೇಳುತ್ತಿದ್ದರು, "ಭಕ್ತೆಯರ 'ಗೋಪಾಲ ಭಾವ', ಎಂದರೆ 'ವಾತ್ಸಲ್ಯ ಭಾವ' ಅಷ್ಟು ಒಳ್ಳೆಯದೇನಲ್ಲ ಈ 'ವಾತ್ಸಲ್ಯ ಭಾವ' ಕೊನೆಗೆ ಒಂದು ದಿನ 'ತಾತ್ಸಲ್ಯ ಭಾವ' ಆಗಿಬಿಡುವ ಸಂಭವವಿದೆ" ಅಂತ.

ಘಂಟೆ ಒಂದು. ಊಟವಾದನಂತರ ಪರಮಹಂಸರು ಮತ್ತೆ ಭಕ್ತರೊಡನೆ ಬೈಠಕ್‌ಖಾನೆಯಲ್ಲಿ ಕುಳಿತುಕೊಂಡಿದಾರೆ. ಒಬ್ಬ ಭಕ್ತ ಹೋಗಿ ಪೂರ್ಣನನ್ನು ಕರೆದುಕೊಂಡು ಬಂದಿದಾನೆ. ಪರಮಹಂಸರು ಮಹದಾನಂದದಿಂದ ಮಾಸ್ಟರಿಗೆ ಹೇಳುತ್ತಿದಾರೆ, "ಇಗೋ ನೋಡು! ಪೂರ್ಣ ಬಂದುಬಿಟ್ಟ!" ಅಂತ. ನರೇಂದ್ರ, ಚಿಕ್ಕ ನರೇನ, ನಾರಾಯಣ, ಹರಿಪದ ಮತ್ತು ಇನ್ನೂ ಕೆಲವು ಭಕ್ತರು ಅವರ ಹತ್ತಿರ ಕುಳಿತು ಮಾತುಕತೆಯಾಡುತ್ತಿದಾರೆ.

ಚಿಕ್ಕ ನರೇನ: "ಒಳ್ಳೆಯದು, ನಮಗೆ ಸ್ವಾಧೀನ-ಇಚ್ಛೆ ಎಂಬುದು ಇದೆಯೇನು?"

ಶ್ರೀರಾಮಕೃಷ್ಣರು: "ಈ 'ನಾನು' ಎಂಬುವವನು ಯಾರು ಎಂಬುದನ್ನು ಸ್ವಲ್ಪ ಹುಡುಕಿ ನೋಡು. ಈ 'ನಾನು' ಎಂಬುವವನಿಗಾಗಿ ಹುಡುಕುತ್ತಾ ಹುಡುಕುತ್ತಾ ಹೋದಹಾಗೆ 'ಅವನು' ಎಂಬುವವನು ಹೊರಹೊಮ್ಮಿಬಿಡುತ್ತಾನೆ. 'ನಾನು ಯಂತ್ರ, ನೀನು ಯಂತ್ರಿ' ಎಂಬ ಜ್ಞಾನೋದಯವಾಗಿಬಿಡುತ್ತದೆ. ಚೀಣಾದೇಶದಲ್ಲಿ ನಿರ್ಮಿತವಾಗಿರೋ ಒಂದು ವಿಧದ ಕೈಗೊಂಬೆ, ಕೈಯಲ್ಲಿ ಸಾಮಾನಿನ ಪಟ್ಟಿ ಹಿಡಿದುಕೊಂಡು ಅಂಗಡಿಗೆ ಹೋಗುತ್ತದೆ ಎಂಬುದನ್ನು ನೀನು ಕೇಳಿದ್ದೀಯೇನು? ನೀನೂ ಅಂಥ ಒಂದು ಕೈಗೊಂಬೆ. ಭಗವಂತನೇ ನಿಜವಾಗಿ ಕರ್ತ. ನಿಜವಾಗಿ ಭಗವಂತನೇ ಕರ್ತ, ನೀನು ಅಕರ್ತ ಎಂಬುದನ್ನು ಚೆನ್ನಾಗಿ ತಿಳಿದು

ಕೊಂಡು ಕರ್ತನೋಪಾದಿಯಲ್ಲಿ ಈ ಜಗತ್ತಿನಲ್ಲಿ ಕೆಲಸಕಾರ್ಯಗಳನ್ನು ಮಾಡಿಕೊಂಡು ಹೋಗು.

"ಉಪಾಧಿ ಇರೋವರೆಗೆ ಅಜ್ಞಾನ ಇದ್ದೇ ಇರುತ್ತದೆ. 'ನಾನೊಬ್ಬ ಪಂಡಿತ', 'ನಾನೊಬ್ಬ ಜ್ಞಾನಿ', 'ನಾನೊಬ್ಬ ದಾನಿ', 'ನಾನೊಬ್ಬ ದೊಡ್ಡವ', 'ನಾನೊಬ್ಬ ಕರ್ತ', 'ನಾನೊಬ್ಬ ತಂದೆ', 'ನಾನೊಬ್ಬ ಗುರು' — ಇವೆಲ್ಲಾ ಅಜ್ಞಾನಜನ್ಯ. 'ನಾನು ಯಂತ್ರ, ನೀನು ಯಂತ್ರಿ' — ಎಂಬುದೇ ಜ್ಞಾನಜನ್ಯ. ಬ್ರಹ್ಮಜ್ಞಾನ ದೊರೆತಾಗ ಎಲ್ಲಾ ಉಪಾಧಿಗಳೂ ನಾಶವಾಗಿಬಿಡುತ್ತವೆ. ಸೌದೆ ಉರಿದು ಮುಗಿಯಿತು ಎಂದರೆ ಮತ್ತೆ ಶಬ್ದವಿರದು ; ಕಾವೂ ಇರದು. ಎಲ್ಲವೂ ತಣ್ಣಗಾಗಿಬಿಡುತ್ತದೆ— ಶಾಂತಿಃ! ಶಾಂತಿಃ! ಶಾಂತಿಃ! (ನರೇಂದ್ರನಿಗೆ) ಸ್ವಲ್ಪ ಹೊತ್ತು ಹಾಡು."

ನರೇಂದ್ರ: "ಮನೆಗೆ ಹೋಗಬೇಕಾಗಿದೆ. ಬಹಳ ಕೆಲಸ ಉಳಿದುಕೊಂಡಿದೆ."

ಶ್ರೀರಾಮಕೃಷ್ಣರು : "ಹೌದು, ಹೌದು, ಕೆಲಸವಿದೆ! ನಮ್ಮ ಮಾತಿಗೆ ನೀನು ಏಕೆ ಬೆಲೆ ಕೊಡಬೇಕು ? 'ಯಾರ ಕಿವಿಯಲ್ಲಿ ಚಿನ್ನದ ಹತ್ತಕಡುಕು - ಗಿತ್ತಕಡುಕು ಇದೆಯೊ ಅವರ ಮಾತಿಗೇ ಬೆಲೆ ; ಯಾರಿಗೆ ಸೊಂಟಕ್ಕೆ ಕಟ್ಟೋಕೆ ಒಂದು ಚಿಂದಿ ಬಟ್ಟೆಗೂ ಗತಿಯಿಲ್ಲವೊ ಅವರ ಮಾತನ್ನು ಯಾರೂ ಕೇಳೋದಿಲ್ಲ.' (ಎಲ್ಲರೂ ನಗುತ್ತಿದ್ದಾರೆ.) ನೀನು ಗುಹರ ಉದ್ಯಾನದ ಮನೆಗೆ ಆಗಾಗ ಹೋಗುತ್ತಿರುವೆಯಂತೆ. ಬಹುಮಟ್ಟಿಗೆ ನೀನು ಅಲ್ಲೇ ಇರುತ್ತೀಯೆ ಅಂತ ಕೇಳಿದೇನೆ. 'ಇಂದು ನರೇಂದ್ರನೆಲ್ಲಿ?' ಎಂದು ಕೇಳಿದಾಗಲೆಲ್ಲ ನನಗೆ ದೊರೆಯೋ ಉತ್ತರ, 'ಓ, ಆತನೆ! ಗುಹರ ಮನೆಗೆ ಹೋಗಿದಾನೆ' ಅಂತ. ನಾನು ಇದೆನ್ನೆಲ್ಲ ನಿನಗೆ ಹೇಳುತ್ತಿರಲಿಲ್ಲ, ಆದರೆ ನೀನು ಅವನ್ನೆಲ್ಲ ನನ್ನ ಬಾಯಿಂದ ಹೊರಡಿಸಿಬಿಟ್ಟೆ."

ನರೇಂದ್ರ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡಿದ್ದ. ಬಳಿಕ ಹೇಳಿದ, "ಇಲ್ಲಿ ಯಾವ ಪಕ್ಕವಾದ್ಯವೂ ಇಲ್ಲ. ಬರಿದೆ ಹಾಡಲೇನು?" ಅಂತ.

ಶ್ರೀರಾಮಕೃಷ್ಣರು : "ಇಲ್ಲಿರೋ ವ್ಯವಸ್ಥೆ ಇಂಥದು. ಇರೋದರಲ್ಲೆ ತೃಪ್ತನಾಗಿ ಹಾಡೋಕಾದರೆ ಹಾಡು. ಬಲರಾಮನ ವ್ಯವಸ್ಥೆ ಎಂಥದು ಎಂಬುದು ನಿನಗಾಗಲೆ ಗೊತ್ತೇ ಇದೆ.

“ಬಲರಾಮ ನನಗೆ ಹೇಳ್ತಾನೆ, ‘ಕಲ್ಕತ್ತಕ್ಕೆ ಬರೋವಾಗಲೆಲ್ಲ ದೋಣಿಯಲ್ಲೆ ಬನ್ನಿ; ವಿಧಿಯಿಲ್ಲದಿದ್ದರೆ ಮಾತ್ರ ಬಂಡಿಯಲ್ಲಿ ಬನ್ನಿ’ ಅಂತ. (ಎಲ್ಲರೂ ನಗುತ್ತಾರೆ.) ನೋಡಿ, ಇಂದು ಆತ ನಮ್ಮೆಲ್ಲರಿಗೂ ಹಬ್ಬದೂಟ ಹಾಕಿದಾನೆ; ಅದಕ್ಕಾಗಿ ಸಾಯಂಕಾಲವೆಲ್ಲಾ ನಮ್ಮ ಕೈಯಿಂದ ಕುಣಿಯಿಸಿಕೊಂಡು ಬಿಡುತ್ತಾನೆ! (ಎಲ್ಲರೂ ನಗುತ್ತಾರೆ.) ಇಲ್ಲಿಂದ ದಕ್ಷಿಣೇಶ್ವರಕ್ಕೆ ನನಗೊಂದು ದಿನ ಗಾಡಿಯನ್ನು ಮಾಡಿಕೊಟ್ಟ. ಅದಕ್ಕೆ ಹನ್ನೆರಡು ಆಣೆ ಬಾಡಿಗೆ ಅಂತ ಹೇಳಿದ. ನಾನು ಕೇಳಿದೆ, ‘ಹನ್ನೆರಡು ಆಣೆಗೆ ದಕ್ಷಿಣೇಶ್ವರಕ್ಕೆ ಬರುತ್ತಾನೇನು?’ ಅಂತ. ಆತ ಹೇಳಿದ, ‘ಒಮ್ಮೊಮ್ಮೆ ಹಾಗೆ ಬರೋದುಂಟು’ ಅಂತ. ರಸ್ತೆಯಲ್ಲಿ ಹೋಗುತ್ತ ಹೋಗುತ್ತ ಇದ್ದಹಾಗೇ ಅದರ ಒಂದು ಪಕ್ಕ ಮುರಿದು ಬಿದ್ದು ಹೋಯಿತು. (ಎಲ್ಲರೂ ಗೊಳ್ಳೆಂದು ನಗುತ್ತಾರೆ.) ಕುದುರೆ ಅಲ್ಲಲ್ಲಿ ನಿಂತುಕೊಂಡುಬಿಡುತ್ತಿತ್ತು, ಹೊಡೆದರೂ ಮುಂದಕ್ಕೆ ಕಾಲಿಡಲೊಲ್ಲೆ ಅನ್ನುತ್ತಿತ್ತು. ಗಾಡಿಯವನು ಅದನ್ನು ಒಮ್ಮೊಮ್ಮೆ ಬಹಳವಾಗಿ ಬಾರಿಸುತ್ತಿದ್ದ, ಆಗ ಅದು ಸ್ವಲ್ಪ ದೂರ ಓಡುತ್ತಿತ್ತು. (ಎಲ್ಲರೂ ಗಟ್ಟಿಯಾಗಿ ನಗುತ್ತಿದಾರೆ.) ಇಂದಿನ ಸಾಯಂಕಾಲದ ಕಾರ್ಯಕ್ರಮವೇನೆಂದರೆ, ರಾಮ ಮೃದಂಗ ಬಾರಿಸೋದು, ನಾವೆಲ್ಲರೂ ನರ್ತಿಸೋದು. ರಾಮನ ತಾಳಜ್ಞಾನವನ್ನಂತು ನೀವು ಕೇಳಲೇಬೇಡಿ, ಅಷ್ಟು ಚೆನ್ನು! (ಎಲ್ಲರೂ ನಗುತ್ತಾರೆ.) ಬಲರಾಮನ ಭಾವನೆಯೇನೆಂದರೆ, ನೀವೇ ಹಾಡಬೇಕು, ನೀವೇ ನರ್ತಿಸಬೇಕು, ನೀವೇ ಆನಂದಪಡಬೇಕು ಅಂತ!” (ಎಲ್ಲರೂ ನಗುತ್ತಾರೆ.)

ಭಕ್ತರು ತಮ್ಮ ತಮ್ಮ ಮನೆಗಳಿಂದ ಕ್ರಮಕ್ರಮೇಣ ಬಂದು ಸೇರುತ್ತಿದಾರೆ. ಮಹೇಂದ್ರಮುಖರ್ಜಿ ದೂರದಿಂದಲೇ ತಮಗೆ ಪ್ರಣಾಮ ಮಾಡಿದುದನ್ನು ನೋಡಿ, ಪರಮಹಂಸರೂ ಆತನಿಗೆ ಪ್ರತಿಪ್ರಣಾಮ ಮಾಡಿದರು. ಮತ್ತೆ ಅವರು ಆತನಿಗೆ ಸಲಾಮು ಮಾಡುತ್ತಿದಾರೆ. ಅವರು ತಮ್ಮ ಪಕ್ಕದಲ್ಲಿಯೇ ಕುಳಿತಿದ್ದ ಒಬ್ಬ ಯುವಕಭಕ್ತನಿಗೆ ಹೇಳುತ್ತಿದಾರೆ, “ನಾನು ಆತನಿಗೆ ಸಲಾಮು ಮಾಡಿದೆ ಅಂತ ಆತನಿಗೆ ತಿಳಿಸು. ಆತ ಅದನ್ನು ಬಹಳವಾಗಿ ಮೆಚ್ಚುತ್ತಾನೆ” ಅಂತ. (ಎಲ್ಲರೂ ನಗುತ್ತಿದಾರೆ.)

ಗೃಹಸ್ಥಭಕ್ತರಲ್ಲಿ ಅನೇಕರು ತಮ್ಮ ತಮ್ಮ ಪರಿವಾರದೊಡನೆ ಬಂದಿ

ದಾರೆ. ಪರಮಹಂಸರ ದರ್ಶನ ಪಡೆಯಲೋಸುಗವಾಗಿಯೂ ಮತ್ತು ಅವರು ರಥದ ಮುಂದೆ ನರ್ತಿಸೋದನ್ನು ನೋಡಲೋಸುಗವಾಗಿಯೂ ಬಂದಿದಾರೆ. ರಾಮು, ಗಿರೀಶ ಮೊದಲಾದ ಭಕ್ತರು ಕ್ರಮಕ್ರಮೇಣ ಅಲ್ಲಿಗೆ ಬಂದು ಸೇರಿದರು. ಯುವಕಭಕ್ತರಲ್ಲನೇಕರು ಬಂದಿದಾರೆ.

ಈಗ ನರೇಂದ್ರ ಹಾಡಲಾರಂಭಿಸಿದಾನೆ:

ಓ, ಎಂದಿಗೋ ಇನ್ನೆಂದಿಗೋ,
ಎದೆಯೊಳೊಲವಿನ ಕಿಡಿಯು ಜ್ವಲಿಸುವ
ದಿವ್ಯ ಶುಭದಿನವೆಂದಿಗೋ.—

ಹರಿಯ ನೆನೆದರೆ ಸಾಕು, ಕಂಬನಿ
ಕೋಡಿವರಿಯುವುದೆಂದಿಗೋ
ಹೃದಯ ಶುದ್ಧಿಯು ಎಂದಿಗೋ
ಮತ್ತೆ ಬೃಂದಾವನದ ತೋಪಿಗೆ
ನಾನು ನಡೆಯುವುದೆಂದಿಗೋ
ಮರ್ತ್ಯ ಬಂಧನವೆಲ್ಲ ಕಳಚುತ
ತಿಳಿವಿನಂಜನದಿಂದ ದೃಷ್ಟಿಯು
ಶುದ್ಧಿಯಾಗುವುದೆಂದಿಗೋ!
ಪರುಶಮಣಿ ಸ್ಪರ್ಶಕ್ಕೆ ದೇಹದ
ಲೋಹ ಕಾಂಚನವಾಗಿ ಕಾಂತಿಯು
ಪಡೆವ ಶುಭದಿನವೆಂದಿಗೋ!
ಸಕಲ ಸಚರಾಚರವು ಹರಿಮಯ-
ವೆಂದು ದರ್ಶಿಪುದೆಂದಿಗೋ
ಧರ್ಮಕರ್ಮವ ಜಾತಿಗೀತಿಯ
ಅಭಿಮಾನ ಲೋಕಾಚಾರವ
ತೊರೆದು ನಿರ್ಭಯನಾಗಿ ಪ್ರೇಮದಿ
ನಾನು ನಡೆಯುವುದೆಂದಿಗೋ!

ಅಂಥಶುಭದಿನ ಬರಲಿ ಬಾಳಿಗೆ;
ದಿವ್ಯ ಪುರುಳನ ತೆರದಲಿ
ಹಾಡಿನಲಿಯುವೆ, ಈಜಿನಲಿಯುವೆ

ಪ್ರೇಮಸಾಗರದಲೆಯಲಿ
ಸಕಲ ಜಗವನು ನನ್ನ ತೆರದಲಿ
ಆಡಿಸುವೆ ಹರಿಪದದಲಿ !

ಆತ ಮತ್ತೆ ಹಾಡುತ್ತಿದಾನೆ:

ಮಿರುಗುತಿದೆ ನಿನ್ನ ಅಪರೂಪ ರಾಶಿ ನಿಬಿಡಾಂಧಕಾರದಲ್ಲಿ
ನಿನ್ನನದರಿಂದಲೇ ನೆನೆವರೌ ಯೋಗಿಗಳು ಗಿರಿಗುಹೆಗಳಲ್ಲಿ ! . . .

ವೈಷ್ಣವಚರಣ ಇಂದು ಕೀರ್ತನೆಮಾಡೋ ಹಾಗೆ ಬಲರಾಮ ವ್ಯವಸ್ಥೆ ಮಾಡಿದಾನೆ. ಈಗ ವೈಷ್ಣವಚರಣ ಹಾಡಲಾರಂಭಿಸಿದ:

ಶ್ರದ್ಧೆಯ ಸರೋವರದಿ ತಾಯನಾಮದ ನೌಕೆ
ತೇಲುತಿದೆ ನೋಡು ! . . .

ಪರಮಹಂಸರು ಈ ಹಾಡಿನ ಒಂದೆರಡು ನುಡಿಗಳನ್ನು ಕೇಳಿದೊಡನೆ ನಿಂತುಕೊಂಡೇ ಸಮಾಧಿಸ್ಥರಾಗಿಬಿಟ್ಟಿದಾರೆ. ಚಿಕ್ಕ ನರೇನ ಅವರನ್ನು ಹಿಡಿದುನಿಂತಿದಾನೆ. ಅವರ ಮುಖದಿಂದ ಮಂದಹಾಸ ಹೊರ ಚೆಲ್ಲುತ್ತಿದೆ. ಕ್ರಮೇಣ ಅವರ ದೇಹ ಸ್ಥಿರವಾಗಲಾರಂಭಿಸಿತು. ಅವರ ಮನಸ್ಸು ಬೇರೊಂದು ರಾಜ್ಯಕ್ಕೆ ಹೋಗಿರುವಂತೆ ಕಾಣುತ್ತಿದೆ. ಭಕ್ತರೆಲ್ಲರು ಆಶ್ಚರ್ಯಚಕಿತರಾಗಿ ಅವರ ಕಡೆ ನೋಡುತ್ತಿದಾರೆ. ಭಕ್ತೆಯರು ಪರದೆ ಹಿಂದಿನಿಂದ ಈ ಅತ್ಯದ್ಭುತ ಅವಸ್ಥೆಯನ್ನು ನೋಡುತ್ತಿದಾರೆ. ಯಾವರೀತಿಯಾಗಿ ಭಗವಂತನನ್ನು ಪ್ರೀತಿಸಬೇಕು ಎಂಬುದನ್ನು ಭಕ್ತರಿಗೆ ತೋರಿಸಲೋಸುಗ ಸಾಕ್ಷಾತ್ ಭಗವಂತನೇ ದೇಹಧಾರಣೆಮಾಡಿಕೊಂಡು ಬಂದಿರಬೇಕು ಅಂತ ಭಾವಿಸುತ್ತಿದಾರೆ. ಭಕ್ತರು ಬಹಳ ಹೊತ್ತು ಭಗವನ್ನಾಮೋಚ್ಚಾರಣೆ ಮಾಡಿದನಂತರ ಪರಮಹಂಸರು ಪ್ರಕೃತಿಸ್ಥರಾದರು. ಪರಮಹಂಸರು ಈಗ ಕುಳಿತುಕೊಂಡರು. ವೈಷ್ಣವಚರಣ ಮತ್ತೆ ಹಾಡಲಾರಂಭಿಸಿದ:

ಹರಿನಾಮವನು ನುಡಿಸು ಓ ನನ್ನ ವೀಣೆ
ಹರಿಚರಣವಲ್ಲದೆಯೆ ಪರಮಪದ ಕಾಣೆ.
ಹರಿ-ಕೃಷ್ಣ ಎಂದು ನೀ ನಿತ್ಯವೂ ನೆನೆಯ
ಹರಿನಾಮ ಪರಿಹರಿಪುದೆಲ್ಲ ವ್ಯಥೆಯ.
ಒಮ್ಮೆ ನೆನೆದರೆ ಸಾಕು — ನಿರ್ಭೀತಿ ನನಗೆ

ಅದಕಿಂತ ಮಿಗಿಲಿಲ್ಲ ಈ ಲೋಕದೊಳಗೆ!
ನುಡಿವನೀ ಗೋವಿಂದ: ನನ್ನ ದಿನವೆಲ್ಲ
ವ್ಯರ್ಥ ಪರ್ಯಟನದಲಿ ಕಳೆಯುತಿಹವಲ್ಲ
ಭವಜಲಧಿಯಲಿ ಇನ್ನು ನಾನಲೆವುದಿಲ್ಲ.

ಆತ ಮತ್ತೆ ಹಾಡಿದ:

ವಿಫಲ ವಿಫಲದಿನ ಸಾಗಿವೆ ಕೊಳಲೇ
ಶ್ರೀಹರಿ ಸಾಧನೆಯಿಲ್ಲದೆಲೇ— . . .

ಈಗ ಅಪರಾಹ್ನವಾಗಿದೆ. ಇಷ್ಟರೊಳಗಾಗಿ ಶ್ರೀ ಜಗನ್ನಾಥನ ಆ ಚಿಕ್ಕ ರಥವನ್ನು ಧ್ವಜಪತಾಕೆಗಳಿಂದ ಅಲಂಕರಿಸಿ ಒಳ-ವರಾಂಡಕ್ಕೆ ಎಳೆದುತಂದಿಟ್ಟಿದಾರೆ. ಶ್ರೀ ಜಗನ್ನಾಥ, ಸುಭದ್ರೆ, ಬಲರಾಮ ಈ ವಿಗ್ರಹಗಳನ್ನು ಚಂದನ, ವಸ್ತ್ರ, ಆಭರಣ, ಹೂವಿನ ಹಾರ ಇವುಗಳಿಂದ ಚೆನ್ನಾಗಿ ಅಲಂಕಾರಮಾಡಿದಾರೆ. ಪರಮಹಂಸರು ಕೀರ್ತನೆ ನಡೆಯುತ್ತಿದ್ದ ಜಾಗವನ್ನು ಬಿಟ್ಟು ರಥವನ್ನಿಟ್ಟಿದ್ದ ವರಾಂಡಕ್ಕೆ ಬಂದರು. ಭಕ್ತರೂ ಅವರನ್ನು ಹಿಂಬಾಲಿಸಿದರು. ಪರಮಹಂಸರು ರಥದ ಹಗ್ಗ ಹಿಡಿದು ಸ್ವಲ್ಪ ದೂರ ಎಳೆದರು. ಬಳಿಕ ರಥದ ಮುಂಭಾಗದಲ್ಲಿ ಭಕ್ತರೊಡನೆ ಹಾಡುತ್ತ ನರ್ತಿಸುತ್ತಿದಾರೆ.

ಪರಮಹಂಸರು ಹಾಡುತ್ತಿದಾರೆ:

ಹರಿನಾಮವನು ನುತಿಸಿ, ಆನಂದಬಾಷ್ಪವನು
ಕರೆವಣ್ಣತಮ್ಮದಿರು, ಇವರು ನೋಡು! . . .

ಅವರು ಮತ್ತೆ ಹಾಡುತ್ತಿದಾರೆ:

ಗೌರಾಂಗನು ಹುಟ್ಟಿದೂರು
ಅವನ ಪ್ರೇಮ ಹಿಲ್ಲೋಲದಿ
ಸ್ಪಂದಿಸುತಿದೆ ನೋಡದಿ!

ಆ ಚಿಕ್ಕ ವರಾಂಡದಲ್ಲಿ ರಥವನ್ನು ಹಿಂದಕ್ಕೂ ಮುಂದಕ್ಕೂ ಎಳೆದಂತೆಲ್ಲ ಅದರೊಡನೆಯೆ ಹಾಡುವುದು ಮತ್ತು ನರ್ತಿಸುವುದೂ ಮುಂದುವರಿಯಿತು. ಉಚ್ಚ ಸಂಕೀರ್ತನೆಯ ಮತ್ತು ತಾಳ ಮೃದಂಗಗಳ ಶಬ್ದವನ್ನು ಕೇಳಿ ಬೀದಿಯಲ್ಲಿ ಹೋಗುತ್ತಿದ್ದವರೆಲ್ಲಾ ಮನೆಗೆ ನುಗ್ಗಿದರು. ಭಕ್ತರಿಗೂ ಅದರ ಸೊಂಕು ತಾಗಿ ಅವರೂ ಪ್ರೇಮೋನ್ಮತ್ತರಾಗಿ ಪರಮಹಂಸರೊಡನೆ ನರ್ತಿಸುತ್ತಿದಾರೆ.

ರಥದ ಮುಂದೆ ಕೀರ್ತನೆ ಮತ್ತು ನರ್ತನೆ ಮಾಡುತ್ತಿದ್ದುದು ನಿಂತ ನಂತರ ಪರಮಹಂಸರು ಮತ್ತೆ ಬೈಠಕ್‌ಖಾನೆಗೆ ಬಂದು ಕುಳಿತುಕೊಂಡರು. ಮಾಸ್ಟರ್ ಮೊದಲಾದ ಭಕ್ತರು ಅವರ ಪಾದಗಳನ್ನು ಮೆತ್ತಗೆ ಒತ್ತುತ್ತಿದಾರೆ.

ನರೇಂದ್ರ ಭಾವಾವೇಶನಾಗಿ ತಂಬೂರಿ ನುಡಿಸುತ್ತ ಹಾಡಲಾರಂಭಿಸಿದಾನೆ:

ದಯಮಾಡಿಸು ದಯಮಾಡಿಸು
ಹೃದಯಕಮಲ ಪೀಠದಿ . . .

ಬಳಿಕ ಹಾಡುತ್ತಿದಾನೆ:

ನೀನೆ ತಾರಕ ಶಕ್ತಿ ಓ ನನ್ನ ಜಗದಂಬ
ತ್ರಿಗುಣಾಧಾರ ಪರಾತ್ಪರಾ.
ಓ ದುರ್ಗೇ, ಕರುಣಾಪೂರ್ಣೆ
ನೊಂದ ಜೀವಕ್ಕೆಲ್ಲ ನೀನೆ ಆಧಾರಾ.

ನೀ ಸಂಧ್ಯೆ, ಗಾಯತ್ರಿ
ನೀ ಜಗದ್ಧಾತ್ರಿ.
ಶರ್ವಪ್ರಿಯೆ, ಜಗದೆಲ್ಲ
ದುಃಖಿಗಳ ತಾಯಿ
ನೆಲದಲ್ಲಿ ಜಲದಲ್ಲಿ ಸರ್ವಭೂತದ ಮೂಲ
ಚೈತನ್ಯವಾಗಿ
ನನ್ನಲ್ಲಿ, ಜಗದಲ್ಲಿ, ಸಕಲ ಸಚರಾಚರದ
ಎದೆ ಎದೆಗಳಲ್ಲಿ
ಮನೆ ಮಾಡಿ ನೆಲಸಿರುವೆ; ಸಾಕಾರವಾದರೂ
ನಿನ್ನ ಮೂಲ ಸ್ಥಿತಿಯು ನಿರಾಕಾರದಲ್ಲಿ !

ಆತ ಮತ್ತೊಂದು ಹಾಡನ್ನು ಹಾಡುತ್ತಿದಾನೆ:

ಜೀವನದ ಜಲಧಿಯಲಿ ಪಯಣಗೈಯುವ ನನಗೆ
ನೀನೊಂದು ಧ್ರುವತಾರೆ ನನ್ನ ಗುರುವೆ.
ಕಡೆಯಿಲ್ಲದೀ ಕಡಲ ಬಳಸುದಾರಿಯೊಳಾನು
ದಿಕ್ಕು ತಪ್ಪದೆ ಇನ್ನು ಪಯಣಗೈವೆ.

ಇಲ್ಲಿ ನಾನಲೆವಾಗ ಎಂದಾದರೂ ನನ್ನ
ಎದೆಯು ಮಿಡುಕಾಡುತಿರೆ ನೋವಿನಲ್ಲಿ
ಮೇಲೆ ನಿನ್ನಯ ಕರುಣಕಾಂತಿಯುಜ್ಜ್ವಲ ತಾರೆ
ಬೆಳಗಿ ಸಂತೈಸುವುದು ಹಾದಿಯಲ್ಲಿ.

ನನ್ನಂತರಂಗದಲಿ ನಿನ್ನ ಮುಖವೆಂದಿಗೂ
ಚಿರಮಧುರ ಕಾಂತಿಯಲಿ ಶೋಭಿಸಿಹುದು.
ಒಂದೆ ಚಣ ನಾ ನಿನ್ನ ಕಾಣದಿದ್ದರೆ, ಎದೆಯು
ಅತುಲ ವೇದನೆಯಲ್ಲಿ ತುಡಿಯುತಿಹುದು.
ಅನ್ಯ ಚಿಂತೆಯ ಪಥದಿ ಮನವಲೆದು ಸಾಗಿರಲು
ನಿನ್ನ ದರ್ಶನ ನನ್ನ ನಾಚಿಸುವುದು !

ಒಬ್ಬ ಭಕ್ತ ನರೇಂದ್ರನನ್ನು ಕೇಳಿಕೊಂಡ, "'ನನ್ನ ಹೃದಯದ ದಿವ್ಯ ಸೂತ್ರಧಾರಿಣಿ ನೀನು:' ಎಂಬ ಹಾಡನ್ನು ಹಾಡುವೆಯಾ?" ಅಂತ.

ಶ್ರೀರಾಮಕೃಷ್ಣರು: "ಛೆ! ಈಗ ಏಕೆ ಅಂಥ ಹಾಡು? ಈಗ ಭಗವದಾನಂದದ ಹಾಡುಗಳು — 'ದಿವ್ಯ ಮಧುಪಾನದಲಿ ಉನ್ಮತ್ತ ಳಾಗಿರುವ ನಿನ್ನ ಈ ಲೀಲೆಯನು ತಿಳಿವರಾರು?' ಎಂಬೀತರದ ಹಾಡುಗಳು."

ನರೇಂದ್ರ ಅದನ್ನು ಹಾಡುತ್ತಿದ್ದಾನೆ:

ದಿವ್ಯ ಮಧುಪಾನದಲಿ ಉನ್ಮತ್ತಳಾಗಿರುವ
ನಿನ್ನ ಈ ಲೀಲೆಯನು ತಿಳಿವರಾರು ?
ನಿನ್ನಂಗಭಂಗಿಗಳ ವಿಲಾಸವಿಭ್ರಮದೆದುರು.
ಅನಂಗನೇ ನಾಚಿ ಕುಗ್ಗಿರುವನು !
ಕರವಾಳವನು ಹಿಡಿದು ನರ್ತಿಸುವ ರಣಚಂಡಿ
ನಿನ್ನ ಪದಘಾತಕ್ಕೆ ನೆಲ ನಡುಗಿದೆ !
ಓ ಪರಾತ್ಪರೆ ಸರ್ವಗುಣಗಣಗಳಾಧಾರೆ
ಶಿವಮನೋರಮೆಯಾಗಿ ನಲಿಯುತಿರುವೆ !

ಅವರವರ ಭಾವಕ್ಕೆ ತಕ್ಕಂಥ ರೂಪದಲಿ
ಭಕ್ತರಿಗೆ ದರ್ಶನವ ನೀಡುತಿರುವೆ.

ನಿತ್ಯಲೀಲೆಯೊಳಿರುವ ಓ ಬ್ರಹ್ಮಮಯಿ ಕಾಳಿ
ನನ್ನ ಹೃದಿಪದ್ಮದಲಿ ರಾಜಿಸಿರುವೆ.

ನರೇಂದ್ರ ಭಾವೋನ್ಮತ್ತನಾಗಿ ಈ ಚರಣವನ್ನು ಮತ್ತೆ ಮತ್ತೆ ಹಾಡ ಲಾರಂಭಿಸಿದ :

ನಿತ್ಯಲೀಲೆಯೊಳಿರುವ ಓ ಬ್ರಹ್ಮಮಯಿ ಕಾಳಿ
ನನ್ನ ಹೃದಿಪದ್ಮದಲಿ ರಾಜಿಸಿರುವೆ.

ಪರಮಹಂಸರು ಪ್ರೇಮೋನ್ಮತ್ತರಾಗಿ, "ನಿತ್ಯಲೀಲೆಯೊಳಿರುವ ಓ ಬ್ರಹ್ಮಮಯಿ ಕಾಳಿ" ಎಂಬ ನುಡಿಯನ್ನು ಹಾಡುತ್ತ ನರ್ತಿಸುತ್ತಿದಾರೆ. ಬಹಳ ಹೊತ್ತು ಆ ರೀತಿಯಾಗಿ ನರ್ತಿಸಿದನಂತರ ಕೆಳಗೆ ಕುಳಿತುಕೊಂಡರು. ನರೇಂದ್ರ ಪ್ರೇಮೋನ್ಮತ್ತನಾಗಿ ಪ್ರೇಮಾಶ್ರುವನ್ನು ಸುರಿಸುತ್ತ ಹಾಡಿದು ದನ್ನು ನೋಡಿ ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ.

ಈಗ ರಾತ್ರಿ ಒಂಬತ್ತು. ಭಕ್ತರು ಇನ್ನೂ ಪರಮಹಂಸರ ಸುತ್ತಲೂ ಕುಳಿತುಕೊಂಡಿದಾರೆ. ವೈಷ್ಣವಚರಣ ಗೌರಾಂಗನ ಸಂಬಂಧವಾಗಿ ಹಾಡುತ್ತಿದಾನೆ :

ಶ್ರೀ ಗೌರಾಂಗ ಸುಂದರ ನವ ನಟವರ,
ತಪ್ತಕಾಂಚನ ಕಾಯಬಂಧುರ ನರವರ—

ಬಳಿಕ ಆತ ಶ್ರೀಕೃಷ್ಣನ ಸಂಬಂಧವಾಗಿ ಹಾಡಿದ. ಶ್ರೀಕೃಷ್ಣ ಬೃಂದಾವನದಲ್ಲಿ ತನ್ನ ಹಳ್ಳಿಗಾಡಿನ ಜೀವನವನ್ನು ತ್ಯಜಿಸಿ ಮಥುರೆಯಲ್ಲಿ ರಾಜನಾಗಿದಾನೆ. ಒಬ್ಬ ಗೋಪಿ ಆತನನ್ನು ಮಥುರೆಯಲ್ಲಿ ಸಂಧಿಸಿ ಹೇಳಿದಳು :

ನೀ ಮಥುರೆಯೊಳು ರಾಜವೈಭವದಿ ಮುಳುಗಿರಲು
ನಾವು ನಿನ್ನನು ಈಗ ಅರಿವುದೆಂತು?
ಅರಸಿನುಡುಗೆಯನುಟ್ಟು ಆನೆಯಂಬಾರಿಯಲಿ
ನಡೆವೆ ನಿನಗೆಂತಹುದು ನಮ್ಮ ನೆನಪು!

ಹಿಂದೆ ಬೃಂದಾವನದಿ ಎಂತು ಗೋವನು ಕಾದು
ನಲಿದೆ ನೀನೆಂಬುದನು ಮರತೆಯೇನೊ!
ವ್ರಜಗೋಪಿಯರ ಮನೆಯೊಳಂದು ಹಾಲ್‌ಬೆಣ್ಣೆಗಳ
ಕದ್ದು ಮೆದ್ದಾಸೊಗವು ನೆನಪಿಲ್ಲವೇನೊ!

ರಾತ್ರಿ ಹನ್ನೊಂದು ಘಂಟೆಯ ಸಮಯ. ಒಬ್ಬೊಬ್ಬರಾಗಿ ಭಕ್ತರು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾರೆ.

ಶ್ರೀರಾಮಕೃಷ್ಣರು : "ಒಳ್ಳೆಯದು, ಈಗ ನೀವೆಲ್ಲರೂ ಮನೆಗೆ ಹೊರಡಿ. (ನರೇಂದ್ರನ ಮತ್ತು ಚಿಕ್ಕ ನರೇನನ ಕಡೆ ಬೆರಳುಮಾಡಿ) ಸದ್ಯಕ್ಕೆ ಇವರಿಬ್ಬರೂ ಇಲ್ಲಿ ಉಳಿದುಕೊಂಡರೇ ಸಾಕು. (ಗಿರೀಶನಿಗೆ) ಈಗ ನೀನು ಮನೆಗೆ ಹೋಗಿ ಊಟಮಾಡುತ್ತೀಯ? ಸಾಧ್ಯವಾದರೆ ಒಂದು ಸ್ವಲ್ಪ ಹೊತ್ತು ಇಲ್ಲಿರು. ಹುಕ್ಕ ಬೇಕೇನು! ಬಲರಾಮನ ಸೇವಕರೂ ಅವನಂತೆಯೆ. ಕರೆದು ನೋಡು; ಮಾಡಿಕೊಟ್ಟರೆ ಅವರಪ್ಪನಾಣೆ! (ಎಲ್ಲರೂ ನಗುತ್ತಾರೆ.) ಆದರೆ ನೀನು ಹುಕ್ಕ ಸೇದಿಯೇ ಹೋಗು."

ಗಿರೀಶನೊಡನೆ ಕನ್ನಡಕ ಹಾಕಿಕೊಂಡಿರೋ ಒಬ್ಬ ಆತನ ಸ್ನೇಹಿತ ಬಂದಿದಾನೆ. ಆತ ಎಲ್ಲವನ್ನು ನೋಡಿ ಕೇಳಿ ಹೊರಟುಹೋದ. ಪರಮಹಂಸರು ಗಿರೀಶನಿಗೆ ಹೇಳುತ್ತಿದಾರೆ, "ನಾನು ಇದನ್ನು ನಿನಗೆ ಮತ್ತು ಎಲ್ಲರಿಗೂ ಹೇಳುತ್ತಿದೇನೆ. ಯಾರನ್ನೂ ಬಲಾತ್ಕರಿಸಿ ಇಲ್ಲಿಗೆ ಕರೆದುಕೊಂಡು ಬರಬೇಡಿ. ಸಕಾಲ ಬರದೆ ಏನೂ ಆಗದು" ಅಂತ.

ತಾನು ಹೊರಡಲು ಮುನ್ನ ಇನ್ನೊಬ್ಬ ಭಕ್ತ ಪರಮಹಂಸರಿಗೆ ಪ್ರಣಾಮಮಾಡಿದ. ಆತನೊಡನೆ ಒಬ್ಬ ಚಿಕ್ಕ ಹುಡುಗನಿದ್ದ. ಅವರು ಆತನಿಗೆ ಪ್ರೀತಿಯಿಂದ ಹೇಳುತ್ತಿದಾರೆ, "ನಿನಗೆ ಹೊತ್ತಾಗುತ್ತಿದೆ. ಜೊತೆಗೆ ನಿನ್ನ ಜೊತೆಯಲ್ಲಿ ಚಿಕ್ಕ ಹುಡುಗ ಬೇರೆ ಇದಾನೆ. ಹೋಗಿ ಬಾ" ಅಂತ. ನರೇಂದ್ರ, ಚಿಕ್ಕ ನರೇನ, ಇನ್ನೂ ಒಬ್ಬಿಬ್ಬರು ಭಕ್ತರು ಇನ್ನೂ ಸ್ವಲ್ಪ ಹೊತ್ತು ಇದ್ದು ಬಳಿಕ ಮನೆಗೆ ಹಿಂದಿರುಗಿದರು.

೧೫ನೆ ಜುಲೈ ೧೮೮೫, ಆಷಾಢ ಶುಕ್ಲ ತದಿಗೆ, ಬುಧವಾರ.

ಶ್ರೀರಾಮಕೃಷ್ಣರು ಬಲರಾಮನ ಬೈಠಕ್‌ಖಾನೆಯ ಪಕ್ಕದ ಕೊಠಡಿಯಲ್ಲಿ ಮಲಗಿಕೊಂಡಿದಾರೆ. ಘಂಟೆ ಬೆಳಗಿನ ಜಾವ ನಾಲ್ಕು. ಆ ಕೊಠಡಿಯ ದಕ್ಷಿಣ ವರಾಂಡದಲ್ಲಿದ್ದ ಒಂದು ಬೆಂಚಿನ ಮೇಲೆ ಮಾಸ್ಟರ್ ಕುಳಿತಿದಾನೆ. ಸ್ವಲ್ಪ ಹೊತ್ತಿನೊಳಗಾಗಿಯೆ ಪರಮಹಂಸರು ಅಲ್ಲಿಗೆ ಬಂದರು. ಮಾಸ್ಟರ್ ಅವರಿಗೆ ಸಾಷ್ಟಾಂಗಪ್ರಣಾಮಮಾಡಿದ.

ಶ್ರೀರಾಮಕೃಷ್ಣರು : "ನಾನು ಆಗಲೆ ಒಮ್ಮೆ ಎದ್ದಿದ್ದೆ. ನಾವು ಬೆಳಗ್ಗೆನೇ ದಕ್ಷಿಣೇಶ್ವರಕ್ಕೆ ಹೊರಟುಹೋಗೋಣವೇನು?"

ಮಾಸ್ಟರ್ : “ ಒಳ್ಳೆಯದು. ಬೆಳಗಿನ ವೇಳೆ ನದಿಯಲ್ಲಿ ಅತಿ ಕಡಮೆಯಾಗಿರುತ್ತದೆ. ”

ಅರುಣೋದಯವಾಗುತ್ತಿದೆ. ಇನ್ನೂ ಭಕ್ತರಾರೂ ಅಲ್ಲಿಗೆ ಬಂದಿಲ್ಲ. ಪರಮಹಂಸರು ಮುಖ ತೊಳೆದುಕೊಂಡು ತಮ್ಮ ಮಧುರ ಕಂಠದಿಂದ ಭಗವತಿಯ ನಾಮಜಪವನ್ನು ಮಾಡುತ್ತಿದ್ದಾರೆ. ಆಗ ಅವರು ಆ ಕೊಠಡಿಯ ಉತ್ತರ ಬಾಗಿಲಿನ ಹತ್ತಿರ ನಿಂತಿದಾರೆ. ಮಾಸ್ಟರೂ ಹತ್ತಿರ ನಿಂತಿದಾನೆ. ಕೆಲವು ನಿಮಿಷಗಳನಂತರ ಗೋಪಾಲನ ತಾಯಿ ಬಂದು ಸ್ವಲ್ಪ ದೂರದಲ್ಲಿ ನಿಂತುಕೊಂಡಳು. ಒಬ್ಬಿಬ್ಬರು ಭಕ್ತೆಯರು ಅಂತಃಪುರದ ಬಾಗಿಲ ಹಿಂದೆ ನಿಂತು ಪರಮಹಂಸರ ದರ್ಶನವನ್ನು ಪಡೆಯುತ್ತಿದಾರೆ. ಅದು ಬೃಂದಾವನದ ಗೋಪಿಯರು ಶ್ರೀಕೃಷ್ಣನ ದರ್ಶನ ಪಡೆಯುತ್ತಿರುವರೊ ಅಥವಾ ನವದ್ವೀಪದ ಮಹಿಳೆಯರು ಪರದೆಯ ಹಿಂದೆ ನಿಂತು ಶ್ರೀ ಚೈತನ್ಯದೇವನ ದರ್ಶನ ಪಡೆಯುತ್ತಿರುವರೊ ಏನೊ ಎಂಬಂತಿತ್ತು.

ಪರಮಹಂಸರು ರಾಮನಾಮವನ್ನು ಸ್ವಲ್ಪ ಹೊತ್ತು ಜಪಿಸಿದನಂತರ ಕೃಷ್ಣನಾಮವನ್ನು ಜಪಿಸುತ್ತಿದಾರೆ : “ ಕೃಷ್ಣ ! ಕೃಷ್ಣ ! ಗೋಪೀಕೃಷ್ಣ ! ಗೋಪಿ ! ಗೋಪಿ ! ರಾಖಾಲಜೀವನ ಕೃಷ್ಣ ! ನಂದನಂದನ ಕೃಷ್ಣ ! ಗೋವಿಂದ ! ಗೋವಿಂದ ! ”

ಈಗ ಗೌರಾಂಗನಾಮವನ್ನು ಜಪಿಸುತ್ತಿದಾರೆ: “ ಶ್ರೀಕೃಷ್ಣ ಚೈತನ್ಯ ಪ್ರಭು ನಿತ್ಯಾನಂದ. ಹರೇ ಕೃಷ್ಣ, ಹರೇ ರಾಮ, ರಾಧೇ ಗೋವಿಂದ ! ”

ಬಳಿಕ ಹೇಳುತ್ತಿದಾರೆ, “ ಅಲೇಖ್ ನಿರಂಜನ ” ಅಂತ. “ ನಿರಂಜನ ” ಅಂತ ಉಚ್ಚರಿಸಿ ಅಳಲಾರಂಭಿಸಿದಾರೆ. ಅವರು ಬಿಕ್ಕಿ ಬಿಕ್ಕಿ ಅಳುತ್ತಿರೋದನ್ನು ನೋಡಿ ಭಕ್ತರೂ ಅಳಲಾರಂಭಿಸಿದಾರೆ. ಪರಮಹಂಸರು ಪ್ರೇಮಾಶ್ರುವನ್ನು ಸುರಿಸುತ್ತ ಹೇಳುತ್ತಿದಾರೆ, “ ಹೇ ನಿರಂಜನ ! ಓ ನನ್ನ ಮುದ್ದು ಮಗು ! ಬಾ ! ಇದನ್ನು ತಿನ್ನು ! ಇದನ್ನು ತೆಗೆದುಕೊ! ನಿನಗೆ ಸೇವೆಮಾಡಿ ಧನ್ಯನಾಗೋ ಸುದಿನವೆಂದು ಬರುವುದು ? ನೀನು ನನಗಾಗಿ ಮಾನವದೇಹಧಾರಣೆಮಾಡಿಕೊಂಡು ಬಂದಿದ್ದೀಯೆ ” ಅಂತ.

ಅವರು ಆರ್ತಸ್ವರದಿಂದ ಶ್ರೀ ಜಗನ್ನಾಥನಿಗೆ ಪ್ರಾರ್ಥನೆಮಾಡುತ್ತಿದಾರೆ, “ ಹೇ ಜಗನ್ನಾಥ ! ಹೇ ದೀನಬಂಧು ! ಹೇ ಜಗದ್ಬಂಧು ! ನಾನು ನಿನ್ನ ಜಗದ್ಬಾಹಿರನೇನಲ್ಲ ಪ್ರಭು. ನನ್ನ ಮೇಲೆ ಕೃಪೆಮಾಡು ! ” ಅಂತ.

ಪ್ರೇಮೋನ್ಮತ್ತರಾಗಿ ಹಾಡುತ್ತಿದಾರೆ, "ಒರಿಸ್ಸಾ ಜಗನ್ನಾಥನನ್ನು ಭಜಿಸು" ಅಂತ.

ಈಗ ನಾರಾಯಣನ ನಾಮಜಪಮಾಡುತ್ತ ಹಾಡುತ್ತ ನರ್ತಿಸುತ್ತಿದಾರೆ:

"ಶ್ರೀಮನ್ನಾರಾಯಣ! ಶ್ರೀಮನ್ನಾರಾಯಣ! ನಾರಾಯಣ! ನಾರಾಯಣ!"

ಮತ್ತೆ ಅವರು ಹಾಡಲಾರಂಭಿಸಿದಾರೆ:

ಯಾರಿಗಾಗಿ ಮರುಳುಗೊಂಡು ಅಲೆಯುತಿರುವೆನೋ
ಆ ನನ್ನ ಮೋಹನಮೂರ್ತಿ ಕಾಣಸಿನ್ನೂ ಕೆಳದಿಯೆ: . . .

ಈಗ ಪರಮಹಂಸರು ಭಕ್ತರೊಡನೆ ಚಿಕ್ಕ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಐದು ವರ್ಷದ ಬಾಲಕನೋಪಾದಿಯಲ್ಲಿ ದಿಗಂಬರರಾಗಿಬಿಟ್ಟದಾರೆ. ಮಾಸ್ಟರ್, ಬಲರಾಮ, ಇನ್ನೂ ಒಬ್ಬಿಬ್ಬರು ಭಕ್ತರು ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ಭಗವಂತನ ರೂಪನ್ನು ನೋಡಲು ಸಾಧ್ಯ. ಯಾವಾಗ ಉಪಾಧಿಗಳೆಲ್ಲ ನಾಶವಾಗಿಬಿಡುವುವೊ, ಯಾವಾಗ ವಿಚಾರ ಮಾಡೋದು ನಿಂತುಹೋಗುವುದೊ, ಆಗ ಆತನ ದರ್ಶನ ದೊರೆಯುತ್ತದೆ. ಬಳಿಕ ಸಾಧಕ ಮೂಕನಂತಾಗಿ ಸಮಾಧಿಸ್ಥನಾಗುತ್ತಾನೆ. ಜನ ಥಿಯೇಟರಿಗೆ ಹೋಗಿ ಆ ಮಾತಂತೆ, ಈ ಮಾತಂತೆ ಏನೇನನ್ನೊ ಹರಟುತ್ತ ಕುಳಿತಿರುತ್ತಾರೆ. ಆದರೆ ಪರದೆ ಮೇಲಕ್ಕೆ ಹೋಗುವುದೇ ತಡ ಹರಟೆ-ಗಿರಟೆಯೆಲ್ಲ ಒಡನೆಯೇ ನಿಂತುಹೋಗಿಬಿಡುತ್ತವೆ; ಸ್ಟೇಜಿನಲ್ಲಿ ಬರೋ ದೃಶ್ಯಗಳಲ್ಲಿಯೇ ಮಗ್ನರಾಗಿಹೋಗಿಬಿಡುತ್ತಾರೆ.

"ನಿಮಗೊಂದು ಅತ್ಯಂತ ಗುಹ್ಯ ವಿಷಯವನ್ನು ತಿಳಿಸುತ್ತೇನೆ. ಪೂರ್ಣ, ನರೇಂದ್ರ ಇವರೇ ಮೊದಲಾದವರನ್ನು ನಾನು ಬಹಳವಾಗಿ ಪ್ರೀತಿಸುತ್ತಿರುವುದಕ್ಕೆ ಕಾರಣ ಗೊತ್ತೆ? ಒಮ್ಮೆ ನಾನು ಮಧುರಭಾವದಲ್ಲಿದ್ದಾಗ ಶ್ರೀ ಜಗನ್ನಾಥನನ್ನು ಆಲಿಂಗನೆಮಾಡಿಕೊಳ್ಳಲು ಹೋಗಿ ನನ್ನ ಕೈ ಮುರಿದುಕೊಂಡೆ. ಆಗ ಆತ ನನಗೆ ತಿಳಿಸಿದ, 'ನೀನು ಮಾನವದೇಹ ಧಾರಣೆಮಾಡಿಕೊಂಡಿದೀಯೆ. ಆದ್ದರಿಂದ ಈಗ ನೀನು ಸಖ್ಯ, ವಾತ್ಸಲ್ಯ ಇವೇ ಮೊದಲಾದ ಭಾವಗಳಿಂದ ಮಾನವರೊಡನೆ ಬೆರೆ' ಅಂತ.

"ರಾಮಲಾಲನನ್ನು ನೋಡಿದರೆ ಹಿಂದೆ ನನಗೆ ಯಾವ ಯಾವ ಭಾವಗಳು ಉತ್ಪನ್ನವಾಗುತ್ತಿದ್ದುವೊ, ಅದೇ ವಿಧದ ಭಾವಗಳು ಈಗ ಪೂರ್ಣನೇ ಮೊದಲಾದವರನ್ನು ನೋಡಿದರೆ ಉತ್ಪನ್ನವಾಗುತ್ತಿವೆ. ಆಗ ನಾನು ರಾಮಲಾಲನಿಗೆ ಸ್ನಾನಮಾಡಿಸುತ್ತಿದ್ದೆ, ಊಟಮಾಡಿಸುತ್ತಿದ್ದೆ, ಮಲಗಿಸುತ್ತಿದ್ದೆ, ಎತ್ತಿಕೊಂಡು ತಿರುಗುತ್ತಿದ್ದೆ. ರಾಮಲಾಲನಿಗಾಗಿ ಸುಮ್ಮನೆ ಕುಳಿತು ಅಳುತ್ತಿದ್ದೆ. ಈಗ ಈ ಯುವಕರನ್ನು ಕಂಡರೆ ಅದೇ ವಿಧದ ಭಾವನೆಗಳು ನನಗಾಗುತ್ತಿವೆ. ನಿರಂಜನನನ್ನು ನೋಡು. ಯಾವುದರಿಂದಲೂ ಲಿಪ್ತನಾಗಿಲ್ಲ. ತನ್ನ ಸ್ವಂತ ದುಡ್ಡು ಖರ್ಚುಮಾಡಿ ಬಡವರನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿ ಬರುತ್ತಾನೆ. ವಿವಾಹದ ಸಂಬಂಧವಾಗಿ ಆತ ಹೇಳುತ್ತಾನೆ, 'ಹಾ ಭಗವಂತನೇ! ಅದು ವಿಶಾಲಾಕ್ಷಿ ನದಿಯ ಸುಳಿ!' ಅಂತ. ಆತ ಒಂದು ಜ್ಯೋತಿಯ ಮೇಲೆ ಕುಳಿತಿರುವಂತೆ ನನಗೆ ಕಾಣುತ್ತಿದೆ.

"ಪೂರ್ಣ, ಭಗವಂತನ ಸಾಕಾರ ರಾಜ್ಯಕ್ಕೆ ಸೇರಿದವನು. ವಿಷ್ಣುವಿನ ಅಂಶದಿಂದ ಜನ್ಮವೆತ್ತಿದಾನೆ. ಆಹ! ಆತನ ಅನುರಾಗ ಎಷ್ಟು ಅದ್ಭುತವಾದ್ದು!

(ಮಾಸ್ಟರಿಗೆ) "ನೀನು ಆತನ ಗುರುಭಾಯಿಯೋ ಅಥವಾ ಸ್ವಂತದವನೋ ಏನೋ ಎಂಬಂತೆ ಆತ ನಿನ್ನೊಡನೆ ವ್ಯವಹರಿಸಿದುದನ್ನು ನೀನು ಅಂದು ನೋಡಲಿಲ್ಲವೇನು? ಕ್ಯಾಪ್ಟನ್ನನ ಮನೆಗೆ ಬಂದು ನನ್ನನ್ನು ಕಾಣುತ್ತೇನೆ ಅಂತ ಹೇಳಿದಾನೆ.

"ನರೇಂದ್ರ ಅತ್ಯಂತ ಉಚ್ಚ ಅಂತಸ್ತಿಗೆ ಸೇರಿದವನು — ನಿರಾಕಾರ ರಾಜ್ಯಕ್ಕೆ ಸೇರಿದವನು. ಆತನಲ್ಲಿ ಪುರುಷನ ಸತ್ತ್ವವಿದೆ. ಅಲ್ಲಿಗೆ ಅಷ್ಟೊಂದು ಜನ ಬರುತ್ತಾರೆ, ಅವನಂಥವರು ಬೇರೆ ಯಾರೂ ಇಲ್ಲ.

"ಒಮ್ಮೊಮ್ಮೆ ಹಾಗೆ ಕುಳಿತುಕೊಂಡು ಭಕ್ತರ ಸಂಬಂಧವಾಗಿ ಲೆಕ್ಕಾಚಾರ ಹಾಕುತ್ತೇನೆ. ಕೆಲವರು ಹತ್ತು ದಳದ, ಇನ್ನು ಕೆಲವರು ಹದಿನಾರು ದಳದ, ಮತ್ತೆ ಕೆಲವರು ನೂರು ದಳದ ಪದ್ಮಗಳ ಹಾಗೆ ಕಂಡು ಬಂದಿದಾರೆ. ಆದರೆ ಪದ್ಮಗಳ ಮಧ್ಯೆ ನರೇಂದ್ರ ಎಂಬ ಪದ್ಮ ಸಹಸ್ರ ದಳದ್ದು.

"ಉಳಿದವರೆಲ್ಲ ಚೆಂಬು, ಕೊಡ ಇವುಗಳಾದರೆ, ನರೇಂದ್ರ ಒಂದು ಭಾರಿ ಹಂಡೆ.

"ಕುಂಟೆ ಕೊಳಗಳ ಮಧ್ಯೆ ನರೇಂದ್ರ ಒಂದು ದೊಡ್ಡ ಕೆರೆ. ಉದಾಹರಣೆಗೆ ಹಲಧಾರಪುಕುರ.

"ಮೀನುಗಳಲ್ಲಿ ನರೇಂದ್ರ ಕೆಂಪು ಕಣ್ಣುಳ್ಳ 'ರೂಯಿ' ಎಂಬ ಹೆಸರಿನ ದೊಡ್ಡ ಮೀನು. ಉಳಿದವರು ವಿವಿಧ ವಿಧದ ಚಿಕ್ಕ ಪುಟ್ಟ ಮೀನುಗಳು.

"ನರೇಂದ್ರ ದೊಡ್ಡ ಪಾತ್ರೆ– ಬೇಕಾದಷ್ಟು ಸಾಮಾನು ಹಿಡಿಸುತ್ತದೆ. ದೊಡ್ಡ ಟೊಳ್ಳಿರೋ ಬಂಬು.

"ನರೇಂದ್ರ ಯಾವುದರ ವಶನೂ ಆಗಿಲ್ಲ. ಆಸಕ್ತಿ ಮತ್ತು ಇಂದ್ರಿಯ ಸುಖಗಳ ವಶನಾಗಿಲ್ಲ. ಆತ ಒಂದು ಗಂಡು ಪಾರಿವಾಳ. ಅದನ್ನು ಕೊಕ್ಕಿನ ಹತ್ತಿರ ಹಿಡಿದುಕೊಂಡರೆ, ಹಾಗೂ ಹೀಗೂ ಒದರಿ ಬಿಡಿಸಿಕೊಂಡು ಬಿಡುತ್ತದೆ; ಆದರೆ ಹೆಣ್ಣು ಪಾರಿವಾಳ ಸುಮ್ಮನೆ ಇದ್ದುಬಿಡುತ್ತದೆ.

"ಬೇಲಘರದ ತಾರಕನನ್ನು ಒಂದು ಜಾತಿಯ ಪುಟ್ಟ ಮೀನಿಗೆ ಹೋಲಿಸಬಹುದು.

"ನರೇಂದ್ರನದು ಪುರುಷ ಸ್ವಭಾವ; ಬಂಡಿಯಲ್ಲಿ ಅದಕ್ಕಾಗಿ ಆತ ಅದರ ಬಲಭಾಗಕ್ಕೆ ಕುಳಿತುಕೊಳ್ಳುತ್ತಾನೆ. ಭವನಾಥನದು ಹೆಂಗಸಿನ ಸ್ವಭಾವ; ಅದಕ್ಕಾಗಿ ನಾನು ಆತನನ್ನು ಗಾಡಿಯ ಎಡಭಾಗಕ್ಕೆ ಕೂರಿಸೋದು. ಸಭೆ ಮಧ್ಯದಲ್ಲಿ ನರೇಂದ್ರ ನನ್ನೊಡನೆ ಇದ್ದ ಎಂದರೆ ನನಗೆ ಬಹಳ ಧೈರ್ಯ."

ಮಹೇಂದ್ರಮುಖರ್ಜಿ ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಆಗ ಬೆಳಗಿನ ಎಂಟು. ಹರಿಪದ, ತುಳಸೀರಾಮ ಮತ್ತು ಇನ್ನೂ ಕೆಲವರು ಒಬ್ಬೊಬ್ಬರಾಗಿ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಕೊಠಡಿಯಲ್ಲಿ ಕುಳಿತುಕೊಂಡರು. ಬಾಬುರಾಮನಿಗೆ ಜ್ವರ. ಅದಕ್ಕಾಗಿ ಆತನಿಗೆ ಬರೋಕಾಗಲಿಲ್ಲ.

ಶ್ರೀರಾಮಕೃಷ್ಣರು ಮಾಸ್ಟರ್ ಮೊದಲಾದವರಿಗೆ: "ಚಿಕ್ಕ ನರೇನ ಬರಲಿಲ್ಲವೇನು? ನಾನು ಹೊರಟುಹೋಗಿರಬೇಕು ಅಂತ ಆತ ಭಾವಿಸಿರಬೇಕು. (ಮುಖರ್ಜಿಗೆ) ಇದು ಎಷ್ಟು ಆಶ್ಚರ್ಯಕರವಾದುದು! ಆತ ಹುಡುಗನಾಗಿದ್ದಾಗಲೆ ಸ್ಕೂಲಿನಿಂದ ಬಂದೊಡನೆಯೇ ಭಗವಂತನಿಗಾಗಿ ಅಳುತ್ತಿದ್ದ. ಭಗವಂತನಿಗಾಗಿ ಅಳೋದು, ಏನಿದು ಸಾಮಾನ್ಯವಾದುದೆ? ಜೊತೆಗೆ ಆತ ಬಹಳ ಬುದ್ಧಿಶಾಲಿ. ಬಂಬುಗಳ ಮಧ್ಯೆ ಆತ ದೊಡ್ಡ

ಟೊಳ್ಳುಳ್ಳ ಬಂಬು. ಆತನ ಇಡೀ ಮನಸ್ಸೆಲ್ಲ ನನ್ನ ಕಡೆಗೇ ಹರಿಯುತ್ತಿದೆ. ಒಮ್ಮೆ ಗಿರೀಶಘೋಷ ನನಗೆ ಹೇಳಿದ, 'ನವಗೋಪಾಲನ ಮನೆಯಲ್ಲಿ ಕೀರ್ತನೆ ನಡೆಯುತ್ತಿದ್ದಾಗ ಚಿಕ್ಕ ನರೇನ ಅಲ್ಲಿಗೆ ಬಂದ. ಅಲ್ಲಿಗೆ ಕಾಲು ಹಾಕಿದೊಡನೆಯೆ ನಿಮ್ಮನ್ನು ವಿಚಾರಿಸಿ ಕೇಳಿದ, "ಅವರು ಎಲ್ಲಿ?" ಅಂತ. ಒಡನೆಯೆ ಆತ ಬಾಹ್ಯಪ್ರಜ್ಞೆ ಇಲ್ಲದಂತವನಾಗಿ ಬಹುಮಟ್ಟಿಗೆ ಜನರ ಮೇಲೆಯೇ ನಡೆದುಹೋಗಿಬಿಟ್ಟ ಅಂತ ಹೇಳಬಹುದು' ಎಂದು. ತಮ್ಮ ಮನೆಯವರು ಬಯ್ಯಬಹುದು ಎಂಬ ಭಯವೇ ಆತನಿಗಿಲ್ಲ. ಕೆಲವು ವೇಳೆ ದಕ್ಷಿಣೇಶ್ವರಕ್ಕೆ ಬಂದು ಒಂದೇ ಸಮನೆ ಮೂರು ರಾತ್ರಿಯನ್ನೂ ಕಳೆದುಬಿಡುತ್ತಾನೆ."

ಮುಖರ್ಜಿ : "ನೀವು ನಿನ್ನೆ ತಿಳಿಸಿದ ವಿಷಯಗಳನ್ನು ಕೇಳಿ ಹರಿ ಸುಮ್ಮನೆ ಮಂತ್ರಮುಗ್ಧನಾಗಿಬಿಟ್ಟಿದಾನೆ. ಆತ ನನಗೆ ಹೇಳಿದ, 'ಅಂಥ ಸುಭಾಷಿತಗಳನ್ನು ಸಾಂಖ್ಯ, ಪಾತಂಜಲ, ವೇದಾಂತ ಈ ದರ್ಶನಗಳಲ್ಲಿ ಮಾತ್ರ ನೋಡಬಹುದು. ಅವರು ಸಾಮಾನ್ಯ ಮನುಷ್ಯರಲ್ಲ' ಅಂತ."

ಶ್ರೀರಾಮಕೃಷ್ಣರು : "ಎಲ್ಲಿ, ನಾನು ಸಾಂಖ್ಯವನ್ನೇ ಆಗಲಿ, ವೇದಾಂತವನ್ನೇ ಆಗಲಿ ಎಂದೂ ಓದಿದವನಲ್ಲವಲ್ಲ.

"ಪೂರ್ಣ ಜ್ಞಾನ, ಪೂರ್ಣ ಭಕ್ತಿ ಎರಡೂ ಒಂದೇ. 'ನೇತಿ', 'ನೇತಿ' ಮಾರ್ಗವನ್ನು ಅನುಸರಿಸಿ ವಿಚಾರ ಕೊನೆಗಂಡಿತು ಎಂದರೇ ಬ್ರಹ್ಮಜ್ಞಾನ. ಆ ಬಳಿಕ ಸಾಧಕ ಯಾವುದನ್ನು ತ್ಯಜಿಸಿ ಮುಂದೆ ಹೋಗಿದ್ದನೊ ಅದನ್ನೇ ಆತ ಬ್ರಹ್ಮ ಅಂತ ಸ್ವೀಕರಿಸುತ್ತಾನೆ. ಮೇಲ್ಛಾವಣಿಗೆ ಹತ್ತಿಹೋಗುವಾಗ ಬಹಳ ಎಚ್ಚರಿಕೆಯಿಂದ ಒಂದಾದಮೇಲೊಂದು ಹಂತವನ್ನು ಹತ್ತಿಹೋಗಬೇಕು. ಬಳಿಕ ಆತನಿಗೆ ಗೊತ್ತಾಗುತ್ತದೆ ಯಾವ ವಸ್ತುಗಳಿಂದ — ಅಂದರೆ ಇಟ್ಟಿಗೆ ಸುಣ್ಣ, ಮರಳು ಇವುಗಳಿಂದ — ಮೇಲ್ಛಾವಣಿ ನಿರ್ಮಿತವಾಗಿದೆಯೊ, ಅದೇ ವಸ್ತುಗಳಿಂದ ಮೆಟ್ಟಿಲ ಸಾಲೂ ನಿರ್ಮಿತವಾಗಿದೆ ಅಂತ.

"ಯಾರಿಗೆ ಎತ್ತರದ ಬೋಧೆಯಿರುವುದೊ ಅವನಿಗೆ ತಗ್ಗಿನ ಬೋಧೆಯೂ ಇರುತ್ತದೆ. ಜ್ಞಾನ ದೊರೆತನಂತರ ಮೇಲು ಕೀಳು ಎಲ್ಲ ಒಂದೇ ಎಂಬ ಬೋಧೆಯಾಗುತ್ತದೆ.

"ಪ್ರಹ್ಲಾದನಿಗೆ ತತ್ತ್ವಜ್ಞಾನಾವಸ್ಥೆ ಬಂದಾಗ, ಆತ 'ಸೋಽಹಮ್' ಭಾವದಲ್ಲಿರುತ್ತಿದ್ದ. ದೇಹಬುದ್ಧಿ ತಲೆಯೆತ್ತಿದಾಗ, 'ದಾಸೋಽಹಮ್',

'ನಾನು ನಿನ್ನ ದಾಸ' ಎಂಬ ಭಾವದಲ್ಲಿರುತ್ತಿದ್ದ.

"ಹನುಮಂತನಿಗೆ ಕೆಲವು ವೇಳೆ 'ಸೋಽಹಮ್', ಇನ್ನು ಕೆಲವು ವೇಳೆ 'ಜೀವೋಽಹಮ್', ಮತ್ತೆ ಕೆಲವು ವೇಳೆ 'ದಾಸೋಽಹಮ್' ಎಂಬ ಭಾವಗಳು ಬರುತ್ತಿದ್ದುವು.

"ಮನುಷ್ಯ ಭಕ್ತಿಯನ್ನು ಏಕೆ ಆಶ್ರಯಿಸಿಕೊಂಡಿರಬೇಕು? ಹಾಗೆ ಮಾಡದಿದ್ದರೆ ಬೇರೆ ಏನನ್ನು ಆಶ್ರಯಿಸಿಕೊಂಡಿರಲು ಸಾಧ್ಯ? ಬೇರೆ ಇನ್ನಾವ ರೀತಿಯಲ್ಲಿ ಆತ ದಿನಗಳನ್ನು ಕಳೆಯಬಲ್ಲ?

"'ಅಹಂ' ಎಂಬುದು ಸುಲಭವಾಗಿ ಹೋಗತಕ್ಕದಲ್ಲ. 'ಅಹಂ' ಎಂಬ ಘಟವಿರೋವರೆಗೆ 'ಸೋಽಹಮ್' ಎಂಬ ಅನುಭವವನ್ನು ಪಡೆಯಲಾಗೋದಿಲ್ಲ. ಸಮಾಧಿ ಅವಸ್ಥೆಯಲ್ಲಿ 'ಅಹಂ' ಎಂಬುದು ನಿರ್ಮೂಲವಾಗುತ್ತದೆ. ಆಗ ಏನಿದೆಯೊ ಅದೇ ಇರುತ್ತದೆ. ರಾಮಪ್ರಸಾದ ಹೇಳುತ್ತಾನೆ, 'ಹೇ ತಾಯೆ, ನನಗೆ ಬ್ರಹ್ಮಜ್ಞಾನ ದೊರೆತನಂತರ, ನಾನು ಒಳ್ಳೆಯವನೊ ಅಥವಾ ನೀನು ಒಳ್ಳೆಯವಳೊ ಎಂಬುದು ನಿನಗೇ ಗೊತ್ತಾಗುತ್ತದೆ' ಅಂತ.

"ಎಲ್ಲಿಯವರೆಗೆ 'ಅಹಂ' ಎಂಬುದು ಇರುವುದೊ ಅಲ್ಲಿಯವರೆಗೆ ಭಕ್ತನ ಹಾಗೆ ಬದುಕಿರುವುದೇ ಲೇಸು; 'ನಾನು ಭಗವಂತ' ಅಂತ ಭಾವಿಸೋದು ಶ್ರೇಯಸ್ಕರವಾದುದಲ್ಲ. 'ಅಹಂ' ಇರೋವರೆಗೆ ಭಕ್ತವತ್ ಇರಬೇಕೇ ವಿನಾ ಕೃಷ್ಣವತ್ ಅಲ್ಲ. ಆದರೆ ಭಗವಂತನೇ ಆಕರ್ಷಿಸಿ ಎಳೆದುಕೊಂಡುಬಿಟ್ಟರೆ ಅದು ಬೇರೆ ವಿಷಯ. ಇದು ಯಜಮಾನ ತನ್ನ ಸೇವೆಯಲ್ಲೇ ನಿರತನಾಗಿರೋ ಸೇವಕನನ್ನು ಕರೆದು: 'ಬಾ, ಬಾ. ಹತ್ತಿರ ಕುಳಿತುಕೊ. ನಾನು ಏನೊ ಅದೇ ನೀನು' ಅಂತ ಹೇಳಿದ ಹಾಗೆ.

"ಅಲೆಗಳು ಗಂಗೆಗೆ ಸೇರಿದವೇ ವಿನಾ, ಗಂಗೆ ಅಲೆಗಳಿಗೆ ಸೇರಿದುದಲ್ಲ.

"ಶಿವನಿಗೆ ಎರಡು ಅವಸ್ಥೆ. ಆತ್ಮಾರಾಮನಾದಾಗ 'ಸೋಽಹಮ್' ಅವಸ್ಥೆ,—ಯೋಗದಲ್ಲಿ ಎಲ್ಲವೂ ಸ್ಥಿರ. ಆದರೆ 'ಅಹಂ' ಎಂಬುದು ಪ್ರತ್ಯೇಕವಾದ್ದು ಎಂಬ ಭಾವನೆ ಉದಯವಾದಾಗ 'ರಾಮ! ರಾಮ!' ಅಂತ ಹೇಳುತ್ತ ನರ್ತಿಸುತ್ತಾನೆ.

"ಯಾರು ಅಚಲನೊ, ಆತ ಚಲನೂ ಹೌದು. ಈಗ ನೀನು ಸ್ಥಿರವಾಗಿ ಕುಳಿತಿರುವೆ. ಮತ್ತೆ ನೀನೇ ಇನ್ನು ಕೆಲವು ನಿಮಿಷಗಳೊಳಗೆ ಕೆಲಸಕಾರ್ಯಗಳಲ್ಲಿ ಕೈ ಹಚ್ಚುವೆ.

“ಜ್ಞಾನ, ಭಕ್ತಿ ಎರಡೂ ಒಂದೇ ವಸ್ತು. ವ್ಯತ್ಯಾಸ ಇಷ್ಟೆ: ಒಬ್ಬ ಹೇಳುತ್ತಾನೆ, ‘ನೀರು’ ಅಂತ, ಇನ್ನೊಬ್ಬ ಹೇಳುತ್ತಾನೆ, ‘ಹಿಮಗಡ್ಡೆ’ ಅಂತ.

“ಸಾಮಾನ್ಯವಾಗಿ ಸಮಾಧಿಯಲ್ಲಿ ಎರಡು ವಿಧ. ಮೊದಲನೆಯದು ಸ್ಥಿರ, ಜಡ ಅಥವಾ ನಿರ್ವಿಕಲ್ಪ ಸಮಾಧಿ: ಇದು ಜ್ಞಾನಮಾರ್ಗವನ್ನು ಅನುಸರಿಸಿ ವಿಚಾರ ಮಾಡುತ್ತ ಮಾಡುತ್ತ ಮುಂದುವರಿದು ‘ಅಹಂ’ ಎಂಬುದನ್ನು ನಾಶಪಡಿಸಿಕೊಂಡ ಮೇಲೆ ದೊರೆಯೋ ಸಮಾಧಿ. ಎರಡನೆಯದು ಭಾವ ಸಮಾಧಿ: ಇದು ಭಕ್ತಿಮಾರ್ಗದ ಅನುಯಾಯಿಗಳಿಗೆ ದೊರೆಯೋ ಸಮಾಧಿ. ಇದರಲ್ಲಿ ಭಗವಂತನೊಡನೆ ಆನಂದಪಡಲು, ಆತನ ಆನಂದವನ್ನು ಆಸ್ವಾದಿಸಲು ಗೆರೆಯೋಪಾದಿಯಲ್ಲಿ ಒಂದು ಕಿಂಚಿತ್ ‘ಅಹಂ’ ಉಳಿದುಕೊಂಡಿರುತ್ತದೆ. ಕಾಮಕಾಂಚನಾಸಕ್ತಿ ಹೃದಯದಲ್ಲಿ ಇತ್ತು ಎಂದರೆ, ಇವನ್ನು ಗ್ರಹಿಸಲು ಸಾಧ್ಯವಾಗೋದಿಲ್ಲ.

“ಕೇದಾರನಿಗೆ ಹೇಳಿದೆ, ‘ಮನಸ್ಸು ಕಾಮಕಾಂಚನಾಸಕ್ತವಾಗಿದ್ದರೆ ಸಾಧ್ಯವಾಗೋದಿಲ್ಲ’ ಅಂತ. ಆತನ ಎದೆಯನ್ನು ಒಮ್ಮೆ ಸ್ಪರ್ಶಿಸಲು ಇಚ್ಛೆಯೇನೋ ಬಂತು, ಆದರೆ ಸಾಧ್ಯವಾಗಲಿಲ್ಲ. ಅಂತರ್ಯದಲ್ಲಿ ತಿರುಚು ಮುರುಚುಗಳು ತುಂಬಿದ್ದುವು. ಆತನ ಅಂತರ್ಯ ಹೇಸಿಗೆ ವಾಸನೆಯ ಕೊಠಡಿಯಂತಿತ್ತು, ಒಳಕ್ಕೆ ಪ್ರವೇಶಮಾಡಲಾಗಲಿಲ್ಲ. ಸ್ವಯಂಭೂ ಲಿಂಗದ ಮೂಲ ಕಾಶಿಯ ವರೆಗೆ ಹಬ್ಬಿರೋ ಹಾಗೆ, ಆತನ ಸಂಸಾರಾಸಕ್ತಿ, ಪ್ರಚಂಡವಾದುದಾಗಿತ್ತು. ಸಂಸಾರಾಸಕ್ತಿ, ಕಾಮ ಕಾಂಚನಾಸಕ್ತಿ ಹೃದಯದಲ್ಲಿ ಇತ್ತು ಎಂದರೆ, ಅದು ದೊರೆಯದು.

“ಕಾಮಕಾಂಚನಾಸಕ್ತಿ ಯುವಕರ ಹೃದಯವನ್ನು ಇನ್ನೂ ಹೊಕ್ಕಿಲ್ಲ. ಅದಕ್ಕಾಗಿ ನಾನು ಅವರನ್ನು ಅಷ್ಟೊಂದಾಗಿ ಪ್ರೀತಿಸೋದು. ಹಾಜರಾ ಹೇಳುತ್ತಾನೆ, ‘ಶ್ರೀಮಂತರ ಮನೆ ಮಕ್ಕಳನ್ನ ಅಥವಾ ಸುಂದರವಾಗಿರೋ ಯುವಕರನ್ನ ಕಂಡರೆ ಮಾತ್ರ ನೀವು ಅವರನ್ನು ಪ್ರೀತಿಸುತ್ತೀರಿ’ ಅಂತ. ಅದು ಹಾಗಿರುವುದಾದರೆ, ಹರೀಶ, ಲಾಟು, ನರೇಂದ್ರ ಇವರನ್ನೆಲ್ಲ ಪ್ರೀತಿಸುತ್ತೇನಲ್ಲ ಏಕೆ? ನರೇಂದ್ರನಿಗೆ ಉಪ್ಪು ಕೊಂಡುಕೊಂಡು ಅನ್ನ ತಿನ್ನೋಕೆ ಒಂದು ಕಾಸಿಗೂ ಗತಿಯಿಲ್ಲವಲ್ಲ.

“ಯುವಕರ ಹೃದಯವನ್ನು ಕಾಮಕಾಂಚನಾಸಕ್ತಿ ಇನ್ನೂ ಹೊಕ್ಕಿಲ್ಲ. ಅದಕ್ಕಾಗಿಯೇ ಅವರ ಅಂತರ್ಯ ಬಹಳ ಶುದ್ಧ. ಇದೂ

ಅಲ್ಲದೆ ಅಲ್ಲಿಗೆ ಬರುತ್ತಿರೋ ಯುವಕರಲ್ಲನೇಕರು ನಿತ್ಯಸಿದ್ಧರು ; ಆಜನ್ಮ ದಿಂದಲೇ ಭಗವಂತನ ಕಡೆಗೆ ಮನಸ್ಸು. ಅದು ಉದ್ಯಾನವನವನ್ನು ಚೊಕ್ಕಟವಮಾಡುತ್ತಿರೋವಾಗ ಇದ್ದಕ್ಕಿದ್ದಹಾಗೆ ದೊರೆಯೋ ನೀರು - ಕೊಳಾಯಿಯ ಹಾಗೆ. ನೀರು ಅದರಿಂದ ಸುಮ್ಮನೆ 'ಕಲಕಲ' ಅಂತ ನುಗ್ಗಿ ಬರಲಾರಂಭಿಸುತ್ತದೆ."

ಬಲರಾಮ : "ಮಹಾಶಯರೆ, ಈ ಸಂಸಾರ ಮಿಥ್ಯಾ ಎಂಬ ಜ್ಞಾನ ಒಮ್ಮೆಗೇ ಪೂರ್ಣನಿಗೆ ಬಂದ ಬಗೆ ಹೇಗೆ ?"

ಶ್ರೀರಾಮಕೃಷ್ಣರು : "ಜನ್ಮಾಂತರದ ಫಲ. ಹಿಂದಿನ ಜನ್ಮಗಳಲ್ಲಿ ಎಲ್ಲಾ ಸಾಧನೆಗಳನ್ನೂ ಮಾಡಿ ಮುಗಿಸಿದಾನೆ. ಹುಟ್ಟಿ ಸಾಯೋದು ಶರೀರವೇ ವಿನಾ ಆತ್ಮವಲ್ಲ.

"ಇವರ ಜೀವನ ಯಾವ ರೀತಿಯದು ಗೊತ್ತೆ ? ಕೆಲವು ಗಿಡಗಳ ಹಾಗೆ, ಮೊದಲು ಕಾಯಿ ಬಿಡೋದು ಬಳಿಕ ಹೂವು ಬಿಡೋದು. ಮೊದಲು ಇವರಿಗೆ ಭಗವಂತನ ದರ್ಶನ ದೊರೆಯುತ್ತದೆ; ಬಳಿಕ ಆತನ ಗುಣ ಮಹಿಮೆಯನ್ನು ಕೇಳುತ್ತಾರೆ ; ಕೊನೆಗೆ ಆತನಲ್ಲಿ ಐಕ್ಯವಾಗುತ್ತಾರೆ. ನಿರಂಜನನ ಕಡೆ ನೋಡು. ಆತನಿಗೆ ಸಾಲ ಸೋಲ ಯಾವುದೂ ಇಲ್ಲ. ಕರೆ ಬಂದೊಡನೆಯೆ ಹೊರಡಲು ಸಿದ್ಧನಾಗಿದಾನೆ. ಆದರೆ ತಾಯಿ ಬದುಕಿರೋವರೆಗೆ ಆಕೆಯನ್ನು ಸಲಹಬೇಕಾದ್ದೆ. ನಾನು ನನ್ನ ತಾಯನ್ನು ಹೂವು ಚಂದನಗಳಿಂದ ಪೂಜಿಸುತ್ತಿದ್ದೆ. ಜಗಜ್ಜನನಿಯೆ ನಮಗೆ ಜನ್ಮ ವೀಯೋ ತಾಯಿಯಾಗಿ ಜನ್ಮ ತಾಳುತ್ತಾಳೆ.

"ಎಲ್ಲಿಯವರೆಗೆ ವ್ಯಕ್ತಿ ತನ್ನ ಶರೀರ ರಕ್ಷಣೆಯ ಕಡೆ ಗಮನವೀಯ ಬೇಕಾಗಿರುವುದೊ ಅಲ್ಲಿಯವರೆಗೆ ಆತ ತನ್ನ ತಾಯ ಯೋಗಕ್ಷೇಮದ ಕಡೆಗೂ ಗಮನವೀಯಬೇಕು. ಅದಕ್ಕಾಗಿ ನಾನು ಹಾಜರಾನಿಗೆ ಹೇಳಿದೆ, 'ತನಗೇನಾದರು ನೆಗಡಿ ಬಂದಿತು ಎಂದರೆ ಮನುಷ್ಯ ಮೆಣಸು, ಬೆಲ್ಲ, ಉಪ್ಪಿಗಾಗಿ ಹುಡುಕಿಕೊಂಡು ಹೋಗುತ್ತಾನೆ. ಎಲ್ಲಿಯವರೆಗೆ ತನ್ನ ಸ್ವಂತ ದೇಹರಕ್ಷಣೆ ಎಂಬ ಭಾವನೆ ಇರುವುದೊ, ಅಲ್ಲಿಯವರೆಗೆ ಆತ ತನ್ನ ಸ್ವಂತ ತಾಯ ಯೋಗಕ್ಷೇಮವನ್ನು ನೋಡಿಕೋಬೇಕು' ಅಂತ.

"ಯಾವಾಗ ತನ್ನ ಶರೀರದ ಯೋಗಕ್ಷೇಮವನ್ನು ತಾನೇ ನೋಡಿ ಕೊಳ್ಳಲಾಗದ ಸ್ಥಿತಿ ಬಂದುಬಿಟ್ಟಿತು ಅಂದರೆ, ಆಗ ಅದು ಬೇರೆ ವಿಷಯ. ಆಗ ಭಗವಂತನೇ ಸಕಲ ಭಾರಗಳನ್ನು ಹೊತ್ತುಕೊಂಡುಬಿಡುತ್ತಾನೆ.

ಅಪ್ರಾಪ್ತ ವಯಸ್ಕ ತನ್ನ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳಲಾರ; ಅದಕ್ಕಾಗಿಯೇ ಆತನಿಗೊಬ್ಬ ರಕ್ಷಕನನ್ನು ನೇಮಿಸೋದು. ಚೈತನ್ಯದೇವ ಅಪ್ರಾಪ್ತ ವಯಸ್ಕನೋಪಾದಿಯಲ್ಲಿ ತನ್ನ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳಲಾರದವನಾಗಿದ್ದ.''

ಮಾಸ್ಟರ್ ಗಂಗಾಸ್ನಾನಕ್ಕಾಗಿ ಹೊರಟ.

ಪರಮಹಂಸರು ಬಲರಾಮನ ಒಂದು ಚಿಕ್ಕ ಕೊಠಡಿಯಲ್ಲಿ ಭಕ್ತರೊಡನೆ ಮಾತುಕತೆಗಳನ್ನಾಡುತ್ತಿದಾರೆ. ಮಹೇಂದ್ರಮುಖರ್ಜಿ, ಬಲರಾಮ, ತುಳಸಿ, ಹರಿಪದ, ಗಿರೀಶ ಇವರೇ ಮೊದಲಾದ ಭಕ್ತರು ಅಲ್ಲಿ ಕುಳಿತುಕೊಂಡಿದಾರೆ. ಮಾಸ್ಟರ್ ಗಂಗೆಯಿಂದ ಹಿಂದಿರುಗಿ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಅವರ ಹತ್ತಿರ ಕುಳಿತುಕೊಂಡ. ಪರಮಹಂಸರು ತಮಗಾಗಿದ್ದ ಕೆಲವು ಅದ್ಭುತ ಭಗವಂತನ ದರ್ಶನಗಳ ಸಂಬಂಧವಾಗಿ ವಿವರಿಸಿ ಹೇಳುತ್ತಿದಾರೆ.

ಶ್ರೀರಾಮಕೃಷ್ಣರು: ''ಒಂದು ದಿವಸ ಕಾಳೀದೇವಾಲಯದಲ್ಲಿ ತೋತಾಪುರಿ ಮತ್ತು ಹಲಧಾರಿ ಅಧ್ಯಾತ್ಮರಾಮಾಯಣವನ್ನು ಓದುತ್ತಿದ್ದರು. ಇದ್ದಕ್ಕಿದ್ದ ಹಾಗೆ ನಾನು ಒಂದು ನದಿಯನ್ನು ಕಂಡಹಾಗಾಯಿತು. ಅದರ ಎರಡು ಪಾರ್ಶ್ವಗಳಲ್ಲಿಯೂ ವನವಿತ್ತು. ಅದರಲ್ಲಿದ್ದ ಗಿಡಮರಗಳೆಲ್ಲ ಹಸುರೇ ಹಸುರಾಗಿದ್ದುವು. ರಾಮಲಕ್ಷ್ಮಣರು ಆ ಮಾರ್ಗವಾಗಿ ಷರಟು ತೊಟ್ಟುಕೊಂಡು ಹೋಗುತ್ತಿದ್ದುದನ್ನು ನೋಡಿದೆ. ಇನ್ನೊಂದು ದಿವಸ ಕುಟೀರದ ಎದುರಿಗೆ ಅರ್ಜುನನ ರಥವನ್ನು ನೋಡಿದೆ. ಶ್ರೀಕೃಷ್ಣ ಅದರಲ್ಲಿ ಸಾರಥಿಯ ವೇಷ ಧರಿಸಿ ಕುಳಿತಿದ್ದ. ಆ ದೃಶ್ಯ ಇನ್ನೂ ನನ್ನ ಕಣ್ಣಿಗೆ ಕಟ್ಟಿದ ಹಾಗೇ ಇದೆ. ಮತ್ತೊಂದು ದಿವಸ ಕಾಮಾರಪುಕುರದಲ್ಲಿ ನಾನು ಕೀರ್ತನೆ ಕೇಳುತ್ತಿದ್ದಾಗ, ನನ್ನ ಎದುರಿಗೇ ಶ್ರೀ ಗೌರಾಂಗದೇವ ನಿಂತಿರೋದನ್ನು ನೋಡಿದೆ.

''ನನ್ನ ಸಾಧನೆಯ ಸಮಯದಲ್ಲಿ ಈ ಶರೀರದಿಂದಲೇ ಹೊರಕ್ಕೆ ಬಂದು ಒಬ್ಬ ದಿಗಂಬರ ನನ್ನೊಡನೆಯೇ ಸತತ ಇರುತ್ತಿದ್ದ. ನಾನು ಆತನೊಡನೆ ಹುಡುಗಾಟವಾಡುತ್ತಿದ್ದೆ. ಬಾಲಕನಂತೆ ವರ್ತಿಸುತ್ತಿದ್ದೆ. ಆತ ಒಬ್ಬ ಪರಮಹಂಸ. ಆ ಸಮಯದಲ್ಲಿ ಕಂಡುಬಂದ ಎಲ್ಲಾ ಭಗವಂತನ ದರ್ಶನಗಳನ್ನೂ ನಿಮಗೆ ವರ್ಣಿಸಿ ಹೇಳಲಾಗೋದಿಲ್ಲ. ಆಗ ನನಗೆ ಅಜೀರ್ಣರೋಗವಿತ್ತು. ಅವು ನನಗಾದ ಹಿನ್ನೆಲೆಯಲ್ಲಿಯೇ ನನ್ನ

ಅಜೀರ್ಣರೋಗವೂ ಪ್ರಬಲವಾಗುತ್ತಿತ್ತು. ಅದಕ್ಕಾಗಿ ಅವು ನನಗಾಗದೆ ಇರಲೆಂದು ಅವನ್ನು ನೋಡಿದೊಡನೆಯೇ ಥೂ! ಥೂ! ಅಂತ ನೆಲದ ಮೇಲೆ ಉಗುಳುತ್ತಿದ್ದೆ. ಆದರೂ ಅವು ಭೂತದೋಪಾದಿಯಲ್ಲಿ ನನ್ನನ್ನು ಹಿಂಬಾಲಿಸಿ ನನ್ನನ್ನು ಮೆಟ್ಟಿಕೊಂಡುಬಿಡುತ್ತಿದ್ದುವು. ಆಗ ಯಾವಾಗ ನೋಡಿದರೂ ಭಾವಾವಿಷ್ಟನಾಗಿಯೇ ಇರುತ್ತಿದ್ದೆ. ಹಗಲೂ ಇರುಳು ಯಾವರೀತಿಯಾಗಿ ಕಳೆದುಹೋಗುತ್ತಿತ್ತೊ ಅದು ಗೊತ್ತೇ ಆಗುತ್ತಿರಲಿಲ್ಲ. ಆ ರೀತಿಯ ದರ್ಶನವಾದ ಮಾರನೆ ದಿವಸವೇ ಕಡುತರವಾದ ಭೇದಿ ಆರಂಭವಾಗಿಬಿಡುತ್ತಿತ್ತು. ಆಗ ನನಗಾದ ಭಾವಾವೇಶಗಳೆಲ್ಲ ಕರುಳನ್ನು ಕೊರೆದುಕೊಂಡು ಹೊರಕ್ಕೆ ಬರುತ್ತಿರುವುವೊ ಏನೊ ಎಂಬಂತೆ ತೋರುತ್ತಿತ್ತು.''

ಗಿರೀಶ ನಗುತ್ತ: ''ನಾನು ನಿಮ್ಮ ಜಾತಕವನ್ನು ಪರೀಕ್ಷಿಸಿ ನೋಡುತ್ತಿದೇನೆ.''

ಶ್ರೀರಾಮಕೃಷ್ಣರು ನಗುತ್ತ: ''ನಾನು ಹುಟ್ಟಿದುದು ಫಾಲ್ಗುಣ ಶುಕ್ಲ ದ್ವಿತೀಯ. ನನ್ನ ಜನ್ಮ ರಾಶಿಯಲ್ಲಿ ರವಿ, ಚಂದ್ರ, ಬುಧರು ಇರುವುದೊಂದು ವಿನಾ ಇನ್ನು ಬೇರೆ ಮಹತ್ತಾದುದು ಏನೂ ಇಲ್ಲ.''

ಗಿರೀಶ: ''ನೀವು ಕುಂಭ ರಾಶಿಯಲ್ಲಿ ಜನವೆತ್ತಿದೀರಿ. ಶ್ರೀ ರಾಮಚಂದ್ರ ಕರ್ಕಟ ರಾಶಿಯಲ್ಲಿಯೂ, ಶ್ರೀಕೃಷ್ಣ ವೃಷಭರಾಶಿಯಲ್ಲಿಯೂ ಜನ್ಮವೆತ್ತಿದಾರೆ. ಶ್ರೀ ಚೈತನ್ಯದೇವ ಸಿಂಹರಾಶಿಯಲ್ಲಿ ಜನ್ಮತಾಳಿದಾನೆ.''

ಶ್ರೀರಾಮಕೃಷ್ಣರು: ''ನನಗೆ ಎರಡು ಆಸೆಗಳಿದ್ದುವು: ಭಕ್ತರ ರಾಜನಾಗಬೇಕು ಎಂಬುದು ಮೊದಲನೆಯದು. ಎರಡನೆಯದು ನಾನೊಬ್ಬ ಒಣ ಸಾಧು ಆಗಕೂಡದೆಂಬುದು.''

ಗಿರೀಶ ನಗುತ್ತ: ''ನೀವು ಸಾಧನೆ ಮಾಡಬೇಕಾಗಿ ಬಂತಲ್ಲ ಏಕೆ?''

ಶ್ರೀರಾಮಕೃಷ್ಣರು ನಗುತ್ತ: ''ಶಿವನನ್ನು ತನ್ನ ಪತಿಯನ್ನಾಗಿ ಪಡೆಯಲು ಭಗವತಿಗೂ ಅನೇಕ ಕಠೋರ ಸಾಧನೆಗಳನ್ನು ಮಾಡಬೇಕಾಗಿ ಬಂತು. ಆಕೆ ಪಂಚತಪ, ಚಳಿಗಾಲದಲ್ಲಿ ಕುತ್ತಿಗೆವರೆಗೆ ನೀರಿನಲ್ಲಿ ನಿಂತಿರೋದು, ಎವೆಯಿಕ್ಕದೆ ಸೂರ್ಯನನ್ನೇ ನೋಡುತ್ತಿರೋದು ಇವೇ ಮೊದಲಾದ ಸಾಧನೆಗಳನ್ನು ಮಾಡಿದಳು. ಭಗವಾನ್ ಶ್ರೀಕೃಷ್ಣನೂ ರಾಧಾಯಂತ್ರವನ್ನು ಆಧಾರವಾಗಿಟ್ಟುಕೊಂಡು ಅನೇಕ ಸಾಧನೆಗಳನ್ನು ಮಾಡಿದನು. ಯಂತ್ರ ಎಂಬುದು ಬ್ರಹ್ಮಯೋನಿಯ ಪ್ರತೀಕ. ಅದರ

ಪೂಜೆಯೋ ಭಗವಂತನ ಪೂಜೆ ಮತ್ತು ಧ್ಯಾನ. ಈ ಬ್ರಹ್ಮಯೋನಿಯಿಂದ ಕೋಟಿ ಕೋಟಿ ಬ್ರಹ್ಮಾಂಡಗಳು ಉತ್ಪನ್ನವಾಗುತ್ತಿವೆ. ಬಹಳ ಗುಹ್ಯ ವಾದ ವಿಷಯ. ಬಿಲ್ವಮರದ ಕೆಳಗೆ ಅನೇಕ ದರ್ಶನಗಳಾಗುತ್ತಿದ್ದುವು.

"ನಾನು ತಂತ್ರಶಾಸ್ತ್ರಾನುಸಾರ ಆ ಮರದ ಕೆಳಗೆ ಅನೇಕ ಸಾಧನೆ ಗಳನ್ನು ಮಾಡಿದೆ. ಮನುಷ್ಯನ ತಲೆಬುರುಡೆ ಇವೇ ಮೊದಲಾದುವು ಬೇಕಾಗಿದ್ದುವು. ಭೈರವಿ ಬ್ರಾಹ್ಮಣಿ ಎಲ್ಲವನ್ನೂ ನನಗಾಗಿ ಸಂಗ್ರಹಿಸು ತ್ತಿದ್ದಳು. ಆಗ ನಾನು ಅನೇಕ ಆಸನಗಳನ್ನೂ ಅಭ್ಯಸಿಸಿದೆ.

"ನನಗೆ ಇನ್ನೊಂದು ವಿಚಿತ್ರವಾದ ಅನುಭವವಾಗುತ್ತಿತ್ತು: ಎಂದಾದರು ಸ್ವಲ್ಪ ಅಹಂಕಾರಿಯಾಗಿ ವರ್ತಿಸಿದೆನೆಂದರೆ, ಮಾರನೆ ದಿನವೇ ರೋಗಗ್ರಸ್ತನಾಗುತ್ತಿದ್ದೆ."

ಪರಮಹಂಸರ ಬಾಯಿಂದ ಬಂದ ಈ ಅಸದೃಶ ಅನುಭವಗಳನ್ನು ಕೇಳಿ ಮಾಸ್ಟರ್ ಆಶ್ಚರ್ಯಚಕಿತನಾಗಿ ತೆರೆಯ ಮೇಲಿನ ಗೊಂಬೆಯೋ ಪಾದಿಯಲ್ಲಿ ಕುಳಿತುಕೊಂಡಿದಾನೆ. ಉಳಿದ ಭಕ್ತರೂ ಸ್ತಂಭೀಭೂತರಾಗಿ ಕುಳಿತಿದಾರೆ. ಕೊಠಡಿಯಲ್ಲಿ ನಿಶ್ಶಬ್ದತೆ ಸುಮ್ಮನೆ ತಾಂಡವವಾಡುತ್ತಿದೆ.

ತುಳಸಿ ಮಾಸ್ಟರನ್ನು ತೋರಿಸಿ: "ಈತ ನಗುವುದೇ ಇಲ್ಲವಲ್ಲ."

ಶ್ರೀರಾಮಕೃಷ್ಣರು: "ಅಂತರ್ಯದಲ್ಲೇ ನಗುತ್ತಾನೆ. ಫಲ್ಗು ನದಿಯ ಮೇಲ್ಭಾಗ ಮರಳಿನಿಂದ ತುಂಬಿಕೊಂಡಿದೆ. ಆದರೆ ಅದನ್ನು ಸ್ವಲ್ಪ ಬಗೆದುನೋಡಿದರೆ ನೀರು ಬಂದುಬಿಡುತ್ತದೆ.

(ಮಾಸ್ಟರಿಗೆ) "ನೀನು ನಾಲಗೆಯನ್ನು ಉಜ್ಜುತ್ತಿಲ್ಲವೇನು? ದಿವಸವೂ ನಾಲಗೆಯನ್ನು ಉಜ್ಜಬೇಕು."

ಬಲರಾಮ: "ಒಂದು ವಿಷಯ. ಪೂರ್ಣ ನಿಮ್ಮ ವಿಷಯ ವಾಗಿ ಮಾಸ್ಟರ ಮೂಲಕ ಬಹಳವಾಗಿ ಕೇಳಿದಾನೆ.—"

ಶ್ರೀರಾಮಕೃಷ್ಣರು: "ಬಹುಶಃ ನನ್ನ ಮೊಟ್ಟಮೊದಲ ಆಧ್ಯಾತ್ಮಿಕ ಅನುಭವಗಳ ವಿಷಯವಾಗಿ ಇರಬೇಕು."

ಬಲರಾಮ: "ಪೂರ್ಣ ಸ್ವಾಭಾವಿಕವಾಗಿಯೇ ಸಿದ್ಧನಾಗಿರೋ ದಾದರೆ, ಮಾಸ್ಟರಿಂದ ಆತನಿಗೆ ದೊರೆಯೋ ಸಹಾಯವೇನು?"

ಶ್ರೀರಾಮಕೃಷ್ಣರು: "ಆತ ಹೇತು ಮಾತ್ರ."

ಈಗ ಘಂಟೆ ಒಂಬತ್ತು. ಪರಮಹಂಸರು ಇನ್ನೇನು ದಕ್ಷಿಣೇಶ್ವರಕ್ಕೆ ಹೊರಡೋದರಲ್ಲಿದಾರೆ. ಅದಕ್ಕೆ ತಕ್ಕ ವ್ಯವಸ್ಥೆಗಳಾಗುತ್ತಿವೆ. ಬಾಗ್

ಬಸಾರಿನಲ್ಲಿ ಒಂದು ದೋಣಿ ಇವರಿಗಾಗಿ ಸಿದ್ಧವಾಗಿ ನಿಂತಿದೆ. ಭಕ್ತರೆಲ್ಲರೂ ಪರಮಹಂಸರಿಗೆ ಪ್ರಣಾಮಮಾಡಿದರು.

ಪರಮಹಂಸರು ಒಬ್ಬಿಬ್ಬರು ಭಕ್ತರೊಡನೆ ದೋಣಿಯಲ್ಲಿ ಕುಳಿತುಕೊಂಡರು. ಗೋಪಾಲನ ತಾಯಿ ಅದೇ ದೋಣಿಯನ್ನು ಹತ್ತಿದಳು. ಆಕೆ ದಕ್ಷಿಣೇಶ್ವರದಲ್ಲಿ ಮಧ್ಯಾಹ್ನದ ವರೆಗೆ ಇದ್ದು ಸಾಯಂಕಾಲ ಕಾಮಾರಹಾಟಿಗೆ ಹೋಗುತ್ತಾಳೆ. ಬಹುಮಟ್ಟಿಗೆ ರಾಖಾಲನೇ ದಕ್ಷಿಣೇಶ್ವರದಲ್ಲಿ ಉಪಯೋಗಿಸುತ್ತಿದ್ದ ಒಂದು ಕ್ಯಾಂಪ್‌ಕಾಟನ್ನು ರಿಪೇರಿಗಾಗಿ ಕಲ್ಕತ್ತಕ್ಕೆ ಕಳುಹಿಸಲ್ಪಟ್ಟಿತ್ತು. ಅದನ್ನೂ ಈಗ ದೋಣಿಗೆ ತಂದು ಹಾಕಿದರು. ದೋಣಿ ದಕ್ಷಿಣೇಶ್ವರಕ್ಕೆ ಹೊರಟಿತು.

ಇಂದು ಒಳ್ಳೆಯ ದಿನವಾಗಿರಲಿಲ್ಲ ಪ್ರಯಾಣವನ್ನು ಬದಲಾಯಿಸಿಕೊಳ್ಳಲು ಮತ್ತೆ ಅವರು ಮುಂದಿನ ಶನಿವಾರ ಬಲರಾಮನ ಮನೆಗೆ ಶುಭಾಗಮನಮಾಡುತ್ತಾರೆ.



೪೩

# ನಂದವಸುವಿನ ಮನೆಗೆ ಆಗಮನ

೨೮ನೆ ಜುಲೈ ೧೮೮೫, ಆಷಾಢ ಕೃಷ್ಣ ಪಾಡ್ಯಮಿ, ಮಂಗಳವಾರ.

ಪರಮಹಂಸರು ಬಲರಾಮನ ಬೈಠಕ್‌ಖಾನೆಯಲ್ಲಿ ಭಕ್ತರೊಡನೆ ಕುಳಿತುಕೊಂಡಿದಾರೆ. ವಿನೋದ, ರಾಖಾಲ, ಚಿಕ್ಕ ನರೇನ, ಮಾಸ್ಟರ್ ಇವರು ಅವರ ಹತ್ತಿರ ಕುಳಿತಿದಾರೆ. ಈಗ ಘಂಟೆ ಸುಮಾರು ಅಪರಾಹ್ನ ಮೂರು. ಪರಮಹಂಸರು ಬೆಳಗ್ಗೇನೆ ಬಲರಾಮನ ಮನೆಗೆ ಬಂದು ಅಲ್ಲೇ ತಮ್ಮ ಮಧ್ಯಾಹ್ನದ ಊಟವನ್ನು ಮುಗಿಯಿಸಿಕೊಂಡಿದಾರೆ. ಬಲರಾಮನ ಮನೆಯಲ್ಲಿ ಶ್ರೀ ಜಗನ್ನಾಥನ ನಿತ್ಯಪೂಜೆ ನಡೆಯುತ್ತಿದೆ. ಅದಕ್ಕಾಗಿಯೇ ಪರಮಹಂಸರು ಹೇಳುತ್ತಿದ್ದರು, ಆತನ ಮನೆ ಅನ್ನ ಶುದ್ಧ ಅನ್ನ ಅಂತ.

ನಂದವಸುವಿನ ಮನೆಯಲ್ಲಿ ಭಗವಂತನ ಅನೇಕ ಪಟಗಳು ಇವೆ ಎಂಬುದಾಗಿ ನಾರಾಯಣನೇ ಮೊದಲಾದ ಭಕ್ತರು ಪರಮಹಂಸರಿಗೆ ತಿಳಿಸಿದ್ದರು. ನಂದವಸು ಒಬ್ಬ ಕಲೋಪಾಸಕ. ಆತನ ಮನೆ ಇದ್ದುದು ಬಾಗ್‌ಬಸಾರಿನಲ್ಲಿ. ಪರಮಹಂಸರು ಇಂದಿನ ಅಪರಾಹ್ನ ಆತನ ಮನೆಗೆ ಹೋಗಿ ಆ ಪಟಗಳನ್ನೆಲ್ಲ ನೋಡಿಬರುತ್ತಾರೆ. ಒಬ್ಬ ಬ್ರಾಹ್ಮಣ ಭಕ್ತೆ ನಂದವಸುವಿನ ಮನೆಯ ಹತ್ತಿರವೆ ವಾಸಿಸುತ್ತಿದಾಳೆ. ಪರಮಹಂಸರ ದರ್ಶನ ಪಡೆಯಲು ಆಕೆ ಆಗಾಗ ದಕ್ಷಿಣೇಶ್ವರಕ್ಕೆ ಬರುತ್ತಿದ್ದಳು. ತನ್ನ ಏಕಮಾತ್ರ ಪುತ್ರಿಯನ್ನು ಕಳೆದುಕೊಂಡಿರೋದರಿಂದ ಅತ್ಯಂತ ದುಃಖ ಪೀಡಿತಳಾಗಿದಾಳೆ. ಆಕೆ ಅತ್ಯಂತ ವ್ಯಾಕುಲತೆಯಿಂದ ಪರಮಹಂಸರು ತನ್ನ ಮನೆಗೆ ಕಾಲುಹಾಕಿಹೋಗಬೇಕೆಂದು ಅವರನ್ನು ಬಹಳವಾಗಿ ಪ್ರಾರ್ಥನೆಮಾಡಿಕೊಂಡಿದ್ದಳು. ಇಂದು ಆಕೆಯ ಮನೆಗೆ ಹೋಗಬೇಕಾಗಿದೆ. ಇನ್ನೊಬ್ಬ ಭಕ್ತೆ, ಗಣುವಿನ ತಾಯಿ, ಆಕೆಯ ಮನೆಗೂ ಹೋಗಬೇಕಾಗಿದೆ.

ತನ್ನ ಪರೀಕ್ಷೆ ಹತ್ತಿರ ಬಂದಿರೋದರಿಂದ ಆಗಾಗ ಬಂದು ಪರಮಹಂಸರನ್ನು ನೋಡಲಾಗೋದಿಲ್ಲವೆಂದು ಚಿಕ್ಕ ನರೇನ ಪರಮಹಂಸರಿಗೆ ತಿಳಿಸಿದ್ದ.

ಶ್ರೀರಾಮಕೃಷ್ಣರು ಚಿಕ್ಕ ನರೇನನಿಗೆ: "ನಿನ್ನನ್ನು ಕರೆಯಲು ನಾನು ಯಾರನ್ನೂ ಕಳುಹಿಸಿರಲಿಲ್ಲವಲ್ಲ."

ಚಿಕ್ಕ ನರೇನ ನಗುತ್ತ ನಗುತ್ತ: "ಏನೊ ಬಂದದ್ದಾಯಿತು. ಈಗ ಮಾಡೋದೇನು ?"

ಶ್ರೀರಾಮಕೃಷ್ಣರು: "ನೋಡಪ್ಪ, ನಿನ್ನ ವ್ಯಾಸಂಗಕ್ಕೆ ತೊಂದರೆ ಮಾಡಲು ನನಗೆ ಇಚ್ಛೆಯಿಲ್ಲ. ಸಮಯ ದೊರೆತಾಗ ಮಾತ್ರ ಬಂದು ನನ್ನನ್ನು ನೋಡು."

ಪರಮಹಂಸರು ಈ ಮಾತುಗಳನ್ನು ಒಂದು ಸ್ವಲ್ಪ ಮುನಿಸಿಕೊಂಡವರ ಹಾಗೆ ಮಾತನಾಡಿದರು.

ಪರಮಹಂಸರು ನಂದವಸುವಿನ ಮನೆಗೆ ಹೊರಡಲು ಸಿದ್ಧರಾಗಿದಾರೆ. ಪಲ್ಲಕ್ಕಿ ಬಂದು ನಿಂತಿತು. ಭಗವಂತನ ಹೆಸರನ್ನು ಜಪಿಸುತ್ತ ಜಪಿಸುತ್ತ ಪಲ್ಲಕ್ಕಿಯನ್ನು ಹತ್ತಿದರು. ಅವರು ಕಪ್ಪುಮೆರುಗುಹಾಕಿರೋ ಪಾದರಕ್ಷೆಗಳನ್ನು ಕಾಲಿಗೆ ಹಾಕಿಕೊಂಡಿದ್ದರು, ಕೆಂಪು ಅಂಚಿನ ಪಂಚೆಯನ್ನು ಉಟ್ಟಿದ್ದರು. ಮೈಮೇಲೆ ಉತ್ತರೀಯವಿರಲಿಲ್ಲ. ಮಾಸ್ಟರ್ ಅವರ ಪಾದರಕ್ಷೆಗಳನ್ನು ಪಲ್ಲಕ್ಕಿಯಲ್ಲಿ ಒಂದು ಕಡೆ ಇಟ್ಟ. ಆತ ಕಾಲು ನಡಗೆಯಲ್ಲಿ ಪಲ್ಲಕ್ಕಿಯ ಹಿಂದೆಯೇ ಹೊರಟ. ಪರೇಶನೂ ಪಲ್ಲಕ್ಕಿಯನ್ನು ಹಿಂಬಾಲಿಸಿದ.

ಪಲ್ಲಕ್ಕಿ ನಂದವಸುವಿನ ಮನೆಯ ಗೇಟಿನೊಳಕ್ಕೆ ಬಂದಿತು. ಬಳಿಕ ಮನೆಯ ಮುಂದಿದ್ದ ವಿಶಾಲ ಪ್ರದೇಶವನ್ನು ದಾಟಿ ಮನೆಯನ್ನು ತಲುಪಿತು. ಮನೆಯವರೆಲ್ಲರೂ ಪರಮಹಂಸರನ್ನು ಎದುರುಗೊಂಡು ಅವರಿಗೆ ಪ್ರಣಾಮಮಾಡಿದರು. ತಮ್ಮ ಪಾದರಕ್ಷೆಗಳನ್ನು ತೆಗೆದುಕೊಡುವಂತೆ ಮಾಸ್ಟರಿಗೆ ಹೇಳಿ, ಅವರು ಪಲ್ಲಕ್ಕಿಯಿಂದ ಕೆಳಕ್ಕೆ ಇಳಿದು ಮೇಲುಗಡೆ ಇದ್ದ ಒಂದು ವಿಸ್ತಾರವಾದ ಹಾಲಿಗೆ ಬಂದರು. ಅದನ್ನು ಬಹಳ ವಿಸ್ತಾರವಾದ ಒಂದು ಕೊಠಡಿ ಅಂತಲೇ ಹೇಳಬಹುದು. ಅದರ ನಾಲ್ಕು ಕಡೆಯಲ್ಲಿಯೂ ದೇವದೇವಿಯರ ಪಟಗಳನ್ನು ತೂಗಹಾಕಿದ್ದರು.

ನಂದವಸು ಮತ್ತು ಆತನ ಸಹೋದರ ಪಶುಪತಿ ಇಬ್ಬರೂ ಪರಮಹಂಸರಿಗೆ ಪ್ರಣಾಮಮಾಡಿದರು. ಪಲ್ಲಕ್ಕಿಯ ಹಿಂದೆ ಬರುತ್ತಿದ್ದ ಪರಮಹಂಸರ ಭಕ್ತರೂ ಆ ಹಾಲಿಗೆ ಹತ್ತಿಬಂದರು. ಗಿರೀಶನ ಸಹೋದರ ಅತುಲ ಬಂದಿದಾನೆ. ಪ್ರಸನ್ನ ಶ್ರೀರಾಮಕೃಷ್ಣರ ಭಕ್ತ. ಆತನ ತಂದೆ

ಆಗಾಗ ನಂದವಸುವಿನ ಮನೆಗೆ ಬಂದುಹೋಗೋ ವಾಡಿಕೆ. ಆತನೂ ಅಲ್ಲಿಗೆ ಬಂದಿದಾನೆ.

ಈಗ ಪರಮಹಂಸರು ಪಟಗಳನ್ನು ನೋಡಲು ಮೇಲಕ್ಕೆ ಎದ್ದರು. ಮಾಸ್ಟರ್ ಮತ್ತು ಇನ್ನು ಕೆಲವು ಭಕ್ತರು ಅವರ ಸುತ್ತ ನಿಂತಿದಾರೆ. ಪಶುಪತಿ ಅವರೆಲ್ಲರಿಗೂ ಯಾವ ಯಾವ ಪಟ ಏನೇನು ಎಂಬುದನ್ನು ವಿವರಿಸುತ್ತಿದಾನೆ.

ಮೊದಲನೆಯದು ಚತುರ್ಭುಜ ಮಹಾವಿಷ್ಣುವಿನ ಪಟ. ಅದರ ಕಡೆ ದೃಷ್ಟಿಹಾಕಿದೊಡನೆಯೇ ಪರಮಹಂಸರು ಭಾವಾವಿಷ್ಟರಾಗಿಬಿಟ್ಟಿದಾರೆ. ನಿಂತುಕೊಂಡಿದ್ದವರು ಹಾಗೆಯೇ ಕೆಳಗೆ ಕುಳಿತುಕೊಂಡರು.

ಎರಡನೆಯದು, ಭಕ್ತವತ್ಸಲ ಶ್ರೀರಾಮಚಂದ್ರನ ಪಟ. ಶ್ರೀರಾಮ ಹನುಮಂತನ ತಲೆಯ ಮೇಲೆ ಕೈಯಿಟ್ಟು ಆಶೀರ್ವಾದಮಾಡುತ್ತಿದಾನೆ. ಹನುಮಂತನ ದೃಷ್ಟಿ ಶ್ರೀರಾಮಚಂದ್ರನ ಪಾದಪದ್ಮಗಳ ಕಡೆಗೆ ತಿರುಗಿದೆ. ಪರಮಹಂಸರು ಬಹಳ ಹೊತ್ತಿನವರೆಗೆ ಈ ಪಟವನ್ನು ನೋಡಿದರು. ಅವರು ಭಾವದಲ್ಲಿ ಹೇಳುತ್ತಿದಾರೆ, "ಆಹ! ಆಹ!" ಅಂತ.

ಮೂರನೆಯದು, ಶ್ರೀಕೃಷ್ಣ ಕೊಳಲನ್ನು ಊದುತ್ತ ಕದಂಬ ಮರದ ಕೆಳಗೆ ನಿಂತುಕೊಂಡಿರೋ ಪಟ.

ನಾಲ್ಕನೆಯದು, ವಾಮನಾವತಾರದ ಪಟ. ಛತ್ರಿಯನ್ನು ತಲೆಯ ಮೇಲೆ ಹಿಡಿದುಕೊಂಡು ವಾಮನ ಬಲಿಯ ಯಜ್ಞಕ್ಕೆ ಹೋಗುತ್ತಿದಾನೆ. ಪರಮಹಂಸರು ಅಂದರು, "ವಾಮನ!" ಅಂತ. ಇದರ ಕಡೆಯೂ ನೆಟ್ಟದೃಷ್ಟಿಯಿಂದ ನೋಡುತ್ತಿದಾರೆ.

ಬಳಿಕ ಪರಮಹಂಸರು ನೃಸಿಂಹನ ಪಟದ ಕಡೆ ದೃಷ್ಟಿಹಾಕಿದನಂತರ ಗೋವಿನ ಮಂದೆ ಮಧ್ಯೆ ನಿಂತಿರೋ ಶ್ರೀಕೃಷ್ಣನ ಪಟವನ್ನು ನೋಡುತ್ತಿದಾರೆ. ಅದರಲ್ಲಿ ಶ್ರೀಕೃಷ್ಣ ತನ್ನ ಗೋಪಾಲಕ ಗೆಳೆಯರೊಡನೆ ಬೃಂದಾವನದ ಹತ್ತಿರ ಹರಿಯೋ ಯಮುನಾ ದಡದಲ್ಲಿ ಗೋವುಗಳನ್ನು ಮೇಯಿಸುತ್ತಿದಾನೆ. ಮಾಸ್ಟರ್ ಸಂಭ್ರಮದಿಂದ ಹೇಳಿದ, "ಇದು ಬಹಳ ಸುಂದರವಾದ ಪಟ!" ಅಂತ.

ಪರಮಹಂಸರು ಬಳಿಕ ಧೂಮವತಿಯ, ಷೋಡಶಿಯ, ಭುವನೇಶ್ವರಿಯ, ತಾರೆಯ, ಕಾಳಿಯ ಪಟಗಳನ್ನು ಒಂದೊಂದಾಗಿ ನೋಡಿ ಹೇಳುತ್ತಿದಾರೆ, "ಇವೆಲ್ಲ ಉಗ್ರಮೂರ್ತಿಗಳು. ಇವನ್ನು ಮನೆಯಲ್ಲಿ ಇಡ

ಕೂಡದು. ಇವನ್ನು ಮನೆಯಲ್ಲಿ ಇಟ್ಟರೆ ನಿತ್ಯಪೂಜೆ ಮಾಡಬೇಕಾಗುತ್ತದೆ. ಬರಿದೆ ಇವನ್ನು ಗೋಡೆಗೆ ತೂಗಹಾಕಿ ಇಟ್ಟುಕೊಂಡಿರಬೇಕಾದರೆ, ನೀವು ಒಳ್ಳೆ ಅದೃಷ್ಟಶಾಲಿಗಳೇ ಆಗಿರಬೇಕು" ಅಂತ.

ಬಳಿಕ ಅನ್ನಪೂರ್ಣೆಯ ಪಟವನ್ನು ನೋಡಿದೊಡನೆಯೆ ಪರಮಹಂಸರು ಭಾವಾವೇಶರಾಗಿ ಹೇಳುತ್ತಿದಾರೆ, "ಭೇಷ್! ಭೇಷ್!" ಅಂತ.

ಮುಂದಿನದು ರಾಧಿಕೆ ದೊರೆತನ ಮಾಡುತ್ತಿರೋದು. ನಿಕುಂಜ ವನದಲ್ಲಿ ಸಖಿಯರನ್ನು ಸುತ್ತುಗಟ್ಟಿಕೊಂಡು ಸಿಂಹಾಸನದ ಮೇಲೆ ಕುಳಿತುಕೊಂಡಿದಾಳೆ. ಶ್ರೀಕೃಷ್ಣ ಆ ವನದ ಮಹಾ ದ್ವಾರದಲ್ಲಿ ದ್ವಾರಪಾಲಕನಾಗಿ ಕುಳಿತಿದಾನೆ.

ಮುಂದಿನದು ರಾಧಾಕೃಷ್ಣರು ಉಯ್ಯಾಲೆಯಾಡುತ್ತಿರೋ ಪಟ. ಅದರ ಮುಂದಿನದು ಗ್ಲಾಸ್‌ಕೇಸಿನ ಒಳಗಿಟ್ಟಿರೋ ಸರಸ್ವತಿಯ ಪಟ. ಸರಸ್ವತಿ ಕೈಯಲ್ಲಿ ವೀಣೆ ಹಿಡಿದು ಭಾವಾವಿಷ್ಟಳಾಗಿ ರಾಗ ರಾಗಿಣಿಗಳನ್ನು ಹಾಡುತ್ತಿದಾಳೆ. ಪರಮಹಂಸರು ಇದನ್ನೂ ಬಹಳ ಹೊತ್ತಿನವರೆಗೆ ನಿಂತು ನೋಡಿದರು.

ಪಟಗಳನ್ನೆಲ್ಲ ನೋಡಿಯಾದನಂತರ ಪರಮಹಂಸರು ನಂದವಸುವಿನ ಹತ್ತಿರಕ್ಕೆ ಬಂದು, ಅಲ್ಲಿ ನಿಂತುಕೊಂಡಿದ್ದ ಹಾಗೇ ಆತನಿಗೆ ಹೇಳುತ್ತಿದಾರೆ, "ಇಂದು ನನಗೆ ಬಹಳ ಆನಂದವಾಗಿಬಿಟ್ಟಿತು. ಭೇಷ್! ನೀನು ನಿಜವಾಗಿಯೂ ಹಿಂದು! ಐರೋಪ್ಯರ ಪಟಗಳನ್ನಿಡದೆ ಇವನ್ನೇ ಇಟ್ಟಿದೀಯೆ. ಬಹಳ ಆಶ್ಚರ್ಯ!" ಅಂತ.

ನಂದವಸು ಇನ್ನೂ ಕುಳಿತೇ ಇದ್ದ. ಆತ ಹೇಳಿದ, "ದಯವಿಟ್ಟು ಕುಳಿತುಕೊಳ್ಳಿ. ನಿಂತುಕೊಂಡೆ ಇದೀರಲ್ಲ ಏಕೆ?" ಅಂತ.

ಶ್ರೀರಾಮಕೃಷ್ಣರು ಕುಳಿತುಕೊಂಡು: "ಈ ಪಟಗಳೆಲ್ಲ ಬಹಳ ದೊಡ್ಡ ದೊಡ್ಡವು. ನೀನು ಒಳ್ಳೆ ಹಿಂದು."

ನಂದವಸು: "ನನ್ನ ಹತ್ತಿರ ಐರೋಪ್ಯರ ಪಟಗಳೂ ಇವೆ."

ಶ್ರೀರಾಮಕೃಷ್ಣರು ನಗುತ್ತ: "ಅವು ಇಂಥವುಗಳಲ್ಲದಿರಬೇಕು. ಅವುಗಳ ಕಡೆ ನಿನ್ನ ಮನಸ್ಸು ಅಷ್ಟೊಂದಾಗಿ ಎಳೆಯುತ್ತಿಲ್ಲ."

ಕೇಶವಸೇನನ ನವವಿಧಾನ ಎಂಬುದರ ಸಂಬಂಧವಾದ ಒಂದು ಪಟವನ್ನು ಗೋಡೆಯ ಮೇಲೆ ನೇತುಹಾಕಿತ್ತು. ಅದನ್ನು ಸುರೇಶಮಿತ್ರ

ಬರೆಯಿಸಿದ್ದ. ಆತ ಪರಮಹಂಸರ ಒಬ್ಬ ಪ್ರಿಯ ಭಕ್ತ. ಅದರಲ್ಲಿ ಪರಮಹಂಸರು ಕೇಶವಸೇನನಿಗೆ ತೋರಿಸುತ್ತಿದಾರೆ: ಭಿನ್ನ ಭಿನ್ನ ಮತಾವಲಂಬಿಗಳು ಭಿನ್ನ ಭಿನ್ನ ಮಾರ್ಗದ ಮೂಲಕ ಆ ಒಂದೇ ಭಗವಂತನ ಕಡೆಗೆ ಮುಂದುವರಿಯುತ್ತಿದಾರೆ; ಮುಟ್ಟೋ ಗುರಿ ಒಂದೇ, ಆದರೆ ಪಥಗಳು ಮಾತ್ರ ವಿವಿಧ ಅಂತ.

ಶ್ರೀರಾಮಕೃಷ್ಣರು: "ಅದು ಸುರೇಂದ್ರ ಬರೆಯಿಸಿದ ಪಟ."

ಪ್ರಸನ್ನನ ತಂದೆ ನಗುತ್ತ: "ನೀವೂ ಅದರೊಳಗಿದೀರಿ."

ಶ್ರೀರಾಮಕೃಷ್ಣರು ನಗುತ್ತ: "ಅದು ಒಂದು ತರದ್ದು. ಅದರೊಳಗೆ ಎಲ್ಲಾ ಇದೆ. ಅದು ನವೀನ ಕಾಲದ ಭಾವವನ್ನು ಸೂಚಿಸುತ್ತಿದೆ."

ಹೀಗೆ ಮಾತನಾಡುತ್ತ ಮಾತನಾಡುತ್ತ ಇದ್ದಹಾಗೆಯೆ ಪರಮಹಂಸರು ಭಾವಾವಿಷ್ಟರಾಗಿ ಜಗನ್ಮಾತೆಯೊಡನೆ ಮಾತಾಡುತ್ತಿದಾರೆ. ಕೆಲವು ನಿಮಿಷಗಳಾದ ನಂತರ ಉನ್ಮತ್ತರೋಪಾದಿಯಲ್ಲಿ ಹೇಳುತ್ತಿದಾರೆ, "ನನಗೆ ಪ್ರಜ್ಞೆ ತಪ್ಪಿಹೋಗಿಲ್ಲ" ಅಂತ. ಮನೆಯ ಕಡೆ ನೋಡುತ್ತ ಹೇಳುತ್ತಿದಾರೆ, "ಇದೇನೊ ಒಂದು ದೊಡ್ಡ ಭವನ. ಇದರೊಳಗೆ ಏನಿದೆ? ಇಟ್ಟಿಗೆ, ಮರ, ಮಣ್ಣು!" ಅಂತ.

ಸ್ವಲ್ಪ ಹೊತ್ತಾದನಂತರ ಹೇಳುತ್ತಿದಾರೆ, "ದೇವದೇವಿಯರ ಈ ಪಟಗಳನ್ನೆಲ್ಲ ನೋಡಿ ನನಗೆ ಬಹಳ ಆನಂದವಾಗಿಬಿಟ್ಟಿದೆ" ಅಂತ. ಮತ್ತೆ ಹೇಳುತ್ತಿದಾರೆ, "ಕಾಳಿ, ತಾರಾ ಇವರೇ ಮೊದಲಾದ ಉಗ್ರಮೂರ್ತಿಗಳ ಪಟಗಳನ್ನು ಸುಮ್ಮನೆ ಮನೆಯಲ್ಲಿ ಇಟ್ಟುಕೊಂಡಿರುವುದು ಒಳ್ಳೆಯದಲ್ಲ; ಇಟ್ಟುಕೊಂಡರೆ ಅವಕ್ಕೆ ನಿತ್ಯಪೂಜೆಯನ್ನು ಮಾಡಬೇಕಾಗುತ್ತದೆ" ಅಂತ.

ಪಶುಪತಿ ನಗುತ್ತ: "ಆಕೆ ಎಷ್ಟು ಕಾಲದವರೆಗೆ ಅವುಗಳನ್ನೆಲ್ಲ ನಡೆಯಿಸಿಕೊಂಡು ಹೋಗುವಳೊ, ಅಷ್ಟುಕಾಲದವರೆಗೆ ಅವು ನಡೆದುಕೊಂಡು ಹೋಗುತ್ತವೆ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಆದರೆ ಭಗವಂತನಲ್ಲಿ ಮನಸ್ಸನ್ನಿಡೋದು ಮೇಲು. ಆತನನ್ನು ಮರೆತಿರೋದು ಒಳ್ಳೆಯದಲ್ಲ."

ನಂದವಸು: "ಹಾಗೆ ಮಾಡಬೇಕೆಂಬ ಬುದ್ಧಿ ಎಲ್ಲಿ ನಮಗೆ?"

ಶ್ರೀರಾಮಕೃಷ್ಣರು: "ಆತನ ಕೃಪೆ ಒದಗಿತು ಎಂದರೆ ಅದು ತಾನಾಗೆ ಬರುತ್ತದೆ."

ನಂದವಸು: "ಆತನ ಕೃಪೆ ಎಲ್ಲಿ ಬಂದೊದಗುತ್ತದೆ? ಕೃಪೆ ಮಾಡೋ ಶಕ್ತಿ ನಿಜವಾಗಿ ಆತನಿಗಿದೆಯೇನು?"

ಶ್ರೀರಾಮಕೃಷ್ಣರು: "ಓಹೋ, ನೀನೂ ಪಂಡಿತರ ಹಾಗೆ ಯೋಚಿಸುತ್ತಿದ್ದೀಯೆ: ಕರ್ಮಕ್ಕೆ ತಕ್ಕಂತೆ ಫಲ ಅಂತ. ಈ ಭಾವನೆಗಳನ್ನು ತ್ಯಜಿಸಿಬಿಡು. ಭಗವಂತನಲ್ಲಿ ಶರಣಾಗತನಾದರೆ ಕರ್ಮ ಕ್ಷಯವಾಗಿ ಬಿಡುತ್ತದೆ. ನಾನು ಕೈಯಲ್ಲಿ ಹೂವನ್ನು ಹಿಡಿದು ಭಗವತಿಗೆ ಪ್ರಾರ್ಥನೆ ಮಾಡುತ್ತಿದ್ದೆ, 'ತಾಯೇ, ಇಗೋ ತೆಗೆದುಕೊ ನಿನ್ನ ಪಾಪವನ್ನ; ಇಗೋ ತೆಗೆದುಕೊ ನಿನ್ನ ಪುಣ್ಯವನ್ನ. ನನಗೆ ಯಾವುದೂ ಬೇಡ; ಶುದ್ಧ ಭಕ್ತಿಯನ್ನು ಮಾತ್ರ ಕರುಣಿಸು. ಇಗೋ ತೆಗೆದುಕೊ ನಿನ್ನ ಒಳ್ಳೆಯದನ್ನ; ಇಗೋ ತೆಗೆದುಕೊ ನಿನ್ನ ಕೆಟ್ಟದನ್ನ. ನನಗೆ ಒಳ್ಳೆಯದು ಕೆಟ್ಟದು ಯಾವುದೂ ಬೇಡ; ಶುದ್ಧ ಭಕ್ತಿಯನ್ನು ಮಾತ್ರ ನೀಡು. ಇಗೋ ತೆಗೆದುಕೊ ನಿನ್ನ ಧರ್ಮವನ್ನ; ಇಗೋ ತೆಗೆದುಕೊ ನಿನ್ನ ಅಧರ್ಮವನ್ನ. ನನಗೆ ಧರ್ಮಾಧರ್ಮ ಯಾವುದೂ ಬೇಡ; ಶುದ್ಧ ಭಕ್ತಿಯನ್ನು ಮಾತ್ರ ಕರುಣಿಸು. ಇಗೋ ತೆಗೆದುಕೊ ನಿನ್ನ ಜ್ಞಾನವನ್ನ; ಇಗೋ ತೆಗೆದುಕೊ ನಿನ್ನ ಅಜ್ಞಾನವನ್ನ. ನನಗೆ ಜ್ಞಾನಾಜ್ಞಾನ ಯಾವುದೂ ಬೇಕಾಗಿಲ್ಲ; ಕೇವಲ ಶುದ್ಧಭಕ್ತಿಯನ್ನು ಕೃಪೆಮಾಡು. ಇಗೋ ನಿನ್ನ ಶುಚಿ; ಇಗೋ ನಿನ್ನ ಅಶುಚಿ. ನನಗೆ ಶುದ್ಧ ಭಕ್ತಿಯನ್ನು ಮಾತ್ರ ನೀಡು' ಅಂತ."

ನಂದವಸು: "ಶಾಸನವನ್ನು ಉಲ್ಲಂಘನೆ ಮಾಡಬಲ್ಲನೆ?"

ಶ್ರೀರಾಮಕೃಷ್ಣರು: "ಏನು ನೀನು ಹೇಳೋದು? ಭಗವಂತ, ಎಲ್ಲಕ್ಕೂ ಒಡೆಯ. ಆತನ ಕೈಯಲ್ಲಿ ಎಲ್ಲವೂ ಸಾಧ್ಯ. ಯಾರು ಶಾಸನ ಮಾಡಿದಾನೊ, ಆತ ಅವನ್ನು ಬದಲಾಯಿಸಲೂ ಬಲ್ಲ.

"ನೀನು ಬೇಕಾದರೆ ಹಾಗೆ ಹೇಳಬಹುದು. ಬಹುಶಃ ಸಾಂಸಾರಿಕ ಸುಖವನ್ನ ಅನುಭವಿಸೋ ಇಚ್ಛೆ ನಿನಗಿರಬಹುದು, ಅದಕ್ಕಾಗಿ ನೀನು ಹೀಗೆ ಮಾತನಾಡುತ್ತಿರುವೆ. ಭೋಗಪಡುವುದೆಲ್ಲ ಮುಗಿಯದ ಹೊರತು ಆತ್ಮಜಾಗ್ರತಿಯುಂಟಾಗೋದಿಲ್ಲ ಎಂಬ ಅಭಿಪ್ರಾಯವೊಂದಿರೋದೇನೊ ನಿಜ. ಆದರೆ ಭೋಗಪಡಲೇನಿದೆ? ಕಾಮಕಾಂಚನ ಸುಖವೆ? ಈಗ ಇದ್ದುದು ಈಗ ಇರದು; ಕ್ಷಣಿಕವಾದ್ದು. ಕಾಮಕಾಂಚನದಲ್ಲಿರೋದು ಏನಿದೆ ಏನು? ಅದೊಂದು ಅಮಟೆ ಕಾಯಿ—ಬರೀ ಬೀಜ ಮತ್ತು ತೊಗಟೆ;

ತಿಂದರೆ ಹೊಟ್ಟೆ ನೋವು. ಅದು ಸಂದೇಶದ (ಸಿಹಿ ತಿಂಡಿಯ) ಹಾಗೆ. ಗಂಟಲಿನೊಳಕ್ಕೆ ಹೋಯಿತೆಂದರೆ ಮತ್ತೆ ಅದರ ರುಚಿ ಸಿಕ್ಕೋಹಾಗಿಲ್ಲ.''

ನಂದವಸು ಕೆಲವು ನಿಮಿಷಗಳು ಸುಮ್ಮನೆ ಕುಳಿತಿದ್ದು ಈಗ ಹೇಳುತ್ತಿದಾನೆ, ''ನೀವು ಹೇಳೋ ಹಾಗೇನೆ ಜನ ಹೇಳೋದುಂಟು. ಆದರೆ ಭಗವಂತ ಪಕ್ಷಪಾತಿಯೇನು ? ಆತನ ಕೃಪೆಯಿಂದ ಎಲ್ಲವೂ ಘಟಿಸಿದರೆ, ಆತನೊಬ್ಬ ಪಕ್ಷಪಾತಿ ಅಂತಲೇ ಹೇಳಬೇಕಾಗುತ್ತದೆ'' ಅಂತ.

ಶ್ರೀರಾಮಕೃಷ್ಣರು : ''ಆತ, ತಾನೇ ಎಲ್ಲವೂ ಆಗಿದಾನೆ— ಎಂದರೆ ಜೀವಜಗತ್ತಾಗಿದಾನೆ. ಪೂರ್ಣಜ್ಞಾನ ದೊರೆತಾಗ ಈ ಅನುಭವ ವಾಗುತ್ತದೆ. ಆತನೇ ಚತುರ್ವಿಂಶತಿ ತತ್ತ್ವಗಳಾಗಿದಾನೆ— ಎಂದರೆ ಮನಸ್ಸು, ಬುದ್ಧಿ, ದೇಹ ಇವೇ ಮೊದಲಾದುವುಗಳಾಗಿದಾನೆ. ಆತನೊಬ್ಬನಲ್ಲದೆ ಬೇರೆ ಯಾರಾದರು ಇದಾರೇನು ಆತ ಪಕ್ಷಪಾತ ತೋರಿಸೋಕೆ ? ''

ನಂದವಸು : ''ಆತ ನಾನಾ ರೂಪಗಳನ್ನು ಏಕೆ ಧರಿಸಿದಾನೆ? ಕೆಲವರು ಬುದ್ಧಿವಂತರಾಗಿಯೂ, ಕೆಲವರು ದಡ್ಡರಾಗಿಯೂ ಇರೋಕೆ ಕಾರಣವೇನು ? ''

ಶ್ರೀರಾಮಕೃಷ್ಣರು: ''ಆತನ ಖುಶಿ.''

ಅತುಲ: ''ಕೇದಾರಬಾಬು ಇದನ್ನು ಬಹಳ ಚೆನ್ನಾಗಿ ಹೇಳುತ್ತಾನೆ. ಒಬ್ಬ ಆತನನ್ನು ಕೇಳಿದ, 'ಭಗವಂತ ಈ ಜಗತ್ತನ್ನು ಏಕೆ ಸೃಷ್ಟಿಸಿದ?' ಅಂತ. ಅದಕ್ಕೆ ಆತ ಹೇಳಿದ, 'ಯಾವ ಮೀಟಿಂಗಿನಲ್ಲಿ ಭಗವಂತ ಸೃಷ್ಟಿಯ ಸಂಬಂಧವಾಗಿ ಆಲೋಚನೆ ಮಾಡಿದನೊ, ಅದರಲ್ಲಿ ನಾನು ಇರಲಿಲ್ಲ' ಅಂತ.'' (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: ''ಆತನ ಖುಶಿ.''

ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದರು:

ಎಲ್ಲವೂ ನಿನ್ನಿಚ್ಛೆಯಂತೆ ನಡೆದಿರಲು
ನೀನೆ ಭವಸಾಗರವ ದಾಟಿಸುವ ಹಡಗು.
ನಿನ್ನ ಇಚ್ಛೆಯ ನೀನು ಪೂರೈಸುತಿರಲು
ತಮ್ಮ ಗೈಮೆಯಿದೆಂದು ತಿಳಿವರೀ ಜನರು !

ಕೆಸರಿನಲಿ ಸಲಗವನು ಹಿಡಿಯುವಳು ನೀನು
ಹೆಳವನನು ಗಿರಿಯ ತುದಿಗೊಯ್ಯುವಳು ನೀನು
ಹಲವರಿಗೆ ಬ್ರಹ್ಮಪದವಿತ್ತು ಹಲವರನು
ಭವಜಲಧಿ ಸುಳಿಯೊಳಗೆ ಎಸೆಯುವಳು ನೀನು!

ನೀನು ಚಾಲಕ ಶಕ್ತಿ, ನಾನೊಂದು ಯಂತ್ರ!
ನಾನೊಂದು ಬರಿಯ ಮನೆ, ನೀನದರ ಮಂತ್ರ!
ನಾನೊಂದು ರಥವಾಗೆ, ನೀನದರ ರಥಿಕ!
ನೀನಡೆಸೆ ನಾನಡೆವೆ; ನಿನ್ನದೀ ಲೋಕ!

ಅವರು ತಮ್ಮ ಮಾತನ್ನು ಮುಂದುವರಿಸಿದರು: "ಆಕೆ ಆನಂದಮಯಿ. ಈ ಸೃಷ್ಟಿ ಸ್ಥಿತಿ ಪ್ರಳಯ ಆಕೆಯ ಲೀಲೆಯ ಅಲೆಗಳು. ಆಕೆ ಸೃಷ್ಟಿಸಿರೋ ಅಸಂಖ್ಯ ಜೀವಗಳಲ್ಲಿ ಎಲ್ಲೋ ಒಂದೆರಡು ಮುಕ್ತವಾಗಿ ಬಿಡುತ್ತವೆ. ಅದಷ್ಟಕ್ಕೇ ಆಕೆಗೆ ಆನಂದ.

ಬಾನೊಳಾಡುವ ನೂರುಸಾವಿರ ಪಟದಲಿ
ಒಂದೊ ಎರಡೋ ಕಿತ್ತು ಬಿಡುಗಡೆ
ಪಡೆಯುತಿರಲಾ ಕಡೆಯಲಿ, . . . .

ಕೆಲವು ಸಂಸಾರದಲ್ಲೆ ಬದ್ಧವಾಗಿ ಉಳಿದುಕೊಂಡಿರುತ್ತವೆ, ಕೆಲವು ಮುಕ್ತವಾಗುತ್ತಿರುತ್ತವೆ.

ಜಗದ ಕಡಲಿನ ಮೇಲೆ ಎನಿತೊಂದು ದೋಣಿಗಳು
ತೇಲುತಿಹವೊ!
ಮತ್ತೆನಿತು ದೋಣಿಗಳು ಮುಳುಗಲಿಹವೊ!"

ನಂದವಸು: "ಆಕೆಗೇನೊ ಚೆಲ್ಲಾಟ, ಆದರೆ ನಮಗೆಲ್ಲ ಮರಣ ಸಂಕಟ."

ಶ್ರೀರಾಮಕೃಷ್ಣರು: "ನೀವು ಅನ್ನಿಸಿಕೊಳ್ಳೋರು ಎಲ್ಲಿದೀರಿ? ಎಲ್ಲವೂ ಆಕೆಯೇ ಆಗಿದಾಳೆ. ಎಲ್ಲಿಯವರೆಗೆ ಆಕೆ ಯಾರು ಎಂಬುದರ ಅರಿವು ನಿನಗಾಗಿಲ್ಲವೊ ಅಲ್ಲಿಯವರೆಗೆ 'ನಾನು', 'ನಾನು' ಅಂತ ಹೇಳಿಕೊಳ್ಳುತ್ತಿರುವೆ.

"ಆಕೆ ಯಾರು ಎಂಬುದನ್ನು ಅರಿತುಕೊಳ್ಳಲು ಎಲ್ಲರಿಗೂ ಸಾಧ್ಯ. ಎಲ್ಲರ ಉದ್ಧಾರವೂ ಆಗಿಯೇ ಆಗುತ್ತದೆ. ಕೆಲವರಿಗೆ ಪ್ರಾತಃಕಾಲವೇ

ಊಟ ದೊರೆಯುತ್ತದೆ. ಇನ್ನು ಕೆಲವರಿಗೆ ಮಧ್ಯಾಹ್ನ ಮತ್ತೆ ಕೆಲವರಿಗೆ ಸಾಯಂಕಾಲ. ಆಹಾರವಿಲ್ಲದೆ ಉಳಿದುಕೊಳ್ಳೋರು ಮಾತ್ರ ಯಾರೂ ಇಲ್ಲ. ಎಲ್ಲರಿಗೂ ತಮ್ಮ ತಮ್ಮ ಸ್ವಸ್ವರೂಪವನ್ನು ಅರಿತುಕೊಳ್ಳಲು ಅವಕಾಶ ದೊರೆತೇ ದೊರೆಯುತ್ತದೆ.''

ಪಶುಪತಿ: ''ನಿಶ್ಚಯ. ಭಗವಂತನೇ ಎಲ್ಲವೂ ಆಗಿದಾನೆ ಎಂಬ ಬೋಧೆಯಾಗುತ್ತದೆ.''

ಶ್ರೀರಾಮಕೃಷ್ಣರು: ''ಈ 'ನಾನು' ಎಂಬುದು ಯಾರು ಎಂಬುದನ್ನು ಮೊದಲು ಪತ್ತೆಮಾಡಿ ನೋಡು. ಈ 'ನಾನು' ಎಂಬುದು ಎಲುಬೆ, ಮಾಂಸವೆ, ರಕ್ತವೆ ಅಥವಾ ಕರುಳೆ? 'ನಾನು' ಎಂಬುದು ಯಾರು ಎಂಬುದನ್ನು ಪತ್ತೆಮಾಡಲು ಹೋಗಿ 'ನೀನು' ಎಂಬುದು ಪತ್ತೆಯಾಗಿ ಬಿಡುತ್ತದೆ. ಅಂದರೆ, ನಮ್ಮ ಅಂತರ್ಯದಲ್ಲಿ ಭಗವಂತನ ಶಕ್ತಿ ಹೊರತು ಇನ್ನು ಬೇರೆ ಏನೂ ಇಲ್ಲ ಅಂತ. 'ನಾನು' ಎಂಬುದು ಇಲ್ಲವೇ ಇಲ್ಲ, ಇರುವವನು 'ಅತ' ಮಾತ್ರನೆ. (ಪಶುಪತಿಗೆ) ನಿನಗೆ ಯಥೇಷ್ಟವಾದ ಐಶ್ವರ್ಯವಿದೆ, ಆದರೂ ನಿನ್ನಲ್ಲಿ ಅಹಂಕಾರವೆಂಬುದು ಇಲ್ಲ. ಈ 'ಅಹಂ' ಎಂಬುದು ಒಮ್ಮೆಗೆ ನಮ್ಮನ್ನು ಬಿಟ್ಟುತೊಲಗಲೊಲ್ಲದು; ಆದ್ದರಿಂದ ಅದು ತೊಲಗದೆ ಉಳಿದುಕೊಂಡಿದ್ದರೆ' ಆ ನೀಚ 'ಅಹಂ' ಭಗವಂತನ ದಾಸನಾಗಿ ಉಳಿದುಕೊಳ್ಳಲಿ. (ಎಲ್ಲರೂ ನಗುತ್ತಾರೆ.) ನಾನು ಭಗವಂತನ ಭಕ್ತ, ಭಗವಂತನ ಮಗು ಅಥವಾ ಭಗವಂತನ ದಾಸ ಎಂಬತಕ್ಕ ಅಹಂಕಾರ ಶ್ರೇಯಸ್ಕರವಾದ್ದು. ಯಾವ 'ಅಹಂ' ಎಂಬುದು ನಮ್ಮನ್ನು ಕಾಮಕಾಂಚನಾಸಕ್ತರನ್ನಾಗಿ ಮಾಡುತ್ತದೆಯೊ, ಅದು ಅಪಕ್ವ 'ಅಹಂ'. ಅದನ್ನು ತ್ಯಾಗಮಾಡಿಬಿಡಬೇಕು.''

ಅಹಂಕಾರದ ಸಂಬಂಧವಾಗಿ ಪರಮಹಂಸರ ಬಾಯಿಂದ ಬಂದ ಈ ವಿವರಣೆಯನ್ನು ಕೇಳಿ ನಂದವಸುವಿಗೆ ಮತ್ತು ಉಳಿದವರೆಲ್ಲರಿಗೂ ಬಹಳ ಸಂತೋಷವಾಯಿತು.

ಶ್ರೀರಾಮಕೃಷ್ಣರು ಪಶುಪತಿಗೆ: ''ಬ್ರಹ್ಮಜ್ಞಾನದ ಲಕ್ಷಣಗಳು ಎರಡು: ಮೊದಲನೆಯದು ಅಹಂಕಾರ ಶೂನ್ಯತೆ; ಎರಡನೆಯದು ಶಾಂತತೆ. ನಿನಗೆ ಎರಡೂ ಇವೆ. ಆದ್ದರಿಂದ ನಿನಗೆ ಭಗವದನುಗ್ರಹ ಒದಗಿದೆ.

''ಅಧಿಕವಾದ ಐಶ್ವರ್ಯ ಭಗವಂತನನ್ನು ಮರೆಯುವಂತೆ ಮಾಡುತ್ತದೆ. ಅದರ ಸ್ವಭಾವವೇ ಅದು. ಯದುಮಲ್ಲಿಕನಿಗೆ ಐಶ್ವರ್ಯ ಬಹಳ

ವಾಗಿ ಹೆಚ್ಚಿಬಿಟ್ಟಿದೆ. ಆದ್ದರಿಂದ ಆತ ಈಗ ಭಗವಂತನ ಮಾತನ್ನೇ ಎತ್ತೋದಿಲ್ಲ. ಹಿಂದೆ ಭಗವದ್ವಿಚಾರದಲ್ಲಿ ಆತ ಬಹಳ ಅನುರಕ್ತನಾಗಿರುತ್ತಿದ್ದ.

"ಕಾಮಕಾಂಚನವೆಂಬುದು ಒಂದು ವಿಧದ ಮದ್ಯ. ಅತಿಯಾಗಿ ಮದ್ಯವನ್ನು ಕುಡಿದುಬಿಟ್ಟರೆ ಈತ ದೊಡ್ಡಪ್ಪ, ಆತ ಚಿಕ್ಕಪ್ಪ ಎಂಬ ಭೇದ ಬೋಧೆಯೇ ಇರದು. ಅನೇಕ ವೇಳೆ ಅವರನ್ನು ಸಿಕ್ಕಾಬಟ್ಟೆ ಬೈದುಬಿಡುತ್ತಾನೆ. ಕುಡುಕನಿಗೆ ಇವರು ಗುರುಹಿರಿಯರು, ಅವರು ಚಿಕ್ಕಪುಟ್ಟವರು ಎಂಬ ಭೇದ ಜ್ಞಾನವೇ ಇರದು."

ನಂದವಸು: "ಅದೇನೊ ನಿಜ."

ಪಶುಪತಿ: "ಮಹಾಶಯರೆ, ಥಿಯಾಸೋಫಿ, ಸ್ಪಿರಿಚುಯಲಿಸಮ್ ಇವುಗಳ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು? ಇವು ಸರಿಯಾದ ಮಾರ್ಗಗಳೇನು? ಸೂರ್ಯಲೋಕ, ಚಂದ್ರಲೋಕ, ನಕ್ಷತ್ರಲೋಕ ಇವುಗಳ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು?"

ಶ್ರೀರಾಮಕೃಷ್ಣರು: "ಇವುಗಳ ವಿಷಯವಾಗಿ ನನಗೆ ಏನೂ ಗೊತ್ತಿಲ್ಲ. ಇವನ್ನೆಲ್ಲ ಏಕೆ ಅಷ್ಟೊಂದಾಗಿ ತಲೆಗೆ ಹಚ್ಚಿಕೋಬೇಕು? ತೋಟಕ್ಕೆ ಬಂದಿರೋದು ಮಾವಿನ ಹಣ್ಣು ತಿನ್ನೋಕೆ. ತಿಂದು ಆನಂದ ಪಡು. ತೋಟದಲ್ಲಿ ಎಷ್ಟು ಮಾವಿನ ಮರಗಳಿವೆ, ಅವಕ್ಕೆ ಎಷ್ಟು ಲಕ್ಷ ಕೊಂಬೆ ರೆಂಬೆಗಳಿವೆ, ಅವುಗಳಲ್ಲಿ ಎಷ್ಟು ಕೋಟಿ ಎಲೆಗಳಿವೆ ಇವೇ ಮೊದಲಾದುವುಗಳ ಲೆಕ್ಕಾಚಾರ ಹಾಕುವುದರ ಆವಶ್ಯಕತೆಯೇನಿದೆ? ತೋಟಕ್ಕೆ ಬಂದದ್ದು ಮಾವಿನ ಹಣ್ಣು ತಿನ್ನೋಕೆ. ತಿಂದು ಆನಂದಪಡೋಣ.

"ಯಾರಿಗೆ ಆಗಲಿ ಒಮ್ಮೆ ಆತ್ಮಜಾಗ್ರತಿಯುಂಟಾಗಿಬಿಟ್ಟಿತು ಅಂದರೆ, ಒಮ್ಮೆ ಭಗವಂತನ ದರ್ಶನ ದೊರೆತುಬಿಟ್ಟಿತು ಅಂದರೆ, ಈ ಕೆಲಸಕ್ಕೆ ಬಾರದವುಗಳ ವಿಷಯವಾಗಿ ತಿಳಿದುಕೊಳ್ಳಲು ಇಚ್ಛೆಯೇ ಬರೋದಿಲ್ಲ. ವಿಷಮಶೀತ ಜ್ವರದಿಂದ ಸನ್ನಿಮುಚ್ಚಿಕೊಂಡಿರೋ ರೋಗಿ ಹೇಳುತ್ತಾನೆ, 'ನಾನು ಐದು ಸೇರು ಅಕ್ಕಿಯ ಅನ್ನ ಊಟಮಾಡಿಬಿಡುತ್ತೇನೆ! ಒಂದು ಇಡೀ ಕೆರೆ ನೀರನ್ನೇ ಕುಡಿದುಬಿಡುತ್ತೇನೆ!' ಅಂತ. ಆಗ ಡಾಕ್ಟರ್ ಹೇಳುತ್ತಾನೆ, 'ಹಾಗೇನು? ಆಗಲಿ! ಬಹಳ ಒಳ್ಳೆಯದು' ಅಂತ. ಹೀಗೆಂದು ಹೇಳಿ ಹುಕ್ಕ ಸೇದುತ್ತ ಹರಟೆ ಹೊಡೆಯುತ್ತಿರುತ್ತಾನೆ.

ಆದರೆ ಯಾವಾಗ ಸನ್ನಿ ಇಳಿದುಹೋಗಿಬಿಡುವುದೋ ಆಗ ರೋಗಿಯ ಕಷ್ಟ ಸುಖಗಳಿಗೆಲ್ಲ ಕಿವಿಗೊಡಬೇಕಾಗುತ್ತದೆ.''

ಪಶುಪತಿ: ''ನಮ್ಮನ್ನು ಮುಚ್ಚಿಕೊಂಡಿರೋ ಸನ್ನಿ ಚಿರಕಾಲವೂ ಇರಲು ಹೋಗುತ್ತೆ ಅಂತ ಕಾಣುತ್ತೆ, ಅಲ್ಲವೆ?''

ಶ್ರೀರಾಮಕೃಷ್ಣರು: ''ಹಾಗೇಕೆ ಯೋಚಿಸುತ್ತೀಯೆ? ಭಗವಂತನ ಕಡೆ ಮನಸ್ಸನ್ನಿಡು. ಆತ್ಮಜಾಗ್ರತಿಯುಂಟಾಗಿಬಿಡುತ್ತದೆ.''

ಪಶುಪತಿ ನಗುತ್ತ: ''ನಮ್ಮ ಸಂಯೋಗ ಭಗವಂತನೊಡನೆ ಬಹಳ ಕ್ಷಣಿಕವಾದ್ದು. ಒಂದು ಸಲ ಹುಕ್ಕ ಸೇದಲು ಎಷ್ಟು ಹೊತ್ತು ಹಿಡಿಯುತ್ತದೆಯೊ ಅಷ್ಟು ಹೊತ್ತು ಮಾತ್ರ.'' (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: ''ಅಷ್ಟೇ ಆದರೆ ತಾನೆ ಏನು? ಆತನೊಡನೆ ಸಂಯೋಗ ಒಂದೇ ಒಂದು ಕ್ಷಣಕಾಲ ಮಾತ್ರ ದೊರೆತರೂ ಮುಕ್ತಿ ದೊರೆತುಬಿಡುತ್ತದೆ.

''ಅಹಲ್ಯೆ ರಾಮನಿಗೆ ಪ್ರಾರ್ಥನೆಮಾಡಿದಳು, 'ಹೇ ರಾಮ, ನನ್ನ ಜನ್ಮ ಹಂದಿ ಹೊಟ್ಟೆಯಲ್ಲಿ ಬೇಕಾದರೂ ಆಗಲಿ ಅಥವಾ ಬೇರೆಲ್ಲಿ ಬೇಕಾದರೂ ಆಗಲಿ, ಆದರೆ ನನ್ನ ಮನಸ್ಸು ಮಾತ್ರ ನಿನ್ನ ಪಾದಪದ್ಮಗಳ ಕಡೆ ಸತತ ಹರಿಯುವಂತೆ, ನಿನ್ನಲ್ಲಿ ನನಗೆ ಶುದ್ಧ ಭಕ್ತಿಯುಂಟಾಗುವಂತೆ ಆಶೀರ್ವಾದಮಾಡು' ಅಂತ.

''ನಾರದ ಶ್ರೀರಾಮಚಂದ್ರನಿಗೆ ಪ್ರಾರ್ಥನೆಮಾಡಿದ, 'ಹೇ ರಾಮ, ಇದೊಂದನ್ನು ವಿನಾ ಬೇರೆ ಯಾವ ವರವನ್ನೂ ನಾನು ನಿನ್ನಿಂದ ಕೇಳೋದಿಲ್ಲ. ನನಗೆ ಶುದ್ಧ ಭಕ್ತಿಯನ್ನು ಕೊಡು ಮತ್ತು ನಿನ್ನ ಭುವನಮೋಹಿನಿ ಮಾಯೆಯಿಂದ ನಾನು ಮುಗ್ಧನಾಗದಂತೆ ನನಗೆ ಆಶೀರ್ವದಿಸು' ಅಂತ.

''ಹೃತ್ಪೂರ್ವಕವಾಗಿ ಆತನಿಗೆ ಪ್ರಾರ್ಥನೆ ಸಲ್ಲಿಸಿದರೆ, ಆತನ ಕಡೆ ಮನಸ್ಸು ಹರಿಯಲಾರಂಭಿಸುತ್ತದೆ, ಆತನ ಪಾದಪದ್ಮಗಳಲ್ಲಿ ಶುದ್ಧ ಭಕ್ತಿಯುಂಟಾಗುತ್ತದೆ.

'''ನಮ್ಮನ್ನು ಮುಚ್ಚಿಕೊಂಡಿರೋ ಸನ್ನಿಯಿಂದ ನಾವು ಗುಣ ಹೊಂದಬಲ್ಲವೆ?', 'ನಮ್ಮ ಕೈಯಲ್ಲಿ ಇನ್ನೇನು ತಾನೆ ಹರಿದೀತು?', 'ನಾವು ಪಾಪಿಗಳು!' ಈ ವಿಧದ ಭಾವನೆಗಳನ್ನೆಲ್ಲ ತ್ಯಜಿಸಿಬಿಡು. (ನಂದವಸುವಿಗೆ) ಈ ವಿಧವಾದ ದೃಢವಿಶ್ವಾಸ ಬೇಕು: 'ಏನು? ಭಗ

ವನ್ನಾಮವನ್ನು ನಾನು ಒಮ್ಮೆ ಉಚ್ಚರಿಸಿದೇನೆ, ಇನ್ನೂ ನನ್ನಲ್ಲಿ ಪಾಪ ಅಂದರೆ?' "

ನಂದವಸು: "ಪರಲೋಕವೆಂಬುದು ಇದೆಯೆ? ಮಾಡಿರೋ ಪಾಪಕ್ಕೆ ಶಿಕ್ಷೆ ದೊರೆಯುತ್ತದೆಯೆ?"

ಶ್ರೀರಾಮಕೃಷ್ಣರು: "ನೀನು ಸುಮ್ಮನೆ ಮಾವಿನ ಹಣ್ಣು ತಿನ್ನು. ಪರಲೋಕವೆಂಬುದು ಇದೆಯೊ ಇಲ್ಲವೊ ಎಂಬುದರ ಗುಣಾಕಾರ ಭಾಗಾಕಾರ ನಿನಗೇಕೆ? ಆದರಿಂದ ದೊರೆಯೋದು ತಾನೆ ಏನು? ನಿನಗೆ ಮಾವಿನ ಹಣ್ಣು ಬೇಕು. ತಿನ್ನು ಅವನ್ನ. ನಿನಗೆ ಭಗವಂತನಲ್ಲಿ ಭಕ್ತಿ ಬೇಕು—"

ನಂದವಸು: "ಮಾವಿನ ಮರಗಳೆಲ್ಲಿವೆ? ನಮಗೆಲ್ಲಿ ಮಾವಿನ ಹಣ್ಣು ದೊರೆಯುತ್ತವೆ?"

ಶ್ರೀರಾಮಕೃಷ್ಣರು: "ಮಾವಿನ ಮರವೆ? ಆತ ಅನಾದಿ ಅನಂತ ಬ್ರಹ್ಮ. ಆತ ನಿಸ್ಸಂದೇಹವಾಗಿ ಇದಾನೆ. ಆತ ನಿತ್ಯ. ಆದರೆ ಒಂದು ವಿಷಯ. ಆತ ಕಲ್ಪತರು—

ಸುಮ್ಮನೆ ತಿರುಗಾಟಕೆ ಬಾ ಮನವೇ
ಶ್ರೀ ಕಾಳೀ ಸುರತರುವಿರುವೆಡೆಗೆ!
ಪುರುಷಾರ್ಥವ ಕೈಗೂಡಿಸು ಬಾ ಅಲ್ಲಿ
ಕಾಳೀ ಸುರತರುವಿರುವಲ್ಲಿ!

"ಕಲ್ಪತರುವಿನ ಹತ್ತಿರ ಹೋಗಿ ಪ್ರಾರ್ಥನೆಮಾಡಬೇಕು. ಆಗ ಮಾತ್ರವೇ ಹಣ್ಣು ದೊರೆಯುತ್ತದೆ. ಆಗ ಮಾತ್ರವೇ ಮರದಿಂದ ಹಣ್ಣು ಕೆಳಕ್ಕೆ ಬೀಳುತ್ತವೆ. ಆಗ ಮಾತ್ರವೇ ಅವನ್ನು ಆರಿಸಿ ತರಲು ಸಾಧ್ಯವಾಗುತ್ತದೆ. ಹಣ್ಣುಗಳು ನಾಲ್ಕು: ಧರ್ಮ, ಅರ್ಥ, ಕಾಮ, ಮೋಕ್ಷ. ಜ್ಞಾನಿಗಳು ಮೋಕ್ಷಫಲಾಪೇಕ್ಷಿಗಳು; ಭಕ್ತರಿಗೆ ಭಕ್ತಿ, ಅಹೇತುಕ ಭಕ್ತಿ ಬೇಕು. ಇವರೀವರ್ಗರು ಧರ್ಮ, ಅರ್ಥ, ಕಾಮ ಇವನ್ನು ಅಪೇಕ್ಷಿಸೋದಿಲ್ಲ.

"ಪರಲೋಕದ ಸಂಬಂಧವಾಗಿ ನೀನು ಕೇಳಿದೆಯಲ್ಲವೆ. ಸಾಯೋವಾಗ ಯಾವ ಭಾವನೆಗಳನ್ನು ನೀನು ಮಾಡುವೆಯೋ ಅದರಂತೆ ನಿನಗೆ ಮುಂದಿನ ಗತಿ ಎಂಬುದು ಗೀತೆಯ ಅಭಿಮತ. ಭರತರಾಜ 'ಜಿಂಕೆ',

'ಜಿಂಕೆ' ಅಂತ ಶೋಕಿಸುತ್ತ ಪ್ರಾಣತ್ಯಾಗಮಾಡಿದ. ಅದಕ್ಕಾಗಿ ಆತ ಜಿಂಕೆಯಾಗಿ ಹುಟ್ಟಬೇಕಾಗಿ ಬಂತು. ಈ ಕಾರಣದಿಂದಲೇ ಮನುಷ್ಯ ಹಗಲು ಇರುಳು ಜಪ, ತಪ, ಧ್ಯಾನ, ಪೂಜೆ ಇವುಗಳಲ್ಲೇ ನಿರತನಾಗಿರ ಬೇಕು. ಹೀಗೆ ಮಾಡುತ್ತಿದ್ದರೆ ಸಾಯೋ ಸಮಯದಲ್ಲಿ ಭಗವಚ್ಚಿಂತನೆ ಮನಸ್ಸಿಗೆ ಬರುತ್ತದೆ.

"ಕೇಶವಸೇನನೂ ಪರಲೋಕದ ಸಂಬಂಧವಾಗಿ ನನ್ನನ್ನು ಕೇಳಿದ. ನಾನು ಆತನಿಗೂ ಹೇಳಿದೆ, 'ಈ ಗುಣಾಕಾರ ಭಾಗಾಕಾರಗಳೆಲ್ಲದರ ಆವಶ್ಯಕತೆಯೇನಿದೆ?' ಅಂತ. ಮತ್ತೆ ಆತನಿಗೆ ಹೇಳಿದೆ, 'ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳದವರಿಗೆ ಮತ್ತೆ ಮತ್ತೆ ಜನ್ಮವೆತ್ತುತ್ತಿರ ಬೇಕಾಗುತ್ತದೆ. ಕುಂಬಾರ ತನ್ನ ಮಡಕೆಕುಡಿಕೆಗಳನ್ನು ಒಣಗಲು ಬಿಸಿಲಿಗೆ ಇಡುತ್ತಾನೆ. ದನಕರುಗಳು ಅವನ್ನು ತುಳಿದು ಒಡೆದುಹಾಕಿ ಬಿಟ್ಟರೆ, ಬೆಂದ ಮಡಕೆ ಚೂರುಗಳನ್ನು ಬಿಸಾಡಿಬಿಡುತ್ತಾನೆ. ಆದರೆ ಹಸಿ ಮಡಕೆಯ ಚೂರುಗಳನ್ನೆಲ್ಲ ಆಯ್ದುಕೊಂಡು, ಅವಕ್ಕೆ ಇನ್ನು ಸ್ವಲ್ಪ ಜೇಡಿ ಮಣ್ಣು ಬೆರಸಿ ಹದಮಾಡಿ ಮತ್ತೆ ಚಕ್ರದ ಮೇಲೆ ಹಾಕುತ್ತಾನೆ' ಅಂತ."

ಪರಮಹಂಸರು ನಂದವಸುವಿನ ಮನೆಗೆ ಬಂದು ಆಗಲೆ ಬಹಳ ಹೊತ್ತಾಗಿದ್ದರೂ, ಆತ ಅವರಿಗೆ ಫಲಾ-ಗಿಲಾಹಾರವನ್ನು ಮಾಡಿಸೋ ಯೋಚನೆಯನ್ನೇ ಮಾಡಿದಂತೆ ಕಾಣಲಿಲ್ಲ. ಪರಮಹಂಸರೇ ಮುಂದೆ ಬಂದು ಆತನಿಗೆ ಹೇಳಿದರು, "ನಾನು ಗೃಹಸ್ಥರ ಮನೆಗೆ ಬಂದರೆ ಏನನ್ನಾ ದರು ತಿಂದು ಹೋಗಬೇಕಾಗಿದೆ. ಅದಕ್ಕಾಗೇ ನಾನು ಅಂದು ಯದು ಮಲ್ಲಿಕನ ತಾಯಿಗೆ ಹೇಳಿದೆ, 'ಏನನ್ನಾದರು ಒಂದು ಸ್ವಲ್ಪ ತಿನ್ನೋಕೆ ಕೊಡು' ಅಂತ. ನಾನು ಹಾಗೆ ಮಾಡದೆ ಇದ್ದರೆ, ಅದು ಗೃಹಸ್ಥರಿಗೆ ಅಮಂಗಳವನ್ನು ತರುತ್ತದೆ" ಅಂತ.

ನಂದವಸು ಸ್ವಲ್ಪ ಸಿಹಿ ತಿಂಡಿ ತರಿಸಿ ಪರಮಹಂಸರಿಗೆ ಅರ್ಪಿಸಿದ. ಅವರು ಅವನ್ನು ತಿನ್ನುತ್ತಿದಾರೆ. ನಂದವಸು ಮತ್ತು ಉಳಿದ ಭಕ್ತರು ಅವರ ಕಡೆಗೇ ಏಕ ದೃಷ್ಟಿಯಿಂದ ನೋಡುತ್ತಿದಾರೆ. ಅವನ್ನು ತಿಂದ ಮೇಲೆ ಕೈ ತೊಳೆದುಕೊಳ್ಳಲು ಪರಮಹಂಸರು ಮನೆಯ ಸುತ್ತಲೂ ದೃಷ್ಟಿ ಹಾಕಿದರು. ಜಮಖಾನದ ಮೇಲೆ ಒಂದು ಬಿಳಿ ಬಟ್ಟೆ ಹಾಸಿ, ಅದರ ಮೇಲೆ ಅವರು ತಿನ್ನುತ್ತಿದ್ದ ತಟ್ಟೆಯನ್ನು ಇಟ್ಟಿತ್ತು. ಅದರಲ್ಲಿ

ಕ್ಕೆ ತೊಳೆದುಕೊಳ್ಳುವುದು ಸರಿ ಅಂತ ಅವರಿಗೆ ತೋರಲಿಲ್ಲ. ಅದನ್ನು ನೋಡಿ, ಒಬ್ಬ ಸೇವಕ ಒಂದು ಹಿತ್ತಾಳೆ ಅರಕಿನ ಚಟ್ಟಿಯನ್ನು ತೆಗೆದು ಕೊಂಡುಬಂದ. ಅಂಥವುಗಳನ್ನು ರಾಜಸಿಕ ಪ್ರವೃತ್ತಿಯುಳ್ಳ ಜನರು ಉಪಯೋಗಿಸೋ ವಾಡಿಕೆಯಿರೋದರಿಂದ ಪರಮಹಂಸರು ಅದರಲ್ಲಿ ತಮ್ಮ ಕ್ಕೆ ತೊಳೆಯಲಿಲ್ಲ. ಆ ಸೇವಕನಿಗೆ ಹೇಳಿದರು, "ತೆಗೆದುಕೊಂಡು ಹೋಗು, ಹಿಂದಕ್ಕೆ ತೆಗೆದುಕೊಂಡು ಹೋಗು" ಅಂತ. ನಂದವಸು ಹೇಳಿದ, "ದಯವಿಟ್ಟು ನಿಮ್ಮ ಕೈಯನ್ನು ತೊಳೆದುಕೊಳ್ಳಿ" ಅಂತ. ಪರಮಹಂಸರು ಅನ್ಯಮನಸ್ಕರಾಗಿ ಹೇಳಿದರು, "ಏನು? ಕೈ ತೊಳೆದುಕೋ ಬೇಕೆ?" ಅಂತ.

ಪರಮಹಂಸರು ದಕ್ಷಿಣ ವರಾಂಡದ ಕಡೆಗೆ ಹೋದರು. ತಮ್ಮ ಕೈಗೆ ನೀರು ಹಾಕುವಂತೆ ಮಾಸ್ಟರಿಗೆ ಆಜ್ಞೆ ಮಾಡಿದರು. ಮಾಸ್ಟರ್ ಒಂದು ಚೆಂಬಿನಿಂದ ಅವರ ಕೈಗೆ ನೀರು ಹಾಕಿದ. ಅವರು ತಮ್ಮ ಬಟ್ಟೆ ಯಿಂದಲೇ ಕೈಯನ್ನು ಒರಸಿಕೊಂಡು ಕೊಠಡಿಗೆ ಹಿಂದಿರುಗಿದರು. ಬಳಿಕ ತಾಂಬೂಲದ ತಟ್ಟೆಯನ್ನು ಅವರ ಮುಂದೆ ಇಡಲಾಯಿತು. ಆದರೆ ಆಗಲೇ ಕೆಲವರು ಅದರಿಂದ ತಾಂಬೂಲ ತೆಗೆದುಕೊಂಡುಬಿಟ್ಟಿದ್ದರು; ಆದ್ದರಿಂದ ಪರಮಹಂಸರು ಅದರಿಂದ ತಾಂಬೂಲ ತೆಗೆದುಕೊಳ್ಳಲಿಲ್ಲ.

ನಂದವಸು ಪರಮಹಂಸರಿಗೆ: "ಒಂದು ವಿಷಯ ಕೇಳಬೇಕು ಅಂತ ಇದ್ದೇನೆ, ಕೇಳಲೇನು?"

ಶ್ರೀರಾಮಕೃಷ್ಣರು ನಗುತ್ತ: "ಏನು ಅದು?"

ನಂದವಸು: "ನೀವು ತಾಂಬೂಲ ಏಕೆ ತೆಗೆದುಕೊಳ್ಳಲಿಲ್ಲ? ನಿಮ್ಮ ಎಲ್ಲಾ ವ್ಯವಹಾರವೂ ಒಪ್ಪತಕ್ಕವೆ; ಆದರೆ ಇದೊಂದು ಮಾತ್ರ ಅಲ್ಲ."

ಶ್ರೀರಾಮಕೃಷ್ಣರು: "ಇಷ್ಟದೇವತೆಗೆ ಅರ್ಪಿಸಿ ನಂತರ ತಿನ್ನೋ ಅಭ್ಯಾಸ. ಇದೊಂದು ನನ್ನ ನಿಷ್ಠೆ."

ನಂದವಸು: "ಇದನ್ನೂ ನೀವು ಇಷ್ಟದೇವತೆಗೆ ಅರ್ಪಿಸಬಹು ದಾಗಿತ್ತಲ್ಲ?"

ಶ್ರೀರಾಮಕೃಷ್ಣರು: "ಜ್ಞಾನಮಾರ್ಗವೆಂಬುದೊಂದಿದೆ, ಭಕ್ತಿ ಮಾರ್ಗವೆಂಬುದೊಂದಿದೆ. ಜ್ಞಾನಿಗಳ ಮತ, ಎಲ್ಲವನ್ನೂ ಬ್ರಹ್ಮ ಜ್ಞಾನದ ದೃಷ್ಟಿಯಿಂದ ನೋಡಿ ಅವನ್ನು ಸ್ವೀಕರಿಸಬಹುದು ಅಂತ. ಭಕ್ತಿಮಾರ್ಗದ ಅನುಯಾಯಿ ಸ್ವಲ್ಪ ಭೇದಬುದ್ಧಿ ಮಾಡಬೇಕಾಗುತ್ತದೆ."

ನಂದವಸು : "ಇನ್ನೂ ನನಗೆ ಅನ್ನಿಸುತ್ತಿದೆ, ನಿಮ್ಮ ಆ ವರ್ತನೆ ಸರಿಯಾಗಲಿಲ್ಲ ಅಂತ."

ಶ್ರೀರಾಮಕೃಷ್ಣರು ನಗುತ್ತ : "ಅದು ಕೇವಲ ನನ್ನ ಒಂದು ನಿಷ್ಠೆ ಮಾತ್ರ. ನೀನು ಹೇಳುತ್ತಿರುವುದೂ ಸರಿಯೆ. ಅದಕ್ಕೂ ಶಾಸ್ತ್ರಾಧಾರವಿದೆ."

ಪರಮಹಂಸರು ಈಗ ಹೊಗಳುಭಟ್ಟರ ಸಂಬಂಧವಾಗಿ ನಂದವಸುವಿಗೆ ಎಚ್ಚರಿಕೆ ಕೊಡುತ್ತಿದಾರೆ.

ಶ್ರೀರಾಮಕೃಷ್ಣರು : "ಹೊಗಳುಭಟ್ಟರ ಸಂಬಂಧವಾಗಿ ಬಹಳ ಎಚ್ಚರಿಕೆಯಿಂದಿರಬೇಕು. ಅವರು ಕೇವಲ ತಮ್ಮ ಸ್ವಾರ್ಥಕ್ಕಾಗೇ ದುಡಿಯುತ್ತಾರೆ. (ಪ್ರಸನ್ನನ ತಂದೆಗೆ) ಈ ಮನೆಯಲ್ಲೇ ನೀನೂ ವಾಸಿಸುತ್ತಿರುವಿಯೇನು ?"

ಪ್ರಸನ್ನನ ತಂದೆ : "ಇಲ್ಲ, ಈ ಅಗ್ರಹಾರದಲ್ಲೇ. ಹುಕ್ಕ ತರಿಸಲೆ ?"

ಶ್ರೀರಾಮಕೃಷ್ಣರು ವಿನಯದಿಂದ : "ದಯವಿಟ್ಟು ಈಗ ಬೇಡ. ನೀನು ತೆಗೆದುಕೊ. ಈಗ ನನಗೆ ಇಚ್ಛೆಯಾಗುತ್ತಿಲ್ಲ."

ನಂದವಸುವಿನ ಮನೆ ಅರಮನೆಯೋಪಾದಿಯಲ್ಲಿ ಇತ್ತು. ಪರಮಹಂಸರು ಆತನಿಗೆ ಹೇಳುತ್ತಿದಾರೆ, "ಯದುಮಲ್ಲಿಕನ ಮನೆ ಇಷ್ಟು ದೊಡ್ಡದಾಗಿಲ್ಲ. ಹಾಗೆಂದು ನಾನು ಅಂದು ಆತನಿಗೆ ಹೇಳಿದೆ" ಅಂತ.

ನಂದವಸು : "ಆತ ಜೊರಾಸಂಕೊ ಎಂಬ ಜಾಗದಲ್ಲಿ ಒಂದು ಹೊಸ ಮನೆ ಕಟ್ಟಿಸಿದಾನೆ."

ಈಗ ಪರಮಹಂಸರು ನಂದವಸುವಿಗೆ ಪ್ರೋತ್ಸಾಹ ಕೊಡುತ್ತಿದಾರೆ.

ಶ್ರೀರಾಮಕೃಷ್ಣರು : "ನೀನು ಸಂಸಾರದಲ್ಲಿದ್ದರೂ, ಭಗವಂತನ ಕಡೆಗೆ ಮನಸ್ಸನ್ನಿಟ್ಟಿದೀಯೆ. ಇದು ಏನು ಸಾಮಾನ್ಯ ವ್ಯಾಪಾರವೇ ? ಸಂಸಾರ-ತ್ಯಾಗಿ ಭಗವಂತನನ್ನು ಕರೆವೇ ಕರೆಯುತ್ತಾನೆ. ಅದರಲ್ಲಿ ಮಹತ್ತೇನಾದರು ಇದೆಯೆ ? ಸಂಸಾರದಲ್ಲಿದ್ದೂ ಯಾರು ಭಗವಂತನನ್ನು ಕರೆಯುತ್ತಾನೊ ಆತನೇ ಧನ್ಯ. ಆತ ಒಂದು ಇಪ್ಪತ್ತು ಮಣದ ಕಲ್ಲನ್ನು ಜರುಗಿಸಿ, ಅನಂತರ ಅದರ ಕೆಳಗಿರೋ ವಸ್ತುವನ್ನು ಪಡೆಯೋ ವ್ಯಕ್ತಿಯ ಹಾಗೆ.

"ಯಾವುದಾದರು ಒಂದು ಭಾವವನ್ನು ಆಶ್ರಯಿಸಿಕೊಂಡು ಆತನನ್ನು ಕರೆಯಬೇಕು. ಹನುಮಂತನದು ಜ್ಞಾನಮಿಶ್ರಿತ ಭಕ್ತಿ; ನಾರದನದು ಶುದ್ಧ ಭಕ್ತಿ.

"ರಾಮ ಪ್ರಶ್ನೆ ಹಾಕಿದ, 'ಹನುಮಂತ, ನೀನು ಯಾವ ಭಾವದಿಂದ ನನ್ನನ್ನು ಅರ್ಚನೆ ಮಾಡುತ್ತಿದೀಯೆ?' ಅಂತ. ಹನುಮಂತ ಉತ್ತರವಿತ್ತ, 'ಕೆಲವು ವೇಳೆ ನೀನು ಪೂರ್ಣ ನಾನು ಅಂಶ ಎಂಬ ಭಾವನೆಯಿಂದ ಅರ್ಚಿಸುತ್ತೇನೆ; ಇನ್ನು ಕೆಲವು ವೇಳೆ ನೀನು ಪ್ರಭು ನಾನು ದಾಸ ಎಂಬ ಭಾವನೆಯಿಂದ ಅರ್ಚಿಸುತ್ತೇನೆ. ಆದರೆ ರಾಮ, ನಾನು ತತ್ತ್ವಜ್ಞಾನಾವಸ್ಥೆಯಲ್ಲಿರೋವಾಗ ನೀನೇ ನಾನು, ನಾನೇ ನೀನು ಎಂಬ ಅನುಭವವಾಗುತ್ತದೆ' ಅಂತ.

"ರಾಮ ನಾರದನಿಗೆ ಹೇಳಿದ, 'ನೀನು ಒಂದು ವರ ಬೇಡಿಕೊ' ಅಂತ. ನಾರದ ಪ್ರಾರ್ಥಿಸಿದ, 'ಹೇ ರಾಮ, ನನಗೆ ನಿನ್ನ ಪಾದಪದ್ಮಗಳಲ್ಲಿ ಶುದ್ಧ ಭಕ್ತಿಯುಂಟಾಗುವಂತೆಯೂ ಮತ್ತು ನಾನು ನಿನ್ನ ಭುವನ ಮೋಹಿನಿ ಮಾಯೆಯಿಂದ ಮುಗ್ಧನಾಗದ ಹಾಗೆ ಶಕ್ತನಾಗಿರುವಂತೆಯೂ ವರ ಕರುಣಿಸು' ಅಂತ."

ಈಗ ಪರಮಹಂಸರು ಹೊರಡಲಣಿಯಾಗುತ್ತಿದಾರೆ.

ಶ್ರೀರಾಮಕೃಷ್ಣರು ನಂದವಸುವಿಗೆ: "ಯಾರನ್ನು ಅನೇಕರು ಗೌರವಿಸಿ ಸ್ತುತಿಸುತ್ತಾರೊ, ಅಂಥವರಲ್ಲಿ ಭಗವಂತ ವಿಶೇಷವಾಗಿ ವ್ಯಕ್ತವಾಗಿರುತ್ತಾನೆ ಎಂಬುದು ಗೀತೆಯ ಅಭಿಮತ. ನಿನ್ನಲ್ಲೂ ಭಗವಂತ ವಿಶೇಷವಾಗಿ ವ್ಯಕ್ತವಾಗಿದಾನೆ."

ನಂದವಸು: "ಆತನ ಶಕ್ತಿ ಎಲ್ಲರಲ್ಲಿಯೂ ಒಂದೇ ಸಮ."

ಶ್ರೀರಾಮಕೃಷ್ಣರು ವಿರಕ್ತರಾಗಿ: "ನಿಮ್ಮದೆಲ್ಲ ಒಂದೇ ಕೂಗು. ಎಲ್ಲರಲ್ಲಿಯೂ ಶಕ್ತಿ ಒಂದೇ ಸರಿಸಮನಾಗಿ ಇರಲು ಸಾಧ್ಯವೆ? ಆತ ವಿಭುರೂಪದಿಂದ ಸರ್ವಭೂತಗಳಲ್ಲಿಯೂ ಒಂದೇ ಸಮನಾಗಿ ಇರೋದೇನೊ ನಿಜ, ಆದರೆ ಪ್ರತಿಯೊಂದರಲ್ಲೂ ಶಕ್ತಿ ವಿಶೇಷತೆ ಇದೆ.

"ವಿದ್ಯಾಸಾಗರನೂ ಹೀಗೆಯೇ ಕೇಳಿದ. ಆತ ಕೇಳಿದ, 'ಭಗವಂತ ಕೆಲವರಿಗೆ ಹೆಚ್ಚು ಶಕ್ತಿಯನ್ನು ಕೆಲವರಿಗೆ ಕಡಮೆ ಶಕ್ತಿಯನ್ನು ಕೊಟ್ಟಿದಾನೇನು?' ಅಂತ. ಆಗ ನಾನು ಹೇಳಿದೆ, 'ಅದು ಹಾಗಿಲ್ಲದೆ ಇದ್ದರೆ, ನಾವೇಕೆ ನಿನ್ನನ್ನು ನೋಡಲು ಬಂದಿದ್ದೇವೆ? ನಿನಗೇನು ಎರಡು ಕೊಂಬು ಬೆಳೆದಿನೆಯೆ?' ಅಂತ."

ಪರಮಹಂಸರು ಮೇಲಕ್ಕೆ ಎದ್ದು, ಹೊರಟರು. ಭಕ್ತರೂ ಅವರನ್ನು ಹಿಂಬಾಲಿಸಿದರು. ಪಶುಪತಿ ಬಾಗಿಲಿನವರೆಗೆ ಅವರನ್ನು ಕರೆದೊಯ್ದನು.

ಪರಮಹಂಸರು ಈಗ ತನ್ನ ಏಕಮಾತ್ರ ಪುತ್ರಿಯನ್ನು ಕಳೆದುಕೊಂಡು ಬಹಳವಾಗಿ ದುಃಖಪಡುತ್ತಿರೋ ಒಬ್ಬ ಬ್ರಾಹ್ಮಣಿಯ ಮನೆಗೆ ಬಂದಿದಾರೆ. ಅದು ಒಂದು ಹಳೆ ಇಟ್ಟಿಗೆ ಮನೆ. ಅವರು ಮನೆಯನ್ನು ಪ್ರವೇಶಿಸಿ, ತಮ್ಮ ಎಡ ಭಾಗದಲ್ಲಿದ್ದ ದನಗಳ ಕೊಟ್ಟಿಗೆಯನ್ನು ಬಿಟ್ಟು ಮುಂದುವರಿದು ಚಾವಣಿಯ ಮೇಲಕ್ಕೆ ಹತ್ತಿ ಹೋದರು. ಭಕ್ತರೂ ಅವರನ್ನು ಹಿಂಬಾಲಿಸಿದರು. ಅಲ್ಲಿ ಕೆಲವರು ನಿಂತುಕೊಂಡು, ಕೆಲವರು ಕುಳಿತುಕೊಂಡು ಪರಮಹಂಸರು ಎಷ್ಟು ಹೊತ್ತಿಗೆ ಬರುವರೆಂದು ಉತ್ಸುಕತೆಯಿಂದ ಕಾದುಕೊಂಡಿದ್ದರು.

ಆ ಬ್ರಾಹ್ಮಣಿಗೆ ಒಬ್ಬಳು ಸಹೋದರಿ ಇದ್ದಳು. ಆಕೆಯೂ ವಿಧವೆ. ಆಕೆಯ ಸಹೋದರರು ತಮ್ಮ ಕುಟುಂಬದೊಡನೆ ಆಕೆಯ ಮನೆಯಲ್ಲಿಯೇ ವಾಸವಾಗಿದಾರೆ. ಪರಮಹಂಸರು ತನ್ನ ಮನೆಗೆ ಬಂದು ಅದನ್ನು ಪಾವನ ಮಾಡುವರು ಎಂಬ ಉತ್ಸಾಹದಿಂದ ಇಡಿಯ ದಿನವನ್ನೆಲ್ಲ ತಕ್ಕ ಸಿದ್ಧತೆ ಮಾಡಿಕೊಳ್ಳುವುದರಲ್ಲಿಯೇ ಬ್ರಾಹ್ಮಣಿ ಕಳೆದಿದ್ದಳು. ಪರಮಹಂಸರು ನಂದವಸುವಿನ ಮನೆಯಲ್ಲಿ ಎಷ್ಟು ಹೊತ್ತನ್ನು ಕಳೆದರೊ, ಅಷ್ಟು ಹೊತ್ತನ್ನೂ ಆಕೆ ತನ್ನ ಮನೆಯಲ್ಲಿ ಪರಮಹಂಸರಿಗಾಗಿ ಬಹಳ ಕಾತರತೆಯಿಂದ ಕಾಯುತ್ತ, ಆಗಾಗ ಬೀದಿ ಬಾಗಿಲಿಗೆ ಹೋಗಿ ಹೋಗಿ ನೋಡಿ ಬರುತ್ತಿದ್ದಳು. ನಂದವಸುವಿನ ಮನೆಯಿಂದ ಹಿಂದಿರುಗುವಾಗ ಆಕೆಯ ಮನೆಗೆ ಬರುವುದಾಗಿ ಅವರು ಆಕೆಗೆ ತಿಳಿಸಿದ್ದರು. ಅವರು ಬಹಳ ಹೊತ್ತಿನವರೆಗೂ ಬಾರದಿದ್ದುದನ್ನು ನೋಡಿ, ಆಕೆ ಭಾವಿಸಿದ್ದಳು ಬಹುಶಃ ಅವರು ಇಂದು ತನ್ನ ಮನೆಗೆ ಬರದೇನೆ ಹೋಗಿಬಿಡುವರೊ ಏನೊ ಅಂತ.

ಪರಮಹಂಸರು ಜಮಖಾನದ ಮೇಲೆ ಕುಳಿತಿದಾರೆ. ಮಾಸ್ಟರ್, ಯೋಗೀಂದ್ರ, ನಾರಾಯಣ, ದೇವೇಂದ್ರ ಮತ್ತು ಇನ್ನೂ ಕೆಲವರು ಮುಂದಲಿಗೆ ಮೇಲೆ ಕುಳಿತಿದಾರೆ. ಕೆಲವು ನಿಮಿಷಗಳಾದನಂತರ ಚಿಕ್ಕ ನರೇನ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಅಲ್ಲಿಗೆ ಬಂದರು. ಬ್ರಾಹ್ಮಣಿಯ ಸಹೋದರಿ ಪರಮಹಂಸರಿಗೆ ಪ್ರಣಾಮಮಾಡಿ ಹೇಳಿದಳು, "ನೀವು ಇಲ್ಲಿಗೆ ಬರಲು ಏಕೆ ತಡವಾಗುತ್ತಿದೆ ಎಂಬುದನ್ನು ಅರಿಯಲು ಈಗ ತಾನೆ ನನ್ನ ಸಹೋದರಿ ನಂದವಸುವಿನ ಮನೆಗೆ ಹೋಗಿದಾಳೆ. ಇನ್ನೇನು ಬಂದು ಬಿಡುತ್ತಾಳೆ" ಅಂತ.

ಕೆಳಗಡೆ ಏನೊ ಶಬ್ದವಾಯಿತು. ಆಗ ಆಕೆ ಕೂಗಿಹೇಳಿದಳು,

"ಬಂದುಬಿಟ್ಟಳು" ಅಂತ. ಹೀಗೆಂದು ಹೇಳಿ ಆಕೆ ಕೆಳಕ್ಕೆ ಇಳಿದು ಹೋಗಿ ನೋಡಲಾಗಿ ಆಕೆ ಇನ್ನೂ ಬಂದಿರಲಿಲ್ಲ.

ಪರಮಹಂಸರು ಭಕ್ತರಿಂದ ಆವೃತರಾಗಿ ನಗುತ್ತ ಕುಳಿತಿದಾರೆ.

ಮಾಸ್ಟರ್ ದೇವೇಂದ್ರನಿಗೆ: "ಇದು ಎಂಥ ಅಸದೃಶ ದೃಶ್ಯ! ಮಕ್ಕಳು ಮರಿಗಳು, ದೊಡ್ಡವರು ಚಿಕ್ಕವರು, ಗಂಡಸರು ಹೆಂಗಸರು ಎಲ್ಲರೂ ಪರಮಹಂಸರ ದರ್ಶನ ಪಡೆಯಲು ಮತ್ತು ಅವರ ಬಾಯಿಂದ ಬರೋ ಅಮೃತವಾಣಿಯನ್ನು ಕೇಳಲು ಎಷ್ಟು ಉತ್ಸುಕತೆಯಿಂದ ಕಾದು ನಿಂತಿದಾರೆ ಏನು ಕತೆ!"

ದೇವೇಂದ್ರ ಪರಮಹಂಸರಿಗೆ: "ಮಾಸ್ಟರ್ ಹೇಳುತ್ತಿದಾನೆ, ಈ ಜಾಗ ನಂದವಸುವಿನ ಜಾಗಕ್ಕಿಂತ ಎಷ್ಟೋ ಮೇಲು ಅಂತ. ಈ ಮನೆ ಯವರ ಭಕ್ತಿ ಎಷ್ಟು ಅದ್ಭುತವಾದ್ದು!"

ಪರಮಹಂಸರು ನಗುತ್ತಿದಾರೆ.

ಆ ಬ್ರಾಹ್ಮಣಿಯ ಸಹೋದರಿ ಕೂಗಿಕೊಂಡಳು, "ಸಹೋದರಿ ಈಗ ಬರುತ್ತಿದಾಳೆ!" ಅಂತ.

ಆ ಬ್ರಾಹ್ಮಣಿ ಬಂದು ಪರಮಹಂಸರಿಗೆ ಪ್ರಣಾಮ ಮಾಡಿದಳು. ಆಕೆಯ ಆನಂದಕ್ಕೆ ಪಾರವೇ ಇಲ್ಲದಂತಾಗಿ, ತಾನು ಮುಂದೆ ಏನು ಮಾಡಬೇಕು, ಏನು ಕೇಳಬೇಕು ಎಂಬುದೇ ಆಕೆಗೆ ತೋರದೆ ಹೋಯಿತು. ಅರ್ಧ ಉಸಿರುಗಟ್ಟಿದ ಸ್ವರದಿಂದ ಹೇಳುತ್ತಿದಾಳೆ, "ಈಗ ನನಗಾಗಿರೋ ಆನಂದವನ್ನು ನನ್ನ ಕೈಯಲ್ಲಿ ತಡೆದುಕೊಳ್ಳಲಾಗುತ್ತಿಲ್ಲ. ಬಹುಶಃ ನಾನು ಇದರಿಂದಲೇ ಸತ್ತುಹೋಗಿ ಬಿಡಬಹುದು. ಗೆಳತಿಯರಾ, ನಾನು ಈಗ ಬದುಕಿಕೊಳ್ಳುವ ಬಗೆ ಹೇಗೆ ಎಂಬುದನ್ನು ತಿಳಿಸಿ? ನನ್ನ ಮಗಳು ಚಂಡಿ ರಸ್ತೆಯ ಎರಡು ಪಾರ್ಶ್ವಗಳಲ್ಲಿಯೂ ಶಸ್ತ್ರ ಸಜ್ಜಿತರಾದ ಸಿಪಾಯಿ ಗಳಿಂದ ಪಹರೆ ಕಾಯಿಸಿಕೊಂಡು ನನ್ನ ಮನೆಗೆ ಬರುತ್ತಿದ್ದಾಗಲೂ ನನಗಿಷ್ಟು ಆನಂದವಾಗಿರಲಿಲ್ಲ. ಆಕೆ ಸತ್ತಿದುದಕ್ಕಾಗಿ ಆಗಿದ್ದ ಶೋಕ ನನ್ನ ಹೃದಯದಲ್ಲಿ ಈಗ ಒಂದು ಕಿಂಚಿತ್ತೂ ಇಲ್ಲ. ಯಾವಾಗ ಇವರು ಇಲ್ಲಿಗೆ ಬರೋದನ್ನು ತಡಮಾಡಿದರೊ, ಆಗ ಭಾವಿಸಿದ್ದೆ, ಒಂದು ಪಕ್ಷ ಇವರೇನಾದರು ಇಲ್ಲಿಗೆ ಬಾರದೆಹೋಗಿಬಿಟ್ಟರೆ ಇವರ ಸತ್ಕಾರಕ್ಕಾಗಿ ಮಾಡಿದ್ದ ಅಣಿಯನ್ನೆಲ್ಲ ಗಂಗೆಗೆ ಬಿಸಾಡಿ, ಇವರೊಡನೆ ಇನ್ನೆಂದಿಗೂ ಮಾತಾಡೋದಿಲ್ಲ ಅಂತ ಸಂಕಲ್ಪಮಾಡಿಕೊಂಡುಬಿಡಬೇಕು ಎಂದು.

ಇವರು ಈ ಕಡೆ ಒಮ್ಮೆ ಬಂದಾಗ, ಅಲ್ಲಿಗೆ ಹೋಗಿ ದೂರದಿಂದಲೇ ಇವರ ದರ್ಶನ ಮಾಡಿಕೊಂಡು ಹಿಂದಿರುಗಿ ಬಂದುಬಿಡಬೇಕೆಂತಲೂ ಭಾವಿಸಿದ್ದೆ.

"ನಾನು ಎಷ್ಟು ಆನಂದದಿಂದ ತುಂಬಿತುಳುಕಾಡುತ್ತಿದೇನೆ ಎಂಬುದನ್ನು ಎಲ್ಲರಿಗೂ ಹೋಗಿ ತಿಳಿಸಿಬರುತ್ತೇನೆ. ನನ್ನ ಸೌಭಾಗ್ಯವೆಂಥದು ಎಂಬುದನ್ನು ಯೋಗಿನ್ನಳಿಗೆ ಹೇಳಿಬರುತ್ತೇನೆ" ಅಂತ.

ಆಕೆ ಇನ್ನೂ ಆನಂದಪರವಶಳಾಗಿ ಹೇಳುತ್ತಿದಾಳೆ, "ಒಬ್ಬ ಕೂಲಿಯವನಿಗೆ ಲಾಟರಿಯಲ್ಲಿ ಒಂದು ರೂಪಾಯಿನ ಟಿಕೆಟ್ಟಿಗೆ ಒಂದು ಲಕ್ಷ ರೂಪಾಯಿ ದೊರೆತುಬಿಟ್ಟಿತು. ಆ ಸಮಾಚಾರ ಆತನ ಕಿವಿಗೆ ಬಿದ್ದೊಡನೆಯೆ ಆನಂದೋತ್ಕರ್ಷೆಯಿಂದ ಆತ ಸತ್ತೇ ಹೋದ. ನಿಜವಾಗಿಯೂ ಸತ್ತುಹೋದ. ನನಗೂ ಅದೇ ಅವಸ್ಥೆ ಬಂದಿದೆ. ನೀವೆಲ್ಲರೂ ನನಗೆ ಆಶೀರ್ವಾದಮಾಡಿ, ಇಲ್ಲದಿದ್ದರೆ ನಾನು ನಿಜವಾಗಿಯೂ ಸತ್ತೇ ಹೋಗುವುದರಲ್ಲಿದೇನೆ" ಅಂತ.

ಮಾಸ್ಟರ್ ಬ್ರಾಹ್ಮಣಿಯ ವ್ಯಾಕುಲತೆಯನ್ನು ಮತ್ತು ಭಾವಾವಿಷ್ಟತೆಯನ್ನು ನೋಡಿ ಮುಗ್ಧನಾಗಿ ಹೋಗಿಬಿಟ್ಟಿದಾನೆ. ಆತ ಆಕೆಯ ಪಾದ ಧೂಳಿಯನ್ನು ಸ್ವೀಕರಿಸಲು ಮುಂದೆ ಹೋದ. ಆಕೆ ಕೂಗಿಕೊಂಡಳು, "ಏನು ನೀವು ಮಾಡುತ್ತಿರೋದು?" ಅಂತ. ಬಳಿಕ ಆಕೆ ಮಾಸ್ಟರಿಗೆ ಪ್ರತಿಪ್ರಣಾಮ ಮಾಡಿದಳು.

ಪರಮಹಂಸರ ಭಕ್ತರು ತನ್ನ ಮನೆಗೆ ಬಂದಿರೋದನ್ನು ನೋಡಿ ಬ್ರಾಹ್ಮಣಿಗೆ ಬಹಳ ಆನಂದವಾಗಿಬಿಟ್ಟಿದೆ. ಆಕೆ ಹೇಳುತ್ತಿದಾಳೆ, "ನೀವೆಲ್ಲರೂ ಇಲ್ಲಿಗೆ ಬಂದಿರೋದನ್ನು ನೋಡಿ ನನಗೆ ಬಹಳ ಆನಂದವಾಗಿ ಬಿಟ್ಟಿದೆ. ನಾನು ಚಿಕ್ಕ ನರೇನನನ್ನು ಇಲ್ಲಿಗೆ ಕರೆತಂದಿದೇನೆ. ಆತ ಇಲ್ಲಿಲ್ಲದಿದ್ದರೆ ನಮ್ಮನ್ನೆಲ್ಲ ನಗಿಸೋರು ಯಾರು?" ಅಂತ.

ಆಕೆ ಈ ರೀತಿಯಾಗಿ ಮಾತುಕತೆಯಾಡುತ್ತಿರುವಾಗ ಆಕೆಯ ಸಹೋದರಿ ಅಲ್ಲಿಗೆ ಬಂದು ವ್ಯಸ್ತಳಾಗಿ ಆಕೆಗೆ ಹೇಳುತ್ತಿದಾಳೆ, "ಬಾ, ಕೆಳಕ್ಕೆ ಇಳಿದು. ನೀನು ಇಲ್ಲಿಯೇ ನಿಂತುಕೊಂಡುಬಿಟ್ಟಿದ್ದರೆ ಹೇಗಾದೀತು? ನಾನೊಬ್ಬಳೆ ಎಲ್ಲವನ್ನೂ ನಿರ್ವಹಿಸಲು ಸಾಧ್ಯವೆ?" ಅಂತ.

ಆದರೆ ಬ್ರಾಹ್ಮಣಿ ಆನಂದಪರವಶಳಾಗಿಬಿಟ್ಟಿದಾಳೆ. ಪರಮಹಂಸರ ಮತ್ತು ಭಕ್ತರ ಕಡೆ ದೃಷ್ಟಿಸಿ ನೋಡುತ್ತಿದಾಳೆ. ಅವರನ್ನು ಬಿಟ್ಟು ಹೋಗೋದು ಅಂದರೆ ಮನಸ್ಸಿಗೆ ಬಹಳ ಕಷ್ಟವಾಗಿ ತೋರುತ್ತಿದೆ.

ಈ ರೀತಿಯಾದ ಮಾತುಕತೆಗಳಾದನಂತರ ಬ್ರಾಹ್ಮಣಿ ಅತಿಶಯವಾದ ಶ್ರದ್ಧಾಭಕ್ತಿಗಳಿಂದ ಪರಮಹಂಸರನ್ನು ಬೇರೊಂದು ಕೊಠಡಿಗೆ ಕರೆದುಕೊಂಡು ಹೋಗಿ ಅವರಿಗೆ ಮೃಷ್ಟಾನ್ನಾದಿಗಳನ್ನು ಅರ್ಪಿಸಿದಳು. ಭಕ್ತರೆಲ್ಲರು ಚಾವಣಿ ಮೇಲೇ ಕುಳಿತು ಫಲಾಹಾರವನ್ನು ಸ್ವೀಕರಿಸಲಾರಂಭಿಸಿದರು.

ಸಮಯ ರಾತ್ರಿ ಎಂಟಾಗಿದೆ. ಪರಮಹಂಸರು ಹೊರಡಲು ಸಿದ್ಧರಾಗಿದಾರೆ. ಅವರು ಬಾಗಿಲ ಹತ್ತಿರಕ್ಕೆ ಬಂದಾಗ ಬ್ರಾಹ್ಮಣಿ ಪರಮಹಂಸರಿಗೆ ಪ್ರಣಾಮಮಾಡುವಂತೆ ತನ್ನ ಮನೆಯವರಿಗೆ ಕೂಗಿ ಹೇಳಿದಳು. ತರುವಾಯ ಆಕೆಯ ಸಹೋದರನೂ ಅವರ ಪಾದಧೂಳಿಯನ್ನು ತೆಗೆದುಕೊಂಡ. ಆತನನ್ನು ಪರಮಹಂಸರಿಗೆ ತೋರಿಸಿ ಆಕೆ ಹೇಳುತ್ತಿದಾಳೆ, "ಈತನೂ ನನ್ನ ಒಬ್ಬ ಸಹೋದರ ಆದರೆ ಮೂರ್ಖ" ಅಂತ. ಪರಮಹಂಸರು ಹೇಳುತ್ತಿದಾರೆ, "ಇಲ್ಲ, ಇಲ್ಲ. ಎಲ್ಲರೂ ಒಳ್ಳೆಯವರೆ" ಅಂತ.

ಒಬ್ಬ ಕೈಯಲ್ಲಿ ದೀಪ ಹಿಡಿದು ಅವರಿಗೆ ದಾರಿ ತೋರಿಸುತ್ತಿದ್ದ. ಆದರೆ ಕೆಲವೆಡೆಗಳಲ್ಲಿ ಸಾಕಾದಷ್ಟು ಬೆಳಕು ಬೀಳುತ್ತಿರಲಿಲ್ಲ. ಅವರು ದನದ ಕೊಟ್ಟಿಗೆ ಹತ್ತಿರ ಬಂದು ಒಮ್ಮೆಗೆ ಸುಮ್ಮನೆ ನಿಂತುಕೊಂಡುಬಿಟ್ಟರು. ಭಕ್ತರೆಲ್ಲರೂ ಅವರ ಸುತ್ತಲೂ ಬಂದು ನೆರೆದರು. ಮಾಸ್ಟರ್ ಅವರಿಗೆ ಪ್ರಣಾಮಮಾಡಿ ಅವರ ಪಾದಧೂಳಿಯನ್ನು ತೆಗೆದುಕೊಂಡ. ಪರಮಹಂಸರು ಈಗ ಗಣುವಿನ ತಾಯಿಯ ಮನೆಯ ಕಡೆ ಹೋಗುತ್ತಿದಾರೆ.

ಪರಮಹಂಸರು ಗಣುವಿನ ತಾಯಿಯ ಮನೆಯ ಬೈಠಕ್‌ಖಾನೆಯಲ್ಲಿ ಕುಳಿತಿದಾರೆ. ಮನೆ ಒಂದೇ ಅಂತಸ್ತಿನದು; ರಸ್ತೆಯ ಮೇಲೆ ಇದೆ. ಆ ಕೊಠಡಿಯನ್ನು ಗಾನ ಗೋಷ್ಠಿಯವರು ಉಪಯೋಗಿಸುತ್ತಿದ್ದರು. ಪರಮಹಂಸರ ಪ್ರೀತ್ಯರ್ಥವಾಗಿ ಆಗಾಗ ಕೆಲವು ಯುವಕರು ತಮ್ಮ ತಮ್ಮ ವಾದ್ಯಯಂತ್ರಗಳನ್ನು ಬಾಜಿಸಲಾರಂಭಿಸಿದರು.

ಆಗ ಘಂಟೆ ರಾತ್ರಿ ಎಂಟೂವರೆ. ಆಕಾಶ, ಮನೆ, ಬೀದಿ ಇವೆಲ್ಲ ಚಂದ್ರನ ಬೆಳಕಿನಿಂದ ಸುಮ್ಮನೆ ನಗುತ್ತಿವೆ. ಇಂದು ಆಷಾಢ ಕೃಷ್ಣ ಪ್ರಥಮ.

ಬ್ರಾಹ್ಮಣಿಯೂ ಪರಮಹಂಸರೊಡನೆ ಅಲ್ಲಿಗೆ ಬಂದಿದ್ದಳು. ಆಕೆ ಒಮ್ಮೊಮ್ಮೆ ಬೈಠಕ್‌ಖಾನೆಯ ಬಾಗಿಲ ಹತ್ತಿರ ಬಂದು ನಿಂತುಕೊಳ್ಳೋದು,

ಮತ್ತೆ ಮತ್ತೆ ಮನೆಯ ಒಳಕ್ಕೆ ಹೋಗೋದು, ಹೀಗೆಯೇ ಶತಪಥ ಮಾಡುತ್ತಿದಾಳೆ. ಪಕ್ಕದ ಮನೆಗಳ ಹುಡುಗರು ಬೈಠಕ್‌ಖಾನೆಯ ಕಿಟಕಿಯ ಮೇಲೆ ಹತ್ತಿ ಪರಮಹಂಸರ ದರ್ಶನ ಪಡೆಯುತ್ತಿದಾರೆ. ಪರಮಹಂಸರು ಅಲ್ಲಿಗೆ ಬಂದಿದಾರೆ ಎಂಬ ವಾರ್ತೆಯನ್ನು ಕೇಳಿದೊಡನೆಯೆ ಆ ವಠಾರದ ದೊಡ್ಡವರು ಚಿಕ್ಕವರು ಎಲ್ಲರೂ ಅವರ ದರ್ಶನ ಪಡೆಯಲು ಗುಂಪುಗಟ್ಟಿ ಬರಲಾರಂಭಿಸಿದಾರೆ.

ಬೀದಿ ಹುಡುಗರು ಕಿಟಕಿಯ ಮೇಲೆ ಹತ್ತಿ ನಿಂತಿರೋದನ್ನು ನೋಡಿ ಚಿಕ್ಕ ನರೇನ ಹೇಳುತ್ತಿದಾನೆ, “ ನಿಮಗೇನ್ರೋ ಕೆಲಸ ಇಲ್ಲಿ? ಹೋಗಿ, ಹೋಗಿ! ಮನೆಗೆ ಹೋಗಿ!” ಅಂತ. ಪರಮಹಂಸರು ಪ್ರೀತಿಯಿಂದ ಹೇಳುತ್ತಿದಾರೆ, “ ನಿಂತಿರಲಿ ಬಿಡು” ಅಂತ. ಆಗಾಗ ಅವರು, “ ಹರಿಃ ಓಂ! ಹರಿಃ ಓಂ!” ಅಂತ ಹೇಳುತ್ತಲೇ ಇದಾರೆ.

ಬೈಠಕ್‌ಖಾನೆಗೆ ಜಮಖಾನ ಹಾಸಿತ್ತು. ಯುವಕ ಗಾಯಕರು ಅದರ ಮೇಲೆ ಕುಳಿತು ಹಾಡಲಾರಂಭಿಸಿದಾರೆ:

ದೀನರೊಳು ದಯೆ ತೋರೊ ಕೇಶವ, ಕುಂಜಕಾನನಚಾರೀ
ಮಾಧವ ಮನಮೋಹನ, ಮೋಹನ ಮುರಲಿ ಧಾರೀ . . . .

ಶ್ರೀರಾಮಕೃಷ್ಣರು: “ ಆಹ! ಎಂಥ ಸೊಗಸಾದ ಹಾಡುಗಾರಿಕೆ! ಪಿಟೀಲಿನ ಶಬ್ದ ಎಷ್ಟು ಮಾಧುರ್ಯವಾಗಿದೆ! ಎಂಥ ಸೊಗಸಾದ ಪಕ್ಕವಾದ್ಯಗಳು ಇವು! (ಒಬ್ಬ ಯುವಕ ಕೊಳಲು ಊದುತ್ತಿದ್ದ. ಆತನ ಕಡೆ ಮತ್ತು ಇನ್ನೊಬ್ಬ ಯುವಕನ ಕಡೆ ಬೆರಳುಮಾಡಿ) ಇವರಿಬ್ಬರೂ ಒಂದು ಒಳ್ಳೆ ಜೋಡಿ.”

ಈಗ ಕೇವಲ ವಾದ್ಯ ಮೇಳ ಮುಂದುವರಿಯುತ್ತಿದೆ. ಅದು ಮುಗಿದನಂತರ ಪರಮಹಂಸರು ಆನಂದದಿಂದ ಹೇಳುತ್ತಿದಾರೆ, “ ಭೇಷ್, ಎಷ್ಟು ಚೆನ್ನಾಗಿ ನಡೆಯಿತು!” ಅಂತ. ಒಬ್ಬ ಯುವಕನನ್ನು ನಿರ್ದೇಶಿಸಿ ಹೇಳುತ್ತಿದಾರೆ, “ ಈತ ಪ್ರತಿಯೊಂದು ವಾದ್ಯವನ್ನೂ ಬಾಜಿಸಬಲ್ಲ” ಎಂದು. ಮಾಸ್ಟರಿಗೆ ಹೇಳುತ್ತಿದಾರೆ, “ ಇವರೆಲ್ಲರೂ ಒಳ್ಳೆಯವರೆ” ಅಂತ.

ಯುವಕರ ಹಾಡುಗಾರಿಕೆ ಮತ್ತು ವಾದ್ಯ ಮೇಳ ಮುಗಿದನಂತರ ಆ ಯುವಕರು ಭಕ್ತರಿಗೆ ಪ್ರಾರ್ಥನೆಮಾಡಿಕೊಂಡರು, “ ನಿಮ್ಮಲ್ಲಿ ದಯವಿಟ್ಟು ಯಾರಾದರು ಸ್ವಲ್ಪ ಹಾಡಿ” ಅಂತ. ಬ್ರಾಹ್ಮಣಿ ಬಾಗಿಲಿನ

ಹತ್ತಿರ ನಿಂತುಕೊಂಡಿದ್ದಳು. ಆಕೆ ಹೇಳಿದಳು, "ಇವರಲ್ಲಿ ಯಾರಿಗೂ ಹಾಡೋಕೆ ಬರೋದಿಲ್ಲ. ಬಹುಶಃ ಮೋಹಿನೀಬಾಬು ಸ್ವಲ್ಪ ಹಾಡಬಲ್ಲ ಅಂತ ಕಾಣುತ್ತೆ. ಆತನಿಗೆ ಪರಮಹಂಸರ ಎದುರಿಗೆ ಹಾಡೋವಷ್ಟು ಧೈರ್ಯವಿಲ್ಲ" ಅಂತ.

ಒಬ್ಬ ಯುವಕ: "ಏಕೆ ಹೆದರಿಕೋಬೇಕು? ನಾನು ನಮ್ಮ ತಂದೆ ಎದುರಿಗೂ ಹಾಡಿಬಿಡಬಲ್ಲೆ."

ಚಿಕ್ಕ ನರೇನ ಗಟ್ಟಿಯಾಗಿ ನಗುತ್ತ: "ಈತ ಇನ್ನೂ ಅಲ್ಲಿಯವರೆಗೆ ಮುಂದುವರಿದಿಲ್ಲ."

ಎಲ್ಲರೂ ನಗುತ್ತಿದಾರೆ. ಕೆಲವು ನಿಮಿಷಗಳಾದ ನಂತರ ಬ್ರಾಹ್ಮಣಿ ಪರಮಹಂಸರಿಗೆ ಹೇಳಿದಳು, "ದಯವಿಟ್ಟು ಒಳಕ್ಕೆ ಬನ್ನಿ" ಅಂತ.

ಶ್ರೀರಾಮಕೃಷ್ಣರು: "ಏಕೆ ಒಳಕ್ಕೆ?"

ಬ್ರಾಹ್ಮಣಿ: "ಒಳಗೆ ಫಲಾಹಾರವನ್ನು ಅಣಿಮಾಡಿಟ್ಟಿದೆ; ದಯವಿಟ್ಟು ಒಳಕ್ಕೆ ಬನ್ನಿ."

ಶ್ರೀರಾಮಕೃಷ್ಣರು: "ಇಲ್ಲಿಗೇ ಏಕೆ ತಂದುಕೊಡಬಾರದು?"

ಬ್ರಾಹ್ಮಣಿ: "ನಿಮ್ಮ ಪಾದಧೂಳಿ ಆ ಕೊಠಡಿಯಲ್ಲಿ ಬೀಳಬೇಕು ಅಂತ ಗಣುವಿನ ತಾಯಿ ನಿಮ್ಮನ್ನು ಪ್ರಾರ್ಥನೆ ಮಾಡಿಕೊಳ್ಳುತ್ತಿದಾಳೆ. ಆಗ ಅದು ಕಾಶಿಯೇ ಆಗಿಬಿಡುತ್ತದೆ. ಮುಂದೆ ಯಾರಾದರು ಆ ಕೊಠಡಿಯಲ್ಲಿ ಮೃತಪಟ್ಟರೆ ಮತ್ತೆ ಅವರಿಗೆ ಪುನರ್ಜನ್ಮದ ಕೋಟಲೆ-ಗೀಟಲೆ ಯಾವುದೂ ಇರದು ಅಂತ ಆಕೆ ಭಾವಿಸುತ್ತಿದಾಳೆ."

ಪರಮಹಂಸರು ಬ್ರಾಹ್ಮಣಿಯೊಡನೆ ಮತ್ತು ಆ ಮನೆಯ ಒಬ್ಬ ಯುವಕನೊಡನೆ ಮನೆಯ ಒಳಕ್ಕೆ ಹೋದರು. ಭಕ್ತರು ಮನೆಯ ಹೊರಗೆ ಬೆಳದಿಂಗಳಿನಲ್ಲಿ ತಿರುಗಾಡಲಾರಂಭಿಸಿದರು. ಮಾಸ್ಟರ್ ಮತ್ತು ವಿನೋದ ಆ ಮನೆಯ ದಕ್ಷಿಣ ದಿಕ್ಕಿನಲ್ಲಿರೋ ಬೀದಿಯಲ್ಲಿ ಮೆತ್ತಗೆ ನಡೆಯುತ್ತ ಪರಮಹಂಸರ ಜೀವನದ ಘಟನೆಗಳನ್ನು ಸ್ಮರಿಸಿಕೊಳ್ಳುತ್ತಿದಾರೆ.

ಪರಮಹಂಸರು ಬಲರಾಮನ ಮನೆಗೆ ಹಿಂದಿರುಗಿಬಂದು ಆತನ ಬೈಠಕ್‌ಖಾನೆಯ ಪಶ್ಚಿಮ ದಿಕ್ಕಿನಲ್ಲಿರೋ ಒಂದು ಚಿಕ್ಕ ಕೊಠಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದಾರೆ. ಆಗಲೇ ಸಮಯ ರಾತ್ರಿ ಹತ್ತೂ-ಮುಕ್ಕಾಲರ ಹತ್ತಿರ ಹತ್ತಿರ.

ಪರಮಹಂಸರು ಯೋಗೀಂದ್ರನಿಗೆ ಹೇಳಿದರು, "ನನ್ನ ಪಾದಗಳನ್ನು

ಸ್ವಲ್ಪ ಮೆದುವಾಗಿ ಒತ್ತು'' ಅಂತ. ಅವರ ಹತ್ತಿರ ಮಾಸ್ಟರ್ ಕುಳಿತಿದಾನೆ. ಯೋಗೀಂದ್ರ ಅವರ ಪಾದಗಳನ್ನು ಒತ್ತುತ್ತಿದ್ದ ಹಾಗೆಯೆ ಅವರು ಥಟ್ಟನೆ ಹೇಳಿದರು, '' ನನಗೆ ಹಸಿವಾಗುತ್ತಿದೆ. ನನಗೆ ರವೆ ಪಾಯಸ ಬೇಕು'' ಅಂತ.

ಬ್ರಾಹ್ಮಣಿ ಇಲ್ಲಿಗೂ ಬಂದಿದ್ದಳು. ಆಕೆಯ ತಮ್ಮ ಬಹಳ ಚೆನ್ನಾಗಿ ತಬಲ ಬಾರಿಸಬಲ್ಲ. ಪರಮಹಂಸರು ಬ್ರಾಹ್ಮಣಿಯನ್ನು ತೋರಿಸಿ ಹೇಳುತ್ತಿದಾರೆ, '' ಇನ್ನು ಮೇಲೆ ನರೇಂದ್ರನೇ ಆಗಲಿ ಅಥವಾ ಬೇರೆ ಯಾರೇ ಆಗಲಿ ಹಾಡಲು ಬಂದಾಗ, ಈಕೆಯ ಸಹೋದರನನ್ನು ಕರೆಯಿಸಿಬಿಟ್ಟರೇ ಆಯಿತಲ್ಲ'' ಅಂತ.

ಪರಮಹಂಸರು ಸ್ವಲ್ಪ ರವೆ ಪಾಯಸ ಕುಡಿದರು. ಕ್ರಮೇಣ ಯೋಗೀಂದ್ರ ಮೊದಲಾದ ಭಕ್ತರು ಕೊಠಡಿಯಿಂದ ಎದ್ದು ಹೊರಟುಹೋದರು. ಮಾಸ್ಟರ್ ಅವರ ಪಾದವನ್ನು ಒತ್ತುತ್ತಿದಾನೆ. ಅವರು ಆತನೊಡನೆ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು ಬ್ರಾಹ್ಮಣಿಯ ಮತ್ತು ಆಕೆಯ ಬಂಧುಗಳ ಸಂಬಂಧವಾಗಿ ಮಾತೆತ್ತಿ: '' ಆಹ! ಅವರು ಎಷ್ಟು ಆನಂದಪಟ್ಟರು!''

ಮಾಸ್ಟರ್: '' ಏನಾಶ್ಚರ್ಯ! ಯೇಸುಕ್ರಿಸ್ತ ಬದುಕಿದ್ದಾಗ ಇಬ್ಬರು ಸಹೋದರಿಯರು, ಮಾರ್ಥ ಮತ್ತು ಮೇರಿ ಎಂಬುವರು ಇದೇ ವಿಧವಾಗಿ ಆತನೊಡನೆ ವ್ಯವಹರಿಸಿದರು.''

ಶ್ರೀರಾಮಕೃಷ್ಣರು ಉತ್ಸುಕತೆಯಿಂದ: ''ಅವರ ವಿಚಾರ ಏನು ಹೇಳು ನೋಡೋಣ.''

ಮಾಸ್ಟರ್: '' ನಿಮ್ಮ ಹಾಗೆಯೇ ಯೇಸುಕ್ರಿಸ್ತ ಭಕ್ತರೊಡನೆ ಅವರ ಮನೆಗೆ ಒಮ್ಮೆ ಹೋಗಿದ್ದ. ಒಬ್ಬ ಸಹೋದರಿ ಆತನ ದರ್ಶನ ಮಾತ್ರದಿಂದಲೇ ಭಾವೋಲ್ಲಾಸದಿಂದ ತುಂಬಿತುಳುಕಾಡಲಾರಂಭಿಸಿದಳು. ಅದು ಗೌರಾಂಗದೇವನ ಒಂದು ಹಾಡನ್ನು ನನ್ನ ಜ್ಞಾಪಕಕ್ಕೆ ತರುತ್ತಿದೆ:

ಶ್ರೀ ಗೌರಾಂಗನ ರೂಪಸಾಗರದಿ  
ಮುಳುಗಿದ ನನ್ನೀಕಣ್ಣುಗಳು  
ಹೊರಬರದಾದುವು, ಮನವೂ ಮುಳುಗಿತು  
ಈಜುವುದನ್ನೂ ಮರೆಮರೆತು!

'' ಇನ್ನೊಬ್ಬ ಸಹೋದರಿ ಒಬ್ಬಳೇ ಊಟೋಪಚಾರಗಳಿಗಾಗಿ ಅಣಿ

ಮಾಡುತ್ತಿದ್ದಳು. ಆಕೆ ಯೇಸುವಿನ ಹತ್ತಿರ ಬಂದು ದೂರು ಹೇಳಿದಳು, 'ಪ್ರಭು, ನೀವೇ ನೋಡಿ, ಅಕ್ಕ ಏನನ್ಯಾಯ ಮಾಡುತ್ತಿದಾಳೆ. ನಾನೊಬ್ಬಳೆ ಅಲ್ಲಿ ಸಾಯುತ್ತಾ ಇದೇನೆ, ಈಕೆ ಇಲ್ಲಿ ಸುಮ್ಮನೆ ಕುಳಿತಿದಾಳಲ್ಲ!' ಅಂತ. ಆಗ ಯೇಸು ಹೇಳಿದ, 'ನಿನ್ನ ಅಕ್ಕ ನಿಜವಾಗಿಯೂ ಧನ್ಯೆ. ಆಕೆ ಜೀವನದ ಏಕಮಾತ್ರ ಆವಶ್ಯಕತೆಯನ್ನು—ಭಗವಂತನಲ್ಲಿ ಪ್ರೇಮವನ್ನು—ಬೆಳೆಯಿಸಿ ಕೊಂಡಿದಾಳೆ' ಅಂತ."

ಶ್ರೀರಾಮಕೃಷ್ಣರು: "ಒಳ್ಳೆಯದು, ಇದನ್ನೆಲ್ಲ ನೋಡಿ ನಿನಗೇನನಿಸುತ್ತಿದೆ?"

ಮಾಸ್ಟರ್: "ನನಗನಿಸುತ್ತಿದೆ ನೀವು, ಯೇಸು, ಚೈತನ್ಯದೇವ—ಮೂವರೂ ಒಂದೇ; ಒಬ್ಬನೇ ಈ ಮೂರು ರೂಪನ್ನು ತಾಳಿದಾನೆ ಅಂತ."

ಶ್ರೀರಾಮಕೃಷ್ಣರು: "ಹೌದು, ಹೌದು! ಒಬ್ಬನೆ! ಒಬ್ಬನೆ! ನಿಜವಾಗಿಯೂ ಒಬ್ಬನೆ. ಭಗವಂತನೇ ಇಲ್ಲಿ ಈ ರೀತಿಯಾಗಿ ವಾಸಿಸುತ್ತಿದಾನೆ ಎಂಬುದು ನಿನ್ನ ಕಣ್ಣಿಗೆ ಕಾಣುತ್ತಿಲ್ಲವೇನು?"

ಪರಮಹಂಸರು ಹೀಗೆಂದು ಹೇಳಿದಾಗ ತಮ್ಮ ಬೆರಳನ್ನು ತಮ್ಮ ಶರೀರದ ಕಡೆಗೆ ತೋರಿಸಿದರು.

ಮಾಸ್ಟರ್: "ನೀವು ಅಂದು ಭಗವಂತ ಅವತೀರ್ಣನಾಗೋ ಬಗೆ ಹೇಗೆ ಎಂಬುದನ್ನು ಬಹಳ ಚೆನ್ನಾಗಿ ವಿವರಿಸಿ ಹೇಳಿದಿರಿ."

ಶ್ರೀರಾಮಕೃಷ್ಣರು: "ಏನು ಹೇಳಿದೆ ಹೇಳು ನೋಡೋಣ."

ಮಾಸ್ಟರ್: "ದಿಕ್ ದಿಗಂತದವರೆಗೆ ವ್ಯಾಪಕವಾಗಿರೋ ಒಂದು ಮೈದಾನವಿದೆ ಅಂತ ಭಾವಿಸಿಕೊಳ್ಳಿ. ಅದು ಯಾವ ತಡೆಯೂ ಇಲ್ಲದೆ ಸುಮ್ಮನೆ ಹರಡಿಕೊಂಡಿದೆ. ನಮಗೆ ಅಡ್ಡಲಾಗಿ ಎದ್ದಿರೋ ಗೋಡೆಯ ದೆಸೆಯಿಂದ ನಾವು ಆ ಮೈದಾನವನ್ನು ನೋಡಲಾಗುತ್ತಿಲ್ಲ. ಆದರೆ ಆ ಗೋಡೆಯಲ್ಲಿ ಕೇವಲ ಒಂದೇ ಒಂದು ರಂಧ್ರವಿದೆ. ಅದರ ಮೂಲಕ ಆ ಅನಂತ ಮೈದಾನದ ಸ್ವಲ್ಪ ಭಾಗವನ್ನು ನೋಡಲು ಸಾಧ್ಯವಾಗುತ್ತಿದೆ."

ಶ್ರೀರಾಮಕೃಷ್ಣರು: "ಆ ರಂಧ್ರವೆಂಬುದು ಏನು ಹೇಳು ನೋಡೋಣ?"

ಮಾಸ್ಟರ್: "ನೀವೇ ಆ ರಂಧ್ರ. ನಿಮ್ಮ ಮೂಲಕ ಎಲ್ಲವನ್ನೂ

ನೋಡಲು ಸಾಧ್ಯ; ಆ ದಿಕ್ ದಿಗಂತದ ವೈದಾನವನ್ನು ನೋಡಬಹುದು.''

ಪರಮಹಂಸರು ಅತ್ಯಂತ ಸಂತುಷ್ಟರಾಗಿ ಮಾಸ್ಟರ ಬೆನ್ನನ್ನು ತಟ್ಟುತ್ತ ಹೇಳಲಾರಂಭಿಸಿದರು, ''ಬಹಳ ಒಳ್ಳೆಯದು ! ನೀನು ಸರಿಯಾಗಿ ಅರಿತುಕೊಂಡುಬಿಟ್ಟಿದೀಯೆ !'' ಅಂತ.

ಮಾಸ್ಟರ್ : ''ಆತ ಪೂರ್ಣಬ್ರಹ್ಮನಾಗಿದ್ದುಕೊಂಡು ಇದೊಂದಿಷ್ಟು ಶರೀರದೊಳಗೆ ಹೇಗೆ ಇರಬಲ್ಲ ಎಂಬುದನ್ನು ಸರಿಯಾಗಿ ಗ್ರಹಿಸಲಾಗುತ್ತಿಲ್ಲ. ಅದನ್ನು ಗ್ರಹಿಸೋದು ಬಹಳ ಕಷ್ಟ.''

ಪರಮಹಂಸರು ಒಂದು ಹಾಡಿನ ಚರಣವನ್ನು ಹಾಡುತ್ತಿದಾರೆ :

ಅವನು ಯಾರೆಂಬುದನು ಒಬ್ಬರೂ ತಿಳಿಯರು
ಉನ್ಮತ್ತನಂತೆ ದರಿದ್ರ ಭಿಕ್ಷುಕನಂತೆ
ಮನೆಮನೆಯ ಬಾಗಿಲಲಿ ಸುತ್ತುವನು ಅವನು !

ಮಾಸ್ಟರ್ : ನೀವು ಯೇಸುವಿನ ವಿಷಯವಾಗಿಯೂ ಹೇಳಿದಿರಿ.''

ಶ್ರೀರಾಮಕೃಷ್ಣರು : ''ಏನು ಹೇಳಿದೆ?''

ಮಾಸ್ಟರ್ : ''ಯದುಮಲ್ಲಿಕನ ತೋಟದ ಮನೆಯಲ್ಲಿ ಯೇಸುವಿನ ಪಟ ನೋಡಿ ನಿಮಗೆ ಭಾವಸಮಾಧಿಯಾಗಿಬಿಟ್ಟಿತು. ಯೇಸುಕ್ರಿಸ್ತ ಆ ಪಟದಿಂದ ಕೆಳಕ್ಕೆ ಇಳಿದುಬಂದು ನಿಮ್ಮಲ್ಲಿ ಐಕ್ಯವಾಗಿಬಿಟ್ಟ.''

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಬಳಿಕ ಮಾಸ್ಟರಿಗೆ ಹೇಳುತ್ತಿದಾರೆ, ''ನೋಡು, ನನಗೆ ಗಂಟಲಿನಲ್ಲಿ ಹುಣ್ಣು ಆಗಿಬಿಟ್ಟಿದೆಯಲ್ಲ, ಇದರಲ್ಲಿ ಬಹುಶಃ ಒಂದು ಅರ್ಥವಿದೆ. ಎಲ್ಲರೊಡನೆಯೂ ಹುಡುಗಾಟವಾಡದಿರಲೆಂದು; ಸಿಕ್ಕಿ ಸಿಕ್ಕಿದ ಕಡೆಯಲ್ಲೆಲ್ಲ ತಿಂದು ನರ್ತಿಸಿ ಹಾಡದಿರಲೆಂದು ಅಂತ ಕಾಣುತ್ತೆ'' ಅಂತ.

ಪರಮಹಂಸರು ದ್ವಿಜನ ಸಂಬಂಧವಾಗಿ ಮಾತನಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು : ''ಇಂದು ದ್ವಿಜ ಬರಲಿಲ್ಲವೆ?''

ಮಾಸ್ಟರ್ : ''ಬರೋಕೆ ಹೇಳಿದ್ದೆ. ಬರುತ್ತೇನೆ ಅಂತಲು ಹೇಳಿದ್ದ. ಆದರೂ ಏಕೆ ಬರಲಿಲ್ಲವೊ ಗೊತ್ತಾಗಲಿಲ್ಲ.''

ಶ್ರೀರಾಮಕೃಷ್ಣರು: ''ಆತನ ಭಗವಂತನಲ್ಲಿನ ಅನುರಾಗ ಬಹಳ

ವಿಶೇಷವಾದ್ದು. ಆತ ಇಲ್ಲಿಗೆ (ಪರಮಹಂಸರ ಅಂತರಂಗ ಭಕ್ತರ ಗುಂಪಿಗೆ) ಸೇರಿದವನೊಬ್ಬನಾಗುತ್ತಾನೆ, ಅಲ್ಲವೆ?''

ಮಾಸ್ಟರ್: "ಹೌದು, ಆತನಾಗಬಹುದು. ಇಲ್ಲದಿದ್ದರೆ ಆತನಲ್ಲಿ ಅಷ್ಟೊಂದು ಅನುರಾಗಕ್ಕೆ ಕಾರಣ?''

ಪರಮಹಂಸರ ಸೊಳ್ಳೆಪರದೆಯೊಳಕ್ಕೆ ನುಗ್ಗಿ ಈಗ ಮಾಸ್ಟರ್ ಅವರಿಗೆ ಗಾಳಿ ಬೀಸುತ್ತಿದಾನೆ. ಅವರು ಮಗ್ಗುಲಾಗಿ ಮಲಗಿಕೊಂಡು ಭಗವಂತ ಅವತರಿಸೋ ಬಗೆ ಹೇಗೆ ಎಂಬ ವಿಷಯವಾಗಿ ಮಾಸ್ಟರಿಗೆ ತಿಳಿಸುತ್ತಿದಾರೆ. ಮತ್ತೆ ಅವರು ಆತನ ಆಧ್ಯಾತ್ಮಿಕ ಜೀವನದ ಆದರ್ಶದ ಸಂಬಂಧವಾಗಿ ತಿಳಿಸಲಾರಂಭಿಸಿದರು.

ಶ್ರೀರಾಮಕೃಷ್ಣರು: "ನೀನು ಆ ಅಂತಸ್ತಿಗೆ ಸೇರಿದವನು. ಮೊದಲು ಮೊದಲು ನನಗೆ ಭಗವಂತನ ರೂಪ-ಗೀಪಗಳ ದರ್ಶನವಾಗುತ್ತಿರಲಿಲ್ಲ. ಈಗ ಮತ್ತೆ ಅವು ಕಡಮೆಯಾಗಿಬಿಟ್ಟವೆ.''

ಮಾಸ್ಟರ್: "ಭಗವಂತನ ಲೀಲೆಯಲ್ಲಿ ಆತನ ನರಲೀಲೆ ನನಗೆ ಬಹಳವಾಗಿ ರುಚಿಸುತ್ತಿದೆ.''

ಶ್ರೀರಾಮಕೃಷ್ಣರು: "ಅದೇ ಯಥೇಷ್ಟ. ಜೊತೆಗೆ ನನ್ನನ್ನೂ ನೀನು ನೋಡುತ್ತಿದೀಯೆ.''



೪೪

# ಶ್ರೀರಾಮಕೃಷ್ಣರು ತಮ್ಮ ಮತ್ತು ತಮ್ಮ ಅನುಭವಗಳ ಮೇಲೆ

೯ನೆ ಆಗಸ್ಟ್ ೧೮೮೫, ಕೃಷ್ಣ ಚತುರ್ದಶಿ, ಭಾನುವಾರ.

ಪರಮಹಂಸರು ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ರಾಖಾಲ, ದ್ವಿಜ, ದ್ವಿಜನ ತಂದೆ, ಮಾಸ್ಟರ್ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಅಲ್ಲಿ ಕುಳಿತಿದಾರೆ. ಘಂಟೆ ಅಪರಾಹ್ನ ನಾಲ್ಕರ ಹತ್ತಿರ ಹತ್ತಿರ.

ರಾಖಾಲ ಬೃಂದಾವನದಿಂದ ಹಿಂದಿರುಗಿ ಬಂದ ಮೇಲೆ ತನ್ನ ಮನೆಯಲ್ಲೆ ಕೆಲವು ದಿನಗಳನ್ನು ಕಳೆದ. ಈಗ ಪರಮಹಂಸರೊಡನೆಯೇ ಇದಾನೆ. ಲಾಟು, ಹರೀಶ, ರಾಮಲಾಲ ಇವರೂ ಪರಮಹಂಸರೊಡನೆ ಇದ್ದುಕೊಂಡಿದಾರೆ.

ಪರಮಹಂಸರ ಆರೋಗ್ಯ ಚೆನ್ನಾಗಿಲ್ಲ. ಏಡಿ ಹುಣ್ಣಿನ ರೋಗ ಎಂದು ಕ್ರಮೇಣ ಗೊತ್ತಾದ ಆ ಪ್ರಾಣಾಂತಕ ರೋಗದ ಆರಂಭ. ಆದರೆ ಇದು ಅವರ ಮಾನಸಿಕ ಶಾಂತತೆಗೆ ಯಾವ ಭಂಗವನ್ನೂ ತಂದಿಲ್ಲ. ಅವರು ಹಗಲೂ ಇರುಳು ಒಂದೇ ಒಂದು ಭಾವನೆಯಲ್ಲೇ, ತಮ್ಮ ಶಿಷ್ಯರನ್ನು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಸುವ ಯೋಚನೆಯಲ್ಲೇ ಮಗ್ನರಾಗಿಹೋಗಿದಾರೆ. ಜ್ಞಾನ ಮತ್ತು ಭಕ್ತಿಯನ್ನು ಬೆಳಸಿಕೊಳ್ಳಲು ಸತತ ಅವರಿಗೆ ಪ್ರೋತ್ಸಾಹವೀಯುತ್ತಿದಾರೆ; ಕಾಮಕಾಂಚನದ ಸಂಬಂಧವಾಗಿ ಎಚ್ಚರಿಕೆಯನ್ನೀಯುತ್ತಿದಾರೆ. ತಮ್ಮ ರೋಗದ ಸಂಬಂಧವಾಗಿ ಒಂದು ಕಿಂಚಿತ್ತೂ ಮನಸ್ಸಿಗೆ ಹಚ್ಚಿಕೊಳ್ಳದೆ ತಮ್ಮ ಜೀವನೋದ್ದೇಶದ ಪೂರ್ಣತೆಗಾಗಿ ತಮ್ಮ ಇಡೀ ಮನಸ್ಸನ್ನೆಲ್ಲ ವಿನಿಯೋಗಿಸುತ್ತಿದಾರೆ.

ದ್ವಿಜನಿಗೆ ವಯಸ್ಸು ಹದಿನಾರು ಇರಬಹುದು. ಆತನ ತಾಯಿ ಪರಲೋಕವನ್ನು ಪಡೆದನಂತರ, ಆತನ ತಂದೆ ಎರಡನೆ ಹೆಂಡತಿಯನ್ನು

ಮದುವೆಯಾಗಿದಾನೆ. ದ್ವಿಜ ಆಗಾಗ ಮಾಸ್ಟರೊಡನೆ ದಕ್ಷಿಣೇಶ್ವರಕ್ಕೆ ಬರುತ್ತಲೇ ಇದ್ದ; ದ್ವಿಜನ ತಂದೆಗೆ ಇದು ರುಚಿಸುತ್ತಿರಲಿಲ್ಲ.

ಪರಮಹಂಸರನ್ನು ನೋಡಿಬರಬೇಕೆಂಬ ಇಚ್ಛೆ ತನಗಿದೆಯೆಂದು ದ್ವಿಜನ ತಂದೆ ಬಹಳ ಕಾಲದಿಂದಲೂ ಹೇಳುತ್ತಲೇ ಇದ್ದ. ಇಂದು ಆತ ದಕ್ಷಿಣೇಶ್ವರಕ್ಕೆ ಬಂದಿದಾನೆ. ಆತ ಕಲ್ಕತ್ತದಲ್ಲಿಯೇ ಒಂದು ವ್ಯಾಪಾರ ಸಂಸ್ಥೆಯ ಮ್ಯಾನೇಜರ್. ಲಾ ಓದಿದಾನೆ.

ಶ್ರೀರಾಮಕೃಷ್ಣರು ದ್ವಿಜನ ತಂದೆಗೆ: "ನಿಮ್ಮ ಮಕ್ಕಳು ಇಲ್ಲಿಗೆ ಬಂದುಹೋಗುತ್ತಿರೋದನ್ನು ನೋಡಿ ನೀವು ಹೆದರಬೇಕಾಗಿಲ್ಲ.

"ನಾನು ಜನರಿಗೆ ಹೇಳುತ್ತೇನೆ, ಆತ್ಮಜಾಗೃತಿಯಾದನಂತರ ಬೇಕಾದರೆ ಸಂಸಾರದಲ್ಲಿ ಹೋಗಿ ಇರಿ ಅಂತ. ಬಹಳ ಕಷ್ಟಪಟ್ಟು ಕೆಲಸ ಮಾಡಿ ಚಿನ್ನವನ್ನು ಸಂಗ್ರಹಿಸಿಕೊಂಡನಂತರ ಅದನ್ನು ಭೂಮಿಯೊಳಗೆ ಬೇಕಾದರೂ ಹೂತಿಡಬಹುದು, ಪೆಟ್ಟಿಗೆಯಲ್ಲಿ ಬೇಕಾದರೂ ಇಡಬಹುದು ಅಥವಾ ನೀರಿನಲ್ಲಿ ಬೇಕಾದರೂ ಮುಳುಗಿಸಿಡಬಹುದು. ಅದಕ್ಕೇನೂ ಆಗದು.

"ನಾನು ಜನರಿಗೆ ಹೇಳುತ್ತೇನೆ, ಅನಾಸಕ್ತರಾಗಿ ಸಂಸಾರದಲ್ಲಿರಿ ಅಂತ. ಕೈಗೆ ಎಣ್ಣೆ ಹಚ್ಚಿಕೊಂಡು ಹಲಸಿನ ಹಣ್ಣು ಬಿಡಿಸಿದರೆ ಅದರ ಅಂಟು ಕೈಗೆ ಅಂಟಿಕೊಳ್ಳದು.

"ಅಪಕ್ವ ಮನಸ್ಸನ್ನು ಸಂಸಾರದಲ್ಲಿ ಇಟ್ಟಿದ್ದೇ ಆದರೆ ಅದು ಮಲಿನ ವಾಗಿ ಹೋಗಿಬಿಡುತ್ತದೆ. ಮೊದಲು ಬ್ರಹ್ಮಜ್ಞಾನವನ್ನು ಪಡೆದುಕೊಂಡು ಆ ಬಳಿಕ ಬೇಕಾದರೆ ಸಂಸಾರದಲ್ಲಿ ವಾಸಿಸಬೇಕು.

"ಹಾಲನ್ನು ನೀರಿಗೆ ಬೆರಸಿದರೆ ಹಾಲು ಕೆಟ್ಟುಹೋಗುತ್ತದೆ. ಆದರೆ ಹಾಲಿನಿಂದ ಬೆಣ್ಣೆ ತೆಗೆದು ಅದನ್ನು ನೀರಿನಲ್ಲಿ ಇಟ್ಟರೆ ಅದು ಕೆಟ್ಟು ಹೋಗದು."

ದ್ವಿಜನ ತಂದೆ: "ಹೌದು, ಅದೇನೊ ನಿಜ."

ಶ್ರೀರಾಮಕೃಷ್ಣರು ನಗುತ್ತ: "ನೀವು ನಿಮ್ಮ ಮಕ್ಕಳನ್ನ ಏಕೆ ಬಯ್ದು-ಗಿಯ್ದು ಮಾಡುತ್ತೀರಿ ಎಂಬುದು ನನಗೆ ಗೊತ್ತಿದೆ ನೀವು ಸುಮ್ಮನೆ ಹೆದರಿಸುತ್ತೀರಿ ಅಷ್ಟೆ. ಬ್ರಹ್ಮಚಾರಿ ಹಾವಿಗೆ ಹೇಳಿದ, 'ನೀನೊಬ್ಬ ದೊಡ್ಡ ದಡ್ಡ! ಕಚ್ಚಕೂಡದೆಂದು ಹೇಳಿದೆನೇ ವಿನಾ ಬುಸ ಗುಟ್ಟಬೇಡ ಅಂತಲೇನು ಹೇಳಲಿಲ್ಲವಲ್ಲ. ನೀನು ಬುಸುಗುಟ್ಟಿದ್ದರೆ

ನಿನ್ನನ್ನು ಹಿಡಿದು ಅಪ್ಪಳಿಸಲು ನಿನ್ನ ಶತ್ರುಗಳಿಗೆ ಧೈರ್ಯವಿರುತ್ತಿರಲಿಲ್ಲ' ಅಂತ. ನೀವು ನಿಮ್ಮ ಮಕ್ಕಳನ್ನು ಬಯ್ಯೋದು-ಗಿಯ್ಯೋದು ಇವೆಲ್ಲ ಬುಸುಗುಟ್ಟುವಿಕೆ ಮಾತ್ರವೆ. (ದ್ವಿಜನ ತಂದೆ ನಗುತ್ತಿದಾನೆ.)

"ಒಳ್ಳೆ ಮಕ್ಕಳು ಹುಟ್ಟಿದರು ಎಂದರೆ, ಅದು ತೋರಿಸುತ್ತದೆ ತಂದೆಯ ಪುಣ್ಯ ಎಂಥದು ಎಂಬುದನ್ನು. ಕೊಳದಲ್ಲಿ ಒಳ್ಳೆ ನೀರು ಬಂತು ಎಂದರೆ, ಅದು ತೋರಿಸುತ್ತದೆ ತೋಡಿಸಿದವ ಎಂಥ ಪುಣ್ಯಶಾಲಿಯಾಗಿರ ಬೇಕು ಎಂಬುದನ್ನು.

"ಪುತ್ರನನ್ನು ಆತ್ಮಜ ಅಂತ ಕರೆಯುತ್ತಾರೆ. ನಿನಗು ನಿನ್ನ ಪುತ್ರನಿಗು ಯಾವ ಭೇದವೂ ಇಲ್ಲ. ನೀನೇ ಒಂದು ವಿಧದಲ್ಲಿ ಪುತ್ರನಾಗಿ ಹುಟ್ಟಿದೀಯೆ. ಒಂದು ದೃಷ್ಟಿಯಿಂದ ನೀನೇ ಒಬ್ಬ ಆಫೀಸರ್ ಆಗಿ ಸಾಂಸಾರಿಕ ಸುಖದುಃಖಗಳನ್ನು ಅನುಭವಿಸುತ್ತಿರೋ ಸಂಸಾರಿ ಯಾಗಿದೀಯೆ; ಇನ್ನೊಂದು ದೃಷ್ಟಿಯಿಂದ ನೀನೇ ನಿನ್ನ ಪುತ್ರನ ರೂಪ ದಿಂದ ಭಗವದ್ಭಕ್ತನಾಗಿದೀಯೆ. ಯಾರೊ ಹೇಳಿದರು ನೀನೊಬ್ಬ ದೊಡ್ಡ ಪ್ರಾಪಂಚಿಕ ಅಂತ, ಆದರೆ ನೀನು ಅಂಥವನೇನಲ್ಲ. (ನಗುತ್ತ) ಇದೆಲ್ಲ ನಿನಗೆ ಗೊತ್ತಿರೋ ವಿಷಯವೆ. ಆದರೆ ನೀನೊಬ್ಬ ಬಹಳ ಜಾಗರೂಕನಾದ ಮನುಷ್ಯ. ಬಹುಶಃ ಅದಕ್ಕಾಗೇ ಇರಬೇಕು ನಾನು ಹೇಳುತ್ತಿರೋದಕ್ಕೆಲ್ಲ 'ಹ್ಞೂ' ಗುಟ್ಟಿಕೊಂಡು ಹೋಗುತ್ತಿರೋದು ನೀನು ಅಂತ ಕಾಣುತ್ತೆ. (ದ್ವಿಜನ ತಂದೆ ನಗುತ್ತಿದಾನೆ.)

"ನಿನ್ನ ಮಕ್ಕಳು ಇಲ್ಲಿಗೆ ಬಂದುಹೋಗುತ್ತಿದ್ದರೆ ನೀನು ಎಂಥ ವಸ್ತು ಎಂಬುದು ಅವರ ಅರಿವಿಗೆ ಬರುತ್ತದೆ. ತಂದೆ ಎಂಬೋನು ಎಂಥ ಅಮೌಲ್ಯವಾದ ವಸ್ತು ! ತಂದೆ ತಾಯಿಯರನ್ನು ವಂಚಿಸಿ ಧಾರ್ಮಿಕರಾಗ ಬೇಕೆಂದು ಯಾರು ಪ್ರಯತ್ನಿಸುತ್ತಾರೊ ಅವರಿಗೆ ದೊರೆಯೋದು ಅದರ ಹೊಟ್ಟು ಮಾತ್ರ.

"ಮನುಷ್ಯನಿಗೆ ಅನೇಕ ಋಣಗಳಿವೆ: ಪಿತೃ-ಋಣ, ದೇವ-ಋಣ, ಋಷಿ-ಋಣ. ಇವೂ ಅಲ್ಲದೆ ಮಾತೃ-ಋಣವೂ ಇದೆ. ಜೊತೆಗೆ ಪರಿವಾರದ-ಋಣವೂ ಇದೆ. ಆಕೆಯನ್ನು ಪ್ರತಿಪಾಲಿಸಿಕೊಂಡು ಬರಬೇಕು. ಆಕೆ ಪತಿವ್ರತೆಯಾಗಿದ್ದರೆ ತಾನು ಸತ್ತನಂತರ ಆಕೆಗೆ ಬೇಕಾಗೋ ಅನು ಕೂಲತೆಗಳನ್ನು ಮಾಡಿಡಬೇಕು.

"ನಾನು ತಾಯಿಯ ಸಲುವಾಗಿ ಬೃಂದಾವನದಲ್ಲಿ ವಾಸಿಸಲಾಗಲಿಲ್ಲ.

ನನ್ನ ತಾಯಿ ಒಬ್ಬಳೆ ದಕ್ಷಿಣೇಶ್ವರದ ಕಾಳೀದೇವಾಲಯದಲ್ಲಿ ಇದ್ದಾಳೆ ಎಂಬ ಭಾವನೆ ನನ್ನ ಮನಸ್ಸಿನಲ್ಲಿ ಮೂಡಿದೊಡನೆಯೇ, ಅದು ಬೃಂದಾವನದಲ್ಲಿ ನಿಲ್ಲದೆ ಹೋಯಿತು.

"ನಾನು ಇವರಿಗೆಲ್ಲ ಹೇಳುತ್ತಿದೇನೆ, ಸಂಸಾರಾನೂ ಮಾಡಿ, ಭಗವಂತನಲ್ಲೂ ಮನಸ್ಸನ್ನಿಟ್ಟಿರಿ ಅಂತ. ಸಂಸಾರವನ್ನು ಬಿಟ್ಟುಬಿಡಿ ಅಂತ ಹೇಳುತ್ತಿಲ್ಲ. ಇದನ್ನೂ ಮಾಡಿ, ಅದನ್ನೂ ಮಾಡಿ ಅಂತ ಹೇಳುತ್ತಿದೇನೆ."

ದ್ವಿಜನ ತಂದೆ: "ಓದೋದು ಬರೆಯೋದರ ಕಡೆ ಗಮನವೀಯಬೇಕು ಅಂತ ನನ್ನ ಮಕ್ಕಳಿಗೆ ನಾನು ಹೇಳುತ್ತಿದೇನೆ ವಿನಾ ಇಲ್ಲಿಗೆ ಬರಬಾರದು ಅಂತಲೇನು ಹೇಳುತ್ತಿಲ್ಲ. ಆದರೆ ಹುಡುಗರೊಡನೆ ಬೆರತು ಹುಡುಗಾಟವಾಡುತ್ತಲೇ ಕಾಲಕಳೆಯದಿರಲೆಂಬುದೇ ನನ್ನ ಆಶಯ."

ಶ್ರೀರಾಮಕೃಷ್ಣರು ದ್ವಿಜನ ಮಾತೆತ್ತಿ: "ಈ ಹುಡುಗ ಒಳ್ಳೆ ಸಂಸ್ಕಾರಗಳಿಂದ ಜನ್ಮವೆತ್ತಿರಲೇ ಬೇಕು. ಕೇವಲ ಈತನ ಮನಸ್ಸೇ ಭಗವಂತನ ಕಡೆಗೆ ತಿರುಗಿ, ಈತನ ಸಹೋದರರಿಬ್ಬರಿಗೂ ಹಾಗಾಗದಿರಲು ಕಾರಣವೇನು? ಬಲಾತ್ಕಾರದಿಂದ ಯಾರನ್ನೇ ಆಗಲಿ ತಡೆಗಟ್ಟಿ ನಿಲ್ಲಿಸಲಾಗುವುದೆ? ಯಾರಾರಿಗೆ ಏನೇನು ಸಂಸ್ಕಾರವಿದೆಯೊ ಅವರವರು ಅದರಂತೆ ಆಗುತ್ತಾರೆ."

ದ್ವಿಜನ ತಂದೆ: "ಅದೇನೊ ನಿಜ."

ಪರಮಹಂಸರು ದ್ವಿಜನ ತಂದೆಯ ಹತ್ತಿರ ಬಂದು ಮಂದಲಿಗೆ ಮೇಲೆ ಕುಳಿತುಕೊಂಡಿದಾರೆ. ಮಾತುಮಾತನಾಡುತ್ತ ಇದ್ದಹಾಗೇ ಒಮ್ಮೊಮ್ಮೆ ಆತನ ಶರೀರವನ್ನು ಸವರುತ್ತಿದಾರೆ.

ಇನ್ನೇನು ಸಾಯಂಕಾಲವಾಗೋದರಲ್ಲಿದೆ. ಪರಮಹಂಸರು ಮಾಸ್ಟರ್ ಮೊದಲಾದವರಿಗೆ ಹೇಳುತ್ತಿದಾರೆ, "ಇವರೆಲ್ಲರನ್ನೂ ಕರೆದುಕೊಂಡು ಹೋಗಿ ದೇವಾಲಯಗಳನ್ನು ತೋರಿಸಿಕೊಂಡು ಬನ್ನಿ. ನನ್ನ ಆರೋಗ್ಯ ಸರಿಯಾಗಿದ್ದರೆ ನಾನೇ ಆ ಕಾರ್ಯವನ್ನು ಮಾಡುತ್ತಿದ್ದೆ" ಅಂತ. ಮಕ್ಕಳಿಗೆಲ್ಲ ಸಂದೇಶವನ್ನು (ಸಿಹಿ ತಿಂಡಿಯನ್ನು) ಕೊಡುವಂತೆ ಹೇಳಿದರು. ದ್ವಿಜನ ತಂದೆಗೆ ಹೇಳುತ್ತಿದಾರೆ, "ಈ ಹುಡುಗರ ಬಾಯಿ ಸ್ವಲ್ಪ ಸಿಹಿಯಾಗಲಿ. ಇದು ಇಲ್ಲಿನ ರೂಢಿ" ಅಂತ. ದ್ವಿಜನ ತಂದೆ ದೇವಾಲಯಗಳನ್ನೆಲ್ಲ ನೋಡಿಬಂದು ತೋಟದಲ್ಲಿ ಅಡ್ಡಾಡುತ್ತಿದಾನೆ.

ಪರಮಹಂಸರು ಭೂಪೇನ, ದ್ವಿಜ, ಮಾಸ್ಟರ್ ಇವರೇ ಮೊದಲಾದವರೊಡನೆ ತಮ್ಮ ಕೊಠಡಿಗೆ ಆಗ್ನೇಯ ದಿಕ್ಕಿನಲ್ಲಿರೋ ವರಾಂಡದಲ್ಲಿ ಆನಂದದಿಂದ ಮಾತುಕತೆಗಳನ್ನಾಡುತ್ತಿದಾರೆ. ತಮಾಷೆಗಾಗಿ ಅವರು ಮಾಸ್ಟರ್ ಮತ್ತು ಭೂಪೇನನ ಬೆನ್ನಿನ ಮೇಲೆ ಒಂದೆರಡು ಏಟು ಹಾಕಿದರು. ನಗುತ್ತ ದ್ವಿಜನಿಗೆ ಹೇಳುತ್ತಿದಾರೆ, "ನೋಡಿದೆಯಾ, ನಿನ್ನ ತಂದೆಯೊಡನೆ ನಾನು ಹೇಗೆ ಮಾತನಾಡಿದೆ!" ಅಂತ.

ಮುಚ್ಚಂಜೆಯಾದನಂತರ ದ್ವಿಜನ ತಂದೆ ಮತ್ತೆ ಪರಮಹಂಸರ ಕೊಠಡಿಗೆ ಬಂದಿದಾನೆ. ಇನ್ನೇನು ಸ್ವಲ್ಪ ಹೊತ್ತಿನಲ್ಲೇ ಅವರಿಂದ ಬೀಳ್ಕೊಳ್ಳುವುದರಲ್ಲಿದಾನೆ. ಆತನಿಗೆ ಸ್ವಲ್ಪ ಸೆಕೆಯಾಗಿರುವಂತೆ ಕಂಡುಬಂದುದನ್ನು ನೋಡಿ ಪರಮಹಂಸರೇ ಆತನಿಗೆ ಬೀಸಣಿಗೆಯಿಂದ ಬೀಸಲಾರಂಭಿಸಿದಾರೆ. ಈಗ ಆತ ಅವರಿಂದ ಬೀಳ್ಕೊಂಡ. ಆತನಿಗೆ ಗೌರವ ತೋರಿಸಲು ತಾವಾಗಿಯೇ ಎದ್ದು ನಿಂತುಕೊಂಡಿದಾರೆ.

ಘಂಟೆ ರಾತ್ರಿ ಎಂಟು. ಪರಮಹಂಸರು ಮಹಿಮಚರಣನೊಡನೆ ಮಾತಾಡುತ್ತಿದಾರೆ. ರಾಖಾಲ, ಮಾಸ್ಟರ್, ಮಹಿಮಚರಣನ ಒಬ್ಬಿಬ್ಬರು ಭಕ್ತರು ಇವರೇ ಮೊದಲಾದವರು ಕೊಠಡಿಯಲ್ಲಿ ಕುಳಿತಿದಾರೆ. ಮಹಿಮಚರಣ ಇಂದಿನ ರಾತ್ರಿ ಇಲ್ಲೇ ಇರುತ್ತಾನೆ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಒಳ್ಳೇದು, ಕೇದಾರನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು? ಆತ ಹಾಲನ್ನು ನೋಡಿರೋದಷ್ಟೆಯೊ ಅಥವಾ ಕುಡಿದಿದಾನೊ?"

ಮಹಿಮಚರಣ: "ಹೌದು, ಆತ ಆನಂದವನ್ನು ಸವಿಯುತ್ತಿದಾನೆ."

ಶ್ರೀರಾಮಕೃಷ್ಣರು: "ನಿತ್ಯಗೋಪಾಲನೊ?"

ಮಹಿಮಚರಣ: "ಬಹಳವಾಗಿ! — ಬಹಳ ಒಳ್ಳೆ ಅವಸ್ಥೆಯಲ್ಲಿದಾನೆ."

ಶ್ರೀರಾಮಕೃಷ್ಣರು: "ಹೌದು, ನಿಜ. ಒಳ್ಳೆಯದು, ಗಿರೀಶ ಘೋಷನ ಅವಸ್ಥೆ ಹೇಗೆ?"

ಮಹಿಮಚರಣ: "ಆತನೂ ಚೆನ್ನಾಗಿ ಮುಂದುವರಿದಿದಾನೆ. ಆದರೆ ಆತನ ಶ್ರೇಣಿಯೇ ಪ್ರತ್ಯೇಕ."

ಶ್ರೀರಾಮಕೃಷ್ಣರು: "ನರೇಂದ್ರ?"

ಮಹಿಮಚರಣ : “ ನನಗೆ ಹದಿನೈದು ವರ್ಷಗಳ ಹಿಂದೆ ಏನವಸ್ಥೆ ಬಂದಿತ್ತೊ ಆ ಅವಸ್ಥೆಯಲ್ಲಿದಾನೆ ಆತ ಈಗ. ”

ಶ್ರೀರಾಮಕೃಷ್ಣರು : “ ಚಿಕ್ಕ ನರೇನನೊ ? ಆತ ಎಷ್ಟು ಸರಳ ! ”

ಮಹಿಮಚರಣ : “ ಹೌದು, ಅತ್ಯಂತ ಸರಳ ಸ್ವಭಾವಿ. ”

ಶ್ರೀರಾಮಕೃಷ್ಣರು : “ ಖಂಡಿತ ಸರಿ. (ಸ್ವಲ್ಪ ಹೊತ್ತು ಆಲೋಚಿಸಿ) ಇನ್ನು ಯಾರು ಉಳಿದುಕೊಂಡಿದಾರೆ. ಇಲ್ಲಿಗೆ ಅನೇಕ ಯುವಕರು ಬರುತ್ತಿದಾರಲ್ಲ ಅವರು ಈ ಎರಡು ವಿಷಯಗಳನ್ನು ತಿಳಿದುಕೊಂಡು ಬಿಟ್ಟರೇ ಬೇಕಾದಷ್ಟು. ಆಗ ಅವರು ಅಧಿಕವಾಗಿ ಸಾಧನೆ ಭಜನೆಯಲ್ಲಿ ತೊಡಗಬೇಕಾದ ಆವಶ್ಯಕತೆಯೇನಿರೋದಿಲ್ಲ. ಮೊದಲನೆಯದಾಗಿ ನಾನು ಯಾರು ಎಂಬುದನ್ನ; ಎರಡನೆಯದಾಗಿ ತಾವು ಯಾರು ಎಂಬುದನ್ನ. ಅವರಲ್ಲಿ ಅನೇಕರು ಅಂತರಂಗಿಗಳು.

“ ಯಾರು ಅಂತರಂಗಿಗಳೊ ಅವರಿಗೆ ಮುಕ್ತಿ ದೊರಕೋದಿಲ್ಲ. ವಾಯುವ್ಯ ದಿಕ್ಕಿನಲ್ಲಿ ನಾನು ಮತ್ತೆ ದೇಹಧಾರಣೆ ಮಾಡಬೇಕಾಗಿದೆ.

“ ಯುವಕರನ್ನು ಕಂಡರೆ ನನ್ನ ಮನಸ್ಸಿಗೆ ಒಂದು ವಿಧದಲ್ಲಿ ಶಾಂತಿ. ಯಾರು ಮಕ್ಕಳನ್ನು ಪಡೆದುಕೊಂಡಿದಾರೊ, ಮೊಕದ್ದಮೆಯಲ್ಲಿ ನಿರತ ರಾಗಿದಾರೊ, ಕಾಮಕಾಂಚನಾಸಕ್ತರಾಗಿದಾರೊ ಅಂಥವರನ್ನು ನೋಡಿ ನಾನು ಆನಂದಪಡೋ ಬಗೆ ಹೇಗೆ ? ಶುದ್ಧ ಆತ್ಮರನ್ನು ನೋಡದೆ ನಾನು ಹೇಗೆ ಬದುಕಿರಲಿ ? ”

ಮಹಿಮಚರಣ ಶಾಸ್ತ್ರಗ್ರಂಥಗಳಿಂದ ಕೆಲವು ಶ್ಲೋಕಗಳನ್ನು ಪಠಿಸ ಲಾರಂಭಿಸಿದಾನೆ. ಈಗ ಭೂಚರಿ, ಖೇಚರಿ, ಶಾಂಭವಿ ಇವೇ ಮೊದ ಲಾದ ತಂತ್ರೋಕ್ತ ಮುದ್ರೆಗಳ ಸಂಬಂಧವಾಗಿ ಹೇಳುತ್ತಿದಾನೆ.

ಶ್ರೀರಾಮಕೃಷ್ಣರು : “ ನೋಡು, ನಾನು ಸಮಾಧಿಸ್ಥನಾದನಂತರ ನನ್ನ ಆತ್ಮ ಹಕ್ಕಿಯೋಪಾದಿಯಲ್ಲಿ ಮಹಾಕಾಶದಲ್ಲಿ ಹಾರಾಡುತ್ತಿರುತ್ತದೆ ಅಂತ ಕೆಲಕೆಲವರು ಹೇಳುತ್ತಿದಾರೆ.

“ ಒಮ್ಮೆ ಋಷೀಕೇಶದ ಸಾಧುವೊಬ್ಬ ಇಲ್ಲಿಗೆ ಬಂದಿದ್ದ. ಆತ ಹೇಳಿದ, ‘ ಸಮಾಧಿಗಳಲ್ಲಿ ಐದು ವಿಧ. ಇವನ್ನೆಲ್ಲ ನೀವು ಅನುಭವಿಸುತ್ತಿ ರುವಂತೆ ನನಗೆ ಕಾಣುತ್ತಿದೆ. ಇವುಗಳಲ್ಲಿ ಮಹಾವಾಯು ಇರುವೆ, ಮೀನು, ಮರ್ಕಟ, ಹಕ್ಕಿ, ಹಾವು ಇವುಗಳ ಗತಿಯಂತೆ ಸಹಸ್ರಾರದ ಕಡೆ ಮುಂದುವರಿಯುವುದರ ಅನುಭವವಾಗುತ್ತದೆ ’ ಅಂತ.

“ಕೆಲವು ವೇಳೆ ನನ್ನಲ್ಲಿ ಮಹಾವಾಯು ಇರುವೆಯೋಪಾದಿಯಲ್ಲಿ ಮೇಲಕ್ಕೆ ಹತ್ತುತ್ತದೆ.

“ಇನ್ನು ಕೆಲವು ವೇಳೆ ನಾನು ಸಮಾಧಿಸ್ಥನಾಗಿರೋವಾಗ ನನ್ನ ಆತ್ಮಭಾವಸಮುದ್ರದಲ್ಲಿ ಮೀನಿನೋಪಾದಿಯಲ್ಲಿ ಆನಂದದಿಂದ ಈಜಾಡುತ್ತಿರುತ್ತದೆ.

“ಮತ್ತೆ ಕೆಲವು ವೇಳೆ ನಾನು ಮಗ್ಗುಲಾಗಿ ಮಲಗಿಕೊಂಡಿರೋವಾಗ ಮಹಾವಾಯು ಮರ್ಕಟದೋಪಾದಿಯಲ್ಲಿ ನನ್ನನ್ನು ನೂಕಿ ನನ್ನೊಡನೆ ಕ್ರೀಡಿಸಲಾರಂಭಿಸುತ್ತದೆ. ನಾನು ಮಾತ್ರ ಸುಮ್ಮನೆ ಇರೋದುಂಟು. ಮತ್ತೆ ಆ ಮಹಾವಾಯು ಮರ್ಕಟದೋಪಾದಿಯಲ್ಲಿ ಒಂದೇ ನೆಗೆತಕ್ಕೆ ಸಹಸ್ರಾರವನ್ನು ತಲುಪಿಬಿಡುತ್ತದೆ. ಅದಕ್ಕಾಗೇ ಆಗ ನಾನು ಧಡಾರನೆ ಮೇಲಕ್ಕೆ ಎದ್ದುಬಿಡೋದು.

“ಮತ್ತೂ ಕೆಲವು ವೇಳೆ ಹಕ್ಕಿ ಆ ರೆಂಬೆಯಿಂದ ಈ ರೆಂಬೆಗೆ, ಈ ರೆಂಬೆಯಿಂದ ಆ ರೆಂಬೆಗೆ ಹಾರೋ ರೀತಿಯಲ್ಲಿ ಮಹಾವಾಯು ಮೇಲಕ್ಕೆ ಹತ್ತುತ್ತಿರುತ್ತದೆ. ಅದು ಯಾವ ರೆಂಬೆಯಲ್ಲಿ ಕುಳಿತುಕೊಳ್ಳುವುದೊ ಆ ಸ್ಥಾನ ಒಂದು ಅಗ್ನಿಕುಂಡವೋ ಏನೊ ಎಂಬಂತೆ ಅನುಭವವಾಗುತ್ತದೆ. ಅದು ಬಹುಶಃ ಮೂಲಾಧಾರದಿಂದ ಸ್ವಾಧಿಷ್ಠಾನಕ್ಕೆ, ಸ್ವಾಧಿಷ್ಠಾನದಿಂದ ಹೃದಯಕ್ಕೆ ಈ ರೀತಿಯಾಗಿ ಕ್ರಮಕ್ರಮೇಣ ತಲೆಗೆ ಹತ್ತಿಹೋಗುತ್ತದೆ.

“ಮತ್ತೆ ಇನ್ನು ಕೆಲವು ವೇಳೆ ಆ ಮಹಾವಾಯು ಹಾವಿನೋಪಾದಿಯಲ್ಲಿ ಸೊಟ್ಟು ಸೊಟ್ಟಾಗಿ ಹರಿಯಲಾರಂಭಿಸುತ್ತದೆ. ಈ ರೀತಿಯಾಗಿ ಹರಿದು ಹರಿದು ಕಡೆಗೆ ತಲೆಯನ್ನು ಮುಟ್ಟಿದಾಗ ನಾನು ಸಮಾಧಿಸ್ಥನಾಗುತ್ತೇನೆ.

“ಕುಲಕುಂಡಲಿನಿ ಜಾಗೃತವಾಗದ ಹೊರತು ಆತ್ಮಜಾಗೃತಿಯುಂಟಾಗದು.

“ಕುಲಕುಂಡಲಿನಿ ಮೂಲಾಧಾರದಲ್ಲಿ ಸುಪ್ತವಾಗಿದೆ. ಅದು ಎಚ್ಚರಗೊಂಡರೆ, ಸುಷುಮ್ನಾ ನಾಡಿಯ ಮೂಲಕ ಹರಿಯಲಾರಂಭಿಸಿ ಸ್ವಾಧಿಷ್ಠಾನ, ಮಣಿಪುರ ಇವೇ ಮೊದಲಾದ ಚಕ್ರಗಳನ್ನು ಭೇದಿಸಿ ಕೊನೆಗೆ ಶಿರಸ್ಸಿನ ಮಧ್ಯಪ್ರದೇಶವನ್ನು ಮುಟ್ಟುತ್ತದೆ. ಇದಕ್ಕೇನೆ ಮಹಾವಾಯುವಿನ ಗತಿ ಅಂತ ಹೆಸರು. ಕೊನೆಗೆ ಇದು ಸಮಾಧಿಯಲ್ಲಿ ಪರಿಸಮಾಪ್ತಿಯಾಗುತ್ತದೆ.

“ಕೇವಲ ಪುಸ್ತಕ ಪಾಂಡಿತ್ಯದಿಂದಲೇ ಆತ್ಮಜಾಗೃತಿಯುಂಟಾಗದು. ಆತನನ್ನು ಕರೆಯಬೇಕು. ವ್ಯಾಕುಲರಾದಾಗ ಮಾತ್ರ ಕುಲಕುಂಡಲಿನಿ ಜಾಗೃತಿಗೊಳ್ಳುತ್ತದೆ. ಅವರಿವರ ಬಾಯಿಂದ ಕೇಳಿ, ಪುಸ್ತಕ ಓದಿ ಬ್ರಹ್ಮಜ್ಞಾನದ ಸಂಬಂಧವಾಗಿ ಹರಟುವುದೆ! ಅದರಿಂದಾಗೋ ಪ್ರಯೋಜನವೇನು?

“ನನಗೆ ಈ ಮಾನಸಿಕ ಅವಸ್ಥೆ ಬರೋದಕ್ಕಿಂತ ಕಿಂಚಿತ್ ಮುನ್ನವೇ, ಯಾವ ರೀತಿಯಾಗಿ ಕುಲಕುಂಡಲಿನಿ ಎಚ್ಚರಗೊಳ್ಳುತ್ತದೆ, ಯಾವ ರೀತಿಯಾಗಿ ಕ್ರಮಕ್ರಮೇಣ ಎಲ್ಲಾ ಪದ್ಮಗಳು ಅರಳಲಾರಂಭಿಸುತ್ತವೆ, ಕೊನೆಗೆ ಯಾವ ರೀತಿಯಾಗಿ ಸಮಾಧಿ ಉಂಟಾಗುತ್ತದೆ ಇವನ್ನೆಲ್ಲ ಭಗವತಿ ನನಗೆ ತೋರಿದಳು. ಇದು ಬಹಳ ಗುಹ್ಯವಾದ ವಿಷಯ. ನನ್ನ ಹಾಗೇ ತದ್ವತ್ ಇದ್ದ ಇಪ್ಪತ್ತೆರಡೊ ಇಪ್ಪತ್ತುಮೂರೊ ವಯಸ್ಸಿನ ಯುವಕ ಸುಷುಮ್ನಾ ನಾಡಿಯನ್ನು ಪ್ರವೇಶಿಸಿ ತನ್ನ ನಾಲಗೆಯಿಂದ ಯೋನಿರೂಪದ ಪದ್ಮಗಳೊಡನೆ ವಿಲಾಸಿಸೋದನ್ನು ನೋಡಿದೆ. ಆತ ಮೊದಲು ಗುಹ್ಯದ ಹತ್ತಿರವಿರೋ ಪದ್ಮದೊಡನೆ ವಿಲಾಸಿಸಲು ಆರಂಭಿಸಿ, ಬಳಿಕ ಲಿಂಗ, ನಾಭಿ ಇವೇ ಮೊದಲಾದುವುಗಳ ಹತ್ತಿರವಿರೋ ಪದ್ಮಗಳೊಡನೆ ವಿಲಾಸಿಸಿದ. ನಾಲ್ಕು ದಳ, ಆರು ದಳ, ಹತ್ತು ದಳ ಇವೇ ಮೊದಲಾದ ದಳಗಳುಳ್ಳ ಆ ಪದ್ಮಗಳು ಮೊದಲು ತಮ್ಮ ತಲೆಯನ್ನು ಕೆಳಕ್ಕೆ ಬಾಗಿಸಿಕೊಂಡಿದ್ದುವು. ಆದರೆ ಅವು ಆತನ ಸ್ಪರ್ಶ ಮಾತ್ರದಿಂದಲೇ ತಲೆಯನ್ನು ಮೇಲಕ್ಕೆ ಎತ್ತಿ ನೆಟ್ಟಗೆ ನಿಂತುಕೊಂಡುವು.

“ಆತ ಹೃದಯಸ್ಥಾನಕ್ಕೆ ಬಂದು — ನನ್ನ ಕಣ್ಣಿಗೆ ಕಟ್ಟಿದ ಹಾಗೇ ಇದೆ — ಅಲ್ಲಿನ ಪದ್ಮದೊಡನೆ ತನ್ನ ನಾಲಗೆಯಿಂದ ವಿಲಾಸಿಸಿದೊಡನೆಯೇ ಅಧೋಮುಖವಾಗಿದ್ದ ಆ ಹನ್ನೆರಡು ದಳದ ಪದ್ಮ ಊರ್ಧ್ವಮುಖವಾಗಿ ನಿಂತು ಅರಳಲಾರಂಭಿಸಿತು. ಬಳಿಕ ಆತ ಕಂಠದ ಹತ್ತಿರವಿರೋ ಹದಿನಾರು ದಳದ ಪದ್ಮದ ಹತ್ತಿರಕ್ಕೆ, ಅನಂತರ ಕಪಾಲದಲ್ಲಿರೋ ಎರಡು ದಳದ ಪದ್ಮದ ಹತ್ತಿರಕ್ಕೆ ಬಂದ. ಕಟ್ಟಕಡೆಯಲ್ಲಿ ಸಹಸ್ರದಳದ ಪದ್ಮ ಅರಳಿನಿಂತಿತು. ಅಂದಿನಿಂದ ನಾನು ಈ ಅವಸ್ಥೆಯಲ್ಲಿದೇನೆ.”

ಪರಮಹಂಸರು ಹೀಗೆ ಮಾತಾಡುತ್ತ ಆಡುತ್ತ ಇದ್ದ ಹಾಗೇ ತಮ್ಮ ಮಂಚದಿಂದಿಳಿದುಬಂದು ಮಹಿಮಚರಣನ ಹತ್ತಿರ ನೆಲದಮೇಲೆ ಕುಳಿತಿ

ದಾರೆ. ಅವರ ಹತ್ತಿರ ಮಾಸ್ಟರ್ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರು ಕುಳಿತಿದಾರೆ. ಅಲ್ಲೇ ರಾಖಾಲನೂ ಕುಳಿತಿದಾನೆ.

ಶ್ರೀರಾಮಕೃಷ್ಣರು ಮಹಿಮಾಚರಣನಿಗೆ: "ಬಹಳಕಾಲದಿಂದ ನಾನು ನಿನಗೆ ನನ್ನ ಅನುಭವಗಳನ್ನು ತಿಳಿಸಬೇಕೆಂದಿದ್ದೆ, ಆದರೆ ಸಾಧ್ಯವಾಗಲಿಲ್ಲ. ಇಂದು ಹೇಳಲು ಇಚ್ಛೆಯಾಗುತ್ತಿದೆ.

"ನನಗೆ ಬಂದಿರೋ ಅವಸ್ಥೆ ಕೇವಲ ಸಾಧನೆಯಿಂದಲೇ ಎಲ್ಲರಿಗೂ ದೊರೆತುಬಿಡುತ್ತದೆ ಅಂತ ನೀನು ಹೇಳುತ್ತೀಯಲ್ಲ, ಅದು ಆ ರೀತಿಯಾದುದಲ್ಲ. ಇದರಲ್ಲಿ (ಪರಮಹಂಸರಲ್ಲಿ) ಒಂದು ವಿಶೇಷತೆ ಇದೆ."

ಮಾಸ್ಟರ್, ರಾಖಾಲ ಇವರೇ ಮೊದಲಾದ ಭಕ್ತರು ಆಶ್ಚರ್ಯಚಕಿತರಾಗಿ ಅವರ ಬಾಯಿಂದ ಬರೋದನ್ನೆಲ್ಲ ಚಾಚೂ ತಪ್ಪದೆ ಕೇಳಲು ಬಹಳ ಉತ್ಸುಕರಾಗಿ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಭಗವಂತ ನನ್ನೊಡನೆ ಮಾತನಾಡಿದ. ನನಗೆ ದೊರೆತದ್ದು ಕೇವಲ ಆತನ ದರ್ಶನ ಮಾತ್ರವೇ ಅಲ್ಲ, ಆತ ನಿಜವಾಗಿಯೂ ನನ್ನೊಡನೆ ಮಾತನಾಡಿದ. ನಾನು ಆಲದ ಮರದ ಕೆಳಗೆ ಇದ್ದಾಗ ಆತ ಗಂಗೆಯಿಂದ ಎದ್ದುಬಂದ. ಬಳಿಕ ನಾವು ಎಷ್ಟೊಂದು ನಕ್ಕೆವು ಏನು ಕತೆ! ನನ್ನೊಡನೆ ತಮಾಷೆಮಾಡುತ್ತ ನನ್ನ ಬೆರಳುಗಳ ನಟಿಕೆ ತೆಗೆದ. ಬಳಿಕ ಮಾತುಕತೆಯಾಡಿದ. ಹೌದು, ನನ್ನೊಡನೆ ಮಾತುಕತೆಯಾಡಿದ!

"ಮೂರು ದಿನಗಳು ಒಂದೇ ಸಮನೆ ಕುಳಿತು ಅತ್ತೆ. ತರುವಾಯ ಆತ ವೇದ, ಪುರಾಣ, ತಂತ್ರ ಇವೇ ಮೊದಲಾದ ಶಾಸ್ತ್ರಗಳಲ್ಲಿ ಏನೇನು ಇದೆಯೊ ಅವನ್ನೆಲ್ಲ ತೋರಿಸಿಕೊಟ್ಟುಬಿಟ್ಟ.

"ಮಹಾಮಾಯೆಯ ಮಾಯೆ ಏನು ಎಂಬುದನ್ನು ಒಂದು ದಿನ ಆತ ತೋರಿಸಿದ. ಕೊಠಡಿಯಲ್ಲಿದ್ದ ಒಂದು ಚಿಕ್ಕ ಬೆಳಕು ದೊಡ್ಡದಾಗುತ್ತಾ ಬಂದು ಕೊನೆಗೆ ಅದು ಇಡೀ ಬ್ರಹ್ಮಾಂಡವನ್ನೇ ಆವರಿಸಿಕೊಂಡುಬಿಟ್ಟಿತು.

"ಮತ್ತೆ ಆತ ಪಾಚಿ ಕಟ್ಟಿಕೊಂಡಿದ್ದ ಒಂದು ದೊಡ್ಡ ಸರೋವರವನ್ನು ತೋರಿಸಿದ. ಗಾಳಿ ಅದರ ಪಾಚಿಯನ್ನು ಸ್ವಲ್ಪ ಸರಿಸಿತು. ಒಡನೆಯೆ ನೀರು ಕಣ್ಣಿಗೆ ಕಾಣಿಸಿಕೊಂಡಿತು. ರೆಪ್ಪೆ ಹೊಡೆಯುವುದರೊಳಗಾಗಿ ಪಾಚಿ ಎಲ್ಲಾ ಕಡೆಗಳಿಂದಲೂ ಕುಣಿಯುತ್ತ ಕುಣಿಯುತ್ತ

ಬಂದು ಮತ್ತೆ ಕಟ್ಟಿಕೊಂಡುಬಿಟ್ಟಿತು. ಆತ ತೋರಿಸಿದ, ನೀರೇ ಸಚ್ಚಿದಾನಂದ, ಪಾಚಿಯೇ ಮಾಯೆ ಅಂತ. ಮಾಯೆಯ ದೆಸೆಯಿಂದ ಸಚ್ಚಿದಾನಂದನನ್ನು ನೋಡಲಾಗುತ್ತಿಲ್ಲ. ಆತನ ನಸು ನೋಟ ನಮಗೆ ಒಮ್ಮೊಮ್ಮೆ ದೊರೆತರೂ ಮತ್ತೆ ಆತನನ್ನು ಮಾಯೆ ಮುಚ್ಚಿಕೊಂಡುಬಿಡುತ್ತದೆ.

"ಯಾವ ರೀತಿಯಾದ ಭಕ್ತರು ಇಲ್ಲಿಗೆ ಬರುತ್ತಾರೆ ಎಂಬುದನ್ನು ಅವರು ಬರುವುದಕ್ಕೆ ಮುನ್ನವೇ ನನಗೆ ತೋರಿಸಿಕೊಟ್ಟುಬಿಡುತ್ತಾನೆ. ಪಂಚವಟಿಯಲ್ಲಿ ಆಲದ ಮರದಿಂದ ಹಿಡಿದು ಬಕುಳದ ಮರದವರೆಗೆ ನಿಂತಿದ್ದ ಚೈತನ್ಯದೇವನ ಸಂಕೀರ್ತನೆ ಪಾರ್ಟಿಯೊಂದನ್ನು ನನಗೆ ತೋರಿಸಿದ. ಅದರಲ್ಲಿ ಬಲರಾಮ ಇದ್ದುದನ್ನು ಕಂಡೆ. ಅವನೊಬ್ಬನಿಲ್ಲದಿದ್ದರೆ ನನಗೆ ಕಲ್ಲುಸಕ್ಕರೆ-ಗಿಲ್ಲುಸಕ್ಕರೆಯನ್ನು ಯಾರು ತಂದುಕೊಡುತ್ತಿದ್ದರು? (ಮಾಸ್ಟರನ್ನು ತೋರಿಸಿ) ಈತನನ್ನೂ ಅದರಲ್ಲಿ ಕಂಡೆ.

"ನಾನು ಕೇಶವಸೇನನನ್ನು ಪ್ರತ್ಯಕ್ಷವಾಗಿ ನೋಡಲು ಮುನ್ನವೇ ಪರೋಕ್ಷವಾಗಿ ಆತನನ್ನು ನೋಡಿದ್ದೆ. ನಾನು ನನ್ನ ಸಮಾಧಿ ಅವಸ್ಥೆಯಲ್ಲಿ ಕೇಶವಸೇನನನ್ನು ಮತ್ತು ಆತನ ಮಂಡಲಿಯವರನ್ನು ನೋಡಿದ್ದೆ. ಕೊಠಡಿಯಲ್ಲಿ ನನ್ನ ಸುತ್ತಲೂ ಜನ ಕಿಕ್ಕಿರಿದು ತುಂಬಿದ್ದರು. ಪುಕ್ಕವನ್ನು ಕೆದರಿ ಕುಳಿತಿರೋ ನವಿಲಿನೋಪಾದಿಯಲ್ಲಿ ಕೇಶವಸೇನ ನನ್ನ ಕಣ್ಣಿಗೆ ತೋರಿದ. ಪುಕ್ಕ ಎಂದರೆ ಆತನ ಸಮಾಜ-ಗಿಮಾಜ. ಆತನ ತಲೆಯ ಮೇಲೆ ಒಂದು ಕೆಂಪು ವಜ್ರವಿತ್ತು. ಅದು ರಜೋಗುಣದ ಚಿಹ್ನೆ. ಕೇಶವಸೇನ ತನ್ನ ಶಿಷ್ಯರಿಗೆ ಹೇಳಿದ, 'ಇವರು (ಶ್ರೀರಾಮಕೃಷ್ಣರು) ಏನು ಹೇಳುತ್ತಾರೆೊ ಅವನ್ನೆಲ್ಲ ನೀವು ಕೇಳಿ' ಅಂತ. ನಾನು ಭಗವತಿಗೆ ಹೇಳಿದೆ, 'ಹೇ ತಾಯೆ, ಇವರ ದೃಷ್ಟಿ ಇಂಗ್ಲಿಷಿನವರ ಹಾಗೆ. ಇಂಥವರಿಗೇಕೆ ನಾನು ಬುದ್ಧಿವಾದವೀಯಲು ಹೋಗಬೇಕು?' ಅಂತ. ಆಗ ಭಗವತಿ ಕಲಿಯುಗದಲ್ಲಿ ಹೀಗೆಯೇ ನಡೆಯುತ್ತದೆ ಅಂತ ನನಗೆ ತಿಳಿಸಿಕೊಟ್ಟಳು.

"ಕೇಶವಸೇನ ಮತ್ತು ಆತನ ಅನುಯಾಯಿಗಳು ಇಲ್ಲಿಂದ (ಪರಮಹಂಸರಿಂದ) ಹರಿಯ ಮತ್ತು ಭಗವತಿಯ ನಾಮವನ್ನು ತೆಗೆದುಕೊಂಡು ಹೋದರು. ಅದಕ್ಕಾಗಿಯೆ ಭಗವತಿ ವಿಜಯನನ್ನು ಕೇಶವಸೇನನ ಸಮಾಜ

ದಿಂದ ಪ್ರತ್ಯೇಕಮಾಡಿದಳು. ಆದರೆ ವಿಜಯ ಹೋಗಿ ಮತ್ತೆ ಆದಿಸಮಾಜ ವನ್ನು ಸೇರಲಿಲ್ಲ.

(ತಮ್ಮ ಕಡೆ ಬೆರಳುಮಾಡಿ) "ಇದರಲ್ಲಿ ಏನೊ ಒಂದು ವಿಶೇಷತೆ ಇರಲೇಬೇಕು. ಗೋಪಾಲಸೇನ ಎಂಬ ಹುಡುಗ ಬಹಳ ದಿವಸಗಳ ಹಿಂದೆ ಇಲ್ಲಿಗೆ ಬರುತ್ತಿದ್ದ. ಇದರೊಳಗೆ ಯಾವನಿದಾನೊ ಆತ ಗೋಪಾಲನ ಎದೆಯ ಮೇಲೆ ತನ್ನ ಪಾದವನ್ನಿಟ್ಟ. ಆತ ಭಾವಸ್ಥನಾಗಿ ಹೇಳಲಾರಂಭಿಸಿದ, 'ನಿಮಗೆ ಸಮಯ ಇನ್ನೂ ಬಂದಿಲ್ಲ. ನನಗೆ ಈ ಐಹಿಕ ಜನರೊಡನೆ ಇರಲು ಸಾಧ್ಯವಾಗುತ್ತಿಲ್ಲ' ಅಂತ. ಬಳಿಕ ಆತ ನನ್ನಿಂದ ಬೀಳ್ಕೊಂಡ. ಕೆಲವು ದಿವಸಗಳಾದಮೇಲೆ ಕೇಳಿದೆ, ಆತ ದೇಹತ್ಯಾಗ ಮಾಡಿಬಿಟ್ಟ ಎಂದು. ಬಹುಶಃ ಆತನೇ ನಿತ್ಯಗೋಪಾಲನಾಗಿರಬೇಕು.

"ನನಗೆ ಆಶ್ಚರ್ಯಕರವಾದ ದರ್ಶನಗಳೆಲ್ಲ ಆದುವು. ಅಖಂಡ ಸಚ್ಚಿದಾನಂದನ ದರ್ಶನವಾಯಿತು. ಅದರಲ್ಲಿ ಬೇಲಿಯಿಂದ ಪ್ರತ್ಯೇಕ ಮಾಡಿರೋ ಎರಡು ಗುಂಪನ್ನು ನೋಡಿದೆ. ಆ ಬೇಲಿಯ ಒಂದು ಪಾರ್ಶ್ವದಲ್ಲಿ ಕೇದಾರ, ಚುಣಿ ಮತ್ತು ಇನ್ನೂ ಯಾರಾರೊ ಸಾಕಾರವಾದಿ ಭಕ್ತರಿದ್ದರು. ಅದರ ಇನ್ನೊಂದು ಪಾರ್ಶ್ವದಲ್ಲಿ ಕೆಂಪು ಇಟ್ಟಿಗೆ ಪುಡಿಯ ರಾಶಿಯಾಕಾರದಲ್ಲಿ ಧಗಧಗಿಸುತ್ತಿರೋ ಒಂದು ಜ್ಯೋತಿಯನ್ನು ಕಂಡೆ. ಅದರ ಒಳಗೆ ನರೇಂದ್ರ ಸಮಾಧಿಸ್ಥನಾಗಿ ಕುಳಿತಿದ್ದ.

"ಆತ ಧ್ಯಾನಸ್ಥನಾಗಿರೋದನ್ನು ನೋಡಿ ಗಟ್ಟಿಯಾಗಿ ಕೂಗಿದೆ, 'ಓ, ನರೇಂದ್ರ!' ಅಂತ. ಸ್ವಲ್ಪ ಕಣ್ಣುಬಿಟ್ಟು ನೋಡಿದ. ಆತನೇ ಸಿಮ್ಲಾದಲ್ಲಿರೋ (ಕಲ್ಕತ್ತದ ಒಂದು ಭಾಗ) ಒಬ್ಬ ಕಾಯಸ್ಥನ ಮನೆಯಲ್ಲಿ ಜನ್ಮವೆತ್ತಿರೋದಾಗಿ ನನಗೆ ಕಂಡುಬಂದಿತು. ಒಡನೆಯೆ ನಾನು ಭಗವತಿಗೆ ಹೇಳಿದೆ, 'ಹೇ ತಾಯೆ, ಈತನನ್ನು ಮಾಯಾಬಲೆಗೆ ಸಿಕ್ಕಿಸು; ಇಲ್ಲದಿದ್ದರೆ ಈತ ಸಮಾಧಿಯಲ್ಲಿ ತನ್ನ ದೇಹವನ್ನು ತ್ಯಜಿಸಿಬಿಡುತ್ತಾನೆ' ಅಂತ. ಕೇದಾರ ಸಾಕಾರವಾದಿ. ಆತ ಆ ಕಡೆ ಸ್ವಲ್ಪ ಇಣಿಕಿನೋಡಿದೊಡನೆಯೆ ಹೆದರಿ ಓಡಿಹೋದ.

"ಈ ಕಾರಣಗಳಿಂದಲೇ ನಾನು ಭಾವಿಸುತ್ತಿರೋದು, ಇದರಲ್ಲಿ ಸ್ವಯಂ ಭಗವತಿಯೆ ವಾಸಿಸುತ್ತ ಭಕ್ತರೊಡನೆ ಕ್ರೀಡಿಸುತ್ತಿದಾಳೆ ಅಂತ. ಮೊಟ್ಟ ಮೊದಲು ನನಗೆ ಈ ಅವಸ್ಥೆ ಬಂದಾಗ ನನ್ನ ಶರೀರ ಜ್ಯೋತಿಯನ್ನು ಸುಮ್ಮನೆ ಚೆಲ್ಲುತ್ತಿತ್ತು. ಎದೆ ಕೆಂಪಾಗಿ ಹೋಗಿತ್ತು. ಆಗ

ಭಗವತಿಯನ್ನು ಪ್ರಾರ್ಥಿಸಿದೆ, 'ತಾಯಿ, ಬಾಹ್ಯಕವಾಗಿ ವ್ಯಕ್ತವಾಗಬೇಡ. ದಯವಿಟ್ಟು ಅಂತರ್ಯಕ್ಕೆ ಹೋಗು, ಅಂತರ್ಯಕ್ಕೆ ಹೋಗು' ಅಂತ. ಅದಕ್ಕಾಗಿಯೇ ನನ್ನ ಶರೀರ ಕಾಂತಿವಿಹೀನವಾಗಿರೋದು. ಭಗವತಿ ಹಾಗೆ ಮಾಡದಿದ್ದರೆ ಜನರು ನನ್ನನ್ನು ಸುಮ್ಮನೆ ಕಾಡಿಸಿಬಿಡುತ್ತಿದ್ದರು; ಜನ ಇಲ್ಲಿ ಸತತ ಸುಮ್ಮನೆ ಕಿಕ್ಕಿರಿದು ನೆರೆದುಬಿಡುತ್ತಿದ್ದರು. ಈಗ ಬಾಹ್ಯಕ ಪ್ರಕಾಶವೇನಿಲ್ಲ. ಇದು ಜಳ್ಳುಗಳನ್ನು ತೂರಿಬಿಡುತ್ತಿದೆ. ಯಾರು ನಿಜವಾಗಿಯೂ ಶುದ್ಧ ಭಕ್ತರೊ ಕೇವಲ ಅವರು ಮಾತ್ರವೇ ನನ್ನೊಡನೆ ಬಂದು ಇರುತ್ತಾರೆ. ನನಗೆ ಈ ರೋಗ ಬಂದಿರೋದಕ್ಕೆ ಕಾರಣ ಗೊತ್ತೆ? ಇದರಲ್ಲೊಂದು ಅರ್ಥವಿದೆ. ಯಾರ ಭಕ್ತಿ ಸಕಾಮ ವಾದುದೊ ಅವರು ನನಗೆ ಬಂದಿರೋ ಈ ರೋಗವನ್ನು ನೋಡಿ ಇಲ್ಲಿಂದ ಹೊರಟುಹೋಗಿಬಿಡುತ್ತಾರೆ.

"ನನಗೊಂದು ಆಸೆ ಇತ್ತು. ನಾನು ಭಗವತಿಗೆ ಪ್ರಾರ್ಥನೆಮಾಡಿ ಕೊಂಡಿದ್ದೆ, 'ಹೇ ತಾಯಿ, ಭಕ್ತರ ರಾಜನಾಗಬೇಕು ಎಂಬ ಆಸೆ ಇದೆ ನನಗೆ' ಅಂತ.

"ಮತ್ತೆ ನನ್ನ ಮನಸ್ಸಿನಲ್ಲಿ, 'ಯಾರು ಹೃತ್ಪೂರ್ವಕವಾಗಿ ಭಗ ವಂತನನ್ನು ಕರೆಯುತ್ತಾರೊ ಅವರು ಇಲ್ಲಿಗೆ ಬಂದೇ ತೀರಬೇಕು' ಎಂಬ ಭಾವನೆ ಉದಯವಾಯಿತು. ನೋಡು, ಈಗ ಆ ರೀತಿಯಾಗೇ ಆಗು ತ್ತಿದೆ. ಆ ವಿಧದ ಜನರೇ ಇಲ್ಲಿಗೆ ಬರುತ್ತಿದಾರೆ.

"ಈ ದೇಹದಲ್ಲಿ ಯಾರು ವಾಸಿಸುತ್ತಿದಾನೆ ಎಂಬುದು ನನ್ನ ತಂದೆ ತಾಯಿಯರಿಗೆ ಗೊತ್ತಿತ್ತು. ನನ್ನ ತಂದೆಗೆ ಗಯೆಯಲ್ಲಿ ಒಂದು ಸ್ವಪ್ನ ವಾಯಿತು. ಅದರಲ್ಲಿ ರಘುವೀರ ಹೇಳಿದನಂತೆ, 'ನಾನು ನಿನ್ನ ಪುತ್ರ ನಾಗಿ ಜನ್ಮವೆತ್ತುತ್ತೇನೆ' ಅಂತ.

"ಇದರೊಳಗೆ ಭಗವಂತನೇ ಸ್ವಯಂ ಇದಾನೆ. ಇಂಥಾ ಕಾಮ ಕಾಂಚನ ತ್ಯಾಗ! ಸ್ವಪ್ರಯತ್ನದಿಂದ ಸಾಧ್ಯವಾಗುತ್ತಿತ್ತೆ? ಸ್ವಪ್ನದಲ್ಲೂ ನಾನು ಹೆಂಗಸಿನ ಸುಖವನ್ನು ಅನುಭವಿಸಿಲ್ಲ.

"ತೋತಾಪುರಿ ವೇದಾಂತೋಪದೇಶವನ್ನು ಮಾಡಿದ. ಮೂರು ದಿನದೊಳಗೆಯೇ ನನಗೆ ಸಮಾಧಿ (ನಿರ್ವಿಕಲ್ಪ ಸಮಾಧಿ) ದೊರೆಯಿತು. ಮಾಧವಿ ಲತೆಯ ಕೆಳಗೆ ನಾನು ಸಮಾಧಿಸ್ಥನಾಗಿರೋದನ್ನು ನೋಡಿ, ಆತ ಬೆರಗಾಗಿ ಕೂಗಿಕೊಂಡನಂತೆ, 'ಅಃ! ಏನಾಶ್ಚರ್ಯ!' ಅಂತ. ಇದ

ರೊಳಗೆ ಯಾರಿದಾರೆ ಎಂಬುದು ಆತನಿಗೆ ಆ ಬಳಿಕ ಅರ್ಥವಾಯಿತು. ಆತ ಕೇಳಿದ, 'ಹೋಗಲು ಅನುಮತಿಕೊಡು' ಅಂತ. ಆತ ಹೀಗೆಂದೊಡನೆಯೆ ನಾನು ಭಾವಸ್ಥನಾಗಿ ಹೇಳಿದೆ, 'ನನಗೆ ವೇದಾಂತಬೋಧೆಯಾಗದ ಹೊರತು ನೀನು ಇಲ್ಲಿಂದ ಹೋಗೋ ಹಾಗಿಲ್ಲ' ಅಂತ.

"ಆಗ ನಾನು ಹಗಲೂ ಇರುಳು ಆತನೊಡನೆಯೇ ಇರುತ್ತಿದ್ದೆ. ಕೇವಲ ವೇದಾಂತದ ವಿಷಯವಾಗೇ ಮಾತನಾಡುತ್ತಿದ್ದೆವು. ಬ್ರಾಹ್ಮಣಿ ಹೇಳುತ್ತಿದ್ದಳು, 'ಮಗು, ವೇದಾಂತ ಕೇಳಬೇಡ. ಅದು ನಿನ್ನ ಭಕ್ತಿಯನ್ನು ಒಣಗಿಸಿಬಿಡುತ್ತದೆ' ಅಂತ.

"ನಾನು ಭಗವತಿಗೆ ಪ್ರಾರ್ಥನೆಮಾಡಿದೆ, 'ತಾಯಿ, ಒಬ್ಬ ಧನಿಕ ನನ್ನು ನನ್ನ ಕೈಯಲ್ಲಿಡು. ಇಲ್ಲದೆ ಇದ್ದರೆ ನಾನು ಈ ಶರೀರವನ್ನು ರಕ್ಷಿಸಿಡುವ ಬಗೆ ಹೇಗೆ? ಸಾಧುಗಳನ್ನು ಮತ್ತು ಭಕ್ತರನ್ನು ಹೇಗೆ ನಾನು ನನ್ನ ಹತ್ತಿರ ಇಟ್ಟುಕೊಳ್ಳಲಿ?' ಅಂತ. ಅದಕ್ಕಾಗಿಯೇ ಮಥುರಬಾಬು ಒಂದೇ ಸಮನೆ ಹದಿನಾಲ್ಕು ವರ್ಷಗಳ ಕಾಲ ನನ್ನ ಸೇವೆ ಮಾಡಿದ.

"ಯಾರು ಇದರೊಳಗಿದಾನೊ ಆತ, ಯಾವ ಯಾವ ಬಗೆಯ ಭಕ್ತರು ಇಲ್ಲಿಗೆ ಬರುತ್ತಾರೆ ಎಂಬುದನ್ನು ಅವರು ಬರೋಕೆ ಮುನ್ನವೇ ತಿಳಿಸಿಕೊಟ್ಟುಬಿಡುತ್ತಾನೆ. ಗೌರಾಂಗನ ದರ್ಶನವಾಯಿತು ಎಂದರೆ, ನನಗೆ ಗೊತ್ತು ಈಗ ಗೌರಾಂಗನ ಭಕ್ತರು ಬರಲಾರಂಭಿಸುತ್ತಾರೆ ಅಂತ. ನನಗೆ ಶಕ್ತಿಯ, ಎಂದರೆ ಕಾಳಿಯ ದರ್ಶನವಾಯಿತು ಎಂದರೆ ಶಾಕ್ತರು ಬರಲಾರಂಭಿಸುತ್ತಾರೆ.

"ಕುಟೀರದ ಮೇಲಕ್ಕೆ ಹತ್ತಿಹೋಗಿ ಸಾಯಂಕಾಲದ ಮಂಗಳಾರತಿಯ ಸಮಯದಲ್ಲಿ ಗಟ್ಟಿಯಾಗಿ ಕೂಗುತ್ತಿದ್ದೆ, 'ಏನ್ರೋ, ಎಲ್ಲಿದೀರ್ರೋ? ಬೇಗ ಬನ್ರೋ!' ಅಂತ. ನೋಡು, ಈಗ ಅವರೆಲ್ಲ ಒಬ್ಬೊಬ್ಬರಾಗಿ ಬಂದು ಜೊತೆ ಸೇರುತ್ತಿದಾರೆ.

"ಇದರೊಳಗೆ ಭಗವಂತ ಸ್ವಯಂ ಇದಾನೆ. ಆತ ತನ್ನಷ್ಟಕ್ಕೆ ತಾನೇ ಈ ಭಕ್ತರನ್ನೆಲ್ಲ ಸಹಾಯಕರನ್ನಾಗಿ ತೆಗೆದುಕೊಂಡು ಕೆಲಸಮಾಡುತ್ತಿದಾನೆ.

"ಇಲ್ಲಿನ ಭಕ್ತರಲ್ಲಿ ಕೆಲವರು ಎಂಥ ಅದ್ಭುತ ಅವಸ್ಥೆಯಲ್ಲಿದಾರೆ! ಯಾವ ಪ್ರಯಾಸವೂ ಇಲ್ಲದೆ ಚಿಕ್ಕ ನರೇನನಿಗೆ ಕುಂಭಕವಾಗುತ್ತಿದೆ; ಸಮಾಧಿ ಕೂಡ! ಒಮ್ಮೊಮ್ಮೆ ಎರಡೂವರೆ ಘಂಟೆಗಳ ಕಾಲ ಭಾವಾವಿಷ್ಟ

ನಾಗಿ ಇದ್ದುಬಿಡುತ್ತಾನೆ. ಇನ್ನು ಕೆಲವು ವೇಳೆ ಇದಕ್ಕಿಂತಲೂ ಹೆಚ್ಚು ಹೊತ್ತು. ಏನಾಶ್ಚರ್ಯ!

"ಇಲ್ಲಿ ಎಲ್ಲಾ ವಿಧದ ಸಾಧನೆಗಳೂ ನಡೆದುಹೋಗಿಬಿಟ್ಟವೆ; ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗ. ದೀರ್ಘಾಯುಸ್ಸಿಗಾಗಿ ಹಠಯೋಗ ಕೂಡ. ಇದರೊಳಗೆ ಬೇರೊಬ್ಬ ಇದಾನೆ. ಹಾಗಿಲ್ಲದೆ ಇದ್ದರೆ ಸಮಾಧಿಯನ್ನು ಪಡೆದನಂತರ ಭಕ್ತರೊಡನೆ ಬೆರೆಯಲು ಮತ್ತು ಭಗವಂತನ ಪ್ರೇಮದಲ್ಲಿ ತಲ್ಲೀನವಾಗಿರಲು ನನಗೆ ಹೇಗೆ ಸಾಧ್ಯವಾಗುತ್ತಿತ್ತು? ಕೋಯರ್‌ಸಿಂಗ್ ಹೇಳುತ್ತಿದ್ದ, 'ಸಮಾಧಿ ದೊರೆತನಂತರ ಈ ಜಗತ್ತಿಗೆ ಹಿಂದಿರುಗಿ ಬಂದವರನ್ನು ನಾನು ಎಂದೂ ನೋಡಿರಲಿಲ್ಲ. ನೀವು ಗುರುನಾನಕ್ಕೇ ಆಗಿರಬೇಕು' ಅಂತ.

"ಸುತ್ತಲೂ ಪ್ರಾಪಂಚಿಕರೆ; ಯಾವ ಕಡೆಗೆ ಕಣ್ಣು ಹಾಕಿದರೂ ಕಾಮಕಾಂಚನದ ದರ್ಶನವೆ. ಸುತ್ತಮುತ್ತಲಿನ ಸ್ಥಿತಿ ಹೀಗಿದ್ದರೂ ನನ್ನ ಮನಸ್ಸು ಸತತ ಭಾವ ಮತ್ತು ಸಮಾಧಿಯಲ್ಲಿ ಮುಳುಗಿಹೋಗಿದೆ. ಇದಕ್ಕಾಗಿಯೇ ಪ್ರತಾಪಚಂದ್ರಮಜುಮದಾರ ನನ್ನ ಸಮಾಧಿ ಅವಸ್ಥೆಯನ್ನು ನೋಡಿ ಹೇಳಿದ, 'ಏನಪ್ಪ ಇದು! ಸಮಾಧಿ ಇವರನ್ನ ಪಿಶಾಚಿಯ ಹಾಗೆ ಹಿಡಿದುಕೊಂಡಿದೆಯಲ್ಲ!' ಅಂತ."

ರಾಖಾಲ, ಮಾಸ್ಟರ್ ಇವರೇ ಮೊದಲಾದವರು ಪರಮಹಂಸರ ಬಾಯಿಂದಲೇ ಬಂದ ಅವರ ಈ ಅದ್ಭುತ ಅನುಭವಗಳನ್ನೆಲ್ಲ ಸ್ತಂಭೀಭೂತರಾಗಿ ಕೇಳುತ್ತಿದಾರೆ.

ಪರಮಹಂಸರ ಇಂಗಿತವೇನೆಂಬುದು ಮಹಿಮಚರಣನಿಗೆ ಅರ್ಥವಾಯಿತೇನು? ಅವರ ಈ ಅನುಭವಗಳನ್ನೆಲ್ಲ ಕೇಳಿದನಂತರ ಆತ ಹೇಳುತ್ತಿದಾನೆ, "ನಿಮ್ಮ ಪ್ರಾರಬ್ಧದ ದೆಸೆಯಿಂದ ನಿಮಗೆ ಈ ಅನುಭವಗಳೆಲ್ಲ ದೊರೆತುವು" ಎಂದು. ಆತನ ಭಾವನೆ, ಪರಮಹಂಸರು ಕೇವಲ ಒಬ್ಬ ಸಾಧು ಅಥವಾ ಭಕ್ತ ಅಂತ ಮಾತ್ರವೆ. ಪರಮಹಂಸರು ಆತ ಹೇಳಿದುದನ್ನು ಒಪ್ಪಿಕೊಂಡವರ ಹಾಗೆ ತಲೆಯಲ್ಲಾಡಿಸಿ ಹೇಳುತ್ತಿದಾರೆ, "ಹೌದು, ಪ್ರಾರಬ್ಧ ಫಲ. ಭಗವಂತನನ್ನು ಅನೇಕ ಭವನಗಳುಳ್ಳ ಒಬ್ಬ ಶ್ರೀಮಂತನಿಗೆ ಹೋಲಿಸಬಹುದು. ಇಲ್ಲಿ (ತಮ್ಮಲ್ಲಿ) ಆತನ ಬೈಠಕ್‌ಖಾನೆಯೊಂದಿದೆ. ಭಕ್ತ ಭಗವಂತನ ಬೈಠಕ್‌ಖಾನೆ" ಅಂತ.

ಘಂಟೆ ರಾತ್ರಿ ಒಂಬತ್ತು. ಪರಮಹಂಸರು ತಮ್ಮ ಚಿಕ್ಕ ಮಂಚದ

ಮೇಲೆ ಕುಳಿತಿದಾರೆ. ಮಹಿಮಚರಣನ ಇಚ್ಛೆ ಪರಮಹಂಸರು ಕೊಠಡಿಯಲ್ಲಿ ಕುಳಿತಿರುವಾಗಲೇ ಬ್ರಹ್ಮಚಕ್ರವನ್ನು (ತಾಂತ್ರಿಕ ಪ್ರತೀಕವನ್ನು) ರಚಿಸಬೇಕೆಂಬುದು. ಆತ ರಾಖಾಲ, ಮಾಸ್ಟರ್, ಕಿಶೋರಿ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರ ಸಹಾಯದಿಂದ ನೆಲದ ಮೇಲೆ ಅದನ್ನು ರಚಿಸಿದ. ಎಲ್ಲರಿಗೂ ಧ್ಯಾನಮಾಡುವಂತೆ ಹೇಳಿದ. ರಾಖಾಲನಿಗೆ ಭಾವಾವಸ್ಥೆ ಬಂದುಬಿಟ್ಟಿದೆ. ಪರಮಹಂಸರು ಮಂಚದಿಂದ ಕೆಳಕ್ಕೆ ಇಳಿದುಬಂದು ಆತನ ಎದೆಯ ಮೇಲೆ ತಮ್ಮ ಕೈಯನ್ನಿಟ್ಟು ಭಗವತಿಯ ನಾಮವನ್ನು ಜಪಿಸಲಾರಂಭಿಸಿದರು. ರಾಖಾಲನ ಭಾವ ಕೆಳಕ್ಕೆ ಇಳಿಯಿತು.

ಈಗ ಬಹುಶಃ ರಾತ್ರಿ ಒಂದು ಘಂಟೆಯಾಗಿರಬಹುದು. ಇಂದು ಕೃಷ್ಣ ಚತುರ್ದಶಿ. ಎಲ್ಲೆಲ್ಲೂ ಗಾಢಾಂಧಕಾರ. ಒಬ್ಬಿಬ್ಬರು ಭಕ್ತರು ಗಂಗೆಯ ದಡದಲ್ಲಿ ಏಕಾಂಗಿಯಾಗಿ ತಿರುಗಾಡುತ್ತಿದಾರೆ. ಪರಮಹಂಸರು ಆಗಲೆ ಹಾಸಿಗೆಯಿಂದ ಎದ್ದುಬಿಟ್ಟಿದಾರೆ. ಅವರೂ ಹೊರಕ್ಕೆ ಬಂದು ಭಕ್ತರಿಗೆ ಹೇಳುತ್ತಿದಾರೆ, "ಈ ಸಮಯದಲ್ಲಿ, ಈ ಗಭೀರ ರಾತ್ರಿಯಲ್ಲಿ ಅನಾಹತ ಶಬ್ದವನ್ನು ಕೇಳಬಹುದು ಎಂದು ತೋತಾಪುರಿ ಹೇಳುತ್ತಿದ್ದ" ಅಂತ.

ರಾತ್ರಿಯ ಕೊನೆ ಭಾಗವನ್ನು ಮಾಸ್ಟರ್ ಮತ್ತು ಮಹಿಮಚರಣ ಪರಮಹಂಸರ ಕೊಠಡಿಯಲ್ಲೇ ನೆಲದಮೇಲೆ ಮಲಗಿಕೊಂಡು ಕಳೆಯುತ್ತಿದಾರೆ. ರಾಖಾಲ ಕ್ಯಾಂಪ್‌ಕಾಟಿನ ಮೇಲೆ ಮಲಗಿಕೊಂಡಿದಾನೆ. ಐದು ವರ್ಷದ ಬಾಲಕನೋಪಾದಿಯಲ್ಲಿ ಪರಮಹಂಸರು ದಿಗಂಬರರಾಗಿ ಆಗಾಗ ಕೊಠಡಿಯೊಳಗೆ ಸುತ್ತಾಡುತ್ತಿದಾರೆ.

೧೦ನೆ ಆಗಸ್ಟ್ ೧೮೮೫, ಅಮಾವಾಸ್ಯೆ, ಸೋಮವಾರ.

ಅರುಣೋದಯವಾಗಿದೆ. ಪರಮಹಂಸರು ಭಗವತಿಯ ನಾಮವನ್ನು ಜಪಿಸುತ್ತಿದಾರೆ. ಪಶ್ಚಿಮ ವರಾಂಡಕ್ಕೆ ಹೋಗಿ ಗಂಗಾ ದರ್ಶನ ಮಾಡುತ್ತಿದಾರೆ. ಕೊಠಡಿಯಲ್ಲಿದ್ದ ಎಲ್ಲಾ ದೇವದೇವಿಯರ ಪಟಗಳ ಹತ್ತಿರಕ್ಕೂ ಹೋಗಿ ನಮಸ್ಕಾರ ಮಾಡುತ್ತಿದಾರೆ. ಭಕ್ತರು ಹಾಸಿಗೆಯಿಂದೆದ್ದು ಪರಮಹಂಸರಿಗೆ ಪ್ರಣಾಮಾದಿಗಳನ್ನು ಮಾಡಿ ಪ್ರಾತಃಕೃತ್ಯಗಳಲ್ಲಿ ನಿರತರಾಗಿದಾರೆ.

ಪರಮಹಂಸರು ಪಂಚವಟಿಯಲ್ಲಿ ಒಬ್ಬ ಭಕ್ತನೊಡನೆ ಮಾತುಕತೆಗಳನ್ನಾಡುತ್ತಿದಾರೆ. ಆತ ಸ್ವಪ್ನದಲ್ಲಿ ಚೈತನ್ಯದೇವನ ದರ್ಶನ ಪಡೆದಿದ್ದ.

ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ: "ಆಹ! ಆಹ!"

ಭಕ್ತ: "ಮಹಾಶಯರೆ, ಅದು ಕೇವಲ ಸ್ವಪ್ನದ ಅನುಭವ."

ಶ್ರೀರಾಮಕೃಷ್ಣರು: "ಸ್ವಪ್ನದ ಅನುಭವವೇನು ಕಡಮೆಯಾದ್ದೇ?"

ಪರಮಹಂಸರ ಕಣ್ಣುಗಳಿಂದ ಪ್ರೇಮಾಶ್ರು ಸುರಿಯುತ್ತಿದೆ. ಕಂಠದಿಂದ ಗದ್ಗದ ಸ್ವರ ಹೊರಬರುತ್ತಿದೆ.

ಇನ್ನೊಬ್ಬ ಭಕ್ತನಿಗೆ ಜಾಗ್ರದವಸ್ಥೆಯಲ್ಲಿಯೂ ಈಶ್ವರೀಯ ದರ್ಶನಗಳಾಗೋದನ್ನು ಕೇಳಿ ಪರಮಹಂಸರು ಹೇಳುತ್ತಿದಾರೆ, "ಅದೇನು ಅಷ್ಟು ಆಶ್ಚರ್ಯವಾದ್ದು! ಈಗೀಗ ನರೇಂದ್ರನೂ ಈಶ್ವರೀಯ ರೂಪುಗಳನ್ನು ನೋಡುತ್ತಿರುತ್ತಾನೆ" ಅಂತ.

ಮಹಿಮಚರಣ ತನ್ನ ಪ್ರಾತಃಕೃತ್ಯಗಳನ್ನು ಮುಗಿಸಿಕೊಂಡು ಪ್ರಾಂಗಣದ ಪಶ್ಚಿಮ ದಿಕ್ಕಿನಲ್ಲಿರೋ ಶಿವದೇವಾಲಯವೊಂದರಲ್ಲಿ ಏಕಾಂತವಾಗಿ ಕುಳಿತು ವೇದಮಂತ್ರೋಚ್ಚಾರಣೆಯನ್ನು ಮಾಡುತ್ತಿದಾನೆ.

ಘಂಟೆ ಎಂಟಾಗಿದೆ. ಮಾಸ್ಟರ್ ಗಂಗಾಸ್ನಾನ ಮಾಡಿ ಪರಮಹಂಸರ ಹತ್ತಿರಕ್ಕೆ ಬಂದಿದಾನೆ. ತನ್ನ ಏಕಮಾತ್ರ ಪುತ್ರಿಯ ಮರಣದಿಂದ ಶೋಕಾನ್ವಿತಳಾದ ಬ್ರಾಹ್ಮಣಿಯೂ ಪರಮಹಂಸರ ದರ್ಶನ ಪಡೆಯಲು ಬಂದಿದಾಳೆ.

ಮಾಸ್ಟರಿಗೆ ಸ್ವಲ್ಪ ಪ್ರಸಾದವನ್ನು ಕೊಡುವಂತೆ ಪರಮಹಂಸರು ಆ ಬ್ರಾಹ್ಮಣಿಗೆ ಹೇಳಿದರು.

ಬ್ರಾಹ್ಮಣಿ: "ಮೊದಲು ನೀವು ಸ್ವಲ್ಪ ತೆಗೆದುಕೊಳ್ಳಿ; ಬಳಿಕ ಆತನಿಗೆ ಕೊಡುತ್ತೇನೆ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಮೊದಲು ಜಗನ್ನಾಥನ ಪ್ರಸಾದವನ್ನು ತೆಗೆದುಕೊಂಡು ಬಳಿಕ ಅದನ್ನು ತಿನ್ನು."

ಪ್ರಸಾದವನ್ನು ಸ್ವೀಕರಿಸಿದನಂತರ ಮಾಸ್ಟರ್ ಶಿವಮಂದಿರಗಳಿಗೆ ಹೋಗಿ ಶಿವನ ದರ್ಶನ ಪಡೆದು, ಬಳಿಕ ಪರಮಹಂಸರ ಕೊಠಡಿಗೆ ಹಿಂದಿರುಗಿಬಂದು ಅವರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ.

ಶ್ರೀರಾಮಕೃಷ್ಣರು ಪ್ರೀತಿಯಿಂದ: "ಈಗ ಹೋಗಿ ಬಾ. ಮತ್ತೆ ನೀನು ಕೆಲಸಕ್ಕೆ ಬೇರೆ ಹೋಗಬೇಕಾಗಿದೆ."

೧೧ನೆ ಆಗಸ್ಟ್ ೧೮೮೫, ಮಂಗಳವಾರ.

ಪರಮಹಂಸರು ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯೊಳಗೆ ಕುಳಿತು

ಶ್ರೀರಾಮಕೃಷ್ಣರು ತಮ್ಮ ಮತ್ತು ತಮ್ಮ ಅನುಭವಗಳ ಮೇಲೆ ಹರ್ಷ

ಕೊಂಡಿದಾರೆ. ಬೆಳಗಿನ ಎಂಟು ಘಂಟೆಯಿಂದ ಮೌನವ್ರತವನ್ನು ಕೈಗೊಂಡಿದಾರೆ. ತಮ್ಮ ಈ ರೋಗ ಪ್ರಾಣಾಂತಕವಾದ್ದು, ತಾವು ಈ ಇಹ ಲೋಕವನ್ನು ಶೀಘ್ರದಲ್ಲಿಯೇ ಬಿಡಬೇಕಾಗಿ ಬರುತ್ತದೆ ಅಂತ ಅವರಿಗೆ ಗೊತ್ತಿತ್ತೇನು ? ಮತ್ತೆ ಅವರು ಜಗದಂಬೆಯ ತೊಡೆ ಮೇಲೆ ಹೋಗಿ ಕುಳಿತುಕೊಳ್ಳಲು ಸಿದ್ಧರಾಗುತ್ತಿರುವರೇನು ? ಅದಕ್ಕಾಗಿಯೇನು ಅವರು ಮೌನವನ್ನು ಕೈಗೊಂಡಿರೋದು ? ಅವರು ಮಾತನಾಡದೆ ಇರುವುದನ್ನು ನೋಡಿ ಶ್ರೀ ಶಾರದಾದೇವಿಯವರು ಅಳಲಾರಂಭಿಸಿದಾರೆ. ರಾಖಾಲ, ಲಾಟು ಇವರೂ ಅಳುತ್ತಿದಾರೆ. ಬಾಗ್‌ಬಸಾರಿನ ಬ್ರಾಹ್ಮಣಿಯೂ ಕೊತ ಡಿಗೆ ಬಂದು ಅಳಲಾರಂಭಿಸಿದಾಳೆ. ಭಕ್ತರು ಆಗಾಗ ಪರಮಹಂಸರನ್ನು ಕೇಳುತ್ತಿದಾರೆ, ಏನು ತಾವು ಇನ್ನು ಮೇಲೆ ಮೌನಿಗಳಾಗಿಯೇ ಇದ್ದು ಬಿಡುವಿರೇನು ಅಂತ. ಅವರು ಸನ್ನೆಯ ಮೂಲಕ ಇಲ್ಲ ಅಂತ ತಿಳಿಸಿದರು.

ಘಂಟೆ ಅಪರಾಹ್ನ ಮೂರು. ನಾರಾಯಣ ಬಂದಿದಾನೆ. ಪರಮ ಹಂಸರು ಆತನಿಗೆ ಹೇಳಿದರು, "ಭಗವತಿ ನಿನ್ನ ಮೇಲೆ ಶುಭವನ್ನು ಕರೆ ಯುವಳು" ಅಂತ. ಪರಮಹಂಸರು ತನ್ನೊಡನೆ ಮಾತನಾಡಿದರು ಅಂತ ನಾರಾಯಣ ಆನಂದದಿಂದ ಎಲ್ಲರಿಗೂ ತಿಳಿಸಿಬಿಟ್ಟ. ರಾಖಾಲಾದಿ ಭಕ್ತರಿಗೆ ತಮ್ಮ ಎದೆ ಮೇಲಿದ್ದ ಒಂದು ದೊಡ್ಡ ಚಪ್ಪಡಿಯನ್ನೇ ಕೆಳಕ್ಕೆ ಇಳಿಸಿದಂತೆ ಆಯಿತು. ಎಲ್ಲರೂ ಪರಮಹಂಸರ ಹತ್ತಿರ ಬಂದು ಕುಳಿತು ಕೊಂಡಿದಾರೆ.

ಶ್ರೀರಾಮಕೃಷ್ಣರು ರಾಖಾಲಾದಿ ಭಕ್ತರಿಗೆ : "ಭಗವತಿ ನನಗೆ ತೋರಿ ಸುತ್ತಿದ್ದಳು ಇದೆಲ್ಲ ಬರೀ ಮಾಯೆ ಅಂತ. ಆಕೆಯೊಬ್ಬಳೇ ಸತ್ಯ, ಉಳಿದು ದೆಲ್ಲ ಕೇವಲ ಮಾಯೆಯ ಐಶ್ವರ್ಯ ಮಾತ್ರ.

"ಇನ್ನೊಂದು ಅನುಭವವಾಯಿತು — ಯಾವ ಯಾವ ಭಕ್ತರು ಎಷ್ಟೆಷ್ಟು ದೂರ ಮುಂದುವರಿದಿದಾರೆ ಎಂಬುದರ ಅನುಭವ."

ಭಕ್ತರು : "ಒಳ್ಳೆಯದು, ದಯವಿಟ್ಟು ಅದರ ವಿಷಯವಾಗಿ ತಿಳಿಸಿ."

ಶ್ರೀರಾಮಕೃಷ್ಣರು : "ನಿತ್ಯಗೋಪಾಲ, ರಾಖಾಲ, ನಾರಾ'ಣ, ಪೂರ್ಣ, ಮಹಿಮಚಕ್ರವರ್ತಿ ಇವರೇ ಮೊದಲಾದವರ ಸಂಬಂಧವಾಗೆಲ್ಲ ತಿಳಿದುಕೊಂಡೆ."

೧೬ನೆ ಆಗಸ್ಟ್, ೧೮೮೫, ಭಾನುವಾರ.

ಪರಮಹಂಸರ ರೋಗದ ಸಮಾಚಾರ ಕಲ್ಕತ್ತದ ಭಕ್ತರ ಕಿವಿಯನ್ನು ಮುಟ್ಟಿಬಿಟ್ಟಿತು. ಅದು ಏನೊ ಒಂದು ಸಾಮಾನ್ಯ ಗಂಟಲ ಹುಣ್ಣು ಎಂದು ಅವರು ಭಾವಿಸಿದರು. ಅವರಲ್ಲಿ ಅನೇಕರು ಇಂದು ಪರಮಹಂಸ ರನ್ನು ನೋಡಲು ಬಂದಿದಾರೆ: ಗಿರೀಶ, ರಾಮ, ನಿತ್ಯಗೋಪಾಲ, ಮಹಿಮಚಕ್ರವರ್ತಿ, ಕಿಶೋರಿ, ಪಂಡಿತ ಶಶಧರ ಇವರೇ ಮೊದಲಾದವರು ಬಂದಿದಾರೆ.

ಪರಮಹಂಸರು ಎಂದಿನ ಆನಂದಮೂರ್ತಿ. ಭಕ್ತರೊಡನೆ ಮಾತು ಕತೆಗಳನ್ನಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನನ್ನ ರೋಗದ ಸಂಬಂಧವಾಗಿ ನಾನು ತಾಯಿಗೆ ಹೇಳಿಕೊಳ್ಳಲಾರೆ; ನಾಚಿಕೆಯಾಗುತ್ತಿದೆ."

ಗಿರೀಶ: "ಭಗವಂತ ಗುಣಪಡಿಸಿಬಿಡುತ್ತಾನೆ."

ರಾಮ: "ಗುಣವಾಗಿಹೋಗಿಬಿಡುತ್ತದೆ."

ಶ್ರೀರಾಮಕೃಷ್ಣರು ನಗುತ್ತ: "ಒಳ್ಳೆಯದು, ಆ ಆಶೀರ್ವಾದ ಮಾಡು." (ಎಲ್ಲರೂ ನಗುತ್ತಾರೆ.)

ಗಿರೀಶಘೋಷ ಮೊನ್ನೆ ಮೊನ್ನೆ ತಾನೆ ಪರಮಹಂಸರೊಡನೆ ಪರಿಚಯ ಮಾಡಿಕೊಂಡಿದಾನೆ. ಅವರು ಆತನಿಗೆ ಹೇಳುತ್ತಿದಾರೆ, "ನಿನಗೆ ಅನೇಕ ಕೆಲಸಕಾರ್ಯಗಳಿವೆ; ತಾಪತ್ರಯ ಹೆಚ್ಚು. ಇಲ್ಲಿಗೆ ಇನ್ನೂ ಮೂರುಸಲ ಬಂದುಬಿಡು.

(ಶಶಧರನಿಗೆ) "ಆದ್ಯಾಶಕ್ತಿಯ ಸಂಬಂಧವಾಗಿ ಒಂದು ಸ್ವಲ್ಪ ಮಾತನಾಡು" ಅಂತ.

ಶಶಧರ: "ನನಗೆ ಏನುತಾನೆ ಗೊತ್ತು?"

ಶ್ರೀರಾಮಕೃಷ್ಣರು ನಗುತ್ತ: "ಒಬ್ಬ ವ್ಯಕ್ತಿ ಒಬ್ಬನನ್ನು ಬಹಳವಾಗಿ ಗೌರವಿಸುತ್ತಿದ್ದ. ಆ ಎರಡನೆಯವ ಆ ವ್ಯಕ್ತಿಗೆ ಹೇಳಿದ, 'ಹೋಗಿ ಒಂದು ಸ್ವಲ್ಪ ಬೆಂಕಿ ತೆಗೆದುಕೊಂಡು ಬಾ, ಹುಕ್ಕ ತಯಾರುಮಾಡಬೇಕಾಗಿದೆ' ಅಂತ. ಆತ ಉತ್ತರವಿತ್ತ, 'ಮಹಾಶಯರೆ, ನಿಮಗೆ ಬೇಕಾಗಿರೋ ಬೆಂಕಿಯನ್ನು ತರೋ ಯೋಗ್ಯತೆ ನನಗಿದೆಯೆ?' ಅಂತ. ಕೊನೆಗೂ ತಂದುಕೊಡದೇನೆ ಹೋದ." (ಎಲ್ಲರೂ ನಗುತ್ತಾರೆ.)

ಶಶಧರ; "ಆಕೆಯೇ ನಿಮಿತ್ತ ಕಾರಣ, ಆಕೆಯೇ ಉಪಾದಾನ

ಕಾರಣ. ಆಕೆಯೇ ಈ ಜೀವ ಜಗತ್ತನ್ನು ಸೃಷ್ಟಿಸಿದಾಳೆ, ಆಕೆಯೇ ಈ ಜೀವ ಜಗತ್ತಾಗಿದಾಳೆ. ಉದಾಹರಣೆಗೆ ಜೇಡರ ಹುಳು. ಅದು ತಾನೇ ತನ್ನ ಬಲೆಯನ್ನು ನಿರ್ಮಿಸುತ್ತದೆ (ನಿಮಿತ್ತ ಕಾರಣ); ಆ ಬಲೆಗೆ ಬೇಕಾಗೋ ತಂತುವನ್ನು ತನ್ನ ದೇಹದಿಂದಲೇ ಅದು ಹೊರಗೆಡಹುತ್ತದೆ (ಉಪಾದಾನ ಕಾರಣ)."

ಶ್ರೀರಾಮಕೃಷ್ಣರು : "ಯಾರು ಪುರುಷನೊ ಆತನೇ ಪ್ರಕೃತಿ; ಯಾರು ಬ್ರಹ್ಮನೊ ಆತನೇ ಶಕ್ತಿ ಅಂತ ಶಾಸ್ತ್ರದಲ್ಲಿ ಹೇಳಿದೆ. ಯಾವಾಗ ಆತ ನಿಷ್ಕ್ರಿಯನೊ, ಎಂದರೆ ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯಗಳನ್ನು ಮಾಡೋದಿಲ್ಲವೊ ಆಗ ಆತನಿಗೆ ಪುರುಷ ಅಥವಾ ಬ್ರಹ್ಮ ಅಂತ ಹೆಸರು; ಯಾವಾಗ ಆತ ಈ ಎಲ್ಲಾ ಕಾರ್ಯಗಳನ್ನು ಮಾಡುತ್ತಾನೊ ಆಗ ಆತ ನಿಗೆ ಶಕ್ತಿ ಅಥವಾ ಪ್ರಕೃತಿ ಅಂತ ಹೆಸರು. ಆದರೆ, ಯಾರು ಬ್ರಹ್ಮ ನಾಗಿದಾನೊ ಆತನೇ ಶಕ್ತಿಯಾಗಿಯೂ, ಯಾರು ಪುರುಷನಾಗಿದಾನೊ ಆತನೇ ಪ್ರಕೃತಿಯಾಗಿಯೂ ಆಗಿದಾನೆ. ನೀರು ಸ್ಥಿರವಾಗಿ ನಿಂತಿದ್ದರೂ ನೀರೆ ಅಥವಾ ಅಲ್ಲೋಲಕಲ್ಲೋಲವಾಗುತ್ತಿದ್ದರೂ ನೀರೆ. ಹಾವು ಸೊಟ್ಟ ಸೊಟ್ಟಗೆ ಮುಂದುವರಿಯುತ್ತಿದ್ದರೂ ಹಾವೆ, ಸುಮ್ಮನೆ ಸುರುಳಿ ಸುತ್ತಿಕೊಂಡು ಒಂದು ಕಡೆ ಬಿದ್ದಿದ್ದರೂ ಹಾವೆ.

"ಬ್ರಹ್ಮನ ಸ್ವರೂಪವೇನೆಂಬುದನ್ನು ಬಾಯಿಂದ ಹೇಳಲಾಗೋದಿಲ್ಲ. ಮಾತು ನಿಂತು ಹೋಗುತ್ತದೆ. ಕೀರ್ತನೆ ಸಮಯದಲ್ಲಿ ಗಾಯಕರು ಮೊದಲು ಮೊದಲು ಹಾಡುತ್ತಿರುತ್ತಾರೆ, 'ನಮ್ಮ ನಿತಾಯಿ ಮದದ ಹಸ್ತಿ! ನಮ್ಮ ನಿತಾಯಿ ಮದದ ಹಸ್ತಿ!' ಅಂತ. ಈ ನುಡಿಯನ್ನು ಅವರು ಆವೃತ್ತಿ ಮಾಡುತ್ತ ಮುಂದು ಮುಂದುವರಿದ ಹಾಗೆ ಕೊನೆಯಲ್ಲಿ ಅವರಿಗೆ ಇನ್ನು ಬೇರೆ ಏನನ್ನೂ ಹೇಳಲಾಗೋದಿಲ್ಲ; ಕೇವಲ ಹೇಳುತ್ತಿರು ತ್ತಾರೆ, 'ಹಸ್ತಿ! ಹಸ್ತಿ!' ಅಂತ. ಮತ್ತೆ ಅವರಿಗೆ ಹಾಗೂ ಹೇಳೋಕೆ ಆಗದೆ ಕೇವಲ 'ಹಾ! ಹಾ!' ಅಂತ ಹೇಳಲಾರಂಭಿಸುತ್ತಾರೆ ಕಟ್ಟಕಡೆಗೆ ಅದನ್ನು ಹೇಳೋಕೂ ಸಾಧ್ಯವಿಲ್ಲದವರಾಗಿ ಬಾಹ್ಯಜ್ಞಾನಶೂನ್ಯ ರಾಗಿಬಿಡುತ್ತಾರೆ."

ಪರಮಹಂಸರು ಈ ರೀತಿಯಾಗಿ ಮಾತನಾಡುತ್ತ ಆಡುತ್ತ ಇದ್ದ ಹಾಗೆಯೆ ನಿಂತು ನಿಂತೇ ಸಮಾಧಿಸ್ಥರಾಗಿಬಿಟ್ಟಿದಾರೆ.

ಅವರು ಪ್ರಕೃತಿಸ್ಥರಾದ ಸ್ವಲ್ಪ ಹೊತ್ತಿನ ಮೇಲೆ ಹೇಳುತ್ತಿದಾರೆ,

“ಕ್ಷರಾಕ್ಷರಗಳಿಗೆ ಅತೀತವಾಗಿ ಏನಿದೆಯೊ ಅದನ್ನು ಬಾಯಿಂದ ವರ್ಣಿಸ ಲಾಗೋದಿಲ್ಲ” ಅಂತ.

ಭಕ್ತರೆಲ್ಲ ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು : “ಎಲ್ಲಿಯವರೆಗೆ ಈ ಜಗತ್ತಿನಲ್ಲಿ ಭೋಗಿಸ ಬೇಕಾದ್ದು ಇನ್ನೂ ಉಳಿದುಕೊಂಡಿದೆಯೊ, ಎಲ್ಲಿಯವರೆಗೆ ಮಾಡಬೇಕಾದ ಕಾರ್ಯಗಳು ಇನ್ನೂ ಉಳಿದುಕೊಂಡಿವೆಯೊ ಅಲ್ಲಿಯವರೆಗೆ ಸಮಾಧಿ ದೊರೆಯದು.

(ಶಶಧರನಿಗೆ) “ಉಪನ್ಯಾಸ ಇವೇ ಮೊದಲಾದ ಕರ್ಮಗಳನ್ನು ಭಗವಂತ ನಿನ್ನ ಕೈಯಿಂದ ಮಾಡಿಸಿಕೊಳ್ಳುತ್ತಿದಾನೆ. ಈಗ ನೀನು ಅವನ್ನು ಮಾಡಲೇಬೇಕು. ಅವು ಮುಗಿದುವು ಅಂದರೆ, ಬಳಿಕ ನಿನಗೆ ಶಾಂತಿ. ಯಜಮಾನಿ ಮನೆ ಕೆಲಸಕಾರ್ಯಗಳನ್ನೆಲ್ಲ ಮುಗಿಸಿ ಸ್ನಾನಕ್ಕೆ ಹೋದಳು ಎಂದರೆ, ಕೂಗಿ ಗಂಟಲು ಕಿತ್ತುಕೊಂಡರೂ ಹಿಂದಿರುಗಳು.”

೨೭ನೆ ಆಗಸ್ಟ್ ೧೮೮೫, ಶ್ರಾವಣ ಕೃಷ್ಣ ದ್ವಿತೀಯ, ಗುರುವಾರ.

ಪರಮಹಂಸರು ಒಬ್ಬಿಬ್ಬರು ಭಕ್ತರೊಡನೆ ತಮ್ಮ ದಕ್ಷಿಣೇಶ್ವರದ ಕೊಠಡಿಯಲ್ಲಿ ಕುಳಿತಿದಾರೆ. ಘಂಟೆ ಸಾಯಂಕಾಲ ಐದು. ಏಡಿ ಹುಣ್ಣು ಎಂಬ ಪ್ರಾಣಾಂತಕ ರೋಗ ಆಗಲೆ ಪರಮಹಂಸರ ಶರೀರವನ್ನು ಹೊಕ್ಕಿ ಬಿಟ್ಟಿದೆ. ಆದರೂ ಭಕ್ತರೇನಾದರು ಅವರನ್ನು ನೋಡಲು ಬಂದರೆ ಆ ರೋಗವನ್ನು ಕಿಂಚಿತ್ತೂ ಲೆಕ್ಕಿಸದೆ, ಒಮ್ಮೊಮ್ಮೆ ಇಡೀ ದಿನವನ್ನೆಲ್ಲ ಅವರೊಡನೆ ಮಾತುಕತೆಗಳಾಡೋದು, ಹಾಡೋದು, ನರ್ತಿಸೋದು ಇವೇ ಮೊದಲಾದ ರೀತಿಯಾಗಿ ಕಳೆದುಬಿಡುತ್ತಿದಾರೆ.

ಡಾಕ್ಟರ್ ಮಧು ಪರಮಹಂಸರಿಗೆ ಚಿಕಿತ್ಸೆಮಾಡುತ್ತಿದಾನೆ. ಆಗಾಗ ಆತ ಇಲ್ಲಿಗೆ ಬಂದುಹೋಗುತ್ತಿದಾನೆ. ಬರುವಾಗಲೆಲ್ಲ ಪ್ರಾಯಶಃ ದೋಣಿ ಯಲ್ಲೇ ಬರೋ ಅಭ್ಯಾಸ. ಭಕ್ತರೆಲ್ಲರು ಪರಮಹಂಸರ ಸಂಬಂಧವಾಗಿ ಬಹಳ ಚಿಂತಾಕ್ರಾಂತರಾಗಿದಾರೆ. ಡಾಕ್ಟರ್ ಪ್ರತಿ ದಿವಸವೂ ಬಂದು ಅವರನ್ನು ನೋಡಿಹೋಗೋದು ಶ್ರೇಯಸ್ಕರ ಎಂಬುದಾಗಿ ಅವರು ಯೋಚಿಸುತ್ತಿದಾರೆ. ಮಾಸ್ಟರ್ ಪರಮಹಂಸರಿಗೆ ಹೇಳುತ್ತಿದಾನೆ, “ಡಾಕ್ಟರ್ ಮಧು ಒಳ್ಳೆ ಅನುಭವಶಾಲಿ. ಆತ ಬಂದು ಪ್ರತಿನಿತ್ಯವೂ ನಿಮ್ಮನ್ನು ನೋಡಿಹೋಗೋದಾದರೆ ಬಹಳ ಒಳ್ಳೆಯದು” ಅಂತ.

ಆಂಟಪುರದ ಪಂಡಿತ ಶ್ಯಾಮಾಪದಭಟ್ಟಾಚಾರ್ಯ ಬಂದು ಪರಮ

ಹಂಸರ ದರ್ಶನ ಪಡೆದು ಒಂದು ಕಡೆ ಕುಳಿತುಕೊಂಡ. ಇನ್ನೇನು ಮುಚ್ಚಂಜೆಯಾಗುತ್ತಿರೋದನ್ನು ನೋಡಿ, ಸಾಯಂ ಸಂಧ್ಯೆಯನ್ನು ಮಾಡಿ ಬರುತ್ತೇನೆ ಅಂತ ಹೇಳಿ ಗಂಗಾದಡಕ್ಕೆ ಹೋದ. ಸಂಧ್ಯಾವಂದನೆಯನ್ನು ಮಾಡುತ್ತಿದ್ದ ಹಾಗೆಯೆ ಆತನಿಗೆ ಅನೇಕ ದರ್ಶನಗಳಾದುವು. ಸಂಧ್ಯೆಯನ್ನು ಮುಗಿಸಿ ಮತ್ತೆ ಪರಮಹಂಸರ ಕೊಠಡಿಗೆ ಬಂದು ನೆಲದಮೇಲೆ ಕುಳಿತುಕೊಂಡ. ಪರಮಹಂಸರು ಭಗವತಿಯ ಜಪ ಮತ್ತು ಧ್ಯಾನವನ್ನು ಮುಗಿಸಿ ತಮ್ಮ ಆಸನದ ಮೇಲೆ ಕುಳಿತುಕೊಂಡಿದಾರೆ. ಮಾಸ್ಟರ್ ಫುಟ್ ರಗ್ಗಿನ ಮೇಲೆ ಕುಳಿತಿದಾನೆ. ರಾಖಾಲ, ಲಾಟು ಇವರೇ ಮೊದಲಾದವರು ಆಗಾಗ ಕೊಠಡಿಗೆ ಬಂದು ಹೋಗುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಪಂಡಿತನನ್ನು ತೋರಿಸಿ: "ಈತ ಒಳ್ಳೆ ನಿಯಮನಿಷ್ಠಾವಂತ. (ಪಂಡಿತನಿಗೆ) 'ನೇತಿ, ನೇತಿ' ಮಾರ್ಗದಲ್ಲಿ ಮುಂದುವರಿದು ಎಲ್ಲಿ ಮನಸ್ಸು ಶಾಂತಿಯನ್ನು ಪಡೆಯುವುದೊ, ಅಲ್ಲಿಯೇ ಬ್ರಹ್ಮನಿದಾನೆ.

"ರಾಜ ದೊರೆಯಬೇಕಾದರೆ ಅರಮನೆಯ ಏಳು ಹೆಬ್ಬಾಗಿಲುಗಳನ್ನು ದಾಟಿ ಮುಂದಕ್ಕೆ ಹೋಗಬೇಕು. ಒಬ್ಬ ಅಭ್ಯಾಗತ ಮೊದಲನೆ ಬಾಗಿಲ ಹತ್ತಿರ ಹೋಗಿ ನೋಡುತ್ತಾನೆ, ಒಬ್ಬ ಐಶ್ವರ್ಯವಂತ ತನ್ನ ಅನುಯಾಯಿಗಳೊಡನೆ ಬಹಳ ಠೀವಿಯಿಂದ ಕುಳಿತುಕೊಂಡಿದಾನೆ. ಆಗ ಅಭ್ಯಾಗತ ತನ್ನ ಸ್ನೇಹಿತನನ್ನು ಕೇಳಿದ, 'ಈತನೆ ರಾಜನೇನು?' ಅಂತ. ಆತ ಕಿಂಚಿತ್ ನಕ್ಕು ಹೇಳಿದ, 'ಅಲ್ಲ' ಎಂದು. ಎರಡನೆಯ ಮತ್ತು ಉಳಿದ ಬಾಗಿಲುಗಳ ಹತ್ತಿರವೂ ಅಭ್ಯಾಗತನಿಗೆ ತನ್ನ ಸ್ನೇಹಿತನಿಂದ ಇದೇ ಉತ್ತರ ದೊರೆಯಿತು. ಆದರೆ ಆ ಅಭ್ಯಾಗತ ನೋಡುತ್ತಾನೆ, ತಾನು ಒಳ ಒಳಕ್ಕೆ ಹೋದ ಹೋದಂತೆಲ್ಲ ಐಶ್ವರ್ಯ ಸಂಪತ್ತುಗಳೂ ಹೆಚ್ಚು ಹೆಚ್ಚಾಗಿ ಕಣ್ಣಿಗೆ ಬೀಳಲಾರಂಭಿಸುತ್ತಿವೆ. ಏಳು ಬಾಗಿಲುಗಳನ್ನು ದಾಟಿದನಂತರ ಕಣ್ಣಿಗೆ ಕಾಣಿಸಿಕೊಂಡ ದೃಶ್ಯವನ್ನು ನೋಡಿ, ಮತ್ತೆ ಆತ ತನ್ನ ಸ್ನೇಹಿತನಿಗೆ ಎಂದಿನ ಪ್ರಶ್ನೆಯನ್ನು ಹಾಕಲಿಲ್ಲ. ರಾಜನ ಅತುಲ ಐಶ್ವರ್ಯವನ್ನು ನೋಡಿ ಮಂತ್ರಮುಗ್ಧನಾಗಿ ಸುಮ್ಮನೆ ನಿಂತುಕೊಂಡುಬಿಟ್ಟ. ಆಗ ಆತನಿಗೆ ಹೊಳೆಯಿತು ಈತನೇ ರಾಜ ಅಂತ. ಮತ್ತೆ ಆತನ ಹೃದಯದಲ್ಲಿ ಯಾವ ಸಂದೇಹವೂ ಉಳಿಯಲಿಲ್ಲ."

ಪಂಡಿತ: "ಮಾಯಾ ರಾಜ್ಯದ ಎಲ್ಲೆಯನ್ನು ದಾಟಿಹೋದರೆ ಮಾತ್ರವೇ ಆತನ ದರ್ಶನ ಪಡೆಯಬಹುದು."

ಶ್ರೀರಾಮಕೃಷ್ಣರು: "ಆತನ ಸಾಕ್ಷಾತ್ಕಾರವನ್ನು ಪಡೆದನಂತರ ಅನುಭವವಾಗುತ್ತದೆ, ಆತನೇ ಈ ಜೀವಜಗತ್ತು, ಮಾಯೆ ಆಗಿದಾನೆ ಎಂಬುದಾಗಿ. 'ನೇತಿ, ನೇತಿ' ಮಾರ್ಗಗಾಮಿಗಳಿಗೆ ಈ ಜಗತ್ತು ನಿಸ್ಸಂದೇಹವಾಗಿ 'ಮಾಯೆಯ ಕ್ರೀಡಾಗೃಹ', ಸ್ವಪ್ನದೋಪಾದಿಯಲ್ಲಿ ಮಿಥ್ಯವಾದ್ದು ಎಂಬ ಅನುಭವವಾಗುತ್ತದೆ. ಆದರೆ ಆತನ ಸಾಕ್ಷಾತ್ಕಾರ ದೊರೆತನಂತರ ಈ ಜಗತ್ತೇ 'ಆನಂದದ ಕ್ರೀಡಾರಂಗ' ಆಗುತ್ತದೆ.

"ಬರೀ ಶಾಸ್ತ್ರಾಧ್ಯಯನದಿಂದ ದೊರಕೋ ಫಲವೇನು ? ಪಂಡಿತರು ಕೇವಲ ವಿಚಾರದಲ್ಲೇ ಮಗ್ನರಾಗಿರುತ್ತಾರೆ."

ಪಂಡಿತ: "ನನ್ನನ್ನು ಯಾರಾದರು ಪಂಡಿತ ಅಂತ ಕರೆದರೆ ಏನೋ ಒಂದು ತರ ಹೇವರಿಕೆ ಆಗುತ್ತದೆ."

ಶ್ರೀರಾಮಕೃಷ್ಣರು: "ಹೀಗಾಗೋದು ಆತನ ಕೃಪೆಯಿಂದ ಮಾತ್ರವೆ. ಪಂಡಿತರು ಕೇವಲ ವಿಚಾರದಲ್ಲೇ ತೊಡಗುತ್ತಾರೆ. ಕೆಲವರು ಹಾಲಿನ ವಿಷಯವಾಗಿ ಕೇಳಿದಾರೆ, ಇನ್ನು ಕೆಲವರು ಅದನ್ನು ನೋಡಿದಾರೆ. ಸಾಕ್ಷಾತ್ಕಾರವಾದನಂತರ ಎಲ್ಲವೂ ಭಗವನ್ಮಯವಾಗಿ ಕಾಣಬರುತ್ತವೆ. ಭಗವಂತನೇ ಎಲ್ಲವೂ ಆಗಿದಾನೆ."

ಪಂಡಿತ, ನಾರಾಯಣ ಸ್ತೋತ್ರವನ್ನು ಪಠಿಸಲಾರಂಭಿಸಿದಾನೆ. ಪರಮಹಂಸರು ಭಾವಪರವಶರಾಗಿಬಿಟ್ಟಿದಾರೆ.

ಪಂಡಿತ ಗೀತೆಯಿಂದ ಒಂದು ಶ್ಲೋಕವನ್ನು ಪಠಿಸಿದ:

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥
(ಭ. ಗೀ. ೬–೨೯)

ಶ್ರೀರಾಮಕೃಷ್ಣರು: "ನೀನು ಅಧ್ಯಾತ್ಮರಾಮಾಯಣವನ್ನು ಓದಿದ್ದೀಯೇನು ?"

ಪಂಡಿತ: "ಹೌದು, ಒಂದು ಸ್ವಲ್ಪ ಓದಿದೇನೆ."

ಶ್ರೀರಾಮಕೃಷ್ಣರು: "ಅದು ಜ್ಞಾನ, ಭಕ್ತಿ ಇವುಗಳಿಂದ ತುಂಬಿದೆ.

---

* ಪರಿಶಿಷ್ಟ ೩ರಲ್ಲಿ ೯ನ್ನು ನೋಡಿ.

ಶಬರಿಯ ಉಪಾಖ್ಯಾನ, ಅಹಲ್ಯೆಯ ಸ್ತೋತ್ರ ಇವು ಭಕ್ತಿರಸದಿಂದ ತುಂಬಿತುಳುಕಾಡುತ್ತಿವೆ.

"ಆದರೆ, ಒಂದು ವಿಷಯ. ಭಗವಂತ ವಿಷಯಬುದ್ಧಿಯ ಎಲ್ಲೆಯಿಂದ ಬಹಳ ದೂರದಲ್ಲೇ ಉಳಿಯುತ್ತಾನೆ."

ಪಂಡಿತ: "ಎಲ್ಲಿ ವಿಷಯಬುದ್ಧಿ ತಾಂಡವವಾಡುತ್ತಿದೆಯೊ ಅಲ್ಲಿಂದ ಆತ ಬಹಳ ದೂರದಲ್ಲಿಯೇ ಉಳಿಯುತ್ತಾನೆ. ಆದರೆ ಎಲ್ಲಿ ಅದು ಇಲ್ಲವೋ ಅಲ್ಲಿ ಆತ ಬಹಳ ಸಮೀಪದಲ್ಲೇ ಇರುತ್ತಾನೆ. ಉತ್ತರಪಾರದ ಒಬ್ಬ ಜಮೀನುದಾರನನ್ನು—ಆತನ ಹೆಸರು ಏನೋ ಒಂದು ಮುಖ್ಯೋಪಾಧ್ಯಾಯನಂತೆ—ನೋಡಿ ಬಂದೆ. ವಯಸ್ಸಾಗಿಬಿಟ್ಟಿದೆ. ಆದರೂ ಆತನಿಗೆ ಕೇವಲ ಕಾದಂಬರಿಗಳಲ್ಲೇ ಮನಸ್ಸು."

ಶ್ರೀರಾಮಕೃಷ್ಣರು: "ಅಧ್ಯಾತ್ಮರಾಮಾಯಣ ಒಂದು ಕಡೆ ಹೇಳುತ್ತದೆ, ಆತನೇ ಜೀವಜಗತ್ತಾಗಿದ್ದಾನೆ ಅಂತ."

ಪಂಡಿತ ಆನಂದಿತನಾಗಿ ಶ್ರೀಮದ್ಭಾಗವತದ ಹತ್ತನೆ ಸ್ಕಂದದಿಂದ ಇದೇ ಭಾವವನ್ನು ತೋರಿಸುತ್ತಿರೋ ಯಮಳಾರ್ಜುನರ ಸ್ತೋತ್ರವನ್ನು ಪಠಿಸುತ್ತಿದ್ದಾನೆ:

> ಕೃಷ್ಣ ಕೃಷ್ಣ ಮಹಾಯೋಗಿನ್ ತ್ವಮಾದ್ಯಃ ಪುರುಷಃ ಪರಃ ।
> ವ್ಯಕ್ತಾವ್ಯಕ್ತಮಿದಂ ವಿಶ್ವಂ ರೂಪಂ ತೇ ಬ್ರಾಹ್ಮಣಾ ವಿದುಃ ॥೨೯॥
> ತ್ವಮೇಕಃ ಸರ್ವಭೂತಾನಾಂ ದೇಹಾಸ್ವಾತ್ಮೇಂದ್ರಿಯೇಶ್ವರಃ ।
> ತ್ವಮೇವ ಕಾಲೋ ಭಗವಾನ್ ವಿಷ್ಣುರವ್ಯಯ ಈಶ್ವರಃ ॥೩೦॥
> ತ್ವಂ ಮಹಾನ್ ಪ್ರಕೃತಿಃ ಸೂಕ್ಷ್ಮಾ ರಜಸ್ಸತ್ತ್ವತಮೋ ಮಯೀ ।
> ತ್ವಮೇವ ಪುರುಷೋಽಧ್ಯಕ್ಷಃ ಸರ್ವಕ್ಷೇತ್ರವಿಕಾರವಿತ್ ॥೩೧॥ ‡

ಪರಮಹಂಸರು ಈ ಸ್ತೋತ್ರವನ್ನು ಕೇಳುತ್ತಿದ್ದಹಾಗೆಯೇ ನಿಂತುಕೊಂಡೇ ಸಮಾಧಿಸ್ಥರಾಗಿಬಿಟ್ಟಿದ್ದಾರೆ. ಪಂಡಿತ ಕುಳಿತುಕೊಂಡಿದ್ದಾನೆ. ಪರಮಹಂಸರು ತಮ್ಮ ಒಂದು ಪಾದವನ್ನು ಆತನ ತೊಡೆಯ ಮೇಲೆ ಆ ರೀತಿಯಾಗಿ ಇಟ್ಟಿದ್ದಾರೆ ಅದು ಆತನೆದೆಯನ್ನೂ ಮುಟ್ಟುತ್ತಿದೆ. ಮುಖದಲ್ಲಿ ಮಂದಹಾಸ ಸುಮ್ಮನೆ ಚಿಮ್ಮುತ್ತಿದೆ.

ಪಂಡಿತ ಅವರ ಪಾದಪದ್ಮವನ್ನು ಹಿಡಿದುಕೊಂಡು ಪ್ರಾರ್ಥಿಸುತ್ತಿದ್ದಾನೆ, "ಹೇ ಗುರೂ! ನನ್ನ ಆಧ್ಯಾತ್ಮಜೀವನವನ್ನು ಚೈತನ್ಯಗೊಳಿಸು" ಅಂತ.

---

‡ ಪರಿಶಿಷ್ಟ ೩ರಲ್ಲಿ ೧೦ನ್ನು ನೋಡಿ.

ಪಂಡಿತ ಹಿಂದಿರುಗಿ ಮನೆಗೆ ಹೊರಟುಹೋದ. ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ, "ನಾನು ಹಿಂದೆ ಹೇಳಿದ್ದಂತೆ ಈಗ ಘಟಿಸುತ್ತಿರೋದು ನಿನ್ನ ಕಣ್ಣಿಗೆ ಬೀಳುತ್ತಿದೆಯೇನು? ಯಾರು ಹೃತ್ಪೂರ್ವಕವಾಗಿ ಧ್ಯಾನ ಜಪ ಇವನ್ನೆಲ್ಲ ಮಾಡಿದಾರೊ ಅವರು ಇಲ್ಲಿಗೆ ಬರಲೇಬೇಕು" ಅಂತ.

ರಾತ್ರಿ ಹತ್ತು. ಪರಮಹಂಸರು ಸ್ವಲ್ಪ ರವೆ ಪಾಯಸ ಕುಡಿದು ಸುಮ್ಮನೆ ಹಾಸಿಗೆ ಮೇಲೆ ಮಲಗಿಕೊಂಡಿದಾರೆ. ಮಾಸ್ಟರಿಗೆ ಹೇಳುತ್ತಿದಾರೆ, ತಮ್ಮ ಕಾಲನ್ನು ಸ್ವಲ್ಪ ಮೃದುವಾಗಿ ಒತ್ತುವಂತೆ. ಮತ್ತೆ ಕೆಲವು ನಿಮಿಷಗಳಾದನಂತರ ಹೇಳುತ್ತಿದಾರೆ, ತಮ್ಮ ಶರೀರವನ್ನು — ವಿಶೇಷತಃ ಎದೆಯ ಭಾಗವನ್ನು — ಒತ್ತುವಂತೆ. ಒಂದು ಕಿಂಚಿತ್ ನಿದ್ರೆ ಮಾಡಿದನಂತರ ಮಾಸ್ಟರಿಗೆ ಹೇಳುತ್ತಿದಾರೆ, "ಈಗ ನೀನು ಹೋಗಿ ನಿದ್ರೆ ಮಾಡು. ನೋಡೋಣ ನಾನು ಒಬ್ಬನೆ ಇದ್ದರೆ ನಿದ್ರೆ ಬರುತ್ತದೆಯೆ" ಅಂತ. ಅವರು ರಾಮಲಾಲನಿಗೆ ಹೇಳುತ್ತಿದಾರೆ, "ಈತ (ಮಾಸ್ಟರ್) ಮತ್ತು ರಾಖಾಲ ಮನೆಯೊಳಗೇ ಮಲಗಿಕೊಳ್ಳಬಹುದಲ್ಲ" ಎಂದು.

೨೮ನೆ ಆಗಸ್ಟ್ ೧೮೮೫, ಶ್ರಾವಣ ಕೃಷ್ಣ ತೃತೀಯ, ಶುಕ್ರವಾರ.

ಬೆಳಗಾಯಿತು. ಪರಮಹಂಸರು ಹಾಸಿಗೆಯಿಂದೆದ್ದು ಭಗವತಿಯ ಧ್ಯಾನಮಾಡುತ್ತಿದಾರೆ. ಅವರಿಗೆ ಗಂಟಲ ರೋಗ ಬಂದಿರೋದರಿಂದ ಅವರ ಶ್ರೀಮುಖದಿಂದ ಭಗವತಿಯ ಮಧುರ ನಾಮವನ್ನು ಕೇಳುವ ಸುಯೋಗ ಭಕ್ತರಿಗೆ ಈಗ ತಪ್ಪಿಹೋಗಿದೆ.

ಪರಮಹಂಸರು ಪ್ರಾತಃಕೃತ್ಯಗಳನ್ನೆಲ್ಲ ಮುಗಿಸಿಕೊಂಡು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಅವರು ಮಾಸ್ಟರನ್ನು ಕೇಳುತ್ತಿದಾರೆ, "ಒಳ್ಳೇದು, ನನಗೆ ಈ ರೋಗ ಏಕೆ ಬಂತು?" ಅಂತ.

ಮಾಸ್ಟರ್: "ಎಲ್ಲರಿಗೂ ಆಗೋ ಹಾಗೆ ನಿಮಗೂ ಆಗದೆ ಇದ್ದರೆ, ಜೀವರಿಗೆ ಸಾಹಸ ಉಂಟಾಗದು. ಅವರು ನೋಡುತ್ತಾ ಇದಾರೆ, ನಿಮ್ಮ ದೇಹ ಇಷ್ಟೊಂದು ರೋಗಗ್ರಸ್ತವಾಗಿದ್ದರೂ ನಿಮ್ಮ ಮನಸ್ಸು ಭಗವಂತನೊಬ್ಬನನ್ನು ವಿನಾ ಬೇರೆ ಏನನ್ನೂ ಚಿಂತಿಸುತ್ತಿಲ್ಲವಲ್ಲ ಎಂಬುದನ್ನ!"

ಶ್ರೀರಾಮಕೃಷ್ಣರು ನಗುತ್ತ: "ಬಲರಾಮ ಹೇಳಿದ, 'ನಿಮಗೂ ಹೀಗಾಗುವುದಾದರೆ, ನಾವು ರೋಗಗ್ರಸ್ತರಾಗೋದರಲ್ಲಿ ಆಶ್ಚರ್ಯಪಡೋದೇನಿದೆ?' ಅಂತ. ಸೀತಾವಿಯೋಗದಿಂದ ರಾಮ ತನ್ನ ಧನುಸ್ಸನ್ನು ಎತ್ತ

ಲಾಗದಿರೋದನ್ನು ನೋಡಿ, ಲಕ್ಷ್ಮಣನಿಗೆ ಬಹಳ ಆಶ್ಚರ್ಯವಾಗಿಬಿಟ್ಟಿತು. 'ಬ್ರಹ್ಮನೂ ಪಂಚಭೂತಗಳ ಬಲೆಗೆ ಬಿದ್ದು ಸುಮ್ಮನೆ ಅಳುತ್ತಿದಾನೆ.' ''

ಮಾಸ್ಟರ್ : ''ಯೇಸುವೂ ತನ್ನ ಭಕ್ತರ ದುಃಖವನ್ನು ನೋಡಿ ಸಹಿಸೋಕಾಗದೆ ಸಾಮಾನ್ಯರಂತೆ ಅತ್ತನಂತೆ.''

ಶ್ರೀರಾಮಕೃಷ್ಣರು : ''ಅವರಿಗೇನಾಗಿತ್ತು ?''

ಮಾಸ್ಟರ್: ''ಮೇರಿ ಮತ್ತು ಮಾರ್ಥ ಎಂಬ ಸೋದರಿಯರಿಗೆ ಲ್ಯಾಸರಸ್ ಎಂಬ ಸೋದರನಿದ್ದ. ಇವರು ಮೂವರೂ ಯೇಸುವಿನ ಭಕ್ತರು. ಲ್ಯಾಸರಸ್ ಸತ್ತುಹೋಗಿಬಿಡುತ್ತಾನೆ. ಯೇಸು ಅವರ ಮನೆಗೆ ಹೊರಟು ದಾರಿಯಲ್ಲಿ ಮುಂದುವರಿಯುತ್ತಿದ್ದನಂತೆ. ಮೇರಿ ಓಡಿ ಹೋಗಿ ಆತನನ್ನು ದಾರಿಯಲ್ಲೇ ಸಂಧಿಸಿ ಆತನ ಪಾದಗಳಿಗೆ ಅಡ್ಡಬಿದ್ದು ಅಳುತ್ತ ಅಳುತ್ತ ಹೇಳಿದಳಂತೆ, 'ಪ್ರಭು, ನೀನು ಇನ್ನು ಸ್ವಲ್ಪ ಮುಂಚೆ ಬಂದಿದ್ದರೆ ಆತ ಸಾಯುತ್ತಿರಲಿಲ್ಲ' ಅಂತ. ಆಕೆಯ ಅಳುವನ್ನು ನೋಡಿ, ಯೇಸುವೂ ಅಳಲಾರಂಭಿಸಿದನಂತೆ.

''ಬಳಿಕ ಯೇಸು ಲ್ಯಾಸರಸ್ಸನ ಗೋರಿಯ ಹತ್ತಿರ ಹೋಗಿ ಆತನ ಹೆಸರು ಹಿಡಿದು ಕೂಗಿದನಂತೆ. ಒಡನೆಯೇ ಲ್ಯಾಸರಸ್ಸನಿಗೆ ಪ್ರಾಣ ಬಂದು ಹೊರಕ್ಕೆ ಎದ್ದು ಬಂದನಂತೆ.''

ಶ್ರೀರಾಮಕೃಷ್ಣರು : ''ಆದರೆ ನನ್ನ ಕೈಯಲ್ಲಿ ಅದೆಲ್ಲ ಸಾಧ್ಯವಿಲ್ಲ.''

ಮಾಸ್ಟರ್: ''ಬೇಕೂ ಅಂತ ನೀವು ಅವನ್ನೆಲ್ಲ ಮಾಡಿ ತೋರಿಸುತ್ತಿಲ್ಲ. ಅವೆಲ್ಲ ಪವಾಡಗಳು ; ಅದಕ್ಕಾಗೇ ನೀವು ಅವನ್ನು ಮಾಡಿ ತೋರಿಸುತ್ತಿಲ್ಲ. ಅವನ್ನೆಲ್ಲ ಮಾಡಿತೋರಿಸಿದರೆ ಜನರ ಮನಸ್ಸು ದೇಹದ ಕಡೆಗೆ ಹೋಗುತ್ತದೆಯೆ ವಿನಾ ಶುದ್ಧ ಭಕ್ತಿಯ ಕಡೆಗಲ್ಲ. ಅದಕ್ಕಾಗಿಯೇ ನೀವು ಅವನ್ನು ಮಾಡಿ ತೋರಿಸುತ್ತಿಲ್ಲ. ನಿಮಗು ಯೇಸುವಿಗು ಅನೇಕ ಸಾದೃಶ್ಯಗಳಿವೆ.''

ಶ್ರೀರಾಮಕೃಷ್ಣರು ನಗುತ್ತ: ''ಏನೇನು ಸಾದೃಶ್ಯಗಳಪ್ಪ ಅವು ?''

ಮಾಸ್ಟರ್: ''ನೀವು ಭಕ್ತರಿಗೆ ಉಪವಾಸ ಮಾಡಬೇಕೆಂದಾಗಲಿ ಅಥವಾ ಕಠೋರ ಸಾಧನೆ ಮಾಡಬೇಕೆಂದಾಗಲಿ ಹೇಳುತ್ತಿಲ್ಲ. ಊಟೋಪಚಾರಗಳ ಸಂಬಂಧವಾಗಿ ಅಂಥ ಕಟ್ಟುನಿಟ್ಟಿನ ನಿಯಮಗಳನ್ನೇನು ನೀವು ವಿಧಿಸುತ್ತಿಲ್ಲ. ಯೇಸುವಿನ ಶಿಷ್ಯರು ಶಾಸ್ತ್ರೋಲ್ಲಂಘನೆ ಮಾಡಿ ಭಾನುವಾರ ಊಟಮಾಡಿದರಂತೆ; ಅದಕ್ಕಾಗಿ ಕರ್ಮಕಾಂಡಿಗಳು ಅವರನ್ನು ತರಾಟೆಗೆ

ತೆಗೆದುಕೊಂಡರಂತೆ. ಆಗ ಯೇಸು ಹೇಳಿದನಂತೆ, 'ಅವರು ಉಂಡು ತಿಂದು ಆನಂದಪಡಲೇ ಬೇಕು. ಎಲ್ಲಿಯವರೆಗೆ ವರ ಜೊತೆಯಲ್ಲಿದ್ದಾನೊ, ಅಲ್ಲಿಯವರೆಗೆ ವರನ ಅನುಯಾಯಿಗಳು ಆನಂದಪಡಲೇ ಬೇಕು' ಅಂತ.''

ಶ್ರೀರಾಮಕೃಷ್ಣರು : ''ಇದರ ಅರ್ಥವೇನು ?''

ಮಾಸ್ಟರ್ : ''ಎಂದರೆ, ಎಲ್ಲಿಯವರೆಗೆ ಅವತಾರಪುರುಷ ಜೊತೆಯಲ್ಲಿದ್ದಾನೊ ಅಲ್ಲಿಯವರೆಗೆ ಆತನ ಸಾಂಗೋಪಾಂಗಿಗಳು ಆನಂದಪಟ್ಟೇ ಪಡಬೇಕು. ಅವರೇಕೆ ನಿರಾನಂದಿಗಳಾಗಬೇಕು ? ಆದರೆ ಯಾವಾಗ ಆತ ತನ್ನ ಸ್ವಧಾಮಕ್ಕೆ ಹಿಂದಿರುಗಿ ಹೊರಟುಹೋಗುತ್ತಾನೊ ಆಗ ಅವರು ನಿರಾನಂದರಾಗಿರಬೇಕಾದ ದಿನ ಬರುತ್ತದೆ.''

ಶ್ರೀರಾಮಕೃಷ್ಣರು ನಗುತ್ತ : ''ಇನ್ನೇನಾದರು ಸಾಮ್ಯಗಳು ?''

ಮಾಸ್ಟರ್ : ''ಹೌದು, ಇವೆ. ನೀವು ಹೇಳುತ್ತೀರಲ್ಲ, 'ಹುಡುಗರ ಹೃದಯವನ್ನು ಕಾಮಕಾಂಚನ ಇನ್ನೂ ಹೊಕ್ಕಿಲ್ಲ; ಅವರು ಉಪದೇಶವನ್ನು ಗ್ರಹಿಸಬಲ್ಲರು; ಅದು ಹೊಸ ಮಡಕೆಯಲ್ಲಿ ಹಾಲು ಹಾಕಿಡಬಹುದಲ್ಲ ಹಾಗೆ; ಮೊಸರಿನ ಮಡಕೆಯಲ್ಲಿ ಹಾಕಿಟ್ಟರೆ ಅದು ಕೆಟ್ಟು ಹೋಗುವ ಸಂಭವ' ಅಂತ, ಆತನೂ ಇದೇ ರೀತಿಯಾಗಿ ಹೇಳುತ್ತಿದ್ದ.''

ಶ್ರೀರಾಮಕೃಷ್ಣರು : ''ಏನು ಹೇಳುತ್ತಿದ್ದ ?''

ಮಾಸ್ಟರ್ : '''ಹಳೆ ಸೀಸೆಯಲ್ಲಿ ಹೊಸ ಮದ್ಯ ಹಾಕಿಟ್ಟರೆ, ಅದು ಬಿರುಕುಬಿಡೋ ಸಂಭವ. ಹಳೆ ಬಟ್ಟೆಗೆ ಹೊಸ ಬಟ್ಟೆ ತೇಪೆಹಾಕಿದರೆ ಹಳೇದು ಬೇಗ ಹರಿದುಹೋಗಿಬಿಡುತ್ತದೆ.'

''ಮತ್ತೆ ನೀವು ಹೇಳುತ್ತೀರಲ್ಲ, 'ನೀವು ಮತ್ತು ತಾಯಿ ಒಂದೇ' ಅಂತ, ಹಾಗೇ ಯೇಸು ಕೂಡ ಹೇಳುತ್ತಿದ್ದ, 'ನಾನು ಮತ್ತು ನನ್ನ ತಂದೆ ಒಂದೇ' ಎಂದು.''

ಶ್ರೀರಾಮಕೃಷ್ಣರು ನಗುತ್ತ : ''ಇನ್ನೇನಾದರು ?''

ಮಾಸ್ಟರ್ : ''ನೀವು ಹೇಳುತ್ತೀರಲ್ಲ, 'ವ್ಯಾಕುಲರಾಗಿ ಆತನನ್ನು ಕರೆದರೆ ಆತ ಆಲಿಸಿಯೇ ಆಲಿಸುತ್ತಾನೆ' ಅಂತ, ಹಾಗೆಯೇ ಯೇಸು ಹೇಳುತ್ತಿದ್ದ, 'ವ್ಯಾಕುಲನಾಗಿ ಬಾಗಿಲನ್ನು ತಟ್ಟು, ಆಗ ಅದು ತೆರೆದು ನಿಲ್ಲುತ್ತದೆ' ಅಂತ.''

ಶ್ರೀರಾಮಕೃಷ್ಣರು : ''ಒಳ್ಳೆಯದು, ಭಗವಂತ ಮತ್ತೆ ಅವತರಿಸಿರುವುದಾದರೆ, ಅದು ಆತನ ಪೂರ್ಣಾವತಾರವೊ, ಅಂಶಾವತಾರವೊ

ಅಥವಾ ಲೇಶಾವತಾರವೊ ? ಕೆಲವರು ಹೇಳುತ್ತಿದಾರೆ ಪೂರ್ಣಾವತಾರ ಅಂತ.''

ಮಾಸ್ಟರ್ : ''ಪೂರ್ಣಾವತಾರ, ಅಂಶಾವತಾರ, ಲೇಶಾವತಾರ ಇವುಗಳ ಅರ್ಥ ನನಗೆ ಸರಿಯಾಗಿ ಆಗುತ್ತಿಲ್ಲ. ಅವತಾರಪುರುಷ ಗೋಡೆಯೊಳಗಿರೋ ಒಂದು ಕಂಡಿಯ ಹಾಗೆ ಅಂತ ಒಮ್ಮೆ ಹೇಳಿದಿರಲ್ಲ, ಅದು ನನಗೆ ಅರ್ಥವಾಗಿದೆ.''

ಶ್ರೀರಾಮಕೃಷ್ಣರು : ''ಅದು ಹೇಗೆ ಹೇಳು ನೋಡೋಣ?''

ಮಾಸ್ಟರ್ : ''ಗೋಡೆಯೊಳಗೆ ಒಂದು ಗುಂಡಾದ ಕಂಡಿಯಿದೆ. ಅದರ ಮೂಲಕ ಗೋಡೆಯ ಆ ಪಕ್ಕದಲ್ಲಿರೋ ವಿಶಾಲ ಮೈದಾನದ ಒಂದು ಭಾಗವನ್ನು ನೋಡಬಹುದು. ಅದೇ ರೀತಿಯಾಗಿ ನಿಮ್ಮ ಮೂಲಕ ಆ ಅನಂತ ಭಗವಂತನ ಒಂದು ಕಿಂಚಿತ್ ಭಾಗವನ್ನು ನಾವು ನೋಡುತ್ತಿದೇವೆ.''

ಶ್ರೀರಾಮಕೃಷ್ಣರು : ''ಹೌದು, ಒಂದೇ ಸಲಕ್ಕೆ ಐದಾರು ಮೈಲಿ ವಿಸ್ತೀರ್ಣದ ಪ್ರದೇಶವನ್ನು ನೋಡಬಹುದು.''

ಮಾಸ್ಟರ್ ಗಂಗೆಗೆ ಹೋಗಿ ಸ್ನಾನಮುಗಿಸಿ ಮತ್ತೆ ಪರಮಹಂಸರ ಕೊಠಡಿಯಲ್ಲಿ ಕುಳಿತುಕೊಂಡಿದಾನೆ. ಘಂಟೆ ಬೆಳಗಿನ ಎಂಟು. ಆತ ತನಗೆ ಜಗನ್ನಾಥನ ಅನ್ನಪ್ರಸಾದ ಬೇಕೆಂದು ಲಾಟುವನ್ನು ಕೇಳಿದ. ಪರಮಹಂಸರು ಮಾಸ್ಟರ್ ಹತ್ತಿರ ಬಂದು ನಿಂತುಕೊಂಡು ಹೇಳುತ್ತಿದಾರೆ, ''ನೀನು ಹೀಗೆಯೇ ಮಾಡು. ಯಾರು ಭಕ್ತರೊ ಅವರು ಮೊದಲು ಪ್ರಸಾದವನ್ನು ತಿನ್ನದೆ ಬೇರೆ ಏನನ್ನೂ ತಿನ್ನೋದಿಲ್ಲ'' ಅಂತ.

ಮಾಸ್ಟರ್ : ''ನಾನು ಬಲರಾಮನ ಮನೆಯಿಂದ ಸ್ವಲ್ಪ ಜಗನ್ನಾಥನ ಅನ್ನಪ್ರಸಾದವನ್ನು ತೆಗೆದುಕೊಂಡುಬಂದಿದೇನೆ. ಒಂದೆರಡು ಕಾಳನ್ನು ದಿನಾ ತಿನ್ನುತ್ತಿದೇನೆ.''

ಮಾಸ್ಟರ್ ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾನೆ. ಅವರು ಪ್ರೀತಿಯಿಂದ ಆತನಿಗೆ ಹೇಳುತ್ತಿದಾರೆ, ''ಬೆಳಗು ಬೆಳಗಿನ ಹೊತ್ತಿನಲ್ಲೇ ಬಂದುಬಿಡು; ಭಾದ್ರಪದದ ಬಿಸಿಲು ಬಹಳ ಕೆಟ್ಟದ್ದು'' ಅಂತ.

೩೧ನೆ ಆಗಸ್ಟ್ ೧೮೮೫, ಶ್ರಾವಣ ಕೃಷ್ಣ ಷಷ್ಠಿ, ಸೋಮವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದಾರೆ.

ಘಂಟೆ ರಾತ್ರಿ ಎಂಟು. ಗಂಟಲಿನಲ್ಲಿ ಏಡಿ ಹುಣ್ಣು ಎದ್ದು ಅವರು ಅಸ್ವಸ್ಥ ರಾಗಿದಾರೆ. ಆದರೂ ಹಗಲೂ ಇರುಳು ಭಕ್ತರಿಗೆ ಯಾವರೀತಿಯಾಗಿ ಮಂಗಳವನ್ನು ತರೋದು ಎಂಬ ಏಕಮಾತ್ರ ಚಿಂತನೆಯೇ ಅವರ ಹೃದಯ ದಲ್ಲಿ. ಒಂದೊಂದು ಸಲ ಬಾಲಕನೋಪಾದಿಯಲ್ಲಿ ತಮ್ಮ ರೋಗದ ಸಂಬಂಧವಾಗಿ ಆಕಾಂಕ್ಷಿತರಾಗುತ್ತಾರೆ; ಮರುಕ್ಷಣವೇ ಎಲ್ಲವನ್ನೂ ಮರೆತು ಪ್ರೇಮೋನ್ಮತ್ತರಾಗಿಬಿಡುತ್ತಾರೆ. ಭಕ್ತರ ಕಡೆ ಇದ್ದ ಅವರ ಪ್ರೀತಿ ವಾತ್ಸಲ್ಯಭಾವದಿಂದ ಸುಮ್ಮನೆ ತುಂಬಿತುಳುಕಾಡುತ್ತಿದೆ.

ಎರಡು ದಿನಗಳ ಹಿಂದೆ— ಶನಿವಾರ ರಾತ್ರಿ—ಪೂರ್ಣ ಬರೆದಿದ್ದ ಪತ್ರ ಪರಮಹಂಸರಿಗೆ ಬಂದಿದೆ. ಪೂರ್ಣ ಬರೆದಿದ್ದ, "ನನಗೆ ಅತ್ಯಂತ ವಾಗಿ ಆನಂದವಾಗುತ್ತಿದೆ. ಆ ಆನಂದದ ದೆಸೆಯಿಂದ ಒಮ್ಮೊಮ್ಮೆ ನನಗೆ ರಾತ್ರಿ ವೇಳೆ ನಿದ್ದೆ ಹತ್ತುತ್ತಿಲ್ಲ" ಅಂತ. ಆ ಪತ್ರವನ್ನು ಓದಿಸಿ ಕೇಳಿದ ನಂತರ ಪರಮಹಂಸರು ಅನ್ನುತ್ತಿದಾರೆ, "ನನ್ನ ಶರೀರದಲ್ಲಿ ರೋಮಾಂಚನ ವಾಗುತ್ತಿದೆ. ಈ ಆನಂದಾವಸ್ಥೆ ಇನ್ನು ಮುಂದೆಯೂ ಆತನಲ್ಲಿ ಅಳಿಯದೆ ಉಳಿದುಕೊಳ್ಳುತ್ತದೆ. ಎಲ್ಲಿ, ಆ ಕಾಗದ ನೋಡೋಣ" ಅಂತ. ಆ ಕಾಗದ ವನ್ನು ತಮ್ಮ ಎರಡು ಕೈಗಳಿಂದಲೂ ಒತ್ತಿ ಹೇಳುತ್ತಿದಾರೆ, "ಬೇರೆಯವರ ಪತ್ರಗಳನ್ನು ನಾನು ಮುಟ್ಟಲೂ ಆರೆ; ಆದರೆ ಇದು ಬಹಳ ಒಳ್ಳೆ ಪತ್ರ" ಅಂತ. ಇಂದು ಅವರು ನಿದ್ರೆಮಾಡುತ್ತಿದ್ದ ಹಾಗೆಯೆ ಅತ್ಯಂತವಾಗಿ ಬೆವರಲಾರಂಭಿಸಿದರು. ಥಟ್ಟನೆ ಹಾಸಿಗೆಯಿಂದೆದ್ದು ಹೇಳುತ್ತಿದಾರೆ: "ನನಗನಿಸುತ್ತದೆ ಈ ರೋಗ ನನ್ನನ್ನು ಬಿಟ್ಟುಹೋಗೋದಿಲ್ಲ" ಅಂತ. ಅವರ ಬಾಯಿಂದ ಈ ಮಾತನ್ನು ಕೇಳಿ ಭಕ್ತರೆಲ್ಲ ಚಿಂತಾಕ್ರಾಂತರಾಗಿ ದಾರೆ. ಪರಮಹಂಸರಿಗೆ ಉಪಚಾರಮಾಡಲು ಶ್ರೀ ಶಾರದಾದೇವಿ ಯವರು ತೌರುಮನೆಯಿಂದ ದಕ್ಷಿಣೇಶ್ವರಕ್ಕೆ ಬಂದಿದಾರೆ; ನಹಬತ್‌ಖಾನೆ ಯಲ್ಲಿ ವಾಸಿಸುತ್ತಿದಾರೆ. ಅವರು ಬಂದು ಅಲ್ಲಿ ವಾಸಿಸುತ್ತಿರೋದು ಭಕ್ತ ರಲ್ಲನೇಕರಿಗೆ ಬಹಳ ಕಾಲದವರೆಗೆ ಗೊತ್ತೇ ಆಗಲಿಲ್ಲ. ಒಬ್ಬ ಭಕ್ತೆ ಈಗ ಕೆಲವು ದಿನಗಳಿಂದ ಶಾರದಾದೇವಿಯವರೊಡನೆ ಇದಾಳೆ. ಆಕೆ ಆಗಾಗ ಬಂದು ಪರಮಹಂಸರನ್ನು ನೋಡಿಹೋಗುತ್ತಿದಾಳೆ. ಅವರು ಆಕೆಗೆ ಹೇಳುತ್ತಿದಾರೆ, "ನೀನು ಅನೇಕ ದಿವಸಗಳಿಂದ ಇಲ್ಲೇ ಇದ್ದುಬಿಟ್ಟಿದೀಯೆ. ಜನಗಳೇನಂದುಕೊಂಡಾರು ? ಹತ್ತು ಹದಿನೈದು ದಿನಗಳ ಮಟ್ಟಿಗಾದರೂ ಮನೆಗೆ ಹೋಗಿ ಬಾ" ಅಂತ.

ಪರಮಹಂಸರು ಬಲಮಗ್ಗುಲಾಗಿ ತಮ್ಮ ಮಂಚದ ಮೇಲೆ ಸುಮ್ಮನೆ ಮಲಗಿಕೊಂಡಿದಾರೆ. ಮುಚ್ಚಂಜೆಯಾಗಿದೆ. ಮಾಸ್ಟರ್ ಮತ್ತು ಗಂಗಾಧರ ಕಲ್ಕತ್ತದಿಂದ ಬಂದಿದಾರೆ. ಪರಮಹಂಸರು ಮಾಸ್ಟರೊಡನೆ ಮಾತುಕತೆಯಾಡುತ್ತಿದಾರೆ. ಗಂಗಾಧರ ಅವರ ಪಾದಗಳ ಬಳಿ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಇಲ್ಲಿಗೆ ಇಬ್ಬರು ಹುಡುಗರು ಬಂದಿದ್ದರು. ಒಬ್ಬನ ಹೆಸರು 'ಸುಬೋಧ' ಅಂತ, ಇನ್ನೊಬ್ಬನ ಹೆಸರು 'ಕ್ಷೀರೋದ' ಅಂತ. ಮೊದಲನೆಯವನು ಸಂಕರಘೋಷನ ಮರಿಮಗ, ಎರಡನೆಯವನು ಸುಬೋಧನ ನೆರೆಮನೆಯವ. ಇಬ್ಬರೂ ಬಹಳ ಒಳ್ಳೆ ಹುಡುಗರು. ನಾನು ಅವರಿಗೆ ಹೇಳಿದೆ, ನನಗೆ ಶರೀರಾರೋಗ್ಯ ಸರಿಯಾಗಿಲ್ಲ, ಹೋಗಿ ಮಾಸ್ಟರಿಂದ ಉಪದೇಶ ಪಡೆದುಕೊಳ್ಳಿ ಅಂತ. ನೀನು ಅವರ ಯೋಗಕ್ಷೇಮವನ್ನು ಸ್ವಲ್ಪ ಮನಸ್ಸಿಟ್ಟು ನೋಡಿಕೊ."

ಮಾಸ್ಟರ್: "ಆಗಲಿ. ಅವರು ನನ್ನ ನೆರೆಯವರೆ."

ಶ್ರೀರಾಮಕೃಷ್ಣರು: "ಇನ್ನೊಂದು ದಿನವೂ ನನ್ನ ಮೈಯೆಲ್ಲಾ ಬೆವರಿ ನಿದ್ರಾಭಂಗವಾಯಿತು. ಇದು ಎಂಥಾ ರೋಗವೊ ನನಗೆ ಬಗೆಹರಿಯುತ್ತಿಲ್ಲ."

ಮಾಸ್ಟರ್: "ಭಗವಾನ್‌ರುದ್ರನನ್ನು ಇಲ್ಲಿಗೆ ಕರೆತರಲು ನಾವು ಯೋಚಿಸಿದೇವೆ. ಆತ ಎಮ್. ಡಿ.; ನಿಪುಣ ಡಾಕ್ಟರ್."

ಶ್ರೀರಾಮಕೃಷ್ಣರು: "ಆತನಿಗೆ ಏನು ಕೊಡಬೇಕು?"

ಮಾಸ್ಟರ್: "ಹೊರಗಡೆ ಹೋದರೆ ಪ್ರತಿ ವಿಸಿಟ್ಟಿಗೂ ಇಪ್ಪತ್ತೊ ಇಪ್ಪತ್ತೈದೊ ತೆಗೆದುಕೋತಾನೆ."

ಶ್ರೀರಾಮಕೃಷ್ಣರು: "ಹಾಗಾದರೆ, ಬೇಡ."

ಮಾಸ್ಟರ್: "ನಾವು ಎಲ್ಲೊ ನಾಲ್ಕೈದು ರೂಪಾಯಿ ಮಾತ್ರ ಕೊಡಲು ಹೋಗುತ್ತೇವೆ."

ಶ್ರೀರಾಮಕೃಷ್ಣರು: "ಒಳ್ಳೇದು, ಒಂದು ವಿಷಯ. 'ದಯವಿಟ್ಟು ಅವರನ್ನು ಒಮ್ಮೆ ನೋಡಿಬರೋರಂತೆ ಬನ್ನಿ' ಅಂತ ಕರೆದರೆ? ಇಲ್ಲಿನ ವಿಷಯ ಕಿಂಚಿತ್ತೂ ಆತನ ಕಿವಿಗೆ ಬಿದ್ದೇ ಇಲ್ಲವೇನು?"

ಮಾಸ್ಟರ್: "ಬಿದ್ದಿರಬೇಕು ಅಂತ ಅನ್ನಿಸುತ್ತಿದೆ. ಆತನೇನೊ ಒಂದು ವಿಧವಾಗಿ ಏನೂ ಛಾರ್ಜು ಮಾಡೋದಿಲ್ಲ ಅಂತ ಹೇಳಿದಾನೆ.

ಆದರೂ ನಾವು ಆತನಿಗೆ ಒಂದು ಸ್ವಲ್ಪವನ್ನು ಕೊಡಲು ಹೋಗುತ್ತೇವೆ. ನಾವು ಹಾಗೆ ಮಾಡಿದರೆ ಮತ್ತೆ ಕರೆದಾಗ ಬರುತ್ತಾನೆ.''

ಶ್ರೀರಾಮಕೃಷ್ಣರು: ''ನೀನು ಡಾಕ್ಟರ್ ನಿತಾಯಿಯನ್ನು ಕರೆದುಕೊಂಡು ಬಾ. ಆತ ಬಹಳ ಒಳ್ಳೆಯವ. ಅಯ್ಯೋ! ಡಾಕ್ಟರುಗಳು ಬಂದರೂ ಅವರೇನು ತಾನೆ ಮಾಡಿಯಾರು? ಕೇವಲ ನನ್ನ ಗಂಟಲನ್ನು ಹಿಸುಕಿ ಹಿಸುಕಿ ರೋಗವನ್ನು ಜಾಸ್ತಿಮಾಡಿ ಹೋಗುತ್ತಾರೆ.''

ಘಂಟೆ ರಾತ್ರಿ ಒಂಬತ್ತು. ಪರಮಹಂಸರು ರವೆ ಪಾಯಸ ಕುಡಿಯಲು ಎದ್ದು ಕುಳಿತಿದಾರೆ. ಅದನ್ನು ಕುಡಿದಾಗ ಗಂಟಲು ಏನು ತೊಂದರೆಯನ್ನೂ ಕೊಡಲಿಲ್ಲ. ಅದಕ್ಕಾಗಿ ಆನಂದದಿಂದ ಹಿಗ್ಗಿ ಹಿಗ್ಗಿ ಮಾಸ್ಟರಿಗೆ ಹೇಳುತ್ತಿದಾರೆ, ''ಇಂದು ಸ್ವಲ್ಪ ಕುಡಿಯೋಕಾಯ್ತು. ಮನಸ್ಸಿಗೆ ಬಹಳ ಆನಂದವಾಗಿಬಿಟ್ಟದೆ'' ಎಂದು.

೧ನೆ ಸೆಪ್ಟೆಂಬರ್ ೧೮೮೫, ಶ್ರೀಕೃಷ್ಣಜನ್ಮಾಷ್ಟಮಿ, ಮಂಗಳವಾರ.

ಪರಮಹಂಸರು ಸ್ನಾನಕ್ಕೆ ಸಿದ್ಧರಾಗುತ್ತಿದಾರೆ. ಅವರ ಕೊಠಡಿಯ ದಕ್ಷಿಣ ವರಾಂಡದಲ್ಲಿ ಅವರ ಮೈಗೆ ಒಬ್ಬ ಭಕ್ತ ಎಣ್ಣೆ ಹಚ್ಚುತ್ತಿದಾನೆ. ಮಾಸ್ಟರ್ ಗಂಗಾಸ್ನಾನ ಮುಗಿಸಿಕೊಂಡುಬಂದು ಪರಮಹಂಸರಿಗೆ ಪ್ರಣಾಮಮಾಡಿದ.

ಪರಮಹಂಸರು ತಮ್ಮ ಸ್ನಾನವಾದನಂತರ ಒಂದು ಚೌಕವನ್ನು ಸುತ್ತಿಕೊಂಡೆ ದಕ್ಷಿಣದ ವರಾಂಡಕ್ಕೆ ಹೋಗಿ ಅಲ್ಲಿಂದಲೇ ದೇವಾಲಯಗಳ ಕಡೆ ನಮಸ್ಕಾರ ಹಾಕುತ್ತಿದಾರೆ. ದೇಹಾರೋಗ್ಯ ಸರಿಯಾಗಿಲ್ಲದೆ ಇದ್ದುದರಿಂದ ಅವರು ದೇವಾಲಯಗಳಿಗೆ ಹೋಗಲಾಗುತ್ತಿಲ್ಲ.

ಇಂದು ಶ್ರೀಕೃಷ್ಣಜನ್ಮಾಷ್ಟಮಿ. ರಾಮನೇ ಮೊದಲಾದ ಭಕ್ತರು ಪರಮಹಂಸರಿಗೆ ಹೊಸ ಉಡುಪನ್ನು ತಂದಿದಾರೆ. ಅದನ್ನು ಅವರು ಹಾಕಿಕೊಂಡನಂತರ, ಅವರ ಶುದ್ಧ ಅಪಾಪವಿದ್ಧ ದೇಹ ಇನ್ನೂ ಹೆಚ್ಚು ಶೋಭಾಯಮಾನವಾಗಿ ಕಾಣಲಾರಂಭಿಸಿತು. ಮತ್ತೆ ಅವರು ದೇವದೇವಿಯರಿಗೆ ಪ್ರಣಾಮಮಾಡುತ್ತಿದಾರೆ.

ಗೋಪಾಲನ ತಾಯಿ ತನ್ನ ಗೋಪಾಲನಿಗೆಂದು (ಪರಮಹಂಸರಿಗೆಂದು) ಏನೊ ತಿಂಡಿಯನ್ನು ಮಾಡಿಕೊಂಡು ಕಾಮಾರಹಾಟಿಯಿಂದ ಬಂದಿದಾಳೆ. ಆಕೆ ದುಃಖವನ್ನು ಪ್ರದರ್ಶಿಸುತ್ತ ಹೇಳುತ್ತಿದಾಳೆ, ''ಅದನ್ನು ನೀನು ತಿನ್ನೋಹಾಗಿಲ್ಲವಲ್ಲ'' ಅಂತ.

ಶ್ರೀರಾಮಕೃಷ್ಣರು: "ಇಲ್ಲಿ ನೋಡು, ನನಗೆ ಗಂಟಲು ಹುಣ್ಣಾಗಿರೋದ."

ಗೋಪಾಲನ ತಾಯಿ: "ನನ್ನ ದುರದೃಷ್ಟ. ಕೈಯಲ್ಲಾದರೂ ಒಂದು ಸ್ವಲ್ಪ ತೆಗೆದುಕೊ."

ಶ್ರೀರಾಮಕೃಷ್ಣರು: "ನೀನು ನನಗೆ ಆಶೀರ್ವಾದ ಮಾಡು."

ಭಕ್ತರು ಸ್ವಲ್ಪ ಕಲ್ಲುಸಕ್ಕರೆ ತಂದಿದಾರೆ. ಗೋಪಾಲನ ತಾಯಿ ಪರಮಹಂಸರನ್ನು ಕೇಳಿದಳು, "ಇದನ್ನು ತೆಗೆದುಕೊಂಡು ಹೋಗಿ ನಹಬತ್‌ಖಾನೆಯಲ್ಲಿ ಇಡಲೇನು?" ಅಂತ. ಅದಕ್ಕೆ ಅವರು ಹೇಳಿದರು: "ಬೇಡ, ಇಲ್ಲಿಯೇ ಇಡು. ಭಕ್ತರಿಗೆ ಸಿಹಿಯನ್ನು ಹಂಚೋ ಅಭ್ಯಾಸ ಇಟ್ಟುಕೊಂಡಿದೇನೆ. ಅದಕ್ಕಾಗಿ ಒಂದು ನೂರಾರು ಸಲ ಅಲ್ಲಿಗೆ ಹೋಗಿಬರೋರಾರು? ಇಲ್ಲೇ ಇರಲಿ."

ಘಂಟೆ ಹನ್ನೊಂದು. ಕಲ್ಕತ್ತದಿಂದ ಭಕ್ತರು ಒಬ್ಬೊಬ್ಬರಾಗಿ ಬರುತ್ತಲಿದಾರೆ. ಬಲರಾಮ, ನರೇಂದ್ರ, ಚಿಕ್ಕ ನರೇನ, ನವಗೋಪಾಲ, ಕಾಟೋಯಾದ ಒಬ್ಬ ವೈಷ್ಣವ ಇವರೇ ಮೊದಲಾದವರು ಆಗಲೆ ಬಂದಿದಾರೆ. ರಾಖಾಲ ಮತ್ತು ಲಾಟು ಪರಮಹಂಸರೊಡನೆಯೇ ಇದಾರೆ. ಒಬ್ಬ ಪಂಜಾಬಿ ಸಾಧು ಕೆಲವು ದಿವಸಗಳಿಂದ ಪಂಚವಟಿಯಲ್ಲಿ ವಾಸ ಮಾಡುತ್ತಿದಾನೆ.

ಚಿಕ್ಕ ನರೇನನ ಹಣೆ ಮೇಲೆ ಒಂದು ಬಾವು ಎದ್ದಿದೆ. ಪರಮಹಂಸರು ಪಂಚವಟಿಯಲ್ಲಿ ಸುಮ್ಮನೆ ಅಡ್ಡಾಡುತ್ತ ಅಡ್ಡಾಡುತ್ತ ಇದ್ದಾಗ ಚಿಕ್ಕ ನರೇನನಿಗೆ ಹೇಳಿದರು, "ನಿನ್ನ ಆ ಬಾವನ್ನು ತೆಗೆಯಿಸಿಹಾಕಿಬಿಡು. ಅದು ಎದ್ದಿರೋದು ಹಣೆ ಮೇಲೆ, ಗಂಟಲೊಳಗೇನಲ್ಲ. ಅದಕ್ಕೇಕೆ ಹೆದರಬೇಕು; ಜನ ಅಂಡಕೋಶಗಳ ಮೇಲೂ ಚಿಕಿತ್ಸೆ ಮಾಡಿಸಿಕೋತಾರಲ್ಲ" ಅಂತ. (ನಗು.)

ಆ ಪಂಜಾಬಿ ಸಾಧು ಉದ್ಯಾನಮಾರ್ಗವಾಗಿ ಹೋಗುತ್ತಿದಾನೆ. ಪರಮಹಂಸರು ಹೇಳುತ್ತಿದಾರೆ, "ನಾನು ಆತನನ್ನು ಆಕರ್ಷಿಸುತ್ತಿಲ್ಲ. ಆತನದು ಜ್ಞಾನಿಯ ಭಾವ; ಒಣಮರದ ಹಾಗಿದಾನೆ" ಅಂತ.

ಪರಮಹಂಸರು ಭಕ್ತರೊಡನೆ ತಮ್ಮ ಕೊಠಡಿಗೆ ಹಿಂದಿರುಗಿ ಬಂದಿದಾರೆ. ಶ್ಯಾಮಾಪದಮುಖರ್ಜಿಯ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಬಲರಾಮ: "ಶ್ಯಾಮಾಪದ ಹೇಳುತ್ತಿದಾನೆ, 'ಪರಮಹಂಸರು ನರೇಂದ್ರನ ಎದೆಯ ಮೇಲೆ ಕಾಲಿಟ್ಟಾಗ, ಆತ ಭಾವಾವಿಷ್ಟನಾಗಿಬಿಟ್ಟ; ಆದರೆ ನನಗೇನೂ ಆಗಲೇ ಇಲ್ಲವಲ್ಲ!' ಅಂತ."

ಶ್ರೀರಾಮಕೃಷ್ಣರು: "ಕಾರಣ ಗೊತ್ತೆ? ಕಾಮಕಾಂಚನಾಸಕ್ತಿಯಿಂದ ಚದುರಿಹೋಗಿರೋ ಮನಸ್ಸನ್ನು ಏಕೀಕರಿಸೋದು ಬಹಳ ಕಷ್ಟವಾದ ಕೆಲಸ. ಆತ ನನಗೆ ತಿಳಿಸಿದಾನೆ ತನಗೆ ಮಧ್ಯಸ್ಥಿಕೆ ಮಾಡೋ ಕೆಲಸ ಇದೆ ಅಂತ. ಜೊತೆಗೆ ಆತ ತನ್ನ ಮಕ್ಕಳ ಸಂಬಂಧವಾಗಿ ಸ್ವಲ್ಪ ಹೆಚ್ಚಾಗಿ ಭಾವಿಸಬೇಕಾಗಿದೆ. ನರೇಂದ್ರಾದಿಗಳ ಮನಸ್ಸು ಇನ್ನೂ ಚೆದರಿ ಹೋಗಿಲ್ಲ; ಕಾಮಕಾಂಚನದ ಗಂಧವೂ ಅವರ ಹತ್ತಿರ ಸುಳಿದಿಲ್ಲ.

"ಆದರೆ, ಶ್ಯಾಮಾಪದ ಬಹಳ ಒಳ್ಳೆಯವ."

ಈಗ ಕಾಟೋಯಾದ ವೈಷ್ಣವ ಪರಮಹಂಸರಿಗೆ ಪ್ರಶ್ನೆ ಹಾಕಲಾರಂಭಿಸಿದಾನೆ. ಆತನಿಗೆ ಮಾಲುಗಣ್ಣು.

ವೈಷ್ಣವ: "ಮಹಾಶಯರೆ, ಪುನರ್ಜನ್ಮ ಉಂಟೆ?"

ಶ್ರೀರಾಮಕೃಷ್ಣರು: "ಭಗವದ್ಗೀತೆಯಲ್ಲಿ ಹೇಳಿದೆ, ಮನುಷ್ಯ ಸಾಯೋವಾಗ ಯಾವ ಯಾವ ಭಾವನೆಗಳಿಂದ ದೇಹತ್ಯಾಗ ಮಾಡುತ್ತಾನೊ, ಆಯಾಯ ಭಾವನೆಗಳಿಗನುಗುಣವಾಗಿ ಆತನಿಗೆ ಮುಂದಿನ ಜನ್ಮ ಅಂತ. ಜಿಂಕೆ ಚಿಂತನೆ ಮಾಡಿದ್ದರಿಂದ ಭರತರಾಜನಿಗೆ ಜಿಂಕೆ ಜನ್ಮ ಬಂದಿತ್ತು."

ವೈಷ್ಣವ: "ಹೀಗಾಗೋದನ್ನು ಯಾರಾದರು ಪ್ರತ್ಯಕ್ಷವಾಗಿ ನೋಡಿದ್ದರೆ ಮಾತ್ರ ಅದನ್ನು ನಂಬಬಹುದು."

ಶ್ರೀರಾಮಕೃಷ್ಣರು: "ಇದರ ವಿಷಯವಾಗಿ ಹೆಚ್ಚಾಗಿ ಇನ್ನೇನೂ ನನಗೆ ಗೊತ್ತಿಲ್ಲ. ನನಗೆ ಬಂದಿರೋ ಕಾಯಿಲೆಯನ್ನೇ ನಾನು ಗುಣಪಡಿಸಿಕೊಳ್ಳಲಾರೆ, ಅಂಥವನಿಗೆ ಸತ್ತಮೇಲೆ ಏನಾಗುತ್ತದೆ ಎಂಬ ಪ್ರಶ್ನೆ!

"ನಿನ್ನ ಈ ಪ್ರಶ್ನೆ ನಿನ್ನ ತಿಳಿಗೇಡಿತನವನ್ನು ವ್ಯಕ್ತಪಡಿಸುತ್ತಿದೆ. ಯಾವರೀತಿಯಾಗಿ ವರ್ತಿಸಿದರೆ ಭಗವಂತನ ಪಾದಪದ್ಮಗಳಲ್ಲಿ ಭಕ್ತಿ ಬೆಳಸಿಕೊಳ್ಳಬಹುದು ಎಂಬುದರ ಕಡೆ ಮನಸ್ಸಿಡು. ಭಕ್ತಿ ಪಡೆದುಕೊಳ್ಳಲೋಸುಗವಾಗಿಯೇ ನೀನು ಮಾನವಜನ್ಮವೆತ್ತಿರೋದು. ನೀನು ತೋಟಕ್ಕೆ ಬಂದಿರೋದು ಮಾವಿನ ಹಣ್ಣು ತಿನ್ನೋಕೆ. ಎಷ್ಟು ಸಾವಿರ ಕೊಂಬೆ

ಗಳಿವೆ, ಎಷ್ಟು ಲಕ್ಷ ಎಲೆಗಳಿವೆ ಎಂಬ ಲೆಕ್ಕಾಚಾರವೇಕೆ? ಜನ್ಮ ಜನ್ಮಾಂತರದ ವಿಷಯವಂತೆ! ಎಂಥ ತಿಳಿಗೇಡಿತನ!"

ಗಿರೀಶಘೋಷ ತನ್ನ ಒಬ್ಬಿಬ್ಬರು ಮಿತ್ರರೊಡನೆ ಗಾಡಿಯಲ್ಲಿ ಬಂದಿದಾನೆ. ಅಳುತ್ತ ಅಳುತ್ತಲೆ ಕೊಠಡಿಯನ್ನು ಪ್ರವೇಶಿಸಿ, ಪರಮಹಂಸರ ಪಾದಗಳ ಮೇಲೆ ತನ್ನ ತಲೆ ಇಟ್ಟಮೇಲೂ ಅಳುತ್ತಲೇ ಇದಾನೆ.

ಪರಮಹಂಸರು ಪ್ರೀತಿಯಿಂದ ಆತನ ಬೆನ್ನು ತಟ್ಟಿ ಒಬ್ಬ ಭಕ್ತನಿಗೆ ಹೇಳುತ್ತಿದಾರೆ, "ಈತನಿಗೆ ಹುಕ್ಕ ತಯಾರುಮಾಡಿಕೊಡು" ಅಂತ.

ಗಿರೀಶ ತಲೆ ಮೇಲಕ್ಕೆ ಎತ್ತಿ ಕೈಗಳನ್ನು ಜೋಡಿಸಿಕೊಂಡು ಹೇಳುತ್ತಿದಾನೆ, "ಪೂರ್ಣ ಬ್ರಹ್ಮ ನೀವೇ! ಅದು ಹಾಗಿಲ್ಲದಿದ್ದರೆ ಎಲ್ಲವೂ ಮಿಥ್ಯಾ.

"ನಿಮಗೆ ಸೇವೆ ಮಾಡೋ ಸುಯೋಗ ನನಗೆ ದೊರೆಯಲಿಲ್ಲವಲ್ಲ ಅಂತ ಬಹಳ ದುಃಖವಾಗುತ್ತಿದೆ" ಎಂದು. ಆತ ಈ ಮಾತುಗಳನ್ನು ಅಂಥಾ ಹೃದಯದ್ರಾವಕ ರೀತಿಯಲ್ಲಿ ಹೇಳಿದ, ಒಬ್ಬಿಬ್ಬರು ಭಕ್ತರು ಅತ್ತೇಬಿಟ್ಟರು.

ಗಿರೀಶ ಮತ್ತೆ ಹೇಳಿದ: "ಹೇ ಭಗವಂತ! ಒಂದು ವರ್ಷಕಾಲ ನಿಮ್ಮ ಸೇವೆ ಮಾಡೋಹಾಗೆ ನನಗೆ ಅನುಗ್ರಹಮಾಡಿ. ಮುಕ್ತಿ ಯಾರಿಗೆ ಬೇಕು? ಅದು ಎಲ್ಲೆಲ್ಲೂ ದೊರೆಯೋ ಸಾಮಾನ್ಯ ವಸ್ತು. ಅದಕ್ಕೆ ನನ್ನ ಧಿಕ್ಕಾರ. ಒಂದು ವರ್ಷಕಾಲ ನನ್ನ ಸೇವೆ ಸ್ವೀಕರಿಸುತ್ತೇನೆ ಅಂತ ದಯವಿಟ್ಟು ನನಗೆ ವಾಗ್ದಾನಮಾಡಿ."

ಶ್ರೀರಾಮಕೃಷ್ಣರು: "ಇಲ್ಲಿನ ಜನರು ಅಷ್ಟು ಒಳ್ಳೆಯವರೇನಲ್ಲ; ಏನಾದರೂ ಅನ್ನಬಹುದು."

ಗಿರೀಶ: "ಅವರು ನನ್ನ ತುದಿ ಬೆರಳನ್ನೂ ಅಲ್ಲಾಡಿಸಲಾರರು. ದಯವಿಟ್ಟು ವಾಗ್ದಾನಮಾಡಿ—"

ಶ್ರೀರಾಮಕೃಷ್ಣರು: "ಒಳ್ಳೆಯದು, ನಾನು ನಿನ್ನ ಮನೆಗೆ ಬಂದಾಗ—"

ಗಿರೀಶ: "ಉಹ್ಞೂ, ಅದಾಗೋದಿಲ್ಲ. ಇಲ್ಲಿಗೇ ಬಂದು ಮಾಡುತ್ತೇನೆ."

ಶ್ರೀರಾಮಕೃಷ್ಣರು ಗಿರೀಶನ ಹಠ ನೋಡಿ ಹೇಳಿದರು, "ಒಳ್ಳೆಯದು, ಭಗವಂತನ ಇಚ್ಛೆಯಿದ್ದಂತೆ ಆಗಲಿ" ಅಂತ.

ಪರಮಹಂಸರ ಗಂಟಲ ರೋಗದ ಮಾತೆತ್ತಿ ಗಿರೀಶ ಹೇಳುತ್ತಿದಾನೆ: "ದಯವಿಟ್ಟು ಹೇಳಿ, 'ಅದು ಗುಣವಾಗಲಿ' ಅಂತ. ಆಗಲಿ, ನಾನೇ ಅದನ್ನು ಚೆಚ್ಚಿಹಾಕಿಬಿಡುತ್ತೇನೆ. ಕಾಳಿ! ಕಾಳಿ!"

ಶ್ರೀರಾಮಕೃಷ್ಣರು: "ಅದು ನನ್ನನ್ನು ನೋಯಿಸುತ್ತದೆ."

ಗಿರೀಶ: "ಹೇ ಗಂಟಲೇ, ಗುಣವಾಗಿಬಿಡು! (ಫೂ) ನಿಮಗಿನ್ನೂ ಗುಣವಾಗದೆ ಇದ್ದರೆ, ನಿಮ್ಮಲ್ಲಿ ನನಗೇನಾದರೂ ಭಕ್ತಿ ಇರುವುದೇ ಆದರೆ ಅದರಿಂದಲಾದರೂ ನಿಮಗೆ ಗುಣವಾಗಿಯೇ ಬಿಡುತ್ತದೆ. ಗುಣವಾಗಿ ಬಿಟ್ಟಿತು ಅಂತ ನಿಮ್ಮ ಬಾಯಿಂದ ಒಮ್ಮೆ ಹೇಳಿ."

ಶ್ರೀರಾಮಕೃಷ್ಣರು ವಿರಕ್ತಿಗೊಂಡು: "ನನ್ನನ್ನು ಸುಮ್ಮನೆ ಬಿಟ್ಟು ಬಿಡು. ನನ್ನ ಕೈಯಲ್ಲಿ ಅದೆಲ್ಲ ಸಾಧ್ಯವಿಲ್ಲ. ರೋಗ ಗುಣಪಡಿಸೆಂದು ಭಗವತಿಗೆ ಹೇಳಿಕೊಳ್ಳಲಾರೆ.

"ಆಗಲಿ, ಆಕೆಯ ಇಚ್ಛೆಯಿದ್ದರೆ ಗುಣವಾಗುತ್ತದೆ."

ಗಿರೀಶ: "ನನ್ನ ಕಣ್ಣಿಗೆ ಮಣ್ಣು ಎರಚಬೇಡಿ. ಎಲ್ಲವೂ ನಿಮ್ಮ ಇಚ್ಛೆಯ ಮೇಲೆ ನಿಂತಿದೆ."

ಶ್ರೀರಾಮಕೃಷ್ಣರು: "ಛಿ! ಹಾಗೆಂದಿಗೂ ಹೇಳಬೇಡ. ನಾನು ಭಕ್ತನೇ ವಿನಾ ಭಗವಂತನಲ್ಲ. ನಿನಗಿಚ್ಛೆಯಿದ್ದಂತೆ ಬೇಕಾದರೆ ನೀನು ಭಾವಿಸಬಹುದು. ನಿನ್ನ ಗುರುವೇನೊ ನಿನಗೆ ಭಗವಂತ. ಹಾಗೆಂದು ಹೀಗೆಲ್ಲಾ ಮಾತಾಡಿದರೆ ಅಪರಾಧ ಮಾಡಿದ ಹಾಗಾಗುತ್ತದೆ. ಹೀಗೆಲ್ಲ ಎಂದಿಗೂ ಮಾತಾಡಬಾರದು."

ಗಿರೀಶ: "ಬಾಯಿಂದ ಹೇಳಿ, ಗುಣವಾಗಿಬಿಡುತ್ತೆ ಅಂತ."

ಶ್ರೀರಾಮಕೃಷ್ಣರು: "ಒಳ್ಳೆಯದು, ಯಾವುದು ಬಂದಿದೆಯೊ ಅದು ಹೋಗುತ್ತದೆ."

ಗಿರೀಶನ ಕುಡಿತದ ಮತ್ತು ಇನ್ನೂ ಇಳಿದಿಲ್ಲ. ಆಗಾಗ ಆತ ಹೇಳು ತ್ತಿದಾನೆ, "ಅದೆಲ್ಲ ಸರಿಯೆ, ಈ ಸಲ ಏಕೆ ನೀವು ನಿಮ್ಮ ಸ್ವರ್ಗೀಯ ವೈಭವ ದಿಂದ ಜನ್ಮವೆತ್ತಲಿಲ್ಲ?" ಅಂತ.

ಕೆಲವು ನಿಮಿಷಗಳಾದನಂತರ ಮತ್ತೆ ಹೇಳುತ್ತಿದಾನೆ, "ಈ ಸಲ ನೀವು ಜನ್ಮವೆತ್ತಿರೋದು ವಂಗದೇಶದ ಉದ್ಧಾರಕ್ಕಾಗಿ ಅಂತ ಕಾಣುತ್ತೆ" ಎಂದು.

ಒಬ್ಬ ಭಕ್ತ ತನಗೆ ತಾನೇ ಹೇಳಿಕೋತಿದಾನೆ, "ವಂಗದೇಶದ ಉದ್ಧಾರಕ್ಕೇ ಅಲ್ಲ, ಇಡೀ ಜಗತ್ತಿನ ಉದ್ಧಾರಕ್ಕೆ" ಅಂತ.

ಗಿರೀಶ ಭಕ್ತರನ್ನು ಸಂಬೋಧಿಸಿ: "ಇವರು ಇಲ್ಲಿಗೆ ಬಂದಿರೋದು ಏಕೆ ಎಂಬುದು ನಿಮಗಾರಿಗಾದರು ಅರ್ಥವಾಗಿದೆಯೇನು? ಜೀವರ ದುಃಖ ವನ್ನು ನೋಡಿ ಸಹಿಸಲಾರದೆ ಅವರ ಉದ್ಧಾರಕ್ಕಾಗಿ ಬಂದಿದಾರೆ."

ಗಾಡಿಯವ ಗಿರೀಶನನ್ನು ಕರೆಯುತ್ತಿದ್ದ. ಗಿರೀಶ ಎದ್ದು ಆತನ ಹತ್ತಿರ ಹೋದ. ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ: "ಎಲ್ಲಿಗೆ ಎದ್ದು ಹೋಗುತ್ತಿದಾನೆ ಸ್ವಲ್ಪ ನೋಡು. ಹೊಡೆ-ಗಿಡಿಯೋಕಲ್ಲ ತಾನೆ!" ಮಾಸ್ಟರೂ ಆತನನ್ನು ಹಿಂಬಾಲಿಸುತ್ತಿದಾನೆ.

ಒಡನೆಯೆ ಗಿರೀಶ ಹಿಂದಿರುಗಿಬಂದು ಪರಮಹಂಸರನ್ನು ಪ್ರಾರ್ಥಿಸಿ ಕೊಳ್ಳುತ್ತಿದಾನೆ, "ಹೇ ಭಗವಂತ, ನನ್ನ ಹೃದಯದಲ್ಲಿ ಇನ್ನೆಂದಿಗೂ ಪಾಪಚಿಂತನೆ ಎಳ್ಳಷ್ಟೂ ಏಳದಿರಲು ಬೇಕಾಗೋ ಪವಿತ್ರತೆಯನ್ನು ನನಗೆ ನೀಡು" ಅಂತ.

ಶ್ರೀರಾಮಕೃಷ್ಣರು: "ನೀನು ಆಗಲೇ ಪವಿತ್ರನಾಗಿದೀಯೆ. ನಿನ್ನದು ಅತ್ಯಂತ ಉಜ್ಜ್ವಲವಾದ ವಿಶ್ವಾಸ, ಭಕ್ತಿ! ನೀನು ಆನಂದದಿಂದಲೇ ಇದೀಯೆ, ಅಲ್ಲವೆ?"

ಗಿರೀಶ: "ಮಹಾಶಯರೆ ಇಲ್ಲ, ಮನಸ್ಸು ಚೆನ್ನಾಗಿಲ್ಲ—ಅಶಾಂತಿ. ಅದಕ್ಕಾಗೇ ವಿಪರೀತವಾಗಿ ಮದ್ಯ ಕುಡಿದೆ."

ಕೆಲವು ನಿಮಿಷಗಳಾದನಂತರ ಮತ್ತೆ ಗಿರೀಶ ಹೇಳುತ್ತಿದಾನೆ: "ಹೇ ಭಗವಂತ, ಆಶ್ಚರ್ಯವಾಗುತ್ತಿದೆ. ನನಗೆ, ನನ್ನಂಥ ಅಧಮನಿಗೆ ಪೂರ್ಣಬ್ರಹ್ಮ ಭಗವಂತನ ಸೇವೆ ಮಾಡೋ ಸೌಲಭ್ಯ ದೊರೆತಿರುವುದಲ್ಲ! ಈ ಸೌಲಭ್ಯದ ಅಧಿಕಾರಿಯಾಗಲು ನಾನು ಏನು ಸಾಧನೆ ತಾನೆ ಮಾಡಿದೇನೆ!"

ಪರಮಹಂಸರಿಗೆ ಮಧ್ಯಾಹ್ನದ ಊಟವಾಯಿತು. ಗಂಟಲು ಸರಿ ಯಾಗಿಲ್ಲದೆ ಇರುವುದರಿಂದ ಎಲ್ಲೋ ಸ್ವಲ್ಪ ಊಟ ಮಾಡಿದರು.

ಪರಮಹಂಸರಿಗೆ ಸತತವೂ ಭಾವಾವಾಸ್ಥೆ. ಬಲಾತ್ಕರಿಸಿ ಮನಸ್ಸನ್ನು ಶರೀರದ ಕಡೆಗೆ ತರುತ್ತಿದ್ದರು. ಆದರೂ, ಮಗುವಿನೋಪಾದಿಯಲ್ಲಿ ತಮ್ಮ ಸ್ವಂತ ಶರೀರ ರಕ್ಷಣೆ ಅವರ ಕೈಯಲ್ಲಾಗುತ್ತಿಲ್ಲ. ಅವರು ಮಗುವಿನ ಹಾಗೆ ಹೇಳುತ್ತಿದಾರೆ, "ಈಗ ತಾನೆ ಊಟಮಾಡಿದೆ—ಸ್ವಲ್ಪ ವಿಶ್ರಮಿಸಿಕೋತೇನೆ.

ನೀವೆಲ್ಲ ಹೊರಗೆ ಹೋಗಿ ಕುಳಿತುಕೊಳ್ಳಿ'' ಅಂತ. ಪರಮಹಂಸರು ಸ್ವಲ್ಪ ವಿಶ್ರಾಂತಿ ಪಡೆದರು. ಈಗ ಭಕ್ತರೆಲ್ಲರೂ ಕೊಠಡಿಗೆ ಹಿಂದಿರುಗಿಬಂದು ಕುಳಿತುಕೊಂಡಿದ್ದಾರೆ.

ಗಿರೀಶ: ''ಗುರು ಮತ್ತು ಇಷ್ಟ. ಗುರುವಿನ ರೂಪು ನನಗೆ ಚೆನ್ನಾಗಿ ಹಿಡಿಸುತ್ತಿದೆ. ಆತನನ್ನ ಕಂಡರೆ ನನಗೆ ಭಯವಾಗುತ್ತಿಲ್ಲ. ಇದು ಏಕೆ ಹೀಗೆ? ನನಗೆ ಭಾವವನ್ನು ಕಂಡರೆ ಭಯ; ಹತ್ತು ಮೊಳ ಆಚೆಗೆ ಸರಿದು ಬಿಡುತ್ತೇನೆ.''

ಶ್ರೀರಾಮಕೃಷ್ಣರು: ''ಇಷ್ಟದೇವನೇ ಗುರುವಿನ ರೂಪವನ್ನು ಧರಿಸುತ್ತಾನೆ. ಶವಸಾಧನೆ ಸಿದ್ಧಿಸಿದನಂತರ ಇಷ್ಟದೇವನ ದರ್ಶನ ದೊರೆತಾಗ, ಸಾಧಕನ ಗುರುವೇ ಆತನ ಎದುರಿಗೆ ಬಂದು ಹೇಳುತ್ತಾನೆ, 'ಓ ಶಿಷ್ಯ, ಆತನೇ ನಿನ್ನ ಇಷ್ಟ' ಅಂತ. ಹೀಗೆಂದು ಹೇಳಿ ಗುರು ಇಷ್ಟನಲ್ಲಿ ಲೀನವಾಗಿ ಬಿಡುತ್ತಾನೆ. ಶಿಷ್ಯನ ಕಣ್ಣಿಗೆ ಮತ್ತೆ ಗುರು ಬೀಳೋದಿಲ್ಲ. ಪೂರ್ಣಜ್ಞಾನಾವಸ್ಥೆಯಲ್ಲಿ, ಗುರು ಎಂಬೋನು ತಾನೆ ಎಲ್ಲಿ, ಶಿಷ್ಯ ಎಂಬೋನು ತಾನೆ ಎಲ್ಲಿ? 'ಅದು ವಾಙ್ಮನಾತೀತಾವಸ್ಥೆ; ಅಲ್ಲಿ ಗುರುಶಿಷ್ಯರಾರಿಲ್ಲ.' ''

ಒಬ್ಬ ಭಕ್ತ: ''ಗುರುವಿನ ಶಿರಸ್ಸು. ಶಿಷ್ಯನ ಪಾದ.''

ಗಿರೀಶ ಆನಂದದಿಂದ: ''ಹೌದು! ಹೌದು! ನಿಜ.''

ನವಗೋಪಾಲ: ''ಅದರ ಅರ್ಥ ಏನು ಎಂಬುದನ್ನು ಕೇಳು. ಶಿಷ್ಯನ ಶಿರಸ್ಸು ಗುರುವಿನ ಸ್ವತ್ತು; ಗುರುವಿನ ಪಾದಗಳು ಶಿಷ್ಯನ ಸ್ವತ್ತು. ಅರ್ಥವಾಯಿತೆ?''

ಗಿರೀಶ: ''ಅಲ್ಲ, ಅಲ್ಲ. ಆದರರ್ಥ ಅದಲ್ಲ. ತಂದೆಯ ಹೆಗಲ ಮೇಲೆ ಮಗು ಹತ್ತಿ ಕುಳಿತುಕೊಳ್ಳೋದಿಲ್ಲವೇನು? ಅದಕ್ಕಾಗೇ ಶಿಷ್ಯನ ಪಾದಗಳು ಅಂತ ಹೇಳಿರೋದು.''

ನವಗೋಪಾಲ: ''ಶಿಷ್ಯ ಎಳೆ ಮಗುವಿನಂತಿದ್ದರೆ ತಾನೆ ಸಾಧ್ಯ.''

ಶ್ರೀರಾಮಕೃಷ್ಣರು: ''ಭಕ್ತರಲ್ಲಿ ಎರಡು ವಿಧ. ಒಬ್ಬರದು ಬೆಕ್ಕಿನ ಮರಿಯ ಸ್ವಭಾವ. ಅದು ಸಂಪೂರ್ಣವಾಗಿ ತಾಯನ್ನು ಅವಲಂಬಿಸಿರುತ್ತದೆ. ತನ್ನ ಹೊರೆಯನ್ನೆಲ್ಲಾ ತಾಯ ಮೇಲೆ ಹೊರಿಸಿಬಿಟ್ಟಿರುತ್ತದೆ. ಎಲ್ಲಿಗೆ ಹೋಗಬೇಕು, ಏನು ಮಾಡಬೇಕು ಈ ಯಾವುದೂ ಅದಕ್ಕೆ ಗೊತ್ತಿಲ್ಲ. ಕೇವಲ, 'ಮಿಯಾವ್, ಮಿಯಾವ್!' ಅನ್ನುತ್ತಿರುತ್ತದೆ. ತಾಯಿ ಬೆಕ್ಕು ಅದನ್ನು ಕೆಲವು ವೇಳೆ ಒಲೆಯ ಹತ್ತಿರ ಇನ್ನು ಕೆಲವು ವೇಳೆ ಹಾಸಿಗೆ

ಮೇಲೆ ಇಡುತ್ತದೆ. ಈ ವಿಧದ ಭಕ್ತ ಭಗವಂತನಿಗೆ ತನ್ನ ವಕಾಲತ್ತನ್ನು ವಹಿಸಿ ನಿಶ್ಚಿಂತನಾಗಿದ್ದುಬಿಡುತ್ತಾನೆ. ಸಿಕ್ಕರು ನನಗೆ ಹೇಳಿದರು, 'ಭಗವಂತ ದಯಾಳು' ಅಂತ. ನಾನು ಹೇಳಿದೆ, 'ಆತ ನಮ್ಮ ತಂದೆ, ತಾಯಿ; ದಯಾಳು ಹೇಗೆ? ಮಕ್ಕಳನ್ನು ಹುಟ್ಟಿಸಿಬಿಟ್ಟು ತಂದೆತಾಯಿಯರು ಅವುಗಳ ಲಾಲನೆ ಪಾಲನೆ ಮಾಡಬೇಡ? ನಿಮ್ಮ ಅಭಿಪ್ರಾಯ ನೆರೆಹೊರೆಯವರು ಅವನ್ನು ನೋಡಿಕೋಬೇಕು ಅಂತಲೇನು?' ಅಂತ. ಇಂಥ ಭಕ್ತರ ದೃಢವಿಶ್ವಾಸ ಭಗವಂತನೇ ತಮ್ಮ ತಂದೆ, ಭಗವಂತನೇ ತಮ್ಮ ತಾಯಿ ಅಂತ.

"ಇನ್ನೊಂದು ವಿಧದ ಭಕ್ತರಿದಾರೆ. ಇವರದು ಮರ್ಕಟ ಮರಿಯ ಸ್ವಭಾವ. ಇದು ತನ್ನ ಸ್ವಶಕ್ತಿಯಿಂದಲೇ ತಾಯನ್ನು ಅಪ್ಪಿ ಹಿಡಿದುಕೊಂಡಿರುತ್ತದೆ. ಈ ತರದ ಭಕ್ತರಿಗೆ ಸ್ವಲ್ಪ ಕರ್ತೃತ್ವ ಬೋಧೆ ಇರುತ್ತದೆ. ಇವರು ಭಾವಿಸುತ್ತಾರೆ, ತಾವು ತೀರ್ಥಯಾತ್ರೆಗೆ ಹೋಗಬೇಕು, ಷೋಡಶೋಪಚಾರ ಪೂಜೆ ಮಾಡಬೇಕು, ಆಗ ಮಾತ್ರವೇ ತಮಗೆ ಭಗವಂತನ ಸಾಕ್ಷಾತ್ಕಾರ ಸಾಧ್ಯ ಅಂತ.

"ಎರಡು ವಿಧದವರೂ ಭಕ್ತರೆ. ಅಧ್ಯಾತ್ಮಜೀವನದಲ್ಲಿ ಮುಂದು ಮುಂದುವರಿದಂತೆಲ್ಲ ಆತನೇ ಎಲ್ಲವೂ ಆಗಿದಾನೆ, ಆತನೇ ಎಲ್ಲವನ್ನೂ ಘಟಿಸುತ್ತಿದಾನೆ ಎಂಬ ವಿಶ್ವಾಸ ದೃಢ ದೃಢವಾಗುತ್ತಾ ಬರುತ್ತದೆ. ಆತನೇ ಗುರು, ಆತನೇ ಇಷ್ಟ. ಆತನೇ ಜ್ಞಾನ, ಭಕ್ತಿ ಎಲ್ಲವನ್ನೂ ಕೊಡುತ್ತಾನೆ.

"'ಮುಂದೆ ಹೋಗಿ' ಅಂತ ನಾನು ಹೇಳೋದು ತಾನೆ ಹೇಗೆ! ಸಂಸಾರಿಗಳು ಒಂದು ಸ್ವಲ್ಪ ಹೆಚ್ಚುದೂರ ಮುಂದುವರಿದರು ಅಂದರೆ, ಅವರ ಸಂಸಾರದ ತಳವೇ ಕಳಚಿಬಿದ್ದುಹೋಗುತ್ತದೆ. ಒಂದು ದಿನ ಕೇಶವಸೇನ ತನ್ನ ಸಮಾಜದಲ್ಲಿ ಉಪಾಸನೆ ನಡೆಸುತ್ತಿದಾಗ ಹೇಳಿದ, 'ಹೇ ಭಗವಂತ, ನಿನ್ನ ಭಕ್ತಿ ನದಿಯಲ್ಲಿ ನಾವೆಲ್ಲರೂ ಒಮ್ಮೆಗೇ ಮುಳುಗಿಹೋಗೋ ಹಾಗೆ ಮಾಡು!' ಅಂತ. ಉಪಾಸನೆ ಮುಗಿದ ನಂತರ ನಾನು ಆತನಿಗೆ ಹೇಳಿದೆ: 'ಭಕ್ತಿ ನದಿಯಲ್ಲಿ ನೀವು ಒಮ್ಮೆಗೇ ಮುಳುಗಿಹೋಗಲು ಹೇಗೆ ಸಾಧ್ಯ? ಹಾಗೆ ಮಾಡಿದರೆ, ಪರದೆ ಹಿಂದೆ ಇರೋರ ಗತಿ ಏನಾಗಬೇಕು? ಆದರೆ ಒಂದು ಕೆಲಸಮಾಡಿ: ಮುಳುಗೇನೋ ಹಾಕಿ, ಆದರೆ ಆಗಾಗ ದಡಕ್ಕೂ ಬಂದು ಹೋಗಿ!' (ಎಲ್ಲರೂ ನಗುತ್ತಾರೆ.)

ಕಾಟೋಯಾದ ವೈಷ್ಣವ ತರ್ಕಮಾಡುತ್ತಿದಾನೆ.

ಶ್ರೀ ರಾಮಕೃಷ್ಣರು ವೈಷ್ಣವನಿಗೆ: "ನೀನು ಚಿಟಪಟಗುಟ್ಟೋದನ್ನು ಬಿಟ್ಟುಬಿಡು! ತುಪ್ಪ ಇನ್ನೂ ಹಸಿಯಾಗಿದೆ ಎಂದರೆ ಅದು ಈ ರೀತಿಯ ಶಬ್ದ ಕೊಡುತ್ತದೆ.

"ಒಮ್ಮೆ ಭಗವದಾನಂದ ದೊರೆತುದೇ ಆದರೆ, ವಿಚಾರಬುದ್ಧಿ ಕಾಲಿಗೆ ಬುದ್ಧಿ ಹೇಳುತ್ತದೆ. ಮಧುಪಾನದ ಆನಂದ ದೊರೆತಾಗ ದುಂಬಿಯ ಝೇಂಕೃತಿ - ಘೇಂಕೃತಿಯೆಲ್ಲ ಅಡಗಿ ಹೋಗುತ್ತದೆ. ಪುಸ್ತಕ ಓದಿ ಒಂದೆರಡು ಮಾತು ಮಾತಾಡೋದನ್ನ ಕಲಿತುಬಿಟ್ಟರೆ ಏನಾದ ಹಾಗಾಯಿತು? ಪಂಡಿತರು ಕೇವಲ ಶ್ಲೋಕ ಹೇಳೋದರಲ್ಲೇ ತೃಪ್ತರು.

"ಬಾಯಲ್ಲಿ ಸುಮ್ಮನೆ, 'ಬಂಗಿ ಸೊಪ್ಪು, ಬಂಗಿ ಸೊಪ್ಪು' ಅಂತ ಹೇಳುತ್ತಿದ್ದರೆ ಏನಾಗುತ್ತದೆ? ಅದರ ರಸವನ್ನು ಬಾಯಿರಿಂದ ಮುಕ್ಕಳಿಸಿದರೂ ಏನೂ ಆಗದು. ಅದು ಹೊಟ್ಟೆಗೆ ಹೋಗಿ ಬೀಳಬೇಕು. ಆಗ ಮಾತ್ರವೇ ನಶಾ ಹತ್ತುತ್ತದೆ. ನಿರ್ಜನ ಪ್ರದೇಶದಲ್ಲಿ ಏಕಾಂಗಿಯಾಗಿ ಇದ್ದುಕೊಂಡು ವ್ಯಾಕುಲ ಚಿತ್ತದಿಂದ ಭಗವಂತನನ್ನು ಕರೆಯದೆ ಇದ್ದರೆ ಇದೆಲ್ಲ ಅರ್ಥವಾಗೋದಿಲ್ಲ."

ಪರಮಹಂಸರನ್ನು ಪರೀಕ್ಷಿಸಲು ಡಾಕ್ಟರ್ ರಾಖಾಲ ಬಂದಿದಾನೆ. ಅವರು ವ್ಯಸ್ತರಾಗಿ ಆತನಿಗೆ ಹೇಳುತ್ತಿದಾರೆ, "ಬಾ, ಕುಳಿತುಕೊ" ಅಂತ.

ವೈಷ್ಣವನೊಡನೆ ಮಾತುಕತೆ ಮುಂದುವರಿಯುತ್ತಿದೆ.

ಶ್ರೀ ರಾಮಕೃಷ್ಣರು: "ಮಾನುಷ್ ಮತ್ತು ಮಾನ್‌ಹುಷ್. ಯಾರಿಗೆ ಆತ್ಮಜಾಗೃತಿಯುಂಟಾಗಿದೆಯೊ, ಆತನೇ ಮಾನ್‌ಹುಷ್. ಆತ್ಮ ಜಾಗೃತಿಯನ್ನುಂಟುಮಾಡಿಕೊಳ್ಳಲಿಲ್ಲ ಅಂದರೆ ಮನುಷ್ಯ ಜನ್ಮವನ್ನು ವೃಥಾ ಕಳೆದಂತೆ.

"ಕಾಮಾರಪುಕುರದಲ್ಲಿ ದೊಡ್ಡ ಹೊಟ್ಟೆಯ ಮತ್ತು ಒಳ್ಳೆ ಜೋರಾದ ಮೀಸೆಯುಳ್ಳ ಜನ ಅನೇಕ ಮಂದಿ ಇದಾರೆ. ಆದರೂ ತಮ್ಮ ವಾದ-ವಿವಾದ, ಜಗಳ-ಬವರ ಇವನ್ನು ಇತ್ಯರ್ಥ ಮಾಡಲು ಅಲ್ಲಿನವರು ಒಂದಿಪ್ಪತ್ತು ಮೈಲಿ ದೂರದಿಂದ ಧಾರ್ಮಿಕರನ್ನು ಮತ್ತು ಸತ್ಯವಾದಿಗಳನ್ನು ಹುಡುಕಿ ಪಲ್ಲಕ್ಕಿ ಮಾಡಿಸಿಕೊಂಡು ಕರೆತರುತ್ತಾರೆ. ಯಾರು ಕೇವಲ ಪಂಡಿತರೊ ಅವರನ್ನು ಅವರು ಕರೆತರೋದಿಲ್ಲ.

"ಸತ್ಯವಚನವೇ ಕಲಿಯುಗದ ತಪಸ್ಸು. 'ಸತ್ಯವಚನ, ನಮ್ರತೆ, ಪರಸ್ತ್ರೀಯನ್ನು ಮಾತೃವತ್ ನೋಡುವಿಕೆ'—ಇವೆಲ್ಲಾ ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನೆಗಳು."

ಪರಮಹಂಸರು ಬಾಲಕನ ಹಾಗೆ ಡಾಕ್ಟರಿಗೆ ಹೇಳುತ್ತಿದಾರೆ, "ಬಾಬು, ನನ್ನ ಇದನ್ನು (ಗಂಟಲನ್ನು) ಗುಣಪಡಿಸಿಬಿಡು" ಅಂತ.

ಡಾಕ್ಟರ್: "ಗುಣಪಡಿಸಬೇಕೆ?"

ಶ್ರೀರಾಮಕೃಷ್ಣರು ನಗುತ್ತ: "ಡಾಕ್ಟರ್, ಭಗವಂತನೇ. ನಾನು ಎಲ್ಲವನ್ನೂ ಸ್ವೀಕರಿಸುತ್ತೇನೆ. ನೀನು ಹೇಳಬಹುದು, ನೀವು ಎಲ್ಲವನ್ನೂ ಭಗವಂತ ಅಂತ ನೋಡುತ್ತಿರೋದಾದರೆ, ಸ್ವಲ್ಪವೂ ಗೊಣಗುಟ್ಟದೆ ಸುಮ್ಮನೆ ಇದ್ದುಬಿಡಬೇಕು ಎಂದು. ಆದರೆ ನಾನು 'ಮಾವಟಿಗ-ಭಗವಂತನ' ಮಾತಿಗೂ ಬೆಲೆಕೊಡುತ್ತೇನೆ.

"ಶುದ್ಧ-ಮನಸ್ಸು, ಶುದ್ಧ-ಆತ್ಮ ಒಂದೇ. ಶುದ್ಧ ಮನಸ್ಸಿನಲ್ಲಿ ಉದಯವಾಗೋದೆಲ್ಲ ಆತನ ಭಾವನೆಯೆ. ಆತನೇ 'ಮಾವಟಿಗ-ಭಗವಂತ.'

"ಭಗವದ್ವಾಣಿಗೆ ಏಕೆ ಬೆಲೆಕೊಡದೆ ಇರಲಿ? ಆತನೇ ಕರ್ತೃ. ಎಲ್ಲಿಯವರೆಗೆ ಆತ ಈ 'ಅಹಂ' ಎಂಬುದನ್ನು ನನ್ನಲ್ಲಿ ಇಟ್ಟಿದಾನೊ, ಅಲ್ಲಿಯವರೆಗೆ ಆತನ ಆಜ್ಞೆಯನ್ನು ಪರಿಪಾಲಿಸುತ್ತೇನೆ."

ಪರಮಹಂಸರ ಗಂಟಲನ್ನು ಪರೀಕ್ಷಿಸಲು ಈಗ ಡಾಕ್ಟರ್ ಸಿದ್ಧನಾಗಿದಾನೆ. ಅವರು ಹೇಳುತ್ತಿದಾರೆ, "ಡಾಕ್ಟರ್ ಮಹೇಂದ್ರಸರ್ಕಾರ ದನಗಳ ನಾಲಗೆ ಹಿಡಿದು ಅಮುಕಿ ನೋಡೋ ಹಾಗೆ ನನ್ನ ನಾಲಗೆ ಹಿಡಿದು ಅಮುಕಿ ನೋಡಿದ" ಅಂತ.

ಪರಮಹಂಸರು ಬಾಲಕನ ಹಾಗೆ ಡಾಕ್ಟರ ಷರಟನ್ನು ಹಿಡಿದು ಎಳೆಯುತ್ತ ಹೇಳುತ್ತಿದಾರೆ, "ಬಾಬು! ಬಾಬು! ಇದನ್ನು (ಗಂಟಲನ್ನು) ಗುಣಪಡಿಸಿಬಿಡು." ಅಂತ. ಧ್ವನಿನಾಳದರ್ಶಕ (ಲರಿಂಗೊಸ್ಕೋಪ್) ಅನ್ನು ನೋಡಿ ನಗುತ್ತ ನಗುತ್ತ ಹೇಳುತ್ತಿದಾರೆ, "ಗೊತ್ತಾಯಿತು. ಇದರಲ್ಲಿ ಗಂಟಲಿನ ಪ್ರತಿಬಿಂಬ ಬೀಳುತ್ತದೆ" ಅಂತ.

ನರೇಂದ್ರ ಹಾಡಿದ. ಪರಮಹಂಸರಿಗೆ ದೇಹ ಸೌಖ್ಯವಿಲ್ಲವೆಂದು ಹೆಚ್ಚು ಹೊತ್ತು ಹಾಡಲಿಲ್ಲ.

೨ನೆ ಸೆಪ್ಟೆಂಬರ್ ೧೮೮೫, ಶ್ರಾವಣ ಅಷ್ಟಮಿ-ನವಮಿ, ಬುಧವಾರ.

ಪರಮಹಂಸರು ಮಧ್ಯಾಹ್ನದ ಊಟ ಮುಗಿಸಿಕೊಂಡು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಡಾಕ್ಟರ್ ಭಗವಾನ್‌ರುದ್ರ, ಮಾಸ್ಟರ್ ಇವರೊಡನೆ ಮಾತುಕತೆಯಾಡುತ್ತಿದಾರೆ. ಕೊಠಡಿಯಲ್ಲಿ ರಾಖಾಲ, ಲಾಟು ಮತ್ತು ಇನ್ನೂ ಕೆಲವು ಮಂದಿ ಭಕ್ತರು ಕುಳಿತಿದಾರೆ. ಪರಮಹಂಸರ ರೋಗದ ಆದ್ಯಂತವನ್ನೆಲ್ಲ ಡಾಕ್ಟರ್ ಕೇಳಿ ತಿಳಿದುಕೊಂಡ. ಪರಮಹಂಸರು ತಮ್ಮ ಮಂಚವನ್ನು ಬಿಟ್ಟು ಎದ್ದುಬಂದು ಡಾಕ್ಟರ್ ಹತ್ತಿರ ನೆಲದ ಮೇಲೆ ಕುಳಿತುಕೊಂಡರು.

ಶ್ರೀರಾಮಕೃಷ್ಣರು: "ನೋಡು, ಔಷಧ ನನಗೆ ಒಗ್ಗುತ್ತಿಲ್ಲ. ನನ್ನ ದೇಹಪ್ರಕೃತಿ ಪ್ರತ್ಯೇಕವಾದ್ದು.

"ಒಳ್ಳೇದು, ಇದು ನಿನಗೇನನಿಸುತ್ತದೆ? ದುಡ್ಡು ಮುಟ್ಟಿದೆನೆಂದರೆ ಕೈ ವಕ್ರ ವಕ್ರವಾಗಿ ತಿರುಗಿಕೊಂಡುಬಿಡುತ್ತದೆ; ಉಸಿರಾಡೋದೂ ನಿಂತು ಹೋಗಿಬಿಡುತ್ತದೆ. ಇದೂ ಅಲ್ಲದೆ ಪಂಚೆ ತುದಿಯಲ್ಲಿ ಗಂಟು-ಗಿಂಟು ಹಾಕಿದೆನೆಂದರೆ, ಅದನ್ನು ಬಿಚ್ಚೋವರೆಗೆ ಉಸಿರಾಡೋಕಾಗೋದೇ ಇಲ್ಲ."

ಪರಮಹಂಸರು ಒಬ್ಬ ಭಕ್ತನಿಗೆ ಒಂದು ರೂಪಾಯನ್ನು ತಮ್ಮ ಕೈಗೆ ಹಾಕುವಂತೆ ಹೇಳಿದರು. ಅದು ಅವರ ಕೈಗೆ ಬೀಳುವುದೇ ತಡ, ಕೈ ಸೊಟ್ಟ ಸೊಟ್ಟವಾಗಿ ತಿರುಗಿಕೊಂಡುಬಿಟ್ಟಿತು; ಉಸಿರಾಡೋದೂ ನಿಂತು ಹೋಯಿತು. ಅವರ ಕೈಯಿಂದ ಅದನ್ನು ತೆಗೆದುಕೊಂಡುಬಿಟ್ಟನಂತರ, ಅವರು ಮೂರು ಸಲ ದೀರ್ಘ ನಿಶ್ವಾಸ ಬಿಟ್ಟರು. ಬಳಿಕ ಅವರ ಕೈ ಎಂದಿನಂತೆ ಆಯಿತು. ಇದನ್ನು ನೋಡಿ ಡಾಕ್ಟರ್ ಆಶ್ಚರ್ಯಚಕಿತನಾದ.

ಡಾಕ್ಟರ್ ಮಾಸ್ಟರಿಗೆ ಹೇಳಿದ, "ಇದು ನರಗಳ ಉದ್ರೇಕ" ಅಂತ.

ಶ್ರೀರಾಮಕೃಷ್ಣರು ಡಾಕ್ಟರಿಗೆ: "ನನಗೆ ಇನ್ನೊಂದು ಅವಸ್ಥೆ ಬಂದುಬಿಟ್ಟಿದೆ. ಏನನ್ನೂ ಸಂಚಯಮಾಡಿಡೋಹಾಗಿಲ್ಲ. ಒಮ್ಮೆ ನಾನು ಶಂಭು ಮಲ್ಲಿಕನ ತೋಟದ ಮನೆಗೆ ಹೋಗಿದ್ದೆ. ಆಗ ಭಯಾನಕ ಹೊಟ್ಟೆನೋವು. ಶಂಭು ಹೇಳಿದ, 'ಒಂದು ಕಿಂಚಿತ್ ಕಿಂಚಿತ್ ಅಫೀಮನ್ನು ತಿನ್ನಿ, ಅದು ನೋವನ್ನು ಕಡಮೆ ಮಾಡುತ್ತದೆ' ಅಂತ. ಆತ ನನ್ನ ಪಂಚೆ ಕೊನೆಗೆ ಅದನ್ನು ಸ್ವಲ್ಪ ಕಟ್ಟಿಕೊಟ್ಟ. ನಾನು ಹಿಂದಿರುಗಿ ಗೇಟಿನ ಹತ್ತಿರಕ್ಕೆ ಬಂದಾಗ ದಾರಿಗಾಣದವನ ಹಾಗೆ ಸುಮ್ಮನೆ ತಡವರಿಸಲಾರಂಭಿಸಿದೆ.

ಬಳಿಕ ಆ ಅಫೀಮನ್ನು ಬಿಚ್ಚಿ ಬಿಸಾಡಿದನಂತರ ಎಂದಿನ ಸ್ಥಿತಿ ಬಂದು ಕೊಠಡಿಗೆ ಸುರಕ್ಷಿತವಾಗಿ ಬಂದು ಸೇರಿದೆ.

"ಒಂದು ದಿನ ಕಾಮಾರಪುಕುರದಲ್ಲಿ ಮರದಿಂದ ಮಾವಿನ ಹಣ್ಣು ಕಿತ್ತುಕೊಂಡು ಮನೆಗೆ ಹೋಗುತ್ತಿದ್ದೆ. ಸ್ವಲ್ಪ ದೂರ ನಡೆದನಂತರ ಮುಂದಕ್ಕೆ ನಡೆಯಲಾಗಲಿಲ್ಲ; ಹಾಗೆಯೆ ನಿಂತುಬಿಡಬೇಕಾಗಿ ಬಂದಿತು. ಒಂದು ಗುಂಡಿಯೊಳಕ್ಕೆ ಅವನ್ನು ಬಿಸಾಡಿದೆ. ಆಗ ನನಗೆ ನಡೆಯಲು ಸಾಧ್ಯವಾಯಿತು. ಒಳ್ಳೆಯದು, ಇದಕ್ಕೇನು ನಿನ್ನ ಉತ್ತರ?"

ಡಾಕ್ಟರ್: "ಈ ಕಾರ್ಯಗಳ ಹಿಂದೆ ಬೇರೊಂದು ಶಕ್ತಿ, ಮಾನಸಿಕ ಶಕ್ತಿ ಕೆಲಸಮಾಡುತ್ತಿದೆ."

ಮಾಸ್ಟರ್: "ಇವರು (ಪರಮಹಂಸರು) ಹೇಳುತ್ತಾರೆ, ಅದು ಭಗವಂತನ ಶಕ್ತಿ ಅಂತ. ನೀವು ಹೇಳುತ್ತೀರಿ ಅದು ಮಾನಸಿಕ ಶಕ್ತಿ ಅಂತ."

ಶ್ರೀರಾಮಕೃಷ್ಣರು ಡಾಕ್ಟರಿಗೆ: "ನನಗೆ ಈಗ ಅಂಥ ಅವಸ್ಥೆ ಬಂದಿದೆ, ಯಾರಾದರು ನಿಮಗೆ ಈಗ ಉತ್ತಮವಾಗಿದೆ ಅಂತ ಹೇಳಿಬಿಟ್ಟರೇ ಸಾಕು, ನನಗೂ ಉತ್ತಮವಾದ ಹಾಗೇ ಕಾಣುತ್ತದೆ. ಅಂದು ಬಾಗ್‌ಬಸಾರಿನ ಬ್ರಾಹ್ಮಣಿ ಹೇಳಿದಳು, 'ನಿಮಗೆ ಶೇಕಡ ಐವತ್ತು ಭಾಗ ಗುಣವಾಗಿದೆ' ಅಂತ. ತತ್‌ಕ್ಷಣವೇ ನರ್ತಿಸಲಾರಂಭಿಸಿದೆ."

ಡಾಕ್ಟರ ನಡೆ ನುಡಿ ನೋಡಿ, ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ. ಅವರು ಆತನಿಗೆ ಹೇಳುತ್ತಿದಾರೆ, "ನಿನ್ನದು ಬಹಳ ಒಳ್ಳೆಯ ಸ್ವಭಾವ. ಜ್ಞಾನದ ಲಕ್ಷಣಗಳು ಎರಡು — ಶಾಂತ ಸ್ವಭಾವ, ಅಭಿಮಾನ ಶೂನ್ಯತೆ" ಅಂತ.

ಮಾಸ್ಟರ್: "ಇವರಿಗೆ (ಡಾಕ್ಟರಿಗೆ) ಪತ್ನೀವಿಯೋಗವಾಗಿದೆ."

ಶ್ರೀರಾಮಕೃಷ್ಣರು ಡಾಕ್ಟರಿಗೆ: "ನಾನು ಹೇಳ್ತೀನೆ, ಇವು ಮೂರು ಆಕರ್ಷಣೆಗಳಿದ್ದರೆ ಭಗವಂತನ ಸಾಕ್ಷಾತ್ಕಾರ ಪಡೆಯಬಹುದು — ತಾಯಿಗೆ ಮಗುವಿನ ಮೇಲಿರೋ ಆಕರ್ಷಣೆ, ಸತಿಗೆ ಪತಿಯ ಮೇಲಿರೋ ಆಕರ್ಷಣೆ, ಪ್ರಾಪಂಚಿಕನಿಗೆ ಪ್ರಾಪಂಚಿಕ ವಸ್ತುಗಳ ಮೇಲಿರೋ ಆಕರ್ಷಣೆ.

"ಅದು ಹೇಗಾದರೂ ಆಗಲಿ ದಯವಿಟ್ಟು ನನ್ನ ಗಂಟಲನ್ನು ಗುಣಪಡಿಸಿಬಿಡು."

ಈಗ ಡಾಕ್ಟರು ಪರಮಹಂಸರ ಗಂಟಲನ್ನು ಪರೀಕ್ಷಿಸುತ್ತಿದಾನೆ.

ಅವರು ಅರ್ಧಚಂದ್ರಾಕೃತಿಯ ಜಗಲಿಯಲ್ಲಿ ಕುರ್ಚಿಯ ಮೇಲೆ ಕುಳಿತಿದಾರೆ. ಡಾಕ್ಟರ್ ಸರ್ಕಾರನ ಮಾತೆತ್ತಿ ಹೇಳುತ್ತಿದಾರೆ, "ಆತ ಒರಟು ಮನುಷ್ಯ. ದನವೊ ಏನೊ ಎಂಬಂತೆ ನನ್ನ ನಾಲಗೆ ಹಿಡಿದು ಚೆನ್ನಾಗಿ ಅಮುಕಿನೋಡಿದ" ಅಂತ.

ಡಾಕ್ಟರ್: "ಆತ ಬೇಕೂ ಅಂತ ಹಾಗೆ ಮಾಡಿರಲಾರ."

ಶ್ರೀರಾಮಕೃಷ್ಣರು: "ಬೇಕೂ ಅಂತಲೇನೊ ಅಲ್ಲ, ಚೆನ್ನಾಗಿ ಪರೀಕ್ಷೆಮಾಡಲು ಹಾಗೆ ಅಮುಕಿನೋಡಿದ."

೨೦ನೆ ಸೆಪ್ಟೆಂಬರ್ ೧೮೮೫, ಅಶ್ವೀಜ ಶುಕ್ಲ ಏಕಾದಶಿ, ಭಾನುವಾರ.

ಶ್ರೀರಾಮಕೃಷ್ಣರು ಭಕ್ತರೊಡಗೂಡಿ ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ನವಗೋಪಾಲ, ಹರಲಾಲ, ರಾಖಾಲ, ಲಾಟು ಇವರೇ ಮೊದಲಾದವರು ಅಲ್ಲಿ ಕುಳಿತಿದಾರೆ. ಕೀರ್ತನಗಾರ ಗೋಸ್ವಾಮಿಯೂ ಅಲ್ಲಿ ಕುಳಿತಿದಾನೆ.

ಮಾಸ್ಟರ್ ಬೋಬಸಾರಿನ ಡಾಕ್ಟರ್ ರಾಖಾಲನೊಡನೆ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರನ್ನು ಈಗ ಡಾಕ್ಟರ್ ರಾಖಾಲ ಪರೀಕ್ಷಿಸುತ್ತಿದಾನೆ. ಆತನದು ದೊಡ್ಡಶರೀರ; ಅದಕ್ಕೆ ತಕ್ಕಂತೆ ಬೆರಳೂ ದಪ್ಪ.

ಶ್ರೀರಾಮಕೃಷ್ಣರು ನಗುತ್ತ ಡಾಕ್ಟರಿಗೆ: "ನಿನ್ನ ಕೈ ಬೆರಳುಗಳು ಜಟ್ಟಿಯುದರಂತಿವೆ. ಡಾಕ್ಟರ್ ಮಹೇಂದ್ರಸರ್ಕಾರನೂ ನನ್ನನ್ನು ಪರೀಕ್ಷಿಸಿದ. ಆತ ನನ್ನ ನಾಲಗೆಯನ್ನು ಅಷ್ಟು ಬಲವಾಗಿ ಒತ್ತಿನೋಡಿದ— ದನದ್ದೊ ಕರುವಿನದೊ ಏನೊ ಎಂಬಂತೆ—ಅದು ನನಗೆ ನೋವನ್ನು ಉಂಟುಮಾಡಿಬಿಟ್ಟಿತು."

ಡಾಕ್ಟರ್: "ಒಳ್ಳೇದು, ನಿಮಗೆ ಸ್ವಲ್ಪವೂ ನೋವಾಗದ ರೀತಿಯಲ್ಲಿ ಪರೀಕ್ಷಿಸುತ್ತೇನೆ."

ಡಾಕ್ಟರ್ ತನ್ನ ಪ್ರಿಸ್ಕ್ರಿಪ್ಶನ್ ಬರೆದುಕೊಟ್ಟ. ಪರಮಹಂಸರು ಈಗ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಒಳ್ಳೇದು, ಜನ ಕೇಳುತ್ತಾರೆ, ಇವರು ದೊಡ್ಡ ಮಹಾಪುರುಷರಾಗಿದ್ದರೆ, ಇವರಿಗೆ ರೋಗ ಬರಲು ಕಾರಣವೇನು ಅಂತ."

ತಾರಕ : "ಭಗವಾನ್ದಾಸಬಾಬಾಜಿಯೂ ರೋಗಗ್ರಸ್ತನಾಗಿ ಬಹಳ ಕಾಲದ ವರೆಗೆ ಹಾಸಿಗೆ ಹಿಡಿದಿದ್ದ."

ಶ್ರೀರಾಮಕೃಷ್ಣರು : "ಡಾಕ್ಟರ್ ಮಧುವಿನ ಕಡೆ ನೋಡಿ. ವಯಸ್ಸು ಆಗಲೇ ಅರವತ್ತು. ಇನ್ನೂ ತನ್ನ ಉಪಪತ್ನಿ ಮನೆಗೆ ಅನ್ನಾಹಾರಾದಿಗಳನ್ನು ತೆಗೆದುಕೊಂಡು ಹೋಗುತ್ತಿದಾನೆ. ಆದರೂ ಆವನಿಗೆ ಯಾವ ರೋಗ ರುಜಿನವೂ ಇಲ್ಲವಲ್ಲ."

ಗೋಸ್ವಾಮಿ : "ನಿಮಗೆ ರೋಗ ಬಂದಿರೋದು ಪರರ ಹಿತಕ್ಕಾಗಿ. ಯಾರು ನಿಮ್ಮ ಹತ್ತಿರಕ್ಕೆ ಬರುತ್ತಾರೊ, ಅವರ ಪಾಪವನ್ನೆಲ್ಲ ನೀವು ತೆಗೆದುಕೊಂಡುಬಿಡುತ್ತಿದೀರಿ. ಅವರ ಪಾಪವನ್ನೆಲ್ಲ ನೀವು ಹೊತ್ತುಕೊಳ್ಳುತ್ತಿರೋದರಿಂದ ನೀವು ರೋಗಗ್ರಸ್ತರಾಗಿಬಿಟ್ಟಿದೀರಿ."

ಒಬ್ಬ ಭಕ್ತ : "ನೀವು ಭಗವತಿಗೆ, 'ಹೇ ತಾಯೆ, ದಯವಿಟ್ಟು ನನ್ನ ರೋಗವನ್ನು ಗುಣಪಡಿಸು' ಅಂತ ಹೇಳಿಕೊಳ್ಳೋದಾದರೆ, ಬೇಗನೆ ನಿಮಗೆ ಗುಣವಾಗಿಬಿಡುತ್ತದೆ."

ಶ್ರೀರಾಮಕೃಷ್ಣರು : "ರೋಗ ಗುಣಪಡಿಸು ಅಂತ ಭಗವತಿಯನ್ನು ಪ್ರಾರ್ಥಿಸಿಕೊಳ್ಳಲಾರೆ. ಜೊತೆಗೆ ಈಗ ಕೆಲಕಾಲದಿಂದ ಸೇವ್ಯ - ಸೇವಕ ಭಾವ ಇಳಿಮುಖವಾಗುತ್ತಿದೆ. ಒಮ್ಮೊಮ್ಮೆ ನಾನು ಭಗವತಿಗೆ ಪ್ರಾರ್ಥಿಸೋದುಂಟು, 'ಹೇ ತಾಯೆ, ಕತ್ತಿಯ ಒರೆಯನ್ನು (ಪರಮಹಂಸರ ಶರೀರ) ಸ್ವಲ್ಪ ಸರಿಪಡಿಸಿಬಿಡು' ಅಂತ. ಆ ವಿಧವಾದ ಪ್ರಾರ್ಥನೆಯೂ ಬಹಳ ವಿರಳವಾಗಿಬಿಟ್ಟಿದೆ. ಈಗ ಕೆಲಕಾಲದಿಂದ ನನ್ನ 'ಅಹಂ' ಎಂಬುದು ಎಲ್ಲಿಗೆ ಹೋಗಿಬಿಟ್ಟಿದೆಯೊ ಗೊತ್ತೇ ಇಲ್ಲ; ಹುಡುಕಿದರೂ ಸಿಕ್ಕುತ್ತಿಲ್ಲ. ಕೇವಲ ಭಗವತಿ ಮಾತ್ರ ಈ ಒರೆಯೊಳಗೆ ಇರುತ್ತಿರೋದು ಕಂಡುಬರುತ್ತಿದೆ."

ಗೋಸ್ವಾಮಿಯನ್ನು ಕರೆಸಿರೋದು ಕೀರ್ತನೆಗೋಸ್ಕರ. ಒಬ್ಬ ಭಕ್ತ ಕೇಳಿದ, "ಕೀರ್ತನೆ ಉಂಟೆ?" ಅಂತ. ಪರಮಹಂಸರಿಗೆ ದೇಹ ಸೌಖ್ಯವಿಲ್ಲದೆ ಇರುವುದರಿಂದ, ಕೀರ್ತನೆ ನಡೆದರೆ ಅವರ ಭಾವ ಉದ್ರೇಕಗೊಂಡುಬಿಡುವುದಲ್ಲ ಅಂತ ಭಕ್ತರೆಲ್ಲರೂ ಹೆದರುತ್ತಿದಾರೆ.

ಶ್ರೀರಾಮಕೃಷ್ಣರು : "ಒಂದು ಸ್ವಲ್ಪ ಹೊತ್ತು ನಡೆಯಲಿ. ನನ್ನ ಭಾವ ಉದ್ರೇಕಗೊಂಡುಬಿಡಬಹುದೆಂದು ಎಲ್ಲರೂ ಹೆದರುತ್ತಿದಾರೆ. ಭಾವ ಗಂಟಲಿನ ಈ ಭಾಗವನ್ನು (ಗಂಟಲನ್ನು ತೋರಿಸಿ) ನೋಯಿಸಿಬಿಡುತ್ತದೆ."

ಗೋಸ್ವಾಮಿ ಕೀರ್ತನೆ ಆರಂಭಮಾಡಿದ. ಪರಮಹಂಸರಿಗೆ ತಮ್ಮ ಭಾವವನ್ನು ತಡೆದು ನಿಲ್ಲಿಸಲಾಗಲಿಲ್ಲ. ಎದ್ದು ನಿಂತು ಭಕ್ತರೊಡನೆ ನರ್ತಿಸಲಾರಂಭಿಸಿದಾರೆ. ಡಾಕ್ಟರ್ ಅಂತ್ಯದವರೆಗೆ ಎಲ್ಲವನ್ನೂ ನೋಡಿದ.

ಒಂದು ಬಾಡಿಗೆ ಗಾಡಿ ಆತನಿಗಾಗಿ ಕಾದು ನಿಂತಿದೆ. ಆತ ಮತ್ತು ಮಾಸ್ಟರ್ ಇಬ್ಬರೂ ಕಲ್ಕತ್ತಕ್ಕೆ ಹೊರಡಲು ಸಿದ್ಧರಾಗಿದಾರೆ. ಅವರಿಬ್ಬರೂ ಪರಮಹಂಸರಿಗೆ ಪ್ರಣಾಮಮಾಡಿದರು. ಪರಮಹಂಸರು ಮಾಸ್ಟರನ್ನು ಪ್ರೇಮಪೂರಿತ ದೃಷ್ಟಿಯಿಂದ ಕೇಳಿದರು, "ಊಟವಾಯಿತೆ ?" ಅಂತ.

**೨೪ನೆ ಸೆಪ್ಟೆಂಬರ್ ೧೮೮೫, ಆಶ್ವೀಜ ಪೂರ್ಣಿಮೆ, ಗುರುವಾರ.**

ಪೂರ್ಣಿಮೆ ರಾತ್ರಿ. ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಗಂಟಲಿನ ರೋಗ ಬಲಗೊಂಡಿದೆ. ಮಾಸ್ಟರ್ ಮೊದಲಾದವರು ನೆಲದ ಮೇಲೆ ಕುಳಿತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ : "ಆಗಾಗ ಭಾವಿಸುತ್ತೇನೆ, ಈ ಶರೀರ ಕೇವಲ ದಿಂಬಿನ ಚೀಲ ಮಾತ್ರ ಅಂತ. ಇದರೊಳಗೆ ಅಖಂಡ ಸಚ್ಚಿದಾನಂದ ಹೊರತು ಬೇರೆ ಏನೂ ಇಲ್ಲ.

"ಭಾವಾವೇಶ ಬಂತು ಅಂದರೆ, ಗಂಟಲ ರೋಗ ಒಂದು ಮೂಲೆಯಲ್ಲಿ ಮುದುರಿಕೊಂಡಿರುತ್ತದೆ. ಈಗ ನಾನು ಸ್ವಲ್ಪ ಮಟ್ಟಿಗೆ ಆ ಅವಸ್ಥೆಯಲ್ಲಿದೇನೆ; ಅದಕ್ಕಾಗಿ ಈಗ ನಗು ಬರುತ್ತಿದೆ."

ದ್ವಿಜನ ಸೋದರಿ ಮತ್ತು ಅಜ್ಜಿ ಪರಮಹಂಸರು ಅಸೌಖ್ಯರಾಗಿದಾರೆ ಎಂಬುದನ್ನು ಕೇಳಿ ಅವರನ್ನು ನೋಡಲು ಬಂದಿದಾರೆ. ಅವರು ಪರಮಹಂಸರಿಗೆ ಪ್ರಣಾಮಮಾಡಿ ಕೊಠಡಿಯಲ್ಲಿ ಒಂದು ಕಡೆ ಕುಳಿತುಕೊಂಡರು. ದ್ವಿಜನ ಅಜ್ಜಿಯನ್ನು ನೋಡಿ ಪರಮಹಂಸರು ಕೇಳಿದರು : "ಇವರು ಯಾರು ? ಇವರೇ ಏನು ದ್ವಿಜನನ್ನು ಸಾಕಿಸಲಹಿದವರು ? ಒಳ್ಳೇದು ದ್ವಿಜ ಏಕೆ ಏಕನಾದವನ್ನು ಕೊಂಡುಕೊಂಡು ಬಂದಿದಾನೆ ?"

ಮಾಸ್ಟರ್ : "ಇಲ್ಲ. ಅದಕ್ಕೆ ಎರಡು ತಂತಿಗಳಿವೆ."

ಶ್ರೀರಾಮಕೃಷ್ಣರು : "ತಂದೆ ಈತನಿಗೆ ವಿರೋಧಿ. ಜನ ಏನನ್ನುಕೋತಾರೆ ? ಈತ ಗೋಪ್ಯವಾಗಿ ಭಗವಂತನನ್ನು ಕರೆಯೋದೇ ಮೇಲು."

ಪರಮಹಂಸರ ಕೊಠಡಿಯಲ್ಲಿ ಗೌರಾಂಗದೇವ ಮತ್ತು ನಿತಾಯಿ ತಮ್ಮ ಅನುಯಾಯಿಗಳೊಡನೆ ನವದ್ವೀಪದಲ್ಲಿ ಕೀರ್ತನೆ ಮಾಡುತ್ತಿದ್ದುದರ ಎರಡು ಪಟಗಳು ತೂಗಹಾಕಿದ್ದುವು.

ರಾಮುಲಾಲ ಪರಮಹಂಸರಿಗೆ : "ಹಾಗಾದರೆ ಈತನಿಗೆ (ಮಾಸ್ಟರಿಗೆ) ಒಂದನ್ನು ಕೊಡಲೆ ?"

ಶ್ರೀರಾಮಕೃಷ್ಣರು : "ಬಹಳ ಒಳ್ಳೆಯದು, ಕೊಟ್ಟುಬಿಡು."

ಪರಮಹಂಸರು ಕೆಲವು ದಿನಗಳಿಂದ ಡಾಕ್ಟರ್ ಪ್ರತಾಪನಿಂದ ಔಷಧ ತೆಗೆದುಕೊಳ್ಳುತ್ತಿದಾರೆ. ಮಧ್ಯರಾತ್ರಿಯಲ್ಲಿ ಎಚ್ಚರಗೊಂಡು ನೋವಿನಿಂದ ಸುಮ್ಮನೆ ಹೊರಳಾಡುತ್ತಿದಾರೆ. ಅವರ ಸೇವಕ ಹರೀಶ ಕೊಠಡಿಯಲ್ಲೇ ಇದಾನೆ. ರಾಖಾಲನೂ ಇಲ್ಲೇ ಇದಾನೆ. ರಾಮುಲಾಲ ಹೊರಗೆ ಜಗಲಿ ಮೇಲೆ ಮಲಗಿದಾನೆ. ಆಮೇಲೆ ಪರಮಹಂಸರು ತಿಳಿಸಿದರು : "ಪ್ರಾಣ ತಾನು ಹಾರಿಹೋಗುತ್ತೇನೆ ಅಂತ ಹೇಳುತ್ತಿತ್ತು. ಆಗ ಹರೀಶನನ್ನು ತಬ್ಬಿಹಿಡಿದುಕೋಬೇಕು ಅಂತ ಅನಿಸುತ್ತಿತ್ತು. ಮಧ್ಯಮನಾರಾಯಣ ಎಣ್ಣೆಯನ್ನು ತಲೆಗೆ ಹಚ್ಚಿದ ಮೇಲೆ ಗುಣ ಕಂಡುಬಂದಿತು. ಆಗ ನಾನು ನರ್ತಿಸಲಾರಂಭಿಸಿದೆ."

೪೫

# ಶ್ರೀರಾಮಕೃಷ್ಣರು ಶ್ಯಾಮಪುಕುರದಲ್ಲಿ

೧೮ನೆ ಅಕ್ಟೋಬರ್ ೧೮೮೫, ವಿಜಯದಶಮಿ, ಭಾನುವಾರ.

ಪರಮಹಂಸರ ಗಂಟಲ ಹುಣ್ಣು ಏಡಿ ಹುಣ್ಣು ಎಂಬುದಾಗಿ ಡಾಕ್ಟರೆಲ್ಲರು ಒಂದು ನಿಶ್ಚಿತ ತೀರ್ಪಿಗೆ ಬಂದುಬಿಟ್ಟಿದಾರೆ. ಅವರಿಗೆ ಬೇಕಾಗೋ ಔಷಧೋಪಚಾರಗಳನ್ನು ದಕ್ಷಿಣೇಶ್ವರಕ್ಕೆ ತಂದೊದಗಿಸುವುದು ಭಕ್ತರಿಗೆ ಕಷ್ಟವಾಗಿ ಕಂಡಿತು. ಆಗಾಗ ಡಾಕ್ಟರುಗಳು ಬಂದು ಅವರನ್ನು ನೋಡಿ ಹೋಗಬೇಕಾಗಿತ್ತು. ಅವರಿಗೆ ಕಲ್ಕತ್ತದಿಂದ ಇಷ್ಟು ದೂರ ಬಂದು ಪರಮಹಂಸರನ್ನು ನೋಡಿಹೋಗಲು ಅಸಾಧ್ಯವಾಗಿ ಕಂಡುಬಂದಿತು. ದಿವಸವೂ ಅಷ್ಟು ದೂರ ಕಲ್ಕತ್ತದಿಂದ ಬಂದುಹೋಗೋದು ಭಕ್ತರಿಗೂ ಕಷ್ಟವಾಗಿ ಕಂಡಿತು. ಈ ಕಾರಣಗಳಿಂದ ಭಕ್ತರೆಲ್ಲರೂ ಸೇರಿ ಬಾಗ್ ಬಸಾರಿನಲ್ಲಿ ಎರಡು ಅಂತಸ್ತಿನ ಒಂದು ಚಿಕ್ಕ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿಗೆ ಪರಮಹಂಸರನ್ನು ಕರೆದುಕೊಂಡುಬಂದರು. ಪರಮಹಂಸರಿಗೆ ಆ ಮನೆ ಹಿಡಿಸಲಿಲ್ಲ. ಬಲರಾಮನ ಮನೆಗೆ ಹೋಗಿ ಇದ್ದುಬಿಟ್ಟರು. ಕೆಲವು ದಿನಗಳೊಳಗಾಗಿಯೆ ಭಕ್ತರು ಶ್ಯಾಮಪುಕುರ ಎಂಬ ಹೆಸರಿನ ಕಲ್ಕತ್ತದ ಉಪನಗರದಲ್ಲಿ ಒಂದು ಬಾಡಿಗೆ ಮನೆಯನ್ನು ಗೊತ್ತುಮಾಡಿ ಅಲ್ಲಿಗೆ ಪರಮಹಂಸರನ್ನು ಕರೆದುಕೊಂಡು ಬಂದಿದಾರೆ. ಚಿಕಿತ್ಸೆಗಾಗಿ ಮಹೇಂದ್ರಲಾಲ ಸರ್ಕಾರನನ್ನು ನೇಮಿಸಿದಾರೆ. ಈ ಕಟ್ಟಡದ ಎರಡನೆ ಅಂತಸ್ತಿನಲ್ಲಿ ಎರಡು ದೊಡ್ಡ ಕೊಠಡಿಗಳು, ಎರಡು ಚಿಕ್ಕ ಕೊಠಡಿಗಳು ಇದ್ದುವು. ದೊಡ್ಡ ಕೊಠಡಿಗಳಲ್ಲೊಂದು ಪರಮಹಂಸರ ಕೊಠಡಿಯಾಯಿತು, ಇನ್ನೊಂದು ಬೈಠಕ್‌ಖಾನೆಯಾಯಿತು. ಚಿಕ್ಕ ಕೊಠಡಿಗಳಲ್ಲಿ, ಒಂದು ಭಕ್ತರು ಮಲಗೋ ಕೊಠಡಿಯಾಯಿತು, ಇನ್ನೊಂದು ಶಾರದಾದೇವಿಯವರ ಕೊಠಡಿಯಾಯಿತು. ಮೇಲ್ಛಾವಣಿಗೆ ಹೋಗೋ ಹಂತದ ಹತ್ತಿರ ಒಂದು ಚಚ್ಚೌಕ ಒಪ್ಪಾರು ಇತ್ತು. ಇಲ್ಲಿ ಹಗಲು ವೇಳೆ ಶ್ರೀಶಾರದಾದೇವಿಯವರು ಪರಮಹಂಸರಿಗೆ ಅಡಿಗೆ ಮಾಡುತ್ತಿದ್ದರು.

ಪ್ರಾತಃಕಾಲ ಎಂಟು. ಚಳಿಗಾಲದ ತಂಗಾಳಿ ಬೀಸುತ್ತಿತ್ತು.

ಪರಮಹಂಸರು ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ತನ್ನ ತಾಯನ್ನಲ್ಲದೆ ಬೇರೆ ಏನನ್ನೂ ಅರಿಯದ ಐದು ವರ್ಷದ ಮಗುವಿನಂತೆ ಕುಳಿತಿದಾರೆ. ನವಗೋಪಾಲ, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರು ಅಲ್ಲಿ ಕುಳಿತಿದಾರೆ. ಸುರೇಂದ್ರನೂ ಬಂದಿದಾನೆ. ಆತನ ಮನೆಯಲ್ಲಿ ಕಳೆದ ಮೂರು ದಿನಗಳಿಂದ ದುರ್ಗಾಪೂಜೆ ನಡೆಯುತ್ತಿದೆ. ಪರಮಹಂಸರಿಗೆ ಶರೀರಾರೋಗ್ಯ ಸರಿಯಾಗಿಲ್ಲದೆ ಇರುವುದರಿಂದ, ಅವರಿಗೆ ಆತನ ಮನೆಗೆ ಹೋಗಲಾಗಲಿಲ್ಲ. ಅವರು ತಮ್ಮ ಭಕ್ತರನ್ನು ಅಲ್ಲಿಗೆ ಕಳುಹಿಸಿದ್ದರು. ಇಷ್ಟು ದಿನ ಆನಂದದಿಂದ ಪೂಜೆ ಮಾಡಿದ ದುರ್ಗಾಪ್ರತಿಮೆಯನ್ನು ಇಂದು ವಿಸರ್ಜನೆ ಮಾಡಬೇಕಾಗಿರೋದರಿಂದ ಸುರೇಂದ್ರನ ಮನಸ್ಸಿಗೆ ತುಂಬಾ ವ್ಯಥೆಯಾಗುತ್ತಿದೆ.

ಸುರೇಂದ್ರ : "ಮನೆಯಲ್ಲಿರೋಕಾಗದೆ ಇಲ್ಲಿಗೆ ಓಡಿಬಂದುಬಿಟ್ಟೆ."

ಶ್ರೀರಾಮಕೃಷ್ಣರು : "ಅದಕ್ಕೇಕೆ ವ್ಯಥೆಪಡಬೇಕು ? ಆಕೆಯನ್ನು ಹೃದಯದಲ್ಲಿ ಇಟ್ಟುಕೊಂಡುಬಿಟ್ಟರೇ ಆಯಿತಲ್ಲ!"

ಸುರೇಂದ್ರ ದುಃಖಾಕ್ರಾಂತನಾಗಿದಾನೆ. "ತಾಯಿ! ತಾಯಿ!" ಎಂದು ಅಳುತ್ತ ಆ ಪರಮೇಶ್ವರಿಯ ಸಂಬಂಧವಾಗಿ ಏನೇನೊ ಮಾತಾಡಿಕೊಳ್ಳುತ್ತಿದಾನೆ. ಆತನ ವ್ಯಾಕುಲತೆಯನ್ನು ನೋಡಿ ಪರಮಹಂಸರೂ ಪ್ರೇಮಾಶ್ರುವನ್ನು ಸುರಿಸುತ್ತಿದಾರೆ. ಮಾಸ್ಟರ ಕಡೆಗೆ ತಿರುಗಿ ಗದ್ಗದ ಸ್ವರದಿಂದ ಹೇಳುತ್ತಿದಾರೆ: "ಎಂಥ ಭಕ್ತಿ! ಭಗವತಿಯಲ್ಲಿ ಈತನಿಗೆ ಎಷ್ಟೊಂದು ಭಕ್ತಿ!"

ಶ್ರೀರಾಮಕೃಷ್ಣರು ಸುರೇಂದ್ರನಿಗೆ: "ನಿನ್ನೆ ರಾತ್ರಿ ಸುಮಾರು ಏಳೂವರೆ ಸಮಯದಲ್ಲಿ ನಿನ್ನ ಪೂಜಾಂಗಣವನ್ನು ಭಾವದಲ್ಲಿ ನೋಡಿದೆ. ಪ್ರತಿಮೆ ಜ್ಯೋತಿರ್ಮಯವಾಗಿತ್ತು. ಇಲ್ಲಿಂದ ನಿನ್ನ ಮನೆಯವರೆಗೂ ಒಂದು ಬೆಳಕಿನ ಪ್ರವಾಹ ಹರಿದುನಿಂತಿತ್ತು."

ಸುರೇಂದ್ರ: "ಆ ಸಮಯದಲ್ಲಿ ನಾನು ಪೂಜಾಂಗಣದಲ್ಲಿ, 'ತಾಯಿ! ತಾಯಿ!' ಅಂತ ಅಳುತ್ತಿದ್ದೆ. ಹಿರಿಯ ಸೋದರರೆಲ್ಲ ಮೇಲಿನ ಅಂತಸ್ತಿಗೆ ಹೋಗಿಬಿಟ್ಟಿದ್ದರು. ಮನಸ್ಸಿಗೆ ಅನ್ನಿಸಿತು — ಭಗವತಿ ಹೇಳುತ್ತಿದಾಳೆ, 'ನಾನು ಮತ್ತೆ ಬರುತ್ತೇನೆ ಅಂತ' ಎಂಬುದಾಗಿ."

ಘಂಟೆ ಹನ್ನೊಂದು. ಪರಮಹಂಸರು ಊಟ ಮುಗಿಸಿದಾರೆ. ಮಾಸ್ಟರ್ ಅವರ ಕೈಗೆ ನೀರು ಹಾಕುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಕಡಲೆ ಬೇಳೆ ತಿಂದು ರಾಖಾಲನಿಗೆ ಅಗ್ನಿ ಮಾಂದ್ಯವಾಗಿದೆ. ಆತ ಸಾತ್ತ್ವಿಕ ಆಹಾರವನ್ನು ತೆಗೆದು ಕೊಳ್ಳೋದು ಮೇಲು. ಇದರ ಸಂಬಂಧವಾಗಿ ನೀನು ಗೀತೆಯಲ್ಲಿ ಓದಿಲ್ಲ ವೇನು? ನೀನು ಗೀತಾಪಾರಾಯಣ ಇಟ್ಟುಕೊಂಡಿಲ್ಲವೇನು?"

ಮಾಸ್ಟರ್: "ಹೌದು, ಇಟ್ಟುಕೊಂಡಿದೇನೆ. ಅದರಲ್ಲಿ ಯುಕ್ತಾ ಹಾರದ ವಿಷಯ ಇದೆ. ಸಾತ್ತ್ವಿಕ ಆಹಾರ, ರಾಜಸಿಕ ಆಹಾರ, ತಾಮಸಿಕ ಆಹಾರ; ಸಾತ್ತ್ವಿಕ ದಯೆ, ರಾಜಸಿಕ ದಯೆ, ತಾಮಸಿಕ ದಯೆ; ಸಾತ್ತ್ವಿಕ ಅಹಂ, ರಾಜಸಿಕ ಅಹಂ ಇವೇ ಮೊದಲಾದುವುಗಳ ವಿಷಯವೆಲ್ಲಾ ಅದರಲ್ಲಿ ಇವೆ."

ಶ್ರೀರಾಮಕೃಷ್ಣರು: "ನಿನ್ನ ಹತ್ತಿರ ಗೀತಾ ಪ್ರತಿ ಇದೆಯೇನು?"

ಮಾಸ್ಟರ್: "ಹೌದು, ಇದೆ."

ಶ್ರೀರಾಮಕೃಷ್ಣರು: "ಅದು ಎಲ್ಲಾ ಶಾಸ್ತ್ರಗಳ ಸಾರವನ್ನು ಒಳ ಗೊಂಡಿದೆ."

ಮಾಸ್ಟರ್: "ಅದು ಭಗವಂತನ ಸಾಕ್ಷಾತ್ಕಾರ ಪಡೆಯಲು ವಿವಿಧ ಮಾರ್ಗಗಳನ್ನು ತೋರಿಸಿಕೊಡುತ್ತದೆ. ನೀವೂ ಸಹ ಆತನನ್ನು ವಿವಿಧ ಪಥಗಳಿಂದ — ಜ್ಞಾನ, ಭಕ್ತಿ, ಕರ್ಮ, ಧ್ಯಾನ — ಮುಟ್ಟಬಹುದು ಅಂತ ಹೇಳುತ್ತಿದೀರಲ್ಲ ಹಾಗೆ."

ಶ್ರೀರಾಮಕೃಷ್ಣರು: "ಕರ್ಮಯೋಗದ ಅರ್ಥ ನಿನಗೆ ಗೊತ್ತೆ? ಸಕಲ ಕರ್ಮಗಳ ಫಲವನ್ನು ಭಗವಂತನಿಗೆ ಅರ್ಪಿಸಿಬಿಡಬೇಕು ಎಂದು."

ಮಾಸ್ಟರ್: "ಹೌದು; ಹಾಗೆಂದು ಗೀತೆಯಲ್ಲಿ ಓದಿದೇನೆ. ಅದು ಹೇಳುತ್ತದೆ, ಕರ್ಮಗಳನ್ನು ಮೂರು ವಿಧವಾಗಿ ಮಾಡಬಹುದು ಎಂಬುದಾಗಿ."

ಶ್ರೀರಾಮಕೃಷ್ಣರು: "ಯಾವ ಯಾವ ವಿಧವಾಗಿ?"

ಮಾಸ್ಟರ್: "ಮೊದಲನೆಯದು, ಬ್ರಹ್ಮಜ್ಞಾನದ ಸಲುವಾಗಿ; ಎರಡನೆಯದು, ಲೋಕಶಿಕ್ಷಣಾರ್ಥಕ್ಕಾಗಿ; ಮೂರನೆಯದು, ತನ್ನ ಸ್ವಭಾವಕ್ಕನುಗುಣವಾಗಿ."

ಪರಮಹಂಸರು ಬಾಯಿ ತೊಳೆದುಕೊಂಡು ತಾಂಬೂಲ ಹಾಕಿ ಕೊಳ್ಳುತ್ತಿದಾರೆ.

ಪರಮಹಂಸರು ಮಾಸ್ಟರೊಡನೆ ಡಾಕ್ಟರ್ ಸರ್ಕಾರರ ಸಂಬಂಧ

ವಾಗಿ ಮಾತುಕತೆಯಾಡುತ್ತಿದ್ದಾರೆ. ನಿನ್ನೆ ಪರಮಹಂಸರ ಕ್ಷೇಮಸಮಾಚಾರ ತಿಳಿಸಲು ಡಾಕ್ಟರ್ ಸರ್ಕಾರನ ಮನೆಗೆ ಮಾಸ್ಟರ್ ಹೋಗಿದ್ದ.

ಶ್ರೀರಾಮಕೃಷ್ಣರು: "ನಿನ್ನೊಡನೆ ಏನೇನು ಮಾತುಕತೆ ನಡೆಯಿತು?"

ಮಾಸ್ಟರ್: "ಡಾಕ್ಟರ ಕೊಠಡಿಯಲ್ಲಿ ಅನೇಕ ಪುಸ್ತಕಗಳಿವೆ. ನಾನು ಒಂದು ಪುಸ್ತಕ ತೆಗೆದುಕೊಂಡು ಓದುತ್ತ ಆಗಾಗ ಅದರ ಕೆಲವು ಭಾಗಗಳನ್ನು ಡಾಕ್ಟರ್ ಸರ್ಕಾರನಿಗೆ ಓದಿ ಹೇಳುತ್ತಿದ್ದೆ. ಅದರ ಗ್ರಂಥಕರ್ತ ಸರ್ ಹಂಪ್ರೆಡೇವಿ. ಆತ ಅವತಾರದ ಆವಶ್ಯಕತೆಯ ಸಂಬಂಧವಾಗಿ ಬರೆದಿದ್ದಾನೆ."

ಶ್ರೀರಾಮಕೃಷ್ಣರು: "ನಿಜವಾಗಿಯೂ! ನೀನು ಏನು ಓದಿ ಹೇಳಿದೆ?"

ಮಾಸ್ಟರ್: "ಅದರಲ್ಲಿ ಒಂದು ಕಡೆ ಹೇಳಿದೆ, ಭಗವದ್ವಾಣಿ ಮಾನವನ ಮೂಲಕ ವ್ಯಕ್ತವಾಗದ ಹೊರತು ಅದು ನಮಗೆ ಅರ್ಥವಾಗೋ ಹಾಗೇ ಇಲ್ಲ; ಅದಕ್ಕಾಗೇ ಭಗವಂತನ ಅವತಾರದ ಆವಶ್ಯಕತೆ ಅಂತ."

ಶ್ರೀರಾಮಕೃಷ್ಣರು: "ಆಹ! ಇದು ಬಹಳ ಒಳ್ಳೆ ವಿಷಯ."

ಮಾಸ್ಟರ್: "ಆತ ಉದಾಹರಣೆಗೆ ಸೂರ್ಯನನ್ನು ತೆಗೆದುಕೊಂಡಿದ್ದಾನೆ: ನಾವು ಆತನನ್ನು ನೇರವಾಗಿ ನೋಡಲಾಗೋದಿಲ್ಲ, ಆದರೆ ಆತನ ಪ್ರತಿಬಿಂಬದ ಕಡೆ ನೋಡಬಲ್ಲೆವು."

ಶ್ರೀರಾಮಕೃಷ್ಣರು: "ಬಹಳ ಒಳ್ಳೆಯದು! ಬೇರೇನಾದರು?"

ಮಾಸ್ಟರ್: "ಇನ್ನೊಂದು ಕಡೆ ಬರೆದಿದೆ, ಯಥಾರ್ಥ ಜ್ಞಾನವೇ ವಿಶ್ವಾಸ ಅಂತ."

ಶ್ರೀರಾಮಕೃಷ್ಣರು: "ಇದೂ ಬಹಳ ಒಳ್ಳೆಯ ವಿಷಯ. ವಿಶ್ವಾಸ ಹೃದಯದಲ್ಲಿ ಮೂಡಿತು ಎಂದರೆ ಎಲ್ಲಾ ದೊರೆತ ಹಾಗೇ."

ಮಾಸ್ಟರ್: "ಗ್ರಂಥಕರ್ತ ತನ್ನ ಸ್ವಪ್ನದಲ್ಲಿ ರೋಮನ್ನರ ದೇವದೇವಿಯರನ್ನು ನೋಡಿದನಂತೆ."

ಶ್ರೀರಾಮಕೃಷ್ಣರು: "ಈ ತರದ ಪುಸ್ತಕಗಳೂ ಇವೆಯೇನು? ಆತನಿಗೆ ನಿಜವಾಗಿ ಭಗವತ್ಪ್ರೇರಣೆ ಆಗಿರಲೇ ಬೇಕು. ಇನ್ನು ಬೇರೆ ಏನಾದರು ಮಾತುಕತೆಗಳು ನಡೆದವೇನು?"

ಮಾಸ್ಟರ್: "ಡಾಕ್ಟರ್ ಸರ್ಕಾರ ಇವರೇ ಮೊದಲಾದವರು ಜಗ

ತ್ತಿಗೆ ಉಪಕಾರ ಮಾಡಬೇಕು ಅಂತ ಹೇಳೋದುಂಟು. ಅದಕ್ಕಾಗಿ ನಾನು ತಾವು ತಿಳಿಸಿರೋದನ್ನು ಹೇಳಿದೆ.''

ಶ್ರೀರಾಮಕೃಷ್ಣರು ನಗುತ್ತ: ''ಏನನ್ನು?''

ಮಾಸ್ಟರ್: ''ಶಂಭುಮಲ್ಲಿಕನ ವಿಷಯವನ್ನು. ಆತ ನಿಮಗೆ ಹೇಳಿದ್ದ, 'ಇಚ್ಛೆ ಇದೆ ನನ್ನ ಹಣ ಖರ್ಚುಮಾಡಿ ಕೆಲವು ಹಾಸ್ಪಿಟಲ್, ಡಿಸ್ಪೆನ್ಸರಿ, ಸ್ಕೂಲು ಇವೇ ಮೊದಲಾದುವುಗಳನ್ನು ಕಟ್ಟಿಸಬೇಕು; ಹಾಗೆ ಮಾಡಿದರೆ ಅನೇಕರಿಗೆ ಉಪಕಾರವಾಗುತ್ತದೆ' ಅಂತ. ಅದಕ್ಕೆ ನೀವು ಉತ್ತರವಿತ್ತಿದ್ದಿರಿ, 'ಒಂದು ಪಕ್ಷ ಭಗವಂತ ನಿನಗೆ ದರ್ಶನ ಕೊಟ್ಟರೆ, ಆಗ ನೀನು ಆತನನ್ನು ಕೆಲವು ಡಿಸ್ಪೆನ್ಸರಿ, ಹಾಸ್ಪಿಟಲ್, ಸ್ಕೂಲು ಇವನ್ನು ಕಟ್ಟಿಸಿಕೊಡು ಅಂತ ಕೇಳಿಕೋತೀಯೇನು?' ಎಂದು. ಸರ್ಕಾರನಿಗೆ ನಾನು ಇನ್ನೊಂದು ವಿಷಯವನ್ನೂ ತಿಳಿಸಿಬಿಟ್ಟೆ.''

ಶ್ರೀರಾಮಕೃಷ್ಣರು: ''ಕರ್ಮಮಾಡಲು ಜನ್ಮವೆತ್ತಿರೋರ ಗುಂಪೇ ಪ್ರತ್ಯೇಕ. ಬೇರೆ ಏನು ಹೇಳಿದೆ?''

ಮಾಸ್ಟರ್: ''ಡಾಕ್ಟರಿಗೆ ಹೇಳಿದೆ, 'ಕಾಳೀಮೂರ್ತಿಯ ದರ್ಶನ ಮಾಡಿಬರೋದು ನಿನ್ನ ಉದ್ದೇಶವಾಗಿದ್ದರೆ, ರಸ್ತೆ ಪಕ್ಕದಲ್ಲಿರೋ ಭಿಕ್ಷು ಕರಿಗೆ ಭಿಕ್ಷೆ ನೀಡುವುದರಲ್ಲೇ ನಿನ್ನ ಸಮಯವೆಲ್ಲಾ ಕಳೆದುಹೋಗಿ ಬಿಟ್ಟರೆ ನಿನ್ನ ಉದ್ದೇಶ ಪೂರ್ಣವಾಗೋ ಬಗೆ ಹೇಗೆ? ಅದಕ್ಕೆ ಬದಲು ಮೊದಲು ಹೇಗೋ ಮಾಡಿ ಕಾಳಿಯ ದರ್ಶನ ಮಾಡಿಕೊಂಡುಬಿಡು. ಬಳಿಕ ಎಷ್ಟು ಹೊತ್ತು ಬೇಕಾದರೂ ಭಿಕ್ಷುಕರಿಗೆ ಭಿಕ್ಷೆ ನೀಡುತ್ತಿರಬಹುದು' ಎಂದು.''

ಶ್ರೀರಾಮಕೃಷ್ಣರು: ''ಮತ್ತೆ ಏನಾದರು?''

ಮಾಸ್ಟರ್: ''ನಿಮ್ಮ ಹತ್ತಿರಕ್ಕೆ ಯಾರು ಬರುತ್ತಾ ಇದಾರೊ ಅವ ರಲ್ಲಿ ಅನೇಕರು ಕಾಮಜಯಿಗಳು ಅಂತ ತಿಳಿಸಿದೆ. ಅದಕ್ಕೆ ಡಾಕ್ಟರ್ ಹೇಳಿದ, 'ನನಗೂ ಕಾಮ-ಗೀಮ ಏನಿಲ್ಲ' ಎಂದು. ನಾನು ಹೇಳಿದೆ: 'ನೀವು ಉಚ್ಚ ಶ್ರೇಣಿಯವರು. ನೀವು ಕಾಮಜಯಿಗಳಾಗೋದರಲ್ಲಿ ವಿಶೇಷತೆಯೇನಿಲ್ಲ. ಆದರೆ ಅವರ ಸಹವಾಸದಿಂದ ಸಾಮಾನ್ಯರೂ ಕಾಮಜಯಿಗಳಾಗಿಬಿಡುತ್ತಿದಾರಲ್ಲ, ಇದು ಎಷ್ಟು ಮಹತ್ತಾದುದು!' ಬಳಿಕ ನೀವು ಗಿರೀಶಘೋಷನಿಗೆ ತಿಳಿಸಿದ್ದುದನ್ನು ತಿಳಿಸಿದೆ.''

ಶ್ರೀರಾಮಕೃಷ್ಣರು ನಗುತ್ತ: ''ನಾನು ಏನು ಹೇಳಿದ್ದೆ?''

ಮಾಸ್ಟರ್ : “ ನೀವು ಗಿರೀಶಘೋಷನಿಗೆ ಹೇಳಿದ್ದಿರಿ, ‘ ಡಾಕ್ಟರ್ ಸರ್ಕಾರನಿಗೆ ನಿನ್ನನ್ನು ಮೀರಿಸೋಕೆ ಆಗಲಿಲ್ಲ ’ ಎಂದು — ಅವತಾರದ ಮಾತಿನ ಸಂಬಂಧವಾಗಿ. ”

ಶ್ರೀರಾಮಕೃಷ್ಣರು : “ ನೀನು ಡಾಕ್ಟರೊಡನೆ ಅವತಾರದ ಸಂಬಂಧವಾಗಿ ಮಾತುಕತೆಯಾಡು. ಯಾರು ಪರರನ್ನು ಮುಕ್ತರನ್ನಾಗಿ ಮಾಡುತ್ತಾನೊ ಆತನೇ ಅವತಾರಪುರುಷ. ಅದಕ್ಕಾಗೇ ಶಾಸ್ತ್ರಗಳು ಹೇಳುತ್ತಿರೋದು, ಹತ್ತು, ಇಪ್ಪತ್ತನಾಲ್ಕು, ಅಸಂಖ್ಯ ಅವತಾರಗಳೂ ಇವೆ ಅಂತ.”

ಮಾಸ್ಟರ್ : “ಗಿರೀಶಘೋಷನ ಕ್ಷೇಮುಸಮಾಚಾರದ ಸಂಬಂಧವಾಗಿ ಡಾಕ್ಟರು ಬಹಳ ಉತ್ಸುಕನಾಗಿದಾನೆ. ಗಿರೀಶ ಕುಡಿಯೋದನ್ನು ಬಿಟ್ಟುಬಿಟ್ಟಿದಾನೆಯೆ ಅಂತ ಆಗಾಗ ನನ್ನನ್ನು ಕೇಳುತ್ತಲೇ ಇರುತ್ತಾನೆ. ಆತ ಅವನ ಕಡೆ ಬಹಳ ತೀಕ್ಷ್ಣ ಕಣ್ಣಿಟ್ಟಿದಾನೆ. ”

ಶ್ರೀರಾಮಕೃಷ್ಣರು : “ ಈ ಸಮಾಚಾರವನ್ನು ನೀನು ಗಿರೀಶನಿಗೆ ತಿಳಿಸಿದೀಯೇನು ? ”

ಮಾಸ್ಟರ್ : “ ಹೌದು, ತಿಳಿಸಿದೇನೆ. ಕುಡಿಯೋದನ್ನು ಬಿಡೋದರ ವಿಷಯವಾಗೂ. ”

ಶ್ರೀರಾಮಕೃಷ್ಣರು : “ ಅದಕ್ಕೆ ಆತ ಏನು ಉತ್ತರ ಕೊಟ್ಟ ? ”

ಮಾಸ್ಟರ್ : “ ನೀವೆಲ್ಲರೂ ಹೀಗೆ ಹೇಳುತ್ತಿರೋದರಿಂದ, ಇದು ಪರಮಹಂಸರ ಆಜ್ಞೆಯೇ ಎಂದು ನಾನು ಭಾವಿಸಿಕೊಂಡಿದೇನೆ. ಆದರೆ ಮಾತ್ರ ನಾನು ಯಾವ ವಾಗ್ದಾನವನ್ನೂ ಮಾಡೋದಿಲ್ಲ. ”

ಶ್ರೀರಾಮಕೃಷ್ಣರು ಆನಂದದಿಂದ : “ ಕಾಳೀಪದ ಹೇಳಿದ, ತಾನು ಕುಡಿಯೋದನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟಿದೇನೆ ಅಂತ. ”

ಅಪರಾಹ್ನವಾಗಿದೆ. ಡಾಕ್ಟರ್ ಸರ್ಕಾರ ಬಂದಿದಾನೆ. ಆತನೊಡನೆ ಆತನ ಮಗ ಅಮೃತಸರ್ಕಾರ ಮತ್ತು ಬೇರೊಬ್ಬ ಹೇಮ ಎಂಬ ಯುವಕ ಬಂದಿದಾರೆ. ನರೇಂದ್ರಾದಿ ಭಕ್ತರೂ ಅಲ್ಲಿ ಕುಳಿತಿದಾರೆ.

ಪರಮಹಂಸರು ಏಕಾಂತವಾಗಿ ಅಮೃತನೊಡನೆ ಮಾತಾಡುತ್ತಿದಾರೆ. ಅವನನ್ನು ಕೇಳುತ್ತಿದಾರೆ, “ ನೀನು ಧ್ಯಾನಮಾಡೋದುಂಟೇನು ? ” ಎಂದು. ಬಳಿಕ ಆತನಿಗೆ ಹೇಳುತ್ತಿದಾರೆ : “ ಧ್ಯಾನಾವಸ್ಥೆಯಲ್ಲಿ ಏನು ಅನುಭವವಾಗುತ್ತದೆ ಎಂಬುದು ನಿನಗೆ ಗೊತ್ತೆ ? ಮನಸ್ಸು ತೈಲಧಾರದ

ಹಾಗೆ ವರ್ತಿಸುತ್ತದೆ. ಆಗ ಅದರಲ್ಲಿ ಕೇವಲ ಒಂದೇ ಒಂದು ಭಾವನೆ—ಭಗವದ್ಭಾವನೆ—ಹೊರತು ಬೇರೆ ಏನೂ ಏಳದು. ”

ಈಗ ಪರಮಹಂಸರು ಭಕ್ತರೊಡನೆ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು ಡಾಕ್ಟರಿಗೆ: “ ನಿನ್ನ ಮಗನಿಗೆ ಭಗವಂತನ ಅವತಾರದಲ್ಲಿ ವಿಶ್ವಾಸವಿಲ್ಲ. ಒಳ್ಳೆಯದೆ. ನಂಬಿಕೆ ಇಲ್ಲದಿದ್ದರೆ ತಾನೆ ಏನು ?

“ ನಿನ್ನ ಮಗ ಬಹಳ ಒಳ್ಳೆಯವ. ಹಾಗೇಕೆ ಆಗಬಾರದು ? ‘ ಬೊಂಬಾಯಿ ’ ಎಂಬ ಮಾವಿನ ಗಿಡ ಎಂದಿಗಾದರೂ ಹುಳಿ ಹಣ್ಣು ಬಿಡುವುದೇ ? ಆತನಿಗೆ ಭಗವಂತನಲ್ಲಿ ಎಂಥ ದೃಢ ವಿಶ್ವಾಸ ! ಯಾರ ಮನಸ್ಸು ಭಗವಂತನ ಅಡಿದಾವರೆಗಳಲ್ಲಿರುವುದೊ ಆತನೇ ನಿಜವಾಗಿ ಮನುಷ್ಯ. ‘ ಮಾನುಷ್ ’ ಮತ್ತು ‘ ಮಾನ್‌ಹುಷ್ ’ ಯಾರಲ್ಲಿ ‘ ಹುಷ್ ’ ಆಗಿದೆಯೊ, ಎಂದರೆ ಆತ್ಮಜಾಗೃತಿಯುಂಟಾಗಿದೆಯೊ, ಅವರಿಗೆ ಚೆನ್ನಾಗಿ ಗೊತ್ತಿದೆ—ಭಗವಂತನೊಬ್ಬನೆ ಸತ್ಯ, ಉಳಿದುದೆಲ್ಲ ಅನಿತ್ಯ ಅಂತ. ಆತನೇ ‘ ಮಾನ್ ಹುಷ್’. ನಿನ್ನ ಮಗ ಅವತಾರವನ್ನು ನಂಬದಿದ್ದರೆ ಮುಳುಗಿಹೋಗೋದೇನು ? ದೊಡ್ಡ ಮನುಷ್ಯ ಮತ್ತು ಆತನ ತೋಟತುಡಿಕೆಗಳ ಹಾಗೆ, ಭಗವಂತನೊಬ್ಬನಿದಾನೆ — ಈ ಜೀವಜಗತ್ತೆಲ್ಲವೂ ಆತನ ಐಶ್ವರ್ಯ ಎಂಬುದನ್ನು ಆತ ಒಪ್ಪಿಕೊಂಡುಬಿಟ್ಟರೇ ಯಥೇಷ್ಟ.

“ ಕೆಲವರು ಹೇಳುತ್ತಾರೆ ಅವತಾರಗಳು ಹತ್ತು ಎಂದು; ಇನ್ನು ಕೆಲವರು ಇಪ್ಪತ್ತನಾಲ್ಕು ಎಂದು; ಮತ್ತೆ ಕೆಲವರು ಅಸಂಖ್ಯ ಎಂದು. ಎಲ್ಲಿ ಭಗವಂತ ವಿಶೇಷವಾಗಿ ವ್ಯಕ್ತವಾಗಿದಾನೊ ಅಲ್ಲಿ ಆತ ಅವತರಿಸಿದಾನೆ ಎಂದು ಅರಿತುಕೋಬೇಕು. ನನ್ನ ಅಭಿಮತವೂ ಅದೇನೆ.

“ ಕಣ್ಣಿಗೆ ಕಾಣೋದೆಲ್ಲವೂ ಆತನೇ ಆಗಿದಾನೆ ಎಂಬುದು ಬೇರೆ ಕೆಲವರ ದೃಷ್ಟಿ. ಅದು ಬೀಜ, ತಿರುಳು, ಓಟೆ ಇವು ಮೂರೂ ಕೂಡಿ ಬೇಲದ ಹಣ್ಣು ಆಗಿರೋ ಹಾಗೆ. ನಿತ್ಯ ಯಾರದೊ, ಆತನದೇ ಲೀಲೆ; ಲೀಲೆ ಯಾರದೊ, ಆತನದೇ ನಿತ್ಯ. ನಿತ್ಯವನ್ನು ಗಣನೆಗೆ ತೆಗೆದುಕೊಳ್ಳದೆ ಲೀಲೆಯನ್ನು ಅರಿತುಕೊಳ್ಳಲಾಗೋದಿಲ್ಲ. ಲೀಲೆ ಎಂಬುದು ಇರುವುದರಿಂದಲೇ ಸ್ವಲ್ಪ ಸ್ವಲ್ಪವಾಗಿ ಅದನ್ನು ದಾಟಿ ನಿತ್ಯವನ್ನು ಮುಟ್ಟಬಹುದು.

“ ‘ ಅಹಂ’ ಬುದ್ಧಿ ಇರೋವರೆಗೆ, ಲೀಲೆಯನ್ನು ದಾಟಿಹೋಗೋ ಹಾಗೇ ಇಲ್ಲ. ‘ ನೇತಿ, ನೇತಿ ’ ಮಾರ್ಗದಿಂದ ಲೀಲೆಯನ್ನು ತ್ಯಜಿಸಿ ಧ್ಯಾನ

ಯೋಗದ ಮೂಲಕ ನಿತ್ಯವನ್ನು ಮುಟ್ಟಬಹುದು; ಆದರೆ ಯಾವುದನ್ನೂ ನಿರಾಕರಿಸಲಾಗೋದಿಲ್ಲ. ಉದಾಹರಣೆಗೆ ಬೇಲದ ಹಣ್ಣು."

ಡಾಕ್ಟರ್: "ಖಂಡಿತ ನಿಜ."

ಶ್ರೀರಾಮಕೃಷ್ಣರು: "ಕಚ್ ಎಂಬೋನಿಗೆ ನಿರ್ವಿಕಲ್ಪ ಸಮಾಧಿ ಉಂಟಾಗಿತ್ತು. ಆತನ ಮನಸ್ಸು ಮತ್ತೆ ಲೀಲೆಯ ಅವಸ್ಥೆಗೆ ಇಳಿದು ಬರುತ್ತಿದ್ದಾಗ ಒಬ್ಬ ಕೇಳಿದ, 'ಈಗ ನಿನಗೇನು ಕಾಣಿಸುತ್ತಿದೆ?' ಎಂದು. ಆಗ ಆತ ಹೇಳಿದ, 'ಈ ಜಗತ್ತಾದ ಜಗತ್ತೆಲ್ಲವೂ ಆತನಲ್ಲಿ ಊರಿ ಹೋಗಿರುವಂತೆ ಕಾಣುತ್ತಿದೆ. ಆತನೇ ಎಲ್ಲದರಲ್ಲಿಯೂ ತುಂಬಿತುಳುಕಾಡುತ್ತಾ ಇದಾನೆ. ಕಣ್ಣಿಗೆ ಬೀಳುತ್ತಿರುವುದೆಲ್ಲವೂ ಆತನೇ ಆಗಿದಾನೆ. ಇವುಗಳಲ್ಲಿ ಯಾವುದನ್ನು ಸ್ವೀಕರಿಸೋದು ಯಾವುದನ್ನು ಬಿಡೋದು ಎಂಬುದು ನನಗೆ ಗೊತ್ತಾಗುತ್ತಿಲ್ಲ' ಎಂದು.

"ನನ್ನ ಅಭಿಪ್ರಾಯವೇನೆಂದರೆ, ನಿತ್ಯ ಮತ್ತು ಲೀಲೆ ಇವೆರಡರ ಸಾಕ್ಷಾತ್ಕಾರವನ್ನು ಪಡೆದು, ಬಳಿಕ ಈ ಜಗತ್ತಿನಲ್ಲಿ ದಾಸ್ಯಭಾವದಿಂದ ಇರಬೇಕು ಎಂಬುದು. ಹನುಮಂತ ಸಾಕಾರ ನಿರಾಕಾರ ಎರಡರ ಸಾಕ್ಷಾತ್ಕಾರವನ್ನೂ ಪಡೆದು ದಾಸ್ಯಭಾವದಿಂದ — ಭಕ್ತನ ಭಾವದಿಂದ ಇದ್ದುಕೊಂಡಿದ್ದ."

ಮಾಸ್ಟರ್ ತನಗೆ ತಾನೇ: "ನಿತ್ಯ ಲೀಲೆ ಎರಡನ್ನೂ ಸ್ವೀಕರಿಸಬೇಕು! ವೇದಾಂತ ಜರ್ಮನಿಯಲ್ಲಿ ಕಾಲಿಟ್ಟನಂತರ ಕೆಲಕೆಲ ಐರೋಪ್ಯ ತತ್ತ್ವಶಾಸ್ತ್ರಜ್ಞರೂ ಈ ರೀತಿಯಾಗೇ ಭಾವಿಸುತ್ತಿದಾರೆ. ಆದರೆ ಪರಮಹಂಸರು ಹೇಳುತ್ತಿದಾರೆ, ಎಲ್ಲದರ — ಎಂದರೆ ಕಾಮಕಾಂಚನದ — ತ್ಯಾಗ ಮಾಡದ ಹೊರತು ನಿತ್ಯದ ಮತ್ತು ಲೀಲೆಯ ಸಾಕ್ಷಾತ್ಕಾರ ದೊರೆಯೋದಿಲ್ಲ ಅಂತ. ಎಂದರೆ ನಿಜವಾದ ತ್ಯಾಗಿಯಾಗಬೇಕು; ಸಂಪೂರ್ಣ ಅನಾಸಕ್ತನಾಗಬೇಕು. ಇದರಲ್ಲೇನೆ ಪರಮಹಂಸರಿಗು ಮತ್ತು ಹೆಗಲ್ಲನೇ ಮೊದಲಾದ ಐರೋಪ್ಯ ತತ್ತ್ವಶಾಸ್ತ್ರಜ್ಞರಿಗು ಇರೋ ಅಜಗಜಾಂತರ ತಾರತಮ್ಯ."

ಡಾಕ್ಟರ್ ಸರ್ಕಾರನ ಅಭಿಪ್ರಾಯ, ಭಗವಂತ ನಮ್ಮನ್ನು ಸೃಷ್ಟಿಸಿದಾನೆ; ಪ್ರತಿಯೊಂದು ಆತ್ಮವೂ ಅನಂತ ಉನ್ನತಿಯನ್ನು ಹೊಂದುತ್ತದೆ ಎಂಬುದಾಗಿ. ಒಬ್ಬ ಇನ್ನೊಬ್ಬನಿಗಿಂತ ದೊಡ್ಡವ ಎಂಬುದನ್ನು ಆತ ನಂಬುತ್ತಿಲ್ಲ. ಇದಕ್ಕಾಗೇ ಆತನಿಗೆ ಅವತಾರದಲ್ಲಿ ನಂಬಿಕೆ ಇಲ್ಲ.

ಡಾಕ್ಟರ್: "ನನಗೆ ಅನಂತ ಉನ್ನತಿಯಲ್ಲಿ ನಂಬಿಕೆ. ಅದು ಹಾಗಿಲ್ಲದಿದ್ದರೆ, ಐದಾರು ವರ್ಷದ ಈ ಜಗತ್ತಿನ ಬಾಳುವೆ ಯಾವುದಕ್ಕೆ ಬಂದದ್ದು? ಅದಕ್ಕೆ ಬದಲು ಹಗ್ಗದಿಂದ ನೇಣುಹಾಕಿಕೊಂಡುಬಿಡುತ್ತೇನೆ.

"ಅವತಾರವೆ! ಏನದು? ಗೊಣ್ಣೆ-ಸುರಕ ಮನುಷ್ಯನ ಕಾಲಿಗೆ ಹೋಗಿ ಬೀಳೋದು! ಆದರೆ ಭಗವಂತನ ಜ್ಯೋತಿ ಮನುಷ್ಯನಲ್ಲಿ ವ್ಯಕ್ತ ವಾಗುತ್ತಾ ಇದೆ ಎಂದು ಹೇಳಿದರೆ, ಅದನ್ನು ನಾನು ಒಪ್ಪುತ್ತೇನೆ."

ಗಿರೀಶ ನಗುತ್ತ: "ಆದರೆ, ನೀವು ಭಗವಂತನ ಬೆಳಕನ್ನು ನೋಡಿಲ್ಲ ವಲ್ಲ."

ಡಾಕ್ಟರ್ ಸರಿಯಾದ ಉತ್ತರಕ್ಕಾಗಿ ಬಹಳವಾಗಿ ಯೋಚಿಸು ತ್ತಿದಾನೆ. ಹತ್ತಿರವೇ ಕುಳಿತಿದ್ದ ಆತನ ಸ್ನೇಹಿತ ಆತನ ಕಿವಿಯಲ್ಲಿ ಏನನ್ನೊ ಹೇಳಿದ.

ಡಾಕ್ಟರ್: "ನೀವೂ ಪ್ರತಿಬಿಂಬವನ್ನಲ್ಲದೆ ಬೇರೆ ಏನನ್ನೂ ನೋಡಿಲ್ಲ ವಲ್ಲ."

ಗಿರೀಶ: "ನಾನು ಪ್ರತ್ಯಕ್ಷವಾಗಿ ನೋಡುತ್ತಿದೇನೆ! ಪ್ರತ್ಯಕ್ಷವಾಗಿ ಬೆಳಕನ್ನು ನೋಡುತ್ತಿದೇನೆ! ಶ್ರೀಕೃಷ್ಣ ಅವತಾರಪುರುಷ ಎಂಬುದನ್ನು ಪ್ರಮಾಣೀಕರಿಸುತ್ತೇನೆ— ಆಗದಿದ್ದರೆ ನನ್ನ ನಾಲಗೆ ಕತ್ತರಿಸಿಕೊಂಡುಬಿಡು ತ್ತೇನೆ!"

ಶ್ರೀರಾಮಕೃಷ್ಣರು: "ಈ ಮಾತುಕತೆಗಳೆಲ್ಲ ಯಾವ ಪ್ರಯೋಜ ನಕ್ಕೂ ಬಾರದವು. ಇವೆಲ್ಲ ವಿಷಮಶೀತ ಜ್ವರದ ರೋಗಿಯ ವಿಕಾರಗಳು. ಆತ ಹೇಳೋದುಂಟು, 'ಇಡೀ ಕೆರೆಯ ನೀರನ್ನೆಲ್ಲ ಕುಡಿದುಬಿಡುತ್ತೇನೆ. ಇಡೀ ತಪ್ಪಲೆಯ ಅನ್ನವನ್ನೆಲ್ಲ ತಿಂದುಬಿಡುತ್ತೇನೆ' ಎಂದು. ಅದಕ್ಕೆ ಡಾಕ್ಟರ್ ಹೇಳೋದುಂಟು, 'ಆಗಲಿ, ಆಗಲಿ, ತಿನ್ನೋವಂತೆ, ಆರೋಗ್ಯ ಮುಖನಾದಾಗ ನೀನು ಕೇಳೋದನ್ನೆಲ್ಲ ಕೊಡುತ್ತೇವೆ' ಅಂತ.

"ಬೆಣ್ಣೆ ಕಾಯಿಸಿದಾಗ ಅದು 'ಕಲಕಲ' ಅಂತ ಶಬ್ದ ಮಾಡು ತ್ತಿರುತ್ತದೆ. ಅದು ತುಪ್ಪವಾಯಿತು ಎಂದೊಡನೆಯೇ ಶಬ್ದ-ಗಿಬ್ದ ಎಲ್ಲ ಅಡಗಿಹೋಗುತ್ತದೆ. ಯಾರ ಮನಸ್ಸು ಯಾವ ರೀತಿಯದೊ ಅದಕ್ಕನು ಗುಣವಾಗಿ ಅವರು ಭಗವಂತನನ್ನು ಭಾವಿಸುತ್ತಾರೆ. ಶ್ರೀಮಂತರ ಮನೆ ಗಳಲ್ಲಿ ರಾಣಿ, ರಾಜ ಇವರ ಪಟ ಇಟ್ಟಿರೋದನ್ನು ನೋಡಿದೇನೆ. ಆದರೆ

ಭಕ್ತರು ತಮ್ಮ ತಮ್ಮ ಮನೆಗಳಲ್ಲಿ ದೇವದೇವಿಯರ ಪಟ ಇಟ್ಟುಕೊಂಡಿರುತ್ತಾರೆ.

"ಲಕ್ಷ್ಮಣ ರಾಮನನ್ನು ಕೇಳಿದ: 'ಹೇ ರಾಮ, ಏನಿದು, ವಸಿಷ್ಠ ದೇವನಂಥ ಮಹಾ ಋಷಿಗೂ ಪುತ್ರಶೋಕವೇ!' ಅದಕ್ಕೆ ರಾಮ ಉತ್ತರವಿತ್ತ: 'ಸೋದರ, ಯಾರಲ್ಲಿ ಜ್ಞಾನವಿರುತ್ತದೊ, ಅವರಲ್ಲಿ ಅಜ್ಞಾನವೂ ಇರುತ್ತದೆ. ಯಾರಿಗೆ ಬೆಳಕಿನ ಬೋಧೆ ಇರುವುದೊ, ಅವರಿಗೆ ಕತ್ತಲೆಯ ಬೋಧೆಯೂ ಇರುತ್ತದೆ. ಆದ್ದರಿಂದ ನೀನು ಜ್ಞಾನಾಜ್ಞಾನಗಳಿಗತೀತನಾಗು.' ಭಗವಂತನನ್ನು ವಿಶೇಷರೂಪದಿಂದ ಅರಿತುಕೊಂಡಾಗ ಆ ಅವಸ್ಥೆ ಉಂಟಾಗುತ್ತದೆ. ಆಗ ದೊರೆಯೋ ಜ್ಞಾನಕ್ಕೆ ವಿಜ್ಞಾನ ಎಂದು ಹೆಸರು.

"ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಇನ್ನೊಂದು ಮುಳ್ಳನ್ನು ಹುಡುಕಿತಂದು ಮೊದಲನೆಯದನ್ನು ಎರಡನೆಯದರಿಂದ ತೆಗೆದುಹಾಕಿ, ಬಳಿಕ ಎರಡನ್ನೂ ಬಿಸಾಡಿ ಬಿಡುತ್ತೇವೆ. ಅದೇ ರೀತಿಯಾಗಿ ಜ್ಞಾನವೆಂಬ ಮುಳ್ಳಿನಿಂದ ಅಜ್ಞಾನವೆಂಬ ಮುಳ್ಳನ್ನು ತೆಗೆದುಹಾಕಿ, ಬಳಿಕ ಎರಡನ್ನೂ ಬಿಸಾಡಿಬಿಡಬೇಕು.

"ಪೂರ್ಣ ಜ್ಞಾನಕ್ಕೆ ಚಿಹ್ನೆಗಳಿವೆ. ಅಲ್ಲಿ ವಿಚಾರಮಾಡೋದು ನಿಂತುಹೋಗಿಬಿಡುತ್ತದೆ. ನಾನು ಈಗತಾನೆ ಹೇಳಿದಹಾಗೆ, ಬೆಣ್ಣೆ ತುಪ್ಪವಾಗದ ವರೆಗೆ ಮಾತ್ರ ಅದು 'ಕಲಕಲ' ಎಂದು ಶಬ್ದಮಾಡುತ್ತಿರುತ್ತದೆ."

ಡಾಕ್ಟರ್: "ಪೂರ್ಣಜ್ಞಾನ ಅಚ್ಚಳಿಯದೆ ಉಳಿದುಕೊಳ್ಳುತ್ತದೆಯೆ? ಎಲ್ಲವೂ ಭಗವಂತನೆ! ಹಾಗಾದರೆ ನೀವೇಕೆ ಪರಮಹಂಸಗಿರಿ ಕೆಲಸ ಮಾಡುತ್ತಿದೀರಿ? ಇವರೆಲ್ಲಾ ಬಂದು ನಿಮ್ಮ ಸೇವೆಮಾಡೋದು ತಾನೆ ಏಕೆ? ನೀವು ಸುಮ್ಮನೆ ಗಪ್‌ಚಿಪ್ಪಾಗಿ ಇದ್ದುಬಿಡಬಾರದೆ?"

ಶ್ರೀರಾಮಕೃಷ್ಣರು ನಗುತ್ತ: "ನೀರು ಸುಮ್ಮನೆ ನಿಂತಿದ್ದರೂ ನೀರೆ, ಅಲ್ಲೋಲಕಲ್ಲೋಲವಾಗಿದ್ದರೂ ನೀರೆ, ಅಲೆಯಾಗಿ ಏಳುತ್ತಿದ್ದರೂ ನೀರೆ.

"ನಿನಗೊಂದು ವಿಷಯ ತಿಳಿಸಬೇಕಾಗಿದೆ. ಮಾವಟಿಗ-ಭಗವಂತನ ಮಾತನ್ನು ನಾನು ಏಕೆ ಕೇಳಕೂಡದು? ಗುರು ತನ್ನ ಶಿಷ್ಯನಿಗೆ ಬೋಧೆ ಮಾಡಿದ ಎಲ್ಲವೂ ಭಗವಂತನೇ ಅಂತ. ಮದಿಸಿದ ಆನೆಯೊಂದು

ಎದುರಿಗೆ ಬರುತ್ತಿತ್ತು. ಶಿಷ್ಯ ಗುರುವಾಕ್ಯದಲ್ಲಿ ವಿಶ್ವಾಸವಿಟ್ಟು ಅಲ್ಲಿಂದ ಸರಿದುಹೋಗಲಿಲ್ಲ. ಏಕೆಂದರೆ ಆನೆಯೂ ಭಗವಂತನೆ. ಆದರೆ ಮಾವಟಿಗ ಗಟ್ಟಿಯಾಗಿ ಕೂಗಿಹೇಳಿದ, 'ಓಡಿಹೋಗಿ! ಓಡಿಹೋಗಿ!' ಎಂದು. ಆದರೆ ಶಿಷ್ಯ ಆ ಸ್ಥಳವನ್ನು ಬಿಟ್ಟು ಕದಲಲೇ ಇಲ್ಲ. ಆನೆ ಬಂದು ಆತನನ್ನು ಹಿಡಿದೆತ್ತಿ 'ರೊಂಯ್' ಅಂತ ಒಂದು ಕಡೆಗೆ ಬಿಸಾಡಿ ಹೊರಟುಹೋಯಿತು. ಶಿಷ್ಯ ಇನ್ನೂ ಸತ್ತಿರಲಿಲ್ಲ; ಮುಖಕ್ಕೆ ನೀರು ಚಿಮುಕಿಸುತ್ತ ಚಿಮುಕಿಸುತ್ತ ಇದ್ದಹಾಗೆ ಪ್ರಜ್ಞೆ ಬಂತು. ಬಳಿಕ ಆತನನ್ನು ಏಕೆ ನೀನು ಅಲ್ಲಿಂದ ಸರಿದುಹೋಗಲಿಲ್ಲ ಎಂದು ಪ್ರಶ್ನಿಸಿದಾಗ ಆತ ಹೇಳಿದ: 'ಏಕೆ ಸರಿದುಹೋಗಬೇಕಾಗಿತ್ತು? ಗುರು ಹೇಳಿದ್ದರು, "ಎಲ್ಲವೂ ಭಗವಂತ" ಅಂತ.' ಆಗ ಗುರು ಹೇಳಿದ: 'ಅದೇನೊ ನಿಜ. ಆದರೆ ಮಾವಟಿಗ-ಭಗವಂತನ ಮಾತಿಗೆ ಏಕೆ ನೀನು ಬೆಲೆ ಕೊಡಲಿಲ್ಲ?'

"ಭಗವಂತನೇ ಶುದ್ಧ-ಮನಸ್ಸು, ಶುದ್ಧ-ಬುದ್ಧಿಯಾಗಿ ನಮ್ಮ ಅಂತರ್ಯದಲ್ಲಿ ವಾಸಿಸುತ್ತಿದಾನೆ. ನಾನು ಯಂತ್ರ, ಆತ ಯಂತ್ರಿ; ನಾನು ಗೃಹ, ಆತ ಗೃಹಿ. ಆತನೇ ಮಾವಟಿಗ-ನಾರಾಯಣ."

ಡಾಕ್ಟರ್: "ನಿಮಗೊಂದು ಪ್ರಶ್ನೆ ಹಾಕಬೇಕೆಂದಿದ್ದೇನೆ. ಅದು ಹಾಗಿದ್ದರೆ, ನಿಮಗೆ ಬಂದಿರೋ ರೋಗವನ್ನು ಗುಣಪಡಿಸು ಎಂಬುದಾಗಿ ಏಕೆ ಕೇಳಿಕೊಳ್ಳುತ್ತಾ ಇದೀರಿ?"

ಶ್ರೀರಾಮಕೃಷ್ಣರು: "ಎಲ್ಲಿಯವರೆಗೆ 'ಅಹಂ' ಎಂಬ ಘಟಜ್ಞಾನವಿರುವುದೊ ಅಲ್ಲಿಯವರೆಗೆ ಈ ರೀತಿಯಾಗಿ ವ್ಯವಹರಿಸಬೇಕಾಗುತ್ತದೆ. ಸಕಲ ದಿಕ್ಕುಗಳನ್ನು ಆವರಿಸಿಕೊಂಡಿರೋ ಒಂದು ಮಹಾ ಸಮುದ್ರವಿದೆ, ಅದರೊಳಗೆ ಒಂದು ಘಟ ಮುಳುಗಿಕೊಂಡಿದೆ ಅಂತ ಭಾವಿಸಿಕೊ. ನೀರು ಆ ಘಟದ ಒಳಗೂ ಇದೆ ಹೊರಗೂ ಇದೆ; ಆದರೆ ಆ ಘಟವನ್ನು ಒಡೆದು ಹಾಕದ ಹೊರತು ಅವೆರಡು ನೀರೂ ಒಂದಾಗಲಾರವು. ಆತನೇ ಈ 'ಅಹಂ' ಎಂಬ ಘಟವನ್ನು ಇಟ್ಟಿದಾನೆ."

ಡಾಕ್ಟರ್: "ಈ 'ಅಹಂ'-'ಗಿಹಂ' ಅಂತ ಏನೇನೊ ಹೇಳುತ್ತಿದೀರಲ್ಲ ಇವೆಲ್ಲ ಏನು? ಇವುಗಳ ಅರ್ಥ ಏನು ಎಂಬುದನ್ನು ನೀವು ನನಗೆ ತಿಳಿಸಬೇಕಾಗಿದೆ. ಏನು ಆತ ನಮ್ಮ ಮೇಲೆ ಮಂಕುಬೂದಿ ಎರಚುತ್ತಿದಾನೇನು?"

ಗಿರೀಶ: "ಆತ ಹಾಗೆ ಮಾಡುತ್ತಿಲ್ಲ ಅಂತ ನೀವು ಹೇಗೆ ಅರಿತಿರಿ?"

ಶ್ರೀರಾಮಕೃಷ್ಣರು ನಗುತ್ತ: "ಈ 'ಅಹಂ' ಎಂಬುದನ್ನು ಆತನೇ ನಮ್ಮಲ್ಲಿ ಇಟ್ಟಿದಾನೆ. ಇದೆಲ್ಲಾ ಆತನ ಕ್ರೀಡೆ — ಆತನ ಲೀಲೆ. ಒಬ್ಬ ದೊರೆಗೆ ನಾಲ್ಕು ಮಕ್ಕಳು ಎಂದು ಇಟ್ಕೊ. ಎಲ್ಲರೂ ರಾಜನ ಮಕ್ಕಳೇ ಆಗಿದ್ದರೂ ಆಟದ ಸಮಯದಲ್ಲಿ ಒಬ್ಬ ಹುಡುಗ ಮಂತ್ರಿಯ ಪಾರ್ಟನ್ನು, ಇನ್ನೊಬ್ಬ ದಳವಾಯಿಯ ಪಾರ್ಟನ್ನು ಉಳಿದವರು ಇವೇ ಮೊದಲಾದ ಪಾರ್ಟನ್ನು ತೆಗೆದುಕೊಳ್ಳುತ್ತಾರೆ. ನೋಡಿ, ರಾಜನ ಮಗನಾಗಿದ್ದರೂ ದಳವಾಯಿ ಪಾರ್ಟು ಆಡೋದನ್ನ!

(ಡಾಕ್ಟರಿಗೆ) "ಕೇಳಿಲ್ಲಿ. ನಿನಗೆ ಆತ್ಮಸಾಕ್ಷಾತ್ಕಾರವಾದಾಗ ನೀನು ಇವನ್ನೆಲ್ಲ ಒಪ್ಪಬೇಕಾಗುತ್ತದೆ. ಆತನ ದರ್ಶನ ದೊರೆಯಿತು ಎಂದರೆ ಸಕಲ ಸಂಶಯಗಳೂ ನಿವೃತ್ತಿಯಾಗುತ್ತವೆ."

ಡಾಕ್ಟರ್: "ಎಂದಿಗಾದರು ಎಲ್ಲಾ ಸಂದೇಹಗಳೂ ನಿವೃತ್ತಿಯಾಗಿ ಹೋಗೋದುಂಟೆ?"

ಶ್ರೀರಾಮಕೃಷ್ಣರು: "ನಾನು ಇದುವರೆಗೆ ಹೇಳಿರೋದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸು. ಬಳಿಕ ಇದಕ್ಕಿಂತಲೂ ಹೆಚ್ಚಾಗಿ ತಿಳಿದು ಕೊಳ್ಳಬೇಕು ಎಂದು ಇಚ್ಛೆಯಾದರೆ ಏಕಾಂತದಲ್ಲಿ ಆತನಿಗೆ ಪ್ರಾರ್ಥನೆ ಮಾಡು. ಏಕೆ ಹೀಗೆಲ್ಲ ವ್ಯವಸ್ಥೆ ಮಾಡಿದೀಯೆ ಅಂತ ನೀನೇ ಆತನನ್ನು ಪ್ರಶ್ನಿಸಿ ಕೇಳು.

"ಮನೆ ಹುಡುಗ ಭಿಕ್ಷುಕನಿಗೆ ಒಂದು ಹಿಡಿ ಅಕ್ಕಿಯನ್ನೇನೊ ಹಾಕ ಬಲ್ಲ. ರೈಲ್ವೆ ಛಾರ್ಜು ಕೊಡಬೇಕಾಗಿ ಬಂತು ಅಂದರೆ ಆತ ಮನೆ ಯಜಮಾನನಿಗೆ ತಿಳಿಸಬೇಕಾಗುತ್ತದೆ."

ಡಾಕ್ಟರ್ ಸದ್ದಿಲ್ಲದೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ನೀನು ವಿಚಾರಪ್ರೇಮಿ. ಅದು ಒಳ್ಳೆಯದೆ. ಆಗಲಿ, ಸ್ವಲ್ಪ ಹೊತ್ತು ವಿಚಾರದಲ್ಲಿ ತೊಡಗೋಣ. ಇಲ್ಲಿ ಕೇಳು. ಜ್ಞಾನಿಗಳ ದೃಷ್ಟಿಯಿಂದ ಅವತಾರ-ಗಿವತಾರ ಎಂಬುದು ಏನೂ ಇಲ್ಲ. ಶ್ರೀಕೃಷ್ಣ ಅರ್ಜುನನಿಗೆ ಹೇಳಿದ: 'ನೀನು ನನ್ನನ್ನು ಭಗವಂತನ ಅವತಾರ ಅಂತ ಕರೆಯುತ್ತಿದೀಯೆ. ನಿನಗೊಂದು ದೃಶ್ಯ ತೋರಿಸುತ್ತೇನೆ ಬಾ ನೋಡುವೆಯಂತೆ.' ಅರ್ಜುನ ಆತನ ಹಿಂದೆಯೇ ಹೋದ. ಸ್ವಲ್ಪ ದೂರ ಮುಂದುವರಿದನಂತರ ಶ್ರೀಕೃಷ್ಣ ಅರ್ಜುನನನ್ನು ಕೇಳಿದ:

'ಅಗೋ, ಅಲ್ಲಿ ನಿನಗೇನು ಕಾಣುತ್ತಿದೆ?' ಅರ್ಜುನ ಹೇಳಿದ: 'ಒಂದು ದೊಡ್ಡ ಮರ ಕಾಣುತ್ತಿದೆ; ಅದರಲ್ಲಿ ನೇರಳೆ ಹಣ್ಣುಗಳು ಗೊಂಚಲು ಗೊಂಚಲಾಗಿ ನೇತಾಡುತ್ತಿವೆ.' ಶ್ರೀಕೃಷ್ಣ ಹೇಳಿದ: 'ಅವು ನೇರಳೆ ಹಣ್ಣುಗಳಲ್ಲ. ಹತ್ತಿರ ಹೋಗಿನೋಡು.' ಅರ್ಜುನ ಹತ್ತಿರ ಹೋಗಿ ನೋಡುತ್ತಾನೆ, ಅವೆಲ್ಲ ಕೇವಲ ಶ್ರೀಕೃಷ್ಣರ ಗೊಂಚಲು ಗಳು. ಆಗ ಶ್ರೀಕೃಷ್ಣ ಹೇಳಿದ: 'ಈಗ ನೋಡಿದೆಯಾ, ಅಲ್ಲಿ ನನ್ನಂಥ ಶ್ರೀಕೃಷ್ಣರು ಎಷ್ಟೊಂದು ಜನ ಇದಾರೆ ಎಂಬುದನ್ನು?'

"ಕಬೀರ ಶ್ರೀಕೃಷ್ಣನ ಸಂಬಂಧವಾಗಿ ಹೇಳಿದಾನೆ, 'ಆತ ಕಪಿಯ ಹಾಗೆ ಗೋಪಿಯರ ಕೈತಾಳಕ್ಕನುಗುಣವಾಗಿ ಕುಣಿದ!' ಎಂದು.

"ಭಗವಂತನ ಕಡೆಗೆ ಮುಂದುವರಿದಂತೆಲ್ಲ ಆತನ ಉಪಾಧಿಗಳೂ ಕಡಮೆ ಕಡಮೆಯಾಗುತ್ತಿರೋದು ನಮ್ಮ ಕಣ್ಣಿಗೆ ಕಾಣಬರುತ್ತದೆ. ಒಬ್ಬ ಭಕ್ತನಿಗೆ ಮೊಟ್ಟಮೊದಲು ಭಗವಂತನ ದರ್ಶನ ದೊರೆತಾಗ ಆತನಿಗೆ ಹತ್ತು ಭುಜಗಳಿರುವಂತೆ ದರ್ಶನವಾಯಿತು. ಇನ್ನು ಸ್ವಲ್ಪ ಹತ್ತಿರಕ್ಕೆ ಹೋಗಿ ನೋಡುತ್ತಾನೆ, ಆರೇ ಭುಜ. ಇನ್ನೂ ಹತ್ತಿರಕ್ಕೆ ಹೋಗಿ ನೋಡುತ್ತಾನೆ ಆತ ಎರಡು ಭುಜದ ಗೋಪಾಲಮೂರ್ತಿಯಂತೆ ಕಾಣುತ್ತಿದಾನೆ. ಹತ್ತಿರ ಹತ್ತಿರಕ್ಕೆ ಹೋದ ಹಾಗೆಲ್ಲ ಆತನ ಐಶ್ವರ್ಯಗಳೂ ಕಡಮೆ ಕಡಮೆಯಾಗಿ ಕಾಣಿಸಿಕೊಳ್ಳುತ್ತಿವೆ. ಮತ್ತೂ ಹತ್ತಿರಕ್ಕೆ ಹೋಗಿ ನೋಡಿದಾಗ ಕೇವಲ ನಿರುಪಾಧಿಕ ಜ್ಯೋತಿಯ ದರ್ಶನ ದೊರೆಯುತ್ತದೆ.

"ಸ್ವಲ್ಪ ವೇದಾಂತವಿಚಾರವನ್ನು ಕೇಳು. ಒಬ್ಬ ತನ್ನ ವ್ಯಾಜಿಕ್ಕನ್ನು ತೋರಿಸಲು ದೊರೆಯನ್ನು ಸಮೀಪಿಸಿದ. ಆತ ಒಂದು ಕಡೆಗೆ ಸ್ವಲ್ಪ ಸರಿದೊಡನೆಯೆ ಒಬ್ಬ ಸವಾರ ಕುದುರೆಯ ಮೇಲೆ ಕುಳಿತು ತನ್ನನ್ನು ಸಮೀಪಿಸುತ್ತಿರುವಂತೆ ದೊರೆಯ ಕಣ್ಣಿಗೆ ಕಾಣಿಸಿಕೊಂಡಿತು. ಸವಾರ ಬಹಳ ಸೊಗಸಾದ ವಸ್ತ್ರಾಭರಣಗಳನ್ನು ಹಾಕಿಕೊಂಡಿದ್ದ ಮತ್ತು ಕೈಯಲ್ಲಿ ವಿವಿಧ ಅಸ್ತ್ರಶಸ್ತ್ರಗಳನ್ನು ಹಿಡಿದುಕೊಂಡಿದ್ದ. ರಾಜನ ಇಡೀ ಸಭಿಕರೆಲ್ಲ ಮತ್ತು ರಾಜ ವಿಚಾರದಲ್ಲಿ ತೊಡಗಿದಾರೆ, ತಮ್ಮೆದುರು ಕಾಣಿಸಿ ಕೊಳ್ಳುತ್ತಿರೋ ದೃಶ್ಯದಲ್ಲಿ ಸತ್ಯವಾದ್ದು ಯಾವುದು ಎಂಬುದರ ಸಂಬಂಧ ವಾಗಿ. ಕುದುರೆಯಂತು ಸತ್ಯವೆಂದು ಕಾಣಬರಲಿಲ್ಲ. ಹಾಗೆಯೇ ಆತನ ವಸ್ತ್ರಾಭರಣಗಳೂ ಮತ್ತು ಅಸ್ತ್ರಶಸ್ತ್ರಗಳೂ ಸತ್ಯವೆಂದು ಕಂಡುಬರಲಿಲ್ಲ. ಕೊನೆಗೆ ಸವಾರನೊಬ್ಬನೆ ತಮ್ಮೆದುರು ನಿಂತಿರೋದು ಅವರ ಕಣ್ಣಿಗೆ ಬಿತ್ತು.

ಇದರ ಇಂಗಿತ ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಅಂತ. ವಿಚಾರ ಮಾಡಿತು ಅಂದರೆ ಕೊನೆಗೆ ಏನೂ ಉಳಿಯದು."

ಡಾಕ್ಟರ್: "ಇದಕ್ಕೆ ನನ್ನ ಆಕ್ಷೇಪಣೆಯೇನಿಲ್ಲ."

ಶ್ರೀರಾಮಕೃಷ್ಣರು: "ಆದರೆ ಭ್ರಮೆ ಸಹಜವಾಗಿ ಹೋಗದು. ಜ್ಞಾನ ದೊರೆತನಂತರವೂ ಉಳಿದುಕೊಂಡಿರುತ್ತದೆ. ಯಾರೊ ಒಬ್ಬ ಸ್ವಪ್ನದಲ್ಲಿ ಹುಲಿಯನ್ನು ಕಂಡ. ಎಚ್ಚರಗೊಂಡನಂತರವೂ ಆತನ ಎದೆ 'ಲಬ್, ಡಬ್' ಅಂತ ಹೊಡೆದುಕೊಳ್ಳುತ್ತಿತ್ತು.

"ಕೆಲವು ಮಂದಿ ಕಳ್ಳರು ಬೆಳೆ ಕದಿಯಲು ಒಂದು ಹೊಲದ ಹತ್ತಿರಕ್ಕೆ ಬಂದರು. ಅಕ್ರಮಪ್ರವೇಶಿಗಳನ್ನು ಹೆದರಿಸಲು ಆ ಹೊಲದವರು ಮನುಷ್ಯಾಕಾರದ ನೆಲ್ಲು ಹುಲ್ಲಿನ ಬೊಂಬೆಯೊಂದನ್ನು ಅಲ್ಲಿ ನಿಲ್ಲಿಸಿದ್ದರು. ಕಳ್ಳರಿಗೆ ಭಯವಾಗಿ ಆ ಹೊಲಕ್ಕೆ ನುಗ್ಗಲು ಹೆದರಿಕೆಯಾಯಿತು. ಅವರಲ್ಲಿ ಒಬ್ಬ ಸಾಹಸ ಮಾಡಿ ಅದರ ಹತ್ತಿರ ಹೋಗಿ ನೋಡುತ್ತಾನೆ, ಅದು ಕೇವಲ ನೆಲ್ಲು ಹುಲ್ಲಿನ ಬೊಂಬೆ. ಆತ ಹಿಂದಿರುಗಿ ಬಂದು ತನ್ನ ಜೊತೆಗಾರರಿಗೆ ಹೇಳಿದ, 'ಭಯಪಡಬೇಕಾಗೇನಿಲ್ಲ, ಬನ್ನಿ' ಎಂದು. ಆದರೂ ಉಳಿದವರಿಗೆ ಎದೆಯಾಗಲಿಲ್ಲ. ಅವರು ಹೇಳಿದರು, ತಮ್ಮ ಎದೆ 'ಲಬ್, ಡಬ್' ಅಂತ ಹೊಡೆದುಕೊಳ್ಳುತ್ತಾ ಇದೆ ಎಂಬುದಾಗಿ. ಆಗ ಆ ಸಾಹಸಿ ಕಳ್ಳ ಆ ಬೊಂಬೆಯನ್ನು ನೆಲಕ್ಕೆ ಉರುಳಿಸಿ ಹೇಳಿದ, 'ಇದಕ್ಕೇಕೆ ಹೆದರಿಕೋಬೇಕು! ಇದಕ್ಕೇಕ್ರೊ ಹೆದರಿಕೋಬೇಕು!' ಅಂತ. ಇದೇ 'ನೇತಿ, ನೇತಿ' ಮಾರ್ಗ."

ಡಾಕ್ಟರ್: "ಇವೆಲ್ಲ ಬಹಳ ಸೊಗಸಾದ ಮಾತುಗಳು."

ಶ್ರೀರಾಮಕೃಷ್ಣರು ನಗುತ್ತ: "ಎಂಥಾ ಮಾತುಗಳು?"

ಡಾಕ್ಟರ್: "ಬಹಳ ಸೊಗಸಾದ."

ಶ್ರೀರಾಮಕೃಷ್ಣರು: "ಹಾಗಾದರೆ ಒಮ್ಮೆ 'ಥ್ಯಾಂಕ್ ಯು' ಅಂತ ಹೇಳು."

ಡಾಕ್ಟರ್: "ನನ್ನ ಭಾವ ನಿಮಗರ್ಥವಾಗುತ್ತಿಲ್ಲವೇನು? ಎಷ್ಟು ಕಷ್ಟ ತೆಗೆದುಕೊಂಡು ನಿಮ್ಮನ್ನು ನೋಡಲು ನಾನಿಲ್ಲಿಗೆ ಬರುತ್ತಿದೇನೆ ಏನು ಕತೆ!"

ಶ್ರೀರಾಮಕೃಷ್ಣರು ನಗುತ್ತ: "ಅಲ್ಲ, ಅದಲ್ಲ. ಮೂರ್ಖರಿಗಾಗಿ ಏನಾದರು ಕಿಂಚಿತ್ ಬೋಧೆಮಾಡು. ರಾವಣನ ವಧೆಯಾದನಂತರ

ವಿಭೀಷಣ ಲಂಕೆಗೆ ರಾಜನಾಗಲು ಇಚ್ಛೆಪಡಲಿಲ್ಲ. ಆತ ಹೇಳಿದ, 'ಹೇ ರಾಮ, ನೀನೇ ನನಗೆ ದೊರೆತಿರೋವಾಗ, ಇನ್ನು ರಾಜ್ಯ ತೆಗೆದು ಕೊಂಡು ಏನು ಮಾಡಲಿ?' ಅಂತ. ಶ್ರೀರಾಮಚಂದ್ರ ಹೇಳಿದ, 'ವಿಭೀಷಣ, ನೀನು ಮೂರ್ಖರ ಸಲುವಾಗಿ, ಎಂದರೆ ನನ್ನ ಸೇವೆಯನ್ನು ನೀನು ಇಷ್ಟೊಂದು ಮಾಡಿದುದಕ್ಕಾಗಿ ನಿನಗೆ ದೊರೆತ ಫಲವೇನು ಅಂತ ಕೇಳುವವರ ಸಲುವಾಗಿ ರಾಜ್ಯಭಾರವನ್ನು ವಹಿಸಿಕೊ. ಅವರ ಶಿಕ್ಷಣ ಕ್ಕಾಗಿ ರಾಜನಾಗು' ಎಂದು."

ಡಾಕ್ಟರ್: "ಅಂಥ ಮೂರ್ಖರಾರಾದರು ಇಲ್ಲಿ ಇದಾರೇನು?"

ಶ್ರೀರಾಮಕೃಷ್ಣರು ನಗುತ್ತ: "ನಿಸ್ಸಂದೇಹವಾಗಿ! ಇಲ್ಲಿ ಮುತ್ತಿನ ಹುಳು, ಬಸವನ ಹುಳು, ಶಂಖದ ಹುಳು ಎಲ್ಲಾ ಉಂಟು." (ಎಲ್ಲರೂ ನಗುತ್ತಿದಾರೆ.)

ಡಾಕ್ಟರ್ ಸರ್ಕಾರ ಒಬ್ಬ ಹೋಮಿಯೋಪತ್. ಆತ ಪರಮಹಂಸ ರಿಗೆ ಎರಡು ಮಾತ್ರೆ ಕೊಟ್ಟು ಹೇಳಿದ: "ನಿಮಗೆ ಈ ಎರಡು ಮಾತ್ರೆ ಕೊಟ್ಟಿದೇನೆ. ಅವುಗಳಲ್ಲಿ ಒಂದು ಪುರುಷ ಇನ್ನೊಂದು ಪ್ರಕೃತಿ." (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ನಗುತ್ತ: "ಹೌದು, ಅವರು ಯಾವಾಗಲೂ ಜೊತೆಯಾಗೇ ಇರುತ್ತಾರೆ. ನೀನು ಪಾರಿವಾಳಗಳನ್ನು ಗಮನಿಸಿ ನೋಡಿಲ್ಲ ವೇನು? ಒಂದನ್ನು ಅಗಲಿ ಇನ್ನೊಂದು ಇರಲಾರದು. ಪುರುಷನೆಲ್ಲಿ ಇರುತ್ತಾನೊ ಅಲ್ಲೇ ಪ್ರಕೃತಿಯೂ ಇರುತ್ತಾಳೆ, ಪ್ರಕೃತಿಯೆಲ್ಲಿ ಇರು ತ್ತಾಳೊ ಅಲ್ಲೇ ಪುರುಷನೂ ಇರುತ್ತಾನೆ."

ಇಂದು ವಿಜಯದಶಮಿ. ಬಾಯನ್ನು ಸಿಹಿಮಾಡಿಕೊಳ್ಳುವಂತೆ ಪರಮಹಂಸರು ಡಾಕ್ಟರಿಗೆ ಹೇಳಿದರು. ಭಕ್ತರು ಆತನಿಗೆ ಸ್ವಲ್ಪ ಸಿಹಿ ತಿಂಡಿಗಳನ್ನು ತಂದುಕೊಟ್ಟರು.

ಡಾಕ್ಟರ್ ತಿನ್ನುತ್ತ: "ನೀವು ಉಪದೇಶ ಕೊಟ್ಟಿರಲ್ಲ ಅದಕ್ಕಲ್ಲ, ಈ ತಿಂಡಿಗಳಿಗಾಗಿ ನಿಮಗೆ 'ಥ್ಯಾಂಕ್ ಯು' ಕೊಡುತ್ತೇನೆ. ಅದಕ್ಕೆ ಬರೀ ಮಾತಿನಿಂದ ಏಕೆ 'ಥ್ಯಾಂಕ್ ಯು' ಕೊಡಲಿ?"

ಶ್ರೀರಾಮಕೃಷ್ಣರು ನಗುತ್ತ: "ಮುಖ್ಯವಾಗಿ ಮಾಡಬೇಕಾದ್ದು ಭಗವಂತನಲ್ಲಿ ಮನಸ್ಸನ್ನಿಡೋದು ಮತ್ತು ಅಲ್ಪಸ್ವಲ್ಪವಾಗಿ ಆತನ ಧ್ಯಾನ ಮಾಡೋದು. (ಚಿಕ್ಕ ನರೇನನ ಕಡೆ ಬೆರಳುಮಾಡಿ) ನೋಡು, ನೋಡು.

ಒಮ್ಮೆಗೇ ಆತನ ಮನಸ್ಸು ಭಗವಂತನಲ್ಲಿ ಲೀನವಾಗಿಹೋಗಿಬಿಡುತ್ತದೆ. ನಿನಗೆ ಆ ವಿಷಯಗಳನ್ನೆಲ್ಲ ಹೇಳುತ್ತಿದ್ದೆನಲ್ಲ—"

ಡಾಕ್ಟರ್ : "ಇವರೆಲ್ಲರಿಗೂ ಎಲ್ಲವನ್ನೂ ತಿಳಿಸಿ."

ಶ್ರೀರಾಮಕೃಷ್ಣರು : "ಜೀರ್ಣಶಕ್ತಿಗನುಗುಣವಾಗಿ ಆಹಾರ ಕೊಡಬೇಕು. ನಿನಗೆ ತಿಳಿಸಿದುದನ್ನು ಅರ್ಥಮಾಡಿಕೊಳ್ಳಲು ಎಲ್ಲರಿಗೂ ಸಾಧ್ಯವೆ? ನಿನಗೇನೊ ತಿಳಿಸಿದೆ, ಆದರೆ ಅದು ಬೇರೆ ಸಮಾಚಾರ. ತಾಯಿ ಮನೆಗೆ ಮೀನು ಕೊಂಡುಕೊಂಡುಬಂದಿದಾಳೆ ಅಂತ ಇಟ್ಟುಕೊ. ಎಲ್ಲಾ ಮಕ್ಕಳ ಜೀರ್ಣಶಕ್ತಿಯೂ ಒಂದೇ ಸಮನಾಗಿ ಇಲ್ಲ. ಕೆಲವಕ್ಕೆ ಪಲಾವು ಮಾಡಿ ಕೊಡುತ್ತಾಳೆ, ಇನ್ನು ಕೆಲವಕ್ಕೆ ಮೀನಿನ ಸಾರು ಮಾಡಿ ಬಡಿಸುತ್ತಾಳೆ. ಈ ಎರಡನೆಯವಕ್ಕೆ ಜೀರ್ಣಶಕ್ತಿ ಕಡಮೆ." (ಎಲ್ಲರೂ ನಗುತ್ತಾರೆ.)

ಡಾಕ್ಟರ್ ಸರ್ಕಾರ ಪರಮಹಂಸರಿಂದ ಬೀಳ್ಕೊಂಡು ಹೊರಟುಹೋದ. ಇಂದು ವಿಜಯದಶಮಿ. ಭಕ್ತರೆಲ್ಲರೂ ಪರಮಹಂಸರಿಗೆ ಪ್ರಣಾಮಮಾಡಿ ಅವರ ಪಾದಧೂಳಿಯನ್ನು ಸ್ವೀಕರಿಸಿದರು. ಈಗ ಭಕ್ತರು ಪರಸ್ಪರ ಆಲಿಂಗನೆಮಾಡಿಕೊಳ್ಳುತ್ತಾ ಇದಾರೆ. ಅವರ ಆನಂದಕ್ಕೆ ಪಾರವೇ ಇಲ್ಲದಂತಾಗಿದೆ. ಪರಮಹಂಸರ ಆರೋಗ್ಯ ಸರಿಯಾಗಿಲ್ಲದಿದ್ದರೂ, ಎಲ್ಲವನ್ನೂ ಮರೆತುಬಿಟ್ಟಿದಾರೆ. ಪ್ರೇಮಾಲಿಂಗನೆ ಮತ್ತು ಬಾಯನ್ನು ಸಿಹಿಮಾಡುವಿಕೆ ಬಹಳ ಹೊತ್ತಿನವರೆಗೆ ನಡೆಯಿತು. ಪರಮಹಂಸರ ಹತ್ತಿರ ಚಿಕ್ಕ ನರೇನ, ಮಾಸ್ಟರ್, ಇನ್ನೂ ನಾಲ್ಕೈದು ಮಂದಿ ಭಕ್ತರು ಕುಳಿತಿದಾರೆ. ಪರಮಹಂಸರು ಆನಂದದಿಂದ ಮಾತುಕತೆಯಾಡುತ್ತಿದಾರೆ. ಡಾಕ್ಟರ್ ಸರ್ಕಾರನ ಸಂಬಂಧವಾಗಿ ಮಾತು ಆರಂಭವಾಯಿತು.

ಶ್ರೀರಾಮಕೃಷ್ಣರು : "ನಾನು ಡಾಕ್ಟರ್ ಸರ್ಕಾರನಿಗೆ ವಿಶೇಷವಾಗಿ ಏನು ಉಪದೇಶ - ಗಿಪದೇಶ ಮಾಡೋ ಆವಶ್ಯಕತೆಯೇನಿಲ್ಲ. ಮರವನ್ನು ಇನ್ನೇನು ಕತ್ತರಿಸಿ ಆಯಿತು ಅನ್ನುವಷ್ಟರಲ್ಲಿಯೇ, ಕತ್ತರಿಸುತ್ತಿದ್ದವನು ಸ್ವಲ್ಪ ದೂರಕ್ಕೆ ಹೋಗಿ ನಿಂತುಕೊಳ್ಳುತ್ತಾನೆ. ಸ್ವಲ್ಪ ಹೊತ್ತಿನೊಳಗಾಗಿ ಮರ ತಾನಾಗಿಯೇ ಉರುಳಿಕೊಳ್ಳುತ್ತದೆ."

ಚಿಕ್ಕ ನರೇನ ನಗುತ್ತ : "ಇಲ್ಲೆಲ್ಲಾ ಮೂಲತತ್ತ್ವದ ಅನುಷ್ಠಾನವೆ!"

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಡಾಕ್ಟರ್ ಆಗಲೇ ಬಹಳವಾಗಿ ಬದಲಾಯಿಸಿಬಿಟ್ಟಿದಾನೆ, ಅಲ್ಲವೆ?"

ಮಾಸ್ಟರ್: "ಹೌದು, ನಿಜ. ಇಲ್ಲಿಗೆ ಬಂದ ಅಂದರೆ, ಆತನಿಗೆ ಸ್ವಲ್ಪ ಮಂಕು ಕವಿದುಕೊಳ್ಳುತ್ತದೆ. ನಿಮಗೇನು ಔಷಧ ಕೊಡಬೇಕು ಏನು ಎತ್ತಲು ಎಂಬುದನ್ನು ಸಂಪೂರ್ಣವಾಗಿ ಮರೆತೇಬಿಡುತ್ತಾನೆ. ಜ್ಞಾಪಕಪಡಿಸಿದಾಗ ಹೇಳಲಾರಂಭಿಸುತ್ತಾನೆ, 'ಓ, ಹೌದು! ಹೌದು! ಔಷಧ ಕೊಡಬೇಕು' ಅಂತ."

ಕೆಲವು ಮಂದಿ ಭಕ್ತರು ಬೈಠಕ್‌ಖಾನೆಯಲ್ಲಿ ಹಾಡುತ್ತಿದ್ದರು. ಅವರು ಈಗ ಪರಮಹಂಸರ ಕೊಠಡಿಗೆ ಬಂದು ಕುಳಿತುಕೊಂಡಿದಾರೆ. ಪರಮಹಂಸರು ಅವರಿಗೆ ಹೇಳುತ್ತಿದಾರೆ: "ನಿಮ್ಮ ಹಾಡನ್ನು ಕೇಳಿದೆ; ಆದರೆ ತಾಳ ಸರಿಯಾಗಿ ಬೀಳುತ್ತಿರಲಿಲ್ಲವಲ್ಲ ಎಕೆ? ಅಸಾಂಗತ್ಯ ಸಿದ್ಧಪುರುಷನೊಬ್ಬನಿದಾನೆ ಅಂತ ಕೇಳಿದೇನೆ. ನೀವು ಆದರಲ್ಲಿ ಪ್ರವೀಣರು." (ಎಲ್ಲರೂ ನಗುತ್ತಿದಾರೆ.)

ಚಿಕ್ಕ ನರೇನನ ಒಬ್ಬ ಯುವಕಬಂಧು ಬಂದಿದಾನೆ. ಬಹಳ ಚೆನ್ನಾದ ಉಡಿಗೆತೊಡಿಗೆ ಹಾಕಿಕೊಂಡಿದಾನೆ, ಕಣ್ಣಿಗೆ ಕನ್ನಡಕ ಹಾಕಿಕೊಂಡಿದಾನೆ. ಪರಮಹಂಸರು ಚಿಕ್ಕ ನರೇನನೊಡನೆ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನೋಡು, ಈ ರಸ್ತೆಯಲ್ಲಿ ಒಬ್ಬ ಯುವಕ ಹೋಗುತ್ತಿದ್ದ. ಮಡಿಕೆಮಡಿಕೆಯಾಗಿ ಹೊಲಿದಿದ್ದ ಷರಟು ಹಾಕಿಕೊಂಡಿದ್ದ. ಹೇಗೆ ವರ್ಣಿಸಲಿ ಆತನ ಬಿಂಕದ ನಡಗೆಯನ್ನು! ಆಗಾಗ ತನ್ನ ಉತ್ತರೀಯವನ್ನು ಸರಿಸಿ ಆ ಷರಟನ್ನು ಪ್ರದರ್ಶಿಸುತ್ತಿದ್ದ. ಯಾರಾದರು ತನ್ನ ಉಡುಪನ್ನು ಮೆಚ್ಚುತ್ತಿರುವರೇ ಇಲ್ಲವೇ ಎಂಬುದನ್ನು ಅರಿಯಲು ಆಗಾಗ ಸುತ್ತಲೂ ನೋಡುತ್ತಿದ್ದ. ಆದರೆ ಆತ ನಡೆಯುತ್ತಿದ್ದಾಗ ಆತನ ಸೊಟ್ಟಗಾಲುಗಳು ಒಂದನ್ನೊಂದು ಬಡಿಯುತ್ತಿದ್ದುದು ಚೆನ್ನಾಗಿ ಕಾಣುತ್ತಿತ್ತು. (ಎಲ್ಲರೂ ನಗುತ್ತಿದಾರೆ.) ನವಿಲು ತನ್ನ ಪುಕ್ಕವನ್ನು ಬಹಳ ಚೆನ್ನಾಗಿ ಪ್ರದರ್ಶಿಸುತ್ತದೆ; ಆದರೆ ಅದರ ಕಾಲುಗಳು ನೋಡಲ ಸಹ್ಯವಾಗಿವೆ. (ಎಲ್ಲರೂ ನಗುತ್ತಿದಾರೆ.) ಒಂಟೆ ಕುರೂಪಿಯಾದ ಪ್ರಾಣಿ, ಅದರ ಪ್ರತಿಯೊಂದು ಅಂಗವೂ ಕುರೂಪವಾದುದೆ."

ಯುವಕ: "ಆದರೆ ಅದರ ಆಚರಣೆ ಒಳ್ಳೆಯದು."

ಶ್ರೀರಾಮಕೃಷ್ಣರು: "ನಿಜ, ಆದರೆ ಅದು ಮುಳ್ಳು ಗಿಡ ತಿನ್ನುತ್ತದೆ. ಅದನ್ನು ತಿಂದು ಬಾಯಿಂದ ರಕ್ತ ಸುರಿದರೂ ಅದು ಮುಳ್ಳು ತಿನ್ನೋದನ್ನು

ಮಾತ್ರ ಬಿಡದು. ಸಂಸಾರಿ, ಮಕ್ಕಳನ್ನು ಕಳೆದುಕೊಳ್ಳುತ್ತಲೇ ಇರುತ್ತಾನೆ, ಆದರೂ ಮಕ್ಕಳಿಗಾಗಿ ಹಾತೊರೆಯುತ್ತಲೇ ಇರುತ್ತಾನೆ!''

೨೨ನೆ ಅಕ್ಟೋಬರ್ ೧೮೮೫, ಆಶ್ವೀಜ ಶುಕ್ಲ ಚತುರ್ದಶಿ, ಗುರುವಾರ.

ಘಂಟೆ ರಾತ್ರಿ ಏಳು. ಪರಮಹಂಸರು ಶ್ಯಾಮಪುಕುರದ ತಮ್ಮ ಕೊಠಡಿಯಲ್ಲಿ ಹಾಸಿಗೆ ಮೇಲೆ ಕುಳಿತಿದಾರೆ. ಡಾಕ್ಟರ್ ಸರ್ಕಾರ, ಈಶಾನ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಅವರ ಸುತ್ತಲೂ ಕುಳಿತಿದಾರೆ. ಡಾಕ್ಟರ್ ಸರ್ಕಾರನಿಗೆ ಹೆಚ್ಚು ಕೆಲಸವಿದ್ದರೂ, ಕೆಲವು ವೇಳೆ ಆರು ಏಳು ಘಂಟೆಗಳ ಕಾಲವನ್ನೂ ಪರಮಹಂಸರೊಡನೆಯೇ ಕಳೆದುಬಿಡುತ್ತಾ ಇದಾನೆ. ಪರಮಹಂಸರಲ್ಲಿ ಆತನಿಗೆ ಅತ್ಯಂತ ಶ್ರದ್ಧಾ ಭಕ್ತಿ. ಅವರ ಭಕ್ತರನ್ನು ತನ್ನ ಸ್ವಬಾಂಧವರೇ ಅಂತ ಭಾವಿಸುತ್ತಿದಾನೆ. ಕೊಠಡಿಯಲ್ಲಿ ದೀಪ ಉರಿಯುತ್ತಿದೆ. ಹೊರಗೆ ಚಂದ್ರನ ಬೆಳಕು ಹಾಲು ಚೆಲ್ಲಿದಂತೆ ಹರಡಿದೆ.

ಶ್ರೀರಾಮಕೃಷ್ಣರು ಈಶಾನನಿಗೆ: ''ಯಾವ ಸಾಂಸಾರಿಕ, ಭಗವಂತನ ಪಾದಪದ್ಮಗಳಲ್ಲಿ ಭಕ್ತಿಯನ್ನಿಟ್ಟು ಸಂಸಾರವನ್ನು ನಡೆಯಿಸಿಕೊಂಡುಹೋಗುತ್ತಾನೊ ಆತನೇ ಧನ್ಯ. ಆತನೇ ವೀರಪುರುಷ. ಎರಡು ಮಣ ಭಾರದ ಹೊರೆಯನ್ನು ಹೊತ್ತುಕೊಂಡಿದ್ದರೂ, ನಿಂತು ಮದುವೆ ಮೆರವಣಿಗೆ ನೋಡೋನಿಗೆ ಆತನನ್ನು ಹೋಲಿಸಬಹುದು. ಅತ್ಯಧಿಕ ಶಕ್ತಿವಂತನಾಗದಿದ್ದರೆ ಹಾಗೆ ಮಾಡಲಾಗೋದಿಲ್ಲ. ಮತ್ತೆ ಆತನನ್ನು ಕೆಸರಿನ ಮೀನಿಗೆ ಹೋಲಿಸಬಹುದು. ಅದು ಕೆಸರಿನಲ್ಲೇ ವಾಸಿಸುತ್ತಿದ್ದರೂ ಕೆಸರನ್ನು ಮಾತ್ರ ಮೈಗೆ ಅಂಟಿಸಿಕೊಳ್ಳೋದಿಲ್ಲ. ಇನ್ನೂ ಮತ್ತೆ ಆತನನ್ನು ನೀರುಕೋಳಿಗೆ ಹೋಲಿಸಬಹುದು. ಅದು ಸತತ ನೀರಿನೊಳಕ್ಕೆ ಮುಳುಗುತ್ತಲೇ ಇರುತ್ತದೆ; ಆದರೆ ಒಮ್ಮೆ ಅದು ರೆಕ್ಕೆಯನ್ನು ಕೊಡಹಿಬಿಟ್ಟಿತು ಎಂದರೆ ಒಂದು ನೀರಿನ ತೊಟ್ಟೂ ಅದರ ಮೈಮೇಲೆ ನಿಲ್ಲದು.

''ಆದರೆ ಸಂಸಾರದಲ್ಲಿ ನಿರ್ಲಿಪ್ತತೆಯಿಂದ ಇರಬೇಕಾದರೆ ಕಿಂಚಿತ್ ಸಾಧನೆಯನ್ನು ಮಾಡಲೇಬೇಕಾಗುತ್ತದೆ. ಸ್ವಲ್ಪ ಕಾಲವನ್ನು ನಿರ್ಜನ ಪ್ರದೇಶದಲ್ಲಿ ಕಳೆಯಬೇಕಾಗುತ್ತದೆ — ಒಂದು ವರ್ಷವನ್ನೊ, ಆರು ತಿಂಗಳನ್ನೊ, ಮೂರು ತಿಂಗಳನ್ನೊ, ಕೊನೆಗೆ ಒಂದು ತಿಂಗಳನ್ನಾದರೂ ಸರಿಯೆ. ಆ ಏಕಾಂತವಾಸದಲ್ಲಿ ಭಗವಂತನ ಕಡೆ ಮನಸ್ಸನ್ನು ತಿರುಗಿಸಿ, ಅತ್ಯಂತ ವ್ಯಾಕುಲಚಿತ್ತದಿಂದ ಆತನ ಪಾದಪದ್ಮಗಳಲ್ಲಿ ತನಗೆ ಭಕ್ತಿಯುಂಟಾಗು

ವಂತೆ ಆತನಿಗೆ ಸರ್ವದಾ ಪ್ರಾರ್ಥನೆಮಾಡಿಕೊಳ್ಳುತ್ತಿರಬೇಕು. ಮನಸ್ಸಿನಲ್ಲೇ ಹೇಳಿಕೊಳ್ಳುತ್ತಿರಬೇಕು, 'ನನ್ನವರು ಎಂಬೋರು ಈ ಸಂಸಾರದಲ್ಲಿ ಯಾರೂ ಇಲ್ಲ. ಯಾರನ್ನು ನಾನು ನನ್ನವರು ಅಂತ ಭಾವಿಸುತ್ತೇನೊ ಅವರ ಬಾಳುವೆ ಒಂದೆರಡು ದಿವಸದ್ದು ಮಾತ್ರವೆ. ಭಗವಂತನೊಬ್ಬನೇ ಏಕಮಾತ್ರ ನನ್ನ ಸ್ವಂತದವ. ಆತನೇ ನನ್ನ ಸರ್ವಸ್ವ. ಅಯ್ಯೋ! ಆತನನ್ನು ನಾನು ಪಡೆದುಕೊಳ್ಳೋ ಬಗೆ ಹೇಗೆ?' ಅಂತ.

"ಭಕ್ತಿಯನ್ನು ಪಡೆದುಕೊಂಡನಂತರ ಬೇಕಾದರೆ ಸಂಸಾರದಲ್ಲಿ ಇರಬಹುದು. ಇದು ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣನ್ನು ಬಿಡಿಸಿದಹಾಗೆ; ಅದರ ಅಂಟು ಕೈಗೆ ಅಂಟದು. ಸಂಸಾರವೇ ನೀರು; ಮನಸ್ಸೇ ಹಾಲು. ಹಾಲನ್ನು ನೀರಿಗೆ ಹೊಯ್ದರೆ, ಅದು ನೀರಿನಲ್ಲಿ ಬೆರೆತು ಹೋಗಿಬಿಡುತ್ತದೆ. ಅದಕ್ಕಾಗೇ ಮೊದಲು ಹಾಲಿಗೆ ಹೆಪ್ಪು ಹಾಕಿ ಅದನ್ನು ನಿರ್ಜನಪ್ರದೇಶದಲ್ಲಿ ಇಡಬೇಕಾಗುತ್ತದೆ. ಮೊಸರಾದನಂತರ ಅದನ್ನು ಕಡೆದು ಬೆಣ್ಣೆ ತೆಗೆಯಬೇಕು. ಬೆಣ್ಣೆ ತೆಗೆದು ಅದನ್ನು ನೀರಿನಲ್ಲಿ ಇಟ್ಟರೆ, ಆಗ ಅದು ನೀರಿನೊಡನೆ ಬೆರೆತುಕೊಳ್ಳದು; ನಿರ್ಲಿಪ್ತವಾಗಿ ನೀರಿನ ಮೇಲೆ ತೇಲುತ್ತಿರುತ್ತದೆ.

"ಬ್ರಾಹ್ಮಸಮಾಜದ ಕೆಲವು ಮಂದಿ ಸದಸ್ಯರು ನನಗೆ ಹೇಳಿದರು: 'ಮಹಾಶಯರೆ, ನಮ್ಮದು ಜನಕರಾಜನ ಮಾರ್ಗ. ಆತನಂತೆ ನಿರ್ಲಿಪ್ತತೆಯಿಂದ ನಾವು ಸಂಸಾರದಲ್ಲಿರಬೇಕೆಂದಿದೇವೆ.' ನಾನು ಹೇಳಿದೆ: 'ನಿರ್ಲಿಪ್ತತೆಯಿಂದ ಸಂಸಾರದಲ್ಲಿರೋದು ಬಹಳ ಕಠಿನ. ಬಾಯಿಮಾತಿನಿಂದ ಜನಕರಾಜನಾಗೋಕೆ ಆಗೋದಿಲ್ಲ. ಜನಕ ಶಿರಸಾಸನದಲ್ಲಿ ನಿಂತು ಎಷ್ಟೊಂದು ಕಾಲ ತಪಸ್ಸು ಮಾಡಿದ ಏನುಕತೆ! ನೀವೇನು ಅಂಥ ಕಠೋರ ತಪಸ್ಸು ಮಾಡಬೇಕಾಗೇನಿಲ್ಲ. ಆದರೆ ನಿಮಗೆ ಸಾಧನೆ ಆವಶ್ಯಕ; ಏಕಾಂತವಾಸ ಆವಶ್ಯಕ. ಏಕಾಂತವಾಸ ಮಾಡಿ, ಜ್ಞಾನ ಪಡೆದುಕೊಂಡು, ಭಕ್ತಿ ಪಡೆದುಕೊಂಡು, ಬಳಿಕ ಬೇಕಾದರೆ ಸಂಸಾರದಲ್ಲಿ ಇರಬೇಕಾಗುತ್ತದೆ. ನಿರ್ಜನಪ್ರದೇಶದಲ್ಲಿ ಹೆಪ್ಪುಹಾಕಿದ ಹಾಲನ್ನು ಇಟ್ಟು ಮೊಸರು ಮಾಡಿಕೊಳ್ಳಬೇಕಾಗುತ್ತದೆ. ಸ್ಥಳ ಬದಲಾಯಿಸುತ್ತಲೊ ಅಥವಾ ಆಗಾಗ ಅಲ್ಲಾಡಿಸುತ್ತಲೊ ಇದ್ದರೆ ಅದು ಮೊಸರಾಗದು.'

"ಜನಕ ನಿರ್ಲಿಪ್ತನಾಗಿದ್ದುದರಿಂದ ಆತನನ್ನು ವಿದೇಹಿ ಅಂತಲೂ ಜನ ಕರೆಯುತ್ತಿದ್ದರು— ಅಂದರೆ ದೇಹಾತ್ಮಬುದ್ಧಿರಹಿತ ಎಂದು. ಸಂಸಾರ

ದಲ್ಲಿದ್ದರೂ ಜೀವನ್ಮುಕ್ತನಾಗಿ ಓಡಾಡುತ್ತಿದ್ದ. ಆದರೆ ದೇಹಬುದ್ಧಿ ಹೋಗೋದು ಅಂದರೆ ಅದು ಬಹಳ ದೂರದ ಮಾತು. ಬಹಳವಾಗಿ ಸಾಧನೆ ಮಾಡಬೇಕಾಗುತ್ತದೆ.

"ಜನಕ ದೊಡ್ಡ ವೀರಪುರುಷ. ಎರಡು ಕತ್ತಿಗಳನ್ನು ತಿರುಗಿಸುತ್ತಿದ್ದ — ಒಂದು ಜ್ಞಾನದ್ದು, ಇನ್ನೊಂದು ಕರ್ಮದ್ದು.

"ಸಂಸಾರಾಶ್ರಮದ ಜ್ಞಾನಿ, ಸನ್ಯಾಸಾಶ್ರಮದ ಜ್ಞಾನಿ ಇವರಿಗೆ ದೊರಕೋ ಜ್ಞಾನದಲ್ಲಿ ಏನಾದರು ತಾರತಮ್ಯವಿದೆಯೆ ಎಂದು ನೀವು ಕೇಳಬಹುದು. ಉತ್ತರ ಇಲ್ಲ ಅಂತ. ಇಬ್ಬರದೂ ಒಂದೇ ತರದ್ದು. ಇಬ್ಬರೂ ಜ್ಞಾನಿಗಳೆ; ಇಬ್ಬರಿಗೂ ಒಂದೇ ತರದ ಅನುಭವ. ಆದರೆ ಸಂಸಾರಾಶ್ರಮದ ಜ್ಞಾನಿ ಸ್ವಲ್ಪ ಭಯದಿಂದಿರಬೇಕಾಗುತ್ತದೆ. ಕಾಮಕಾಂಚನದ ಮಧ್ಯದಲ್ಲಿ ಇರೋದು ಅಂದರೆ ಅಲ್ಪ ಸ್ವಲ್ಪ ಭಯದಿಂದಲೇ ಇರಬೇಕಾಗುತ್ತದೆ. ಕಾಡಿಗೆ ಹಚ್ಚಿರೋ ಮನೆಯಲ್ಲಿ ವಾಸಿಸಲು ಹೋದರೆ, ಎಷ್ಟೇ ಎಚ್ಚರಿಕೆಯಿಂದ ಇದ್ದರೂ ಅಲ್ಪ ಸ್ವಲ್ಪವಾಗಿಯಾದರೂ ಅದು ಮೈಗೆ ಹತ್ತಿಕೊಂಡೇ ಬಿಡುತ್ತದೆ.

"ಬೆಣ್ಣೆ ತೆಗೆದು ಹೊಸ ಮಡಕೆಯಲ್ಲಿ ಇಟ್ಟರೆ ಅದು ಕೆಟ್ಟುಹೋಗುವ ಸಂಭವವೇ ಇಲ್ಲ. ಆದರೆ ಅದನ್ನು ಮೊಸರಿನ ಮಡಕೆಯಲ್ಲಿ ಇಟ್ಟರೆ ಸ್ವಲ್ಪ ಸಂದೇಹಪಡಬೇಕಾಗುತ್ತದೆ. (ಎಲ್ಲರೂ ನಗುತ್ತಾರೆ.)

"ಬತ್ತವನ್ನು ಹುರಿದಾಗ 'ಟಪ್, ಟಪ್' ಅಂತ ಒಂದೆರಡು ಅರಳುಗಳು ಬಾಣಲೆಯಿಂದ ಹೊರಕ್ಕೆ ಹಾರಿಹೋಗುತ್ತವೆ. ಅಂಥವು ಮಲ್ಲಿಗೆ ಹೂವಿನೋಪಾದಿಯಲ್ಲಿ ಬೆಳ್ಳಗಿರುತ್ತವೆ; ಒಂದು ಕಿಂಚಿತ್ತೂ ಕಪ್ಪಾಗಿ ಹೋಗಿರೋದಿಲ್ಲ. ಬಾಣಲೆಯಲ್ಲೇ ಉಳಿದುಕೊಳ್ಳೋ ಅರಳುಗಳೂ ಒಳ್ಳೆಯ ಅರಳುಗಳೇ. ಆದರೆ ಅವು ಸ್ವಲ್ಪ ಕಪ್ಪಾಗಿಹೋಗಿರುತ್ತವೆ. ಸಂಸಾರತ್ಯಾಗಿ - ಸನ್ಯಾಸಿ ಬ್ರಹ್ಮಜ್ಞಾನ ಪಡೆದುಕೊಂಡರೆ, ಆತ ಮಲ್ಲಿಗೆ ಹೂವಿನೋಪಾದಿಯಲ್ಲಿ ಯಾವ ಕರೆಯೂ ಇಲ್ಲದವನಾಗಿ ಕಾಣುತ್ತಾನೆ; ಆದರೆ ಬ್ರಹ್ಮಜ್ಞಾನ ಪಡೆದು ಸಂಸಾರವೆಂಬ ಬಾಣಲೆಯಲ್ಲಿ ಇದ್ದ ಅಂದರೆ ಆತನ ಮೈಗೆ ಒಂದು ಸ್ವಲ್ಪ ಕರೆ ಹತ್ತಬಹುದು. (ಎಲ್ಲರೂ ನಗುತ್ತಾರೆ.)

"ಜನಕರಾಜನ ಸಭೆಗೆ ಒಮ್ಮೆ ಭೈರವಿಯೊಬ್ಬಳು ಬಂದಿದ್ದಳು. ಸ್ತ್ರೀ ವ್ಯಕ್ತಿಯನ್ನು ಕಂಡೊಡನೆಯೆ ಜನಕ ಮಹಾರಾಜ ತನ್ನ ತಲೆಯನ್ನು ತಗ್ಗಿಸಿ ದೃಷ್ಟಿಯನ್ನು ನೆಲದ ಕಡೆ ಹಾಕಲಾರಂಭಿಸಿದ. ಅದನ್ನು ನೋಡಿ

ಭೈರವಿ ಹೇಳಿದಳು : 'ಹೇ ಜನಕ ಮಹಾರಾಜ, ಸ್ತ್ರೀ ವ್ಯಕ್ತಿಯನ್ನು ಕಂಡರೆ ಇನ್ನೂ ನಿನಗೆ ಭಯವೆ!' ಪೂರ್ಣಜ್ಞಾನ ದೊರೆಯಿತು ಅಂದರೆ ಐದು ವರ್ಷದ ಹುಸುಳೆಯ ಸ್ವಭಾವ ಬಂದುಬಿಡುತ್ತದೆ. ಆಗ ಸ್ತ್ರೀಪುರುಷರೆಂಬ ಭೇದ ಬುದ್ಧಿ ಇರದು.

"ಸಂಸಾರಾಶ್ರಮ-ಜ್ಞಾನಿಯ ಮೈಗೆ ಸ್ವಲ್ಪ ಕರೆಯೇನೊ ಹತ್ತ ಬಹುದು, ಆದರೆ ಆ ಕರೆಯಿಂದ ಅವನಿಗೆ ಯಾವ ಹಾನಿಯೂ ತಟ್ಟದು. ಚಂದ್ರನಲ್ಲಿ ಕಳಂಕವೇನೋ ಇದೆ, ಆದರೆ ಅದು ಆತನ ಬೆಳಕಿಗೆ ಯಾವ ತೊಂದರೆಯನ್ನೂ ತರದು.

"ಕೆಲಕೆಲವರು ಬ್ರಹ್ಮಜ್ಞಾನ ದೊರೆತನಂತರ ಲೋಕಶಿಕ್ಷಣಾರ್ಥ ಕ್ಕಾಗಿ ಕರ್ಮ ಮಾಡುತ್ತಾರೆ. ಉದಾಹರಣೆಗೆ — ಜನಕ, ನಾರದ ಮೊದಲಾದವರು. ಲೋಕಶಿಕ್ಷಣ ಮಾಡಬೇಕಾದರೆ ಶಕ್ತಿಬೇಕು. ಋಷಿ ಗಳು ತಮ್ಮ ತಮ್ಮ ಜ್ಞಾನಕ್ಕಾಗಿಯೇ ವ್ಯಸ್ತರಾಗಿದ್ದರು. ಆದರೆ ನಾರದಾದಿ ಆಚಾರ್ಯರು ಜನರಿಗೆ ಹಿತವನ್ನುಂಟುಮಾಡುತ್ತಾ ಚಲಿಸುತ್ತಿದ್ದರು. ಅವರು ವೀರಪುರುಷರು.

"ನೀರಿನ ಮೇಲೆ ತೇಲುತ್ತಿರೋ ಒಂದು ಕ್ಷುದ್ರ ಕಡ್ಡಿಯ ಮೇಲೆ ಒಂದು ಪುಟ್ಟ ಹಕ್ಕಿಯೇನಾದರು ಬಂದು ಕುಳಿತುಕೊಂಡಿತು ಅಂದರೆ ಅದು ಮುಳುಗಿಹೋಗುತ್ತದೆ; ಆದರೆ ನೀರಿನ ಮೇಲೆ ತೇಲುತ್ತಿರೋ ಒಂದು ದೊಡ್ಡ ದಿಮ್ಮಿ ಹಸುವನ್ನು, ಮನುಷ್ಯನನ್ನು, ಅಷ್ಟೇಕೆ ಒಂದು ಆನೆಯನ್ನೂ ಹೊತ್ತು ತೇಲಬಲ್ಲದು. ಜಹಜು ತಾನೂ ಆಚೆ ದಡವನ್ನು ಮುಟ್ಟೋದಲ್ಲದೆ ಜೊತೆಗೆ ಎಷ್ಟೊ ಜನರನ್ನೂ ಅಲ್ಲಿಗೆ ತಲುಪಿಸಿಬಿಡುತ್ತದೆ. ನಾರದಾದಿ ಆಚಾರ್ಯರನ್ನು ದೊಡ್ಡ ಮರದ ದಿಮ್ಮಿಗಾಗಲಿ ಅಥವಾ ಜಹಜಿಗಾಗಲಿ ಹೋಲಿಸಬಹುದು.

"ಕೆಲವರು ತಿಂಡಿ ತಿಂದು ಅದು ಬೇರೆಯವರಿಗೆ ಗೊತ್ತಾಗಿಬಿಡ ಬಹುದೆಂದು ಚೌಕದಿಂದ ಚೆನ್ನಾಗಿ ಬಾಯಿ ಒರಸಿಕೊಂಡುಬಿಡುತ್ತಾರೆ. (ಎಲ್ಲರೂ ನಗುತ್ತಾರೆ). ಇನ್ನು ಕೆಲವರು ತಮಗೇನಾದರು ಮಾವಿನ-ಗೀವಿನ ಹಣ್ಣು ದೊರೆತರೆ ಕೊಯ್ದು ಎಲ್ಲರಿಗೂ ಒಂದೊಂದು ಚೂರು ಕೊಟ್ಟು ತಾವೂ ತಿನ್ನುತ್ತಾರೆ.

"ನಾರದಾದಿ ಆಚಾರ್ಯರು ಜ್ಞಾನವನ್ನು ಪಡೆದನಂತರವೂ ಎಲ್ಲರ ಮಂಗಳಕ್ಕಾಗಿ ಭಕ್ತರಾಗೇ ಉಳಿದುಕೊಂಡಿದ್ದರು."

ಡಾಕ್ಟರ್ : "ಜ್ಞಾನ ಮನುಷ್ಯನನ್ನು ಮೂಕನನ್ನಾಗಿ ಮಾಡಿಬಿಡುತ್ತದೆ. ಕಣ್ಣು ಮುಚ್ಚಿಹೋಗಿಬಿಟ್ಟು ಅದರಿಂದ ನೀರು ಸುರಿಯಲಾರಂಭಿಸುತ್ತದೆ. ಆಗ ಆತನಿಗೆ ಭಕ್ತಿ ಬೇಕಾಗುತ್ತದೆ."

ಶ್ರೀರಾಮಕೃಷ್ಣರು : "ಭಕ್ತಿ ಹೆಂಗಸು; ಅದಕ್ಕಾಗಿ ಅದು ಅಂತಃಪುರದ ವರೆಗೆ ಹೋಗಬಲ್ಲದು." (ಎಲ್ಲರೂ ನಗುತ್ತಾರೆ.)

ಡಾಕ್ಟರ್ : "ಅಂತಃಪುರದವರೆಗೆ ಸಿಕ್ಕಿಸಿಕ್ಕಿದ ಹೆಂಗಸರನ್ನೆಲ್ಲ ಬಿಡೋಕಾಗೋದಿಲ್ಲವಲ್ಲ. ಉದಾಹರಣೆಗೆ—ವೇಶ್ಯೆಯರು. ಅದಕ್ಕಾಗೇ ಜ್ಞಾನ ಬೇಕು."

ಶ್ರೀರಾಮಕೃಷ್ಣರು : "ಕೆಲವರಿಗೆ ಸರಿಯಾದ ಮಾರ್ಗ ಗೊತ್ತಿರೋದಿಲ್ಲ, ಆದರೆ ಹೃದಯದಲ್ಲಿ ಭಕ್ತಿ ಇದೆ ಮತ್ತು ಆತನ ಸಾಕ್ಷಾತ್ಕಾರ ಪಡೆಯಬೇಕೆಂಬ ಇಚ್ಛೆ ಇದೆ. ಈ ವಿಧದ ಜನರು ಕೇವಲ ತಮ್ಮ ಭಕ್ತಿಯ ಜೋರಿನಿಂದಲೇ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಬಿಡುತ್ತಾರೆ. ಒಬ್ಬ ದೊಡ್ಡ ಭಕ್ತ ಶ್ರೀ ಜಗನ್ನಾಥನ ದರ್ಶನಕ್ಕಾಗಿ ಮನೆ ಬಿಟ್ಟು ಹೊರಟ. ಪೂರಿಗೆ ಮಾರ್ಗವಾವುದು ಎಂಬುದು ಆತನಿಗೆ ಗೊತ್ತಿಲ್ಲ. ದಕ್ಷಿಣ ದಿಕ್ಕಿಗೆ ಹೋಗೋಕೆ ಬದಲು ಪಶ್ಚಿಮ ದಿಕ್ಕಿಗೆ ಹೋಗುತ್ತಾ ಇದ್ದ. ದಾರಿಯನ್ನೇನೊ ಆತ ತಪ್ಪಿದ್ದ, ಆದರೆ ಆತ ವ್ಯಾಕುಲನಾಗಿ ಜನರನ್ನು ಕೇಳಿ ಕೇಳಿ ಮುಂದುವರಿಯುತ್ತಿದ್ದ. ಅವರು ಹೇಳಿಕೊಡುತ್ತಿದ್ದರು, 'ಈ ಮಾರ್ಗದಲ್ಲಿ ಬೇಡ, ಆ ಮಾರ್ಗದಲ್ಲಿ ಹೋಗು' ಅಂತ. ಭಕ್ತ ಕೊನೆಗೆ ಪೂರಿಯನ್ನು ತಲುಪಿ ಶ್ರೀ ಜಗನ್ನಾಥನ ದರ್ಶನ ಪಡೆದ. ನೋಡು, ತಿಳಿಯದೆ ಇದ್ದರೂ ಒಬ್ಬರಿಲ್ಲದಿದ್ದರೆ ಒಬ್ಬರಾದರೂ ದಾರಿ ತೋರಿಸಿಕೊಟ್ಟುಬಿಡುತ್ತಾರೆ."

ಡಾಕ್ಟರ್ : "ಆದರೆ ಆತ ದಾರಿ ತಪ್ಪಿಬಿಟ್ಟಿದ್ದನಲ್ಲ."

ಶ್ರೀರಾಮಕೃಷ್ಣರು : "ಹೌದು, ಹಾಗಾಗೋದುಂಟು. ಆದರೆ ಕೊನೆಗೆ ಗುರಿ ಮುಟ್ಟಿಬಿಡುತ್ತಾನೆ."

ಒಬ್ಬ ಭಕ್ತ : "ಭಗವಂತ ಸಾಕಾರನೊ ಅಥವಾ ನಿರಾಕಾರನೊ?"

ಶ್ರೀರಾಮಕೃಷ್ಣರು : "ಆತ ಸಾಕಾರನೂ ಹೌದು, ನಿರಾಕಾರನೂ ಹೌದು. ಒಮ್ಮೆ ಒಬ್ಬ ಸನ್ಯಾಸಿ ಪೂರಿ ದೇವಾಲಯಕ್ಕೆ ಜಗನ್ನಾಥನ ದರ್ಶನ ಮಾಡಿಬರಲು ಹೋಗಿದ್ದ. ಜಗನ್ನಾಥನ ದರ್ಶನವಾದನಂತರ ಆತನಿಗೆ ಸಂದೇಹ ಬಂತು, ಭಗವಂತ ಸಾಕಾರನೊ ಅಥವಾ ನಿರಾಕಾರನೊ

ಅಂತ. ಕೈಯಲ್ಲಿ ದಂಡವಿತ್ತು. ಅದರಿಂದ ವಿಗ್ರಹವನ್ನು ಮುಟ್ಟಲು ಪ್ರಯತ್ನಿಸಿದ. ಮೊದಲು ದಂಡವನ್ನು ಎಡದಿಂದ ಬಲಕ್ಕೆ ಆಡಿಸಿದ. ಆಗ ಅದಕ್ಕೆ ಏನೂ ತಾಗಲಿಲ್ಲ. ಆದ್ದರಿಂದ ಅಲ್ಲಿ ವಿಗ್ರಹ ಇಲ್ಲ ಎಂದು ಭಾವಿಸಿ, ಭಗವಂತ ನಿರಾಕಾರ ಎಂಬ ನಿರ್ಧಾರಕ್ಕೆ ಬಂದ. ಮತ್ತೆ ಅವೇ ದಂಡವನ್ನು ಬಲದಿಂದ ಎಡಕ್ಕೆ ಆಡಿಸಿದ. ಆಗ ಅದು ವಿಗ್ರಹಕ್ಕೆ ತಾಕಿತು. ಆಗ ಭಗವಂತ ಸಾಕಾರ ಎಂಬ ಅನುಭವವಾಯಿತು. ಬಳಿಕ ಸನ್ಯಾಸಿ ಅರಿತುಕೊಂಡ, ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು ಅಂತ.

"ಇದನ್ನು ಗ್ರಹಿಸೋದು ಬಹಳ ಕಷ್ಟವಾದುದೆ. ನಿರಾಕಾರನಾಗಿರೋ ಭಗವಂತ ಮತ್ತೆ ಸಾಕಾರನಾಗೋ ಬಗೆ ಹೇಗೆ? ಈ ಸಂದೇಹ ಮನಸ್ಸಿನಲ್ಲಿ ಉದ್ಭವವಾಗುತ್ತದೆ. ಒಂದು ಪಕ್ಷ ಆತ ಸಾಕಾರನಾಗಿರುವುದಾದರೆ, ವಿವಿಧ ರೂಪುಗಳಿಂದ ಏಕೆ ಆತ ಕಾಣಿಸಿಕೊಳ್ಳುತ್ತಿದಾನೆ!"

ಡಾಕ್ಟರ್: "ಭಗವಂತ ಈ ಜಗತ್ತಿನ ಎಲ್ಲಾ ಆಕಾರಗಳನ್ನೂ ಸೃಷ್ಟಿಸಿದಾನೆ; ಆದ್ದರಿಂದ ಆತ ಸಾಕಾರ. ಆತ ಮನಸ್ಸನ್ನು ಸೃಷ್ಟಿಸಿದಾನೆ; ಆದ್ದರಿಂದ ಆತ ನಿರಾಕಾರ. ಭಗವಂತ ಎಲ್ಲವೂ ಆಗಬಲ್ಲ."

ಶ್ರೀರಾಮಕೃಷ್ಣರು: "ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳದ ಹೊರತು ಇವನ್ನು ಗ್ರಹಿಸಲಾಗೋದಿಲ್ಲ. ಆತ ಸಾಧಕರ ಸಲುವಾಗಿ ನಾನಾ ಭಾವಗಳಿಂದ ನಾನಾ ರೂಪುಗಳಿಂದ ತೋರ್ಪಡಿಸಿಕೊಳ್ಳುತ್ತಿದಾನೆ. ಒಬ್ಬನ ಹತ್ತಿರ ಒಂದು ಕೊಳದಪ್ಪಲೆಯಲ್ಲಿ ಒಂದು ವಿಧದ ಬಣ್ಣದ ನೀರು ಇತ್ತು. ತಮ್ಮ ಬಟ್ಟೆಗಳಿಗೆ ಬಣ್ಣ ಹಾಕಿಸಿಕೊಳ್ಳಲು ಅನೇಕರು ಆತನ ಹತ್ತಿರಕ್ಕೆ ಬರುತ್ತಿದ್ದರು. ಆತ ತನ್ನ ಗಿರಾಕಿಗಳನ್ನು ಕೇಳುತ್ತಿದ್ದ: 'ನಿಮಗೆ ಯಾವ ಬಣ್ಣ ಹಾಕಿಕೊಡಬೇಕು?' ಒಬ್ಬ ಕೆಂಪು ಬಣ್ಣ ಅಂದರೆ, ಒಡನೆಯೆ ಆತ ಆ ಕೊಳದಪ್ಪಲೆಯಲ್ಲಿ ಬಟ್ಟೆ ಅದ್ದಿ ಹೇಳುತ್ತಿದ್ದ: 'ಇಗೋ ತೆಗೆದುಕೊ ಕೆಂಪು ಬಣ್ಣದಲ್ಲಿ ಅದ್ದಿರೋ ನಿನ್ನ ಬಟ್ಟೇನಾ.' ಇನ್ನೊಬ್ಬ ಹಳದಿ ಬಣ್ಣ ಹಾಕಿಕೊಡುವಂತೆ ಕೇಳಿದರೆ, ಆತ ಅದೇ ಕೊಳದಪ್ಪಲೆಯಲ್ಲಿ ಆತನ ಬಟ್ಟೆಯನ್ನೂ ಅದ್ದಿ ಹೇಳುತ್ತಿದ್ದ: 'ಇಗೋ ತೆಗೆದುಕೊ ಹಳದಿ ವರ್ಣದಲ್ಲಿ ಅದ್ದಿದ ನಿನ್ನ ಬಟ್ಟೇನಾ.' ಮತ್ತೊಬ್ಬ ನೀಲಿ ವರ್ಣ ಹಾಕಿಕೊಡಬೇಕು ಎಂದು ಕೇಳಿದರೆ, ಆತ ಅದೇ ಕೊಳದಪ್ಪಲೆಯಲ್ಲಿ ಆತನ ಬಟ್ಟೆಯನ್ನು ಅದ್ದಿ

ಹೇಳುತ್ತಿದ್ದ: 'ಇಗೋ ತೆಗೆದುಕೊ ನಿನ್ನ ನೀಲಿ ವರ್ಣದ ಬಟ್ಟೇನಾ.' ಯಾರು ಯಾರು ಯಾವ ಯಾವ ವರ್ಣದಲ್ಲಿ ತಮ್ಮ ಬಟ್ಟೆಯನ್ನು ಅದ್ದಿ ಕೊಡಬೇಕು ಎಂದು ಕೇಳುತ್ತಿದ್ದರೊ, ಆತ ಅದೇ ಕೊಳದಪ್ಪಲೆಯಲ್ಲಿ ಅದ್ದಿ ಅದ್ದಿ ಅವರವರಿಗೆ ಆಯಾಯ ವರ್ಣಗಳನ್ನು ಹಾಕಿಕೊಡುತ್ತಿದ್ದ. ಒಬ್ಬ ಈತ ಮಾಡುತ್ತಿರೋ ಆಶ್ಚರ್ಯಕರ ಕೆಲಸವನ್ನು ನೋಡುತ್ತಿದ್ದ. ಆ ಬಣ್ಣ ಹಾಕೋನು ಆತನನ್ನೂ ಕೇಳಿದ: 'ಏನಯ್ಯ, ನಿನ್ನ ಬಟ್ಟೆಗೆ ಎಂಥ ಬಣ್ಣ ಹಾಕಿಕೊಡಬೇಕು?' ಆಗ ಆತ ಹೇಳಿದ: 'ಸೋದರ, ನಿನ್ನ ಕೊಳದಪ್ಪಲೆಯಲ್ಲಿರೋ ಬಣ್ಣದ ವರ್ಣ ಹಾಕಿಕೊಡು.' (ಎಲ್ಲರೂ ನಗುತ್ತಾರೆ.)

"ಒಮ್ಮೆ ಒಬ್ಬ ಒಂದು ತೋಪಿನ ಕಡೆಗೆ ಹೋಗಿದ್ದ. ಅಲ್ಲಿ ಮರದ ಮೇಲೆ ಒಂದು ಬಹಳ ಸುಂದರ ಪ್ರಾಣಿಯನ್ನು ಕಂಡ. ಅಲ್ಲಿಂದ ಹಿಂದಿರುಗಿ ಬಂದ ಮೇಲೆ ತನ್ನ ಸ್ನೇಹಿತನೊಬ್ಬನಿಗೆ ತಿಳಿಸಿದ: 'ಸೋದರ, ಆ ತೋಪಿನ ಮರದ ಮೇಲೆ ಒಂದು ಕೆಂಪು ಪ್ರಾಣಿಯನ್ನು ನೋಡಿಬಂದೆ.' ಸ್ನೇಹಿತ ಹೇಳಿದ: 'ನಾನೂ ನೋಡಿದೇನೆ. ಅದರ ಬಣ್ಣ ಹೇಗೆ ಕೆಂಪಾದೀತು? ಅದು ಹಸುರು.' ಮೂರನೆಯವನೊಬ್ಬ ಹೇಳಿದ: 'ಅಲ್ಲ, ಅಲ್ಲ. ಅದು ಹೇಗೆ ಹಸುರಾದೀತು? ಅದು ಕಪ್ಪು.' ಕೊನೆಗೆ ಅದರ ಬಣ್ಣದ ಸಂಬಂಧವಾಗಿ ಒಬ್ಬರಿಗೊಬ್ಬರಿಗೆ ಜಗಳ ಹತ್ತಿಬಿಟ್ಟಿತು. ಕೊನೆಗೆ ಅವರೆಲ್ಲರೂ ಆ ಮರದ ಹತ್ತಿರಕ್ಕೆ ಹೋದಾಗ, ಒಬ್ಬ ಆ ಮರದ ಕೆಳಗೆ ಕುಳಿತುಕೊಂಡಿದ್ದ. ಅವನನ್ನು ಕೇಳಲಾಗಿ ಆತ ಹೇಳಿದ: 'ನಾನು ಈ ಮರದ ಕೆಳಗೇ ವಾಸಿಸುತ್ತಿದೇನೆ. ಆ ಪ್ರಾಣಿಯ ಸ್ವಭಾವ ನನಗೆ ಚೆನ್ನಾಗಿ ಗೊತ್ತಿದೆ. ನೀವು ಹೇಳೋದೆಲ್ಲ ಸತ್ಯ. ಅದು ಕೆಲವು ವೇಳೆ ಕೆಂಪು, ಕೆಲವು ವೇಳೆ ಹಸುರು, ಕೆಲವು ವೇಳೆ ಹಳದಿ, ಕೆಲವು ವೇಳೆ ನೀಲಿ, ಹೀಗೆ ಇನ್ನೂ ಏನೇನೊ ಬಣ್ಣಗಳನ್ನು ತಾಳುತ್ತದೆ. ಇನ್ನೂ ಕೆಲವು ವೇಳೆ ನೋಡಿದೇನೆ, ಅದಕ್ಕೆ ಯಾವ ಬಣ್ಣವೂ ಇಲ್ಲದೆ ಇರೋದನ್ನ.'

"ಯಾರು ಸತತ ಭಗವಂತನ ಧ್ಯಾನದಲ್ಲೇ ನಿರತನಾಗಿದಾನೊ ಆತನಿಗೆ ಗೊತ್ತಾಗುತ್ತದೆ ಭಗವಂತನ ಸ್ವರೂಪ ಎಂಥದು ಎಂಬುದು. ಕೇವಲ ಆ ವ್ಯಕ್ತಿಗೆ ಮಾತ್ರವೇ ಗೊತ್ತಿರುತ್ತದೆ, ಭಗವಂತ ನಾನಾ ರೂಪುಗಳಿಂದ, ನಾನಾ ಭಾವಗಳಿಂದ ತೋರ್ಪಡಿಸಿಕೊಳ್ಳುತ್ತಾನೆ ಮತ್ತು ಆತ ಸಗುಣನೂ ಹೌದು, ನಿರ್ಗುಣನೂ ಹೌದು ಎಂಬುದು. ಯಾವನು

ಮರದ ಕೆಳಗೆ ವಾಸಿಸುವನೊ, ಅವನಿಗೆ ಮಾತ್ರವೇ ಗೊತ್ತಿರುತ್ತದೆ, ಗೋಸುಂಬೆ ಅನೇಕ ಬಣ್ಣಗಳಿಂದ ಕಾಣಿಸಿಕೊಳ್ಳಬಲ್ಲದು ಮತ್ತು ಕೆಲವು ವೇಳೆ ಯಾವ ಬಣ್ಣವೂ ಇಲ್ಲದೆ ಇರಬಲ್ಲದು ಎಂಬುದು. ಉಳಿದವರು ಯಥಾರ್ಥ ಸತ್ಯವನ್ನರಿಯದೆ ವಾದ-ವಿವಾದ, ಜಗಳ-ಬವರ ಇವುಗಳಲ್ಲಿ ಸತ್ತು ಸುಣ್ಣವಾಗುತ್ತಾರೆ.

"ಹೌದು, ಭಗವಂತ ಸಾಕಾರ ಮತ್ತು ನಿರಾಕಾರ. ಇದು ಹೇಗೆ ಎಂಬುದು ಗೊತ್ತೆ? ಸಚ್ಚಿದಾನಂದ ಬ್ರಹ್ಮ ತೀರ-ಗೀರಗಳೇ ಇಲ್ಲದ ಸಾಗರವಿದ್ದ ಹಾಗೆ. ಯಾವ ರೀತಿಯಾಗಿ ಶೈತ್ಯದ ದೆಸೆಯಿಂದ ಸಾಗರದ ನೀರು ಅಲ್ಲಿ ಇಲ್ಲಿ ಸ್ಪಷ್ಟವಾಗಿ ಎದ್ದು ಕಾಣುವ ಹಿಮಗಡ್ಡೆಗಳಾಗಿ ಪರಿವರ್ತನೆ ಹೊಂದುವುದೊ, ಅದೇ ರೀತಿಯಾಗಿ ಭಕ್ತನ ಭಕ್ತಿ ಎಂಬ ಶೈತ್ಯದಿಂದ ಆ ಅನಂತ ಸಾಂತನಾಗಿ, ಎಂದರೆ ಭಕ್ತನಿಗೆ ಬೇಕಾದ ಸಾಕಾರ ರೂಪನ್ನು ತಾಳಿ ಆತನಿಗೆ ದರ್ಶನಕೊಡುತ್ತಾನೆ. ಯಾವ ರೀತಿಯಾಗಿ ಸೂರ್ಯೋದಯವಾದನಂತರ ಹಿಮಗಡ್ಡೆ ಕರಗಿ ಎಂದಿನ ಸಾಗರವಾಗುವುದೊ, ಅದೇ ರೀತಿಯಾಗಿ ಭಕ್ತನ ಹೃದಯದಲ್ಲಿ ಜ್ಞಾನವೆಂಬ ಸೂರ್ಯನ ಉದಯ ಆಯಿತು ಅಂದರೆ ಆ ಸಾಕಾರ ರೂಪಿನ ಭಗವಂತ ಕರಗಿ ಎಂದಿನ ನಿರಾಕಾರದ ಸ್ಥಿತಿಗೆ, ಅನಂತದ ಸ್ಥಿತಿಗೆ, ಸಚ್ಚಿದಾನಂದ ಬ್ರಹ್ಮನ ಸ್ಥಿತಿಗೆ ಹೊರಟುಹೋಗುತ್ತಾನೆ."

ಡಾಕ್ಟರ್: "ಹೌದು, ನಿಜ. ಸೂರ್ಯೋದಯವಾದನಂತರ ಹಿಮಗಡ್ಡೆ ಕರಗಿ ನೀರಾಗುತ್ತದೆ; ಅದು ಅಷ್ಟೇ ಅಲ್ಲ, ಆತನ ತಾಪದಿಂದ ನೀರು ಕಾದು ಆವಿಯಾಗಿಬಿಡುತ್ತದೆ, ಅಂದರೆ ನಿರಾಕಾರ ರೂಪನ್ನು ತಾಳುತ್ತದೆ."

ಶ್ರೀರಾಮಕೃಷ್ಣರು: "ಹೌದು, ಅದೇನೊ ನಿಜ. 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ವಿಚಾರಾಂತ್ಯದಲ್ಲಿ ಸಮಾಧಿ ದೊರೆಯಿತು ಅಂದರೆ ರೂಪು-ಗೀಪುಗಳೆಲ್ಲ ಒಮ್ಮೆಗೇ ಅದೃಶ್ಯವಾಗಿಬಿಡುತ್ತವೆ. ಆಗ ಭಗವಂತ ಒಬ್ಬ ವ್ಯಕ್ತಿ ಎಂಬ ಬೋಧೆ ಆಗೋದಿಲ್ಲ. ಆತ ಏನು ಎಂಬುದನ್ನು ಬಾಯಿಂದ ವರ್ಣಿಸಲಾಗೋದಿಲ್ಲ. ವರ್ಣಿಸಲು ಉಳಿದುಕೊಂಡಿರೋರು ತಾನೆ ಯಾರು? ಯಾವ ವ್ಯಕ್ತಿ ವರ್ಣಿಸಬೇಕಾಗಿತ್ತೊ, ಆತನೇ ಇಲ್ಲದವನಾಗುತ್ತಾನೆ; ತನ್ನ 'ಅಹಂ' ಗಾಗಿ ಆತ ಎಷ್ಟು ಹುಡುಕಿದರೂ ಅದು ಆತನಿಗೆ ದೊರಕದೆಹೋಗುತ್ತದೆ. ಅಂಥವನಿಗೆ ಬ್ರಹ್ಮ ನಿರ್ಗುಣ.

ಆ ಅವಸ್ಥೆಯಲ್ಲಿ ಕೇವಲ ಬೋಧೆಯಿಂದ ಮಾತ್ರವೇ ಬೋಧನಾಗುತ್ತಾನೆ. ಮನಸ್ಸು, ಬುದ್ಧಿ ಇವುಗಳಿಂದ ಆತನನ್ನು ಅರಿಯಲಾಗೋದಿಲ್ಲ.

"ಅದಕ್ಕಾಗೇ ಜನರು ಭಕ್ತಿಯನ್ನು ಚಂದ್ರನಿಗು, ಜ್ಞಾನವನ್ನು ಸೂರ್ಯನಿಗು ಹೋಲಿಸೋದು. ಕೇಳಿದೇನೆ, ಅತ್ಯಂತ ಉತ್ತರ ದಕ್ಷಿಣ ದಿಕ್ಕುಗಳಲ್ಲಿ ಸಮುದ್ರಗಳಿವೆ ಮತ್ತು ಅಲ್ಲಿ ಅಷ್ಟೊಂದು ಚಳಿ, ನೀರು ಅಲ್ಲಲ್ಲಿ ಹೆಪ್ಪುಗಟ್ಟಿಕೊಂಡು ಐಸ್ ಬಂಡೆಗಳಾಗಿಬಿಟ್ಟಿರುತ್ತದೆ ಅಂತ. ಅಲ್ಲಿ ಹಡಗು ಸಂಚಾರ ಸಾಧ್ಯವಿಲ್ಲ; ಐಸ್‌ಬಂಡೆಗಳು ಅವನ್ನು ತಡೆದುಬಿಡುತ್ತವೆ."

ಡಾಕ್ಟರ್: "ಆದ್ದರಿಂದ ಮುಮುಕ್ಷುಗಳು ಭಕ್ತಿ ಮಾರ್ಗದಲ್ಲಿ ಎಡರು-ತೊಡರುಗಳಿಗೆ ಸಿಲುಕಬೇಕಾಗುತ್ತದೆ."

ಶ್ರೀರಾಮಕೃಷ್ಣರು: "ಹೌದು, ಸಿಲುಕಬೇಕಾಗುತ್ತದೆ, ಆದರೆ ಅದರಿಂದ ಭಕ್ತನಿಗೆ ಯಾವ ತೊಂದರೆಯೂ ಉಂಟಾಗದು. ಏಕೆಂದರೆ ಏನಂದರೂ ಆ ಸಚ್ಚಿದಾನಂದಸಾಗರದ ನೀರು ತಾನೆ ಹೆಪ್ಪುಗಟ್ಟಿ ಐಸ್ ಬಂಡೆಯಾಗಿರೋದು. ಇನ್ನೂ ಸ್ವಲ್ಪ ವಿಚಾರ ಮಾಡಬೇಕೆಂದೆನಿಸಿತು ಎಂದರೆ, 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಈ ವಿಚಾರ ಮಾಡಬೇಕು ಅಂತ ಅನಿಸಿದರೆ, ಅದರಿಂದೇನು ತೊಂದರೆ ಆಗೋದಿಲ್ಲ. ಜ್ಞಾನ-ಸೂರ್ಯ ಉದಯವಾದೊಡನೆ ಸಚ್ಚಿದಾನಂದದ ಐಸ್‌ಬಂಡೆ ಕರಗಿಹೋಗಿಬಿಡುತ್ತದೆ. ಬಳಿಕ ಉಳಿದುಕೊಳ್ಳೋದು ಕೇವಲ ಆ ಸಚ್ಚಿದಾನಂದಸಾಗರ ಮಾತ್ರವೆ.

"ಜ್ಞಾನ-ವಿಚಾರದ ಅಂತ್ಯದಲ್ಲಿ ದೊರೆಯೊ ಸಮಾಧಿಯಲ್ಲಿ 'ಅಹಂ'-'ಗಿಹಂ' ಏನೂ ಉಳಿದುಕೊಂಡಿರದು. ಆದರೆ ಸಮಾಧಿಯನ್ನು ದೊರಕಿಸಿಕೊಳ್ಳೋದು ಬಹಳ ಪ್ರಯಾಸವೆ. 'ಅಹಂ' ಎಂಬುದು ಬಡ ಪಟ್ಟಿಗೆ ನಮ್ಮನ್ನು ಬಿಟ್ಟುತೊಲಗಲೊಲ್ಲದು. ಈ ಕಾರಣದಿಂದಲೇ ಮನುಷ್ಯ ಈ ಜಗತ್ತಿನಲ್ಲಿ ಮತ್ತೆ ಮತ್ತೆ ಜನ್ಮವೆತ್ತುತ್ತಿರೋದು.

"ಗೋವು ಕೂಗುತ್ತದೆ, 'ಹಂಬಾ! ಹಂಬಾ!' ಅಂತ—ಅಂದರೆ, 'ನಾನು! ನಾನು!' ಎಂದು. ಅದಕ್ಕಾಗೇ ಅದು ಈ ಜಗತ್ತಿನಲ್ಲಿ ಅಷ್ಟೊಂದು ದುಃಖದುರಿತಗಳಿಗೀಡಾಗುತ್ತಿರೋದು. ಮಳೆಬಿಸಿಲೆನ್ನದೆ ಇಡೀ ದಿನವೆಲ್ಲ ನೇಗಿಲಿಗೆ ಹೆಗಲು ಕೊಡಬೇಕಾಗುತ್ತದೆ. ಜೊತೆಗೆ ಕಟುಕ ಅದನ್ನು ಕತ್ತರಿಸಿ ಹಾಕುತ್ತಾನೆ. ಅದರ ದುಃಖ ಅಲ್ಲಿಗೇ ಕೊನೆಯಾಗದು. ಚಮ್ಮಾರ ಅದರ ಚರ್ಮವನ್ನು ಹದಮಾಡಿ ಅದರಿಂದ ಪಾದರಕ್ಷೆಗಳನ್ನು ತಯಾರು ಮಾಡುತ್ತಾನೆ. ಕಟ್ಟಕಡೆಯಲ್ಲಿ ಅದರ ಚಿಕ್ಕ ಕರುಳಿನಿಂದ ಹುರಿ ಆಗುತ್ತದೆ.

ಯಾವಾಗ ಅದು ಹತ್ತಿ ಬಿಡಿಸೋನ ಕೈಗೆ ಸಿಕ್ಕಿ, ಆತನ ಯಂತ್ರದಲ್ಲಿ, 'ತುಹ್ಞೂ! ತುಹ್ಞೂ!' ಅಂತ, ಅಂದರೆ, 'ನೀನು! ನೀನು!' ಅಂತ ಹೇಳಲಾರಂಭಿಸುತ್ತದೆಯೊ ಆಗ ಮಾತ್ರವೇ ಅದರ ದುಃಖದುರಿತಗಳೆಲ್ಲ ಕೊನೆಯಾಗುತ್ತವೆ.

"ಅದೇ ರೀತಿಯಾಗಿ ಯಾವಾಗ ಜೀವ ಹೇಳುತ್ತದೆಯೊ, 'ನಾಹಂ! ನಾಹಂ! ನಾನು ಏನೂ ಅಲ್ಲ; ಹೇ ಭಗವಂತ, ನೀನೇ ಕರ್ತ; ನಾನು ದಾಸ, ನೀನು ಪ್ರಭು' ಅಂತ, ಆಗ ಮಾತ್ರವೇ ಅದಕ್ಕೆ ಸಕಲ ದುಃಖ ದುರಿತಗಳಿಂದ ಬಿಡುಗಡೆ; ಆಗ ಮಾತ್ರವೇ ಅದಕ್ಕೆ ಮುಕ್ತಿ."

ಡಾಕ್ಟರ್: "ನಾವು ಹತ್ತಿ ಬಿಡಿಸೋನ ಕೈಗೆ ಬೀಳಬೇಕಾಗುತ್ತಲ್ಲ." (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: "ಈ 'ಅಹಂ' ಎಂಬುದು ಬಡಪಟ್ಟಿಗೆ ಹೋಗ ದಿದ್ದರೆ, ಇರಲಿ ನೀಚವುಂಡೇದು 'ದಾಸನ ಅಹಂ' ಆಗಿ. (ಎಲ್ಲರೂ ನಗುತ್ತಾರೆ.)

"ಸಮಾಧಿ ದೊರೆತನಂತರವೂ ಕೆಲಕೆಲವರಲ್ಲಿ 'ಅಹಂ' ಎಂಬುದು ಉಳಿದುಕೊಂಡಿರುತ್ತದೆ. ಅದು ಕೇವಲ 'ದಾಸನ ಅಹಂ' ಅಥವಾ 'ಭಕ್ತನ ಅಹಂ' ಮಾತ್ರವೆ. ಶಂಕರಾಚಾರ್ಯರು ಲೋಕಶಿಕ್ಷಣಾರ್ಥಕ್ಕಾಗಿ 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. 'ದಾಸನ ಅಹಂ', 'ವಿದ್ಯೆಯ ಅಹಂ', 'ಭಕ್ತನ ಅಹಂ' ಇವೆಲ್ಲ 'ಪಕ್ವ ಅಹಂ' ಗಳು. 'ಅಪಕ್ವ ಅಹಂ' ಎಂಬುದು ಯಾವುದು ಗೊತ್ತೆ? ಅದು ಹೇಳುತ್ತದೆ: 'ನಾನು ಕರ್ತ, ನಾನು ಅಂಥಾ ದೊಡ್ಡ ಮನುಷ್ಯನ ಮಗ, ವಿದ್ಯಾವಂತ, ಧನವಂತ. ನನಗೆದುರಾಗಿ ನಿಲ್ಲೋಕೆ ಯಾರಿಗೆ ತಾನೆ ಎದೆಕೆಚ್ಚು ಇದೆ? ಇತ್ಯಾದಿ.' ಅಂಥವನ ಮನೆಯಲ್ಲಿ ಕಳ್ಳತನ ಮಾಡುತ್ತಿದ್ದಾಗ ಕಳ್ಳ ಕೈಗೆ ಸಿಕ್ಕಿಬಿಟ್ಟ ಅಂದರೆ, ಮೊದಲು ಆತ ಕದ್ದಿದುದನ್ನೆಲ್ಲ ಕಸಿದು ಕೊಂಡು, ಬಳಿಕ ಆತನಿಗೆ ಉತ್ತಮ ಮಧ್ಯಮ ಪ್ರಹಾರಗಳನ್ನು ಹಾಕು ತ್ತಾನೆ. ಅದಕ್ಕೂ ತೃಪ್ತನಾಗದೆ ಆತನನ್ನು ಪೊಲೀಸಿನವರಿಗೆ ಒಪ್ಪಿಸಿ ಬಿಡುತ್ತಾನೆ. ಬಳಿಕ ಹೇಳುತ್ತಾನೆ, 'ಹ್ಞೂ! ಆತನಿಗೆ ಗೊತ್ತಿಲ್ಲ ಯಾರ ಮನೆಗೆ ತಾನು ಕನ್ನ ಹಾಕಿರೋದು ಎಂಬುದು. ಹುಟ್ಟಡಗಿಸಿಬಿಡುತ್ತೇನೆ. ಹ್ಞೂ!' ಅಂತ.

"ಭಗವಂತನ ಸಾಕ್ಷಾತ್ಕಾರ ದೊರೆಯಿತು ಅಂದರೆ, ಐದು ವರ್ಷದ

ಹಸುಳೆಯ ಸ್ವಭಾವ ಬಂದುಬಿಡುತ್ತದೆ. ಅಂಥವನ 'ಅಹಂ' ಅನ್ನು 'ಬಾಲಕನ ಅಹಂ', 'ಪಕ್ವ ಅಹಂ' ಗೆ ಹೋಲಿಸಬಹುದು. ಬಾಲಕ ಯಾವ ಗುಣಕ್ಕೂ ವಶನಾಗಿಲ್ಲ. ಆತ ತ್ರಿಗುಣಾತೀತ. ಸತ್ತ್ವ, ರಜಸ್ಸು, ತಮಸ್ಸು ಈ ಯಾವ ಗುಣಕ್ಕೂ ಕಟ್ಟುಬಿದ್ದಿಲ್ಲ. ಹಾಗೇ ಸ್ವಲ್ಪ ಕಣ್ಬಿಟ್ಟು ನೋಡು, ಬಾಲಕ ಹೇಗೆ ತಮೋಗುಣಕ್ಕೆ ವಶನಾಗಿಲ್ಲ ಎಂಬುದನ್ನು. ಈಗ ತಾನೆ ತನ್ನ ಗೆಳೆಯರೊಡನೆ ಹೊಡೆದಾಡಿ ಕಚ್ಚಾಡಿದವ, ಮರುಕ್ಷಣದಲ್ಲಿಯೇ ಅವರನ್ನು ತಬ್ಬಿಕೊಂಡು ಅವರಿಗೆ ಎಷ್ಟೊಂದು ಪ್ರೀತಿ ತೋರಿಸುತ್ತಾನೆ ಮತ್ತೆ ಹೇಗೆ ಅವರೊಡನೆ ಆಟವಾಡುತ್ತಾನೆ! ಆತ ರಜೋಗುಣಕ್ಕೂ ವಶನಾಗಿಲ್ಲ. ಈಗತಾನೆ ಆಟದ ಮನೆ ಕಟ್ಟಿ ಅದನ್ನು ಸಿಂಗರಿಸಲು ಎಷ್ಟೆಷ್ಟೊ ಪ್ರಯತ್ನಮಾಡುತ್ತಿದ್ದವನು, ಮರುಕ್ಷಣ ಅದನ್ನು ಹಾಗೇ ಬಿಟ್ಟುಬಿಟ್ಟು ತಾಯ ಹತ್ತಿರಕ್ಕೆ ಓಡಿಹೋಗಿಬಿಡುತ್ತಾನೆ. ಬಹುಶಃ ಬೆಲೆ ಬಾಳೊ ಒಂದು ಸೊಗಸಾದ ವಸ್ತ್ರವನ್ನು ಹೊದ್ದುಕೊಂಡು ಈಗ ಸುತ್ತಾಡುತ್ತಿರಬಹುದು. ಸ್ವಲ್ಪ ಹೊತ್ತಿನೊಳಗಾಗೇ ಆ ವಸ್ತ್ರ ಮೈ ಮೇಲಿಂದ ಸರಿದು ಎಲ್ಲೋ ಬಿದ್ದುಹೋಗಬಹುದು. ಅದರ ಜ್ಞಾನವೇ ಆತನಿಗೆ ಆಗದೆ ಅದನ್ನು ಆತ ಮರತೇ ಬಿಡಬಹುದು. ಅಥವಾ ಅದನ್ನು ಕಂಕುಳಲ್ಲಿ ಸಿಕ್ಕಿಸಿಕೊಂಡು ಸುತ್ತಾಡಬಹುದು. (ನಗು.) ಆ ಬಾಲಕನನ್ನು, 'ಆಹ! ಇದು ಬಹಳ ಸೊಗಸಾದ ವಸ್ತ್ರ. ಇದು ಯಾರದು?' ಅಂತ ಕೇಳಿದರೆ, ಆತ ಹೇಳುತ್ತಾನೆ: 'ಹ್ಞೂ, ಇದು ನನ್ನ ವಸ್ತ್ರ. ನಮ್ಮ ತಂದೆ ತಂದುಕೊಟ್ಟಿದಾನೆ.' ಆತನನ್ನು, 'ಎಲೋ ತುಂಟ ಹುಡುಗ, ಕೊಡೋ ಆ ವಸ್ತ್ರಾನ ನನಗೆ' ಅಂತ ಕೇಳಿದರೆ, ಆತ ಹೇಳುತ್ತಾನೆ: 'ಉಹ್ಞೂ, ಕೊಡೋದಿಲ್ಲ. ಇದು ನನ್ನದು. ನಮ್ಮ ತಂದೆ ತಂದು ಕೊಟ್ಟಿದಾನೆ.' ಕೆಲವು ನಿಮಿಷಗಳಾದನಂತರ ಆತನನ್ನು ಸ್ವಲ್ಪ ಉಬ್ಬಿಸಿ ಆತನ ಕೈಗೆ ಒಂದೊ ಎರಡೊ ಆಣೆ ಬೆಲೆ ಬಾಳೋ ಒಂದು ಬುಗುರೀನೊ ಅಥವಾ ಒಂದು ಶಿಳ್ಳೀನೊ ಹಾಕಿದೆ ಅಂದರೆ, ಐದು ರೂಪಾಯಿ ಬೆಲೆ ಬಾಳೋ ಆ ವಸ್ತ್ರಾನ ನಿನಗೆ ಕೊಟ್ಟು ಹೊರಟೇಹೋಗುತ್ತಾನೆ. ಅದೇ ರೀತಿಯಾಗಿ ಆತ ಸತ್ತ್ವಗುಣಕ್ಕೂ ವಶನಾಗಿಲ್ಲ. ಈಗ ನೋಡೋಕೆ ತನ್ನ ನೆರೆಹೊರೆಯ ಗೆಳೆಯರನ್ನು ಬಹಳವಾಗಿ ಪ್ರೀತಿಸುತ್ತಿರಬಹುದು; ಅವರನ್ನು ಕಾಣದೆ ಒಂದು ಘಳಿಗೆಯೂ ಇರಲಾರದವನಾಗಿರಬಹುದು. ಆದರೆ ತಂದೆತಾಯಿಯರೊಡನೆ ಬೇರೆ ಸ್ಥಳಕ್ಕೆ ಹೋದ ಅಂದರೆ,

ಅಲ್ಲಿ ಹೊಸ ಗೆಳೆಯರನ್ನು ಸಂಪಾದಿಸಿಕೋತಾನೆ. ಅವರ ಕಡೆ ಆತನ ಪ್ರೀತಿ-ಗೀತಿಯೆಲ್ಲ ಹರಿಯಲಾರಂಭಿಸುತ್ತದೆ. ಒಂದು ವಿಧದಲ್ಲಿ ತನ್ನ ಹಳೇ ಗೆಳೆಯರನ್ನು ಪೂರ್ಣವಾಗಿ ಮರತೇ ಬಿಡುತ್ತಾನೆ. ಆತನಿಗೆ ಜಾತಿಯ ಮೇಲಿನ ಅಭಿಮಾನವೂ ಇಲ್ಲ. ಯಾವನೊ ಒಬ್ಬನ ಸಂಬಂಧವಾಗಿ ತಾಯಿ ಆತನಿಗೆ, 'ಈತ ನಿನ್ನ ಅಣ್ಣ' ಅಂತ ಹೇಳಿಬಿಟ್ಟಳು ಅಂದರೆ, ಅದು ಮಗುವಿಗೆ ವೇದವಾಕ್ಯವೆ. ಈ ಹುಡುಗ ಬ್ರಾಹ್ಮಣ ಪುತ್ರನಾಗಿರ ಬಹುದು, ಆ ಹುಡುಗ ಕಮ್ಮಾರನ ಮಗನಾಗಿರಬಹುದು, ಆದರೂ ಒಂದೇ ತಟ್ಟೆ ಮುಂದೆ ಕುಳಿತು ಇಬ್ಬರೂ ಊಟಮಾಡಿಬಿಡುತ್ತಾರೆ. ಆತನಿಗೆ ಶುಚಿ ಅಶುಚಿ ಎಂಬ ಭೇದ ಭಾವನೆಯೇ ಇಲ್ಲ. ದೇಹಬಾಧೆ ತೀರಿಸಿಕೊಂಡುಬಂದು ಕೈ ಬಾಯಿ ತೊಳೆಯದೆ ಊಟಮಾಡಿಬಿಡುತ್ತಾನೆ. ಆತನಿಗೆ ಜನ ಏನನ್ನುತ್ತಾರೆ ಎಂಬ ನಾಚಿಕೆಯೇ ಇಲ್ಲ. ದೇಹಬಾಧೆ ತೀರಿಸಿಕೊಂಡುಬಂದು ಕುಂಡೆಯನ್ನು ತೊಳೆದುಕೊಂಡನಂತರ ಸಿಕ್ಕಿಸಿಕ್ಕಿದ ವರಿಗೆಲ್ಲ ಕುಂಡೆಯನ್ನು ತೋರಿಸುತ್ತಾನೆ: 'ನೋಡಿ, ನೋಡಿ! ನಾನು ಸರಿಯಾಗಿ ತೊಳೆದುಕೊಂಡಿದೇನೊ ಇಲ್ಲವೊ?'

"'ವೃದ್ಧರ ಅಹಂ' ಎಂಬುದೂ ಇದೆ. (ಡಾಕ್ಟರ್ ನಗುತ್ತಿದಾನೆ.) ವೃದ್ಧರಿಗೆ ಅನೇಕ ಪಾಶಗಳು—ಜಾತಿ, ಅಭಿಮಾನ, ಲಜ್ಜೆ, ಘೃಣ, ಭಯ ಇವುಗಳಿಂದ ಜನಿತ ಪಾಶಗಳು; ಜೊತೆಗೆ ವಿಷಯಬುದ್ಧಿ, ಲೆಕ್ಕಾ ಚಾರದ ಬುದ್ಧಿ, ಕಪಟತೆ ಇವುಗಳಿಂದ ಜನಿತವಾದ ಪಾಶಗಳು. ಯಾರ ಮೇಲಾದರು ಆಕ್ರೋಶ ಉಂಟಾಯಿತು ಅಂದರೆ, ಅದು ಸಹಜವಾಗಿ ಆತನನ್ನು ಬಿಟ್ಟು ತೊಲಗದು; ಬಹಶಃ ಸಾಯೋವರೆಗೆ ಅದು ಆತನನ್ನು ಬಿಟ್ಟು ತೊಲಗದೆ ಹೋಗಬಹುದು. ಜೊತೆಗೆ ಪಾಂಡಿತ್ಯದ ಅಹಂ', 'ಧನದ ಅಹಂ' ಇವೂ ಇವೆ. 'ವೃದ್ಧರ ಅಹಂ' ಎಂಬುದು 'ಅಪಕ್ವ ಅಹಂ.'

(ಡಾಕ್ಟರಿಗೆ) "ನಾಲ್ಕೈದು ವಿಧದ ಜನರಿಗೆ—ವಿದ್ಯೆಯ ಅಹಂ ಕಾರವಿರತಕ್ಕವರಿಗೆ, ಪಾಂಡಿತ್ಯದ ಅಹಂಕಾರವಿರತಕ್ಕವರಿಗೆ, ಧನದ ಅಹಂಕಾರವಿರತಕ್ಕವರಿಗೆ ಜ್ಞಾನ ದೊರೆಯೋದಿಲ್ಲ. ಈ ವಿಧದ ಜನರನ್ನು 'ಇಂಥ ಜಾಗದಲ್ಲಿ ಒಬ್ಬ ದೊಡ್ಡ ಸಾಧುಗಳಿದಾರೆ, ನೋಡೋಕೆ ಬರು ತ್ತೀರ?' ಅಂತ ಕೇಳಿದರೆ, ನಾನಾ ನೆವ ತೆಗೆದುಕೊಂಡು ಅವರು ಅಲ್ಲಿಗೆ ಹೋಗೋದೆ ಇಲ್ಲ. ಅವರು ತಮಗೆ ತಾವೇ ಹೇಳಿಕೋತಾರೆ: 'ನಾವೇ

ಬಹಳ ದೊಡ್ಡ ದೊಡ್ಡ ಘಟಾನ್‌ಘಟಿಗಳು. ಅಂಥಾದ್ದರಲ್ಲಿ ನಾವು ಅವನನ್ನು ನೋಡೋಕೆ ಹೋಗುತ್ತೀವೆಯೆ?'

"ಅಹಂಕಾರಪಡೋದು ತಮೋಗುಣದ ಸ್ವಭಾವ. ಅಹಂಕಾರ, ಅಜ್ಞಾನ ಇವು ತಮೋಗುಣದಿಂದ ಉದ್ಭವವಾಗುತ್ತವೆ.

"ಪುರಾಣದಲ್ಲಿ ಹೇಳಿದೆ, ರಾವಣನದು ರಜೋಗುಣ, ಕುಂಭಕರ್ಣನದು ತಮೋಗುಣ, ವಿಭೀಷಣನದು ಸತ್ತ್ವಗುಣ ಅಂತ. ಈ ಕಾರಣದಿಂದಲೇ ವಿಭೀಷಣ ಶ್ರೀರಾಮಚಂದ್ರನನ್ನು ಪಡೆದುಕೊಂಡ. ತಮಸ್ಸಿನ ಇನ್ನೊಂದು ಗುಣ, ಕ್ರೋಧ. ಕ್ರೋಧ ಉಂಟಾದಾಗ ವಿವೇಚನಾಶಕ್ತಿ ಇರೋದಿಲ್ಲ. ಹನುಮಂತ ಕೋಪೋದ್ರಿಕ್ತನಾಗಿ ಸೀತೆಯ ಗುಡಿಸಲೂ ಸುಟ್ಟುಹೋಗಬಹುದೆಂದು ಒಂದು ಕ್ಷಣವೂ ಯೋಚಿಸದೆ ಲಂಕೆಗೆ ಬೆಂಕಿ ಹಚ್ಚಿಬಿಟ್ಟ.

"ತಮೋಗುಣದ ಮತ್ತೊಂದು ಲಕ್ಷಣ ಕಾಮ. ಒಮ್ಮೆ ಪಾಥುರಘಾಟಿನ ಗಿರೀಂದ್ರಘೋಷ ಹೇಳಿದ, 'ಕಾಮಕ್ರೋಧಾದಿ ರಿಪುಗಳು ನಮ್ಮನ್ನು ಬಿಟ್ಟು ತೊಲಗಿಹೋಗಲೊಲ್ಲದರಿಂದ, ಅವನ್ನು ಹೊಸ ಮಾರ್ಗಕ್ಕೆ ತಿರುಗಿಸಿಬಿಡಬೇಕು' ಅಂತ. ಆವಶ್ಯಕವಾಗಿ ಭಗವಂತನನ್ನು ಕಾಮಿಸಿ; ಸಚ್ಚಿದಾನಂದನೊಡನೆ ವಿಲಾಸಪಡಿ. ಕ್ರೋಧ ಹೋಗದೆ ಹೋಯಿತು ಅಂದರೆ, ತಾಮಸಿಕ ಭಕ್ತಿಯನ್ನು ಆರೋಪಿಸಿಕೊಂಡು ಹೇಳಿ, 'ಏನು? ನಾನು ಶ್ರೀ ದುರ್ಗೆಯ ಹೆಸರನ್ನು ಜಪಿಸಿದೇನೆ. ನನ್ನ ಉದ್ಧಾರ ಆಗೋದಿಲ್ಲ? ನನಗೆ ಇನ್ನು ಪಾಪ ಎಲ್ಲಿಂದ? ಬಂಧನ ಯಾವುದರಿಂದ?' ಅಂತ. ಭಗವಂತನ ಸಾಕ್ಷಾತ್ಕಾರ ಪಡೆಯಲು ಲೋಭಪಡಿ. ಭಗವಂತನ ರೂಪಿನಿಂದ ಮೋಹಿತರಾಗಿಬಿಡಿ. ಅಹಂಕಾರ ಪಡಬೇಕಾಗಿದ್ದರೆ, 'ನಾನು ಭಗವಂತನ ದಾಸ, ನಾನು ಭಗವಂತನ ಸಂತಾನ' ಎಂಬುದಾಗಿ ಅಹಂಕಾರಪಡಿ. ಈ ರೀತಿಯಾಗಿ ಈ ಆರು ರಿಪುಗಳ ಗತಿಯನ್ನು ತಿರುಗಿಸಿಬಿಡಬೇಕು."

ಡಾಕ್ಟರ್: "ಇಂದ್ರಿಯ ಸಂಯಮ ಬಹಳ ಕಷ್ಟ. ಅವು ಅಂಥಾ ತುಂಟ ಕುದುರೆಗಳು, ಅವುಗಳ ಎರಡು ಕಣ್ಣಿಗೂ ಕಣ್ಕಾಪು ಹಾಕಲೇಬೇಕು. ಕೆಲಕೆಲವು ಕುದುರೆಗಳ ಕಣ್ಣನ್ನು ಪೂರ್ಣವಾಗೇ ಮುಚ್ಚಿಬಿಡಬೇಕಾಗುತ್ತದೆ."

ಶ್ರೀರಾಮಕೃಷ್ಣರು: "ಭಗವಂತನ ಕೃಪೆಯೊಮ್ಮೆ ದೊರೆತುದೇ

ಆದರೆ, ಆತನ ದರ್ಶನವೊಮ್ಮೆ ದೊರೆತುದೇ ಆದರೆ, ಒಮ್ಮೆ ಆತ್ಮಸಾಕ್ಷಾತ್ಕಾರ ದೊರೆತುದೇ ಆದರೆ, ಮತ್ತೆ ಯಾವ ಭಯವೂ ಇರದು. ಬಳಿಕ ಈ ಆರು ರಿಪುಗಳೂ ನಮಗೇನನ್ನೂ ಮಾಡಲಾರವು.

"ನಾರದ, ಪ್ರಹ್ಲಾದ ಇವರೇ ಮೊದಲಾದ ನಿತ್ಯಸಿದ್ಧ ಮಹಾಪುರುಷರಿಗೆ ತಮ್ಮ ಕಣ್ಣಿಗೆ ಕಣ್ಕಾಪನ್ನು ಹಾಕಿಕೊಳ್ಳಬೇಕಾದ ಆವಶ್ಯಕತೆಯೇನಿರಲಿಲ್ಲ. ಯಾವ ಮಗು ತಂದೆಯ ಕೈಯನ್ನು ಹಿಡಿದು ಗದ್ದೆ ತೆವರಿ ಮೇಲೆ ನಡೆದುಹೋಗುತ್ತಿರುವುದೊ, ಅದು ಎಚ್ಚರ ತಪ್ಪಿ ತಂದೆಯ ಕೈ ಬಿಟ್ಟುಬಿಟ್ಟು ಕಾಲುವೆಗೆ ಬೀಳೋ ಸಂಭವವಿರುತ್ತದೆ. ಆದರೆ ತಂದೆಯೇ ಮಗುವಿನ ಕೈಯನ್ನು ಹಿಡಿದುಕೊಂಡಿದ್ದರೆ ಅದು ಎಂದಿಗೂ ಕಾಲುವೆಗೆ ಬೀಳೋ ಹಾಗೇ ಇಲ್ಲ."

ಡಾಕ್ಟರ್: "ಆದರೆ ತಂದೆ ಮಗುವಿನ ಕೈ ಹಿಡಿದುಕೊಂಡಿರೋದು ಒಳ್ಳೆಯದಲ್ಲ."

ಶ್ರೀರಾಮಕೃಷ್ಣರು: "ನೀನು ಹಾಗೆ ಭಾವಿಸಬೇಕಾಗಿಲ್ಲ. ಮಹಾಪುರುಷರದು ಬಾಲಸ್ವಭಾವ. ಭಗವಂತನ ಕಣ್ಣೆದುರಿಗೆ ಅವರು ಸತತ ಮಕ್ಕಳೇ. ಅವರಲ್ಲಿ ಅಹಂಕಾರವೆಂಬುದು ಇಲ್ಲವೇ ಇಲ್ಲ. ಅವರ ಇಡೀ ಶಕ್ತಿ ಭಗವಂತನ ಶಕ್ತಿ, ಅವರ ತಂದೆಯ ಶಕ್ತಿ. ಅವರಿಗೆ ಸ್ವಂತದ್ದು ಎಂಬುದು ಏನೂ ಇಲ್ಲ. ಅದರಲ್ಲಿ ಅವರಿಗೆ ದೃಢ ವಿಶ್ವಾಸ."

ಡಾಕ್ಟರ್: "ಕುದುರೆಗೆ ಕಣ್ಕಾಪು ಹಾಕದೆ ಇತ್ತು ಅಂದರೆ, ಅದು ಮುಂದುವರಿಯಲು ಇಚ್ಛೆಪಡುವುದೆ? ರಿಪುಗಳು ವಶವಾಗದೆ ಇತ್ತು ಅಂದರೆ, ಭಗವಂತನ ಸಾಕ್ಷಾತ್ಕಾರ ದೊರಕುವುದೆ?"

ಶ್ರೀರಾಮಕೃಷ್ಣರು: "ನೀನು ಹೇಳುತ್ತಿರೋದು ವಿಚಾರಮಾರ್ಗಕ್ಕೆ ಅನುಗುಣವಾಗಿ. ಇದಕ್ಕೆ ಜ್ಞಾನಮಾರ್ಗ ಅಂತ ಹೆಸರು. ಈ ಮಾರ್ಗದಿಂದಲೂ ಭಗವಂತನನ್ನು ಪಡೆಯಬಹುದು. ಜ್ಞಾನಿಗಳು ಹೇಳುತ್ತಾರೆ, ಮೊದಲು ಚಿತ್ತಶುದ್ಧಿಯಾಗಬೇಕು ಎಂದು. ಮೊದಲು ಸಾಧನೆ ಮಾಡಬೇಕು; ಬಳಿಕ ಜ್ಞಾನ ದೊರೆಯುತ್ತದೆ.

"ಭಕ್ತಿಮಾರ್ಗದಿಂದಲೂ ಆತನನ್ನು ಪಡೆದುಕೊಳ್ಳಬಹುದು. ಒಮ್ಮೆ ಭಗವಂತನ ಪಾದಪದ್ಮಗಳಲ್ಲಿ ಭಕ್ತಿಯುಂಟಾಯಿತು ಎಂದರೆ, ಆತನ ನಾಮಗುಣಕೀರ್ತನೆಯನ್ನು ಮಾಡಲು ಇಚ್ಛೆಯಾಗಲಾರಂಭಿಸಿತು ಎಂದರೆ,

ಬಳಿಕ ಇಂದ್ರಿಯ ಸಂಯಮಕ್ಕಾಗಿ ಹೆಚ್ಚು ಪ್ರಯತ್ನವನ್ನೇನೂ ಮಾಡಬೇಕಾಗಿರೋದಿಲ್ಲ. ರಿಪುವಿನ ವಶ ತನ್ನಷ್ಟಕ್ಕೆ ತಾನೇ ಆಗಿಬಿಡುತ್ತದೆ.

"ಒಬ್ಬ ಈಗ ತಾನೆ ತನ್ನ ಪುತ್ರನನ್ನು ಕಳೆದುಕೊಂಡು ಶೋಕಪಡುತ್ತಿದಾನೆ ಅಂತ ಇಟ್ಟುಕೊಳ್ಳಿ. ಆ ಸ್ಥಿತಿಯಲ್ಲಿ ಇಂದೇ ಬೇರೆಯವರೊಡನೆ ಜಗಳವಾಡಲೇ ಆಗಲಿ, ಅಥವಾ ಔತಣದ ಮನೆಗೆ ಹೋಗಿ ಊಟಮಾಡಿ ಬರಲೇ ಆಗಲಿ ಆತನಿಗೆ ಸಾಧ್ಯವಾಗುವುದೆ ? ಇಂದೇ ಪರರೆದುರಿಗೆ ತನ್ನ ದರ್ಪವನ್ನು ತೋರಿಸಿಕೊಳ್ಳುವುದೇ ಆಗಲಿ ಅಥವಾ ಇಂದ್ರಿಯ ಸುಖಗಳನ್ನು ಅನುಭವಿಸುವುದೇ ಆಗಲಿ ಸಾಧ್ಯವಾಗುವುದೆ ?

"ದೀಪದ ಹುಳು ಒಮ್ಮೆ ಏನಾದರು ಬೆಳಕನ್ನು ಕಂಡುಬಿಟ್ಟಿತು ಅಂದರೆ, ಅದು ಇನ್ನು ಕತ್ತಲೆಯಲ್ಲಿ ಇರಬಲ್ಲದೆ ?"

ಡಾಕ್ಟರ್ ನಗುತ್ತ: "ಇಲ್ಲ, ಸಾಧ್ಯವಿಲ್ಲ. ಉರಿಯಿಂದ ಸುಟ್ಟು ಹೋಗಿ ಸಾಯಬೇಕಾಗಿ ಬಂದರೂ, ಅದಕ್ಕೆ ಅದೇ ಬೇಕು."

ಶ್ರೀರಾಮಕೃಷ್ಣರು: "ಓ, ಅಲ್ಲ. ಅದು ಹಾಗಲ್ಲ. ಭಕ್ತ ದೀಪದ ಹುಳುವಿನಂತೆ ಸುಟ್ಟು ಸತ್ತುಹೋಗೋದಿಲ್ಲ. ಭಕ್ತ ಯಾವ ಬೆಳಕಿನ ಕಡೆ ಓಡುತ್ತಾನೊ ಅದು ವಜ್ರದ ಬೆಳಕಿನಂತಿದೆ. ವಜ್ರದ ಬೆಳಕು ಉಜ್ಜ್ವಲವಾದುದೇನೊ ನಿಜ, ಆದರೆ ಅದು ತಂಪಾಗಿಯೂ ಹಿತವಾಗಿಯೂ ಇರುತ್ತದೆ. ಆ ಬೆಳಕಿನಿಂದ ಶರೀರ ಸುಟ್ಟುಹೋಗದು; ಶಾಂತಿ ದೊರೆಯುತ್ತದೆ; ಆನಂದ ದೊರೆಯುತ್ತದೆ.

"ವಿಚಾರದ ಮೂಲಕ, ಜ್ಞಾನಯೋಗದ ಮೂಲಕ ಆತನನ್ನು ಪಡೆದುಕೊಳ್ಳಬಹುದು. ಆದರೆ ಇದು ಬಹಳ ಕಠಿನ ಮಾರ್ಗ. ಬಾಯಲ್ಲಿ ಬೇಕಾದರೆ ಸುಲಭವಾಗಿ ಹೇಳಿಬಿಡಬಹುದು, 'ನಾನು ಶರೀರ, ಬುದ್ಧಿ, ಮನಸ್ಸು ಅಲ್ಲ; ನನಗೆ ರೋಗ, ಶೋಕ, ಅಶಾಂತಿ ಇಲ್ಲ; ನಾನು ಸಚ್ಚಿದಾನಂದ ಸ್ವರೂಪ; ನಾನು ಸುಖ ದುಃಖಗಳಿಗತೀತ; ನಾನು ಇಂದ್ರಿಯಗಳ ವಶನಲ್ಲ' ಅಂತ. ಆದರೆ ಅವನ್ನು ಅಂತರ್ಗತಮಾಡಿಕೊಂಡು ಅನುಷ್ಠಾನಕ್ಕೆ ತರೋದು ಬಹಳ ಕಠಿನ. ಮುಳ್ಳಿನಿಂದ ಕೈ ಗೀರಿಹೋಗಿಬಿಟ್ಟಿದೆ, 'ಬಳಬಳ' ಅಂತ ರಕ್ತ ಸುರಿಯುತ್ತಿದೆ, ಆದರೂ ಹೇಳುತ್ತಿದೇನೆ, 'ಎಲ್ಲಿ, ಯಾವ ಮುಳ್ಳೂ ನನ್ನ ಕೈಯನ್ನು ಗೀರಿಲ್ಲವಲ್ಲ, ನಾನು ಚೆನ್ನಾಗಿದೇನಲ್ಲ' ಅಂತ. ಹೀಗೆ ಹೇಳೋದು ಸರಿಯಾದುದಲ್ಲ. ಹಾಗೆ ಹೇಳಬೇಕಾದರೆ, ಮೊದಲು ಆ ಮುಳ್ಳನ್ನು ಜ್ಞಾನಾಗ್ನಿಯಲ್ಲಿ ಸುಡಬೇಕು.

"ಅನೇಕರು ಭಾವಿಸುತ್ತಾರೆ ಪುಸ್ತಕ ಓದದೆ ಜ್ಞಾನ ದೊರೆಯದು, ವಿದ್ಯೆ ದೊರೆಯದು ಅಂತ. ಆದರೆ ಓದುವುದಕ್ಕಿಂತ ಕೇಳುವುದು ಮೇಲು, ಕೇಳುವುದಕ್ಕಿಂತ ನೋಡುವುದು ಮೇಲು. ಕಾಶಿಯ ವಿಷಯವಾಗಿ ಓದೋಕು, ಕಾಶಿಯ ವಿಷಯವಾಗಿ ಕೇಳೋಕು, ಕಾಶಿಯ ದರ್ಶನ ಮಾಡೋಕು ಒಂದಕ್ಕೊಂದಕ್ಕೆ ಇರೋ ತಾರತಮ್ಯ ಬಹಳ ಬಹಳ.

"ಯಾರು ಚದುರಂಗದಾಟದಲ್ಲಿ ತೊಡಗಿದಾರೊ ಅವರಿಗೆ ಕಾಯಿಗಳನ್ನು ಹೇಗೆ ನಡೆಸಬೇಕೆಂಬುದು ಅಷ್ಟು ಸ್ಪಷ್ಟವಾಗಿ ಮನಸ್ಸಿಗೆ ಹೊಳೆಯದು. ಆದರೆ ಪ್ರೇಕ್ಷಕರಿಗೆ ಅನೇಕವೇಳೆ ಬಹಳ ಚೆನ್ನಾಗಿ ಹೊಳೆಯುತ್ತದೆ. ಸಂಸಾರಿಗಳು ಭಾವಿಸುತ್ತಾರೆ ತಾವು ಬಹಳ ಬುದ್ಧಿವಂತರು ಅಂತ. ಆದರೆ ಅವರು ವಿಷಯಾಸಕ್ತರು; ಆಟದಲ್ಲಿ ತೊಡಗಿದಾರೆ. ತಮಗೆ ನಿಜವಾಗಿ ಶ್ರೇಯಸ್ಸನ್ನು ತರೋದು ಯಾವುದು ಎಂಬುದನ್ನು ಅವರು ಸರಿಯಾಗಿ ಅರಿತುಕೊಳ್ಳಲಾರರು. ಆದರೆ ಸಂಸಾರಾಶ್ರಮತ್ಯಾಗಿ ಸಾಧುಗಳು ವಿಷಯ ವಸ್ತುಗಳಲ್ಲಿ ಅನಾಸಕ್ತರಾಗಿದಾರೆ; ಸಂಸಾರಿಗಳಿಗಿಂತ ಬುದ್ಧಿವಂತರು. ತಾವು ಆಡದೆ ಇರೋದರಿಂದ, ಸಂಸಾರಿಗಳಿಗೆ ಯಾವುದು ಶ್ರೇಯಸ್ಸನ್ನು ತರುತ್ತದೆ ಎಂಬುದು ಇವರಿಗೆ ಬಹಳ ಸ್ಪಷ್ಟವಾಗಿ ಗೊತ್ತಾಗುತ್ತದೆ."

ಭಕ್ತರಿಗೆ ಡಾಕ್ಟರ್: "ಪುಸ್ತಕ ಓದಿದ್ದರೆ ಇವರಿಗೆ (ಪರಮಹಂಸರಿಗೆ) ಇಷ್ಟೊಂದು ಜ್ಞಾನ ದೊರೆಯುತ್ತಿರಲಿಲ್ಲ. ಫ್ಯಾರಡೆ ಪ್ರಕೃತಿಯ ಅಂತರಾಳವನ್ನು ಹೊಕ್ಕು ನೋಡುತ್ತಿದ್ದ; ಅದಕ್ಕಾಗೇ ಆತನಿಗೆ ಅನೇಕ ವೈಜ್ಞಾನಿಕ ಸತ್ಯಗಳನ್ನು ಆವಿಷ್ಕಾರ ಮಾಡಲು ಸಾಧ್ಯವಾಯಿತು. ಕೇವಲ ಪುಸ್ತಕ ಜ್ಞಾನದಿಂದಲೇ ಆ ಕಾರ್ಯ ಸಾಧ್ಯವಾಗುತ್ತಿರಲಿಲ್ಲ. ಗಣಿತದ ಸೂತ್ರಗಳು ಸುಮ್ಮನೆ ತಲೆಯನ್ನು ಹದಗೆಡಿಸಿಬಿಡುತ್ತವೆ; ಸ್ವತಂತ್ರಾಲೋಚನಾ ಶಕ್ತಿಗೆ ಬಹಳವಾಗಿ ಅಡಚಣೆಗಳನ್ನು ತಂದೊಡ್ಡಿಬಿಡುತ್ತವೆ."

ಶ್ರೀರಾಮಕೃಷ್ಣರು: "ಪಂಚವಟಿಯ ನೆಲದ ಮೇಲೆ ಬಿದ್ದು ಹೊರಳಾಡುತ್ತ ಭಗವತಿಯನ್ನು ಅತ್ಯಂತ ವ್ಯಾಕುಲತೆಯಿಂದ ಕರೆಯುತ್ತಿದ್ದಾಗ, ನಾನು ಭಗವತಿಗೆ ಪ್ರಾರ್ಥನೆಮಾಡಿದೆ, 'ತಾಯಿ, ಕರ್ಮಿಗಳು ಕರ್ಮಕಾಂಡವನ್ನು ಅನುಸರಿಸಿ ಏನನ್ನು ಪಡೆದುಕೊಳ್ಳುತ್ತಾರೊ, ಯೋಗಿಗಳು ಯೋಗಾಭ್ಯಾಸವನ್ನು ಮಾಡಿ ಏನನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೊ, ಜ್ಞಾನಿಗಳು ವಿಚಾರದಲ್ಲಿ ತೊಡಗಿ ಏನನ್ನು ಅರಿತುಕೊಳ್ಳುತ್ತಾರೊ ಅವೆಲ್ಲ

ವನ್ನೂ ನನಗೆ ಅಪೌರುಷೇಯವಾಗಿ ತಿಳಿಸಿಕೊಡು' ಅಂತ. ಆಗ ಇನ್ನೂ ಏನೇನೊ ನಡೆಯಿತು! ಅವನ್ನೆಲ್ಲ ನಾನು ನಿಮಗೆ ಹೇಗೆ ತಿಳಿಸಲಿ?

"ಆಹ, ನನಗೇನು ಅವಸ್ಥೆ ಬಂದುಹೋದುವು! ನಿದ್ರೆ ಸಂಪೂರ್ಣ ವಾಗಿ ನನ್ನನ್ನು ಬಿಟ್ಟುಬಿಟ್ಟಿತ್ತು."

ಪರಮಹಂಸರು ಹಾಡುತ್ತಿದಾರೆ:

ಅರಿತೆ ನಾನು ಅರಿತೆ ನಾನು — ನಿಜದನೆಲೆಯನರಿತೆನು.
ಭಾವದಂತರಂಗವರಿತ ವ್ಯಕ್ತಿಯೊಬ್ಬ ದೊರೆತನು!
ಎಂದೆಂದೂ ಇರುಳಿಲ್ಲದ ಬೆಳಕನೂರಿನಿಂದ ಅವನು
ನಮ್ಮಲ್ಲಿಗೆ ಬಂದನು.
ಅವನ ಸಂಗದಿಂದ ನಾನು ಹಗಲಾವುದು ಇರುಳಾವುದು
ಎಂಬುದನೂ ತಿಳಿಯೆನು!
ಜಪತಪಾದಿ ಕರ್ಮಗಳೂ ನೀರಸವೆಂದರಿತೆ ನಾನು,
ಹಳೆಯ ನಿದ್ರೆ ಹರಿಯಿತು.
ತೂಗಡಿಸುವುದೆಲ್ಲಿ ಬಂತು? — ನಿರಂತರವು ಯೋಗದಲ್ಲಿ
ಎಚ್ಚರಿರುವುದಾಯಿತು!

ಅವರು ಮಾತು ಮುಂದುವರಿಸಿದರು: "ನಾನು ಪುಸ್ತಕ-ಗಿಸ್ತಕ ಏನನ್ನೂ ಓದಿದವನಲ್ಲ. ಆದರೆ ಭಗವತಿಯ ನಾಮಜಪ ಮಾಡುತ್ತಿರೋದ ರಿಂದ ಎಲ್ಲರೂ ನನ್ನನ್ನು ಗೌರವಿಸುತ್ತಿದಾರೆ. ಶಂಭುಮಲ್ಲಿಕ ನನ್ನ ವಿಷಯ ವಾಗಿ ಹೇಳಿದ, 'ಕೈಯಲ್ಲಿ ಕತ್ತಿಯೂ ಇಲ್ಲ ಗುರಾಣಿಯೂ ಇಲ್ಲ; ಆದರೂ ವೀರಸಿಂಗ್!' ಅಂತ." (ಎಲ್ಲರೂ ನಗುತ್ತಿದಾರೆ.)

ಗಿರೀಶಘೋಷ ಬುದ್ಧಚರಿತೆಯ ನಾಟಕದಲ್ಲಿ ಅಭಿನಯಿಸಿದುದರ ಸಂಬಂಧವಾಗಿ ಮಾತುಕತೆ ಆರಂಭವಾಯಿತು. ಗಿರೀಶಘೋಷ ಡಾಕ್ಟರಿಗೆ ಆಹ್ವಾನವಿತ್ತಿದ್ದ. ಡಾಕ್ಟರ್ ಅದನ್ನು ನೋಡಿ ಬಹಳ ಆನಂದಪಟ್ಟ.

ಗಿರೀಶನಿಗೆ ಡಾಕ್ಟರ್: "ನೀನು ಬಹಳ ಕೆಟ್ಟ ಮನುಷ್ಯ. ನಾನು ಪ್ರತಿದಿನವೂ ನಾಟಕಕ್ಕೆ ಹೋಗಿಬರಬೇಕಾಗಿಬಂದುಬಿಟ್ಟಿದೆ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನನಗೇನೂ ಅರ್ಥವಾಗುತ್ತಿಲ್ಲ ವಲ್ಲ. ಅವನು ಏನು ಹೇಳುತ್ತಿದಾನೆ?"

ಮಾಸ್ಟರ್: "ಅವನ ನಾಟಕ ಡಾಕ್ಟರಿಗೆ ಬಹಳವಾಗಿ ಹಿಡಿಸಿ ಬಿಟ್ಟಿದೆ."

ಶ್ರೀರಾಮಕೃಷ್ಣರು ಈಶಾನನಿಗೆ: "ನೀನೇಕೆ ಬಾಯಿ ತೆರೆಯುಬಾರದು? (ಡಾಕ್ಟರನ್ನು ತೋರಿಸಿ) ಈತ ಅವತಾರವನ್ನು ಒಪ್ಪುತ್ತಿಲ್ಲವಲ್ಲ."

ಈಶಾನ: "ನಾನು ಏನನ್ನು ತಾನೆ ಹೇಳಲಿ? ವಾದ ವಿವಾದ ನನಗೆ ರುಚಿಸುತ್ತಿಲ್ಲ."

ಶ್ರೀರಾಮಕೃಷ್ಣರು ವಿರಕ್ತರಾಗಿ: "ಏಕೆ? ಸರಿ ಎಂದು ತೋರಿದುದನ್ನು ಹೇಳೋದಿಲ್ಲ?"

ಈಶಾನ ಡಾಕ್ಟರಿಗೆ: "ನೋಡಿ, ಅಹಂಕಾರದ ದೆಸೆಯಿಂದ ನಮ್ಮಲ್ಲಿ ವಿಶ್ವಾಸ ಎಂಬುದು ಬಹಳ ಕಡಮೆ. ಕಾಕಭೂಷಂಡಿ ಮೊದಲು ಮೊದಲು ರಾಮಚಂದ್ರ ಅವತಾರಪುರುಷ ಎಂಬುದನ್ನು ಒಪ್ಪಿಕೊಳ್ಳಲಿಲ್ಲ. ಕೊನೆಗೆ ಚಂದ್ರಲೋಕ, ದೇವಲೋಕ, ಕೈಲಾಸ ಇವುಗಳಿಗೆಲ್ಲ ಓಡಿ ಹೋದರೂ ರಾಮನ ಬಾಣದಿಂದ ತಪ್ಪಿಸಿಕೊಳ್ಳಲಾಗದಿರೋದನ್ನು ನೋಡಿ, ತಾನೇ ಆತನ ಕೈಗೆ ಸಿಕ್ಕಿಬಿದ್ದು ಆತನಲ್ಲಿ ಶರಣಾಗತಿಯನ್ನು ಪಡೆಯಿತು. ಶ್ರೀರಾಮಚಂದ್ರ ಅದನ್ನು ಹಿಡಿದುಕೊಂಡು ನುಂಗಿಬಿಟ್ಟ. ಆಗ ತಾನು ತನ್ನ ಎಂದಿನ ಮರದ ಮೇಲೆ ಕುಳಿತಿರೋ ಹಾಗೆ ಭೂಷಂಡಿಗೆ ಅನುಭವವಾಯಿತು. ಈ ರೀತಿಯಾಗಿ ಅದರ ಅಹಂಕಾರ ಪೂರ್ಣವಾಗಿ ಚೂರ್ಣವಾಗಿ ಹೋದಮೇಲೆ ಅದರ ಅನುಭವಕ್ಕೆ ಬಂತು, ಶ್ರೀರಾಮಚಂದ್ರ ನೋಡೋಕೇನೊ ನಮ್ಮಂಥ ಒಬ್ಬ ಸಾಮಾನ್ಯ ಮನುಷ್ಯನೆ, ಆದರೆ ಆತನ ಹೊಟ್ಟೆಯೊಳಗೇನೆ ಇಡೀ ಬ್ರಹ್ಮಾಂಡವೇ — ಆಕಾಶ, ಚಂದ್ರ, ಸೂರ್ಯ, ನಕ್ಷತ್ರ, ಸಮುದ್ರ, ಪರ್ವತ; ಜೀವ, ಜಂತು, ಗಿಡ, ಮರ ಇತ್ಯಾದಿ — ಇದೆ ಅಂತ."

ಶ್ರೀರಾಮಕೃಷ್ಣರು ಡಾಕ್ಟರಿಗೆ: "ಇದೊಂದಿಷ್ಟನ್ನ — ಆತನೇ ಸ್ವರಾಟನೂ ಹೌದು, ವಿರಾಟನೂ ಹೌದು ಎಂಬುದನ್ನ — ಅರಿತುಕೊಳ್ಳೋದು ಬಹಳ ಕಷ್ಟ. ನಿತ್ಯ ಯಾರದೊ ಆತನದೇ ಲೀಲೆ. ಮನುಷ್ಯ-ದೇಹಧಾರಣೆಮಾಡಿಕೊಂಡು ಭಗವಂತ ಬರಲಾರ ಅಂತ ಕ್ಷುದ್ರ ಬುದ್ಧಿಯುಳ್ಳವರಾದ ನಾವು ಕಡಾಖಂಡಿತವಾಗಿ ಹೇಳೋ ಬಗೆ ಹೇಗೆ? ನಮ್ಮ ಅಲ್ಪ ಮತಿ ಇವನ್ನೆಲ್ಲ ಗ್ರಹಿಸಬಲ್ಲದೆ? ಒಂದು ಸೇರಿನ ಗಡಿಗೆ ನಾಲ್ಕು ಸೇರು ಹಾಲನ್ನು ಹಿಡಿಸುವುದೆ?

"ಇದಕ್ಕಾಗೇ ಯಾರು ಭಗವಂತನ ಸಾಕ್ಷಾತ್ಕಾರ ಪಡೆದಿದಾರೊ

ಅಂಥ ಸಾಧು ಮಹಾತ್ಮರ ವಾಕ್ಯಗಳಲ್ಲಿ ವಿಶ್ವಾಸವಿಡಬೇಕು. ವಕೀಲರು ಮೊಕದ್ದಮೆಯಲ್ಲೇ ನಿರತರಾಗಿರೋ ಹಾಗೆ, ಸಾಧುಗಳು ಭಗವಚ್ಚಿಂತನೆಯಲ್ಲೇ ನಿರತರಾಗಿರುತ್ತಾರೆ. ಕಾಕಭೂಷಂಡಿ ಕಥೆಯಲ್ಲಿ ನಿನಗೆ ವಿಶ್ವಾಸವಿದೆಯೆ ?''

ಡಾಕ್ಟರ್: "ಅದರಲ್ಲಿ ಯಾವುದು ಸರಿ ಅಂತ ತೋರಿತೊ ಅದನ್ನು ಒಪ್ಪಿಕೊಂಡುಬಿಟ್ಟೆ. ಭಗವಂತನೇ ತನ್ನ ನಿಜಸ್ವರೂಪವನ್ನು ಮುಮುಕ್ಷುವಿಗೆ ತೋರಿಸಿಕೊಟ್ಟುಬಿಟ್ಟದ್ದೇ ಆದರೆ, ಎಲ್ಲಾ ತೊಂದರೆಗಳೂ ಕೊನೆಗಾಣುತ್ತವೆ. ಬಳಿಕ ಯಾವ ಗೊಂದಲವೂ ಇರದು. ರಾಮನನ್ನು ಅವತಾರಪುರುಷ ಅಂತ ನಾನು ಯಾವ ಬಾಯಿಂದ ಹೇಳಲಿ? ಮೊದಲನೆಯದಾಗಿ ವಾಲಿಯ ವಧೆ ಕಡೆ ನೋಡಿ. ಕಳ್ಳನ ಹಾಗೆ ಮರದ ಹಿಂದೆ ಅವಿತುಕೊಂಡು ಬಾಣ ಬಿಟ್ಟು ಆತನನ್ನು ಕೊಂದುಹಾಕಿದ. ಇದು ಮನುಷ್ಯಸಹಜವಾದುದೇ ವಿನಾ ದೇವಸಹಜವಾದುದಲ್ಲ.''

ಗಿರೀಶ: "ಮಹಾಶಯರೆ, ಇಂಥ ಕೆಲಸ ಭಗವಂತನೊಬ್ಬನಿಗೇ ಸಾಧ್ಯ.''

ಡಾಕ್ಟರ್: "ಬಳಿಕ ಸೀತೆಯನ್ನು ವನವಾಸಕ್ಕೆ ಕಳುಹಿಸಿದುದರ ಕಡೆ ನೋಡು.''

ಗಿರೀಶ: "ಮಹಾಶಯರೆ, ಈ ಕಾರ್ಯವೂ ಭಗವಂತನೊಬ್ಬನಿಗೆ ಸಾಧ್ಯವೇ ಹೊರತು ಮನುಷ್ಯನಿಗೆ ಸಾಧ್ಯವಿಲ್ಲ.''

ಡಾಕ್ಟರಿಗೆ ಈಶಾನ: "ನೀವು ಅವತಾರವನ್ನು ಏಕೆ ಒಪ್ಪುತ್ತಿಲ್ಲ? ಈಗ ತಾನೆ ನೀವು ಹೇಳಿದಿರಿ, ಭಗವಂತ ಈ ಆಕಾರಗಳನ್ನೆಲ್ಲ ಸೃಷ್ಟಿಸಿರೋದರಿಂದ ಆತನಿಗೂ ಒಂದು ಆಕಾರವಿದೆ; ಮನಸ್ಸನ್ನು ಸೃಷ್ಟಿಸಿರೋದರಿಂದ ಆತ ನಿರಾಕಾರ ಅಂತ. ಈಗೊಂದು ಕ್ಷಣದ ಹಿಂದೆ ಹೇಳಿದಿರಿ ಭಗವಂತನ ಕೆಲಸವನ್ನು ಏನೂ ಅಂತ ಹೇಳೋಣ. ಆತನ ಕೈಯಲ್ಲಿ ಎಲ್ಲವೂ ಸಾಧ್ಯ ಎಂದು.''

ಶ್ರೀರಾಮಕೃಷ್ಣರು ನಗುತ್ತ: "ಭಗವಂತ ಅವತರಿಸಬಲ್ಲನೆಂಬ ವಿಷಯವನ್ನು ಇವರ ಸೈನ್ಸ್ ಪುಸ್ತಕದಲ್ಲಿ ಬರೆದಿಲ್ಲವಲ್ಲ; ಆದ್ದರಿಂದ ಈತ ನಂಬೋ ಬಗೆ ಹೇಗೆ? (ಎಲ್ಲರೂ ನಗುತ್ತಾರೆ.)

"ಒಂದು ಕಥೆ ಕೇಳಿ. ಒಮ್ಮೆ ಒಬ್ಬ ತನ್ನ ಸ್ನೇಹಿತನಿಗೆ ಹೇಳಿದ: 'ನೋಡು, ಈಗ ತಾನೆ ನಾನು ನೋಡಿ ಬಂದೆ. ಆ ಅಗ್ರಹಾರದಲ್ಲಿ

ಆತನ ಮನೆ "ಢಬಾರ್" ಅಂತ ಮುರಿದು ಕೆಳಕ್ಕೆ ಬಿತ್ತು.' ಆ ಸ್ನೇಹಿತ ಇಂಗ್ಲಿಷು ವಿದ್ಯಾಭ್ಯಾಸ ಪಡೆದಿದ್ದ. ಆತ ಹೇಳಿದ: 'ಒಂದು ನಿಮಿಷ ತಾಳು. ಪೇಪರ್ ನೋಡಿಬರುತ್ತೇನೆ.' ಪೇಪರಿನಲ್ಲಿಹುಡುಕಿ ನೋಡುತ್ತಾನೆ, ಮನೆ ಮುರಿದುಬಿದ್ದುದರ ಸುದ್ದಿಸಮಾಚಾರವೇ ಇಲ್ಲ. ಆಗ ಆತ ಹೇಳಿದ, 'ನೀನು ಹೇಳಿದುದನ್ನು ನಾನು ನಂಬೋದಿಲ್ಲ. ಏಕೆ ಮತ್ತೆ, ಮನೆ ಮುರಿದುಬಿದ್ದ ಸಮಾಚಾರವನ್ನು ಪೇಪರಿನಲ್ಲಿ ಹಾಕೇ ಇಲ್ಲವಲ್ಲ. ನಿನ್ನ ಮಾತು ಬರೀ ಸುಳ್ಳು.'" (ಎಲ್ಲರೂ ನಗುತ್ತಾರೆ.)

ಗಿರೀಶ ಡಾಕ್ಟರಿಗೆ: "ಶ್ರೀಕೃಷ್ಣ ಭಗವಂತ ಎಂಬೋದನ್ನು ನೀವು ಒಪ್ಪಲೇಬೇಕು. ಆತ ಕೇವಲ ಮನುಷ್ಯ ಮಾತ್ರ ಅಂತ ನೀವು ಹೇಳಲು ನಾನು ಬಿಟ್ಟುಕೊಡೋದಿಲ್ಲ. ಆತ ಒಬ್ಬ ರಾಕ್ಷಸ, ಇಲ್ಲದಿದ್ದರೆ ಭಗವಂತ ಎಂಬುದಾಗಿ ಒಪ್ಪಲೇಬೇಕು."

ಶ್ರೀರಾಮಕೃಷ್ಣರು: "ಸರಳನಲ್ಲದವನಿಗೆ ಅಷ್ಟು ಬೇಗ ಭಗವಂತನಲ್ಲಿ ವಿಶ್ವಾಸ ಹುಟ್ಟದು. ವಿಷಯಾಸಕ್ತರಿಂದ ಬಹಳ ದೂರದಲ್ಲೇ ಭಗವಂತ ನಿಲ್ಲುತ್ತಾನೆ. ವಿಷಯಬುದ್ಧಿ ಇತ್ತು ಎಂದರೆ ಹೃದಯದಲ್ಲಿ ಸಂಶಯ ಮನೆಮಾಡಿಕೊಳ್ಳುತ್ತದೆ ಮತ್ತು ನಾನಾ ವಿಧದ ಅಹಂಕಾರಗಳು—ಪಾಂಡಿತ್ಯದ ಅಹಂಕಾರ, ಧನದ ಅಹಂಕಾರ ಇವೇ ಮೊದಲಾದುವು ಬಂದುಬಿಡುತ್ತವೆ. (ಡಾಕ್ಟರನ್ನು ತೋರಿಸಿ) ಈತ, ಆದರೆ ಸರಳ."

ಡಾಕ್ಟರಿಗೆ ಗಿರೀಶ: "ಮಹಾಶಯರೆ, ನಿಮ್ಮ ಅಭಿಪ್ರಾಯವೇನು? ಕಪಟಿಗಳಿಗೆ ಜ್ಞಾನ ದೊರಕುವುದೆ?"

ಡಾಕ್ಟರ್: "ರಾಮ, ರಾಮ! ಎಂದಿಗಾದರೂ ದೊರಕುವುದೆ?"

ಶ್ರೀರಾಮಕೃಷ್ಣರು: "ಕೇಶವಸೇನ ಎಂಥಾ ಸರಳ ಜೀವಿ! ಒಂದು ದಿನ ಕಾಳೀದೇವಾಲಯಕ್ಕೆ ಬಂದಿದ್ದ. ಅಪರಾಹ್ನ ನಾಲ್ಕು ಘಂಟೆ ಸಮಯದಲ್ಲಿ ಹಾಗೇ ಸುತ್ತಿಕೊಂಡು ಅತಿಥಿಶಾಲೆಗೆ ಬಂದು ಅಲ್ಲಿದ್ದವರನ್ನು ಕೇಳಿದ, 'ಒಳ್ಳೇದು, ಅತಿಥಿಗಳಿಗೆ ಮತ್ತು ಭಿಕ್ಷುಕರಿಗೆ ನೀವು ಇನ್ನು ಎಷ್ಟು ಹೊತ್ತಿಗೆ ಅನ್ನ ಹಾಕೋದು?' ಎಂದು. ವಿಶ್ವಾಸ ಹೆಚ್ಚಿದಂತೆಲ್ಲ ಜ್ಞಾನವೂ ಹೆಚ್ಚುತ್ತಾ ಬರುತ್ತದೆ. ಯಾವ ಹಸು ಆರಿಸಿ ಆರಿಸಿಕೊಂಡು ಮೇವು ಮೇಯುವುದೊ ಅದು ತೊಟ್ಟು ತೊಟ್ಟಾಗಿ ಹಾಲು ಕರೆಯುತ್ತದೆ. ಆದರೆ ಯಾವುದು ಹುಲ್ಲು, ಸೊಪ್ಪು, ಎಲೆ, ಗರಿಕೆ, ತವುಡು ಮತ್ತು ಯಾವುದು ಸಿಕ್ಕಿದರೂ ಅವನ್ನೆಲ್ಲ 'ಗಬಕ್, ಗಬಕ್' ಅಂತ ತಿನ್ನುವುದೊ, ಅದು

'ಸೊರ್, ಸೊರ್' ಅಂತ ಧಾರಾಕಾರವಾಗಿ ಹಾಲು ಕರೆಯುತ್ತದೆ. (ಎಲ್ಲರೂ ನಗುತ್ತಾರೆ.)

"ಬಾಲಕನಂಥ ವಿಶ್ವಾಸ ಇಲ್ಲದೆ ಇತ್ತು ಅಂದರೆ ಭಗವಂತನನ್ನು ಪಡೆದುಕೊಳ್ಳಲಾಗೋದಿಲ್ಲ. ತಾಯಿ ಒಬ್ಬ ಹುಡುಗನನ್ನು ತೋರಿಸಿ ಮಗುವಿಗೆ ಹೇಳುತ್ತಾಳೆ: 'ಅಗೋ ನೋಡು, ಆತ ನಿನ್ನ ಅಣ್ಣ.' ಒಡನೆಯೆ ಮಗು ಆತ ಶೇಕಡ ನೂರು ಭಾಗ ತನ್ನ ಅಣ್ಣ ಅಂತ ನಂಬಿ ಬಿಡುತ್ತದೆ. ತಾಯಿ ಮಗುವಿಗೆ ಹೇಳುತ್ತಾಳೆ: 'ನೋಡಲ್ಲಿ, ಆ ಕೊಠಡಿಯಲ್ಲಿ ಗೊಗ್ಗಯ್ಯನಿದ್ದಾನೆ.' ಆ ಕೊಠಡಿಯಲ್ಲಿ ಗೊಗ್ಗಯ್ಯನಿದ್ದಾನೆ ಎಂಬುದನ್ನು ಮಗು ನೂರಕ್ಕೆ ನೂರು ಭಾಗ ನಂಬಿಬಿಡುತ್ತದೆ. ಯಾರಲ್ಲೇ ಆಗಲಿ ಈ ವಿಧವಾದ ಬಾಲಕನಂಥ ವಿಶ್ವಾಸ ಕಂಡುಬಂದದ್ದೇ ಆದರೆ, ಅವರ ಮೇಲೆ ಭಗವಂತ ಕೃಪೆಮಾಡಿಬಿಡುತ್ತಾನೆ. ಸಾಂಸಾರಿಕ ಬುದ್ಧಿಯಿಂದ ಆತನನ್ನು ಪಡೆಯಲಾಗೋದಿಲ್ಲ."

ಭಕ್ತರಿಗೆ ಡಾಕ್ಟರ್: "ಹಸುವಿಗೆ ಸಿಕ್ಕಿಸಿಕ್ಕಿದುದನ್ನೆಲ್ಲ ತಿನ್ನಿಸಿ ಹೆಚ್ಚಾಗಿ ಹಾಲು ಹಿಂಡೋದು ಒಳ್ಳೆಯದಲ್ಲ. ನಮ್ಮ ಮನೆಯ ಒಂದು ಹಸುವಿಗೆ ಸಿಕ್ಕಿಸಿಕ್ಕಿದುದನ್ನೆಲ್ಲ ತಿನ್ನಿಸಿ ಕೊನೆಗೆ ನನಗೆ ಒಂದು ಭಾರಿ ಕಾಯಿಲೆಯೇ ಬಂದುಬಿಟ್ಟಿತು. ಆಗ ಯೋಚಿಸಲಾರಂಭಿಸಿದೆ ಇದಕ್ಕೆ ಕಾರಣ ಏನು ಅಂತ. ಅದನ್ನು ಪತ್ತೆಮಾಡಲು ಬಹಳ ಪ್ರಯಾಸಪಟ್ಟ ನಂತರ ಗೊತ್ತಾಯಿತು, ಹಸು ನುಚ್ಚು-ಗಿಚ್ಚು ಇನ್ನೂ ಏನೇನನ್ನೊ ತಿನ್ನುತ್ತಿತ್ತು ಅಂತ. ಆಗ ಬಹಳ ಕಷ್ಟಕ್ಕಿಟ್ಟುಕೊಂಡುಬಿಟ್ಟಿತು. ಚಿಕಿತ್ಸೆಗೆ ಲಕ್ನೋವಿಗೆ ಹೋಗಬೇಕಾಗಿ ಬಂತು. ಕೊನೆಗೆ ಏನಿಲ್ಲ ಅಂದರೂ ಹನ್ನೆರಡು ಸಾವಿರ ರೂಪಾಯಿ ಖರ್ಚುಮಾಡಬೇಕಾಯಿತು. (ಕಿಬ್ಬರಿ ಕಿತ್ತುಹೋಗುವಂತೆ ಎಲ್ಲರೂ ನಗುತ್ತಿದಾರೆ.)

"ಯಾವುದರಿಂದ ಏನಾಗುತ್ತದೆ ಎಂಬುದನ್ನು ಸರಿಯಾಗಿ ಹೇಳಲಾಗೋದಿಲ್ಲ. ಒಬ್ಬ ಶ್ರೀಮಂತನ ಮನೆಯಲ್ಲಿ ಏಳು ತಿಂಗಳ ಹೆಣ್ಣು ಮಗುವೊಂದಕ್ಕೆ ನಾಯಿ-ಕೆಮ್ಮಲು ಬಂದುಬಿಟ್ಟಿತ್ತು. ನನ್ನನ್ನು ಕರೆಸಿದ್ದರು. ಏನು ಮಾಡಿದರೂ ಅದರ ಕಾರಣ ನನಗೆ ಹೊಳೆಯಲಿಲ್ಲ. ಕೊನೆಗೆ ತಿಳಿದು ಬಂತು, ಆ ಮಗುವಿಗೆ ಕತ್ತೆ ಹಾಲು ಕೊಡುತ್ತಿದ್ದರು; ಅದು ಒಂದು ದಿನ ಮಳೆಯಲ್ಲಿ ನೆಂದುಬಿಟ್ಟಿತ್ತು ಅಂತ." (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು ಭಕ್ತರಿಗೆ: "ಏನು ಹೇಳುತ್ತೀರಾ! ಒಬ್ಬನ

ಗಾಡಿ ಹುಣಿಸೆ ಮರದ ತೋಪಿಗೆ ಹೋಗಿಬಂತಂತೆ, ಅದಕ್ಕಾಗಿ ಆತನ ಹೊಟ್ಟೆಯಲ್ಲಿ ಆಮ್ಲ ಹೆಚ್ಚಾಗಿ ವೃದ್ಧಿಯಾಗಿಬಿಟ್ಟಿತಂತೆ!" (ಡಾಕ್ಟರ್ ಮತ್ತು ಎಲ್ಲರೂ ನಗುತ್ತಿದಾರೆ.)

ಡಾಕ್ಟರ್ ನಗುತ್ತ ನಗುತ್ತ: "ಒಮ್ಮೆ ಒಂದು ಜಹಜಿನ ಕ್ಯಾಪ್ಟನ್ನನಿಗೆ ತೀವ್ರ ತಲೆಶೂಲೆ ಬಂದಿತಂತೆ. ಜಹಜಿನ ಡಾಕ್ಟರುಗಳು ಕಲೆತು ಆಲೋಚಿಸಿ ಜಹಜಿನ ಒಂದು ಪಕ್ಕಕ್ಕೆ ಅಗ್ನಿಪ್ಲಾಸ್ತ್ರಿಯನ್ನು ಅಂಟಿಸಿದರಂತೆ." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ಡಾಕ್ಟರಿಗೆ: "ಸಾಧು ಸಂಗ ಸರ್ವದಾ ಆವಶ್ಯಕ. ರೋಗ ಹತ್ತಿಕೊಂಡೇ ಇದೆ. ಸಾಧುಗಳು ಹೇಳಿದ ಹಾಗೆ ನಡೆದುಕೊಳ್ಳಲೇ ಬೇಕು. ಬರಿದೆ ಕಿವಿಯಲ್ಲಿ ಕೇಳಿಬಿಟ್ಟರೆ ಏನು ಆದಹಾಗಾಯಿತು? ಔಷಧ ಕುಡಿಯಬೇಕು; ಪಥ್ಯದಿಂದಲೂ ಇರಬೇಕು. ಪಥ್ಯ ಅತ್ಯಂತ ಆವಶ್ಯಕ."

ಡಾಕ್ಟರ್: "ಪಥ್ಯದಿಂದಲೇ ಗುಣವಾಗಿಬಿಡುತ್ತದೆ."

ಶ್ರೀರಾಮಕೃಷ್ಣರು: "ವೈದ್ಯರಲ್ಲಿ ಮೂರು ವಿಧ— ಉತ್ತಮ ವೈದ್ಯ, ಮಧ್ಯಮ ವೈದ್ಯ, ಅಧಮ ವೈದ್ಯ: ರೋಗಿಯ ನಾಡಿಯನ್ನು ಪರೀಕ್ಷಿಸಿ, ಇಂಥ ಔಷಧ ಕುಡಿ ಅಂತ ರೋಗಿಗೆ ಹೇಳಿಬಿಟ್ಟು ಹೊರಟುಹೋಗೋನು ಅಧಮ ವೈದ್ಯ. ರೋಗಿ ತಾನು ಹೇಳಿದ ಹಾಗೆ ನಡೆದುಕೊಂಡನೆ ಇಲ್ಲವೆ ಎಂಬುದರ ಕಡೆ ಈತ ಮನಸ್ಸು ಕೊಡೋದಿಲ್ಲ. ಮಧ್ಯಮ ವೈದ್ಯ ಸವಿ ಮಾತುಗಳಿಂದ ಔಷಧ ಕುಡಿಯುವಂತೆ ರೋಗಿಯನ್ನು ಪ್ರೇರೇಪಿಸಿ ಆತನಿಗೆ ಹೇಳುತ್ತಾನೆ, 'ಎಲೋ ಅಪ್ಪ, ಔಷಧ ಕುಡಿಯದಿದ್ದರೆ ನಿನಗೆ ಗುಣ ವಾಗೋ ಬಗೆ ಹೇಗೆ? ದಯವಿಟ್ಟು ಕುಡಿಯಪ್ಪ. ನಾನೇ ಔಷಧ ತಯಾರು ಮಾಡಿಕೊಡುತ್ತೇನೆ, ಕುಡಿಯಪ್ಪ' ಅಂತ. ಉತ್ತಮ ವೈದ್ಯ ರೋಗಿ ಯಾವ ವಿಧದಿಂದಲೂ ಔಷಧ ಕುಡಿಯದಿರೋದನ್ನು ನೋಡಿ ಆತನ ಎದೆ ಮೇಲೆ ಮಂಡಿಯೂರಿಕುಳಿತು ಬಲಾತ್ಕಾರದಿಂದ ಔಷಧವನ್ನು ಕುಡಿಸಿಯೇ ಬಿಡುತ್ತಾನೆ."

ಡಾಕ್ಟರ್: "ಈಗ ಅಂಥ ಔಷಧ ಆವಿಷ್ಕಾರವಾಗಿದೆ, ಅದನ್ನು ಕುಡಿಸೋಕೆ ರೋಗಿ ಎದೆ ಮೇಲೆ ಮಂಡಿಯೂರಿಕುಳಿತುಕೊಳ್ಳೋ ಆವಶ್ಯಕತೆಯೇನಿಲ್ಲ. ಉದಾಹರಣೆಗೆ ಹೋಮಿಯಾಪತಿ ಔಷಧ."

ಶ್ರೀರಾಮಕೃಷ್ಣರು: "ಉತ್ತಮ ವೈದ್ಯ ರೋಗಿಯ ಎದೆ ಮೇಲೆ ಮಂಡಿಯೂರಿಕುಳಿತುಕೊಂಡರೆ ಹೆದರಬೇಕಾದ್ದೇನಿಲ್ಲ.

"ವೈದ್ಯರ ಹಾಗೆ ಆಚಾರ್ಯರಲ್ಲೂ ಮೂರು ವಿಧ. ಅಧಮ ಆಚಾರ್ಯ ಶಿಷ್ಯರಿಗೆ ಉಪದೇಶ ಕೊಟ್ಟಷ್ಟರಲ್ಲೇ ತೃಪ್ತನಾಗಿ ಬಿಡುತ್ತಾನೆ. ಬಳಿಕ ಅವರ ಯೋಚನೆಯನ್ನೇ ಮಾಡೋದಿಲ್ಲ. ಮಧ್ಯಮ ಆಚಾರ್ಯ ತನ್ನ ಶಿಷ್ಯರ ಶ್ರೇಯಸ್ಸನ್ನು ಕೋರಿ ತಾನು ಕೊಟ್ಟ ಉಪದೇಶ ಸರಿಯಾಗಿ ಹಿಡಿಯಲೆಂದು ಅವರಿಗೆ ಮತ್ತೆ ಮತ್ತೆ ಉಪದೇಶವೀಯುತ್ತಾನೆ; ನಯ ವಿನಯ ಪ್ರೇಮದಿಂದ ಅದನ್ನು ಅನುಷ್ಠಾನಕ್ಕೆ ತರಲು ಅವರನ್ನು ಪ್ರೇರೇಪಿಸುತ್ತಾನೆ. ಆದರೆ ಉತ್ತಮ ಆಚಾರ್ಯ ಆವಶ್ಯಕತೆ ತೋರಿ ಬಂದರೆ ತನ್ನ ಹಠಮಾರಿ ಶಿಷ್ಯರಿಗೆ ಬಲಪ್ರಯೋಗವನ್ನೂ ಮಾಡಿ ಬಿಡುತ್ತಾನೆ.

(ಡಾಕ್ಟರಿಗೆ) "ಕಾಮಕಾಂಚನ ತ್ಯಾಗ ಸನ್ಯಾಸಿಗೆ ಮಾತ್ರ. ಹೆಂಗಸಿನ ಪಟವನ್ನೂ ಆತ ನೋಡಕೂಡದು. ಹೆಂಗಸು ಹೇಗೆ ಎಂಬುದು ಗೊತ್ತೆ? ಹುಣಿಸೆ ಕಾಯಿನ ಉಪ್ಪಿನಕಾಯಿ. ಅದನ್ನು ಹತ್ತಿರ ತೆಗೆದು ಕೊಂಡುಬರೋ ಆವಶ್ಯಕತೆಯೇ ಇಲ್ಲ; ಭಾವಿಸಿದರೇನೇ ಬಾಯಿಂದ ನೀರು ಊರಿಬರುತ್ತದೆ.

"ಈ ವಿಧದ ತ್ಯಾಗ ನಿಮ್ಮಂಥ ಗೃಹಸ್ಥರಿಗಲ್ಲ, ಸನ್ಯಾಸಿಗಳಿಗೆ. ನಿಮ್ಮ ಕೈಯಲ್ಲಿ ಎಷ್ಟು ಸಾಧ್ಯವೊ ಅಷ್ಟು ಮಟ್ಟಿಗೆ ಹೆಂಗಸಿನೊಡನೆ ಅನಾಸಕ್ತತೆಯಿಂದ ಇರಲು ಪ್ರಯತ್ನ ಮಾಡಿ. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಭಗವಚ್ಚಿಂತನೆ ಮಾಡಬೇಕು. ಜೊತೆಯಲ್ಲಿ ಹೆಂಗಸರಾರೂ ಇರಕೂಡದು. ಭಗವಂತನ ಪಾದಪದ್ಮಗಳಲ್ಲಿ ವಿಶ್ವಾಸ ಭಕ್ತಿ ಉಂಟಾಗಿ ಬಿಟ್ಟಿತು ಅಂದರೆ ಬಹುಮಟ್ಟಿಗೆ ಅನಾಸಕ್ತತೆಯಿಂದ ಇರಲು ಸಾಧ್ಯ. ಒಂದೆರಡು ಮಕ್ಕಳಾದ ನಂತರ ಪತಿಪತ್ನಿಯರು ಅಣ್ಣತಂಗಿಯರೋಪಾದಿ ಯಲ್ಲಿ ವಾಸಿಸಬೇಕು; ಬಳಿಕ ಅವರು ಭಗವಂತನಿಗೆ ಸರ್ವದಾ ಪ್ರಾರ್ಥನೆ ಮಾಡುತ್ತಿರಬೇಕು, ತಮ್ಮ ಮನಸ್ಸು ಇಂದ್ರಿಯ ಸುಖಗಳ ಕಡೆ ಹೋಗ ದಿರಲೆಂದು, ಎಂದರೆ ತಮಗೆ ಮಕ್ಕಳು-ಗಿಕ್ಕಳು ಆಗದಿರಲೆಂದು."

ಗಿರೀಶ ನಗುತ್ತ ಡಾಕ್ಟರಿಗೆ: "ನೀವು ಇಲ್ಲಿಗೆ ಬಂದು ಆಗಲೆ ಮೂರು ನಾಲ್ಕು ಘಂಟೆಯಾಯಿತು. ನಿಮ್ಮ ರೋಗಿಗಳ ಗತಿಯೇನು?"

ಡಾಕ್ಟರ್: "ಇನ್ನು, ಡಾಕ್ಟರಿ-ಗೀಕ್ಟರಿ, ರೋಗಿ-ಗೀಗಿ! ನಿಮ್ಮ ಪರಮಹಂಸ ಸಿಕ್ಕಿಬಿಟ್ಟು ನಾನು ಎಲ್ಲವನ್ನೂ ಕಳಕೋಬೇಕಾಗಿ ಬಂದಿದೆ!" (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: "ನೋಡು, 'ಕರ್ಮನಾಶ' ಎಂಬ ಒಂದು ನದಿ ಇದೆ. ಅದರಲ್ಲಿ ಮುಳುಕು ಹಾಕುವುದು ಎಂದರೆ ಮಹಾ ವಿಪತ್ತಿಗೆ ಒಳಗಾಗಬೇಕಾಗುತ್ತದೆ. ಕರ್ಮನಾಶವಾಗಿಬಿಡುತ್ತದೆ. ಆ ವ್ಯಕ್ತಿಯಿಂದ ಬೇರೆ ಯಾವ ಕರ್ಮವೂ ಸಾಧ್ಯವಿಲ್ಲ." (ಡಾಕ್ಟರ್ ಮತ್ತು ಉಳಿದವರೂ ನಗುತ್ತಾರೆ.)

ಗಿರೀಶ, ಮಾಸ್ಟರ್ ಮತ್ತು ಉಳಿದವರಿಗೆ ಡಾಕ್ಟರ್: "ನೋಡಿ, ನಾನು ನಿಮ್ಮವನಾಗಿಬಿಡುತ್ತೇನೆ; ನಿಮ್ಮ ಡಾಕ್ಟರ್ ಎಂಬ ದೃಷ್ಟಿಯಿಂದಲ್ಲ. ನನ್ನನ್ನು ನಿಮ್ಮಲ್ಲಿ ಒಬ್ಬ ಎಂದು ನೀವು ಭಾವಿಸುವುದಾದರೆ, ನಾನೂ ನಿಮ್ಮವನೆ."

ಶ್ರೀರಾಮಕೃಷ್ಣರು ಡಾಕ್ಟರಿಗೆ: "ಅಹೇತುಕ ಭಕ್ತಿ ಎಂಬುದೊಂದಿದೆ. ಅದು ಹೃದಯದಲ್ಲಿ ಅಂಕುರವಾಗಿಬಿಟ್ಟಿತು ಅಂದರೆ ಬಹಳ ಒಳ್ಳೆಯದು. ಪ್ರಹ್ಲಾದನಲ್ಲಿ ಅಹೇತುಕ ಭಕ್ತಿ ಉಂಟಾಗಿತ್ತು. ಆ ವಿಧದ ಭಕ್ತ ಹೇಳುತ್ತಾನೆ: 'ಹೇ ಭಗವಂತ, ನನಗೆ ಧನ, ಮಾನ, ದೇಹಸುಖ ಇವುಗಳಾವೂ ಬೇಡ. ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಉಂಟಾಗುವಂತೆ ಮಾಡು.'"

ಡಾಕ್ಟರ್: "ನೀವು ಹೇಳೋದು ಸರಿ. ಜನ ಕಾಳಿ ಮುಂದೆ ಅಡ್ಡ ಬೀಳೋದನ್ನು ನಾನು ನೋಡಿದ್ದೇನೆ; ಅಂತರ್ಯದಲ್ಲಿ ಕಾಮನೆಗಳು ತುಂಬಿರುತ್ತವೆ. ಉದಾಹರಣೆಗೆ—ನನಗೊಂದು ಕೆಲಸ ಮಾಡಿಸಿಕೊಡು; ನನ್ನ ರೋಗವನ್ನು ಗುಣಪಡಿಸು; ಇವೇ ಮೊದಲಾದುವು.

(ಪರಮಹಂಸರಿಗೆ) "ನಿಮ್ಮ ರೋಗ ಅಂಥದು ನೀವು ಜನರೊಡನೆ ಮಾತುಕತೆಯಾಡಕೂಡದು. ಆದರೆ ನಾನು ಬಂದಾಗ ಕೇವಲ ನನ್ನೊಡನೆ ಮಾತ್ರ ನೀವು ಮಾತಾಡಬೇಕು." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು: "ಈ ರೋಗದಿಂದ ನನ್ನನ್ನು ಗುಣಪಡಿಸಿಬಿಡು. ನಾನು ಭಗವತಿಯ ನಾಮಗುಣಕೀರ್ತನೆ ಮಾಡಲಾಗುತ್ತಿಲ್ಲ."

ಡಾಕ್ಟರ್: "ಧ್ಯಾನಮಾಡಿದರೇ ಸಾಕಲ್ಲ."

ಶ್ರೀರಾಮಕೃಷ್ಣರು: "ಇದೆಂಥ ಮಾತು? ನಾನು ಒಂದೇ ಸ್ವರ ಊದೋನೇಕಾಗಲಿ? ನಾನು ಮೀನನ್ನು ಒಂದು ಹತ್ತಾರು ವಿಧದ ಭಕ್ಷ್ಯಗಳನ್ನಾಗಿ ಮಾಡಿ ತಿನ್ನುತ್ತೇನೆ—ಕೆಲವು ವೇಳೆ ಮೀನಿನ ಪಲ್ಯ, ಇನ್ನು ಕೆಲವು ವೇಳೆ ಮೀನಿನ ಬಜ್ಜಿ, ಮತ್ತೆ ಕೆಲವು ವೇಳೆ ಮೀನಿನ ಉಪ್ಪಿನ

ಕಾಯಿ ಇವೇ ಮೊದಲಾದುವುಗಳನ್ನಾಗಿ ಮಾಡಿ ತಿನ್ನುತ್ತೇನೆ. ಕೆಲವು ವೇಳೆ ಪೂಜೆ, ಇನ್ನು ಕೆಲವು ವೇಳೆ ಜಪ, ಮತ್ತೆ ಕೆಲವು ವೇಳೆ ಧ್ಯಾನ, ಮತ್ತೂ ಕೆಲವು ವೇಳೆ ಭಗವತಿಯ ನಾಮಗುಣಕೀರ್ತನೆ, ಮತ್ತೂ ಇನ್ನು ಕೆಲವು ವೇಳೆ ಆಕೆಯ ನಾಮವನ್ನು ಜಪಿಸುತ್ತ ನರ್ತಿಸೋದು ಇವೇ ಮೊದಲಾದುವುಗಳನ್ನು ಮಾಡುತ್ತೇನೆ.''

ಡಾಕ್ಟರ್: ''ನಾನೂ ಒಂದೇ ಸ್ವರ ಹಿಡಿದು ಊದೋನಲ್ಲ.''

ಶ್ರೀರಾಮಕೃಷ್ಣರು: ''ನಿನ್ನ ಮಗ ಅಮೃತ ಅವತಾರವನ್ನು ಒಪ್ಪುತ್ತಿಲ್ಲ. ಅದು ತಪ್ಪಾದ್ದೇನಲ್ಲ. ಭಗವಂತ ನಿರಾಕಾರ ಎಂಬ ವಿಶ್ವಾಸವಿದ್ದರೂ ಆತನ ಸಾಕ್ಷಾತ್ಕಾರ ದೊರೆಯುತ್ತದೆ, ಸಾಕಾರ ಎಂಬ ವಿಶ್ವಾಸವಿದ್ದರೂ ಆತನ ಸಾಕ್ಷಾತ್ಕಾರ ದೊರೆಯುತ್ತದೆ. ಆತನ ಸಾಕ್ಷಾತ್ಕಾರಕ್ಕೆ ಆತನಲ್ಲಿ ವಿಶ್ವಾಸವಿರೋದು ಮತ್ತು ಆತನಿಗೆ ಶರಣಾಗತನಾಗೋದು ಇವೆರಡೂ ಆವಶ್ಯಕ. ಸ್ವಾಭಾವಿಕವಾಗಿ ಮನುಷ್ಯ ಅಜ್ಞಾನಿ. ತಪ್ಪೋದು ಸ್ವಾಭಾವಿಕ. ಒಂದು ಸೇರಿನ ಗಡಿಗೆ ನಾಲ್ಕು ಸೇರು ಹಾಲು ಹಿಡಿಯಬಲ್ಲದೆ? ಆದರೆ ಯಾವ ಮಾರ್ಗ ಅನುಸರಿಸಿದರೂ ಸರಿಯೆ, ವ್ಯಾಕುಲ ಚಿತ್ತದಿಂದ ಆತನನ್ನು ಕರೆಯಬೇಕು. ಆತ ಅಂತರ್ಯಾಮಿ. ಹೃತ್ಪೂರ್ವಕವಾದ ಕರೆಗೆ ಆತ ಕಿವಿಗೊಟ್ಟೇಗೊಡುತ್ತಾನೆ. ವ್ಯಾಕುಲನಾಗಿ ಸಾಕಾರವಾದಿಗಳ ಮಾರ್ಗದಲ್ಲಾದರೂ ಹೋಗು, ನಿರಾಕಾರವಾದಿಗಳ ಮಾರ್ಗದಲ್ಲಾದರೂ ಹೋಗು, ಆತನೇ ದೊರೆಯುತ್ತಾನೆ. ಕಜ್ಜಾಯವನ್ನು ಉದ್ದುದ್ದವಾಗಿ ಕಡಿದು ತಿಂದರೂ ಸಿಹಿ, ಅಡ್ಡಡ್ಡಲಾಗಿ ಕಡಿದು ತಿಂದರೂ ಸಿಹಿ.

''ನಿನ್ನ ಮಗ ಅಮೃತ ಬಹಳ ಒಳ್ಳೆ ಹುಡುಗ.''

ಡಾಕ್ಟರ್: ''ಆತ ನಿಮ್ಮ ಶಿಷ್ಯ.''

ಶ್ರೀರಾಮಕೃಷ್ಣರು ನಗುತ್ತ ಡಾಕ್ಟರಿಗೆ: ''ನನ್ನ ಶಿಷ್ಯ ಅನ್ನಿಸಿಕೊಳ್ಳೋನು ಈ ಭೂಮಂಡಲದಲ್ಲೇ ಇಲ್ಲ. ಅದಕ್ಕೆ ಬದಲು ನಾನೇ ಎಲ್ಲರ ಶಿಷ್ಯ. ಎಲ್ಲರೂ ಭಗವಂತನ ಮಕ್ಕಳು. ಎಲ್ಲರೂ ಆತನ ದಾಸರು. ನಾನೂ ಭಗವಂತನ ಒಂದು ಮಗು. ನಾನೂ ಆತನ ಒಬ್ಬ ದಾಸ. 'ಚಂದಮಾಮ' ಎಲ್ಲಾ ಮಕ್ಕಳ ಮಾಮ!''

# ೪೭

# ಶ್ರೀರಾಮಕೃಷ್ಣರು ಮತ್ತು ಡಾಕ್ಟರ್ ಸರ್ಕಾರ

೨೩ನೆ ಅಕ್ಟೋಬರ್ ೧೮೮೫, ಅಶ್ವೀಜ ಶುಕ್ಲ ಪೂರ್ಣಿಮೆ, ಶುಕ್ರವಾರ.

ಘಂಟೆ ಬೆಳಗಿನ ಹತ್ತು. ಪರಮಹಂಸರು ಶ್ಯಾಮಪುಕುರದ ಬಾಡಿಗೆ ಮನೆಯಲ್ಲಿ ಮಾಸ್ಟರೊಡನೆ ಮಾತುಕತೆಯಾಡುತ್ತಿದಾರೆ. ಆತ ಅವರ ಕಾಲಿಗೆ ಮೋಟು ಕಾಲುಚೀಲವನ್ನು ಹಾಕುತ್ತಿದಾನೆ.

ಶ್ರೀರಾಮಕೃಷ್ಣರು ನಗುತ್ತ: "ನನ್ನ ಮಫ್ಲರನ್ನು ಎರಡು ಭಾಗ ಮಾಡಿ, ಅದನ್ನೇ ಏಕೆ ಮೋಟು ಕಾಲುಚೀಲದ ಹಾಗೆ ಸುತ್ತಬಾರದು? ಅದು ಒಳ್ಳೆ ಶಾಖ ಕೊಡುತ್ತದೆ."

ಮಾಸ್ಟರ್ ನಕ್ಕ. ಪರಮಹಂಸರು ಹಿಂದಿನ ರಾತ್ರಿ ಬಹಳ ಹೊತ್ತಿನ ವರೆಗೆ ಡಾಕ್ಟರ್ ಸರ್ಕಾರನೊಡನೆ ಮಾತಾಡಿದರು. ಅವರು ಆತನ ಮಾತೆತ್ತಿ ನಗುತ್ತ ನಗುತ್ತ ಹೇಳುತ್ತಿದಾರೆ: "ನಿನ್ನೆ ಯಾವ ರೀತಿಯಾಗಿ 'ತುಹ್ಞೊ, ತುಹ್ಞೊ' ಎಂಬ ವಿಷಯವಾಗಿ ಆತನಿಗೆ ತಿಳಿಸಿದೆ!"

ನಿನ್ನೆ ಪರಮಹಂಸರು ಡಾಕ್ಟರಿಗೆ ಹೇಳಿದ್ದರು, ಜನರು ತ್ರಿತಾಪ ಗಳಿಂದ ನರಳುತ್ತಿದ್ದರೂ ತಾವು ಆನಂದದಿಂದ ಇದೇವೆ ಎಂದು ಹೇಳಿ ಕೋತಾರೆ ಅಂತ. ಅದನ್ನು ಚಿಕ್ಕ ನರೇನ ಪರಮಹಂಸರಿಗೆ ಜ್ಞಾಪಕ ಪಡಿಸಿದ. ಆತ ಹೇಳಿದ: "ನೀವು ಕೈಗೆ ಮುಳ್ಳು ಗೀರಿ ರಕ್ತ ಸುರಿಯುತ್ತಿ ರುವುದರ ವಿಷಯ ಮತ್ತು ಆ ಮುಳ್ಳನ್ನು ಜ್ಞಾನಾಗ್ನಿಯಲ್ಲಿ ಸುಡಬೇಕು ಎಂಬ ವಿಷಯ ಹೇಳಿದಿರಲ್ಲ ಅವು ಬಹಳ ಸೊಗಸಾದ ವಿಷಯಗಳು."

ಶ್ರೀರಾಮಕೃಷ್ಣರು: "ಇವೆಲ್ಲ ನನ್ನ ಪ್ರತ್ಯಕ್ಷ ಅನುಭವಕ್ಕೆ ಬಂದ ವಿಷಯಗಳು. ಒಮ್ಮೆ ನಾನು ಕುಟೀರದ ಹಿಂಭಾಗದಲ್ಲಿ ನಡೆದುಹೋಗು ತ್ತಿದ್ದೆ. ನನ್ನ ದೇಹವಾದ ದೇಹವೆಲ್ಲ ಹೋಮಾಗ್ನಿ ಜ್ವಾಲೆಯ ಹಾಗೆ ಪ್ರಜ್ವಲಿಸಲಾರಂಭಿಸಿತು. ಪದ್ಮಲೋಚನ ಒಮ್ಮೆ ನನಗೆ ಹೇಳಿದ, 'ಪಂಡಿ ತರ ಒಂದು ಸಭೆ ಸೇರಿಸಿ, ಅದರಲ್ಲಿ ನಿಮ್ಮ ಆಧ್ಯಾತ್ಮಿಕ ಅನುಭವಗಳನ್ನೆಲ್ಲ ಡಂಗುರ ಹೊಡೆಯಲು ಹೋಗುತ್ತೇನೆ' ಅಂತ. ಆದರೆ ಹಾಗೆಂದ ಸ್ವಲ್ಪ ದಿವಸಗಳಲ್ಲೇ ದೇಹತ್ಯಾಗಮಾಡಿಬಿಟ್ಟ."

ಘಂಟೆ ಹನ್ನೊಂದು. ಪರಮಹಂಸರ ದೇಹಾರೋಗ್ಯದ ವರದಿ ಒಪ್ಪಿಸಲು ಮಾಸ್ಟರ್, ಡಾಕ್ಟರ್ ಸರ್ಕಾರನ ಮನೆಗೆ ಬಂದಿದಾನೆ. ಆತ ಬಹಳ ಉತ್ಸುಕತೆಯಿಂದ ವರದಿಯನ್ನೆಲ್ಲಾ ಕೇಳಲಾರಂಭಿಸಿದ.

ಡಾಕ್ಟರ್ ನಗುತ್ತ: "ನಿನ್ನೆ ಹೇಗೆ ನಾನು ಸರಿಯಾಗಿ ಹೇಳಿದೆ, 'ತುಹ್ನೂ! ತುಹ್ನೂ!' ಅಂತ ಹೇಳಬೇಕಾದರೆ ಒಳ್ಳೆ ನಿಪುಣ ಹತ್ತಿ-ಬಿಡಿಸೋನ ಕೈಗೆ ಬೀಳಬೇಕಾಗುತ್ತದೆ ಅಂತ!"

ಮಾಸ್ಟರ್: "ಹೌದು, ನಿಜ. ಸಮರ್ಥ ಗುರುವಿನ ಕೈಗೆ ಬೀಳದೆ ಇದ್ದರೆ ಅಹಂಕಾರ ಹೋಗೋದಿಲ್ಲ. ಅವರು ಭಕ್ತಿಯ ಸಂಬಂಧವಾಗಿ ಎಷ್ಟು ಚೆನ್ನಾಗಿ ಮಾತನಾಡಿದರು! ಭಕ್ತಿ, ಹೆಂಗಸಿನಂತೆ ಅಂತಃಪುರಕ್ಕೆ ಹೋಗಬಲ್ಲದು."

ಡಾಕ್ಟರ್: "ಹೌದು, ಅದು ಬಹಳ ಸೊಗಸಾದ ಮಾತು. ಆದರೆ ಹಾಗೆಂದು ಜ್ಞಾನವನ್ನು ವರ್ಜಿಸಿಬಿಡೋಕಾಗೋದಿಲ್ಲವಲ್ಲ."

ಮಾಸ್ಟರ್: "ಅವರೂ ಅದನ್ನು ವರ್ಜಿಸಿಬಿಡಬೇಕು ಅಂತಲೇನು ಹೇಳುತ್ತಿಲ್ಲವಲ್ಲ. ಅವರು ಜ್ಞಾನ, ಭಕ್ತಿ, ಸಾಕಾರ, ನಿರಾಕಾರ ಎಲ್ಲವನ್ನೂ ಸ್ವೀಕರಿಸುತ್ತಾರೆ. ಅವರು ಹೇಳುತ್ತಿದಾರೆ, ಭಕ್ತಿಯ ಶೈತ್ಯದಿಂದ ಸತ್ಯದ ಒಂದು ಕಿಂಚಿತ್ ಭಾಗ ಸಾಕಾರರೂಪವನ್ನು ತಾಳುತ್ತದೆ; ಜ್ಞಾನ-ಸೂರ್ಯ ಉದಯಿಸಿದೊಡನೆಯೆ ಆ ಸಾಕಾರರೂಪು ಕರಗಿ ನಿರಾಕಾರವಾಗುತ್ತದೆ. ಅಂದರೆ ಭಕ್ತಿಯೋಗದಿಂದ ಸಾಕಾರದ ಅನುಭವ, ಜ್ಞಾನಯೋಗದಿಂದ ನಿರಾಕಾರದ ಅನುಭವ.

"ಭಗವಂತ ತಮ್ಮ ಹತ್ತಿರವೇ ಇರುವಂತೆ ಅವರು ಸತತ ಆತನೊಡನೆ ಮಾತನಾಡುತ್ತಿರೋದು ನಿಮ್ಮ ಗಮನಕ್ಕೆ ಆಗಲೆ ಬಂದಿರಬೇಕು. ಗಂಟಲು ನೊಂದಾಗ ಅವರು ಚಿಕ್ಕ ಮಕ್ಕಳ ಹಾಗೆ ಹೇಳುತ್ತಾರೆ, 'ತಾಯೆ, ಬಹಳವಾಗಿ ನೋಯುತ್ತಿದೆ' ಅಂತ.

"ಅವರ ಬುದ್ಧಿ ಎಷ್ಟು ಸೂಕ್ಷ್ಮವಾದ್ದು! ಮ್ಯೂಸೀಯಂನಲ್ಲಿ ಒಂದು ಜೀವ್ಯವಶೇಷವನ್ನು ನೋಡಿದರು. ಒಡನೆಯೆ ಸಾಧುಸಂಗದಿಂದಾಗೋ ಫಲವೇನು ಎಂಬುದಕ್ಕೆ ಅದನ್ನು ಉದಾಹರಣೆಯಾಗಿ ಕೊಟ್ಟುಬಿಟ್ಟರು. ಜೀವಿ ಕಲ್ಲಿನ ಸಂಪರ್ಕದಿಂದ ಯಾವ ರೀತಿಯಾಗಿ ಕಲ್ಲಾಗಿಬಿಟ್ಟದೆಯೊ, ಅದೇ ರೀತಿಯಾಗಿ ಮನುಷ್ಯ ಸಾಧುಸಂಪರ್ಕದಿಂದ ಸಾಧು ಆಗಿಬಿಡುತ್ತಾನೆ."

ಡಾಕ್ಟರ್: "ನಿನ್ನೆ ಈಶಾನಬಾಬು ಅವತಾರ ಅವತಾರ ಅಂತಲೇ ಇದ್ದ. ಏನದು? ಮನುಷ್ಯನನ್ನ ಭಗವಂತ ಅಂತ ಕರೆಯೋದು!"

ಮಾಸ್ಟರ್: "ಪ್ರತಿಯೊಬ್ಬನಿಗೂ ಒಂದೊಂದರಲ್ಲಿ ವಿಶ್ವಾಸ. ಅದನ್ನೇಕೆ ಕೆಣಕೋಕೆ ಹೋಗಬೇಕು?"

ಡಾಕ್ಟರ್: "ಹೌದು, ಅದರಿಂದೇನು ಪ್ರಯೋಜನ?"

ಮಾಸ್ಟರ್: "ಒಬ್ಬ, ತನ್ನ ಸ್ನೇಹಿತ ಹೇಳಿದ ಹಾಗೆ ಪೇಪರಿನಲ್ಲಿ ಮನೆ 'ಧಡೀರ್' ಎಂಬುದಾಗಿ ಮುರಿದುಬಿದ್ದ ಸಮಾಚಾರ ಇಲ್ಲದಿರೋದನ್ನು ನೋಡಿ ಆತನನ್ನು ನಂಬದೆ ಹೋದುದರ ವಿಷಯವಾಗಿ ನಮಗೆ ತಿಳಿಸಿ ನಮ್ಮನ್ನೆಲ್ಲ ಎಷ್ಟೊಂದಾಗಿ ನಗಿಸಿದರು!"

ಡಾಕ್ಟರ್ ಸರ್ಕಾರ ಬಾಯಿ ತೆರೆಯದೆ ಸುಮ್ಮನೆ ಕುಳಿತಿದ್ದಾನೆ. ಪರಮಹಂಸರು ಆತನಿಗೆ ಹೇಳಿದ್ದರು, "ನಿನ್ನ ಸೈನ್ಸ್ ಪುಸ್ತಕದಲ್ಲಿ ಅವತಾರದ ವಿಷಯವಾಗಿ ಏನೂ ಬರೆದಿಲ್ಲ; ಆದ್ದರಿಂದ ಅವತಾರ ಎಂಬುದು ಇಲ್ಲ ಎಂದು ನೀನು ಹೇಳುತ್ತಿದೀಯೆ" ಅಂತ.

ಸಮಯ ನಡು ಹಗಲು. ಡಾಕ್ಟರ್ ಸರ್ಕಾರ ಮಾಸ್ಟರೊಡನೆ ಗಾಡಿಯಲ್ಲಿ ಕುಳಿತುಕೊಂಡ. ಕೆಲವು ರೋಗಿಗಳನ್ನು ನೋಡಿದ ಬಳಿಕ ಪರಮಹಂಸರನ್ನು ನೋಡುತ್ತಾನೆ.

ಡಾಕ್ಟರ್ ಅಂದು ಗಿರೀಶನ ಆಹ್ವಾನಕ್ಕನುಗುಣವಾಗಿ ಬುದ್ಧಲೀಲೆಯ ಅಭಿನಯವನ್ನು ನೋಡಿಬಂದಿದ್ದ. ಆತ ಮಾಸ್ಟರಿಗೆ ಹೇಳಿದ: "ಬುದ್ಧನನ್ನು ದಯೆಯ ಅವತಾರ ಅಂತ ಹೇಳಿದ್ದರೆ ಚೆನ್ನಾಗಿತ್ತು. ಅದಕ್ಕೆ ಬದಲು ವಿಷ್ಣುವಿನ ಅವತಾರ ಅಂತ ಗಿರೀಶ ಏಕೆ ಹೇಳಿದ?"

ಡಾಕ್ಟರ್, ಮಾಸ್ಟರನ್ನು ಕಾರನ್‌ವಾಲೀಸ್ ಚೌಕದ ಹತ್ತಿರ ಇಳಿಸಿ ಬಿಟ್ಟ.

ಘಂಟೆ ಅಪರಾಹ್ನ ಮೂರು. ಪರಮಹಂಸರು ಮಗುವಿನಂತೆ ಆಗಾಗ ಕೇಳುತ್ತಲಿದಾರೆ, "ಡಾಕ್ಟರ್ ಎಷ್ಟು ಹೊತ್ತಿಗೆ ಬರುತ್ತಾನೆ? ಘಂಟೆ ಎಷ್ಟಾಯಿತು?" ಎಂಬುದಾಗಿ. ಡಾಕ್ಟರ್ ಇಂದು ಸಾಯಂಕಾಲದ ಮೇಲೆ ಬರುತ್ತಾನೆ.

ಇದ್ದಕ್ಕಿದ್ದ ಹಾಗೆ ಪರಮಹಂಸರಿಗೆ ಬಾಲಕನ ಅವಸ್ಥೆ ಬಂದುಬಿಟ್ಟಿದೆ. ತಲೆದಿಂಬನ್ನು ತಮ್ಮ ತೋಳುಗಳ ಮೇಲೆ ಇಟ್ಟುಕೊಂಡಿದಾರೆ. ವಾತ್ಸಲ್ಯ ಪ್ರೇಮದಿಂದ ತುಂಬಿತುಳುಕಾಡುತ್ತ ತಾಯಿ ಮಗುವಿಗೆ ಎದೆ ಕೊಡೋ

ರೀತಿಯಲ್ಲಿ ಈಗ ಆ ದಿಂಬನ್ನು ಎದೆಗಪ್ಪಿಕೊಂಡು ಭಾವಾವಿಷ್ಟರಾಗಿದಾರೆ. ಮಕ್ಕಳ ಹಾಗೆ ನಗುತ್ತಿದಾರೆ. ಮೈ ಮೇಲೆ ಬಟ್ಟೆಯನ್ನು ಯಾವುದೊ ರೀತಿಯಾಗಿ ಹಾಕಿಕೊಂಡಿದಾರೆ. ಭಕ್ತರು ಆಶ್ಚರ್ಯಚಕಿತರಾಗಿ ಅವರ ಕಡೆ ನೋಡುತ್ತಿದಾರೆ.

ಸ್ವಲ್ಪ ಹೊತ್ತಾದನಂತರ ಅವರ ಭಾವ ಇಳಿಮುಖವಾಯಿತು. ಈಗ ಅವರ ಆಹಾರದ ಸಮಯವಾಯಿತು. ಅವರು ಸ್ವಲ್ಪ ರವೆ ಪಾಯಸ ಕುಡಿದರು.

ಪರಮಹಂಸರು ಮಾಸ್ಟರೊಡನೆ ಅತಿ ಗುಹ್ಯ ವಿಷಯಗಳನ್ನು ಈಗ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಏಕಾಂತವಾಗಿ ಮಾಸ್ಟರಿಗೆ: "ಈಗ ತಾನೆ ಬಂದಿದ್ದ ಭಾವಾವಸ್ಥೆಯಲ್ಲಿ ನಾನು ಏನೇನನ್ನು ನೋಡಿದೆ ಎಂಬುದು ನಿನಗೆ ಗೊತ್ತೆ? ಸಿಹೋರಿಗೆ ಹೋಗೋ ರಸ್ತೆಯಲ್ಲಿ ಸಿಗೋ ಏಳೆಂಟು ಮೈಲಿ ವಿಸ್ತಾರದ ಮೈದಾನ ಕಾಣಿಸಿಕೊಂಡಿತು. ಅಲ್ಲಿ ನಾನೊಬ್ಬನೇ ವಿನಾ ಬೇರೆ ಯಾರೂ ಇರಲಿಲ್ಲ. ನಾನು ಒಮ್ಮೆ ಪಂಚವಟಿಯಲ್ಲಿ ಹದಿನಾರು ವರ್ಷದ ಒಬ್ಬ ಪರಮಹಂಸನನ್ನು ನೋಡಿದ್ದೆನಲ್ಲ, ಆತನ ಹಾಗೇ ಒಬ್ಬ ಅಲ್ಲಿ ಕಾಣಿಸಿಕೊಂಡ.

"ಸುತ್ತಮುತ್ತಲೂ ಆನಂದದ ಮುಗಿಲು ಕವಿದಿದ್ದಿತು. ಅದರೊಳಗಿನಿಂದ ಹದಿಮೂರೊ ಹದಿನಾಲ್ಕೊ ವಯಸ್ಸಿನ ಒಬ್ಬ ಹುಡುಗ ಹೊರಕ್ಕೆ ಬಂದ. ಆತನ ಮುಖದ ಕಡೆ ನೋಡಿದೆ. ಪೂರ್ಣನದರ ಹಾಗಿತ್ತು. ನಾವಿಬ್ಬರೂ ದಿಗಂಬರರಾಗಿರುವಂತೆ ಕಂಡಿತು. ಬಳಿಕ ಇಬ್ಬರೂ ಆನಂದದಿಂದ ಮೈದಾನದಲ್ಲಿ ಓಡಾಡಲು ಮತ್ತು ಆಟವಾಡಲು ಆರಂಭಿಸಿದೆವು. ಓಡಾಡಿ ಓಡಾಡಿ ಪೂರ್ಣನಿಗೆ ಬಾಯಾರಿಕೆ ಬಂದುಬಿಟ್ಟಿತು. ಆತ ಒಂದು ಪಾತ್ರೆಯಲ್ಲಿ ನೀರು ತಂದು ತಾನೂ ಕುಡಿದು ನನಗೂ ಕೊಡಲು ಬಂದ. ನಾನು ಹೇಳಿದೆ, 'ನಿನ್ನ ಉಚ್ಛಿಷ್ಟವನ್ನು ನಾನು ಕುಡಿಯಲಾರೆ' ಅಂತ. ಆತ ನಗುತ್ತ ನಗುತ್ತ ಗ್ಲಾಸನ್ನು ತೊಳೆದು ಬೇರೊಂದು ಗ್ಲಾಸು ನೀರನ್ನು ತಂದುಕೊಟ್ಟ."

ಪರಮಹಂಸರು ಮತ್ತೆ ಸಮಾಧಿಸ್ಥರಾಗಿದಾರೆ. ಸ್ವಲ್ಪ ಹೊತ್ತು ಕಳೆದನಂತರ ಪ್ರಕೃತಿಸ್ಥರಾಗಿ ಮತ್ತೆ ಮಾಸ್ಟರೊಡನೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನನ್ನ ಮನಸ್ಸು ಬದಲಾವಣೆಯನ್ನು ಹೊಂದು

ತ್ತಿದೆ. ಪ್ರಸಾದಕ್ಕೆ ಮನ್ನಣೆ ತೋರಿಸೋ ಅವಸ್ಥೆ ನನ್ನನ್ನು ಬಿಟ್ಟುಹೊರಟು ಹೋಗಿಬಿಟ್ಟಿದೆ. ಸತ್ಯ, ಮಿಥ್ಯಾ ಎರಡೂ ಒಂದಾಗಿ ತೋರುತ್ತಿವೆ. ಈ ಸ್ವಲ್ಪ ಹೊತ್ತಿನ ಹಿಂದಿನ ಅವಸ್ಥೆಯಲ್ಲಿ ನಾನು ಇನ್ನೂ ಏನು ನೋಡಿದೆ ಗೊತ್ತೆ? ಭಗವದ್ರೂಪವನ್ನು — ಭಗವತಿಯ ಮೂರ್ತಿಯನ್ನು. ಆಕೆ ಗರ್ಭಿಣಿಯಾಗಿದ್ದಳು. ಮಗುವನ್ನು ಹೆತ್ತು ಅದನ್ನು ನುಂಗಲಾರಂಭಿಸಿದಳು. ಆಕೆಯ ಬಾಯ ಒಳಕ್ಕೆ ಹೋಗುತ್ತಿದ್ದ ಆ ಮಗುವಿನ ಭಾಗವೆಲ್ಲ ಶೂನ್ಯ ವಾಗಿಬಿಡುತ್ತಿತ್ತು. ಎಲ್ಲವೂ ಶೂನ್ಯ ಅಂತ ಆಕೆ ತೋರಿಸಲಾರಂಭಿಸಿದಳು. ಆಕೆ ಹೇಳುತ್ತಿರೋ ಹಾಗೆ ಕಂಡಿತು, 'ಬಾ! ಬಾ! ಮಾಯಾ ಮಂತ್ರವೆ ಬಾ! ಬಾ!' ಅಂತ."

"ಐಂದ್ರಜಾಲಿಕನೆ ಸತ್ಯ, ಉಳಿದುದೆಲ್ಲ ಅನಿತ್ಯ" ಎಂಬ ಪರಮ ಹಂಸರ ಮಾತು ಮಾಸ್ಟರ ಜ್ಞಾಪಕಕ್ಕೆ ಬಂತು.

ಶ್ರೀರಾಮಕೃಷ್ಣರು : "ಒಳ್ಳೇದು, ಆ ಸಲ ನಾನು ಪೂರ್ಣನನ್ನು ಆಕರ್ಷಿಸಲು ಪ್ರಯತ್ನಮಾಡಿದೆ, ಆದರೆ ಜಯಶೀಲನಾಗಲಿಲ್ಲವಲ್ಲ ಏಕೆ? ಇದು ನನ್ನ ಶಕ್ತಿಯ ಸಂಬಂಧವಾಗಿ ಸಂದೇಹವನ್ನು ತರುತ್ತಿದೆ."

ಮಾಸ್ಟರ್ : "ಅವೆಲ್ಲ ಪವಾಡಗಳು."

ಶ್ರೀರಾಮಕೃಷ್ಣರು : "ಪಕ್ಕಾ ಪವಾಡಗಳೆ."

ಮಾಸ್ಟರ್ : "ನಾವು ನಿಮ್ಮೊಡನೆ ಅಧರಸೇನನ ಮನೆಯಿಂದ ಹೊರಟು ಬಂಡಿಯಲ್ಲಿ ಕುಳಿತುಬರುತ್ತಿದ್ದಾಗ ಒಂದು ಸೀಸೆ ಒಡೆದು ಹೋದುದು ನಿಮಗೆ ಜ್ಞಾಪಕದಲ್ಲಿರಬೇಕು. ಆಗ ನಮ್ಮಲ್ಲಿ ಒಬ್ಬರು ನಿಮ್ಮನ್ನು ಕೇಳಿದೆವು: 'ಹೀಗಾದ್ದರಿಂದ ನಮಗೇನಾದರು ತೊಂದರೆ ಬರುವುದೆ? ನಿಮ್ಮ ಅಭಿಪ್ರಾಯವೇನು?' ನೀವು ಹೇಳಿದಿರಿ: 'ಬೇಕಾದ್ದು ಬರಲಿ. ಅದಕ್ಕೇಕೆ ನಾನು ಮನಸ್ಸು ಕೊಡಲು ಹೋಗಲಿ. ಹಾಗೆಲ್ಲ ಮಾಡಲು ಹೋದರೆ ಪವಾಡ ತೋರಿಸಿದಂತಾಗುತ್ತದೆ.' "

ಶ್ರೀರಾಮಕೃಷ್ಣರು: "ಹೌದು, ಜನರು ತಮ್ಮ ಮಕ್ಕಳ ರೋಗ ಗುಣವಾಗಲೆಂದು ಅವನ್ನು ಹರಿನಾಮಕೀರ್ತನೆ ನಡೆಯೋ ಸ್ಥಳದಲ್ಲಿ ಉರುಳಿಸುತ್ತಾರೆ; ಅಥವಾ ಮಂತ್ರ-ತಂತ್ರಗಳಿಂದಲೂ ರೋಗವನ್ನು ಗುಣ ಪಡಿಸಲು ಪ್ರಯತ್ನಿಸುತ್ತಾರೆ. ಇವೆಲ್ಲ ಪವಾಡಗಳೆ. ಯಾರು ಇನ್ನೂ ಆಧ್ಯಾತ್ಮಿಕ ಜೀವನದ ಅತ್ಯಂತ ಕೆಳ ಹಂತಗಳಲ್ಲಿದಾರೊ, ಕೇವಲ ಅವರು

ಮಾತ್ರವೇ ರೋಗ ಗುಣಪಡಿಸುವಂತೆ ಭಗವಂತನಿಗೆ ಮೊರೆಯಿಟ್ಟು ಕೊಳ್ಳುತ್ತಾರೆ."

ಸಾಯಂಕಾಲವಾಗಿದೆ. ಪರಮಹಂಸರು ತಮ್ಮ ಹಾಸಿಗೆ ಮೇಲೆ ಕುಳಿತು ಭಗವತಿಯ ಧ್ಯಾನ ಮತ್ತು ನಾಮಜಪ ಮಾಡುತ್ತಿದಾರೆ. ಭಕ್ತರಲ್ಲನೇಕರು ಅವರ ಹತ್ತಿರ ನಿಶ್ಶಬ್ದರಾಗಿ ಕುಳಿತಿದಾರೆ. ಲಾಟು, ಶಶಿ, ಶರಚ್ಚಂದ್ರ, ಚಿಕ್ಕ ನರೇನ, ಪಲ್ಟು, ಭೂಪತಿ, ಗಿರೀಶ ಮತ್ತು ಇನ್ನೂ ಕೆಲವರು ಅಲ್ಲಿ ಕುಳಿತಿದಾರೆ. ಸ್ಟಾರ್ ಥಿಯೇಟರ ರಾಮತಾರಣ ಎಂಬುವನು ಗಿರೀಶನೊಡನೆ ಬಂದಿದಾನೆ. ಆತ ಹಾಡುವುದರಲ್ಲಿದಾನೆ. ಕೆಲವು ನಿಮಿಷಗಳನಂತರ ಡಾಕ್ಟರ್ ಸರ್ಕಾರನೂ ಬಂದು ಒಂದು ಕಡೆ ಕುಳಿತುಕೊಂಡ.

ಡಾಕ್ಟರ್ ಸರ್ಕಾರ ಪರಮಹಂಸರಿಗೆ: "ನಿನ್ನೆ ರಾತ್ರಿ ಮೂರು ಘಂಟೆ ಸಮಯದಲ್ಲಿ ನನಗೆ ನಿಮ್ಮ ಯೋಚನೆ ಹತ್ತಿಬಿಟ್ಟಿತು. ಆಗ ಮಳೆಯಾಗುತ್ತಿತ್ತು: ಯೋಚಿಸಲಾರಂಭಿಸಿದೆ, 'ಅವರ (ಪರಮಹಂಸರ) ಕೊಠಡಿಯ ಕಿಟಕಿ ಬಾಗಿಲುಗಳು ಮುಚ್ಚಿವೆಯೊ ಇಲ್ಲವೊ ಏನೊ ಯಾರಿಗೆ ಗೊತ್ತು?'"

ಶ್ರೀರಾಮಕೃಷ್ಣರು: "ನಿಜವಾಗಿಯೂ!"

ತಮ್ಮ ಸಂಬಂಧವಾಗಿ ಡಾಕ್ಟರಿಗೆ ಇರೋ ಪ್ರೀತಿ ಮತ್ತು ಯೋಚನಾ ಪರತೆಯನ್ನು ನೋಡಿ ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ.

ಶ್ರೀರಾಮಕೃಷ್ಣರು: "ಶರೀರವಿರೋವರೆಗೆ ಅದರ ನಿಗಾ ತೆಗೆದು ಕೊಳ್ಳಬೇಕಾಗುತ್ತದೆ. ಆದರೆ, ನನಗೆ ಕಂಡು ಬರುತ್ತಿವೆ ಈ ಶರೀರ ಆತ್ಮ ಕ್ಕಿಂತ ಪ್ರತ್ಯೇಕ ಅಂತ. ಕಾಮಕಾಂಚನಾಸಕ್ತಿ ಒಮ್ಮೆಗೇ ನಮ್ಮನ್ನು ಬಿಟ್ಟು ತೊಲಗಿ ಹೋಯಿತು ಅಂದರೆ, ಆಗ ಆತ್ಮ ಪ್ರತ್ಯೇಕ, ದೇಹ ಪ್ರತ್ಯೇಕ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ತೆಂಗಿನ ಕಾಯಿಯ ನೀರು ಸಂಪೂರ್ಣವಾಗಿ ಇಂಗಿಹೋಯಿತು ಅಂದರೆ, ಆಗ ತಿರುಳು ಪ್ರತ್ಯೇಕವಾಗಿ ಬಿಡುತ್ತದೆ, ಕರಟ-ಗಿರಟವೆಲ್ಲ ಪ್ರತ್ಯೇಕವಾಗಿ ಬಿಡುತ್ತವೆ; ಆಗ ತೆಂಗಿನ ಕಾಯನ್ನು ಅಳ್ಳಾಡಿಸಿದರೆ ತಿರುಳು ಅದರೊಳಗೆ 'ಟಕಟಕ' ಅಂತ ಶಬ್ದ ಮಾಡುತ್ತದೆ. ಅಥವಾ ಇದು ಕತ್ತಿ ಮತ್ತು ಅದರ ಒರೆಯ ಹಾಗೆ ಒರೆ ಒಂದು ಪ್ರತ್ಯೇಕ ವಸ್ತು, ಕತ್ತಿ ಇನ್ನೊಂದು ಪ್ರತ್ಯೇಕ ವಸ್ತು.

"ಅದಕ್ಕಾಗೇ ನಾನು ವಿಶೇಷವಾಗಿ ಏನೂ ಈ ದೇಹದ ಅಸ್ವಸ್ಥತೆಯ ಸಂಬಂಧವಾಗಿ ಭಗವತಿಗೆ ಹೇಳಿಕೊಳ್ಳಲಾರೆ."

ಭಕ್ತರಿಗೆ ಗಿರೀಶ: "ಪಂಡಿತ ಶಶಧರ ಇವರಿಗೆ (ಪರಮಹಂಸರಿಗೆ) ಹೇಳಿದ, 'ನೀವು ಸಮಾಧಿಯಲ್ಲಿರೋವಾಗ ಮನಸ್ಸನ್ನು ದೇಹದ ಕಡೆಗೆ ತಿರುಗಿಸಿಬಿಡಿ. ಹಾಗೆ ಮಾಡಿದರೆ ನಿಮ್ಮ ರೋಗ ಗುಣವಾಗಿಬಿಡುತ್ತದೆ.' ಅಂತ. ಆದರೆ ಇವರು ಭಾವಾವಸ್ಥೆಯಲ್ಲಿ ಕಂಡರು, ಈ ದೇಹ ಎಂಬುದು ಮೂಳೆ ಮಾಂಸಗಳ ಕೇವಲ ಒಂದು ಮೂಟೆ ಮಾತ್ರ ಆಗಿರೋದನ್ನ."

ಶ್ರೀರಾಮಕೃಷ್ಣರು: "ಒಮ್ಮೆ, ಬಹಳ ಕಾಲದ ಹಿಂದೆ, ನನಗೆ ದೊಡ್ಡ ಕಾಯಿಲೆ ಬಂದಿತ್ತು. ಕಾಳೀದೇವಾಲಯದಲ್ಲಿ ಕುಳಿತುಕೊಂಡಿದ್ದೆ. ರೋಗ ಗುಣಪಡಿಸಿಕೊಡು ಎಂಬುದಾಗಿ ಭಗವತಿಗೆ ಪ್ರಾರ್ಥನೆಮಾಡಿಕೋ ಬೇಕು ಎಂಬ ಇಚ್ಛೆಯುಂಟಾಯಿತು. ಆದರೆ ನನಗಾಗಿ ನಾನೇ ಪ್ರಾರ್ಥನೆ ಮಾಡಿಕೊಳ್ಳಲಾಗಲಿಲ್ಲ. ನಾನು ಆಕೆಗೆ ಹೇಳಿಕೊಂಡೆ, 'ಹೇ ತಾಯೆ, ನನ್ನ ರೋಗದ ಸಂಬಂಧವಾಗಿ ನಿನಗೆ ತಿಳಿಸೋ ಹಾಗೆ ಹೃದೆ ನನಗೆ ಹೇಳಿದಾನೆ' ಅಂತ. ಇನ್ನು ಬೇರೆ ಏನೂ ಹೇಳಿಕೊಳ್ಳಲಾಗಲಿಲ್ಲ. ಹಾಗೆ ಆಕೆಗೆ ಹೇಳುತ್ತ ಹೇಳುತ್ತ ಇದ್ದ ಹಾಗೆ ಒಡನೆಯೆ ಏಷ್ಯಾಟಿಕ ಸೊಸೈಟಿಯ ಮ್ಯುಸೀಯಮ್ಮಿನಲ್ಲಿ ತಂತಿಯಿಂದ ಬಿಗಿದು ನಿಲ್ಲಿಸಿದ್ದ ಮನುಷ್ಯನ ಎಲುಬು ಗೂಡಿನ ಚಿತ್ರ ನನ್ನ ಜ್ಞಾಪಕಕ್ಕೆ ಬಂತು. ಒಡನೆಯೆ ಆಕೆಗೆ ಪ್ರಾರ್ಥನೆ ಮಾಡಿದೆ, 'ಹೇ ತಾಯೆ, ನಿನ್ನ ನಾಮಗುಣಕೀರ್ತನೆ ಮಾಡುತ್ತಾ ಕಾಲ ಕಳೆಯಬೇಕೆಂಬ ಇಚ್ಛೆಯಿದೆ. ಆದ್ದರಿಂದ ನನ್ನ ಈ ಶರೀರದ ತಂತಿಗಳನ್ನು ಸ್ವಲ್ಪ ಅದರ ಹಾಗೆ ಬಲವಾಗಿ ಬಿಗಿ' ಅಂತ. ನನ್ನ ಕೈಯಲ್ಲಿ ಸಿದ್ಧಿಗಳಿಗಾಗಿ ಪ್ರಾರ್ಥಿಸಲಾಗೋದೇ ಇಲ್ಲ.

"ಒಮ್ಮೆ ಹೃದೆ ನನಗೆ ಹೇಳಿದ,— ಆಗ ನಾನು ಆತನ ಅಂಕೆಯಲ್ಲಿದ್ದೆ— ನಾನು ಹೋಗಿ ಭಗವತಿಯ ಹತ್ತಿರ ಶಕ್ತಿಗಳಿಗಾಗಿ ಪ್ರಾರ್ಥನೆ ಮಾಡಿಕೋಬೇಕು ಅಂತ. ಆತನ ಇಚ್ಛೆಯಂತೆ ನಾನು ದೇವಾಲಯಕ್ಕೆ ಹೋದೆ. ಮೂವತ್ತೊ ಅಥವಾ ಮೂವತ್ತೈದೊ ವಯಸ್ಸಿನ ಒಬ್ಬ ವೇಶ್ಯೆ ಅಗ್ನಿಮಾಂದ್ಯವಾದವಳ ಹಾಗೆ ಮಲವಿಸರ್ಜನೆ ಮಾಡುತ್ತಿರೋ ಒಂದು ಅಲೌಕಿಕ ದರ್ಶನವಾಯಿತು. ಸಿದ್ಧಿ ಆಕೆಯ ಮಲಕ್ಕೆ ಸರಿಸಮಾನ ಅಂತ

ಭಗವತಿ ನನಗೆ ತಿಳಿಸಿದಳು. ನನಗೆ ಈ ವಿಧವಾದ ಸಲಹೆಯನ್ನು ಇತ್ತುದಕ್ಕೋಸ್ಕರ ಹೃದಯನ ಮೇಲೆ ನನಗೆ ಸ್ವಲ್ಪ ಕೋಪ ಬಂತು."

ಈಗ ರಾಮತಾರಣ ಹಾಡಲಾರಂಭಿಸಿದಾನೆ:

ನೋಡಿದುವೆ ನನ್ನ ಸುಮಧುರ ವೀಣೆ,
ನುಡಿಸು ಬಾ ಒಲವೇ.
ನಿನ್ನ ಕೋಮಲ ಕರದ ಸ್ಪರ್ಶಕ್ಕೆಈ ವೀಣೆ
ಹೊಮ್ಮಿಸುವುದಪೂರ್ವರಾಗಗಳನೆ !
ಸಡಿಲವಾದರೆ ಶ್ರುತಿಯು ಮೂಕವಪ್ಪುವು ತಂತಿ
ಬಿಗಿಯಾದರವು ಮುರಿದು ಸಿಡಿಯಬಹುದು.
ಸಮಶ್ರುತಿಯಲಿದ ನುಡಿಸು ; ಆಗ ರಾಗದ ಹೊನಲು
ನೂರಾರು ರೀತಿಯಲಿ ಹರಿಯಬಹುದು.

ಗಿರೀಶನಿಗೆ ಡಾಕ್ಟರ್ : "ಇದು ಒಂದು ಹೊಸ ಹಾಡೇನು ?"

ಗಿರೀಶ : "ಅಲ್ಲ, ಎಡ್ವಿನ್ ಆರ್ನಾಲ್ಡನ ಭಾವನೆಯನ್ನು ಹೊಂದಿಸಿಕೊಂಡು ರಚಿಸಿದ ಹಾಡು."

ರಾಮತಾರಣ ಬುದ್ಧಚರಿತೆಯಿಂದ ಹಾಡಲಾರಂಭಿಸಿದ:

ಹಾ ! ಸುತ್ತುತಿರುವೆವು ನಾವು, ವಿಶ್ರಾಂತಿಯಿನಿತಿಲ್ಲ
ಬಂದುದೆಲ್ಲಿಂದಲೋ, ನಡೆವುದೆಲ್ಲೋ ?
ಸುಖದುಃಖಗಳ ಸುಳಿಯು ಎನಿತೊಸಲ ಸುತ್ತಿದೆವು
ನಮ್ಮ ಹಾದಿಯು ನೆಲೆಯನರಿಯದೆಯೆ ಬಳಲಿದೆವು
ಈ ನಿರರ್ಥಕ ಲೀಲೆಯರ್ಥವೇನೊ ?

ಎಚ್ಚರಿದ್ದರು ನಾವು ನಿದ್ರಸ್ಥರಂತಿಹೆವು
ಯಾವ ಮಾಯೆಗೊ ನಾವು ಸಿಲುಕಿರುವೆವು !
ಈ ಕತ್ತಲೆಂದಿಗೂ ಒಡೆದು ಮೂಡಲ ಕಿರಣ
ನಮ್ಮ ಬಾಳಿಗೆ ಇನ್ನು ಬಾರದೇನು ?
ಗುರಿಯಿಲ್ಲದಲೆಯುತಿಹ ಗಾಳಿಯಂದದಿ ಜೀವ
ತೊಳಲುವೀ ಕರ್ಮಕ್ಕೆ ಕಡೆಯಿಲ್ಲವೇನು ?
ನಾವು ಯಾರೊ ಏನೊ ! ಏಕೆ ಬಂದೆವೊ ಇಲ್ಲಿ
ಕೊರೆವ ನೋವಿನ ಗಾಳಿ ಬೀಸುವಲ್ಲಿ !

ಎಷ್ಟು ಜನತೇಲುವರು! ಒಂದು ಚಣಸಂತೋಷ, ಮರುಚಣವೆನೋವು
ಒಂದು ಚಣವಿದ್ದವರು ಮರುಚಣವೆ ಇಲ್ಲ!
ನಾವೇಕೆ ಬಂದೆವೋ ನಾವು ಮಾಡುವುದೇನೊ
ತಿಳಿಯಲಿಲ್ಲ.
ಕಳೆದ ಜನುಮದ ಪರಿಯ ತಿಳಿಯದಿರುವೆವು ನಾವು
ಹರಿವ ನೀರಿನ ತೆರದಿ ಇನಿತಾದರೂ ನಮಗೆ ವಿಶ್ರಾಂತಿಯಿಲ್ಲ?

ಓ ಏಳಿರೋ ಏಳಿ!
ಸುತ್ತುವರಿದಿಹ ತಮದ ಪಂಜರದ ಕಂಬಿಗಳ ಕೀಳಿರೋ ಕೀಳಿ
ಎಷ್ಟುದಿನ ಈಬಗೆಯ ಕನಸಿನಲಿ ತೇಲುವಿರೊ, ಏಳಿ ಮೇಲೇಳಿ
ಒಮ್ಮೆ ಎದ್ದವರೆಲ್ಲ ಮಲಗಬೇಡಿ.
ನೂರು ನೋವಿನ ನಿಬಿಡ ಹೊರೆಯ ಕೊಡವಿರಿ ಇನ್ನು
ಏಳುವರು ಏಳಿ.
ಎದ್ದವರು ಮತ್ತೊಮ್ಮೆ ಮಲಗಬೇಡಿ!

ಓ ಸ್ವಪ್ರಕಾಶನೆ ಬಾರ.
ನಿನ್ನ ಬೆಳಕಿನ ಶೂಲವನು ಮೇಲಕೆತ್ತಿ ಗಾಢಾಂಧಕಾರ
ಕಳೆಯಬಾರ.
ನೀನೆ ಭವತಾರಕನು; ನಮ್ಮೆದೆಯ ಶಕ್ತಿ.
ನಿನ್ನಡಿಯ ಗುಡಿಯಲ್ಲಿ ನಮಗಿನ್ನು ಮುಕ್ತಿ!

ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದ ಹಾಗೇ ಪರಮಹಂಸರು ಸಮಾಧಿಸ್ಥರಾದರು.

ರಾಮತಾರಣ ಮತ್ತೆ ಹಾಡಿದ:

ಬೀಸಲಿ ಬುಸುಗುಟ್ಟಲಿ ಬಿರುಗಾಳಿ....

ರಾಮತಾರಣ ಈ ಹಾಡನ್ನು ಹಾಡಿ ಮುಗಿಸಿದ. ಬಳಿಕ ಪರಮಹಂಸರು ಹೇಳುತ್ತಿದಾರೆ: "ಇದು ಏನಿದು? ಪಾಯಸ ಬಡಿಸಿದ ಮೇಲೆ ಬೇವಿನ ಸೊಪ್ಪಿನ ಸಾರು ಬಡಿಸೋದೆ? ನೀನು—

ಓ ಸ್ವಪ್ರಕಾಶನೆ ಬಾರ.
ನಿನ್ನ ಬೆಳಕಿನ ಶೂಲವನು ಮೇಲಕೆತ್ತಿ ಗಾಢಾಂಧಕಾರ
ಕಳೆಯ ಬಾರ.

ಎಂಬುದಾಗಿ ಹಾಡಿದೊಡನೆಯೆ ನನಗೆ ಸೂರ್ಯನ ದರ್ಶನವಾಯಿತು. ಆತನ ಉದಯವಾದೊಡನೆ ನಾಲ್ಕು ಕಡೆಗೂ ಹಬ್ಬಿದ್ದ ಕಗ್ಗತ್ತಲು ಅದೃಶ್ಯವಾಗಿಬಿಟ್ಟಿತು; ಎಲ್ಲರೂ ಆತನ ಪಾದಪದ್ಮಗಳಲ್ಲಿ ಶರಣುಹೋದರು.”

ರಾಮತಾರಣ ಮತ್ತೆ ಹಾಡಲಾರಂಭಿಸಿದಾನೆ:

ದೀನತಾರಿಣಿ ನೀನು ದುರಿತಹಾರಿಣಿ ನೀನು
ಸತ್ತ್ವರಜತಮಗಳಿಗೆ ಆಧಾರೆ ನೀನು.
ಸೃಷ್ಟಿ ಸ್ಥಿತಿಲಯ ರೂಪಿ
ಸಗುಣ ನಿರ್ಗುಣ ರೂಪಿ
ಸರ್ವ ಸ್ವರೂಪಿ !

ನೀ ಕಾಳಿ, ನೀ ತಾರ, ನೀ ಪರಮಪ್ರಕೃತಿ
ಮತ್ಸ್ಯ ಕೂರ್ಮ ವರಾಹ ಅವತಾರಮೂರ್ತಿ
ಪಂಚಭೂತವು ನೀನೆ
ವ್ಯೋಮಕೇಶನ ಹಡೆದ ತಾಯಿ ನೀನೇ !

ಸಾಂಖ್ಯಮೀಮಾಂಸಾದಿ ದರ್ಶನಗಳೆಲ್ಲ
ನಿನ್ನನಳೆಯಲು ತೊಡಗಿ ಸೋತಿರುವುವಲ್ಲ !
ವೇದವೇದಾಂತಗಳು ಹುಡುಕಾಡುತಿರಲು
ಅವಕೆ ನಿಲುಕದೆ ದೂರ ನಿಂತಿರುವೆಯಲ್ಲ !

ನಿರುಪಾಧಿ, ಆದ್ಯಂತರಹಿತಳು ನೀನು.
ಆದರೂ ಸಾಧಕರು ತಮ್ಮ ಕಲ್ಪನೆಯಂತೆ
ಸತ್ಯದಾರಾಧನೆಗೆ ತೊಡಗುತಿರಲು
ಅವರವರ ಭಾವಕ್ಕೆ ತಕ್ಕಂಥ ರೂಪಗಳ
ತಾಳಿ ದರ್ಶನವೀವ ತಾಯಿ ನೀನು.
ಭವಭಯವ ಕೊಂದು ತ್ರಿಕಾಲದಲ್ಲಿಯೂ
ಚರಿಸುವಳು ನೀನು.
ಬಣ್ಣನೆಗೆ ನಿಲುಕದಾ ತುರೀಯದಲಿ ನಿಂತು
ಮೂಜಗವ ತುಂಬಿರುವ ಬ್ರಹ್ಮಮಯಿ ನೀನು

ಆತ ಮತ್ತೆ ಹಾಡಿದ:

ಧರ್ಮ ಕರ್ಮಗಳೆಲ್ಲ ಕೊನೆಗಂಡಿತೆನ್ನೊಳಗೆ.
ಘನಶ್ಯಾಮೆಯನು ನಾನು ನೆನೆಯಲಾರೆ.

ನನ್ನ ಇರವನು ಕಂಡು ನಾನೆ ನಾಚುತಲಿಹೆನು
ನನ್ನ ಮನವನು ನಾನೆ ತಡೆಯಲಾರೆ.

ಕರವಾಲವನು ಹಿಡಿದು ರುಂಡಮಾಲಿಯ ಕುರಿತು
ನಾನಿಲ್ಲಿ ಪೂಜೆಯಲಿ ತೊಡಗಿದಾಗ
ಕೊಳಲನೂದುತಲಿರುವ ವನಮಾಲಿಯಾಕೃತಿಯು
ಬಂದು ನಿಲ್ಲುವುದಲ್ಲ; ಮಾಳ್ಪುದೇನು ?

ಶ್ರೀ ತ್ರಿನೇತ್ರೆಯ ಕುರಿತು ನಾನು ಧ್ಯಾನಿಸುತಿರಲು
ಕಮಲನೇತ್ರನು ಬಂದು ನಿಲ್ಲುವನು ಮುಂದೆ !
ತಾಯ ಶ್ರೀಪಾದದಲಿ ಹೂವನರ್ಪಿಸುವಾಗ
ಘನಶ್ಯಾಮಸುಂದರಗೆ ಮರುಳುಗೊಂಡೆ !

ಪ್ರತಿಸಲವು ಪೂಜೆಯಲಿ ಘನಶ್ಯಾಮೆಯನು ಕುರಿತು
ನಾನು ಆರಾಧಿಸುವ ಹೊತ್ತಿನಲ್ಲಿ,
ಘನಶ್ಯಾಮಸುಂದರನು ಎಲ್ಲ ಪೂಜೆಯ ಮರೆಸಿ
ಬಂದು ನಿಲುವನು ಹೊನ್ನ ಕಾಂತಿಯಲ್ಲಿ !

ಈ ಹಾಡನ್ನು ಕೇಳಿ ಪರಮಹಂಸರು ಮತ್ತೆ ಭಾವಾವಿಷ್ಟರಾಗಿದಾರೆ. ಮತ್ತೆ ರಾಮತಾರಣ ಹಾಡಲಾರಂಭಿಸಿದಾನೆ :

ರಂಗುರಂಗಿನ ಹೂವನಾರಿಟ್ಟರಮ್ಮಯ್ಯ ನಿನ್ನ ಅಡಿಗೆ ?
ಅವುಗಳಲ್ಲೆರಡನ್ನು ಇಡಬಾರದೇ ನೀನು ನನ್ನ ಮುಡಿಗೆ !
ಆಗ ನಿನ್ನನು ನಾನು " ಓ ತಾಯಿ ' ಎನ್ನುತ್ತ
ನಿನ್ನ ಸುತ್ತಲು ಕುಣಿದು ಚಪ್ಪಾಳೆ ತಟ್ಟಿ
ನಲಿಯುತಿರೆ, ನೀ ನಲಿವೆ ಎಲ್ಲ ಹೂವನು ನನ್ನ
ಮುಡಿಗೆ ಕಟ್ಟಿ !

ಹಾಡುವುದು ಕೊನೆಗಂಡಿತು. ಭಕ್ತರಲ್ಲನೇಕರು ಭಾವಾವಿಷ್ಟರಾಗಿದಾರೆ. ನಿಶ್ಶಬ್ದರಾಗಿ ಕುಳಿತಿದಾರೆ. ಚಿಕ್ಕ ನರೇನ ಧ್ಯಾನಮಗ್ನನಾಗಿದಾನೆ. ಆತ ಮರದ ದಿಮ್ಮಿಯೋಪಾದಿಯಲ್ಲಿ ಕುಳಿತಿದಾನೆ. ಪರಮಹಂಸರು ಆತನನ್ನು ಡಾಕ್ಟರಿಗೆ ತೋರಿಸಿ ಹೇಳಿದರು : "ಈತನದು ಅತ್ಯಂತ ಶುದ್ಧ ಹೃದಯ. ವಿಷಯಬುದ್ಧಿ ಈತನ ಹೃದಯವನ್ನು ಒಂದು ಕಿಂಚಿತ್ತೂ ಸ್ಪರ್ಶಮಾಡಿಲ್ಲ."

ಡಾಕ್ಟರ್, ನರೇನನ ಕಡೆ ನೋಡುತ್ತಿದ್ದಾನೆ. ಆತ ಇನ್ನೂ ಧ್ಯಾನಸ್ಥನಾಗೇ ಇದ್ದಾನೆ.

ಮನಮೋಹನ ಡಾಕ್ಟರಿಗೆ: "ಇವರು (ಪರಮಹಂಸರ ಕಡೆ ಬೆರಳು ಮಾಡಿ) ನಿಮ್ಮ ಮಗನ ವಿಷಯವಾಗಿ ಹೇಳುತ್ತಿದ್ದಾರೆ, 'ಮಗ ದೊರೆತುಬಿಟ್ಟ ಅಂದರೆ, ತಂದೆ ಬೇಡವೇ ಬೇಡ' ಅಂತ."

ಡಾಕ್ಟರ್: "ಈಗ ಸಿಕ್ಕಿಬಿಟ್ಟಿರಿ! ಮಗ[1] ಹತ್ತಿರ ಇದ್ದ ಅಂದರೆ, ನೀವು ಎಲ್ಲವನ್ನೂ ಮರೆತುಬಿಡುತ್ತೀರಿ ಎಂಬುದಾಗಿ ಅದಕ್ಕಾಗೇ ನಾನು ಹೇಳುತ್ತಿರೋದು."

ಶ್ರೀರಾಮಕೃಷ್ಣರು ನಗುತ್ತ: "ತಂದೆ ಬೇಡವೇ ಬೇಡ ಅಂತಲೇನು ನಾನು ಹೇಳುತ್ತಿಲ್ಲವಲ್ಲ."

ಡಾಕ್ಟರ್: "ನಿಮ್ಮ ಹೃದಯದಲ್ಲಿ ಏನಿದೆ ಎಂಬುದು ನನಗೆ ಚೆನ್ನಾಗಿ ಗೊತ್ತು. ಹೀಗೆ ಒಂದೆರಡು ಮಾತು ಆಡಿ ತಲೆ ಸವರದೆ ಇದ್ದರೆ ಆಗುತ್ತದೆಯೆ?"

ಶ್ರೀರಾಮಕೃಷ್ಣರು: "ನಿನ್ನ ಮಗ ಬಹಳ ಸರಳ. ಒಮ್ಮೆ ಶಂಭು ಮಲ್ಲಿಕ ಮುಖ ಕೆಂಪಗೆ ಮಾಡಿಕೊಂಡು ಹೇಳಿದ, 'ಸರಳ ಹೃದಯದಿಂದ ಭಗವಂತನನ್ನು ಕರೆದರೆ, ಆತ ಅದನ್ನು ಕೇಳೇ ಕೇಳುತ್ತಾನೆ' ಅಂತ.

"ಹುಡುಗರನ್ನು ನಾನು ಅಷ್ಟೊಂದು ಪ್ರೀತಿಸುತ್ತೇನಲ್ಲ ಏಕೆ ಗೊತ್ತೆ? ಅವರು ಶುದ್ಧ ಹಾಲು: ಒಂದು ಸ್ವಲ್ಪ ಮರಳಿಸಿಬಿಟ್ಟರೇ ಸಾಕು ದೇವರಿಗೆ ಅರ್ಪಿಸಬಹುದು. ಆದರೆ ನೀರು-ಹಾಲನ್ನು ಬಹಳ ಹೊತ್ತು ಮರಳಿಸಬೇಕಾಗುತ್ತದೆ; ಅದು ಸೌದೆಯನ್ನೂ ಬಹಳವಾಗಿ ನುಂಗಿಬಿಡುತ್ತದೆ.

"ಹುಡುಗರು ಹೊಸ ಮಡಕೆಯ ಹಾಗೆ ಒಳ್ಳೆ ಪಾತ್ರೆಗಳು. ನಿಶ್ಚಿಂತೆಯಿಂದ ಅವುಗಳಲ್ಲಿ ಹಾಲಿಡಬಹುದು. ಅವರಿಗೆ ಜ್ಞಾನೋಪದೇಶ ಕೊಟ್ಟರೆ ಬಹು ಬೇಗ ಆತ್ಮಜಾಗೃತಿಯುಂಟಾಗಿಬಿಡುತ್ತದೆ. ವಿಷಯಾಸಕ್ತರಿಗೆ ಬೇಗ ಆಗೋದಿಲ್ಲ. ಮೊಸರಿನ ಮಡಕೆಯಲ್ಲಿ ಹಾಲಿಡಲು ಭಯವಾಗುತ್ತದೆ, ಏಕೆಂದರೆ ಒಡೆದುಹೋಗೋ ಸಂಭವ.

"ನಿನ್ನ ಮಗನ ಅಂತರ್ಯವನ್ನು ವಿಷಯಬುದ್ಧಿ, ಎಂದರೆ ಕಾಮ ಕಾಂಚನ ಹೊಕ್ಕಿಲ್ಲ."

---

1. ಮನುಷ್ಯ ಮಗನಲ್ಲೇ — ಅವತಾರ ಅಥವಾ ಭಕ್ತನಲ್ಲೇ—ನಿರತನಾಗಿ ತಂದೆಯನ್ನು, ಅಂದರೆ ಭಗವಂತನನ್ನು ಮರೆತುಬಿಡುತ್ತಾನೆ.

ಡಾಕ್ಟರ್: “ ತಂದೆಯು ಸಂಪಾದನೆಯನ್ನು ಕರಗಿಸುತ್ತಾ ಇರೋದರಿಂದ ಹಾಗೆ ಕಾಣುತ್ತಿದಾನೆ. ತಾನೇ ಸಂಪಾದಿಸಿ ತಿನ್ನುತ್ತಿದ್ದರೆ ನೋಡಬಹುದಾಗಿತ್ತು ವಿಷಯಬುದ್ಧಿ ಪ್ರವೇಶಿಸುತ್ತೊ ಇಲ್ಲವೊ ಎಂಬುದನ್ನ!”

ಶ್ರೀರಾಮಕೃಷ್ಣರು: “ಅದೇನೊ ನಿಜ, ಖಂಡಿತ ನಿಜ. ಆದರೆ ಇದು ಗೊತ್ತೆ? ವಿಷಯಾಸಕ್ತರಿಂದ ಭಗವಂತ ಬಹು ದೂರ ದೂರದಲ್ಲೇ ಇರುತ್ತಾನೆ. ವಿಷಯಾಸಕ್ತರಲ್ಲದವರ ಕೈಯಲ್ಲಿ ಆತ ಅಂಗೈ ಮೇಲೇನೆ.

(ಡಾಕ್ಟರ್ ಸರ್ಕಾರನಿಗೆ ಮತ್ತು ಡಾಕ್ಟರ್ ದೋಕರಿಗೆ) “ಕಾಮ ಕಾಂಚನ ತ್ಯಾಗ ನಿಮ್ಮಂಥವರಿಗಲ್ಲ. ನೀವು ಮಾನಸಿಕವಾಗಿ ತ್ಯಾಗಮಾಡಬೇಕು. ಅದಕ್ಕಾಗೇ ಗೋಸ್ವಾಮಿಗಳಿಗೆ ಹೇಳಿದೆ, ‘ನಿಮಗೇಕೆ ತ್ಯಾಗದ ಯೋಚನೆ? ಅದು ನಿಮಗೆ ಸರಿಹೋಗದು. ನೀವು ಶ್ಯಾಮಸುಂದರನ ಸೇವೆ ಮಾಡಬೇಕಾಗಿದೆ’ ಅಂತ.

“ಸನ್ಯಾಸಿಗಳಿಗೆ ತ್ಯಾಗ. ಅವರು ಸ್ತ್ರೀವ್ಯಕ್ತಿಯ ಚಿತ್ರಪಟವನ್ನೂ ನೋಡಕೂಡದು. ಹೆಂಗಸು ಅವರಿಗೆ ವಿಷವಿದ್ದ ಹಾಗೆ. ಕನಿಷ್ಠಪಕ್ಷ ಅವರು ಅವರಿಂದ ಹತ್ತು ಮೊಳ ದೂರದಲ್ಲೇ ಇರಬೇಕು; ಸಾಧ್ಯವಾಗದಿದ್ದರೆ ಒಂದು ಮೊಳ ದೂರದ ಅಂತರವಾದರೂ ಇದ್ದೇ ಇರಬೇಕು. ಆಕೆ ಎಂಥಾ ಭಕ್ತಿಮತಿಯಾದರೂ, ಆಕೆಯೊಡನೆ ಹೆಚ್ಚು ಮಾತುಕತೆ ಆಡಕೂಡದು. ಅದಷ್ಟೇ ಅಲ್ಲ, ಯಾವ ಸ್ಥಳದಲ್ಲಿ ಹೆಂಗಸಿನ ಮುಖವೇ ಕಾಣಬರೋದಿಲ್ಲವೊ—ಅಥವಾ ಕಂಡುಬಂದರೂ ಎಲ್ಲೊ ಅಪರೂಪವಾಗಿ ಕಂಡುಬರಬೇಕು— ಅಂಥಾ ಸ್ಥಳದಲ್ಲಿ ಸನ್ಯಾಸಿಗಳು ಇರಬೇಕು.

“ಹಣವೂ ಸನ್ಯಾಸಿಗೆ ವಿಷಪ್ರಾಯವಾದ್ದು. ಹಣ ಹತ್ತಿರ ಇತ್ತು ಅಂದರೆ, ಅದರ ಮೇಲಿನ ಚಿಂತನೆ, ಅಹಂಕಾರ, ದೇಹಸುಖಕ್ಕಾಗಿ ಪ್ರಯತ್ನ, ಕ್ರೋಧ ಇವೆಲ್ಲಾ ಬಂದುಬಿಡುತ್ತವೆ; ರಜೋಗುಣ ವೃದ್ಧಿಯಾಗಿಬಿಡುತ್ತದೆ. ರಜೋಗುಣ ಇತ್ತು ಅಂದರೆ ತಮೋಗುಣ ಅದರ ಹಿಂಬಾಲಕ. ಅದಕ್ಕಾಗೇ ಸನ್ಯಾಸಿ ಕಾಂಚನವನ್ನು ಮುಟ್ಟಕೂಡದು. ಕಾಮಕಾಂಚನ ಭಗವಂತನನ್ನು ಮರಸಿಬಿಡುತ್ತವೆ.

“ಗೃಹಸ್ಥರಿಗೆ ಅನ್ನ-ಗಿನ್ನ, ಬಟ್ಟೆ-ಬರೆ, ಮನೆ-ಗಿನೆ ಇವನ್ನು ಹಣ ದೊರಕಿಸಿಕೊಡುತ್ತದೆ. ಭಗವಂತನ ಸೇವೆ ಮತ್ತು ಸಾಧು ಭಕ್ತರ ಸೇವೆಯೂ ಅದರಿಂದ ನಡೆಯುತ್ತದೆ.

“ಬರಿದೆ ಕೂಡಿಡೋದು ವ್ಯರ್ಥ. ಜೇನು ಹುಳು ಬಹಳ ಕಷ್ಟಪಟ್ಟು

ಗೂಡನ್ನು ಕಟ್ಟಿ ಜೇನನ್ನು ಶೇಖರಿಸಿಡುತ್ತದೆ; ಮನುಷ್ಯ ಬಂದು ಅದನ್ನು ಕಿತ್ತು ಜೇನನ್ನು ಅಪಹರಿಸಿಕೊಂಡುಬಿಡುತ್ತಾನೆ."

ಡಾಕ್ಟರ್: "ಕೂಡಿಡೋದು ಯಾರಿಗೆ ?— ದುಷ್ಟ ಮಗನಿಗೆ."

ಶ್ರೀರಾಮಕೃಷ್ಣರು: "ಕೆಟ್ಟ ಮಗನಿಗೇ ಅಲ್ಲ, ಕೆಟ್ಟ ಹೆಂಡತಿಗೂ. ಆಕೆಗೆ ಒಬ್ಬ ಉಪಪತಿ ಇದ್ದ ಎಂದರೆ, ನಿನ್ನ ಗಡಿಯಾರಾನೇ, ನಿನ್ನ ಚೈನನ್ನೇ ಆತನಿಗೆ ಕೊಟ್ಟುಬಿಡುತ್ತಾಳೆ !

"ನೀವು ಒಮ್ಮೆಗೇ ಹೆಂಗಸನ್ನು ತ್ಯಾಗಮಾಡಬೇಕಾಗಿಲ್ಲ. ಸ್ವಪತ್ನಿಯ ಸಹವಾಸ ದೋಷವಾದ್ದೇನಲ್ಲ, ಆದರೆ ಒಂದೆರಡು ಮಕ್ಕಳಾದನಂತರ ಸತಿಪತಿಯರು ಅಣ್ಣತಂಗಿಯರೋಪಾದಿಯಲ್ಲಿ ವಾಸಿಸಬೇಕು.

"ಕಾಮಕಾಂಚನಾಸಕ್ತಿ ಇತ್ತು ಅಂದರೆ, ವಿದ್ಯೆಯ ಅಹಂಕಾರ, ಹಣದ ಅಹಂಕಾರ, ಉಚ್ಚಪದವಿಯ ಅಹಂಕಾರ ಇವೆಲ್ಲಾ ಬಂದುಬಿಡುತ್ತವೆ.

"ಅಹಂಕಾರ ಬಿಟ್ಟು ತೊಲಗಲಿಲ್ಲ ಅಂದರೆ, ಬ್ರಹ್ಮಜ್ಞಾನವನ್ನು ದೊರಕಿಸಿಕೊಳ್ಳಲಾಗೋದಿಲ್ಲ. ದಿಣ್ಣೆ ಮೇಲೆ ನೀರು ಶೇಖರವಾಗದು; ಆದರೆ ತಗ್ಗು ಪ್ರದೇಶಕ್ಕೆ ನೀರು ನಾಲ್ಕು ಕಡೆಗಳಿಂದಲೂ ನೊರಗುಟ್ಟಿಕೊಂಡು ನುಗ್ಗುತ್ತದೆ."

ಡಾಕ್ಟರ್: ತಗ್ಗು ಪ್ರದೇಶಕ್ಕೆ ನಾಲ್ಕು ಕಡೆಯಿಂದಲೂ ನೀರೇನೊ ನುಗ್ಗಿಬರುತ್ತದೆ. ಆದರೆ ಆ ನೀರಿನಲ್ಲಿ ಒಳ್ಳೆ ನೀರು ಮತ್ತು ಕೆಟ್ಟನೀರು—ಎಂದರೆ ಬಗ್ಗಡದ ನೀರು, ಚರಂಡಿ ನೀರು—ಇವೆಲ್ಲ ಬೆರತುಕೊಂಡಿರುತ್ತವೆ. ಆದರೆ ಬೆಟ್ಟಗಳ ಮೇಲೆ ನೈನಿತಾಲ್, ಮಾನಸಸರೋವರ ಇಂಥ ತಗ್ಗು ಪ್ರದೇಶಗಳಿವೆ. ಅವುಗಳಲ್ಲಿ ಆಕಾಶದಿಂದ ಬಿದ್ದ ಶುದ್ಧ ನೀರು ಮಾತ್ರ ಶೇಖರವಾಗಿರುತ್ತದೆ."

ಶ್ರೀರಾಮಕೃಷ್ಣರು: "ಕೇವಲ ಆಕಾಶದಿಂದ ಬಿದ್ದ ನೀರು ಮಾತ್ರವೆ—ಭೇಷ್ !"

ಡಾಕ್ಟರ್: "ಜೊತೆಗೆ, ಎತ್ತರ ಪ್ರದೇಶದಲ್ಲಿರೋ ನೀರನ್ನು ನಾಲ್ಕು ಕಡೆಗೂ ಹಂಚಬಹುದು."

ಶ್ರೀರಾಮಕೃಷ್ಣರು ನಗುತ್ತ: "ಒಬ್ಬನಿಗೆ ಒಂದು ಸಿದ್ಧಮಂತ್ರದ ಸಾಕ್ಷಾತ್ಕಾರವಾಯಿತು. ಆತ ಬೆಟ್ಟದ ಮೇಲಕ್ಕೆ ಹತ್ತಿಹೋಗಿ ಗಟ್ಟಿ

ಯಾಗಿ ಕೂಗಲಾರಂಭಿಸಿದ, ನೀವೆಲ್ಲರೂ ಈ ಮಂತ್ರವನ್ನು ಜಪಿಸಿ ; ನಿಮಗೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ' ಅಂತ."

ಡಾಕ್ಟರ್ : "ಹ್ಞೂ."

ಶ್ರೀರಾಮಕೃಷ್ಣರು : "ಆದರೆ ಒಂದು ವಿಷಯ. ಯಾವಾಗ ಪ್ರಾಣ ಭಗವಂತನ ಸಾಕ್ಷಾತ್ಕಾರಕ್ಕಾಗಿ ತೀವ್ರವಾಗಿ ವ್ಯಾಕುಲಪಡುವುದೊ, ಆಗ ಇದು ಒಳ್ಳೆ ನೀರು, ಅದು ಕೆಟ್ಟನೀರು — ಎಂದರೆ ಚರಂಡಿ ನೀರು ಎಂಬ ವಿವೇಚನೆಯೇ ಇರದು. ಮುಮುಕ್ಷು ಆತನ ಸಾಕ್ಷಾತ್ಕಾರಪಡೆಯ ಲೋಸುಗ ಕೆಲವು ವೇಳೆ ಒಳ್ಳೆಯವರನ್ನೂ ಸಮೀಪಿಸುತ್ತಾನೆ, ಇನ್ನು ಕೆಲವು ವೇಳೆ ದೋಷಯುಕ್ತರನ್ನೂ ಸಮೀಪಿಸುತ್ತಾನೆ. ಆದರೆ ಭಗವಂತನ ಕೃಪೆ ಬಂದೊದಗಿತು ಅಂದರೆ ಕೆಟ್ಟ ನೀರು ಯಾವ ಹಾನಿಯನ್ನೂ ತರ ಲಾರದು. ಯಾವಾಗ ಭಗವಂತ ಜ್ಞಾನವೀಯುತ್ತಾನೊ, ಆಗ ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ಎಂಬುದನ್ನು ಆತನೇ ತಿಳಿಸಿ ಕೊಡುತ್ತಾನೆ.

"ಬೆಟ್ಟದ ಮೇಲೆ ತಗ್ಗು ಪ್ರದೇಶವಿರಲೇನೊ ಸಾಧ್ಯ, ಆದರೆ 'ದುಷ್ಟ ಅಹಂ' ಎಂಬ ಬೆಟ್ಟದ ಮೇಲೆ ತಗ್ಗು ಪ್ರದೇಶವೆಂಬುದೇ ಇಲ್ಲ. 'ವಿದ್ಯೆಯ ಅಹಂ', 'ಭಕ್ತನ ಅಹಂ' ಎಂಬುವುಗಳ ಮೇಲೆ ಆಕಾಶದಿಂದ ಬಿದ್ದ ಶುದ್ಧ ನೀರು ಶೇಖರವಾಗುತ್ತದೆ.

"ಎತ್ತರ ಜಾಗದಲ್ಲಿ ಶೇಖರವಾಗಿರೋ ನೀರನ್ನು ನಾಲ್ಕು ಕಡೆಗೂ ಹಂಚಲೇನೊ ಸಾಧ್ಯ ; ಆದರೆ ಅದು 'ವಿದ್ಯೆಯ ಅಹಂ' ಎಂಬ ಬೆಟ್ಟ ದಿಂದ ಮಾತ್ರ ಸಾಧ್ಯ.

"ಭಗವಂತನಿಂದ ಆದೇಶಪಡೆಯದೆ ಲೋಕಶಿಕ್ಷಣ ಮಾಡ ಲಾಗೋದಿಲ್ಲ. ಶ್ರೀ ಶಂಕರಾಚಾರ್ಯರು ಲೋಕಶಿಕ್ಷಣಕ್ಕಾಗಿ 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. ಆತನ ಸಾಕ್ಷಾತ್ಕಾರ ಪಡೆಯದೇ ಉಪನ್ಯಾಸ ! ಅದರಿಂದ ಜಗತ್ತಿಗೆ ಉಪಕಾರವಾದೀತೆ ?

"ನಾನು ನಂದನವನದ ಬ್ರಾಹ್ಮಸಮಾಜಕ್ಕೆ ಹೋಗಿದ್ದೆ. ಉಪಾಸನೆ ಮುಗಿದನಂತರ, ಅವರ ಆಚಾರ್ಯ ವೇದಿಕೆಯಲ್ಲಿ ಕುಳಿತು ಉಪನ್ಯಾಸ ಕೊಟ್ಟ. ಆತ ಅದನ್ನು ಮನೆಯಲ್ಲಿ ಬರೆದುಕೊಂಡುಬಂದಿದ್ದ. ಅದನ್ನು ಓದೋವಾಗ ಸುತ್ತಲೂ ನೋಡುತ್ತಿದ್ದ. ಧ್ಯಾನಮಾಡುತ್ತ ಮಾಡುತ್ತ ಆಗಾಗ ಕಣ್ದೆರೆದು ಸಭಿಕರ ಕಡೆ ದೃಷ್ಟಿಹಾಕುತ್ತಿದ್ದ.

“ ಯಾರು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡಿಲ್ಲವೊ ಅವರ ಉಪದೇಶ ಸರಿಯಾದ ಪರಿಣಾಮವನ್ನು ತರಲಾರದು. ಅವರು ಒಂದನ್ನೇನೊ ಸರಿಯಾಗಿ ಹೇಳಿದರೂ, ಇನ್ನೊಂದರಲ್ಲಿ ದಿಗ್ಮೂಢ ರಾಗುತ್ತಾರೆ.

“ ಸಮಾಧ್ಯಾಯಿ ಒಂದು ಉಪನ್ಯಾಸ ಕೊಟ್ಟ. ಅದರಲ್ಲಿ ಆತ ಹೇಳಿದ, ‘ ಭಗವಂತ ವಾಙ್ಮನಾತೀತ ; ಆತನಲ್ಲಿ ರಸ ಎಂಬುದೇ ಇಲ್ಲ. ಆತನನ್ನು ನಿಮ್ಮ ಪ್ರೇಮಭಕ್ತಿ ಎಂಬ ರಸದಿಂದ ಪೂಜೆಮಾಡಿ ’ ಅಂತ. ನೋಡು ನೀನೆ, ಯಾರು ರಸಸ್ವರೂಪನೊ, ಆನಂದಸ್ವರೂಪನೊ ಅಂಥ ಭಗವಂತನನ್ನು ಈ ರೀತಿಯಾಗಿ ವರ್ಣಿಸಿದ್ದನ್ನ! ಇಂಥ ಉಪನ್ಯಾಸದಿಂದ ಏನು ಪ್ರಯೋಜನ ? ಇದರಿಂದ ಲೋಕಶಿಕ್ಷಣ ಆಗುತ್ತದೆಯೆ ? ಒಬ್ಬ ಹೇಳಿದ, ‘ ನಮ್ಮ ಸೋದರಮಾವನ ಕೊಟ್ಟಿಗೆ ತುಂಬ ಕುದುರೆಗಳು ಇವೆ ’ ಅಂತ. ಕೊಟ್ಟಿಗೆಯಲ್ಲಿ ಕುದುರೆ ! ( ಎಲ್ಲರೂ ನಗುತ್ತಾರೆ.) ಇದರಿಂದ ಅರ್ಥಮಾಡಿಕೊಳ್ಳಬೇಕು ಆತ ಬರೀ ಬುರುಡೆ ಬಿಟ್ಟ ಅಂತ. ”

ಡಾಕ್ಟರ್ ನಗುತ್ತ : “ ಅಲ್ಲಿ ಹಸುಗಳೂ ಇಲ್ಲ ! ” ( ಎಲ್ಲರೂ ನಗುತ್ತಾರೆ. )

ಭಕ್ತರಲ್ಲಿ ಯಾರಾರು ಭಾವಾವಿಷ್ಟರಾಗಿದ್ದರೊ ಅವರೆಲ್ಲರೂ ಈಗ ಪ್ರಕೃತಿಸ್ಥರಾಗಿದಾರೆ. ಅವರನ್ನೆಲ್ಲ ನೋಡಿ ಡಾಕ್ಟರಿಗೆ ಬಹಳ ಆನಂದ ವಾಗಿಬಿಟ್ಟಿದೆ. ಆತ ಮಾಸ್ಟರನ್ನು, “ ಇವನು ಯಾರು ? ಅವನು ಯಾರು ? ” ಎಂದು ಕೇಳಲಾರಂಭಿಸಿದ. ಪಲ್ಟು, ಚಿಕ್ಕ ನರೇನ, ಭೂಪತಿ, ಶರಚ್ಚಂದ್ರ ಇವರೇ ಮೊದಲಾದ ಯುವಕ ಭಕ್ತರ ಪರಿಚಯು ವನ್ನು ಮಾಸ್ಟರ್, ಡಾಕ್ಟರಿಗೆ ಮಾಡಿಕೊಟ್ಟ. ಶಶಿಯ ಸಂಬಂಧವಾಗಿ ಮಾಸ್ಟರ್ ಹೇಳಿದ, “ ಈತ ಬಿ. ಎ. ಗೆ ಓದುತ್ತಿದಾನೆ ” ಅಂತ.

ಡಾಕ್ಟರ್ ಸ್ವಲ್ಪ ಅನ್ಯಮನಸ್ಕನಾಗಿ ತೋರಿಬಂದ.

ಶ್ರೀರಾಮಕೃಷ್ಣರು ಡಾಕ್ಟರಿಗೆ: “ ನೋಡಲ್ಲಿ! ಆತ ಏನು ಹೇಳು ತ್ತಿದಾನೆ ಎಂಬುದನ್ನು ಕೇಳು. ”

ಡಾಕ್ಟರ್, ಶಶಿಯ ಸಂಬಂಧವಾಗಿ ಮಾಸ್ಟರಿಂದ ಕೇಳಿ ತಿಳಿದುಕೊಂಡ.

ಶ್ರೀರಾಮಕೃಷ್ಣರು ಡಾಕ್ಟರಿಗೆ ಮಾಸ್ಟರನ್ನು ತೋರಿಸಿ: “ ಈತ ಸ್ಕೂಲಿನ ಹುಡುಗರಿಗೆಲ್ಲ ಉಪದೇಶ ಕೊಡುತ್ತಾ ಇದಾನೆ. ”

ಡಾಕ್ಟರ್: “ ಹಾಗೆ ಮಾಡುತ್ತಿದಾನೆ ಅಂತ ಕೇಳಿದೇನೆ. ”

ಶ್ರೀರಾಮಕೃಷ್ಣರು: "ನಾನೊಬ್ಬ ನಿರಕ್ಷರಕುಕ್ಷಿ, ಆದರೂ ವಿದ್ಯಾವಂತರೆಲ್ಲ ಇಲ್ಲಿಗೆ ಬರುತ್ತಿದ್ದಾರಲ್ಲ ಏನಾಶ್ಚರ್ಯ! ಇದೆಲ್ಲ ಭಗವಂತನ ಲೀಲೆ ಅಂತ ಹೇಳಲೇಬೇಕಾಗುತ್ತದೆ."

ಈಗ ರಾತ್ರಿ ಒಂಬತ್ತು. ಡಾಕ್ಟರ್ ಸಾಯಂಕಾಲ ಆರು ಘಂಟೆಗೆ ಬಂದವನು, ಇಲ್ಲಿ ನಡೆಯೋದನ್ನೆಲ್ಲ ನೋಡುತ್ತ ಇನ್ನೂ ಕುಳಿತೇ ಇದಾನೆ.

ಡಾಕ್ಟರಿಗೆ ಗಿರೀಶ: "ಒಳ್ಳೆಯದು, ನಿಮಗೇನಾದರು ಹೀಗಾಗುತ್ತಿದೆಯೆ? ನೋಡಿ, ನಾನು ಇಲ್ಲಿಗೆ ಬರಲೊ ಬೇಡವೊ ಅಂತ ಯೋಚಿಸುತ್ತಾ ಇರುತ್ತೇನೆ. ಯಾವುದೊ ಒಂದು ಶಕ್ತಿ ನನ್ನನ್ನು ಇಲ್ಲಿಗೆ ಎಳೆದು ತಂದುಬಿಡುತ್ತದೆ. ನನಗೆ ಹೀಗೆ ಆಗುತ್ತಲೇ ಇದೆ. ಅದಕ್ಕಾಗೇ ನಾನು ನಿಮ್ಮನ್ನು ಕೇಳುತ್ತಿರೋದು."

ಡಾಕ್ಟರ್: "ಹಾಗೇನೊ ಆಗುತ್ತಿಲ್ಲ. ಆದರೆ ಹೃದಯ ಮಾತ್ರವೇ ಹೃದಯವನ್ನು ಅರಿತುಕೊಳ್ಳಬಲ್ಲದು. (ಶ್ರೀರಾಮಕೃಷ್ಣರಿಗೆ) ಇದನ್ನೆಲ್ಲ ಹೇಳಿಕೊಳ್ಳೋದರಿಂದ ವಿಶೇಷವಾದ ಪ್ರಯೋಜನವೇನೂ ಇಲ್ಲ."

೨೪ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ಪಾಡ್ಯಮಿ, ಶನಿವಾರ.

ಘಂಟೆ ಅಪರಾಹ್ನ ಒಂದು. ಪರಮಹಂಸರು ಶ್ಯಾಮಪುಕುರದ ಬಾಡಿಗೆ ಮನೆಯ ಎರಡನೆ ಅಂತಸ್ತಿನಲ್ಲಿ ಕುಳಿತಿದಾರೆ. ಡಾಕ್ಟರ್ ಸರ್ಕಾರ, ನರೇಂದ್ರ, ಮಹಿಮಚರಣ, ಮಾಸ್ಟರ್ ಇನ್ನೂ ಕೆಲವು ಮಂದಿ ಭಕ್ತರು ಕೊಠಡಿಯಲ್ಲಿ ಕುಳಿತಿದಾರೆ. ಹೋಮಿಯೋಪತಿ ಚಿಕಿತ್ಸೆಯ ಮಾತೆತ್ತಿ ಪರಮಹಂಸರು ಡಾಕ್ಟರ್ ಸರ್ಕಾರನಿಗೆ ಹೇಳುತ್ತಿದಾರೆ, "ನಿನ್ನ ಈ ವಿಧದ ಚಿಕಿತ್ಸೆ ಬಹಳ ಒಳ್ಳೆಯದು" ಅಂತ.

ಡಾಕ್ಟರ್: "ಇದರಲ್ಲಿ ರೋಗಿಯ ಪರಿಸ್ಥಿತಿಯನ್ನು ವೈದ್ಯಕೀಯ ಪುಸ್ತಕದೊಡನೆ ತಾಳೆ ಮಾಡಿ ನೋಡಿಕೊಳ್ಳಬೇಕಾಗುತ್ತದೆ. ಇದು ಪಾಶ್ಚಾತ್ಯರ ಸಂಗೀತವಿದ್ದಹಾಗೆ. ಗಾಯಕ, ಕೊಟ್ಟಿರೋ ಚಿಹ್ನೆಗಳನ್ನು ನೋಡಿಕೊಂಡು ಹಾಡುತ್ತಾನೆ.

"ಗಿರೀಶಘೋಷನೆಲ್ಲಿ? ಏಳಿಸಬೇಡಿ, ಈಗ ಏಳಿಸಬೇಡಿ. ನಿನ್ನೆ ರಾತ್ರಿ ಆತ ನಿದ್ದೆಗೆಟ್ಟಿದಾನೆ."

ಶ್ರೀರಾಮಕೃಷ್ಣರು: "ಒಳ್ಳೆಯದು, ಭಾವಾವಸ್ಥೆಯಲ್ಲಿ ಬಂಗಿಸೊಪ್ಪಿನ ನಶಾದ ಹಾಗೆ ನಶಾ ಬರುತ್ತದೆಯಲ್ಲ, ಏಕೆ?"

ಮಾಸ್ಟರಿಗೆ ಡಾಕ್ಟರ್: "ಆ ಅವಸ್ಥೆಯಲ್ಲಿ ನರಗಳ ಕೇಂದ್ರಗಳು

ಕೆಲಸಮಾಡೋದನ್ನು ನಿಲ್ಲಿಸಿಬಿಡುತ್ತವೆ. ಅದಕ್ಕಾಗೇ ಕೈ ಕಾಲುಗಳಿಗೆ ಜೋವು ಹಿಡಿಯೋದು. ಒಮ್ಮೊಮ್ಮೆ ಕೈ ಕಾಲುಗಳು ಒದರಲಾರಂಭಿಸುತ್ತವೆ, ಏಕೆಂದರೆ ಆ ಕೇಂದ್ರಗಳಲ್ಲಿದ್ದ ಶಕ್ತಿಯೆಲ್ಲ ಒಮ್ಮೆಗೇ ತಲೆಯ ಕಡೆಗೆ ನುಗ್ಗಲಾರಂಭಿಸುತ್ತದೆ. ನಮ್ಮ ಶರೀರದಲ್ಲಿ ನರಗಳ ರಚನೆ ಇರೋದರಿಂದಲೇ ನಾವು ಜೀವಿಸಿರೋದು. ಹೆಕ್ಕತ್ತಿನಲ್ಲಿ 'ಮೆಡುಲ ಅಬ್ಲಾಂಗೇಟ' ಎಂಬ ಹೆಸರಿನ ನರಗಳ ಒಂದು ಕೇಂದ್ರವಿದೆ. ಅದಕ್ಕೆ ಪೆಟ್ಟು ತಗುಲಿದರೆ ಮನುಷ್ಯ ಸಾಯೋ ಸಂಭವ.''

ಮಹಿಮಚರಣಚಕ್ರವರ್ತಿ ಕುಂಡಲಿನಿಯ ಸಂಬಂಧವಾಗಿ ವಿವರಿಸಲಾರಂಭಿಸಿದ. ಆತ ಹೇಳಿದ: ''ಸುಷುಮ್ನಾ ನಾಡಿ ಬೆನ್ನು ಹುರಿಯಲ್ಲಿ ಸೂಕ್ಷ್ಮರೂಪಿನಿಂದ ಇದ್ದುಕೊಂಡಿದೆ. ಅದನ್ನು ಯಾರೂ ಕಣ್ಣಿಂದ ನೋಡೋಕಾಗೋದಿಲ್ಲ. ಹೀಗೆಂದು ಮಹಾದೇವ ಹೇಳಿದಾನೆ.''

ಡಾಕ್ಟರ್: ''ಮಹಾದೇವ ಪೂರ್ಣವಾಗಿ ಬೆಳೆದ ಮನುಷ್ಯನನ್ನು ಮಾತ್ರ ಪರೀಕ್ಷಿಸಿ ನೋಡಿದಾನೆ. ಆದರೆ ಐರೋಪ್ಯರು ಮನುಷ್ಯನನ್ನು ಆತನ ಭ್ರೂಣದಶೆಯಿಂದ ಹಿಡಿದು ಪ್ರೌಢದಶೆಯವರೆಗೆ ಎಲ್ಲಾ ಹಂತದಲ್ಲೂ ಆತನನ್ನು ಪರೀಕ್ಷಿಸಿ ನೋಡಿಬಿಟ್ಟಿದಾರೆ. ತುಲನಾತ್ಮಕ ಚರಿತ್ರೆಯನ್ನು ಪೂರ್ಣವಾಗಿ ಅರಿತುಕೊಳ್ಳೋದು ಮೇಲು. ಸಂತಾಲರ ಚರಿತ್ರೆಯನ್ನು ಓದಿದರೆ ಗೊತ್ತಾಗುತ್ತದೆ, ಕಾಳಿ ಒಬ್ಬಳು ಸಂತಾಳಿ ಅಂತ. ಆಕೆ ಒಬ್ಬ ರಣಶೂರೆ. (ಎಲ್ಲರೂ ನಗುತ್ತಾರೆ.)

''ನಗಬೇಡಿ. ತುಲನಾತ್ಮಕ ಅಂಗರಚನಶಾಸ್ತ್ರ (ಅನಾಟಮಿ) ಇಂದ ಎಷ್ಟು ಉಪಕಾರವಾಗಿದೆ ಎಂಬುದನ್ನು ಆಲಿಸಿ ಕೇಳಿ. ಮೊದಲು ಮೊದಲು ಮೇದೋಜೀರಕ ಮತ್ತು ಪಿತ್ತರಸಗಳ ಕೆಲಸಕಾರ್ಯಗಳ ತಾರತಮ್ಯವೇನು ಎಂಬುದು ಗೊತ್ತಿರಲಿಲ್ಲ. ಸ್ವಲ್ಪ ಕಾಲಾನಂತರ 'ಕ್ಲಾಡೆ ಬರ್ನಾರ್ಡ್' ಎಂಬೋನು ಜಠರ, ಪಿತ್ತಕೋಶ ಇವೇ ಮೊದಲಾದುವನ್ನು ಪರೀಕ್ಷಿಸಿ ಪತ್ತೆಮಾಡಿದ ಮೇದೋಜೀರಕ ಮತ್ತು ಪಿತ್ತರಸದ ಕೆಲಸಕಾರ್ಯಗಳು ಪ್ರತ್ಯೇಕ ಪ್ರತ್ಯೇಕ ಅಂತ. ಆದ್ದರಿಂದ ನಾವು ಚಿಕ್ಕ ಪುಟ್ಟ ಪ್ರಾಣಿಗಳನ್ನೂ ಪರೀಕ್ಷಿಸಿನೋಡಬೇಕೆಂಬುದು ವಿಚಾರಾರ್ಹವಾಗೇ ಇದೆ. ಕೇವಲ ಮನುಷ್ಯನನ್ನು ಪರೀಕ್ಷಿಸಿ ನೋಡಿಕೊಂಡರೇ ಸಾಕಾಗದು.

''ಹಾಗೇನೆ ತುಲನಾತ್ಮಕ ಧರ್ಮವೂ ಅತ್ಯಂತ ಆವಶ್ಯಕ.

''ನೋಡಿ, ಇವರು (ಪರಮಹಂಸರು) ಇದಾರಲ್ಲ, ಇವರ

ಮಾತು ನೇರವಾಗಿ ಹೋಗಿ ನಮ್ಮ ಹೃದಯದಲ್ಲಿ ನಾಟಿಕೊಂಡುಬಿಡು ತ್ತದೆಯಲ್ಲ ಏಕೆ? ಇವರು ಎಲ್ಲಾ ಧರ್ಮಗಳ— ಹಿಂದೂ, ಮುಸಲ್ಮಾನ ಕ್ರಿಸ್ತ, ಶಾಕ್ತ, ವೈಷ್ಣವ ಇವೇ ಮೊದಲಾದ ಧರ್ಮಗಳ ಅಂತರ್ಯವನ್ನು ಒಳಹೊಕ್ಕು ನೋಡಿದಾರೆ; ಸಾಧನೆ ಮಾಡಿ ಅನುಭವ ಪಡೆದಿದಾರೆ. ಜೇನು ಹುಳು ವಿವಿಧ ಹೂವುಗಳಿಂದ ಮಧುವನ್ನು ತಂದು ಶೇಖರಿಸಿಟ್ಟರೆ ತಾನೆ ಅದು ಸೊಗಸಾದ ಜೇನುತುಪ್ಪವಾಗುತ್ತದೆ.''

ಡಾಕ್ಟರಿಗೆ ಮಾಸ್ಟರ್: ''ಇವರು (ಮಹಿಮಚರಣನನ್ನು ತೋರಿಸಿ) ಸೈನ್ಸನ್ನು ಬಹಳವಾಗಿ ಓದಿದಾರೆ.''

ಡಾಕ್ಟರ್ ನಗುತ್ತ: ''ಏನು ಮ್ಯಾಕ್ಸಮುಲ್ಲರ ಧಾರ್ಮಿಕ ಸೈನ್ಸನ್ನೇನು?''

ಮಹಿಮಚರಣ ಶ್ರೀರಾಮಕೃಷ್ಣರಿಗೆ: ''ನೀವು ಅಸ್ವಸ್ಥರಾಗಿದೀರಿ. ಡಾಕ್ಟರುಗಳ ಕೈಯಲ್ಲಿ ಪಾಪ ಏನು ತಾನೆ ಸಾಧ್ಯ. ನಿಮಗೆ ದೇಹಸೌಖ್ಯ ವಿಲ್ಲ ಎಂಬುದಾಗಿ ಕೇಳಿದೊಡನೆ ನಾನು ಭಾವಿಸಿದೆ, ತಾವು ಡಾಕ್ಟರುಗಳ ಅಹಂಕಾರವನ್ನು ಹೆಚ್ಚಿಸಲು ಕಾರಣರಾಗುತ್ತೀರಿ ಅಂತ.''

ಶ್ರೀರಾಮಕೃಷ್ಣರು: ''ಈತ ಬಹಳ ಒಳ್ಳೆ ಡಾಕ್ಟರ್. ಜೊತೆಗೆ ಒಳ್ಳೆ ವಿದ್ಯಾವಂತ.''

ಮಹಿಮಚರಣ: ''ಹೌದು, ನಿಜ. ಈತ ಒಂದು ದೊಡ್ಡ ಜಹಜು, ನಾವೆಲ್ಲರೂ ಒಂದೊಂದು ಪುಟ್ಟ ದೋಣಿ.''

ಡಾಕ್ಟರ್ ವಿನಯಪೂರ್ವಕವಾಗಿ ಕೈಮುಗಿಯುತ್ತಿದಾನೆ.

ಮಹಿಮಚರಣ: ''ಆದರೆ ಇಲ್ಲಿ, ಪರಮಹಂಸರೆದುರಿನಲ್ಲಿ ಎಲ್ಲರೂ ಸರಿಸಮಾನರೆ.''

ಹಾಡುವಂತೆ ಪರಮಹಂಸರು ನರೇಂದ್ರನಿಗೆ ಹೇಳಿದರು. ನರೇಂದ್ರ ಹಾಡುತ್ತಿದಾನೆ:

ಜೀವನದ ಜಲಧಿಯಲಿ ಪಯಣಗೈಯುವ ನನಗೆ
ನೀನೊಂದು ಧ್ರುವತಾರೆ ನನ್ನ ಗುರುವೆ....

ಮತ್ತೆ ಆತ ಹಾಡಿದ:

ಅಹಂಕಾರಮತ್ತ ಸದಾ, ಮೋಣಪಾರವಾಸನಾ....

ಆತ ಮತ್ತೆ ಹಾಡಿದ:

ಮನವ ಬೆರಗುಗೊಳಿಪನಂತ ವಿಶ್ವರಚನೆ ನಿನ್ನದೇ.
ನಿನ್ನ ಪ್ರೇಮ ಚೆಲುವುಗಳಲಿ ಜಗವೆಲ್ಲವು ತುಂಬಿದೆ . . . .

ನರೇಂದ್ರ ಮುಂದುವರಿಸಿದ:

ಭವ್ಯ ಸಿಂಹಾಸನದಿ ಕುಳಿತು ನೀನಾಲಿಸಿಹೆ
ನೀನೇ ರಚಿಸಿದ ವಿಶ್ವಗೀತೆಗಳನು!
ನಿನ್ನ ಮನೆವಾಗಿಲಲಿ, ಮರ್ತ್ಯಸಂಭವ ನಾನು
ನನ್ನ ಆರ್ತ ಸ್ವರದಿ ಹಾಡುತಿಹೆನು!

ಸೂರ್ಯಚಂದ್ರರು ನಿಂತು ಹಾಡುವೀಸಭೆಯಲ್ಲಿ
ನಾನು ಕೂಡಾ ನಿನ್ನ ನುತಿಗೈವೆನು.
ನಿನ್ನ ದರುಶನವೊಂದೆ ನನ್ನ ಬಾಳಿನ ಬಯಕೆ;
ಕರುಣೆಯಲಿ ಸಲಿಸೆನ್ನ ಬೇಡಿಕೆಯನು.

ಆತ ಇನ್ನೊಂದು ಹಾಡನ್ನು ಹಾಡಿದ:

ದರುಶನ ನೀಡಯ್ಯ ರಾಜರಾಜೇಶ್ವರನೆ
ನಿನ್ನ ಕರುಣೆಯ ಬೇಡಿ ಬಂದಿರುವೆನು.
ನಿನ್ನಪಾಂಗವೆ ಸಾಕು; ಜಗದ ಕುಂಡದಿ ಬೆಂದು
ನಿನ್ನ ಪದಕಮಲದೆಡೆ ನಿಂದಿರುವೆನು.

ಪಾಪ ಕಲುಷಿತವೆದೆಯು, ಮೋಹಬಂಧಿತ ನಾನು,
ಬದುಕಿದ್ದರೂ ಸತ್ತ ಹಾಗಿರುವೆನು.
ಓ ದಯಾಮಯ ನಿನ್ನ ದಿವ್ಯ ಸಂಜೀವಿನಿಯ
ಸ್ಪರ್ಶದಲಿ ಮೇಲೆತ್ತು ನನ್ನೆದೆಯನು!

ಮತ್ತೆ:

ಹರಿರಸಮದಿರೆಯ ಕುಡಿದು ನಿರಂತರ
ಉನ್ಮತ್ತನ ತೆರ ನೀನಿರುತ . . . .

ಶ್ರೀರಾಮಕೃಷ್ಣರು: "ಆ ಹಾಡನ್ನು— 'ನನ್ನ ಮನವನು ನಿನಗೆ ಅರ್ಪಿಸಿರುವೆನು ಗುರುವೆ' ಎಂಬ ಹಾಡನ್ನು ಹಾಡು."

ಡಾಕ್ಟರ್: "ಆಹಾ!"

ನರೇಂದ್ರ ಹಾಡುತ್ತಿದಾನೆ:

ನನ್ನ ಮನವನು ನಿನಗೆ ಅರ್ಪಿಸಿರುವೆನು ಗುರುವೆ
ಇರುವುದೆಲ್ಲವು ನೀನೆ ಈ ಜಗದಲಿ! . . . .

ಹಾಡುವುದು ಮುಗಿಯಿತು. ಡಾಕ್ಟರ್ ಸರ್ಕಾರ ಮುಗ್ಧನಾಗಿ ಕುಳಿತಿದಾನೆ. ಸ್ವಲ್ಪ ಹೊತ್ತಾದನಂತರ ಆತ ಬಹಳ ಭಕ್ತಿಯಿಂದ ಕೈಗಳನ್ನು ಜೋಡಿಸಿ ಪರಮಹಂಸರಿಗೆ ಹೇಳುತ್ತಿದಾನೆ: "ನಾನು ಹೋಗಿ ಬರಲೆ? ಮತ್ತೆ ನಾಳೆ ಬರುತ್ತೇನೆ."

ಶ್ರೀರಾಮಕೃಷ್ಣರು: "ಒಂದು ಸ್ವಲ್ಪ ಹೊತ್ತು ಇರು. ಗಿರೀಶ ಘೋಷನನ್ನು ಕರೆಯಲು ಕಳುಹಿಸಿದೇವೆ. (ಮಹಿಮಚರಣನನ್ನು ತೋರಿಸಿ) ಈತ ಒಬ್ಬ ದೊಡ್ಡ ವಿದ್ಯಾವಂತ, ಆದರೂ ಹರಿನಾಮವನ್ನು ಹಾಡುತ್ತ ನರ್ತಿಸುತ್ತಾನೆ; ಅಹಂಕಾರವಿಲ್ಲ. ನಾವು ಕೊನ್ನಗರಕ್ಕೆ ಹೋಗಿದ್ದುದರಿಂದ ಈತನೂ ಅಲ್ಲಿಗೆ ಬಂದುಬಿಟ್ಟಿದ್ದ. ಈತ ಐಶ್ವರ್ಯವಂತ; ಸ್ವತಂತ್ರ ಜೀವನ ನಡೆಸುತ್ತಿದಾನೆ; ಯಾರ ದಾಸನೂ ಆಗಿಲ್ಲ. (ನರೇಂದ್ರನನ್ನು ತೋರಿಸಿ) ಇವನು ಹೇಗೆ?"

ಡಾಕ್ಟರ್: "ಬಹಳ ಒಳ್ಳೆಯವ."

ಶ್ರೀರಾಮಕೃಷ್ಣರು ಒಬ್ಬ ಭಕ್ತನನ್ನು ತೋರಿಸಿ: "ಇವನು?"

ಡಾಕ್ಟರ್: "ಆಹಾ!"

ಮಹಿಮಚರಣ: "ಹಿಂದುಗಳ ದರ್ಶನಶಾಸ್ತ್ರಗಳನ್ನು ಓದಲಿಲ್ಲ ಅಂದರೆ, ದರ್ಶನವನ್ನೇ ಓದಿದ ಹಾಗಾಗೋದಿಲ್ಲ. ಸಾಂಖ್ಯಶಾಸ್ತ್ರದ ಚತುರ್ವಿಂಶತಿ ತತ್ತ್ವಗಳು ಪಾಶ್ಚಾತ್ಯ ದಾರ್ಶನಿಕರಿಗೆ ಗೊತ್ತೂ ಇಲ್ಲ, ಅರ್ಥ ಮಾಡಿಕೊಳ್ಳಲೂ ಆರರು."

ಶ್ರೀರಾಮಕೃಷ್ಣರು ನಗುತ್ತ: "ಏನೊ ಮೂರು ಮಾರ್ಗಗಳು ಅಂತ ಹೇಳುತ್ತೀಯಲ್ಲ, ಅವು ಯಾವಾವು?"

ಮಹಿಮಚರಣ: "ಸತ್ ಮಾರ್ಗ—ಎಂದರೆ ಜ್ಞಾನಮಾರ್ಗ. ಚಿತ್ ಮಾರ್ಗ—ಎಂದರೆ ಯೋಗ ಮಾರ್ಗ, ಎಂದರೆ ಕರ್ಮಯೋಗ. ಅದಕ್ಕಾಗೇ ಇದರಲ್ಲಿ ನಾಲ್ಕು ಆಶ್ರಮಗಳಲ್ಲಿಯೂ ಏನೇನು ಕ್ರಿಯೆಗಳನ್ನು, ಏನೇನು ಕರ್ಮಗಳನ್ನು ಮಾಡಬೇಕು ಎಂಬುವು ವರ್ಣಿತವಾಗಿವೆ. ಆನಂದ ಮಾರ್ಗ—ಎಂದರೆ ಭಕ್ತಿಪ್ರೇಮದ ಮಾರ್ಗ. ನೀವು ಇವು ಮೂರು

ಮಾರ್ಗಗಳಲ್ಲಿಯೂ ಅಭಿಜ್ಞರು; ಇವುಗಳ ಸಂಬಂಧವಾಗಿ ಅಧಿಕಾರವಾಣಿಯಿಂದ ಮಾತಾಡಬಲ್ಲಿರಿ.''

ಪರಮಹಂಸರು ನಗುತ್ತಿದಾರೆ.

ಡಾಕ್ಟರ್ ಸರ್ಕಾರ ಪರಮಹಂಸರಿಂದ ಬೀಳ್ಕೊಂಡ. ಇಂದು ಪೂರ್ಣಿಮೆಯಾದ ಮಾರನೆ ದಿನ. ಈಗ ತಾನೆ ಚಂದ್ರ ಉದಯಿಸುತ್ತಿದಾನೆ. ಪರಮಹಂಸರು ನಿಂತುಕೊಂಡೇ ಸಮಾಧಿಸ್ಥರಾಗಿದಾರೆ. ನಿತ್ಯಗೋಪಾಲ ಅವರ ಹತ್ತಿರ ಭಕ್ತಿಭಾವದಿಂದ ನಿಂತುಕೊಂಡಿದಾನೆ.

ಈಗ ಪರಮಹಂಸರು ಕುಳಿತುಕೊಂಡಿದಾರೆ. ನಿತ್ಯಗೋಪಾಲ ಅವರ ಪಾದಗಳನ್ನು ಒತ್ತುತ್ತಿದಾನೆ. ದೇವೇಂದ್ರ, ಕಾಳೀಪದ ಇವರೇ ಮೊದಲಾದ ಭಕ್ತರು ಅವರ ಹತ್ತಿರ ಕುಳಿತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: ''ನನ್ನ ಮನಸ್ಸು ಹೇಳುತ್ತಿದೆ, ನಿತ್ಯಗೋಪಾಲನ ಈಗಿನ ಮಾನಸಿಕ ಅವಸ್ಥೆ ಪರಿವರ್ತನೆ ಹೊಂದಿಬಿಡುತ್ತದೆ ಅಂತ. ಆತನ ಇಡೀ ಮನಸ್ಸೆಲ್ಲ ನನ್ನ ಮೇಲೆ—ಎಂದರೆ ಇದರೊಳಗಿರೋನ ಮೇಲೆ ಕೇಂದ್ರೀಕೃತವಾಗುತ್ತದೆ. ನರೇಂದ್ರನಲ್ಲಿ ನೀವು ನೋಡುತ್ತಿಲ್ಲವೇನು? ಆತನ ಇಡೀ ಮನಸ್ಸೆಲ್ಲ ನನ್ನ ಮೇಲೆ ಏಕಾಗ್ರವಾಗಿದೆ.''

ಭಕ್ತರಲ್ಲಿ ಅನೇಕರು ಪರಮಹಂಸರಿಂದ ಬೀಳ್ಕೊಂಡರು. ಅವರು ನಿಂತುಕೊಂಡಿದಾರೆ. ಜಪದ ಸಂಬಂಧವಾಗಿ ಒಬ್ಬ ಭಕ್ತನಿಗೆ ಹೇಳುತ್ತಿದಾರೆ: ''ನಿರ್ಜನಪ್ರದೇಶದಲ್ಲಿ ಯಾವ ಶಬ್ದವನ್ನೂ ಮಾಡದೆ ಭಗವನ್ನಾಮೋಚ್ಚಾರಣೆ ಮಾಡುವುದಕ್ಕೆ ಜಪ ಅಂತ ಹೆಸರು. ಏಕಾಗ್ರಚಿತ್ತದಿಂದ ಆತನ ನಾಮೋಚ್ಚಾರಣೆ ಮಾಡುತ್ತ ಮಾಡುತ್ತ—ಎಂದರೆ ಜಪ ಮಾಡುತ್ತ ಮಾಡುತ್ತ ಮುಂದುವರಿದರೆ ಆತನ ರೂಪದರ್ಶನವಾಗುತ್ತದೆ, ಎಂದರೆ ಆತನ ಸಾಕ್ಷಾತ್ಕಾರ ದೊರೆಯುತ್ತದೆ. ಒಂದು ಮರದ ದಿಮ್ಮಿಗೆ ಸರಪಣಿಯ ಒಂದು ಕೊನೆಯನ್ನು ಕಟ್ಟಿ ಆ ದಿಮ್ಮಿಯನ್ನು ಗಂಗಾನದಿಯಲ್ಲಿ ಮುಳುಗಿಸಿ ಅದೇ ಸರಪಣಿಯ ಇನ್ನೊಂದು ಕೊನೆಯನ್ನು ದಡಕ್ಕೆ ಕಟ್ಟಿದೆ ಅಂತ ಇಟ್ಟುಕೊಳ್ಳಿ. ಆ ಸರಪಣಿಯ ಕೊಂಡಿಯಾದ ಮೇಲೆ ಕೊಂಡಿಯನ್ನು ಒಂದೊಂದನ್ನಾಗಿ ಹಿಡಿದು ಹಿಡಿದು ನೀರಿಗಿಳಿದು ಮುಂದುವರಿಯುತ್ತಿದ್ದರೆ, ಕೊನೆಗೆ ಹೋಗಿ ಆ ದಿಮ್ಮಿಯನ್ನು ಮುಟ್ಟಬಹುದು.

ಅದೇ ರೀತಿಯಾಗಿ ಜಪ ಮಾಡುತ್ತ ಮಾಡುತ್ತ ಆತನಲ್ಲೇ ಮಗ್ನವಾಗಿ ಬಿಟ್ಟರೆ, ಕೊನೆಗೆ ಆತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ.''

ಕಾಳೀಪದ ನಗುತ್ತ ಭಕ್ತರಿಗೆ: ''ನಮ್ಮ ಇವರು (ಪರಮಹಂಸರು) ಎಷ್ಟು ಅದ್ಭುತಶಾಲಿಗಳು! ಜಪ, ಧ್ಯಾನ, ತಪಸ್ಸು ಇವುಗಳ ಹೊರೆಯನ್ನು ನಮ್ಮ ಮೇಲೆ ಹೊರಿಸುತ್ತಿಲ್ಲ.''

ಇದ್ದಕ್ಕಿದ್ದ ಹಾಗೆ ಪರಮಹಂಸರು ಹೇಳುತ್ತಿದಾರೆ: ''ನೋಡು ಇದು ಹೇಗೆ ತೊಂದರೆ ಕೊಡುತ್ತಿದೆ.'' ಪರಮಹಂಸರ ಗಂಟಲು ನೋಯುತ್ತಿತ್ತು. ದೇವೇಂದ್ರ ಹೇಳುತ್ತಿದಾನೆ: ''ನಿಮ್ಮ ಈ ಮಾತುಗಳಿಂದ ನಾವು ಮೋಸ ಹೋಗೋರಲ್ಲ.'' ಭಕ್ತರ ಕಣ್ಣಿಗೆ ಮಂಕುಬೂದಿ ಎರಚಲು ಪರಮಹಂಸರು ಈ ರೀತಿಯಾಗಿ ತಮಗೆ ರೋಗಬಂದಿದೆ ಅಂತ ನಟಿಸುತ್ತಿದಾರೆ ಎಂಬುದು ಆತನ ಭಾವನೆ.

ಭಕ್ತರಲ್ಲಿ ಬಹು ಮಂದಿ ಪರಮಹಂಸರಿಂದ ಬೀಳ್ಕೊಂಡು ಮನೆಗೆ ಹಿಂದಿರುಗಿದರು. ರಾತ್ರಿಯಲ್ಲಿ ಪರಮಹಂಸರ ಸೇವೆಗಾಗಿ ಕೆಲವು ಯುವಕ ಭಕ್ತರು ಕಾವಲಾಗಿರಲು ವ್ಯವಸ್ಥೆಯಾಗಿದೆ. ಮಾಸ್ಟರೂ ಇಂದಿನ ರಾತ್ರಿಯನ್ನು ಇಲ್ಲೇ ಕಳೆಯುತ್ತಾನೆ.

೨೫ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ದ್ವಿತೀಯ, ಭಾನುವಾರ.

ಪ್ರಾತಃಕಾಲ ಆರೂವರೆ. ಮಾಸ್ಟರ್ ಪರಮಹಂಸರ ಕೊಠಡಿಗೆ ಬಂದು ಅವರಿಗೆ ಪ್ರಣಾಮಮಾಡಿ ಅವರ ಯೋಗಕ್ಷೇಮವನ್ನು ವಿಚಾರಿಸಿದ. ಅವರ ಆರೋಗ್ಯ ಸ್ಥಿತಿಯ ವರದಿಯನ್ನು ಡಾಕ್ಟರ್ ಸರ್ಕಾರನಿಗೆ ಒಪ್ಪಿಸಲು ಆತ ಆತನ ಮನೆಗೆ ಹೊರಡುವುದರಲ್ಲಿದಾನೆ. ಪರಮಹಂಸರು ಆತನಿಗೆ ಹೇಳಿದರು: ''ಬೆಳಗಿನ ಜಾವದಲ್ಲಿ ನನ್ನ ಬಾಯಿ ನೀರಿನಿಂದ ತುಂಬಿ ಹೋಗುತ್ತದೆ ಮತ್ತು ಕೆಮ್ಮು ಬರುತ್ತದೆ ಎಂಬುದಾಗಿ ಡಾಕ್ಟರಿಗೆ ತಿಳಿಸು. ನಾನು ಸ್ನಾನಮಾಡಬಹುದೇ ಎಂಬುದನ್ನೂ ಕೇಳಿ ತಿಳಿದುಕೊಂಡು ಬಾ.''

ಮಾಸ್ಟರ್ ಏಳು ಘಂಟೆಯಾದನಂತರ ಡಾಕ್ಟರ್ ಸರ್ಕಾರನ ಮನೆಗೆ ತಲುಪಿ ಪರಮಹಂಸರ ದೇಹಾರೋಗ್ಯದ ವರದಿಯನ್ನೆಲ್ಲ ಆತನಿಗೆ ಒಪ್ಪಿಸಿದ. ಡಾಕ್ಟರ ಹಳೆಯ ಉಪಾಧ್ಯಾಯರು ಮತ್ತು ಆತನ ಒಬ್ಬಿಬ್ಬರು ಸ್ನೇಹಿತರು ಕೊಠಡಿಯಲ್ಲಿದ್ದರು. ಡಾಕ್ಟರ್ ಸರ್ಕಾರ ತನ್ನ ಉಪಾಧ್ಯಾಯನಿಗೆ ಹೇಳುತ್ತಿದಾನೆ: ''ಮಹಾಶಯರೆ, ರಾತ್ರಿ ಮೂರು ಘಂಟೆಯಿಂದ ನನಗೆ

ಪರಮಹಂಸರ ಯೋಚನೆ ಹತ್ತಿಬಿಟ್ಟಿದೆ. ನಿದ್ದೆಯೇ ಬರಲಿಲ್ಲ. ಈಗಲೂ ನನ್ನ ತಲೆಯಲ್ಲಿ ಅವರ ಯೋಚನೆಯೇ." (ಎಲ್ಲರೂ ನಗುತ್ತಾರೆ.)

ಡಾಕ್ಟರ ಒಬ್ಬ ಸ್ನೇಹಿತ, ಡಾಕ್ಟರಿಗೆ ಹೇಳುತ್ತಿದಾನೆ: "ಮಹಾಶಯ, ಕೆಲಕೆಲವರು, ಪರಮಹಂಸರು ಅವತಾರಪುರುಷರು ಅಂತ ಹೇಳುತ್ತಿರೋದನ್ನು ಕೇಳಿದೇನೆ. ನೀವು ದಿವಸವೂ ಅಲ್ಲಿಗೆ ಹೋಗುತ್ತಿದೀರಿ. ಅವರ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು ?"

ಡಾಕ್ಟರ್ : "ಮಾನವ ವ್ಯಕ್ತಿಯ ದೃಷ್ಟಿಯಿಂದ ನಾನು ಅವರನ್ನು ಬಹಳವಾಗಿ ಗೌರವಿಸುತ್ತೇನೆ."

ಮಾಸ್ಟರ್ ಡಾಕ್ಟರ ಸ್ನೇಹಿತನಿಗೆ : "ಡಾಕ್ಟರು ಅನುಗ್ರಹಮಾಡಿ ಅವರಿಗೆ ಚಿಕಿತ್ಸೆ ಮಾಡುತ್ತಿದಾರೆ."

ಡಾಕ್ಟರ್: "ಅನುಗ್ರಹವೇ ? ಏನು ನೀವು ಮಾತಾಡುತ್ತಿರೋದು?"

ಮಾಸ್ಟರ್ : "ಪರಮಹಂಸರ ಮೇಲಲ್ಲ, ನಮ್ಮ ಮೇಲೆ."

ಡಾಕ್ಟರ್ : "ಅನುಗ್ರಹವೂ ಇಲ್ಲ - ಗಿನುಗ್ರಹವೂ ಇಲ್ಲ. ನಿಮಗಾರಿಗೂ ಗೊತ್ತಿಲ್ಲ ನಿಮ್ಮ ಪರಮಹಂಸರ ದೆಸೆಯಿಂದ ನನಗೆಷ್ಟೊಂದು ನಷ್ಟ ಆಗುತ್ತಿದೆ ಎಂಬುದು. ದಿನವೂ ಎರಡು ಮೂರು ಕರೆಗಳಿಗೆ ಹೋಗೋಕಾಗುತ್ತಿಲ್ಲ. ಮಾರನೆ ದಿನ ನಾನೇ ಅವರ ಮನೆಗೆ ಹೋಗುತ್ತೇನೆ. ನಾನಾಗೇ ಹೋಗೋದರಿಂದ ಅವರಿಂದ ಫೀಯನ್ನು ಸ್ವೀಕರಿಸುತ್ತಿಲ್ಲ. ನಾನಾಗೇ ಹೋಗಿ ಫೀ ತೆಗೆದುಕೊಳ್ಳೋ ಬಗೆ ಹೇಗೆ ?"

ಮಹಿಮಚರಣನ ಸಂಬಂಧವಾಗಿ ಮಾತುಕತೆ ಆರಂಭವಾಯಿತು. ಡಾಕ್ಟರ್ ಸರ್ಕಾರ ನಿನ್ನೆ ಪರಮಹಂಸರನ್ನು ನೋಡಲು ಶ್ಯಾಮಪುಕುರಕ್ಕೆ ಹೋಗಿದ್ದಾಗ, ಮಹಿಮಚರಣನೂ ಅಲ್ಲಿಗೆ ಬಂದಿದ್ದ. ಆತ ಡಾಕ್ಟರನ್ನು ತೋರಿಸಿ ಪರಮಹಂಸರಿಗೆ ಹೇಳಿದ್ದ, "ಮಹಾಶಯರೆ, ನೀವು ಡಾಕ್ಟರ ಅಹಂಕಾರವನ್ನು ಪೋಷಿಸಲೋಸುಗ ಈ ರೋಗವನ್ನು ನಿಮ್ಮ ಮೇಲೆ ಬರಿಸಿಕೊಂಡಿದೀರಿ" ಅಂತ.

ಡಾಕ್ಟರಿಗೆ ಮಾಸ್ಟರ್ : "ಮಹಿಮಚರಣ ಹಿಂದೆ ಇಲ್ಲಿಗೆ ಬರುತ್ತಿದ್ದ. ನೀವು ಇಲ್ಲೇ ವೈದ್ಯಕೀಯ ಸಂಬಂಧವಾಗಿ ಉಪನ್ಯಾಸ ಕೊಡುತ್ತಿದ್ದಾಗ, ಅದನ್ನು ಕೇಳಲು ಆತ ಬರುತ್ತಿದ್ದ."

ಡಾಕ್ಟರ್ : "ಹಾಗೇನು ? ಆತನದು ಎಂಥಾ ತಾಮಸಿಕ ಪ್ರವೃತ್ತಿ! ಭಗವಂತನ ಸೃಷ್ಟಿರಚನೆಯಲ್ಲಿ ಮೂರನೆ ಗುಂಪಿಗೆ ಸೇರಿದವನು ಅಂತ

ನಾನು ಆತನಿಗೆ ನಮಸ್ಕಾರ ಮಾಡಿದ್ದನ್ನು ನೀವು ಗಮನಿಸಲಿಲ್ಲವೇನು? ಭಗವಂತನಲ್ಲಿ ಸತ್ತ್ವ, ರಜಸ್ಸು, ತಮಸ್ಸು — ಈ ಮೂರು ಗುಣಗಳು ಇದ್ದೇ ಇವೆಯಲ್ಲ. ಆತ ಪರಮಹಂಸರಿಗೆ, 'ನೀವು ಡಾಕ್ಟರ ಅಹಂಕಾರವನ್ನು ಪೋಷಿಸಲೋಸುಗ ಈ ರೋಗವನ್ನು ನಿಮ್ಮ ಮೇಲೆ ಬರಿಸಿಕೊಂಡಿದೀರಿ' ಅಂತ ಹೇಳಿದ್ದನ್ನು ನೀವು ಗಮನಿಸಲಿಲ್ಲವೇನು?"

ಮಾಸ್ಟರ್: "ಮಹಿಮಚರಣ ನಂಬಿದಾನೆ, ಇಚ್ಛೆಪಟ್ಟರೆ ಪರಮಹಂಸರೇ ತಮ್ಮ ರೋಗವನ್ನು ಗುಣಪಡಿಸಿಕೊಳ್ಳಬಲ್ಲರು ಎಂಬುದಾಗಿ."

ಡಾಕ್ಟರ್: "ಏನು? ತಾವೇ ಗುಣಪಡಿಸಿಕೊಳ್ಳೋದೆ? ಎಂದಿಗಾದರೂ ಸಾಧ್ಯವೆ? ನಾವು ಡಾಕ್ಟರುಗಳು. ಏಡಿ ಹುಣ್ಣು ಏನು ಎಂಬುದು ನಮಗೆ ಚೆನ್ನಾಗಿ ಗೊತ್ತಿದೆ. ಅದನ್ನು ಗುಣಪಡಿಸಲು ನಮ್ಮ ಕೈಯಲ್ಲೇ ಸಾಧ್ಯವಾಗುತ್ತಿಲ್ಲ. ಅವರಿಗೆ ಅದು ಏನು ಎಂಬುದು ಸ್ವಲ್ಪವೂ ಗೊತ್ತಿಲ್ಲ. ಅಂಥಾದ್ದರಲ್ಲಿ ಅವರೇ ಹೇಗೆ ಅದನ್ನು ಗುಣಪಡಿಸಿಕೊಳ್ಳಬಲ್ಲರು! (ಸ್ನೇಹಿತನಿಗೆ) ಈ ರೋಗವನ್ನು ಗುಣಪಡಿಸೋಕೇನೊ ಆಗೋದಿಲ್ಲ, ಆದರೂ ಇವರೆಲ್ಲ ಅತ್ಯಂತ ಶ್ರದ್ಧಾಭಕ್ತಿಯಿಂದ ಅವರ ಸೇವೆ ಮಾಡುತ್ತಿದಾರೆ."

ಪರಮಹಂಸರನ್ನು ನೋಡಿಹೋಗಬೇಕೆಂದು ಡಾಕ್ಟರಿಗೆ ಹೇಳಿ ಮಾಸ್ಟರ್ ತನ್ನ ಮನೆಗೆ ಹಿಂದಿರುಗಿದ.

ಮಾಸ್ಟರ್ ತನ್ನ ಮನೆಯಲ್ಲಿ ಊಟೋಪಚಾರಗಳನ್ನು ಮುಗಿಸಿಕೊಂಡು, ಸುಮಾರು ಮೂರು ಘಂಟೆ ಸಮಯಕ್ಕೆ ಪರಮಹಂಸರಿದ್ದ ಸ್ಥಳಕ್ಕೆ ಬಂದು, ಅವರಿಗೆ ಡಾಕ್ಟರೊಡನೆ ನಡೆದ ಸಂಭಾಷಣೆಗಳನ್ನೆಲ್ಲ ತಿಳಿಸಿದ. ಆತ ಅವರಿಗೆ ಹೇಳಿದ: "ಇಂದು ಡಾಕ್ಟರ್ ನನಗೆ ದಿಗ್ಭ್ರಮೆ ಹಿಡಿಸಿಬಿಟ್ಟ."

ಶ್ರೀರಾಮಕೃಷ್ಣರು: "ಏನು ಸಮಾಚಾರ?"

ಮಾಸ್ಟರ್: "ಡಾಕ್ಟರ ಅಹಂಕಾರವನ್ನು ಪೋಷಿಸಲು ನಿಮಗೆ ನೀವಾಗೇ ಈ ರೋಗವನ್ನು ಬರಿಸಿಕೊಂಡಿದೀರಿ ಎಂಬುದಾಗಿ ನಿನ್ನೆ ಇಲ್ಲಿ ನಡೆದ ಮಾತನ್ನು ಆತ ಮನಸ್ಸಿಗೆ ಹಚ್ಚಿಕೊಂಡು ಹೋಗಿದಾನೆ."

ಶ್ರೀರಾಮಕೃಷ್ಣರು: "ಹಾಗೆಂದು ಹೇಳಿದವರಾರು?"

ಮಾಸ್ಟರ್: "ಮಹಿಮಚರಣ."

ಶ್ರೀರಾಮಕೃಷ್ಣರು: "ಅದಕ್ಕೆ ಡಾಕ್ಟರು ಏನು ಹೇಳಿದ?".

ಮಾಸ್ಟರ್ : “ ಮಹಿಮಚರಣನನ್ನು ‘ ತಮೋಗುಣ ಭಗವಂತ ’ ಅಂತ ವರ್ಣನೆಮಾಡಿದ. ಈಗ ಆತ ಹೇಳುತ್ತಿದಾನೆ, ಭಗವಂತನಲ್ಲಿ ಸತ್ತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳೂ ಇವೆ ಅಂತ. (ಪರಮಹಂಸರು ನಗುತ್ತಿದಾರೆ.) ಮತ್ತೆ ಹೇಳಿದ: ‘ನನಗೆ ರಾತ್ರಿ ಮೂರು ಘಂಟೆಗೆ ಎಚ್ಚರವಾಗಿಬಿಟ್ಟು, ಆವಾಗಿನಿಂದ ಪರಮಹಂಸರ ಯೋಚನೆಯೆ ನನ್ನ ತಲೆಯಲ್ಲಿ.’ ನಾನು ಆತನನ್ನು ನೋಡಿದಾಗ ಘಂಟೆ ಎಂಟಾಗಿತ್ತು. ಆಗ ಆತ ಹೇಳಿದ: ‘ ಈಗಲೂ ನನ್ನ ತಲೆಯಲ್ಲಿ ಕೇವಲ ಪರಮಹಂಸರ ಭಾವನೆಯೇ ನರ್ತನಮಾಡುತ್ತಿದೆ.’ ”

ಶ್ರೀರಾಮಕೃಷ್ಣರು ನಗುತ್ತ : “ ನೋಡು, ಆತ ಇಂಗ್ಲಿಷು ಓದಿದವ. ನಾನಾಗೇ ಆತನಿಗೆ ನನ್ನ ಮೇಲೆ ಧ್ಯಾನಮಾಡು ಅಂತ ಹೇಳಲಾಗೋದಿಲ್ಲ ; ಅದನ್ನು ಆತ ತಾನಾಗೇ ಮಾಡುತ್ತಿದಾನೆ.”

ಮಾಸ್ಟರ್ : “ ಆತ ಮತ್ತೆ ನಿಮ್ಮ ಸಂಬಂಧವಾಗಿ ಹೇಳಿದ: ‘ ಮಾನವ ವ್ಯಕ್ತಿಯ ದೃಷ್ಟಿಯಿಂದ ನಾನು ಅವರನ್ನು ಬಹಳವಾಗಿ ಗೌರವಿಸುತ್ತೇನೆ.’ ”

ಶ್ರೀರಾಮಕೃಷ್ಣರು : “ ಬೇರೆ ಏನಾದರು ಮಾತು - ಗೀತು ? ”

ಮಾಸ್ಟರ್ : “ ನಾನು ಆತನನ್ನು ಕೇಳಿದೆ: ‘ ಈ ದಿನದ ಔಷಧದ ವ್ಯವಸ್ಥೆ ಏನು ?’ ಆತ ಹೇಳಿದ: ‘ ಇನ್ನು ಬೇರೆ ಏನು ವ್ಯವಸ್ಥೆ— ತಲೆಕಾಯಿ ! ಇಂದು ನಾನೇ ಅಲ್ಲಿಗೆ ಹೋಗಬೇಕು. ಅದೇ ವ್ಯವಸ್ಥೆ.’ (ಪರಮಹಂಸರು ನಗುತ್ತಿದಾರೆ.) ಮತ್ತೆ ಹೇಳಿದ: ‘ ನಿಮಗೆ ಗೊತ್ತಿಲ್ಲ ನನಗೆಷ್ಟೊಂದು ದುಡ್ಡು ನಷ್ಟವಾಗುತ್ತಿದೆ ಅಂತ. ದಿವಸವೂ ಎರಡು ಮೂರು ಕರೆಗಳಿಗೆ ಹೋಗಿಬರಲು ಸಮಯವೇ ದೊರೆಯುತ್ತಿಲ್ಲ.’ ”

ಕೊಠಡಿಯಲ್ಲಿ ನರೇಂದ್ರ ಮತ್ತು ಇನ್ನೂ ಅನೇಕ ಮಂದಿ ಭಕ್ತರು ಕುಳಿತಿದಾರೆ. ವಿಜಯಕೃಷ್ಣಗೋಸ್ವಾಮಿ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿದ. ಆತನೊಡನೆ ಕೆಲವು ಮಂದಿ ಬ್ರಾಹ್ಮ ಭಕ್ತರು ಬಂದಿದಾರೆ. ಆತ ಅನೇಕ ಕಾಲ ಢಾಕಾದಲ್ಲಿ ಇದ್ದ. ಈಗತಾನೇ ಅನೇಕ ಉತ್ತರ ಭಾರತದ ತೀರ್ಥಸ್ಥಾನಗಳಿಗೆಲ್ಲ ಹೋಗಿ ಹಿಂದಿರುಗಿ ಬಂದಿದಾನೆ.

ಮಹಿಮಚರಣ ವಿಜಯನಿಗೆ: “ ನೀವು ತೀರ್ಥಯಾತ್ರೆಗೆ ಹೋಗಿ

ಅನೇಕ ಸ್ಥಳಗಳನ್ನು ನೋಡಿ ಬಂದಿದೀರಿ. ಅಲ್ಲೆಲ್ಲ ವಿಶೇಷವಾಗಿ ಏನು ನೋಡಿದಿರಿ ಎಂಬುದನ್ನು ದಯವಿಟ್ಟು ತಿಳಿಸಿ."

ವಿಜಯ: "ಬೇರೆ ವಿಶೇಷವೇನಿದೆ? ಈಗ ನಾವು ಕುಳಿತಿರೋ ಸ್ಥಳದಲ್ಲೇ ಎಲ್ಲಾ ಇದೆ. ಸುತ್ತೋಕೆ ಹೋಗೋದು ಬರಿದೆ ವ್ಯರ್ಥ. ಕೆಲಕೆಲ ಜಾಗದಲ್ಲಿ ಈ ಜಾಗದ ಒಂದಾಣೆ ಅಥವಾ ಎರಡಾಣೆ ಭಾಗದ ವ್ಯಕ್ತತೆ. ಇನ್ನೂ ಬೇರೆ ಜಾಗದಲ್ಲಿ ಬಹು ಹೆಚ್ಚೆಂದರೆ ನಾಲ್ಕು ಆಣೆ ಭಾಗದ ವ್ಯಕ್ತತೆ ಮಾತ್ರ. ಕೇವಲ ಇಲ್ಲೇ ಹದಿನಾರಾಣೆ ಭಾಗದ ವ್ಯಕ್ತತೆ."

ಮಹಿಮಚರಣ: "ಸರಿಯಾಗಿ ಹೇಳಿದಿರಿ. ನಮ್ಮನ್ನು ಸುತ್ತು ವಂತೆ ಮಾಡೋರು ಮತ್ತು ಒಂದೇ ಕಡೆ ಇರುವಂತೆ ಮಾಡೋರು ಎಲ್ಲಾ ಇವರೇ (ಪರಮಹಂಸರೇ)."

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನೋಡು, ವಿಜಯನ ಮನಸ್ಸು ಯಾವ ರೀತಿಯಾಗಿ ಪರಿವರ್ತನೆ ಹೊಂದಿಬಿಟ್ಟಿದೆ. ಈಗ ಆತ ಒಬ್ಬ ತೀರ ಹೊಸ ಮನುಷ್ಯನಾಗಿಬಿಟ್ಟಿದಾನೆ. ಕಾಯಿಸಿ ಸಂಪೂರ್ಣವಾಗಿ ನೀರನ್ನು ಇಂಗಿಸಿರೋ ಗಟ್ಟಿ ಹಾಲಿನಂತಾಗಿದಾನೆ. ಮನುಷ್ಯನ ಕತ್ತು ಮತ್ತು ಹಣೆ ನೋಡಿ, ಆತ ಪರಮಹಂಸ ಹೌದೊ ಅಲ್ಲವೊ ಎಂಬುದನ್ನು ಅರಿತುಕೊಂಡುಬಿಡಬಲ್ಲೆ. ಪರಮಹಂಸ ಹೌದೊ ಅಲ್ಲವೊ ಎಂಬುದನ್ನು ಹೇಳಿಬಿಡಬಲ್ಲೆ."

ಮಹಿಮಚರಣ ವಿಜಯನಿಗೆ: "ಮಹಾಶಯರೆ, ಈಗ ನಿಮ್ಮ ಆಹಾರ ಕಡಮೆಯಾಗಿಬಿಟ್ಟಿದೆ ಅಂತ ಕಾಣುತ್ತೆ, ಅಲ್ಲವೇನು?"

ವಿಜಯ: "ಹೌದು, ನನಗೂ ಹಾಗೇ ಕಾಣುತ್ತಿದೆ. (ಪರಮ ಹಂಸರಿಗೆ) ನಿಮ್ಮ ರೋಗದ ವಿಷಯ ಕೇಳಿ ನಿಮ್ಮನ್ನು ನೋಡಲು ಬಂದೆ. ಮತ್ತೆ ಢಾಕಾದಲ್ಲಿ—"

ಶ್ರೀರಾಮಕೃಷ್ಣರು: "ಢಾಕಾದಲ್ಲಿ ಏನು?"

ವಿಜಯ ಯಾವ ಉತ್ತರವನ್ನೂ ಕೊಡಲಿಲ್ಲ. ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ.

ವಿಜಯ: "ತೋರಿಸಿಕೊಳ್ಳದಿದ್ದರೆ ಹಿಡಿಯೋದು ಕಷ್ಟ. ಇಲ್ಲೇ ಹದಿನಾರಾಣೆ ವ್ಯಕ್ತತೆ."

ಶ್ರೀರಾಮಕೃಷ್ಣರು: "ಕೇದಾರನೂ ಹೇಳಿದ, 'ಬೇರೆ ಜಾಗಗಳಿಗೆ

ಹೋದರೆ, ತಿನ್ನೋಕೆ ಏನೂ ಸಿಗದು, ಆದರೆ ಇಲ್ಲಿಗೆ ಬಂದರೆ ಹೊಟ್ಟೆ ತುಂಬ ದೊರೆಯುತ್ತದೆ ' ಅಂತ. ''

ಮಹಿಮಚರಣ: '' ಹೊಟ್ಟೆತುಂಬ ಮಾತ್ರವೇ ಏಕೆ, ಹೊಟ್ಟೆ ಒಡೆಯೋ ಹಾಗೆ. ''

ವಿಜಯ ಕೈಮುಗಿದುಕೊಂಡು ಪರಮಹಂಸರಿಗೆ: '' ತಾವು ಯಾರು ಎಂಬುದನ್ನು ಅರಿತಿದೇನೆ. ಅದನ್ನು ಇನ್ನೇನು ತಾವು ವ್ಯಕ್ತಪಡಿಸ ಬೇಕಾಗಿಲ್ಲ. ''

ಶ್ರೀರಾಮಕೃಷ್ಣರು ಭಾವಸ್ಥರಾಗಿ: '' ಅದು ಹಾಗಿದ್ದರೆ, ಹಾಗೇ ಆಗಲಿ. ''

ವಿಜಯ ಹೇಳಿದ, '' ಅರಿತುಕೊಂಡಿದೇನೆ '' ಅಂತ. ಹೀಗೆಂದು ಹೇಳಿ ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮಮಾಡಿ, ಅವರ ಪಾದಗಳನ್ನು ಎತ್ತಿ ತನ್ನ ಎದೆಗೆ ಒತ್ತಿಕೊಂಡ. ಪರಮಹಂಸರು ಭಗವದಾವೇಶದಿಂದ ಬಾಹ್ಯಜ್ಞಾನಶೂನ್ಯರಾಗಿ ಪರದೆ ಮೇಲಿನ ಚಿತ್ರದಂತೆ ಕುಳಿತಿದಾರೆ. ಈ ಪ್ರೇಮಾವೇಶ, ಈ ಅದ್ಭುತ ದರ್ಶನ ಇವನ್ನು ನೋಡಿ, ಅಲ್ಲಿ ಕುಳಿತಿದ್ದ ಭಕ್ತರಲ್ಲಿ ಕೆಲವರು ಪ್ರೇಮಾಶ್ರು ಸುರಿಸುತ್ತಿದಾರೆ, ಇನ್ನು ಕೆಲವರು ಸ್ತೋತ್ರಪಠನೆ ಮಾಡಲಾರಂಭಿಸಿದಾರೆ. ಯಾರಾರ ಭಾವ ಯಾವಾವದೊ ಆಯಾಯ ಭಾವದಿಂದ ಅವರವರು ಪರಮಹಂಸರನ್ನು ದೃಷ್ಟಿಸಿ ನೋಡುತ್ತಿದಾರೆ. ಕೆಲವರು ಅವರನ್ನು ಸಾಧು ಎಂದು, ಇನ್ನು ಕೆಲವರು ಪರಮ ಭಕ್ತ ಎಂದು, ಮತ್ತೆ ಕೆಲವರು ಸಾಕ್ಷಾತ್ ಭಗವಂತನೇ ಇವರ ದೇಹ ಧರಿಸಿ ಬಂದಿದಾನೆ ಎಂದು, ಹೀಗೆ ಅವರವರ ಭಾವಗಳಿಗನುಗುಣವಾಗಿ ಅವರನ್ನು ಅವಲೋಕಿಸುತ್ತಿದಾರೆ.

ಮಹಿಮಚರಣ ಪ್ರೇಮಾಶ್ರುನಯನನಾಗಿ ಹಾಡಲಾರಂಭಿಸಿದ, '' ನೋಡು, ನೋಡು ಈ ಪ್ರೇಮಮೂರ್ತಿಯ! '' ಅಂತ.

ಆಗಾಗ, ಬ್ರಹ್ಮ ದರ್ಶನ ಮಾಡುತ್ತಿರುವನೋ ಏನೋ ಎಂಬಂತೆ ಸ್ತೋತ್ರ ಪಠಿಸುತ್ತಿದಾನೆ:

ತುರೀಯಂ ಸಚ್ಚಿದಾನಂದಂ ದ್ವೈತಾದ್ವೈತವಿವರ್ಜಿತಮ್ ।

ನವಗೋಪಾಲ ಪ್ರೇಮಾಶ್ರು ಸುರಿಸುತ್ತಿದಾನೆ. ಭೂಪತಿ ಹಾಡ ಲಾರಂಭಿಸಿದಾನೆ:

ಜಯ ಜಯ ಜಯ ಪರಬ್ರಹ್ಮ
ನೀನಪಾರ ಮೇಣಗಮ್ಯ
ಪರಾತ್ಪರನೆ ಸಾರಭೂತನೇ.
ಸತ್ಯದ ಹೊಂಬೆಳಗು ನೀನು
ಪ್ರೇಮರಸದ ಬುಗ್ಗೆ ನೀನು
ಶುಭ ಮಂಗಳ ರೂಪನೇ.

ನಾನಾರಸ ಗಂಭೀರ ಭಾವ-
ಪೂರ್ಣವಾದ ವಿಶ್ವಕವನ
ಶೋಭಿಸುತಿದೆ ನಿತ್ಯವೂ!

ಮಹಾಕವಿ ನೀನಾದಿಶಕ್ತಿ
ನಿನ್ನ ಬಗೆಯ ಛಂದದಲ್ಲಿ
ರವಿಶಶಿಗಳು ಮೂಡಿ ಚಲಿಸಿ
ಮುಳುಗುತಿಹವು ನಿನ್ನಲಿ !
ಕನಕ ರುಚಿಯ ತಾರೆಗಳಲಿ
ನಿನ್ನ ಮಹಿಮೆಯನ್ನು ಬರೆವೆ
ನೀಲಾಂಬರ ಪಟದಲಿ !

ಷಡ್ ಋತುಗಳ ಸಂವತ್ಸರ
ಜಯಗಾಥೆಯ ಮೊಳಗಿಸುತ್ತ
ನಿನ್ನ ಸುತ್ತ ನಲಿದಿದೆ.
ಹೂವುಗಳಲಿ ನಿನ್ನ ಕಾಂತಿ
ಸಲಿಲಗಳಲಿ ನಿನ್ನ ಶಾಂತಿ
ಘನರವದಲಿ ನಿನ್ನ ನಿಯತಿ
ಜಗಕೆಲ್ಲವು ಮೊಳಗಿದೆ!

ನಿನ್ನ ಸತ್ತ್ವ ಅತಿ ಅಗಾಧ
ಅದನು ತಿಳಿವೆನೆಂತು ಮೂಢ !
ಕೋಟಿ ಸೂರ್ಯ ಕೋಟಿ ಚಂದ್ರ
ಯುಗ ಯುಗಗಳ ಮೊದಲಿನಿಂದ
ನಿನ್ನಸೀಮ ಪದತಲದಲಿ

ಬೆರಗಾಗುತ ಚಾಗಿವೆ!
ಈ ಮಹಿಮೆಯ ಕಂಡ ಜನದ
ಕಂಗಳೆಲ್ಲ ಆನಂದದ
ಕಂಬನಿಯನು ಕರೆದಿವೆ!

ದೇವ ದೇವ ನಮಿತ ಪ್ರಭೂ,
ಭಕ್ತಿಯ ಕೊಡು; ಪ್ರೇಮವ ಕೊಡು;
ಅರಿವನು ಕೊಡು; ಶಾಂತಿಯ ಕೊಡು;
ಇದೊ ಪ್ರಣಾಮ, ಓ ವಿಭೂ!

ಭೂಪತಿ ಮತ್ತೆ ಹಾಡುತ್ತಿದಾನೆ:

ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು
ಮಹಾಭಾವ ರಾಸಲೀಲ ಮಾಧುರ್ಯದೊಳಾಡಿವೆ! . . .

ಈಗ ಆತ ಮೂರನೆ ಹಾಡನ್ನು ಹಾಡುತ್ತಿದಾನೆ:

ಧರ್ಮ ಕರ್ಮ ನೀತಿ ಭೀತಿ ಜಾತಿಯೆಲ್ಲ
ಹರಿಯಿತೋ
ಅಹಂಕಾರ ಕುಲಮದಗಳು ಮುರಿಯಿತೋ.
ಎಲ್ಲಿರುವೆನೊ ನಾನು ಈಗ? ನೀನೆಲ್ಲಿಹೆ ಶ್ರೀಹರೀ,
ನನ್ನ ಎದೆಯ ಕದ್ದೆ ನೀನು, ನಡುದಾರಿಯೊಳೆನ್ನ ನೀನು
ಕೈ ಬಿಡುವರೆ ಈ ಪರಿ?
ಎಂಥ ಮರುಳ ನಾನು ಬಂದೆ ಪ್ರೇಮಜಲಧಿ ತಟದಲಿ
ಎದೆಯೊಳಗೇ ತುಳುಕುತಿರಲು ನಿನ್ನ ಪ್ರೇಮ ಮಾಧುರೀ!
ಪ್ರೇಮದಾಸನೊರೆವನಿಂತು: ನೀವೆಲ್ಲರು ಕೇಳಿರಿ
ನಿಜಕು ಇದೇ ದಿವದ ಹಾದಿ, ನೀವೆಲ್ಲರು ನಡೆಯಿರಿ!

ಬಹಳ ಹೊತ್ತಾದ ಮೇಲೆ ಪರಮಹಂಸರು ಪ್ರಕೃತಿಸ್ಥರಾದರು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನನಗೆ ಭಾವಾವೇಶ ಬಂದಾಗ ಏನೊ ಒಂದು ಆಗಿಬಿಡುತ್ತದೆ. ಈಗ ಅದಕ್ಕಾಗಿ ನಾಚಿಕೆಯಾಗುತ್ತಿದೆ. ಆಗ ನನ್ನನ್ನು ಒಂದು ಭೂತ ಮೆಟ್ಟಿಕೊಂಡಂತಾಗುತ್ತದೆ. ಆಗ ನಾನು ನಾನಾಗಿರೋಲ್ಲ. ಆ ಅವಸ್ಥೆಯಿಂದ ಕೆಳಗಿಳಿಯೋವಾಗ ಸಂಖ್ಯೆಗಳನ್ನು

ಸರಿಯಾಗಿ ಎಣಿಸೋಕಾಗೋದಿಲ್ಲ. ಎಣಿಸಲು ಪ್ರಯತ್ನಪಟ್ಟರೆ, 'ಒಂದು, ಏಳು, ಎಂಟು' ಈ ರೀತಿಯಾದ ಎಣಿಕೆ ಮನಸ್ಸಿಗೆ ಹೊಳೆಯುತ್ತದೆ."

ನರೇಂದ್ರ: "ಹೇಗೆ ಎಣಿಸಿದರೆ ತಾನೆ ಏನು, ಇರೋದು ಒಂದೇ ಒಂದು ತಾನೆ."

ಶ್ರೀರಾಮಕೃಷ್ಣರು: "ಇಲ್ಲ. ಅದು ಒಂದು ಎರಡಕ್ಕೆ ಅತೀತವಾದ್ದು."

ಮಹಿಮಚರಣ: "ಹೌದು, ನಿಜ. ಅದು ದ್ವೈತಾದ್ವೈತ ವಿವರ್ಜಿತವಾದ್ದು."

ಶ್ರೀರಾಮಕೃಷ್ಣರು: "ಅಲ್ಲಿ ವಿಚಾರ ಒಣಗಿ ಸುಂಡುಹೋಗಿಬಿಡುತ್ತದೆ. ಪಾಂಡಿತ್ಯದಿಂದ ಭಗವಂತನನ್ನು ಪಡೆಯಲಾಗೋದಿಲ್ಲ. ಆತ ವೇದ, ಪುರಾಣ, ತಂತ್ರ ಈ ಎಲ್ಲಾ ಶಾಸ್ತ್ರಗಳಿಗೂ ಅತೀತ. ಯಾರಿ ಆಗಲಿ ಬ್ರಹ್ಮಜ್ಞಾನಿಯಾಗಿದ್ದರೂ, ಆತನ ಕೈಯಲ್ಲೇನಾದರು ಪುಸ್ತಕ-ಗಿಸ್ತಕ ಒಂದಾದರೂ ಇದ್ದರೂ ಸರಿಯೆ ನಾನು ಆತನನ್ನು ರಾಜರ್ಷಿ ಅಂತ ಕರೆಯುತ್ತೇನೆ. ಆದರೆ ಬ್ರಹ್ಮರ್ಷಿಗಳಲ್ಲಿ ಬಾಹ್ಯಕ ಯಾವ ಚಿಹ್ನೆಗಳೂ ಇರವು.

"ಶಾಸ್ತ್ರಗಳ ಉಪಯೋಗವೇನು ಎಂಬುದು ಗೊತ್ತೆ? ಒಬ್ಬ ತನ್ನ ಮಿತ್ರನೊಬ್ಬನಿಗೆ ಬರೆದಿದ್ದ, 'ಐದು ಸೇರು ಸಂದೇಶ (ಸಿಹಿ ತಿಂಡಿ), ಒಂದು ಪಂಚೆ ಇವನ್ನು ಕೊಂಡು ಕಳುಹಿಸು' ಅಂತ. ಪತ್ರ ಬಂದೊಡನೆ ಆ ಮಿತ್ರ ಅದನ್ನು ಓದಿ, ಸಂದೇಶ ಮತ್ತು ಪಂಚೆಯ ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಂಡು ಆ ಪತ್ರವನ್ನು ಕಸದ ಬುಟ್ಟಿಗೆ ಬಿಸಾಡಿದ. ಇನ್ನು ಮೇಲೆ ಪತ್ರದ ಆವಶ್ಯಕತೆಯೇನಿದೆ?"

ವಿಜಯ: "ನನಗೆ ಗೊತ್ತಾಗಿಬಿಟ್ಟಿತು, ಆಗಲೆ ಸಂದೇಶವನ್ನು ಕಳುಹಿಸಿಬಿಟ್ಟಿದ್ದಾಗಿದೆ ಎಂಬುದು."

ಶ್ರೀರಾಮಕೃಷ್ಣರು: "ಭಗವಂತ ಮಾನವದೇಹಧಾರಣೆಮಾಡಿಕೊಂಡು ಅವತರಿಸುತ್ತಾನೆ. ಆತ ಎಲ್ಲಾ ಸ್ಥಳಗಳಲ್ಲಿಯೂ, ಎಲ್ಲಾ ಭೂತಗಳಲ್ಲಿಯೂ ಇರುವುದೇನೊ ನಿಜ, ಆದರೆ ಆತ ಮಾನವದೇಹಧಾರಣೆ ಮಾಡಿಕೊಂಡು ಬಾರದಿದ್ದರೆ ಜೀವರ ಆಕಾಂಕ್ಷೆ ಪೂರ್ಣವಾಗದು; ಆವಶ್ಯಕತೆಗಳು ದೊರಕವು. ಇದು ಹೇಗೆ ಗೊತ್ತೆ? ಹಸುವಿನ ಯಾವ ಭಾಗ

ಮುಟ್ಟಿದರೂ ಅದನ್ನು ಮುಟ್ಟಿದ ಹಾಗೇ ಆಗುತ್ತದೆ. ಆದರೆ ಹಾಲು ಬರೋದು ಅದರ ಕೆಚ್ಚಲಿನಿಂದ ಮಾತ್ರವೇ." (ಎಲ್ಲರೂ ನಗುತ್ತಿದಾರೆ.)

ಮಹಿಮಚರಣ: "ಹಾಲು ಬೇಕಾಗಿದ್ದರೆ ಹಸುವಿನ ಕೊಂಬು ಹಿಡಿದು ಚೀಪಿದರೆ ಏನು ದೊರೆಯುತ್ತದೆ? ಮೊಲೆಯನ್ನು ಚೀಪಬೇಕು." (ಎಲ್ಲರೂ ನಗುತ್ತಿದಾರೆ.)

ವಿಜಯ: "ಆದರೆ ಕರು ಹಸುವಿನ ಸಿಕ್ಕಿಸಿಕ್ಕಿದ ಭಾಗವನ್ನೆಲ್ಲ ಚೀಪಲು ಪ್ರಯತ್ನಮಾಡುತ್ತದೆಯಲ್ಲ."

ಶ್ರೀರಾಮಕೃಷ್ಣರು ನಗುತ್ತ: "ಅದೇನೊ ನಿಜ. ಕರು ಹಾಗೆ ಮಾಡುತ್ತಿರೋದನ್ನು ನೋಡಿ, ಬಹುಶಃ ಹತ್ತಿರ ನಿಂತಿರೋರು ಅದರ ಬಾಯಿಗೆ ಮೊಲೆಯನ್ನು ಕೊಡಬಹುದು." (ಎಲ್ಲರೂ ನಗುತ್ತಿದಾರೆ.)

ಈ ರೀತಿಯಾಗಿ ಮಾತುಕತೆಗಳು ನಡೆಯುತ್ತಿದ್ದಾಗ, ಡಾಕ್ಟರ್ ಸರ್ಕಾರ ಕೊಠಡಿಯನ್ನು ಪ್ರವೇಶಿಸಿ ಒಂದು ಕಡೆ ಕುಳಿತುಕೊಂಡ. ಈಗ ಆತ ಪರಮಹಂಸರಿಗೆ ಹೇಳುತ್ತಿದಾನೆ: "ನಿನ್ನೆ ರಾತ್ರಿ ಮೂರು ಘಂಟೆಗೇನೆ ನನಗೆ ಎಚ್ಚರವಾಗಿಬಿಟ್ಟಿತು. ಆವಾಗಿನಿಂದ ನಿಮ್ಮ ಯೋಚನೆಯೇ. ನಿಮಗೆ ಶೀತ ಹಿಡಿದುಬಿಡಬಹುದೊ ಏನೊ ಅಂತ ಭಾವಿಸುತ್ತಿದ್ದೆ. ನಿಮ್ಮ ಸಂಬಂಧವಾಗಿ ಇನ್ನೂ ಏನೇನೊ ಭಾವನೆಗಳು ಬಂದುವು."

ಶ್ರೀರಾಮಕೃಷ್ಣರು: "ಕೆಮ್ಮಲು ಬಂದುಬಿಟ್ಟದೆ, ಗಂಟಲೂ ಹೆಚ್ಚಾಗಿ ಹುಣ್ಣಾಗಿಬಿಟ್ಟದೆ. ಬೆಳಗಿನ ಜಾವದಿಂದ ನನ್ನ ಬಾಯಿ ನೀರಿನಿಂದ ತುಂಬಿ ಕೊಳ್ಳುತ್ತಿದೆ. ನನ್ನ ಶರೀರವಾದ ಶರೀರವೆಲ್ಲ ಸುಮ್ಮನೆ ನೋಯುತ್ತಲೇ ಇದೆ."

ಡಾಕ್ಟರ್: "ಬೆಳಗ್ಗೇನೆ ನಿಮ್ಮ ವೃತ್ತಾಂತವೆಲ್ಲ ನನಗೆ ಬಂತು."

ಮಹಿಮಚರಣ ತನ್ನ ಭಾರತ ಪ್ರವಾಸದ ವಿಷಯವಾಗಿ ಮಾತಾಡುತ್ತ ಹೇಳಿದ, "ಸಿಂಹಳ ದ್ವೀಪದಲ್ಲಿ ಯಾರೂ ನಗೋದೇ ಇಲ್ಲ" ಅಂತ. ಅದಕ್ಕೆ ಡಾಕ್ಟರ್ ಸರ್ಕಾರ ಹೇಳಿದ, "ಇದ್ದರೂ ಇರಬಹುದು; ಆದರೆ ಅದನ್ನು ವಿಚಾರಿಸಿ ತಿಳಿದುಕೋಬೇಕಾಗಿದೆ" ಅಂತ. (ಎಲ್ಲರೂ ನಗುತ್ತಿದಾರೆ.)

ವೈದ್ಯಕೀಯ ವೃತ್ತಿಯ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಶ್ರೀರಾಮಕೃಷ್ಣರು ಡಾಕ್ಟರಿಗೆ: "ವೈದ್ಯಕೀಯ ವೃತ್ತಿ ಒಂದು

ಉಚ್ಚ ಮಟ್ಟದ ವೃತ್ತಿ ಅಂತ ಅನೇಕರ ಭಾವನೆ. ಒಂದು ಬಿಡಿಕಾಸನ್ನೂ ತೆಗೆದುಕೊಳ್ಳದೆ ಪರರ ದುಃಖಕ್ಕಾಗಿ ಮರುಗಿ ಕನಿಕರ ಹೃದಯದಿಂದ ಯಾರಿಗೆ ಆಗಲಿ ಚಿಕಿತ್ಸೆ ಮಾಡೋದಾದರೆ ಆತ ಬಹಳ ಉತ್ತಮನೆ. ಆತನ ಕಾರ್ಯವೂ ಉತ್ತಮವಾದ್ದೇ ಆಗುತ್ತದೆ. ಆದರೆ ಹಣ ತೆಗೆದುಕೊಂಡು ಇಂಥ ಕಾರ್ಯಗಳನ್ನೆಲ್ಲ ಮಾಡೋಕೆ ಹೋದದ್ದೇ ಆದರೆ, ಮನುಷ್ಯ ಕೊನೆಗೆ ನಿರ್ದಯಿಯಾಗಿಬಿಡುತ್ತಾನೆ. ವ್ಯಾಪಾರ ಬುದ್ಧಿಯಿಂದ ಕೇವಲ ದುಡ್ಡಿಗಾಗೇ ಮಲ ಮೂತ್ರ ಇವನ್ನೆಲ್ಲ ಪರೀಕ್ಷೆಮಾಡೋದು ಒಂದು ನೀಚ ವೃತ್ತಿಯಾಗಿಬಿಡುತ್ತದೆ.''

ಡಾಕ್ಟರ್: ''ನೀವು ಹೇಳೋದು ಸರಿ. ಆ ದೃಷ್ಟಿಯಿಂದ ಕೆಲಸ ಮಾಡಿದರೆ ಅದು ಕೆಟ್ಟದ್ದೇನೆ. ಆದರೆ ನಾನು ನಿಮ್ಮ ಎದುರಿಗೆ ಜಂಬ ಕೊಚ್ಚಿಕೊಳ್ಳಬೇಕೆಂದೇನಲ್ಲ—''

ಶ್ರೀರಾಮಕೃಷ್ಣರು: ''ನಿಸ್ವಾರ್ಥ ದೃಷ್ಟಿಯಿಂದ ಪರರಿಗೆ ಉಪಕಾರ ಮಾಡೋದಾದರೆ ವೈದ್ಯಕೀಯ ವೃತ್ತಿ ನಿಜವಾಗಿಯೂ ಬಹಳ ಉತ್ತಮವಾದುದೆ.

''ಸಂಸಾರಿ ಯಾವ ಕೆಲಸದಲ್ಲಿ ಬೇಕಾದರೂ ತೊಡಗಿರಲಿ, ಆತನಿಗೆ ಸಾಧುಸಂಗ ಅತ್ಯಂತ ಆವಶ್ಯಕ. ವ್ಯಕ್ತಿಗೆ ಭಗವಂತನಲ್ಲಿ ಭಕ್ತಿ ಇತ್ತು ಎಂದರೆ, ಆತ ತಾನಾಗೇ ಸಾಧುಸಂಗಕ್ಕಾಗಿ ಹುಡುಕಿಕೊಂಡುಹೋಗುತ್ತಾನೆ. ನಾನು ಬಂಗಿ ಸೇದೋನನ್ನು ಉದಾಹರಣೆಯಾಗಿ ಕೊಡೋದುಂಟು. ಬಂಗಿ ಸೇದೋನಿಗೆ ಬಂಗಿ ಸೇದುವವನನ್ನ ಕಂಡರೆ ಬಲು ಇಷ್ಟ. ಬೇರೆ ಯವರು ಕಣ್ಣಿಗೆ ಬಿದ್ದಾಗ ತಲೆ ತಗ್ಗಿಸಿಕೊಂಡು ಹೋಗಿಬಿಡುತ್ತಾನೆ ಅಥವಾ ಒಂದು ಮೂಲೆಯಲ್ಲಿ ಮರೆಯಾಗಿದ್ದುಬಿಡುತ್ತಾನೆ; ಆದರೆ ಬಂಗಿ ಸೇದುವವನು ಸಿಕ್ಕಿಬಿಟ್ಟ ಅಂದರೆ ಮಹದಾನಂದವಾಗಿಬಿಡುತ್ತದೆ. ಬಹುಶಃ ಅವರು ಒಬ್ಬರನ್ನೊಬ್ಬರು ತಬ್ಬಿ ತಕ್ಕೈಸಿ ಹೊರಳಾಡಬಹುದು. (ಎಲ್ಲರೂ ನಗುತ್ತಾರೆ.) ಉದಾಹರಣೆಗೆ, ರಣಹದ್ದು ರಣಹದ್ದಿನೊಡನೆ ಇರಲು ಇಚ್ಛೆ ಪಡುತ್ತದೆ.''

ಡಾಕ್ಟರ್: ''ಕಾಗೆಗೆ ಹೆದರಿ ರಣಹದ್ದು ತಲೆ ತಪ್ಪಿಸಿಕೊಳ್ಳೋದನ್ನು ನಾನು ನೋಡಿದೇನೆ. ನನ್ನ ದೃಷ್ಟಿಯಿಂದ, ಏಕೆ ಕೇವಲ ಮನುಷ್ಯನಿಗೆ ಮಾತ್ರ, ಎಲ್ಲಾ ಜೀವಜಂತುಗಳಿಗೂ ಸೇವೆಮಾಡಬೇಕು. ನಾನು ಅನೇಕ ವೇಳೆ ಗುಬ್ಬಚ್ಚಿಗಳಿಗೆ ಮೈದಾ ಹಿಟ್ಟನ್ನು ತಿನ್ನಿಸುತ್ತೇನೆ. ಮೈದಾ ಹಿಟ್ಟನ್ನು

ಕಲಸಿ ಚಿಕ್ಕ ಚಿಕ್ಕ ಗೋಲಿಗಳನ್ನಾಗಿ ಮಾಡಿ ಗುಬ್ಬಚ್ಚಿಗಳಿಗೆ ಎಸೆಯುತ್ತೇನೆ. ಅವು ಹಿಂಡು ಹಿಂಡಾಗಿ ಬಂದು ಅವನ್ನು ತಿನ್ನುತ್ತವೆ."

ಶ್ರೀರಾಮಕೃಷ್ಣರು: "ಭೇಷ್! ಬಹಳ ಒಳ್ಳೆ ಕೆಲಸ. ಜೀವಕ್ಕೆ ಆಹಾರ ಕೊಡೋದು ಸಾಧುಗಳ ಕೆಲಸ. ಅವರು ಇರುವೆ ಗೂಡಿನ ಸುತ್ತ ಸಕ್ಕರೆ ಸುರಿಯುತ್ತಾರೆ."

ಡಾಕ್ಟರ್: "ಈ ದಿನ ಹಾಡೋದು - ಗೀಡೊದು ಏನೂ ಇಲ್ಲ ವೇನು?"

ಶ್ರೀರಾಮಕೃಷ್ಣರು ನರೇಂದ್ರನಿಗೆ: "ಏಕೆ ನೀನು ಒಂದು ಸ್ವಲ್ಪ ಹೊತ್ತು ಹಾಡಬಾರದು?"

ನರೇಂದ್ರ ತಂಬೂರಿ ಮತ್ತು ಇತರ ಪಕ್ಕವಾದ್ಯಗಳೊಡನೆ ಹಾಡ ಲಾರಂಭಿಸಿದ:

ಬಲುಮಧುರವೊ ನಿನ್ನ ಹೆಸರು
ಕಿವಿಗೆ ಸುಧೆಯ ಕರೆವುದು! . . .

ನರೇಂದ್ರ ಮತ್ತೆ ಹಾಡಿದ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ! . . .

ಹಾಡುವುದು ಮುಗಿದನಂತರ ಒಂದು ಅದ್ಭುತ ದೃಶ್ಯ ಕಾಣಬರುತ್ತಿದೆ. ಎಲ್ಲರೂ ಭಾವೋನ್ಮತ್ತರಾಗಿದಾರೆ. ಪಂಡಿತ ಪಾಂಡಿತ್ಯಾಭಿಮಾನವನ್ನು ತ್ಯಜಿಸಿ ಎದ್ದು ನಿಂತು ಕೂಗಿಕೊಳ್ಳುತ್ತಿದಾನೆ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ!

ಪ್ರೇಮೋನ್ಮತ್ತರಾಗಿ ಎದ್ದುನಿಂತವರಲ್ಲಿ ವಿಜಯನೆ ಮೊದಲನೆಯ ವನು. ಬಳಿಕ ತಮ್ಮ ಪ್ರಾಣಾಂತಕ ರೋಗವನ್ನು ಸಂಪೂರ್ಣವಾಗಿ ಮರತು ಪರಮಹಂಸರು ಎದ್ದು ನಿಂತಿದಾರೆ. ಅವರ ಮುಂದೆ ಕುಳಿತಿದ್ದ ಡಾಕ್ಟರೂ ಎದ್ದುನಿಂತಿದಾನೆ. ರೋಗಿಗೂ ಬಾಹ್ಯ ಪ್ರಜ್ಞೆಯಿಲ್ಲ; ಡಾಕ್ಟರಿಗೂ ಬಾಹ್ಯ ಪ್ರಜ್ಞೆಯಿಲ್ಲ. ಚಿಕ್ಕ ನರೇನ ಭಾವ - ಸಮಾಧಿಸ್ಥ ನಾಗಿದಾನೆ. ಲಾಟೂಗೂ ಭಾವ - ಸಮಾಧಿ ಉಂಟಾಗಿದೆ. ಸರ್ಕಾರ ಸೈನ್ಸ್ ಓದಿದಾನೆ. ಆತ ಆಶ್ಚರ್ಯಚಕಿತನಾಗಿ ಈ ಅದ್ಭುತ ದೃಶ್ಯವನ್ನು

ನೋಡುತ್ತಿದಾನೆ. ನೋಡುತ್ತಾನೆ, ಯಾರಾರಿಗೆ ಭಾವ-ಸಮಾಧಿಯುಂಟಾಗಿದೆಯೊ ಅವರೆಲ್ಲರಿಗೂ ಬಾಹ್ಯ ಪ್ರಜ್ಞೆ ಎಂಬುದೇ ಇಲ್ಲ; ಸ್ಥಿರವಾಗಿ ಸ್ತಂಭೀಭೂತರಾಗಿ ಕುಳಿತಿದಾರೆ. ಭಾವ ಇಳಿಮುಖವಾದನಂತರ ಕೆಲವರು ಅಳುತ್ತಿದಾರೆ, ಕೆಲವರು ನಗುತ್ತಿದಾರೆ. ಅನೇಕ ಮಂದಿ ಕುಡುಕರು, ಒಂದು ಕಡೆ ಏಕತ್ರವಾಗಿದಾರೊ ಏನೊ ಎಂಬಂತಿತ್ತು.

ಸ್ವಲ್ಪ ಹೊತ್ತಾದನಂತರ ಪರಮಹಂಸರು ಮಾತುಕತೆಗಳಾಡಲು ಆರಂಭಿಸಿದಾರೆ. ಭಕ್ತರು ಅವರ ಸುತ್ತಲೂ ಕುಳಿತಿದಾರೆ. ಘಂಟೆ ರಾತ್ರಿ ಎಂಟು.

ಶ್ರೀರಾಮಕೃಷ್ಣರು ಡಾಕ್ಟರಿಗೆ: "ಈಗ ತಾನೆ ನೀನು ನೋಡಿದ ಭಾವದ ಸಂಬಂಧವಾಗಿ ನಿನ್ನ ಸೈನ್ಸ್ ಏನು ಹೇಳುತ್ತದೆ? ಇದೆಲ್ಲ ಬರೀ ಬೂಟಾಟಿಕೆ ಅಂತ ನಿನಗೆ ಬೋಧೆಯಾಗುತ್ತಿದೆಯೇನು?"

ಡಾಕ್ಟರ್ ಶ್ರೀರಾಮಕೃಷ್ಣರಿಗೆ: "ಇಷ್ಟೊಂದು ಜನ ಅದನ್ನು ಅನುಭವಿಸಿರೋವಾಗ ಅದು ಸ್ವಾಭಾವಿಕವಾದುದೇ ಆಗಿರಬೇಕೆ ವಿನಾ ಬೂಟಾಟಿಕೆಯದಲ್ಲ. (ನರೇಂದ್ರನಿಗೆ) ನೀನು ಈ ಚರಣಗಳನ್ನು ಹಾಡಿದಾಗ:

> ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
> ನಿನ್ನ ಭಕ್ತಿಯ ಮಧುರ ಮಧುಪಾನದಿಂದ! . . .

ನನ್ನ ಕೈಯಲ್ಲಿ ಸುಮ್ಮನೆ ಕುಳಿತಿರಲಾಗಲಿಲ್ಲ. ನಾನೂ ಎದ್ದುನಿಲ್ಲುವುದರಲ್ಲಿದ್ದೆ. ಬಳಿಕ ಬಹಳ ಕಷ್ಟಪಟ್ಟು ನನ್ನ ಭಾವವನ್ನು ಒಂದು ನಿರೋಧದಲ್ಲಿ ಇಟ್ಟುಕೊಂಡೆ. ನನಗೇ ನಾನು ಹೇಳಿಕೊಂಡೆ, 'ಆಗದು. ನನ್ನ ಭಾವವನ್ನು ನಾನು ಪ್ರದರ್ಶಿಸಿಕೊಳ್ಳಕೂಡದು' ಅಂತ."

ಶ್ರೀರಾಮಕೃಷ್ಣರು ನಗುತ್ತ ಡಾಕ್ಟರಿಗೆ: "ನೀನು ಸುಮೇರುವಿನಂತೆ ಅಚಲ ಮತ್ತು ಸ್ಥಿರ. (ಎಲ್ಲರೂ ನಗುತ್ತಾರೆ.) ನೀನು ಗಂಭೀರಾತ್ಮ. ರೂಪಸನಾತರ ಭಾವದ ಸುಳುವು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಆನೆ ಒಂದು ಚಿಕ್ಕ ಕುಂಟೆಗೆ ಇಳಿಯಿತು ಎಂದರೆ, ನೀರು ಅಲ್ಲೋಲಕಲ್ಲೋಲವಾಗಿ ಎಲ್ಲಾ ಕಡೆಗೂ ಬಂದು ಹೊಡೆಯುತ್ತದೆ. ಆದರೆ ಅದೇ ಒಂದು ದೊಡ್ಡ ಸರೋವರಕ್ಕೆ ಇಳಿಯಿತು ಅಂದರೆ, ನೀರು ಹಾಗಾಗದು; ಅದು ಇಳಿದಿರೋದೆ ಬಹುಶಃ ಗೊತ್ತಾಗೋದಿಲ್ಲ. ಒಮ್ಮೆ ರಾಧೆ ತನ್ನ ಸಖಿಗೆ ಹೇಳಿದಳು: 'ಗೆಳತಿ, ನೀನು ಕೃಷ್ಣನ ವಿರಹದಿಂದ ಎಷ್ಟೊಂದಾಗಿ ಅಳುತ್ತಿದೀಯೆ. ಆದರೆ ನೋಡು ನನ್ನ ಹೃದಯವನ್ನು ಅದು ಎಷ್ಟು ಕಾಠಿನ್ಯ

ವಾದುದು ! ನನ್ನ ಕಣ್ಣಿಂದ ಒಂದು ತೊಟ್ಟು ನೀರೂ ಬರುತ್ತಾ ಇಲ್ಲವಲ್ಲ !' ಆಕೆಯ ಸಖಿ ಬೃಂದೆ ಹೇಳಿದಳು : 'ನಿನ್ನ ಕಣ್ಣಲ್ಲಿ ನೀರು ಕಾಣಿಸಿ ಕೊಳ್ಳದಿರೋಕೆ ಕಾರಣವಿದೆ. ನಿನ್ನ ಹೃದಯದಲ್ಲಿ ಸದಾ ಜಾಜ್ವಲ್ಯ ಮಾನವಾಗಿ ವಿರಹಾಗ್ನಿ ಉರಿಯುತ್ತಿದೆ. ನಿನ್ನ ಕಣ್ಣಲ್ಲಿ ನೀರು ಬರುವುದೇ ತಡ, ಆ ಅಗ್ನಿಯ ತಾಪದಿಂದ ಅದು ಆವಿಯಾಗಿ ಹೋಗಿಬಿಡುತ್ತದೆ.' "

ಡಾಕ್ಟರ್ : "ನೀವು ಮಾತಿನ ಮಲ್ಲರು !" (ನಗು)

ಈಗ ಬೇರೆ ವಿಷಯವಾಗಿ ಮಾತುಕತೆ ಆರಂಭವಾಯಿತು. ಪರಮ ಹಂಸರು ತಾವು ದಕ್ಷಿಣೇಶ್ವರದಲ್ಲಿ ಅನುಭವಿಸಿದ ಭಾವಗಳ ಸಂಬಂಧವಾಗಿ ಡಾಕ್ಟರಿಗೆ ಹೇಳಲಾರಂಭಿಸಿದರು. ಕಾಮಕ್ರೋಧಾದಿಗಳನ್ನು ಯಾವ ರೀತಿಯಾಗಿ ವಶಮಾಡಿಕೊಳ್ಳಬಹುದು ಎಂಬುದರ ವಿಷಯವಾಗಿಯೂ ತಿಳಿಸಿದರು.

ಡಾಕ್ಟರ್ : "ನೀವು ಭಾವಸ್ಥರಾಗಿ ನೆಲದ ಮೇಲೆ ಬಿದ್ದಿದ್ದಾಗ, ಯಾರೊ ದುಷ್ಟ ನಿಮ್ಮನ್ನು ಬೂಟ್ಸು ಕಾಲಿನಿಂದ ಒದೆದ ಕಥೆಯನ್ನು ನಾನು ಕೇಳಿದೇನೆ."

ಶ್ರೀರಾಮಕೃಷ್ಣರು : "ಹಾಗೆ ಮಾಡಿದವನು ಕಾಳೀಘಟ್ಟದ ಪೂಜಾರಿ ಚಂದ್ರಹಾಲದಾರ ಎಂಬೋನು ; ಆಗಾಗ ಮಥುರಬಾಬುವನ್ನು ನೋಡಲು ಬರುತ್ತಿದ್ದ. ಒಂದು ದಿನ ನಾನು ಭಗವದಾವೇಶದಿಂದ ನೆಲದ ಮೇಲೆ ಬಿದ್ದಿದ್ದೆ. ಕೊಠಡಿಯಲ್ಲಿ ಕತ್ತಲೆ. ಮಥುರಬಾಬುವಿನ ಪ್ರೀತಿ ಗಳಿಸಿಕೊಳ್ಳಲು ನಾನು ಈ ರೀತಿಯಾಗಿ ನಟಿಸುತ್ತಿದೇನೆ ಅಂತ ಆತ ಭಾವಿಸಿದ. ಆತ ಕೊಠಡಿಯನ್ನು ಪ್ರವೇಶಿಸಿ ತನ್ನ ಬೂಟ್ಸುಕಾಲಿನಿಂದ ನನ್ನನ್ನು ಚೆನ್ನಾಗಿ ಒದ್ದ. ಶರೀರ ನೀಲಿ ಬಣ್ಣ ಕಟ್ಟಿತು. ಆ ಮನೆಯವ ರೆಲ್ಲ ಅದನ್ನು ಮಥುರಬಾಬುವಿಗೆ ತಿಳಿಸಬೇಕೆಂದಿದ್ದರು. ನಾನು ಬೇಡಿ ಅಂತ ಹೇಳಿದೆ."

ಡಾಕ್ಟರ್: "ಇದೂ ಭಗವಂತನ ಇಚ್ಛೆಗನುಸಾರ. ಇದರಿಂದ ನೀವು ಜನರಿಗೆ ತೋರಿಸಿಕೊಟ್ಟರಿ ಯಾವರೀತಿಯಾಗಿ ಕೋಪವನ್ನು ಗೆಲ್ಲ ಬೇಕು, ಯಾವ ರೀತಿಯಾಗಿ ಕ್ಷಮೆ ತೋರಿಸಬೇಕು ಎಂಬುದನ್ನ."

ಈಗ ಭಕ್ತರು ವಿಜಯನೊಡನೆ ಮಾತುಕತೆಗಳಾಡುತ್ತಿದಾರೆ.

ವಿಜಯ : "ಯಾರೋ ನನ್ನೊಡನೆ ಸತತ ಇರುತ್ತಿರುವಂತೆ ಅನು

ಭವವಾಗುತ್ತಿದೆ. ದೂರದಲ್ಲಿ ನಡೆಯೋದನ್ನು ಆತ ನನಗೆ ತಿಳಿಸಿಕೊಟ್ಟು ಬಿಡುತ್ತಾನೆ.''

ನರೇಂದ್ರ : '' ದೇವದೂತನ ಹಾಗೆ.''

ವಿಜಯ : '' ಢಾಕಾದಲ್ಲಿ ಇವರನ್ನು ( ಪರಮಹಂಸರನ್ನು ) ನೋಡಿದೇನೆ; ಶರೀರವನ್ನು ಮುಟ್ಟಿ ಕೂಡ.''

ಶ್ರೀರಾಮಕೃಷ್ಣರು ನಗುತ್ತ : '' ಆತ ಬೇರೊಬ್ಬ ಇರಬೇಕು.''

ನರೇಂದ್ರ : '' ನಾನೂ ಇವರನ್ನು ಅನೇಕ ವೇಳೆ ನೋಡಿದೇನೆ. ( ವಿಜಯನಿಗೆ ) ಆದ್ದರಿಂದ ನಿಮ್ಮ ಮಾತಿನಲ್ಲಿ ನನಗೆ ವಿಶ್ವಾಸವಿಲ್ಲ ಅಂತ ಹೇಳೊ ಬಗೆ ಹೇಗೆ ?''



೪೭

## ಶಿಷ್ಯರ ಶಿಲ್ಪಿ ಶ್ರೀರಾಮಕೃಷ್ಣರು.

೨೬ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ತೃತೀಯ, ಸೋಮವಾರ.

ಘಂಟೆ ಬೆಳಗಿನ ಹತ್ತು. ಪರಮಹಂಸರ ದೇಹಾರೋಗ್ಯದ ವರದಿಯನ್ನು ದಿವಸವೂ ಡಾಕ್ಟರ್ ಸರ್ಕಾರನಿಗೆ ತಿಳಿಸಬೇಕಾಗಿದೆ. ಅದಕ್ಕಾಗಿ ಮಾಸ್ಟರ್ ಪರಮಹಂಸರನ್ನು ಅವರ ದೇಹಾರೋಗ್ಯದ ಸಂಬಂಧವಾಗಿ ಕೇಳುತ್ತಿದಾನೆ.

ಪರಮಹಂಸರ ಗಂಟಲ ವ್ಯಾಧಿ ಗುಣವಾಗದ ರೋಗ ಅಂತ ಡಾಕ್ಟರ್ ಸರ್ಕಾರ ಹೇಳಿಬಿಟ್ಟಿದಾನೆ. ಈ ಸಮಾಚಾರ ಪರಮಹಂಸರ ಶಿಷ್ಯರ ಮತ್ತು ಭಕ್ತರ ಮನಸ್ಸನ್ನೆಲ್ಲ ಕಗ್ಗತ್ತಲೆಯೋಪಾದಿಯಲ್ಲಿ ಆವರಿಸಿಕೊಂಡುಬಿಟ್ಟಿದೆ. ಅವರೆಲ್ಲರು ನಿಶ್ಚಲವಾದ ಶ್ರದ್ಧಾಭಕ್ತಿಯಿಂದ ಪರಮಹಂಸರ ಸೇವೆ ಮಾಡುತ್ತಿದಾರೆ. ಯುವಕ ಶಿಷ್ಯರು ನರೇಂದ್ರನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡು ತಮ್ಮ ಇಡೀ ಜೀವನವನ್ನೇ ಭಗವಂತನ ಸಾಕ್ಷಾತ್ಕಾರಕ್ಕಾಗಿಯೂ ಮತ್ತು ಲೋಕಸೇವೆಗಾಗಿಯೂ ಮುಡುಪಾಗಿಡಲು ಸಿದ್ಧರಾಗುತ್ತಿದಾರೆ. ಗಂಟಲು ಅತ್ಯಂತವಾಗಿ ನೋಯುತ್ತಿದ್ದರೂ ಅವರನ್ನೆಲ್ಲ ಅವರು ನಗುಮೊಗದಿಂದ ಸ್ವಾಗತಿಸುತ್ತಿದಾರೆ. ಅವರೆಲ್ಲರ ಹಿತಚಿಂತನೆಗಾಗಿ ಅವರು ಪಡುತ್ತಿರೋ ಹಂಬಲಕ್ಕೆ ಮಿತಿಯೇ ಇಲ್ಲದುದಾಗಿ ತೋರುತ್ತಿದೆ. ಅವರು ಭಕ್ತರೊಡನೆ ಭಗವಂತನ ವಿಷಯವಾಗಿ ಮಾತನಾಡೋವಾಗ ಮುಖದಿಂದ ಆನಂದ ಎಂಬುದು ಸುಮ್ಮನೆ ಚಿಮ್ಮುತ್ತಿರುತ್ತದೆ. ಮಾತುಕತೆ ಪರಮಹಂಸರ ಗಂಟಲ ರೋಗವನ್ನು ವೃದ್ಧಿಪಡಿಸುತ್ತಿರೋದನ್ನು ಕಂಡು, ಡಾಕ್ಟರ್ ತಿಳಿಸಿದ್ದ ಅವರು ಜನರೊಡನೆ ಹೆಚ್ಚಾಗಿ ಮಾತುಕತೆಯಾಡಕೂಡದು ಅಂತ. ಆದರೆ ತನ್ನ ವಿಷಯವಾಗಿ ಮಾತ್ರ ಪರಮಹಂಸರಿಗೆ ಹೇಳಿದ್ದ, "ನೀವು ಜನಗಳೊಡನೆಯೇನೊ ಮಾತುಕತೆಯಾಡಕೂಡದು, ಆದರೆ ನನ್ನೊಡನೆ ಮಾತ್ರ ನೀವು ಹಾಗೆ ಮಾಡಬೇಕಾಗಿಲ್ಲ" ಅಂತ. ಪರಮಹಂಸರ ಬಾಯಿಂದ ಬೀಳೋ ಮುತ್ತುಗಳನ್ನು ಆರಿಸಿಕೊಳ್ಳಲು ಆತ ಅಲ್ಲಿಗೆ ಬಂದಾಗಲೆಲ್ಲ ತನ್ನ ಏಳು

ಎಂಟು ಘಂಟೆಗಳ ಕಾಲವನ್ನು ಪರಮಹಂಸರೊಡನೆಯೇ ಕಳೆದು ಬಿಡುತ್ತಿದ್ದ.

ಶ್ರೀರಾಮಕೃಷ್ಣರು: "ನನ್ನ ರೋಗ ಈಗ ಎಷ್ಟೋ ಕಡಮೆಯಾಗಿ ಬಿಟ್ಟಿದೆ. ಬಹಳ ಆನಂದದಿಂದ ಇದೇನೆ. ಒಳ್ಳೇದು. ನನ್ನನ್ನು ಹೀಗೆ ಮಾಡಿದ್ದು ಈ ಔಷಧವೇನು? ಹಾಗಾದರೆ ಇದನ್ನೇ ಏಕೆ ಮುಂದುವರಿಸ ಬಾರದು?"

ಮಾಸ್ಟರ್: "ಈಗ ನಾನು ಡಾಕ್ಟರ್ ಮನೆಗೆ ಹೋಗುತ್ತಿದೇನೆ. ಎಲ್ಲವನ್ನೂ ತಿಳಿಸುತ್ತೇನೆ. ಯಾವುದು ಒಳ್ಳೆಯದು ಎಂಬುದನ್ನು ಆತ ತಿಳಿಸುತ್ತಾನೆ."

ಶ್ರೀರಾಮಕೃಷ್ಣರು: "ನೋಡು, ಪೂರ್ಣ ಎರಡು ಮೂರು ದಿನ ದಿಂದ ಬರಲೇ ಇಲ್ಲ. ಮನಸ್ಸಿಗೆ ಆತನ ಚಿಂತನೆ ಹತ್ತಿಬಿಟ್ಟಿದೆ."

ಮಾಸ್ಟರ್ ಕಾಳಿಗೆ: "ನೀನು ಹೋಗಿ ಏಕೆ ಪೂರ್ಣನನ್ನು ಕರೆದು ಕೊಂಡು ಬರಬಾರದು?"

ಕಾಳಿ: "ಇಗೊ, ಹೊರಟೆ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಡಾಕ್ಟರ ಮಗ ಬಹಳ ಒಳ್ಳೆ ಹುಡುಗ. ಒಮ್ಮೆ ಇಲ್ಲಿಗೆ ಬಂದುಹೋಗುವಂತೆ ಹೇಳು."

ಮಾಸ್ಟರ್, ಡಾಕ್ಟರ ಮನೆಗೆ ಬಂದು ನೋಡಿದಾಗ, ಆತ ಒಬ್ಬಿಬ್ಬರು ಸ್ನೇಹಿತರೊಡನೆ ಮಾತುಕತೆಯಾಡುತ್ತಿದ್ದುದು ಆತನ ಕಣ್ಣಿಗೆ ಬಿತ್ತು.

ಮಾಸ್ಟರಿಗೆ ಡಾಕ್ಟರ್: "ನಿನ್ನ ವಿಷಯವಾಗೇ ಈಗೊಂದು ನಿಮಿಷದ ಹಿಂದೆ ಮಾತಾಡುತ್ತಿದ್ದೆ. ನೀನು ಹತ್ತು ಘಂಟೆಗೆ ಬರುತ್ತೇನೆ ಅಂತ ಹೇಳಿದ್ದೆ; ನಿನಗಾಗಿ ಈಗ ಒಂದೂವರೆ ಘಂಟೆಯಿಂದಲೂ ಕಾದುಕುಳಿತಿದೇನೆ. ನೀನು ತಡಮಾಡಿದುದನ್ನು ನೋಡಿ, ಅವರಿಗೆ (ಪರಮಹಂಸರಿಗೆ) ಏನೊ ಎತ್ತಲೊ ಅಂತ ಭಾವಿಸುತ್ತಿದ್ದೆ.

(ಒಬ್ಬ ಸ್ನೇಹಿತನಿಗೆ) "ನೀನು ಆ ಹಾಡನ್ನು ಹಾಡು."

ಸ್ನೇಹಿತ ಹಾಡುತ್ತಿದಾನೆ;

ಯಾರ ಮಹಿಮಾಜ್ಯೋತಿ ಜಗವನು
ಅಮೃತದಂದದಿ ಎಲ್ಲರೆದೆಯನು
ತುಂಬಿ ರೋಮಾಂಚನವ ಗೈವುದೊ

ಅಂಥ ಪ್ರೇಮದ ಜಲಧಿಯು,
ಜೀವ ನಿನ್ನೊಳಗಿರುವವರೆಗೂ
ಸಾರು ಆತನ ಮಹಿಮೆಯು !

ಯಾರ ಶ್ರೀ ಶುಭನಾಮ ಹೃದಯದ
ಕೊರಗನೆಲ್ಲವ ಕಳೆವುದೋ,
ಯಾರು ನೆಲ ಜಲ ಗಗನ ದೇಶವ-
ನೆಲ್ಲ ವ್ಯಾಪಿಸಿ ನಿಲುವರೋ,
ಯಾರ ಅನ್ವೇಷಣೆಯಲೀ ಜಗ
ಬರಿದೆ ತೊಳಲುತಲಿರುವುದೋ,
ಅಂಥ ದೇವನ ತಿಳಿದು ಬಣ್ಣಿಪ
ಶಕ್ತಿ ಯಾರಿಗೆ ಲಭಿಸಿದೆ?
ಅವನ ಮಹಿಮೆಗೆ ಪಾರವೆಲ್ಲಿದೆ?
ಆದಿ ಅಂತ್ಯಗಳೆಲ್ಲಿದೆ?

ನಿಜದ ತಿಳಿವಿನ ತವರು ಅವನು
ನಿತ್ಯಜೀವನ ಚೇತನ
ನಿತ್ಯಜಾಗ್ರತ ನಿರ್ನಿಮೇಷನು
ದಿವ್ಯ ಶುದ್ಧ ನಿರಂಜನ.
ಅವನ ದರುಶನ ಎದೆಯ ಕಿಲುಬನು
ತೊಳೆದು ಗೈವುದು ಪಾವನ!

ಮಾಸ್ಟರಿಗೆ ಡಾಕ್ಟರ್: "ಇದು ಬಹಳ ಒಳ್ಳೆ ಹಾಡು, ಅಲ್ಲವೇನು? 'ಅವನ ಮಹಿಮೆಗೆ ಪಾರವೆಲ್ಲಿದೆ? ಆದಿ ಅಂತ್ಯಗಳೆಲ್ಲಿದೆ' ಎಂಬ ಚರಣಗಳು ನಿನಗೆ ಹೇಗೆ ತೋರುತ್ತಿವೆ?"

ಮಾಸ್ಟರ್: "ಹೌದು, ಅವು ಬಹಳ ಒಳ್ಳೆ ಚರಣಗಳು. ಭಗವಂತನ ಅನಂತತೆಯ ಭಾವನೆಯನ್ನು ಮನಸ್ಸಿಗೆ ತರುತ್ತವೆ."

ಡಾಕ್ಟರ್ ಸ್ನೇಹದಿಂದ ಮಾಸ್ಟರಿಗೆ: "ಆಗಲೆ ಹೊತ್ತು ಬಹಳ ಮುಂದುವರಿದಿದೆ. ಊಟಮಾಡಿಬಂದಿದೀಯೆ ತಾನೆ? ಹತ್ತು ಘಂಟೆ ಒಳಗೇ ನನ್ನ ಊಟ ಮುಗಿದುಹೋಗುತ್ತದೆ. ಬಳಿಕ ರೋಗಿಗಳನ್ನು ನೋಡಿಬರಲು ಹೊರಡುತ್ತೇನೆ. ಊಟ ಮಾಡದೆ ಹೊರಕ್ಕೆ ಹೊರಟ

ನೆಂದರೆ, ಕಾಯಿಲೆ ಬೀಳುತ್ತೇನೆ. ನೋಡು, ಒಂದು ದಿನ ನಿಮ್ಮೆಲ್ಲರಿಗೂ ಊಟಕ್ಕೆ ಏರ್ಪಾಡುಮಾಡಬೇಕು ಅಂತ ಭಾವಿಸಿದೇನೆ."

ಮಾಸ್ಟರ್: "ಮಹಾಶಯರೆ, ಅದು ಬಹಳ ಒಳ್ಳೆಯದೆ."

ಡಾಕ್ಟರ್: "ಹಾಗಾದರೆ, ಇಲ್ಲೊ ಅಲ್ಲೊ? ನೀವು ಹೇಳಿದಹಾಗೆ."

ಮಾಸ್ಟರ್: "ಇಲ್ಲೊ ಅಲ್ಲೊ, ಎಲ್ಲಾದರೂ ಸರಿಯೆ. ಎಲ್ಲರೂ ನಿಮ್ಮೊಡನೆ ಆನಂದಪಡುತ್ತೇವೆ."

ಈಗ ಭಗವತಿ ಕಾಳಿಯ ಮಾತು ಆರಂಭವಾಯಿತು.

ಡಾಕ್ಟರ್: "ಕಾಳಿ ಒಬ್ಬ ಸಂತಾಲರ (ಸಂತಾಲ ಜಾತಿಗೆ ಸೇರಿದ) ಹೆಂಗಸು."

ಮಾಸ್ಟರ್ ಗಟ್ಟಿಯಾಗಿ ನಗುತ್ತ: "ಅದನ್ನು ನೀವು ಎಲ್ಲಿ ಓದಿದಿರಿ?"

ಡಾಕ್ಟರ್: "ಓ, ಹಾಗೆಂದು ಯಾರೊ ಹೇಳಿದರು." (ಮಾಸ್ಟರ್ ನಗುತ್ತಿದಾನೆ.)

ನಿನ್ನೆ ವಿಜಯನೇ ಮೊದಲಾದ ಭಕ್ತರಿಗೆ ಪರಮಹಂಸರ ಕೊಠಡಿಯಲ್ಲಿ ಭಾವ-ಸಮಾಧಿ ಉಂಟಾಗಿತ್ತು. ಆಗ ಡಾಕ್ಟರೂ ಅಲ್ಲಿ ಇದ್ದ. ಈಗ ಅದರ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಡಾಕ್ಟರ್: "ನಿನ್ನೆ ಭಾವಾವೇಶ ಎಂದರೆ ಏನು ಎಂಬುದನ್ನು ನೋಡಿದೆ. ಅಧಿಕವಾದ ಭಾವಾವೇಶ ಒಳ್ಳೆಯದೇನು?"

ಮಾಸ್ಟರ್: "ಪರಮಹಂಸರು ಹೇಳುತ್ತಾರೆ, ಭಗವಚ್ಚಿಂತನೆಯಿಂದ ಯಾವ ಭಾವಾವೇಶ ಉಂಟಾಗುವುದೊ ಅದು ಹೆಚ್ಚಾಗೇ ಆದರೂ ಯಾವ ತೊಂದರೆಯೂ ಬಾರದು. ಹೇಳುತ್ತಾರೆ, ವಜ್ರದ ಪ್ರಭೆ ಬೆಳಕನ್ನು ಕೊಡುತ್ತದೆ. ಅದು ತಂಪಾಗಿರುವುದೇ ವಿನಾ ಸುಡದು."

ಡಾಕ್ಟರ್: "ವಜ್ರದ ಬೆಳಕೆ! ಅದು ಪ್ರತಿಬಿಂಬಿತ ಬೆಳಕು ಮಾತ್ರ."

ಮಾಸ್ಟರ್: "ಅವರು ಇನ್ನೂ ಹೇಳುತ್ತಾರೆ, ಮನುಷ್ಯ ಅಮೃತ ಸರೋವರದಲ್ಲಿ ಮುಳುಗಿದನೆಂದರೆ ಸಾಯೋದಿಲ್ಲ. ಭಗವಂತನೇ ಆ ಅಮೃತ ಸರೋವರ. ಅದರಲ್ಲಿ ಮುಳುಗಿದರೆ ಮನುಷ್ಯನಿಗೆ ಯಾವ ಅನಿಷ್ಟವೂ ಬರದು; ಅದಕ್ಕೆ ಬದಲು ಆತ ಅಮರನಾಗಿಬಿಡುತ್ತಾನೆ. ಭಗವಂತನಲ್ಲಿ ವಿಶ್ವಾಸವಿದ್ದದ್ದೇ ಆದರೆ ನಿಸ್ಸಂದೇಹವಾಗಿ ಆತ ಅಮರನಾಗಿಬಿಡುತ್ತಾನೆ."

ಡಾಕ್ಟರ್ : "ಹೌದು, ಅದೇನೊ ನಿಜ."

ಡಾಕ್ಟರ್ ಮಾಸ್ಟರೊಡನೆ ಗಾಡಿಯನ್ನು ಹತ್ತಿದ. ಶ್ಯಾಮಪುಕುರಕ್ಕೆ ಹೋಗುವ ಮುನ್ನ ಡಾಕ್ಟರ್ ನಾಲ್ಕೈದು ರೋಗಿಗಳನ್ನು ನೋಡಿಹೋಗ ಬೇಕಾಗಿದೆ. ಗಾಡಿಯಲ್ಲಿ ಮಾತುಕತೆ ಆರಂಭವಾಯಿತು. ಡಾಕ್ಟರ್, ಮಹಿಮಚರಣನ ಅಹಂಕಾರದ ಸಂಬಂಧವಾಗಿ ಮಾತೆತ್ತಿದ.

ಮಾಸ್ಟರ್: "ಆತ ಪರಮಹಂಸರ ಹತ್ತಿರಕ್ಕೆ ಬಂದುಹೋಗೋದು ಮಾಡುತ್ತಾ ಇದಾನೆ. ಆತನಲ್ಲಿ ಈಗ ಸ್ವಲ್ಪ ಅಹಂಕಾರವಿದ್ದರೂ ಅದು ಹೆಚ್ಚು ದಿನ ಉಳಿಯೋ ಹಾಗಿಲ್ಲ. ಅವರ ಹತ್ತಿರ ಕುಳಿತರೇ ಮನುಷ್ಯನ ಅಹಂಕಾರ ಕಾಲಿಗೆ ಬುದ್ಧಿ ಹೇಳುತ್ತದೆ; ಅದು ಚೂರ್ಣವಾಗಿ ಹೋಗುತ್ತದೆ. ಪರಮಹಂಸರಲ್ಲಿ ಅಹಂಕಾರವೆಂಬುದೇ ಇಲ್ಲವಲ್ಲ ಅದಕ್ಕಾಗಿ. ಅಹಂಕಾರ ನಿರಹಂಕಾರದ ಹತ್ತಿರ ನಿಲ್ಲಲಾರದು. ನೋಡಿ, ವಿದ್ಯಾಸಾಗರ ಎಂಥ ಪ್ರಖ್ಯಾತ ಪುರುಷ, ಆತನೂ ಅವರನ್ನು ವಿನಯನಮ್ರತೆಯಿಂದ ಆದರಿಸಿದ. ಪರಮಹಂಸರು ಆತನನ್ನು ನೋಡಲು ಆತನ ಮನೆಗೆ ಹೋಗಿದ್ದರು. ಅವನಿಂದ ಬೀಳ್ಕೊಂಡಾಗ ರಾತ್ರಿ ಒಂಬತ್ತಾಗಿತ್ತು. ವಿದ್ಯಾಸಾಗರ ತನ್ನ ವಾಚನಾಲಯದಿಂದ ಹಿಡಿದು ಗೇಟಿನ ವರೆಗೆ ತಾನೇ ಕೈಯಲ್ಲಿ ದೀಪವನ್ನು ಹಿಡಿದು ದಾರಿ ತೋರಿಸುತ್ತಾ ಬಂದು ಪರಮಹಂಸರನ್ನು ಗಾಡಿಗೆ ಹತ್ತಿಸಿದ. ಮತ್ತೆ ಆತನಿಂದ ಬೀಳ್ಕೊಂಡಾಗ ಆತ ಕೈ ಮುಗಿದು ನಿಂತುಕೊಂಡಿದ್ದ."

ಡಾಕ್ಟರ್: "ಒಳ್ಳೇದು, ಪರಮಹಂಸರ ಸಂಬಂಧವಾಗಿ ವಿದ್ಯಾಸಾಗರನ ಅಭಿಪ್ರಾಯವೇನು?"

ಮಾಸ್ಟರ್: "ಅಂದು ಆತ ಅವರಿಗೆ ವಿಶೇಷವಾದ ಶ್ರದ್ಧಾಭಕ್ತಿಯನ್ನು ತೋರಿಸಿದ. ಆದರೆ ಮಾತುಕತೆಯಾಡಿದ ಮೇಲೆ ಗೊತ್ತಾಯಿತು, ವೈಷ್ಣವರು ಭಾವ-ಗೀವ ಅಂತ ಹೇಳುತ್ತಾರಲ್ಲ ಅದು ಆತನಿಗೆ ಹಿಡಿಸುತ್ತಿಲ್ಲ ಎಂಬುದು. ಅಂಥ ವಿಷಯಗಳಲ್ಲಿ ಆತನೂ ನಿಮ್ಮ ಹಾಗೇ."

ಡಾಕ್ಟರ್: "ಕೈ ಮುಗಿದು ನಿಲ್ಲೋದು, ಕಾಲಿಗೆ ಅಡ್ಡಬೀಳೋದು ಇವೆಲ್ಲ ನನಗೆ ರುಚಿಸುತ್ತಿಲ್ಲ. ತಲೆ ಎಷ್ಟು ಮಹತ್ತಾದುದೊ ಅಷ್ಟೇ ಮಹತ್ತಾದುದು ಕಾಲು ಕೂಡ. ಆದರೆ ಯಾರು ಕಾಲಿಗೆ ಬೇರೆ ಬೆಲೆ ಕಟ್ಟುತ್ತಾರೊ ಅವರು ಹಾಗೆ ಮಾಡಲಿ."

ಮಾಸ್ಟರ್: "ನಿಮಗೆ ಭಾವ-ಗೀವ ಹಿಡಿಸುತ್ತಿಲ್ಲ. ಪರಮಹಂಸರು

ನಿಮ್ಮನ್ನು ಆಗಾಗ 'ಗಂಭೀರಾತ್ಮ' ಅಂತ ಕರೆಯೋದು ನಿಮಗೆ ಜ್ಞಾಪಕ ದಲ್ಲಿರಬೇಕು. ನಿನ್ನೆ ಅವರು ನಿಮಗೆ ಹೇಳಿದರು, ಆನೆ ಒಂದು ಚಿಕ್ಕ ಕುಂಟೆಗೆ ಇಳಿದರೆ ಅದರ ನೀರು ಅಲ್ಲೋಲಕಲ್ಲೋಲವಾಗಿ ದಡಕ್ಕೆ ಬಡಿಯು ತ್ತದೆ, ಆದರೆ ಅದು ದೊಡ್ಡ ಸರೋವರಕ್ಕೆ ಇಳಿದರೆ ಸಣ್ಣ ಕಿರುದೆರೆಯೂ ಏಳದು. 'ಗಂಭೀರಾತ್ಮ' ಎಂಬ ಸರೋವರಕ್ಕೆ 'ಭಾವ' ಎಂಬ ಆನೆ ಇಳಿದರೆ, ಅದು ಅದರಲ್ಲಿ ಯಾವ ವ್ಯತ್ಯಾಸವನ್ನೂ ತರಲಾರದು. ಅವರು ಹೇಳುತ್ತಿದಾರೆ, ನೀವು ಒಬ್ಬ 'ಗಂಭೀರಾತ್ಮ'."

ಡಾಕ್ಟರ್: "ಆ ಗೌರವಕ್ಕೆ ನಾನು ಅರ್ಹನಲ್ಲ. ಭಾವ ಎಂಬುದು ಮತ್ತೆ ಬೇರೆ ತಾನೆ ಏನು? ಅದು ಒಂದು ವಿಧವಾದ ಮನೋವೃತ್ತಿ ಮಾತ್ರ. ಭಕ್ತಿ ಎಂಬ ಮನೋವೃತ್ತಿ ಮತ್ತು ಇನ್ನೂ ವಿವಿಧ ಮನೋವೃತ್ತಿಗಳು ಅಧಿಕವಾದುವು ಎಂದರೆ, ಕೆಲವರ ಕೈಯಲ್ಲಿ ಅವನ್ನು ಒಂದು ನಿರೋಧದಲ್ಲಿ ಇಡಲು ಸಾಧ್ಯ, ಇನ್ನು ಕೆಲವರ ಕೈಯಲ್ಲಿ ಸಾಧ್ಯವಿಲ್ಲ."

ಮಾಸ್ಟರ್: "ಭಾವಾವೇಶ ಅಂದರೆ ಏನು ಎಂಬುದನ್ನು ವಿವರಿಸಲು ಸಾಧ್ಯವಾದರೂ ಆಗಬಹುದು ಅಥವಾ ಆಗದೆಯೂ ಹೋಗಬಹುದು; ಆದರೆ ಮಹಾಶಯ, ಭಕ್ತಿ ಅಥವಾ ಭಾವಾವೇಶ ಎಂಬುದು ಒಂದು ಅಪೂರ್ವ ವಸ್ತು. 'ಸ್ಟೆಬಿಂಗ್' ಎಂಬೋನು ಡಾರ್ವಿನ್ನನ ಸಿದ್ಧಾಂತಗಳ ಮೇಲೆ ಬರೆದಿರೋ ಒಂದು ಪುಸ್ತಕವನ್ನು ನಿಮ್ಮ ವಾಚನಾಲಯದಲ್ಲಿ ನೋಡಿದೆ. ಆತ ಅದರಲ್ಲಿ ಹೇಳುತ್ತಾನೆ, ಮಾನವನ ಮನಸ್ಸು ಎಂಬುದು ವಿಕಾಸದಿಂದ ಉದ್ಭವವಾಯಿತೊ ಅಥವಾ ಭಗವಂತನೇ ಅದನ್ನು ತನ್ನ ಕೈಯಿಂದ ಸೃಷ್ಟಿಸಿದನೊ, ಅದು ಯಾವ ರೀತಿಯಾಗಿ ಬೇಕಾದರೂ ಉದ್ಭವ ವಾಗಿರಲಿ, ನಿಜವಾಗಿಯೂ ಅದು ಒಂದು ಅದ್ಭುತ ವಸ್ತು. ಆತ ಬಹಳ ಯುಕ್ತವಾದ ಒಂದು ದೃಷ್ಟಾಂತವನ್ನು — ಬೆಳಕಿನ ವಾದವನ್ನು — ಕೊಟ್ಟಿ ದಾನೆ. ಬೆಳಕಿನ ತರಂಗದ ತತ್ತ್ವ ನಮಗೆ ಗೊತ್ತಿದ್ದರೂ ಸರಿಯೆ ಇಲ್ಲದಿದ್ದರೂ ಸರಿಯೆ, ನಿಜವಾಗಿಯೂ ಬೆಳಕು ಎಂಬುದು ಒಂದು ಅದ್ಭುತ ವಾದ ವಸ್ತು."

ಡಾಕ್ಟರ್: "ಹೌದು, ನಿಜ. ಆತ ಡಾರ್ವಿನ್ನನ ಸಿದ್ಧಾಂತಗಳನ್ನೂ ಒಪ್ಪಿಕೊಳ್ಳೋದಲ್ಲದೆ ಭಗವಂತನನ್ನೂ ಒಪ್ಪಿಕೊಳ್ಳೋದನ್ನು ನೀನು ಅದರಲ್ಲಿ ನೋಡಿದೆಯಲ್ಲವೆ?"

ಈಗ ಮಾತುಕತೆ ಪರಮಹಂಸರ ಸಂಬಂಧವಾಗಿ ಆರಂಭವಾಯಿತು.

ಡಾಕ್ಟರ್ : "ನನಗೆ ತೋರಿಬರುತ್ತಿದೆ ಪರಮಹಂಸರು ಕಾಳಿಯ ಉಪಾಸಕರು ಎಂಬುದಾಗಿ."

ಮಾಸ್ಟರ್: "ಅವರು 'ಕಾಳಿ' ಎಂಬ ಪದಕ್ಕೆ ಕೊಡೋ ಅರ್ಥವೇ ಬೇರೆ. ವೇದಗಳು ಯಾರನ್ನು 'ಪರಬ್ರಹ್ಮ' ಅಂತ ಕರೆಯುವುವೊ, ಆತನನ್ನೇ ಅವರು 'ಕಾಳಿ' ಅಂತ ಕರೆಯುತ್ತಾರೆ. ಯಾರನ್ನು ಮುಹಮ್ಮದೀಯರು 'ಅಲ್ಲಾ' ಅಂತ ಕರೆಯುತ್ತಾರೊ, ಕ್ರಿಶ್ಚಿಯನ್ನರು 'ಗಾಡ್' ಅಂತ ಕರೆಯುತ್ತಾರೊ, ಅವರು ಆತನನ್ನೇ 'ಕಾಳಿ' ಅಂತ ಕರೆಯುತ್ತಾರೆ. ಅವರ ದೃಷ್ಟಿಯಿಂದ ಅನೇಕ ಭಗವಂತರು ಇಲ್ಲ; ಇರುವವನು ಒಬ್ಬನೇ ಒಬ್ಬ. ಪುರಾತನ ಬ್ರಹ್ಮಜ್ಞಾನಿಗಳು ಯಾರನ್ನು 'ಬ್ರಹ್ಮ' ಅಂತ ಕರೆದಿದಾರೊ, ಯೋಗಿಗಳು ಯಾರನ್ನು 'ಆತ್ಮ' ಅಂತ ಕರೆಯುತ್ತಾರೊ, ಭಕ್ತರು ಯಾರನ್ನು 'ಭಗವಂತ' ಅಂತ ಕರೆಯುತ್ತಾರೊ, ಆತನನ್ನೇ ಅವರು 'ಕಾಳಿ' ಅಂತ ಕರೆಯುತ್ತಾರೆ.

"ಪರಮಹಂಸರಲ್ಲಿ ನಾವು ಎಲ್ಲಾ ವಿಧದ ಭಾವಗಳನ್ನೂ ನೋಡಬಹುದು. ಎಲ್ಲಾ ಧರ್ಮಗಳ, ಎಲ್ಲಾ ಸಂಪ್ರದಾಯಗಳ ಜನರು ಅವರೊಡನೆ ಬೆರತು ಆನಂದ ಮತ್ತು ಶಾಂತಿಯನ್ನು ಪಡೆಯುತ್ತಿದಾರೆ. ಅವರ ಭಾವಗಳು ಏನೇನು, ಅವು ಎಷ್ಟು ಗಭೀರವಾದುವು ಎಂಬುವುಗಳ ಸಂಬಂಧವಾಗಿ ಯಾರು ತಾನೆ ಅವರ ಅಂತರ್ಯವನ್ನು ಒಳಹೊಕ್ಕಿ ನೋಡಬಲ್ಲರು?"

ಡಾಕ್ಟರ್: "ಸಂತ ಪಾಲ, 'ಎಲ್ಲವೂ ಎಲ್ಲರಿಗೂ' ಅಂತ ಹೇಳಿರುವುದಾದರೂ, ನಾನು ಅದನ್ನು ಒಪ್ಪುತ್ತಿಲ್ಲ."

ಮಾಸ್ಟರ್: "ಪರಮಹಂಸರ ಮಾನಸಿಕ ಅವಸ್ಥೆಯನ್ನು ಯಾರು ತಾನೆ ಅರಿತುಕೊಳ್ಳಬಲ್ಲರು? ಅವರ ಬಾಯಿಂದಲೇ ಕೇಳಿದೇವೆ, ನೂಲಿನ ವ್ಯಾಪಾರ ಮಾಡದೆ ಇರತಕ್ಕವನಿಗೆ, ನಲವತ್ತನೆ ನಂಬರಿನ ನೂಲಿಗು ಮತ್ತು ನಲವತ್ತೊಂದನೆ ನಂಬರಿನ ನೂಲಿಗು ಯಾವ ಪ್ರಭೇದವೂ ಗೊತ್ತಾಗದು. ಚಿತ್ರಗಾರನಲ್ಲದವ ಚಿತ್ರಗಾರನ ಕಲಾಕೌಶಲ್ಯವನ್ನು ಅರಿಯಲಾರ. ಮಹಾಪುರುಷರ ಭಾವ ಬಹಳ ಗಭೀರವಾದುದು. ಏಸುವಿನಂತಾಗದೆ ಏಸುವಿನ ಎಲ್ಲಾ ಭಾವಗಳನ್ನು ಅರಿಯಲಾಗೋದಿಲ್ಲ. ಪರಮಹಂಸರ ಈ ಗಭೀರ ಭಾವ, ಏಸು ಹೇಳಿದಾನಲ್ಲ, 'ಸ್ವರ್ಗದಲ್ಲಿರೋ

ನಿಮ್ಮ ತಂದೆ ಪೂರ್ಣನಾಗಿರೋ ರೀತಿಯಲ್ಲಿ ನೀನೂ ಪೂರ್ಣನಾಗು' ಅಂತ, ಅದೇ ರೀತಿಯದೆ ಬಹುಶಃ ಆಗಿರಬೇಕು."

ಡಾಕ್ಟರ್: "ಒಳ್ಳೇದು, ಅವರ ಆರೈಕೆಗೆ ನೀವು ಏನು ವ್ಯವಸ್ಥೆ ಮಾಡಿದೀರಿ?"

ಮಾಸ್ಟರ್: "ಪ್ರಸ್ತುತ ಸ್ವಲ್ಪ ವಯಸ್ಸಾಗಿರೋ ಭಕ್ತರು ಒಬ್ಬೊಬ್ಬರು ಒಂದೊಂದು ದಿನ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾಇದಾರೆ. ಈ ದಿನ ಗಿರೀಶಬಾಬುವಿನದು; ಅದರ ಮಾರನೆ ದಿನ ಸುರೇಶ ಬಾಬುವಿನದು; ಅದರ ಮಾರನೆ ದಿನ ನವಗೋಪಾಲನದು; ಅದರ ಮಾರನೆ ದಿನ ಕಾಳೀಬಾಬುವಿನದು ಈ ರೀತಿಯಾಗಿ."

ಮಾಸ್ಟರ್ ಮತ್ತು ಡಾಕ್ಟರ್ ಎರಡನೆ ಅಂತಸ್ತಿನಲ್ಲಿದ್ದ ಶ್ರೀರಾಮ ಕೃಷ್ಣರ ಕೊಠಡಿಯನ್ನು ಪ್ರವೇಶಿಸಿದಾಗ ಮಧ್ಯಾಹ್ನ ಒಂದು ಘಂಟೆ. ಪರಮಹಂಸರು ತಮ್ಮ ಪ್ರಾಣಾಂತಕ ರೋಗವನ್ನು ಮರತು, ಎಂದಿನಂತೆ ಹಸನ್ಮುಖರಾಗಿ ಕುಳಿತುಕೊಂಡಿದಾರೆ. ಗಿರೀಶಘೋಷ, ಚಿಕ್ಕ ನರೇನ, ಶರಚ್ಚಂದ್ರ ಇವರೇ ಮೊದಲಾದ ಅನೇಕ ಭಕ್ತರು ಅವರ ಸುತ್ತಲೂ ಕುಳಿತಿದಾರೆ. ಪ್ರತಿಯೊಬ್ಬನ ದೃಷ್ಟಿಯೂ ಆ ಮಹಾಯೋಗಿ ಸದಾನಂದ ಮಹಾಪುರುಷರ (ಪರಮಹಂಸರ) ಕಡೆ ನೆಟ್ಟುಕೊಂಡಿದೆ. ಕೆಲವು ವೇಳೆ ಭಕ್ತರು, ಹಾವು ಮಾಂತ್ರಿಕನ ಎದುರು ವರ್ತಿಸೋ ರೀತಿಯಲ್ಲಿ ಮಂತ್ರ ಮುಗ್ಧರಾಗಿ ಕುಳಿತಿರುತ್ತಿದಾರೆ. ಇನ್ನು ಕೆಲವು ವೇಳೆ ವರನ ಗುಂಪಿನವರು ವರನೊಡನೆ ಆನಂದಪಡೋ ರೀತಿಯಲ್ಲಿ ಆನಂದಪಡುತ್ತಿದಾರೆ. ಡಾಕ್ಟರ್ ಮತ್ತು ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು. ಡಾಕ್ಟರನ್ನು ನೋಡಿದೊಡನೆ ಪರಮಹಂಸರು ನಗುತ್ತ ಆತನಿಗೆ ಹೇಳಿದರು: "ಈ ದಿನ ನನ್ನ ದೇಹಾರೋಗ್ಯ ಬಹಳ ಚೆನ್ನಾಗಿದೆ."

ಬಳಿಕ ಭಕ್ತರೊಡನೆ ಭಗವದ್ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಶ್ರೀರಾಮಕೃಷ್ಣರು: "ವಿವೇಕ ವೈರಾಗ್ಯವಿಲ್ಲದ ಬರೀ ಪಾಂಡಿತ್ಯ ಯಾವುದಕ್ಕೆ ಬಂದದ್ದು? ಭಗವಂತನ ಪಾದಪದ್ಮಗಳ ಮೇಲೆ ಧ್ಯಾನ ಮಾಡಿದೆನೆಂದರೆ ನನಗೊಂದು ಅವಸ್ಥೆ ಬರುತ್ತದೆ. ಉಟ್ಟಿದ್ದ ಬಟ್ಟೆ ಹಾಗೇ ಕಳಚಿ ಬಿದ್ದುಹೋಗುತ್ತದೆ. ಏನೊ ಒಂದು ನನ್ನ ಪಾದಗಳಿಂದ ತಲೆಯ ಕಡೆಗೆ ಹತ್ತಿಹೋದಂತೆ ಅನುಭವವಾಗುತ್ತದೆ. ಆಗ ಎಲ್ಲರೂ ಒಂದು

ತೃಣವಾಗಿ ಕಂಡುಬರುತ್ತಾರೆ. ವಿವೇಕವಿಲ್ಲದ, ಭಗವಂತನಲ್ಲಿ ಭಕ್ತಿಯಿಲ್ಲದ ಪಂಡಿತನೇನಾದರು ನನ್ನ ಕಣ್ಣಿಗೆ ಬಿದ್ದನೆಂದರೆ, ಆಗ ಆತ ಒಂದು ತೃಣದೋಪಾದಿಯಲ್ಲಿ ನನಗೆ ಕಂಡುಬರುತ್ತಾನೆ.

"ಒಮ್ಮೆ ಡಾಕ್ಟರ್ ರಾಮನಾರಾಯಣ ನನ್ನೊಡನೆ ತರ್ಕಿಸುತ್ತಿದ್ದ. ಇದ್ದಕ್ಕಿದ್ದ ಹಾಗೆ ಆ ಅವಸ್ಥೆ ಬಂತು. ಆಗ ಆತನಿಗೆ ರೇಗಿ ಹೇಳಿದೆ: 'ಏನು ನಿನ್ನ ಮಾತು ? ತರ್ಕದಿಂದ ಭಗವಂತನ ಸಂಬಂಧವಾಗಿ ನೀನು ಏನನ್ನು ತಾನೆ ಅರಿಯಬಲ್ಲೆ ? ಆತನ ಸೃಷ್ಟಿಯ ವಿಷಯವಾಗಿ ತಾನೆ ನಿನಗೇನು ಅರ್ಥವಾದೀತು ! ನಿನ್ನದು ನೆಯ್ಗೆಯವನ ಕೀಟಲೆ ಬುದ್ಧಿಯಂಥ ಬುದ್ಧಿ !' ನನ್ನ ಮುಖಮುದ್ರೆ ನೋಡಿ ಆತ ಅಳಲಾರಂಭಿಸಿದ. ಬಳಿಕ ನನ್ನ ಕಾಲು ಒತ್ತಲಾರಂಭಿಸಿದ."

ಡಾಕ್ಟರ್: "ಡಾಕ್ಟರ್ ರಾಮನಾರಾಯಣ ಹಿಂದೂ ಅಲ್ಲವೆ, ಅದಕ್ಕಾಗಿ ಆತ ಹಾಗೆ ಮಾಡಿದ. ಆತನಿಗೆ ಪೂಜೆ ಪುರಸ್ಕಾರಗಳಲ್ಲಿ ಆಸಕ್ತಿ; ಒಬ್ಬ ಗೊಡ್ಡು ಹಿಂದೂ."

ಮಾಸ್ಟರ್ ತನಗೆ ತಾನೆ: "ಡಾಕ್ಟರ್ ಸರ್ಕಾರನ ಭಾವನೆ, ತನಗೆ ಶಂಖ-ಜಾಗಟೆಯ ತಂಟೆಯೇ ಬೇಡ ಅಂತ."

ಶ್ರೀರಾಮಕೃಷ್ಣರು: "ಬಂಕಿಮಚಂದ್ರ ನಿಮ್ಮ ಗುಂಪಿಗೆ ಸೇರಿದ ಒಬ್ಬ ಪಂಡಿತ. ಒಮ್ಮೆ ನಾನು ಆತನನ್ನು ಭೇಟಿಮಾಡಿದೆ. ಆತನನ್ನು ಕೇಳಿದೆ: 'ಮನುಷ್ಯನ ಕರ್ತವ್ಯವೇನು ?' ಆತ ಉತ್ತರವಿತ್ತ: 'ಆಹಾರ, ನಿದ್ರೆ, ಮೈಥುನ ಇವುಗಳಲ್ಲಿ ನಿರತನಾಗಿರೋದು.' ಆತನ ಈ ಮಾತು ಕೇಳಿ ನನಗೆ ಒಂದು ವಿಧವಾದ ಖೇದವುಂಟಾಯಿತು. ಆತನಿಗೆ ಹೇಳಿದೆ: 'ಏನು ಮಾತು ನಿನ್ನ ಬಾಯಿಂದ? ನಿನ್ನದು ಅತ್ಯಂತ ನೀಚ ಸ್ವಭಾವ. ನೀನು ಹಗಲಿರುಳು ಯಾವುದರ ವಿಷಯವಾಗಿ ಚಿಂತಿಸುತ್ತಿದೀಯೊ, ಯಾವ ವಿಧವಾದ ಕೆಲಸಕಾರ್ಯಗಳಲ್ಲಿ ತೊಡಗಿದೀಯೊ, ಅದೇ ಈಗ ನಿನ್ನ ಬಾಯಿಂದ ಹೊರಬರುತ್ತಿದೆ. ಮೂಲಂಗಿ ತಿಂದವನಿಗೆ ಮೂಲಂಗಿ ವಾಸನೆಯ ತೇಗು ಬರುತ್ತದೆ.' ಬಳಿಕ ಭಗವಂತನ ವಿಷಯವಾಗಿ ಬಹಳ ಹೊತ್ತಿನವರೆಗೆ ಮಾತುಕತೆ ನಡೆಯಿತು. ಕೊಠಡಿಯಲ್ಲಿ ಕೀರ್ತನೆ ನಡೆಯಿತು. ಆಗ ನಾನು ನರ್ತನೆಮಾಡಿದೆ. ಬಳಿಕ ಆತ ಹೇಳಿದ: 'ಮಹಾಶಯರೆ, ದಯವಿಟ್ಟು ನಮ್ಮ ಮನೆಗೆ ಒಮ್ಮೆ ದಯಮಾಡಿ.' ನಾನು ಹೇಳಿದೆ: 'ಭಗವಂತನಿಚ್ಛೆಯಿದ್ದರೆ.' ಆತ ಹೇಳಿದ: 'ಅಲ್ಲಿಯೂ ಭಕ್ತರಿದಾರೆ, ನೋಡೋರಂತೆ.'

ನಾನು ನಗುತ್ತ ನಗುತ್ತ ಹೇಳಿದೆ: 'ಎಂಥ ಭಕ್ತರು? "ಗೋಪಾಲ! ಗೋಪಾಲ!" ಅಂತ ಹೇಳುತ್ತಿದ್ದರಲ್ಲ ಅಂಥ ಭಕ್ತರೇನು?' "

ಡಾಕ್ಟರ್: "ಏನದು, 'ಗೋಪಾಲ! ಗೋಪಾಲ!' ಎಂಬ ಕಥೆ?"

ಶ್ರೀರಾಮಕೃಷ್ಣರು ನಗುತ್ತ: "ಒಂದು ಸ್ಥಳದಲ್ಲಿ ಒಬ್ಬ ಅಕ್ಕಸಾಲಿಗನ ಅಂಗಡಿ ಇತ್ತು. ಆತ ದೊಡ್ಡ ಭಕ್ತ; ಪರಮ ವೈಷ್ಣವ. ಕೊರಳಿಗೆ ತುಳಸಿಮಣಿ ಹಾಕಿಕೊಳ್ಳುತ್ತಿದ್ದ, ಹಣೆಗೆ ತಿಲಕ ಇಟ್ಟುಕೊಳ್ಳುತ್ತಿದ್ದ, ಕೈಯಲ್ಲಿ ಜಪಮಾಲೆ ತಿರುಗಿಸುತ್ತಿರುತ್ತಿದ್ದ. ಎಲ್ಲರೂ ವಿಶ್ವಾಸವಿಟ್ಟು ಆತನ ಅಂಗಡಿಗೇ ಬರುತ್ತಿದ್ದರು; ಅವರು ಭಾವಿಸುತ್ತಿದ್ದರು, ಆತ ಇಂಥ ಪರಮ ಭಕ್ತನಾಗಿರೋದರಿಂದ ಎಂದಿಗೂ ತಮಗೆ ಮೋಸಮಾಡೋದಿಲ್ಲ ಅಂತ. ಗಿರಾಕಿ ಆತನ ಅಂಗಡಿಗೆ ಕಾಲುಹಾಕಿದೊಡನೆ ಅವನ ಕಿವಿಗೆ ಬೀಳುತ್ತಿತ್ತು, ಒಬ್ಬ ಕೆಲಸಗಾರ, 'ಕೇಶವ! ಕೇಶವ!' ಅಂತ ಹೇಳೋದು, ಇನ್ನೊಬ್ಬ ಒಂದು ಕ್ಷಣದನಂತರ, 'ಗೋಪಾಲ! ಗೋಪಾಲ!' ಅಂತ ಹೇಳೋದು, ಮತ್ತೊಬ್ಬ ಆ ಬಳಿಕ, 'ಹರಿ! ಹರಿ!' ಅಂತ ಹೇಳೋದು, ಕೊನೆಯಲ್ಲಿ ಒಬ್ಬ, 'ಹರ! ಹರ!' ಅಂತ ಹೇಳೋದು. ಆತನ ಅಂಗಡಿಯಲ್ಲಿ ಇಷ್ಟೊಂದು ಭಗವನ್ನಾಮೋಚ್ಚಾರಣೆ ಆಗುತ್ತಿರೋದನ್ನು ನೋಡಿ ಗಿರಾಕಿಗಳು ಸ್ವಾಭಾವಿಕವಾಗೇ ಭಾವಿಸುತ್ತಿದ್ದರು ಆತ ಬಹಳ ಒಳ್ಳೆಯವನೇ ಇರಬೇಕು ಅಂತ. ಆದರೆ ನಿಜಸ್ಥಿತಿ ಏನು ಎಂಬುದು ಗೊತ್ತೆ? ಯಾರು ಹೇಳಿದನೊ, 'ಕೇಶವ! ಕೇಶವ!' ಅಂತ, ಆತನ ಭಾವನೆ, 'ಬಂದಿರೋ ಗಿರಾಕಿಗಳು ಎಂಥವರಿರಬೇಕು?' ಎಂಬುದಾಗಿ. ಯಾರು ಹೇಳಿದನೊ, 'ಗೋಪಾಲ! ಗೋಪಾಲ!' ಅಂತ, ಆತನ ಇಂಗಿತಾರ್ಥ, 'ನಾನು ಇವರೊಡನೆ ಮಾತುಕತೆಯಾಡಿ ನೋಡಿದೆ. ಇವರು ಹಸುವಿನ ಮಂದೆಗೆ ಸರಿಸಮಾನರು' ಎಂಬುದಾಗಿ. ಯಾರು ಹೇಳಿದನೊ, 'ಹರಿ! ಹರಿ!' ಅಂತ, ಆತನ ಸೌಜ್ಞಾರ್ಥ, 'ಇವರು ಹಸುವಿನ ಮಂದೆಗೆ ಸರಿಸಮಾನರಾಗಿರೋದಾದರೆ, ಇವರಿಂದ ಕದಿಯಬಹುದೆ?' ಎಂಬುದಾಗಿ. ಯಾರು ಹೇಳಿದನೊ, 'ಹರ! ಹರ!' ಅಂತ, ಆತನ ಇಂಗಿತಾರ್ಥ, 'ಇವರು ಗೋವಿನ ಮಂದೆಗೆ ಸರಿಸಮಾನರಾಗಿರೋದರಿಂದ, ಕದಿಯಿರಿ, ಕದಿಯಿರಿ' ಎಂಬುದಾಗಿ. (ಎಲ್ಲರೂ ನಗುತ್ತಿದಾರೆ.)

"ಒಮ್ಮೆ ನಾನು ಮಥುರಬಾಬುವಿನೊಡನೆ ಒಂದು ಜಾಗಕ್ಕೆ ಹೋಗಿದ್ದೆ. ಅನೇಕ ಮಂದಿ ಪಂಡಿತರು ನನ್ನೊಡನೆ ವಾದಿಸಲು ಅಲ್ಲಿಗೆ

ಬಂದು ಸೇರಿದ್ದರು. ನಿಮಗೆ ಗೊತ್ತೇ ಇದೆ ನಾನೊಬ್ಬ ಪೆದ್ದು ಎಂಬುದು. (ಎಲ್ಲರೂ ನಗುತ್ತಿದಾರೆ.) ನನ್ನ ಆ ಅವಸ್ಥೆ ಅವರಿಗೂ ಪರಿಚಯ ವಾಯಿತು. ನನ್ನೊಡನೆ ಮಾತುಕತೆಯಾಡಿ ಮುಗಿಸಿದನಂತರ ಅವರು ಹೇಳಿದರು: 'ಮಹಾಶಯರೆ, ನಿಮ್ಮೊಡನೆ ಮಾತುಕತೆಯಾಡಿದ ಮೇಲೆ ನಮ್ಮ ವಿದ್ಯಾ, ನಮ್ಮ ಪಾಂಡಿತ್ಯ, ನಮ್ಮ ವ್ಯಾಸಂಗ ಇವೆಲ್ಲ ಯಾವು ದಕ್ಕೂ ಬಂದುದಲ್ಲ ಅಂತ ತೋರುತ್ತಿದೆ. ಈಗ ನಮಗೆ ಅರ್ಥವಾಗುತ್ತಿದೆ ಭಗವಂತನ ಕೃಪೆಯೊಂದೊದಗಿತೆಂದರೆ ನಮ್ಮಲ್ಲಿ ಜ್ಞಾನಾಭಾವವೇನೂ ಇರೋದಿಲ್ಲ. ಆಗ ಮೂರ್ಖ ಮಹಾ ಪಂಡಿತನಾಗಿಬಿಡುತ್ತಾನೆ, ಮೂಕ ಮಹಾವಾಗ್ಮಿಯಾಗಿಬಿಡುತ್ತಾನೆ.' ಅದಕ್ಕಾಗೇ ನಾನು ಹೇಳೋದು, ವ್ಯಕ್ತಿ ಕೇವಲ ಪುಸ್ತಕಪಾಂಡಿತ್ಯದಿಂದಲೇ ಪಂಡಿತನಾಗಲಾರ ಎಂಬುದಾಗಿ.

"ಹೌದು, ನಿಜ. ಇದು ಎಷ್ಟು ಸತ್ಯವಾದುದು! ಭಗವಂತನ ಕೃಪೆಯೊಂದು ದೊರೆತುದೇ ಆದರೆ ಜ್ಞಾನಾಭಾವವಿರುವುದೆ? ನನ್ನ ಕಡೆ ನೋಡಿ. ನಾನೊಬ್ಬ ನಿರಕ್ಷರಕುಕ್ಷಿ. 'ಓ!' ಅಂದರೆ 'ಠೊ!' ಅನ್ನೋಕೆ ಬರೋದಿಲ್ಲ. ಆದರೂ ನನ್ನಮೂಲಕ ಇಷ್ಟೊಂದು ಮಾತುಕತೆ ಗಳಾಡುತ್ತಿರೋನು ಯಾರು? ನೋಡಿ, ಭಗವಂತನ ಜ್ಞಾನ-ಭಂಡಾರ ಅಕ್ಷಯವಾದ್ದು! ಕಾಮಾರಪುಕುರದ ವ್ಯಾಪಾರಿಗಳು ದಿನಸಿ ಅಳೆಯು ತ್ತಾರೆ, 'ರಾಮೇ ರಾಮ! ರಾಮೇ ರಾಮ!' ಅಂತ ಹೇಳುತ್ತ. ಒಬ್ಬ ಅಳೆಯುತ್ತಾ ಹೋಗುತ್ತಾನೆ, ಇನ್ನೊಬ್ಬ ಪಕ್ಕದ ರಾಶಿಯಿಂದ ತಳ್ಳಿಕೊಡು ತ್ತಲೇ ಇರುತ್ತಾನೆ. ಅಳೆಯೋನು ತನ್ನ ಎದುರಿಗಿರೋ ರಾಶಿಯನ್ನು ಅಳೆದು ಮುಗಿಸಿದ ಅನ್ನುವಷ್ಟರಲ್ಲೇ, ಪಕ್ಕದ ರಾಶಿಯಿಂದ ತಳ್ಳಿಕೊಡು ವುದೇ ಈ ಎರಡನೆಯವನ ಕೆಲಸ. ನನ್ನ ಮಾತುಕತೆಗಳ ಸಂಬಂಧ ವಾಗಿಯೂ ಹೀಗೇ ಆಗುತ್ತಿದೆ. ನನ್ನ ಜ್ಞಾನ-ಭಂಡಾರ ಇನ್ನೇನು ಬರಿ ದಾಗುತ್ತ ಬಂತು ಅನ್ನುವಷ್ಟರಲ್ಲೇ ಭಗವತಿ ತನ್ನ ಅಕ್ಷಯ ಜ್ಞಾನ-ಭಂಡಾರ ದಿಂದ ಜ್ಞಾನವನ್ನು ನನ್ನ ಕಡೆ ನೂಕಿಕೊಟ್ಟುಬಿಡುತ್ತಾಳೆ.

"ನನ್ನ ಬಾಲ್ಯಾವಸ್ಥೆಯಲ್ಲಿ ಭಗವಂತ ನನ್ನಲ್ಲಿ ಆವಿರ್ಭಾವನಾದ. ಆಗ ನನಗೆ ಹನ್ನೊಂದು ವಯಸ್ಸು. ಗದ್ದೆ ಬಯಲಿನಲ್ಲಿ ನಡೆದುಹೋಗು ತ್ತಿದ್ದಾಗ ಏನೊ ಒಂದು ದೃಶ್ಯ ಕಂಡೆ. ಬಳಿಕ ಜನರು ನನಗೆ ಹೇಳಿದರು, ಆಗ ನಾನು ಬಾಹ್ಯಪ್ರಜ್ಞೆಯಿಲ್ಲದವನಾಗಿ ಹೋಗಿದ್ದೆ, ಒಂದು ಮರದ ತುಂಡಿನೋಪಾದಿಯಲ್ಲಿ ನನ್ನ ದೇಹ ಸ್ಥಿರವಾಗಿಬಿಟ್ಟಿತ್ತು ಅಂತ. ಅಂದಿ

ನಿಂದ ನಾನು ಬೇರೊಬ್ಬ ವ್ಯಕ್ತಿಯಾಗಿಬಿಟ್ಟೆ. ನನ್ನ ಅಂತರ್ಯದಲ್ಲಿ ಬೇರೊಬ್ಬ ವ್ಯಕ್ತಿ ಇರೋದನ್ನು ನೋಡಲಾರಂಭಿಸಿದೆ. ಪೂಜೆಮಾಡೋ ಸಮಯದಲ್ಲಿ ನನ್ನ ಕೈ ಅನೇಕ ವೇಳೆ ದೇವರ ಕಡೆಗೆ ಹೋಗದೆ ನನ್ನ ತಲೆಯ ಕಡೆಗೇ ಬರುತ್ತಿತ್ತು. ಆಗ ನನ್ನ ತಲೆಯ ಮೇಲೇ ಹೂವನ್ನು ಹಾಕುತ್ತಿದ್ದೆ. ನನ್ನೊಡನೆ ಆಗ ಇರುತ್ತಿದ್ದ ಒಬ್ಬ ಹುಡುಗ ನನ್ನನ್ನು ಸಮೀಪಿಸಲು ಹೆದರುತ್ತಿದ್ದ. ಆತ ಹೇಳುತ್ತಿದ್ದ: 'ನಿಮ್ಮ ಮುಖದ ಮೇಲೆ ಏನೊ ಒಂದು ಜ್ಯೋತಿ ಇದೆ. ನಿಮ್ಮ ಹತ್ತಿರ ಬರೋಕೆ ಹೆದರಿಕೆಯಾಗುತ್ತಿದೆ.'

"ನಾನೊಬ್ಬ ನಿರಕ್ಷರಕುಕ್ಷಿ. ಏನು ಅಂದರೆ ಏನೂ ಗೊತ್ತಿಲ್ಲ. ಹಾಗಾದರೆ ಈ ಮಾತುಗಳನ್ನೆಲ್ಲ ಆಡೋರು ಯಾರು? ನಾನು ಭಗವತಿಗೆ ಹೇಳುತ್ತೇನೆ: 'ಹೇ ತಾಯಿ, ನಾನು ಯಂತ್ರ, ನೀನು ಯಂತ್ರಿ; ನಾನು ಗೃಹ, ನೀನು ಗೃಹಿಣಿ; ನಾನು ರಥ, ನೀನು ರಥಿ; ನೀನು ಮಾಡಿಸಿದಂತೆ ಮಾಡುತ್ತೇನೆ, ಚಲಿಸಿದ ಹಾಗೆ ಚಲಿಸುತ್ತೇನೆ, ಪ್ರೇರೇಪಿಸಿದ ಹಾಗೆ ಮಾತಾಡುತ್ತೇನೆ. ನಾನಲ್ಲ! ನಾನಲ್ಲ! ಎಲ್ಲವೂ ನೀನೆ! ಎಲ್ಲವೂ ನೀನೆ!' ಎಲ್ಲಾ ವೈಭವವೂ ಆಕೆಗೆ ಸೇರಿದುದೆ. ನಾನು ಕೇವಲ ಆಕೆಯ ಯಂತ್ರ ಮಾತ್ರ. ಒಮ್ಮೆ ರಾಧೆ ಸಹಸ್ರ ರಂಧ್ರಗಳುಳ್ಳ ಕಳಸಕ್ಕೆ ನೀರು ತುಂಬಿ ತಲೆ ಮೇಲಿಟ್ಟುಕೊಂಡು ಹೋಗುತ್ತಿದ್ದಾಗ, ಒಂದು ತೊಟ್ಟು ನೀರೂ ಕೆಳಕ್ಕೆ ಬೀಳಲಿಲ್ಲ. ಅದನ್ನು ನೋಡಿ ಜನರೆಲ್ಲರೂ ಆಕೆಯನ್ನು ಹೊಗಳ ಲಾರಂಭಿಸಿದರು. ಅವರು ಹೇಳಿದರು: 'ಇಂಥಾ ಪತಿವ್ರತಾ ಶಿರೋಮಣಿಯನ್ನು ಮತ್ತೆ ಜಗತ್ತು ಇನ್ನೆಂದಿಗೂ ನೋಡದು!' ಆಗ ರಾಧೆ ಹೇಳಿದಳು: 'ನೀವು ನನ್ನನ್ನೇಕೆ ಹೊಗಳುತ್ತಾ ಇದೀರಿ? ಹೇಳಿ, "ಶ್ರೀಕೃಷ್ಣನಿಗೆ ಜಯವಾಗಲಿ! ಶ್ರೀಕೃಷ್ಣನಿಗೆ ಜಯವಾಗಲಿ!" ಅಂತ. ನಾನು ಆತನ ದಾಸಿ ಮಾತ್ರ.'

"ಒಮ್ಮೆ ನಾನು ಆ ಮಾನಸಿಕ ಅವಸ್ಥೆಯಲ್ಲಿ ವಿಜಯನ ಎದೆಯ ಮೇಲೆ ಕಾಲಿಟ್ಟೆ. ವಿಜಯನನ್ನು ನಾನು ಬಹಳವಾಗಿ ಗೌರವಿಸುತ್ತಿರೋದು ನಿನಗೆ ಗೊತ್ತೇ ಇದೆ—ಆದರೂ ನಾನು ಆತನ ಎದೆ ಮೇಲೆ ಕಾಲಿಟ್ಟು ಬಿಟ್ಟೆನಲ್ಲ! ಏಕೆ ಹೀಗಾಯಿತು ಹೇಳು ನೋಡೋಣ?"

ಡಾಕ್ಟರ್: "ಇನ್ನುಮೇಲೆ ನೀವು ಎಚ್ಚರಿಕೆಯಿಂದ ಇರಬೇಕು."

ಶ್ರೀರಾಮಕೃಷ್ಣರು ಕೈ ಮುಗಿದುಕೊಂಡು: "ನಾನೇನು ಮಾಡಲಿ?

'ಆ ಅವಸ್ಥೆ ಬಂತು ಎಂದರೆ ಬಾಹ್ಯಜ್ಞಾನಶೂನ್ಯನಾಗಿಬಿಡುತ್ತೇನೆ. ಆಗ ನಾನು ಏನೇನು ಮಾಡುತ್ತೇನೊ ಅದೊಂದೂ ನನಗೆ ಗೊತ್ತಾಗೋದಿಲ್ಲ.''

ಡಾಕ್ಟರ್: ''ಎಚ್ಚರಿಕೆಯಿಂದಿರಬೇಕು. ಈಗ ನೀವು ಸುಮ್ಮನೆ ಕೈ ಮುಗಿದುಕೊಂಡುಬಿಟ್ಟರೆ?''

ಶ್ರೀರಾಮಕೃಷ್ಣರು: ''ಆಗ ನನ್ನ ಮನಸ್ಸು ನನ್ನ ಸ್ವಾಧೀನದಲ್ಲಿ ಇರುತ್ತದೆಯೇನು? ನನ್ನ ಆ ಅವಸ್ಥೆಯ ಸಂಬಂಧವಾಗಿ ನಿನ್ನ ಅಭಿಪ್ರಾಯ ವೇನು? ಅದು ಕೇವಲ ನಟನೆ ಅಂತ ನೀನು ಭಾವಿಸೋದಾದರೆ, ನೀನು ಸೈನ್ಸ್-ಗೀನ್ಸ್ ಓದಿರೋದೆಲ್ಲ ಕೇವಲ ವ್ಯರ್ಥ ಅಂತ ಹೇಳಬೇಕಾಗುತ್ತದೆ.''

ಡಾಕ್ಟರ್: ''ಮಹಾಶಯರೆ, ಇದೆಲ್ಲ ಕೇವಲ ಬೂಟಾಟಿಕೆ ಅಂತ ಭಾವಿಸಿದ್ದರೆ, ನಾನು ಇಲ್ಲಿಗೆ ಇಷ್ಟೊಂದು ಸಲ ಬರುತ್ತಿದ್ದೆನೇನು? ನಿಮಗೇ ಗೊತ್ತಿದೆ ನಾನು ಅನೇಕ ಕೆಲಸಕಾರ್ಯಗಳನ್ನು ಬಿಟ್ಟುಬಿಟ್ಟು ಇಲ್ಲಿಗೆ ಬರುತ್ತಿದೇನೆ ಎಂಬುದು. ಅನೇಕ ರೋಗಿಗಳ ಮನೆಗೆ ಹೋಗಲು ಸಮಯ ಸಿಕ್ಕುತ್ತಿಲ್ಲ. ಇಲ್ಲಿಗೆ ಬಂದೆನೆಂದರೆ ಆರೇಳು ಘಂಟೆಗಳ ಕಾಲವನ್ನು ಇಲ್ಲೇ ಕಳೆದುಬಿಡುತ್ತಾ ಇದೇನೆ.''

ಶ್ರೀರಾಮಕೃಷ್ಣರು: ''ಒಮ್ಮೆ ನಾನು ಮಥುರಬಾಬುವಿಗೆ ಹೇಳಿದೆ: 'ದೊಡ್ಡ ಮನುಷ್ಯನಾದ ನೀನು ನನ್ನನ್ನು ಗೌರವಿಸುತ್ತಿರೋದರಿಂದ ನಾನು ಕೃತಾರ್ಥನಾಗಿ ಹೋಗಿಬಿಟ್ಟದೇನೆ ಎಂದು ನೀನು ಎಂದಿಗೂ ಭಾವಿಸ ಕೂಡದು. ನೀನು ನನ್ನನ್ನು ಗೌರವಿಸಿದರೂ ಒಂದೇ, ಇಲ್ಲದಿದ್ದರೂ ಒಂದೇ.' ಆದರೆ ಒಂದು ವಿಷಯ. ಮನುಷ್ಯನ ಕೈಯಲ್ಲಿ ಏನು ತಾನೆ ಸಾಧ್ಯ. ಭಗವಂತನೇ ಹಾಗೆ ಮಾಡಿಸುತ್ತಾನೆ. ಭಗವಂತನ ಶಕ್ತಿಯ ಎದುರು ಮನುಷ್ಯ ಕೇವಲ ಹುಲ್ಲು ಕಡ್ಡಿ.''

ಡಾಕ್ಟರ್: ''ಕೆಲವು ಮಂದಿ ಬೆಸ್ತರು (ಮಥುರಬಾಬು ಮೊದ ಲಾದವರು) ನಿಮ್ಮನ್ನು ಗೌರವಿಸುತ್ತಿದಾರೆ ಅಂತ ನಾನು ನಿಮ್ಮನ್ನು ಗೌರವಿಸುತ್ತಿದೇನೆ ಅಂತ ನೀವು ಭಾವಿಸುತ್ತಿರುವಿರೇನು? . . . ನಾನು ನಿಮಗೆ ಗೌರವ ತೋರಿಸುತ್ತಿರುವುದೇನೊ ನಿಜ; ಮನುಷ್ಯನಿಗೆ ಗೌರವ ತೋರಿಸಬೇಕಾದ ರೀತಿಯಲ್ಲಿ ನಿಮಗೆ ಗೌರವ ತೋರಿಸುತ್ತಿದೇನೆ.''

ಶ್ರೀರಾಮಕೃಷ್ಣರು: ''ನನಗೆ ಗೌರವ ತೋರಿಸು ಅಂತ ನಾನು ನಿನಗೆ ಒತ್ತಾಯ ಪಡಿಸುತ್ತಿರುವೆನೇನು?''

ಗಿರೀಶಘೋಷ: "ತಮಗೆ ಗೌರವ ತೋರಿಸಬೇಕೆಂದು ಅವರು ನಿಮ್ಮನ್ನು ಬಲಾತ್ಕರಿಸುತ್ತಿರುವರೇನು?"

ಶ್ರೀರಾಮಕೃಷ್ಣರಿಗೆ ಡಾಕ್ಟರ್: "ಏನು ಹೇಳುತ್ತಾ ಇದೀರಿ ನೀವು? ಇದು ಭಗವಂತನ ಇಚ್ಛೆ ಅಂತ ನೀವು ಹೇಳುವಿರೇನು?"

ಶ್ರೀರಾಮಕೃಷ್ಣರು: "ಅದಲ್ಲದೆ ಮತ್ತೆ ಇನ್ನೇನು? ಭಗವಂತನ ಇಚ್ಛೆಗೆ ಎದುರಾಗಿ ಮನುಷ್ಯ ಏನನ್ನು ತಾನೆ ಮಾಡಬಲ್ಲ? ಕುರುಕ್ಷೇತ್ರದ ಯುದ್ಧರಂಗದಲ್ಲಿ ಅರ್ಜುನ ಶ್ರೀಕೃಷ್ಣನಿಗೆ ಹೇಳಿದ: 'ನಾನು ಯುದ್ಧ ಮಾಡಲಾರೆ. ಜ್ಞಾತಿಗಳನ್ನು ಕೊಂದುಹಾಕಲಾರೆ.' ಆಗ ಶ್ರೀಕೃಷ್ಣ ಹೇಳಿದ: 'ಅರ್ಜುನಾ, ನೀನು ಯುದ್ಧವನ್ನು ಮಾಡೇ ತೀರಬೇಕು. ನಿನ್ನ ಸ್ವಭಾವವೇ ನಿನ್ನ ಕೈಯಲ್ಲಿ ಯುದ್ಧವನ್ನು ಮಾಡಿಸಿಬಿಡುತ್ತದೆ.' ಬಳಿಕ ಶ್ರೀಕೃಷ್ಣ ಅರ್ಜುನನಿಗೆ ಅಪೌರುಷೇಯವಾಗಿ ತೋರಿಸಿದ, ರಣರಂಗದಲ್ಲಿರೋರೆಲ್ಲ ಆಗಲೇ ಸತ್ತುಹೋಗಿಬಿಟ್ಟಿದಾರೆ ಎಂಬುದನ್ನು.

"ಒಮ್ಮೆ ಸಿಕ್ ಪಂಥದ ಕೆಲವು ಮಂದಿ ಅನುಯಾಯಿಗಳು ಕಾಳಿಯ ದರ್ಶನಕ್ಕಾಗಿ ಬಂದಿದ್ದರು. ಅವರ ದೃಷ್ಟಿಯ ಪ್ರಕಾರ, ನೋಡು ಅಶ್ವತ್ಥದ ಎಲೆಗಳು ಅಳ್ಳಾಡುತ್ತವೆಯಲ್ಲ ಅದೂ ಭಗವಂತನ ಇಚ್ಛೆಯಂತೆ ಅಂತ. ಆತನ ಇಚ್ಛೆಯಿಲ್ಲದೆ ಒಂದು ಎಲೆಯೂ ಅಳ್ಳಾಡಲಾರದು."

ಡಾಕ್ಟರ್: "ಎಲ್ಲವೂ ಭಗವಂತನ ಇಚ್ಛೆಗನುಸಾರವಾಗಿ ನಡೆಯುತ್ತಿರುವುದಾದರೆ, ನೀವು ಗಳಹುತ್ತಿರುವುದೇಕೆ? ಜನರಲ್ಲಿ ಜ್ಞಾನೋದಯವನ್ನುಂಟುಮಾಡಲು ನೀವು ಇಷ್ಟೊಂದೇಕೆ ಮಾತುಕತೆಯಾಡುತ್ತಾ ಇದೀರಿ?"

ಶ್ರೀರಾಮಕೃಷ್ಣರು: "ಆತ ಮಾತಾಡಿಸುತ್ತಾ ಇದಾನೆ, ಅದಕ್ಕಾಗಿ ಮಾತಾಡುತ್ತಾ ಇದೇನೆ. 'ನಾನು ಯಂತ್ರ, ಆತ ಯಂತ್ರಿ.'"

ಡಾಕ್ಟರ್: "ನೀವು ಆತನ ಯಂತ್ರ ಅಂತ ಹೇಳುತ್ತಿದೀರಿ. ಹಾಗೆ ಹೇಳುವುದೇನೊ ಸರಿ. ಹಾಗೆ ಮಾಡಲಾಗದಿದ್ದರೆ ಎಲ್ಲವೂ ಭಗವಂತನೇ ಎಂದು ಸದ್ದಿಲ್ಲದೆ ಇದ್ದುಬಿಡಿ."

ಡಾಕ್ಟರಿಗೆ ಗಿರೀಶ: "ಮಹಾಶಯರೆ, ನಿಮಗಿಚ್ಛೆಯಿದ್ದಂತೆ ನೀವು ಭಾವಿಸಬಹುದು, ಆದರೆ ಸತ್ಯವೇನೆಂದರೆ, ಆತ ನಮ್ಮ ಕೈಯಿಂದ ಮಾಡಿ

ಸುತ್ತಾ ಇರೋದರಿಂದ ನಾವು ಮಾಡುತ್ತಾ ಇದೇವೆ. ಆತನ ಇಚ್ಛೆಯಿಲ್ಲದೆ ನಾವು ಒಂದು ಹೆಜ್ಜೆಯನ್ನಾದರೂ ಮುಂದಕ್ಕೆ ಇಡಲಾಗುವುದೇನು ?''

ಡಾಕ್ಟರ್ : ''ಸ್ವತಂತ್ರ-ಇಚ್ಛೆ ಎಂಬುದನ್ನು ಆತ ಕೊಟ್ಟಿದಾನೆ ತಾನೆ. ಇಚ್ಛೆಬಂದರೆ ಆತನ ಚಿಂತನೆ ಮಾಡಬಲ್ಲೆ, ಇಲ್ಲದಿದ್ದರೆ ಸುಮ್ಮನೆ ಇರಬಲ್ಲೆ.''

ಗಿರೀಶ : ''ಭಗವಂತನ ಚಿಂತನೆಯೇ ಆಗಲಿ ಅಥವಾ ಬೇರೆ ಯಾವ ಸತ್ಕಾರ್ಯವೇ ಆಗಲಿ ನಿಮಗೆ ರುಚಿಸೋದರಿಂದ ಅವನ್ನು ನೀವು ಮಾಡುತ್ತೀರಿ. ಆದ್ದರಿಂದ ಅವನ್ನು ಮಾಡೋರು ನೀವಲ್ಲ, ರುಚಿಸುತ್ತದಲ್ಲ ಅದು ನಿಮ್ಮ ಕೈಯಿಂದ ಮಾಡಿಸುತ್ತದೆ.''

ಡಾಕ್ಟರ್ : ''ಅದು ಹೇಗೆ? ನನ್ನ ಕರ್ತವ್ಯ ಅಂತ ಅವನ್ನು ಮಾಡುತ್ತೇನೆ.''

ಗಿರೀಶ: ''ಆದರೂ, ಅವು ರುಚಿಸುತ್ತಿರೋದರಿಂದ ನೀವು ಅವನ್ನು ಮಾಡುತ್ತಿರುವಿರಿ.''

ಡಾಕ್ಟರ್: ''ಭಾವಿಸಿಕೊ, ಉರಿಗೆ ಬಿದ್ದು ಒಂದು ಮಗು ಬೆಂದು ಹೋಗಿಬಿಡುತ್ತಾ ಇದೆ ಅಂತ. ಕರ್ತವ್ಯ ದೃಷ್ಟಿಯಿಂದ ಅದನ್ನು ರಕ್ಷಿಸಲು ಮುನ್ನುಗ್ಗುವೆನು.''

ಗಿರೀಶ: ''ಆ ಮಗುವನ್ನು ರಕ್ಷಿಸೋದರಿಂದ ನಿಮಗೆ ಆನಂದ ದೊರೆಯುತ್ತದೆ; ಅದಕ್ಕಾಗಿ ಉರಿಯುಕಡೆಗೆ ನುಗ್ಗುವಿರಿ. ಆ ಆನಂದ ನಿಮ್ಮನ್ನು ಆ ಕಡೆಗೆ ಎಳೆದುಕೊಂಡುಹೋಗಿಬಿಡುತ್ತದೆ. ಇದು, ಕೂಡಲೆ ದೊರೆಯೋ ಚೌಚೌಗಾಗಿ ಲೋಭಪಟ್ಟು ಮೊದಲು ಅಫೀಮನ್ನು ನುಂಗಿದ ಹಾಗೆ.'' (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು : ''ಮನುಷ್ಯ ಕೆಲಸಕ್ಕೆ ಕೈ ಹಚ್ಚಬೇಕಾದರೆ ಮೊದಲು ಅದರಲ್ಲಿ ಒಂದು ವಿಧವಾದ ವಿಶ್ವಾಸವಿರಬೇಕು. ಜೊತೆಗೆ ಅದರ ಯೋಚನೆ ಬಂದಾಗಲೆಲ್ಲ ಆತನಿಗೆ ಆನಂದವಾಗುತ್ತದೆ. ಆಗ ಮಾತ್ರವೇ ಆತ ಕಾರ್ಯಕ್ಕೆ ಕೈಹಚ್ಚುತ್ತಾನೆ. ಮೊದಲು, ನೆಲದಲ್ಲಿ ಒಂದು ಗಡಿಗೆ ಮೊಹರನ್ನು ಹೂತಿಟ್ಟಿದೆ ಎಂಬ ಅರಿವು, ವಿಶ್ವಾಸ ಉಂಟಾಗಬೇಕು. ಆ ಗಡಿಗೆಯ ಯೋಚನೆ ಬಂದಾಗಲೆಲ್ಲ ಆನಂದವಾಗುತ್ತದೆ. ಬಳಿಕ ಆತ ಅಗೆಯಲು ಶುರುಮಾಡುತ್ತಾನೆ. ಅಗೆಯುತ್ತ ಅಗೆಯುತ್ತ ಇದ್ದ ಹಾಗೆ 'ಠಂ' ಅಂತ ಶಬ್ದ ಕೇಳಿತು ಅಂದರೆ ಆತನ ಆನಂದ ಬೆಳೆಯು

ಲಾರಂಭಿಸುತ್ತದೆ. ಆ ಗಡಿಗೆಯು ಅಂಚು ಏನಾದರು ಕಂಡುಬಂತು ಅಂದರೆ ಆನಂದ ಇನ್ನೂ ಅಧಿಕವಾಗುತ್ತದೆ. ಈ ರೀತಿಯಾಗಿ ಆತ ಆ ಕಾರ್ಯದಲ್ಲಿ ಮುಂದುವರಿದಂತೆಲ್ಲ ಆತನ ಆನಂದ ಅಧಿಕಾಧಿಕವಾಗುತ್ತಾ ಹೋಗುತ್ತದೆ. ಸಾಧುಗಳು ಬಂಗಿ ಚಿಲುಮೆಗಳನ್ನು ತಯಾರುಮಾಡೋದನ್ನು ಕಾಳೀದೇವಾಲಯದ ವರಾಂಡದಲ್ಲಿ ನಿಂತು ನಾನು ಅನೇಕ ವೇಳೆ ನೋಡಿದೇನೆ. ಚಿಲುಮೆಯನ್ನು ಸಿದ್ಧಮಾಡಿಕೊಳ್ಳುತ್ತ ಕೊಳ್ಳುತ್ತ ಇರುವಾಗಲೇ ಅವರ ಮುಖದಿಂದ ಆನಂದ ಹೊರಸೂಸಲಾರಂಭಿಸುತ್ತದೆ."

ಡಾಕ್ಟರ್: "ಉದಾಹರಣೆಗೆ ಬೆಂಕಿಯನ್ನು ತೆಗೆದುಕೊಳ್ಳಿ. ಅದು ಕಾವನ್ನೂ ಕೊಡುತ್ತದೆ, ಬೆಳಕನ್ನೂ ಕೊಡುತ್ತದೆ. ಬೆಳಕಿನಿಂದಲೇನೊ ವಸ್ತುಗಳನ್ನು ನೋಡಬಹುದು, ಆದರೆ ಕಾವು ಶರೀರವನ್ನು ಸುಟ್ಟುಬಿಡುತ್ತದೆ. ಅದೇ ರೀತಿಯಾಗಿ ಕರ್ತವ್ಯ ಕರ್ಮಗಳನ್ನು ಮಾಡಲು ಹೋದೆವು ಎಂದರೆ, ಕೇವಲ ಆನಂದವೇ ದೊರೆಯುತ್ತದೆ ಅಂತಲೇನಲ್ಲ, ಕಷ್ಟವನ್ನೂ ಅನುಭವಿಸಬೇಕಾಗುತ್ತದೆ."

ಗಿರೀಶನಿಗೆ ಮಾಸ್ಟರ್: "ಒಂದು ನಾಣ್ಣುಡಿ ಹೇಳುತ್ತದೆ, 'ಹೊಟ್ಟೆಗೆ ಅನ್ನ ದೊರೆಯೋಹಾಗಿದ್ದರೆ, ಬೆನ್ನು ಒಂದೆರಡು ಏಟು ತಿನ್ನಲೂ ಸಿದ್ಧವಾಗಿರುತ್ತದೆ' ಎಂದು. ಕಷ್ಟದಲ್ಲೂ ಆನಂದವಿದೆ."

ಡಾಕ್ಟರಿಗೆ ಗಿರೀಶ: "ಕರ್ತವ್ಯ ಕರ್ಮ ಶುಷ್ಕವಾದ್ದು."

ಡಾಕ್ಟರ್: "ಏಕೆ ಹಾಗೆ?"

ಗಿರೀಶ: "ಹಾಗಾದರೆ ರಸವತ್ತಾದ್ದು." (ಎಲ್ಲರೂ ನಗುತ್ತಿದಾರೆ.)

ಮಾಸ್ಟರ್: "ಭೇಷ್! ಈಗ, 'ಕೂಡಲೆ ದೊರೆಯೋ ಚೌಚೌಗಾಗಿ ಲೋಭಪಟ್ಟು ಮನುಷ್ಯ ಮೊದಲು ಅಫೀಮನ್ನು ನುಂಗುತ್ತಾನೆ' ಎಂಬ ನಾಣ್ಣುಡಿಯನ್ನು ದೃಢೀಕರಿಸಿದ ಹಾಗಾಯಿತು."

ಡಾಕ್ಟರಿಗೆ ಗಿರೀಶ: "ರಸವತ್ತಾದ್ದೆ; ಇಲ್ಲದಿದ್ದರೆ ಕರ್ತವ್ಯ ಕರ್ಮಗಳನ್ನು ನೀವು ಏಕೆ ಮಾಡಲು ಹೋಗುವಿರಿ?"

ಡಾಕ್ಟರ್: "ಮನಸ್ಸಿನ ಪ್ರವೃತ್ತಿ ಆ ಕಡೆಗೆ."

ಗಿರೀಶನಿಗೆ ಮಾಸ್ಟರ್: "ಪ್ರವೃತ್ತಿ ಎಂಬ ಕೆಟ್ಟ ವಸ್ತು ಮನಸ್ಸನ್ನು ಆ ಕಡೆಗೆ ಎಳೆಯುತ್ತದೆ. ಪ್ರವೃತ್ತಿ ಎಂಬುದು ಅಷ್ಟು ಬಲಯುತವಾದುದೇ ಆಗಿದ್ದರೆ ಇನ್ನು ಸ್ವತಂತ್ರ-ಇಚ್ಛೆ ಎಂಬುದಕ್ಕೆ ಸ್ಥಳವೆಲ್ಲಿ?"

ಡಾಕ್ಟರ್: "ಇಚ್ಛೆ ಸಂಪೂರ್ಣ ಸ್ವತಂತ್ರವಾದ್ದು ಅಂತಲೇನು

ನಾನು ಹೇಳುತ್ತಿಲ್ಲವಲ್ಲ. ಉದಾಹರಣೆಗೆ, ಹಸುವನ್ನು ಹಗ್ಗದಿಂದ ಕಟ್ಟಿ ಹಾಕಿದೆ ಅಂತ ಇಟ್ಟುಕೊಳ್ಳಿ. ಆ ಹಗ್ಗದ ಉದ್ದವಷ್ಟು ಜಾಗದೊಳಗೆ ಅದು ಸ್ವತಂತ್ರವಾಗಿ ಇರಬಲ್ಲದು. ಅದು ಆ ಹಗ್ಗದ ಮಿತಿಯಿಂದಾಚೆಗೆ ಹೋಗಬೇಕೆಂದರೆ — ''

ಶ್ರೀರಾಮಕೃಷ್ಣರು: ''ಯದುಮಲ್ಲಿಕನೂ ಈ ಉದಾಹರಣೆಯನ್ನು ಕೊಟ್ಟ. (ಚಿಕ್ಕ ನರೇನನಿಗೆ) ಇದು ಯಾವುದಾದರು ಒಂದು ಇಂಗ್ಲಿಷು ಪುಸ್ತಕದಲ್ಲಿದೆಯೇನು ?

(ಡಾಕ್ಟರಿಗೆ) ''ನೋಡು, ಯಾರಿಗೆ ಆಗಲಿ ಭಗವಂತನೇ ಎಲ್ಲ ವನ್ನೂ ಮಾಡುತ್ತಾನೆ; ತಾನು ಯಂತ್ರ, ಆತ ಯಂತ್ರಿ ಎಂಬ ದೃಢ ವಿಶ್ವಾಸವಿರೋದಾದರೆ, ಆತ ಆಗಲೇ ಜೀವನ್ಮುಕ್ತ. 'ಹೇ ಭಗವಂತ, ನಿನ್ನ ಕಾರ್ಯವನ್ನು ನೀನು ಮಾಡಿಕೊಂಡು ಹೋಗುತ್ತಿದೀಯೆ; ಜನ ಭಾವಿಸಿಕೋತಾರೆ ತಾವು ಮಾಡುತ್ತಿದೇವೆ ಅಂತ.' ಇದು ಹೇಗೆ ಗೊತ್ತೆ? ವೇದಾಂತದಲ್ಲಿ ಇದಕ್ಕೆ ಒಂದು ಉದಾಹರಣೆ ಇದೆ. ಒಲೆ ಮೇಲೆ ಅನ್ನದ ಪಾತ್ರೆ ಇಟ್ಟು, ಅದಕ್ಕೇನೆ ಬೇಯಲು ಉರುಳುಗಡ್ಡೆ, ಬದನೆ ಕಾಯಿ ಇವನ್ನು ಹಾಕಿದೆ ಅಂತ ಇಟ್ಟುಕೊ. ಉರಿ ಹಾಕಿದ ಸ್ವಲ್ಪ ಹೊತ್ತಿನ ಮೇಲೆ ಅಕ್ಕಿ, ಉರುಳುಗಡ್ಡೆ, ಬದನೆ ಕಾಯಿ ಇವೆಲ್ಲ ನೀರಿನಲ್ಲಿ ಕುಣಿ ದಾಡಲು ಆರಂಭಿಸುತ್ತವೆ. ತೋರುತ್ತದೆ, ಅವು ಒಂದು ವಿಧವಾದ ಅಭಿಮಾನದಿಂದ, 'ನಾವು ಕುಣಿಯುತ್ತಿದೇವೆ! ನಾವು ಚಲಿಸುತ್ತಿದೇವೆ!' ಅಂತ ಹೇಳುತ್ತಿರುವುವೊ ಏನೊ ಎಂಬಂತೆ. ಚಿಕ್ಕ ಮಕ್ಕಳು ಅದನ್ನು ನೋಡಿ ಭಾವಿಸುತ್ತವೆ, ಆಲೂಗಡ್ಡೆ, ಬದನೆ ಕಾಯಿ ಇವೆಲ್ಲ ಜೀವಂತ ವಾಗಿರೋದರಿಂದ ಅವು ಕುಣಿದಾಡುತ್ತಿವೆ ಅಂತ. ಆದರೆ ದೊಡ್ಡವರು ಅವರಿಗೆ ತಿಳಿಸಿಕೊಡುತ್ತಾರೆ, ಅವು ಜೀವಂತವಾದುವುಗಳಲ್ಲ; ಅವು ತಾವಾಗೇ ಚಲಿಸುತ್ತಿಲ್ಲ, ಪಾತ್ರೆ ಕೆಳಗಿರೋ ಉರಿಯ ದೆಸೆಯಿಂದ ಹಾಗೆ ಮಾಡುತ್ತಿವೆ; ಉರಿ ತೆಗೆದುಹಾಕಿಬಿಟ್ಟದ್ದೇ ಆದರೆ, ಅವುಗಳ ಚಲನೆ- ಗಿಲನೆ ಯೆಲ್ಲ ನಿಂತುಹೋಗುತ್ತದೆ ಎಂಬುದಾಗಿ. ಮನುಷ್ಯನ 'ನಾನು ಕರ್ತ' ಎಂಬ ಅಭಿಮಾನ ಅಜ್ಞಾನಜನ್ಯವಾದ್ದು. ಭಗವಂತನ ಶಕ್ತಿಯಿಂದ ಎಲ್ಲರೂ ಶಕ್ತಿಯುತರಾಗಿ ತೋರುತ್ತಿದಾರೆ. ಉರಿ ತೆಗೆದುಹಾಕಿತು ಎಂದರೆ, ಎಲ್ಲವೂ ಶಾಂತವಾಗಿಬಿಡುತ್ತದೆ. ತಂತಿ ಹಿಡಿದು ಎಳೆಯುತ್ತಿದ್ದರೆ ಆಟದ ಗೊಂಬೆಗಳು ನರ್ತಿಸಲು ಆರಂಭಿಸುತ್ತವೆ. ಮಧ್ಯೆ ತಂತಿಯೇನಾದರು

ಕಿತ್ತುಹೋಯಿತು ಎಂದರೆ, ಅವು ತೆಪ್ಪಗಾಗುತ್ತವೆ— ನರ್ತನೆ-ಗಿರ್ತನೆ ಎಲ್ಲ ನಿಂತುಹೋಗುತ್ತದೆ.

"ಭಗವಂತನ ದರ್ಶನ ದೊರೆಯುದವರೆಗೆ, ಸ್ಪರ್ಶಮಣಿಯನ್ನು ಮುಟ್ಟದವರೆಗೆ, 'ನಾನು ಕರ್ತ' ಎಂಬ ಭ್ರಾಂತಿ ಮನುಷ್ಯನ ಮೇಲೆ ಕವಿದು ಕೊಂಡಿರುತ್ತದೆ. 'ಸತ್ಕಾರ್ಯವನ್ನು ಮಾಡಿದೇನೆ; ಅಸತ್ಕಾರ್ಯವನ್ನು ಮಾಡಿದೇನೆ' ಎಂಬ ಭೇದ ಬೋಧೆ ಆತನಿಗೆ ಅಲ್ಲಿಯುವರೆಗೆ ಇದ್ದೇ ಇರುತ್ತದೆ. ಈ ಭೇದ ಬೋಧೆ ಭಗವಂತನ ಮಾಯಾ ರಾಜ್ಯಕ್ಕೆ ಸೇರಿದ್ದೆ—ಆತನ ಮಾಯಾ ಸಂಸಾರ ಮುಂದುವರಿಯಲು ಆತ ಮಾಡಿರೋ ವ್ಯವಸ್ಥೆ. ವಿದ್ಯಾಮಾಯೆಯನ್ನು ಆಶ್ರಯಿಸಿದರೆ, ಸನ್ಮಾರ್ಗವನ್ನು ಹಿಡಿದರೆ ಆತನ ಸಾಕ್ಷಾತ್ಕಾರವನ್ನು ಪಡೆಯಬಹುದು. ಯಾರು ಆತನ ಸಾಕ್ಷಾತ್ಕಾರವನ್ನು ಪಡೆಯುತ್ತಾನೊ, ಯಾರು ಆತನ ದರ್ಶನ ಪಡೆಯುತ್ತಾನೊ ಆತ ಮಾಯಾ ರಾಜ್ಯವನ್ನು ಮೀರಿಹೋಗಬಲ್ಲ. ಆತನೇ ಏಕಮಾತ್ರ ಕರ್ತ, ತಾನು ಅಕರ್ತ ಎಂಬ ದೃಢ ವಿಶ್ವಾಸ ಯಾರಿಗುಂಟಾಗಿದೆಯೊ ಆತನೇ ಜೀವನ್ಮುಕ್ತ. ಒಮ್ಮೆ ಹೀಗೆಂದು ಕೇಶವಸೇನನಿಗೆ ತಿಳಿಸಿದ್ದೆ."

ಡಾಕ್ಟರಿಗೆ ಗಿರೀಶ: "ಸ್ವತಂತ್ರ-ಇಚ್ಛೆ ಎಂಬುದು ಇದೆ ಅಂತ ನಿಮಗೆ ಹೇಗೆ ಗೊತ್ತು?"

ಡಾಕ್ಟರ್: "ವಿಚಾರದ ಮೂಲಕ ಅಲ್ಲ; ಸುಮ್ಮನೆ ಅನಿಸುತ್ತಿದೆ ಇದೆ ಅಂತ."

ಗಿರೀಶ: "ಹಾಗಾದರೆ, ನನಗೆ ಮತ್ತೆ ಉಳಿದವರಿಗೆ ಬೇರೆ ವಿಧವಾಗಿ ಅನಿಸುತ್ತಿದೆ. ನಾವು ಪರತಂತ್ರರು ಅಂತ ನಮಗೆ ಬೋಧೆಯಾಗುತ್ತಿದೆ." (ಎಲ್ಲರೂ ನಗುತ್ತಿದಾರೆ.)

ಡಾಕ್ಟರ್: "ಕರ್ತವ್ಯ ಕರ್ಮದಲ್ಲಿ ಎರಡು ಮೂಲಾಂಶಗಳಿವೆ: ಮೊದಲನೆಯದು, ಕರ್ತವ್ಯ ಬದ್ಧತೆ; ಎರಡನೆಯದು, ಬಳಿಕ ದೊರೆಯೋ ಆನಂದ. ಪ್ರಾರಂಭದಲ್ಲಿ ಆನಂದ ದೊರೆಯುತ್ತದೆ ಅಂತ ಹೇಳಲಾಗೋದಿಲ್ಲ. ನಾನು ಚಿಕ್ಕವನಾಗಿದ್ದಾಗ ಅನೇಕವೇಳೆ ನೋಡಿದೇನೆ, ನೈವೇದ್ಯಕ್ಕೆ ಇಟ್ಟರೋ ಸಂದೇಶಕ್ಕೆ (ಸಿಹಿ ತಿಂಡಿಗೆ) ಇರುವೆ ಬಂದು ಮುತ್ತಿಕೊಂಡಿತೆಂದರೆ ಅರ್ಚಕನ ಮುಖ ಹೇಗಾಗುತ್ತಿತ್ತು ಎಂಬುದನ್ನು. ಪ್ರಾರಂಭದಲ್ಲೇ ಸಂದೇಶದ ಭಾವನೆ ಆತನಿಗೆ ಆನಂದವನ್ನು ತರಲಿಲ್ಲ. ಅದಕ್ಕೆ ಬದಲು ಆತನಿಗೆ ಬಂದದ್ದು ಅವುಗಳ ರಕ್ಷಣೆಯ ಮಹಾ ಚಿಂತನೆ."

ಮಾಸ್ಟರ್ ತನಗೆ ತಾನೆ: "ಕೆಲಸದ ಸಮಯದಲ್ಲಿ ಆನಂದ ಉಂಟಾಗುತ್ತೊ ಅಥವಾ ಆಮೇಲೆ ಉಂಟಾಗುತ್ತೊ ಎಂಬುದನ್ನು ಒಂದು ನಿರ್ದಿಷ್ಟ ರೀತಿಯಲ್ಲಿ ಹೇಳಲಾಗೋದಿಲ್ಲ. ಆನಂದಕ್ಕಾಗಿ ಕಾರ್ಯದಲ್ಲಿ ಕೈ ಹಚ್ಚುವುದು ನಿಜವಾದರೆ, ಆಗ 'ಸ್ವತಂತ್ರ-ಇಚ್ಛೆ' ಎಂಬುದಕ್ಕೆ ಸ್ಥಳವೆಲ್ಲಿ?"

ಶ್ರೀರಾಮಕೃಷ್ಣರು: "ಡಾಕ್ಟರ್ ಹೇಳುತ್ತಿರುವುದಕ್ಕೆ 'ಅಹೇತುಕ ಭಕ್ತಿ' ಅಂತ ಹೆಸರು. ಡಾಕ್ಟರ್ ಮಹೇಂದ್ರಸರ್ಕಾರನಿಂದ ನನಗೆ ಏನೂ ಬೇಕಾಗಿಲ್ಲ; ಯಾವ ಉಪಕಾರವೂ ಆಗಬೇಕಾಗಿಲ್ಲ, ಆದರೂ ನಾನು ಆತನನ್ನು ಪ್ರೀತಿಸುತ್ತೇನೆ. ಇದಕ್ಕೇ 'ಅಹೇತುಕ ಭಕ್ತಿ' ಅಂತ ಹೆಸರು. ಇದರಿಂದ ಒಂದು ಕಿಂಚಿತ್ ಆನಂದ ದೊರೆಯೋದಾದರೆ, ಅದಕ್ಕೇನು ಮಾಡಬೇಕು ಅಂತ?

"ಒಮ್ಮೆ ಅಹಲ್ಯೆ ರಾಮನಿಗೆ ಹೇಳಿದಳು: 'ಹೇ ರಾಮ, ನಾನು ಹಂದಿಯ ಹೊಟ್ಟೆಯಲ್ಲಿ ಹುಟ್ಟಬೇಕಾಗಿ ಬಂದರೂ, ಅದಕ್ಕೆ ನನ್ನ ಯಾವ ಆಕ್ಷೇಪಣೆಯೂ ಇಲ್ಲ. ಆದರೆ ವರ ಕರುಣಿಸು ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಉಂಟಾಗುವಂತೆ ಮಾತ್ರ. ನನಗೆ ಇನ್ನು ಏನೂ ಬೇಕಾಗಿಲ್ಲ.'

"ರಾವಣನ ವಧೆಯಾಗಬೇಕಾಗಿರೋದನ್ನು ಶ್ರೀರಾಮಚಂದ್ರನ ಸ್ಮರಣೆಗೆ ತರಲೋಸುಗ ನಾರದ ಅಯೋಧ್ಯೆಗೆ ಹೋದ. ಅಲ್ಲಿ ಸೀತಾ ರಾಮರ ದರ್ಶನ ಪಡೆದು ಅವರನ್ನು ಸ್ತುತಿಸಲಾರಂಭಿಸಿದ. ಶ್ರೀರಾಮ ಚಂದ್ರ ಆತನ ಸ್ತುತಿಯನ್ನು ಕೇಳಿ ಸಂತುಷ್ಟನಾಗಿ ಹೇಳಿದ: 'ಓ ನಾರದ, ನಿನ್ನ ಸ್ತುತಿಯನ್ನು ಕೇಳಿ ನನಗೆ ಬಹಳ ಆನಂದವಾಗಿದೆ. ನನ್ನಿಂದ ನೀನು ಯಾವುದಾದರು ಒಂದು ವರ ಬೇಡಿಕೊ.' ನಾರದ ಹೇಳಿದ: 'ಹೇ ರಾಮ, ನೀನು ನನಗೆ ವರ ಕರುಣಿಸಬೇಕೆಂದಿದ್ದರೆ, ನನಗೆ ನಿನ್ನ ಪಾದಪದ್ಮಗಳಲ್ಲಿ ಶುದ್ಧ ಭಕ್ತಿ ಉಂಟಾಗುವಂತೆಯೂ ಮತ್ತು ನಾನು ನಿನ್ನ ಭುವನಮೋಹಿನಿ ಮಾಯೆಯಿಂದ ಮುಗ್ಧನಾಗದೆ ಇರುವಂತೆಯೂ ವರಪ್ರಸಾದ ಮಾಡು.' ಶ್ರೀರಾಮ ಹೇಳಿದ: 'ಇದೂ ಅಲ್ಲದೆ, ಇನ್ನು ಬೇರೆ ಯಾವ ವರವನ್ನಾದರು ಬೇಡಿಕೊ.' ನಾರದ ಹೇಳಿದ: 'ಇನ್ನು ಏನೂ ನನಗೆ ಬೇಕಾಗಿಲ್ಲ. ಕೇವಲ ನಿನ್ನ ಪಾದಪದ್ಮಗಳಲ್ಲಿ ಶುದ್ಧ ಭಕ್ತಿ ಉಂಟಾಗೋದೊಂದು ಮಾತ್ರ ಬೇಕು.'

"ಡಾಕ್ಟರ್ ಸರ್ಕಾರನ ಭಾವವೂ ಇದೇ ರೀತಿಯದು. ಇದು

ಕೇವಲ ಭಗವಂತನ ಸಾಕ್ಷಾತ್ಕಾರಕ್ಕಾಗಿ ವಿನಾ ಬೇರೆ ಯಾವುದಕ್ಕೂ—ಧನ, ಮಾನ, ದೇಹಸುಖ—ಪ್ರಾರ್ಥಿಸದ ಹಾಗೆ. ಇದಕ್ಕೇ 'ಶುದ್ಧ ಭಕ್ತಿ' ಅಂತ ಹೆಸರು.

"ಇದರಲ್ಲಿ ಕಿಂಚಿತ್ ಆನಂದ ದೊರೆಯುವುದೇನೊ ನಿಜ, ಆದರೆ ಅದು ವಿಷಯಾನಂದವಲ್ಲ: ಭಕ್ತಿಯ, ಪ್ರೇಮದ ಆನಂದ. ನಾನು ಆಗಾಗ ಶಂಭುಮಲ್ಲಿಕನ ಮನೆಗೆ ಹೋಗುತ್ತಿದ್ದುದುಂಟು. ಒಮ್ಮೆ ಆತ ನನಗೆ ಹೇಳಿದ: 'ನೀವು ಆಗಾಗ ಇಲ್ಲಿಗೆ ಬರುತ್ತಿದೀರಿ. ನನ್ನೊಡನೆ ಮಾತು ಕತೆಯಾಡೋದರಿಂದ ವಾಸ್ತವವಾಗಿ ನಿಮಗೆ ಆನಂದ ದೊರೆಯುತ್ತಿರಬೇಕು. ಅದಕ್ಕಾಗಿ ನೀವು ಇಲ್ಲಿಗೆ ಬರುತ್ತಾ ಇದೀರಿ.' ಹೌದು, ಇದರಲ್ಲಿ ಅದೊಂದಷ್ಟು ಆನಂದ ಇದೆ.

"ಆದರೆ ಇದಕ್ಕಿಂತಲೂ ಉಚ್ಚವಾದ ಬೇರೊಂದು ಅವಸ್ಥೆ ಇದೆ. ಆ ಅವಸ್ಥೆಯಲ್ಲಿ ಮನುಷ್ಯ ಮಗುವಿನ ಹಾಗೆ ದಿಕ್ಕು ದಿವಾಳಿ ಇಲ್ಲದೆ ತಿರುಗಾಡುತ್ತಾನೆ. ಮಗು ದಾರಿಯಲ್ಲಿ ಹೋಗುತ್ತ ಇದ್ದಕ್ಕಿದ್ದಹಾಗೆ ಚಿಟ್ಟೆ ಹಿಡಿಯೋ ಹಾಗೆ, ಆತನೂ ಯಾವ ಉದ್ದೇಶವೂ ಇಲ್ಲದೆ ಸುಮ್ಮನೆ ಸುತ್ತಾಡುತ್ತಿರುತ್ತಾನೆ.

(ಭಕ್ತರಿಗೆ) "ಡಾಕ್ಟರ ಆಂತರಿಕ ಭಾವ ಏನು ಎಂಬುದು ನಿಮಗೆ ಗೊತ್ತಾಯಿತೇನು? ಇದು ಭಕ್ತ ಭಗವಂತನನ್ನು, 'ಹೇ ಭಗವಂತ, ನನಗೆ ಸದಿಚ್ಛೆಯನ್ನು ಕೊಡು. ಅಸತ್ಕಾರ್ಯಗಳ ಕಡೆಗೆ ಬುದ್ಧಿ ಪ್ರೇರಿತವಾಗದ ಹಾಗೆ ಮಾಡು' ಎಂದು ಪ್ರಾರ್ಥಿಸಿದ ಹಾಗೆ.

"ನನಗೂ ಒಮ್ಮೆ ಈ ಅವಸ್ಥೆ ಬಂದಿತ್ತು. ಇದಕ್ಕೇ 'ದಾಸ್ಯ ಭಾವ' ಅಂತ ಹೆಸರು. ನಾನು, 'ತಾಯಿ! ತಾಯಿ!' ಅಂತ ಕೂಗುತ್ತ ಅಷ್ಟೊಂದು ಅಳುತ್ತಿದ್ದೆ, ಜನ ಗುಂಪುಗಟ್ಟಿ ನನ್ನ ಸುತ್ತಲೂ ನಿಲ್ಲುತ್ತಿದ್ದರು. ನನಗೆ ಈ ಅವಸ್ಥೆ ಬಂದನಂತರ, ಕೆಲವರು ನನ್ನನ್ನು ಪರೀಕ್ಷಿಸಲು ಮತ್ತು ನನ್ನ ಆ ಹುಚ್ಚನ್ನು ಇಳಿಸಲು ಒಬ್ಬ ವೇಶ್ಯೆಯನ್ನು ಕರೆದುಕೊಂಡು ಬಂದು ನನ್ನ ಕೊಠಡಿಗೆ ಬಿಟ್ಟರು. ಆಕೆ ಒಳ್ಳೆ ರೂಪವತಿ. ಕಣ್ಣು ಬಹಳ ಸುಂದರವಾಗಿದ್ದುವು. ನಾನು 'ತಾಯಿ! ತಾಯಿ!' ಎಂದು ಕೂಗುತ್ತ ಕೊಠಡಿಯಿಂದ ಹೊರಕ್ಕೆ ಓಡಿಬಂದೆ. ಬಳಿಕ ಹಲಧಾರಿಯನ್ನು ಕರೆದು ಹೇಳಿದೆ: 'ಬಾ, ನನ್ನ ಕೊಠಡಿಗೆ ಯಾರು ಬಂದಿದಾಳೆ ಎಂಬುದನ್ನು ನೋಡುವೆಯಂತೆ ಬಾ!' ಹಲಧಾರಿಗೆ ಮತ್ತೆಲ್ಲರಿಗೂ ಆಕೆ ಯಾರು ಎಂಬು

ದನ್ನು ತಿಳಿಸಿದೆ. ಈ ಅವಸ್ಥೆಯಲ್ಲಿ ಇದ್ದಾಗ, 'ತಾಯಿ! ತಾಯಿ!' ಅಂತ ಅಳುತ್ತಿದ್ದೆ. ಹಾಗೆ ಅಳುತ್ತ ಅಳುತ್ತ ಪ್ರಾರ್ಥನೆಮಾಡುತ್ತಿದ್ದೆ: 'ತಾಯೆ, ನನ್ನನ್ನು ರಕ್ಷಿಸು! ದಯವಿಟ್ಟು ನನ್ನನ್ನು ದೋಷರಹಿತನನ್ನಾಗಿ ಮಾಡು. ದಯವಿಟ್ಟು ನನ್ನ ಮನಸ್ಸು ಸತ್ಯವನ್ನು ಬಿಟ್ಟು ಅಸತ್ಯದ ಕಡೆ ಹೋಗದೆ ಇರೋ ಹಾಗೆ ಕೃಪೆಮಾಡು.' (ಡಾಕ್ಟರಿಗೆ) ನಿನ್ನ ಈ ಭಾವ ಬಹಳ ಒಳ್ಳೆಯದೆ. ಇದೇ ಭಕ್ತನ ಭಾವ, ದಾಸನ ಭಾವ.

"ಯಾರಲ್ಲೆ ಆಗಲಿ ಶುದ್ಧ ಸತ್ತ್ವ ಉಂಟಾಗುವುದೆ ಆದರೆ, ಆ ವ್ಯಕ್ತಿ ಕೇವಲ ಭಗವಚ್ಚಿಂತನೆಯನ್ನು ಮಾತ್ರ ಮಾಡುತ್ತಿರುತ್ತಾನೆ. ಆತನಿಗೆ ಬೇರೇನೂ ರುಚಿಸದು. ಕೆಲಕೆಲವರು ತಮ್ಮ ಪ್ರಾರಬ್ಧದ ದೆಸೆಯಿಂದ ಶುದ್ಧಸತ್ತ್ವಾನ್ವಿತರಾಗೇ ಜನ್ಮ ತಳೆಯುತ್ತಾರೆ. ಕಾಮನಾಶೂನ್ಯರಾಗಿ ಕರ್ಮಗಳನ್ನು ಮಾಡಲು ಪ್ರಯತ್ನಿಸಿದರೆ, ಕೊನೆಯಲ್ಲಿ ಶುದ್ಧ ಸತ್ತ್ವ ದೊರೆಯುತ್ತದೆ, ರಜೋಮಿಶ್ರಿತ ಸತ್ತ್ವಗುಣ ಮನಸ್ಸನ್ನು ವಿವಿಧ ವಸ್ತುಗಳ ಕಡೆಗೆ ತಿರುಗಿಸಿಬಿಡುತ್ತದೆ. ಜಗತ್ತಿಗೆ ಉಪಕಾರ ಮಾಡಬೇಕು ಎಂಬೀ ವಿಧದ ಅಹಂಕಾರ ಬಂದುಬಿಡುತ್ತದೆ. ಜಗತ್ತಿಗೆ ಉಪಕಾರವನ್ನು ಮನುಷ್ಯನಂಥ ಈ ಸಾಮಾನ್ಯ ಜೀವಿ ಮಾಡಿ ಜಯಶೀಲನಾಗೋದು ದುಸ್ಸಾಧ್ಯವಾದುದೆ. ಆದರೆ ಪರೋಪಕಾರಾರ್ಥವಾಗಿ ಕಾಮನಾಶೂನ್ಯನಾಗಿ ಕೆಲಸ ಮಾಡೋದಾದರೆ, ಅದು ಯಾವ ತೊಂದರೆಯನ್ನೂ ತರದು. ಅದಕ್ಕೇ 'ನಿಷ್ಕಾಮ ಕರ್ಮ' ಅಂತ ಹೆಸರು. ಈ ವಿಧದ ಕರ್ಮಗಳನ್ನು ಮಾಡಲು ಪ್ರಯತ್ನಿಸೋದು ಬಹಳ ಒಳ್ಳೆಯದು. ಆದರೆ ಇದು ಎಲ್ಲರ ಕೈಯಲ್ಲೂ ಸಾಗದ ಮಾತು; ಬಹಳ ಕಠಿನ. ಎಲ್ಲರೂ ಕೆಲಸವನ್ನು ಮಾಡಲೇ ಬೇಕು. ಎಲ್ಲೋ ಒಬ್ಬಿಬ್ಬರು ಮಾತ್ರ ಅದನ್ನು ತ್ಯಜಿಸಬಲ್ಲರು. ಎಲ್ಲೋ ಅಲ್ಲಿ ಇಲ್ಲಿ ಒಬ್ಬಿಬ್ಬರು ಶುದ್ಧಸತ್ತ್ವಾನ್ವಿತರಾಗಿರೋದನ್ನು ನೋಡಬಹುದು. ನಿಷ್ಕಾಮ ಕರ್ಮವನ್ನು ಮಾಡುತ್ತ ಮಾಡುತ್ತ, ರಜೋಮಿಶ್ರಿತ ಸತ್ತ್ವಗುಣ ಕ್ರಮೇಣ ಶುದ್ಧ ಸತ್ತ್ವವಾಗಿ ಪರಿಣಮಿಸಿಬಿಡುತ್ತದೆ.

"ಭಗವಂತನ ಕೃಪೆಯಿಂದ ಶುದ್ಧ ಸತ್ತ್ವ ಹೃದಯದಲ್ಲಿ ಅಂಕುರವಾಯಿತು ಅಂದರೆ, ಆತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ.

"'ಶುದ್ಧಸತ್ತ್ವ' ಎಂದರೆ ಏನು ಎಂಬುದು ಸಾಮಾನ್ಯರಿಗೆ ಅರ್ಥವಾಗೋದಿಲ್ಲ. ಹೇಮ ಒಮ್ಮೆ ನನಗೆ ಹೇಳಿದ: "ಏನು ಭಟ್ಟಾಚಾರ್ಯರೆ!

ಜಗತ್ತಿನಲ್ಲಿ ಕೀರ್ತಿ ಸಂಪಾದಿಸೋದೆ ಮಾನವ ಜನ್ಮದ ಏಕಮಾತ್ರ ಉದ್ದೇಶ, ಅಲ್ಲವೇನು ?''

೨೭ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ಚೌತಿ, ಮಂಗಳವಾರ.

ಪರಮಹಂಸರು ಶ್ಯಾಮಪುಕುರದ ತಮ್ಮ ಕೊಠಡಿಯಲ್ಲಿ ನರೇಂದ್ರನೇ ಮೊದಲಾದವರೊಡನೆ ಮಾತುಕತೆಯಾಡುತ್ತ ಕುಳಿತುಕೊಂಡಿದಾರೆ. ಘಂಟೆ ಬೆಳಗಿನ ಹತ್ತು.

ನರೇಂದ್ರ: "ನಿನ್ನೆ ಡಾಕ್ಟರ್ ಹೇಗೆ ನಡೆದುಕೊಂಡುಬಿಟ್ಟ ಏನುಕತೆ!''

ಒಬ್ಬ ಭಕ್ತ: "ಮೀನು ಗಾಳವನ್ನೇನೊ ನುಂಗಿತು, ಆದರೆ ಗಾಳದ ದಾರ ಕಿತ್ತುಹೋಗಿಬಿಟ್ಟಿತು.''

ಶ್ರೀರಾಮಕೃಷ್ಣರು ನಗುತ್ತ: "ಗಾಳದ ಕೊಕ್ಕೆ ಅದರ ಗಂಟಲಿಗೆ ಸಿಕ್ಕಿಕೊಂಡಿದೆ. ಆದ್ದರಿಂದ ಅದು ಸತ್ತು ನೀರಿನ ಮೇಲೆ ತೇಲಲೇ ಬೇಕು.''

ನರೇಂದ್ರ ಕೆಲವು ನಿಮಿಷಗಳ ಮಟ್ಟಿಗೆ ಎದ್ದು ಹೊರಗಡೆಗೆ ಹೋಗಿ ದಾನೆ. ಪರಮಹಂಸರು ಮಾಸ್ಟರೊಡನೆ ಪೂರ್ಣನ ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ತಾನೇ ಪ್ರಕೃತಿ, ಭಗವಂತನೇ ಪುರುಷ ಎಂದು ಭಾವಿಸಿಕೊಂಡು ಭಕ್ತ ಆತನನ್ನು ಅಪ್ಪಿಕೊಳ್ಳಲು ಮತ್ತು ಚುಂಬಿಸಲು ಇಚ್ಛೆಪಡುತ್ತಾನೆ. ಇದನ್ನು ಕೇವಲ ನಿನಗೆ ಮಾತ್ರ ಹೇಳುತ್ತಿದೇನೆ. ಸಾಮಾನ್ಯರ ಕಿವಿಗೆ ಇದು ಬೀಳಕೂಡದು.''

ಮಾಸ್ಟರ್: "ಭಗವಂತ ಹಲವಾರು ವಿಧದಲ್ಲಿ ಕ್ರೀಡಿಸುತ್ತಾನೆ. ನಿಮ್ಮ ಕಾಯಿಲೆಯೂ ಆತನ ಕ್ರೀಡೆಯಲ್ಲಿ ಒಂದು. ನಿಮಗೆ ಈ ಕಾಯಿಲೆ ಬಂದಿರೋದರಿಂದ ಹೊಸ ಹೊಸ ಭಕ್ತರು ಇಲ್ಲಿಗೆ ಬರುತ್ತಿದಾರೆ.''

ಶ್ರೀರಾಮಕೃಷ್ಣರು ನಗುತ್ತ: "ಭೂಪತಿ ಹೇಳಿದ: 'ನಿಮಗೆ ಈ ಕಾಯಿಲೆ ಬರದೆ ಸುಮ್ಮನೆ ನೀವು ಈ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದರೆ ಜನ ಏನಂದುಬಿಡುತ್ತಿದ್ದರೊ ಏನೊ?' ಒಳ್ಳೆಯದು, ಡಾಕ್ಟರ ಸಮಾಚಾರ ಏನು?''

ಮಾಸ್ಟರ್: "ಭಗವಂತನ ಸಂಬಂಧವಾಗಿ ತನ್ನದು 'ದಾಸ್ಯ ಭಾವ' ಅಂತ ಆತ ಒಪ್ಪಿಕೊತಾನೆ. ಆತ ಹೇಳುತ್ತಾನೆ, 'ಹೇ ಭಗವಂತ,

ನಾನು ದಾಸ, ನೀನು ಪ್ರಭು' ಅಂತ. ಆದರೂ ಮತ್ತೆ ನನ್ನನ್ನು ಕೇಳು ತ್ತಾನೆ, 'ಭಗವದ್ಭಾವನೆಯನ್ನು ಮನುಷ್ಯನ ಮೇಲೆ ಏಕೆ ಆರೋಪಿಸು ತ್ತೀಯೆ' ಎಂದು."

ಶ್ರೀರಾಮಕೃಷ್ಣರು : "ನೀನೇ ನೋಡು! ಇಂದು ಆತನ ಮನೆಗೆ ಹೋಗಿಬರುತ್ತೀಯೇನು?"

ಮಾಸ್ಟರ್ : "ಏನಾದರು ಹೇಳಬೇಕಾಗಿದ್ದರೆ ಹೋಗಿಬರುತ್ತೇನೆ."

ಶ್ರೀರಾಮಕೃಷ್ಣರು : "ಬಂಕಿಮ ಎಂಥ ಹುಡುಗ? ಆತ ಇಲ್ಲಿಗೆ ಬರಲಾಗದಿದ್ದರೆ ನೀನೇ ಆತನಿಗೆ ಸ್ವಲ್ಪ ಉಪದೇಶ-ಗಿಪದೇಶ ಕೊಡು. ಆಗ ಆತ್ಮಜಾಗೃತಿ ಉಂಟಾಗುತ್ತದೆ."

ನರೇಂದ್ರ ಹಿಂದಿರುಗಿಬಂದು ಪರಮಹಂಸರ ಹತ್ತಿರ ಕುಳಿತುಕೊಂಡ. ತಂದೆಗೆ ಪರಲೋಕಪ್ರಾಪ್ತಿಯಾದನಂತರ ನರೇಂದ್ರ ಬಹಳವಾಗಿ ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿಕೊಂಡಿದಾನೆ. ತಾಯಿ ಮತ್ತು ಸೋದರಸೋದರಿಯರಿ ದಾರೆ. ಅವರ ಭರಣಪೋಷಣೆ ಮಾಡಬೇಕಾಗಿದೆ. ಜೊತೆಗೆ "ಲಾ" ಪರೀಕ್ಷೆಗೆ ಬೇರೆ ಓದುತ್ತಿದಾನೆ. ಇತ್ತೀಚೆಗೆ ಕೆಲವು ತಿಂಗಳ ಕಾಲ ವಿದ್ಯಾ ಸಾಗರನ ಶಾಲೆಯಲ್ಲಿ ಅಧ್ಯಾಪಕನಾಗಿದ್ದ. ತನ್ನ ಮನೆಯವರ ಜೀವನೋ ಪಾಯಕ್ಕೆ ಯಾವುದಾದರು ಒಂದು ವ್ಯವಸ್ಥೆ ಕಲ್ಪಿಸಿ ಬಳಿಕ ನಿಶ್ಚಿಂತನಾಗಿರ ಬೇಕೆಂದು ಪ್ರಯತ್ನಮಾಡುತ್ತಿದಾನೆ. ಆತನ ಸ್ಥಿತಿಗತಿಯೆಲ್ಲ ಪರಮ ಹಂಸರಿಗೆ ಚೆನ್ನಾಗಿ ಗೊತ್ತಿದೆ. ಅವರು ನರೇಂದ್ರನನ್ನು ಅತ್ಯಂತ ಅಕ್ಕರೆ ಯಿಂದ ಕಾಣುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಳ್ಳೆಯದು, ನಾನು ಕೇಶವ ಸೇನನಿಗೆ ಹೇಳಿದೆ, 'ಯದೃಚ್ಛಾಲಾಭ ಸಂತುಷ್ಟಿಯೇ ಒಳ್ಳೆಯದು' ಅಂತ. ನೋಡು, ಶ್ರೀಮಂತನ ಮಗ ಅನ್ನಾಹಾರಾದಿಗಳಿಗೇ ಆಗಲಿ, ಉಡಿಗೆತೊಡಿಗೆ ಗಳಿಗೇ ಆಗಲಿ ಚಿಂತಿಸಬೇಕಾಗಿಲ್ಲ. ಮಾಸಾಶನ ತಪ್ಪದೆ ದೊರೆಯುತ್ತದೆ. ನರೇಂದ್ರನೂ ಉಚ್ಚ ಅಂತಸ್ತಿಗೆ ಸೇರಿದವ. ಆದರೂ ಆತ ಅಷ್ಟೊಂದು ಬಿಕ್ಕಟ್ಟಿಗೆ ಸಿಕ್ಕಿಕೊಂಡಿದಾನಲ್ಲ ಏಕೆ? ಭಗವಂತನಿಗೆ ಮನಸ್ಸನ್ನು ಸಂಪೂರ್ಣವಾಗಿ ಸಮರ್ಪಿಸಿಬಿಟ್ಟರೆ ಆದರೆ, ಆತ ಎಲ್ಲವನ್ನೂ ಒದಗಿಸಿ ಕೊಟ್ಟುಬಿಡುತ್ತಾನೆ."

ಮಾಸ್ಟರ್ : "ನರೇಂದ್ರನಿಗೂ ಎಲ್ಲಾ ಬಂದೊದಗುತ್ತವೆ? ಇನ್ನೂ ಆ ಸಮಯವೆಲ್ಲ ಕಳೆದುಹೋಗಿಬಿಟ್ಟಿಲ್ಲವಲ್ಲ."

ಶ್ರೀರಾಮಕೃಷ್ಣರು: "ತೀವ್ರ ವೈರಾಗ್ಯ ಉಂಟಾಯಿತು ಅಂದರೆ ಮನುಷ್ಯ ಏನು ಎತ್ತ ಅಂತ ಲೆಕ್ಕಾಚಾರಹಾಕೋದಿಲ್ಲ. ಆತ ತನಗೆ ತಾನೇ ಹೇಳಿಕೊಳ್ಳೋದಿಲ್ಲ, 'ಮನೆಯಲ್ಲಿ ಎಲ್ಲಾ ವ್ಯವಸ್ಥೆಗಳನ್ನು ಮಾಡಿ ಬಳಿಕ ಸಾಧನೆಯಲ್ಲಿ ತೊಡಗುವೆನು' ಅಂತ. ತೀವ್ರ ವೈರಾಗ್ಯ ಉಂಟಾಯಿತು ಅಂದರೆ ಈ ವಿಧದ ಭಾವನೆಗಳು ಬರೋದೇ ಇಲ್ಲ. (ನಗುತ್ತ) ತನ್ನ ಉಪನ್ಯಾಸದ ಸಮಯದಲ್ಲಿ ಒಬ್ಬ ಗೋಸ್ವಾಮಿ ಹೇಳಿದ: 'ಕೈಯಲ್ಲಿ ಒಂದು ಹತ್ತು ಸಾವಿರ ರೂಪಾಯಿ ಇತ್ತು ಎಂದರೆ, ಅದರಿಂದ ಬರೋ ಬಡ್ಡಿಯಿಂದಲೆ ಊಟೋಪಚಾರಗಳೆಲ್ಲ ನಡೆದು ಹೋಗಿಬಿಡುತ್ತವೆ. ಆಗ ನಿಶ್ಚಿಂತೆಯಿಂದ ಭಗವಂತನನ್ನು ಕರೆಯ ಬಹುದು!'

"ಕೇಶವಸೇನನೂ ಆ ರೀತಿಯಾಗಿ ಏನೊ ಒಂದು ಹೇಳಿದ. ಆತ ಕೇಳಿದ: 'ಮಹಾಶಯರೆ, ಯಾರೆ ಆಗಲಿ ತನ್ನ ಸ್ವತ್ತು-ಗಿತ್ತು ಇವಕ್ಕೆಲ್ಲ ಒಂದು ಸುವ್ಯವಸ್ಥೆ ಮಾಡಿ ಬಳಿಕ ಭಗವಚ್ಚಿಂತನೆ ಮಾಡಬೇಕು ಅಂತ ಯೋಚಿಸುತ್ತಾನೆ ಎಂದು ಇಟ್ಟುಕೊಳ್ಳಿ; ಹಾಗೆ ಮಾಡೋದು ಸರಿ ತಾನೆ? ಇಲ್ಲ, ಆತನೇನಾದರು ತಪ್ಪುದಾರಿ ಹಿಡಿದಂತಾಗುತ್ತದೆಯೆ?' ನಾನು ಆತನಿಗೆ ಹೇಳಿದೆ: 'ಹೃದಯದಲ್ಲಿ ತೀವ್ರ ವೈರಾಗ್ಯ ಉದಯಿಸಿತು ಅಂದರೆ, ಸಂಸಾರ ನರಕ ಕೂಪದಂತೆ ತೋರುತ್ತದೆ; ಸ್ವಬಾಂಧವರು ಕೃಷ್ಣಸರ್ಪ ಗಳಂತೆ ಕಾಣಬರುತ್ತಾರೆ. ಬಳಿಕ ಆತ ದುಡ್ಡು ಕಾಸು ಶೇಖರಿಸಿಡ ಬೇಕೆಂದಾಗಲಿ, ತನ್ನ ಆಸ್ತಿ ಪಾಸ್ತಿಗಳಿಗೆ ಸರಿಯಾದ ಸುವ್ಯವಸ್ಥೆ ಮಾಡ ಬೇಕೆಂದಾಗಲಿ ಯೋಚಿಸಲಾರ.' ಭಗವಂತನೇ ವಸ್ತು, ಉಳಿದುದೆಲ್ಲ ಅವಸ್ತು. ಭಗವಂತನನ್ನು ಬಿಟ್ಟು ಪ್ರಾಪಂಚಿಕ ವಸ್ತುಗಳ ಚಿಂತನೆ ಮಾಡೋದು!

"ಒಬ್ಬ ಹೆಂಗಸು ಏನೋ ಒಂದು ಅತ್ಯಂತ ದೊಡ್ಡ ದುಃಖಕ್ಕೆ ಈಡಾಗಿದ್ದಳು. ಆಕೆ ಮೊದಲು ತನ್ನ ಮುಕರವನ್ನು ಸೀರೆಯ ಸೆರಗಿನಲ್ಲಿ ಭದ್ರವಾಗಿ ಕಟ್ಟಿಟ್ಟು, ಬಳಿಕ ನೆಲಕ್ಕೆ ಬಿದ್ದು ರೋದಿಸಲಾರಂಭಿಸಿದಳು: 'ಗೆಳತಿಯರಾ, ನನಗೆ ಎಂಥ ದುರವಸ್ಥೆ ಬಂದುಬಿಟ್ಟಿತು, ಅಯ್ಯೋ!' ಹಾಗೆ ಅಳುತ್ತಿದ್ದರೂ ಮುಕರ ಮುರಿಯದ ಹಾಗೆ ನೋಡಿಕೊಳ್ಳುತ್ತಲೇ ಇದ್ದಳು."

ಎಲ್ಲರೂ ನಗಲಾರಂಭಿಸಿದಾರೆ. ಈ ಮಾತುಗಳನ್ನು ಕೇಳಿ ನರೇಂದ್ರ

ಬಾಣ ತಗುಲಿದವನ ಹಾಗೆ ನೆಲದ ಮೇಲೆ ಬಿದ್ದುಕೊಂಡ. ನರೇಂದ್ರನ ಮನಸ್ಸಿನಲ್ಲಿ ಏನು ನಡೆಯುತ್ತಿದೆ ಎಂಬುದನ್ನು ಊಹಿಸಿ ಮಾಸ್ಟರ್ ನಗುತ್ತ ಆತನಿಗೆ ಹೇಳುತ್ತಿದಾನೆ: "ಏನು, ಮಲಗಿಬಿಟ್ಟೆಯಲ್ಲ ?"

ಶ್ರೀರಾಮಕೃಷ್ಣರು ನಗುತ್ತ ಮಾಸ್ಟರಿಗೆ : "ಒಬ್ಬ ಹೆಂಗಸು, ತಾನು ತನ್ನ ಭಾವನೊಡನೆ ಸಹವಾಸಮಾಡಿದುದಕ್ಕಾಗೇ ತನಗೆ ಅಷ್ಟೊಂದು ನಾಚಿಕೆ ಆಗುತ್ತಿರುವಾಗ, ಉಳಿದ ಹೆಂಗಸರು ನಾಚಿಕೆ ಹೇಸಿಕೆ ಇಲ್ಲದೆ ಪರಪುರುಷರೊಡನೆ ಹೇಗೆ ಸಹವಾಸಮಾಡುತ್ತಾರೊ ಅದು ತನಗೆ ಗೊತ್ತಾಗದ ವಿಷಯ ಅಂತ ಹೇಳಿದುದು ನನ್ನ ಜ್ಞಾಪಕಕ್ಕೆ ಬರುತ್ತಿದೆ. ಆಕೆ ತನ್ನ ತಪ್ಪನ್ನು ಮುಚ್ಚಲು ಹೇಳಿದಳು: 'ಎಷ್ಟೇ ಆಗಲಿ ಭಾವ ಆತ್ಮೀಯ. ಆತನ ಸಹವಾಸಮಾಡಿದುದಕ್ಕಾಗೇ ಲಜ್ಜೆ ನನ್ನನ್ನು ಸುಮ್ಮನೆ ಕೊಲ್ಲುತ್ತಿದೆ. ಹಾಗಿರೋವಾಗ ಉಳಿದ ಸ್ತ್ರೀಯರು ಪರಪುರುಷರೊಡನೆ ಸಹವಾಸಮಾಡುತ್ತಾರಲ್ಲ ಯಾವ ಎದೆಯಿಂದ!'"

ಮಾಸ್ಟರ್ ತಾನೇ ಗೃಹಸ್ಥ. ತನ್ನ ನಡತೆಗೆ ತಾನೇ ಲಜ್ಜಿತನಾಗೋದಕ್ಕೆ ಬದಲು ನರೇಂದ್ರನ ಕಡೆ ನಕ್ಕ. ಅದಕ್ಕಾಗೇ ಪರಮಹಂಸರು, ತಾನೇ ತನ್ನ ಭಾವನೊಡನೆ ಖಂಡನೀಯವಾದ ರೀತಿಯಲ್ಲಿ ವ್ಯವಹರಿಸುತ್ತಿದ್ದರೂ ನೀತಿಬಾಹಿರರಾಗಿದ್ದ ಹೆಂಗಸರನ್ನು ನಿಂದಿಸಿದ, ಹೆಂಗಸಿನ ವಿಷಯವನ್ನು ಹೇಳಿದುದು.

ಕೆಳಗಡೆ ಒಬ್ಬ ವೈಷ್ಣವ ಭಿಕ್ಷುಕ ಹಾಡುತ್ತಿದ್ದ. ಅದನ್ನು ಕೇಳಿ ಪರಮಹಂಸರಿಗೆ ಮಹತ್ತಾದ ಆನಂದವಾಗಿಬಿಟ್ಟಿದೆ. ಆತನಿಗೆ ಒಂದೆರಡು ಕಾಸುಕೊಡುವಂತೆ ಭಕ್ತರಿಗೆ ಹೇಳಿದರು. ಒಬ್ಬ ಭಕ್ತ ಆ ಭಿಕ್ಷುಕನಿಗೆ ಕಾಸುಕೊಡಲು ಕೆಳಕ್ಕೆ ಇಳಿದುಹೋದ. ಪರಮಹಂಸರು ಕೇಳಿದರು, "ಎಷ್ಟು ಕೊಟ್ಟೆ?" ಅಂತ. ಅರ್ಧಾಣೆಯನ್ನು ಮಾತ್ರ ಕೊಟ್ಟೆ ಅಂತ ತಿಳಿಸಿದಾಗ ಅವರು ಹೇಳಿದರು : "ಅಷ್ಟೇನೆ? ಅದು ಮೈಮೂಳೆ ಮುರಿದು ಸಂಪಾದಿಸಿದ ದುಡ್ಡಲ್ಲವೆ. ಅದನ್ನು ಸಂಪಾದಿಸಲು ಆತ ತನ್ನ ಯಜಮಾನನನ್ನು ಎಷ್ಟೊಂದು ಹೊಗಳಿರಬೇಕು, ಎಷ್ಟು ಕಷ್ಟಪಟ್ಟಿರಬೇಕು! ಕನಿಷ್ಟಪಕ್ಷ ನಾಲ್ಕಾಣೆನಾದರು ಕೊಡುತ್ತಾನೆ ಅಂತ ಭಾವಿಸಿದ್ದೆ."

ಚಿಕ್ಕ ನರೇನ ಪರಮಹಂಸರಿಗೆ ವಾಗ್ದಾನ ಮಾಡಿದ್ದ, ತಾನು ಯಾವುದೊ ಒಂದು ಯಂತ್ರ ತಂದು ಅದರ ಸಹಾಯದಿಂದ ವಿದ್ಯುಚ್ಛಕ್ತಿಯ

ಸ್ವಭಾವವೇನೆಂಬುದನ್ನು ಅವರಿಗೆ ತಿಳಿಸುತ್ತೇನೆ ಅಂತ. ಈಗ ಅದನ್ನು ತಂದು ತೋರಿಸುತ್ತಿದಾನೆ.

ಸಮಯ ಅಪರಾಹ್ನ ಎರಡು. ಪರಮಹಂಸರು ಭಕ್ತರೊಡನೆ ಕೊಠಡಿಯಲ್ಲಿ ಕುಳಿತಿದಾರೆ. ಅತುಲ ಒಬ್ಬ ಸ್ನೇಹಿತನನ್ನು ಕರೆದುಕೊಂಡು ಬಂದಿದಾನೆ. ಶಿಕದಾರ ಕೇರಿಯ ಪ್ರಸಿದ್ಧ ಚಿತ್ರಕಾರ "ಬಗ್ಚಿ" ಎಂಬುವನು ಬಂದಿದಾನೆ. ಆತ ಅನೇಕ ಚಿತ್ರಪಟಗಳನ್ನು ಪರಮಹಂಸರಿಗೆ ಕಾಣಿಕೆಯನ್ನಾಗಿ ಒಪ್ಪಿಸಿದ. ಅವರು ಬಹಳ ಆನಂದದಿಂದ ಅವನ್ನು ನೋಡುತ್ತಿದಾರೆ. ಷಡ್ಭುಜ ಮೂರ್ತಿಯ ಪಟವನ್ನು ನೋಡಿ ಭಕ್ತರಿಗೆ ಹೇಳುತ್ತಿದಾರೆ: "ನೋಡಿ, ನೋಡಿ, ಇದು ಎಷ್ಟು ಚೆನ್ನಾಗಿ ಬಂದುಬಿಟ್ಟಿದೆ!" ಅಹಲ್ಯೆ ಕಲ್ಲಾಗಿರೋ ಚಿತ್ರಪಟವನ್ನು ಭಕ್ತರಿಗೆ ತೋರಿಸಲೋಸುಗ ಅದನ್ನು ತಮ್ಮ ಹತ್ತಿರಕ್ಕೆ ತರುವಂತೆ ಬಗ್ಚಿಗೆ ಹೇಳಿದರು. ಅದರಲ್ಲಿ ಶ್ರೀರಾಮಚಂದ್ರ ಮೂರ್ತಿಯನ್ನು ನೋಡಿ ಬಹಳ ಆನಂದಪಡುತ್ತಿದಾರೆ.

ಬಗ್ಚಿಗೆ ಹೆಂಗಸರ ಹಾಗೆ ಉದ್ದವಾದ ಕೂದಲಿತ್ತು. ಅದನ್ನು ನೋಡಿ ಪರಮಹಂಸರು ಹೇಳುತ್ತಿದಾರೆ: "ಒಂಬತ್ತು ಮೊಳ ಕೂದಲಿದ್ದ ಒಬ್ಬ ಸನ್ಯಾಸಿ ಕೆಲವು ವರ್ಷಗಳ ಹಿಂದೆ ದಕ್ಷಿಣೇಶ್ವರಕ್ಕೆ ಬಂದಿದ್ದ. ಯಾವಾಗಲೂ ರಾಧಾನಾಮವನ್ನು ಜಪಿಸುತ್ತಿದ್ದ. ಕಪಟಿಯಲ್ಲ."

ಈಗ ನರೇಂದ್ರ ಹಾಡಲಾರಂಭಿಸಿದಾನೆ. ಅವು ವೈರಾಗ್ಯಭಾವದಿಂದ ತುಂಬಿತುಳುಕಾಡುತ್ತಿವೆ:

ಇನ್ನೆಷ್ಟು ದಿನ ನಾನು ಬರಿಯ ವಿಫಲತೆಯಲ್ಲಿ
ತೊಳಲಬೇಕೋ
ಇನ್ನೆಷ್ಟು ದಿನ ರಾತ್ರಿ ಭರವಸೆಯ ಹಾದಿಯಲಿ
ಮೈಯೆಲ್ಲ ಕಣ್ಣಾಗಿ ಕಾಯಬೇಕೋ?
ನೀನೊ ತ್ರಿಭುವನದೊಡೆಯ, ನಾನೊ ಭಿಕ್ಷುಕನಯ್ಯ
ನೀನು ನನ್ನೆದೆಯಲ್ಲಿ ನೆಲೆಸೆನ್ನಲೆ?
ನನ್ನೆದೆಯ ಜೋಪಡಿಯ ಬಾಗಿಲನು ತೆರೆದಿರುವೆ
ಒಂದು ಸಲವಾದರೂ ಬಂದು ಹಿಂಗಿಸು ತೃಷೆಯ
ನನ್ನ ವರಗುರುವೇ!

ಆತ ಮತ್ತೆ ಹಾಡುತ್ತಿದಾನೆ:

ನನ್ನ ಹೃದಯದ ದಿವ್ಯ ಸೂತ್ರಧಾರಿಣಿ ನೀನು;
ತೊಡೆಯ ತೊಟ್ಟಿಲೊಳಿಟ್ಟು ಪಾಲಿಸಿರುವೆ! . . .

ಬಳಿಕ ಹಾಡಿದ:

ನಿನ್ನಡಿಯ ತಾವರೆಯ ಮಧು ಕುಡಿವ ದುಂಬಿಯೊಲು
ನನ್ನ ಮನವಾಗದಿರಲೇನು ಸುಖವೊ !
ಪರಮನಿಧಿಯಾಗಿರುವ ನಿನ್ನ ತೊರೆದರೆ ನಾನು
ಮತ್ತಾವ ಸಂಪದವ ಪಡೆಯಬಹುದೊ.
ನಿನ್ನ ಸೊಬಗನು ಇನಿತು ತನ್ನಲ್ಲಿ ಬಿಂಬಿಸದ
ಯಾವ ಶಿಶುವದನವೂ ರುಚಿಸದೆನಗೆ.
ನನ್ನ ಎದೆಯಾಗಸದಿ ನಿನ್ನ ಚಂದ್ರೋದಯವ
ಮೂಡಿಸದ ತಿಂಗಳೂ ಕತ್ತಲೆನಗೆ !
ದಿವ್ಯ ಪ್ರೇಮದ ಮಣಿಯನೆದೆಯಲ್ಲಿ ಬೆಳಗದಿಹ
ಯಾವ ಸತಿ ಪ್ರೇಮವೂ ಮಲಿನವೆನಗೆ !
ಆದರೂ ಒಮ್ಮೊಮ್ಮೆ ಮೋಹ ಪ್ರಮಾದದಲಿ
ಸಂದೇಹದಲಿ ನಾನು ಸಿಕ್ಕಿಬಿಡುವೆ !
ಸರ್ಪದಷ್ಟನ ತೆರದಿ ತಪಿಸುತಿರುವೆ !
ಏನು ಹೇಳಲಿ ನಿನಗೆ ? ನನ್ನ ಎದೆಯಲಿ ಕುಳಿತು
ನನ್ನ ಹೊಯ್ದಾಟವನು ನೋಡುತಿರುವೆ !

ಘಂಟೆ ಸಾಯಂಕಾಲ ಐದೂವರೆ. ಡಾಕ್ಟರ್ ಸರ್ಕಾರ ಬಂದಿದಾನೆ. ಆತ ಪರಮಹಂಸರ ನಾಡಿ ಹಿಡಿದುನೋಡಿ ಔಷಧದ ವ್ಯವಸ್ಥೆ ಮಾಡಿದ. ನರೇಂದ್ರ, ಗಿರೀಶ, ಡಾಕ್ಟರ್ ದುಕಾರಿ, ಚಿಕ್ಕ ನರೇನ, ರಾಖಾಲ, ಮಾಸ್ಟರ್, ಶರಚ್ಚಂದ್ರ, ಶ್ಯಾಮವಸು ಇವರೇ ಮೊದಲಾದ ಭಕ್ತರು ಕೊಠಡಿಯಲ್ಲಿ ಕುಳಿತಿದಾರೆ.

ಪರಮಹಂಸರ ಕಾಯಿಲೆ ಸಂಬಂಧವಾಗಿ ಡಾಕ್ಟರ್ ಸರ್ಕಾರ ಸ್ವಲ್ಪ ಹೊತ್ತು ಮಾತನಾಡಿದ. ಪರಮಹಂಸರು ಔಷಧ ತೆಗೆದುಕೊಂಡು ಶ್ಯಾಮವಸುವಿನೊಡನೆ ಮಾತುಕತೆಯಾಡಲಾರಂಭಿಸಿದರು. ಡಾಕ್ಟರ್ ಸರ್ಕಾರ ಪರಮಹಂಸರಿಗೆ ಹೇಳಿದ: "ನೀವು ಈಗ ಶ್ಯಾಮವಸುವಿನೊಡನೆ ಮಾತುಕತೆ ಆಡುತ್ತಿದೀರಿ. ಹಾಗಾದರೆ ನಾನು ಹೋಗಿಬರುತ್ತೇನೆ."

ಹಾಡು ಕೇಳಬೇಕು ಎಂಬ ಇಚ್ಛೆಯಿದೆಯೆ ಎಂಬುದಾಗಿ ಪರಮಹಂಸರೂ ಮತ್ತು ಒಬ್ಬ ಭಕ್ತನೂ ಡಾಕ್ಟರನ್ನು ಕೇಳಿದರು.

ಪರಮಹಂಸರಿಗೆ ಡಾಕ್ಟರ್: "ನನಗೇನೊ ಇಚ್ಛೆ. ಆದರೆ ನೀವು

ಹಾಡು ಕೇಳಿದೊಡನೆ ಜಿಂಕೆ ಮರಿಯ ಹಾಗೆ ನೆಗೆಯಲಾರಂಭಿಸಿಬಿಡುತ್ತೀರಲ್ಲ ಅದಕ್ಕೇನು ಮಾಡೋದು ! ನೀವು ನಿಮ್ಮ ಭಾವವನ್ನು ಒಂದು ಹದ್ದು ಬಸ್ತಿನಲ್ಲಿ ಇಟ್ಟುಕೋಬೇಕು.''

ಡಾಕ್ಟರ್ ಸರ್ಕಾರ ಮತ್ತೆ ಕುಳಿತುಕೊಂಡ. ನರೇಂದ್ರ ತಾಳಮೇಳಗಳೊಡನೆ ತನ್ನ ಸುಮಧುರ ಕಂಠದಿಂದ ಹಾಡಲಾರಂಭಿಸಿದ:

ಮನವ ಬೆರಗುಗೊಳಿಸನಂತ ವಿಶ್ವರಚನೆ ನಿನ್ನದೇ.
ನಿನ್ನ ಪ್ರೇಮ ಚೆಲುವುಗಳಲಿ ಜಗವೆಲ್ಲವು ತುಂಬಿದೆ . . .

ಆತ ಮತ್ತೆ ಹಾಡಿದ:

ಮಿರುಗುತಿದೆ ನಿನ್ನ ಅರೂಪರಾಶಿ ನಿಬಿಡಾಂಧಕಾರದಲ್ಲಿ
ನಿನ್ನನದರಿಂದಲೇ ನೆನೆವರೌ ಯೋಗಿಗಳು ಗಿರಿಗುಹೆಗಳಲ್ಲಿ ! . . .

ಡಾಕ್ಟರ್ ಸರ್ಕಾರ ಮಾಸ್ಟರಿಗೆ ಹೇಳಿದ: ''ಈ ಹಾಡು ಇವರಿಗೆ (ಪರಮಹಂಸರಿಗೆ) ಬಹಳ ಡೇಂಜರಸ್.'' ಪರಮಹಂಸರು ಮಾಸ್ಟರನ್ನು ಕೇಳುತ್ತಿದಾರೆ: ''ಡಾಕ್ಟರ್ ಏನು ಹೇಳಿದ?'' ಮಾಸ್ಟರ್ ತಿಳಿಸಿದ: ''ಈ ಹಾಡು ನಿಮ್ಮನ್ನು ಸಮಾಧಿಸ್ಥರನ್ನಾಗಿ ಮಾಡಿಬಿಡಬಹುದೆಂದು ಆತ ಹೆದರುತ್ತಿದಾನೆ.''

ಇಷ್ಟರಲ್ಲೇ ಪರಮಹಂಸರು ಅರ್ಧಬಾಹ್ಯಜ್ಞಾನಶೂನ್ಯರಾಗಿಬಿಟ್ಟಿದಾರೆ. ಡಾಕ್ಟರ ಕಡೆಗೆ ಕೈಮುಗಿದು ಹೇಳುತ್ತಿದಾರೆ: ''ಇಲ್ಲ, ಇಲ್ಲ. ನಾನೇಕೆ ಸಮಾಧಿಸ್ಥನಾಗೋಕೆ ಹೋಗಲಿ?'' ಆದರೆ ಅವರು ಈ ಮಾತುಗಳನ್ನು ಆಡಿ ಮುಗಿಸುವಷ್ಟರಲ್ಲೇ ಗಾಢಸಮಾಧಿಸ್ಥರಾಗಿಬಿಟ್ಟರು. ಶರೀರ ಸ್ಪಂದಹೀನವಾಗಿದೆ, ಕಣ್ಣು ಸ್ಥಿರವಾಗಿವೆ, ಬಾಯಲ್ಲಿ ಮಾತೇ ಇಲ್ಲ. ಕಲ್ಲಿನ ಪ್ರತಿಮೆಯಂತೆ ಬಾಹ್ಯಜ್ಞಾನಶೂನ್ಯರಾಗಿ ಕುಳಿತಿದಾರೆ. ಅವರ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಇವೆಲ್ಲ ಅಂತರ್ಮುಖವಾಗಿಬಿಟ್ಟಿವೆ. ಹಿಂದಿನ ಮನುಷ್ಯರೇ ಅಲ್ಲ ಅಂತ ತೋರುತ್ತಿದೆ.

ನರೇಂದ್ರನ ಸುಮಧುರ ಕಂಠದಿಂದ ಮಧುಮಧುರ ಹಾಡುಗಳು ಹೊರಬರುತ್ತಲೇ ಇವೆ. ಈಗ ಆತ ಹಾಡುತ್ತಿದಾನೆ:

ಏನು ನಿರುಪಮ ಸೊಬಗು ! ಓಹೋ ಎಂಥ ಚೆಲುವಿನ ಮೋಹನ !
ನನ್ನ ಹೃದಯದ ಮೂರ್ತಿ ಬಂದನು ಎದೆಯ ಗುಡಿಸಲಿಗೀದಿನ !
ಎದೆಯೊಳೊಲವಿನ ಚಿಲುಮೆ ಚಿಮ್ಮಿವೆ ಹತ್ತು ಕಡೆಗೂ ಸುಮ್ಮನೆ !
ಯಾವ ಸಂಪದವನ್ನು ಸುರಿಯಲಿ ಹೇಳು ನಿನ್ನೀಪದದೆಡೆ ?

ನನ್ನ ಹರಣವೆ ಶರಣು ನಿನಗೆ; ನನ್ನ ಆತ್ಮವೆ ನಿನ್ನದು.
ಮತ್ತೆ ಏನನು ನೀಡಲಯ್ಯಾ? ನನ್ನದೆಲ್ಲವು ನಿನ್ನದು!

ಬಳಿಕ ನರೇಂದ್ರ ಹಾಡುತ್ತಿದಾನೆ:

ನಿನ್ನಡಿಯ ತಾವರೆಯ ಮಧು ಕುಡಿವ ದುಂಬಿಯೊಲು
ನನ್ನ ಮನವಾಗದಿರಲೇನು ಸುಖವೋ! . . .

ಡಾಕ್ಟರ ಕಿವಿಗೆ, "ದಿವ್ಯ ಪ್ರೇಮದ ಮಣಿಯನೆದೆಯಲ್ಲಿ ಬೆಳಗದಿಹ ಯಾವ ಸತಿ ಪ್ರೇಮವೂ ಮಲಿನವೆನಗೆ!" ಎಂಬ ಚರಣ ಬಿದ್ದೊಡನೆಯೆ ಆತ ಅಶ್ರುಪೂರ್ಣಲೋಚನನಾದ. ಕೂಗಿಕೊಳ್ಳಲಾರಂಭಿಸಿದ, "ಆಹ! ಆಹ!" ಅಂತ.

ನರೇಂದ್ರ ಮತ್ತೆ ಹಾಡುತ್ತಿದಾನೆ:

ಓ ಎಂದಿಗೋ ಇನ್ನೆಂದಿಗೋ
ಎದೆಯೊಳೊಲವಿನ ಕಿಡಿಯು ಜ್ವಲಿಸುವ
ದಿವ್ಯಶುಭದಿನವೆಂದಿಗೋ— . . .

ನರೇಂದ್ರ ಹಾಡಿ ಮುಗಿಸುವುದರೊಳಗಾಗಿ ಪರಮಹಂಸರು ಪ್ರಕೃತಿಸ್ಥರಾಗಿಬಿಟ್ಟಿದಾರೆ. ಈಗ ತಮ್ಮ ಮನೋಮುಗ್ಧಕರ ಮಾತು ಕತೆಗಳನ್ನು ಮುಂದುವರಿಸುತ್ತಿದಾರೆ. ಭಕ್ತರೆಲ್ಲರು ನಿಶ್ಶಬ್ದರಾಗಿ ಕುಳಿತು ಕೊಂಡು ಅವರ ಕಡೆ ಎವೆಯಿಕ್ಕದೆ ನೋಡುತ್ತಿದಾರೆ. ಆ ಪ್ರಾಣಾಂತಕ ರೋಗದ ತಾಳಲಾಗದ ನೋವಿನ ಚಿಹ್ನೆ ಲೇಶಮಾತ್ರವೂ ಅವರ ಮುಖದಲ್ಲಿ ಕಾಣಬರುತ್ತಿಲ್ಲ. ಅದು ಸ್ವರ್ಗೀಯ ಆನಂದವನ್ನು ಹೊರಸೂಸುತ್ತಿದೆ.

ಡಾಕ್ಟರನ್ನು ಸಂಬೋಧಿಸಿ ಪರಮಹಂಸರು ಆತನಿಗೆ ಹೇಳುತ್ತಿದಾರೆ: "ಲಜ್ಜೆಯನ್ನು ತ್ಯಜಿಸಿಬಿಡು. ಭಗವಂತನ ನಾಮಗುಣಕೀರ್ತನೆ ಮಾಡೋಕೆ ಲಜ್ಜೆಪಡುವುದು ಅಂದರೇನು? ನಾಚಿಕೆ, ದ್ವೇಷ, ಭಯ ಇವುಗಳಿಗೆ ಹೃದಯದಲ್ಲಿ ಎಡೆಗೊಡಕೂಡದು. 'ನಾನು ಅಂಥಾ ದೊಡ್ಡ ಮನುಷ್ಯ! ನಾನು ಭಗವನ್ನಾಮವನ್ನು ಹಾಡುತ್ತ ನರ್ತಿಸೋದೆ? ದೊಡ್ಡ ದೊಡ್ಡವರೆಲ್ಲ ನನ್ನ ಈ ವರ್ತನೆಯನ್ನು ನೋಡಿ ಏನಂದುಕೊಂಡಾರು? ಏನು ನಾಚಿಕೆಗೇಡಿತನ ಇದು, ಡಾಕ್ಟರೂ ಭಗವನ್ನಾಮೋಚ್ಚಾರಣೆ ಮಾಡುತ್ತ ನರ್ತಿಸುತ್ತ ಇದ್ದನಲ್ಲ ಅಂದುಬಿಟ್ಟರೆ!' ಎಂಬೀ ವಿಧದ ಭಾವನೆ ಗಳನ್ನೆಲ್ಲ ಮನಸ್ಸಿನಿಂದ ತ್ಯಜಿಸಿಬಿಡು."

ಡಾಕ್ಟರ್: "ಜನರು ಆಡಿಕೊಳ್ಳೋ ಮಾತಿಗೆ ಒಂದು ಕಿಂಚಿತ್ತೂ

ನಾನು ಕಿವಿಗೊಡೋದಿಲ್ಲ. ಅವರ ಅಭಿಪ್ರಾಯಗಳನ್ನು ಕಸಕ್ಕಿಂತಲೂ ಕಡೆಯಾಗಿ ಎಣಿಸುತ್ತೇನೆ.''

ಶ್ರೀರಾಮಕೃಷ್ಣರು: ''ಹೌದು, ಅದರ ಸಂಬಂಧವಾಗಿ ನಿನ್ನ ಹೃದಯದಲ್ಲಿ ಏನಿದೆ ಎಂಬುದು ನನಗೆ ಚೆನ್ನಾಗಿ ಗೊತ್ತು.'' (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು: ''ಜ್ಞಾನಾಜ್ಞಾನಗಳಿಗತೀತನಾಗು; ಆಗ ಮಾತ್ರವೇ ಆತನ ಸಾಕ್ಷಾತ್ಕಾರ ದೊರೆಯುತ್ತದೆ. ನಾನಾತ್ತ್ವದ ಜ್ಞಾನಕ್ಕೆ 'ಅಜ್ಞಾನ' ಅಂತ ಹೆಸರು. ಪಾಂಡಿತ್ಯದ ಅಹಂಕಾರವೂ ಅಜ್ಞಾನದ ಗುಂಪಿಗೆ ಸೇರಿದುದೆ. ಒಬ್ಬನೇ ಭಗವಂತ ಸರ್ವಭೂತಗಳಲ್ಲಿಯೂ ಇದಾನೆ ಎಂಬ ದೃಢಬುದ್ಧಿಗೆ 'ಜ್ಞಾನ' ಅಂತ ಹೆಸರು. ಆತನನ್ನು ವಿಶೇಷ ರೂಪದಿಂದ ಅರಿತುಕೊಳ್ಳುವುದಕ್ಕೆ 'ವಿಜ್ಞಾನ' ಅಂತ ಹೆಸರು. ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಅದನ್ನು ತೆಗೆಯಲು ಬೇರೊಂದು ಮುಳ್ಳು ಬೇಕಾಗುತ್ತದೆ. ಮುಳ್ಳನ್ನು ತೆಗೆದನಂತರ ಎರಡು ಮುಳ್ಳನ್ನೂ ಬಿಸಾಡಿಬಿಡುತ್ತೇವೆ. ಅದೇ ರೀತಿಯಾಗಿ ಅಜ್ಞಾನವೆಂಬ ಮುಳ್ಳನ್ನು ತೆಗೆದುಹಾಕಲು ಜ್ಞಾನವೆಂಬ ಮುಳ್ಳನ್ನು ಮೊದಲು ಪಡೆದುಕೋಬೇಕು; ಬಳಿಕ ಎರಡು ಮುಳ್ಳನ್ನೂ ಬಿಸಾಡಬೇಕಾಗುತ್ತದೆ. ಆತ ಜ್ಞಾನಾಜ್ಞಾನಗಳಿಗತೀತ. ಲಕ್ಷ್ಮಣ ರಾಮನಿಗೆ ಹೇಳಿದ: 'ರಾಮ, ಏನಾಶ್ಚರ್ಯ! ವಸಿಷ್ಠ ಅಂಥ ಮಹಾ ಜ್ಞಾನಿ. ಆತನೂ ಪುತ್ರಶೋಕಕ್ಕೆ ಒಳಗಾಗಿ ಅಳುತ್ತಿದಾನಲ್ಲ!' ರಾಮ ಹೇಳಿದ: 'ಸೋದರ, ಯಾರಲ್ಲಿ ಜ್ಞಾನವಿರುತ್ತದೊ ಅವರಲ್ಲಿ ಅಜ್ಞಾನವೂ ಇರುತ್ತದೆ. ಯಾರಿಗೆ ಒಂದರ ಜ್ಞಾನವಿರುವುದೊ ಅವರಿಗೆ ಅನೇಕದರ ಜ್ಞಾನವೂ ಇರುತ್ತದೆ. ಯಾರಿಗೆ ಬೆಳಕಿನ ಬೋಧೆ ಇರುವುದೊ ಅವರಿಗೆ ಅಂಧಕಾರದ ಬೋಧೆಯೂ ಇರುತ್ತದೆ.' ಬ್ರಹ್ಮ ಜ್ಞಾನಾಜ್ಞಾನಗಳಿಗೆ, ಪಾಪಪುಣ್ಯಗಳಿಗೆ, ಧರ್ಮಾಧರ್ಮಗಳಿಗೆ, ಶುಚಿಯಶುಚಿಗಳಿಗೆ ಅತೀತ.''

ಈಗ ಪರಮಹಂಸರು ಈ ಕೆಳಗಿನ ರಾಮಪ್ರಸಾದನ ಹಾಡನ್ನು ಆವೃತ್ತಿ ಮಾಡುತ್ತಿದಾರೆ:

ಸುಮ್ಮನೆ ತಿರುಗಾಟಕೆ ಬಾ ಮನವೇ
ಶ್ರೀ ಕಾಳೀ ಸುರತರುವಿರುವೆಡೆಗೆ!
ಪುರುಷಾರ್ಥವ ಕೈಗೂಡಿಸು ಬಾ ಅಲ್ಲಿ
ಕಾಳೀ ಸುರತರುವಿರುವಲ್ಲಿ!

ಪ್ರವೃತ್ತಿ ನಿವೃತ್ತಿ ಎಂಬ ಹೆಂಡಿರಲಿ
ನಿವೃತ್ತಿಯೊಬ್ಬಳೆ ಜೊತೆಗಿರಲಿ
ಆಕೆಯು ಮಗ ಆ ಶುದ್ಧ ವಿವೇಕನ
ಕೇಳಲು ಸತ್ಯವನರಿಯುವೆ ನೀ.
ಬಾ ಮನವೇ, ತಿರುಗಾಟಕೆ ಬಾ
ಶ್ರೀ ಕಾಳೀ ಸುರತರುವಿರುವೆಡೆಗೆ !

ಶುಚಿ-ಅಶುಚಿಯುನೊಂದಾಗಿಸಿ ನೀನೆಂದಿಗೆ
ದಿವ್ಯ ಧಾಮದಲಿ ಮಲಗುವೆಯೋ
ಈ ಇಬ್ಬರು ಹೆಂಡಿರ ನೀನೆಂದೊಟ್ಟಿಗೆ
ತೃಪ್ತಿಯೊಳಾಳಲು ಕಲಿಯುವೆಯೋ
ಆ ಅಂದೇ ಶ್ರೀ ಶ್ಯಾಮೆಯ ದರುಶನವೋ !
ಬಾ ಮನವೇ, ತಿರುಗಾಟಕೆ ಬಾ
ಶ್ರೀ ಕಾಳೀ ಸುರತರುವಿರುವೆಡೆಗೆ !

ಅಹಂಕಾರ ಅವಿದ್ಯೆಯರೆನ್ನುವ
ಮಾತಾಪಿತರನು ಹೊರಗಟ್ಟು ;
ಪ್ರಳಯ ಬಂದರೂ ಜಗ್ಗದ ತೆರದಲಿ
ಮನವನು ತಾಳ್ಮೆಯ ಕಂಬಕೆ ಕಟ್ಟು.
ಧರ್ಮಾಧರ್ಮಗಳೆಂಬ ಹೋತಗಳ
ನಿಷೇಧ ಯೂಪಸ್ತಂಭದಲಿ
ಕಟ್ಟಿ ಬಲಿಯ ಕೊಡು ಕೊಂದು ಅವುಗಳನು
ವಿವೇಕವೆನ್ನುವ ಖಡ್ಗದಲಿ !

ಮೊದಲ ಹೆಂಡತಿಯ, ಮತ್ತಾಮಕ್ಕಳ
ಸಂಗವ ತೊರೆ, ಬಾ ಇತ್ತಕಡೆ
ಹಿಂದೆ ಬಂದರೂ ಕಟ್ಟಿ ಎಸೆದುಬಿಡು
ಜ್ಞಾನಸಾಗರದ ಅಲೆಗಳೆಡೆ !
"ನಾನು ಹೇಳುವೀ ತೆರದಲಿ ನಡೆದರೆ
ಯಮನಿಗೆ ಉತ್ತರ ಕೊಡಬಹುದು !"
ಪ್ರಸಾದ ರಾಮನು ನುಡಿವನು: "ಓ ಮನ
ನೀನೇ ಪ್ರಿಯಸಖ ಎನ್ನುವೆನು."

ಶ್ಯಾಮವಸು : "ಎರಡು ಮುಳ್ಳುಗಳನ್ನೂ ಬಿಸಾಡಿದನಂತರ ಇನ್ನು ಉಳಿದುಕೊಳ್ಳೋದೇನು?"

ಶ್ರೀರಾಮಕೃಷ್ಣರು : "ನಿತ್ಯಶುದ್ಧಬೋಧರೂಪ ಮಾತ್ರ. ಅದನ್ನು ನಾನು ವಿವರಿಸಿ ತಿಳಿಸೋ ಬಗೆ ಹೇಗೆ? ಯಾರಾದರು ನಿನ್ನನ್ನು ಕೇಳಿದರೆ, 'ತುಪ್ಪದ ರುಚಿ ಎಂಥದು?' ಅಂತ, ನೀನು ಅದನ್ನು ಆತನಿಗೆ ವಿಶದ ಪಡಿಸೋ ಬಗೆ ಹೇಗೆ? ಅತಿ ಹೆಚ್ಚೆಂದರೆ ನೀನು ಆತನಿಗೆ ಹೇಳಬಹುದು, 'ತುಪ್ಪದ ರುಚಿಯೇ? ತುಪ್ಪದ ಹಾಗೆ!' ಅಂತ. ಒಬ್ಬ ಚಿಕ್ಕ ಹುಡುಗಿ ತನ್ನ ಗೆಳತಿಯನ್ನು ಕೇಳಿದಳು: 'ನಿಮ್ಮ ಮನೆಗೆ ನಿನ್ನ ಪತಿ ಬಂದಿದಾನೆ. ಒಳ್ಳೆಯದು ಗೆಳತಿ, ನೀನು ಏನೇನು ಆನಂದವನ್ನು ಆತನೊಡನೆ ಅನುಭವಿಸುತ್ತೀಯೆ ತಿಳಿಸು ನೋಡೋಣ?' ಆ ಗೆಳತಿ ಉತ್ತರ ವಿತ್ತಳು: 'ನನ್ನರಗಿಣಿ, ನಿನಗೂ ಪತಿ ದೊರಕಿದನಂತರ ಎಲ್ಲಾ ನಿನಗೇ ಗೊತ್ತಾಗುತ್ತದೆ. ಈಗ ನಾನು ನಿನಗೆ ವಿವರಿಸಿ ತಿಳಿಸೋ ಬಗೆ ಹೇಗೆ?'

"ಪುರಾಣದಲ್ಲಿ ಹೇಳಿದೆ, ಭಗವತಿ ಹಿಮಗಿರಿ ರಾಜನ ಮನೆಯಲ್ಲಿ ಜನ್ಮ ತಳೆದಾಗ, ಆಕೆ ಆತನಿಗೆ ತನ್ನ ವಿವಿಧ ರೂಪುಗಳ ದರ್ಶನ ಕೊಟ್ಟಳು. ಗಿರಿರಾಜ ಎಲ್ಲಾ ರೂಪುಗಳನ್ನೂ ದರ್ಶನ ಮಾಡಿ ಕೊನೆಗೆ ಆಕೆಗೆ ಹೇಳಿದ: 'ವೇದಗಳಲ್ಲಿ ವರ್ಣಿತವಾಗಿರೋ ಬ್ರಹ್ಮನ ದರ್ಶನ ನನಗೆ ಆಗೋವಂತೆ ಮಾಡು.' ಆಗ ಭಗವತಿ ಹೇಳಿದಳು: 'ತಂದೆ, ನಿನಗೆ ಬ್ರಹ್ಮಸಾಕ್ಷಾತ್ಕಾರ ದೊರಕಬೇಕಾದರೆ ನೀನು ಸಾಧುಸಂಗ ಮಾಡಬೇಕು.'

"ಬ್ರಹ್ಮ ಏನು ಎಂಬುದನ್ನು ಬಾಯಿಂದ ವರ್ಣಿಸಲಾಗೋದಿಲ್ಲ. ಯಾರೊ ಒಬ್ಬ ಒಮ್ಮೆ ಹೇಳಿದನಂತೆ, ಬ್ರಹ್ಮ ವಿನಾ ಎಲ್ಲವೂ ಉಚ್ಛಿಷ್ಟ ಅಂತ. ಇದರ ಅರ್ಥ ವೇದ, ಪುರಾಣ, ತಂತ್ರ, ಉಳಿದ ಎಲ್ಲಾ ಶಾಸ್ತ್ರಗಳನ್ನು ಬಾಯಿಂದ ಉಚ್ಚರಿಸಲು ಸಾಧ್ಯವಾಗೋದರಿಂದ ಅವೆಲ್ಲ ಉಚ್ಛಿಷ್ಟವಾಗಿಹೋಗಿವೆ; ಆದರೆ ಬ್ರಹ್ಮ ಏನು ಎಂಬುದನ್ನು ಇದುವರೆಗೆ ಯಾರೂ ಬಾಯಿಂದ ವರ್ಣಿಸಲು ಸಾಧ್ಯವಾಗಿಲ್ಲ. ಆದ್ದರಿಂದ ಬ್ರಹ್ಮ ಇನ್ನೂ ಉಚ್ಛಿಷ್ಟನಾಗಿಲ್ಲ. ಸಚ್ಚಿದಾನಂದನೊಡನೆ ಕ್ರೀಡಿಸೋದರಿಂದ, ವಿಲಾಸಿಸೋದರಿಂದ ದೊರೆಯೊ ಆನಂದ ಏನು ಎಂಬುದನ್ನು ಬಾಯಿಂದ ವರ್ಣಿಸಲಾಗೋದಿಲ್ಲ. ಯಾರಿಗೆ ದೊರೆತಿದೆಯೋ ಆತನಿಗೇ ಅದು ಗೊತ್ತು.

(ಡಾಕ್ಟರನ್ನು ಸಂಬೋಧಿಸಿ) "ನೋಡು, ಅಹಂಕಾರ ಹೋಗದ

ಹೊರತು ಜ್ಞಾನ ದೊರಕದು. 'ಮುಕ್ತಿ ದೊರೆಯೋದು ಯಾವಾಗ? "ನಾನು" ಎಂಬುದು ಸತ್ತಾಗ.' ಎಂಬ ನಾಣ್ಣುಡಿಯೊಂದಿದೆ. 'ನಾನು', 'ನನ್ನದು' ಎಂಬುದೇ ಅಜ್ಞಾನ. 'ನೀನು', 'ನಿನ್ನದು' ಎಂಬುದೇ ಜ್ಞಾನ. ಯಾರು ನಿಜವಾದ ಭಕ್ತನೊ ಆತ ಪ್ರಾರ್ಥನೆಮಾಡುತ್ತಾನೆ: 'ಹೇ ಭಗವಂತ, ನೀನೇ ಕರ್ತ; ಎಲ್ಲವನ್ನೂ ಮಾಡೋನು ನೀನೆ. ನಾನು ಕೇವಲ ಯಂತ್ರ ಮಾತ್ರ; ನೀನು ಮಾಡಿಸಿದ ಹಾಗೆ ಮಾಡುತ್ತೇನೆ. ಇವೆಲ್ಲ—ಧನ, ಐಶ್ವರ್ಯ, ಅಷ್ಟೇ ಅಲ್ಲ ಈ ಇಡೀ ಜಗತ್ತು—ನಿನಗೆ ಸೇರಿದವೆ. ಈ ಮನೆ, ಪರಿಜನ ಎಲ್ಲರೂ ನಿನಗೆ ಸೇರಿದವರೇ ವಿನಾ ನನಗಲ್ಲ. ನಾನು ನಿನ್ನ ದಾಸ; ನಿನ್ನ ಆಜ್ಞೆಯಂತೆ ನಿನಗೆ ಸೇವೆ ಮಾಡೊ ಅಧಿಕಾರ ಮಾತ್ರ ನನ್ನದು.'

"ಯಾರು ಒಂದಷ್ಟು ಪುಸ್ತಕ-ಗಿಸ್ತಕ ಓದಿದಾರೊ ತಾನಾಗೇ ಅವರಿಗೆ ಅಹಂಕಾರ ಬಂದುಬಿಡುತ್ತದೆ. ಒಮ್ಮೆ ನಾನು ಕಾಳೀಕೃಷ್ಣ ಠಾಕೂರನೊಡನೆ ಭಗವದ್ವಿಷಯವಾಗಿ ಮಾತಾಡಿದೆ. ಆತ ಹೇಳಿದ: 'ಅದೆಲ್ಲ ನನಗೆ ಗೊತ್ತಿದೆ.' ನಾನು ಹೇಳಿದೆ: 'ದೆಹಲಿಗೆ ಹೋಗಿ ಬಂದ ಮನುಷ್ಯ, ತಾನು ದೆಹಲಿಗೆ ಹೋಗಿಬಂದವನು ಅಂತ ಜಂಬಕೊಚ್ಚಿಕೋ ತಾನೇನು? ದೊಡ್ಡ ಮನುಷ್ಯ ತಾನು ದೊಡ್ಡಮನುಷ್ಯ ಅಂತ ಹೇಳಿಕೋ ತಾನೇನು?'"

ಶ್ಯಾಮವಸು: "ಕಾಳೀಕೃಷ್ಣಠಾಕೂರ ನಿಮ್ಮನ್ನು ಬಹಳವಾಗಿ ಗೌರವಿಸುತ್ತಿದಾನೆ."

ಶ್ರೀರಾಮಕೃಷ್ಣರು: "ಓ, ಒಣಹೆಮ್ಮೆ ಹೇಗೆ ತಲೆಯನ್ನು ಕೆಡಿಸಿ ಬಿಡುತ್ತದೆ ಅಂತ! ದಕ್ಷಿಣೇಶ್ವರದ ಕಾಳೀದೇವಾಲಯದಲ್ಲಿ ಒಬ್ಬ ಜಾಡಮಾಲಿ ಹೆಂಗಸು ಕೆಲಸಮಾಡಿಕೊಂಡಿದ್ದಳು. ಆಕೆ ಒಂದೆರಡು ಒಡವೆಗಳನ್ನು ಮೈಮೇಲೆ ಹಾಕಿಕೊಂಡಿದ್ದರಿಂದ ಆಕೆಗೆ ಎಷ್ಟೊಂದು ಗರ್ವ ಅಂತ! ಆಕೆ ಬರುತ್ತಿದ್ದ ದಾರಿಯಲ್ಲಿ ಪಕ್ಕದಲ್ಲಿ ಯಾರಾದರು ನಡೆದು ಹೋದರು ಅಂದರೆ ಗದರಿಸುತ್ತಿದ್ದಳು: 'ಏ! ದೂರ ಸರಿ!' ಜಾಡಮಾಲಿ ಹೆಂಗಸೇ ಹೀಗೆ ಮಾತಾಡೋವಾಗ, ಉಳಿದವರ ಅಹಂಕಾರದ ವಿಷಯವಾಗಿ ಇನ್ನು ಹೇಳಬೇಕಾದ್ದೇನಿದೆ?"

ಶ್ಯಾಮವಸು: "ಮಹಾಶಯರೆ, ಸಕಲ ಕಾರ್ಯಗಳನ್ನು ಭಗ

ವಂತನೇ ಮಾಡುತ್ತಿರೋದಾದರೆ, ಪಾಪಕೃತ್ಯಗಳಿಗಾಗಿ ಮನುಷ್ಯ ಏಕೆ ಶಿಕ್ಷೆಗೊಳಗಾಗಬೇಕು ?"

ಶ್ರೀರಾಮಕೃಷ್ಣರು: "ನಿನ್ನದು ಅಕ್ಕಸಾಲೆ ಬುದ್ಧಿ !"

ನರೇಂದ್ರ: "ಅಕ್ಕಸಾಲೆ ಬುದ್ಧಿ ಅಂದರೆ ಲೆಕ್ಕಾಚಾರದ ಬುದ್ಧಿ."

ಶ್ರೀರಾಮಕೃಷ್ಣರು: "ನಾನು ಜನರಿಗೆ ಹೇಳೋದುಂಟು: ಎಲಾ ತಿಳಿಗೇಡಿಗಳ! ಮಾವಿನ ಹಣ್ಣು ತಿಂದು ಆನಂದಪಡಿ. ತೋಟದಲ್ಲಿ ಎಷ್ಟು ನೂರು ಗಿಡಗಳಿವೆ, ಎಷ್ಟು ಸಹಸ್ರ ಕೊಂಬೆಗಳಿವೆ, ಎಷ್ಟು ಕೋಟಿ ಎಲೆಗಳಿವೆ ಇವೇ ಮೊದಲಾದ ಲೆಕ್ಕಾಚಾರದಿಂದ ನಿಮಗೆ ದೊರೆಯೋ ಫಲವೇನು? ನೀವು ಬಂದದ್ದು ಮಾವಿನ ಹಣ್ಣು ತಿನ್ನೋಕೆ. ತಿಂದು ಆನಂದಪಡಿ.

(ಶ್ಯಾಮವಸುವಿಗೆ) "ನೀನು ಈ ಜಗತ್ತಿನಲ್ಲಿ ಮಾನವಜನ್ಮ ಎತ್ತಿರೋದು ಭಗವಂತನ ಸಾಕ್ಷಾತ್ಕಾರಕ್ಕಾಗಿ ; ಆದ್ದರಿಂದ ಆತನ ಪಾದಪದ್ಮಗಳಲ್ಲಿ ಭಕ್ತಿಯನ್ನು ಗಳಿಸಿಕೊಳ್ಳಲೋಸುಗ ಪ್ರಯತ್ನಮಾಡು. ನೂರಾರು ವಿಷಯಗಳ ಕಡೆಗೇಕೆ ನೀನು ನಿನ್ನ ಮನಸ್ಸನ್ನು ಹರಿಸುತ್ತಾ ಇದೀಯೆ? ತತ್ತ್ವಶಾಸ್ತ್ರದಲ್ಲಿ ಆಸಕ್ತನಾಗಿ ವಿಚಾರದಲ್ಲಿ ತೊಡಗೋದರಿಂದ ನಿನಗೆ ದೊರೆಯೋ ಲಾಭವೇನು? ಇಲ್ಲಿ ನೋಡು, ನಿನಗೆ ಅಮಲೇರಬೇಕಾದರೆ ಒಂದು ಚಟಾಕು ಮದ್ಯವೇ ಸಾಕಾಗಿರುವಾಗ, ಸೇಂದಿ ಅಂಗಡಿಯಲ್ಲಿ ಎಷ್ಟು ಪೀಪಾಯಿ ಮದ್ಯವಿದೆ ಎಂಬುದರ ಲೆಕ್ಕಾಚಾರ ನಿನಗೇಕೆ?"

ಡಾಕ್ಟರ್: "ಖಂಡಿತ ನಿಜ. ಜೊತೆಗೆ ಅದು ಭಗವಂತನ ಅಂಗಡಿಯಲ್ಲಿರೋ ಮದ್ಯ. ಅದಕ್ಕೆ ಮಿತಿ ಎಂಬುದೇ ಇಲ್ಲ. ಅದು ಬರಿದಾಗೋ ಹಾಗೇ ಇಲ್ಲ."

ಶ್ರೀರಾಮಕೃಷ್ಣರು ಶ್ಯಾಮವಸುವಿಗೆ: "ಭಗವಂತನಿಗೆ ವಕಾಲತ್ತು ವಹಿಸಿಬಿಡು. ನಿನ್ನ ಇಡೀ ಹೊರೆಯನ್ನೆಲ್ಲ ಆತನಿಗೆ ಹೊರಿಸಿಬಿಡು. ನಿನ್ನ ಭಾರವನ್ನೆಲ್ಲ ನೀನು ಒಳ್ಳೆಯವರ ಮೇಲೆ ಹಾಕಿದ್ದರೆ ಅವರು ಎಂದಿಗಾದರೂ ನಿನಗೆ ಕೆಡಕು ಎಣಿಸುವರೇ? ನಿನ್ನ ಪಾಪಕೃತ್ಯಗಳಿಗೆ ನಿನ್ನನ್ನು ಶಿಕ್ಷಿಸಬೇಕೊ ಬೇಡವೊ ಎಂಬುದು ಕೇವಲ ಆತನಿಗೆ ಮಾತ್ರವೇ ಗೊತ್ತು."

ಡಾಕ್ಟರ್: "ಭಗವಂತನ ಮನಸ್ಸಿನಲ್ಲಿ ಏನಿದೆಯೊ ಅದು ಆತನಿಗೇ ಗೊತ್ತು. ಅದನ್ನು ಮನುಷ್ಯ ಹೇಗೆ ತಾನೇ ಊಹಿಸಬಲ್ಲ? ಆತ ನಮ್ಮ ಲೆಕ್ಕಾಚಾರಕ್ಕೆ ಅತೀತ."

ಶ್ರೀರಾಮಕೃಷ್ಣರು ಶ್ಯಾಮವಸುವಿಗೆ: "ಕಲ್ಕತ್ತೆಯ ಜನರಿಗೆ ಊದೋಕೆ ಬರೋ ರಾಗ ಕೇವಲ ಇದೊಂದೇ. ನೀವು ಹೇಳೋದುಂಟು: 'ಭಗವಂತನಲ್ಲಿ ವೈಷಮ್ಯ ದೋಷ ಇದೆ, ಏಕೆಂದರೆ ಆತ ಕೆಲವರನ್ನು ಸುಖದಲ್ಲಿಯೂ ಇನ್ನು ಕೆಲವರನ್ನು ದುಃಖದಲ್ಲಿಯೂ ಇಟ್ಟಿದಾನೆ.' ಈ ನೀಚರು ತಮ್ಮಲ್ಲೇನು ದೋಷವಿದೆಯೊ ಅದನ್ನೇ ಭಗವಂತನ ಮೇಲೂ ಆರೋಪಿಸುತ್ತಿದಾರೆ.

"ಹೇಮ ಎಂಬುವನು ದಕ್ಷಿಣೇಶ್ವರದ ದೇವಾಲಯಕ್ಕೆ ಬಂದು ಹೋಗುತ್ತಿದ್ದ. ನನ್ನನ್ನು ನೋಡಿದ ಅಂದರೆ ಆತ ಹೇಳುತ್ತಿದ್ದ: 'ಏನು ಭಟ್ಟಾಚಾರ್ಯರೆ, ಜಗತ್ತಿನಲ್ಲಿ ಗಳಿಸಿಕೊಳ್ಳಬೇಕಾದ್ದು ಒಂದೇ ಒಂದು ವಸ್ತು. ಅದೇ ಗೌರವ, ಅಲ್ಲವೇನು?' ಭಗವಂತನ ಸಾಕ್ಷಾತ್ಕಾರವೇ ಜೀವನದ ಏಕಮಾತ್ರ ಉದ್ದೇಶ ಎಂಬುದಾಗಿ ಹೇಳತಕ್ಕವರು ಬಹಳ ವಿರಳ."

ಶ್ಯಾಮವಸು: "ಸೂಕ್ಷ್ಮಶರೀರದ ವಿಷಯವಾಗಿ ಬಹಳ ಕೇಳಿ ದೇವೆ. ಯಾರಾದರು ಅದನ್ನು ನಮಗೆ ತೋರಿಸಿಕೊಡಬಲ್ಲರೇನು? ಮನುಷ್ಯ ಸತ್ತಾಗ ಸೂಕ್ಷ್ಮಶರೀರ ಸ್ಥೂಲಶರೀರದಿಂದ ಹೊರಕ್ಕೆ ಬಂದು ಬಿಡುತ್ತದೆ ಎಂಬುದನ್ನು ಯಾರೇ ಆಗಲಿ ಪ್ರದರ್ಶಿಸಿ ತೋರಿಸಬಲ್ಲರೇನು?"

ಶ್ರೀರಾಮಕೃಷ್ಣರು: "ಯಾರು ನಿಜವಾದ ಭಕ್ತರೊ ಅವರಿಗೇನಾದರು ಅಂಥ ದರದು ಬಿದ್ದಿದೀಯೇನು ನಿನಗೆ ಇದನ್ನೆಲ್ಲ ತೋರಿಸಿ ಕೊಡುತ್ತಾ ಕುಳಿತಿರೋಕೆ? ಯಾವ ನೀಚನೆ ಆಗಲಿ ಅವರಿಗೆ ಗೌರವ ತೋರಿಸಿದರೆ ತಾನೆ ಏನು ಅಥವಾ ಇಲ್ಲದಿದ್ದರೆ ತಾನೆ ಏನು? ಒಬ್ಬ ದೊಡ್ಡ ಮನುಷ್ಯನನ್ನು ತಮ್ಮ ಕೈಗೆ ಹಾಕ್ಕೋಬೇಕು ಅಂತ ಅವರಿಗೆ ಇಚ್ಛೆಯೇ ಉಂಟಾಗದು."

ಶ್ಯಾಮವಸು: "ಒಳ್ಳೆಯದು, ಸ್ಥೂಲದೇಹಕ್ಕು ಸೂಕ್ಷ್ಮದೇಹಕ್ಕು ಇರೋ ವ್ಯತ್ಯಾಸವೇನು?"

ಶ್ರೀರಾಮಕೃಷ್ಣರು: "ಪಂಚಭೂತಗಳಿಂದ ಕೂಡಿರೋ ಈ ದೇಹಕ್ಕೆ 'ಸ್ಥೂಲದೇಹ' ಅಂತ ಹೆಸರು. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಇವುಗಳಿಂದ ಕೂಡಿರೋ ದೇಹಕ್ಕೆ 'ಸೂಕ್ಷ್ಮಶರೀರ' ಅಂತ ಹೆಸರು. ಯಾವ ಶರೀರದಿಂದ ಭಗವದಾನಂದವನ್ನು ಪಡೆಯಬಹುದೊ ಮತ್ತು ಆತ ನೊಡನೆ ವಿಲಾಸಿಸಬಹುದೊ ಅದಕ್ಕೆ 'ಕಾರಣಶರೀರ' ಅಂತ ಹೆಸರು.

ತಂತ್ರಶಾಸ್ತ್ರ ಅದನ್ನು 'ಭಗವತಿಯ ತನು' ಅಂತ ಕರೆಯುತ್ತದೆ. ಇವೆಲ್ಲಕ್ಕೂ ಅತೀತವಾದ್ದು 'ಮಹಾಕಾರಣ (ತುರೀಯ).' ಅದನ್ನು ಬಾಯಿಂದ ವರ್ಣನೆ ಮಾಡಲಾಗೋದಿಲ್ಲ.

"ಇವನ್ನೆಲ್ಲ ಕೇವಲ ಕಿವಿಯಲ್ಲಿ ಕೇಳಿಬಿಟ್ಟರೇ ಆಗೋದೇನು? ಸಾಧನೆಗೆ ಕೈ ಹಚ್ಚು! ಬಾಯಲ್ಲಿ ಸುಮ್ಮನೆ, 'ಬಂಗಿ ಸೊಪ್ಪು, ಬಂಗಿ ಸೊಪ್ಪು' ಅಂತ ಹೇಳುತ್ತಿದ್ದರೆ ಏನಾಗುತ್ತದೆ? ಅದರಿಂದ ನೆಶಾ ಉಂಟಾಗುತ್ತದೆಯೆ? ಬಂಗಿ ಸೊಪ್ಪನ್ನು ಅರೆದು ಮುದ್ದೆಮಾಡಿ ಅದನ್ನು ಮೈಗೆ ಸವರಿದರೂ ನೆಶಾ ಹತ್ತದು. ಅದನ್ನು ಕಿಂಚಿತ್ತು ತಿನ್ನಬೇಕು. ನಲವತ್ತನೆ ನಂಬರ ನೂಲು ಯಾವುದು, ನಲವತ್ತೊಂದನೆ ನಂಬರ ನೂಲು ಯಾವುದು ಎಂಬುದನ್ನು ನೂಲು-ವ್ಯಾಪಾರ ಮಾಡದವನ ಕೈಯಲ್ಲಿ ಹೇಳಲಾಗುತ್ತದೆಯೇನು? ಆದರೆ ಯಾರು ಅದರ ವ್ಯಾಪಾರಿಗಳೊ ಅವರಿಗೆ ಯಾವುದು ಎಂಥ ನಂಬರಿನ ನೂಲು ಅಂತ ಪತ್ತೆ ಹಚ್ಚೋಕೆ ಸ್ವಲ್ಪವೂ ಕಷ್ಟವಾಗದು. ಅದಕ್ಕಾಗೇ ಹೇಳುತ್ತಿರೋದು ಸ್ವಲ್ಪ ಸಾಧನೆ ಮಾಡು ಅಂತ. ಬಳಿಕ ನಿನಗೆ ಯಾವುದಕ್ಕೆ ಸ್ಥೂಲ, ಸೂಕ್ಷ್ಮ, ಕಾರಣ, ಮಹಾ ಕಾರಣ ಅಂತ ಕರೆಯುತ್ತಾರೆ ಎಂಬುದನ್ನು ಸ್ಪಷ್ಟವಾಗಿ ಅರಿತುಕೊಳ್ಳಲು ಸಾಧ್ಯವಾಗುತ್ತದೆ. ಭಗವಂತನನ್ನು ಪ್ರಾರ್ಥಿಸುವಾಗ, ಆತನ ಪಾದ ಪದ್ಮಗಳಲ್ಲಿ ನಿನಗೆ ಕೇವಲ ಭಕ್ತಿಯುಂಟಾಗುವಂತೆ ಪ್ರಾರ್ಥನೆಮಾಡು.

"ಅಹಲ್ಯೆಯ ಶಾಪವಿಮೋಚನೆಯಾದನಂತರ ಶ್ರೀರಾಮಚಂದ್ರ ಆಕೆಗೆ ಹೇಳಿದ: 'ನನ್ನಿಂದ ನೀನು ಒಂದು ವರ ಪಡೆದುಕೊ.' ಅಹಲ್ಯೆ ಪ್ರಾರ್ಥಿಸಿದಳು: 'ಹೇ ರಾಮ, ನೀನು ನನಗೆ ವರ ಕೊಡೋದಾದರೆ, ಒಂದು ಪಕ್ಷ ನಾನು ಹಂದಿ ಹೊಟ್ಟೆಯಲ್ಲಿ ಹುಟ್ಟಬೇಕಾಗಿಬಂದರೂ ಚಿಂತೆಯಿಲ್ಲ, ನನ್ನ ಮನಸ್ಸು ಮಾತ್ರ ಸತತ ನಿನ್ನ ಪಾದಪದ್ಮಗಳ ಕಡೆ ಹರಿಯುತ್ತಿರುವಂತೆ ವರ ಕರುಣಿಸು.'

"ನಾನು ಕೇವಲ ಭಕ್ತಿಗಾಗಿ ಮಾತ್ರವೇ ಭಗವತಿಯನ್ನು ಪ್ರಾರ್ಥನೆ ಮಾಡಿಕೊಂಡೆ. ಭಗವತಿಗೆ ಪುಷ್ಪಾಂಜಲಿಯನ್ನು ಅರ್ಪಿಸಿ ಕೈಮುಗಿದು ಪ್ರಾರ್ಥನೆಮಾಡಿದೆ: 'ತಾಯಿ, ಇಗೋ ತೆಗೆದುಕೊ ನಿನ್ನ ಅಜ್ಞಾನವನ್ನ, ಇಗೋ ತೆಗೆದುಕೊ ನಿನ್ನ ಜ್ಞಾನವನ್ನ; ನನಗೆ ಶುದ್ಧ ಭಕ್ತಿಯನ್ನು ಕೊಡು. ಇಗೋ ತೆಗೆದುಕೊ ನಿನ್ನ ಶುಚಿಯನ್ನ, ಇಗೋ ತೆಗೆದುಕೊ ನಿನ್ನ ಅಶುಚಿಯನ್ನ; ನನಗೆ ಶುದ್ಧ ಭಕ್ತಿಯನ್ನು ನೀಡು. ಇಗೋ ತೆಗೆದುಕೊ ನಿನ್ನ

ಪಾಪವನ್ನ, ಇಗೋ ತೆಗೆದುಕೊ ನಿನ್ನ ಪುಣ್ಯವನ್ನ; ಇಗೋ ತೆಗೆದುಕೊ ನಿನ್ನ ಒಳ್ಳೆಯದನ್ನ, ಇಗೋ ತೆಗೆದುಕೊ ನಿನ್ನ ಕೆಟ್ಟದನ್ನ; ನನಗೆ ಶುದ್ಧ ಭಕ್ತಿಯನ್ನು ಕರುಣಿಸು. ಇಗೋ ತೆಗೆದುಕೊ ನಿನ್ನ ಧರ್ಮವನ್ನ, ಇಗೋ ತೆಗೆದುಕೊ ನಿನ್ನ ಅಧರ್ಮವನ್ನ; ನನಗೆ ಶುದ್ಧ ಭಕ್ತಿಯನ್ನು ವರಪ್ರಸಾದ ಮಾಡು.'

"ಧರ್ಮ ಎಂದರೆ ದಾನಾದಿ ಸದ್ಕರ್ಮಗಳು. ಧರ್ಮ ಸ್ವೀಕಾರ ದೊಡನೆ ಅಧರ್ಮವನ್ನೂ ಸ್ವೀಕರಿಸಬೇಕಾಗುತ್ತದೆ. ಪುಣ್ಯ ಸ್ವೀಕಾರ ದೊಡನೆ ಪಾಪವನ್ನೂ ಸ್ವೀಕರಿಸಬೇಕಾಗುತ್ತದೆ. ಜ್ಞಾನವನ್ನು ಸ್ವೀಕರಿಸಿದರೆ, ಅಜ್ಞಾನವನ್ನು ಸ್ವೀಕರಿಸಬೇಕಾಗುತ್ತದೆ. ಶುಚಿಯನ್ನು ಸ್ವೀಕರಿಸಿದರೆ, ಅಶುಚಿಯನ್ನೂ ಸ್ವೀಕರಿಸಬೇಕಾಗುತ್ತದೆ. ಇದು ಯಾರಿಗೆ ಬೆಳಕಿನ ಬೋಧೆ ಇರುವುದೊ, ಆತನಿಗೆ ಅಂಧಕಾರದ ಬೋಧೆಯೂ ಇರೋ ಹಾಗೆ. ಯಾರಿಗೆ ಒಂದರ ಜ್ಞಾನವಿರುವುದೊ ಆತನಿಗೆ ಅನೇಕದರ ಜ್ಞಾನವೂ ಇರುತ್ತದೆ. ಯಾರಿಗೆ ಒಳ್ಳೆಯದರ ಜ್ಞಾನ ವಿರುವುದೊ ಆತನಿಗೆ ಕೆಟ್ಟದರ ಜ್ಞಾನವೂ ಇರುತ್ತದೆ.

"ಯಾರೇ ಆಗಲಿ ಹಂದಿ ಮಾಂಸ ತಿನ್ನುತ್ತಿದ್ದರೂ ಭಗವಂತನ ಪಾದಪದ್ಮಗಳಲ್ಲಿ ಭಕ್ತಿ ಇಟ್ಟಿರೋದಾದರೆ, ಆತನೆ ಧನ್ಯ. ಅದಕ್ಕೆ ಬದಲು ಹವಿಷ್ಯಾನ್ನ ತಿನ್ನುತ್ತ ಯಾರೆ ಆಗಲಿ ಸಂಸಾರಾಸಕ್ತನಾಗಿದ್ದರೆ—"

ಡಾಕ್ಟರ್: "ಆತ ಅಧಮಾಧಮ. ಈ ಸಂದರ್ಭದಲ್ಲಿ ನಿಮಗೆ ಒಂದು ವಿಷಯ ತಿಳಿಸಬೇಕಾಗಿದೆ. ಒಮ್ಮೆ ಬುದ್ಧ ಹಂದಿ ಮಾಂಸ ತಿಂದ. ಪ್ರತಿಫಲ ತಾಳಲಾಗದ ಹೊಟ್ಟೆನೋವು ಅದನ್ನು ತಡೆದುಕೊಳ್ಳಲು ಆತ ಅಫೀಮು ತಿನ್ನುತ್ತಿದ್ದ. ಆತನ ನಿರ್ವಾಣ-ಗಿರ್ವಾಣ ಎಲ್ಲ ಏನು ಗೊತ್ತೆ? ಅಫೀಮು ತಿಂದು ನೆಶಾ ಬರುತ್ತಿತ್ತು; ಬಾಹ್ಯಜ್ಞಾನಶೂನ್ಯನಾಗಿ ಬಿಡುತ್ತಿದ್ದ. ಆ ಅವಸ್ಥೆಯೇ ಹೆಸರುವಾಸಿಯಾದ ಆತನ 'ನಿರ್ವಾಣ'",

ಬುದ್ಧದೇವನ ನಿರ್ವಾಣದ ಸಂಬಂಧವಾಗಿ ಈ ವ್ಯಾಖ್ಯಾನವನ್ನು ಡಾಕ್ಟರ್ ಬಾಯಿಂದ ಕೇಳಿ ಎಲ್ಲರೂ ಗಹಗಹಿಸಿ ನಗಲಾರಂಭಿಸಿದರು. ಮತ್ತೆ ಮಾತುಕತೆ ಮುಂದುವರಿಯಲಾರಂಭಿಸಿತು.

ಶ್ರೀರಾಮಕೃಷ್ಣರು ಶ್ಯಾಮವಸುವಿಗೆ: "ನೀನು ಸಾಂಸಾರಿಕ ಜೀವನವನ್ನು ನಡೆಯಿಸಿಕೊಂಡು ಹೋಗುತ್ತಿರುವುದೇನೂ ತಪ್ಪಲ್ಲ. ಆದರೆ ಭಗವಂತನ ಪಾದಪದ್ಮಗಳಲ್ಲಿ ಮನಸ್ಸನ್ನಿಟ್ಟು ಕಾಮನಾಶೂನ್ಯನಾಗಿ ಕೆಲಸ

ಕಾರ್ಯಗಳನ್ನು ಮಾಡಿಕೊಂಡು ಹೋಗುತ್ತಿರಬೇಕು. ಇಲ್ಲಿ ನೋಡು, ಯಾರಿಗೇ ಆಗಲಿ ಬೆನ್ನ ಮೇಲೆ ಬೆನ್ನುಫಣಿ ಎದ್ದಿದ್ದರೆ, ಆತ ನೋಡೋಕೆ ಎಂದಿನ ಹಾಗೆ ಎಲ್ಲರೊಡನೆಯೂ ಮಾತುಕತೆಗಳಾಡುತ್ತಿರುತ್ತಾನೆ; ಬಹುಶಃ ಎಂದಿನ ಹಾಗೆ ತನ್ನ ಕೆಲಸಕಾರ್ಯಗಳನ್ನೂ ಮಾಡಿಕೊಂಡು ಹೋಗುತ್ತಿರಬಹುದು ; ಆದರೆ ಮಾತ್ರ ಆತನ ಮನಸ್ಸು ಬೆನ್ನುಫಣಿಯಲ್ಲೇ ನೆಲಸಿಬಿಟ್ಟಿರುತ್ತದೆ. ಅದೇ ರೀತಿಯಾಗಿ ಸಂಸಾರದಲ್ಲಿರಬೇಕು.

"ಸಂಸಾರದಲ್ಲಿ ಪತಿತ ಹೆಂಗಸಿನೋಪಾದಿಯಲ್ಲಿರಬೇಕು. ಆಕೆಯ ಮನಸ್ಸಿರೋದು ಉಪಪತಿಯ ಕಡೆ, ಆದರೂ ಸಾಂಸಾರಿಕ ಕೆಲಸಕಾರ್ಯಗಳನ್ನೆಲ್ಲ ಮಾಡಿಕೊಂಡು ಹೋಗುತ್ತಿರುತ್ತಾಳೆ. (ಡಾಕ್ಟರಿಗೆ) ಅರ್ಥವಾಯಿತೇನು ?"

ಡಾಕ್ಟರ್ : "ಆ ತರದ ಅನುಭವವೇ ನನಗಿಲ್ಲದಿರೋವಾಗ ನಾನು ಅದನ್ನು ಅರ್ಥ ಮಾಡಿಕೊಳ್ಳೋ ಬಗೆ ಹೇಗೆ ?"

ಶ್ಯಾಮವಸು : "ಓ, ಹಾಗೇನಲ್ಲ ! ನಿಮಗೆ ಸ್ವಲ್ಪ ಅರ್ಥ ಆಗೇ ಇದೆ !" (ಎಲ್ಲರೂ ನಗುತ್ತಾರೆ)

ಶ್ರೀರಾಮಕೃಷ್ಣರು ನಗುತ್ತ ನಗುತ್ತ : "ವಿಶೇಷತಃ ಆ ವೃತ್ತಿಯಲ್ಲಿ ಆತ ಬಹಳ ಕಾಲದಿಂದ ನುರಿತಿದಾನೆ. ಅಲ್ಲವೇನು ?" (ಎಲ್ಲರೂ ನಗುತ್ತಿದಾರೆ.)

ಶ್ಯಾಮವಸು : "ಮಹಾಶಯರೆ, ತಿಯಾಸೊಫಿ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು ?"

ಶ್ರೀರಾಮಕೃಷ್ಣರು : "ಮುಖ್ಯನಾಗಿ ಗಮನಿಸಬೇಕಾದ ವಿಷಯವೇನೆಂದರೆ, ಯಾರು ಶಿಷ್ಯರನ್ನು ಸಂಪಾದಿಸಿಕೊಳ್ಳಲು ಸುತ್ತಾಡುತ್ತಾರೊ, ಅವರು ಕೀಳು ದರ್ಜೆಗೆ ಸೇರಿದವರು. ಹಾಗೇ ಸಿದ್ಧಿಗಾಗಿ, ಅಂದರೆ ಗಂಗಾ ನದಿ ಮೇಲೆ ನಡೆದುಹೋಗೋ ಶಕ್ತಿ, ದೂರ ದೇಶದಲ್ಲಿ ಯಾರಾರು ಏನೇನು ಮಾತಾಡಿಕೊಳ್ಳುತ್ತಾರೆ ಎಂಬುದನ್ನು ಹೇಳೋ ಶಕ್ತಿ ಇವೇ ಮೊದಲಾದ ಸಿದ್ಧಿಗಳನ್ನು ಸಂಪಾದಿಸಿಕೊಳ್ಳಲು ಪ್ರಯತ್ನಮಾಡೋರೂ ಅದೇ ಕೀಳುದರ್ಜೆಗೆ ಸೇರಿದವರೆ. ಇಂಥ ಜನರಿಗೆ ಶುದ್ಧ ಭಕ್ತಿ ದೊರೆಯೋದು ಬಹಳ ದುಸ್ಸಾಧ್ಯ."

ಶ್ಯಾಮವಸು : "ಆದರೆ ಅವರು (ತಿಯಾಸೊಫಿಗಳು) ಹಿಂದೂ ಧರ್ಮವನ್ನು ಪುನರುತ್ಥಾನಗೊಳಿಸಲು ಪ್ರಯತ್ನಿಸುತ್ತಿದಾರಲ್ಲ."

ಶ್ರೀರಾಮಕೃಷ್ಣರು: "ನನಗೆ ಅವರ ಸಂಬಂಧವಾಗಿ ವಿಶೇಷವಾಗಿ ಏನೂ ಗೊತ್ತಿಲ್ಲ."

ಶ್ಯಾಮವಸು: "ಸತ್ತ ಬಳಿಕ ಜೀವಾತ್ಮ ಎಲ್ಲಿಗೆ ಹೋಗುತ್ತೆ—ಚಂದ್ರಲೋಕಕ್ಕೆ ಅಥವಾ ನಕ್ಷತ್ರಲೋಕಕ್ಕೆ ಇತ್ಯಾದಿ—ಎಂಬುದನ್ನು ತಿಯಾಸೊಫಿಯಿಂದ ಅರಿತುಕೊಳ್ಳಬಹುದು."

ಶ್ರೀರಾಮಕೃಷ್ಣರು: "ಅದು ಇರಬಹುದು. ಆದರೆ ನನ್ನ ಭಾವ ಏನು ಗೊತ್ತೆ? ಒಬ್ಬ ಹನುಮಂತನನ್ನು ಕೇಳಿದ: 'ಈ ದಿನ ಯಾವ ತಿಥಿ?' ಹನುಮಂತ ಉತ್ತರವಿತ್ತ: 'ನನಗೆ ವಾರ, ತಿಥಿ, ನಕ್ಷತ್ರ ಇವು ಯಾವೂ ಗೊತ್ತಿಲ್ಲ. ಕೇವಲ ರಾಮಚಿಂತನೆಯನ್ನು ಮಾತ್ರ ಮಾಡುತ್ತಿದೇನೆ.' ನನ್ನದೂ ಅದೇ ವಿಧದ ಭಾವ."

ಶ್ಯಾಮವಸು: "ಅವರಿಗೆ ಮಹಾತ್ಮರ ಇರುವಿಕೆಯಲ್ಲಿ ವಿಶ್ವಾಸ. ನಿಮಗೂ?"

ಶ್ರೀರಾಮಕೃಷ್ಣರು: "ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇರೋದಾದರೆ, ನಾನು ಹೇಳುತ್ತೇನೆ, ಇದಾರೆ ಅಂತ. ಸದ್ಯಕ್ಕೆ ಈ ವಿಧದ ಮಾತುಗಳೆಲ್ಲ ಇಲ್ಲಿಗೇ ಸಾಕು. ನನಗೆ ಸ್ವಲ್ಪ ಗುಣವಾದನಂತರ ನೀನು ಮತ್ತೆ ಬಾ. ನನ್ನಲ್ಲಿ ನಿನಗೆ ನಂಬಿಕೆ ಇರೋದಾದರೆ, ಶಾಂತಿಯನ್ನು ಪಡೆಯಲು ನಿನಗೂ ಒಂದು ಮಾರ್ಗವನ್ನು ತೋರಿಸಿಕೊಡಲಾಗುತ್ತದೆ. ನಾನು ಹಣ, ವಸ್ತ್ರ ಇವು ಯಾವನ್ನೂ ಪರಿಗ್ರಹಿಸದಿರುವುದು ನಿನ್ನ ಕಣ್ಣಿಗೆ ಬಿದ್ದೇ ಇರಬೇಕು. ನಾವು ಇಲ್ಲಿಗೆ ಬರೋರ ಹತ್ತಿರದಿಂದ ಚಂದಾ ಎತ್ತುತ್ತಿಲ್ಲ. ಅದಕ್ಕಾಗೇ ಇಲ್ಲಿಗೆ ಬಹಳ ಜನ ಬರುತ್ತಿರೋದು! (ಎಲ್ಲರೂ ನಗುತ್ತಿದಾರೆ.)

(ಡಾಕ್ಟರಿಗೆ) "ನೀನು ಕೋಪಿಸಿಕೊಳ್ಳದಿದ್ದರೆ, ನಿನಗೆ ಕೆಲವು ವಿಷಯ ತಿಳಿಸಬೇಕೆಂದಿದೇನೆ. ಧನಾರ್ಜನೆ, ಗೌರವ ಸಂಪಾದನೆ, ಉಪನ್ಯಾಸ ಕೊಡೋದು ಇವನ್ನೆಲ್ಲ ಸಾಕಾದಷ್ಟು ಮಾಡಿದೀಯೆ. ಈಗ ಕೆಲವು ಕಾಲ ನಿನ್ನ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿಡು; ಆಗಾಗ ಇಲ್ಲಿಗೆ ಬಂದುಹೋಗುತ್ತಿರು. ಭಗವದ್ವಿಷಯಗಳನ್ನು ಕೇಳುತ್ತಿದ್ದರೆ ಉದ್ದೀಪನೆಯಾಗುತ್ತದೆ."

ಡಾಕ್ಟರ್ ತನ್ನ ಮನೆಗೆ ಹಿಂದಿರುಗಲು ಮೇಲಕ್ಕೆ ಎದ್ದು ನಿಂತುಕೊಳ್ಳುತ್ತಿದ್ದಹಾಗೆಯೇ ಗಿರೀಶಘೋಷ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ

ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ. ಆತನನ್ನು ಕಂಡು ಡಾಕ್ಟರಿಗೆ ಬಹಳ ಆನಂದವಾಗಿಬಿಟ್ಟು ಆತನೂ ಮತ್ತೆ ಕುಳಿತುಕೊಂಡ.

ಡಾಕ್ಟರ್ ಗಿರೀಶನನ್ನು ತೋರಿಸಿ: "ನೋಡಿ, ನಾನು ಇಲ್ಲಿ ಇರೋವಾಗ ಈತ ಇಲ್ಲಿಗೆ ಬರೋದಿಲ್ಲ. ಇನ್ನೇನು ಹೊರಡುವುದರಲ್ಲಿದ್ದೆನಲ್ಲ, ಅದಕ್ಕಾಗಿ ಬಂದುಬಿಟ್ಟಿದಾನೆ!" (ಎಲ್ಲರೂ ನಗುತ್ತಿದಾರೆ.)

ಡಾಕ್ಟರ್ ತನ್ನ ವಿಜ್ಞಾನ ಸಭೆಯ ಸಂಬಂಧವಾಗಿ ಗಿರೀಶನೊಡನೆ ಮಾತುಕತೆಗಳಾಡಲು ಆರಂಭಿಸಿದ.

ಶ್ರೀರಾಮಕೃಷ್ಣರು: "ಅಲ್ಲಿಗೆ ನನ್ನನ್ನು ಒಂದು ದಿನ ಕರೆದುಕೊಂಡು ಹೋಗುತ್ತೀಯ?"

ಡಾಕ್ಟರ್: "ನೀವೇನಾದರು ಅಲ್ಲಿಗೆ ಬಂದಿರಿ ಅಂದರೆ ಭಗವಂತನ ಅತ್ಯದ್ಭುತ ಕೆಲಸಕಾರ್ಯಗಳನ್ನೆಲ್ಲ ನೋಡಿಬಿಟ್ಟು ಬಾಹ್ಯಜ್ಞಾನಶೂನ್ಯರಾಗಿ ಬಿಡುತ್ತೀರಿ."

ಶ್ರೀರಾಮಕೃಷ್ಣರು: "ನಿಜವಾಗಿಯೂ!"

ಗಿರೀಶನಿಗೆ ಡಾಕ್ಟರ್: "ನೀನು ಇನ್ನು ಬೇರೆ ಏನುಬೇಕಾದರೂ ಮಾಡಿಕೊ ಆದರೆ ಮಾತ್ರ ಭಗವಂತ ಅಂತ ಇವರನ್ನು (ಪರಮಹಂಸರನ್ನು) ಪೂಜೆಮಾಡಬೇಡ. ಇಂಥ ಒಳ್ಳೆ ಮನುಷ್ಯರ ತಲೆಯನ್ನು ನೀನು ಕೆಡಿಸಿ ಬಿಡುತ್ತಾ ಇದೀಯೆ."

ಗಿರೀಶ: "ಮಹಾಶಯ, ನಾನು ಇನ್ನು ಬೇರೆ ಏನು ತಾನೆ ಮಾಡಲಿ? ಯಾರು ನನ್ನನ್ನು ಈ ಸಂಸಾರಸಾಗರದಿಂದ, ವಿಶೇಷತಃ ಸಂದೇಹಸಾಗರದಿಂದ ಪಾರುಮಾಡಿಸಿದರೊ ಅವರನ್ನು ಇನ್ನು ಬೇರೆ ಯಾವ ದೃಷ್ಟಿಯಿಂದ ನೋಡಲಿ? ಇವರ ಮಲ ನನಗೆ ಮಲ ಅಂತ ಅನ್ನಿಸುತ್ತದೆಯೆ?"

ಡಾಕ್ಟರ್: "ಮಲದ ಸಂಬಂಧವಾಗಿ ನಾನೂ ಕ್ಲೇಶಪಟ್ಟುಕೊಳ್ಳುತ್ತಿಲ್ಲ. ನನಗೂ ಅದನ್ನು ಕಂಡರೆ ಅಸಹ್ಯ ತೋರುತ್ತಿಲ್ಲ. ಒಮ್ಮೆ ಕಿರಾಣಿ ಅಂಗಡಿಯವ ತನ್ನ ಮಗುವನ್ನು ಚಿಕಿತ್ಸೆಗೆಂದು ನನ್ನ ಆಫೀಸಿಗೆ ಕರೆದುಕೊಂಡುಬಂದಿದ್ದ. ಆ ಮಗು ಅಲ್ಲೇ ಮಲವಿಸರ್ಜನೆ ಮಾಡಿಬಿಟ್ಟಿತು. ಎಲ್ಲರೂ ಮೂಗನ್ನು ತಮ್ಮ ತಮ್ಮ ಬಟ್ಟೆಯಿಂದ ಮುಚ್ಚಿಕೊಂಡುಬಿಟ್ಟರು; ಆದರೆ ನಾನು ಮಾತ್ರ ನನ್ನ ಕರವಸ್ತ್ರವನ್ನೂ ಮೂಗಿನ ಹತ್ತಿರಕ್ಕೆ ಹಿಡಿಯದೆ ಅರ್ಧ ಘಂಟೆ ಹೊತ್ತು ಅದರ ಬಳಿಯಲ್ಲೇ ಕುಳಿತಿದ್ದೆ. ಇದೂ

ಅಲ್ಲದೆ ಜಾಡಮಾಲಿ ಕಕ್ಕಸಿನ ತೊಟ್ಟಿ ಹೊತ್ತುಕೊಂಡು ನನ್ನ ಬಳಿಯಲ್ಲಿ ಹಾದುಹೋಗುವಾಗಲೂ ನಾನು ಮೂಗಿಗೆ ಬಟ್ಟೆ ಹಾಕೋದಿಲ್ಲ. ಏಕೆಂದರೆ ನನಗೆ ಚೆನ್ನಾಗಿ ಗೊತ್ತು ನಾನು ಏನೊ ಆತನೂ ಅದೇ ಅಂತ. ಆದ್ದ ರಿಂದ ಆತನನ್ನೇಕೆ ಒಂದು ಕೀಳು ದೃಷ್ಟಿಯಿಂದ ನೋಡಲಿ? ಹಾಗಾದ ರೇನು, ನನ್ನ ಕೈಯಲ್ಲಿ ಇವರ (ಪರಮಹಂಸರ) ಪಾದಧೂಳಿ ತೆಗೆದುಕೊಳ್ಳ ಲಾಗೋದಿಲ್ಲ ಅಂತೀಯ ? ನೋಡಿಲ್ಲಿ, ಈಗಲೇ ತೆಗೆದುಕೊಳ್ಳುತ್ತೇನೆ."

ಡಾಕ್ಟರ್ ಸರ್ಕಾರ ಪರಮಹಂಸರಿಗೆ ಸಾಷ್ಟಾಂಗಪ್ರಣಾಮಮಾಡಿ ಅವರ ಪಾದಧೂಳಿಯನ್ನು ತೆಗೆದುಕೊಂಡ.

ಗಿರೀಶ: "ದೇವತೆಗಳು ಹೇಳುತ್ತಿದಾರೆ, 'ಈ ಶುಭ ಮುಹೂರ್ತ ಪರಮ ಪವಿತ್ರವಾದ್ದು ! ಪರಮ ಪವಿತ್ರವಾದ್ದು !' ಅಂತ."

ಡಾಕ್ಟರ್ : "ಮನುಷ್ಯನ ಪಾದಧೂಳಿಯನ್ನು ಸ್ವೀಕರಿಸೋದರಲ್ಲಿ ಆಶ್ಚರ್ಯಪಡೋದೇನಿದೆ? ನಾನು ಎಲ್ಲರ ಪಾದಧೂಳಿಯನ್ನೂ ಸ್ವೀಕರಿಸ ಬಲ್ಲೆ. ನೀವೆಲ್ಲರೂ ನಿಮ್ಮ ನಿಮ್ಮ ಪಾದಧೂಳಿಯನ್ನು ನನಗೆ ಕರುಣಿಸಿ."

ಡಾಕ್ಟರ್ ಎಲ್ಲರ ಪಾದಧೂಳಿಯನ್ನೂ ಸ್ವೀಕರಿಸುತ್ತಾನೆ.

ನರೇಂದ್ರ ಡಾಕ್ಟರಿಗೆ: "ನಾವು ಇವರನ್ನು (ಪರಮಹಂಸರನ್ನು) ಭಗವತ್ಸದೃಶ ಮನುಷ್ಯರು ಅಂತ ಭಾವಿಸುತ್ತಿದೇವೆ. ಅದು ಹೇಗೆ ಎಂಬುದು ನಿಮಗೆ ಗೊತ್ತೆ ? ನೋಡಿ, ಸಸ್ಯವಲಯಕ್ಕು ಪ್ರಾಣಿವಲಯಕ್ಕು ಮಧ್ಯೆ ಒಂದು ಸ್ಥಾನವಿದೆ, ಅದರ ವಸ್ತು, ಸಸ್ಯವಲಯದ್ದೆ ಅಥವಾ ಪ್ರಾಣಿವಲಯದ್ದೆ ಅಂತ ನಿರ್ಧರಿಸೋದು ಬಹಳ ಕಷ್ಟ. ಅದೇ ರೀತಿ ಯಾಗಿ ಮಾನವ-ಪ್ರಪಂಚಕ್ಕು ದೈವ-ಪ್ರಪಂಚಕ್ಕೂ ಮಧ್ಯೆ ಒಂದು ಸ್ಥಾನ ವಿದೆ. ಅದರ ವ್ಯಕ್ತಿ ಮನುಷ್ಯನೇ ಅಥವಾ ಭಗವಂತನೇ ಅಂತ ನಿರ್ಧರಿಸಿ ಹೇಳೋದು ಬಹಳ ಕಷ್ಟ."

ಡಾಕ್ಟರ್: "ಓ ನನ್ನ ಯುವಕ ಗೆಳೆಯ, ಭಗವದ್ವಿಷಯವಾಗಿ ಸಾದೃಶ್ಯಗಳನ್ನು ತರೋದು ಸರಿಹೊಂದೋದಿಲ್ಲ."

ನರೇಂದ್ರ: "ನಾನು ಇವರೇ ಭಗವಂತ ಅಂತ ಹೇಳುತ್ತಿಲ್ಲವಲ್ಲ. ಹೇಳುತ್ತಾ ಇದೇನೆ, ಇವರು ಭಗವತ್ಸದೃಶರು ಅಂತ ಮಾತ್ರ."

ಡಾಕ್ಟರ್: "ಇಂಥ ವಿಷಯಗಳ ಸಂಬಂಧವಾಗಿ ಪ್ರತಿಯೊಬ್ಬನೂ ತನ್ನ ತನ್ನ ಭಾವಗಳನ್ನು ಬಚ್ಚಿಟ್ಟುಕೊಂಡಿರಬೇಕು. ಅವನ್ನು ಬೆಳಕಿಗೆ ತರೋದು ಒಳ್ಳೆಯದಲ್ಲ. ಏನು ಮಾಡಲಿ! ನನ್ನ ಮನಸ್ಸಿನಲ್ಲಿ ಏನಿದೆ

ಎಂಬುದು ಯಾರಿಗೂ ಅರ್ಥವಾಗುವುದಿಲ್ಲ! ನನ್ನ ಪರಮ ಆಪ್ತಬಂಧು ಗಳೂ ನನ್ನನ್ನು ಕಾಠಿನ್ಯಹೃದಯಿ, ನಿರ್ದಯಿ ಅಂತ ಭಾವಿಸುತ್ತಿದಾರಲ್ಲ! ನೀವೂ ಒಂದು ದಿನ ಜೋಡಿನ ಏಟು ತಿನ್ನಿಸಿ ನನ್ನನ್ನು ಹೊರಕ್ಕಟ್ಟ ಬಹುದು!"

ಶ್ರೀರಾಮಕೃಷ್ಣರು: "ಹಾಗೆಲ್ಲ ಎಂದಿಗೂ ಹೇಳಬಾರದು! ಇವ ರೆಲ್ಲರು ನಿನ್ನನ್ನು ಎಷ್ಟೊಂದಾಗಿ ಪ್ರೀತಿಸುತ್ತಿದಾರೆ ಏನುಕತೆ! ವರ ಎಷ್ಟು ಹೊತ್ತಿಗೆ ಬರುವನು ಎಂದು ಸಖಿಯರು ವಧುವಿನ ಕೊಠಡಿಯಲ್ಲಿ ಆಕಾಂಕ್ಷಿತರಾಗಿ ಕುಳಿತಿರೋಹಾಗೆ, ಇವರು ನಿನ್ನ ಬರುವಿಕೆಗಾಗಿ ಕಾದು ಕೊಂಡಿರುತ್ತಾರೆ."

ಗಿರೀಶ: "ಇಲ್ಲಿ ಎಲ್ಲರೂ ನಿಮ್ಮನ್ನು ಬಹಳ ಗೌರವ ದೃಷ್ಟಿಯಿಂದ ನೋಡುತ್ತಿದೇವೆ."

ಡಾಕ್ಟರ್: "ನನ್ನ ಮಗ, ಜೊತೆಗೆ ನನ್ನ ಹೆಂಡತಿ ಕೂಡ ನಾನೊಬ್ಬ ಕಾಠಿನ್ಯ ಹೃದಯಿ ಅಂತ ಭಾವಿಸುತ್ತಿದಾರೆ. ನಾನು ಮಾಡುತ್ತಿರೋ ತಪ್ಪೇನೆಂದರೆ, ನಾನು ನನ್ನ ಭಾವನೆಗಳನ್ನು ಯಾರೊಡನೆಯೂ ವ್ಯಕ್ತಗೊಳಿಸುತ್ತಿಲ್ಲ."

ಗಿರೀಶ: "ಆದ್ದರಿಂದ ನೀವು ನಿಮ್ಮ ಬಂಧುಗಳ ಮೇಲಾದರೂ ಕೃಪೆಯಿಟ್ಟು ನಿಮ್ಮ ಹೃದಯದ ಬಾಗಿಲುಗಳನ್ನು ತೆಗೆದಿಡೋದು ಮೇಲು; ಇಲ್ಲದಿದ್ದರೆ, ನೀವೇ ನೋಡಿ, ನಿಮ್ಮ ಹೃದಯದಲ್ಲಿ ಏನಿದೆ ಎಂಬುದನ್ನು ಅವರು ಅರಿತುಕೊಳ್ಳಲಾರರು."

ಡಾಕ್ಟರ್: "ನನ್ನ ಆಂತರ್ಯದಲ್ಲಿರೋದನ್ನು ನಾನು ಹೇಗೆ ವಿವರಿಸಿ ಹೇಳಲಿ! ನಿಮಗಿಂತಲೂ ಅಧಿಕವಾಗಿ ನನ್ನಲ್ಲಿ ಭಾವೋದ್ರೇಕವಾಗಿಬಿಡು ತ್ತದೆ. (ನರೇಂದ್ರನಿಗೆ) ಒಬ್ಬನೆ ಏಕಾಂತದಲ್ಲಿ ಕುಳಿತು ಸುಮ್ಮನೆ ಅಳುತ್ತೇನೆ.

(ಶ್ರೀರಾಮಕೃಷ್ಣರಿಗೆ) "ಒಳ್ಳೇದು, ನಾನು ನಿಮಗೊಂದು ವಿಷಯ ತಿಳಿಸಲೇನು? ನೀವು ಭಾವಸ್ಥರಾದಾಗ ಬೇರೆಯವರ ಶರೀರದ ಮೇಲೆ ನಿಮ್ಮ ಕಾಲನ್ನು ಇಡುತ್ತೀರಿ. ಅದು ಒಳ್ಳೆಯದಲ್ಲ."

ಶ್ರೀರಾಮಕೃಷ್ಣರು: "ಆ ಅವಸ್ಥೆಯಲ್ಲಿ ನಾನು ಬೇರೊಬ್ಬರ ಶರೀರ ವನ್ನು ನನ್ನ ಕಾಲಿನಿಂದ ಮುಟ್ಟುತ್ತಿದ್ದೇನೆ ಅಂತ ನನಗೆ ಗೊತ್ತಾಗುತ್ತದೆ ಯೇನು?"

ಡಾಕ್ಟರ್ : "ಹಾಗೆ ಮಾಡೋದು ಸರಿಯಲ್ಲ ಅಂತ ನಿಮಗೆ ಅನಿಸುತ್ತಿದೆ ತಾನೆ?"

ಶ್ರೀರಾಮಕೃಷ್ಣರು : "ನನಗೆ ಭಾವಾವಸ್ಥೆ ಬಂದಾಗ ನನ್ನ ಅಂತರ್ಯದಲ್ಲಿ ಏನೇನಾಗುತ್ತದೆ ಎಂಬುದನ್ನು ನಾನು ನಿನಗೆ ತಿಳಿಸೋ ಬಗೆ ಹೇಗೆ? ಆ ಅವಸ್ಥೆಯಿಂದ ಕೆಳಕ್ಕೆ ಇಳಿದನಂತರ ಒಮ್ಮೊಮ್ಮೆ ಯೋಚನೆ ಮಾಡುತ್ತೇನೆ, ಬಹುಶಃ ನನ್ನ ಈ ರೋಗ ಆ ಅವಸ್ಥೆಯ ದೆಸೆಯಿಂದ ಇರಬಹುದೇ ಅಂತ. ಸತ್ಯವೇನೆಂದರೆ, ಭಗವದ್ಭಾವನೆ ನನ್ನನ್ನು ಉನ್ಮತ್ತನನ್ನಾಗಿ ಮಾಡಿಬಿಡುತ್ತದೆ. ಆ ಅವಸ್ಥೆಯಲ್ಲಿ ಈ ಕಾರ್ಯವೆಲ್ಲ ನಡೆದು ಹೋಗಿಬಿಡುತ್ತದೆ. ಅದಕ್ಕೆ ನಾನೇನು ಮಾಡಲಿ?"

ಡಾಕ್ಟರ್ : "ಈಗ ಇವರು ನಾನು ಹೇಳೋದು ಸರಿ ಅಂತ ಒಪ್ಪಿಕೊಳ್ಳುತ್ತಾ ಇದಾರೆ. ತಾವು ಮಾಡುತ್ತಿರೋದಕ್ಕೆ ವ್ಯಥೆ ಸೂಚಿಸುತ್ತಾ ಇದಾರೆ. ಅದು ಪಾಪಕರ ಎಂಬ ಬೋಧೆ ಇವರಿಗೆ ಇದೆ."

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನಿನಗೆ ಬಹಳ ಚುರುಕು ಬುದ್ಧಿಯಿದೆ. ನೀನೇಕೆ ಈತನಿಗೆ ಸರಿಯಾದ ಉತ್ತರ ಕೊಡಬಾರದು? ಈತನಿಗೆ ಎಲ್ಲಾ ಗೊತ್ತಾಗೋ ಹಾಗೆ ವಿವರಿಸಿ ತಿಳಿಸು."

ಗಿರೀಶ ಡಾಕ್ಟರಿಗೆ: "ಮಹಾಶಯರೆ, ನೀವು ತಪ್ಪಾಗಿ ತಿಳಿದುಕೊಂಡಿದೀರಿ. ಇವರು ಅದಕ್ಕಾಗಿ ದುಃಖಿತರಾಗಿಲ್ಲ. ಇವರದು ಶುದ್ಧ ಅಪಾಪವಿದ್ಧ ದೇಹ. ಜೀವರ ಮಂಗಳಕ್ಕಾಗಿ ಇವರು ಹಾಗೆ ಸ್ಪರ್ಶ ಮಾಡುತ್ತಿದಾರೆ. ಕೆಲವು ವೇಳೆ ಇವರು ಭಾವಿಸುತ್ತಿದಾರೆ, ಜನರ ಪಾಪಗಳನ್ನೆಲ್ಲ ತಾವು ಹೊತ್ತುಕೊಳ್ಳುತ್ತಿರೋದರಿಂದ ತಮಗೆ ಈ ರೋಗ ಬಂದಿರಬೇಕು.

"ನಿಮ್ಮ ವಿಷಯವಾಗೇ ತೆಗೆದುಕೊಳ್ಳಿ. ಒಮ್ಮೆ ನೀವು ಅತಿಯಾದ ಹೊಟ್ಟೆನೋವಿನಿಂದ ನರಳಿದಿರಿ. ಆಗ ನೀವು ರಾತ್ರಿ ಬಹಳ ಹೊತ್ತಿನವರೆಗೆ ಕುಳಿತು ಓದುತ್ತಿದ್ದುದಕ್ಕಾಗಿ ವ್ಯಥೆಪಡಲಿಲ್ಲವೇನು? ಹಾಗೆಂದು ರಾತ್ರಿ ಬಹಳ ಹೊತ್ತಿನವರೆಗೆ ಓದೋದು ನಿಜವಾಗಿ ದುಷ್ಕಾರ್ಯವೇನು? ಇವರೂ (ಪರಮಹಂಸರೂ) ತಾವು ರೋಗಗ್ರಸ್ತರಾಗಿರೋದಕ್ಕೆ ವ್ಯಥೆಪಡಬಹುದು. ಹಾಗೆಂದು ತಾವು ಜೀವರ ಮಂಗಳಕ್ಕಾಗಿ ಅವರ ಶರೀರವನ್ನು ಸ್ಪರ್ಶಿಸುತ್ತಿರೋದು ದುಷ್ಕಾರ್ಯ ಅಂತಲೇನು ಇವರು ಭಾವಿಸುತ್ತಿಲ್ಲ."

ಡಾಕ್ಟರ್ ಸರ್ಕಾರ ದಿಗ್ಭ್ರಮೆ ಹಿಡಿದವನಾಗಿ ಗಿರೀಶನಿಗೆ: "ಒಪ್ಪಿಕೋತೇನೆ ನನ್ನ ಸೋಲನ್ನ. ಕೊಡು ನಿನ್ನ ಪಾದಧೂಳಿಯನ್ನ."

ಡಾಕ್ಟರ್, ಗಿರೀಶನ ಪಾದಧೂಳಿಯನ್ನು ಸ್ವೀಕರಿಸಿದ.

ಡಾಕ್ಟರ್ ನರೇಂದ್ರನಿಗೆ: "ಜನರು ಆತನ (ಗಿರೀಶನ) ವಿಷಯವಾಗಿ ಏನೇ ಹೇಳಿದರೂ, ಆತನ ಬುದ್ಧಿಶಕ್ತಿಯನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ."

ನರೇಂದ್ರ ಡಾಕ್ಟರಿಗೆ: "ನೋಡಿ, ನೀವು ಶರೀರ ಸುಖದ ಕಡೆ ಒಂದು ಕಿಂಚಿತ್ತೂ ಗಮನವೀಯದೆ ಜಡ-ವಿಜ್ಞಾನದ ಒಂದು ತತ್ತ್ವವನ್ನು ಕಂಡುಹಿಡಿಯಲು ನಿಮ್ಮ ಇಡೀ ಜೀವನವನ್ನೇ ಅರ್ಪಿಸಿಬಿಡಬಲ್ಲಿರಿ. ಆದರೆ ಭಗವದ್ವಿಜ್ಞಾನ ಎಲ್ಲಾ ವಿಜ್ಞಾನಗಳಿಗಿಂತಲೂ ಮಿಗಿಲಾದುದು. ಆದ್ದರಿಂದ ಅದನ್ನು ಪಡೆದುಕೊಳ್ಳುವುದಕ್ಕಾಗಿ ಈ ಶರೀರ ಮಡಿಯಬೇಕಾದರೂ ಮಡಿಯಲಿ ಎಂಬ ಭಾವನೆ ಇವರಿಗೆ ಬರಲೊಲ್ಲದೇನು?"

ಡಾಕ್ಟರ್: "ಇಲ್ಲಿಯವರೆಗೆ ಜನ್ಮವೆತ್ತಿದ ಎಲ್ಲಾ ಧಾರ್ಮಿಕ ಆಚಾರ್ಯರೂ, ಎಂದರೆ, ಯೇಸು, ಚೈತನ್ಯದೇವ, ಬುದ್ಧ, ಮಹಮ್ಮದ್ ಇವರೆಲ್ಲರೂ ಕಟ್ಟಕಡೆಯಲ್ಲಿ ಅಹಂಕಾರದಿಂದ ಪರಿಪೂರ್ಣರಾಗಿದ್ದರು. ಇವರಲ್ಲಿ ಪ್ರತಿಯೊಬ್ಬರೂ ಏಕಕಂಠದಿಂದ ಹೇಳಿದಾರೆ: 'ನಾನು ಏನು ಹೇಳುತ್ತೇನೊ ಅದೇ ಸತ್ಯ.' ಇದು ಎಷ್ಟು ನಿಂದನೀಯವಾದ್ದು!"

ಡಾಕ್ಟರಿಗೆ ಗಿರೀಶ: "ಮಹಾಶಯರೆ, ನೀವೂ ಅದೇ ತಪ್ಪನ್ನು ಮಾಡುತ್ತಿದೀರಿ. ಅವರೆಲ್ಲರೂ ಅಹಂಕಾರಿಗಳು ಅಂತ ಅವರಲ್ಲಿ ನೀವು ದೋಷ ಕಂಡುಹಿಡಿಯುತ್ತಾ ಇದೀರಿ. ಅದಷ್ಟೇ ಸಾಕು ನೀವೂ ಅಹಂಕಾರಿಗಳು ಅಂತ ತೋರಿಸೋಕೆ."

ಡಾಕ್ಟರ್ ಸರ್ಕಾರ ತೆಪ್ಪಗಾದ.

ಡಾಕ್ಟರಿಗೆ ನರೇಂದ್ರ: "ನಾವು ಇವರನ್ನು ಪೂಜಿಸುತ್ತಾ ಇದೇವೆ. ಇದು ಹತ್ತಿರ ಹತ್ತಿರ ಭಗವಂತನನ್ನು ಪೂಜಿಸಿದ ಹಾಗೇ."

ಈ ಮಾತುಕತೆಗಳನ್ನೆಲ್ಲ ಕೇಳಿ ಪರಮಹಂಸರು ಮಕ್ಕಳೋಪಾದಿಯಲ್ಲಿ ನಗುತ್ತಾ ಇದಾರೆ.

## ೪೮

# ಶ್ಯಾಮಪುಕುರದಲ್ಲಿ ಭಕ್ತರೊಡನೆ

೨೯ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ಷಷ್ಠಿ, ಗುರುವಾರ.

ಘಂಟೆ ಬೆಳಗಿನ ಹತ್ತು. ಮಾಸ್ಟರ್, ಶ್ರೀರಾಮಕೃಷ್ಣರ ದೇಹಾರೋಗ್ಯದ ವರದಿಯನ್ನು ಒಪ್ಪಿಸಲು ಡಾಕ್ಟರ್ ಸರ್ಕಾರನ ಮನೆಗೆ ಬಂದಿದ್ದಾನೆ. ಈಗ ಮಾಸ್ಟರ್ ಮತ್ತು ಡಾಕ್ಟರ್ ಮಾತುಕತೆಗಳಾಡುತ್ತಿದ್ದಾರೆ.

ಡಾಕ್ಟರ್ : " ನೋಡು, ಡಾಕ್ಟರ್ ಬಿಹಾರಿಭಾದೂರಿಯ ಬಾಯಲ್ಲಿ ಯಾವಾಗ ನೋಡಿದರೂ ಇದೊಂದೇ ಮಾತು. ಆತ ಹೇಳುತ್ತಿದ್ದಾನೆ : ' ಗೋತೆಯ ಸೂಕ್ಷ್ಮ ಶರೀರ ಹೊರಕ್ಕೆ ಬಂದುದನ್ನು ಗೋತೆಯೇ ಕಣ್ಣಾರ ನೋಡಿದ್ದಾನೆ. ' ಇದು ಎಷ್ಟು ಆಶ್ಚರ್ಯಕರವಾದ ವಿಷಯ ! "

ಮಾಸ್ಟರ್ : " ಪರಮಹಂಸರು ಹೇಳೋ ಹಾಗೆ, ಈ ವಿಧದ ಮಾತುಕತೆಗಳಿಂದ ನಮಗಾಗೋ ಪ್ರಯೋಜನವೇನು ? ನಾವು ಈ ಜಗತ್ತಿನಲ್ಲಿ ಜನ್ಮವೆತ್ತಿರೋದು ಭಗವಂತನ ಪಾದಪದ್ಮಗಳಲ್ಲಿ ಭಕ್ತಿ ಬೆಳಸಿಕೊಳ್ಳಲೋಸುಗ. ಮಾವಿನ ಹಣ್ಣು ತಿನ್ನಬೇಕೆಂದು ಹಣ್ಣಿನ ತೋಟಕ್ಕೆ ಬಂದವನ ಕಥೆಯನ್ನು ಅವರು ಹೇಳುತ್ತಿರುತ್ತಾರೆ. ತೋಟಕ್ಕೆ ಬಂದಂಥ ಮನುಷ್ಯ, ಹಣ್ಣು ತಿನ್ನದೆ ಕಾಗದ ಪೆನ್ಸಿಲ್ಲು ತೆಗೆದುಕೊಂಡು ಆ ತೋಟದಲ್ಲಿ ಎಷ್ಟೊಂದು ಮರಗಳಿವೆ, ಎಷ್ಟೊಂದು ರೆಂಬೆಗಳಿವೆ, ಎಷ್ಟೊಂದು ಎಲೆಗಳಿವೆ ಇವನ್ನೆಲ್ಲ ಎಣಿಸಿ ಎಣಿಸಿ ಬರೆದುಕೊಳ್ಳುತ್ತಾ ಹೋದನಂತೆ. ಇದನ್ನು ನೋಡಿ ಆ ತೋಟದ ಮಾಲಿ ಕೇಳಿದನಂತೆ: ' ಏನಿದು, ಏನುಮಾಡುತ್ತಾ ಇದೀರಿ? ನೀವು ಏಕೆ ಬಂದಿದೀರಿ ಇಲ್ಲಿಗೆ ? ' ಆತ ಉತ್ತರವಿತ್ತನಂತೆ: ' ಇಲ್ಲಿಗೆ ಮಾವಿನ ಹಣ್ಣು ತಿನ್ನೋಕೆ ಬಂದೆ. ಈಗ ಈ ತೋಟದಲ್ಲಿ ಮರ, ಕೊಂಬೆ, ಎಲೆ ಎಷ್ಟೆಷ್ಟಿವೆ ಎಂಬುದನ್ನು ಲೆಕ್ಕಹಾಕಿ ನೋಡುತ್ತಿದ್ದೇನೆ.' ಆಗ ಮಾಲಿ ಹೇಳಿದನಂತೆ : ' ನೀವು ಮಾವಿನ ಹಣ್ಣು ತಿನ್ನೋಕೆ ಬಂದಿದ್ದರೆ, ತಿಂದು ಆನಂದಪಡಿ. ಮರ, ಕೊಂಬೆ, ಎಲೆ ಎಷ್ಟೆಷ್ಟಿವೆ ಎಂಬುದನ್ನು ಕಂಡುಹಿಡಿಯೋದರಿಂದ ನಿಮಗೆ ದೊರಕೋ ಫಲವೇನು ? "

ಡಾಕ್ಟರ್ : “ ಓ, ಹೋ ! ಪರಮಹಂಸರು ಸಾರವನ್ನು ಹಿಂಡಿ ತೆಗೆದುಕೊಂಡಿದಾರೆ ಅಂತ ಕಾಣುತ್ತೆ.”

ಡಾಕ್ಟರು ತನ್ನ ಹೋಮಿಯಾಪತಿ ಆಸ್ಪತ್ರೆಯ ಸಂಬಂಧವಾಗಿ ಮಾಸ್ಟರಿಗೆ ಅನೇಕ ಕಥೆಗಳನ್ನು ಹೇಳಲಾರಂಭಿಸಿದ. ಈಗ ತನ್ನ ಆಸ್ಪತ್ರೆಗೆ ಎಷ್ಟೊಂದು ಮಂದಿ ರೋಗಿಗಳು ನಿತ್ಯವೂ ಬರುತ್ತಿದಾರೆ ಎಂಬುದರ ಪಟ್ಟಿ ಯೊಂದನ್ನು ಮಾಸ್ಟರ ಮುಂದೆ ಹಿಡಿದು ಹೇಳುತ್ತಿದಾನೆ, ಡಾಕ್ಟರ್ ಸಾಲ್ಜಾರ್ ಮೊದಲಾದವರು ತನಗೆ ಹೋಮಿಯಾಪತಿಯ ಸಂಬಂಧವಾಗಿ ನಿರುತ್ಸಾಹ ಕೊಟ್ಟದ್ದೂ ಅಲ್ಲದೆ, ತನಗೆ ವಿರುದ್ಧವಾಗಿ ಮಾಸಪತ್ರಿಕೆಗಳಲ್ಲಿ ಪ್ರಚಾರಮಾಡಿದರು ಎಂಬುದಾಗಿ.

ಡಾಕ್ಟರ್ ಮತ್ತು ಮಾಸ್ಟರ್ ಇಬ್ಬರೂ ಗಾಡಿಯಲ್ಲಿ ಕುಳಿತು ಹೊರಟರು. ಡಾಕ್ಟರ್ ಅನೇಕ ರೋಗಿಗಳ ಮನೆಗೆ ಭೇಟಿ ಕೊಟ್ಟ. ಪಾಥುರಿಯಾಘಾಟನಲ್ಲಿರೋ ಒಂದು ಮನೆಗೆ — ಠಾಕೂರರ ಕುಟುಂಬಕ್ಕೆ ಸೇರಿದವರು — ಹೋದಾಗ, ಆ ಮನೆಯ ಯಜಮಾನರು ಆತನನ್ನು ಬಹಳ ಹೊತ್ತಿನವರೆಗೆ ತಡೆದು ನಿಲ್ಲಿಸಿಕೊಂಡುಬಿಟ್ಟರು. ಅಲ್ಲಿಂದ ಗಾಡಿಗೆ ಹಿಂದಿರುಗಿ ಬಂದು ಡಾಕ್ಟರ್ ಸರ್ಕಾರ ಮಾಸ್ಟರೊಡನೆ ಮಾತುಕತೆಗಳಾಡು ತ್ತಿದಾನೆ.

ಡಾಕ್ಟರ್: “ಈ ಮನೆಯ ಯಜಮಾನನೊಡನೆ ಪರಮಹಂಸರ ಸಂಬಂಧವಾಗಿ ಸ್ವಲ್ಪ ಹೊತ್ತು ಮಾತುಕತೆಯಾಡಿ ಬಂದೆ. ತಿಯಾಸೊಫಿ ಸಂಬಂಧವಾಗಿಯೂ ಮತ್ತು ಕರ್ನಲ್ ಆಲ್ಕಾಟನ ಸಂಬಂಧವಾಗಿಯೂ ಮಾತುಕತೆ ನಡೆಯಿತು. ಪರಮಹಂಸರಿಗೆ ಈತನನ್ನು ಕಂಡರೆ ಸ್ವಲ್ಪ ಕೋಪ. ಕಾರಣ ಗೊತ್ತೆ ? ಈತ ಹೇಳೋದುಂಟು ತನಗೆ ಎಲ್ಲವೂ ಗೊತ್ತಿದೆ ಅಂತ.”

ಮಾಸ್ಟರ್: “ಇಲ್ಲ, ಇಲ್ಲ. ಅವರೇಕೆ ಕೋಪಿಸಿಕೊಳ್ಳೋಕೆ ಹೋಗುತ್ತಾರೆ? ಆದರೆ ಕೇಳಿದೇನೆ, ಇವರಿಬ್ಬರಿಗೂ ಒಮ್ಮೆ ಭೇಟಿ ಯಾಯಿತು ಅಂತ. ಪರಮಹಂಸರು ಭಗವಂತನ ವಿಷಯವಾಗಿ ಮಾತ ನಾಡುತ್ತಿದ್ದರಂತೆ. ಆಗ ಈ ಮನುಷ್ಯ ಹೇಳಲಾರಂಭಿಸಿದನಂತೆ: ‘ಹೌದು! ಅದೆಲ್ಲ ನನಗೆ ಗೊತ್ತಿದೆ!’ ”

ಡಾಕ್ಟರ್ : “ಆತ ‘ಸೈನ್ಸ್ ಅಸೋಸಿಯೇಷನ್’ಗೆ ಮೂವತ್ತೆರಡು ಸಾವಿರದ ಐನೂರು ರೂಪಾಯನ್ನು ದಾನವಾಗಿ ಕೊಟ್ಟಿದಾನೆ.”

ಅವರಿಬ್ಬರೂ ಪರಮಹಂಸರ ರೋಗದ ಸಂಬಂಧವಾಗಿಯು ಮತ್ತು ಅವರಿಗೆ ಯಾವ ರೀತಿಯಾಗಿ ಶುಶ್ರೂಷೆ ಮಾಡಬೇಕು ಎಂಬುದರ ವಿಷಯ ವಾಗಿಯು ಮಾತಾಡುತ್ತ ಗಾಡಿಯಲ್ಲಿ ಮುಂದುವರಿದರು.

ಡಾಕ್ಟರ್ : " ಅವರನ್ನು ಮತ್ತೆ ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋಗಿಬಿಡಬೇಕೆಂದು ನೀವು ಯೋಚಿಸಿದೀರೇನು ? "

ಮಾಸ್ಟರ್: " ಇಲ್ಲ. ಹಾಗೆ ಮಾಡಿದರೆ ಭಕ್ತರಿಗೆ ಬಹಳ ತೊಂದರೆ ಯಾಗಿಬಿಡುತ್ತದೆ. ಅವರು ಕಲ್ಕತ್ತದಲ್ಲೇ ಇದ್ದರೆ ಯಾವಾಗ ಅಂದರೆ ಆವಾಗ ಬಂದು ನೋಡಿಹೋಗಬಹುದು — ಅವರ ಯೋಗಕ್ಷೇಮ ನೋಡಿ ಕೊಳ್ಳಬಹುದು. "

ಡಾಕ್ಟರ್ : " ಆದರೆ ಇಲ್ಲೇ ಇದ್ದರೆ ಖರ್ಚು ಜಾಸ್ತಿಯಾಗಿ ಬಿಡುತ್ತದೆಯಲ್ಲ. "

ಮಾಸ್ಟರ್ : " ಭಕ್ತರು ಅದಕ್ಕಾಗಿ ಚಿಂತಿಸುತ್ತಿಲ್ಲ. ಯಾವ ರೀತಿಯಲ್ಲಾದರೂ ಸರಿಯೆ ಅವರಿಗೆ ಸೇವೆ ಮಾಡಬೇಕೆಂಬುದೇ ಅವರೆಲ್ಲರ ಏಕಮಾತ್ರ ಇಚ್ಛೆ. ಖರ್ಚು ಇಲ್ಲಿದ್ದರೂ ಆಗುತ್ತೆ, ಅಲ್ಲಿಗೆ ಹೋದರೂ ಆಗುತ್ತೆ. ಅಲ್ಲಿಗೆ ಹೋಗಿಬಿಟ್ಟರೆ ಭಕ್ತರು ಅವರನ್ನು ಸರ್ವದಾ ನೋಡಿ ಕೊಳ್ಳಲಾಗೋದಿಲ್ಲ. ಎಲ್ಲರಿಗೂ ಅನಾನುಕೂಲ ಕಲ್ಪಿಸಿದಂತಾಗುತ್ತದೆ. "

ಡಾಕ್ಟರ್ ಸರ್ಕಾರ ಮತ್ತು ಮಾಸ್ಟರ್ ಪರಮಹಂಸರ ಕೊಠಡಿ ಯನ್ನು ಪ್ರವೇಶಿಸಿ ನೋಡಿದಾಗ, ಅವರು ಭಕ್ತರೊಡನೆ ಕುಳಿತು ನಗು ಮುಖರಾಗಿ ಮಾತುಕತೆಯಾಡುತ್ತಿದ್ದ ದೃಶ್ಯ ಅವರ ಕಣ್ಣಿಗೆ ಬಿತ್ತು. ಡಾಕ್ಟರ್ ಭಾದುರಿಯೂ ಅವರ ಹತ್ತಿರ ಕುಳಿತಿದ್ದ.

ಡಾಕ್ಟರ್ ಸರ್ಕಾರ ಪರಮಹಂಸರ ನಾಡಿಯನ್ನು ಹಿಡಿದುನೋಡಿ ಅವರ ದೇಹಾರೋಗ್ಯವನ್ನು ಕೇಳಿ ತಿಳಿದುಕೊಂಡ. ಈಗ ಮಾತುಕತೆ ಭಗವಂತನ ಸಂಬಂಧವಾಗಿ ಆರಂಭವಾಯಿತು.

ಡಾಕ್ಟರ್ ಭಾದುರಿ: " ಸತ್ಯ ಏನೆಂಬುದು ಗೊತ್ತೆ? ಎಲ್ಲವೂ ಸ್ವಪ್ನದ ಹಾಗೆ. "

ಡಾಕ್ಟರ್ ಸರ್ಕಾರ : " ಎಲ್ಲವೂ ಭ್ರಮೆಯೊ? ಈ ಭ್ರಮೆ ಯಾರಿಗೆ ಸೇರಿದ್ದು, ಏಕೆ ಬಂದಿದೆ? ಇದೆಲ್ಲ ಕೇವಲ ಭ್ರಮೆ ಅಂತ ತಿಳಿದೂ ತಿಳಿದೂ ಜನ ಏಕೆ ಮಾತುಕತೆಗಳಲ್ಲಿ ತೊಡಗುತ್ತಾರೆ? ಕೇವಲ ಭಗವಂತ ಮಾತ್ರ ಸತ್ಯ ಆತನ ಸೃಷ್ಟಿ ಮಿಥ್ಯಾ ಎಂಬುದರಲ್ಲಿ ನನಗೆ ವಿಶ್ವಾಸವಿಲ್ಲ. "

ಶ್ರೀರಾಮಕೃಷ್ಣರು : "'ನೀನು ಪ್ರಭು, ನಾನು ದಾಸ' ಎಂಬ ಭಾವ ಬಹಳ ಒಳ್ಳೆ ಭಾವ. ಎಲ್ಲಿಯವರೆಗೆ ದೇಹ ಸತ್ಯವಾದ್ದು ಎಂಬ ಬೋಧೆ ಇರುವುದೊ, ಎಲ್ಲಿಯವರೆಗೆ 'ನಾನು', 'ನೀನು' ಎಂಬ ಭೇದ ಬುದ್ಧಿ ಇರುವುದೊ ಅಲ್ಲಿಯವರೆಗೆ 'ಸೇವ್ಯ–ಸೇವಕ' ಭಾವ ಬಹಳ ಒಳ್ಳೆಯದು ; 'ನಾನೇ ಆತ' ಎಂಬ ಭಾವ ಒಳ್ಳೆಯದಲ್ಲ.

"ಇನ್ನೊಂದು ವಿಷಯ ತಿಳಿಸುತ್ತೇನೆ. ಕೊಠಡಿಯ ಮೂಲೆಯಲ್ಲಿ ನಿಂತುಕೊಂಡು ಕೊಠಡಿಯನ್ನು ನೋಡಿದರೆ ಏನು ಕಾಣುತ್ತದೆಯೊ ಅದರ ಮಧ್ಯೆ ನಿಂತುಕೊಂಡು ನೋಡಿದರೂ ಅದೇ ಕಾಣುತ್ತದೆ."

ಡಾಕ್ಟರ್ ಭಾದುರಿ, ಡಾಕ್ಟರ್ ಸರ್ಕಾರನಿಗೆ: "ಈಗ ನಾನು ಹೇಳಿದ ವಿಷಯಗಳೆಲ್ಲ ವೇದಾಂತದಲ್ಲಿ ಇವೆ. ಶಾಸ್ತ್ರ-ಗೀಸ್ತ್ರ ಓದಬೇಕು. ಆಗ ಇವೆಲ್ಲ ಅರ್ಥವಾಗುತ್ತವೆ."

ಡಾಕ್ಟರ್ ಸರ್ಕಾರ: "ಏಕೆ? ಇವರು (ಪರಮಹಂಸರು) ಶಾಸ್ತ್ರ-ಗೀಸ್ತ್ರ ಓದಿ ಜ್ಞಾನ ಸಂಪಾದಿಸಿಕೊಂಡಿದಾರೇನು? ಇವರೂ ನನ್ನ ಗುಂಪಿಗೆ ಸೇರಿದವರೆ. ಶಾಸ್ತ್ರ ಓದದೆ ಜ್ಞಾನ ದೊರಕದೊ?"

ಶ್ರೀರಾಮಕೃಷ್ಣರು: "ಆದರೆ ಎಷ್ಟೊಂದನ್ನು ನಾನು ಕಿವಿಯಲ್ಲಿ ಕೇಳಿದೇನೆ ಏನುಕತೆ!"

ಡಾಕ್ಟರ್ ಸರ್ಕಾರ: "ಸುಮ್ಮನೆ ಕೇಳಿಬಿಟ್ಟರೆ ತಪ್ಪಾಗಿ ತಿಳಿದು ಕೊಳ್ಳಲು ಎಷ್ಟೊಂದು ಅವಕಾಶ. ನೀವು ಬರಿದೆ ಕೇಳಿದವರಲ್ಲ."

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ: "ನೀನು ನನ್ನನ್ನು ಒಬ್ಬ ಹುಚ್ಚ ಅಂತ ಕರೆದೆಯಂತೆ. ಅದಕ್ಕಾಗಿ ಇವರು (ಮಾಸ್ಟರ್ ಮತ್ತು ಉಳಿದವರನ್ನು ತೋರಿಸಿ) ನಿನ್ನ ಹತ್ತಿರಕ್ಕೆ ಬರಲಿಚ್ಛಿಸುತ್ತಿಲ್ಲ."

ಡಾಕ್ಟರ್ ಸರ್ಕಾರ ಮಾಸ್ಟರ ಕಡೆ ತಿರುಗಿ: "ಹಾಗೆಲ್ಲಿ ಹೇಳಿದೆ? ಆದರೆ ಅಹಂಕಾರ ಇದೆ ಎಂದು ಮಾತ್ರ ಹೇಳಿದೆ. ನೀವು ನಿಮ್ಮ ಪಾದ ಧೂಳಿ ತೆಗೆದುಕೊಳ್ಳಲು ಜನರಿಗೆ ಏಕೆ ಅವಕಾಶ ಕೊಡುತ್ತಿದೀರಿ?"

ಮಾಸ್ಟರ್: "ಅವರು ಹಾಗೆ ಅವಕಾಶವೀಯದಿದ್ದರೆ ಜನ ಸುಮ್ಮನೆ ಅಳಲಾರಂಭಿಸುತ್ತಾರೆ."

ಡಾಕ್ಟರ್ ಸರ್ಕಾರ: "ಅದು ಅವರ ತಪ್ಪು, ಅದನ್ನು ಅವರಿಗೆ ತಿಳಿಸಿಕೊಟ್ಟುಬಿಡಬೇಕು."

ಮಾಸ್ಟರ್: "ಅವರ ಪಾದಧೂಳಿಯನ್ನು ತೆಗೆದುಕೋಕೂಡದು

ಅಂತ ನೀವೇಕೆ ಹೇಳುತ್ತಿದೀರಿ? ಸರ್ವ ಭೂತಗಳಲ್ಲಿಯೂ ಭಗವಂತನಿಲ್ಲ ವೇನು ?"

ಡಾಕ್ಟರ್ ಸರ್ಕಾರ: "ಆ ದೃಷ್ಟಿಯಿಂದ ನನ್ನ ಅಭ್ಯಂತರವೇನಿಲ್ಲ ಹಾಗಾದರೆ, ಎಲ್ಲರ ಪಾದಧೂಳಿಯನ್ನೂ ತೆಗೆದುಕೊಳ್ಳಲು ಸಿದ್ಧನಾಗಿರ ಬೇಕು."

ಮಾಸ್ಟರ್: "ಕೆಲಕೆಲವರಲ್ಲಿ ಭಗವಂತ ವಿಶೇಷವಾಗಿ ವ್ಯಕ್ತವಾಗಿ ದಾನೆ. ನೀರೇನೊ ಎಲ್ಲೆಲ್ಲೂ ಇದೆ; ಆದರೆ ಅದು ವಿಶೇಷವಾಗಿ ಸರೋ ವರದಲ್ಲಿ, ನದಿಯಲ್ಲಿ, ಸಮುದ್ರದಲ್ಲಿ ಹೆಚ್ಚು ಪ್ರಮಾಣದಿಂದಿದೆ. ನೀವು ಫ್ಯಾರಡೆಗೆ ತೋರಿಸೋ ಗೌರವವನ್ನು ಈಗ ತಾನೆ ಬಿ. ಎಸ್‌ಸಿ. ಪಾಸು ಮಾಡಿರೋ ವಿದ್ಯಾರ್ಥಿಗೆ ತೋರಿಸುವಿರೇನು ?"

ಡಾಕ್ಟರ್ ಸರ್ಕಾರ: "ಇದಕ್ಕೆ ನನ್ನ ಸಮ್ಮತಿ. ಆದರೆ ಭಗವಂತ ಅಂತ ಏಕೆ ಕರೆಯುತ್ತಿದೀರಿ ?"

ಮಾಸ್ಟರ್: "ನಾವು ಒಬ್ಬರಿಗೊಬ್ಬರು ನಮಸ್ಕಾರ ಮಾಡುತ್ತೇವಲ್ಲ ಏಕೆ? ಪ್ರತಿಯೊಬ್ಬರ ಅಂತರ್ಯದಲ್ಲೂ ಭಗವಂತನಿರೋದರಿಂದ. ನೀವು ಈ ವಿಷಯವಾಗಿ ಸ್ವಲ್ಪ ಆಳವಾಗಿ ಆಲೋಚಿಸಿಲ್ಲ ಅಷ್ಟೆ."

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ: "ನಾನಾಗಲೆ ನಿನಗೆ ತಿಳಿಸಿದೇನೆ, ಭಗವಂತ ಕೆಲವರಲ್ಲಿ ಕೆಲವರಿಗಿಂತ ವಿಶೇಷವಾಗಿ ವ್ಯಕ್ತವಾಗಿ ದಾನೆ ಅಂತ. ಸೂರ್ಯನ ರಶ್ಮಿಯನ್ನು ಭೂಮಿ ಒಂದು ವಿಧವಾಗಿ, ಮರಗಿಡಗಳು ಇನ್ನೊಂದು ವಿಧವಾಗಿ, ಕನ್ನಡಿ ಮತ್ತೊಂದು ವಿಧವಾಗಿ ಪ್ರತಿಬಿಂಬಿಸುತ್ತವೆ. ಆದರೆ ಕನ್ನಡಿಯಲ್ಲಿ ವಿಶೇಷ ರೀತಿಯಾಗಿ ಪ್ರತಿ ಬಿಂಬಿತವಾಗಿರೋದನ್ನ ನಾವು ನೋಡಬಹುದು. ಅಷ್ಟುದೂರ ಏಕೆ, ಇಲ್ಲೆ ನೋಡು. ಇಲ್ಲಿರೋ ಭಕ್ತರು ಪ್ರಹ್ಲಾದನೇ ಮೊದಲಾದವರಿಗೆ ಸರಿಸಮಾನ ರೇನು ? ಪ್ರಹ್ಲಾದನ ಮನಸ್ಸು, ಪ್ರಾಣ ಎಲ್ಲವೂ ಭಗವಂತನಿಗೆ ಅರ್ಪಿತ ವಾಗಿಹೋಗಿತ್ತು."

ಡಾಕ್ಟರ್ ಸರ್ಕಾರ ಸುಮ್ಮನೆ ಕುಳಿತುಕೊಂಡ. ಉಳಿದವರೂ ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ: "ನೋಡು, ನಿನ್ನ ಹೃದಯದಲ್ಲಿ ಇದರ (ತಮ್ಮನ್ನು ತೋರಿಸಿ) ಕಡೆಗೆ ಸ್ವಲ್ಪ ಪ್ರೀತಿ ಇದೆ. ನೀನೂ ಒಮ್ಮೆ ಹಾಗೇ ಹೇಳಿದೆ."

ಡಾಕ್ಟರ್ ಸರ್ಕಾರ: "ನೀವು ಆದರ್ಶ ಪುರುಷರು. ಅದಕ್ಕಾಗೇ ನಾನು ಅಷ್ಟೊಂದಾಗಿ ನಿಮಗೆ ಹೇಳುತ್ತಿರೋದು. ಜನ ನಿಮ್ಮ ಪಾದ ಮುಟ್ಟಿ ನಮಸ್ಕಾರ ಮಾಡುತ್ತಿದಾರೆ. ಅದು ನನಗೆ ವ್ಯಥೆಯನ್ನು ತರುತ್ತಿದೆ. ನನಗೆ ನಾನೆ ಹೇಳಿಕೋತೇನೆ: 'ಅಯ್ಯೋ! ಇಂಥ ಒಳ್ಳೆ ಮನುಷ್ಯರನ್ನು ಜನ ಕೆಡಿಸಿಬಿಡುತ್ತಾರಲ್ಲ!' ಕೇಶವಸೇನನೊಡನೆಯೂ ಆತನ ಭಕ್ತರು ಹೀಗೆ ವ್ಯವಹರಿಸಿ ಆತನನ್ನು ಕೆಡಿಸಿಬಿಟ್ಟರು. ದಯವಿಟ್ಟು ಕೇಳಿ—"

ಶ್ರೀರಾಮಕೃಷ್ಣರು: "ನಿನ್ನ ಮಾತಿಗೆ ನಾನು ಕಿವಿಗೊಡಬೇಕೊ? ನೀನು ಒಬ್ಬ ಲೋಭಿ, ಕಾಮಿ, ಅಹಂಕಾರಿ."

ಡಾಕ್ಟರ್ ಭಾದುರಿ, ಡಾಕ್ಟರ್ ಸರ್ಕಾರನಿಗೆ: "ಎಂದರೆ ನಿಮ್ಮಲ್ಲಿ ಇನ್ನೂ ಜೀವತ್ವವಿದೆ ಅಂತ ಅರ್ಥ. ಹೆಸರುಕೀರ್ತಿಗಾಗಿ, ಧನಕನಕಾದಿಗಳಿಗಾಗಿ ಲೋಭಪಡುವುದು; ಕಾಮಪಡುವುದು; ಅಹಂಕಾರಪಡುವುದು ಇವೆಲ್ಲ ಜೀವಿಯ ಧರ್ಮ. ಎಲ್ಲಾ ಜೀವಿಗಳ ಧರ್ಮವೂ ಇದೇನೆ."

ಡಾಕ್ಟರ್ ಸರ್ಕಾರ ಶ್ರೀರಾಮಕೃಷ್ಣರಿಗೆ: "ನೀವು ಹೀಗೆಲ್ಲ ಮಾತಾಡೋದಾದರೆ, ಕೇವಲ ನಿಮ್ಮ ಗಂಟಲು ಪರೀಕ್ಷಿಸಿ ಹೊರಟು ಹೋಗುತ್ತೇನೆ. ಬೇರೆ ಯಾವ ಮಾತುಕತೆಗಳನ್ನೂ ನೀವು ಎತ್ತಲೇ ಕೂಡದು. ವಾದಿಸಬೇಕಾಗಿ ಬಂತು ಅಂದರೆ, ಸರಿ ಎಂದು ತೋರೋದನ್ನು ಹೇಳಿಯೇಬಿಡುತ್ತೇನೆ."

ಎಲ್ಲರೂ ಸುಮ್ಮನೆ ಕುಳಿತಿದಾರೆ.

ಸ್ವಲ್ಪ ಹೊತ್ತಾದನಂತರ ಪರಮಹಂಸರು ಡಾಕ್ಟರ್ ಭಾದುರಿಯೊಡನೆ ಮಾತುಕತೆಗಳಾಡಲು ಆರಂಭಿಸಿದರು.

ಶ್ರೀರಾಮಕೃಷ್ಣರು: "ನಿಜಾಂಶವನ್ನು ಹೇಳುತ್ತೇನೆ. ಇವನು (ಡಾಕ್ಟರ್ ಸರ್ಕಾರ) 'ನೇತಿ', 'ನೇತಿ' ಮಾರ್ಗವನ್ನು ಅನುಸರಿಸಿಕೊಂಡು ಹೋಗುತ್ತಿದಾನೆ. ಭಗವಂತ ಜೀವ, ಜಗತ್ತು ಯಾವುದೂ ಅಲ್ಲ; ಆತ ಈ ಸೃಷ್ಟಿಗತೀತ ಅಂತ ವಿಚಾರಮಾಡುತ್ತ ಮುಂದುವರಿಯುತ್ತಿದಾನೆ. ಆದರೆ ಯಾವಾಗ ಈತ 'ಇತಿ', 'ಇತಿ' ಮಾರ್ಗವನ್ನು ಅನುಸರಿಸಬೇಕಾಗಿ ಬರುತ್ತೊ ಆಗ ಎಲ್ಲವನ್ನೂ ಒಪ್ಪಿಕೋತಾನೆ.

"ಬಾಳೆ ಗಿಡದ ಪಟ್ಟೆಗಳನ್ನು ಎಡೆಯುತ್ತಾ ಎಡೆಯುತ್ತಾ ಹೋದರೆ ಕೊನೆಗೆ ದಿಂಡು ಸಿಗುತ್ತದೆ. ಪಟ್ಟೆ ಒಂದು ವಿಧವಾದ ವಸ್ತು, ದಿಂಡು

ಇನ್ನೊಂದು ವಿಧವಾದ ವಸ್ತು; ಪಟ್ಟೆ ದಿಂಡಲ್ಲ, ದಿಂಡು ಪಟ್ಟೆಯಲ್ಲ ಎಂಬ ಬೋಧೆಯಾಗುತ್ತದೆ. ಆದರೆ ಕಟ್ಟಕಡೆಯಲ್ಲಿ ಮನುಷ್ಯನಿಗೆ ಗೊತ್ತಾಗುತ್ತದೆ, ಪಟ್ಟೆಗಳಿಲ್ಲದಿದ್ದರೆ ದಿಂಡು ಇರದು, ದಿಂಡು ಇಲ್ಲದಿದ್ದರೆ ಪಟ್ಟೆಗಳಿರವು; ಆವೆರಡೂ ಬಾಳೆ ಗಿಡದ ಅಂಗಪ್ರತ್ಯಂಗಗಳು ಎಂಬ ಅನುಭವವಾಗುತ್ತದೆ. ಅದೇ ರೀತಿಯಾಗಿ ಭಗವಂತನೇ ಚತುರ್ವಿಂಶತಿ ತತ್ತ್ವಗಳಾಗಿದಾನೆ; ಆತನೇ ಮನುಷ್ಯನಾಗಿದಾನೆ.

(ಡಾಕ್ಟರ್ ಸರ್ಕಾರನಿಗೆ) "ಭಕ್ತರಲ್ಲಿ ಮೂರು ವಿಧ: ಉತ್ತಮ, ಮಧ್ಯಮ, ಅಧಮ. ಅಧಮ ಭಕ್ತ ಹೇಳುತ್ತಾನೆ: 'ಭಗವಂತನನ್ನು ನೋಡು, ಅಲ್ಲಿ.' ಆತನ ದೃಷ್ಟಿಯಲ್ಲಿ ಭಗವಂತ ಆತನ ಸೃಷ್ಟಿಯಿಂದ ಪ್ರತ್ಯೇಕ. ಮಧ್ಯಮ ಭಕ್ತ ಹೇಳುತ್ತಾನೆ: 'ಭಗವಂತ ಅಂತರ್ಯಾಮಿ; ಎಲ್ಲರ ಹೃದಯದಲ್ಲೂ ಇದಾನೆ.' ಆತ ಭಗವಂತನನ್ನು ತನ್ನ ಆಂತರ್ಯದಲ್ಲಿ ನೋಡುತ್ತಾನೆ. ಆದರೆ ಉತ್ತಮ ಭಕ್ತನಿಗೆ ಕಂಡುಬರುತ್ತದೆ, ಆತನೇ ಚತುರ್ವಿಂಶತಿ ತತ್ತ್ವಗಳಾಗಿರೋದಾಗಿ. ಭಗವಂತ ಮೇಲೆ, ಕೆಳಗೆ, ಎಲ್ಲೆಲ್ಲೂ ಪರಿಪೂರ್ಣನಾಗಿರೋದನ್ನು ಆತ ನೋಡುತ್ತಾನೆ.

"ನೀನು ಗೀತೆ, ಭಾಗವತ, ವೇದಾಂತ ಇವನ್ನೆಲ್ಲ ಓದು. ಆಗ ಇದೆಲ್ಲ ನಿನಗೆ ಅರ್ಥವಾಗುತ್ತದೆ. ಭಗವಂತ ತನ್ನ ಸೃಷ್ಟಿಯಲ್ಲಿ ಹಾಸು ಹೊಕ್ಕಾಗಿ ಇಲ್ಲವೇನು?"

ಡಾಕ್ಟರ್ ಸರ್ಕಾರ: "ಆತ ಯಾವುದಾದರು ಒಂದು ನಿರ್ದಿಷ್ಟ ವಸ್ತುವಿನಲ್ಲಿ ಮಾತ್ರವೇ ಅಲ್ಲ, ಎಲ್ಲೆಲ್ಲೂ, ಎಲ್ಲದರಲ್ಲೂ ಇದಾನೆ. ಆತ ಎಲ್ಲೆಲ್ಲೂ ಇರುವುದರಿಂದ ಆತನನ್ನು ಹುಡುಕೋಕೆ ಹೋಗೋ ಹಾಗೆಯೇ ಇಲ್ಲ."

ಸ್ವಲ್ಪ ಹೊತ್ತಾದ ಮೇಲೆ ಬೇರೆ ವಿಷಯವಾಗಿ ಮಾತುಕತೆ ಆರಂಭವಾಯಿತು. ಶ್ರೀರಾಮಕೃಷ್ಣರು ಆಗಾಗ ಭಾವಸ್ಥರಾಗುತ್ತಿದ್ದುದರಿಂದ ಅದು ಅವರ ರೋಗವನ್ನು ಹೆಚ್ಚಿಸಿಬಿಡಬಹುದೆಂದು ಡಾಕ್ಟರ್ ಸರ್ಕಾರ ಒಮ್ಮೆ ತಿಳಿಸಿದ್ದ. ಈಗ ಆತ ಪರಮಹಂಸರಿಗೆ ಹೇಳುತ್ತಿದಾನೆ: "ನೀವು ನಿಮ್ಮ ಭಾವವನ್ನು ತಡೆದಿಟ್ಟುಕೊಳ್ಳಬೇಕು. ನನಗೂ ಬಹಳವಾಗಿ ಭಾವೋದ್ರೇಕವಾಗುತ್ತೆ. ನಿಮಗಿಂತಲೂ ಒಂದು ಕೈ ಮೇಲಾಗಿ ನಾನು ನರ್ತಿಸಬಲ್ಲೆ."

ಚಿಕ್ಕ ನರೇನ ನಗುತ್ತ: "ನಿಮ್ಮ ಭಾವ ಇನ್ನೂ ಅಧಿಕವಾಗಿ ಉದ್ರೇಕಗೊಂಡುಬಿಟ್ಟರೆ ಆಗೇನುಮಾಡುತ್ತೀರಿ?"

ಡಾಕ್ಟರ್ ಸರ್ಕಾರ: "ನನ್ನಲ್ಲಿ ದಮನ ಶಕ್ತಿಯೂ ಬೆಳೆಯಲಾರಂಭಿಸುತ್ತದೆ."

ಶ್ರೀರಾಮಕೃಷ್ಣರು ಮತ್ತು ಮಾಸ್ಟರ್: "ಈಗಲೇನೊ ಸುಲಭವಾಗಿ ಹಾಗೆ ಹೇಳಿಬಿಡಬಹುದು."

ಮಾಸ್ಟರ್: "ಭಾವಾವಸ್ಥೆಯಲ್ಲಿ ಏನಾಗುತ್ತೆ ಎಂಬುದರ ಅನುಭವ ನಿಮಗಾಗಿದೆಯೇನು?"

ಹಣದ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ: "ನನಗೆ ಅದರ ಕಡೆ ಮನಸ್ಸೇ ಹೋಗುತ್ತಿಲ್ಲ. ಇದು ನಿನ್ನ ಅನುಭವಕ್ಕೆ ಬಂದಿರಬೇಕು, ಅಲ್ಲವೇನು? ನಾನೇನೂ ನಟಿಸುತ್ತಿಲ್ಲ."

ಡಾಕ್ಟರ್ ಸರ್ಕಾರ: "ನನ್ನ ಮನಸ್ಸೇ ಹೋಗದಿರೋವಾಗ, ಇನ್ನು ನಿಮ್ಮನ್ನು ಕೇಳಬೇಕೆ! ನನ್ನ ದುಡ್ಡಿನ ಸಂದೂಕ ಯಾವಾಗ ನೋಡಿದರೂ ತೆರೆದೇ ಬಿದ್ದಿರುತ್ತದೆ."

ಶ್ರೀರಾಮಕೃಷ್ಣರು: "ಯದುಮಲ್ಲಿಕನಿಗೂ ಅನ್ಯಮನಸ್ಕನಾಗಿರೋ ಅಭ್ಯಾಸ. ಊಟಕ್ಕೆ ಕುಳಿತಾಗ ಆತ ಅಷ್ಟೊಂದಾಗಿ ಅನ್ಯಮನಸ್ಕನಾಗಿರುತ್ತಿದ್ದ, ಒಳ್ಳೇದು ಕೆಟ್ಟದು ಯಾವುದನ್ನು ಎಲೆಗೆ ಹಾಕಿದರೂ ಸುಮ್ಮನೆ ತಿಂದುಬಿಡುತ್ತಿದ್ದ. ಒಂದು ಪಕ್ಷ ಯಾರಾದರು, 'ಅದನ್ನು ತಿನ್ನಬೇಡ, ಅದು ಕೆಟ್ಟುಹೋಗಿದೆ' ಅಂತ ಹೇಳಿದರೆ, ಆಗ ಆತ ಹೇಳುತ್ತಿದ್ದ: 'ಓಹೊ! ಅದು ಹಾಗೇನು? ಹೌದು, ನಿಜವಾಗಿಯೂ ಕೆಟ್ಟುಹೋಗಿದೆಯಲ್ಲ, ಥತ್!"

ಭಗವಚ್ಚಿಂತನೆಯಿಂದ ಅನ್ಯಮನಸ್ಕರಾಗೋದಕ್ಕೂ ವಿಷಯಚಿಂತನೆಯಿಂದ ಅನ್ಯಮನಸ್ಕರಾಗೋದಕ್ಕೂ ಅಜಗಜಾಂತರ ವ್ಯತ್ಯಾಸ ಎಂಬುದನ್ನು ಪರಮಹಂಸರು ಸೂಚಿಸಿರಬಹುದೆ?

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನನ್ನು ತೋರಿಸಿ ನಗುತ್ತ ಭಕ್ತರಿಗೆ: "ನೋಡಿ, ಯಾವುದೆ ಆಗಲಿ ಬೆಂದಿತು ಎಂದರೆ ಮೃದುವಾಗುತ್ತದೆ. ಈತ (ಡಾಕ್ಟರ್)ಬಹಳ ಗಟ್ಟಿಯಾಗಿದ್ದ. ಈಗ ಒಳಗಿನಿಂದ ಮೃದು ಆಗುತ್ತಾ ಇದಾನೆ."

ಡಾಕ್ಟರ್ ಸರ್ಕಾರ: "ಯಾವ ವಸ್ತುವನ್ನೇ ಆಗಲಿ ಬೇಯಿಸಿದಾಗ ಅದು ಹೊರಗಿನಿಂದ ಮೃದು ಆಗಲು ಆರಂಭಿಸುತ್ತದೆ. ಬಹುಶಃ ಈ ಜನ್ಮದಲ್ಲಿ ನನಗೆ ಹಾಗೆ ಆಗೋ ಮಟ್ಟಿಗೆ ಕಾಣೆ." (ಎಲ್ಲರೂ ನಗುತ್ತಾರೆ.)

ಈಗ ಡಾಕ್ಟರ್ ಸರ್ಕಾರ ಪರಮಹಂಸರೊಡನೆ ಮಾತುಕತೆಯಾಡುತ್ತಿದಾನೆ. ಆತ ಇನ್ನೇನು ಹೊರಡುವುದರಲ್ಲಿದಾನೆ.

ಡಾಕ್ಟರ್ ಸರ್ಕಾರ: "ಜನ ನಿಮ್ಮ ಪಾದಧೂಳಿಯನ್ನು ತೆಗೆದುಕೊಳ್ಳುತ್ತಿದಾರೆ. ಬೇಡಿ ಅಂತ ಹೇಳೋಕಾಗೋದಿಲ್ಲವೊ?"

ಶ್ರೀರಾಮಕೃಷ್ಣರು: "ಎಲ್ಲರೂ ಅಖಂಡ ಸಚ್ಚಿದಾನಂದನನ್ನು ಗ್ರಹಿಸಬಲ್ಲರೇನು?"

ಡಾಕ್ಟರ್: "ಅದು ಹಾಗೆಂದು ಯಥಾರ್ಥವಾದ್ದನ್ನು ಜನರಿಗೆ ನಾವು ಹೇಳಬೇಡ?"

ಶ್ರೀರಾಮಕೃಷ್ಣರು: "ರುಚಿ - ಭೇದ, ಅಧಿಕಾರಿ - ಭೇದ ಇವೆಲ್ಲಾ ಇವೆ."

ಡಾಕ್ಟರ್ ಸರ್ಕಾರ: "ಏನು ಅವೆಲ್ಲ?"

ಶ್ರೀರಾಮಕೃಷ್ಣರು: "ಒಬ್ಬೊಬ್ಬರ ರುಚಿ ಒಂದೊಂದು ತರ ಎಂಬುದು ನಿನಗೆ ಗೊತ್ತಿಲ್ಲವೇನು? ಕೆಲವರಿಗೆ ಮೀನಿನ ಸಾರು ಬೇಕು; ಇನ್ನು ಕೆಲವರಿಗೆ ಮೀನಿನ ಬಜ್ಜಿ ಕಂಡರೆ ಇಷ್ಟ; ಮತ್ತೆ ಕೆಲವರಿಗೆ ಮೀನಿನ ಚಟ್ನಿ ಬೇಕು; ಮತ್ತೂ ಕೆಲವರಿಗೆ ಮೀನಿನ ಪಲಾವು ಕಂಡರೆ ಇಷ್ಟ. ಹಾಗೆ ಅಧಿಕಾರಿ - ಭೇದವೂ ಇದೆ. ನಾನು ಜನರಿಗೆ ಹೇಳುತ್ತೇನೆ, ಮೊದಲು ಬಾಳೆ ಗಿಡಕ್ಕೆ ಗುರಿ ಇಡೋದನ್ನು ಕಲಿತುಕೊಳ್ಳಿ; ಬಳಿಕ ದೀಪದ ಕುಡಿ, ಹಾರೋ ಹಕ್ಕಿ ಇವಕ್ಕೆ ಗುರಿಯಿಡೋರಂತೆ ಎಂಬುದಾಗಿ."

ಮುಚ್ಚಂಜೆಯಾಗಿದೆ, ಪರಮಹಂಸರು ಭಗವಚ್ಚಿಂತನೆಯಲ್ಲಿ ಮಗ್ನರಾಗಿದಾರೆ. ಅವರು ಎಷ್ಟೊಂದು ರೋಗಗ್ರಸ್ತರಾಗಿದಾರೆ! ಆದರೂ ಅದನ್ನು ಅವರು ಒಂದು ಮೂಲೆಗೆ ಒತ್ತರಿಸಿಬಿಟ್ಟಿದಾರೆ. ನಾಲ್ಕೈದು ಜನ ಅಂತರಂಗ ಭಕ್ತರು ಅವರ ಹತ್ತಿರ ಕುಳಿತು ಅವರನ್ನು ದೃಷ್ಟಿಸಿ ನೋಡುತ್ತಿದಾರೆ. ಭಗವಚ್ಚಿಂತನೆಯಲ್ಲೇ ಬಹಳ ಹೊತ್ತನ್ನು ಕಳೆದನಂತರ ಪರಮಹಂಸರು ಮಾಸ್ಟರಿಗೆ ಪಿಸುಗುಟ್ಟಿ ಹೇಳುತ್ತಿದಾರೆ: "ನೋಡು, ನನ್ನ ಮನಸ್ಸು ಅಖಂಡದಲ್ಲಿ ಸಂಪೂರ್ಣವಾಗಿ ಲಯವಾಗಿ ಹೋಗಿತ್ತು. ಆ ಬಳಿಕ ಅನೇಕ ವಿಷಯಗಳು ಅನುಭವಕ್ಕೆ ಬಂದುವು. ಡಾಕ್ಟರ್

ಸರ್ಕಾರನಿಗೂ ಆತ್ಮಜಾಗೃತಿಯುಂಟಾಗುತ್ತದೆ ಎಂಬುದನ್ನು ಅರಿತು ಕೊಂಡೆ; ಆದರೆ ಇನ್ನೂ ಸ್ವಲ್ಪ ಕಾಲ ಕಳೆದನಂತರ. ನಾನು ಆತನಿಗೆ ವಿಶೇಷವಾಗಿ ಏನೂ ಇನ್ನು ಮೇಲೆ ಉಪದೇಶ-ಗಿಪದೇಶ ಕೊಡಬೇಕಾಗಿ ರೋದಿಲ್ಲ. ಆ ಅವಸ್ಥೆಯಲ್ಲಿ ನಾನು ಇನ್ನೊಬ್ಬನನ್ನೂ ನೋಡಿದೆ. 'ಆತ ನನ್ನೂ ಆಕರ್ಷಿಸಿಸು' ಅಂತ ಮನಸ್ಸು ಹೇಳಿತು. ಆತನ ವಿಷಯವಾಗಿ ಮುಂದೆ ನಾನು ತಿಳಿಸುತ್ತೇನೆ."

ಶ್ಯಾಮವಸು, ಡಾಕ್ಟರ್ ದೊಕರಿ ಮತ್ತು ಇನ್ನೂ ಕೆಲವು ಭಕ್ತರು ಬಂದು ಕುಳಿತುಕೊಂಡಿದಾರೆ. ಪರಮಹಂಸರು ಅವರೊಡನೆ ಮಾತುಕತೆ ಗಳಾಡುತ್ತಿದಾರೆ.

ಶ್ಯಾಮವಸು: "ಆಹ! ನೀವು ಅಂದು ಹೇಳಿದಿರಲ್ಲ, ಆ ವಿಷಯ, ಅದು ಎಷ್ಟು ಸುಂದರವಾದ್ದು!"

ಶ್ರೀರಾಮಕೃಷ್ಣರು ನಗುತ್ತ: "ಯಾವ ವಿಷಯ?"

ಶ್ಯಾಮವಸು: "ಹೇಳಿದಿರಲ್ಲ, ಜ್ಞಾನಾಜ್ಞಾನಗಳನ್ನು ದಾಟಿಹೋದರೆ ಏನು ದೊರೆಯುತ್ತದೆ ಎಂಬ ವಿಷಯವಾಗಿ."

ಶ್ರೀರಾಮಕೃಷ್ಣರು ನಗುತ್ತ: "ಬಳಿಕ ದೊರೆಯೋದು 'ವಿಜ್ಞಾನ'. ನಾನಾತ್ವದ ಜ್ಞಾನವೇ 'ಅಜ್ಞಾನ'. ಸರ್ವ ಭೂತಗಳಲ್ಲಿಯೂ ಭಗವಂತನಿದಾನೆ ಎಂಬ ಜ್ಞಾನವೇ 'ಜ್ಞಾನ'. ಭಗವಂತನನ್ನು ವಿಶೇಷ ರೂಪದಿಂದ—ಆತನೊಡನೆ ಮಾತುಕತೆಯಾಡೋದು, ಆತನನ್ನು ಆತ್ಮೀಯ ನೆಂಬ ಬೋಧೆಯಿಂದ ನೋಡೋದು ಇವೇ ಮೊದಲಾದ ರೀತಿಯಿಂದ— ಅರಿತುಕೊಳ್ಳುವುದಕ್ಕೆ 'ವಿಜ್ಞಾನ' ಅಂತ ಹೆಸರು.

"ಸೌದೆಯಲ್ಲಿ ಬೆಂಕಿ ಇದೆ, ಎಂದರೆ ಅಗ್ನಿತತ್ತ್ವವಿದೆ ಎಂದು ಅರಿತು ಕೊಳ್ಳುವುದಕ್ಕೆ 'ಜ್ಞಾನ' ಅಂತ ಹೆಸರು. ಆ ಸೌದೆಯನ್ನು ಉರಿಯಿಸಿ, ಅನ್ನ ಬೇಯಿಸಿ, ಅದನ್ನು ತಿಂದು ತುಷ್ಟ-ಪುಷ್ಟನಾಗೋದಕ್ಕೆ 'ವಿಜ್ಞಾನ' ಅಂತ ಹೆಸರು."

ಶ್ಯಾಮವಸು ನಗುತ್ತ: "ಆ ಮುಳ್ಳಿನ ವಿಷಯ."

ಶ್ರೀರಾಮಕೃಷ್ಣರು ನಗುತ್ತ: "ಅದೆ, ಆಗಲಿ. ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಬೇರೊಂದು ಮುಳ್ಳನ್ನು ಹುಡುಕಿತರಬೇಕಾಗುತ್ತದೆ. ಬಳಿಕ ಕಾಲಿಗೆ ಚುಚ್ಚಿಕೊಂಡಿರೋ ಮುಳ್ಳನ್ನು ಅದರ ಸಹಾಯದಿಂದ ತೆಗೆದು, ಅನಂತರ ಎರಡು ಮುಳ್ಳನ್ನೂ ಹೊರಕ್ಕೆ ಬಿಸಾಡಬೇಕಾಗುತ್ತದೆ.

ಅದೇ ರೀತಿಯಾಗಿ ಅಜ್ಞಾನವೆಂಬ ಮುಳ್ಳನ್ನು ತೆಗೆದುಹಾಕಲು ಜ್ಞಾನವೆಂಬ ಮುಳ್ಳನ್ನು ಸಂಪಾದಿಸಿಕೊಂಡು, ಅಜ್ಞಾನ ನಾಶವಾದ ಮೇಲೆ ಜ್ಞಾನ ಅಜ್ಞಾನ ಈ ಎರಡನ್ನೂ ವರ್ಜಿಸಿಬಿಡಬೇಕು. ಬಳಿಕ ದೊರೆಯುತ್ತದೆ ವಿಜ್ಞಾನ.''

ಶ್ಯಾಮವಸುವಿನ ನಡೆ ನುಡಿ ನೋಡಿ ಪರಮಹಂಸರಿಗೆ ಬಹಳ ಆನಂದ ವಾಗಿಬಿಟ್ಟಿದೆ. ಆಗಲೆ ಆತನಿಗೆ ವಯಸ್ಸಾಗಿಬಿಟ್ಟಿದೆ. ತನ್ನ ಜೀವನದ ಉಳಿದ ಸಮಯವನ್ನು ಭಗವಂತನ ಧ್ಯಾನದಲ್ಲಿ ಕಳೆಯಬೇಕೆಂದು ಇಚ್ಛಿಸಿ ದಾನೆ. ಪರಮಹಂಸರ ಹೆಸರನ್ನು ಕೇಳಿ ಆತ ಇಲ್ಲಿಗೆ ಬಂದಿದಾನೆ. ಇದಕ್ಕೆ ಹಿಂದೆ ಒಮ್ಮೆ ಆತ ಇಲ್ಲಿಗೆ ಬಂದಿದ್ದ.

ಶ್ರೀರಾಮಕೃಷ್ಣರು ಶ್ಯಾಮವಸುವಿಗೆ: ''ಪ್ರಾಪಂಚಿಕ ಮಾತುಕತೆ ಗಳನ್ನು ಒಮ್ಮೆಗೇ ತ್ಯಜಿಸಿಬಿಡು. ಭಗವದ್ವಿಷಯವಾಗಿ ಹೊರತು ಬೇರೆ ಯಾವುದರ ವಿಷಯವಾಗೂ ಮಾತಾಡಬೇಡ. ಪ್ರಾಪಂಚಿಕರು ಕಣ್ಣಿಗೆ ಬಿದ್ದರು ಎಂದರೆ, ಮೆಲ್ಲ ಮೆಲ್ಲಗೆ ಅಲ್ಲಿಂದ ಸರಿದುಬಿಡು. ಇದುವರೆಗೆ ನೀನು ಸಂಸಾರದಲ್ಲಿದ್ದು, ಅದು ಸಂಪೂರ್ಣವಾಗಿ ನಿರರ್ಥಕವಾದ್ದು ಅಂತ ಅರಿತಿದ್ದೀಯೆ. ಭಗವಂತನೊಬ್ಬನೇ ವಸ್ತು ಉಳಿದುದೆಲ್ಲಾ ಅವಸ್ತು. ಸತ್ಯವಾದವನು ಭಗವಂತನೊಬ್ಬನೇ, ಉಳಿದುದೆಲ್ಲಾ ಒಂದೆರಡು ದಿನದ ಬಾಳಿನವು. ಸಂಸಾರದಲ್ಲಿ ಇರೋದು ತಾನೆ ಏನು? ಅದನ್ನು ಅಮಟೆ ಕಾಯಿ ಚಟ್ನಿಗೆ ಹೋಲಿಸಬಹುದು: ಮನಸ್ಸಿಗೆ ಅದನ್ನು ತಿನ್ನಬೇಕು ಅನ್ನಿಸುತ್ತದೆ. ಆದರೆ ಅಮಟೆ ಕಾಯಲ್ಲಿ ಏನಿದೆ? ಕೇವಲ ಬೀಜ ಮತ್ತು ಸಿಪ್ಪೆ; ತಿಂದರೆ ಹೊಟ್ಟೆನುಲಿತ.''

ಶ್ಯಾಮವಸು: ''ನಿಜ, ನೀವು ಹೇಳಿದ್ದೆಲ್ಲ ಸತ್ಯ.''

ಶ್ರೀರಾಮಕೃಷ್ಣರು: ''ಬಹಳ ಕಾಲದಿಂದ ಹಿಡಿದು ಅನೇಕ ಪ್ರಾಪಂಚಿಕ ಕೆಲಸಕಾರ್ಯಗಳನ್ನು ಮಾಡಿಕೊಂಡು ಬಂದಿದೀಯೆ. ಈ ಸಂಸಾರದ ಗದ್ದಲ ಗೊಂದಲದಲ್ಲಿ ಭಗವಂತನ ಧ್ಯಾನ ಮತ್ತು ಚಿಂತನೆ ಸಾಧ್ಯವಿಲ್ಲ. ನಿನಗೆ ಸ್ವಲ್ಪ ನಿರ್ಜನ ವಾಸ ಆವಶ್ಯಕ; ಇಲ್ಲದಿದ್ದರೆ ನಿನ್ನ ಮನಸ್ಸು ಸ್ಥಿರವಾಗದು. ಆದ್ದರಿಂದ ಕನಿಷ್ಟಪಕ್ಷ ನಿನ್ನ ಮನೆಗೆ ಒಂದು ಅರ್ಧ ಮೈಲಿ ದೂರದಲ್ಲಿರೋ ಪ್ರದೇಶದಲ್ಲಿ ನಿನ್ನ ಧ್ಯಾನಕ್ಕಾಗಿ ಒಂದು ಸ್ಥಳವನ್ನು ಏರ್ಪಾಡುಮಾಡಿಕೊಳ್ಳಬೇಕು.''

ಶ್ಯಾಮವಸು ಕೆಲವು ನಿಮಿಷಗಳು ಸುಮ್ಮನೆ ಕುಳಿತುಕೊಂಡ. ಯೋಚನಾಪರನಾಗಿರುವಂತೆ ತೋರಿಬರುತ್ತಿದ್ದಾನೆ.

ಶ್ರೀರಾಮಕೃಷ್ಣರು ನಗುತ್ತ: "ನೋಡು, ನಿನ್ನ ಹಲ್ಲುಗಳೆಲ್ಲ ಒಂದೂ ಇಲ್ಲದ ಹಾಗೆ ಬಿದ್ದು ಹೋಗಿವೆ. ಇನ್ನೇಕೆ ನಿನಗೆ ದುರ್ಗಾಪೂಜೆ? (ಎಲ್ಲರೂ ನಗುತ್ತಿದ್ದಾರೆ.) ಒಬ್ಬ ತನ್ನ ಸ್ನೇಹಿತನನ್ನು ಕೇಳಿದ: 'ಏನಯ್ಯ, ಈಗೇಕೆ ನೀನು ದುರ್ಗಾಪೂಜೆಮಾಡುತ್ತಿಲ್ಲವಲ್ಲ?' ಸ್ನೇಹಿತ ಉತ್ತರವಿತ್ತ: 'ಅಣ್ಣಾ, ಈಗ ಎಲ್ಲಾ ಹಲ್ಲೂ ಬಿದ್ದುಹೋಗಿವೆ. ಆಡಿನ ಮಾಂಸ ತಿನ್ನೋಕಾಗುತ್ತಿಲ್ಲ.' "

ಶ್ಯಾಮವಸು: "ಆಹ! ಸವಿ ಸವಿಯಾದ ಮಾತುಗಳು!"

ಶ್ರೀರಾಮಕೃಷ್ಣರು ನಗುತ್ತ: "ಈ ಪ್ರಪಂಚದಲ್ಲಿ ಮರಳು, ಸಕ್ಕರೆ ಎರಡೂ ಬೆರತುಕೊಂಡಿವೆ. ಇರುವೆಯೋಪಾದಿಯಲ್ಲಿ ಮರಳು ಕಣಗಳನ್ನು ತ್ಯಜಿಸಿ ಸಕ್ಕರೆ ಕಣಗಳನ್ನು ಆರಿಸಿಕೋಬೇಕು. ಯಾರು ಕೇವಲ ಸಕ್ಕರೆ ಕಣಗಳನ್ನೇ ಆರಿಸಿಕೊಳ್ಳಬಲ್ಲನೊ ಆತನೇ ಚತುರ. ಭಗವಚ್ಚಿಂತನೆಗಾಗಿ ಒಂದು ನಿರ್ಜನ ಪ್ರದೇಶವನ್ನು ಮೀಸಲಾಗಿ ಇಟ್ಟುಕೊ. ನೀನು ಮೊದಲು ಹಾಗೆ ಮಾಡು. ನಾನೂ ಅಲ್ಲಿಗೆ ಬಂದುಹೋಗುತ್ತೇನೆ."

ಶ್ಯಾಮವಸು: "ಮಹಾಶಯರೆ ಜನ್ಮಾಂತರವೆಂಬುದು ಉಂಟೆ? ನಾವು ಮತ್ತೆ ಜನ್ಮವೆತ್ತಬೇಕಾಗುವುದೆ?"

ಶ್ರೀರಾಮಕೃಷ್ಣರು: "ಈ ಪ್ರಶ್ನೆಯನ್ನು ಭಗವಂತನಿಗೇ ಹಾಕು. ವ್ಯಾಕುಲ ಚಿತ್ತದಿಂದ ಆತನಿಗೆ ಪ್ರಾರ್ಥನೆಮಾಡು. ಆತ ಎಲ್ಲವನ್ನೂ ತಿಳಿಸಿಕೊಟ್ಟುಬಿಡುತ್ತಾನೆ. ಮೊದಲು ಯದು ಮಲ್ಲಿಕನೊಡನೆ ಸ್ನೇಹ ಬೆಳಸಿಕೊ ಬಳಿಕ ಆತನೇ ನಿನಗೆ ತಿಳಿಸಿಬಿಡುತ್ತಾನೆ, ತನಗೆ ಮನೆಮಠಗಳೆಷ್ಟಿವೆ, ಲೇವಾದೇವಿ ಪತ್ರಗಳೆಷ್ಟಿವೆ ಎಂಬುದನ್ನು. ಮೊದಲೇ ಅವುಗಳ ಕಡೆಗೆ ಮನಸ್ಸುಕೊಡೋದು ಒಳ್ಳೆಯದಲ್ಲ. ಮೊದಲು ಆತನ ಸಾಕ್ಷಾತ್ಕಾರವನ್ನು ಪಡೆದುಕೊ; ಬಳಿಕ ನಿನಗೇನೇನು ಬೇಕೊ ಅವೆಲ್ಲವನ್ನೂ ಆತನೇ ತಿಳಿಸಿಕೊಡುತ್ತಾನೆ."

ಶ್ಯಾಮವಸು: "ಮಹಾಶಯರೆ, ಈ ಜಗತ್ತಿನಲ್ಲಿ ಮನುಷ್ಯ ಎಷ್ಟೊಂದು ಅನ್ಯಾಯಗಳನ್ನು, ಎಷ್ಟೊಂದು ಪಾಪಕೃತ್ಯಗಳನ್ನು ಮಾಡುತ್ತಿದ್ದಾನೆ! ಅಂಥ ಈ ಮನುಷ್ಯ ಎಂದಿಗಾದರು ಭಗವಂತನ ಸಾಕ್ಷಾತ್ಕಾರ ಪಡೆಯಬಲ್ಲನೆ?"

ಶ್ರೀರಾಮಕೃಷ್ಣರು: "ಯಾರೆ ಆಗಲಿ ದೇಹತ್ಯಾಗವಾಗುವ ವರೆಗೂ ಸಾಧನೆಯಲ್ಲಿ ತೊಡಗಿದ್ದು, ಮರಣಕಾಲದಲ್ಲಿ ಭಗವಂತನ ಚಿಂತನೆ ಮಾಡುತ್ತ ಮಾಡುತ್ತ, ಆತನನ್ನು ಕರೆಯುತ್ತ ಕರೆಯುತ್ತ ದೇಹ ತ್ಯಾಗಮಾಡೋದಾದರೆ, ಆತನನ್ನು ಸ್ಪರ್ಶಿಸೋಕೆ ಪಾಪಕ್ಕೆ ಅವಕಾಶವೆಲ್ಲಿ ರುತ್ತದೆ? ಮೈಯನ್ನು ತೊಳೆದನಂತರವೂ ಆನೆಗೆ ಬದಿ, ಧೂಳು ಇವನ್ನು ಮೈಮೇಲೆ ಎರಚಿಕೊಳ್ಳೋ ಸ್ವಭಾವ. ಆದರೆ ಮಾವಟಿಗ ಅದರ ಮೈ ಯನ್ನು ತೊಳೆದನಂತರ ಅದನ್ನು ಎಳೆದುಕೊಂಡು ಹೋಗಿ ಗಜಶಾಲೆಯಲ್ಲಿ ಕಟ್ಟಿಹಾಕಿಬಿಟ್ಟ ಅಂದರೆ ಅದಕ್ಕೆ ಮತ್ತೆ ಧೂಳು, ಬದಿ ಇವನ್ನು ಮೈಗೆ ಬಳಿದುಕೊಳ್ಳೋಕೆ ಆಸ್ಪದವೇ ಇಲ್ಲದಂತಾಗುತ್ತದೆ."

ಪರಮಹಂಸರು ಅಷ್ಟೊಂದಾಗಿ ರೋಗಗ್ರಸ್ತರಾಗಿದ್ದರೂ, ಜೀವಿಗಳ ದುಃಖ ದುರಿತಗಳು ಅವರ ಹೃದಯಕ್ಕೆ ಬಹಳವಾಗಿ ತಾಗುತ್ತಿವೆ. ಹಗಲೂ ಇರುಳೂ, ಅವರಿಗೆ ಭಕ್ತರ ಯೋಗಕ್ಷೇಮದ ಚಿಂತನೆಯೇ. ಅವರ ಅಪಾರ ದಯೆಯನ್ನು ನೋಡಿ ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿದಾರೆ. ಯಾರೆ ಆಗಲಿ ಭಗವಂತನ ಚಿಂತನೆ ಮಾಡುತ್ತ ಮಾಡುತ್ತ, ಆತನನ್ನು ಕರೆಯುತ್ತ ಕರೆಯುತ್ತ ದೇಹತ್ಯಾಗಮಾಡೋದಾದರೆ, ಆತನನ್ನು ಪಾಪ ಸ್ಪರ್ಶಿಸದು ಎಂಬುದಾಗಿ ಪರಮಹಂಸರ ಬಾಯಿಂದ ಬಂದ ಅಭಯವಚನ ಭಕ್ತರ ಹೃದಯದ ಅಂತರಾಳವನ್ನು ಹೊಕ್ಕಿಬಿಟ್ಟಿದೆ.

೩೦ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ಸಪ್ತಮಿ, ಶುಕ್ರವಾರ.

ಘಂಟೆ ಬೆಳಗಿನ ಒಂಬತ್ತು. ಪರಮಹಂಸರು ತಮ್ಮ ಕೊಠಡಿ ಯಲ್ಲಿ ಕುಳಿತು ಮಾಸ್ಟರೊಡನೆ ಮಾತಾಡುತ್ತಿದಾರೆ. ಅಲ್ಲಿ ಇನ್ನು ಬೇರೆ ಯಾರೂ ಇರಲಿಲ್ಲ. ಪರಮಹಂಸರ ದೇಹಸ್ಥಿತಿಯ ವರದಿಯನ್ನು ಡಾಕ್ಟರ್ ಸರ್ಕಾರನಿಗೆ ಒಪ್ಪಿಸಲು ಮತ್ತು ಆತನನ್ನು ಜೊತೆಯಲ್ಲೇ ಕರೆದುಕೊಂಡು ಬರಲು ಮಾಸ್ಟರ್ ಇನ್ನೇನು ಡಾಕ್ಟರ ಮನೆಗೆ ಹೊರಡುವುದರಲ್ಲಿದಾನೆ.

ಶ್ರೀರಾಮಕೃಷ್ಣರು ನಗುತ್ತ ಮಾಸ್ಟರಿಗೆ: "ಪ್ರಾತಃಕಾಲ ಇಲ್ಲಿಗೆ ಪೂರ್ಣ ಬಂದಿದ್ದ. ಆತನದು ಬಹಳ ಒಳ್ಳೆ ಸ್ವಭಾವ! ಮಣೀಂದ್ರ ಇದಾನಲ್ಲ ಆತನದು ಪ್ರಕೃತಿಯ ಭಾವ. ಏನಾಶ್ಚರ್ಯ! ಆತ ಚೈತನ್ಯ ಚರಿತಾಮೃತವನ್ನು ಓದಿದಷ್ಟಕ್ಕೇ ಗೋಪೀಭಾವ, ಸಖೀಭಾವ ಏನು ಎಂಬುದನ್ನು ಅರಿತುಕೊಂಡುಬಿಟ್ಟಿದಾನಲ್ಲ. ಇದೂ ಅಲ್ಲದೆ ಭಗವಂತ ಪುರುಷ, ಮನುಷ್ಯ ಪ್ರಕೃತಿ; ಮನುಷ್ಯ ಭಗವಂತನನ್ನು ಆತನ ದಾಸಿ

ಎಂಬ ಭಾವದಿಂದ ಪೂಜೆ ಮಾಡಬೇಕು ಎಂಬುದನ್ನೂ ಅರಿತಿದಾನೆ. ಈ ರೀತಿಯಾದ ತಿಳಿವು ಎಷ್ಟು ಅದ್ಭುತವಾದ್ದು!"

ಮಾಸ್ಟರ್: "ಹೌದು, ನಿಜ."

ಪೂರ್ಣನ ವಯಸ್ಸು ಹದಿನೈದೊ ಹದಿನಾರೊ. ಪೂರ್ಣನನ್ನು ನೋಡಬೇಕು ಎಂಬುದಾಗಿ ಪರಮಹಂಸರು ಆಗಾಗ ವ್ಯಾಕುಲರಾಗೋದುಂಟು. ಆದರೆ ಆತನ ಮನೆಯುವರು ಆತನನ್ನು ಬಿಟ್ಟುಕೊಡುತ್ತಿಲ್ಲ. ಮೊದಲು ಮೊದಲು ಆತನನ್ನು ನೋಡಬೇಕೆಂದು ಅವರು ಅಷ್ಟೊಂದು ವ್ಯಾಕುಲರಾಗುತ್ತಿದ್ದರು; ಒಂದು ದಿನ ರಾತ್ರಿ ವೇಳೆಯಲ್ಲಿ ದಕ್ಷಿಣೇಶ್ವರದಿಂದ ಹೊರಟು ಕಲ್ಕತ್ತದಲ್ಲಿರೋ ಮಾಸ್ಟರ ಮನೆಗೆ ಬಂದುಬಿಟ್ಟಿದ್ದರು. ಆಗ ಮಾಸ್ಟರ್ ಪೂರ್ಣನ ಮನೆಗೆ ಹೋಗಿ ಆತನನ್ನು ಜೊತೆಯಲ್ಲೇ ಕರೆದುಕೊಂಡು ಬಂದು ಪರಮಹಂಸರೆದುರಿಗೆ ನಿಲ್ಲಿಸಬೇಕಾಯಿತು. ಭಗವಂತನನ್ನು ಯಾವ ರೀತಿಯಾಗಿ ಕರೆಯಬೇಕು ಎಂಬ ವಿಷಯವಾಗಿ ಆತನಿಗೆ ಉಪದೇಶಕೊಟ್ಟನಂತರ ಪರಮಹಂಸರು ದಕ್ಷಿಣೇಶ್ವರಕ್ಕೆ ಹಿಂದಿರುಗಿದರು. ಮಣೀಂದ್ರನ ವಯಸ್ಸೂ ಪೂರ್ಣನಷ್ಟೆ. ಭಕ್ತರೆಲ್ಲರು ಆತನನ್ನು "ಪಾಪ" ಅಂತ ಕರೆಯುತ್ತಿದ್ದರು. ಭಗವಂತನ ನಾಮಗುಣಕೀರ್ತನೆ ಕಿವಿಗೆ ಬಿದ್ದೊಡನೆ ಆತ ಭಾವೋನ್ಮತ್ತನಾಗಿ ನರ್ತಿಸಲಾರಂಭಿಸುತ್ತಿದ್ದ.

ಮಾಸ್ಟರ್ ಹತ್ತೂವರೆ ಸಮಯಕ್ಕೆ ಡಾಕ್ಟರ್ ಸರ್ಕಾರರ ಮನೆಗೆ ಬಂದು, ಎರಡನೆ ಅಂತಸ್ತಿಗೆ ಹತ್ತಿ ಬೈಠಕ್‌ಖಾನೆಯ ಮುಖಮಂಟಪದಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ಡಾಕ್ಟರ ಎದುರಿಗೆ ಒಂದು ಗಾಜಿನ ಬೋಗುಣಿಯಲ್ಲಿ ನೀರನ್ನು ಇಟ್ಟಿತ್ತು. ಅದರಲ್ಲಿ ಕೆಂಪು ಮೀನುಗಳು ಆನಂದದಿಂದ ಆಟವಾಡುತ್ತಿದ್ದುವು. ಡಾಕ್ಟರ್ ಆ ಬೋಗುಣಿಯ ಒಳಕ್ಕೆ ಆಗಾಗ ಏಲಕ್ಕಿ ಸಿಪ್ಪೆಯನ್ನು ಹಾಕುತ್ತಿದ್ದ. ಜೊತೆಗೆ ಆತ ಹತ್ತಿರ ಹಾರಾಡುತ್ತಿದ್ದ ಗುಬ್ಬಚ್ಚಿಗಳಿಗೆ ಗೋಧಿ ಹಿಟ್ಟಿನ ಗೋಲಿಗಳನ್ನು ಬಿಸಾಡುತ್ತಿದ್ದ. ಮಾಸ್ಟರ್ ಇದನ್ನೆಲ್ಲ ನೋಡುತ್ತ ಸುಮ್ಮನೆ ಕುಳಿತುಕೊಂಡಿದಾನೆ.

ಡಾಕ್ಟರ್ ನಗುತ್ತ ಮಾಸ್ಟರಿಗೆ: "ಇಗೋ ನೋಡು, ಭಕ್ತರು ಭಗವಂತನನ್ನು ದಿಟ್ಟಿಸಿನೋಡುವಂತೆ, ಇವು (ಕೆಂಪು ಮೀನುಗಳು) ನನ್ನ ಕಡೆ ಎವೆಯಿಕ್ಕದೆ ನೋಡುತ್ತಾ ಇವೆ. ನಾನು ಹಾಕಿರೋ ಏಲಕ್ಕಿ ಸಿಪ್ಪೆಗಳ ಕಡೆಗೆ ಇವುಗಳ ದೃಷ್ಟಿಯೇ ಹೋಗಿಲ್ಲ. ಇದಕ್ಕಾಗೇ ನಾನು ಹೇಳೋದು,

ಕೇವಲ ಭಕ್ತಿ ಯಾವ ಪ್ರಯೋಜನಕ್ಕೆ ಬಂದದ್ದು, ಜ್ಞಾನವೂ ಬೇಕು. (ಮಾಸ್ಟರ್ ನಗುತ್ತಿದಾನೆ.) ನೋಡು ಆ ಕಡೆ, ಆ ಗುಬ್ಬಚ್ಚಿಗಳ ಕಡೆ! ನಾನು ಗೋಧಿ ಹಿಟ್ಟಿನ ಗೋಲಿಗಳನ್ನು ಬಿಸಾಡಿದ ಒಡನೆಯೇ ಅವು ಹೆದರಿ ಹಾರಿಹೋಗಿಬಿಟ್ಟುವು. ಅವುಗಳಿಗೆ ಜ್ಞಾನವಿಲ್ಲದೆ ಇರುವುದರಿಂದ ಭಕ್ತಿಯೂ ಉಂಟಾಗಲಿಲ್ಲ. ಆ ಗೋಲಿಗಳು ತಮ್ಮ ಆಹಾರ ಅಂತ ಅವುಗಳಿಗೆ ಗೊತ್ತಾಗಲಿಲ್ಲ.''

ಡಾಕ್ಟರ್ ಸರ್ಕಾರ ಮತ್ತು ಮಾಸ್ಟರ್ ಇಬ್ಬರೂ ಬೈಠಕ್‌ಖಾನೆಗೆ ಬಂದರು. ಅಲ್ಲಿ ಸುತ್ತಲೂ ಇಟ್ಟಿದ್ದ ಬೀರುಗಳಲ್ಲಿ ಪುಸ್ತಕ ಭರ್ತಿಯಾಗಿದೆ. ಈಗ ಡಾಕ್ಟರ್ ವಿಶ್ರಮಿಸಿಕೊಳ್ಳುತ್ತಿದಾನೆ, ಮಾಸ್ಟರ್ ಪುಸ್ತಕಗಳನ್ನು ನೋಡುತ್ತಿದಾನೆ. ಯೇಸುವಿನ ಜೀವನ ಚರಿತೆಯ ವಿಷಯವಾಗಿ ಕ್ಯಾನನ್ ಫ್ಯಾರರ್ ಎಂಬುವನು ಬರೆದಿರೋ ಪುಸ್ತಕವನ್ನು ಮಾಸ್ಟರ್ ಕೈಗೆ ತೆಗೆದುಕೊಂಡು ಅದನ್ನು ಸ್ವಲ್ಪಹೊತ್ತು ಓದಿದ. ಡಾಕ್ಟರ್ ಸರ್ಕಾರ ಹೇಳಲಾರಂಭಿಸಿದ, ತಾನು ಎಷ್ಟು ಕಷ್ಟಪಟ್ಟು ಎದುರಾಳಿಗಳ ಸದ್ದನ್ನೆಲ್ಲಾ ಅಡಗಿಸಿ ಪ್ರಪ್ರಥಮ ಹೋಮಿಯೋಪತಿ ಆಸ್ಪತ್ರೆಯನ್ನು ತೆರೆಯಬೇಕಾಯಿತು ಎಂಬುದರ ವಿಷಯವಾಗಿ. ಆ ಆಸ್ಪತ್ರೆಯ ಸಂಬಂಧವಾಗಿ ನಡೆದ ಪತ್ರವ್ಯವಹಾರಗಳಿಗಾಗಿ ೧೮೭೬ನೆ ಇಸವಿಯ ''ಕಲ್ಕತ್ತದ ವೈದ್ಯಕೀಯ ಮಾಸಪತ್ರಿಕೆ'' ಎಂಬುದನ್ನು ಓದುವಂತೆ ಆತ ಮಾಸ್ಟರಿಗೆ ಹೇಳಿದ. ಡಾಕ್ಟರ್ ಸರ್ಕಾರನಿಗೆ ಹೋಮಿಯೋಪತಿಯ ಮೇಲೆ ಬಹಳ ಅನುರಾಗ.

ಮಂಗರ್ ಎಂಬುವನು ಬರೆದಿರೋ ''ಹೊಸ ಪರಮಾರ್ಥ ವಿದ್ಯೆ'' ಎಂಬ ಪುಸ್ತಕವನ್ನು ಮಾಸ್ಟರು ಕೈಗೆ ತೆಗೆದುಕೊಂಡಿದ್ದನ್ನು ಡಾಕ್ಟರ್ ನೋಡಿದ.

ಡಾಕ್ಟರ್: ''ಮಂಗರ್ ಎಂಬುವನು ತನ್ನ ಸಿದ್ಧಾಂತಗಳನ್ನು ಯುಕ್ತಿಯ ಮತ್ತು ವಿಚಾರದ ಅಡಿಗಲ್ಲಿನ ಮೇಲೆ ಕಟ್ಟಿದಾನೆ. ಇದು ಚೈತನ್ಯ ಹೇಳಿದ್ದು, ಅದು ಬುದ್ಧ ಹೇಳಿದ್ದು, ಬೇರೊಂದು ಯೇಸು ಹೇಳಿದ್ದು,—ಆದ್ದರಿಂದ ವಿಶ್ವಾಸವಿಡಬೇಕು—ಅಂತ ನೀವು ಹೇಳುತ್ತೀರಲ್ಲ, ಆ ರೀತಿಯವಲ್ಲ ಅವು.''

ಮಾಸ್ಟರ್ ನಗುತ್ತ: ''ಹೌದು, ನಾವು ಚೈತನ್ಯನಲ್ಲೇ ಆಗಲಿ ಅಥವಾ ಬುದ್ಧನಲ್ಲೇ ಆಗಲಿ ವಿಶ್ವಾಸವಿಡಕೂಡದು; ಇವನಲ್ಲಿ (ಮಂಗರ್‌ನಲ್ಲಿ) ವಿಶ್ವಾಸವಿಡಬೇಕು!''

ಡಾಕ್ಟರ್: "ನೀನು ಯಾರಿಗೆ ಶಿಪಾರಸು ಮಾಡುತ್ತೀಯೋ ಅವರಲ್ಲಿ."

ಮಾಸ್ಟರ್: "ನಾವು ಹೇಳೋದನ್ನು ಪ್ರಮಾಣೀಕರಿಸಲು ನಮಗೆ ಯಾರಾದರೂ ಒಬ್ಬರ ಆಧಾರ ಬೇಕೇಬೇಕು; ಅದಕ್ಕಾಗಿ ಮುಂಗರ್!" (ಡಾಕ್ಟರ್ ನಗುತ್ತಾನೆ.)

ಡಾಕ್ಟರ್ ಸರ್ಕಾರ ತನ್ನ ಬಂಡಿಗೆ ಹತ್ತಿದ. ಮಾಸ್ಟರೂ ಅದಕ್ಕೇ ಹತ್ತಿದ. ಅದು ಶ್ಯಾಮಪುಕುರದ ಕಡೆ ಮುಂದುವರಿಯಿತು. ಆಗಲೆ ಮಧ್ಯಾಹ್ನ. ಇಬ್ಬರೂ ಏನೇನೊ ಮಾತುಕತೆಗಳಾಡುತ್ತ ಬಂಡಿಯಲ್ಲಿ ಮುಂದುವರಿಯುತ್ತಿದಾರೆ. ಡಾಕ್ಟರ್ ಭಾದುರಿ ಆಗಾಗ ಬಂದು ಪರಮ ಹಂಸರನ್ನು ನೋಡಿಹೋಗುತ್ತಿದ್ದ. ಈಗ ಮಾತು ಆತನ ಸಂಬಂಧವಾಗಿ ಆರಂಭವಾಗಿದೆ.

ಮಾಸ್ಟರ್ ನಗುತ್ತ: ಭಾದುರಿ ತಮ್ಮ ಸಂಬಂಧವಾಗಿ ಹೇಳಿದ, ತಾವು ಮಣ್ಣು ಕಲ್ಲಿನ ಅವಸ್ಥೆಗೆ ಹೋಗಬೇಕಾಗಿದೆ."

ಡಾಕ್ಟರ್: "ಹಾಗೆಂದರೆ?"

ಮಾಸ್ಟರ್: "ಮಹಾತ್ಮರು, ಸೂಕ್ಷ್ಮಶರೀರ, ಇವನ್ನೆಲ್ಲ ನೀವು ಒಪ್ಪುತ್ತಿಲ್ಲ. ಬಹುಶಃ ಡಾಕ್ಟರ್ ಭಾದುರಿ ಒಬ್ಬ ತಿಯಾಸೊಫಿಯ ಅನುಯಾಯಿಯಾಗಿ ಇರಬೇಕು. ಜೊತೆಗೆ ನೀವು ಅವತಾರವನ್ನು ಬೇರೆ ಒಪ್ಪಿಕೊಳ್ಳುತ್ತಿಲ್ಲ. ಆದಕ್ಕಾಗಿ ಬಹುಶಃ ಆತ ನಿಮ್ಮನ್ನು ಹಾಸ್ಯಮಾಡಿ ಹೇಳಿದ ಅಂತ ಕಾಣುತ್ತೆ — ಈ ಸಲ ಸತ್ತನಂತರ ನಿಮಗೆ ಮಾನವ ಜನ್ಮ ವಂತೂ ದೊರೆಯೋ ಹಾಗೇ ಇಲ್ಲ; ಪಶು-ಪಕ್ಷಿ, ಕ್ರಿಮಿ-ಕೀಟ, ಗಿಡ-ಮರ ಇವುಗಳ ಜನ್ಮವೂ ದೊರೆಯೋ ಹಾಗಿಲ್ಲ. ನೀವು ಮೊದಲು ಕಲ್ಲು. ಮಣ್ಣಾಗಿ ಜನ್ಮ ತಳೆದು, ಎಷ್ಟೋ ಜನ್ಮಗಳ ನಂತರ ಮತ್ತೆ ಮನುಷ್ಯನಾಗಿ ಹುಟ್ಟಬೇಕಾಗಿಬರುತ್ತದೆ."

ಡಾಕ್ಟರ್ ಸರ್ಕಾರ: "ಅಬ್ಬಬ್ಬ!"

ಮಾಸ್ಟರ್: "ಮತ್ತೆ ಭಾದುರಿ ಹೇಳಿದ, ನಿಮ್ಮ ಭೌತಿಕ ವಿಜ್ಞಾನ ಮಿಥ್ಯಾಜ್ಞಾನ; ಅದು ಕ್ಷಣಿಕವಾದ್ದು. ಅದನ್ನು ಉದಹರಿಸಲು ಆತ ಬಾವಿಯ ಸಾಮ್ಯ ಕೊಟ್ಟ. ಎರಡು ಬಾವಿ ಇವೆ ಅಂತ ಇಟ್ಟುಕೊಳ್ಳಿ. ಮೊದಲನೆಯದರಲ್ಲಿ ನೀರು ಜಲದ ಕಣ್ಣಿನಿಂದ ಉಕ್ಕಿಬಂದು ತುಂಬಿದೆ. ಎರಡನೆಯದರಲ್ಲಿ ಆ ರೀತಿಯ ಜಲದ ಕಣ್ಣು-ಗಿಣ್ಣು ಏನೂ ಇಲ್ಲದೆ, ಕೇವಲ

ಮಳೆ ನೀರಿನಿಂದ ತುಂಬಿದೆ. ಈ ಎರಡನೆಯದರ ನೀರು ಹೆಚ್ಚುಕಾಲ ನಿಲ್ಲದು. ನಿಮ್ಮ ಭೌತಿಕ ವಿಜ್ಞಾನವೂ ಈ ಎರಡನೆಯ—ಮಳೆಗಾಲದ—ಬಾವಿಯ ಹಾಗೆ ಬೇಗ ಬತ್ತಿಹೋಗುತ್ತದೆ.''

ಡಾಕ್ಟರ್ ಕಿಂಚಿತ್ ನಕ್ಕು: ''ಹಾಗೇನು!''

ಡಾಕ್ಟರ್ ಸರ್ಕಾರ ಕಾರನ್ವಾಲೀಸ್ ಬೀದಿಯನ್ನು ಮುಟ್ಟಿ, ಅಲ್ಲಿ ಪ್ರತಾಪ ಮಜುಮದಾರನನ್ನೂ ಬಂಡಿಗೆ ಹತ್ತಿಸಿಕೊಂಡು ಮುಂದಕ್ಕೆ ಪ್ರಯಾಣ ಬೆಳಸಿದ. ಆತ ನಿನ್ನೆ ದಿನ ಪರಮಹಂಸರ ದೇಹಾರೋಗ್ಯವನ್ನು ಪರೀಕ್ಷಿಸಲು ಬಂದಿದ್ದ. ಗಾಡಿ ಬೇಗ ಶ್ಯಾಮಪುಕುರವನ್ನು ತಲುಪಿಬಿಟ್ಟಿತು.

ಪರಮಹಂಸರು ಅನೇಕ ಭಕ್ತರೊಡನೆ ಎರಡನೆ ಅಂತಸ್ತಿನಲ್ಲಿರೋ ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದ್ದರು.

ಡಾಕ್ಟರ್ ಸರ್ಕಾರ ಶ್ರೀರಾಮಕೃಷ್ಣರಿಗೆ: ''ಓಹೊ, ನಿಮಗೆ ಕೆಮ್ಮಲು[1] ಬಂದಿದೆಯೇನು? (ನಗುತ್ತ) ಕಾಶಿಗೆ ಹೋಗೋದು ಒಳ್ಳೆಯದೆ.'' (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ನಗುತ್ತ: ''ಹಾಗೆ ಮಾಡಿದರೆ ನನಗೆ ಮುಕ್ತಿ ದೊರೆತುಬಿಡುತ್ತದೆ. ನನಗೆ ಮುಕ್ತಿ ಬೇಕಾಗಿಲ್ಲ; ಭಕ್ತಿ ಬೇಕು!'' (ಎಲ್ಲರೂ ನಗುತ್ತಿದಾರೆ.)

ಡಾಕ್ಟರ್ ಪ್ರತಾಪಮಜುಮದಾರ, ಡಾಕ್ಟರ್ ಭಾದುರಿಯ ಅಳಿಯ. ಪರಮಹಂಸರು ಡಾಕ್ಟರ್ ಪ್ರತಾಪನ ಎದುರಿಗೆ ಡಾಕ್ಟರ್ ಭಾದುರಿಯ ಗುಣಗಳನ್ನು ಎತ್ತಿ ಹೊಗಳುತ್ತಿದಾರೆ.

ಶ್ರೀರಾಮಕೃಷ್ಣರು ಡಾಕ್ಟರ್ ಪ್ರತಾಪನಿಗೆ: ''ಆಹ, ಆತ ಎಷ್ಟು ಒಳ್ಳೆ ಮನುಷ್ಯನಾಗಿಬಿಟ್ಟಿದಾನೆ! ಭಗವಚ್ಚಿಂತನೆ ಮಾಡುತ್ತಿದಾನೆ; ಒಳ್ಳೆ ನಿಯಮನಿಷ್ಠಾವಂತನಾಗಿದಾನೆ. ಜೊತೆಗೆ ಸಾಕಾರ, ನಿರಾಕಾರ ಎರಡನ್ನೂ ಒಪ್ಪುತ್ತಾನೆ.''

ಡಾಕ್ಟರ್ ಸರ್ಕಾರ ಕಲ್ಲು ಮಣ್ಣಾಗಿ ಜನ್ಮವೆತ್ತಬೇಕಾಗುತ್ತದೆ ಎಂಬುದಾಗಿ ಡಾಕ್ಟರ್ ಭಾದುರಿ ಹೇಳಿದ ಮಾತನ್ನು ಎತ್ತಲೋಸುಗ ಮಾಸ್ಟರ್ ಬಹಳ ಕುತೂಹಲನಾಗಿದಾನೆ. ಡಾಕ್ಟರ್ ಭಾದುರಿ, ಡಾಕ್ಟರ್ ಸರ್ಕಾರನ ಸಂಬಂಧವಾಗಿ ಆಡಿದ ಆ ಮಾತುಗಳು ಜ್ಞಾಪಕದಲ್ಲಿರುವುವೇ

1. ''ಕೆಮ್ಮಲು'' ಎಂಬುದಕ್ಕೆ ಬಂಗಾಳಿಯಲ್ಲಿ ''ಕಾಶಿ'' ಅಂತ ಹೆಸರು.

ಎಂಬುದಾಗಿ ಮಾಸ್ಟರು ಚಿಕ್ಕ ನರೇನನನ್ನು ಮೆಲ್ಲಗೆ ಕೇಳಿದ. ಈ ಮಾತು ಪರಮಹಂಸರ ಕಿವಿಗೂ ಬಿತ್ತು.

ಶ್ರೀರಾಮಕೃಷ್ಣರು ನಗುತ್ತ ಸರ್ಕಾರನಿಗೆ: "ನಿನ್ನ ಸಂಬಂಧವಾಗಿ ಡಾಕ್ಟರ್ ಭಾದುರಿ ಏನು ಹೇಳಿದಾನೆ ಎಂಬುದು ನಿನಗೆ ಗೊತ್ತೇನು? ನೀನು ಅವತಾರ-ಗಿವತಾರ ಇವನ್ನೆಲ್ಲ ಒಪ್ಪದೆ ಇರುವುದರಿಂದ, ಈ ಮನ್ವಂತರ ಮುಗಿದನಂತರ ನಿನ್ನ ಜೀವನವನ್ನು ನೀನು ಮತ್ತೆ ಮಣ್ಣು ಕಲ್ಲಿನಿಂದ ಆರಂಭಮಾಡಬೇಕಾಗುತ್ತದೆ." (ಎಲ್ಲರೂ ನಗುತ್ತಿದಾರೆ.)

ಡಾಕ್ಟರ್ ನಗುತ್ತ: "ನಾನು ನನ್ನ ಜೀವನವನ್ನು ಮಣ್ಣು ಕಲ್ಲಿನಿಂದ ಆರಂಭ ಮಾಡಿ, ಅನೇಕ ಜನ್ಮಗಳಾನಂತರ ಮಾನವ ದೇಹವನ್ನು ಪಡೆದು ಇಲ್ಲಿಗೆ ಬಂದೆನೆಂದರೆ ಮತ್ತೆ ನಾನು ನನ್ನ ಜೀವನವನ್ನು ಕಲ್ಲು ಮಣ್ಣಿನಿಂದ ಆರಂಭಮಾಡಬೇಕಾಗಿ ಬಂದುಬಿಡುತ್ತದೆ, ಅಲ್ಲವೇನು!" (ಡಾಕ್ಟರ್ ಮತ್ತು ಎಲ್ಲರೂ ನಗುತ್ತಿದಾರೆ.)

ಪರಮಹಂಸರು ಅಷ್ಟೊಂದು ರೋಗಗ್ರಸ್ತರಾಗಿದ್ದರೂ ಅವರು ಭಾವಸ್ಥರಾಗುತ್ತಿರೋದರ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಪ್ರತಾಪ: "ನಿನ್ನೆ ನೀವು ಭಾವಸ್ಥರಾಗೋದನ್ನು ನೋಡಿಹೋದೆ."

ಶ್ರೀರಾಮಕೃಷ್ಣರು: "ಅದು ತಾನಾಗೆ ಬಂದಿತ್ತು; ಗಾಢವಾದ್ದೇನಲ್ಲ."

ಡಾಕ್ಟರ್ ಸರ್ಕಾರ: "ಭಾವ ಮತ್ತು ಮಾತುಕತೆ, ನೀವು ಈಗಿರೋ ಸ್ಥಿತಿಯಲ್ಲಿ ನಿಮಗೆ ಒಳ್ಳೆಯವಲ್ಲ."

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ: "ನಿನ್ನೆ ಉಂಟಾಗಿದ್ದ ಭಾವಾವಸ್ಥೆಯಲ್ಲಿ ನಾನು ನಿನ್ನನ್ನೂ ನೋಡಿದೆ. ನೀನು ಒಂದು ಜ್ಞಾನದ ಗಣಿಯೇ ಆಗಿರೋದನ್ನು ನೋಡಿದೆ; ಆದರೆ ಕೇವಲ ಅದು ಒಣ ಜ್ಞಾನದ್ದು, ಆನಂದರಸ ದೊರೆತಿರಲಿಲ್ಲ. (ಪ್ರತಾಪನಿಗೆ, ಡಾಕ್ಟರ್ ಸರ್ಕಾರನ ಸಂಬಂಧವಾಗಿ) ಈತನಿಗೇನಾದರು ಒಮ್ಮೆ ಭಗವದಾನಂದ ರಸದ ರುಚಿ ದೊರೆತುಬಿಟ್ಟಿದೇ ಆದರೆ, ಮೇಲೆ ಕೆಳಗೆ ಎಲ್ಲೆಲ್ಲೂ ಆ ರಸವೇ ತುಂಬಿತುಳುಕಾಡುತ್ತಿರುವಂತೆ ಈತನಿಗೆ ಅನುಭವವಾಗುತ್ತದೆ. ಬಳಿಕ ತಾನು ಹೇಳುವುದೇ ಸರಿ ಉಳಿದವರದೆಲ್ಲ ತಪ್ಪು ಎಂಬುವಾಗಿ ಎಂದಿಗೂ ಈತ ಹೇಳೋದಿಲ್ಲ. ಲಂಗು ಲಗಾಮಿಲ್ಲದ ಮಾತುಕತೆಗಳು ಈತನ ಬಾಯಿಂದ ಬಳಿಕ ಎಂದಿಗೂ ಹೊರಡವು."

ಭಕ್ತರೆಲ್ಲರು ಸುಮ್ಮನೆ ಕುಳಿತಿದಾರೆ. ಇದ್ದಕ್ಕಿದ್ದಹಾಗೆ ಪರಮ ಹಂಸರು ಭಾವಾವಿಷ್ಟರಾಗಿ ಡಾಕ್ಟರ್ ಸರ್ಕಾರನಿಗೆ ಹೇಳುತ್ತಿದಾರೆ: "ಮಹೇಂದ್ರಬಾಬೂ, ನೀನು ದುಡ್ಡಿನ ಪಿಶಾಚಿಯಿಂದ ಹಿಡಿಸಿಕೊಂಡು ಬಿಟ್ಟಿದೀಯಲ್ಲ ಏಕೆ? ಹೆಂಡತಿಯ ಮೇಲೇಕೆ ಇಷ್ಟೊಂದು ವ್ಯಾಮೋಹ? ಹೆಸರಿಗಾಗಿ ಏಕೆ ಸುಮ್ಮನೆ ಸತ್ತು ಸುಣ್ಣವಾಗುತ್ತಿದ್ದೀಯೆ? ಈಗ ಇದನ್ನೆಲ್ಲ ಒಮ್ಮೆಗೇ ತ್ಯಜಿಸಿ ಏಕಾಗ್ರಚಿತ್ತನಾಗಿ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸು. ಆ ಆನಂದವನ್ನು ಅನುಭವಿಸು."

ಡಾಕ್ಟರ್ ಸರ್ಕಾರ ಸುಮ್ಮನೆ ಕುಳಿತಿದಾನೆ. ಭಕ್ತರೂ ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಜ್ಞಾನಿ ಯಾವರೀತಿಯಾಗಿ ಧ್ಯಾನಮಾಡುತ್ತಾನೆ ಎಂಬುದರ ವಿಷಯವಾಗಿ ತೋತಾಪುರಿ ನನಗೆ ಹೇಳುತ್ತಿದ್ದ: ಮೇಲೆ, ಕೆಳಗೆ, ಎಲ್ಲೆಲ್ಲಿಯೂ ನೀರಿನ ಮಯ; ಜೀವ ಮೀನಿನೋಪಾದಿಯಲ್ಲಿ ಆನಂದದಿಂದ ಅದರಲ್ಲಿ ಈಜಾಡುತ್ತಿರುತ್ತದೆ. ಧ್ಯಾನ ಪರಿಪಕ್ವವಾದಾಗ ಇದನ್ನೆಲ್ಲ ನಿಜವಾಗಿಯೂ ನೋಡಬಹುದು.

"ಅನಂತ ಸಾಗರವನ್ನು ತೆಗೆದುಕೊಳ್ಳಿ. ಅದಕ್ಕೆ ಮಿತಿ ಎಂಬುದೇ ಇಲ್ಲ. ಅದರೊಳಗೆ ಒಂದು ಘಟ ಮುಳುಗಿಕೊಂಡಿದೆ ಅಂತ ಭಾವಿಸಿಕೊಳ್ಳಿ. ಅದರ ಒಳಗೂ ನೀರಿದೆ, ಹೊರಗೂ ನೀರಿದೆ. ಹಾಗೇನೆ ಜ್ಞಾನಿ ತನ್ನ ಅಂತರ್ಯದಲ್ಲೂ ಪರಮಾತ್ಮನನ್ನು ನೋಡುತ್ತಾನೆ, ಹೊರಗೂ ಪರಮಾತ್ಮನನ್ನು ನೋಡುತ್ತಾನೆ. ಈ ಘಟ ಎಂಬುದು ಏನು? ಅದೇ 'ಅಹಂ' ಎಂಬುದು. ಈ ಘಟವೆಂಬುದೊಂದು ಇರುವುದರಿಂದ ನೀರು ಇಬ್ಭಾಗವಾಗಿ ಕಾಣಬರುತ್ತದೆ; ಇದು ಒಳಗು, ಆದು ಹೊರಗು ಎಂಬ ಬೋಧೆಯಾಗುತ್ತದೆ. 'ಅಹಂ' ಎಂಬ ಘಟವಿರೋವರೆಗೆ ಈ ಬೇಧ ಬೋಧೆಯ ಅನುಭವ ಆಗೇ ಆಗುತ್ತದೆ. 'ಅಹಂ' ಎಂಬುದು ನಾಶವಾಯಿತು ಎಂದರೆ, ಏನಿದೆಯೊ ಅದೇ ಇರುತ್ತದೆ. ಅದನ್ನು ಬಾಯಿಂದ ವರ್ಣನೆಮಾಡಲಾಗೋದಿಲ್ಲ.

"ಜ್ಞಾನಿ ಮತ್ತಾವ ರೀತಿಯಾಗಿ ಧ್ಯಾನಮಾಡುತ್ತಾನೆ ಎಂಬುದು ನಿನಗೆ ಗೊತ್ತೆ? ಅನಂತ ಆಕಾಶದಲ್ಲಿ ಹಕ್ಕಿ ತನ್ನ ರೆಕ್ಕೆಯನ್ನು ಬಿಚ್ಚಿ ಆನಂದದಿಂದ ಹಾರಾಡುತ್ತಿದೆ ಅಂತ ಭಾವಿಸಿಕೊ. ಚಿದಾಕಾಶವೆ ಆ ಅನಂತ ಆಕಾಶ. ಆತ್ಮವೇ ಆ ಹಕ್ಕಿ. ಆ ಹಕ್ಕಿ ಪಂಜರದಲ್ಲಿ ಕಟ್ಟುಬಿದ್ದಿಲ್ಲ; ಚಿದಾಕಾಶದಲ್ಲಿ ಹಾರಾಡುತ್ತಿದೆ. ಅದರ ಆನಂದಕ್ಕೆ ಪಾರವೇ ಇಲ್ಲ."

ಭಕ್ತರೆಲ್ಲರು ಆಶ್ಚರ್ಯಚಕಿತರಾಗಿ ಈ ಧ್ಯಾನಯೋಗದ ಸಂಬಂಧ ವಾಗಿ ಪರಮಹಂಸರ ಬಾಯಿಂದ ಬಂದುದನ್ನೆಲ್ಲ ಕೇಳಿದರು. ಸ್ವಲ್ಪ ಹೊತ್ತಾದನಂತರ ಪ್ರತಾಪ ಮಾತುಕತೆಯಾಡಲು ಆರಂಭಿಸಿದ.

ಪ್ರತಾಪ, ಡಾಕ್ಟರ್ ಸರ್ಕಾರನಿಗೆ: "ಸ್ವಲ್ಪ ಹಾಗೇ ಆಲೋಚಿಸಿ ನೋಡಿದರೆ, ಎಲ್ಲವೂ ನೆಳಲೋಪಾದಿಯಲ್ಲಿ ಕಂಡುಬರುತ್ತವೆ."

ಡಾಕ್ಟರ್ ಸರ್ಕಾರ: "ನೆಳಲು ಎಂದೊಡನೆಯೆ ಈ ಮೂರು ವಸ್ತು ಜ್ಞಾಪಕಕ್ಕೆ ಬರುತ್ತವೆ: ಸೂರ್ಯ, ವಸ್ತು, ನೆಳಲು. ವಸ್ತುವೇ ಇಲ್ಲದಿದ್ದರೆ ನೆಳಲೆಲ್ಲಿಂದ ಬಂದೀತು? ನೀವು ಹೇಳುತ್ತಿದೀರಿ, ಭಗವಂತ ಮಾತ್ರ ಸತ್ಯ ಆತನ ಸೃಷ್ಟಿ ಮಿಥ್ಯಾ. ಆದರೆ ಆತನ ಸೃಷ್ಟಿಯೂ ಸತ್ಯ."

ಪ್ರತಾಪ: "ಬಹಳ ಒಳ್ಳೇದು. ಕನ್ನಡಿಯಲ್ಲಿ ಪ್ರತಿಬಿಂಬ ಕಾಣ ಬರೋ ಹಾಗೆ, ಮನಸ್ಸೆಂಬ ಕನ್ನಡಿಯಲ್ಲಿ ಈ ಜಗತ್ತು ಕಾಣಬರುತ್ತಿದೆ."

ಡಾಕ್ಟರ್ ಸರ್ಕಾರ: "ಯಾವ ವಸ್ತುವೂ ಇಲ್ಲದೆ ಪ್ರತಿಬಿಂಬ ಬೀಳೋ ಬಗೆ ಹೇಗೆ?"

ನರೇನ: "ಏಕೆ, ಭಗವಂತನೇ ವಸ್ತುವಾಗಿದಾನಲ್ಲ."

ಡಾಕ್ಟರ್ ಸರ್ಕಾರ ಸುಮ್ಮನೆ ಕುಳಿತುಕೊಂಡಿದಾನೆ.

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ: "ಒಂದು ವಿಷಯ ವನ್ನು ನೀನು ಚೆನ್ನಾಗಿ ಹೇಳಿದೆ. ಭಾವಾವಸ್ಥೆಯಲ್ಲಿ ಮನಸ್ಸು ಭಗವಂತ ನೊಡನೆ ಲೀನವಾಗಿಬಿಡುತ್ತದೆ ಅಂತ. ಇದುವರೆಗೆ ಬೇರೆ ಯಾರೂ ಹಾಗೆ ಹೇಳಿರಲಿಲ್ಲ. ಹಾಗೆ ಹೇಳಿದವನು ನೀನೊಬ್ಬನೇ.

"ಶಿವನಾಥ ಒಮ್ಮೆ ಹೇಳಿದ, 'ಅಧಿಕವಾಗಿ ಭಗವಚ್ಚಿಂತನೆ ಮಾಡಿ ದರೆ, ಹುಚ್ಚನಾಗೋ ಸಂಭವ ಇದೆ' ಅಂತ. ಅವನ ಭಾವನೆ, ವಿಶ್ವವ್ಯಾಪಿ ಚೈತನ್ಯ ವಸ್ತುವಿನ ಚಿಂತನೆ ಮಾಡಿದರೆ ಮನುಷ್ಯ ಅಚೈತನ್ಯನಾಗಿಬಿಡುತ್ತಾನೆ ಅಂತ. ಸ್ವಲ್ಪ ಯೋಚಿಸಿನೋಡು! ಯಾರು ಬೋಧಸ್ವರೂಪನೊ, ಯಾರ ಬೋಧೆಯಿಂದ ಈ ಜಗತ್ತು ಬೋಧಮಯವಾಗಿ ಕಾಣುವುದೊ, ಅಂಥವನ ಧ್ಯಾನದಿಂದ ಅಬೋಧನಾಗೋದು!

"ನಿನ್ನ 'ಸೈನ್ಸ್' ಏನು ಹೇಳುತ್ತದೆ? ಇದರೊಡನೆ ಅದನ್ನು ಬೆರಸಿದರೆ ಅದಾಗುತ್ತದೆ; ಅದರೊಡನೆ ಇದನ್ನು ಬೆರಸಿದರೆ ಇದಾಗುತ್ತದೆ. ಕೇವಲ ಇವುಗಳ— ಜಡವಸ್ತುಗಳ— ಚಿಂತನೆಯಿಂದ ಮನುಷ್ಯ ಅಬೋಧ ನಾಗೋ ಸಂಭವ ಅಧಿಕ."

ಡಾಕ್ಟರ್ ಸರ್ಕಾರ: "ಅವುಗಳಲ್ಲಿ ಭಗವಂತನನ್ನು ನೋಡಬಹುದು."

ಮಾಸ್ಟರ್: "ಮನುಷ್ಯನಲ್ಲಿ ಆತನನ್ನು ಇನ್ನೂ ಸ್ಪಷ್ಟವಾಗಿ ನೋಡಬಹುದು. ಮಹಾಪುರುಷರಲ್ಲಿ ಅತ್ಯಂತ ಸ್ಪಷ್ಟವಾಗಿ ನೋಡಬಹುದು. ಮಹಾಪುರುಷರಲ್ಲಿ ಭಗವಂತ ಅತ್ಯಂತ ಹೆಚ್ಚಾಗಿ ವ್ಯಕ್ತವಾಗಿದ್ದಾನೆ."

ಡಾಕ್ಟರ್ ಸರ್ಕಾರ: "ಹೌದು, ಮನುಷ್ಯನಲ್ಲೇನೊ ನಿಜ."

ಶ್ರೀರಾಮಕೃಷ್ಣರು: "ಯಾರ ಚೇತನದಿಂದ ಜಡವಸ್ತುಗಳು ಕೂಡ ಚೇತನಮಯವಾಗಿ ಕಾಣುವುವೊ; ಕೈ, ಕಾಲು, ಶರೀರ ಚಲಿಸುವುವೊ ಅಂಥವನ ಧ್ಯಾನದಿಂದ ಅಚೈತನ್ಯನಾಗೋದು! ಜನ ಹೇಳುತ್ತಾರೆ ಶರೀರ ಚಲಿಸುತ್ತದೆ; ಆದರೆ ಹಾಗೆ ಚಲಿಸೋನು ಭಗವಂತ ಎಂಬುದು ಅವರಿಗೆ ಗೊತ್ತಿಲ್ಲ. ಹೇಳುತ್ತಾರೆ, ನೀರಿನಿಂದ ಕೈ ಸುಟ್ಟುಹೋಯಿತು ಅಂತ. ನೀರು ಯಾವುದನ್ನೂ ಸುಡೋದಿಲ್ಲ; ನೀರಿನಲ್ಲಿರೋ ಕಾವಿನಿಂದ, ನೀರಿನಲ್ಲಿರೋ ಅಗ್ನಿಯಿಂದ ಕೈ ಸುಟ್ಟುಹೋಗುತ್ತದೆ.

"ತಪ್ಪಲೆಯಲ್ಲಿ ಅನ್ನ ಕುದಿಯುತ್ತಿದೆ ಅಂತ ಇಟ್ಟುಕೊ. ಅದರಲ್ಲಿ ಬೇಯಲು ಹಾಕಿರೋ ಉರುಳುಗಡ್ಡೆ, ಬದನೆ ಕಾಯಿ ಇವೂ ಅದರಲ್ಲಿ ನಾಟ್ಯವಾಡುತ್ತಿರುತ್ತವೆ. ಎಳೆಯ ಮಕ್ಕಳು ಹೇಳುತ್ತವೆ, ಉರುಳು ಗಡ್ಡೆ ಬದನೆ ಕಾಯಿ ತಾವಾಗೇ ನೆಗೆದಾಡುತ್ತಿವೆ ಅಂತ; ತಪ್ಪಲೆ ಕೆಳಗೆ ಬೆಂಕಿ ಇರೋದು ಅವುಗಳಿಗೆ ಗೊತ್ತಿಲ್ಲ. ಮನುಷ್ಯ ಹೇಳುತ್ತಾನೆ, ತಾವಾಗೇ ತಮ್ಮ ತಮ್ಮ ಕೆಲಸಕಾರ್ಯಗಳನ್ನು ಮಾಡಿಕೊಂಡುಹೋಗುತ್ತಾ ಇವೆ ಅಂತ; ಆದರೆ ಅವುಗಳ ಅಂತರ್ಯದಲ್ಲಿದ್ದಾನಲ್ಲ, ಆತ ಚೈತನ್ಯಸ್ವರೂಪನೇ ಎಂಬುದು ಆತನಿಗೆ ಗೊತ್ತಿಲ್ಲ."

ಡಾಕ್ಟರ್ ಸರ್ಕಾರ ಎದ್ದು ನಿಂತುಕೊಂಡ. ಇನ್ನೇನು ಹೊರಡುವುದರಲ್ಲಿದ್ದಾನೆ. ಪರಮಹಂಸರೂ ಎದ್ದು ನಿಂತುಕೊಂಡಿದ್ದಾರೆ.

ಡಾಕ್ಟರ್: "ಜನರಿಗೆ 'ಸಂಕಟಬಂದಾಗ ವೆಂಕಟರಮಣ.' ಸ್ವಪ್ರೇರಣೆಯಿಂದ ಹೇಳುತ್ತಾರೇನು, 'ಹೇ ಭಗವಂತ, ಎಲ್ಲವೂ ನೀನೆ! ಎಲ್ಲವೂ ನೀನೆ' ಅಂತ? ನಿಮ್ಮ ಗಂಟಲಿನಲ್ಲಿ ಏಡಿ ಹುಣ್ಣು ಎದ್ದಿರೋದರಿಂದ ನೀವು ಭಗವದ್ವಿಷಯವಾಗಿ ಮಾತಾಡುತ್ತಿದ್ದೀರಿ. ನೀವು ಈಗ ಹತ್ತಿಬಿಡಿಸೋನ ಕೈಗೆ ಸಿಕ್ಕಿಬಿಟ್ಟಿದ್ದೀರಿ. ಅವನಿಗೇ ನಿಮ್ಮ ಕಷ್ಟಸುಖಗಳನ್ನೆಲ್ಲ ಹೇಳಿಕೊಳ್ಳಿ. ನಿಮ್ಮ ಮಂತ್ರವನ್ನು ನಿಮಗೇ ಹಾಕುತ್ತಿದ್ದೇನೆ."

ಶ್ರೀರಾಮಕೃಷ್ಣರು : "ನಾನು ಆತನಿಗೆ ಹೇಳಿಕೊಳ್ಳಬೇಕಾದ್ದು ಏನೂ ಇಲ್ಲ."

ಡಾಕ್ಟರ್ ಸರ್ಕಾರ: "ಏಕೆ ಹೇಳಿಕೊಳ್ಳಬಾರದು? ನಾವು ಆತನ ತೊಡೆ ಮೇಲೆ ನರ್ತಿಸುತ್ತಿದೇವೆ; ಎಲ್ಲಕ್ಕೂ ಆತನನ್ನೇ ಅವಲಂಬಿಸಿದೇವೆ. ಆದ್ದರಿಂದ ನಮಗೆ ರೋಗ ಬಂದರೆ ಆತನಿಗೆ ಹೇಳಿಕೊಳ್ಳದೆ ಬೇರೆ ಇನ್ನಾರಿಗೆ ತಾನೆ ಹೇಳಿಕೊಳ್ಳಬೇಕು?"

ಶ್ರೀರಾಮಕೃಷ್ಣರು: "ನಿನ್ನ ಈ ಮಾತನ್ನು ಒಪ್ಪಿದೆ. ಒಮ್ಮೊಮ್ಮೆ ಹಾಗೆ ಆತನಿಗೆ ಹೇಳಿಕೊಳ್ಳಲು ಪ್ರಯತ್ನಮಾಡಿರೋದುಂಟು, ಆದರೆ ಜಯಶೀಲನಾಗುತ್ತಿಲ್ಲ."

ಡಾಕ್ಟರ್: "ಹಾಗೆ ಹೋಗಿ ಹೇಳಿಕೊಳ್ಳುವುದರ ಆವಶ್ಯಕತೆ ತಾನೆ ಏನಿದೆ? ಅದು ಆತನಿಗೆ ಗೊತ್ತಿಲ್ಲವೇನು?"

ಶ್ರೀರಾಮಕೃಷ್ಣರು ನಗುತ್ತ: "ಒಬ್ಬ ಮುಸಲ್ಮಾನ ನಮಾಜು ಮಾಡುತ್ತ ಮಾಡುತ್ತ ಗಂಟಲು ಒಡೆದುಹೋಗುವಂತೆ ಕೂಗಿಕೊಳ್ಳುತ್ತಿದ್ದ: 'ಓ ಅಲ್ಲಾ! ಓ ಅಲ್ಲಾ!' ಇದನ್ನು ನೋಡಿ ಇನ್ನೊಬ್ಬ ಆತನಿಗೆ ಹೇಳಿದ: 'ನೀನು ಅಲ್ಲಾನನ್ನು ಕರೆಯುತ್ತಿರುವುದೇನೊ ಸರಿ, ಆದರೆ ಇಷ್ಟೊಂದಾಗಿ ಗಂಟಲನ್ನು ಏಕೆ ಒಡೆದುಕೊಳ್ಳುತ್ತಿದೀಯೆ? ಆತ ಇರುವೆ ಕಾಲಿನ ಸಪ್ಪಳವನ್ನೂ ಕೇಳಬಲ್ಲ ಎಂಬುದು ನಿನಗೆ ಗೊತ್ತಿಲ್ಲವೇನು?'

"ಯಾವಾಗ ಮನಸ್ಸು ಭಗವಂತನಲ್ಲಿ ಲೀನವಾಗಿಬಿಡುವುದೊ ಆಗ ಆತನನ್ನು ಬಹಳ ಹತ್ತಿರದಲ್ಲೇ, ಹೃದಯಮಧ್ಯದಲ್ಲೇ ನೋಡಬಹುದು. ಆದರೆ ಒಂದು ವಿಷಯ. ಈ ಲೀನವಾಗುವಿಕೆ ಗಾಢ ಗಾಢವಾದಂತೆಲ್ಲ, ಮನಸ್ಸೂ ಬಾಹ್ಯಕ ವಸ್ತುಗಳನ್ನು ತ್ಯಜಿಸಿ ತ್ಯಜಿಸಿ ಬರಲಾರಂಭಿಸುತ್ತದೆ. 'ಭಕ್ತಮಾಲೆ' ಎಂಬ ಪುಸ್ತಕದಲ್ಲಿ ಒಬ್ಬ ಭಕ್ತನ (ಬಿಲ್ವಮಂಗಳನ) ಕಥೆ ಇದೆ. ಆತನಿಗೆ ವೇಶ್ಯೆಯ ಮನೆಗೆ ಹೋಗೋ ಅಭ್ಯಾಸ. ಒಂದು ರಾತ್ರಿ ಆತ ಆಕೆಯ ಮನೆಗೆ ಹೊರಡಲು ಆಗಲೇ ಬಹಳ ಹೊತ್ತಾಗಿಬಿಟ್ಟದೆ. ಮನೆಯಲ್ಲಿ ಆತನ ತಾಯಿತಂದೆಗಳ ಶ್ರಾದ್ಧವಿದ್ದುದರಿಂದ ಆತ ಅಲ್ಲಿಗೆ ಹೊರಡಲು ತಡವಾಗಿಬಿಟ್ಟಿತು. ಶ್ರಾದ್ಧದ ಭಕ್ಷಭೋಜ್ಯಗಳನ್ನೆಲ್ಲ ಗಂಟು ಕಟ್ಟಿ ಕೈಯಲ್ಲಿ ಹಿಡಿದುಕೊಂಡು ಆಕೆಯ ಮನೆಗೆ ಹೊರಟದಾನೆ. ಆತನ ಮನಸ್ಸು ಆಕೆಯ ಮೇಲೆ ಅಷ್ಟೊಂದು ಏಕಾಗ್ರವಾಗಿಬಿಟ್ಟಿತ್ತು, ತಾನು ಯಾವ ಯಾವ ಮಾರ್ಗವಾಗಿ ಮತ್ತು ಯಾವು ಯಾವುದರ ಮೇಲೆ ನಡೆದು

ಕೊಂಡು ಹೋಗುತ್ತಾ ಇದೇನೆ ಎಂಬ ಪ್ರಜ್ಞೆಯೇ ಆತನಿಗಿರಲಿಲ್ಲ. ಒಂದು ಕಡೆ ಒಬ್ಬ ಯೋಗಿ ಕಣ್ಣು ಮುಚ್ಚಿ ಕುಳಿತು ಭಗವಚ್ಚಿಂತನೆ ಮಾಡುತ್ತಿದ್ದ. ಈ ಮಹಾನುಭಾವ ಆತನ ಮೇಲೇ ನಡೆದುಹೋಗಿಬಿಟ್ಟ. ಯೋಗಿ ಕಣ್ಣು ಕೆರಳಿಸಿ ಕೂಗಿಕೊಂಡ: 'ಏನಿದು? ನಿನಗೇನು ಕಣ್ಣಿಲ್ಲವೆ? ನಾನು ಭಗವಚ್ಚಿಂತನೆಯಲ್ಲಿ ಕುಳಿತಿದೇನೆ. ನೀನು ನನ್ನ ಮೇಲೇ ನಡೆದುಕೊಂಡು ಹೋಗಿಬಿಡುತ್ತಾ ಇದೀಯಲ್ಲ!' ಆಗ ಆತ ಉತ್ತರವಿತ್ತ: 'ದಯವಿಟ್ಟು ಕ್ಷಮಿಸಿ. ನಿಮಗೊಂದು ಪ್ರಶ್ನೆ ಹಾಕಲೇನು? ವೇಶ್ಯಾಚಿಂತನೆಯಿಂದ ನನಗೆ ಬಾಹ್ಯ ಪ್ರಜ್ಞೆಯೇ ಇರಲಿಲ್ಲ. ನೀವು ಭಗವಚ್ಚಿಂತನೆಯನ್ನು ಮಾಡುತ್ತಿದ್ದರೂ ನಿಮಗೆ ಬಾಹ್ಯಪ್ರಜ್ಞೆ ಇದೆಯಲ್ಲ ಇದು ಹೇಗೆ?! ಆದ್ದರಿಂದ ನಿಮ್ಮದು ಎಂಥ ಭಗವಚ್ಚಿಂತನೆ?' ಬಿಲ್ವಮಂಗಳ ಕಟ್ಟಕಡೆಗೆ ಸಂಸಾರ ತ್ಯಜಿಸಿ ಭಗವದಾರಾಧನೆಗಾಗಿ ಮನೆಯನ್ನು ಬಿಟ್ಟು ಹೊರಟು ಹೋದ. ಆತ ವೇಶ್ಯೆಗೆ ಹೇಳಿದ: 'ನೀನೇ ನನ್ನ ಗುರು. ಭಗವಂತನನ್ನು ಯಾವ ರೀತಿಯಾಗಿ ಪ್ರೀತಿಸಬೇಕು ಎಂಬುದನ್ನು ನೀನು ನನಗೆ ಕಲಿಸಿಕೊಟ್ಟಿದೀಯೆ.' ವೇಶ್ಯೆಯನ್ನು ತನ್ನ ತಾಯಿ ಅಂತ ಭಾವಿಸಿ ಆಕೆಯ ಸಹವಾಸವನ್ನು ತ್ಯಜಿಸಿಬಿಟ್ಟ."

ಡಾಕ್ಟರ್ ಸರ್ಕಾರ: "ಯಾವ ಹೆಂಗಸನ್ನೇ ಆಗಲಿ ತಾಯಿ ಅಂತ ಭಾವಿಸೋದು; ಇದು ತಾಂತ್ರಿಕ ಉಪಾಸನೆಗೆ ಸಂಬಂಧಪಟ್ಟದ್ದು."

ಶ್ರೀರಾಮಕೃಷ್ಣರು: "ಒಂದು ಕಥೆ ಕೇಳು. ಒಬ್ಬ ಪಂಡಿತ ರಾಜನೊಬ್ಬನಿಗೆ ದಿನವೂ ಭಾಗವತಶ್ರವಣ ಮಾಡಿಸುತ್ತಿದ್ದ. ಭಾಗವತವನ್ನು ವಿವರಿಸಿ ಓದಿದನಂತರ ದಿನವೂ ಪಂಡಿತ ರಾಜನನ್ನು ಕೇಳುತ್ತಿದ್ದ: 'ಏನು, ಅರ್ಥವಾಯಿತೇನು?' ರಾಜ ದಿನವೂ ಉತ್ತರವೀಯುತ್ತಿದ್ದ: 'ಮೊದಲು ನೀವೇ ಅರ್ಥಮಾಡಿಕೊಳ್ಳಿ.' ಪಂಡಿತ ಮನೆಗೆ ಹಿಂದಿರುಗಿಬಂದು ಯೋಚಿಸುತ್ತಿದ್ದ: 'ರಾಜ ದಿನವೂ ಹೀಗೆ ಉತ್ತರಕೊಡುತ್ತಿದಾನಲ್ಲ ಏಕೆ? ನಾನು ಭಾಗವತವನ್ನು ಅಷ್ಟು ಚೆನ್ನಾಗಿ ವಿವರಿಸಿ ಹೇಳುತ್ತಾ ಇದೇನೆ. ಆದರೂ ಆತ ಹೇಳುತ್ತಿದಾನಲ್ಲ, "ನೀವೇ ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳಿ ಅಂತ." ಏನಾಶ್ಚರ್ಯ ಇದು! ಆತನ ಹೃದಯದಲ್ಲಿ ಏನಿದೆ?' ಪಂಡಿತ ಸಾಧನೆ ಮಾಡುತ್ತಿದ್ದ. ಕೆಲವು ಕಾಲಾನಂತರ ಆತನಿಗೆ ಜ್ಞಾನೋದಯವಾಯಿತು, ಭಗವಂತನೊಬ್ಬನೇ ಕೇವಲ ವಸ್ತು, ಉಳಿದುದೆಲ್ಲ—ಗೃಹ, ಪರಿವಾರ, ಧನ, ಜನ, ಮಾನ, ಸಂಭ್ರಮ — ಅವಸ್ತು.

ಈ ಜಗತ್ತಿನದೆಲ್ಲ ಮಿಥ್ಯಾ ಎಂಬ ಬೋಧೆಯಾದನಂತರ ಆತ ಸಂಸಾರವನ್ನು ತ್ಯಜಿಸಿಬಿಟ್ಟ. ಮನೆ ಬಿಟ್ಟು ಹೋಗೋವಾಗ ಇಷ್ಟು ಮಾತ್ರವನ್ನು ಒಬ್ಬನಿಗೆ ಹೇಳಿಹೋದ, 'ನೀನು ಹೋಗಿ ದೊರೆಗೆ ಹೇಳಿಬಿಡು, "ಈಗ ನನಗೆ ಭಾಗವತ ಅರ್ಥವಾಗಿದೆ" ಎಂಬುದಾಗಿ ನಾನು ಹೇಳಿದೆ' ಎಂದು.

"ಇನ್ನೊಂದು ಕಥೆ ಕೇಳು. ಒಬ್ಬನಿಗೆ ತನ್ನ ಮನೆಗೆ ದಿನವೂ ಬಂದು ಭಾಗವತ ವಿವರಿಸಿ ಹೇಳಬಲ್ಲ ಒಬ್ಬ ಭಾಗವತಪಂಡಿತ ಬೇಕಾಗಿತ್ತು. ಆದರೆ ಅಂಥವರು ಸಿಕ್ಕೋದು ಸ್ವಲ್ಪ ಕಷ್ಟವೇ ಆಗಿತ್ತು. ಬಹಳವಾಗಿ ಹುಡುಕುತ್ತಿದ್ದಾಗ, ಒಬ್ಬ ಬಂದು ಈತನಿಗೆ ಹೇಳಿದ: 'ಮಹಾಶಯ, ಇಲ್ಲೊಬ್ಬ ಬಹಳ ಉತ್ಕೃಷ್ಟ ಭಾಗವತಪಂಡಿತನಿದಾನೆ.' ಈತ ಹೇಳಿದ: 'ಬಹಳ ಒಳ್ಳೆಯದೆ ಆಯಿತು; ಕರೆದುಕೊಂಡು ಬಾ ಆತನನ್ನ.' ಆತ ಹೇಳಿದ: 'ಆದರೆ ಒಂದು ವಿಷಯ. ಆತನ ಹತ್ತಿರ ಕೆಲವು ನೇಗಿಲು, ಎತ್ತುಗಳು ಇವೆ; ಇಡೀ ದಿನವೆಲ್ಲ ಆತ ಅವುಗಳ ಹಿಂದೆಯೇ ಇರಬೇಕಾಗಿದೆ. ಜಮೀನುದಾರಿ ಬಹಳ ದೊಡ್ಡದು; ಅದರ ವ್ಯವಸಾಯ ಮಾಡಿಸಬೇಕಾಗಿದೆ. ಆತನಿಗೆ ಎಳ್ಳಷ್ಟೂ ಸಮಯವೇ ದೊರೆಯುತ್ತಿಲ್ಲ.' ಆಗ ಈತ ಹೇಳಿದ: 'ಎಲೊ ಅಯ್ಯ, ಯಾರು ನೇಗಿಲು, ಎತ್ತು ಇವುಗಳಲ್ಲೇ ನಿರತನಾಗಿದಾನೊ ಅಂಥ ಭಾಗವತಪಂಡಿತ ನನಗೆ ಬೇಕಾಗಿಲ್ಲ. ಯಾರಿಗೆ ಸಮಯವಿದೆಯೊ, ಯಾರು ನನ್ನ ಮನೆಗೆ ಬಂದು ಭಗವದ್ಕಥಾಶ್ರವಣ ಮಾಡಿಸಬಲ್ಲನೊ ಅಂಥ ಭಾಗವತಪಂಡಿತ ನನಗೆ ಬೇಕು.' (ಡಾಕ್ಟರ್ ಸರ್ಕಾರನಿಗೆ) ಅರ್ಥವಾಯಿತೇನು?"

ಡಾಕ್ಟರ್ ಸರ್ಕಾರ ಸುಮ್ಮನೆ ನಿಂತಿದಾನೆ.

ಶ್ರೀರಾಮಕೃಷ್ಣರು: "ಸತ್ಯ ಏನು ಎಂಬುದನ್ನು ತಿಳಿಸಲೆ? ಕೇವಲ ಪಾಂಡಿತ್ಯ ಯಾವುದಕ್ಕೆ ಬಂದದ್ದು? ಪಂಡಿತರು ವೇದ, ಪುರಾಣ, ತಂತ್ರ ಇವುಗಳ ವಿಷಯವಾಗಿ ಕೇಳಿದಾರೆ, ಬಹಳವಾಗಿ ತಿಳಿದುಕೊಂಡಿದಾರೆ. ಆದರೆ ಬರೀ ಪಾಂಡಿತ್ಯ ತೆಗೆದುಕೊಂಡು ಏನುಮಾಡೋದು? ವಿವೇಕ ವೈರಾಗ್ಯ ಬೇಕು. ಅವರಲ್ಲಿ ವಿವೇಕ ವೈರಾಗ್ಯ ಇದ್ದರೆ ಮಾತ್ರ ಅವರ ಮಾತಿಗೆ ಬೆಲೆ ಕೊಡಬಹುದು. ಯಾರು ಸಂಸಾರವೇ ಸರ್ವಸ್ವ ಅಂತ ಭಾವಿಸುತ್ತಾರೊ ಅವರ ಮಾತು ಯಾವ ಪ್ರಯೋಜನಕ್ಕೆ ಬಂದದ್ದು?

"ಗೀತೆ ಹೇಳಿಕೊಡೋ ಪಾಠವೇನು? ಒಂದು ಹತ್ತು ಸಲ 'ಗೀತೆ', 'ಗೀತೆ' ಅಂತ ಉಚ್ಚರಿಸಿದರೆ ಅದು ಏನಾಗಿ ಕೇಳಿಬರುತ್ತದೆಯೊ ಅದೇ

ಅದು ಹೇಳಿಕೊಡ್ತೋ ಪಾಠ. 'ಗೀತೆ' ಅಂತ ಉಚ್ಚರಿಸುತ್ತಲೇ ಇದ್ದರೆ ಅದು 'ತ್ಯಾಗಿ', 'ತ್ಯಾಗಿ' ಅಂತ ಕೇಳಿಬರಲಾರಂಭಿಸುತ್ತದೆ — ಎಂದರೆ ತ್ಯಾಗಿಯಾಗು ಅಂತ ಹೇಳುತ್ತದೆ. ಯಾರು ಕಾಮಕಾಂಚನಾಸಕ್ತಿಯನ್ನು ತ್ಯಜಿಸಿಬಿಟ್ಟಿದಾನೊ, ಯಾರು ತನ್ನ ಹದಿನಾರಾಣೆ ಮನಸ್ಸನ್ನೂ ಭಗವಂತನಿಗೆ ಅರ್ಪಿಸಿಬಿಟ್ಟಿದಾನೊ, ಕೇವಲ ಆತ ಮಾತ್ರನೆ ಗೀತೆಯ ಮರ್ಮವನ್ನು ಅರಿತುಕೊಂಡಿದಾನೆ. ಇಡೀ ಗೀತೆಯನ್ನು ಓದಬೇಕಾದ ಆವಶ್ಯಕತೆಯೇನಿಲ್ಲ. ಮನುಷ್ಯ ತ್ಯಾಗಿಯಾಗಿಬಿಟ್ಟ ಎಂದರೆ ಆದರ ಉದ್ದೇಶ ಪೂರ್ಣವಾದ ಹಾಗೇ''

ಡಾಕ್ಟರ್: '' ಒಮ್ಮೆ ನನಗೊಬ್ಬ 'ರಾಧೆ' ಎಂದರೆ ಏನು ಎಂಬುದನ್ನು ವಿವರಿಸಿ ಹೇಳಿದ. ಆತ ಹೇಳಿದ: 'ನಿನಗೆ ''ರಾಧೆ'' ಎಂಬ ಪದದ ಅರ್ಥ ಗೊತ್ತೆ? ಅದನ್ನು ತಿರುಗಿಸಿ ಹೇಳು. ಆಗ ಅದು ''ಧೆರಾ'' ಎಂದಾಗುತ್ತದೆ. ಅದೇ ಅದರ ಅರ್ಥ!' (ಎಲ್ಲರೂ ನಗುತ್ತಿದಾರೆ.) ಈ ದಿನ 'ಧೆರಾ'ದ ವರೆಗೇ ಸಾಕು.''

ಡಾಕ್ಟರ್ ಸರ್ಕಾರ ಹೊರಟುಹೋದ. ಮಾಸ್ಟರು ಪರಮಹಂಸರ ಹತ್ತಿರ ಕುಳಿತಿದಾನೆ. ಡಾಕ್ಟರ್ ಸರ್ಕಾರನ ಮನೆಯಲ್ಲಿ ನಡೆದ ಮಾತುಕತೆಗಳನ್ನೆಲ್ಲ ಪರಮಹಂಸರಿಗೆ ತಿಳಿಸುತ್ತಿದಾನೆ.

ಮಾಸ್ಟರ್: ''ನಾನು ಆತನ ಮನೆಗೆ ಹೋದಾಗ, ಆತ ಕೆಂಪು ಮೀನುಗಳಿಗೆ ಏಲಕ್ಕಿ ಸಿಪ್ಪೆಯನ್ನು, ಗುಬ್ಬಚ್ಚಿಗಳಿಗೆ ಗೋಧಿ ಹಿಟ್ಟಿನ ಗೋಲಿಗಳನ್ನು ಹಾಕುತ್ತಿದ್ದ. ನನಗೆ ಹೇಳಿದ: 'ನೋಡಿದೆಯೇನು? ನಾನು ಬಿಸಾಡಿದ ಏಲಕ್ಕಿ ಸಿಪ್ಪೆಗಳ ಕಡೆ ಅವುಗಳ ಕಣ್ಣೇ ಹೋಗಲಿಲ್ಲ. ಅದಕ್ಕಾಗಿ ಅವು ಸುಮ್ಮನೆ ಹೊರಟುಹೋದುವು. ಮೊದಲು ನಮಗೆ ಬೇಕಾಗಿರೋದು ಜ್ಞಾನ, ಬಳಿಕ ಭಕ್ತಿ. ಆ ಗುಬ್ಬಚ್ಚಿಗಳು ಮಾಡಿದ ಕೆಲಸವನ್ನು ನೋಡಿದೆಯಾ? ನಾನು ಗೋಧಿ ಹಿಟ್ಟಿನ ಗೋಲಿಗಳನ್ನು ಅವುಗಳ ಕಡೆ ಬಿಸಾಡಿದಾಗ ಅವೂ ಹಾರಿ ಹೋಗಿಬಿಟ್ಟುವು. ಅವುಗಳಿಗೆ ಜ್ಞಾನ ಇಲ್ಲ; ಆದ್ದರಿಂದ ಭಕ್ತಿ ಉಂಟಾಗಲಿಲ್ಲ.' ''

ಶ್ರೀರಾಮಕೃಷ್ಣರು ನಗುತ್ತ: ''ಆತ ಹೇಳೋದು ಐಹಿಕ ಜ್ಞಾನ, ಭೌತಿಕ-ವಿಜ್ಞಾನದ ಜ್ಞಾನ.''

ಮಾಸ್ಟರ್: ''ಡಾಕ್ಟರ್ ಮತ್ತೆ ಹೇಳಿದ: 'ಯಾವುದನ್ನೊ ಚೈತನ್ಯನೊ, ಬುದ್ಧನೊ ಅಥವಾ ಯೇಸುಕ್ರಿಸ್ತನೊ ಹೇಳಿ ಹೋಗಿದಾನೆ ಅಂತ

ಅದನ್ನು ಸುಮ್ಮನೆ ನಾನು ನಂಬಿಬಿಡಬೇಕೊ? ಹಾಗೆ ಮಾಡೋದು ಸರಿಯಲ್ಲ.' ಆತನಿಗೆ ಒಬ್ಬ ಮೊಮ್ಮಗನಾಗಿದಾನೆ. ತನ್ನ ಸೊಸೆಯನ್ನು ಆತ ಬಹಳವಾಗಿ ಹೊಗಳಿದ. ಹೇಳಿದ: 'ಆಕೆ ಮನೆಯಲ್ಲಿ ಇರುವಂತೆಯೇ ತೋರಿಬರೋದಿಲ್ಲ; ಆಕೆ ಒಳ್ಳೆ ಶಾಂತಸ್ವರೂಪಳು ಮತ್ತು ಲಜ್ಜಾಶೀಲಳು.'"

ಶ್ರೀರಾಮಕೃಷ್ಣರು: "ಆತ ಇಲ್ಲಿನ (ತಮ್ಮ) ಸಂಬಂಧವಾಗಿ ಚಿಂತಿಸುತ್ತಿದಾನೆ. ಕ್ರಮೇಣ ಶ್ರದ್ಧೆ ಬೆಳೆಯುತ್ತಿದೆ. ಒಮ್ಮೆಗೇ ಅಹಂಕಾರ ಹೊರಟುಹೋಗಿಬಿಡುವುದೇ? ಆತನಿಗೆ ಬೇಕಾದಷ್ಟು ವಿದ್ಯೆ, ಕೀರ್ತಿ, ಐಶ್ವರ್ಯ ಎಲ್ಲಾ ಇವೆ! ಆದರೆ ಇಲ್ಲಿನ ಮಾತುಕತೆಗಳಿಗೆ ಆತ ಅಶ್ರದ್ಧೆಯನ್ನು ತೋರಿಸುತ್ತಿಲ್ಲ."

ಘಂಟೆ ಸಾಯಂಕಾಲ ಐದು. ಭಕ್ತರು ಪರಮಹಂಸರ ಕೊಠಡಿಯಲ್ಲಿ ಸುಮ್ಮನೆ ಕುಳಿತಿದಾರೆ. ಪರಮಹಂಸರ ದರ್ಶನ ಪಡೆಯಲು ಹೊರಗಿನವರೂ ಅನೇಕ ಮಂದಿ ಬಂದಿದಾರೆ. ಅವರೂ ನಿಶ್ಶಬ್ದರಾಗಿ ಕುಳಿತಿದಾರೆ.

ಮಾಸ್ಟರು ಶ್ರೀರಾಮಕೃಷ್ಣರ ಹತ್ತಿರ ಕುಳಿತಿದಾನೆ. ಆತ ಅವರೊಡನೆ ಮೃದು ಕಂಠದಿಂದ ಆಗಾಗ ಒಂದೆರಡು ಮಾತು ಆಡುತ್ತಿದಾನೆ. ಪರಮಹಂಸರು ತಮ್ಮ ಕೋಟನ್ನು ತೊಟ್ಟುಕೊಳ್ಳಲು ಇಚ್ಛೆಪಟ್ಟರು. ಮಾಸ್ಟರ್ ಅವರಿಗೆ ಅದನ್ನು ತೊಡಿಸುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡು, ಈಗ ಕೆಲ ಕಾಲದಿಂದ ಅತಿಯಾಗಿ ಧ್ಯಾನ-ಗೀನದಲ್ಲಿ ತೊಡಗಬೇಕಾದ ಆವಶ್ಯಕತೆಯೇನಿಲ್ಲ. ಇದ್ದಕ್ಕಿದ್ದ ಹಾಗೇ ಅಖಂಡ ಸಚ್ಚಿದಾನಂದ ಬೋಧೆಯಾಗಿ ಬಿಡುತ್ತಾ ಇದೆ. ಈಗ ಸ್ವಲ್ಪ ಕಾಲದಿಂದ ಕೇವಲ ಆತನ ದರ್ಶನವೇ."

ಮಾಸ್ಟರ್ ಸುಮ್ಮನೆ ಕುಳಿತಿದಾನೆ. ಕೊಠಡಿಯೂ ನಿಶ್ಶಬ್ದವಾಗಿದೆ.

ಪರಮಹಂಸರು ಮತ್ತೆ ಮಾತನಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು: "ಒಳ್ಳೇದು, ಇವರೆಲ್ಲ ಕುಳಿತವರು ಕುಳಿತ ಹಾಗೇ ಕುಳಿತು ಯಾವ ಮಾತನ್ನೂ ಆಡದೆ ನನ್ನ ಕಡೆಗೇ ದೃಷ್ಟಿಸಿ ನೋಡುತ್ತಾ ಇದಾರಲ್ಲ ಏಕೆ? ಇವರ ಬಾಯಿಂದ ಮಾತುಕತೆ ಏನೂ ಇಲ್ಲ; ಹಾಡುತ್ತಲೂ ಇಲ್ಲ. ಇವರು ಇದರಲ್ಲಿ (ತಮ್ಮಲ್ಲಿ) ಏನನ್ನು ನೋಡುತ್ತಿರಬಹುದು?"

ಭಗವಂತನ ಶಕ್ತಿ ತಮ್ಮಲ್ಲಿ ವ್ಯಕ್ತವಾಗಿರೋದರಿಂದ ಇಷ್ಟೊಂದು

ಜನರು ತಮ್ಮ ಕಡೆಗೆ ಆಕರ್ಷಿತರಾಗಿದಾರೆ ಮತ್ತು ಅದಕ್ಕಾಗೇ ಭಕ್ತರೆಲ್ಲರು ಏಕದೃಷ್ಟಿಯಿಂದ ನೋಡುತ್ತಿದಾರೆ ಅಂತ ಸೂಚಿಸಿದರೇನು ?

ಮಾಸ್ಟರು ಪರಮಹಂಸರಿಗೆ ಉತ್ತರವಿತ್ತ: "ನಿಮ್ಮ ವಿಷಯವಾಗಿ ಇವರು ಮೊದಲೇ ಎಲ್ಲವನ್ನೂ ಕೇಳಿ ತಿಳಿದುಕೊಂಡಿದಾರೆ. ಈಗ ಅವರು ತಾವು ಬೇರೆಲ್ಲಿಯೂ ನೋಡಲಾಗದ ದೃಶ್ಯವನ್ನು — ಸದಾನಂದಿಯಾಗಿರೋ, ಬಾಲಕನಂತಿರೋ, ನಿರಹಂಕಾರಿಯಾಗಿರೋ, ಭಗವತ್ಪ್ರೇಮದಿಂದ ಉನ್ಮತ್ತ ನಾಗಿರೋ ನಿಮ್ಮನ್ನು ನೋಡುತ್ತಾ ಕುಳಿತಿದಾರೆ. ನೀವು ಅಂದು ಈಶಾನ ಮುಖ್ಯೋಪಾಧ್ಯಾಯನ ಮನೆಗೆ ಹೋಗಿದ್ದಿರಿ. ಅಲ್ಲಿ ಹೊರಗಿನ ಕೊಠಡಿ ಯಲ್ಲಿ ಅಡ್ಡಾಡುತ್ತಿದ್ದಿರಿ. ನಾವೂ ಅಲ್ಲಿಗೆ ಬಂದಿದ್ದೆವು. ಒಬ್ಬ ತಮ್ಮ ಹತ್ತಿರಕ್ಕೆ ಬಂದು ಹೇಳಿದ, ತಮ್ಮಂಥ ಸದಾನಂದ ಪುರುಷರನ್ನು ತಾನು ಎಂದೂ ಹಿಂದೆ ನೋಡಿರಲಿಲ್ಲ ಅಂತ."

ಮಾಸ್ಟರ್ ಸುಮ್ಮನೆ ಕುಳಿತಿದಾನೆ. ಕೊಠಡಿ ನಿಶ್ಶಬ್ದವಾಗಿದೆ. ಕೆಲವು ನಿಮಿಷಗಳಾದನಂತರ ಪರಮಹಂಸರು ಮೃದುಸ್ವರದಿಂದ ಮಾಸ್ಟ ರೊಡನೆ ಮಾತನಾಡಲಾರಂಭಿಸಿದರು.

ಶ್ರೀರಾಮಕೃಷ್ಣರು: "ಒಳ್ಳೇದು, ಈಗ ಡಾಕ್ಟರ್ ಸರ್ಕಾರ ಹೇಗೆ ಮುಂದುವರಿಯುತ್ತಿದಾನೆ. ಇಲ್ಲಿನ ಭಾವನೆಗಳೆಲ್ಲ ಈಗ ಆತನಿಗೆ ಚೆನ್ನಾಗಿ ರುಚಿಸುತ್ತಿವೆಯೇನು ?"

ಮಾಸ್ಟರ್: "ಒಳ್ಳೆ ಬೀಜ ಮೊಳೆಯದೆ ಇರೋದುಂಟೆ? ಹಾಗೂ ಹೀಗೂ ಮಾಡಿಕೊಂಡು ಮೊಳೆತೇಬಿಡುತ್ತದೆ. ನೀವು ಅಂದು ಹೇಳಿದ ಮಾತನ್ನು ನೆನಸಿಕೊಂಡಾಗಲೆಲ್ಲ ನನಗೆ ನಗುಬರುತ್ತದೆ."

ಶ್ರೀರಾಮಕೃಷ್ಣರು: "ಏನದು ?"

ಮಾಸ್ಟರ್: "ನೀವು ಹೇಳಿದಿರಿ, ಯದುಮಲ್ಲಿಕನಿಗೆ ಅಷ್ಟೊಂದು ಅನ್ಯಮನಸ್ಕನಾಗಿರೋ ಸ್ವಭಾವ, ತಾನು ತಿನ್ನುತ್ತಿರೋ ಆಹಾರದಲ್ಲಿ ಉಪ್ಪು ಇದೆಯೊ ಇಲ್ಲವೊ ಎಂಬುದೇ ಆತನಿಗೆ ಗೊತ್ತಾಗುತ್ತಿಲ್ಲ. ಯಾರಾದರು ಆತನಿಗೆ ಯಾವುದೊ ಒಂದು ಪಲ್ಯದಲ್ಲಿ ಉಪ್ಪೇ ಇಲ್ಲವಲ್ಲ ಅಂತ ಹೇಳಿದರೆ, ಆಗ ಆತ ಚಕಿತನಾಗಿ ಹೇಳೋದುಂಟು: 'ಹೌದು! ಹೌದು! ಉಪ್ಪು ಹಾಕೇ ಇಲ್ಲವಲ್ಲ!' ತನಗೂ ಅನ್ಯಮನಸ್ಕನಾಗೋ ಸ್ವಭಾವ ಇದೆ ಎಂಬು ದಾಗಿ ಡಾಕ್ಟರ್ ಸರ್ಕಾರ ನಿಮಗೆ ತಿಳಿಸಿದಾಗ ನೀವು ಇದನ್ನು ಆತನಿಗೆ ಹೇಳಿದಿರಿ. ಡಾಕ್ಟರ್ ಅನ್ಯಮನಸ್ಕನಾಗುತ್ತಿರೋದು ಭಗವಚ್ಚಿಂತನೆ

ಯಿಂದಲ್ಲ, ವಿಷಯಚಿಂತನೆಯಿಂದ ಎಂಬುದನ್ನು ನೀವು ಆತನಿಗೆ ಸೂಚಿಸಿದಿರಿ.''

ಶ್ರೀರಾಮಕೃಷ್ಣರು: ''ನಾನು ಹೇಳುತ್ತಿರುವುದಕ್ಕೆ ಆತ ಮನಸ್ಸು ಕೊಡುತ್ತಿಲ್ಲವೇನು?''

ಮಾಸ್ಟರ್: ''ಕೊಡದೆ ಇನ್ನೇನು ಮಾಡಿಯಾನು. ಆತನಿಗೆ ಅನೇಕ ಕೆಲಸಕಾರ್ಯಗಳಿರೋದರಿಂದ ನಿಮ್ಮ ಉಪದೇಶದ ಬಹು ಭಾಗವನ್ನು ಮರತೇಬಿಡುತ್ತಿದಾನೆ. ಇಂದೂ ಆತನ ಬಾಯಿಂದ ಒಂದು ಬಹಳ ಒಳ್ಳೆ ಮಾತು ಹೊರಬಿತ್ತು. ಆತ ಹೇಳಿದ: 'ಹೆಂಗಸನ್ನು ತಾಯಿ ಅಂತ ಭಾವಿಸೋದು ತಾಂತ್ರಿಕ ಸಾಧನೆಯ ಅಂಗ.' ''

ಶ್ರೀರಾಮಕೃಷ್ಣರು: ''ನಾನು ಅವನಿಗೆ ಏನೇನು ಹೇಳಿದೆ?''

ಮಾಸ್ಟರ್: ''ನೀವು ಆತನಿಗೆ ಹೇಳಿದಿರಿ, ನೇಗಿಲು ಮತ್ತು ಎತ್ತು ಇವುಗಳ ಹಿಂದೆಯೇ ಇರುತ್ತಿದ್ದ ಭಾಗವತಪಂಡಿತನ ಕಥೆಯನ್ನು. (ಪರಮಹಂಸರು ನಗುತ್ತಿದಾರೆ.) ಮತ್ತೆ ಹೇಳಿದಿರಿ, ಒಬ್ಬ ದೊರೆ ಭಾಗವತಪಂಡಿತನೊಬ್ಬನಿಗೆ, 'ಮೊದಲು ನೀನೇ ಅರ್ಥಮಾಡಿಕೊ' ಎಂಬುದಾಗಿ ಹೇಳಿದ ಕಥೆಯನ್ನು. (ಶ್ರೀರಾಮಕೃಷ್ಣರು ಮತ್ತೆ ನಗುತ್ತಿದಾರೆ.)

''ಬಳಿಕ ನೀವು ಗೀತೆಯ ಮಾತೆತ್ತಿ ಹೇಳಿದಿರಿ: 'ಗೀತೆಯ ಸಾರ ವಿಷಯ, ಕಾಮಕಾಂಚನ ತ್ಯಾಗ—ಕಾಮಕಾಂಚನಾಸಕ್ತಿಯ ತ್ಯಾಗ.' ಅನಂತರ ನೀವು ಆತನಿಗೆ ಹೇಳಿದಿರಿ: 'ಸಂಸಾರಿಯಾದವ, ಅಂದರೆ ಕಾಮಕಾಂಚನ ತ್ಯಜಿಸದವ ಜನರಿಗೆ ಏನುತಾನೆ ಶಿಕ್ಷಣ ಕೊಡಬಲ್ಲ?' ಬಹುಶಃ ಇದರ ಇಂಗಿತ ಆತನಿಗೆ ಅರ್ಥವಾಗದೆ ಹೋಗಿರಬೇಕು. ಕೊನೆಗೆ ಆತ 'ಥೆರಾ', 'ಥೆರಾ' ಅಂತ ಹೇಳಿ ಮಾತನ್ನು ನಿಲ್ಲಿಸಿದ.''

ಪರಮಹಂಸರು ಭಕ್ತರ ಶ್ರೇಯಸ್ಸಿಗಾಗಿ ಚಿಂತಿಸುತ್ತಿದಾರೆ. ಅವರ ಭಕ್ತಗಣದಲ್ಲಿ ಪೂರ್ಣ ಮತ್ತು ಮಣೀಂದ್ರ ಬಹಳ ಚಿಕ್ಕ ವಯಸ್ಸಿನವರು. ಪೂರ್ಣನೊಡನೆ ಮಾತುಕತೆಯಾಡಿಬರುವಂತೆ ಮಣೀಂದ್ರನನ್ನು ಪ್ರೇರೇಪಿಸಿ ಕಳುಹಿಸಿದರು.

ಸಾಯಂಕಾಲವಾಗಿದೆ. ಪರಮಹಂಸರ ಕೊಠಡಿಯಲ್ಲಿ ದೀಪ ಉರಿಯುತ್ತಿದೆ. ಭಕ್ತರು ಮತ್ತು ಅಭ್ಯಾಗತರು ಪರಮಹಂಸರನ್ನು ಬಿಟ್ಟು ಒಂದು ಸ್ವಲ್ಪ ದೂರದಲ್ಲಿ ಕುಳಿತುಕೊಂಡಿದಾರೆ. ಪರಮಹಂಸರು

ಅಂತರ್ಮುಖರಾಗಿದ್ದಾರೆ. ಉಳಿದವರೂ ಭಗವಚ್ಚಿಂತನೆ ಮಾಡುತ್ತ ಸುಮ್ಮನೆ ಕುಳಿತಿದ್ದಾರೆ.

ಸ್ವಲ್ಪ ಹೊತ್ತಾದನಂತರ ನರೇಂದ್ರ ತನ್ನ ಸ್ನೇಹಿತನೊಬ್ಬನೊಡನೆ ಕೊಠಡಿಯನ್ನು ಪ್ರವೇಶಿಸಿದ. ಈಗ ನರೇಂದ್ರ ತನ್ನ ಸ್ನೇಹಿತನ ಪರಿಚಯವನ್ನು ಮಾಡಿಕೊಡುತ್ತಾ ಇದ್ದಾನೆ. ನರೇಂದ್ರ ಹೇಳಿದ: "ಈತ ನನ್ನ ಸ್ನೇಹಿತ. ಕೆಲವು ಗ್ರಂಥಗಳನ್ನು ಬರೆದಿದ್ದಾನೆ. ರಾಧಾಕೃಷ್ಣರ ಸಂಬಂಧವಾಗೂ ಬರೆದಿದ್ದಾನೆ."

ಶ್ರೀರಾಮಕೃಷ್ಣರು ಗ್ರಂಥಕರ್ತನಿಗೆ: "ರಾಧಾಕೃಷ್ಣರ ಸಂಬಂಧವಾಗಿ ಏನು ಬರೆದಿದ್ದೀಯೆ ಹೇಳು ನೋಡೋಣ."

ಗ್ರಂಥಕರ್ತ: "ರಾಧಾಕೃಷ್ಣನೇ ಪರಬ್ರಹ್ಮ. ಆತನೇ ಓಂಕಾರದ ಬಿಂದುಸ್ವರೂಪ. ರಾಧಾಕೃಷ್ಣಪರಬ್ರಹ್ಮನಿಂದ ಮಹಾವಿಷ್ಣು, ಮಹಾವಿಷ್ಣುವಿನಿಂದ ಪುರುಷ ಪ್ರಕೃತಿ,—ಶಿವ ದುರ್ಗೆ ಜನ್ಮ ತಾಳಿದ್ದಾರೆ."

ಶ್ರೀರಾಮಕೃಷ್ಣರು: "ಭೇಷ್! ನಿತ್ಯರಾಧೆಯನ್ನು ನಂದಘೋಷ ದರ್ಶನಮಾಡಿದ್ದ. ಪ್ರೇಮರಾಧೆ ಶ್ರೀಕೃಷ್ಣನ ಬೃಂದಾವನ ಲೀಲೆಯಲ್ಲಿ ಭಾಗವಹಿಸಿದ್ದಳು. ಕಾಮರಾಧೆಯೇ ಚಂದ್ರಾವಳಿ.

"ಮೊದಲು ಕಾಮರಾಧೆಯು, ಅನಂತರ ಪ್ರೇಮರಾಧೆಯು, ಇನ್ನೂ ಮುಂದುವರಿದನಂತರ ನಿತ್ಯರಾಧೆಯ ದರ್ಶನ. ಇದು ಈರುಳ್ಳಿ ಸಿಪ್ಪೆಯನ್ನು ಒಂದೊಂದಾಗಿ ಬಿಡಿಸಿದ ಹಾಗೆ. ಮೊದಲು ಕೆಂಪಾಗಿರೋ ಸಿಪ್ಪೆ, ಬಳಿಕ ಎಳಗೆಂಪಿನ ಪದರಗಳು, ಅನಂತರ ಬಿಳಿಯ ಪದರಗಳು. ಬಳಿಕ ಅದರಲ್ಲಿ ಯಾವ ಪದರವೂ ಇರೋದಿಲ್ಲ. ಅದೇ ನಿತ್ಯರಾಧೆಯ ಸ್ವರೂಪ. ಅಲ್ಲಿ 'ನೇತಿ', 'ನೇತಿ' ಎಂಬ ವಿಚಾರ ಕೊನೆಮುಟ್ಟುತ್ತದೆ.

"ನಿತ್ಯರಾಧಾಕೃಷ್ಣ ಮತ್ತು ಲೀಲಾರಾಧಾಕೃಷ್ಣ. ಇವರ ಸಂಬಂಧ ಸೂರ್ಯನಿಗೂ ಆತನ ರಶ್ಮಿಗೂ ಇರೋ ಹಾಗೆ. ನಿತ್ಯ, ಸೂರ್ಯನ ಸ್ವರೂಪ; ಲೀಲೆ, ರಶ್ಮಿಯ ಸ್ವರೂಪ.

"ಶುದ್ಧ ಭಕ್ತ ಕೆಲವು ವೇಳೆ ನಿತ್ಯದಲ್ಲಿ, ಇನ್ನು ಕೆಲವು ವೇಳೆ ಲೀಲೆಯಲ್ಲಿ ತನ್ನ ಮನಸ್ಸನ್ನಿಡುತ್ತಾನೆ. ನಿತ್ಯ ಯಾರದೊ, ಆತನದೇ ಲೀಲೆ. ಆತ ಎರಡಾಗಲಿ ಅಥವಾ ಬಹುವಾಗಲಿ ಅಲ್ಲವೇ ಅಲ್ಲ."

ಗ್ರಂಥಕರ್ತ: "ಒಳ್ಳೆಯದು, ಈತ 'ಬೃಂದಾವನದ ಕೃಷ್ಣ', ಆತ 'ಮಥುರೆಯ ಕೃಷ್ಣ' ಅಂತ ಹೇಳುತ್ತಾರಲ್ಲ ಏಕೆ?"

ಶ್ರೀರಾಮಕೃಷ್ಣರು: "ಇದು ಗೋಸ್ವಾಮಿಗಳ ಮತ. ಉತ್ತರ ಭಾರತದಲ್ಲಿನ ಪಂಡಿತರ ಅಭಿಪ್ರಾಯವೇ ಬೇರೆ. ಅವರ ಕೃಷ್ಣ ಒಬ್ಬನೇ ಒಬ್ಬ. ಆತನೊಡನೆ ರಾಧೆ ಇರಲಿಲ್ಲ. ಆತನೇ ದ್ವಾರಕಾಧೀಶ ಕೃಷ್ಣ."

ಗ್ರಂಥಕರ್ತ: "ರಾಧಾಕೃಷ್ಣನೇ ಪರಬ್ರಹ್ಮ."

ಶ್ರೀರಾಮಕೃಷ್ಣರು: "ಈ ಭಾವನೆ ಬಹಳ ಒಳ್ಳೆಯದು. ಆದರೆ ಆತನ ಕೈಯಲ್ಲಿ ಎಲ್ಲವೂ ಸಾಧ್ಯ. ಆತ ನಿರಾಕಾರನೂ ಹೌದು, ಸಾಕಾರನೂ ಹೌದು. ಆತ ಸ್ವರಾಟನೂ ಹೌದು, ವಿರಾಟನೂ ಹೌದು. ಆತನೇ ಬ್ರಹ್ಮ, ಆತನೇ ಶಕ್ತಿ. ಆತನಿಗೆ ಆದಿಯೂ ಇಲ್ಲ, ಅಂತವೂ ಇಲ್ಲ. ಆತನಿಗೆ ಸಾಧ್ಯವಿಲ್ಲದ್ದೇ ಇಲ್ಲ. ಹದ್ದು, ರಣಹದ್ದು ಎಷ್ಟು ಎತ್ತರಕ್ಕೆ ಬೇಕಾದರೂ ಹಾರಿಹೋಗಲಿ, ಅವು ಆಕಾಶದ ಮೇಲ್ಭಾವಣಿಯನ್ನಂತು ಮುಟ್ಟೋ ಹಾಗೇ ಇಲ್ಲ. ಯಾರೆ ಆಗಲಿ ಬ್ರಹ್ಮನ ಸ್ವರೂಪ ಏನು ಎಂಬುದಾಗಿ ಕೇಳಿದರೆ, ಅದಕ್ಕೆ ಉತ್ತರಕೊಡಲಾಗೋದಿಲ್ಲ. ಆತನ ಸಾಕ್ಷಾತ್ಕಾರ ದೊರೆತಿದ್ದರೂ ಬಾಯಿಂದ ವರ್ಣಿಸಲಾಗೋದಿಲ್ಲ. ಯಾರೆ ಆಗಲಿ ತುಪ್ಪ ಯಾವ ರೀತಿಯಾಗಿದೆ ಅಂತ ಕೇಳಿದರೆ, ಅದಕ್ಕೆ ಉತ್ತರ, 'ತುಪ್ಪ ತುಪ್ಪದ ಹಾಗೆ ಇದೆ' ಅಂತ. ಬ್ರಹ್ಮನಿಗೆ ಉಪಮೆ ಬ್ರಹ್ಮನೇ. ಅದು ಹೊರತು ಬೇರೆ ಯಾವುದೂ ಇಲ್ಲ."

೩೧ನೆ ಅಕ್ಟೋಬರ್ ೧೮೮೫, ಕಾರ್ತಿಕ ಕೃಷ್ಣ ಅಷ್ಟಮಿ, ಶನಿವಾರ.

ಘಂಟೆ ಬೆಳಗಿನ ಒಂಬತ್ತು. ಬಲರಾಮವಸುವಿನ ಅಣ್ಣನ ಮಗ ಹರಿವಲ್ಲಭವಸು ಪರಮಹಂಸರನ್ನು ನೋಡಲು ಬಂದಿದಾನೆ. ಆತ ಕೊಠಡಿಯನ್ನು ಪ್ರವೇಶಿಸಿ ಶ್ರದ್ಧಾಭಕ್ತಿಗಳಿಂದ ಪರಮಹಂಸರಿಗೆ ಪ್ರಣಾಮ ಮಾಡಿದ.

ಹರಿವಲ್ಲಭವಸು ಕಟಕ್ಕಿನ ಒಬ್ಬ ಪ್ರಧಾನ ವಕೀಲ. ಬಲರಾಮವಸು ಪರಮಹಂಸರ ಹತ್ತಿರಕ್ಕೆ ಆಗಾಗ ಬಂದುಹೋಗೋದು ಮಾಡುತ್ತಾ ಇರೋದನ್ನು, ಜೊತೆಗೆ ಮನೆ ಹೆಂಗಸರನ್ನೂ ಕರೆದುಕೊಂಡು ಹೋಗುತ್ತಾ ಇರೋದನ್ನು ಕೇಳಿ ಹರಿವಲ್ಲಭವಸು ಕಿಡಿಕಿಡಿಯಾಗಿದ್ದ. ಬಲರಾಮವಸು ಆತನಿಗೆ ಹೇಳಿದ್ದ: "ನೀನು ಒಮ್ಮೆ ಹೋಗಿ ಪರಮಹಂಸರನ್ನು ದರ್ಶನ ಮಾಡಿ ಬಾ. ಅನಂತರ ಬೇಕಾದರೆ ಉಪನ್ಯಾಸಕೊಡೋವಂತೆ."

ಈಗ ಪರಮಹಂಸರು ಹರಿವಲ್ಲಭನೊಡನೆ ಮಾತುಕತೆಗಳಾಡುತ್ತಿದಾರೆ.

ಶ್ರೀರಾಮಕೃಷ್ಣರು : "ಏನು ಮಾಡಿದರೆ ನನ್ನ ಗಂಟಲಿನ ಈ ರೋಗ ಗುಣವಾಗಿ ಬಿಡುತ್ತದೆ? ಇದು ಬಹಳ ಕಠಿನವಾದ ಕಾಯಿಲೆಯೇನು?"

ಹರಿವಲ್ಲಭ : "ಮಹಾಶಯರೆ, ಇದರ ಸಂಬಂಧವಾಗಿ ಹೇಳಲು ಡಾಕ್ಟರುಗಳ ಕೈಯಲ್ಲಿ ಸಾಧ್ಯ."

ಶ್ರೀರಾಮಕೃಷ್ಣರು : "ಹೆಂಗಸರು ನನ್ನ ಪಾದಧೂಳಿಯನ್ನು ತೆಗೆದುಕೊಳ್ಳುವಾಗ ನಾನು ಭಾವನೆ ಮಾಡುತ್ತೇನೆ ಇವರು ನನ್ನ ಅಂತರ್ಯಾದಲ್ಲಿರೋ ಭಗವಂತನಿಗೆ ಪ್ರಣಾಮಮಾಡುತ್ತಿದಾರೆ ಅಂತ. ನಾನು ಇದನ್ನು ಆ ದೃಷ್ಟಿಯಿಂದ ನೋಡುತ್ತಿದೇನೆ."

ಹರಿವಲ್ಲಭ : "ನೀವು ಸಾಧುಪುರುಷರು. ಎಲ್ಲರೂ ನಿಮಗೆ ಪ್ರಣಾಮಮಾಡಬೇಕು. ಇದರಲ್ಲಿ ತಪ್ಪೇನು?"

ಶ್ರೀರಾಮಕೃಷ್ಣರು : "ಪ್ರಹ್ಲಾದ, ಧ್ರುವ, ನಾರದ, ಕಪಿಲ ಇವರ ಸಂಬಂಧವಾಗಿ ಬೇಕಾದರೆ ನೀನು ಹಾಗೆ ಹೇಳಬಹುದು; ಆದರೆ ನಾನು ಏತರ ಕಂತೆ! ದಯವಿಟ್ಟು ಇನ್ನೊಮ್ಮೆ ಇಲ್ಲಿಗೆ ಬಂದು ಹೋಗು."

ಹರಿವಲ್ಲಭ : "ನನ್ನ ಹೃದಯದ ಆಕರ್ಷಣೆಯಿಂದಲೇ ಇಲ್ಲಿಗೆ ಬರುತ್ತೇನೆ. ನೀವಾಗಿ ಹಾಗೆ ಕೇಳಿಕೊಳ್ಳಬೇಕಾದ ಆವಶ್ಯಕತೆಯೇನಿಲ್ಲ."

ಹರಿವಲ್ಲಭ ಇನ್ನೇನು ಹೊರಡುವುದರಲ್ಲಿದಾನೆ. ಆತ ಪರಮಹಂಸರಿಗೆ ಪ್ರಣಾಮ ಮಾಡಿದನಂತರ ಅವರ ಪಾದಧೂಳಿಯನ್ನು ತೆಗೆದುಕೊಳ್ಳಲು ಪ್ರಯತ್ನಿಸಿದ. ಆದರೆ ಪರಮಹಂಸರು ತಮ್ಮ ಪಾದಗಳನ್ನು ಬೇರೆ ಕಡೆಗೆ ತೆಗೆದಿಟ್ಟುಕೊಂಡುಬಿಟ್ಟರು. ಕೊನೆಗೂ ಹರಿವಲ್ಲಭ ಬಿಡಲೇ ಇಲ್ಲ. ಹೇಗೋ ಮಾಡಿ ಅವರ ಪಾದಧೂಳಿಯನ್ನು ತೆಗೆದುಕೊಂಡ.

ಆತ ಹೊರಡಲು ಎದ್ದು ನಿಂತಾಗ, ಆತನಿಗೆ ಗೌರವ ತೋರಿಸಲು ಪರಮಹಂಸರೂ ಎದ್ದು ನಿಂತುಕೊಂಡರು. ಅವರು ಆತನಿಗೆ ಹೇಳುತ್ತಿದಾರೆ: "ನಾನು ಬಲರಾಮನ ಮನೆಗೆ ಈಗ ಸ್ವಲ್ಪ ಕಾಲದಿಂದ ಹೋಗದೆ ಇರುವುದರಿಂದ ಆತನಿಗೆ ತುಂಬ ವ್ಯಥೆಯಾಗಿಬಿಟ್ಟಿದೆ. ಒಮ್ಮೆ ಅಲ್ಲಿಗೆ ಬಂದು ನಿಮ್ಮನ್ನೆಲ್ಲ ನೋಡಿ ಬರೋಣವೆಂದು ಭಾವಿಸಿದೆ. ಆದರೆ ಭಯ ಬಂತು ನೀವೇನಾದರು ಹೇಳಿಬಿಟ್ಟರೆ, 'ಯಾರಪ್ಪ ಇವರನ್ನು ಇಲ್ಲಿಗೆ ಕರೆಸಿದವರು?' ಅಂತ."

ಹರಿವಲ್ಲಭ : "ಹಾಗೆಲ್ಲ ಯಾರು ಹೇಳುತ್ತಾರೆ? ನೀವು ಹಾಗೆಲ್ಲ ಯೋಚಿಸಬೇಡಿ."

ಹರಿವಲ್ಲಭ ಹೊರಟುಹೋದ.

ಶ್ರೀ ರಾಮಕೃಷ್ಣರು ಮಾಸ್ಟರಿಗೆ: "ಆತನ ಹೃದಯದಲ್ಲಿ ಭಕ್ತಿ ಇದೆ; ಇಲ್ಲದಿದ್ದರೆ ಹಠ ಹಿಡಿದು ಪಾದಧೂಳಿಯನ್ನು ಏಕೆ ತೆಗೆದುಕೊಳ್ಳುತಿದ್ದ? ಅಂದು ನಾನು ನನ್ನ ಭಾವಾವಸ್ಥೆಯಲ್ಲಿ ಡಾಕ್ಟರ್ ಸರ್ಕಾರನನ್ನು ಮತ್ತು ಇನ್ನೊಬ್ಬನನ್ನು ನೋಡಿದೆ ಎಂದು ಹೇಳಿದೆನಲ್ಲ, ಆ ಇನ್ನೊಬ್ಬನೇ ಇವನು. ನೋಡು ಅದಕ್ಕಾಗೇ ಬಂದುಬಿಟ್ಟ."

ಮಾಸ್ಟರ್: "ಹೌದು, ನಿಸ್ಸಂದೇಹವಾಗಿ ಭಕ್ತನೇ."

ಶ್ರೀ ರಾಮಕೃಷ್ಣರು: "ಎಷ್ಟು ಸರಳ!"

ಪರಮಹಂಸರ ದೇಹಾರೋಗ್ಯದ ವರದಿಯನ್ನು ಒಪ್ಪಿಸಲು ಮಾಸ್ಟರು ಡಾಕ್ಟರ್ ಸರ್ಕಾರನ ಮನೆಗೆ ಬಂದಿದಾನೆ. ಈಗ ಸರ್ಕಾರ, ಮಾಸ್ಟರೊಡನೆ ಪರಮಹಂಸರ, ಮಹಿಮಾಚರಣನೇ ಮೊದಲಾದ ಭಕ್ತರ ಸಂಬಂಧವಾಗಿ ಮಾತುಕತೆ ಆಡುತ್ತಿದಾನೆ.

ಡಾಕ್ಟರ್: "ನೋಡು, ಆ ಪುಸ್ತಕ ತಂದು ನನಗೆ ತೋರಿಸುತ್ತೇನೆ ಅಂತ ಮಹಿಮಾಚರಣ ಹೇಳಿದ್ದನಲ್ಲ, ಅದನ್ನು ಆತ ತಂದು ತೋರಿಸಲೇ ಇಲ್ಲ. ಕೇಳಿದ್ದಕ್ಕೆ ಮರತುಹೋಯಿತು ಅಂತ ಹೇಳಿಬಿಟ್ಟ. ಬಹುಶಃ ಹಾಗೇ ಆಗಿರಬೇಕು. ನನಗೂ ಹಾಗಾಗೋದುಂಟು."

ಮಾಸ್ಟರ್: "ಆತ ಬಹಳವಾಗಿ ಓದೋದು-ಗೀದೋದು ಎಲ್ಲಾ ಮಾಡಿದಾನೆ."

ಡಾಕ್ಟರ್: "ಆದರೂ ಈ ಅವಸ್ಥೆಯೆ?"

ಪರಮಹಂಸರ ಮಾತೆತ್ತಿ ಹೇಳಿದ: "ಜ್ಞಾನ ಇಲ್ಲದೆ ಇತ್ತು ಎಂದರೆ ಕೇವಲ ಭಕ್ತಿ ಯಾವ ಪ್ರಯೋಜನಕ್ಕೆ ಬಂದದ್ದು?"

ಮಾಸ್ಟರ್: "ಏಕೆ, ಅವರೂ ಜ್ಞಾನದನಂತರ ಭಕ್ತಿ ಅಂತ ತಾನೆ ಹೇಳುತ್ತಿರೋದು. ಆದರೆ ಅವರ ಜ್ಞಾನ, ಭಕ್ತಿ ಇವುಗಳ ಭಾವನೆಗು ಮತ್ತು ನಿಮ್ಮದಕ್ಕು ಬಹಳ ತಾರತಮ್ಯ. ಅವರ ಭಾವನೆ— ತತ್ತ್ವದನಂತರ ಭಕ್ತಿ, ಬ್ರಹ್ಮಜ್ಞಾನದನಂತರ ಭಕ್ತಿ— ಮೊದಲು ದೊರೆಯೋದು ಭಗವಂತನ ಜ್ಞಾನ, ಬಳಿಕ ಭಕ್ತಿ ಅಂತ. ನಿಮ್ಮ ದೃಷ್ಟಿಯಿಂದ ಜ್ಞಾನ ಎಂದರೆ ಇಂದ್ರಿಯಜನಿತ ಜ್ಞಾನ. ಶ್ರೀರಾಮಕೃಷ್ಣರು ಹೇಳುತ್ತಿರೋ ಜ್ಞಾನವನ್ನು ನಮ್ಮ ಗಜಕಡ್ಡಿಯಿಂದ ಅಳೆದು ಸುರಿದು ನೋಡಲಾಗೋದಿಲ್ಲ. ತತ್ತ್ವಜ್ಞಾನವನ್ನು ಇಂದ್ರಿಯಜನಿತ ಜ್ಞಾನದಿಂದ ಪರೀಕ್ಷಿಸಲಾಗೋದಿಲ್ಲ.

ನಿಮ್ಮ ಜ್ಞಾನ ಇಂದ್ರಿಯಲಭ್ಯ ಜ್ಞಾನವಾದ್ದರಿಂದ ಅದನ್ನು ಬೇಕಾದರೆ ಅಳೆದು ಸುರಿದು ನೋಡಬಹುದು.''

ಡಾಕ್ಟರ್ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡ. ಈಗ ಮತ್ತೆ ಅವತಾರಾದಿಗಳ ಸಂಬಂಧವಾಗಿ ಮಾತು ಎತ್ತಿದ.

ಡಾಕ್ಟರ್: ''ಅವತಾರ-ಗಿವತಾರ ಏನಿದೆಲ್ಲ? ಮನುಷ್ಯನ ಪಾದ ಧೂಳಿ ತೆಗೆದುಕೊಳ್ಳೋದಂತೆ, ಏನಿದೆಲ್ಲ?''

ಮಾಸ್ಟರ್: ''ಏಕೆ, ನೀವೇ ಹೇಳುತ್ತೀರಲ್ಲ ನೀವು ಪ್ರಯೋಗ ಶಾಲೆಯಲ್ಲಿ ವಿಜ್ಞಾನಪ್ರಯೋಗ ಮಾಡುತ್ತಿರುವಾಗಲೂ ಭಗವಂತನ ಸೃಷ್ಟಿ ರಚನೆಯನ್ನು ನೋಡಿ ನಿಮಗೆ ಭಾವವುಂಟಾಗಿಬಿಡುತ್ತದೆ; ಮನುಷ್ಯನ ಸಂಬಂಧವಾಗಿ ಆಲೋಚಿಸುವಾಗಲೂ ನಿಮಗೆ ಭಾವವುಂಟಾಗಿಬಿಡುತ್ತದೆ ಅಂತ. ಅದು ಹಾಗಿರೋದಾದರೆ, ನಾವು ಭಗವಂತನಿಗೆ ಏಕೆ ತಲೆಯನ್ನು ಮಂಡಿಸಬಾರದು? ಮಾನವನ ಹೃದಯದಲ್ಲಿ ಭಗವಂತ ವಾಸಿಸುತ್ತಾ ಇದಾನಲ್ಲ.

''ಹಿಂದೂ ಧರ್ಮ ಸರ್ವಭೂತಗಳಲ್ಲಿಯೂ ಭಗವಂತನನ್ನು ನೋಡುತ್ತದೆ. ಈ ವಿಷಯವಾಗಿ ನೀವು ಹೆಚ್ಚಾಗಿ ಓದಿಲ್ಲ. ಭಗವಂತ ಸರ್ವಭೂತಗಳಲ್ಲಿಯೂ ಇರೋದಾದರೆ, ಮನುಷ್ಯನಿಗೆ ಏಕೆ ಪ್ರಣಾಮ ಮಾಡಕೂಡದು?

''ಪರಮಹಂಸರು ಹೇಳುತ್ತಾರಲ್ಲ, ಕೆಲಕೆಲ ವಸ್ತುಗಳಲ್ಲಿ ಆತ ವಿಶೇಷವಾಗಿ ವ್ಯಕ್ತವಾಗಿದಾನೆ ಅಂತ. ಸೂರ್ಯ, ನೀರಿನಲ್ಲಿ ಮತ್ತು ಕನ್ನಡಿಯಲ್ಲಿ ವಿಶೇಷ ರೀತಿಯಾಗಿ ವ್ಯಕ್ತವಾಗುತ್ತಾನೆ. ನೀರು ಎಲ್ಲೆಲ್ಲಿಯೂ ಇದೆ; ಆದರೆ ಅದು ನದಿಯಲ್ಲಿ, ಸರೋವರದಲ್ಲಿ ಒಂದು ವಿಶೇಷ ರೀತಿಯಲ್ಲಿ ಇರುತ್ತದೆ. ನಾವು ಭಗವಂತನಿಗೆ ನಮಸ್ಕಾರ ಮಾಡುವೆವೇ ವಿನಾ ಮನುಷ್ಯನಿಗಲ್ಲ. ಭಗವಂತ ಭಗವಂತನಾಗಬಲ್ಲನೇ ವಿನಾ, ಮನುಷ್ಯ ಭಗವಂತನಾಗಲಾರ.

''ವಿಚಾರದ ಮೂಲಕ ಭಗವಂತನನ್ನು ಅರಿಯಲಾಗೋದಿಲ್ಲ. ಎಲ್ಲವೂ ವಿಶ್ವಾಸವನ್ನು ಅವಲಂಬಿಸಿದೆ. ಇವೆಲ್ಲ ಪರಮಹಂಸರ ಬಾಯಿಂದ ಬಂದ ಮಾತುಗಳೆ.''

ಇಂದು ಡಾಕ್ಟರ್ ಸರ್ಕಾರ ತಾನೇ ಬರೆದಿದ್ದ, ''ಮನೋ ವಿಜ್ಞಾನದ ಶಾರೀರಕ ಭಿತ್ತಿ'' ಎಂಬ ಪುಸ್ತಕವನ್ನು ಮಾಸ್ಟರಿಗೆ ಬಹುಮಾನವಾಗಿ

ಕೊಟ್ಟ. ಅದರ ಮೊದಲನೆ ಪುಟದ ಮೇಲೆ ಬರೆದಿದ್ದ: "ಸೋದರನ ಪ್ರೀತಿವಿಶ್ವಾಸ ಪೂರ್ವಕವಾಗಿ."

ಘಂಟೆ ಬೆಳಗಿನ ಹನ್ನೊಂದು. ಪರಮಹಂಸರು ಭಕ್ತರೊಡನೆ ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಮಿಶ್ರ ಎಂಬ ಹೆಸರಿನ ಒಬ್ಬ ಕ್ರಿಶ್ಚಿಯನ್ ಭಕ್ತನೊಡನೆ ಮಾತುಕತೆಯಾಡುತ್ತಿದಾರೆ. ಪಶ್ಚಿಮ ಭಾರತದಲ್ಲಿ ವಾಸ ವಾಗಿದ್ದ ಕ್ವೇಕರ್ ಸಂಪ್ರದಾಯದ ಒಂದು ಕುಟುಂಬದಲ್ಲಿ ಆತ ಜನ್ಮ ತಳೆದಿದಾನೆ. ವಯಸ್ಸು ಮೂವತ್ತೈದು ಇರಬಹುದು. ಆತ ಹೊರಗೆ ಪಾಶ್ಚಾತ್ಯರಂತೆ ಉಡಿಗೆತೊಡಿಗೆ ಹಾಕಿಕೊಳ್ಳುತ್ತಿದ್ದು, ಒಳಗೆ ಕಾಷಾಯ ಉಡುಪನ್ನು ಧರಿಸಿಕೊಳ್ಳುತ್ತಿದ್ದ. ಆತನ ಒಬ್ಬ ಸಹೋದರನಿಗೆ ವಿವಾಹ ವಾಗಬೇಕಾಗಿದ್ದ ದಿನವೇ, ಆ ವಿವಾಹವಾಗಬೇಕಾಗಿದ್ದ ಸಹೋದರ, ಆತನೊಡನೆ ಇನ್ನೊಬ್ಬ ಸಹೋದರ ಇಬ್ಬರೂ ಅಕಸ್ಮಾತ್ತಾಗಿ ಸತ್ತು ಹೋಗಿಬಿಡುತ್ತಾರೆ. ಅಂದೇ ಮಿಶ್ರನೂ ಸಂಸಾರವನ್ನು ತ್ಯಾಗಮಾಡಿಬಿಟ್ಟ.

ಮಿಶ್ರ: "ಎಲ್ಲಾ ಭೂತಗಳಲ್ಲಿಯೂ ಇರತಕ್ಕವನು ಕೇವಲ ರಾಮನೊಬ್ಬನೇ."

ಶ್ರೀರಾಮಕೃಷ್ಣರು ಮೆಲ್ಲಗೆ, ಆದರೆ ಮಿಶ್ರನ ಕಿವಿಗೆ ಬೀಳೋಹಾಗೆ ಚಿಕ್ಕ ನರೇನನಿಗೆ: "ರಾಮನೇನೊ ಒಬ್ಬನೆ. ಆದರೆ ಆತನಿಗೆ ಸಾವಿರಾರು ಹೆಸರುಗಳಿವೆ. ಯಾರನ್ನು ಕ್ರಿಶ್ಚಿಯನ್ನರು 'ಭಗವಂತ' ಅಂತ ಕರೆಯು ತ್ತಾರೊ ಆತನನ್ನೇ ಹಿಂದುಗಳು ರಾಮ, ಕೃಷ್ಣ, ಈಶ್ವರ ಇವೇ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಸರೋವರಕ್ಕೆ ಅನೇಕ ಸೋಪಾನ ಗಳಿವೆ. ಒಂದು ಸೋಪಾನದಲ್ಲಿ ಹಿಂದುಗಳು ನೀರು ಕುಡಿಯುತ್ತಾರೆ. ಅವರು ಅದನ್ನು 'ಜಲ' ಅಂತ ಕರೆಯುತ್ತಾರೆ. ಕ್ರಿಶ್ಚಿಯನ್ನರು ಇನ್ನೊಂದು ಸೋಪಾನದಲ್ಲಿ ನೀರು ಕುಡಿಯುತ್ತಾರೆ. ಅವರು ಅದನ್ನು 'ವಾಟರ್' ಅಂತ ಕರೆಯುತ್ತಾರೆ. ಮುಸಲ್ಮಾನರು ಮತ್ತೊಂದು ಸೋಪಾನದಲ್ಲಿ ನೀರು ಕುಡಿಯುತ್ತಾರೆ. ಅವರು ಅದನ್ನು 'ಪಾನಿ' ಅಂತ ಕರೆಯುತ್ತಾರೆ. ಅದೇ ರೀತಿಯಾಗಿ ಯಾರನ್ನು ಕ್ರಿಶ್ಚಿಯನ್ನರು 'ಗಾಡ್' ಅಂತ ಕರೆಯುತ್ತಾರೊ, ಆತನನ್ನೇ ಮುಸಲ್ಮಾನರು 'ಅಲ್ಲಾ' ಅಂತ ಕರೆಯುತ್ತಾರೆ."

ಮಿಶ್ರ: "ಏಸು, ಮೇರಿಯ ಪುತ್ರನಲ್ಲ, ಸ್ವಯಂ ಭಗವಂತನೇ. (ಭಕ್ತರಿಗೆ) ಇವರು (ಪರಮಹಂಸರನ್ನು ತೋರಿಸಿ) ಈಗ ನಿಮಗೆ ಈ

ರೀತಿಯಾಗಿ ಕಾಣಿಸಿಕೊಳ್ಳುತ್ತಿದಾರೆ—ಆದರೆ ಇವರು ಸಾಕ್ಷಾತ್ ಭಗವಂತನೇ. ಇದನ್ನು ಅರಿತುಕೊಳ್ಳಲು ನಿಮಗೆ ಇನ್ನೂ ಕಣ್ಣು ಬಂದಿಲ್ಲ. ನಾನು ಹಿಂದೆ ಇವರನ್ನು ಧ್ಯಾನದಲ್ಲಿ ದರ್ಶನಮಾಡಿದೇನೆ. ಈಗ ಇವರನ್ನು ಪ್ರತ್ಯಕ್ಷವಾಗಿ ನೋಡುತ್ತಿದೇನೆ. ಆಗ ಇವರು ಒಂದು ತೋಟದಲ್ಲಿ ಒಂದು ಉನ್ನತ ಆಸನದಲ್ಲಿ ಕುಳಿತಿರೋಹಾಗೂ, ಇನ್ನೊಬ್ಬ ನೆಲದ ಮೇಲೆ ಕುಳಿತಿರೋ ಹಾಗೂ ದರ್ಶನಮಾಡಿದೆ. ನೆಲದ ಮೇಲೆ ಕುಳಿತಿದ್ದವ ಅಧ್ಯಾತ್ಮ ಜೀವನದಲ್ಲಿ ಅಷ್ಟೊಂದಾಗಿ ಮುಂದುವರಿದಿರಲಿಲ್ಲ.

"ಭಾರತದಲ್ಲಿ ನಾಲ್ಕು ಜನ ಭಗವಂತನ ದ್ವಾರಪಾಲಕರಿದಾರೆ: ಬೊಂಬಾಯಿಯಲ್ಲಿ ತುಕಾರಾಮ, ಕಾಶ್ಮೀರದಲ್ಲಿ ರಾಬರ್ಟ್ ಮೈಕೇಲ್, ಇಲ್ಲಿ ಇವರು (ಶ್ರೀರಾಮಕೃಷ್ಣರು), ಪೂರ್ವ ಬಂಗಾಳದಲ್ಲಿ ಇನ್ನೊಬ್ಬ."

ಶ್ರೀರಾಮಕೃಷ್ಣರು: "ಹಾಗಾದರೆ ನಿನಗೆ ದರ್ಶನ-ಗಿರ್ಶನಗಳಾಗುತ್ತಿವೆಯೊ?"

ಮಿಶ್ರ: "ಹೌದು. ನಾನು ಮನೆಯಲ್ಲಿ ಇದ್ದಾಗಲೆ ನನಗೆ ಜ್ಯೋತಿಯ ದರ್ಶನವಾಗುತ್ತಿತ್ತು. ಬಳಿಕ, ಏಸುವಿನ ದರ್ಶನ ದೊರೆಯಿತು. ಆ ರೂಪನ್ನು ವರ್ಣಿಸೋಕೆ ಹೇಗೆ ತಾನೆ ಸಾಧ್ಯ? ಆ ಸೌಂದರ್ಯದೆದುರು ಹೆಂಗಸಿನ ಸೌಂದರ್ಯವೆ!"

ಸ್ವಲ್ಪ ಹೊತ್ತಾದನಂತರ ಮಿಶ್ರ ತನ್ನ ಕೋಟು ಷರಾಯಿ ಎಲ್ಲವನ್ನು ಬಿಚ್ಚಿ ತಾನು ಹಾಕಿಕೊಳ್ಳುತ್ತಿದ್ದ ಕಾಷಾಯ ಉಡುಪನ್ನು ಭಕ್ತರಿಗೆ ತೋರಿಸಿದ.

ಪರಮಹಂಸರು ವರಾಂಡಕ್ಕೆ ಹೋಗಿದ್ದು ಹಿಂದಿರುಗಿಬಂದು ಹೇಳುತ್ತಿದಾರೆ: "ಈತ (ಮಿಶ್ರ) ವೀರಾಸನದಲ್ಲಿ ನಿಂತಿರೋ ಹಾಗೆ ನನಗೆ ದರ್ಶನವಾಯಿತು."

ಪರಮಹಂಸರು ಹೀಗೆ ಹೇಳುತ್ತಿರುವಾಗಲೇ ಸಮಾಧಿಮುಖರಾಗುತ್ತಿದಾರೆ. ಈಗ ಪಶ್ಚಿಮಾಭಿಮುಖರಾಗಿ ನಿಂತು ಸಮಾಧಿಸ್ಥರಾಗೇಬಿಟ್ಟಿದಾರೆ.

ಈಗ ಕಿಂಚಿತ್ ಪ್ರಕೃತಿಸ್ಥರಾಗಿ ಮಿಶ್ರನ ಕಡೆ ನೋಡುತ್ತ ನೋಡುತ್ತ ನಗುತ್ತಿದಾರೆ. ಇನ್ನೂ ಭಾವಾವೇಶರಾಗೇ ಮಿಶ್ರನಿಗೆ ಹಸ್ತಲಾಘವ ಕೊಡುತ್ತ ಮತ್ತೆ ನಗುತ್ತಿದಾರೆ. ಆತನ ಕೈ ಹಿಡಿದು ಹೇಳುತ್ತಿದಾರೆ: "ನಿನ್ನ

ಹೃದಯ ಯಾವುದಕ್ಕೆ ಹಾತೊರೆಯುತ್ತಿರುವುದೊ ಅದು ನಿನಗೆ ದೊರೆತು ಬಿಡುತ್ತದೆ.''

ಮಿಶ್ರ ಕೈ ಮುಗಿದುಕೊಂಡು: ''ನಾನು ಅಂದಿನಿಂದಲೇ ನನ್ನ ಮನಸ್ಸು, ಪ್ರಾಣ, ಶರೀರ ಎಲ್ಲವನ್ನೂ ತಮಗೆ ಅರ್ಪಿಸಿಬಿಟ್ಟಿದೇನೆ.''

ಪರಮಹಂಸರು ಇನ್ನೂ ಭಾವಾವೇಶರಾಗೇ ನಗುತ್ತಿದಾರೆ.

ಶ್ರೀರಾಮಕೃಷ್ಣರು ತಮ್ಮ ಸ್ವಸ್ಥಾನಕ್ಕೆ ಹೋಗಿ ಕುಳಿತುಕೊಂಡರು. ಮಿಶ್ರ ತನ್ನ ಪೂರ್ವಾಶ್ರಮದ ಕಥೆಯನ್ನೆಲ್ಲಾ ವರ್ಣಿಸುತ್ತಿದಾನೆ. ವಿವಾಹದ ಸಮಯದಲ್ಲಿ ಯಾವರೀತಿಯಾಗಿ ವಿವಾಹ ಮಂಟಪ ಕಳಚಿಕೊಂಡು ಬಿದ್ದು ತನ್ನ ಇಬ್ಬರು ಸಹೋದರರೂ ಮಡಿದರು ಎಂಬುದನ್ನು ಕೂಡ ವಿವರಿಸಿ ಹೇಳಿದ.

ಮಿಶ್ರನನ್ನು ಯತ್ನಪೂರ್ವಕವಾಗಿ ನೋಡಿಕೊಳ್ಳೋ ಹಾಗೆ ಪರಮಹಂಸರು ಭಕ್ತರಿಗೆ ಹೇಳಿದರು. ಡಾಕ್ಟರ್ ಸರ್ಕಾರ ಕೊಠಡಿಯನ್ನು ಪ್ರವೇಶಿಸಿದ. ಆತ ಪರಮಹಂಸರ ಕಣ್ಣಿಗೆ ಬಿದ್ದೊಡನೆಯೆ ಅವರು ಸಮಾಧಿಸ್ಥರಾಗಿಬಿಟ್ಟಿದಾರೆ. ಸ್ವಲ್ಪ ಪ್ರಕೃತಿಸ್ಥರಾದನಂತರ ಇನ್ನೂ ಭಾವಾವೇಶರಾಗೇ ಹೇಳುತ್ತಿದಾರೆ: ''ಮೊದಲು ಕಾರಣಾನಂದ, ಬಳಿಕ ಕಾರಣಕ್ಕೆ ಕಾರಣನಾದ ಸಚ್ಚಿದಾನಂದ.''

ಡಾಕ್ಟರ್: ''ಹೌದು.''

ಶ್ರೀರಾಮಕೃಷ್ಣರು: ''ಬಾಹ್ಯ ಪ್ರಜ್ಞೆಯೇನು ನನಗೆ ತಪ್ಪಿಹೋಗಿಲ್ಲ.''

ಪರಮಹಂಸರು ಭಾವಾವೇಶರಾಗಿಬಿಟ್ಟಿದಾರೆ ಎಂಬುದು ಡಾಕ್ಟರಿಗೆ ಅರ್ಥವಾಯಿತು. ಅದಕ್ಕಾಗಿ ಆತ: ''ಇಲ್ಲ, ಇಲ್ಲ! ಚೆನ್ನಾಗಿ ಪ್ರಜ್ಞೆ ಇದೆ ನಿಮಗೆ!''

ಪರಮಹಂಸರು ನಗುತ್ತ ಹೇಳುತ್ತಿದಾರೆ:

'ಜಯ್ ಕಾಳಿ'— ಎಂದು ನಾ ಕುಡಿಯುವೀ ದಿವ್ಯಮಧು
ಸಾಮಾನ್ಯ ಸುರೆಯಲ್ಲವೆಂದರಿಯದೆ,
ನನ್ನ ಇರವನು ಕಂಡು ಭಾವಿಸಿಹರೀ ಜನರು
ನಾನೊಬ್ಬ ಉನ್ಮತ್ತ ಕುಡುಕನೆಂದೇ!

ಮೊದಲೆನ್ನ ಗುರು ಇದರ ಪಾಕವನು ನೀಡುವನು
ಅದನು ಕಾಯಿಸಿ ರಸವ ತೆಗೆದು ನಾನು

ಸುಜ್ಞಾನದೊಡವೆರೆದು ಎಲ್ಲ ಶೋಧಿಸಿತೆಗೆದು
ಮಂತ್ರಶೀಶೆಯೊಳದನು ತುಂಬಿಡುವೆನು !
ಇಂಥ ಸುರೆಯನು ಮಾಡಿ ತಾಯ ಶ್ರೀನಾಮದಲಿ
ಅದನು ಶುದ್ಧಿಯ ಗೈದು ನೀ ಕುಡಿದರೆ,
ರಾಮಪ್ರಸಾದನಿದೊ ಹೇಳುತಿರುವನು ಕೇಳು :
ಸಕಲ ಪುರುಷಾರ್ಥವೂ ದೊರೆಯದಿಹುದೆ ?

ಈ ಹಾಡನ್ನು ಕೇಳಿ ಬಹುಮಟ್ಟಿಗೆ ಡಾಕ್ಟರೂ ಭಾವಾವಿಷ್ಟನಾಗಿ ಬಿಟ್ಟಿದಾನೆ. ಪರಮಹಂಸರು ಮತ್ತೆ ಭಾವಾವಿಷ್ಟರಾಗಿ ಡಾಕ್ಟರ ತೊಡೆಯ ಮೇಲೆ ತಮ್ಮ ಪಾದವನ್ನು ಇಟ್ಟುಬಿಟ್ಟರು. ಸ್ವಲ್ಪ ಹೊತ್ತಾದನಂತರ ಪ್ರಕೃತಿಸ್ಥರಾಗಿ ತಮ್ಮ ಪಾದವನ್ನು ಹಿಂದಕ್ಕೆ ತೆಗೆದುಕೊಂಡು ಹೇಳಿದರು: "ಆಹ! ಅಂದು ನೀನು ಎಂಥ ಸೊಗಸಾಗಿ ಹೇಳಿದೆ! 'ನಾವು ಭಗವಂತನ ತೊಡೆಯ ಮೇಲೆ ನಲಿದಾಡುತ್ತಿದೇವೆ. ನಾವು ರೋಗಗ್ರಸ್ತರಾದರೆ, ಆತನಿಗಲ್ಲದೆ ಬೇರೆ ಯಾರಿಗೆ ತಾನೆ ಹೇಳಿಕೋಬೇಕು?' ಕರೆಯಬೇಕಾದರೆ, ಆತನನ್ನೇ ಕರೆಯುವೆನು." ಹೀಗೆಂದು ಹೇಳುತ್ತಿದ್ದ ಹಾಗೆಯೇ ಅವರ ಕಣ್ಣುಗಳಲ್ಲಿ ಪ್ರೇಮಾಶ್ರು ತುಂಬಲಾರಂಭಿಸಿತು. ಅವರು ಮತ್ತೆ ಭಾವಾವಿಷ್ಟರಾಗಿ ಡಾಕ್ಟರಿಗೆ ಹೇಳುತ್ತಿದಾರೆ: "ನೀನು ಬಹಳ ಶುದ್ಧ ಹೃದಯಿ; ಇಲ್ಲದಿದ್ದರೆ ನಾನು ನನ್ನ ಪಾದಗಳನ್ನು ನಿನ್ನ ತೊಡೆಯ ಮೇಲೆ ಇಡಲಾಗುತ್ತಿರಲಿಲ್ಲ." ಮತ್ತೆ ಹೇಳುತ್ತಿದಾರೆ: "'ಯಾರು ರಾಮರಸದ ಸವಿಯನ್ನು ಸವಿದಿರುವನೊ, ಆತನಲ್ಲಿ ಮಾತ್ರವೇ ಶಾಂತಿ ನೆಲಸಿರುತ್ತದೆ.' ಈ ಸಂಸಾರ ಎಂಬುದು ಏನು? ಅದರಲ್ಲಿ ಇರುವುದು ತಾನೆ ಏನು? ದುಡ್ಡು, ಕಾಸು, ಮಾನ, ಶರೀರ ಸುಖ ಇವುಗಳಲ್ಲಿ ಏನು ತಾನೆ ಇದೆ? 'ಹೇ ಮನಸ್ಸೆ, ರಾಮನನ್ನು ಸಾಕ್ಷಾತ್ಕಾರ ಮಾಡಿಕೊ! ಬೇರೆ ಯಾರ ಸಾಕ್ಷಾತ್ಕಾರವನ್ನು ತಾನೆ ನೀನು ಮಾಡಿಕೋಬೇಕಾಗಿದೆ.'"

ಇಷ್ಟೊಂದು ಅಸ್ವಸ್ಥರಾಗಿದ್ದರೂ ಪರಮಹಂಸರು ಭಾವಾವೇಶರಾಗುತ್ತಿರುವುದನ್ನು ನೋಡಿ ಭಕ್ತರಿಗೆ ಚಿಂತೆ ಹತ್ತಿಬಿಟ್ಟಿದೆ. ಪರಮಹಂಸರು ಹೇಳುತ್ತಿದಾರೆ: "'ಹರಿರಸಮದಿರೆಯ ಕುಡಿದು ನಿರಂತರ' ಎಂಬ ಹಾಡನ್ನು ಹಾಡೋದಾದರೆ ನಾನು ಶಾಂತನಾಗಿಬಿಡುತ್ತೇನೆ."

ನರೇಂದ್ರ ಬೇರೆ ಕೊಠಡಿಯಲ್ಲಿದ್ದ. ಆತನನ್ನು ಕರೆಯಿಸಲಾಯಿತು. ಆತ ತನ್ನ ದೇವದುರ್ಲಭ ಮಧುರ ಕಂಠದಿಂದ ಹಾಡಲಾರಂಭಿಸಿದ:

ಹರಿರಸಮದಿರೆಯ ಕುಡಿದು ನಿರಂತರ
ಉನ್ಮತ್ತನ ತೆರ ನೀನಿರುತ . . . .

ಶ್ರೀರಾಮಕೃಷ್ಣರು: "ಅದು—'ಚಿದಾನಂದ ಸಿಂಧುವಿನಲಿ' ಎಂಬ ಹಾಡು."

ನರೇಂದ್ರ ಹಾಡುತ್ತಿದಾನೆ:

ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು
ಮಹಾಭಾವ ರಾಸಲೀಲ ಮಾಧುರ್ಯದೊಳಾಡಿವೆ! . . .

ನರೇಂದ್ರ ಮತ್ತೆ ಹಾಡುತ್ತಿದಾನೆ:

ನಿರಂಜನ ಹರಿಚಿದ್ಘನ ಮೂರುತಿಯನು ನೆನೆಯೊ
ನಿರಂತರ—ಮೋಹನ ಮೂರುತಿಯನು ನೆನೆಯೊ.— . . .

ಡಾಕ್ಟರ್ ಸರ್ಕಾರ ಏಕಾಗ್ರಚಿತ್ತದಿಂದ ಈ ಹಾಡುಗಳನ್ನೆಲ್ಲ ಕೇಳಿದ. ಆತ ಹೇಳಿದ: "'ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು' ಎಂಬುದು ಬಹಳ ಸೊಗಸಾದ ಹಾಡು."

ಡಾಕ್ಟರ ಆನಂದವನ್ನು ನೋಡಿ ಪರಮಹಂಸರು ಹೇಳುತ್ತಿದಾರೆ: "ಮಗ ತಂದೆಗೆ ಹೇಳಿದ: 'ಅಪ್ಪ, ದಯವಿಟ್ಟು ನೀವೂ ಸ್ವಲ್ಪ ಮದ್ಯವನ್ನು ಸೇವಿಸಿ ನೋಡಿ. ಬಳಿಕ, ಕುಡಿಯೋದನ್ನು ಬಿಟ್ಟುಬಿಡು ಎಂದು ನೀವು ಹೇಳೋದಾದರೆ, ಖಂಡಿತ ನಾನು ಹಾಗೆಯೇ ಮಾಡುತ್ತೇನೆ.' ಮದ್ಯವನ್ನು ಸೇವಿಸಿದ ಬಳಿಕ ತಂದೆ ಹೇಳಿದ: 'ಮಗು, ನೀನು ಬೇಕಾದರೆ ಬಿಟ್ಟುಬಿಡು. ನನ್ನ ಆಕ್ಷೇಪಣೆಯೇನಿಲ್ಲ. ಆದರೆ ನಾನು ಮಾತ್ರ ಬಿಡಲಾರೆ.' (ಡಾಕ್ಟರು ಮತ್ತೆಲ್ಲರೂ ನಗುತ್ತಿದಾರೆ.)

"ಅಂದು ಭಾವದಲ್ಲಿ, ಭಗವತಿ ಇಬ್ಬರನ್ನು ತೋರಿಸಿದಳು. ಅವರಲ್ಲಿ ಈತ (ಡಾಕ್ಟರ್) ಒಬ್ಬ. ಈತನಿಗೆ ಅಧಿಕವಾಗಿ ಜ್ಞಾನ ಉಂಟಾಗುವುದೆಂದು ತಿಳಿಸಿದಳು; ಆದರೆ ಅದೆಲ್ಲ ಶುಷ್ಕ ಜ್ಞಾನ. (ನಗುತ್ತ ಡಾಕ್ಟರಿಗೆ) ಆದರೆ ನೀನು ಅದನ್ನು ರಸಮಯವನ್ನಾಗಿ ಮಾಡುವೆಯಂತೆ."

ಡಾಕ್ಟರ್ ಸರ್ಕಾರ ಸುಮ್ಮನೆ ಕುಳಿತುಕೊಂಡಿದಾನೆ.

೬ನೆ ನೊವೆಂಬರ್ ೧೮೮೫, ಕಾಳೀಪೂಜೆ, ಶುಕ್ರವಾರ.

ಘಂಟೆ ಬೆಳಗಿನ ಒಂಬತ್ತು. ಪರಮಹಂಸರು ಹೊಸಬಟ್ಟೆಯನ್ನು ಉಟ್ಟುಕೊಂಡು ಶ್ಯಾಮಪುಕುರದ ಮನೆಯ ಎರಡನೆ ಅಂತಸ್ತಿನಲ್ಲಿರೋ

ದಕ್ಷಿಣ ದಿಕ್ಕಿನ ಕೊಠಡಿಯಲ್ಲಿ ನಿಂತಿದಾರೆ. ಇಂದು ಪ್ರಾತಃಕಾಲವೇ ಹೋಗಿ ಠಂಠನದಲ್ಲಿರೋ ಸಿದ್ಧೇಶ್ವರಿ ಕಾಳಿಗೆ ಹೂವು, ಎಳನೀರು, ಸಕ್ಕರೆ, ಸಂದೇಶ (ಸಿಹಿ ತಿಂಡಿ) ಇವನ್ನೆಲ್ಲ ಅರ್ಪಿಸಿಬರುವಂತೆ ಪರಮಹಂಸರು ಮಾಸ್ಟರಿಗೆ ಹೇಳಿದ್ದರು. ಮಾಸ್ಟರು ಗಂಗೆಯಲ್ಲಿ ಮಿಂದು, ಪರಮಹಂಸರು ಹೇಳಿದ ರೀತಿಯಲ್ಲೇ ದೇವಿಗೆ ಪೂಜೆಯನ್ನು ಸಲ್ಲಿಸಿ, ಪ್ರಸಾದ ತೆಗೆದು ಕೊಂಡು ಬರೀ ಕಾಲಿನಲ್ಲೇ ಶ್ಯಾಮಪುಕುರಕ್ಕೆ ನಡೆದುಬಂದಿದಾನೆ. ಪರಮಹಂಸರು ತಮ್ಮ ಪಾದರಕ್ಷೆಗಳನ್ನು ಒಂದು ಕಡೆ ಬಿಟ್ಟು, ಮಾಸ್ಟರ್ ತಂದಿರೋ ಪ್ರಸಾದದ ಕಿಂಚಿತ್ ಭಾಗವನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ತಿಂದು, ಇನ್ನೊಂದು ಕಿಂಚಿತ್ ಭಾಗವನ್ನು ತಮ್ಮ ತಲೆಯ ಮೇಲೆ ಇಟ್ಟುಕೊಂಡರು.

ಪರಮಹಂಸರ ಇಚ್ಛೆಗನುಸಾರ ಮಾಸ್ಟರ್ ಹಾಡಿನ ಎರಡು ಪುಸ್ತಕಗಳನ್ನು—ಒಂದು ರಾಮಪ್ರಸಾದನದು, ಇನ್ನೊಂದು ಕಮಲಾಕಾಂತನದು—ಡಾಕ್ಟರ್ ಸರ್ಕಾರನಿಗೆಂದು ಕೊಂಡುಕೊಂಡುಬಂದಿದ್ದ.

ಮಾಸ್ಟರ್ ಶ್ರೀರಾಮಕೃಷ್ಣರಿಗೆ: "ರಾಮಪ್ರಸಾದನ ಮತ್ತು ಕಮಲಾಕಾಂತನ ಹಾಡಿನ ಪುಸ್ತಕಗಳನ್ನು ಕೊಂಡುಕೊಂಡು ಬಂದಿದೇನೆ."

ಶ್ರೀರಾಮಕೃಷ್ಣರು: "ಈ ವಿಧದ ಹಾಡುಗಳನ್ನೆಲ್ಲಾ ಆತನ ತಲೆಗೆ ಹಾಕಬೇಕು:

 ದೇವದೇವನ ನಿಜವನರಿಯಲು
ಮನವು ತೊಳಲುತ ಬಳಲಿದೆ....
 ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು !
ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು....
 ನಿನ್ನ ಬಾಳಿನ ಹೊಲವು ಪಾಳುಬಿದ್ದಿಹುದಲ್ಲೊ
ಕೃಷಿಗೈಯಲೂ ಕೂಡ ತಿಳಿಯದಿರುವೆ !...
 ಸುಮ್ಮನೆ ತಿರುಗಾಟಕೆ ಬಾ ಮನವೇ
ಶ್ರೀ ಕಾಳೀ ಸುರತರುವಿರುವೆಡೆಗೆ !...."

ಮಾಸ್ಟರ್: "ಹೌದು, ಹಾಗೆ ಮಾಡಬೇಕು."

ಪರಮಹಂಸರು ಕಾಲಿಗೆ ಪಾದರಕ್ಷೆಗಳನ್ನು ಹಾಕಿಕೊಂಡು ಮಾಸ್ಟರೊಡನೆ ಕೊಠಡಿಯಲ್ಲಿ ಅಡ್ಡಾಡುತ್ತಿದಾರೆ. ಅವರು ಅಷ್ಟೊಂದು ಅಸ್ವಸ್ಥರಾಗಿದಾರೆ ಆದರೂ ಅವರ ಮುಖ ಸುಮ್ಮನೆ ನಗುತ್ತಿದೆ.

ಶ್ರೀರಾಮಕೃಷ್ಣರು: "ಈ ಹಾಡೂ ಒಳ್ಳೆಯದೆ: 'ಈ ಸಂಸಾರ ಮಾಯೆಯ ಎಲುಬಿನ ಗೂಡು.'"

ಮಾಸ್ಟರ್: "ಹೌದು, ನಿಜ."

ಪರಮಹಂಸರು ಇದ್ದಕ್ಕಿದ್ದ ಹಾಗೆ ಬೆಚ್ಚಿದರು. ಪಾದರಕ್ಷೆಗಳನ್ನು ಒಂದು ಕಡೆ ಬಿಟ್ಟು ನಿಂತುಕೊಂಡೇ ಸಮಾಧಿಸ್ಥರಾಗಿಬಿಟ್ಟರು. ಇಂದು ಜಗನ್ಮಾತೆಯ ಪೂಜೆ. ಅದಕ್ಕಾಗಿಯೇನು ಇವರು ಪದೇಪದೇ ಚಮಕಿತರಾಗಿ ಸಮಾಧಿಸ್ಥರಾಗುತ್ತಿರೋದು? ಸ್ವಲ್ಪ ಹೆಚ್ಚು ಸಮಯವನ್ನೇ ಈ ಅವಸ್ಥೆಯಲ್ಲಿ ಕಳೆದನಂತರ ತಮ್ಮ ಭಾವವನ್ನು ಬಹಳ ಪ್ರಯಾಸಪಟ್ಟು ತಡೆದಿಡುತ್ತಿರುವವರ ಹಾಗೆ ವ್ಯಕ್ತಪಡಿಸುತ್ತ ನಿಟ್ಟುಸಿರುಬಿಟ್ಟರು.

ಘಂಟೆ ಬೆಳಗಿನ ಹತ್ತು. ಪರಮಹಂಸರು ಹಾಸಿಗೆ ಮೇಲೆ ದಿಂಬು ಒರಗಿಕೊಂಡು ಕುಳಿತಿದಾರೆ. ರಾಮ, ರಾಖಾಲ, ನಿರಂಜನ, ಕಾಳೀಪದ, ಮಾಸ್ಟರ್ ಮೊದಲಾದವರು ಅವರ ಸುತ್ತಲೂ ಕುಳಿತಿದಾರೆ. ಪರಮಹಂಸರು ಈಗ ತಮ್ಮ ಸೋದರಳಿಯ, ಹೃದಯನ ಸಂಬಂಧವಾಗಿ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಹೃದೆ ಈಗಲೂ, 'ಭೂಮಿ! ಭೂಮಿ!' ಅಂತ ಹೊಡೆದುಕೊಳ್ಳುತ್ತಲೇ ಇದಾನೆ. ನನ್ನೊಡನೆ ದಕ್ಷಿಣೇಶ್ವರದಲ್ಲಿ ಇದ್ದಾಗ ಆತ ಒಮ್ಮೆ ಹೇಳಿದ: 'ನನಗೊಂದು ಶಾಲು ಕೊಡಿ, ಇಲ್ಲದಿದ್ದರೆ ನಿಮ್ಮ ಮೇಲೆ ದಾವಾ ಹಾಕುತ್ತೇನೆ.' ಭಗವತಿ ಆತನನ್ನು ದಕ್ಷಿಣೇಶ್ವರದಿಂದ ತೆಗೆದುಬಿಟ್ಟಳು. ಜನರು ಅಲ್ಲಿಗೆ ಬಂದರು ಎಂದರೆ ಹಣಕ್ಕಾಗಿ ಅವರನ್ನು ಪೀಡಿಸುತ್ತಿದ್ದ. ಆತನೇನಾದರು ಇದುವರೆಗೆ ಇದ್ದುದೇ ಆಗಿದ್ದರೆ, ಇವರಾರೂ ಬರಲಾಗುತ್ತಿರಲಿಲ್ಲ. ಅದಕ್ಕಾಗೇ ಭಗವತಿ ಆತನನ್ನು ದಕ್ಷಿಣೇಶ್ವರದಿಂದ ತೆಗೆದುಬಿಟ್ಟಳು. ಗೋ— ಕೂಡ ಅದೇ ರೀತಿಯಾಗಿ ವರ್ತಿಸಲಾರಂಭಿಸಿದ. ಕ್ರಮೇಣ ಜಗಳಗಂಟಿಯಾಗಿಬಿಟ್ಟ. ಗಾಡಿಯಲ್ಲಿ ನನ್ನೊಡನೆ ಎಲ್ಲಿಗಾದರು ಹೋಗಬೇಕಾಗಿದ್ದರೆ, ಬೇಕೂ ಅಂತ ಹೊತ್ತು ಮಾಡುತ್ತಿದ್ದ. ಯಾರಾದರು ಯುವಕರು ನನ್ನನ್ನು ನೋಡಲು ಬಂದರೆ ಕಿಟಿಪಿಟಿಗುಟ್ಟುತ್ತಿದ್ದ. ನಾನು ಆ ಯುವಕರನ್ನು ನೋಡಲು ಕಲ್ಕತ್ತೆಗೆ ಹೋದೆನೆಂದರೆ, ಆತ ಹೇಳುತ್ತಿದ್ದ: 'ಅವರು ಸಂಸಾರ ತ್ಯಜಿಸಿಬರತಕ್ಕವರೆ, ನೀವು ಇಷ್ಟು ಕಷ್ಟ ತೆಗೆದುಕೊಳ್ಳೋಕೆ?' ಯುವಕರಿಗೆ ಫಲಾಹಾರ ಕೊಡುವ ಮುನ್ನ ಹೆದರಿಕೊಂಡು ಆತನಿಗೆ ಹೇಳುತ್ತಿದ್ದೆ: 'ನೀನೂ ತೆಗೆದುಕೊ, ಇವರಿಗೂ ಕೊಡು.' ಆತ ನನ್ನೊಡನೆ ಇರೋದಿಲ್ಲ ಎಂಬುದು

ನನಗೆ ತಿಳಿದುಬಂತು. ಆಗ ಭಗವತಿಗೆ ಪ್ರಾರ್ಥನೆ ಮಾಡಿದೆ: 'ಹೇ ತಾಯೇ, ಹೃದಯನೋಪಾದಿಯಲ್ಲಿ ಒಮ್ಮೆಗೇ ಆತನನ್ನು ಇಲ್ಲಿಂದ ತೆಗೆಯಬೇಡ.' ಬಳಿಕ ಆತ ಬೃಂದಾವನಕ್ಕೆ ಹೊರಡುವುದರಲ್ಲಿದಾನೆ ಅಂತ ಕೇಳಿದೆ. ಆ ಸಮಯದಲ್ಲಿ ಆತ ನನ್ನೊಡನೆ ಇದ್ದುದೇ ಆಗಿದ್ದರೆ, ಈ ಯುವಕರಾರೂ ನನ್ನ ಹತ್ತಿರ ಸುಳಿಯುತ್ತಿರಲಿಲ್ಲ. ಆತ ಬೃಂದಾವನಕ್ಕೆ ಹೊರಟು ಹೋದುದೇ ತಡ ಈ ಯುವಕರೆಲ್ಲ ಆಗಾಗ ಬಂದು ನನ್ನೊಡನೆ ಬೆರೆಯಲಾರಂಭಿಸಿದರು."

ಗೋ— ವಿನಯದಿಂದ: "ಮಹಾಶಯರೆ, ಆ ವಿಧವಾದ ಭಾವನೆಗಳೆಲ್ಲ ನನ್ನ ಮನಸ್ಸಿನಲ್ಲಿರಲಿಲ್ಲ."

ರಾಮ ಗೋ— ಗೆ: "ನಿನ್ನ ಮನಸ್ಸು ಏನು ಎಂಬುದು ಅವರಿಗೆ ಅರ್ಥವಾಗುವಷ್ಟು ನಿನಗೆ ಅರ್ಥವಾಗುತ್ತದೆಯೊ ?"

ಗೋ— ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು ಗೋ— ಗೆ: "ನೀನು ಏಕೆ ಹೀಗೆ ವರ್ತಿಸುತ್ತಾ ಇದೀಯೆ ? ತಂದೆಗಿಂತಲೂ ಅಧಿಕವಾಗಿ ನಾನು ನಿನ್ನನ್ನು ಪ್ರೀತಿಸುತ್ತಿದೇನೆ. . . . ಈಗ ನೀನು ಬಾಯಿ ಮುಚ್ಚಿ ಕುಳಿತುಕೊ . . . . ನಿನಗೆ ಈಗ ಆ ವಿಧವಾದ ಪ್ರವೃತ್ತಿಯೇನಿಲ್ಲ."

ಸ್ವಲ್ಪ ಹೊತ್ತಾದನಂತರ ಭಕ್ತರೆಲ್ಲರು ಇನ್ನೊಂದು ಕೊಠಡಿಗೆ ತೆರಳಿದರು. ಪರಮಹಂಸರು ಗೋ— ಅನ್ನು ಕರೆಸಿಕೊಂಡು ಕೇಳಿದರು: "ನಾನು ಹೀಗೆಲ್ಲ ಹೇಳಿದ್ದಕ್ಕೆ ನಿನಗೆ ವ್ಯಥೆಯಾಗಿಬಿಟ್ಟಿರುವುದೆ ?"

ಗೋ— : "ಇಲ್ಲ."

ಶ್ರೀರಾಮಕೃಷ್ಣರು ಮಾಸ್ಟರಿಗೆ : "ಇಂದು ಕಾಳೀಪೂಜೆ. ಆಕೆಯ ಪೂಜೆಗಾಗಿ ಏನಾದರು ಒಂದು ವ್ಯವಸ್ಥೆ ಮಾಡುವುದು ಮೇಲು. ಈ ವಿಷಯವಾಗಿ ಭಕ್ತರೆಲ್ಲರಿಗೂ ಒಮ್ಮೆ ಹೇಳಿ ಬಾ. ಬಂಗಿ ಸೊಪ್ಪನ್ನು ತಂದಿದಾರೊ ಇಲ್ಲವೊ ಕೇಳಿ ತಿಳಿದುಕೊಂಡು ಬಾ."

ಮಾಸ್ಟರ್ ಬೈಠಕ್‌ಖಾನೆಗೆ ಹೋಗಿ ಪರಮಹಂಸರು ಹೇಳಿದುದನ್ನೆಲ್ಲ ಭಕ್ತರಿಗೆ ತಿಳಿಸಿದ. ಕಾಳೀಪದ ಮತ್ತು ಇನ್ನು ಕೆಲವು ಭಕ್ತರು ಪೂಜೆಗೆ ಸಿದ್ಧತೆಮಾಡಿಕೊಳ್ಳಲನುವಾದರು.

ಘಂಟೆ ಸುಮಾರು ಅಪರಾಹ್ನ ಎರಡು. ಡಾಕ್ಟರ್ ಸರ್ಕಾರ ಪರಮಹಂಸರನ್ನು ನೋಡಲು ಬಂದಿದಾನೆ. ಆತನೊಡನೆ ಪ್ರೊಫೆಸರ್ ನೀಲಮಣಿ

ಬಂದಿದಾನೆ. ಗಿರೀಶ, ಕಾಳೀಪದ, ನಿರಂಜನ, ರಾಖಾಲ, ಮಣೀಂದ್ರ, ಲಾಟು, ಮಾಸ್ಟರ್ ಇವರೇ ಮೊದಲಾದವರು ಪರಮಹಂಸರ ಹತ್ತಿರ ಕುಳಿತಿದಾರೆ. ಪರಮಹಂಸರು ನಗುಮುಖರಾಗಿದಾರೆ. ಪರಮಹಂಸರ ದೇಹಾರೋಗ್ಯದ ವರದಿಯನ್ನು ಕೇಳಿದನಂತರ ಡಾಕ್ಟರ್ ಸರ್ಕಾರ ಅವರಿಗೆ ಔಷಧದ ವ್ಯವಸ್ಥೆಮಾಡಿದ. ಶ್ರೀರಾಮಕೃಷ್ಣರು ಆತನಿಗೆ ಹೇಳಿದರು: "ನಿನಗಾಗಿ ಹಾಡಿನ ಈ ಎರಡು ಪುಸ್ತಕಗಳನ್ನು ಕೊಂಡುಕೊಂಡು ಬರಲಾಗಿದೆ." ಮಾಸ್ಟರ್ ಆ ಪುಸ್ತಕಗಳನ್ನು ಡಾಕ್ಟರ್ ಸರ್ಕಾರನ ಕೈಗೆ ಕೊಟ್ಟ.

ಡಾಕ್ಟರ್ ಸರ್ಕಾರನಿಗೆ ಕೆಲವು ಹಾಡುಗಳನ್ನು ಕೇಳಬೇಕೆಂಬ ಇಚ್ಛೆಯಾಯಿತು. ಪರಮಹಂಸರ ಆಜ್ಞಾನುಸಾರ ಮಾಸ್ಟರ್ ಇನ್ನೊಬ್ಬ ಭಕ್ತನೊಡನೆ ರಾಮಪ್ರಸಾದನ ಹಾಡನ್ನು ಹಾಡಲಾರಂಭಿಸಿದಾನೆ:

ದೇವದೇವನ ನಿಜವನರಿಯಲು
ಮನವು ತೊಳಲುತ ಬಳಲಿದೆ . . . .

ಬಳಿಕ ಹಾಡುತ್ತಿದಾನೆ:

ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು !
ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು . . . .

ಮತ್ತೆ ಹಾಡುತ್ತಿದಾನೆ:

ನಿನ್ನ ಬಾಳಿನ ಹೊಲವು ಪಾಳುಬಿದ್ದಿಹುದಲ್ಲೊ
ಕೃಷಿಗೈಯಲೂ ಕೂಡ ತಿಳಿಯದಿರುವೆ!
ಎಂಥ ಹೊನ್ನನು ಬೆಳೆದು ತೆಗೆಯಬಹುದಾಗಿತ್ತೊ
ಕೆಲವುದಿನ ಮೈಮುರಿದು ದುಡಿದಿದ್ದರೆ!

ಈಗಲಾದರು ತಾಯ ಶ್ರೀ ನಾಮವೆಂತೆಂಬ
ಬೇಲಿಯನು ಕಟ್ಟಿ ನೀ ಕಾಯ್ದುಕೊಳ್ಳೋ.
ಅದಕಿಂತ ಬಲವಾದ ಕಾವಲಿನ್ನಾವುದಿದೆ?
ಮೃತ್ಯುವೂ ನಿನ್ನ ಬಳಿ ಬರಲಾರನೋ.

ಇಂದೊ ನಾಳೆಯೊ ಹೊಲವ ಹೊಲದೊಡೆಯಗೊಪ್ಪಿಸುವ
ಮುನ್ನವೇ ಎಚ್ಚೆತ್ತು ಬೆಳೆಯ ತೆಗೆಯೋ.
ಗುರುವಿತ್ತ ಮಂತ್ರವನು ಬೀಜವಾಗಿಸಿ ಬಿತ್ತಿ

ಪ್ರೇಮವಾರಿಯ ಹೊಯ್ದು ಹಸನುಗೊಳಿಸೋ.
ನಿನಗೆ ಈ ಕೆಲಸವೂ ಕಷ್ಟವಾದರೆ ಹೇಳು,
ರಾಮಪ್ರಸಾದನಿದೊ ನೆರವಿಗಿಹನೋ !

ಮತ್ತೆ :

ಸುಮ್ಮನೆ ತಿರುಗಾಟಕೆ ಬಾ ಮನವೇ
ಶ್ರೀ ಕಾಳೀ ಸುರತರುವಿರುವೆಡೆಗೆ ! . . . .

ಗಿರೀಶನಿಗೆ ಡಾಕ್ಟರ್ ಸರ್ಕಾರ ಹೇಳಿದ: "ನಿನ್ನ ಆ ಹಾಡು—ಬುದ್ಧನ ಚರಿತೆಯಲ್ಲಿ ವೀಣೆಯ ಸಂಬಂಧವಾಗಿ—ಬಹಳ ಸೊಗಸಾದುದು."

ಶ್ರೀರಾಮಕೃಷ್ಣರ ಸೌಜ್ಞೆಗನುಸಾರ ಗಿರೀಶ ಮತ್ತು ಕಾಳೀಪದ ಇಬ್ಬರೂ ಕೂಡಿ ಹಾಡಲಾರಂಭಿಸಿದಾರೆ :

ನೋಡಿದುವೆ ನನ್ನ ಸುಮಧುರ ವೀಣೆ,
ನುಡಿಸು ಬಾ ಒಲವೇ . . . .

ಮತ್ತೆ :

ಹಾ ! ಸುತ್ತುತಿರುವೆವು, ವಿಶ್ರಾಂತಿಯಿನಿತಿಲ್ಲ
ಬಂದುದೆಲ್ಲಿಂದಲೋ ! ನಡೆವುದೆಲ್ಲೋ ? . . .

ಅವರು ಮತ್ತೆ ಹಾಡುತ್ತಿದಾರೆ :

ಹರಿಯ ನಾಮದ ಸುಧೆಯನೆರೆಯುತ
ಜಗದ ಸಂತೆಯ ಮಂದಿಗೆ,
ನನ್ನ ಒಲವಿನ ಹೊನಲಿನಲೆಗಳ ನಾನೆ ತಂದೆನು ಮೇಲಕೆ !
ಈಗ ದುಃಖದ ಹೊನಲು ನನ್ನನು ತೇಲಿಸಿಹುದೋ ಸುಮ್ಮನೆ !
ಹರಣ ಹೋಗುವ ತೆರದಿ ನಡುಗಿದೆ ಭೀತಗೊಂಡೀ ನನ್ನೆದೆ.
ಯಾರಿಗೊರೆಯಲಿ ? ಓವೊ ನಿತ್ಯಾನಂದ ಗುರುವರ ನನ್ನನು
ಎತ್ತಿ ರಕ್ಷಿಸೊ— ಎಂದು ಬೇಡುವೆ ದೈನ್ಯದಿಂದಲಿ ನಿನ್ನನು !

ಬಳಿಕ ಅವರು ಹಾಡುತ್ತಿದಾರೆ:

ಬಾ, ಜಗಾಯಿ ; ಬಾ, ಮಾಧಾಯಿ ;
ಹರಿನಾಮವ ಸವಿದಾನಂದದಿ ಕುಣಿಯೋಣ.
ಹೊಡೆದರೇನು ಬಿಡಿ ನೀವೆನ್ನ,
ಹರಿಕೀರ್ತನೆಯಲಿ ಮರೆಯೋಣ !

ಓ ಗೆಳೆಯರೆ ಹರಿನಾಮವ
ಹಾಡಿರೊ ಮನದಣಿಯೆ.
ಅವನೇ ಒಲಿದೈತರುವನು ನಿಮ್ಮೆಡೆ;
ಅಪ್ಪುವನೆದೆಯೊಳಗೆ.

ನಾಕನಾಕಕೂ ತಟ್ಟಲಿ ನಿಮ್ಮಲಿ:
ಚಿಮ್ಮಲಿ ಭಕ್ತಿಯು ಎದೆ ತುಂಬ.
ಅವನಿಗಾಗಿ ನೀ ಕಂಬನಿಗರೆಯಲು
ಮೂಡುವುದೆದೆಯೊಳು ಶಶಿಬಿಂಬ !

ನಿತ್ಯಾನಂದನು ಕರೆವನು ಬನ್ನಿ,
ಹರಿನಾಮವ ನಿಮಗೀಯುವನು.
ಅವನ ಒಲವಿನಲಿ ನಿಮ್ಮ ಪಾಲನೂ
ಸವಿಯಲು ನಿಮ್ಮನು ಕರೆಯುವನು !

ಕೊನೆಯದಾಗಿ ಹಾಡುತ್ತಿದಾರೆ:

ಓ ಬನ್ನಿ, ಎಲ್ಲರು ಬನ್ನಿ
ರಾಧಾಪ್ರೇಮದ ಹೊಳೆ ಹರಿಯುತಿದೆ ! . . .

ಈ ಹಾಡುಗಳನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ ಇಬ್ಬರು ಮೂವರು ಭಕ್ತರು — ಲಾಟು, ಮಣೀಂದ್ರ, ಇತ್ಯಾದಿ — ಭಾವಸ್ಥರಾಗಿಬಿಟ್ಟಿದಾರೆ. ಲಾಟು, ನಿರಂಜನನ ಪಕ್ಕದಲ್ಲಿ ಕುಳಿತಿದ್ದ. ಈಗ ಡಾಕ್ಟರ್ ಸರ್ಕಾರ ಪರಮಹಂಸರೊಡನೆ ಮಾತುಕತೆಗಳನ್ನಾಡುತ್ತಿದಾನೆ.

ನಿನ್ನೆ ಡಾಕ್ಟರ್ ಪ್ರತಾಪಚಂದ್ರಮಜುಮದಾರ ಪರಮಹಂಸರಿಗೆ "ನಕ್ಸ್ ವಾಮಿಕ" ಎಂಬ ಔಷಧವನ್ನು ವಿಧಿಸಿಹೋಗಿದ್ದ. ಅದನ್ನು ಕೇಳಿ ಡಾಕ್ಟರ್ ಸರ್ಕಾರ ವಿರಕ್ತಿಗೊಂಡ.

ಡಾಕ್ಟರ್ ಸರ್ಕಾರ: "ಇವರಿಗೆ ನಕ್ಸ್ ವಾಮಿಕವೆ! ನಾನು ಇನ್ನೂ ಸತ್ತು ಹೋಗಿಬಿಟ್ಟಿಲ್ಲವಲ್ಲ!"

ಶ್ರೀರಾಮಕೃಷ್ಣರು ನಗುತ್ತ: "ನೀನೇಕೆ ಸಾಯಬೇಕು? ದೇವರ ದಯೆಯಿಂದ ಹಾಗಾಗದಿರಲಿ! ನಿನ್ನ ಅವಿದ್ಯೆ ಬೇಕಾದರೆ ಸಾಯಲಿ!"

ಡಾಕ್ಟರ್: "ನಾನು ಅವಿದ್ಯೆಯ ತಂಟೆಗೇ ಹೋದವನಲ್ಲವಲ್ಲ."

ಡಾಕ್ಟರ್ ಸರ್ಕಾರ, "ಅವಿದ್ಯೆ" ಎಂದರೆ "ಉಪಪತ್ನಿ" ಅಂತ ಅರ್ಥಮಾಡಿಕೊಂಡ.

ಶ್ರೀರಾಮಕೃಷ್ಣರು ನಗುತ್ತ: "ಓ ಅದಲ್ಲ! ನನ್ನ ಅಭಿಪ್ರಾಯ ಅದಲ್ಲ. ಸನ್ಯಾಸಿಯ ಸಂಬಂಧವಾಗಿ ಒಂದು ಹೇಳಿಕೆ ಇದೆ. ಆತನ ತಾಯಿ 'ಅವಿದ್ಯೆ' ಎಂಬುವಳು 'ವಿವೇಕ' ಎಂಬ ಪುತ್ರನನ್ನು ಹೆತ್ತು, ಆ ಬಳಿಕ ಸತ್ತುಹೋಗಿಬಿಡುತ್ತಾಳೆ ಅಂತ. 'ಅವಿದ್ಯೆ' ಎಂಬ ತಾಯಿ ಸತ್ತುಹೋದುದಕ್ಕಾಗಿ ಸನ್ಯಾಸಿಗೆ ಸೂತಕ ಬರುತ್ತದೆ. ಅದಕ್ಕಾಗೇ ಸನ್ಯಾಸಿಯನ್ನು ಮುಟ್ಟಕೂಡದು ಅಂತ ಜನ ಹೇಳೋದು."

ಹರಿವಲ್ಲಭ ಬಂದಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ: "ನಿನ್ನನ್ನು ನೋಡಿದರೇನೇ ನನಗೆ ಆನಂದ." ಆತನದು ಅತ್ಯಂತ ನಮ್ರ ಭಾವ. ಮಂದಲಿಗೆ ಮೇಲೆ ಕುಳಿತುಕೊಳ್ಳದೆ ನೆಲದ ಮೇಲೇ ಕುಳಿತು ಬೀಸಣಿಗೆಯಿಂದ ಪರಮಹಂಸರಿಗೆ ಗಾಳಿ ಬೀಸುತ್ತಿದಾನೆ. ಆತ ಕಟಕ್ಕಿನಲ್ಲಿ ಒಬ್ಬ ದೊಡ್ಡ ವಕೀಲ. ಪ್ರೊಫೆಸರ್ ನೀಲಮಣಿ ಆತನ ಹತ್ತಿರ ಕುಳಿತಿದಾನೆ. ಆತನನ್ನು ಸಂತುಷ್ಟಗೊಳಿಸಲು ಹೇಳುತ್ತಿದಾರೆ: "ಇಂದು ಬಹಳ ಒಳ್ಳೆಯ ದಿನ."

ಕೆಲವು ನಿಮಿಷಗಳಾದನಂತರ ಡಾಕ್ಟರ್ ಸರ್ಕಾರ ಮತ್ತು ನೀಲಮಣಿ ಪರಮಹಂಸರಿಂದ ಬೀಳ್ಕೊಂಡರು. ಹರಿವಲ್ಲಭನೂ ಅವರಿಂದ ಬೀಳ್ಕೊಂಡ. ಬೀಳ್ಕೊಳ್ಳುವಾಗ ಆತ ಹೇಳಿದ: "ಮತ್ತೆ ಬರುತ್ತೇನೆ."

ಘಂಟೆ ರಾತ್ರಿ ಏಳು. ಪರಮಹಂಸರ ಕೊಠಡಿಯಲ್ಲೇ ಪೂಜೆ ನಡೆಯೋ ಹಾಗೆ ವ್ಯವಸ್ಥೆ ಆಗಿದೆ. ಕೆಂಪು ದಾಸವಾಳನೇ ಮೊದಲಾದ ಬಗೆಬಗೆಯ ಹೂವುಗಳು, ಚಂದನ, ಬಿಲ್ವಪತ್ರೆ, ಪಾಯಸ, ವಿವಿಧ ಸಿಹಿ ತಿಂಡಿಗಳು ಇವನ್ನೆಲ್ಲ ಭಕ್ತರು ಪರಮಹಂಸರ ಸಮ್ಮುಖಕ್ಕೆ ತಂದಿಟ್ಟರು. ಈಗ ಭಕ್ತರೆಲ್ಲರು ಅವರ ಸುತ್ತಲೂ ಕುಳಿತಿದಾರೆ. ಶರಚ್ಚಂದ್ರ, ಶಶಿ, ರಾಮ, ಗಿರೀಶ, ಚುಣಿಲಾಲ, ಮಾಸ್ಟರ್, ರಾಖಾಲ, ನಿರಂಜನ, ಚಿಕ್ಕ ನರೇನ, ಬಿಹಾರಿ ಇವರೆಲ್ಲ ಅಲ್ಲಿ ಕುಳಿತಿದಾರೆ.

ಪರಮಹಂಸರು ಒಬ್ಬ ಭಕ್ತನಿಗೆ ಹೇಳಿದರು, ಕೆಲವು ಗಂಧದ ಕಡ್ಡಿಗಳನ್ನು ತೆಗೆದುಕೊಂಡು ಬರೋ ಹಾಗೆ. ಕೆಲವು ನಿಮಿಷಗಳಾದನಂತರ ಪರಮಹಂಸರು ಅವನ್ನೆಲ್ಲ ಜಗನ್ಮಾತೆಗೆ ನಿವೇದನೆಮಾಡಿದರು. ಮಾಸ್ಟರ್ ಅವರ ಹತ್ತಿರವೇ ಕುಳಿತಿದಾನೆ. ಮಾಸ್ಟರ ಕಡೆಗೆ ನೋಡುತ್ತ ಭಕ್ತರಿಗೆ ಹೇಳುತ್ತಿದಾರೆ: "ಸ್ವಲ್ಪ ಹೊತ್ತು ನೀವೆಲ್ಲರು ಧ್ಯಾನಮಾಡುತಾ ಇರಿ." ಈಗ ಭಕ್ತರೆಲ್ಲರು ಧ್ಯಾನದಲ್ಲಿ ತೊಡಗಿದಾರೆ.

ಇದ್ದಕ್ಕಿದ್ದ ಹಾಗೆ ಗಿರೀಶ ಪರಮಹಂಸರ ಪಾದಪದ್ಮಗಳಿಗೆ ಹೂವಿನ ಮಾಲೆಯನ್ನು ಅರ್ಪಿಸಿಬಿಟ್ಟ. ಮಾಸ್ಟರೂ ಗಂಧಪುಷ್ಪಗಳನ್ನು ಈಗ ಅರ್ಪಿಸುತ್ತಿದಾನೆ. ಬಳಿಕ ರಾಖಾಲ, ರಾಮ, ಹಾಗೇನೆ ಉಳಿದವರೆಲ್ಲರೂ ಒಬ್ಬೊಬ್ಬರಾಗಿ ಪರಮಹಂಸರ ಪಾದಪದ್ಮಗಳಿಗೆ ಗಂಧಪುಷ್ಪಗಳನ್ನು ಅರ್ಪಿಸಲಾರಂಭಿಸಿದರು.

ಪರಮಹಂಸರ ಪಾದಗಳಿಗೆ ಗಂಧಪುಷ್ಪಗಳನ್ನು ಅರ್ಪಿಸಿದನಂತರ ನಿರಂಜನ ಕೂಗಲಾರಂಭಿಸಿದ: "ಬ್ರಹ್ಮಮಯಿ! ಬ್ರಹ್ಮಮಯಿ!" ಬಳಿಕ ಅವರಿಗೆ ಸಾಷ್ಟಾಂಗಪ್ರಣಾಮಮಾಡಿದ. ಅನಂತರ ಭಕ್ತರೆಲ್ಲರೂ ಕೂಡಿ ಘೋಷಿಸಲಾರಂಭಿಸಿದರು: "ಜೈ ಮಾ! ಜೈ ಮಾ!"

ರೆಪ್ಪೆ ಹೊಡೆಯುವುದರೊಳಗಾಗಿ ಪರಮಹಂಸರು ಗಾಢಸಮಾಧಿಸ್ಥರಾಗಿಬಿಟ್ಟಿದಾರೆ. ಏನಾಶ್ಚರ್ಯ! ಭಕ್ತರ ಕಣ್ಣೆದುರಿಗೇನೆ ಈ ಅದ್ಭುತ ರೂಪಾಂತರ ಪರಮಹಂಸರಲ್ಲಿ ಸಂಭವಿಸಿಬಿಟ್ಟಿತು. ಅವರ ಮುಖ ಜ್ಯೋತಿಯನ್ನು ಸುಮ್ಮನೆ ಚೆಲ್ಲುತ್ತಿದೆ. ಅವರ ಎರಡು ಕೈಗಳು ವರಾಭಯವನ್ನು ಕೊಡುತ್ತಿವೆ. ಶರೀರ ಸ್ಪಂದಹೀನವಾಗಿದೆ; ಬಾಹ್ಯಜ್ಞಾನ ಶೂನ್ಯವಾಗಿದೆ. ಉತ್ತರಾಭಿಮುಖರಾಗಿ ಕುಳಿತಿದಾರೆ. ಸಾಕ್ಷಾತ್ ಜಗನ್ಮಾತೆಯೇ ಇವರ ಮೂಲಕ ಆವಿರ್ಭಾವಳಾಗಿರಬಹುದೆ? ಎಲ್ಲರೂ ಆಶ್ಚರ್ಯಚಕಿತರಾಗಿ ಪರಮಹಂಸರ ರೂಪಿನಲ್ಲಿ ಆವಿರ್ಭಾವಳಾಗಿರುವ ಈ ಅದ್ಭುತ ವರಾಭಯದಾಯಿನಿ ಜಗನ್ಮಾತೆಯ ದರ್ಶನ ಮಾಡುತ್ತಿದಾರೆ.

ಈಗ ಭಕ್ತರೆಲ್ಲರೂ ಕೂಡಿ ಆಕೆಯ ಸ್ತೋತ್ರಗಳನ್ನು ಹಾಡಲಾರಂಭಿಸಿದಾರೆ. ಒಬ್ಬೊಬ್ಬನಾಗಿ ಹಾಡೋದು, ಅದನ್ನು ಉಳಿದವರೆಲ್ಲರೂ ಹಿಂಬಾಲಿಸೋದು, ಈ ರೀತಿಯಾಗಿ ಮುಂದುವರಿಯುತ್ತಿದೆ.

ಗಿರೀಶ ಹಾಡುತ್ತಿದಾನೆ:

ಯಾರೀಕೆ? ನಿಬಿಡ ನೀಲ ಕದಂಬಿನಿಯಂತೆ
ಸುರ ಸಮಾಜದ ನಡುವೆ ರಾಜಿಸುವಳು!
ಯಾರಿವಳು? ಹರನ ಉರದಲಿ ತನ್ನ ರಕ್ತಾಂಘ್ರಿ
ಉತ್ಪಲಂಗಳನಿಂತು ಸ್ಥಾಪಿಸಿಹಳು!
ಯಾರವೀ ಪದನಖಗಳಿಂತು ಚಂದ್ರನ ತೆರದಿ ರಾಜಿಸಿಹವು?
ಯಾರವೀ ಪಾದಗಳು ಸೂರ್ಯನಂದದಿ ತಾನೆ ಬೆಳಗುತಿಹವು?
ಯಾರಿವಳು? ಮೃದುಮಧುರಹಾಸಮುಖಿಯಾದರೂ
ಅಟ್ಟಹಾಸದಿ ಜಗವ ತುಂಬುತಿಹಳು!

ಮತ್ತೆ :

ದೀನತಾರಿಣಿ ನೀನು ದುರಿತಹಾರಿಣಿ ನೀನು
ಸತ್ತ್ವರಜತಮಗಳಿಗೆ ಆಧಾರೆ ನೀನು . . . .

ಬಿಹಾರಿ ಹಾಡುತ್ತಿದಾನೆ :

ಶವಾಸನದ ಮೇಲಿರುವ ಓ ನನ್ನ ಘನಶ್ಯಾಮೆ,
ನನ್ನೆದೆಯ ಕರೆಯನ್ನು ಕೇಳು ತಾಯಿ.
ಆಗಲೋ ಈಗಲೋ ಹರಣ ಹಾರುವ ಮುನ್ನ
ನನ್ನಂತರಂಗದಲಿ ಉದಯಿಸಮ್ಮಾ.
ಆಗ ನನ್ನೆದೆಯೊಳಗೆ ತುಂಬಿರುವ ಬನದಿಂದ
ದಿವ್ಯ ಪುಷ್ಪಗಳನ್ನು ಕಿತ್ತುತಂದು,
ಪ್ರೇಮ ಶ್ರೀಗಂಧದಲಿ ಅದ್ದಿ ನಿನ್ನಡಿಗಳನು
ನಾನು ಪೂಜಿಪೆನಮ್ಮ ಭಕ್ತಿಯಿಂದ.

ಮಾಸ್ಟರ್ ಉಳಿದ ಭಕ್ತರೊಡನೆ ಹಾಡುತ್ತಿದಾನೆ :

ಎಲ್ಲವೂ ನಿನ್ನಿಚ್ಛೆಯಂತೆ ನಡೆದಿರಲು
ನೀನೆ ಭವಸಾಗರವ ದಾಟಿಸುವ ಹಡಗು . . . .

ಅವರು ಮತ್ತೆ ಹಾಡುತ್ತಿದಾರೆ :

ನಿನ್ನೊಂದು ಕರುಣೆಯಿಂದಾಗದಿಹುದೇನಿಹುದು ?
ಏನನಾದರು ನಾವು ಪಡೆಯಬಹುದು.
ಬೆಟ್ಟದಂತಹ ಕಷ್ಟ ಕರಗಿ ನೀರಾಗುವುದು.
ಮಂಗಳದ ಮನೆ ನೀನೆ, ಸುಖಶಾಂತಿದಾತೆ !
ಆದರೂ ಏಕಿಂತು ನನ್ನ ಬಳಲಿಸುತಿರುವೆ
ಸೋಲುಗೆಲುವಿನ ವಿಫಲ ಲೀಲೆಯೊಳಗೆ ?

ಮತ್ತೆ :

ನಿನ್ನ ನಿತ್ಯಾನಂದದಾಚೆಗೆ ತಳ್ಳದಿರು ನೀನೆನ್ನನು.
ನಿನ್ನ ಪಾದವನಲ್ಲದೀತನು ಬೇರೆ ಏನೂ ಕಾಣನು. . . .

ಕೊನೆಯದಾಗಿ :

ಮಿರುಗುತಿದೆ ನಿನ್ನ ಅರೂಪರಾಶಿ ನಿಬಿಡಾಂಧಕಾರದಲ್ಲಿ
ನಿನ್ನನದರಿಂದಲೇ ನೆನೆವರಾ ಯೋಗಿಗಳು ಗಿರಿಗುಹೆಗಳಲ್ಲಿ ! . . .

ಶ್ರೀರಾಮಕೃಷ್ಣರು ಕ್ರಮೇಣ ಪ್ರಕೃತಿಸ್ಥರಾಗುತ್ತಿದಾರೆ. ಅವರು ಭಕ್ತರಿಗೆ "ದಿವ್ಯ ಮಧುಪಾನದಲಿ ಉನ್ಮತ್ತಳಾಗಿರುವ" ಎಂಬ ಹಾಡನ್ನು ಹಾಡುವಂತೆ ಹೇಳಿದರು.

ಭಕ್ತರು ಹಾಡುತ್ತಿದಾರೆ :

ದಿವ್ಯ ಮಧುಪಾನದಲಿ ಉನ್ಮತ್ತಳಾಗಿರುವ
ನಿನ್ನ ಈ ಲೀಲೆಯನು ತಿಳಿವರಾರು ? . . .

ಮತ್ತೆ ಪರಮಹಂಸರು ಭಕ್ತರಿಗೆ, "ಶಿವಸಂಗದೊಳಾನಂದದಿ" ಎಂಬ ಹಾಡನ್ನು ಹೇಳುವಂತೆ ಹೇಳಿದರು.

ಭಕ್ತರು ಹಾಡುತ್ತಿದಾರೆ:

ಶಿವಸಂಗದೊಳಾನಂದದಿ ತಾಯಿ ಕುಣಿಯುತಿರುವಳು.
ದಿವ್ಯ ಮಧುವ ಕುಡಿದು ಕೂಡ, ಹೆಜ್ಜೆತಪ್ಪದಿರುವಳು. . . .

ಪರಮಹಂಸರು ಭಕ್ತವೃಂದವನ್ನು ಆನಂದಪಡಿಸಲು ಕಿಂಚಿತ್ ರವೆ ಪಾಯಸವನ್ನು ಬಾಯಿಗೆ ಹಾಕುವುದೆ ತಡ, ಒಡನೆಯೇ ಭಾವದಿಂದ ತುಂಬಿತುಳುಕಾಡುತ್ತ ಬಾಹ್ಯಜ್ಞಾನಶೂನ್ಯರಾಗಿಬಿಟ್ಟಿದಾರೆ.

ಕೆಲವು ನಿಮಿಷಗಳಾದನಂತರ ಭಕ್ತರೆಲ್ಲರು ಪರಮಹಂಸರಿಗೆ ಪ್ರಣಾಮಮಾಡಿ, ಕೈಯಲ್ಲಿ ಪ್ರಸಾದ ತೆಗೆದುಕೊಂಡು ಬೈಠಕ್‌ಖಾನೆಗೆ ಹೋದರು. ಅವರೆಲ್ಲರು ಅಲ್ಲಿ ಕುಳಿತು ಆನಂದದಿಂದ ಪ್ರಸಾದವನ್ನು ಸೇವನೆಮಾಡುತ್ತಾ ಇದಾರೆ.

ಘಂಟೆ ರಾತ್ರಿ ಒಂಬತ್ತು. ಪರಮಹಂಸರು ಭಕ್ತರಿಗೆ ಹೇಳಿ ಕಳುಹಿಸಿದರು, "ಇಂದು ಸುರೇಂದ್ರನ ಮನೆಯಲ್ಲಿ ಕಾಳೀಪೂಜೆ ನಡೆಯುತ್ತಿದೆ. ಆಗಲೆ ರಾತ್ರಿಯಾಗಿಬಿಟ್ಟಿದೆ. ನೀವೆಲ್ಲರೂ ಆತನ ಮನೆಗೆ ಹೋಗಿ ಕಾಳೀಪೂಜೆಯಲ್ಲಿ ಭಾಗವಹಿಸಿ" ಎಂಬುದಾಗಿ.

ಭಕ್ತರೆಲ್ಲರು ಅತ್ಯಂತ ಆನಂದದಿಂದ ಸಿಮ್ಲಾ ಬೀದಿಯಲ್ಲಿರೋ ಸುರೇಂದ್ರನ ಮನೆಗೆ ಹೋದರು. ಸುರೇಂದ್ರ ಅವರನ್ನು ಅತ್ಯಂತ ಆದರದಿಂದ ಬರಮಾಡಿಕೊಂಡು ಅವರನ್ನು ತನ್ನ ಮನೆಯ ಎರಡನೆ ಅಂತಸ್ತಿನಲ್ಲಿದ್ದ ಬೈಠಕ್‌ಖಾನೆಗೆ ಕರೆದುಕೊಂಡುಹೋಗಿ ಕೂರಿಸಿದ. ಮನೆ ಉತ್ಸವದ ಅಲಂಕಾರಗಳಿಂದ ಶೋಭಿಸುತ್ತಿತ್ತು. ಭಕ್ತರ ಹಾಡುಗಾರಿಕೆ, ಸಂಗೀತ ಇವುಗಳಿಂದ ಆನಂದದ ಸಮ್ಮೇಳನವೇ ಅಲ್ಲಿ ಏರ್ಪಾಡಾಗಿ

ಬಿಟ್ಟಿತು. ಭಕ್ತರೆಲ್ಲರು ಭಗವತಿಯ ಪ್ರಸಾದವನ್ನು ಆನಂದದಿಂದ ತೃಪ್ತಿಕರವಾಗಿ ಭುಂಜಿಸಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುವುದರಲ್ಲಿ ರಾತ್ರಿ ಎರಡು ಘಂಟೆಯ ಹತ್ತಿರ ಹತ್ತಿರ ಆಗಿಬಿಟ್ಟಿತ್ತು.



## ೪೯
## ಶ್ರೀರಾಮಕೃಷ್ಣರು ಕಾಶೀಪುರದಲ್ಲಿ

೨೩ನೆ ಡಿಸೆಂಬರ್ ೧೮೮೫, ಪುಷ್ಯ ಕೃಷ್ಣ ದ್ವಿತೀಯ, ಬುಧವಾರ.

ಭಕ್ತರೆಲ್ಲರೂ ಕೂಡಿ ಇದೇ ತಿಂಗಳ ೧೧ ನೆ ತಾರೀಖು "ಕಾಶೀಪುರ" ಎಂಬ ಹೆಸರಿನ ಕಲ್ಕತ್ತದ ಉಪನಗರದಲ್ಲಿ ಒಂದು ಸುಂದರವಾದ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಪರಮಹಂಸರನ್ನು ಅಲ್ಲಿಗೆ ಕರೆದುಕೊಂಡು ಬಂದಿದಾರೆ. ಆ ಮನೆಯ ಸುತ್ತಲೂ ಹಣ್ಣುಹಂಪಲಗಳ, ಹೂವುಕಾಯಿಗಳ ಗಿಡಮರಗಳು ಸುಮ್ಮನೆ ತುಂಬಿವೆ. ಆ ಮನೆಯನ್ನು ಐದು ಎಕರೆ ಜಮೀನಿನ ಮಧ್ಯದಲ್ಲಿ ಕಟ್ಟಿದಾರೆ. ಇಲ್ಲೇ ಪರಮಹಂಸರ ಐಹಿಕ ಜೀವನದ ಮೇಲೆ ಕೊನೆಯ ಪರದೆ ಬಿತ್ತು.

ಪರಮಹಂಸರು ಬಹಳ ಹಿಂದೆಯೇ ದಕ್ಷಿಣೇಶ್ವರದಲ್ಲಿ ತಮ್ಮ ಭಕ್ತರ ಆಧ್ಯಾತ್ಮಿಕ ಜೀವನದ ಪೋಷಣೆಯ ಕಾರ್ಯವನ್ನು ಕೈಗೊಂಡಿದ್ದರು. ಈಗ ಕಾಶೀಪುರಕ್ಕೆ ಬಂದ ಮೇಲೆ ಆ ಕಾರ್ಯವನ್ನು ಪೂರ್ಣಗೊಳಿಸಲು ಅಪರಿಮಿತ ಉತ್ಸಾಹದಿಂದ ಕೆಲಸಮಾಡಲಾರಂಭಿಸಿದರು. ತಮ್ಮ ಐಹಿಕ ಜೀವನ ಕೊನೆಗಾಣಲು ಬಂದಿದೆ ಎಂಬುದನ್ನು ಅರಿತು ತಾವು ಸಂಪಾದಿಸಿದ್ದ ಆಧ್ಯಾತ್ಮಿಕ ಜೀವನದ ರತ್ನಗಳನ್ನೆಲ್ಲಾ ಯಾವ ಪಕ್ಷಪಾತವನ್ನೂ ಮಾಡದೆ ಎಲ್ಲರಿಗೂ ಹಂಚಲಾರಂಭಿಸಿದರು. ಸಂತೆಗೆ ಹಣ್ಣನ್ನು ತಂದು, ಮೊದಲು ಮೊದಲು ಅವನ್ನು ಚೌಕಾಸಿಮಾಡಿ ಮಾರುತ್ತಿದ್ದು, ಸೂರ್ಯಾಸ್ತ ಸಮಯದಲ್ಲಿ ಇನ್ನೇನು ಸಂತೆ ಮುಗಿದುಹೋಯಿತು ಎನ್ನುವಾಗ ದೊರೆತ ಬೆಲೆಗೆ ಅವನ್ನು ಮಾರಿಬಿಡೋ ವ್ಯಾಪಾರಿಯ ಹಾಗೆ ಪರಮಹಂಸರು ಈಗ ಇಲ್ಲಿ ನಡೆದುಕೊಳ್ಳಲಾರಂಭಿಸಿದರು. ಇಲ್ಲಿ ಅವರ ಆಧ್ಯಾತ್ಮಿಕ ಜೀವನದ ಶಕ್ತಿಯ ಪ್ರಕಾಶ ಅತ್ಯಂತ ಹೆಚ್ಚಾಗಿ ಹೊರಗಡೆಗೆ ಬಂದುದನ್ನು ಭಕ್ತರೆಲ್ಲರೂ ಅನುಭವಿಸಿ ನೋಡಿದರು. ತಮ್ಮ ಐಹಿಕ ಜೀವನದ ಅಂತ್ಯ ಸಮೀಪಿಸಿದಾಗ ಏನೇನು ಆಗುವುದು ಎಂದು ಪರಮಹಂಸರು ತಿಳಿಸಿದ್ದರೊ, ಅವೆಲ್ಲಾ ಘಟಿಸುತ್ತಿರೋದನ್ನು ಭಕ್ತರು ನೋಡಲಾರಂಭಿಸಿದರು: "ನಾನು ಎಲ್ಲವನ್ನೂ ಬಹಿರಂಗಪಡಿಸಿಬಿಟ್ಟು ಹೋಗುತ್ತೇನೆ." "ಈ ಶರೀರದ

(ತಮ್ಮ) ಮಹತ್ತಿನ ಸಂಬಂಧವಾಗಿ ಯಾವಾಗ ಅತ್ಯಂತ ಹೆಚ್ಚು ಮಂದಿ ತಮ್ಮೊಳಗೆ ತಾವೇ ಮಾತನಾಡಿಕೊಳ್ಳುವರೊ, ಆಗ ಭಗವತಿ ಇದನ್ನು ಹಿಂದಕ್ಕೆ ತೆಗೆದುಕೊಂಡುಬಿಡುತ್ತಾಳೆ.'' "ಇದರ ಐಹಿಕ ಜೀವನದ ಅಂತ್ಯ ಸಮೀಪಿಸಿದಾಗ, ಭಕ್ತರಲ್ಲಿ ಯಾರಾರು ಅಂತರಂಗಕ್ಕೆ ಸೇರಿದಾರೆ, ಯಾರಾರು ಬಹಿರಂಗಕ್ಕೆ ಸೇರಿದಾರೆ ಎಂಬುದರ ವರ್ಗೀಕರಣವಾಗಿಬಿಡುತ್ತದೆ.'' ಇವೇ ಮೊದಲಾದುವು. ಒಂದು ತಂಡ ಯುವಕರು ನರೇಂದ್ರನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡು ಸಕಾಲಕ್ಕೆ ಸಂಸಾರವನ್ನು ತ್ಯಜಿಸಿ ತಮ್ಮ ಉಳಿದ ಜೀವನವನ್ನೆಲ್ಲ ಭಗವಂತನ ಸಾಕ್ಷಾತ್ಕಾರಕ್ಕಾಗಿಯೂ ಮತ್ತು ಲೋಕಹಿತಕ್ಕಾಗಿಯೂ ಧಾರೆ ಎರೆಯುವರು ಎಂದು ಅವರು ಭವಿಷ್ಯ ಹೇಳಿದ್ದೂ ಇಲ್ಲೇ.

ಕಾಶೀಪುರದ ಈ ಮನೆ ಎರಡು ಅಂತಸ್ತಿನದು. ಮೇಲಿನ ಅಂತಸ್ತಿನಲ್ಲಿ ಎರಡು ಕೊಠಡಿಗಳು, ನೆಲ ಅಂತಸ್ತಿನಲ್ಲಿ ಮೂರು ಕೊಠಡಿಗಳು ಇದ್ದುವು. ಪರಮಹಂಸರು ಮೇಲಿನ ಅಂತಸ್ತಿನಲ್ಲಿದ್ದ ನಡು ಅಂಗಳದಲ್ಲಿ ವಾಸವಾಗಿದ್ದರು. ಅದರ ಎಡ ಭಾಗದಲ್ಲಿದ್ದ ಒಂದು ಚಿಕ್ಕ ಕೊಠಡಿಯನ್ನು ಪರಮಹಂಸರಿಗೆ ಶುಶ್ರೂಷೆ ಮಾಡುತ್ತಿದ್ದವರು ತಮ್ಮ ರಾತ್ರಿ ವೇಳೆಯ ಉಪಯೋಗಕ್ಕಾಗಿ ಉಪಯೋಗಿಸುತ್ತಿದ್ದರು. ಅದರ ಬಲ ಭಾಗದಲ್ಲಿ ಒಂದು ಮೊಗಸಾಲೆ ಇದ್ದಿತು. ಒಮ್ಮೊಮ್ಮೆ ಪರಮಹಂಸರು ಕುಳಿತುಕೊಳ್ಳುವುದಕ್ಕಾಗಿಯೂ ಮತ್ತು ಸುಮ್ಮನೆ ಅಡ್ಡಾಡುವುದಕ್ಕಾಗಿಯೂ ಇದು ಉಪಯೋಗವಾಗಿತ್ತು. ನೆಲ ಅಂತಸ್ತಿನಲ್ಲೂ ಮೇಲಿನ ಅಂತಸ್ತಿನಲ್ಲಿದ್ದ ಹಾಗೆ ಒಂದು ನಡು ಅಂಗಳವಿತ್ತು. ಅದನ್ನು ಮತ್ತು ಅದರ ಬಲ ಪಕ್ಕದಲ್ಲಿದ್ದ ಒಂದು ಚಿಕ್ಕ ಕೊಠಡಿಯನ್ನು ಭಕ್ತರು ಉಪಯೋಗಿಸುತ್ತಿದ್ದರು. ಆ ಅಂಗಳದ ಒಂದು ಕೊನೆಯಲ್ಲಿದ್ದ ಒಂದು ಚಿಕ್ಕ ಕೊಠಡಿಯನ್ನು ಶ್ರೀ ಶಾರದಾದೇವಿಯವರು ಉಪಯೋಗಿಸುತ್ತಿದ್ದರು. ಈ ಪ್ರಧಾನ ಕಟ್ಟಡವೇ ಅಲ್ಲದೆ, ಆ ತೋಟದಲ್ಲಿ ಇನ್ನೂ ಕೆಲವು ಉಪಗೃಹಗಳಿದ್ದುವು ಮತ್ತು ಎರಡು ಕೊಳಗಳೂ ಇದ್ದುವು. ಸುತ್ತಾಡಲು ಬಹಳ ಚೆನ್ನಾದ ರಸ್ತೆಗಳಿದ್ದುವು. ಈ ಹೊಸ ಜಾಗದಲ್ಲಿ ಪರಮಹಂಸರು ಸ್ವಚ್ಛವಾದ ಗಾಳಿಯನ್ನು ಸೇವಿಸುತ್ತ ಬಹಳ ಆನಂದದಿಂದ ಇರಲಾರಂಭಿಸಿದರು.

ಯಾರಾರು ಪರಮಹಂಸರ ಭಕ್ತರಾಗಿ ಆಗಬೇಕು ಅಂತ ಭಗವಂತ ವಿಧಿಸಿದ್ದನೊ, ಅವರೆಲ್ಲರೂ ಬಹುಮಟ್ಟಿಗೆ ಆಗಲೇ ಬಂದುಬಿಟ್ಟಿದ್ದರು.

ಅವರು ಬರಲು ಆರಂಭಮಾಡಿದ್ದು ೧೮೮೪ನೆ ಇಸವಿಯಲ್ಲಿ. ೧೮೮೪ರ ಕೊನೆಯಲ್ಲಿ ಶಶಿ ಮತ್ತು ಶರಚ್ಚಂದ್ರ ಪರಮಹಂಸರ ಪರಿಚಯವನ್ನು ಮಾಡಿಕೊಂಡರು. ೧೮೮೫ನೆ ಇಸವಿಯಲ್ಲಿ ಅವರ ಕಾಲೇಜು ಪರೀಕ್ಷೆ ಮುಗಿದನಂತರ ಪ್ರಾಯಶಃ ದಿವಸವೂ ಪರಮಹಂಸರ ದರ್ಶನ ಪಡೆಯಲು ಅವರು ಬರುತ್ತಿದ್ದರು. ೧೮೮೪ರ ಸೆಪ್ಟೆಂಬರ್ ತಿಂಗಳಲ್ಲಿ ಗಿರೀಶಘೋಷ ಪರಮಹಂಸರನ್ನು ಸ್ಟಾರ್ ಥಿಯೇಟರಿನಲ್ಲಿ ಸಂಧಿಸಿದ. ೧೮೮೪ರ ಕೊನೇ ದಿವಸಗಳಲ್ಲಿ ಶಾರದಾಪ್ರಸನ್ನ ಪರಮಹಂಸರನ್ನು ದಕ್ಷಿಣೇಶ್ವರದಲ್ಲಿ ಪ್ರಪ್ರಥಮವಾಗಿ ದರ್ಶನಮಾಡಿದ. ಸುಬೋಧ ಮತ್ತು ಕ್ಷೀರೋದ ಇವರಿಗೆ ಪರಮಹಂಸರ ಪ್ರಥಮ ದರ್ಶನ ದೊರೆತದ್ದು ೧೮೮೫ರ ಆಗಸ್ಟ್ ತಿಂಗಳಲ್ಲಿ.

ಪರಮಹಂಸರ ಯುವಕ ಭಕ್ತರಲ್ಲನೇಕರು ಪರಮಹಂಸರಿಗೆ ಶುಶ್ರೂಷೆ ಮಾಡಲು ಈಗ ಕಾಶೀಪುರದ ಮನೆಯಲ್ಲೇ ವಾಸಿಸಲಾರಂಭಿಸಿದಾರೆ. ಆದರೆ ಆಗಾಗ ತಮ್ಮ ತಮ್ಮ ಮನೆಗಳಿಗೂ ಹೋಗಿಬರುತ್ತಿದಾರೆ. ಗೃಹಸ್ಥ ಭಕ್ತರು ಬಹುಮಟ್ಟಿಗೆ ಪ್ರತಿದಿನವೂ ಬಂದು ಪರಮಹಂಸರನ್ನು ನೋಡಿ ಹೋಗುತ್ತಿದಾರೆ. ಅವರಲ್ಲಿ ಕೆಲವರು ಮಾತ್ರ ಎಲ್ಲೋ ಅಪರೂಪವಾಗಿ ಬಂದು ತಮ್ಮ ರಾತ್ರಿಯನ್ನು ಕಾಶೀಪುರದ ಮನೆಯಲ್ಲೇ ಕಳೆಯುತ್ತಿದಾರೆ.

ಇಂದು ಪ್ರಾತಃಕಾಲ ಪರಮಹಂಸರು ಬಿಚ್ಚುಗೈಯಿಂದ ತಮ್ಮ ಪ್ರೀತಿಯನ್ನು ಹಂಚಲಾರಂಭಿಸಿದಾರೆ. ನಿರಂಜನನಿಗೆ ಹೇಳುತ್ತಿದಾರೆ: "ನೀನು ನನ್ನ ತಂದೆ; ನಿನ್ನ ತೊಡೆಯ ಮೇಲೆ ಕುಳಿತುಕೊಳ್ಳುತ್ತೇನೆ." ಕಾಳೀಪದನ ಎದೆಯನ್ನು ಸ್ಪರ್ಶಿಸಿ ಹೇಳುತ್ತಿದಾರೆ: "ನಿನಗೆ ಆತ್ಮಜಾಗೃತಿ ಯುಂಟಾಗಲಿ." ಆತನ ಗಲ್ಲವನ್ನು ಹಿಡಿದು ಆದರ ತೋರಿಸುತ್ತ ಹೇಳು ತ್ತಿದಾರೆ: "ಭಗವಂತನ ಸಾಕ್ಷಾತ್ಕಾರಕ್ಕಾಗಿ ಯಾರು ಹೃತ್ಪೂರ್ವಕವಾಗಿ ವ್ಯಾಕುಲನಾಗಿದಾನೊ ಅಥವಾ ಯಾರು ಸಂಧ್ಯಾ ಆಹ್ನಿಕಾದಿಗಳನ್ನು ಮಾಡುತ್ತಿದಾನೊ ಅಂಥವನು ಇಲ್ಲಿಗೆ ಬರಲೇ ಬೇಕಾಗುತ್ತದೆ." ಇಂದು ಪ್ರಾತಃಕಾಲ ಇಬ್ಬರು ಸ್ತ್ರೀ ವ್ಯಕ್ತಿಗಳಿಗೆ ತಮ್ಮ ಕೃಪಾಕಟಾಕ್ಷವನ್ನು ಬೀರಿದರು; ಸಮಾಧಿಸ್ಥರಾಗಿ ತಮ್ಮ ಪಾದಗಳಿಂದ ಅವರ ಎದೆಯ ಭಾಗ ವನ್ನು ಸ್ಪರ್ಶಮಾಡಿದರು. ತಮಗೆ ಇಂಥ ಸೌಭಾಗ್ಯ ಒದಗಿದುದಕ್ಕಾಗಿ ಆ ಹೆಂಗಸರು ಪ್ರೇಮಾಶ್ರುವನ್ನು ಸುರಿಸಲಾರಂಭಿಸಿದಾರೆ. ಒಬ್ಬಳು ಅಳುತ್ತ ಅಳುತ್ತ ಹೇಳುತ್ತಿದಾಳೆ: "ನೀವು ಅತ್ಯಂತ ದಯಾಮಯಿಗಳು!"

ಇಂದು ಅವರ ಪ್ರೀತಿ ಎಲ್ಲಾ ಹದ್ದುಬಸ್ತುಗಳನ್ನು ಮೀರಿ ಉಕ್ಕಿ ಉಕ್ಕಿ ಹರಿಯುತ್ತಿದೆ. ಸಿಂತಿಯ ಗೋಪಾಲನಿಗೆ ಆಶೀರ್ವಾದ ಮಾಡಬೇಕೆಂದು ಒಬ್ಬ ಭಕ್ತನಿಗೆ ಹೇಳಿದರು: "ಗೋಪಾಲನನ್ನು ಕರೆದುಕೊಂಡು ಬಾ ಇಲ್ಲಿಗೆ."

ಸಾಯಂಕಾಲವಾಗಿದೆ. ಪರಮಹಂಸರು ಭಗವತಿಯ ಧ್ಯಾನದಲ್ಲಿ ಮಗ್ನರಾಗಿದ್ದಾರೆ. ಸ್ವಲ್ಪ ಹೊತ್ತಾದನಂತರ ಒಬ್ಬಿಬ್ಬರು ಭಕ್ತರೊಡನೆ ಬಹಳ ಮೆತ್ತಗೆ ಮಾತಾಡುತ್ತಿದ್ದಾರೆ. ಕೊಠಡಿಯಲ್ಲಿ ಕಾಳಿ, ಚುಣಿಲಾಲ, ಮಾಸ್ಟರ್, ನವಗೋಪಾಲ, ಶಶಿ, ನಿರಂಜನ ಇವರೇ ಮೊದಲಾದವರು ಕುಳಿತಿದ್ದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನನಗೊಂದು ಸ್ಟೂಲು ಕೊಂಡು ಕೊಂಡು ಬಾ. ಅದಕ್ಕೆ ಬೆಲೆ ಏನಾಗಬಹುದು?"

ಮಾಸ್ಟರ್: "ಎರಡು ಮೂರು ರೂಪಾಯಿಗಳೊಳಗೆ."

ಶ್ರೀರಾಮಕೃಷ್ಣರು: "ಸ್ನಾನದ ಮಣೆಗೆ ಹನ್ನೆರಡಾಣೆ. ಆದ್ದರಿಂದ ಇದಕ್ಕೇಕೆ ಇಷ್ಟೊಂದು ಬೆಲೆ?"

ಮಾಸ್ಟರ್: "ಬಹುಶಃ ಅಷ್ಟಾಗೋದಿಲ್ಲ ಅಂತ ಕಾಣುತ್ತೆ."

ಶ್ರೀರಾಮಕೃಷ್ಣರು: "ನಾಳೆ ಗುರುವಾರ. ಅಪರಾಹ್ನದ ಕೊನೆಯ ಭಾಗ ಅಮಂಗಳಕರ. ಆದ್ದರಿಂದ ಮೂರು ಘಂಟೆಗೆ ಮುನ್ನವೇ ಇಲ್ಲಿಗೆ ಬರಬಲ್ಲೆಯಾ?"

ಮಾಸ್ಟರ್: "ಆಗಲಿ, ಬರುತ್ತೇನೆ."

ಶ್ರೀರಾಮಕೃಷ್ಣರು: "ಒಳ್ಳೇದು, ಈ ನನ್ನ ರೋಗ ಇನ್ನೆಷ್ಟು ದಿನದಲ್ಲಿ ಗುಣವಾಗಿಬಿಡುತ್ತದೆ?"

ಮಾಸ್ಟರ್: "ಸ್ವಲ್ಪ ಹೆಚ್ಚಾಗಿ ಕೆರಳಿಕೊಂಡಿದೆ. ಆದ್ದರಿಂದ ಸ್ವಲ್ಪ ಕಾಲ ಹಿಡಿಯುತ್ತದೆ."

ಶ್ರೀರಾಮಕೃಷ್ಣರು: "ಇನ್ನೆಷ್ಟು ಕಾಲ?"

ಮಾಸ್ಟರ್: "ಬಹುಶಃ ಐದಾರು ತಿಂಗಳು."

ಇದನ್ನು ಕೇಳಿ ಪರಮಹಂಸರು ಮಗುವಿನೋಪಾದಿಯಲ್ಲಿ ಸಹಿಸಲಾರದವರ ಹಾಗೆ ಹೇಳುತ್ತಿದ್ದಾರೆ: "ಇನ್ನೂ ಅಷ್ಟೊಂದು ಕಾಲ?"

ಮಾಸ್ಟರ್: "ಪೂರ್ಣವಾಗಿ ಗುಣವಾಗೋಕೆ."

ಶ್ರೀರಾಮಕೃಷ್ಣರು: "ಓ, ಹಾಗೆ ಹೇಳು! ಒಳ್ಳೇದು, ನನಗೆ

ಎಷ್ಟೊಂದು ಭಗವದ್ರೂಪದರ್ಶನಗಳು, ಭಾವ, ಸಮಾಧಿ ಆಗಿವೆ ಏನು ಕತೆ! ಆದರೂ ನನಗೆ ಇಂಥ ರೋಗ ಏಕೆ ಬಂದಿದೆ ಹೇಳಬಲ್ಲೆಯಾ ?"

ಮಾಸ್ಟರ್: "ಹೌದು, ಈ ರೋಗದಿಂದ ನಿಮಗೆ ಅತ್ಯಂತ ಕಷ್ಟವಾಗುತ್ತಿರುವುದೇನೊ ನಿಜ; ಆದರೆ ಒಂದು ಉದ್ದೇಶವಿದೆ."

ಶ್ರೀರಾಮಕೃಷ್ಣರು: "ಏನದು ?"

ಮಾಸ್ಟರ್: "ನಿಮ್ಮ ಈಗಿನ ಮಾನಸಿಕ ಅವಸ್ಥೆ ಪರಿವರ್ತನೆ ಹೊಂದುವುದರಲ್ಲಿದೆ. ನಿರಾಕಾರದ ಕಡೆಗೆ ವಾಲುತ್ತಿದೆ. ನಿಮ್ಮ 'ವಿದ್ಯೆಯ ಅಹಂ' ಕೂಡ ನಾಶಹೊಂದುವುದರಲ್ಲಿದೆ."

ಶ್ರೀರಾಮಕೃಷ್ಣರು: "ಹೌದು, ನಿಜ. ನಾನು ಮಾಡಬೇಕಾಗಿದ್ದ ಲೋಕಶಿಕ್ಷಣ ಮುಗಿಯುವುದರಲ್ಲಿದೆ. ಮತ್ತೆ ಆ ಕಾರ್ಯ ನನ್ನ ಕೈಯಲ್ಲಿ ಸಾಧ್ಯವಿಲ್ಲ. ಎಲ್ಲವೂ ರಾಮಮಯವಾಗಿ ಕಾಣಬರುತ್ತಿದೆ. ಒಮ್ಮೊಮ್ಮೆ ನಾನೇ ನನಗೆ ಹೇಳಿಕೋತೇನೆ: 'ಇನ್ನು ಯಾರಿಗೆ ತಾನೆ ಉಪದೇಶ ಕೊಡೋದು ?' ನೋಡು, ಈ ಮನೆಯನ್ನು ನಾವು ಬಾಡಿಗೆಗೆ ತೆಗೆದುಕೊಂಡಿರೋದರಿಂದ, ಅನೇಕ ವಿಧದ ಭಕ್ತರು ಇಲ್ಲಿಗೆ ಬರಲಾರಂಭಿಸಿದಾರೆ. ನಾವೇನು ಇಲ್ಲಿ ಕೃಷ್ಣಪ್ರಸನ್ನಸೇನನ ಮತ್ತು ಶಶಧರನ ಹಾಗೆ—ಇಂಥ ಸಮಯದಲ್ಲಿ ಇಂಥ ಉಪನ್ಯಾಸ ಅಂತ—ಸೈನ್ ಬೋರ್ಡೇನು ಹಾಕಬೇಕಾಗಿಲ್ಲವಲ್ಲ!" (ಶ್ರೀರಾಮಕೃಷ್ಣರು ಮತ್ತು ಮಾಸ್ಟರ್ ನಗುತ್ತಿದಾರೆ.)

ಮಾಸ್ಟರ್: "ನಿಮಗೆ ಈ ರೋಗ ಬಂದಿರೋದು, ಇನ್ನೂ ಒಂದು ಉದ್ದೇಶಕ್ಕಾಗಿ; ಶಿಷ್ಯರನ್ನು ಆಯ್ದು ತೆಗೆಯಲೋಸುಗ. ಐದು ವರ್ಷ ತಪಸ್ಸು ಮಾಡಿಯೂ ಯಾವುದನ್ನು ಭಕ್ತರು ಗಳಿಸಿಕೊಳ್ಳಲಾರದವರಾಗುತ್ತಿದ್ದರೊ ಅದನ್ನು ಅವರು ಈ ಕೆಲವು ದಿವಸಗಳಲ್ಲೇ ಗಳಿಸಿಕೊಂಡುಬಿಟ್ಟಿದಾರೆ. ಅವರ ಪ್ರೇಮ, ಭಕ್ತಿ ಹೆಮ್ಮರದಂತೆ ಬೆಳೆಯುತ್ತಿವೆ."

ಶ್ರೀರಾಮಕೃಷ್ಣರು: "ಹೌದು, ಅದೇನೊ ನಿಜ; ಆದರೆ ನಿರಂಜನ ಮನೆಗೆ ಹೋಗಿಬಿಟ್ಟಿದ್ದನಲ್ಲ. (ನಿರಂಜನನಿಗೆ) ಆದರೆ, ಹೇಳು ನೋಡೋಣ ನಿನಗೇನನಿಸುತ್ತಿದೆ ?"

ನಿರಂಜನ: "ಹಿಂದೆ ನಿಮ್ಮನ್ನು ಪ್ರೀತಿಸುತ್ತಲೇನೊ ಇದ್ದೆ. ಈಗ ನಿಮ್ಮನ್ನು ಬಿಟ್ಟು ಒಂದರಘಳಿಗೆಯೂ ಇರಲಾಗುತ್ತಿಲ್ಲ."

ಮಾಸ್ಟರ್: "ಈ ಯುವಕರೆಲ್ಲರು ಬಹಳ ಅದ್ಭುತಶಾಲಿಗಳು ಎಂಬುದನ್ನು ಒಂದು ದಿನ ಅರಿತುಕೊಂಡೆ."

ಶ್ರೀರಾಮಕೃಷ್ಣರು: "ಎಲ್ಲಿ?"

ಮಾಸ್ಟರ್: "ಒಂದು ದಿನ ಹಾಗೇ ಶ್ಯಾಮಪುಕುರದ ಮನೆಯಲ್ಲಿ ಒಂದು ಕಡೆ ನಿಂತು ಭಕ್ತರನ್ನೆಲ್ಲ ಗಮನಿಸಿ ನೋಡುತ್ತಿದ್ದೆ. ಆಗ ಈ ಯುವಕರಲ್ಲಿ ಪ್ರತಿಯೊಬ್ಬನೂ ಎಷ್ಟೊಂದು ದುಸ್ತರ ವಿಘ್ನಗಳಿಂದ ಪಾರಾಗಿ ತಮ್ಮ ಸೇವೆಯಲ್ಲಿ ನಿರತನಾಗಿದಾನೆ ಎಂಬುದು ಮೂರ್ತಿಮತ್ತಾಗಿ ನನ್ನ ಮನಸ್ಸಿಗೆ ಗೋಚರವಾಯಿತು."

ಈ ಮಾತುಗಳನ್ನು ಕೇಳುತ್ತ ಇದ್ದ ಹಾಗೆ ಪರಮಹಂಸರು ಭಾವಾವಿಷ್ಟರಾಗಲಾರಂಭಿಸಿದಾರೆ. ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದವರು ಈಗ ಸಮಾಧಿಸ್ಥರಾಗಿಬಿಟ್ಟಿದಾರೆ.

ಸಮಾಧಿಯಿಂದಿಳಿದ ಮೇಲೆ ಮಾಸ್ಟರಿಗೆ ಹೇಳುತ್ತಿದಾರೆ: "ಎಲ್ಲವೂ ಸಾಕಾರದಿಂದ ನಿರಾಕಾರದ ಕಡೆಗೆ ಹೋಗುತ್ತಿರೋದನ್ನು ಕಂಡೆ. ಇನ್ನೂ ಮುಂದಕ್ಕೆ ಹೇಳಬೇಕು ಅಂತಲೇನೊ ಇಚ್ಛೆ, ಆದರೆ ಸಾಧ್ಯವಾಗುತ್ತಿಲ್ಲ. ಒಳ್ಳೇದು, ಈಗ ನನ್ನ ಮನಸ್ಸು ನಿರಾಕಾರದ ಕಡೆಗೆ ಬಾಗಿರೋದು, ನನ್ನ ಅಂತಿಮ ಲಯಕ್ಕಾಗಿ, ಅಲ್ಲವೇನು?"

ಮಾಸ್ಟರ್ ಆಶ್ಚರ್ಯಚಕಿತನಾಗಿ: "ಬಹುಶಃ ಇರಬಹುದು."

ಶ್ರೀರಾಮಕೃಷ್ಣರು: "ಈಗಲೂ ನಾನು ಅಖಂಡ ಸಚ್ಚಿದಾನಂದನನ್ನು ನೋಡುತ್ತಾ ಇದೇನೆ— ಅದು ಈ ರೀತಿಯಾಗಿ . . . . ಆದರೆ ಬಹಳ ಪ್ರಯಾಸಪಟ್ಟು ನನ್ನ ಭಾವನೆಯನ್ನು ತಡೆದುನಿಲ್ಲಿಸಿದೇನೆ.

"ಶಿಷ್ಯರನ್ನು ಆಯ್ದು ತೆಗೆಯೋಕೆ ಅಂತ ನೀನು ಹೇಳಿದೆಯಲ್ಲ, ಅದು ನಿಜ. ಈ ರೋಗ ಬಂದದ್ದರಿಂದ ಅಂತರಂಗಕ್ಕೆ ಸೇರಿದವರಾರು, ಬಹಿರಂಗಕ್ಕೆ ಸೇರಿದವರಾರು ಎಂಬುದು ಗೊತ್ತಾಗಿಬಿಡುತ್ತಾ ಇದೆ. ಯಾರು ಸಂಸಾರವನ್ನು ತ್ಯಜಿಸಿ ಇಲ್ಲಿಗೇ ಬಂದುಬಿಟ್ಟಿದಾರೊ ಅವರು ಅಂತರಂಗಿಗಳು; ಒಮ್ಮೊಮ್ಮೆ ಬಂದು: 'ಮಹಾಶಯರೆ, ನಿಮ್ಮ ಆರೋಗ್ಯ ಹೇಗಿದೆ?' ಅಂತ ಕೇಳಿಹೋಗೋರು ಬಹಿರಂಗಿಗಳು.

"ನೀನು ಭವನಾಥನ ನಡತೆಯನ್ನು ನೋಡಲಿಲ್ಲವೇನು? ಶ್ಯಾಮಪುಕುರಕ್ಕೆ ವರನಂತೆ ಉಡುಪು ಹಾಕಿಕೊಂಡು ಬಂದು ನನ್ನನ್ನು ಕೇಳಿದ: 'ಈಗ ನಿಮಗೆ ಹೇಗಿದೆ?' ಅಂದಿನಿಂದ ಆತನ ಮುಖವೇ ಕಂಡುಬಂದಿಲ್ಲ. ನರೇಂದ್ರನಿಗೋಸ್ಕರ ನಾನು ಆತನಿಗೆ ಆದರ ತೋರಿಸುತ್ತಿದೇನೆ, ಆದರೆ ನನ್ನ ಮನಸ್ಸಿನಲ್ಲಿ ಆತನಿಗೆ ಸ್ಥಾನವಿಲ್ಲ.

(ಮಾಸ್ಟರಿಗೆ) "ಭಗವಂತ ಭಕ್ತರ ಸಲುವಾಗಿ ದೇಹಧಾರಣೆ ಮಾಡಿಕೊಂಡುಬಂದಾಗ, ಆತನೊಡನೆ ಭಕ್ತರೂ ಹಿಂಬಾಲಕರಾಗಿ ಬರುತ್ತಾರೆ. ಅವರಲ್ಲಿ ಕೆಲವರು ಅಂತರಂಗಿಗಳು, ಇನ್ನು ಕೆಲವರು ಬಹಿರಂಗಿಗಳು, ಮತ್ತೆ ಕೆಲವರು ಸರಬರಾಯಿ ಮಾಡೋರು.

"ನನಗೆ ಹತ್ತೊ ಹನ್ನೊಂದೊ ಆಗಿರುವಾಗ ನಮ್ಮ ಊರಿನ ಹತ್ತಿರ ವಿರೋ ವಿಶಾಲಾಕ್ಷಿ ದೇವಾಲಯಕ್ಕೆ ಮೈದಾನದ ಮೂಲಕ ನಡೆದುಹೋಗುತ್ತಿದ್ದೆ. ಆಗ ನನಗೆ ಭಾವಾವಸ್ಥೆಯ ಮೊಟ್ಟಮೊದಲ ಅನುಭವ ಆಯಿತು. ಅದು ಎಂಥ ಅದ್ಭುತವಾದ ದರ್ಶನ! ಒಮ್ಮೆಗೇ ಬಾಹ್ಯಜ್ಞಾನಶೂನ್ಯನಾಗಿಬಿಟ್ಟೆ.

"ನನಗೆ ಇಪ್ಪತ್ತೆರಡೊ ಇಪ್ಪತ್ತುಮೂರೊ ವಯಸ್ಸಾಗಿದ್ದಾಗ ಕಾಳೀ ದೇವಾಲಯದಲ್ಲಿ (ದಕ್ಷಿಣೇಶ್ವರದಲ್ಲಿ) ಭಗವತಿ ನನ್ನನ್ನು ಕೇಳಿದಳು: 'ನಿನಗೆ ಅಕ್ಷರನಾಗಬೇಕು ಅಂತ ಇಚ್ಛೆಯಿದೆಯೇನು?' 'ಅಕ್ಷರ' ಎಂಬ ಪದದ ಅರ್ಥ ನನಗೆ ಗೊತ್ತಿರಲಿಲ್ಲ. ಅದಕ್ಕಾಗಿ ನಾನು ಹಲಧಾರಿಯನ್ನು ಕೇಳಿದೆ. ಆತ ಹೇಳಿದ: '"ಕ್ಷರ" ಎಂದರೆ "ಜೀವಾತ್ಮ"; "ಅಕ್ಷರ" ಎಂದರೆ "ಪರಮಾತ್ಮ".'

"ದೇವಾಲಯದಲ್ಲಿ ಸಾಯಂಕಾಲದ ಮಂಗಳಾರತಿ ನಡೆಯುತ್ತಿದ್ದಾಗ, ನಾನು ಕುಟೀರದ ಮೇಲಕ್ಕೆ ಹತ್ತಿ ಉಚ್ಚ ಕಂಠದಿಂದ ಕೂಗಿಕೊಳ್ಳುತ್ತಿದ್ದೆ: 'ಓ ಭಕ್ತರಿರಾ! ಎಲ್ಲಿದೀರ್‍ರೋ ನೀವು? ಬೇಗ ಬನ್ರೋ! ಐಹಿಕರ ಸಹವಾಸದಿಂದ ನನ್ನ ಪ್ರಾಣ ಹೋಗುತ್ತಿದೆ!' ನಾನು ಇದನ್ನೆಲ್ಲ 'ಇಂಗ್ಲಿಷ್ ಮೆನ್'ಗೆ ತಿಳಿಸಿದೆ. ಅವರು ಹೇಳಿಬಿಟ್ಟರು, ಇದೆಲ್ಲ ನಿಮ್ಮ ಮಾನಸಿಕ ಭ್ರಾಂತಿ ಅಂತ. ಬಹುಶಃ ಹಾಗೇ ಇರಬೇಕು ಎಂದು ಭಾವಿಸಿ ತೆಪ್ಪಗಾದೆ. ಆದರೆ ಈಗ ಅದೆಲ್ಲ ಸತ್ಯವಾದುದಾಗಿ ಕಂಡುಬರುತ್ತಾ ಇದೆ; ಭಕ್ತರು ಬರುತ್ತಾ ಇದಾರೆ.

"ಭಗವತಿ ಭಾವಾವಸ್ಥೆಯಲ್ಲಿ ನನಗೆ ಸೇವೆ ಮಾಡತಕ್ಕ ಐದು ಜನರನ್ನು ತೋರಿಸಿದಳು. ಮೊದಲನೆಯವನು ಮಥುರಬಾಬು. ಎರಡನೆಯವನು ಶಂಭುಮಲ್ಲಿಕ. ನಾನು ಆತನನ್ನು ಹಿಂದೆ ಎಂದೂ ನೋಡಿರಲಿಲ್ಲ. ಭಾವದಲ್ಲಿ ನೋಡಿದಾಗ ಆತನ ಮೈ ಹೊಂಬಣ್ಣದ್ದಾಗಿ ಕಂಡಿತು; ತಲೆಗೆ ಟೋಪಿ ಹಾಕಿಕೊಂಡಿದ್ದ. ಬಹಳ ದಿವಸಗಳನಂತರ ನಾನು ವಾಸ್ತವಿಕವಾಗಿ ಶಂಭುಮಲ್ಲಿಕನನ್ನು ಸಂಧಿಸಿದಾಗ ನನಗನಿಸಿತು ಈತನನ್ನು ಆಗಲೆ

ನಾನು ಭಾವಾವಸ್ಥೆಯಲ್ಲಿ ನೋಡಿದ್ದೆನಲ್ಲ. ಉಳಿದ ಮೂವರು ಯಾರು ಎಂಬುದು ನನ್ನ ಅರಿವಿಗೆ ಇನ್ನೂ ಬಂದಿಲ್ಲ. ಆದರೆ ಅವರದೂ ಗೌರವರ್ಣವೆ. ಬಹುಶಃ ಸುರೇಂದ್ರ ಅವರಲ್ಲಿ ಒಬ್ಬನಾಗಿರಬಹುದೆಂದು ತೋರುತ್ತಿದೆ.

"ನನಗೀ ಭಗವದವಸ್ಥೆ ಬಂದನಂತರ ನನ್ನ ಹಾಗೇ ಇರತಕ್ಕ ಇನ್ನೊಬ್ಬ ಬಂದು ನನ್ನ ಇಡಾ, ಪಿಂಗಳಾ, ಸುಷುಮ್ನಾ ನಾಡಿಗಳನ್ನು ಚೆನ್ನಾಗಿ ಅಳ್ಳಾಡಿಸಿಬಿಟ್ಟ. ಷಟ್‌ಚಕ್ರಗಳಲ್ಲಿರೋ ಪ್ರತಿಯೊಂದು ಪದ್ಮ ದೊಡನೆಯೂ ತನ್ನ ನಾಲಗೆಯಿಂದ ವಿಲಾಸಿಸಲಾರಂಭಿಸಿದ. ಅಧೋ ಮುಖವಾಗಿದ್ದ ಪದ್ಮಗಳು ಊರ್ಧ್ವಮುಖವಾಗಿ ನಿಂತುಕೊಂಡುವು. ಕೊನೆಯಲ್ಲಿ ಸಹಸ್ರಾರ ಪದ್ಮ ಪೂರ್ಣವಾಗಿ ಅರಳಿಬಿಟ್ಟಿತು.

"ಭಕ್ತರು ನನ್ನನ್ನು ನೋಡಲು ಬರೋ ಮುನ್ನವೇ ಅವರ ಸ್ವಭಾವ ಎಂಥೆಂಥದು ಎಂಬುದನ್ನು ನನಗೆ ಭಗವತಿ ತೋರಿಸಿಬಿಡುತ್ತಿದ್ದಳು. ಚೈತನ್ಯ ದೇವನ ಸಂಕೀರ್ತನೆ ಪಾರ್ಟಿ ಪಂಚವಟಿಯ ವಟ ವೃಕ್ಷದ ಕಡೆಯಿಂದ ಬಕುಳ ವೃಕ್ಷದ ಕಡೆಗೆ ಹೋದುದನ್ನು ಭಾವದಲ್ಲಲ್ಲ, ಈ ಎರಡು ಸ್ಥೂಲ ಕಣ್ಣುಗಳಿಂದಲೇ ನೋಡಿದೇನೆ. ಆ ಪಾರ್ಟಿಯಲ್ಲಿ ಬಲರಾಮನನ್ನು ನೋಡಿದೆ; ಬಹುಶಃ ನಿನ್ನನ್ನೂ (ಮಾಸ್ಟರನ್ನು). ನೀನು ಮತ್ತು ಚುಣಿ ಲಾಲ ಆಗಾಗ ಬಂದು ನನ್ನನ್ನು ನೋಡಿ ಹೋಗುತ್ತಿರೋದರಿಂದ ನಿಮ್ಮಿಬ್ಬ ರಲ್ಲೂ ಆತ್ಮಜಾಗೃತಿ ಉಂಟಾಗಿಬಿಟ್ಟಿದೆ. ಶಶಿ ಮತ್ತು ಶರಚ್ಚಂದ್ರ ಯೇಸು ಕ್ರಿಸ್ತನ ಪಾರ್ಟಿಯಲ್ಲಿದ್ದುದನ್ನು ಭಾವದಲ್ಲಿದ್ದಾಗ ನೋಡಿದೆ.

"ವಟ ವೃಕ್ಷದ ಕೆಳಗೆ ಭಾವದಲ್ಲಿ ಒಂದು ಮಗುವನ್ನು ನೋಡಿದೆ. ಹೃದೆ ಹೇಳಿದ: 'ಶ್ರೀಘ್ರದಲ್ಲೇ ನಿಮಗೊಂದು ಮಗು ಆಗುತ್ತೆ.' ನಾನು ಹೇಳಿದೆ: 'ಎಲ್ಲಾ ಹೆಂಗಸರು ನನಗೆ ತಾಯಿಯರೆ. ಆದ್ದರಿಂದ ನನಗೆ ಮಗು ಆಗೋ ಬಗೆ ಹೇಗೆ?' ರಾಖಾಲನೇ ಆ ಮಗು.

"ನಾನು ಭಗವತಿಯನ್ನು ಕೇಳಿಕೊಂಡೆ: 'ಹೇ ತಾಯೆ, ನೀನು ನನ್ನನ್ನು ಈ ಅವಸ್ಥೆಯಲ್ಲಿ ಇಟ್ಟಿರೋದರಿಂದ, ಒಬ್ಬ ಧನಿಕ ನನ ಸಹಾಯಕನಾಗುವಂತೆ ಮಾಡು.' ಅದಕ್ಕಾಗೇ ಮಥುರಬಾಬು ಹದಿನಾಲ್ಕು ವರ್ಷಗಳ ಕಾಲ (೧೮೫೮ ರಿಂದ ೧೮೭೧ರ ವರೆಗೆ) ನನ್ನ ಸೇವೆ ಮಾಡಿದ. ಎಷ್ಟೊಂದು ವಿಧವಾಗಿ ಅಂತ! ನನ್ನ ಇಚ್ಛೆಗನುಸಾರ ಸಾಧುಗಳಿಗೆ ಪ್ರತ್ಯೇಕ ಉಗ್ರಾಣವನ್ನು ಏರ್ಪಡಿಸಿದ. ಬೇಕಾದಾಗಲೆಲ್ಲ ಬಂಡಿ, ಪಲ್ಲಕ್ಕಿ ಇವನ್ನು ಒದಗಿಸುತ್ತಿದ್ದ. ಯಾರಾರಿಗೆ ಏನೇನು ಕೊಡಬೇಕು ಅಂತ

ಹೇಳಿದರೂ ಆತ ಹಾಗೇ ಮಾಡೋದು ಸಾಮಾನ್ಯವಾದುದೆ! ಭೈರವಿ ಬ್ರಾಹ್ಮಣಿ ಆತನನ್ನು ಪ್ರತಾಪರುದ್ರ[1] ಅಂತ ಕರೆಯುತ್ತಿದ್ದಳು.

"ವಿಜಯ ಪರೋಕ್ಷವಾಗಿ ಈ ರೂಪನ್ನು (ತಮ್ಮನ್ನು) ದರ್ಶನ ಮಾಡಿದಾನೆ. ಇದಕ್ಕೆ ನಿನ್ನ ವಿವರಣೆಯೇನು? ವಿಜಯ ಹೇಳಿದ: 'ಈಗ ನಿಮ್ಮನ್ನು ಮುಟ್ಟುತ್ತಿರೋ ಹಾಗೆ ಆಗಲೂ ಮುಟ್ಟಿದೇನೆ.'

"ಒಮ್ಮೆ ಲಾಟು (ಪರಮಹಂಸರ ಭಕ್ತ) ಎಣಿಕೆ ಹಾಕಿ ಒಟ್ಟು ಮೂವತ್ತಾರು ಜನ ಭಕ್ತರಿದಾರೆ ಅಂತ ಹೇಳಿದ. ಅದೇನೂ ಹೆಚ್ಚಲ್ಲ. ಆದರೆ ವಿಜಯ ಮತ್ತು ಕೇದಾರ ಇನ್ನೂ ಕೆಲವರನ್ನು ಮಾಡಿಕೊಡುತ್ತಾ ಇದಾರೆ.

"ಭಗವತಿ ಭಾವದಲ್ಲಿ ನನಗೆ ತೋರಿಸಿದಳು, ನನ್ನ ಜೀವನದ ಕೊನೆಯನ್ನು ನಾನು ಕೇವಲ ಪಾಯಸ ಕುಡಿದು ಕಳೆಯಬೇಕಾಗುತ್ತೆ ಅಂತ. ನನಗೀರೋಗ ಬಂದನಂತರ ನನ್ನ ಪರಿವಾರ (ಶ್ರೀ ಶಾರದಾದೇವಿಯವರು) ಒಂದು ದಿನ ರವೆ ಪಾಯಸ ಮಾಡಿಕೊಟ್ಟಳು. ಆಗ ಗಟ್ಟಿಯಾಗಿ ಅಳುತ್ತ ಹೇಳಿದೆ: 'ನಾನು ಪಾಯಸ ಕುಡಿದಿರಬೇಕಾದ ನನ್ನ ಅಂತಿಮ ಕಾಲ ಇದೇ ಏನು? ಇಷ್ಟು ಕಷ್ಟದಿಂದ!'"

**೪ನೆ ಜನವರಿ ೧೮೮೬, ಪುಷ್ಯ ಕೃಷ್ಣ ಚತುರ್ದಶಿ, ಸೋಮವಾರ.**

ಘಂಟೆ ಅಪರಾಹ್ನ ನಾಲ್ಕು. ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಪರಮಹಂಸರ ಕ್ಷೇಮಸಮಾಚಾರವನ್ನು ವಿಚಾರಿಸಿಕೊಂಡುಹೋಗಲು ರಾಮಚಟ್ಟೋಪಾಧ್ಯಾಯ ದಕ್ಷಿಣೇಶ್ವರದಿಂದ ಬಂದಿದಾನೆ. ಪರಮಹಂಸರು ಆ ವಿಷಯವನ್ನು ಮಾಸ್ಟರಿಗೆ ತಿಳಿಸುತ್ತ ಆತನನ್ನು ಕೇಳಿದರು: "ಏನು, ದಕ್ಷಿಣೇಶ್ವರದಲ್ಲಿ ಈಗೆ ಬಹಳ ಚಳಿಯೊ?"

ನರೇಂದ್ರ ಬಂದಿದಾನೆ. ಪರಮಹಂಸರು ಆಗಾಗ ಆತನ ಕಡೆ ನೋಡಿ ನಗುತ್ತಿದಾರೆ. ಇದು, ಪರಮಹಂಸರ ಪ್ರೀತಿ ಆತನ ಕಡೆಗೆ ಉಕ್ಕಿ ಉಕ್ಕಿ ಹರಿಯುತ್ತಿರುವುದೊ ಏನೊ ಎಂಬಂತೆ ತೋರುತ್ತಿತ್ತು. ನರೇಂದ್ರ ಈ ದಿನ ಅತ್ತಿದಾನೆ ಎಂಬುದನ್ನು ಮಾಸ್ಟರಿಗೆ ಸೌಜ್ಞೆಯ ಮೂಲಕ ತಿಳಿಸಿ, ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು. ನರೇಂದ್ರ ಮನೆಯಿಂದ

1. ಆತ ಒರಿಸ್ಸಾ ದೇಶದ ದೊರೆ. ಚೈತನ್ಯದೇವನ ಪರಮಭಕ್ತ. ಆತ ಚೈತನ್ಯದೇವನ ಸೇವೆಯನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ಮಾಡುತ್ತಿದ್ದ.

ಇಲ್ಲಿಯವರೆಗೆ ಅಳುತ್ತಲೇ ಬಂದಿದಾನೆ ಎಂಬುದನ್ನು ಮತ್ತೆ ಸೌಜ್ಞೆಯ ಮೂಲಕ ವ್ಯಕ್ತಪಡಿಸುತ್ತಿದಾರೆ.

ಎಲ್ಲರೂ ಸುಮ್ಮನೆ ಕುಳಿತಿದಾರೆ. ಈಗ ನರೇಂದ್ರ ಬಾಯಿಬಿಟ್ಟ.

ನರೇಂದ್ರ: "ಇಂದು ಅಲ್ಲಿಗೆ ಹೋಗಲು ಮನಸ್ಸುಮಾಡಿಕೊಂಡಿದೇನೆ."

ಶ್ರೀರಾಮಕೃಷ್ಣರು: "ಎಲ್ಲಿಗೆ?"

ನರೇಂದ್ರ: "ದಕ್ಷಿಣೇಶ್ವರಕ್ಕೆ. ಇಂದಿನ ರಾತ್ರಿ ಬಿಲ್ವ ಮರದ ಕೆಳಗೆ ಧುನಿ (ಅಗ್ನಿಕುಂಡ) ಹೊತ್ತಿಸಿ ಧ್ಯಾನಮಾಡಬೇಕೆಂದಿದೇನೆ."

ಶ್ರೀರಾಮಕೃಷ್ಣರು: "ಬೇಡ. ಮದ್ದಿನ ಕಾರ್ಖಾನೆಯುವರು ಅಲ್ಲಿ ಧುನಿ ಹೊತ್ತಿಸಲು ಬಿಟ್ಟುಕೊಡರು. ಪಂಚವಟಿ ಬಹಳ ಒಳ್ಳೆ ಜಾಗ. ಅಲ್ಲಿಅನೇಕ ಸಾಧು ಸನ್ಯಾಸಿಗಳು ಜಪತಪಾದಿಗಳನ್ನು ಮಾಡಿದಾರೆ. ಆದರೆ ಈಗ ಅಲ್ಲಿ ವಿಪರೀತ ಚಳಿ; ಜೊತೆಗೆ ಅಂಧಕಾರ ಬೇರೆ."

ಮತ್ತೆ ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ.

ಶ್ರೀರಾಮಕೃಷ್ಣರು ನಗುತ್ತ ನರೇಂದ್ರನಿಗೆ: "ವ್ಯಾಸಂಗ ಮುಂದುವರಿಸೋದಿಲ್ಲವೆ?"

ನರೇಂದ್ರ ಪರಮಹಂಸರ ಮತ್ತು ಮಾಸ್ಟರ ಕಡೆ ನೋಡಿ: "ಇದುವರೆಗೆ ಏನೇನನ್ನು ನಾನು ಓದಿ-ಗೀದಿ ಮಾಡಿದೇನೊ ಅದನ್ನೆಲ್ಲ ಮರಸಿಬಿಡತಕ್ಕ ಒಂದು ಔಷಧ ದೊರೆತುಬಿಟ್ಟಿತು ಎಂದರೆ ಬದುಕಿಕೊಂಡೆ."

ಕೊಠಡಿಯಲ್ಲೆ ಕುಳಿತಿದ್ದ ಹಿರಿಯ ಗೋಪಾಲ: "ನಾನೂ ನರೇಂದ್ರನೊಡನೆ ಹೋಗಿಬರುತ್ತೇನೆ."

ಕಾಳೀಪದಘೋಷ ಪರಮಹಂಸರಿಗೆಂದು ಒಂದು ಪೆಟ್ಟಿಗೆ ದ್ರಾಕ್ಷಿ ಹಣ್ಣುಗಳನ್ನು ತಂದಿದಾನೆ. ಪರಮಹಂಸರು ಅದನ್ನು ಭಕ್ತರಿಗೆ ಹಂಚುತ್ತಿದಾರೆ. ಮೊದಲು ನರೇಂದ್ರನಿಗೆ ಸ್ವಲ್ಪ ಕೊಟ್ಟು ಉಳಿದುದನ್ನೆಲ್ಲ ನೆಲದ ಮೇಲೆ ಸುರಿದುಬಿಟ್ಟರು. ಭಕ್ತರೆಲ್ಲರೂ ತಮಗೆ ದಕ್ಕಿದಷ್ಟನ್ನು ಆರಿಸಿಕೊಳ್ಳುತ್ತಿದಾರೆ.

ಸಾಯಂಕಾಲವಾಗಿದೆ. ನರೇಂದ್ರ ನೆಲ ಅಂತಸ್ತಿನಲ್ಲಿ ಕುಳಿತು ಹುಕ್ಕ ಸೇದುತ್ತ, ಮಾಸ್ಟರೊಡನೆ ತನ್ನ ಹೃದಯ ಯಾವ ರೀತಿಯಾಗಿ ಭಗವಂತನ ಸಾಕ್ಷಾತ್ಕಾರಕ್ಕೆ ವ್ಯಾಕುಲಪಡುತ್ತಿದೆ ಎಂಬ ವಿಷಯವಾಗಿ ಮಾತುಕತೆ ಆಡುತ್ತಿದಾನೆ. ಇಲ್ಲಿ ಇನ್ನು ಬೇರೆ ಯಾರೂ ಇಲ್ಲ.

ನರೇಂದ್ರ: "ಕಳೆದ ಶನಿವಾರ ಇಲ್ಲಿ ಕುಳಿತು ಧ್ಯಾನಮಾಡುತ್ತಿದ್ದೆ. ಇದ್ದಕ್ಕಿದ್ದ ಹಾಗೆ ನನ್ನ ಹೃದಯದಲ್ಲಿ ಏನೋ ಒಂದು ತರದ ಅನುಭವ ಆಯಿತು."

ಮಾಸ್ಟರ್: "ಕುಂಡಲಿನಿ ಎಚ್ಚೆತ್ತುಕೊಳ್ಳುತ್ತಿರಬೇಕು."

ನರೇಂದ್ರ: "ಬಹುಶಃ ಅದೇ ಇರಬೇಕು. ಇಡಾ, ಪಿಂಗಳಾ ನರಗಳನ್ನು ಸ್ಪಷ್ಟವಾಗಿ ನೋಡಿದೆ. ಆಗ ಹಾಜರಾನಿಗೆ ನನ್ನ ಎದೆ ಮುಟ್ಟಿ ನೋಡುವಂತೆ ಹೇಳಿದೆ. ನಿನ್ನೆ ಮೇಲಕ್ಕೆ ಹತ್ತಿಹೋಗಿ ಅವರಿಗೆ (ಪರಮಹಂಸರಿಗೆ) ನನ್ನ ಹೃದಯವನ್ನು ಬಿಚ್ಚಿ ಹೇಳಿದೆ. ಅವರಿಗೆ ಹೇಳಿದೆ: 'ಎಲ್ಲರೂ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುತ್ತಿದಾರೆ; ನನಗೂ ಸ್ವಲ್ಪ ಕೃಪೆ ಮಾಡಿ. ಎಲ್ಲರೂ ಜಯಶೀಲರಾಗುತ್ತಿರುವಾಗ ನಾನೊಬ್ಬ ಹಾಗೇ ಉಳಿದುಕೊಳ್ಳಬೇಕೆ?' "

ಮಾಸ್ಟರ್: "ಅವರು ನಿನಗೆ ಏನು ಉತ್ತರಕೊಟ್ಟರು?"

ನರೇಂದ್ರ: "ಅವರು ಹೇಳಿದರು: 'ಮೊದಲು ನೀನು ನಿನ್ನ ಮನೆಯವರಿಗೆ ಒಂದು ವ್ಯವಸ್ಥೆ ಮಾಡಿ ಬಾ, ಎಲ್ಲಾ ದೊರೆಯುತ್ತದೆ. ನಿನಗೇನು ಬೇಕು ಹೇಳು?' ನಾನು ಕೇಳಿಕೊಂಡೆ: 'ಒಂದೇ ಸಮನೆ ಮೂರು ನಾಲ್ಕು ದಿನಗಳ ವರೆಗೆ ಸಮಾಧಿಸ್ಥನಾಗಿದ್ದು, ಕೇವಲ ಊಟದ ಸಮಯದಲ್ಲಿ ಮಾತ್ರ ಪ್ರಕೃತಿಸ್ಥನಾಗಬೇಕು.' ಅದಕ್ಕೆ ಅವರು ಹೇಳಿದರು: 'ನಿನ್ನದು ಅತ್ಯಂತ ಹೀನ ಬುದ್ಧಿ. ಅದಕ್ಕಿಂತಲೂ ಉಚ್ಚವಾಗಿರತಕ್ಕ ಅವಸ್ಥೆ ಬೇರೊಂದಿದೆ. "ಇರುವುದೆಲ್ಲ ನೀನೇ" ಅಂತ ನೀನೇ ಹಾಡುತ್ತೀಯಲ್ಲ.' "

ಮಾಸ್ಟರ್: "ಅವರು ಸತತ ಹೇಳುತ್ತಿದಾರೆ, ಯಾರು ಸಮಾಧಿಸ್ಥಿತಿಯಿಂದ ಕೆಳಕ್ಕೆ ಇಳಿದುಬರುತ್ತಾರೊ, ಅವರಿಗೆ ಭಗವಂತನೇ ಈ ಸಮಸ್ತ ಜೀವಜಗತ್ತಾಗಿ ಆಗಿರುವುದು ಕಂಡುಬರುತ್ತದೆ. ಈ ಬಗೆಯ ಅನುಭವ ಈಶ್ವರಕೋಟಿಗಳಿಗೆ ಮಾತ್ರ ಸಾಧ್ಯ. ಜೀವಕೋಟಿಗಳಿಗೆ ಸಮಾಧಿ ದೊರೆಯಿತು ಎಂದರೆ, ಅವರು ಆ ಸ್ಥಿತಿಯಿಂದ ಕೆಳಕ್ಕೆ ಇಳಿದುಬರಲಾರರು."

ನರೇಂದ್ರ: "ಅವರು (ಪರಮಹಂಸರು) ಹೇಳಿದರು: 'ನಿನ್ನ ಮನೆಯವರಿಗೆ ಒಂದು ಸುವ್ಯವಸ್ಥೆ ಮಾಡಿಬಂದುಬಿಡು. ಸಮಾಧಿಗಿಂತಲೂ ಉಚ್ಚವಾಗಿರತಕ್ಕ ಸ್ಥಿತಿ ನಿನಗೆ ದೊರೆತುಬಿಡುತ್ತದೆ.' ಇಂದು ಬೆಳಗ್ಗೆ

ಮನೆಗೆ ಹೋಗಿದ್ದೆ. ಎಲ್ಲರೂ ನನಗೆ ಬೈದು ಹೇಳಿದರು: ' ನೀನು ಸುಮ್ಮನೆ ತೊಂಡು ತಿರುಗುತ್ತಿರುವೆಯಲ್ಲ ಏಕೆ? " ಲಾ " ಪರೀಕ್ಷೆ ಹತ್ತಿರ ಬರುತ್ತಿದೆ. ಓದೋದು-ಗೀದೋದು ಮಾಡದೆ ಸುಮ್ಮನೆ ಅಲೆದಾಡುತ್ತಾ ಇದೀಯಲ್ಲ! ' "

ಮಾಸ್ಟರ್: " ನಿಮ್ಮ ತಾಯಿ ಏನಾದರು ಬೈದರೇನು? "

ನರೇಂದ್ರ: " ಇಲ್ಲ. ನನಗೆ ತಿಂಡಿಕೊಡಲು ಆಕಾಂಕ್ಷಿತಳಾಗಿದ್ದಳು. ಜಿಂಕೆ ಮಾಂಸವನ್ನು ಕೊಟ್ಟಳು. ತಿನ್ನೋಕೇನೊ ಇಚ್ಛೆಯಿರಲಿಲ್ಲ, ಆದರೂ ಸ್ವಲ್ಪ ತಿಂದೆ. "

ಮಾಸ್ಟರ್: " ಬಳಿಕ? "

ನರೇಂದ್ರ: " ಅಜ್ಜಿ ಮನೆಯಲ್ಲಿ ಓದೋ ಕೊಠಡಿಗೆ ಹೋಗಿ ಓದಲು ಕುಳಿತೆ. ಒಡನೆಯೆ ವ್ಯಾಸಂಗ ಬಹಳ ಭಯಂಕರವಾದ್ದೊ ಏನೊ ಎಂಬ ಭಯ ನನ್ನ ಹೃದಯವನ್ನು ಹೊಕ್ಕಿಬಿಟ್ಟಿತು. ಹೃದಯ ಸುಮ್ಮನೆ ಸಂಕಟ ದಿಂದ ಚಡಪಡಿಸಲಾರಂಭಿಸಿತು. ಗೋಳೋ ಅಂತ ಅಳಲಾರಂಭಿಸಿದೆ: ಆ ರೀತಿಯಾಗಿ ಹಿಂದೆ ನಾನು ಎಂದೂ ಅತ್ತವನಲ್ಲ. ಪುಸ್ತಕ-ಗಿಸ್ತಕ ಎಲ್ಲ ವನ್ನೂ ಒಂದು ಕಡೆಗೆ ಬಿಸುಟು ಸುಮ್ಮನೆ ಅಲ್ಲಿಂದ ಓಡಲಾರಂಭಿಸಿದೆ. ರಸ್ತೆ ಉದ್ದಕ್ಕೂ ಓಡಿದೆ. ಪಾದರಕ್ಷೆಗಳು ಎಲ್ಲೊ ಕಳಚಿಬಿದ್ದುಹೋದವು. ಹುಲ್ಲು ಬಣವೆಗಳ ಸಂದಿ-ಗುಂದಿಯಲ್ಲಿ ನುಗ್ಗಿ ಓಡಲಾರಂಭಿಸಿದೆ. ತಲೆ ಮೈ ಕೈಗೆಲ್ಲ ಹುಲ್ಲುಗರಿ ಸಿಕ್ಕಿಕೊಂಡುಬಿಟ್ಟಿತು. ಕಾಶೀಪುರದ ರಸ್ತೆಯಲ್ಲಿ ಸುಮ್ಮನೆ ಓಡುತ್ತಲೇ ಬಂದೆ. "

ನರೇಂದ್ರ ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಮತ್ತೆ ಮಾತು ಮುಂದು ವರಿಸಿದ.

ನರೇಂದ್ರ: " ವಿವೇಕಚೂಡಾಮಣಿಯನ್ನು ಓದಿದ ಮೇಲಂತೂ ನನ್ನ ಮನಸ್ಸು ಇನ್ನೂ ಅಧಿಕವಾಗಿ ಕಲಕಿಹೋಗಿಬಿಟ್ಟಿದೆ. ಅದರಲ್ಲಿ ಶಂಕರಾಚಾರ್ಯರು ಹೇಳಿದಾರೆ, ಇವು ಮೂರು — ಮನುಷ್ಯತ್ವ, ಮುಮುಕ್ಷುತ್ವ, ಮಹಾಪುರುಷ ಸಂಶ್ರಯ — ಅನೇಕ ತಪಸ್ಸಿನ ಮತ್ತು ಅನೇಕ ಪೂರ್ವಜನ್ಮದ ಸುಕೃತ ಕರ್ಮಗಳ ಫಲದಿಂದ ದೊರೆಯುತ್ತವೆ ಎಂಬುದಾಗಿ. ನನಗೆ ನಾನೆ ಹೇಳಿಕೊಂಡೆ: ' ನನಗೆ ಇವು ಮೂರೂ ದೊರೆತಿವೆ— ಮಹಾತಪಸ್ಸಿನ ಬಲದಿಂದ ನನಗೆ ಮನುಷ್ಯಜನ್ಮ ದೊರೆತಿದೆ; ನನ್ನ ಹೃದಯ ಮುಕ್ತಿಗಾಗಿ ತವಕಪಡುತ್ತಿದೆ; ಇಂಥ ಮಹಾಪುರುಷರ ಸಂಶ್ರಯ ದೊರೆತಿದೆ. ' "

ಮಾಸ್ಟರ್: "ಆಹಾ!"

ನರೇಂದ್ರ: "ಸಂಸಾರ-ಜೀವನ ನನಗೆ ರುಚಿಸುತ್ತಿಲ್ಲ. ಒಬ್ಬಿಬ್ಬರನ್ನು ಬಿಟ್ಟರೆ, ಉಳಿದ ಸಂಸಾರಿಗಳ ಸಹವಾಸವೂ ನನಗೆ ಹಿಡಿಸುತ್ತಿಲ್ಲ."

ನರೇಂದ್ರ ಮತ್ತೆ ಸುಮ್ಮನೆ ಕುಳಿತುಕೊಂಡಿದಾನೆ. ತೀವ್ರ ವೈರಾಗ್ಯ ಸುಮ್ಮನೆ ಆತನ ಹೃದಯದಲ್ಲಿ ಉರಿಯುತ್ತಿದೆ. ಭಗವಂತನ ಸಾಕ್ಷಾತ್ಕಾರಕ್ಕಾಗಿ ಆತನ ಹೃದಯ ಸುಮ್ಮನೆ ತವಕಪಡುತ್ತಿದೆ. ಈಗ ನರೇಂದ್ರ ಮತ್ತೆ ತನ್ನ ಮಾತು ಮುಂದುವರಿಸುತ್ತಿದಾನೆ.

ನರೇಂದ್ರ ಮಾಸ್ಟರಿಗೆ: "ನಿಮಗೆ ಶಾಂತಿ ದೊರೆತುಬಿಟ್ಟಿದೆ, ಆದರೆ ನನ್ನ ಪ್ರಾಣ ಸುಮ್ಮನೆ ತಳಮಳಗುಟ್ಟುತ್ತಿದೆ. ನೀವೇ ಧನ್ಯರು"

ಮಾಸ್ಟರ್ ಯಾವ ಉತ್ತರವನ್ನೂ ಕೊಡದೆ ಸುಮ್ಮನೆ ಕುಳಿತಿದಾನೆ. ಆತ ತನಗೆ ತಾನೆ ಹೇಳಿಕೊಳ್ಳುತ್ತಿದಾನೆ: "ಪರಮಹಂಸರು ಹೇಳುತ್ತಿದಾರೆ, ಭಗವಂತನಿಗಾಗಿ ವ್ಯಾಕುಲನಾಗಬೇಕು, ಆಗಮಾತ್ರವೇ ಆತನ ಸಾಕ್ಷಾತ್ಕಾರ ದೊರೆಯುತ್ತದೆ."

ಮುಚ್ಚಂಜೆಯಾದೊಡನೆಯೆ ಮಾಸ್ಟರ್ ಮಹಡಿ ಮೇಲಕ್ಕೆ ಹತ್ತಿ ಹೋದ. ನೋಡುತ್ತಾನೆ, ಪರಮಹಂಸರು ನಿದ್ದೆಮಾಡುತ್ತಿದಾರೆ.

ಘಂಟೆ ರಾತ್ರಿ ಒಂಬತ್ತು. ನಿರಂಜನ ಮತ್ತು ಶಶಿ ಪರಮಹಂಸರ ಹತ್ತಿರ ಕುಳಿತಿದಾರೆ. ಈಗ ಅವರು ಎಚ್ಚರಗೊಂಡಿದಾರೆ. ಅಡಿಗಡಿಗೆ ನರೇಂದ್ರನ ವಿಷಯವಾಗಿ ಮಾತಾಡುತ್ತಲೇ ಇದಾರೆ.

ಶ್ರೀರಾಮಕೃಷ್ಣರು: "ನೋಡಿ, ಈಗ ನರೇಂದ್ರನಿಗೆ ಎಂಥ ಆಶ್ಚರ್ಯಕರ ಅವಸ್ಥೆ ಬಂದುಬಿಟ್ಟಿದೆ. ಹಿಂದೆ ಇದೇ ನರೇಂದ್ರನಿಗೆ ಸಾಕಾರದಲ್ಲಿ ವಿಶ್ವಾಸವಿರಲಿಲ್ಲ. ನೋಡಿದಿರಾ, ಈಗ ಆತನ ಪ್ರಾಣ ಭಗವಂತನ ಸಾಕ್ಷಾತ್ಕಾರಕ್ಕಾಗಿ ಹೇಗೆ ಸುಮ್ಮನೆ ತವಕಪಡುತ್ತಿದೆ! ಭಗವಂತನ ಸಾಕ್ಷಾತ್ಕಾರವನ್ನು ಪಡೆಯೋ ಬಗೆ ಹೇಗೆ ಎಂಬುದಾಗಿ, ಒಬ್ಬ ಶಿಷ್ಯ ತನ್ನ ಗುರುವನ್ನು ಕೇಳಿದ ಕಥೆ ನಿಮಗೆ ಗೊತ್ತಿದೆಯಲ್ಲ. ಗುರು ಶಿಷ್ಯನಿಗೆ ಹೇಳಿದ: 'ಬಾ ನನ್ನೊಡನೆ. ಯಾವ ರೀತಿಯಾಗಿ ನಡೆದುಕೊಂಡರೆ, ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು ಎಂಬುದನ್ನು ತೋರಿಸಿಕೊಡುತ್ತೇನೆ.' ಹೀಗೆಂದು ಹೇಳಿ ಒಂದು ಕೊಳದ ಹತ್ತಿರಕ್ಕೆ ಕರೆದುಕೊಂಡು ಹೋಗಿ ಆತನನ್ನು ನೀರಿನೊಳಕ್ಕೆ ಮುಳುಗಿಸಿ ಮೇಲೇಳದ ಹಾಗೆ ಹಿಡಿದುಕೊಂಡ. ಸ್ವಲ್ಪ ಹೊತ್ತಾದನಂತರ ಆತನನ್ನು ಮೇಲಕ್ಕೆ ಎತ್ತಿ ಗುರು

ಕೇಳಿದ: 'ನೀನು ನೀರೊಳಗಿದ್ದಾಗ ನಿನ್ನ ಪ್ರಾಣ ಏನು ಕೇಳುತ್ತಿತ್ತು?' ಆತ ಹೇಳಿದ: 'ನಾನು ಒಂದು ಗುಟುಕು ಉಸಿರಿಗಾಗಿ ಸುಮ್ಮನೆ ಒದ್ದಾಡುತ್ತಿದ್ದೆ.'

"ಭಗವಂತನ ಸಾಕ್ಷಾತ್ಕಾರಕ್ಕಾಗಿ ಆ ರೀತಿಯಾಗಿ ಪ್ರಾಣ ಚಟಪಟ ಗುಟ್ಟುತ್ತಿದ್ದರೆ, ಆಗ ಅರಿತುಕೋಬೇಕು ಭಗವಂತನ ಸಾಕ್ಷಾತ್ಕಾರಕ್ಕಾಗಿ ಇನ್ನು ಹೆಚ್ಚುಕಾಲ ಕಾಯಬೇಕಾಗೇನಿಲ್ಲ. ಅರುಣೋದಯವಾಯಿತು ಎಂದರೆ — ಪೂರ್ವ ದಿಗಂತ ಕೆಂಪೇರಿತು ಎಂದರೆ — ಅರಿತುಕೋಬೇಕು ಸೂರ್ಯೋದಯಕ್ಕೆ ಇನ್ನು ಕಾಲವಿಳಂಬವೇನಿಲ್ಲ."

ಪರಮಹಂಸರ ಗಂಟಲ ರೋಗ ಇಂದು ಹೆಚ್ಚಾಗಿಬಿಟ್ಟಿದೆ. ಅವರ ಗಂಟಲು ಅಷ್ಟೊಂದಾಗಿ ನೋಯುತ್ತಿದ್ದರೂ ನರೇಂದ್ರನ ಸಂಬಂಧವಾಗಿ ಈ ಮಾತುಕತೆಗಳನ್ನೆಲ್ಲ ಸೌಜ್ಞೆಯ ಮೂಲಕ ತಿಳಿಸಿದರು.

ರಾತ್ರಿಯಾದ ನಂತರ, ನರೇಂದ್ರ ದಕ್ಷಿಣೇಶ್ವರಕ್ಕೆ ಹೊರಟ. ಅಮಾವಾಸ್ಯೆಯಾದ್ದರಿಂದ ಎಲ್ಲೆಲ್ಲೂ ಗಾಢಾಂಧಕಾರ. ಒಬ್ಬಿಬ್ಬರು ಭಕ್ತರೂ ಆತನನ್ನು ಹಿಂಬಾಲಿಸಿದರು. ಇಂದಿನ ರಾತ್ರಿಯನ್ನು ಮಾಸ್ಟರ್ ಕಾಶೀಪುರದಲ್ಲೇ ಕಳೆದ. ತಾನು ಸನ್ಯಾಸಿಗಳ ಮಧ್ಯೆ ಕುಳಿತಿರೋಹಾಗೆ ರಾತ್ರಿಯಲ್ಲಿ ಮಾಸ್ಟರಿಗೆ ಸ್ವಪ್ನ ಬಿತ್ತು.

೫ನೆ ಜನವರಿ ೧೮೮೬, ಪುಷ್ಯ ಶುಕ್ಲ ಪಾಡ್ಯಮಿ, ಮಂಗಳವಾರ.

ಪರಮಹಂಸರು ತಮ್ಮ ಹಾಸಿಗೆ ಮೇಲೆ ಕುಳಿತು ಮಾಸ್ಟರೊಡನೆ ಮಾತುಕತೆ ಆಡುತ್ತಿದಾರೆ. ಕೊಠಡಿಯಲ್ಲಿ ಇನ್ನು ಬೇರೆ ಯಾರೂ ಇಲ್ಲ. ಘಂಟೆ ಅಪರಾಹ್ನ ನಾಲ್ಕು.

ಶ್ರೀರಾಮಕೃಷ್ಣರು: "ಕ್ಷೀರೋದ ಗಂಗಾಸಾಗರಕ್ಕೆ ಯಾತ್ರೆ ಹೋಗೋದಾದರೆ ಆತನಿಗೊಂದು ಕಂಬಳಿಯನ್ನು ಕೊಂಡುಕೊಡು."

ಮಾಸ್ಟರ್: "ಆಗಲಿ."

ಪರಮಹಂಸರು ಈಗ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು. ಈಗ ಮತ್ತೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಒಳ್ಳೇದು, ಈ ಯುವಕರಿಗೆ ಇದೇನು ಆಗುತ್ತಿದೆ ಹೇಳು ನೋಡೋಣ. ಕೆಲವರು ಪೂರಿಗೆ, ಇನ್ನು ಕೆಲವರು ಗಂಗಾಸಾಗರಕ್ಕೆ ಯಾತ್ರೆ ಹೋಗುತ್ತಿದಾರೆ. ಮನೆಯನ್ನು ತ್ಯಜಿಸಿ ಎಲ್ಲರೂ ಬಂದುಬಿಡುತ್ತಾ ಇದಾರೆ. ತೀವ್ರ ವೈರಾಗ್ಯ ಉಂಟಾಯಿತು ಎಂದರೆ,

ಸಂಸಾರ ಆಳವಾದ ಬಾವಿಯ ಹಾಗೆ, ಬಂಧುಬಾಂಧವರು ಕಾಳಸರ್ಪಗಳ ಹಾಗೆ ಕಂಡುಬರುತ್ತಾರೆ.''

ಮಾಸ್ಟರ್: "ಹೌದು, ನಿಜ. ಸಂಸಾರದಲ್ಲಿ ಯಾತನೆ ತುಂಬಿದೆ.''

ಶ್ರೀರಾಮಕೃಷ್ಣರು: "ಹೌದು, ನರಕಯಾತನೆ — ಹುಟ್ಟಿದಂದಿನಿಂದಲೇ! ಹೆಂಡತಿ ಮಕ್ಕಳನ್ನು ಕಟ್ಟಿಕೊಂಡರೆ ಏನು ಹೊಡಬಾಳು ಎಂಬುದನ್ನು ನೀನು ನೋಡುತ್ತಿಲ್ಲವೇನು?''

ಮಾಸ್ಟರ್: "ಹೌದು, ನಿಜ. ನೀವೇ ಹೇಳಿದೀರಲ್ಲ: 'ಈ ಯುವಕರ (ಪರಮಹಂಸರ ಬಾಲ ಶಿಷ್ಯರ) ಹೃದಯವನ್ನು ಸಂಸಾರಾಸಕ್ತಿ ಸ್ವಲ್ಪವೂ ಸ್ಪರ್ಶಿಸಿಲ್ಲ. ಈ ಜಗತ್ತಿನೊಡನೆ ಅವರು ಯಾವ ಲೇವಾದೇವಿಯನ್ನೂ ಇಟ್ಟುಕೊಂಡಿಲ್ಲ. ಜನರನ್ನು ಈ ಜಗತ್ತಿಗೆ ಕಟ್ಟಿಹಾಕೋದು ಅದರೊಡನೆ ಅವರು ಇಟ್ಟುಕೊಂಡಿರೋ ಸಂಬಂಧವೇ.''

ಶ್ರೀರಾಮಕೃಷ್ಣರು: "ನೀನು ನಿರಂಜನನನ್ನು ನೋಡುತ್ತಿಲ್ಲವೇನು? ಆತನ ದೃಷ್ಟಿ ಈ ಜಗತ್ತಿನ ಕಡೆ ಈ ರೀತಿಯದು: 'ನಿನ್ನದು ಇಷ್ಟು; ತೆಗೆದುಕೊಂಡುಬಿಡು. ನನ್ನದು ಅಷ್ಟು; ಕೊಟ್ಟುಬಿಡು.' ಮತ್ತೆ ಉಸಿರೇ ಎತ್ತೋ ಹಾಗಿಲ್ಲ. ಈ ಜಗತ್ತಿಗು ಆತನಿಗು ಬೇರೆ ಯಾವ ಸಂಪರ್ಕವೂ ಇಲ್ಲ. ಆತನ ಜುಟ್ಟು ಹಿಡಿದು ಎಳೆಯತಕ್ಕದಾವುದೂ ಇಲ್ಲ.

"ಕಾಮಕಾಂಚನವೇ ಸಂಸಾರ. ನಿನಗನುಭವವಾಗಿಲ್ಲವೆ, ಹತ್ತಿರ ಹಣ ಇತ್ತು ಎಂದರೆ ಅದನ್ನು ಗಂಟುಹಾಕಿಡಬೇಕು ಅಂತ ಬುದ್ಧಿ ಬರೋದು?''

ಮಾಸ್ಟರ್ ಗಹಗಹಿಸಿ ನಕ್ಕ. ಪರಮಹಂಸರೂ ನಕ್ಕರು.

ಮಾಸ್ಟರ್: "ಗಂಟು ಬಿಚ್ಚಬೇಕಾದರೆ ಈ ಜಗತ್ತನ್ನೆಲ್ಲ ಅಳೆದು ಸುರಿದು ಮಾಡಬೇಕಾಗುತ್ತದೆ. (ಇಬ್ಬರೂ ನಕ್ಕರು.) ಆದರೆ ಒಮ್ಮೆ ನೀವು ದಕ್ಷಿಣೇಶ್ವರದಲ್ಲಿ ಹೇಳಿದಿರಿ: 'ಮನುಷ್ಯ ತ್ರಿಗುಣಾತೀತನಾಗಿ ಸಂಸಾರದಲ್ಲಿರೋದಾದರೆ, ಅದು ಬೇರೆ ವಿಷಯ.' ''

ಶ್ರೀರಾಮಕೃಷ್ಣರು: "ಹೌದು, ಬಾಲಕನ ಹಾಗೆ.''

ಮಾಸ್ಟರ್: "ಹೌದು, ಅದೇನೊ ನಿಜ. ಅದು ಸುಲಭಸಾಧ್ಯವಾದ್ದೇನಲ್ಲ; ತುಂಬ ಮಾನಸಿಕ ಶಕ್ತಿ ಬೇಕು.''

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು.

ಮಾಸ್ಟರ್: "ನಿನ್ನೆ ಅವರು ದಕ್ಷಿಣೇಶ್ವರಕ್ಕೆ ಧ್ಯಾನಮಾಡಲು ಹೋದರಲ್ಲ, ಅದರ ಸಂಬಂಧವಾಗಿ ನನಗೊಂದು ಸ್ವಪ್ನ ಬಿತ್ತು."

ಶ್ರೀರಾಮಕೃಷ್ಣರು: "ಸ್ವಪ್ನದಲ್ಲಿ ಏನು ಕಂಡೆ?"

ಮಾಸ್ಟರ್: "ನೋಡಿದೆ, ನರೇಂದ್ರ ಮೊದಲಾದವರೆಲ್ಲ ಸನ್ಯಾಸಿಗಳಾಗಿಬಿಟ್ಟರೋದನ್ನ. ಅಗ್ನಿಕುಂಡವನ್ನು ಹೊತ್ತಿಸಿ ಬಳಿಯಲ್ಲಿ ಕುಳಿತುಕೊಂಡಿದ್ದರು. ಅವರ ಮಧ್ಯದಲ್ಲಿ ನಾನೂ ಕುಳಿತಿದ್ದೆ. ಅವರು ಚಿಲುಮೆ ಸೇದುತ್ತ ಹೊಗೆಯನ್ನು ಹೊರಕ್ಕೆ ಬಿಡುತ್ತಿದ್ದರು. ನಾನು ಹೇಳಿದೆ, ಏನು ಬಂಗಿ ಹೊಗೆಯ ವಾಸನೆ ಬರುತ್ತಿದೆಯಲ್ಲ."

ಶ್ರೀರಾಮಕೃಷ್ಣರು: "ಅತಿ ಮುಖ್ಯವಾದ್ದು ಮಾನಸಿಕ ತ್ಯಾಗ. ಅದು ದೊರಿತುಬಿಟ್ಟಿದ್ದರೆ, ಸನ್ಯಾಸಿಯಾದಂತೆಯೆ."

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡಿದ್ದರು. ಈಗ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಆದರೆ ನಮ್ಮ ವಾಸನೆಗಳಿಗೆಲ್ಲ ಬೆಂಕಿ ಇಡಬೇಕಾಗುತ್ತದೆ. ಆಗ ಮಾತ್ರವೇ ಸಾಧ್ಯ."

ಮಾಸ್ಟರ್: "ನೀವು ಒಮ್ಮೆ ಬಡೋಬಸಾರಿನ ಮಾರ್ವಾಡಿ ಪಂಡಿತನಿಗೆ ಹೇಳಿದಿರಿ, ತಮಗೆ ಭಕ್ತಿಕಾಮನೆ ಇದೆ ಅಂತ. ಭಕ್ತಿಕಾಮನೆ, ಕಾಮನೆಗಳ ಗುಂಪಿಗೆ ಸೇರಿಲ್ಲ ಅಂತ ಕಾಣುತ್ತೆ, ಅಲ್ಲವೇನು?"

ಶ್ರೀರಾಮಕೃಷ್ಣರು: "ಹೌದು, ಇಲ್ಲ. ಹಿಂಚೆ ಸೊಪ್ಪು ಸೊಪ್ಪುಗಳ ಗುಂಪಿಗೆ ಸೇರದಿರೋ ಹಾಗೆ. ಹಿಂಚೆ ಪಿತ್ತಹಾರಿ.

"ಒಳ್ಳೇದು, ನನಗಷ್ಟೊಂದು ಆನಂದ, ಭಾವ ಇವೆಲ್ಲ ಆಗುತ್ತಿದ್ದವಲ್ಲ, ಅವೆಲ್ಲ ಎಲ್ಲಿಗೆ ಹೋಗಿವೆ?"

ಮಾಸ್ಟರ್: "ಗೀತೆಯಲ್ಲಿ ಹೇಳಿದೆಯಲ್ಲ ತ್ರಿಗುಣಾತೀತಾವಸ್ಥೆ, ಬಹುಶಃ ಅದು ನಿಮಗೆ ಬಂದಿರಬೇಕು. ಸತ್ತ್ವ, ರಜಸ್ಸು, ತಮಸ್ಸು ಇವು ತಾವು ತಾನಾಗೇ ತಮ್ಮ ತಮ್ಮ ಕೆಲಸಕಾರ್ಯಗಳನ್ನು ಮಾಡಿಕೊಂಡು ಹೋಗಿಬಿಡುತ್ತಿವೆ. ನೀವು ನಿರ್ಲಿಪ್ತರು — ಸತ್ತ್ವಗುಣದಿಂದಲೂ ನಿರ್ಲಿಪ್ತರು."

ಶ್ರೀರಾಮಕೃಷ್ಣರು: "ಹೌದು, ಭಗವತಿ ನನ್ನನ್ನು ಬಾಲಾವಸ್ಥೆಯಲ್ಲಿ ಇಟ್ಟಿದಾಳೆ. ಒಳ್ಳೇದು, ಈ ದೇಹ ಈಗ ಬಂದಿರೋ ರೋಗದಿಂದ ನಿರ್ಮುಕ್ತವಾಗಿ ಬದುಕಿಕೊಳ್ಳಬಲ್ಲದೆ?"

ಪರಮಹಂಸರು ಮತ್ತು ಮಾಸ್ಟರ್ ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು. ನರೇಂದ್ರ ಕೊಠಡಿಯನ್ನು ಪ್ರವೇಶಿಸಿದ. ಆತ ತನ್ನ ಮನೆಗೆ ಒಮ್ಮೆ ಹೋಗಿ, ಎಲ್ಲಾ ಸುವ್ಯವಸ್ಥೆಯನ್ನು ಮಾಡಿ ಹಿಂದಿರುಗಿ ಬಂದುಬಿಡುವನು.

ನರೇಂದ್ರನ ತಂದೆ ಸ್ವರ್ಗಪ್ರಾಪ್ತಿಯನ್ನು ಪಡೆದನಂತರ, ಆತನ ತಾಯಿ ಮತ್ತು ತಮ್ಮಂದಿರು ಅತ್ಯಂತ ಕಷ್ಟ ಜೀವನವನ್ನು ನಡೆಯಿಸಿ ಕೊಂಡುಹೋಗುತ್ತಿದಾರೆ. ಆಗಾಗ ಅನ್ನಾಭಾವ. ನರೇಂದ್ರನೇ ಅವರ ಏಕಮಾತ್ರ ಆಶಾಕಿರಣ. ಆತ ಸಂಸಾರವನ್ನು ನೀಸಿಕೊಂಡು ಹೋಗುತ್ತಾನೆ ಅಂತ ಅವರು ಭಾವಿಸಿದಾರೆ. ಆದರೆ ಆತನಿಗೆ ತೀವ್ರ ವೈರಾಗ್ಯ ಬಂದು ಬಿಟ್ಟಿರೋದರಿಂದ "ಲಾ" ಪರೀಕ್ಷೆಗೆ ಕುಳಿತುಕೊಳ್ಳಲಾಗಲಿಲ್ಲ. ಇಂದು ಆತ ತನ್ನ ಮನೆಗೆ ಹೋಗಿ ಅಲ್ಲಿ ಏನಾದರು ಒಂದು ಸುವ್ಯವಸ್ಥೆ ಮಾಡಿ ಬರಲು ಕಲ್ಕತ್ತಕ್ಕೆ ಹೋಗುತ್ತಿದಾನೆ. ಆತನ ಒಬ್ಬ ಸ್ನೇಹಿತ ಆತನಿಗೆ ಒಂದು ನೂರು ರೂಪಾಯಿ ಸಾಲ ಕೊಡುವುದಾಗಿ ಒಪ್ಪಿಕೊಂಡಿದಾನೆ. ಆ ಹಣದಿಂದ ಮನೆಗೆ ಮೂರು ತಿಂಗಳಿಗೆ ಬೇಕಾಗೋ ಆಹಾರ ಸಾಮಗ್ರಿ ಗಳನ್ನು ಕೊಂಡುತಂದಿಟ್ಟು ಬಂದುಬಿಡುತ್ತಾನೆ.

ನರೇಂದ್ರ: "ಒಮ್ಮೆ ನಾನು ಮನೆಗೆ ಹೋಗಿಬರುತ್ತೇನೆ. (ಮಾಸ್ಟರಿಗೆ) ಮಹಿಮಚಕ್ರವರ್ತಿಯ ಮನೆಗೆ ಹೋಗಿ ಹೋಗುತ್ತೇನೆ. ನೀವೂ ಬರುವಿರೇನು ?"

ಮಾಸ್ಟರಿಗೆ ಇಚ್ಛೆಯಿಲ್ಲ. ಪರಮಹಂಸರು ಆತನ ಕಡೆ ನೋಡಿ ನರೇಂದ್ರನನ್ನು ಕೇಳುತ್ತಿದಾರೆ: "ಏಕೆ ?"

ನರೇಂದ್ರ: "ನಾನು ಆ ಮಾರ್ಗವಾಗಿ ಹೋಗುತ್ತಿದೇನೆ; ಆದ್ದ ರಿಂದ ಮಹಿಮಚರಣನ ಮನೆಗೆ ಹೋಗಿ, ಆತನೊಡನೆ ಸ್ವಲ್ಪ ಹರಟೆ ಹೊಡೆದು ಹೋಗುವೆನು."

ಪರಮಹಂಸರು ನರೇಂದ್ರನನ್ನು ದಿಟ್ಟಿಸಿನೋಡುತ್ತಿದಾರೆ.

ನರೇಂದ್ರ: "ಇಲ್ಲಿಗೆ ಬರುತ್ತಿರೋ ನನ್ನ ಸ್ನೇಹಿತ ನನಗೆ ನೂರು ರೂಪಾಯಿ ಸಾಲ ಕೊಡುತ್ತೇನೆ ಅಂತ ಹೇಳಿದಾನೆ. ಆ ಹಣದಿಂದ ಮನೆಯ ಮೂರು ತಿಂಗಳ ಖರ್ಚುವೆಚ್ಚದ ವ್ಯವಸ್ಥೆಯನ್ನು ಮಾಡಿ ಬರುತ್ತೇನೆ."

ಪರಮಹಂಸರು ಯಾವ ಮಾತನ್ನೂ ಆಡದೆ ಮಾಸ್ಟರ ಕಡೆ ನೋಡುತ್ತಿದ್ದಾರೆ.

ಮಾಸ್ಟರ್ ನರೇಂದ್ರನಿಗೆ: "ಈಗ ನೀನು ಮುಂದುವರಿಯುತ್ತಿರು. ನಾನು ಆಮೇಲೆ ಬರುತ್ತೇನೆ."

೧೧ನೆ ಮಾರ್ಚ್ ೧೮೮೬, ಫಾಲ್ಗುಣ ಶುಕ್ಲ ಷಷ್ಠಿ, ಗುರುವಾರ.

ಘಂಟೆ ರಾತ್ರಿ ಎಂಟು. ಪರಮಹಂಸರು ಕೊಠಡಿಯಲ್ಲಿ ಸುಮ್ಮನೆ ಮಲಗಿಕೊಂಡಿದ್ದಾರೆ. ನರೇಂದ್ರ, ಶಶಿ, ಮಾಸ್ಟರ್, ಹಿರಿಯ ಗೋಪಾಲ ಕುಳಿತಿದ್ದಾರೆ. ಶರಚ್ಚಂದ್ರ ಪರಮಹಂಸರ ಪಕ್ಕದಲ್ಲಿ ನಿಂತು ಅವರಿಗೆ ಬೀಸಣಿಗೆಯಿಂದ ಗಾಳಿ ಬೀಸುತ್ತಿದ್ದಾನೆ. ಪರಮಹಂಸರು ತಮ್ಮ ರೋಗದ ಸಂಬಂಧವಾಗಿ ಮಾತಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ನಿಮ್ಮಲ್ಲಿ ಯಾರಾದರೂ ಒಬ್ಬರು ದಕ್ಷಿಣೇಶ್ವರಕ್ಕೆ ಹೋಗಿ ಭೋಲಾನಾಥನನ್ನು ಕಾಣೋದಾದರೆ, ಆತ ನಿಮಗೆ ಒಂದು ವಿಧದ ಎಣ್ಣೆ ಕೊಡುತ್ತಾನೆ ಮತ್ತು ಹೇಳಿಕೊಡುತ್ತಾನೆ ಅದನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು."

ಹಿರಿಯ ಗೋಪಾಲ: "ನಾನು ನಾಳೆ ಪ್ರಾತಃಕಾಲವೇ ಅಲ್ಲಿಗೆ ಹೋಗಿ ತೆಗೆದುಕೊಂಡುಬರುತ್ತೇನೆ."

ಮಾಸ್ಟರ್: "ಈಗ ಹೋದರೂ ತಂದುಬಿಡಬಹುದು."

ಶಶಿ: "ನಾನು ಹೋಗಿಬರುತ್ತೇನೆ."

ಶ್ರೀರಾಮಕೃಷ್ಣರು ಶರಚ್ಚಂದ್ರನನ್ನು ತೋರಿಸಿ: "ಇವನು ಹೋಗಿ ಬರಲಿ."

ಸ್ವಲ್ಪ ಹೊತ್ತಾದನಂತರ, ಭೋಲಾನಾಥನಿಂದ ಎಣ್ಣೆಯನ್ನು ತೆಗೆದುಕೊಂಡುಬರಲು ಶರಚ್ಚಂದ್ರ ದಕ್ಷಿಣೇಶ್ವರಕ್ಕೆ ಹೊರಟ.

ಪರಮಹಂಸರು ಮಲಗೇ ಇದ್ದಾರೆ. ಭಕ್ತರೆಲ್ಲರು ಅವರ ಸುತ್ತಲೂ ನಿಶ್ಶಬ್ದರಾಗಿ ಕುಳಿತಿದ್ದಾರೆ. ಪರಮಹಂಸರು ಇದ್ದಕ್ಕಿದ್ದ ಹಾಗೆ ಎದ್ದು ಕುಳಿತು ನರೇಂದ್ರನೊಡನೆ ಮಾತುಕತೆ ಆಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಬ್ರಹ್ಮ ನಿರ್ಲಿಪ್ತ. ಮೂರು ಗುಣಗಳೂ ಆತನಲ್ಲಿವೆ; ಆದರೆ ಆತ ಮಾತ್ರ ನಿರ್ಲಿಪ್ತ.

"ಗಾಳಿಯಲ್ಲಿ ಸುಗಂಧ, ದುರ್ಗಂಧ ಎರಡೂ ಇವೆ, ಆದರೆ ಗಾಳಿ ಮಾತ್ರ ನಿರ್ಲಿಪ್ತವಾದ್ದು.

“ ಶಂಕರಾಚಾರ್ಯರು ಕಾಶಿಯ ಬೀದಿಯೊಂದರಲ್ಲಿ ನಡೆದುಹೋಗುತ್ತಿದ್ದರು. ಮಾಂಸ ಹೊತ್ತುಹೋಗುತ್ತಿದ್ದ ಒಬ್ಬ ಚಂಡಾಲ ಅವರನ್ನು ಅಕಸ್ಮಾತ್ತಾಗಿ ಮುಟ್ಟಿಬಿಟ್ಟ. ಶಂಕರಾಚಾರ್ಯರು ರೇಗಿದರು: ‘ ಏನಿದು ! ನನ್ನನ್ನು ಮುಟ್ಟಿಬಿಟ್ಟೆಯಲ್ಲ ! ’ ಚಂಡಾಲ ಉತ್ತರವಿತ್ತ: ‘ ಪೂಜ್ಯರೆ, ನೀವೂ ನನ್ನನ್ನು ಮುಟ್ಟಲಿಲ್ಲ, ನಾನೂ ನಿಮ್ಮನ್ನು ಮುಟ್ಟಲಿಲ್ಲ. ಆತ್ಮ ನಿರ್ಲಿಪ್ತವಾದ್ದು. ನೀವು ಆ ಶುದ್ಧ ಆತ್ಮ .’

“ ಬ್ರಹ್ಮ ಮತ್ತು ಮಾಯೆ. ಜ್ಞಾನಿ ಮಾಯೆಯನ್ನು ನಿರಾಕರಿಸುತ್ತಾನೆ.

“ ಮಾಯೆ ಒಂದು ಪರದೆ ಇದ್ದ ಹಾಗೆ. ಇಲ್ಲಿ ನೋಡು, ಈ ಚೌಕವನ್ನು ನಿನ್ನ ಕಣ್ಣೆದುರಿಗೆ ಹಿಡಿಯುತ್ತೇನೆ. ಈಗ ನಿನಗೆ ದೀಪದ ಬೆಳಕು ಕಾಣುತ್ತಿಲ್ಲ. ”

ಪರಮಹಂಸರು ತಮಗು ಮತ್ತು ಭಕ್ತರಿಗು ಮಧ್ಯೆ ಆ ಚೌಕವನ್ನು ಹಿಡಿದರು.

ಶ್ರೀರಾಮಕೃಷ್ಣರು: “ ಇಗೋ ನೋಡಿ, ಈಗ ನಿಮಗೆ ನನ್ನ ಮುಖ ಕಾಣಿಸುತ್ತಿಲ್ಲ. ರಾಮಪ್ರಸಾದ ಹೇಳಿರೋ ಹಾಗೆ, ‘ ಪರದೆಯನ್ನು ಮೇಲಕ್ಕೆ ಎತ್ತಿ, ಬಳಿಕ ನೋಡಿ ! ’

“ ಆದರೆ ಭಕ್ತ ಮಾಯೆಯನ್ನು ನಿರಾಕರಿಸೋದಿಲ್ಲ. ಆತ ಮಹಾಮಾಯೆಯ ಪೂಜೆ ಮಾಡುತ್ತಾನೆ. ಆಕೆಯಲ್ಲಿ ಶರಣಾಗತನಾಗಿ ಪ್ರಾರ್ಥಿಸುತ್ತಾನೆ: ‘ ಹೇ ತಾಯೆ, ದಾರಿಯನ್ನು ಬಿಟ್ಟು ನಿಲ್ಲು. ಕೃಪೆಮಾಡಿ ನೀನು ದಾರಿಬಿಟ್ಟು ನಿಂತರೆ ಮಾತ್ರವೇ ನನಗೆ ಬ್ರಹ್ಮಜ್ಞಾನ ಸಾಧ್ಯ. ’ ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳನ್ನೂ ಜ್ಞಾನಿಗಳು ಸುಮ್ಮನೆ ಗಾಳಿಯಲ್ಲಿ ತೂರಿಬಿಡುವರು. ಆದರೆ ಭಕ್ತರು ಅವನ್ನು ಅನುಮೋದಿಸುವರು. ಎಲ್ಲಿಯವರೆಗೆ ‘ ಅಹಂ ’ ಎಂಬುದು ಇರುವುದೊ ಅಲ್ಲಿಯವರೆಗೆ ಎಲ್ಲವೂ ಇರುತ್ತದೆ. ‘ ಅಹಂ ’ ಎಂಬುದು ಇರೋವರೆಗೆ ಭಕ್ತನ ಕಣ್ಣಿಗೆ ಭಗವಂತನೇ ಈ ಮಾಯೆ, ಜೀವಜಗತ್ತು, ಚತುರ್ವಿಂಶತಿ ತತ್ತ್ವ ಆಗಿರುವುದಾಗಿ ಕಂಡುಬರುತ್ತಾನೆ. ”

ನರೇಂದ್ರ ಮತ್ತು ಉಳಿದವರೆಲ್ಲರು ಇದನ್ನೆಲ್ಲ ಕೇಳುತ್ತ ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಮಾಯಾವಾದ ಶುಷ್ಕವಾದ್ದು. (ನರೇಂದ್ರನಿಗೆ) ನಾನು ಏನು ಹೇಳಿದೆ ಹೇಳು ನೋಡೋಣ."

ನರೇಂದ್ರ: "ಮಾಯೆ ಶುಷ್ಕವಾದ್ದು."

ಪರಮಹಂಸರು ಅಕ್ಕರೆಯಿಂದ ನರೇಂದ್ರನ ಕೈ ಮೈಗಳನ್ನು ಸವರುತ್ತ ಹೇಳುತ್ತಿದಾರೆ: "ನಿನ್ನ ಮುಖಮುದ್ರೆ ಕೈ ಮೈಗಳನ್ನು ನೋಡಿದರೆ ನೀನು ಒಬ್ಬ ಭಕ್ತನ ಹಾಗೆ ಕಾಣುತ್ತೀಯೆ. ಜ್ಞಾನಿಗಳ ಮುಖಮುದ್ರೆಯೇ ಬೇರೆ; ಅವರದು ಶುಷ್ಕವಾದ್ದು.

"ಜ್ಞಾನಿ ಬ್ರಹ್ಮಜ್ಞಾನವನ್ನು ಪಡೆದುಕೊಂಡನಂತರವೂ ವಿದ್ಯಾ ಮಾಯೆಯ — ಭಕ್ತಿ, ದಯೆ, ವೈ ರಾ ಗ್ಯ ಇವುಗಳ — ಆಶ್ರಯವನ್ನು ಹೊಂದಿ ಇರಬಲ್ಲ. ಇದರಿಂದ ಎರಡು ವಿಧದ ಉಪಕಾರವಾಗುತ್ತದೆ. ಮೊದಲನೆಯದಾಗಿ ಲೋಕಶಿಕ್ಷಣವಾಗುತ್ತದೆ. ಎರಡನೆಯದಾಗಿ ಆತ ಬ್ರಹ್ಮಾನಂದವನ್ನು ಸವಿಯುತ್ತಾ ಇರಲೂ ಸಾಧ್ಯವಾಗುತ್ತದೆ. ಜ್ಞಾನಿ ಸಮಾಧಿಸ್ಥನಾಗಿ ಸುಮ್ಮನೆ ಇದ್ದುಬಿಟ್ಟದ್ದೇ ಆದರೆ, ಅದರಿಂದ ಲೋಕ ಶಿಕ್ಷಣ ಆಗದು. ಅದಕ್ಕಾಗೇ ಶಂಕರಾಚಾರ್ಯರು 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. ಜ್ಞಾನಿ ಭಗವದಾನಂದವನ್ನು ಸವಿಯಲೋಸುಗ — ಕಂಠದವರೆಗೆ ಆತನೊಡನೆ ವಿಲಾಸಿಸಲೋಸುಗ — ಭಕ್ತರೊಡನೆ ಇರುತ್ತಾನೆ.

"ಈ 'ವಿದ್ಯೆಯ ಅಹಂ', 'ಭಕ್ತನ ಅಹಂ' ಇವುಗಳಿಂದ ಯಾವ ಕೆಡಕೂ ಸಂಭವಿಸದು; ಕೆಡಕನ್ನು ತರತಕ್ಕದ್ದು ಕೇವಲ ಆ 'ನೀಚ ಅಹಂ' ಭಗವಂತನ ಸಾಕ್ಷಾತ್ಕಾರ ದೊರೆತನಂತರ ಬಾಲಕನ ಸ್ವಭಾವ ಬಂದು ಬಿಡುತ್ತದೆ. 'ಬಾಲಕನ ಅಹಂ' ನಿಂದ ಯಾವ ಕೆಡಕೂ ಸಂಭವಿಸದು. ಇದು ಕನ್ನಡಿಯಲ್ಲಿ ಪ್ರತಿಬಿಂಬಿತವಾಗಿರೋ ಮುಖದ ಹಾಗೆ; ಅದು ಯಾರನ್ನೂ ಬಯ್ಯ-ಗಿಯ್ಯಲಾರದು. ಅಥವಾ ಅದು ಒಂದು ಸುಟ್ಟ ಹಗ್ಗದ ಹಾಗೆ: ನೋಡೋಕೇನೊ ಹಗ್ಗದ ಹಾಗೇ ಇದೆ, ಆದರೆ ಸ್ವಲ್ಪ ಊದಿದೊಡನೆಯೇ ದೂಳುದೂಳಾಗಿ ಹಾರಿಹೋಗುತ್ತದೆ. ಜ್ಞಾನಾಗ್ನಿಯಲ್ಲಿ ಸುಟ್ಟುಹೋದ 'ಅಹಂ' ಯಾರಿಗೂ ಯಾವ ವಿಧದ ಕೆಡಕನ್ನೂ ತರದು. ಅದು ಹೆಸರಿಗೆ ಮಾತ್ರ 'ಅಹಂ'.

"ಇದು ನಿತ್ಯವನ್ನು ಮುಟ್ಟಿ, ಲೀಲೆಗೆ ಹಿಂದಿರುಗುವಿಕೆ. ನದಿಯ ಆಚೆ ದಡವನ್ನು ಮುಟ್ಟಿ ಮತ್ತೆ ಈಚೆ ದಡಕ್ಕೆ ಹಿಂದಿರುಗುವಿಕೆ. ಲೋಕ

ಶಿಕ್ಷಣಕ್ಕಾಗಿ, ವಿಲಾಸಕ್ಕಾಗಿ; — ಭಗವಂತನ ಕ್ರೀಡೆಯಲ್ಲಿ ಭಾಗವಹಿಸ ಲೋಸುಗವಾಗಿ ಹಿಂದಿರುಗುವಿಕೆ.''

ಪರಮಹಂಸರು ಬಹಳ ಮೆತ್ತಗೆ ಮಾತಾಡುತ್ತಿದಾರೆ. ಒಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು. ಮತ್ತೆ ಭಕ್ತರಿಗೆ ಹೇಳು ತ್ತಿದಾರೆ: ''ಈ ಶರೀರವೇನೊ ರೋಗಗ್ರಸ್ತವಾಗಿದೆ, ಆದರೆ ಮನಸ್ಸು ಮಾತ್ರ ಅವಿದ್ಯಾಮಾಯೆಯಿಂದ ಮುಕ್ತವಾಗಿಬಿಟ್ಟಿದೆ. ಇಲ್ಲಿ ನೋಡು, ರಾಮಲಾಲನ ಯೋಚನೆಯೇ ಆಗಲಿ, ಮನೆಯ ಯೋಚನೆಯೇ ಆಗಲಿ, ಪರಿವಾರದ ಯೋಚನೆಯೇ ಆಗಲಿ ನನ್ನ ಮನಸ್ಸಿನಲ್ಲಿ ಇಲ್ಲ. ಆದರೆ ಆ ಕಾಯಸ್ಥರ ಹುಡುಗ, ಪೂರ್ಣ, ಆತನ ಯೋಚನೆ ಮಾತ್ರ ನನ್ನನ್ನು ಪೀಡಿಸುತ್ತಿದೆ. ಉಳಿದವರ ವಿಷಯವಾಗಿ ನಾನು ಕಿಂಚಿತ್ತೂ ಯೋಚಿಸು ತ್ತಿಲ್ಲ.

''ಜನರಿಗಾಗಿ, ಭಕ್ತರಿಗಾಗಿ ಭಗವಂತನೇ ನನ್ನಲ್ಲಿ ವಿದ್ಯಾಮಾಯೆ ಯನ್ನು ಇಟ್ಟಿದಾನೆ.

''ಆದರೆ ವಿದ್ಯಾಮಾಯೆ ಇತ್ತು ಎಂದರೆ ಮತ್ತೆ ಜನ್ಮವೆತ್ತಿ ಬರ ಬೇಕಾಗುತ್ತದೆ. ಅವತಾರಾದಿಗಳು ವಿದ್ಯಾಮಾಯೆಯನ್ನು ಇಟ್ಟು ಕೊಂಡಿರುತ್ತಾರೆ. ಕಿಂಚಿತ್ ಆಸೆ ಇದ್ದರೂ ಮತ್ತೆ ಮತ್ತೆ ಜನ್ಮವೆತ್ತಿ ಬರಬೇಕಾಗುತ್ತದೆ. ಆಸೆಗಳೆಲ್ಲ ಸಂಪೂರ್ಣವಾಗಿ ನಾಶವಾಗಿ ಹೋದ ನಂತರವೇ ಮುಕ್ತಿ. ಆದರೆ ಭಕ್ತರು ಮುಕ್ತರಾಗಲು ಇಚ್ಛಿಸೋದಿಲ್ಲ.

''ಯಾರೆ ಆಗಲಿ ಕಾಶಿಯಲ್ಲಿ ದೇಹತ್ಯಾಗ ಮಾಡೋದಾದರೆ, ಅವರಿಗೆ ಮುಕ್ತಿ ದೊರೆತುಬಿಡುತ್ತದೆ. ಅವರು ಮತ್ತೆ ಜನ್ಮವೆತ್ತಬೇಕಾಗಿರೋ ದಿಲ್ಲ. ಮುಕ್ತಿಯೇ ಜ್ಞಾನಿಗಳ ಗುರಿ.''

ನರೇಂದ್ರ: ''ಅಂದು ನಾವು ಮಹಿಮಚರಣನ ಮನೆಗೆ ಹೋಗಿ ದ್ದೆವು.''

ಶ್ರೀರಾಮಕೃಷ್ಣರು ನಗುತ್ತ: ''ಬಳಿಕ?''

ನರೇಂದ್ರ: ''ಅವನಂಥ ಶುಷ್ಕ ಜ್ಞಾನಿಯನ್ನು ನಾನು ಎಂದೂ ನೋಡಿರಲಿಲ್ಲ.''

ಶ್ರೀರಾಮಕೃಷ್ಣರು ನಗುತ್ತ: ''ಏನು ಸಮಾಚಾರ?''

ನರೇಂದ್ರ: ''ಆತ ನಮ್ಮನ್ನು ಹಾಡುವಂತೆ ಕೇಳಿಕೊಂಡ. ಗಂಗಾಧರಹಾಡಿದ:

ಶ್ಯಾಮನಾಮವ ಕೇಳಿ ರಾಧೆಯು
ಮುರಳಿ ಜೀವವ ಪಡೆಯುತ
ಎಂತು ನಿಂತಿಹಳಿತ್ತ ನೋಡೀ
ತಮಾಲ ವೃಕ್ಷವ ನೋಡುತ !

"ಮಹಿಮಚರಣ ಈ ಹಾಡನ್ನು ಕೇಳಿ ಹೇಳಿದ : 'ಈ ಹಾಡುಗಳೆಲ್ಲ ಇಲ್ಲಿ ಏಕೆ ? ನನಗೆ ಪ್ರೇಮ-ಗೀಮ ಇವೆಲ್ಲ ರುಚಿಸುತ್ತಿಲ್ಲ. ಜೊತೆಗೆ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡಿದೇನೆ. ಈ ವಿಧದ ಹಾಡುಗಳೆಲ್ಲ ಇಲ್ಲೇಕೆ ?' "

ಶ್ರೀರಾಮಕೃಷ್ಣರು ಮಾಸ್ಟರಿಗೆ : "ನೋಡಿದೆಯಾ, ಆತನಿಗೆ ಎಷ್ಟೊಂದು ಭಯ ?"

೧೪ನೆ ಮಾರ್ಚ್ ೧೮೮೬, ಫಾಲ್ಗುಣ ಶುಕ್ಲ ನವಮಿ, ಭಾನುವಾರ.

ಶ್ರೀರಾಮಕೃಷ್ಣರು ಉತ್ತರಾಭಿಮುಖರಾಗಿ ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಸಾಯಂಕಾಲವಾಗಿದೆ. ಅವರ ಕಾಯಿಲೆ ಈಗ ಜಾಸ್ತಿಯಾಗಿಬಿಟ್ಟಿದೆ. ನರೇಂದ್ರ ಮತ್ತು ರಾಖಾಲ ಅವರ ಪಾದಗಳನ್ನು ಒತ್ತುತ್ತಿದಾರೆ. ಮಾಸ್ಟರ್ ಅವರ ಹತ್ತಿರ ಕುಳಿತಿದಾನೆ. ಪರಮಹಂಸರು ಸೌಜ್ಞೆಯಿಂದ ತಮ್ಮ ಪಾದಗಳನ್ನು ಒತ್ತುವಂತೆ ಮಾಸ್ಟರಿಗೆ ತಿಳಿಸಿದರು. ಮಾಸ್ಟರ್ ಈಗ ಅವರ ಪಾದಗಳನ್ನು ಒತ್ತುತ್ತಿದಾನೆ.

ಕಳೆದ ಭಾನುವಾರ ಭಕ್ತರೆಲ್ಲರೂ ಕೂಡಿ ಪೂಜಾಪ್ರಾರ್ಥನೆಗಳಿಂದ ಪರಮಹಂಸರ ಜನ್ಮದಿನವನ್ನು ಆಚರಿಸಿದ್ದರು. ಹಿಂದಿನ ವರ್ಷ ಪರಮಹಂಸರ ಜನ್ಮಮಹೋತ್ಸವ ಬಹಳ ವಿಜೃಂಭಣೆಯಿಂದ ದಕ್ಷಿಣೇಶ್ವರದಲ್ಲಿ ನಡೆದಿತ್ತು ; ಆದರೆ ಈ ವರ್ಷ ಅವರ ದೇಹಾರೋಗ್ಯ ಸರಿಯಾಗಿಲ್ಲದೆ ಇರುವುದರಿಂದ, ಭಕ್ತರೆಲ್ಲರೂ ಬಹಳ ದುಃಖಿತರಾಗಿದಾರೆ. ಈ ಸಲ ಅವರ ಜನ್ಮಮಹೋತ್ಸವ ಹೆಸರಿಗೆ ಮಾತ್ರ ನಡೆಯಿತು.

ಶ್ರೀ ಶಾರದಾದೇವಿಯವರು ಹಗಲಿರುಳು ಪರಮಹಂಸರ ಸೇವೆಯಲ್ಲಿಯೇ ನಿರತರಾಗಿದಾರೆ. ನರೇಂದ್ರ, ರಾಖಾಲ, ನಿರಂಜನ, ಶರಚ್ಚಂದ್ರ, ಶಶಿ, ಬಾಬುರಾಮ, ಯೋಗೀಂದ್ರ, ಕಾಳಿ, ಲಾಟು ಮೊದಲಾದ ಯುವಕ ಶಿಷ್ಯರು ಪರಮಹಂಸರೊಡನೆಯೇ ವಾಸವಾಗಿದಾರೆ. ಹಿರಿಯ ಗೃಹಸ್ಥ ಭಕ್ತರು ದಿನವೂ ಬಂದು ಪರಮಹಂಸರ ದರ್ಶನ ಪಡೆದು ಹೋಗುತ್ತಿರುವುದಲ್ಲದೆ, ಅವರಲ್ಲಿ ಕೆಲವರು ತಮ್ಮ ರಾತ್ರಿಯನ್ನೂ ಆಗಾಗ ಕಾಶೀಪುರದಲ್ಲೇ

ಕಳೆಯುಬಿಡುತ್ತಾ ಇದಾರೆ. ತಾರಕ, ಸಿಂತಿಯ ಗೋಪಾಲ, ಚಿಕ್ಕ ಗೋಪಾಲ ಇವರೂ ಪರಮಹಂಸರೊಡನೆಯೇ ವಾಸಿಸುತ್ತಿದಾರೆ.

ಪರಮಹಂಸರ ಕಾಯಿಲೆ ಇಂದು ಇನ್ನೂ ಅಧಿಕವಾಗಿಬಿಟ್ಟಿದೆ. ನಡು ರಾತ್ರಿಯಾಗಿದೆ. ಚಂದ್ರನ ಬೆಳಕು ಉದ್ಯಾನವನವನ್ನು ಹಾಲು ಚೆಲ್ಲಿದೋಪಾದಿಯಲ್ಲಿ ಸುಮ್ಮನೆ ಬೆಳಗಿಸುತ್ತಿದೆ; ಆದರೆ ಭಕ್ತರ ಹೃದಯ ದಲ್ಲಿ ಮಾತ್ರ ಕಗ್ಗತ್ತಲೆ ಕವಿದಿದೆ. ಎಲ್ಲೆಲ್ಲೂ ಸೌಂದರ್ಯ ಮತ್ತು ಸೊಬಗಿನಿಂದ ಕೂಡಿದ ನಗರವನ್ನು ಶತ್ರುಗಳು ಸೈನ್ಯ ಮುತ್ತಿದ ಹಾಗೆ ಭಕ್ತರಿಗೆ ತೋರುತ್ತಿದೆ. ಎಲ್ಲೆಲ್ಲೂ ನಿಶ್ಶಬ್ದತೆ ತಾಂಡವವಾಡುತ್ತಿದೆ. ದಕ್ಷಿಣ ಮಾರುತದ ಸ್ಪರ್ಶಕ್ಕಾಗಿ ಎಲೆಗಳು ಮರ್ಮರ ಶಬ್ದವನ್ನು ಮಾಡು ತ್ತಿದ್ದುದನ್ನು ಬಿಟ್ಟುಬಿಟ್ಟರೆ ಪ್ರಕೃತಿದೇವಿ ಸೌಮ್ಯಳಾಗಿದಾಳೆ. ಪರಮ ಹಂಸರು ಎಚ್ಚೆತ್ತು ಮಲಗಿದಾರೆ. ಒಬ್ಬಿಬ್ಬರು ಭಕ್ತರು ಅವರ ಸಮೀಪದಲ್ಲಿ ನಿಶ್ಶಬ್ದರಾಗಿ ಕುಳಿತಿದಾರೆ. ಪರಮಹಂಸರು ಒಮ್ಮೊಮ್ಮೆ ತೂಕಡಿಸುತ್ತಿ ರುವಂತೆ ಕಾಣುತ್ತಿದೆ.

ಮಾಸ್ಟರ್ ಪರಮಹಂಸರ ಹತ್ತಿರ ಕುಳಿತಿದಾನೆ. ಇನ್ನೂ ಹತ್ತಿರ ಬಂದು ಕುಳಿತುಕೊಳ್ಳುವಂತೆ ಅವರು ಸೌಜ್ಞೆಮಾಡಿದರು. ಅವರು ಪಡುತ್ತಿದ್ದ ಕಷ್ಟ ಕಲ್ಲನ್ನೂ ಸಹ ಕರಗಿಸಿಬಿಡುವಂಥದಾಗಿತ್ತು. ಅವರು ಬಹಳ ಕಷ್ಟಪಟ್ಟುಕೊಂಡು ಮೆತ್ತಗೆ ಮಾಸ್ಟರಿಗೆ ಹೇಳುತ್ತಿದಾರೆ:

" ನೀವೆಲ್ಲರೂ ಅಳಲು ಆರಂಭಮಾಡಿಬಿಡುವಿರಿ ಎಂದು ಹೆದರಿ ನಾನು ಇಷ್ಟೊಂದು ಕಷ್ಟವನ್ನು ಸಹಿಸಿಕೊಂಡು ಹೋಗುತ್ತಿದೇನೆ. ಆದರೆ ನೀವೆಲ್ಲರೂ ಮನಸ್ಸುಮಾಡಿ ಹೇಳೋದಾದರೆ, ' ಇಷ್ಟೊಂದು ಕಷ್ಟಪಡುತ್ತಿದಾರೆ; ದೇಹತ್ಯಾಗವಾಗಿಬಿಡಲಿ ' ಅಂತ, ಒಡನೆಯೇ ದೇಹತ್ಯಾಗವಾಗಿಬಿಡುತ್ತದೆ."

ಪರಮಹಂಸರ ಈ ಮಾತುಗಳು ಭಕ್ತರ ಹೃದಯವನ್ನು ಸುಮ್ಮನೆ ಭೇದಿಸಿಬಿಟ್ಟವು. ಯಾರು ಅವರ ತಂದೆ, ತಾಯಿ, ರಕ್ಷಕ ಆಗಿದ್ದರೊ ಅವರ ಬಾಯಿಂದ ಈ ಮಾತುಗಳು! ಯಾವ ಉತ್ತರವನ್ನು ತಾನೆ ಕೊಟ್ಟಾರು ? ಎಲ್ಲರೂ ಸುಮ್ಮನೆ ಕುಳಿತಿದಾರೆ. ಕೆಲವರು ತಮಗೆ ತಾವೇ ಹೇಳಿಕೊಳ್ಳುತ್ತಿದಾರೆ: " ಶಿಲುಬೆಗೆ ಹಾಕುವುದು — ಭಕ್ತರಿಗಾಗಿ ದೇಹ ತ್ಯಾಗ ಮಾಡುವುದು ಎಂಬುದರ ಇನ್ನೊಂದು ನಿದರ್ಶನವೇನು ಇದು? "

ಮಧ್ಯ ರಾತ್ರಿ. ಅವರ ಕಾಯಿಲೆ ಇನ್ನೂ ಅಧಿಕವಾದ ಹಾಗೆ ಕಾಣುತ್ತಿದೆ. ಏನು ಮಾಡೋದು ಎಂದು ಭಕ್ತರು ಚಿಂತಿಸುತ್ತಿದಾರೆ.

ಆ ನಡು ರಾತ್ರಿಯಲ್ಲೇ ಒಬ್ಬ ಭಕ್ತ ಕಲ್ಕತ್ತಕ್ಕೆ ಹೊರಟ. ಡಾಕ್ಟರ್ ಉಪೇಂದ್ರನನ್ನು ಮತ್ತು ಕವಿರಾಜ ನವಗೋಪಾಲನನ್ನು ಗಿರೀಶ ತನ್ನೊಡನೆಯೇ ಕರೆದುಕೊಂಡು ತತ್‌ಕ್ಷಣವೇ ಕಾಶೀಪುರಕ್ಕೆ ಬಂದು ಸೇರಿದ.

ಭಕ್ತರು ಪರಮಹಂಸರ ಸುತ್ತಲೂ ಕುಳಿತಿದಾರೆ. ಈಗ ಸ್ವಲ್ಪ ಉತ್ತಮಗೊಂಡವರಾಗಿ ಭಕ್ತರಿಗೆ ಹೇಳುತ್ತಿದಾರೆ: "ಈ ರೋಗ ಈ ಶರೀರಕ್ಕೆ ಸೇರಿದ್ದು. ಇದು ಸ್ವಾಭಾವಿಕವಾದ್ದು; ಏಕೆಂದರೆ, ಈ ದೇಹ ಪಂಚಭೂತಗಳಿಂದ ನಿರ್ಮಿತವಾದ್ದು."

ಗಿರೀಶನ ಕಡೆಗೆ ತಿರುಗಿ ಹೇಳಿದರು: "ನಾನು ಅನೇಕ ಭಗವದ್ರೂಪಗಳನ್ನು ನೋಡುತ್ತಿದೇನೆ. ಅವುಗಳಲ್ಲಿ ಇದೂ (ಪರಮಹಂಸರದು) ಒಂದು."

೧೫ನೆ ಮಾರ್ಚ್ ೧೮೮೬, ಫಾಲ್ಗುಣ ಶುಕ್ಲ ದಶಮಿ, ಸೋಮವಾರ.

ಘಂಟೆ ಪ್ರಾತಃಕಾಲ ಏಳು. ಪರಮಹಂಸರಿಗೆ ಸ್ವಲ್ಪ ಉತ್ತಮವಾಗಿರೋಹಾಗೆ ಕಂಡುಬರುತ್ತಿದೆ. ಅವರು ಭಕ್ತರೊಡನೆ ಕೆಲವು ವೇಳೆ ಮೆತ್ತಗೆ, ಇನ್ನು ಕೆಲವು ವೇಳೆ ಸೌಜ್ಞೆಗಳ ಮೂಲಕ ಮಾತಾಡುತ್ತಿದಾರೆ. ನರೇಂದ್ರ, ರಾಖಾಲ, ಲಾಟು, ಮಾಸ್ಟರ್, ಸಿಂತಿಯ ಗೋಪಾಲ ಮತ್ತೆ ಇನ್ನೂ ಕೆಲವರು ಕೊಠಡಿಯಲ್ಲಿ ಕುಳಿತಿದಾರೆ. ಹಿಂದಿನ ರಾತ್ರಿ ಪರಮಹಂಸರು ಕಷ್ಟಪಟ್ಟಿದ್ದನ್ನು ನೋಡಿ ಅವರೆಲ್ಲರೂ ಚಿಂತಾಕ್ರಾಂತರಾಗಿ ಕುಳಿತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ನನಗೇನು ಕಾಣುತ್ತಿದೆ ಗೊತ್ತೆ? ಭಗವಂತನೇ ಎಲ್ಲವೂ ಆಗಿರುವುದಾಗಿ ಕಾಣಬರುತ್ತಿದೆ. ಮನುಷ್ಯ ಮತ್ತು ಉಳಿದ ಜೀವಜಂತುಗಳೆಲ್ಲವೂ ಚರ್ಮದಿಂದ ನಿರ್ಮಿತವಾಗಿರುವಂತೆಯೂ, ಭಗವಂತ ಅವುಗಳೊಳಗೆ ಕುಳಿತು ಕೈ, ಕಾಲು, ತಲೆ ಇವನ್ನು ಅಳ್ಳಾಡಿಸುತ್ತಿರುವಂತೆಯೂ ಕಂಡುಬರುತ್ತಿದೆ. ಹಿಂದೆ ನನಗೆ ಒಮ್ಮೆ ಇದೇ ತರದ ಅನುಭವವಾಗಿತ್ತು: ಮನೆ, ತೋಟ, ರಸ್ತೆ, ಮನುಷ್ಯ, ದನ, ಕರು ಎಲ್ಲವೂ ಒಂದೇ ವಸ್ತುವಿನಿಂದ, ಎಂದರೆ ಮೇಣದಿಂದ ನಿರ್ಮಿತವಾದಂತೆ ಕಂಡುಬಂದವು.

"ಭಗವಂತನೇ ಬಲಿಯಾಗಿಯೂ, ಬಲಿಪೀಠವಾಗಿಯೂ, ಬಲಿಕೊಡತಕ್ಕವನಾಗಿಯೂ ಕಂಡುಬರುತ್ತಿದಾನೆ."

ಪರಮಹಂಸರು ತಮಗಾಗುತ್ತಿರೋ ಈ ಅನುಭವಗಳನ್ನು ವರ್ಣಿಸು

ತ್ತಿದ್ದ ಹಾಗೆಯೆ ಭಾವದಿಂದ ತುಂಬಿತುಳುಕಾಡುತ್ತ ಹೇಳುತ್ತಿದಾರೆ: "ಆಹ! ಆಹ!"

ಒಡನೆಯೇ ಭಾವಾವಿಷ್ಟರಾಗಿ ಬಾಹ್ಯಜ್ಞಾನ ಶೂನ್ಯರಾಗಿಬಿಟ್ಟಿದಾರೆ. ಭಕ್ತರು ಕಿಂಕರ್ತವ್ಯವಿಮೂಢರಾಗಿ ಸುಮ್ಮನೆ ಕುಳಿತಿದಾರೆ.

ಪರಮಹಂಸರು ಕಿಂಚಿತ್ ಪ್ರಕೃತಿಸ್ಥರಾಗಿ ಹೇಳುತ್ತಿದಾರೆ: "ಈಗ ನನಗೆ ಯಾವ ನೋವು-ಗೀವು ಏನೂ ಇಲ್ಲ; ಮತ್ತೆ ಎಂದಿನಂತೆ ಆಗಿಬಿಟ್ಟಿದೇನೆ."

ಪರಮಹಂಸರ ಸುಖದುಃಖಗಳಿಗತೀತವಾದ ಈ ಅವಸ್ಥೆಯನ್ನು ನೋಡಿ ಭಕ್ತರೆಲ್ಲರು ವಿಸ್ಮಿತರಾಗಿ ಕುಳಿತಿದಾರೆ.

ಪರಮಹಂಸರು ಲಾಟುವಿನ ಕಡೆ ದೃಷ್ಟಿ ಹಾಕಿ ಹೇಳುತ್ತಿದಾರೆ: "ಅಲ್ಲಿ ನೋಡಿ ಲಾಟೂನ. ತಲೆಗೆ ಕೈಕೊಟ್ಟು ಕುಳಿತಿದಾನೆ. ಭಗವಂತನೇ ಹಾಗೆ ತಲೆಗೆ ಕೈಕೊಟ್ಟು ಕುಳಿತಿದಾನೆ."

ಪರಮಹಂಸರು ಭಕ್ತರ ಕಡೆ ನೋಡುತ್ತಿದಾರೆ. ಅವರ ವಾತ್ಸಲ್ಯ ಪ್ರೇಮ ಸಹಸ್ರಮಡಿಯಾಗಿ ಉಕ್ಕಿ ಉಕ್ಕಿ ಹರಿಯುತ್ತಿರುವುದೋ ಏನೊ ಎಂಬಂತೆ ಕಾಣುತ್ತಿದೆ. ತಾಯಿ ಶಿಶುವನ್ನು ಆದರಿಸೋ ರೀತಿಯಲ್ಲಿ ಅವರು ನರೇಂದ್ರನ ಮತ್ತು ರಾಖಾಲನ ಕೆನ್ನೆ ಮತ್ತು ಗಲ್ಲಗಳನ್ನು ಹಿಡಿದು ಹಿಡಿದು ಆದರ ತೋರಿಸುತ್ತಿದಾರೆ.

ಕೆಲವು ನಿಮಿಷಗಳಾದ ಮೇಲೆ ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ: "ಈ ಶರೀರ ಇನ್ನೂ ಸ್ವಲ್ಪ ಕಾಲ ಬದುಕಿಕೊಂಡಿರುವುದೇ ಆಗಿದ್ದರೆ, ಇನ್ನೂ ಅನೇಕರ ಆತ್ಮಜಾಗೃತಿ ಉಂಟಾಗಿಬಿಡುತ್ತಿತ್ತು."

ಈಗ ಒಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು.

ಪರಮಹಂಸರು ಮತ್ತೆ ಹೇಳುತ್ತಿದಾರೆ: "ಇನ್ನು ಭಗವಂತ ಈ ಶರೀರವನ್ನು ಉಳಿಸಿಡೋದಿಲ್ಲ."

ಪರಮಹಂಸರ ಬಾಯಿಂದ ಮತ್ತೆ ಏನು ಬರುವುದೋ ಎಂಬುದನ್ನು ಕೇಳಲು ಭಕ್ತರು ಕಾತರರಾಗಿ ಕುಳಿತಿದಾರೆ.

ಪರಮಹಂಸರು ಮತ್ತೆ ಹೇಳುತ್ತಿದಾರೆ: "ಇನ್ನು ಈ ಶರೀರವನ್ನು ಭಗವಂತ ಬದುಕಿಸಿಡೋದಿಲ್ಲ. ನಾನು ಸರಳ ಮತ್ತು ಏನೂ ತಿಳಿಯದವನಾಗಿರೋದನ್ನು ನೋಡಿ ನನ್ನಿಂದ ಎಲ್ಲವನ್ನೂ ಜನರು ಕಸಿದುಕೊಂಡುಬಿಡಬಹುದೆಂದು ಮತ್ತು ಏನೂ ಅರಿಯದವನಾಗಿರೋದರಿಂದ ನಾನು ಎಲ್ಲ

ವನ್ನೂ ಎಲ್ಲರಿಗೂ ಹಂಚಿಬಿಡಬಹುದೆಂದು ಭಾವಿಸಿ ಈ ಶರೀರವನ್ನು ಆತ ಇನ್ನು ಬದುಕಿಸಿಡೋದಿಲ್ಲ. ನೋಡಿ, ಈ ಕಲಿಯುಗದಲ್ಲಿ ಜನರಿಗೆ ಜಪ ಧ್ಯಾನ ಹಿಡಿಸುತ್ತಿಲ್ಲ.''

ರಾಖಾಲ ಪ್ರೀತಿಯಿಂದ: ''ನಿಮ್ಮ ಈ ಶರೀರವನ್ನು ಇನ್ನೂ ಸ್ವಲ್ಪ ಕಾಲ ಬದುಕಿಸಿಡೋವಂತೆ ನೀವು ಭಗವಂತನಿಗೆ ಹೇಳಿ.''

ಶ್ರೀರಾಮಕೃಷ್ಣರು: ''ಅದು ಭಗವಂತನ ಇಚ್ಛೆಯನ್ನು ಅವಲಂಬಿಸಿದೆ.''

ನರೇಂದ್ರ: ''ನಿಮ್ಮ ಇಚ್ಛೆ, ಭಗವಂತನ ಇಚ್ಛೆ ಎರಡೂ ಒಂದೇ ಆಗಿಹೋಗಿವೆ.''

ಪರಮಹಂಸರು ಏನನ್ನೊ ಯೋಚಿಸುತ್ತಿರೋರ ಹಾಗೆ ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು ನರೇಂದ್ರ, ರಾಖಾಲ ಮತ್ತು ಉಳಿದವರಿಗೆ: ''ನಾನು ಭಗವಂತನಿಗೆ ಹೇಳಿದರೆ, ಇನ್ನು ಏನೂ ಸಾರ್ಥಕವಾಗೋ ಹಾಗಿಲ್ಲ. ಈಗ ನೋಡುತ್ತಾ ಇದೇನೆ ನಾನೂ ಭಗವತಿ ಒಂದೇ ಆಗಿರೋ ಹಾಗೆ. ರಾಧೆ ತನ್ನ ಅತ್ತಿಗೆಯ ಭಯಕ್ಕಾಗಿ ಶ್ರೀಕೃಷ್ಣನಿಗೆ ಹೇಳಿದಳು: 'ನನ್ನ ಅಂತರ್ಯದಲ್ಲೇ ಇದ್ದುಬಿಡು.' ಆದರೆ ಮತ್ತೆ ಆಕೆ ಆತನ ದರ್ಶನಕ್ಕಾಗಿ ವ್ಯಾಕುಲಪಟ್ಟಾಗ— ಆಕೆಯ ವ್ಯಾಕುಲತೆ ಅಂಥದು, ಆಕೆಯ ಪ್ರಾಣ ತನ್ನ ಪ್ರಾಣವಲ್ಲಭನ ದರ್ಶನಕ್ಕಾಗಿ ಸುಮ್ಮನೆ ಹೊರಳಾಡುತ್ತಿತ್ತು— ಆತ ಆಕೆಯ ಹೃದಯವನ್ನು ಬಿಟ್ಟು ಹೊರಕ್ಕೆ ಬರಲಿಚ್ಛಿಸಲಿಲ್ಲ.''

ರಾಖಾಲ ಮೆತ್ತಗೆ ಭಕ್ತರಿಗೆ: ''ಇವರು ಗೌರಾಂಗನ ಅವತಾರದ ಸಂಬಂಧವಾಗಿ ಹೇಳುತ್ತಿದಾರೆ.''

ಭಕ್ತರು ನಿಶ್ಶಬ್ದರಾಗಿ ಕುಳಿತಿದಾರೆ. ಪರಮಹಂಸರು ಭಕ್ತರ ಕಡೆ ಪ್ರೇಮದೃಷ್ಟಿಯಿಂದ ನೋಡುತ್ತಿದಾರೆ. ಈಗ ಅವರು ತಮ್ಮ ಎದೆಯ ಮೇಲೆ ಕೈ ಇಟ್ಟುಕೊಂಡಿದಾರೆ. ಬಹುಶಃ ಏನೊ ಹೇಳಬಹುದು ಅಂತ ತೋರುತ್ತಿದೆ.

ಶ್ರೀರಾಮಕೃಷ್ಣರು ನರೇಂದ್ರಾದಿಗಳಿಗೆ: ''ಇದರ ಒಳಗೆ ಇಬ್ಬರಿದಾರೆ. ಒಬ್ಬ ವ್ಯಕ್ತಿ, ಭಗವತಿ—''

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು.

ಅವರ ಬಾಯಿಂದ ಇನ್ನೇನು ಹೊರಡುವುದೊ ಎಂದು ಭಕ್ತರು ಆಕಾಂಕ್ಷಿತ ರಾಗಿ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಒಬ್ಬ ವ್ಯಕ್ತಿ, ಆಕೆ; — ಇನ್ನೊಬ್ಬ ವ್ಯಕ್ತಿ, ಆಕೆಯ ಭಕ್ತ. ಕೈ ಮುರಿದುಕೊಂಡಿದ್ದವ ಆಕೆಯ ಭಕ್ತ; ಆ ಭಕ್ತನಿಗೆ ಈಗ ಕಾಯಿಲೆ ಆಗಿದೆ. ಅರ್ಥವಾಯಿತೆ?"

ಭಕ್ತರು ಸುಮ್ಮನೆ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ಅಯ್ಯೋ! ಇದನ್ನೆಲ್ಲ ನಾನು ಯಾರಿಗೆ ತಾನೆ ಹೇಳಿಕೊಳ್ಳಲಿ? ಯಾರಿಗೆ ತಾನೆ ಅರ್ಥಮಾಡಿಕೊಳ್ಳಲು ಶಕ್ತಿ ಇದೆ?"

ಒಂದು ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಹೇಳುತ್ತಿದಾರೆ:

"ಭಗವಂತ ಮನುಷ್ಯದೇಹಧಾರಣೆಮಾಡಿಕೊಂಡು — ಅವತಾರ ಪುರುಷನಾಗಿ — ಭಕ್ತರೊಡನೆ ಧರೆಗೆ ಬರುತ್ತಾನೆ. ಆತ ಹಿಂದಿರುಗೋವಾಗ ಭಕ್ತರೂ ಆತನೊಡನೆ ಮತ್ತೆ ಹಿಂದಿರುಗಿಹೊರಟುಹೋಗುತ್ತಾರೆ."

ರಾಖಾಲ: "ಅದಕ್ಕಾಗಿಯೇ ನಾವು ಪ್ರಾರ್ಥನೆಮಾಡಿಕೊಳ್ಳುತ್ತಿದೇವೆ ನಮ್ಮನ್ನು ಇಲ್ಲೇ ಬಿಟ್ಟು ನೀವು ಹೊರಟುಹೋಗಕೂಡದು ಅಂತ."

ಪರಮಹಂಸರು ನಸುನಗು ನಕ್ಕು ಹೇಳುತ್ತಿದಾರೆ:

"ಭಜನೆಯ ಒಂದು ಗುಂಪು ಇದ್ದಕ್ಕಿದ್ದಹಾಗೆ ಬಂತು, ನರ್ತಿಸಿತು, ಹಾಡಿತು ಮತ್ತು ಇದ್ದಕ್ಕಿದ್ದಹಾಗೆ ಹೊರಟೂ ಹೋಯಿತು. ಅವರು ಬಂದರು, ಮತ್ತೆ ಹೊರಟೂ ಹೋದರು. ಅವರು ಯಾರು ಏನು ಎಂಬುದು ಯಾರಿಗೂ ಗೊತ್ತಾಗಲಿಲ್ಲ."

ಪರಮಹಂಸರು ಮತ್ತು ಉಳಿದವರೆಲ್ಲರು ಮುಗುಳುನಗೆ ನಕ್ಕರು.

ಕೆಲವು ನಿಮಿಷಗಳನಂತರ ಮತ್ತೆ ಪರಮಹಂಸರು ಹೇಳುತ್ತಿದಾರೆ:

"ದೇಹಧಾರಣೆಮಾಡಿಕೊಂಡರೆ ಕಷ್ಟವನ್ನು ಅನುಭವಿಸಲೇಬೇಕು. ಅದು ಅದರ ಹಿಂಬಾಲಕ.

"ಒಮ್ಮೊಮ್ಮೆ ನನಗೆ ನಾನೇ ಹೇಳಿಕೋತೇನೆ: 'ಮತ್ತೆ ನಾನು ಈ ಧರೆಗೆ ಬರದೆ ಇರುವಂತಾಗಲಿ!' ಆದರೆ ಒಂದು ವಿಷಯ. ಔತಣದ ಊಟ ಮಾಡಿ ಮಾಡಿ, ಮನೆಯ ಗೊಡ್ಡು ಸಾರು ಅನ್ನ ರುಚಿಸದು.

"ಜೊತೆಗೆ ಈ ದೇಹಧಾರಣೆ ಭಕ್ತರಿಗಾಗಿ."

ಪರಮಹಂಸರು ನರೇಂದ್ರನ ಕಡೆ ಪ್ರೀತಿಯಿಂದ ನೋಡುತ್ತಾ ಇದಾರೆ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ಒಬ್ಬ ಚಂಡಾಲ ಮಾಂಸವನ್ನು ಹೊತ್ತುಕೊಂಡುಹೋಗುತ್ತಿದ್ದ. ಶಂಕರಾಚಾರ್ಯರು ಗಂಗಾಸ್ನಾನ ಮಾಡಿ ಬೀದಿಯಲ್ಲಿ ಹೋಗುತ್ತಿದ್ದರು. ಚಂಡಾಲ ಇದ್ದಕ್ಕಿದ್ದಹಾಗೆ ಅವರನ್ನು ಮುಟ್ಟಿಬಿಟ್ಟ. ಅವರು ಕೋಪಿಸಿಕೊಂಡು ಹೇಳಿದರು: 'ಏನಿದು! ನೀನು ನನ್ನನ್ನು ಮುಟ್ಟಿಬಿಟ್ಟೆಯಲ್ಲ!' ಆತ ಹೇಳಿದ: 'ಪೂಜ್ಯರೆ, ನಾನೂ ನಿಮ್ಮನ್ನು ಮುಟ್ಟಲಿಲ್ಲ, ನೀವೂ ನನ್ನನ್ನು ಮುಟ್ಟಲಿಲ್ಲ. ವಿಚಾರಮಾಡಿ ನೋಡಿ: ನೀವು ದೇಹವೆ, ಮನಸ್ಸೆ, ಬುದ್ಧಿಯೆ? ನೀವು ಏನು ಎಂಬುದನ್ನು ವಿಚಾರಮಾಡಿ ನೋಡಿ. ನೀವು ನಿರ್ಲಿಪ್ತ ಶುದ್ಧ ಆತ್ಮ; ಸತ್ತ್ವ, ರಜಸ್ಸು, ತಮಸ್ಸು— ಈ ಯಾವ ಗುಣಗಳಿಂದಲೂ ಅದು ಲಿಪ್ತವಾಗಿಲ್ಲ.'

"ಬ್ರಹ್ಮ ಯಾವ ರೀತಿಯಾಗಿ ಇದಾನೆ ಎಂಬುದು ಗೊತ್ತೆ? ಉದಾಹರಣೆಗೆ ಗಾಳಿ. ಸುಗಂಧ, ದುರ್ಗಂಧ ಎರಡನ್ನೂ ಹೊತ್ತುತರುತ್ತದೆ. ಆದರೆ ಅದು ಮಾತ್ರ ಅವುಗಳಿಂದ ನಿರ್ಲಿಪ್ತ."

ನರೇಂದ್ರ: "ಹೌದು, ನಿಜ."

ಶ್ರೀರಾಮಕೃಷ್ಣರು: "ಆತ ಗುಣಾತೀತ, ಮಾಯಾತೀತ— ವಿದ್ಯಾಮಾಯೆ, ಅವಿದ್ಯಾಮಾಯೆ ಇವೆರಡಕ್ಕೂ ಅತೀತ. ಕಾಮಕಾಂಚನವೇ ಅವಿದ್ಯಾಮಾಯೆ. ಜ್ಞಾನ, ವೈರಾಗ್ಯ, ಭಕ್ತಿ ಇವು ವಿದ್ಯಾಮಾಯೆಯ ಸಂಪತ್ತು. ಶಂಕರಾಚಾರ್ಯರು ವಿದ್ಯಾಮಾಯೆಯನ್ನು ಆಶ್ರಯಿಸಿದ್ದರು. ನೀನು ಮತ್ತು ಇವರೆಲ್ಲರೂ ನನಗಾಗಿ ಚಿಂತಿಸುತ್ತಾ ಇದೀರಿ. ಈ ಭಾವನೆ ವಿದ್ಯಾಮಾಯೆಗೆ ಸೇರಿದ್ದು.

"ವಿದ್ಯಾಮಾಯೆಯನ್ನು ಹಿಡಿದು ಹಿಡಿದು ಮುಂದುವರಿದರೆ ಬ್ರಹ್ಮಜ್ಞಾನ ದೊರೆಯುತ್ತದೆ. ವಿದ್ಯಾಮಾಯೆಯೇ ಮೆಟ್ಟಿಲಸಾಲ ಕೊನೆಯ ಹಂತಗಳು. ಅವನ್ನು ಹತ್ತಿದೊಡನೆಯೇ ಚಾವಣಿ. ಕೆಲಕೆಲವರು ಚಾವಣಿಗೆ ಹತ್ತಿದ ಮೇಲೆ, ಅಲ್ಲಿಂದ ಮೆಟ್ಟಿಲಸಾಲ ಮೂಲಕ ಇಳಿದು ಹತ್ತಿ ಮಾಡುತ್ತಲೇ ಇರುತ್ತಾರೆ,— ಬ್ರಹ್ಮಜ್ಞಾನ ದೊರೆತನಂತರವೂ 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿರುತ್ತಾರೆ. ಅವರು ಅದನ್ನು ಲೋಕಶಿಕ್ಷಣಕ್ಕಾಗಿಯೂ, ಭಕ್ತಿಯನ್ನು ಆಸ್ವಾದಿಸಲೋಸುಗವಾಗಿಯೂ, ಭಕ್ತರೊಡನೆ ಆನಂದಪಡಲೋಸುಗವಾಗಿಯೂ ಇಟ್ಟುಕೊಂಡಿರುತ್ತಾರೆ."

ನರೇಂದ್ರ: "ತ್ಯಾಗದ ವಿಷಯವನ್ನು ಎತ್ತಿದೆನೆಂದರೆ, ಕೆಲಕೆಲವರು ನನ್ನ ಮೇಲೆ ಸುಮ್ಮನೆ ಕೋಪಿಸಿಕೊಂಡುಬಿಡುತ್ತಾರೆ."

ಶ್ರೀರಾಮಕೃಷ್ಣರು ಮೃದುಸ್ವರದಿಂದ: "ತ್ಯಾಗ ಆವಶ್ಯಕ. (ತಮ್ಮ ಶರೀರದ ಅಂಗಪ್ರತ್ಯಂಗಗಳ ಕಡೆ ತೋರಿಸಿ) "ಇವುಗಳಲ್ಲಿ ಒಂದನ್ನು ಇನ್ನೊಂದರ ಮೇಲೆ ಇಟ್ಟಿದ್ದರೆ, ಮೊದಲನೆಯದು ಬೇಕಾಗಿದ್ದರೆ ಎರಡನೆಯದನ್ನು ಸರಿಸಬೇಡವೆ? ಒಂದನ್ನು ತೆಗೆದಿಡದೆ ಇನ್ನೊಂದು ದೊರೆಯುವುದೆ?"

ನರೇಂದ್ರ: "ಹೌದು, ನಿಶ್ಚಯ."

ಶ್ರೀರಾಮಕೃಷ್ಣರು ಮೃದುಸ್ವರದಿಂದ ನರೇಂದ್ರನಿಗೆ: "ಎಲ್ಲವೂ ಭಗವನ್ಮಯವಾಗಿ ಕಾಣೋವಾಗ ಬೇರೆ ಏನನ್ನಾದರೂ ನೋಡಲಾಗುವುದೆ?"

ನರೇಂದ್ರ: "ಸಂಸಾರವನ್ನು ತ್ಯಾಗಮಾಡಲೇ ಬೇಕಾಗುತ್ತದೆ, ಅಲ್ಲವೇನು?"

ಶ್ರೀರಾಮಕೃಷ್ಣರು: "ಈಗ ತಾನೆ ಹೇಳಿದೆನಲ್ಲ: 'ಎಲ್ಲವೂ ಭಗವನ್ಮಯವಾಗಿ ಕಾಣೋವಾಗ ಬೇರೆ ಏನನ್ನಾದರೂ ನೋಡಲಾಗುವುದೆ?' ಆಗ ಸಂಸಾರ-ಗಿಂಸಾರ ಯಾವುದನ್ನಾದರೂ ನೋಡಲಾಗುವುದೆ?

"ಆದರೆ ಮಾನಸಿಕವಾಗಿ ತ್ಯಜಿಸಬೇಕು. ಇಲ್ಲಿಗೆ ಯಾರು ಬರುತ್ತಾ ಇದಾರೊ, ಅವರಲ್ಲಿ ಯಾರೂ ಸಂಸಾರಿಗಳಲ್ಲ. ಹೆಂಗಸಿನ ಸಹವಾಸ ಮಾಡಬೇಕು ಅಂತ ಎಲ್ಲೊ ಕೆಲವರಿಗೆ ಒಂದು ಕಿಂಚಿತ್ ಇಚ್ಛೆ ಇತ್ತು. (ರಾಖಾಲ, ಮಾಸ್ಟರ್ ಮೊದಲಾದವರು ಸ್ವಲ್ಪ ಮುಗುಳುನಗೆ ನಕ್ಕರು.) ಅದೊಂದಿಷ್ಟು ಇಚ್ಛೆ ಆಗಲೆ ಅವರಿಗೆ ಪೂರ್ಣವಾಗಿ ಹೋಗಿದೆ."

ಪರಮಹಂಸರು ನರೇಂದ್ರನ ಕಡೆ ನೋಡುತ್ತಿದಾರೆ. ಆತನನ್ನು ನೋಡುತ್ತ ನೋಡುತ್ತ ಇದ್ದಹಾಗೆ ಆನಂದದಿಂದ ತುಂಬಿತುಳುಕಾಡಲಾರಂಭಿಸಿದಾರೆ. ಭಕ್ತರ ಕಡೆ ನೋಡಿ ಹೇಳುತ್ತಿದಾರೆ: "ಭೇಷ್!"

ನರೇಂದ್ರ ಮುಗುಳುನಗೆ ನಗುತ್ತ ಪರಮಹಂಸರನ್ನು ಕೇಳುತ್ತಾನೆ: "ಯಾವುದು ಭೇಷ್ ಆದ್ದು?"

ಶ್ರೀರಾಮಕೃಷ್ಣರು ನಸುನಗೆ ನಕ್ಕು: "ಮಹಾ ತ್ಯಾಗಕ್ಕೆ ಸಿದ್ಧತೆ ನಡೆಯುತ್ತಿದೆ."

ನರೇಂದ್ರ ಮತ್ತು ಉಳಿದವರೆಲ್ಲರು ಸುಮ್ಮನೆ ಕುಳಿತುಕೊಂಡು

ಪರಮಹಂಸರ ಕಡೆ ನೋಡುತ್ತಿದ್ದಾರೆ. ಈಗ ರಾಖಾಲ ಮಾತಾಡಲು ಆರಂಭಿಸಿದ.

ರಾಖಾಲ ನಗುತ್ತ ಪರಮಹಂಸರಿಗೆ: "ನರೇಂದ್ರನಿಗೆ ನೀವು ಹೇಳೋದೆಲ್ಲ ಈಗ ಆತನಿಗೆ ಬಹಳ ಚೆನ್ನಾಗಿ ಅರ್ಥವಾಗಲು ಹತ್ತಿದೆ."

ಶ್ರೀರಾಮಕೃಷ್ಣರು ನಗುತ್ತ: "ಹೌದು, ನರೇಂದ್ರನೊಬ್ಬನಿಗೇ ಏಕೆ, ಉಳಿದವರಿಗೂ. (ಮಾಸ್ಟರಿಗೆ) ಅಲ್ಲವೇನು?"

ಮಾಸ್ಟರ್: "ಹೌದು."

ಪರಮಹಂಸರು ನರೇಂದ್ರನ ಮತ್ತು ಮಾಸ್ಟರ್ ಕಡೆ ದೃಷ್ಟಿ ಹಾಕಿ ಕೈ ಸನ್ನೆಯ ಮೂಲಕ ಉಳಿದ ಭಕ್ತರ ಮನಸ್ಸನ್ನು ಅವರ ಕಡೆಗೆ ಎಳೆದರು. ಮೊದಲು ನರೇಂದ್ರನನ್ನು ತೋರಿಸಿ ಬಳಿಕ ಮಾಸ್ಟರನ್ನು ತೋರಿಸಿದರು. ರಾಖಾಲ ಪರಮಹಂಸರ ಸನ್ನೆಯನ್ನು ಅರ್ಥಮಾಡಿಕೊಂಡು ಅವರಿಗೆ ನಗುತ್ತ ಹೇಳುತ್ತಿದ್ದಾನೆ: "ನರೇಂದ್ರನದು ವೀರಭಾವ, ಈತನದು (ಮಾಸ್ಟರದು) ಸಖೀಭಾವ ಅಂತ ನಿಮ್ಮ ಅಭಿಪ್ರಾಯವಲ್ಲವೆ?"

ಶ್ರೀರಾಮಕೃಷ್ಣರು ನಕ್ಕರು.

ನರೇಂದ್ರ ನಗುತ್ತ: "ಇವರಿಗೆ (ಮಾಸ್ಟರಿಗೆ) ಹೆಚ್ಚಾಗಿ ಮಾತನಾಡೋ ಸ್ವಭಾವವಿಲ್ಲ; ಜೊತೆಗೆ ನಾಚಿಕೆ ಬೇರೆ. ಅದಕ್ಕಾಗೇ ಏನು ನೀವು ಹಾಗೆ ಹೇಳುತ್ತಿರೋದು?"

ಶ್ರೀರಾಮಕೃಷ್ಣರು ನಗುತ್ತ ನರೇಂದ್ರನಿಗೆ: "ಒಳ್ಳೆಯದು, ನನ್ನದು ಎಂಥ ಭಾವ?"

ನರೇಂದ್ರ: "ನಿಮ್ಮದು ವೀರಭಾವ, ಸಖೀಭಾವ,—ಮತ್ತೆ ಎಲ್ಲಾ ಭಾವಗಳೂ."

ನರೇಂದ್ರನ ಈ ಮಾತುಗಳನ್ನು ಕೇಳಿ ಪರಮಹಂಸರು ಭಾವದಿಂದ ತುಂಬಿತುಳುಕಾಡಲಾರಂಭಿಸಿದಾರೆ. ಈಗ ಅವರು ತಮ್ಮ ಎದೆಯಮೇಲೆ ಕೈ ಇಟ್ಟುಕೊಂಡು ಏನೊ ಹೇಳುವುದರಲ್ಲಿದಾರೆ.

ಅವರು ನರೇಂದ್ರನಿಗೆ ಮತ್ತು ಉಳಿದ ಭಕ್ತರಿಗೆ:

"ನೋಡುತ್ತಾ ಇದೇನೆ ಎಲ್ಲಾ — ಇರುವುದೆಲ್ಲಾ — ಇದರಿಂದ ಬಂದಿರುವುದಾಗಿ."

ಪರಮಹಂಸರು ಸೌಜ್ಞೆಯ ಮೂಲಕ ನರೇಂದ್ರನಿಗೆ: "ನೀನು ಏನು ಅರ್ಥಮಾಡಿಕೊಂಡೆ ಹೇಳು ನೋಡೋಣ?"

ನರೇಂದ್ರ: "ಸೃಷ್ಟವಾದುದೆಲ್ಲವೂ ನಿಮ್ಮಿಂದಲೇ ಬಂದಿದೆ."

ಅವರ ಮುಖ ಆನಂದದಿಂದ ಬೆಳಗಲಾರಂಭಿಸಿತು. ಅವರು ರಾಖಾಲನಿಗೆ ಹೇಳುತ್ತಿದ್ದಾರೆ: "ನರೇಂದ್ರ ಹೇಳಿದ್ದನ್ನು ಕೇಳಿದೆಯಾ?"

ಪರಮಹಂಸರು ನರೇಂದ್ರನಿಗೆ ಹಾಡುವಂತೆ ಹೇಳಿದರು. ನರೇಂದ್ರ ಒಂದು ಸ್ತೋತ್ರಕ್ಕೆ ಸ್ವರ ಕೊಟ್ಟು ಹಾಡಲಾರಂಭಿಸಿದ್ದಾನೆ. ಆತನ ಮನಸ್ಸು ತ್ಯಾಗಭರಿತವಾಗಿದೆ. ಆತ ಹಾಡುತ್ತಿದ್ದಾನೆ:

ನಲಿನೀದಲಗತಜಲಮತಿತರಲಂ ತದ್ವಜ್ಜೀವಿತಮತಿಶಯಚಪಲಮ್ ।
ವಿದ್ಧಿ ವ್ಯಾಧ್ಯಭಿಮಾನಗ್ರಸ್ತಂ ಲೋಕಂ ಶೋಕಹತಂ ಚ ಸಮಸ್ತಮ್

ನರೇಂದ್ರ ಇದರ ಒಂದೆರಡು ಚರಣಗಳನ್ನು ಹಾಡುವುದರೊಳಗಾಗೇ ಪರಮಹಂಸರು ಆತನಿಗೆ ಸನ್ನೆಯ ಮೂಲಕ ಹೇಳುತ್ತಿದ್ದಾರೆ: "ಏನು ನೀನು ಹಾಡುತ್ತಿರೋದು? ಇದು ಬಹಳ ಸಾಮಾನ್ಯವಾದ್ದು."

ನರೇಂದ್ರ ಈಗ ಸಖೀಭಾವದ ಸಂಬಂಧವಾಗಿ ಹಾಡಲಾರಂಭಿಸಿದ್ದಾನೆ:

ಉಳಿವು-ಅಳಿವಿನ ಪರಿಯದೆಂತೋ ಬಲು ವಿಚಿತ್ರವೆ, ಪ್ರಿಯ ಸಖಿ!
ನನ್ನ ಒಲವಿನ ವ್ರಜ ಕಿಶೋರನು
ಹೋದಮೇಲಿನ್ನೆಂತು ಜೀವವ
ನಾನು ಧರಿಸಿರಬಲ್ಲೆನು?
ನನ್ನ ಮೀರಿದ ಚೆಲುವೆಯರ ಜೊತೆಗೆನ್ನಮಾಧವ ಹೋದನು.
ರೂಪವಿಲ್ಲದ ನನ್ನನೀತೆರ ಅವನು ಮರತೇಬಿಟ್ಟನು!

ಯಾರು ಊಹಿಸಬಲ್ಲರೇ ಸಖಿ — ಯಾರು ಊಹಿಸಬಲ್ಲರು?
ದಿವ್ಯ ಪ್ರೇಮಿಯು ಕೂಡ ಈ ತೆರ
ಬಾಹ್ಯ ರೂಪಕೆ ಮಾರುಹೋಗುತ
ತಿರುಕನಂದದಿ ನಡೆವನೆಂಬುದ ಯಾರು ಊಹಿಸಬಲ್ಲರು?
ಅವನು ಇಂಥವನೆಂದು ಮೊದಲೇ ನಾನು ಕಾಣದೆಹೋದೆನು.
ಅವನ ರೂಪಕೆ ಮರುಳುಗೊಂಡೆನು; ಅವನ ಪಾದವನೆನ್ನ ಎದೆಯಲಿ
ಹಿಡಿವ ಒಂದೇ ಒಂದು ಬಯಕೆಯ
ನಾನು ಪೋಷಿಸಿಕೊಂಡೆನು!

---

* ದ್ವಾದಶಪಂಜರಿಕಾಸ್ತೋತ್ರಮ್ – ೧೦. ೩ನೆ ಪರಿಶಿಷ್ಟದಲ್ಲಿ ೧೧ನ್ನು ನೋಡಿ.

ಕಡೆಗೆ ಉಳಿದಿಹುದೊಂದೆ ದಾರಿಯು: ಯಮುನೆಯಲಿ ನಾ ಮುಳುಗುವೆ
ಅಥವಾ ಗರಳವ ಕುಡಿಯುವೆ,
ಇಲ್ಲದಿರಲೀ ತಮಾಲ ತರುವೊಳು
ಬಳ್ಳಿಯೊಂದನು ಉರುಳುಗೈದೀ
ನನ್ನ ಜೀವವ ತೊರೆಯುವೆ.
ಕಡೆಗೆ ಓ ಸಖಿ—ಇನಿತು ಯತ್ನಗಳೆಲ್ಲ ನನ್ನನು ಕೊಲದಿರೆ,
ಶ್ಯಾಮನಾಮವ ಜಪಿಸಿ ಜಪಿಸೀ ಕಡೆಗೆ ಹರಣವ ನೀಗುವೆ !

ಈ ಹಾಡನ್ನು ಕೇಳಿ ಪರಮಹಂಸರು ಮತ್ತು ಭಕ್ತರು ಬಹಳವಾಗಿ ಅನುಕಂಪಿತರಾಗಿದಾರೆ. ಪರಮಹಂಸರ ಮತ್ತು ರಾಖಾಲನ ಕಣ್ಣುಗಳಲ್ಲಿ ಪ್ರೇಮಾಶ್ರು ಸುರಿಯುತ್ತಿದೆ. ನರೇಂದ್ರ ವ್ರಜಗೋಪಿಯರ ಭಾವದಿಂದ ಉನ್ಮತ್ತನಾಗಿ ಕೀರ್ತನ ಸ್ವರದಿಂದ ಹಾಡಲಾರಂಭಿಸಿದಾನೆ:

ಓ ನನ್ನ ಪ್ರಿಯತಮನೆ ಘನಶ್ಯಾಮಸುಂದರನೆ
ಏನು ಹೇಳಲಿ ನಿನಗೆ ಮತ್ತೆ ನಾನು ?
ನಾನೋರ್ವ ನಿರ್ಭಾಗ್ಯ ಅಬಲೆಯಾದುದರಿಂದ
ಏನ ಹೇಳಲು ನನಗೆ ತೋರದಿಹುದು.
ಅಂಗೈಯ ಕನ್ನಡಿಯ ರೀತಿಯಲಿ ನೀನಿರುವೆ
ನನ್ನ ಮುಡಿಗಿಡುವಂಥ ಹೂವಿನಂತಿರುವೆ !
ಓವೊ ಸಖ ನಾ ನಿನ್ನ
ಒಂದು ಹೂವನು ಮಾಡಿ ಮುಡಿಯೊಳಿಡುವೆ.
ನಿನ್ನನಾರೂ ಮತ್ತೆ ಕಾಣದಿಹ ರೀತಿಯಲಿ
ನನ್ನ ಜಡೆಯೊಳು ನಿನ್ನ ಅಡಗಿಸಿಡುವೆ !
ತಾಂಬೂಲದಂತಿರುವೆ, ಎಲೆ ಇನಿಯ ನೀನೆನಗೆ
ಕಣ್ಣಿಗಂಜನದಂತೆ ತೋರುತಿರುವೆ.
ಓವೊ ಸಖ ನಿನ್ನ ನಾ ತುಟಿಗೆ ಲೇಪಿಸಿಕೊಳುವೆ
ನನ್ನ ಕಣ್ಣಿಗೆ ನಿನ್ನ ಬಳಿದುಕೊಳುವೆ !
ಮಗಮಗಿಪ ಶ್ರೀಗಂಧದಂತಿರುವೆ ಓ ನಲ್ಲ,
ಕೊರಳ ಕಂಠೀಹಾರದಂತೆ ಇರುವೆ !
ನಿನ್ನ ನಾ ಮೈಗೆಲ್ಲ ಬಳಿದು ದೇಹಾತ್ಮಗಳ
ಸಂತಪಿದುವೆ.

ಕೊರಳಹಾರವ ಮಾಡಿ ಹಾಕಿಕೊಳುವೆ.
ತುಡಿತುಡಿವ ನನ್ನೆದೆಯು
ಮೇಲಿರುತ ನಿತ್ಯವೂ
ಅದರ ತುಡಿತವ ನೀನು ಕೇಳುತಿರುವೆ !

ನನ್ನೆದೆಯು ನಿಧಿ ನೀನು
ನನ್ನ ಮನೆ ದೈವ ನೀ
ರೆಕ್ಕೆ ಎಂತೋ ಹಕ್ಕಿಗಂತೆ ನನಗೆ
ಮೀನ್ಗೆ ನೀರೆಂತೊ ನೀನಂತೆ ನನಗೆ !



೫೦

# ಶ್ರೀರಾಮಕೃಷ್ಣರು ಮತ್ತು ಬುದ್ಧದೇವ

೯ನೆ ಏಪ್ರಿಲ್ ೧೮೮೬, ಚೈತ್ರ ಶುಕ್ಲ ಪಂಚಮಿ, ಶುಕ್ರವಾರ.

ಘಂಟೆ ಸಾಯಂಕಾಲ ಐದು. ಕಾಶೀಪುರದ ತೋಟದ ಮನೆಯ ನೆಲ ಅಂತಸ್ತಿನಲ್ಲಿ ನರೇಂದ್ರ, ಕಾಳಿ, ನಿರಂಜನ, ಮಾಸ್ಟರ್ ಕುಳಿತು ಮಾತು ಕತೆಗಳಾಡುತ್ತಿದಾರೆ.

ನಿರಂಜನ ಮಾಸ್ಟರಿಗೆ: "ವಿದ್ಯಾಸಾಗರ ಇನ್ನೊಂದು ಹೊಸ ಸ್ಕೂಲನ್ನು ತೆರೆಯುತ್ತಾನಂತಲ್ಲ, ನಿಜವೇನು? ನರೇಂದ್ರನಿಗೆ ಅಲ್ಲಿ ಒಂದು ಪೋಸ್ಟಿಗಾಗಿ ಏಕೆ ನೀವು ಪ್ರಯತ್ನಮಾಡಬಾರದು?"

ನರೇಂದ್ರ: "ವಿದ್ಯಾಸಾಗರನ ಕೈ ಕೆಳಗೆ ಕೆಲಸ ಮಾಡಿ ಸಾಕಾಗಿದೆ."

ಕಾಳಿ ಮತ್ತು ತಾರಕ ಇವರೊಡನೆ ಬುದ್ಧ-ಗಯೆಗೆ ಹೋಗಿದ್ದು ನರೇಂದ್ರ ಈಗ ತಾನೆ ಬಂದಿದಾನೆ. ಅಲ್ಲಿ ಆತ ಬುದ್ಧಮೂರ್ತಿಯ ದರ್ಶನ ಮಾಡಿದನಂತರ, ಅದರ ಹತ್ತಿರವೇ ಕುಳಿತು ಗಭೀರ ಧ್ಯಾನದಲ್ಲಿ ಮುಳುಗಿ ಹೋಗಿದ್ದ. ಯಾವ ಅಶ್ವತ್ಥ ವೃಕ್ಷದ ಕೆಳಗೆ ಬುದ್ಧದೇವ ತಪಸ್ಸು ಮಾಡಿ ನಿರ್ವಾಣವನ್ನು ಹೊಂದಿದ್ದನೋ, ಅದೇ ಸ್ಥಾನದಲ್ಲಿ ಅದರ ಕೊಂಬೆಯಿಂದ ಇನ್ನೊಂದು ಹೊಸ ಅಶ್ವತ್ಥ ವೃಕ್ಷ ಎದ್ದಿದೆ. ಅದನ್ನು ನೋಡಿ ಬಂದಿದಾನೆ.

ಕಾಳಿ ಹೇಳಿದ: "ಒಂದು ದಿನ ನರೇಂದ್ರ ಗಯೆಯ ಉಮೇಶಬಾಬು ವಿನ ಮನೆಯಲ್ಲಿ ಮೃದಂಗದೊಡನೆ ಶಾಸ್ತ್ರೀಯ ಶೈಲಿಯ (ಕ್ಲ್ಯಾಸಿಕಲ್) ಹಾಡುಗಳನ್ನು ಹಾಡಿದ."

ಪರಮಹಂಸರು ಎರಡನೆ ಅಂತಸ್ತಿನ ತಮ್ಮ ಕೊಠಡಿಯಲ್ಲಿ ಹಾಸಿಗೆ ಮೇಲೆ ಕುಳಿತಿದಾರೆ. ರಾತ್ರಿಯಾಗಿದೆ. ಮಾಸ್ಟರ್ ಒಬ್ಬನೇ ನಿಂತು ಪರಮಹಂಸರಿಗೆ ಬೀಸಣಿಗೆಯಿಂದ ಗಾಳಿ ಬೀಸುತ್ತಿದಾನೆ. ಲಾಟು ಈಗ ಅಲ್ಲಿಗೆ ಬಂದು ಕುಳಿತುಕೊಂಡಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನನಗೊಂದು ಉತ್ತರೀಯವನ್ನು ಮತ್ತು ಒಂದು ಜೊತೆ ಪಾದರಕ್ಷೆಗಳನ್ನು ಕೊಂಡುಕೊಂಡು ಬಾ."

ಮಾಸ್ಟರ್: "ಆಗಲಿ."

ಶ್ರೀರಾಮಕೃಷ್ಣರು ಲಾಟುವಿಗೆ: "ಉತ್ತರೀಯಕ್ಕೆ ಹತ್ತಾಣೆ ಮತ್ತೆ ಒಂದು ಜೊತೆ ಪಾದರಕ್ಷೆ. ಇವಕ್ಕೆ ಒಟ್ಟು ಬೆಲೆ ಎಷ್ಟಾಯಿತು ?"

ಲಾಟು: "ಒಂದು ರೂಪಾಯಿ ಹತ್ತಾಣೆ."

ಪರಮಹಂಸರು ಬೆಲೆಯನ್ನು ಗುರುತುಮಾಡಿಕೊಳ್ಳೋಹಾಗೆ ಸೌಜ್ಞೆಯ ಮೂಲಕ ಮಾಸ್ಟರಿಗೆ ತಿಳಿಸಿದರು.

ನರೇಂದ್ರ ಕೊಠಡಿಯನ್ನು ಪ್ರವೇಶಿಸಿ ಒಂದು ಕಡೆ ಕುಳಿತುಕೊಂಡ. ಬಳಿಕ ಶಶಿ, ರಾಖಾಲ, ಇನ್ನೂ ಒಬ್ಬಿಬ್ಬರು ಭಕ್ತರು ಬಂದು ಕುಳಿತು ಕೊಂಡರು. ಪರಮಹಂಸರು ತಮ್ಮ ಕಾಲನ್ನು ಒತ್ತುವಂತೆ ನರೇಂದ್ರನಿಗೆ ಹೇಳಿದರು. ಊಟವಾಗಿದೆಯೆ ಅಂತ ಆತನನ್ನು ಸೌಜ್ಞೆಯ ಮೂಲಕ ಕೇಳಿದರು.

ಶ್ರೀರಾಮಕೃಷ್ಣರು ನಗುತ್ತ ಮಾಸ್ಟರಿಗೆ: "ಈತ ಅಲ್ಲಿಗೆ (ಬುದ್ಧ-ಗಯೆಗೆ) ಹೋಗಿದ್ದ."

ಮಾಸ್ಟರ್ ನರೇಂದ್ರನಿಗೆ: "ಬುದ್ಧನ ತತ್ತ್ವವೇನು ?"

ನರೇಂದ್ರ: "ಆತ ತನ್ನ ತಪಸ್ಸಿನ ಅಂತ್ಯದಲ್ಲಿ ಏನನ್ನು ಸಾಕ್ಷಾತ್ಕಾರ ಮಾಡಿಕೊಂಡನೊ ಅದನ್ನು ಬಾಯಿಂದ ಹೇಳಲು ಆತನಿಗೆ ಸಾಧ್ಯವಾಗಲಿಲ್ಲ. ಅದಕ್ಕಾಗಿ ಜನ ಆತನನ್ನು ನಾಸ್ತಿಕ ಅಂತ ಕರೆದರು."

ಶ್ರೀರಾಮಕೃಷ್ಣರು ಸೌಜ್ಞೆಯ ಮೂಲಕ: "ಅವನೇಕೆ ನಾಸ್ತಿಕ ನಾಗುತ್ತಾನೆ? ನಾಸ್ತಿಕನಲ್ಲ; ತಾನು ಪಡೆದ ಅನುಭವಗಳನ್ನು ಬಾಯಿಂದ ಹೊರಗೆಡಹಲಾಗಲಿಲ್ಲ, ಅಷ್ಟೆ. 'ಬುದ್ಧ' ಎಂದರೆ ಏನು ಗೊತ್ತೆ? ಬೋಧ ಸ್ವರೂಪನ ಚಿಂತನೆ ಮಾಡುತ್ತ ಮಾಡುತ್ತ ಆತನೇ ಆಗುವಿಕೆ; ಬೋಧ ಸ್ವರೂಪನಾಗುವಿಕೆ."

ನರೇಂದ್ರ: "ಹೌದು, ನಿಶ್ಚಯ. ಇವರಲ್ಲಿ ಮೂರು ಅಂತಸ್ತಿನವರಿದಾರೆ: ಬುದ್ಧ, ಅರ್ಹತ್, ಬೋಧಿಸತ್ತ್ವ."

ಶ್ರೀರಾಮಕೃಷ್ಣರು: "ಇದೂ ಆತನ ಕ್ರೀಡೆಯೆ; ಒಂದು ಹೊಸ ಲೀಲೆ.

"ಬುದ್ಧ ಹೇಗೆ ನಾಸ್ತಿಕನಾಗುತ್ತಾನೆ? ಸ್ವಸ್ವರೂಪದ ಬೋಧೆಯಾದ ನಂತರ ಅಸ್ತಿ, ನಾಸ್ತಿ ಇವುಗಳ ಮಧ್ಯವರ್ತಿಯ ಅವಸ್ಥೆಯಲ್ಲಿ ಇರ ಬೇಕಾಗುತ್ತದೆ."

ನರೇಂದ್ರ ಮಾಸ್ಟರಿಗೆ: "ಆ ಅವಸ್ಥೆಯಲ್ಲಿ ಅಸಂಗತವಾದುವು

ಸಂಗತವಾಗುತ್ತವೆ. ಯಾವ ಆಮ್ಲಜನಕ ಜಲಜನಕಗಳ ಸಂಯೋಗದಿಂದ ತಣ್ಣಗಿರೋ ನೀರು ಉತ್ಪನ್ನವಾಗುತ್ತದೆಯೋ, ಅದೇ ಆಮ್ಲಜನಕ ಜಲಜನಕಗಳಿಂದ ಅತ್ಯಂತವಾಗಿ ತಪಿಸೋ ಅಗ್ನಿಶಿಖ ಉತ್ಪನ್ನವಾಗುತ್ತದೆ.

"ಆ ಅವಸ್ಥೆಯಲ್ಲಿ ಕರ್ಮ, ಕರ್ಮತ್ಯಾಗ ಎರಡೂ ಸಾಧ್ಯ; ಅಂದರೆ ನಿಷ್ಕಾಮ ಕರ್ಮ ಸಾಧ್ಯ.

"ಇಂದ್ರಿಯ ಸುಖಗಳಲ್ಲೇ ಮುಳುಗಿರೋ ಸಾಂಸಾರಿಕರು ಹೇಳುತ್ತಾರೆ, ಎಲ್ಲವೂ 'ಅಸ್ತಿ'. ಆದರೆ ಮಾಯಾವಾದಿಗಳು ಹೇಳುತ್ತಾರೆ, ಎಲ್ಲವೂ 'ನಾಸ್ತಿ'. ಬುದ್ಧ ಪಡೆದಂಥ ಅನುಭವ ಈ 'ಅಸ್ತಿ', 'ನಾಸ್ತಿ' ಇವುಗಳಿಗತೀತವಾದ್ದು."

ಶ್ರೀರಾಮಕೃಷ್ಣರು: "ಈ 'ಅಸ್ತಿ', 'ನಾಸ್ತಿ' ಪ್ರಕೃತಿಯ ಗುಣಗಳು. ಆದರೆ ಸತ್ಯ, ಇವೆರಡಕ್ಕೂ ಅತೀತವಾದ್ದು."

ಭಕ್ತರು ಕೆಲವು ನಿಮಿಷಗಳು ಸುಮ್ಮನೆ ಕುಳಿತುಕೊಂಡರು.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ಬುದ್ಧದೇವ ಕೊಟ್ಟ ಉಪದೇಶಗಳೇನು?"

ನರೇಂದ್ರ: "ಭಗವಂತ ಇದಾನೆಯೆ, ಇಲ್ಲವೆ ಎಂಬುದರ ವಿಷಯವಾಗಿ ಆತ ಮಾತನಾಡುತ್ತಲೇ ಇರಲಿಲ್ಲ. ಆದರೆ ತನ್ನ ಇಡೀ ಜೀವನವನ್ನೆಲ್ಲ ದಯಾಮೂರ್ತಿಯೇ ಆಗಿ ಕಳೆದ.

"ಒಂದು ಗಿಡುಗ ಹಕ್ಕಿಯೊಂದನ್ನು ಹಿಡಿದು ಇನ್ನೇನು ಅದನ್ನು ತಿನ್ನುವುದರಲ್ಲಿತ್ತು. ಆ ಹಕ್ಕಿಯನ್ನು ಉಳಿಸಲು ಬುದ್ಧ ತನ್ನ ದೇಹದಿಂದ ಮಾಂಸವನ್ನು ಕತ್ತರಿಸಿಕೊಟ್ಟ."

ಶ್ರೀರಾಮಕೃಷ್ಣರು ಸುಮ್ಮನೆ ಕುಳಿತಿದಾರೆ. ನರೇಂದ್ರ ಬುದ್ಧನ ಸಂಬಂಧವಾಗಿ ಇನ್ನೂ ಹೆಚ್ಚಾಗಿ ಉತ್ಸಾಹಗೊಂಡು ಆತನ ವಿಷಯವಾಗಿ ಮಾತನಾಡಲಾರಂಭಿಸಿದಾನೆ.

ನರೇಂದ್ರ: "ಎಂಥ ವೈರಾಗ್ಯ! ರಾಜಕುಮಾರನಾಗಿಯೂ ಎಲ್ಲವನ್ನೂ ತ್ಯಜಿಸಿದ. ಯಾರಿಗೆ ಏನೆಂದರೆ ಏನೂ ಇಲ್ಲವೊ, ಧನಕನಕಾದಿಗಳು ಒಂದು ಕಿಂಚಿತ್ತೂ ಇಲ್ಲವೊ, ಅವರು ತ್ಯಜಿಸುವುದು ತಾನೆ ಏನನ್ನ? ಬುದ್ಧನಾದ ಮೇಲೆ, ನಿರ್ವಾಣವನ್ನು ಹೊಂದಿದಮೇಲೆ ಆತ ತನ್ನ ಮನೆಗೆ ಹಿಂದಿರುಗಿಬಂದಾಗ, ಹೆಂಡತಿಗೆ, ಮಗನಿಗೆ, ರಾಜಮನೆತನದ ಇನ್ನೂ ಅನೇಕರಿಗೆ ವೈರಾಗ್ಯವನ್ನು ಅವಲಂಬಿಸುವಂತೆ ಉಪದೇಶವಿತ್ತ. ಎಂಥ

ಅದ್ಭುತ ವೈರಾಗ್ಯ ಆತನದು! ಹಾಗೇನೆ ವ್ಯಾಸದೇವನ ವರ್ತನೆಯನ್ನು ನೋಡಿ! ಆತ ತನ್ನ ಮಗ ಶುಕದೇವನಿಗೆ ಹೇಳಿದ: 'ಮಗು, ಸಂಸಾರದಲ್ಲಿದ್ದೇ ಧಾರ್ಮಿಕ ಕಾರ್ಯಗಳನ್ನೂ ಮಾಡು.' ಸಂಸಾರವನ್ನು ತ್ಯಜಿಸಲು ಆತನಿಗೆ ಅನುಮತಿಯನ್ನು ಕೊಡಲಿಲ್ಲ."

ಪರಮಹಂಸರು ಸುಮ್ಮನೆ ಕುಳಿತಿದಾರೆ. ಇನ್ನೂ ಯಾವ ಮಾತೂ ಅವರ ಬಾಯಿಂದ ಹೊರಬೀಳುತ್ತಿಲ್ಲ.

ನರೇಂದ್ರ: "ಬುದ್ಧ ಶಕ್ತಿ-ಗಿಕ್ತಿ ಇವು ಯಾವನ್ನೂ ಒಪ್ಪುತ್ತಿರಲಿಲ್ಲ. ಆತನ ಗುರಿ ನಿರ್ವಾಣ. ಆತನದು ಎಂಥ ಅದ್ಭುತ ವೈರಾಗ್ಯ! ಅಶ್ವತ್ಥ ವೃಕ್ಷದ ಕೆಳಗೆ ತಪಸ್ಸಿಗೆ ಕುಳಿತುಕೊಂಡು ಹೇಳಿದ: 'ಇಹೈವ ಶುಷ್ಯತು ಮೇ ಶರೀರಮ್।—ನನಗೆ ನಿರ್ವಾಣ ದೊರೆಯದೆ ಇತ್ತು ಎಂದರೆ ಈ ಶರೀರ ಇಲ್ಲೇ ಒಣಗಿ ಬತ್ತಿಹೋಗಲಿ.' ಎಂಥಾ ದೃಢ ಪ್ರತಿಜ್ಞೆ ಆತನದು!

"ಈ ಶರೀರವೇ ನಮ್ಮದೊಡ್ಡ ಶತ್ರು. ಅದನ್ನ ಅಂಕೆಯಲ್ಲಿ ಇಟ್ಟುಕೊಳ್ಳದಿದ್ದರೆ ಏನಾದರೂ ದೊರಕುವುದೆ?"

ಶಶಿ: "ಆದರೆ ನೀನೇ ತಾನೆ ಹೇಳುತ್ತಾ ಇರೋನು ಮಾಂಸ ತಿಂದರೆ ಸತ್ತ್ವಗುಣ ವೃದ್ಧಿಯಾಗುತ್ತೆ ಅಂತ. ಮಾಂಸವನ್ನು ತಿನ್ನಲೇಬೇಕು ಅಂತ ಹೇಳೋನು ನೀನೇ ತಾನೆ."

ನರೇಂದ್ರ: "ನಾನು ಮಾಂಸ ತಿನ್ನುತ್ತಿರುವುದೇನೊ ನಿಜ. ಆದರೆ ನಾನು ಬರೀ ಅನ್ನ ತಿಂದೂ, ಉಪ್ಪಿಲ್ಲದೆ ಅನ್ನ ತಿಂದೂ ಇರಬಲ್ಲೆ."

ಕೆಲವು ನಿಮಿಷಗಳಾದನಂತರ ಪರಮಹಂಸರು ತಮ್ಮ ಬಾಯನ್ನು ತೆರೆದರು. ಅವರು ನರೇಂದ್ರನನ್ನು ಸನ್ನೆಯ ಮೂಲಕ ಕೇಳುತ್ತಿದಾರೆ: "ಬುದ್ಧನ ತಲೆ ಜುಟ್ಟನ್ನು ನೋಡಿದೀಯೇನು?"

ನರೇಂದ್ರ: "ಅದು ಜುಟ್ಟಲ್ಲ, ಕಿರೀಟವಿರಬೇಕು. ಅದು ಅನೇಕ ರುದ್ರಾಕ್ಷಿಗಳನ್ನು ಸೇರಿಸಿ ಮಾಡಿದ ಕಿರೀಟದ ಹಾಗೆ ಕಾಣುತ್ತದೆ."

ಶ್ರೀರಾಮಕೃಷ್ಣರು: "ಆತನ ಕಣ್ಣು?"

ನರೇಂದ್ರ: "ಸಮಾಧಿಯಲ್ಲಿ ಇದ್ದ ಹಾಗೆ."

ಪರಮಹಂಸರು ಮತ್ತೆ ಸುಮ್ಮನೆ ಕುಳಿತುಕೊಂಡರು. ನರೇಂದ್ರ ಮತ್ತು ಉಳಿದ ಭಕ್ತರು ಅವರನ್ನು ದೃಷ್ಟಿಸಿ ನೋಡುತ್ತಿದಾರೆ. ಇದ್ದಕ್ಕಿದ್ದ ಹಾಗೆ ಸ್ವಲ್ಪ ನಕ್ಕು ಈಗ ನರೇಂದ್ರನೊಡನೆ ಮಾತಾಡುತ್ತಿದಾರೆ. ಮಾಸ್ಟರ್ ಅವರಿಗೆ ಗಾಳಿ ಬೀಸುತ್ತಿದಾನೆ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ಒಳ್ಳೇದು, ಇಲ್ಲಿ ಎಲ್ಲಾ ದೊರೆಯುತ್ತಿದೆ, ಅಲ್ಲವೆ ?— ಮಸೂರ ಬೇಳೆ, ಕಡಲೆ ಬೇಳೆ; ಹುಣಿಸೆ ಹಣ್ಣು ಕೂಡ."

ನರೇಂದ್ರ : "ನೀವು ಎಲ್ಲಾ ಹಂತಗಳನ್ನೂ ಹತ್ತಿ, ಈಗ ಕೆಳಗಿನ ಹಂತದಲ್ಲಿ ಓಡಾಡುತ್ತಿದೀರಿ."

ಮಾಸ್ಟರ್ ತನಗೆ ತಾನೇ : "ಹೌದು, ಎಲ್ಲಾ ಸ್ಥಿತಿಗಳನ್ನೂ ನೋಡಿ ಈಗ ಭಕ್ತನ ಸ್ಥಿತಿಯಲ್ಲಿ."

ಶ್ರೀರಾಮಕೃಷ್ಣರು : "ಯಾರೋ ನನ್ನನ್ನು ಈ ಕೆಳಗಿನ ಅಂತಸ್ತಿನಲ್ಲಿ ಹಿಡಿದು ನಿಲ್ಲಿಸಿರೋ ಹಾಗೆ ಅನುಭವವಾಗುತ್ತಿದೆ."

ಹೀಗೆ ಹೇಳಿ, ಮಾಸ್ಟರ ಕೈಯಿಂದ ಬೀಸಣಿಗೆಯನ್ನು ತೆಗೆದುಕೊಂಡು ಹೇಳುತ್ತಿದಾರೆ : "ಈ ಬೀಸಣಿಗೆಯನ್ನು ಪ್ರತ್ಯಕ್ಷವಾಗಿ ನೋಡೋ ರೀತಿಯಲ್ಲಿ ಭಗವಂತನನ್ನು ಪ್ರತ್ಯಕ್ಷವಾಗಿ ನೋಡಿದೇನೆ. ಮತ್ತೂ ನೋಡಿದೇನೆ— "

ಹೀಗೆಂದು ಹೇಳಿ, ತಮ್ಮ ಹೃದಯಸ್ಥಳದಲ್ಲಿ ಕೈಯಿಟ್ಟು ಸನ್ನೆಯ ಮೂಲಕ ನರೇಂದ್ರನಿಗೆ ಹೇಳುತ್ತಿದಾರೆ: "ನಾನು ಹೇಳಿದ್ದು ಏನು ಹೇಳು ನೋಡೋಣ ?"

ನರೇಂದ್ರ: "ತಿಳಿದುಕೊಂಡುಬಿಟ್ಟೆ."

ಶ್ರೀರಾಮಕೃಷ್ಣರು: "ಏನು ತಿಳಿದುಕೊಂಡೆ ಹೇಳು ನೋಡೋಣ?"

ನರೇಂದ್ರ : "ಚೆನ್ನಾಗಿ ಕಿವಿಗೆ ಬೀಳಲಿಲ್ಲ."

ಶ್ರೀರಾಮಕೃಷ್ಣರು ಮತ್ತೆ ಸೌಜ್ಞೆಯ ಮೂಲಕ ಹೇಳಿದರು: "ಕಂಡಿದೇನೆ, ಭಗವಂತ ಮತ್ತು ನನ್ನ ಹೃದಯದಲ್ಲಿ ವಾಸಿಸುತ್ತಿರುವವನು ಇಬ್ಬರೂ ಒಬ್ಬನೇ ಒಬ್ಬ ವ್ಯಕ್ತಿ ಎಂಬುದಾಗಿ."

ನರೇಂದ್ರ : "ಹೌದು, ಹೌದು : 'ಸೋಽಹಮ್'."

ಶ್ರೀರಾಮಕೃಷ್ಣರು: "ಇಬ್ಬರಿಗೂ ಒಂದು ಗೆರೆಯ ಅಂತರ ಮಾತ್ರ ಇದೆ — 'ಭಕ್ತನ ಅಹಂ' ಇದೆ—ಭಗವದಾನಂದವನ್ನು ಪಡಲೋಸುಗ."

ನರೇಂದ್ರ ಮಾಸ್ಟರಿಗೆ: "ಮಹಾಪುರುಷರು ತಮಗೆ ಆತ್ಮಸಾಕ್ಷಾತ್ಕಾರ ದೊರೆತನಂತರವೂ ಜೀವರ ಉದ್ಧಾರಕ್ಕಾಗಿ 'ಅಹಂ' ಎಂಬುದನ್ನು ಉಳಿಸಿಕೊಂಡು, ದೇಹದ ಸುಖದುಃಖವನ್ನು ಅನುಭವಿಸುತ್ತಾ ಬದುಕಿಕೊಂಡಿರುತ್ತಾರೆ.

"ಇದು ಕೂಲಿ ಕೆಲಸವಿದ್ದ ಹಾಗೆ. ನಾವು ಚಾವಟಿ ಏಟಿನಿಂದ ಮಾಡುತ್ತೇವೆ; ಅವರು ಸ್ವೇಚ್ಛೆಯಿಂದ ಮಾಡುತ್ತಾರೆ."

ಮತ್ತೆ ಕೊಠಡಿಯಲ್ಲಿ ನಿಶ್ಶಬ್ದತೆ. ಈಗ ಪರಮಹಂಸರು ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ನರೇಂದ್ರನೇ ಮೊದಲಾದವರಿಗೆ: "ಮೇಲ್ಛಾವಣಿಯೇನೊ ಕಣ್ಣಿಗೆ ಕಾಣುತ್ತದೆ; ಆದರೆ ಅದರ ಮೇಲಕ್ಕೆ ಹತ್ತಿಹೋಗಬೇಕಾದರೆ ಬಹಳ ಪ್ರಯಾಸಪಡಬೇಕು."

ನರೇಂದ್ರ: "ಹೌದು, ನಿಜ."

ಶ್ರೀರಾಮಕೃಷ್ಣರು: "ಆದರೆ ಯಾರಾದರು ಆಗಲೆ ಮೇಲಕ್ಕೆ ಹತ್ತಿಬಿಟ್ಟಿದ್ದರೆ, ಆತ ಕೆಳಕ್ಕೆ ಹಗ್ಗ ಬಿಟ್ಟು ಬೇರೊಬ್ಬನನ್ನು ಮೇಲಕ್ಕೆ ಎಳೆದುಕೊಳ್ಳಬಲ್ಲ.

"ಒಮ್ಮೆ ಹೃಷೀಕೇಶದ ಒಬ್ಬ ಸಾಧು ಇಲ್ಲಿಗೆ ಬಂದಿದ್ದ. ಆತ ನನಗೆ ಹೇಳಿದ: 'ಏನಾಶ್ಚರ್ಯ! ನಿಮ್ಮಲ್ಲಿ ಐದು ವಿಧವಾದ ಸಮಾಧಿಗಳೂ ವ್ಯಕ್ತವಾಗಿರುವುವಲ್ಲ!'

"ಕೆಲವು ವೇಳೆ ಕಪಿವತ್—ಯಾವರೀತಿಯಾಗಿ ಕಪಿ ಕೊಂಬೆಯಿಂದ ಕೊಂಬೆಗೆ ನೆಗೆಯುತ್ತ ಹೇಗೆ ಮರವನ್ನು ಹತ್ತುವುದೊ, ಅದೇ ರೀತಿಯಾಗಿ ಮಹಾವಾಯು ದೇಹದಲ್ಲಿರೋ ಚಕ್ರದಿಂದ ಚಕ್ರಕ್ಕೆ ನೆಗೆಯುತ್ತಾ ಮುಂದುವರಿಯುತ್ತದೆ. ಕೊನೆಗೆ ಸಮಾಧಿ.

"ಕೆಲವು ವೇಳೆ ಮೀನವತ್— ಯಾವ ರೀತಿಯಾಗಿ ಮೀನು ನೀರಿನಲ್ಲಿ 'ಸಳಕ್, ಸಳಕ್' ಅಂತ ಚಲಿಸುತ್ತ ಆನಂದದಿಂದ ಈಜಾಡುವುದೊ, ಅದೇ ರೀತಿಯಾಗಿ ಮಹಾವಾಯು ದೇಹದಲ್ಲಿ ಚಲಿಸಲಾರಂಭಿಸುತ್ತದೆ. ಕೊನೆಗೆ ಸಮಾಧಿ.

"ಕೆಲವು ವೇಳೆ ಪಕ್ಷಿವತ್—ಯಾವರೀತಿಯಾಗಿ ಹಕ್ಕಿ ರೆಂಬೆಯಿಂದ ರೆಂಬೆಗೆ ಹಾರಿ ಹಾರಿ ಮುಂದುವರಿಯುವುದೊ, ಅದೇ ರೀತಿಯಾಗಿ ಮಹಾವಾಯು ದೇಹವೆಂಬ ವೃಕ್ಷದಲ್ಲಿ ಮುಂದುವರಿಯುತ್ತದೆ.

"ಕೆಲವು ವೇಳೆ ಪಿಪೀಲಿಕವತ್— ಮಹಾವಾಯು ಇರುವೆಯೋಪಾದಿಯಲ್ಲಿ ದೇಹದಲ್ಲಿ ಕಿಂಚಿತ್ ಕಿಂಚಿತ್ತಾಗಿ ಮುಂದುವರಿಯುತ್ತಾ ಇರುತ್ತದೆ. ಅದು ಸಹಸ್ರಾರವನ್ನು ಮುಟ್ಟುವುದೇ ತಡ, ಸಮಾಧಿ.

"ಕೆಲವು ವೇಳೆ ತಿರ್ಯಗ್ವತ್—ಮಹಾವಾಯು ಸರ್ಪದ ಹಾಗೆ

ಸ್ವಲ್ಪ ಸ್ವಲ್ಪವಾಗಿ ಮುಂದುವರಿಯುತ್ತದೆ. ಸಹಸ್ರಾರವನ್ನು ಮುಟ್ಟಿದಾಗ ಸಮಾಧಿ.''

ರಾಖಾಲ ಭಕ್ತರಿಗೆ: ''ಇನ್ನು ಮಾತುಕತೆ ಇಲ್ಲಿಗೇ ಸಾಕು. ಬಹಳವಾಗಿ ಮಾತನಾಡಿಬಿಟ್ಟಿದಾರೆ. ಇನ್ನೂ ಎಂದರೆ, ಗಂಟಲ ರೋಗ ಅಧಿಕವಾಗಿಬಿಡುತ್ತದೆ.''

೧೨ನೆ ಏಪ್ರಿಲ್ ೧೮೮೬, ಚೈತ್ರ ಶುಕ್ಲ ಅಷ್ಟಮಿ, ಸೋಮವಾರ.

ಘಂಟೆ ಸಾಯಂಕಾಲ ಐದು. ಪರಮಹಂಸರು ಕಾಶೀಪುರದ ತೋಟದ ಮನೆಯಲ್ಲಿ ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ಹತ್ತಿರವೆ ಮಾಸ್ಟರ್ ಮತ್ತು ಶಶಿ ಕುಳಿತುಕೊಂಡಿದಾರೆ. ಪರಮಹಂಸರು ಮಾಸ್ಟರಿಗೆ ಸೌಜ್ಞೆಮಾಡಿದರು ತಮಗೆ ಗಾಳಿ ಬೀಸಬೇಕೆಂದು. ಇಂದು ಬಂಗಾಳಿ ವರ್ಷದ ಕೊನೆಯ ದಿನವಾದ್ದರಿಂದ ಹತ್ತಿರದಲ್ಲೆ ಒಂದು ಜಾತ್ರೆ ನಡೆಯುತ್ತಿತ್ತು. ಪರಮಹಂಸರು ಜಾತ್ರೆಗೆ ಹೋಗಿ ಕೆಲವು ಸಾಮಾನುಗಳನ್ನು ಕೊಂಡುಕೊಂಡುಬರುವಂತೆ ಒಬ್ಬ ಭಕ್ತನನ್ನು ಅಲ್ಲಿಗೆ ಕಳುಹಿಸಿದ್ದರು. ಆತ ಈಗ ಹಿಂದಿರುಗಿ ಬಂದಿದಾನೆ.

ಪರಮಹಂಸರು ಆತನನ್ನು ಕೇಳಿದರು: ''ಏನೇನು ಕೊಂಡುಕೊಂಡು ಬಂದೆ?''

ಭಕ್ತ: ''ಒಂದೂಕಾಲಾಣೆಗೆ ಬತಾಸು, ಅರ್ಧಾಣೆಗೆ ಒಂದು ಸೌಟು, ಅರ್ಧಾಣೆಗೆ ಈಳಿಗೆಮಣೆ.''

ಶ್ರೀರಾಮಕೃಷ್ಣರು: ''ಚೂರಿ ಎಲ್ಲಿ?''

ಭಕ್ತ: ''ಅರ್ಧಾಣೆಗೆ ಕೊಡದೆಹೋದ.''

ಶ್ರೀರಾಮಕೃಷ್ಣರು ಆಕಾಂಕ್ಷಿತರಾಗಿ: ''ಹೋಗು, ಹೋಗು! ಬೇಗ ಕೊಂಡುಕೊಂಡು ಬಾ ಒಂದನ್ನ!''

ಮಾಸ್ಟರ್ ತೋಟದಲ್ಲಿ ಅಡ್ಡಾಡುತ್ತಿದಾನೆ. ನರೇಂದ್ರ ಮತ್ತು ತಾರಕ ಕಲ್ಕತ್ತದಿಂದ ಹಿಂದಿರುಗಿ ಬಂದಿದಾರೆ. ಅವರು ಗಿರೀಶಘೋಷನ ಮನೆಗೆ ಮತ್ತು ಇನ್ನೂ ಬೇರೆ ಬೇರೆ ಸ್ಥಳಗಳಿಗೆ ಹೋಗಿದ್ದರು.

ತಾರಕ: ''ಇಂದು ನಾವು ಮಾಂಸ-ಗೀಂಸ ಇನ್ನೂ ಏನೇನೋ ಹೊಡೆದಪ್ಪಳಿಸಿದೆವು.''

ನರೇಂದ್ರ: ''ಇಂದು ನಮ್ಮ ಮನಸ್ಸು ಕೆಳಗಿನ ಅಂತಸ್ತಿಗೆ ಇಳಿದುಬಿಟ್ಟಿದೆ. ಸ್ವಲ್ಪ ಅಧಿಕವಾಗಿ ತಪಸ್ಸು ಮಾಡೋಣ. (ಮಾಸ್ಟರಿಗೆ)

ನಾವು ಈ ಶರೀರ, ಮನಸ್ಸು ಇವುಗಳಿಗೆ ಎಷ್ಟೊಂದಾಗಿ ದಾಸರಾಗಿ ಬಿಟ್ಟಿದೇವೆ ಏನುಕತೆ! ನಾವು ಕೂಲಿಗಳ ಹಾಗೆ ವರ್ತಿಸುತ್ತಿದೇವೆ. ನಮ್ಮ ಭಾವನೆ, ಈ ಶರೀರ, ಮನಸ್ಸು ನಮ್ಮದಲ್ಲ ಬೇರೆ ಯಾರದೊ ಅಂತ."

ಸಾಯಂಕಾಲವಾಗಿದೆ. ಮೇಲೆ, ಕೆಳಗೆ, ಎಲ್ಲೆಲ್ಲೂ ದೀಪ ಹಚ್ಚಲಾಗಿದೆ. ಪರಮಹಂಸರು ತಮ್ಮ ಹಾಸಿಗೆ ಮೇಲೆ ಉತ್ತರಾಭಿಮುಖರಾಗಿ ಕುಳಿತು ಭಗವಚ್ಚಿಂತನೆ ಮಾಡುತ್ತಿದಾರೆ. ಕೆಲವು ನಿಮಿಷಗಳಾದನಂತರ ಬಲರಾಮನ ಪುರೋಹಿತನ ವಂಶಸ್ಥ ಫಕೀರ ಎಂಬೋನು ಅಪರಾಧಭಂಜನ ಸ್ತೋತ್ರವನ್ನು ಪಠಿಸಲಾರಂಭಿಸಿದ :

ಪ್ರಾಗ್ದೇಹಸ್ಥೋ ಯದಾಸಂ ತವ ಚರಣಯುಗಂ ನಾಶ್ರಿತೋ ನಾರ್ಚಿತೋಽಹಂ
ತೇನಾಹಂ ದುಃಖವರ್ಗೈರ್ಜಠರಜನನಜೈರ್ಬಾಧ್ಯಮಾನೊ ಗರಿಷ್ಠೈಃ ।
ಸ್ಮೃತ್ವಾ ಜನ್ಮಾಂತರಂ ಮೇ ಪುನರಿಹ ಭವಿತಾ ಕ್ವಾಶ್ರಯೋ ನೇತಿ ಜಾನೆ
ಕ್ಷಂತವ್ಯೋ ಮೇಽಪರಾಧಃ ಪ್ರಕಟಿತರದನೇ ಕಾಮರೂಪೇ ಕರಾಲೇ ॥ ೧ ॥*

ಕೊಠಡಿಯಲ್ಲಿ ಶಶಿ, ಮಾಸ್ಟರ್ ಮತ್ತು ಇನ್ನೂ ಕೆಲವು ಭಕ್ತರು ಕುಳಿತಿದಾರೆ. ಸ್ತೋತ್ರಪಠನೆ ಮುಗಿದನಂತರ ಪರಮಹಂಸರು ಕೈಮುಗಿದು ಅತ್ಯಂತ ಶ್ರದ್ಧಾಭಕ್ತಿಯಿಂದ ದೇವಿಗೆ ನಮಸ್ಕಾರ ಮಾಡಿದರು.

ಮಾಸ್ಟರ್ ಶ್ರೀರಾಮಕೃಷ್ಣರಿಗೆ ಗಾಳಿ ಬೀಸುತ್ತಿದಾನೆ. ಅವರು ಸನ್ನೆಯ ಮೂಲಕ ಆತನಿಗೆ ಹೇಳುತ್ತಿದಾರೆ: "ನನಗಾಗಿ ಒಂದು ಪಾವು ಹಾಲು ಹಿಡಿಯೋ ಬಿಳಿ ಕಲ್ಲಿನ ಒಂದು ಬಟ್ಟಲನ್ನು ಕೊಂಡುಕೊಂಡು ಬಾ." ಆ ಬಟ್ಟಲಿನ ಆಕಾರವನ್ನು ಅವರು ತಮ್ಮ ಬೆರಳಿನಿಂದ ಬರೆದು ತೋರಿಸುತ್ತಿದಾರೆ.

ಮಾಸ್ಟರ್: "ಆಗಲಿ, ತರುತ್ತೇನೆ."

ಶ್ರೀರಾಮಕೃಷ್ಣರು: "ಉಳಿದ ಬಟ್ಟಲುಗಳಲ್ಲಿ ನನಗೆ ಮೀನಿನ ವಾಸನೆ ಬರುತ್ತಿದೆ."

೧೩ನೆ ಏಪ್ರಿಲ್ ೧೮೮೬, ಚೈತ್ರ ಶುಕ್ಲ ನವಮಿ, ಮಂಗಳವಾರ.

ಘಂಟೆ ಪ್ರಾತಃಕಾಲ ಎಂಟು. ಪರಮಹಂಸರು ಕಾಶೀಪುರದ ತೋಟದ ಮನೆಯಲ್ಲಿ ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ಮಾಸ್ಟರ್ ರಾತ್ರಿ ಇಲ್ಲೆ ಇದ್ದ. ಬೆಳಗ್ಗೆ ಎದ್ದುಹೋಗಿ ಗಂಗಾಸ್ನಾನ ಮಾಡಿಬಂದು ಪರಮಹಂಸರಿಗೆ ಪ್ರಣಾಮಮಾಡಿದ. ರಾಮನೂ ಕೊಠಡಿಗೆ ಬಂದು

---

* ೩ನೆ ಪರಿಶಿಷ್ಟದಲ್ಲಿ ೧೨ನ್ನು ನೋಡಿ.

ಪರಮಹಂಸರಿಗೆ ಪ್ರಣಾಮಮಾಡಿ, ತಾನು ಕಲ್ಕತ್ತದಿಂದ ತಂದಿದ್ದ ಹೂವಿನ ಮಾಲೆಯನ್ನು ಅವರಿಗೆ ಅರ್ಪಿಸಿ ಒಂದು ಕಡೆ ಕುಳಿತುಕೊಂಡ. ಭಕ್ತರಲ್ಲನೇಕರು ನೆಲ ಅಂತಸ್ತಿನಲ್ಲೇ ಕುಳಿತಿದಾರೆ; ಎಲ್ಲೊ ಒಬ್ಬಿಬ್ಬರು ಮಾತ್ರ ಪರಮಹಂಸರ ಕೊಠಡಿಯಲ್ಲಿ ಕುಳಿತಿದಾರೆ.

ಈಗ ಪರಮಹಂಸರು ರಾಮನೊಡನೆ ಮಾತುಕತೆಗಳಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನನ್ನ ಸಂಬಂಧವಾಗಿ ನಿನ್ನ ಅಭಿಪ್ರಾಯ ವೇನು?"

ರಾಮ: "ನಿಮ್ಮಲ್ಲಿ ಎಲ್ಲವೂ ಇದೆ.

"ಇನ್ನು ಸ್ವಲ್ಪ ಹೊತ್ತಿನಲ್ಲೆ ನಿಮ್ಮ ರೋಗದ ಸಂಬಂಧವಾಗಿ ಒಂದು ಚರ್ಚೆ ನಡೆಯುವುದರಲ್ಲಿದೆ."

ಪರಮಹಂಸರು ಮುಗುಳುನಗೆ ನಕ್ಕು ರಾಮನನ್ನು ಸನ್ನೆಯ ಮೂಲಕ ಕೇಳುತ್ತಿದಾರೆ: "ನನ್ನ ರೋಗದ ಸಂಬಂಧವಾಗಿ ನಿಜವಾಗಿಯೂ ಚರ್ಚೆ ನಡೆಯುವುದೆ?"

ಪರಮಹಂಸರಿಗೆಂದು ತಂದ ಪಾದರಕ್ಷೆಗಳು ಅವರ ಕಾಲಿಗೆ ಸರಿಯಾಗಿ ಹಿಡಿಸಲಿಲ್ಲ. ಡಾಕ್ಟರ್ ರಾಜೇಂದ್ರದತ್ತ ಅವರಿಗೆ ಬೇರೊಂದು ಜೊತೆಯನ್ನು[1] ತಂದುಕೊಡಲು ಇಚ್ಛೆಪಟ್ಟ. ಈಗ ಪರಮಹಂಸರ ಪಾದಗಳ ಅಳತೆಯನ್ನು ತೆಗೆದುಕೊಳ್ಳಲಾಯಿತು.

ಪರಮಹಂಸರು ಸನ್ನೆಯ ಮೂಲಕ ಮಾಸ್ಟರನ್ನು ಕಲ್ಲುಬಟ್ಟಲಿನ ಸಂಬಂಧವಾಗಿ ಕೇಳಿದರು. ಮಾಸ್ಟರ್ ಮೇಲಕ್ಕೆ ಎದ್ದ. ಅದನ್ನು ಕೊಂಡುಕೊಂಡು ಬರಲು ಕಲ್ಕತ್ತೆಗೆ ಹೊರಡುವುದರಲ್ಲಿದಾನೆ.

ಶ್ರೀರಾಮಕೃಷ್ಣರು: "ಈಗೇನು ಅದಕ್ಕಾಗಿ ಹೋಗಬೇಡ."

ಮಾಸ್ಟರ್: "ಇವರೆಲ್ಲ ಹೋಗುತ್ತಿದಾರೆ. ಇವರೊಡನೆ ಹೋಗಿ ಕೊಂಡುಕೊಂಡು ಬರುತ್ತೇನೆ."

ಮಾಸ್ಟರ್ ಕಲ್ಕತ್ತಕ್ಕೆ ಹೋಗಿ ಆ ಬಟ್ಟಲನ್ನು ಕೊಂಡುಕೊಂಡು ಮಧ್ಯಾಹ್ನದ ವೇಳೆಗೆ ಕಾಶೀಪುರಕ್ಕೆ ಹಿಂದಿರುಗಿದ. ಬಳಿಕ ಪರಮಹಂಸರಿಗೆ ಪ್ರಣಾಮಮಾಡಿ ಆ ಬಟ್ಟಲನ್ನು ಅವರ ಹತ್ತಿರ ಇಟ್ಟ. ಅವರು ಅದನ್ನು ಈಗ ತಮ್ಮ ಕೈಗೆ ತೆಗೆದುಕೊಂಡು ತಿರುಗಿಸಿ ತಿರುಗಿಸಿ ನೋಡುತ್ತಾ ಇದಾರೆ.

---

1. ಇದನ್ನು ಬೇಲೂರು ಮಠದಲ್ಲಿ—ರಾಮಕೃಷ್ಣ ಮಠ ಮತ್ತು ಮಿಷನ್ನಿನ ಪೀಠಸ್ಥಾನದಲ್ಲಿ—ಪೂಜೆಗೆ ಇಟ್ಟದೆ.

ಡಾಕ್ಟರ್ ರಾಜೇಂದ್ರದತ್ತ, ಡಾಕ್ಟರ್ ಶ್ರೀನಾಥ, ಡಾಕ್ಟರ್ ರಾಖಾಲ ಹಾಲದಾರ ಮತ್ತು ಇನ್ನೂ ಕೆಲವರು ಕೊಠಡಿಯನ್ನು ಪ್ರವೇಶಿಸಿದರು. ರಾಖಾಲ, ಶಶಿ, ಚಿಕ್ಕ ನರೇನ ಕೊಠಡಿಯಲ್ಲಿದಾರೆ. ಡಾಕ್ಟರುಗಳು ಪರಮ ಹಂಸರ ರೋಗದವರದಿಯನ್ನೆಲ್ಲ ಸವಿಸ್ತಾರವಾಗಿ ಕೇಳಿದರು. ಡಾಕ್ಟರ್ ಶ್ರೀನಾಥ ಕೈಯಲ್ಲಿ ಗೀತಾ ಪ್ರತಿಯನ್ನು ಹಿಡಿದುಕೊಂಡಿದ್ದ.

ಡಾಕ್ಟರ್ ಶ್ರೀನಾಥ ತನ್ನ ಸ್ನೇಹಿತರಿಗೆ: "ಎಲ್ಲವೂ ಪ್ರಕೃತಿಯ ಅಧೀನದಲ್ಲಿದೆ. ಕರ್ಮಫಲಗಳಿಂದ ಯಾರೂ ತಪ್ಪಿಸಿಕೊಳ್ಳಲಾಗೋದಿಲ್ಲ. ಇದಕ್ಕೇನೆ 'ಪ್ರಾರಬ್ಧ' ಅಂತ ಹೆಸರು."

ಶ್ರೀರಾಮಕೃಷ್ಣರು: "ಏಕೆ, — ಭಗವಂತನ ನಾಮವನ್ನು ಜಪಿಸಿದ್ದೇ ಆದರೆ, ಆತನ ಚಿಂತನೆಯನ್ನು ಮಾಡಿದ್ದೇ ಆದರೆ, ಆತನಲ್ಲಿ ಶರಣಾಗತ ಆದದ್ದೇ ಆದರೆ—"

ಡಾಕ್ಟರ್ ಶ್ರೀನಾಥ: "ಆದರೆ, ಮಹಾಶಯರೆ, ಪ್ರಾರಬ್ಧದಿಂದ ತಪ್ಪಿಸಿಕೊಳ್ಳೋದು ಎಲ್ಲಿ ಬಂತು ?"

ಶ್ರೀರಾಮಕೃಷ್ಣರು: "ಅದರ ಕಿಂಚಿತ್ ಭಾಗವನ್ನೇನೊ ಅನುಭವಿಸ ಬೇಕಾಗುತ್ತದೆ. ಆದರೆ ಆತನ ನಾಮಬಲದಿಂದ ಪ್ರಾರಬ್ಧದ ಬಹುಭಾಗ ರದ್ದಾಗಿ ಹೋಗಿಬಿಡುತ್ತದೆ. ಒಬ್ಬ ತನ್ನ ಪ್ರಾರಬ್ಧದ ಫಲವಾಗಿ ಏಳು ಜನ್ಮಗಳವರೆಗೆ ಕುರುಡನಾಗಿ ಹುಟ್ಟಬೇಕಾಗಿತ್ತು. ಆದರೆ ಆತ ಗಂಗಾಸ್ನಾನ ಮಾಡಿದ. ಗಂಗಾಸ್ನಾನ ಮಾಡಿದರೆ ಮುಕ್ತಿ ದೊರೆಯುತ್ತದೆ. ಈ ಜನ್ಮ ದಲ್ಲೇನೊ ಆತ ಕುರುಡನಾಗೇ ಉಳಿದುಕೊಂಡ, ಆದರೆ ಉಳಿದ ಆರು ಜನ್ಮಗಳನು ಆತ ಎತ್ತಬೇಕಾಗಿ ಬರಲಿಲ್ಲ."

ಡಾಕ್ಟರ್ ಶ್ರೀನಾಥ: "ಆದರೆ, ಮಹಾಶಯರೆ, ಯಾರೂ ಪ್ರಾರಬ್ಧ ದಿಂದ ತಪ್ಪಿಸಿಕೊಳ್ಳಲಾಗೋದಿಲ್ಲ ಅಂತ ಶಾಸ್ತ್ರಗಳು ಹೇಳುತ್ತಿವೆಯಲ್ಲ."

ಡಾಕ್ಟರ್ ಶ್ರೀನಾಥ ಈ ವಿಷಯವಾಗಿ ತರ್ಕಮಾಡಲು ಉತ್ಸುಕ ನಾಗಿದ್ದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈಶ್ವರಕೋಟಿಗು, ಜೀವ ಕೋಟಿಗು ಅಜಗಜಾಂತರ ವ್ಯತ್ಯಾಸ ಎಂಬುದನ್ನು ಏಕೆ ನೀನು ಆತನಿಗೆ ಹೇಳಬಾರದು ? ಈಶ್ವರಕೋಟಿ ಎಂದಿಗೂ ಪಾಪಕೃತ್ಯಗಳನ್ನು ಮಾಡೋ ದಿಲ್ಲ ಎಂಬುದನ್ನು ಏಕೆ ನೀನು ಆತನಿಗೆ ಹೇಳಕೂಡದು ?"

ಮಾಸ್ಟರ್ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ರಾಖಾಲನಿಗೆ ಹೇಳುತ್ತಿದಾನೆ: "ನೀನು ಹೇಳು."

ಕೆಲವು ನಿಮಿಷಗಳಾದನಂತರ ಡಾಕ್ಟರುಗಳು ಹೊರಟುಹೋದರು. ಈಗ ಪರಮಹಂಸರು ರಾಖಾಲಹಾಲದಾರನೊಡನೆ ಮಾತುಕತೆ ಆಡುತ್ತಿದಾರೆ.

ರಾಖಾಲಹಾಲದಾರ: "ಡಾಕ್ಟರ್ ಶ್ರೀನಾಥ ವೇದಾಂತ ಚರ್ಚೆ ಮಾಡುತ್ತಿರುತ್ತಾನೆ. ಆತ ಯೋಗವಾಸಿಷ್ಠವನ್ನು ಓದುತ್ತಿದಾನೆ."

ಶ್ರೀರಾಮಕೃಷ್ಣರು: "ಸಂಸಾರಿಯಾಗಿದ್ದು, 'ಎಲ್ಲವೂ ಸ್ವಪ್ನವತ್' ಅಂತ ಹೇಳೋದು ಸರಿಯಲ್ಲ."

ಒಬ್ಬ ಭಕ್ತ, ಕಾಳಿದಾಸ ಎಂಬುವನ ಮಾತೆತ್ತಿ: "ಆತನೂ ವೇದಾಂತ ಚರ್ಚೆಮಾಡುತ್ತಾನೆ; ಆದರೆ ಆತ ಮೊಕದ್ದಮೆಗಳಲ್ಲಿ ತನ್ನ ಸ್ವತ್ತನ್ನೆಲ್ಲಾ ಕಳೆದುಕೊಂಡುಬಿಟ್ಟಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಹೌದು, ಎಲ್ಲವೂ ಮಾಯೆ ಅಂತ ಹೇಳೋದೂ, ಕೋರ್ಟಿಗೂ ಅಲೆಯುತ್ತಿರೋದು! (ರಾಖಾಲನಿಗೆ) ಜನಾಯಿಯ ಮುಖ್ಯೋಪಾಧ್ಯಾಯನೂ ಮೊದಲು ಮೊದಲು ಬಡಾಯಿ ಮಾತು ಆಡುತ್ತಿದ್ದ. ಆದರೆ ಕೊನೆಗೆ ಆತನಿಗೆ ಬುದ್ಧಿ ಬಂತು. ನನ್ನ ಶರೀರಾರೋಗ್ಯ ಚೆನ್ನಾಗಿದ್ದರೆ ಡಾಕ್ಟರ್ ಶ್ರೀನಾಥನೊಡನೆ ಇನ್ನೂ ಸ್ವಲ್ಪ ಮಾತನಾಡಬಹುದಾಗಿತ್ತು. ಜ್ಞಾನದ ಸಂಬಂಧವಾಗಿ ಮಾತಾಡುವುದರಿಂದಲೇ ಜ್ಞಾನಿಯಾಗಲು ಸಾಧ್ಯವೆ?"

ರಾಖಾಲಹಾಲದಾರ: "ನೀವು ಹೇಳುವುದು ಸರಿ. ಜ್ಞಾನ-ಗೀನದ ಸಂಬಂಧವಾಗಿ ಬಹಳವಾಗಿ ನೀರು ಕುಡಿದಿದೇನೆ. ಈಗ ನನಗೆ ಕಿಂಚಿತ್ ಭಕ್ತಿ ದೊರೆತುಬಿಟ್ಟದ್ದೇ ಆದರೆ ಬದುಕಿಕೊಂಡೆ. ಅಂದು ನಾನು ಒಂದು ವಿಷಯ ಕೇಳಬೇಕು ಅಂತ ಬಂದಿದ್ದೆ. ನೀವಾಗೇ ಅದರ ಮೀಮಾಂಸೆಯನ್ನು ಮಾಡಿಕೊಟ್ಟುಬಿಟ್ಟಿರಿ."

ಶ್ರೀರಾಮಕೃಷ್ಣರು; "ಏನದು?"

ರಾಖಾಲಹಾಲದಾರ: "ಮಹಾಶಯರೆ, ಅಂದು ಆ ಹುಡುಗ (ಚಿಕ್ಕ ನರೇನನನ್ನು ತೋರಿಸಿ) ಒಳಕ್ಕೆ ಬಂದೊಡನೆಯೆ, ಆತ 'ಜಿತೇಂದ್ರಿಯ' ಅಂತ ಹೇಳಿದಿರಿ."

ಶ್ರೀರಾಮಕೃಷ್ಣರು: "ಹೌದು, ನಿಜ. ಆತನ ಹೃದಯದಲ್ಲಿ ಕಾಮ ಪ್ರವೃತ್ತಿ ಲೇಶಮಾತ್ರವೂ ಇಲ್ಲ. ಕಾಮ ಎಂಬುದು ಏನು ಎಂಬುದು

ತನಗೆ ಗೊತ್ತಿಲ್ಲವಲ್ಲ ಅಂತ ಆತ ಹೇಳುತ್ತಿದಾನೆ. (ಮಾಸ್ಟರಿಗೆ) ನನ್ನ ಶರೀರ ಮುಟ್ಟಿನೋಡು. ನನಗೆ ರೋಮಾಂಚನವಾಗುತ್ತಿದೆ."

ಕಾಮಹೀನವಾದ ಶುದ್ಧ ಮನಸ್ಸಿನ ಭಾವನೆ ಪರಮಹಂಸರ ಮನಸ್ಸಿಗೆ ಬಂದೊಡನೆಯೆ ಅವರಿಗೆ ರೋಮಾಂಚನವಾಗಿಬಿಟ್ಟಿದೆ. ಅವರು ಯಾವಾಗಲೂ ಹೇಳೋದುಂಟು, ಕಾಮಹೀನವಾದ ಹೃದಯದಲ್ಲಿ ಭಗವಂತ ವ್ಯಕ್ತವಾಗುತ್ತಾನೆ ಅಂತ.

ರಾಖಾಲಹಾಲದಾರ ಪರಮಹಂಸರಿಂದ ಬೀಳ್ಕೊಂಡ.

ಪರಮಹಂಸರು ಇನ್ನೂ ಭಕ್ತರೊಡನೆ ಕುಳಿತೇ ಇದಾರೆ. ಒಬ್ಬಳು ಹುಚ್ಚಿ ಪರಮಹಂಸರನ್ನು ನೋಡಬೇಕೆಂದು ಬಹಳವಾಗಿ ಭಕ್ತರನ್ನೆಲ್ಲ ಪೀಡಿಸುತ್ತಿದಾಳೆ. ಆಕೆಯದು ಮಧುರ ಭಾವ. ಆಗಾಗ ತೋಟಕ್ಕೆ ಬಂದು ಓಡಿ ಓಡಿ ಹೋಗಿ ಪರಮಹಂಸರ ಕೊಠಡಿಯನ್ನು ಹೊಕ್ಕಿಬಿಡುತ್ತಿದ್ದಳು. ಹಾಗೆ ಮಾಡಕೂಡದೆಂದು ಭಕ್ತರು ಆಕೆಗೆ ಪ್ರಹಾರವನ್ನೂ ಕೊಟ್ಟಿದಾರೆ; ಆದರೂ ಆಕೆ ಹಾಗೆ ಮಾಡೋದನ್ನು ಬಿಡುತ್ತಿಲ್ಲ.

ಶಶಿ: "ಆ ಹುಚ್ಚಿ ಮತ್ತೇನಾದರು ಬಂದರೆ ನೂಕಿ ಹೊರಗಟ್ಟಿ ಬಿಡುತ್ತೇನೆ."

ಶ್ರೀರಾಮಕೃಷ್ಣರು ಕರುಣಾಮಯ ಕಂಠದಿಂದ: "ಬೇಡ, ಬೇಡ. ಹಾಗೆಲ್ಲ ಮಾಡಬಾರದು! ತಾನಾಗೆ ಬಂದು ತಾನಾಗೆ ಹೊರಟುಹೋಗುತ್ತಾಳೆ."

ರಾಖಾಲ: "ಮೊದಲು ಒಂದು ಹತ್ತಾರು ಜನ ಇವರನ್ನು ನೋಡಲು ಬಂದರೆಂದರೆ ನನಗೊಂದು ವಿಧವಾದ ಅಸೂಯೆ ಉಂಟಾಗುತ್ತಿತ್ತು. ಆದರೆ ಇವರು ಕೃಪೆಮಾಡಿ ಬುದ್ಧಿ ಕಲಿಸಿದರು, 'ಮದ್ಗುರು ಜಗದ್ಗುರು' ಎಂಬುದನ್ನು. ಇವರು ಕೇವಲ ನಮ್ಮ ಕೆಲವರಿಗಾಗಿ ಮಾತ್ರವೇ ಬಂದಿದಾರೇನು?"

ಶಶಿ: "ಅದೇನೊ ನಿಜ. ಆದರೆ ಇವರು ರೋಗಗ್ರಸ್ತರಾಗಿರೋವಾಗ ಏಕೆ? ಆಕೆ ಒಂದು ದೊಡ್ಡ ಪೀಡೆ!"

ರಾಖಾಲ: "ನಾವೆಲ್ಲರೂ ಅವರಿಗೆ ಒಂದಲ್ಲ ಒಂದು ವಿಧದಲ್ಲಿ ತೊಂದರೆಯನ್ನು ಕೊಡುತ್ತಲೇ ಇದೇವೆ. ನಾವೆಲ್ಲರೂ ಪೂರ್ಣತೆಯನ್ನು ಪಡೆದು ಅವರ ಹತ್ತಿರ ಬಂದೆವೇನು? ನಾವು ಅವರಿಗೆ ಕಷ್ಟ ಕೊಡಲಿಲ್ಲವೇನು? ನರೇಂದ್ರ - ಗಿರೇಂದ್ರ ಅವರೊಡನೆ ಹಿಂದೆ ಹೇಗೆ ವ್ಯವಹರಿಸಿದರು

ಏನುಕತೆ! ಅವರು ಅವರೊಡನೆ ಅಷ್ಟೊಂದಾಗಿ ವಾದಿಸುತ್ತಿದ್ದರು!''

ಶಶಿ: ''ನರೇಂದ್ರ ಬಾಯಲ್ಲಿ ಆಡಿದ್ದನ್ನು ಕೈಯಲ್ಲೂ ಮಾಡಿ ತೋರಿಸಿಬಿಡುತ್ತಿದ್ದ.''

ರಾಖಾಲ; ''ಡಾಕ್ಟರ್ ಸರ್ಕಾರ ಎಷ್ಟೊಂದು ಒರಟು ಒರಟಾಗಿ ಅವರೊಡನೆ ವ್ಯವಹರಿಸಿದಾನೆ! ಹಾಗೇ ನೋಡಲು ಹೋದರೆ ಯಾರೂ ನಿರ್ದೋಷಿಗಳಲ್ಲ.''

ಶ್ರೀರಾಮಕೃಷ್ಣರು ಪ್ರೀತಿಯಿಂದ ರಾಖಾಲನಿಗೆ: ''ಏನಾದರೂ ತಿನ್ನುತ್ತೀಯಾ?''

ರಾಖಾಲ: ''ಈಗ ಬೇಡಿ. ಆಮೇಲೆ.''

ಪರಮಹಂಸರು ಮಾಸ್ಟರಿಗೆ ಸನ್ನೆಯ ಮೂಲಕ ತಿಳಿಸುತ್ತಿದಾರೆ: ''ಇಂದು ನೀನು ಇಲ್ಲೇ ಊಟಮಾಡುವೆಯೇನು?''

ರಾಖಾಲ ಮಾಸ್ಟರಿಗೆ: ''ಇಂದು ನೀವು ಇಲ್ಲೇ ಊಟಮಾಡಿ. ಅವರೂ ಹಾಗೇ ಹೇಳುತ್ತಿದಾರೆ.''

ಪರಮಹಂಸರು ಐದು ವರ್ಷದ ಹಸುಳೆಯ ಹಾಗೆ ದಿಗಂಬರರಾಗಿ ಕುಳಿತಿದಾರೆ. ಆ ಸಮಯಕ್ಕೆ ಸರಿಯಾಗೇ ಆ ಹುಚ್ಚಿ ಮೆಟ್ಟಲುಗಳನ್ನು ಹತ್ತಿಬಂದು ಪರಮಹಂಸರ ಕೊಠಡಿಯ ಬಾಗಿಲ ಹತ್ತಿರ ನಿಂತುಕೊಂಡಳು.

ಮಾಸ್ಟರ್ ಮೆಲ್ಲಗೆ ಶಶಿಗೆ: ''ನಮಸ್ಕಾರಮಾಡಿ ಹೊರಟುಹೋಗೋ ಹಾಗೆ ಹೇಳಿಬಿಡು. ಬೇರೆ ಯಾವ ನಾಟಕವನ್ನೂ ನಡೆಸಬೇಡ.''

ಶಶಿ ಆಕೆಯನ್ನು ಕೆಳಕ್ಕೆ ಇಳಿಸಿಬಿಟ್ಟ.

ಇಂದು ಬಂಗಾಳಿ ಹೊಸ ವರ್ಷಾರಂಭ. ಅನೇಕ ಮಂದಿ ಭಕ್ತೆಯರು ಬಂದಿದಾರೆ. ಪರಮಹಂಸರಿಗೆ ಮತ್ತು ಶ್ರೀ ಶಾರದಾದೇವಿಯವರಿಗೆ ಪ್ರಣಾಮಮಾಡಿ ಅವರಿಂದ ಆಶೀರ್ವಾದವನ್ನು ಪಡೆಯುತ್ತಿದಾರೆ. ಬಲ ರಾಮನ ಮತ್ತು ಮನಮೋಹನನ ಮನೆಯ ಹೆಂಗಸರು, ಬಾಗ್‌ಬಸಾರಿನ ಬ್ರಾಹ್ಮಣಿ, ಇನ್ನೂ ಅನೇಕ ಹೆಂಗಸರು ಬಂದಿದಾರೆ. ಅವರಲ್ಲಿ ಕೆಲಕೆಲವರು ತಮ್ಮ ತಮ್ಮ ಮಕ್ಕಳನ್ನೂ ಕರೆದುಕೊಂಡು ಬಂದಿದಾರೆ.

ಭಕ್ತೆಯರಲ್ಲಿ ಕೆಲವರು ಪರಮಹಂಸರ ಪಾದಪದ್ಮಗಳಿಗೆ ಹೂವು ಮತ್ತು ಕುಂಕುಮವನ್ನು ಅರ್ಪಿಸುತ್ತಿದಾರೆ. ಒಂಬತ್ತೊ ಹತ್ತೊ ವಯಸ್ಸಿನ ಇಬ್ಬರು ಹುಡುಗಿಯರು ಹಾಡುಗಳನ್ನು ಹಾಡಲಾರಂಭಿಸಿದಾರೆ.

ಹಾ ! ಸುತ್ತುತಿರುವೆವು ನಾವು, ವಿಶ್ರಾಂತಿಯಿನಿತಿಲ್ಲ
ಬಂದುದೆಲ್ಲಿಂದಲೋ, ನಡೆವುದೆಲ್ಲೋ ? . . .

ಬಳಿಕ ಹಾಡುತ್ತಿದಾರೆ:

ಅವನೆ ಶ್ಯಾಮ ಅವಳೆ ರಾಧೆ
ಬರುವರಿತ್ತ ಧಾವಿಸಿ.
ಕೊಳಲನೂದಿ ನಯನ ಬಾಣ-
ದಿಂದ ಜಗವ ಮೋಹಿಸಿ !

ಮತ್ತೆ ಹಾಡುತ್ತಿದಾರೆ:

ಶ್ರದ್ಧೆಯ ಸರೋವರದಿ ತಾಯನಾಮದ ನೌಕೆ
ತೇಲುತಿದೆ ನೋಡು ! . . .

ಶ್ರೀರಾಮಕೃಷ್ಣರು ಸನ್ನೆಯ ಮೂಲಕ ಹೇಳುತ್ತಿದಾರೆ: "ಬಹಳ ಒಳ್ಳೆಯದೆ ! ಭಗವತಿಯ ಸಂಬಂಧವಾಗಿ ಹಾಡುತ್ತಿದಾರೆ."

ಬಾಗ್‌ಬಸಾರಿನ ಬ್ರಾಹ್ಮಣಿಗೆ ಮಗುವಿನಂಥ ಸ್ವಭಾವ. ಪರಮಹಂಸರು ಸೌಜ್ಞೆಯ ಮೂಲಕ ರಾಖಾಲನಿಗೆ ಹೇಳುತ್ತಿದಾರೆ: "ಆಕೆಗೆ ಹಾಡುವಂತೆ ಹೇಳು."

ಬ್ರಾಹ್ಮಣಿ ಹಾಡುತ್ತಿದಾಳೆ. ಭಕ್ತರು ನಗುತ್ತಿದಾರೆ.

ಆಕೆ ಹಾಡುತ್ತಿದಾಳೆ:

ಸಿಧುವನದಲಿ ಅಪರೂಪಕೆ
ಸೀನೊಬ್ಬನೆ ಸಿಕ್ಕಿದೆ ಎಂದು
ಓ ಪ್ರಿಯತಮ ನಾನೊಬ್ಬಳೆ
ನಿನ್ನೊಡನಾಡುವೆನೆಂದು ! . . .

ಭಕ್ತೆಯರೆಲ್ಲರು ಕೆಳಕ್ಕೆ ಇಳಿದು ಹೋದರು.

ಮಧ್ಯಾಹ್ನವಾಗಿದೆ. ಮಾಸ್ಟರ್ ಮತ್ತು ಇನ್ನೂ ಕೆಲವು ಭಕ್ತರು ಪರಮಹಂಸರ ಹತ್ತಿರ ಕುಳಿತಿದಾರೆ. ನರೇಂದ್ರ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರು ಹೇಳುತ್ತಿರೋ ಹಾಗೆ ಆತ ಒರೆಯಿಂದ ತೆಗೆದ ಕತ್ತಿಯಂತೆ ಕಾಣುತ್ತಿದಾನೆ.

ಈಗ ನರೇಂದ್ರ ಪರಮಹಂಸರ ಹತ್ತಿರ ಕುಳಿತುಕೊಂಡು ಅವರ ಕಿವಿಗೆ ಬೀಳೋ ಹಾಗೆ ಹೆಂಗಸರ ಸಂಬಂಧವಾಗಿ ತನಗಿರೋ ಜುಗುಪ್ಸೆಯನ್ನು

ವ್ಯಕ್ತಪಡಿಸುತ್ತಿದಾನೆ. ಭಕ್ತರಿಗೆ ಹೇಳುತ್ತಿದಾನೆ: "ಹೆಂಗಸರು ಭಗವಂತನ ಸಾಕ್ಷಾತ್ಕಾರಕ್ಕೆ ಎಂಥ ದೊಡ್ಡ ವಿಘ್ನ!"

ಪರಮಹಂಸರು ಯಾವ ಮಾತನ್ನೂ ಆಡದೆ, ಆತ ಹೇಳುತ್ತಿರೋದನ್ನೆಲ್ಲ ಕೇಳುತ್ತ ಸುಮ್ಮನೆ ಕುಳಿತಿದಾರೆ.

ನರೇಂದ್ರ ಮತ್ತೆ ಹೇಳುತ್ತಿದಾನೆ: "ನನಗೆ ಬೇಕಾಗಿರೋದು ಶಾಂತಿ; ಭಗವಂತ ಕೂಡ ಬೇಕಾಗಿಲ್ಲ."

ಪರಮಹಂಸರು ನರೇಂದ್ರನನ್ನು ದಿಟ್ಟಿಸಿ ನೋಡುತ್ತಿದಾರೆ. ಅವರ ಬಾಯಿಂದ ಒಂದು ಮಾತೂ ಹೊರಡುತ್ತಿಲ್ಲ. ಆಗಾಗ ನರೇಂದ್ರ ಸ್ವರ ಹಾಕಿಕೊಂಡು ಪಠಿಸುತ್ತಿದಾನೆ, "ಸತ್ಯಂಜ್ಞಾನಮನಂತಮ್।" ಎಂಬುದಾಗಿ.

ಘಂಟೆ ರಾತ್ರಿ ಎಂಟು. ಪರಮಹಂಸರು ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ಒಬ್ಬಿಬ್ಬರು ಭಕ್ತರು ಅವರ ಸಮ್ಮುಖದಲ್ಲಿ ಕುಳಿತಿದಾರೆ. ಸುರೇಂದ್ರ ತನ್ನ ಆಫೀಸಿನ ಕೆಲಸ ಮುಗಿಸಿಕೊಂಡು, ಕೈಯಲ್ಲಿ ನಾಲ್ಕು ಕಿತ್ತಲೆ ಹಣ್ಣು ಎರಡು ಹೂವಿನ ಮಾಲೆ ಹಿಡಿದುಕೊಂಡು ಪರಮಹಂಸರ ಕೊಠಡಿಯನ್ನು ಪ್ರವೇಶಿಸಿದ. ಆತ ಭಕ್ತರ ಕಡೆ ಒಮ್ಮೊಮ್ಮೆ, ಪರಮಹಂಸರ ಕಡೆ ಒಮ್ಮೊಮ್ಮೆ ದೃಷ್ಟಿ ಹಾಕುತ್ತ ಪರಮಹಂಸರಿಗೆ ತನ್ನ ಹೃದಯದಲ್ಲಿನ ಕಷ್ಟಸುಖಗಳನ್ನು ಬಿಸಿದುಕೊಳ್ಳುತ್ತಿದಾನೆ.

ಸುರೇಂದ್ರ ಮಾಸ್ಟರ್ ಮೊದಲಾದವರ ಕಡೆ ತಿರುಗಿ: "ನಾನು ನನ್ನ ಆಫೀಸ್ ಕೆಲಸ ಮುಗಿಸಿಕೊಂಡು ಇಲ್ಲಿಗೆ ಬಂದೆ. ಭಾವಿಸಿದೆ: 'ಎರಡು ದೋಣಿಗಳ ಮೇಲೆ ಕಾಲಿಟ್ಟು ಏಕೆ ನಿಂತುಕೊಳ್ಳಲಿ?' ಅದಕ್ಕಾಗಿ ಮೊದಲು ಕೆಲಸವನ್ನೆಲ್ಲ ಮುಗಿಸಿಕೊಂಡು ಬಂದೆ. ಇಂದು ಹೊಸ ವರ್ಷಾರಂಭ; ಜೊತೆಗೆ ಮಂಗಳವಾರ ಬೇರೆ. ಕಾಳೀಘಟ್ಟಕ್ಕೆ ಹೋಗಲಾಗಲಿಲ್ಲ. ನನಗೆ ನಾನೇ ಹೇಳಿಕೊಂಡೆ: 'ಇವರೇ (ಪರಮಹಂಸರೇ) ಕಾಳೀ ಸ್ವರೂಪರು. ಕಾಳಿ ಯಾರು ಎಂಬುದನ್ನು ಇವರು ಚೆನ್ನಾಗಿ ಅರಿತುಕೊಂಡಿದಾರೆ. ಇವರ ದರ್ಶನ ಮಾಡಿಬಿಟ್ಟರೆಯೇ ಯಥೇಷ್ಟ.'"

ಪರಮಹಂಸರು ಕಿರುನಗೆಯನ್ನು ವ್ಯಕ್ತಗೊಳಿಸಿದರು.

ಸುರೇಂದ್ರ: "ಗುರು, ಸಾಧು ಇವರ ದರ್ಶನಕ್ಕೆ ಹೋಗೋವಾಗ ಕೈಯಲ್ಲಿ ಫಲಪುಷ್ಪಾದಿಗಳನ್ನು, ಹಣ್ಣುಹಂಪಲಗಳನ್ನು ತೆಗೆದುಕೊಂಡು ಹೋಗಬೇಕು ಅಂತ ಕೇಳಿದೇನೆ. ಅದಕ್ಕಾಗಿಯೇ ನಾನು ಇವನ್ನೆಲ್ಲ

ತೆಗೆದುಕೊಂಡು ಬಂದಿದೇನೆ. . . . (ಪರಮಹಂಸರಿಗೆ) ನಿಮಗಾಗಿ ನಾನು ಇಷ್ಟು ಹಣ ಖರ್ಚುಮಾಡುತ್ತಾ ಇದೇನೆ. ನನ್ನ ಹೃದಯದಲ್ಲಿ ಏನಿದೆ ಎಂಬುದು ಭಗವಂತನಿಗೇ ಗೊತ್ತು. ಕೆಲಕೆಲವರು ಒಂದು ದಮ್ಮಡಿ ಖರ್ಚುಮಾಡೋಕೂ ಬಹಳವಾಗಿ ಯೋಚಿಸುತ್ತಾರೆ; ಆದರೆ ಅಂಥವರೂ ಇದಾರೆ, ಸಾವಿರಗಟ್ಟಲೆ ಖರ್ಚಾದರೂ ಒಂದು ಕಿಂಚಿತ್ತೂ ಚಿಂತಿಸರು. ಭಗವಂತ, ಅಂತರ್ಯದಲ್ಲಿರೋ ಭಕ್ತಿಯನ್ನು ನೋಡಿ ಅರ್ಪಣೆಯನ್ನು ಸ್ವೀಕರಿಸುತ್ತಾನೆ.''

ಪರಮಹಂಸರು ತಮ್ಮ ತಲೆಯನ್ನು ಅಲ್ಲಾಡಿಸಿ, ಸುರೇಂದ್ರ ಹೇಳು ತ್ತಿರೋದು ಸರಿ ಎಂಬುದಾಗಿ ಸೂಚಿಸಿದರು.

ಸುರೇಂದ್ರ: ''ನಾನು ಇಲ್ಲಿಗೆ ನಿನ್ನೆ ಬರಲಾಗಲಿಲ್ಲ. ನಿಮ್ಮ ಭಾವಚಿತ್ರಕ್ಕೆ ಹೂವು-ಗೀವು ಎಲ್ಲಾ ಮುಡಿಸಿ ಅಲಂಕಾರಮಾಡಿದೆ.''

ಶ್ರೀರಾಮಕೃಷ್ಣರು ಸನ್ನೆಯ ಮೂಲಕ ಮಾಸ್ಟರಿಗೆ: ''ಆಹ! ಎಂಥ ಭಕ್ತಿ!''

ಸುರೇಂದ್ರ: ''ಇಲ್ಲಿಗೆ ಬರುತ್ತಿದ್ದಾಗ ನಾಲ್ಕು ಆಣೆ ಕೊಟ್ಟು ಈ ಎರಡು ಹೂವಿನ ಮಾಲೆಗಳನ್ನು ಕೊಂಡುಕೊಂಡೆ.''

ಭಕ್ತರಲ್ಲಿ ಅನೇಕರು ತಮ್ಮ ಮನೆಗೆ ಹೊರಟುಹೋಗಿದಾರೆ. ಪರಮ ಹಂಸರು ಮಾಸ್ಟರಿಗೆ ಹೇಳುತ್ತಿದಾರೆ, ತಮ್ಮ ಕೈಕಾಲುಗಳನ್ನು ಒತ್ತುವಂತೆ ಮತ್ತು ಗಾಳಿ ಬೀಸುವಂತೆ.

೧೬ನೆ ಏಪ್ರಿಲ್ ೧೮೮೬, ಚೈತ್ರ ಶುಕ್ಲ ತ್ರಯೋದಶಿ, ಶುಕ್ರವಾರ.

ಚಂದ್ರೋದಯವಾಗಿದೆ. ಬೆಳದಿಂಗಳು ಎಲ್ಲೆಲ್ಲೂ ಹಾಲು ಚೆಲ್ಲಿದ ಹಾಗೆ ಕಾಣುತ್ತಿದೆ. ಕಾಶೀಪುರದ ಮನೆಯ ಉದ್ಯಾನ ಮಾರ್ಗ, ಮರ ಗಳು, ಪುಷ್ಕರಣಿ ಇವೆಲ್ಲ ಚಂದ್ರನ ಬೆಳಕಿನಿಂದ ಬಹಳ ಚೆನ್ನಾಗಿ ಬೆಳಗು ತ್ತಿವೆ. ಗಿರೀಶ, ಮಾಸ್ಟರ್, ಲಾಟು ಮತ್ತು ಇನ್ನೂ ಕೆಲವು ಭಕ್ತರು ಪುಷ್ಕರಣಿಯ ಹಂತಗಳ ಮೇಲೆ ಕುಳಿತಿದಾರೆ. ಮನೆ ಇರೋದು ಪುಷ್ಕರಣಿಯ ಪಶ್ಚಿಮಕ್ಕೆ. ಪರಮಹಂಸರ ಕೊಠಡಿಯಲ್ಲಿ ದೀಪ ಉರಿಯು ತ್ತಿದೆ. ಅವರು ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ಕೊಠಡಿಯಲ್ಲಿ ಅನೇಕ ಮಂದಿ ಭಕ್ತರು ಕುಳಿತಿದಾರೆ.

ಕೆಲವು ನಿಮಿಷಗಳಾದನಂತರ ಮಾಸ್ಟರ್ ಮತ್ತು ಗಿರೀಶ ಹಣ್ಣು,

ಹಂಪಲ ವೃಕ್ಷಗಳಿಂದ ಕೂಡಿದ ಒಂದು ಉದ್ಯಾನಮಾರ್ಗದಲ್ಲಿ ಒಮ್ಮೊಮ್ಮೆ ಮಾತುಕತೆಯಾಡುತ್ತ ಅಡ್ಡಾಡುತ್ತಿದಾರೆ.

ಮಾಸ್ಟರ್: "ಚಂದ್ರನ ಬೆಳಕು ಎಷ್ಟು ಸುಂದರವಾದ್ದು! ಎಷ್ಟು ಅನಂತ ಕಾಲದಿಂದ ಪ್ರಕೃತಿಯಲ್ಲಿ ಈ ನಿಯಮ ನಡೆದುಬರುತ್ತಿದೆ!"

ಗಿರೀಶ: "ಅದು ನಿನಗೆ ಹೇಗೆ ಗೊತ್ತು?"

ಮಾಸ್ಟರ್: "ಪ್ರಕೃತಿಯ ನಿಯಮ ಬದಲಾವಣೆಯಾಗೋದಿಲ್ಲ. ಪಾಶ್ಚಾತ್ಯ ವಿಜ್ಞಾನಿಗಳು ದೂರದರ್ಶಕ ಯಂತ್ರದ ಸಹಾಯದಿಂದ ಹೊಸ ಹೊಸ ನಕ್ಷತ್ರಗಳನ್ನು ಕಂಡುಹಿಡಿದಿದಾರೆ. ಚಂದ್ರನಲ್ಲಿ ಪರ್ವತಗಳಿವೆ; ಅವರು ಅವನ್ನು ನೋಡಿದಾರೆ."

ಗಿರೀಶ: "ಅದು ವಾಸ್ತವಿಕವಾದುದೇ ಎಂದು ಹೇಳೋ ಬಗೆ ಹೇಗೆ? ನನಗಂತೂ ಅದರಲ್ಲಿ ವಿಶ್ವಾಸವಿಲ್ಲ."

ಮಾಸ್ಟರ್: "ಏಕೆ, ದೂರದರ್ಶಕ ಯಂತ್ರದಿಂದ ಸ್ಪಷ್ಟವಾಗಿ ನೋಡಬಹುದಲ್ಲ."

ಗಿರೀಶ: "ಅವನ್ನು ನಿಜವಾಗಿ ನೋಡುತ್ತಾ ಇದೇವೆ ಎಂಬುದಾಗಿ ಹೇಳಲು ತಾನೆ ಹೇಗೆ ಸಾಧ್ಯ? ಚಂದ್ರನಿಗು ಭೂಮಿಗು ಮಧ್ಯೆ ಬೇರೆ ಏನಾದರು ಇದ್ದು, ಅದರ ಮೂಲಕ ಬೆಳಕು ಹಾದುಬರುವಾಗ ಆ ರೀತಿ ಯಾಗಿ ಅದು ಕಂಡುಬಂದರೂ ಬರಬಹುದು."

ನರೇಂದ್ರ, ರಾಖಾಲ, ನಿರಂಜನ, ಶರಚ್ಚಂದ್ರ, ಶಶಿ, ಬಾಬುರಾಮ, ಕಾಳೀಪ್ರಸಾದ, ಯೋಗೀಂದ್ರ, ಲಾಟು ಇವರೇ ಮೊದಲಾದ ಯುವಕ ಭಕ್ತರು ಪರಮಹಂಸರ ಶುಶ್ರೂಷೆ ಮಾಡಿಕೊಂಡು ಕಾಶೀಪುರದ ತೋಟದ ಮನೆಯಲ್ಲೇ ಇದ್ದುಕೊಂಡಿದಾರೆ. ರಾತ್ರಿಯನ್ನು ಪಂಚವಟಿಯ ಕೆಳಗೆ ಭಗವಂತನ ಧ್ಯಾನದಲ್ಲಿ ಕಳೆಯುತ್ತಿದಾರೆ.

ಗಿರೀಶ, ಲಾಟು, ಮಾಸ್ಟರ್ ಇವರು ಪರಮಹಂಸರ ಕೊಠಡಿಗೆ ಹೋಗಿ ನೋಡಿದಾಗ, ಅವರು ತಮ್ಮ ಹಾಸಿಗೆ ಮೇಲೆ ಕುಳಿತುಕೊಂಡಿದ್ದರು. ಶಶಿ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರು ಅವರಿಗೆ ಶುಶ್ರೂಷೆ ಮಾಡುತ್ತಿದಾರೆ. ಬಾಬುರಾಮ, ನಿರಂಜನ, ರಾಖಾಲ ಕೊಠಡಿಗೆ ಬಂದಿದಾರೆ. ಆ ಕೊಠಡಿ ಸ್ವಲ್ಪ ದೊಡ್ಡದೇ ಆಗಿತ್ತು. ಆದಕ್ಕಾಗೇ ಪರಮಹಂಸರ ಹಾಸಿಗೆಯ ಹತ್ತಿರವೇ ಅವರಿಗೆ ಅತ್ಯಂತ ಆವಶ್ಯಕವಾಗಿ

ಬೇಕಾಗೋ ಔಷಧ ಮತ್ತು ಇನ್ನೂ ಕೆಲವು ವಸ್ತುಗಳನ್ನು ಇಟ್ಟಿದಾರೆ. ಆ ಕೊಠಡಿಗೆ ಉತ್ತರ ದಿಕ್ಕಿನಿಂದ ಪ್ರವೇಶ.

ಇಡೀ ರಾತ್ರಿಯೆಲ್ಲ ಪರಮಹಂಸರಿಗೆ ಶುಶ್ರೂಷೆ ಮಾಡಬೇಕಾಗಿದ್ದುದರಿಂದ, ಭಕ್ತರು ಒಬ್ಬರಾದ ಮೇಲೆ ಒಬ್ಬರು ಎಚ್ಚೆತ್ತಿರುತ್ತಿದ್ದರು. ಪರಮಹಂಸರಿಗೆ ಸೊಳ್ಳೆ-ಪರದೆ ಕಟ್ಟಿ ಅವರನ್ನು ಮಲಗಿಸಿದನಂತರ, ಸರದಿ ಯಾರದೊ ಆತ ಆ ಕೊಠಡಿಯ ಪೂರ್ವ ಭಾಗದಲ್ಲಿ ಒಂದು ಮಂದಲಿಗೆ ಹಾಸಿಕೊಂಡು, ಒಮ್ಮೊಮ್ಮೆ ಕುಳಿತೊ, ಒಮ್ಮೊಮ್ಮೆ ಸುಮ್ಮನೆ ಮಲಗಿಕೊಂಡೊ ಕಾಲ ಕಳೆಯುತ್ತಿದ್ದ. ಪರಮಹಂಸರಿಗೆ ರೋಗದ ದೆಸೆಯಿಂದ ಬಹುಮಟ್ಟಿಗೆ ನಿದ್ದೆಯೇ ಹತ್ತುತ್ತಿರಲಿಲ್ಲ. ಆದ್ದರಿಂದ ಶುಶ್ರೂಷೆ ಮಾಡೋನು ತನ್ನ ಸರದಿಯ ಕೆಲವು ಘಂಟೆಗಳನ್ನು ಕುಳಿತೇ ಕಳೆಯ ಬೇಕಾಗಿತ್ತು.

ಈ ದಿನ ಪರಮಹಂಸರ ರೋಗ ಸ್ವಲ್ಪ ಉತ್ತಮಗೊಂಡಿರುವಂತೆ ಕಾಣುತ್ತಿದೆ. ಭಕ್ತರೆಲ್ಲರೂ ಬಂದು ಅವರಿಗೆ ಪ್ರಣಾಮಮಾಡಿ ನೆಲದ ಮೇಲೆ ಕುಳಿತುಕೊಂಡರು. ಬೆಳಕನ್ನು ತಮ್ಮ ಹತ್ತಿರಕ್ಕೆ ತಂದಿಡುವಂತೆ ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ. ಅವರು ಗಿರೀಶನನ್ನು ಅತ್ಯಂತ ಆನಂದದಿಂದ ಬರಮಾಡಿಕೊಂಡರು.

ಶ್ರೀರಾಮಕೃಷ್ಣರು ಗಿರೀಶನಿಗೆ: "ಆರೋಗ್ಯವೆ? (ಲಾಟುವಿಗೆ) ಈತನಿಗೆ ಹುಕ್ಕ ತಯಾರುಮಾಡಿಕೊಡು. ಎಲಡಿಕೆ ತಂದುಕೊಡು."

ಸ್ವಲ್ಪ ಹೊತ್ತಾದನಂತರ ಅವರು ಮತ್ತೆ ಲಾಟುವಿಗೆ ಹೇಳುತ್ತಿದಾರೆ ಗಿರೀಶನಿಗೆ ಸ್ವಲ್ಪ ಉಪಾಹಾರವನ್ನು ತಂದುಕೊಡೋ ಹಾಗೆ. ಉಪಾಹಾರವನ್ನು ಕೊಂಡುಕೊಂಡುಬರಲು ಅಂಗಡಿಗೆ ಕಳುಹಿಸಲಾಗಿದೆ ಎಂಬುದಾಗಿ ಲಾಟು ಪರಮಹಂಸರಿಗೆ ತಿಳಿಸಿದ.

ಪರಮಹಂಸರು ತಮ್ಮ ಹಾಸಿಗೆ ಮೇಲೆ ಕುಳಿತುಕೊಂಡಿದಾರೆ. ಒಬ್ಬ ಭಕ್ತ ಅವರಿಗೆ ಕೆಲವು ಹೂವಿನ ಮಾಲೆಗಳನ್ನು ತಂದು ಅರ್ಪಿಸಿದ. ಅವರು ಅವನ್ನು ತಾವಾಗೇ ಒಂದೊಂದನ್ನಾಗಿ ತಮ್ಮ ಕೊರಳಿಗೆ ಹಾಕಿಕೊಳ್ಳುತ್ತಿದಾರೆ. ಅವರ ಹೃದಯದಲ್ಲಿ ವಾಸಿಸುತ್ತಿರೋ ಭಗವಂತನನ್ನು ಅವರು ಆ ರೀತಿಯಾಗಿ ಪೂಜಿಸುತ್ತಿದ್ದರೇನು? ಭಕ್ತರೆಲ್ಲರೂ ಆಶ್ಚರ್ಯ ಚಕಿತರಾಗಿ ಅವರ ಕಡೆ ನೋಡುತ್ತಿದಾರೆ. ಪರಮಹಂಸರು ತಮ್ಮ ಕೊರಳಿನಿಂದ ಎರಡು ಹೂವಿನ ಮಾಲೆಗಳನ್ನು ತೆಗೆದು ಗಿರೀಶನಿಗೆ ಕೊಟ್ಟರು.

ಪರಮಹಂಸರು, ಉಪಾಹಾರ ಬಂತೇನು ಅಂತ ಆಗಾಗ ಕೇಳು ತ್ತಲೇ ಇದಾರೆ.

ಮಾಸ್ಟರ್ ಬೀಸಣಿಗೆಯಿಂದ ಪರಮಹಂಸರಿಗೆ ಗಾಳಿ ಬೀಸುತ್ತಿದಾನೆ. ಒಬ್ಬ ಭಕ್ತ ತಂದಿದ್ದ ಒಂದು ಚಂದನದ ಬೀಸಣಿಗೆ ಅವರ ಹಾಸಿಗೆ ಮೇಲೆ ಬಿದ್ದಿತ್ತು. ಪರಮಹಂಸರು ಅದನ್ನು ತೆಗೆದು ಮಾಸ್ಟರ ಕೈಗೆ ಕೊಟ್ಟರು. ಈಗ ಮಾಸ್ಟರ್ ಆ ಬೀಸಣಿಗೆಯಿಂದ ಗಾಳಿ ಬೀಸುತ್ತಿದಾನೆ. ಪರಮ ಹಂಸರು ತಮ್ಮ ಕೊರಳಿನಿಂದ ಮಾಸ್ಟರಿಗೂ ಎರಡು ಮಾಲೆಗಳನ್ನು ತೆಗೆದುಕೊಟ್ಟರು.

ಮಾಸ್ಟರ್ ತನ್ನ ಏಳೊ ಎಂಟೊ ವರ್ಷದ ಹುಡುಗನನ್ನು ಒಂದೂವರೆ ವರ್ಷದ ಹಿಂದೆ ಕಳೆದುಕೊಂಡಿದ್ದ. ಆ ಹುಡುಗ ಪರಮಹಂಸರನ್ನು ಅನೇಕ ವೇಳೆ ದರ್ಶನ ಮಾಡಿದ್ದ. ಈಗ ಲಾಟು ಮಾಸ್ಟರ ಸಂಬಂಧವಾಗಿ ಪರಮಹಂಸರಿಗೆ ಹೇಳುತ್ತಿದಾನೆ.

ಲಾಟು : "ಈತ ತನ್ನ ಸತ್ತ ಮಗನ ಕೆಲವು ಪುಸ್ತಕಗಳನ್ನು ನೋಡಿ ನಿನ್ನೆ ರಾತ್ರಿ ಬಹಳವಾಗಿ ಅತ್ತ. ಈತನ ಹೆಂಡತಿಯೂ ಪುತ್ರಶೋಕದಿಂದ ಹುಚ್ಚಿಯಂತೆಯೇ ಆಗಿಬಿಟ್ಟಿದಾಳೆ. ಈಗ ಆಕೆ ತನ್ನ ಮಕ್ಕಳನ್ನು ಹೊಡೆ ಯೋದು ಬಡಿಯೋದು ಹೀಗೆಲ್ಲಾ ಮಾಡುತ್ತಿದಾಳೆ. ಈತ ಒಮ್ಮೊಮ್ಮೆ ರಾತ್ರಿಯನ್ನು ಇಲ್ಲೇ ಕಳೆದುಬಿಡುತ್ತಾ ಇರುವುದರಿಂದ, ಆಕೆ ಮನೆಯಲ್ಲಿ ಒಂದು ನಾಟಕವನ್ನೇ ನಡೆಸಿಬಿಡುತ್ತಾ ಇದಾಳೆ."

ಪರಮಹಂಸರು ಈ ದುಃಖವಾರ್ತೆಯನ್ನು ಕೇಳಿ, ಚಿಂತಾಮಗ್ನರಾಗಿ ರುವಂತೆ ತೋರುತ್ತ ಸುಮ್ಮನೆ ಕುಳಿತಿದಾರೆ.

ಗಿರೀಶ : "ಅರ್ಜುನ ಅಷ್ಟೊಂದಾಗಿ ಗೀತೆ ಕೇಳಿಯೂ, ಅಭಿಮನ್ಯು ವಿನ ಮರಣಕ್ಕಾಗಿ ಒಮ್ಮೆಗೇ ಮೂರ್ಛಿತನಾಗಿಬಿಟ್ಟ. ಅಂಥಾದ್ದರಲ್ಲಿ ಈತ ತನ್ನ ಮಗನಿಗಾಗಿ ಶೋಕಪಡುವುದರಲ್ಲಿ ಆಶ್ಚರ್ಯಪಡಬೇಕಾದ್ದೇನಿಲ್ಲ."

ಗಿರೀಶನಿಗೆ ಉಪಾಹಾರವನ್ನು ಒಂದು ತಟ್ಟೆಯಲ್ಲಿ ತಂದಿದಾರೆ. ಪರಮಹಂಸರು ಅದರ ಕಿಂಚಿತ್ ಭಾಗವನ್ನು ತೆಗೆದುಕೊಂಡು ಅದನ್ನು ಪ್ರಸಾದವನ್ನಾಗಿ ಮಾಡಿ ಗಿರೀಶನಿಗೆ ಕೊಟ್ಟರು. ಗಿರೀಶ ಪರಮಹಂಸರ ಮುಂದೆಯೇ ಕುಳಿತು ಅದನ್ನು ತಿನ್ನಲಾರಂಭಿಸಿದ. ಆತನಿಗೆ ಕುಡಿಯೋಕೆ ನೀರು ಬೇಕ್ಕಾಯಿತು. ಪರಮಹಂಸರ ಕೊಠಡಿಯ ಆಗ್ನೇಯ ಮೂಲೆ ಯಲ್ಲಿ ಮಣ್ಣಿನ ಹೂಜದಲ್ಲಿ ನೀರು ಇಟ್ಟಿತ್ತು. ಈಗ ಗ್ರೀಷ್ಮ ಋತು.

ಬಿಸಲಿನ ಬೇಗೆ ಜಾಸ್ತಿಯಾಗಿದೆ. ಪರಮಹಂಸರು ಹೇಳುತ್ತಿದಾರೆ: "ಇಲ್ಲಿ ಬಹಳ ಒಳ್ಳೆ ತಣ್ಣೀರಿದೆ."

ಪರಮಹಂಸರು ಅತ್ಯಂತ ರೋಗಗ್ರಸ್ತರಾಗಿದಾರೆ. ಎದ್ದು ನಿಂತು ಕೊಳ್ಳಲೂ ತ್ರಾಣವಿಲ್ಲ. ಆದರೆ ಭಕ್ತರ ಕಣ್ಣಿಗೆ ಬೀಳುತ್ತಿರೋ ಆಶ್ಚರ್ಯ ಕರವಾದ ದೃಶ್ಯ ಏನು ಎಂಬುದು ಗೊತ್ತೆ? ಪರಮಹಂಸರೇ ಹುಟ್ಟೆದ ನಿರ್ವಾಣದಲ್ಲಿ ಹಾಸಿಗೆಯಿಂದೆದ್ದು ಆ ಹೂಜಿಯ ಕಡೆ ನಡೆದುಹೋಗಿ ಅದರಿಂದ ಒಂದು ಲೋಟಕ್ಕೆ ನೀರು ಬಗ್ಗಿಸುತ್ತಾ ಇದಾರೆ! ಇದನ್ನು ನೋಡಿ ಭಕ್ತರ ನಿಶ್ವಾಸ ಸ್ಥಿರವಾಗಿ ನಿಂತುಬಿಟ್ಟಿತು. ನೀರನ್ನು ಲೋಟಕ್ಕೆ ಬಗ್ಗಿಸಿದನಂತರ ಅದು ತಣ್ಣಗಿರುವುದೊ ಇಲ್ಲವೊ ಎಂಬುದನ್ನು ಅರಿಯ ಲೋಸುಗ ಆ ಲೋಟದಿಂದ ಕಿಂಚಿತ್ ನೀರನ್ನು ಪರಮಹಂಸರು ತಮ್ಮ ಕೈಯ ಮೇಲೆ ಸುರಿದುಕೊಂಡು ನೋಡಿದರು. ನೋಡುತ್ತಾರೆ, ಅದು ಅಷ್ಟೇನು ತಣ್ಣಗಿಲ್ಲ. ಅದಕ್ಕಿಂತಲೂ ತಣ್ಣಗಿರೋ ನೀರು ಬೇರೆ ಯಾವುದೂ ಇಲ್ಲದೆ ಇದ್ದುದರಿಂದ, ಮನಸ್ಸಿಲ್ಲದ ಮನಸ್ಸಿನಿಂದ ಅದೇ ನೀರನ್ನು ಗಿರೀಶನಿಗೆ ಕೊಟ್ಟರು.

ಗಿರೀಶ ಉಪಾಹಾರವನ್ನು ತಿನ್ನುತ್ತಾ ಇದಾನೆ. ಭಕ್ತರು ಸುತ್ತಲೂ ಕುಳಿತಿದಾರೆ. ಮಾಸ್ಟರ್ ಪರಮಹಂಸರಿಗೆ ಬೀಸಣಿಗೆಯಿಂದ ಗಾಳಿ ಬೀಸುತ್ತಿದಾನೆ.

ಗಿರೀಶ ಶ್ರೀರಾಮಕೃಷ್ಣರಿಗೆ: "ದೇವೇನಬಾಬು ಸಂಸಾರವನ್ನು ತ್ಯಜಿಸಲು ನಿಶ್ಚಯಿಸಿದಾನೆ."

ಗಂಟಲ ರೋಗದ ದೆಸೆಯಿಂದ ಮಾತನಾಡುವುದು ಎಂದರೆ ಪರಮ ಹಂಸರಿಗೆ ಬಹಳ ಕಷ್ಟವಾಗುತ್ತಿದೆ. ಬಾಯ ಹತ್ತಿರ ಬೆರಳಿಟ್ಟು ಸನ್ನೆಯ ಮೂಲಕ ತಿಳಿಸುತ್ತಿದಾರೆ: "ಆತ ತನ್ನ ಪರಿವಾರದವರ ಊಟೋಪಚಾರ ಗಳಿಗೆ ವ್ಯವಸ್ಥೆ ಏನು ಮಾಡಿದಾನೆ? ಅವರನ್ನು ನೋಡಿಕೊಳ್ಳೋರು ಯಾರು?"

ಗಿರೀಶ: "ಆತ ಏನು ಮಾಡಿದಾನೊ ಅದು ನನಗೆ ಗೊತ್ತಿಲ್ಲ."

ಭಕ್ತರೆಲ್ಲರು ಸುಮ್ಮನೆ ಕುಳಿತಿದಾರೆ. ಗಿರೀಶ ಉಪಾಹಾರವನ್ನು ತಿನ್ನುತಿನ್ನುತ್ತಲೇ ಮತ್ತೆ ಮಾತನಾಡಲಾರಂಭಿಸಿದ.

ಗಿರೀಶ: "ಮಹಾಶಯರೆ, ಇವುಗಳಲ್ಲಿ ಯಾವುದು ಸರಿಯಾದ್ದು—

ಬಹಳ ವ್ಯಸನದಿಂದ ಸಂಸಾರ ತ್ಯಜಿಸೋದೊ ಅಥವಾ ಸಂಸಾರದಲ್ಲಿದ್ದೇ ಭಗವಂತನನ್ನು ಕರೆಯೋದೊ?"

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೀನು ಗೀತೆಯನ್ನು ಓದಿಲ್ಲ ವೇನು? ಸಂಸಾರದಲ್ಲಿದ್ದರೂ ಅನಾಸಕ್ತತೆಯಿಂದ ಅದರಲ್ಲಿನ ಕೆಲಸಕಾರ್ಯ ಗಳನ್ನು ಮಾಡೋದಾದರೆ, ಎಲ್ಲವೂ ಮಿಥ್ಯಾ ಎಂದು ಅರಿತು ಸಂಸಾರ ದಲ್ಲಿರೋದಾದರೆ ನಿಜವಾಗಿಯೂ ಭಗವಂತನ ಸಾಕ್ಷಾತ್ಕಾರ ದೊರೆತು ಬಿಡುತ್ತದೆ.

"ಯಾರು ವ್ಯಸನಪಡುತ್ತಾ ಸಂಸಾರವನ್ನು ತ್ಯಜಿಸುತ್ತಾರೊ, ಅವರು ಕೆಳಗಿನ ಅಂತಸ್ತಿಗೆ ಸೇರಿದವರು.

"ಸಂಸಾರೀ-ಜ್ಞಾನಿ ಯಾವ ರೀತಿಯವನು ಎಂಬುದು ಗೊತ್ತೆ? ಆತ ಗ್ಲಾಸಿನ ಮನೆಯಲ್ಲಿ ವಾಸಿಸೋ ವ್ಯಕ್ತಿಯ ಹಾಗೆ. ಆತ ಒಳಗಿರೋದು ಹೊರಗಿರೋದು ಎರಡನ್ನೂ ನೋಡಬಲ್ಲ."

ಮತ್ತೆ ಕೊಠಡಿಯಲ್ಲಿ ನಿಶ್ಶಬ್ದತೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಉಪಾಹಾರ ಬಿಸಿಬಿಸಿಯಾ ಗಿಯೂ ರುಚಿರುಚಿಯಾಗಿಯೂ ಇದೆ."

ಮಾಸ್ಟರು ಗಿರೀಶನಿಗೆ: "ಫಾಗುವಿನ ಅಂಗಡಿಯಿಂದ ತರಿಸಿದ್ದು. ಆತನ ಅಂಗಡಿ ಬಹಳ ಪ್ರಖ್ಯಾತವಾದ್ದು."

ಶ್ರೀರಾಮಕೃಷ್ಣರು ನಗುತ್ತ: "ಹೌದು, ಬಹಳ ಪ್ರಖ್ಯಾತವಾದ್ದು."

ಗಿರೀಶ ತಿನ್ನುತ್ತ ತಿನ್ನುತ್ತ ಮತ್ತೆ ನಗುತ್ತ: "ಬಹಳ ರುಚಿ ಯಾಗಿದೆ.

(ಶ್ರೀರಾಮಕೃಷ್ಣರಿಗೆ) "ಈಗ ನನ್ನ ಮನಸ್ಸು ಬಹಳ ಉಚ್ಚ ಸ್ಥಿತಿ ಯಲ್ಲಿದೆ. ಮತ್ತೆ ಅದು ಕೆಳಕ್ಕೆ ಇಳಿದುಬಿಡುತ್ತದೆಯಲ್ಲ ಏಕೆ?"

ಶ್ರೀರಾಮಕೃಷ್ಣರು: "ಸಂಸಾರಿಯ ಜೀವನ ಕೈಗೊಂಡರೆ ಅದು ಹೀಗೇ ಆಗುತ್ತದೆ. ಆತನ ಮನಸ್ಸು ಕೆಲವು ವೇಳೆ ಉಚ್ಚ ಅಂತಸ್ತಿಗೆ ಹತ್ತುತ್ತದೆ; ಇನ್ನು ಕೆಲವು ವೇಳೆ ಕೆಳ ಅಂತಸ್ತಿಗೆ ಇಳಿದುಬಿಡುತ್ತದೆ. ಕೆಲವು ವೇಳೆ ಭಕ್ತಿ ವಿಶೇಷವಾಗಿ ಉದ್ರೇಕಗೊಂಡುಬಿಡುತ್ತದೆ; ಇನ್ನು ಕೆಲವು ವೇಳೆ ಬಹಳ ಕಡಮೆಯಾಗಿಬಿಡುತ್ತದೆ. ಆತ ಕಾಮಕಾಂಚನ ವನ್ನು ಆಶ್ರಯಿಸಿ ಇರಬೇಕಾಗುತ್ತದೆಯಲ್ಲ, ಅದಕ್ಕಾಗಿ ಆತನಿಗೆ ಹೀಗಾಗು ತ್ತದೆ. ಸಂಸಾರಿ ಕೆಲವು ವೇಳೆ ಭಗವಚ್ಚಿಂತನೆ, ಭಗವತ್ಕೀರ್ತನೆ ಮಾಡು

ತ್ತಾನೆ; ಇನ್ನು ಕೆಲವು ವೇಳೆ ಕಾಮಕಾಂಚನಗಳ ಕಡೆ ಮನಸ್ಸು ತಿರುಗಿಸಿಬಿಡುತ್ತಾನೆ. ಆತ ಸಾಧಾರಣ ನೊಣದ ಹಾಗೆ— ಅದು ಕೆಲವು ವೇಳೆ ಸಿಹಿ ತಿಂಡಿಗಳ ಮೇಲೆ ಕುಳಿತುಕೊಳ್ಳುತ್ತದೆ; ಇನ್ನು ಕೆಲವು ವೇಳೆ ಕೊಳೆತು ನಾರೋ ಹುಣ್ಣು, ಮಲ ಇವುಗಳ ಮೇಲೂ ಕುಳಿತುಕೊಳ್ಳುತ್ತದೆ.

"ಆದರೆ ಸನ್ಯಾಸಿಗಳ ಸಮಾಚಾರವೇ ಬೇರೆ. ಅವರು ಕಾಮಕಾಂಚನದಿಂದ ತಮ್ಮ ಮನಸ್ಸನ್ನು ಸೆಳೆದುಕೊಂಡು ಕೇವಲ ಭಗವಂತನಲ್ಲೇ ಅದನ್ನು ಸಂಪೂರ್ಣವಾಗಿ ನೆಟ್ಟುಬಿಡಬಲ್ಲರು; ಕೇವಲ ಭಗವದ್ರಸವನ್ನು ಮಾತ್ರ ಕುಡಿಯಬಲ್ಲರು. ನಿಜವಾದ ತ್ಯಾಗಿಗೆ ಭಗವಂತನೊಬ್ಬನೇ ಹೊರತು ಬೇರೆ ಏನೂ ರುಚಿಸದು. ಪ್ರಾಪಂಚಿಕ ಮಾತುಕತೆಗಳು ಆರಂಭವಾದೊಡನೆಯೇ ಆತ ಆ ಸ್ಥಳವನ್ನು ಬಿಟ್ಟು ಎದ್ದುಹೋಗುತ್ತಾನೆ; ಭಗವದ್ವಿಷಯವಾದ ಮಾತುಕತೆಗಳಾರಂಭವಾದರೆ ಮಾತ್ರ ಕುಳಿತು ಕೇಳುತ್ತಾನೆ. ನಿಜವಾದ ತ್ಯಾಗಿಯ ಬಾಯಿಂದ ಭಗವತ್ಸಂಬಂಧವಾದ ಮಾತು ಹೊರತು ಬೇರೆ ಏನೂ ಹೊರಡದು. ಜೇನು ಹುಳು ಮಧುಪಾನ ಮಾಡಲು ಕೇವಲ ಹೂವುಗಳ ಮೇಲೆ ಮಾತ್ರವೇ ಕುಳಿತುಕೊಳ್ಳುತ್ತದೆ; ಅದಕ್ಕೆ ಬೇರೆ ಯಾವ ವಸ್ತುವೂ ರುಚಿಸದು."

ಗಿರೀಶ ಕೈತೊಳೆಯಲು ದಕ್ಷಿಣ ದಿಕ್ಕಿನಲ್ಲಿದ್ದ ಚಿಕ್ಕ ಚಾವಣಿಯ ಕಡೆ ಎದ್ದುಹೋದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಭಗವಂತನ ಅನುಗ್ರಹ ಆಗಬೇಕು; ಆಗ ಮಾತ್ರವೇ ಇಡೀ ಮನಸ್ಸೆಲ್ಲ ಆತನ ಕಡೆ ಹರಿಯಲಾರಂಭಿಸುತ್ತದೆ. ಒಳ್ಳೇದು, ಈಗ ಗಿರೀಶ ಸಾಕಾದಷ್ಟು ಉಪಾಹಾರಮಾಡಿದಾನೆ. ರಾತ್ರಿಗೆ ಏನನ್ನೂ ತಿನ್ನಕೂಡದು ಅಂತ ಆತನಿಗೆ ಹೇಳು."

ಗಿರೀಶ ಕೊಠಡಿಗೆ ಹಿಂದಿರುಗಿಬಂದು ಪರಮಹಂಸರ ಸಮ್ಮುಖದಲ್ಲಿ ಕುಳಿತು ಎಲಡಿಕೆ ಹಾಕಿಕೊಳ್ಳುತ್ತಿದಾನೆ.

ಶ್ರೀರಾಮಕೃಷ್ಣರು ಗಿರೀಶನಿಗೆ: "ಈಗ ರಾಖಾಲ-ಗೀಖಾಲರಿಗೆ ಅರ್ಥವಾಗಿದೆ, ಯಾವುದು ಒಳ್ಳೆಯದು, ಯಾವುದು ಕೆಟ್ಟದು; ಯಾವುದು ಸತ್ಯ, ಯಾವುದು ಮಿಥ್ಯಾ ಎಂಬುದು. ರಾಖಾಲ ಸಂಸಾರ ಅಂದರೆ ಏನು ಎಂತು ಎಂಬುದನ್ನು ಅರಿತು ಅದರಲ್ಲಿ ಇರುತ್ತಿದಾನೆ. ಆತನಿಗೆ ಹೆಂಡತಿಯೂ ಇದಾಳೆ, ಒಂದು ಗಂಡು ಮಗುವೂ ಆಗಿದೆ,— ಆದರೆ ಅರಿತು

ಕೊಂಡಿದಾನೆ, ಎಲ್ಲವೂ ಮಿಥ್ಯಾ, ಅನಿತ್ಯ ಅಂತ. ರಾಖಾಲ-ಗೀಖಾಲ ಇವರು ಸಂಸಾರದಿಂದ ಲಿಪ್ತರಾಗೋದಿಲ್ಲ.

"ಉದಾಹರಣೆಗೆ ಕೆಸರು ಮೀನು. ಅದು ಕೆಸರಿನಲ್ಲೇನೊ ವಾಸಿಸುತ್ತದೆ, ಆದರೆ ಕೆಸರನ್ನು ಮಾತ್ರ ಅದು ತನ್ನ ಶರೀರಕ್ಕೆ ಒಂದು ಕಿಂಚಿತ್ತನ್ನೂ ಅಂಟಿಸಿಕೊಳ್ಳದು."

ಗಿರೀಶ: "ಮಹಾಶಯರೆ, ಇದೆಲ್ಲ ನನಗೆ ಅರ್ಥವಾಗುತ್ತಿಲ್ಲ. ನಿಮಗೆ ಇಚ್ಛೆಬಂತು ಎಂದರೆ ಎಲ್ಲರನ್ನೂ ನಿರ್ಲಿಪ್ತರನ್ನಾಗಿಯೂ, ಶುದ್ಧರನ್ನಾಗಿಯೂ ಮಾಡಿಬಿಡಬಲ್ಲಿರಿ. ಸಂಸಾರಿ, ತ್ಯಾಗಿ ಎಲ್ಲರಿಗೂ ಮಂಗಳವನ್ನು ಕರೆಯಬಲ್ಲಿರಿ. ನನ್ನ ಭಾವನೆ, ಮಲಯ ಮಾರುತ ಎಲ್ಲಾ ಮರಗಳನ್ನೂ ಚಂದನ ಮರಗಳನ್ನಾಗಿ ಮಾಡಿಬಿಡುತ್ತದೆ."

ಶ್ರೀರಾಮಕೃಷ್ಣರು: "ಸತ್ತ್ವವಿಲ್ಲದವು ಚಂದನ ಮರಗಳಾಗೋದಿಲ್ಲ. ದೂದಿ ಮರ, ಅದೇ ವಿಧದ ಇನ್ನೂ ಹಲವು ಚಂದನ ಮರಗಳಾಗೋದಿಲ್ಲ."

ಗಿರೀಶ: "ಆ ಮಾತನ್ನು ನಾನು ಕಿವಿಗೇ ಹಾಕಿಕೊಳ್ಳೋದಿಲ್ಲ."

ಶ್ರೀರಾಮಕೃಷ್ಣರು: "ಆದರೆ, ಇರೋ ನಿಯಮ ಇದು."

ಗಿರೀಶ: "ಆದರೆ ನಿಮ್ಮ ಹತ್ತಿರ ಯಾವ ನಿಯಮದ ಬೇಳೆಯೂ ಬೇಯೋಹಾಗಿಲ್ಲ."

ಭಕ್ತರೆಲ್ಲರೂ ಇವರೀರ್ವರ ಸಂಭಾಷಣೆಯನ್ನು ವಿಸ್ಮಿತಗೊಂಡು ಕೇಳುತ್ತಿದಾರೆ. ಮಾಸ್ಟರು ಗಾಳಿ ಬೀಸುತ್ತಿದ್ದ ಬೀಸಣಿಗೆ ಒಮ್ಮೊಮ್ಮೆ ಹಾಗೇ ಸ್ಥಿರವಾಗಿ ನಿಂತುಕೊಂಡುಬಿಡುತ್ತಿದೆ.

ಶ್ರೀರಾಮಕೃಷ್ಣರು: "ಹೌದು, ಆದೇನೊ ನಿಜ ಇದ್ದರೂ ಇರಬಹುದು. ಭಕ್ತಿ ನದಿ ಉಕ್ಕಿ ಹರಿಯಿತು ಎಂದರೆ ಅಕ್ಕಪಕ್ಕದ ಭೂಮಿಯಲ್ಲೆಲ್ಲಾ ಒಂದು ಗಳುವಿನಾಳದ ನೀರು ನಿಲ್ಲುತ್ತದೆ.

"ಭಕ್ತಿಯ ಉನ್ಮತ್ತತೆ ಬಂದಾಗ ಭಕ್ತನಿಗೆ ವೇದ ವಿಧಿ-ಗಿಧಿಗಳ ಕಡೆ ಮನಸ್ಸು ಕೊಡಲಾಗೋದಿಲ್ಲ. ಪೂಜೆಗೆ ದೂರ್ವಾ ಕೊಯ್ಯುತ್ತಾನೆ; ಆದರೆ ಆರಿಸಿ-ಗೀರಿಸಿ ಏನಲ್ಲ, ಕೈಗೆ ಬಂದ ಹಾಗೆ. ತುಳಸಿ ಕೊಯ್ಯುತ್ತಾನೆ; ರೆಂಬೆ ರೆಂಬೆಗಳನ್ನೇ ಮುರಿದುಬಿಡುತ್ತಾನೆ. ಆಹ! ನನಗೆ ಎಂಥೆಂಥಾ ಅವಸ್ಥೆಗಳು ಬಂದುಹೋದುವು ಏನು ಕತೆ!

(ಮಾಸ್ಟರಿಗೆ) "ಭಕ್ತಿಯೊಂದು ಉಂಟಾಗಿಬಿಟ್ಟಿತು ಎಂದರೆ, ಬೇರೇನೂ ಬೇಕಾಗದು."

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ಆದರೆ ಯಾವುದಾದರೂ ಒಂದು ಭಾವವನ್ನು ಆಶ್ರಯಿಸಬೇಕಾಗುತ್ತದೆ. ಭಗವಂತ ತನ್ನ ರಾಮಾವತಾರದಲ್ಲಿ ಶಾಂತ, ದಾಸ್ಯ, ವಾತ್ಸಲ್ಯ, ಸಖ್ಯ ಈ ಭಾವಗಳನ್ನು ವ್ಯಕ್ತಪಡಿಸಿದ. ಆದರೆ ಕೃಷ್ಣಾವತಾರದಲ್ಲಿ ಇವುಗಳೆಲ್ಲದರ ಜೊತೆಗೆ ಮಧುರಭಾವವನ್ನೂ ವ್ಯಕ್ತಪಡಿಸಿದ.

"ಶ್ರೀಮತಿಯದು (ರಾಧೆಯದು) ಮಧುರ ಭಾವ. ಅದರಲ್ಲಿ ಭಾವೋದ್ರೇಕವಿದೆ. ಸೀತೆಯದು ಶುದ್ಧ ಸತೀತ್ವ. ಇದರಲ್ಲಿ ಭಾವೋದ್ರೇಕ-ಗೀವೋದ್ರೇಕವೇನಿಲ್ಲ.

"ಆದರೆ ಇವೆಲ್ಲವೂ ಆತನ ಲೀಲೆಯೆ. ಕಾಲಕ್ಕೆ ತಕ್ಕಂತೆ ಭಾವ."

ಹುಚ್ಚಿಯಂಥ ಹೆಂಗಸೊಬ್ಬಳು ವಿಜಯಗೋಸ್ವಾಮಿಯೊಡನೆ ದಕ್ಷಿಣೇಶ್ವರಕ್ಕೆ ಬಂದು ಪರಮಹಂಸರೆದುರು ಹಾಡೋ ಅಭ್ಯಾಸವನ್ನು ಇಟ್ಟುಕೊಂಡಿದ್ದಳು. ಆಕೆ ಕಾಳಿಯ ಮೇಲಿನ ಹಾಡುಗಳನ್ನಲ್ಲದೆ, ಬ್ರಾಹ್ಮಸಮಾಜದ ಹಾಡುಗಳನ್ನೂ ಹಾಡುತ್ತಿದ್ದಳು. ಭಕ್ತರು ಆಕೆಯನ್ನು "ಹುಚ್ಚಿ, ಹುಚ್ಚಿ" ಅಂತ ಕರೆಯುತ್ತಿದ್ದರು. ಆಕೆ ಈಗ ಕಾಶೀಪುರದ ಈ ಮನೆಗೂ ಆಗಾಗ ಬಂದು ಪರಮಹಂಸರ ದರ್ಶನ ಪಡೆಯಬೇಕೆಂದು ಭಕ್ತರನ್ನು ಪೀಡಿಸುತ್ತಿದಾಳೆ. ಸಾಧ್ಯವಾದಷ್ಟು ಮಟ್ಟಿಗೆ ಆಕೆ ಪರಮಹಂಸರ ಹತ್ತಿರ ಹೋಗದಿರೋ ಹಾಗೆ ಭಕ್ತರು ನೋಡಿಕೊಳ್ಳುತ್ತಿದಾರೆ.

ಶ್ರೀರಾಮಕೃಷ್ಣರು ಗಿರೀಶ ಮೊದಲಾದವರಿಗೆ: "ಆ ಹುಚ್ಚಿಯದು ಮಧುರ ಭಾವ. ಒಂದು ದಿನ ದಕ್ಷಿಣೇಶ್ವರಕ್ಕೆ ಬಂದಿದ್ದಳು. ಇದ್ದಕ್ಕಿದ್ದ ಹಾಗೆ ಅಳಲಾರಂಭಿಸಿದಳು. ಆಕೆಯನ್ನು ಕೇಳಿದೆ: 'ಏಕೆ ಅಳುತ್ತಿದ್ದೀಯೆ?' ಆಕೆ ಹೇಳಿದಳು: 'ತಲೆ ನೋಯುತ್ತಿದೆ.' (ಎಲ್ಲರೂ ನಗುತ್ತಿದಾರೆ.) ಇನ್ನೊಂದು ದಿನ ದಕ್ಷಿಣೇಶ್ವರಕ್ಕೆ ಬಂದಿದ್ದಳು. ಊಟಕ್ಕೆ ಕುಳಿತಿದ್ದೆ. ಇದ್ದಕ್ಕಿದ್ದ ಹಾಗೆ ಆಕೆ ನನ್ನನ್ನು ಕೇಳಿದಳು: 'ನನಗೆ ಕೃಪೆ ಮಾಡೋದಿಲ್ಲವೆ?' ಆಕೆಯ ಮನಸ್ಸಿನಲ್ಲಿ ಏನೇನು ಭಾವನೆಗಳು ನುಗ್ಗುತ್ತಿವೆ ಎಂಬುದರ ಕಡೆಗೆ ಗಮನವೀಯದೆ, ನನ್ನ ಪಾಡಿಗೆ ನಾನು ಊಟಮಾಡಿ ಮುಗಿಸಿದೆ. ಮತ್ತೆ ಆಕೆ ಕೇಳಿದಳು: 'ನಿಮ್ಮ ಮನಸ್ಸಿನಿಂದ ಏಕೆ ನನ್ನ ತಳ್ಳಿಬಿಟ್ಟಿರಿ?' ಆಗ ನಾನು ಆಕೆಯನ್ನು ಕೇಳಿದೆ: 'ನಿನ್ನ ಭಾವ ಎಂಥದು?' ಆಕೆ ಹೇಳಿದಳು: 'ಮಧುರ ಭಾವ.' ನಾನು ಹೇಳಿದೆ:

'ನನ್ನದು ಮಾತೃ ಭಾವ. ಜಗತ್ತಿನ ಹೆಂಗಸರೆಲ್ಲ ನನಗೆ ತಾಯಿಯರೆ.' ಅದಕ್ಕೆ ಆಕೆ ಹೇಳಿದಳು : 'ಅದೆಲ್ಲ ನನಗೆ ಗೊತ್ತಿಲ್ಲ.' ಬಳಿಕ ರಾಮಲಾಲ ನನ್ನು ಕರೆದು ಹೇಳಿದೆ : 'ಆಕೆ ನಾನು ಮನಸ್ಸಿನಿಂದ ತಳ್ಳಿದ್ದು, ಅದು ಇದು ಅಂತ ಏನೇನೊ ಮಾತಾಡುತ್ತಿದಾಳೆ. ಏನು ಸಮಾಚಾರ ಕೇಳಿ ನೋಡು ?' ಈಗಲೂ ಆಕೆಯದು ಅದೇ ಭಾವ."

ಗಿರೀಶ : "ಆ ಹುಚ್ಚಿಯೇ ಧನ್ಯಳು ! ಹುಚ್ಚಿಯಾಗಿರಲಿ. ಭಕ್ತರ ಕೈಯಲ್ಲಿ ಏಟನ್ನೂ ತಿನ್ನುತ್ತಿರಲಿ. ಆದರೆ ಆಕೆ ಮಾತ್ರ ತನ್ನ ಇಪ್ಪತ್ತು ನಾಲ್ಕು ಘಂಟೆಗಳನ್ನೂ ನಿಮ್ಮ ಧ್ಯಾನದಲ್ಲೇ ಕಳೆಯುತ್ತಿದಾಳೆ. ಆಕೆ ಯಾವ ಭಾವದಿಂದ ಬೇಕಾದರೂ ನಿಮ್ಮ ಮೇಲೆ ಚಿಂತನೆಮಾಡಲಿ, ಆಕೆಗೆ ಯಾವ ಕೆಡಕೂ ಸಂಭವಿಸದು.

"ಮಹಾಶಯರೆ, ನಾನು ಏನು ಹೇಳಲಿ ! ಹಿಂದೆ ಏನಾಗಿದ್ದೆ, ನಿಮ್ಮ ಮೇಲಿನ ಚಿಂತನೆಯಿಂದ ಕೊನೆಗೆ ಈಗ ನಾನು ಏನಾಗಿದೇನೆ ! ಹಿಂದೆ ನಾನು ಆಲಸ್ಯದ ಮುದ್ದೆಯಾಗಿದ್ದೆ ; ಈಗ ಅದು ಪರಿವರ್ತನೆ ಯನ್ನು ಹೊಂದಿ ಆತ್ಮಾರ್ಪಣೆಯ ರೂಪನ್ನು ತಾಳಿದೆ. ಹಿಂದೆ ಪಾಪಿ ಯಾಗಿದ್ದೆ ; ಈಗ ನಿರಹಂಕಾರಿಯಾಗಿದೇನೆ. ಇನ್ನು ಬೇರೆ ಏನು ಹೇಳಲಿ ?"

ಭಕ್ತರು ಸುಮ್ಮನೆ ಕುಳಿತಿದಾರೆ. ರಾಖಾಲ ಆ ಹುಚ್ಚಿಯ ಸಂಬಂಧ ವಾಗಿ ಸಹಾನುಭೂತಿ ತೋರಿಸುತ್ತಿದಾನೆ. ಆತ ಹೇಳಿದ : "ನಮ್ಮೆಲ್ಲರಿಗೂ ಆಕೆಯ ಸಂಬಂಧವಾಗಿ ಸಹಾನುಭೂತಿ ಇದೆ. ಆದರೆ ಆಕೆ ನಮ್ಮನ್ನೆಲ್ಲಾ ಬಹಳವಾಗಿ ಕಾಡಿಸುತ್ತಿದಾಳೆ ; ಆದ್ದರಿಂದ ಆಕೆ ಪ್ರಹಾರವನ್ನೂ ತಿನ್ನ ಬೇಕಾಗಿದೆ."

ನಿರಂಜನ ರಾಖಾಲನಿಗೆ : "ಮನೆಯಲ್ಲಿ ನಿನಗೆ ಹೆಂಡತಿ ಇದಾಳೆ. ಅದಕ್ಕಾಗಿ ನಿನಗೆ ಹಾಗನಿಸುತ್ತಿದೆ. ನಾವು ಆಕೆಯನ್ನು ಬಲಿಯೆತ್ತಿಬಿಡ ಬಲ್ಲೆವು."

ರಾಖಾಲ ವಿರಕ್ತಿಗೊಂಡು : "ಒಳ್ಳೆ ಗಂಡು ! ಇವರ (ಪರಮ ಹಂಸರ) ಎದುರಿಗೇ ನಿನ್ನ ಬಾಯಿಂದ ಇಂಥ ಮಾತುಗಳೊ ?"

ಶ್ರೀರಾಮಕೃಷ್ಣರು ಗಿರೀಶನಿಗೆ : "ಕಾಮಕಾಂಚನವೇ ಈ ಸಂಸಾ ರಕ್ಕೆ ಮೂಲಕಾರಣ. ಅನೇಕರಿಗೆ ದೇಹ - ರಕ್ತದ ಹಾಗೆ ಪ್ರಿಯವಾದ್ದು.

ಆದರೆ ಅದನ್ನು ಎಷ್ಟೇ ಪ್ರೀತಿಸಿದರೂ, ಅದು ಒಂದಲ್ಲ ಒಂದು ಕೈಯಿಂದ ಸಂಪೂರ್ಣವಾಗಿ ನುಣುಚಿಕೊಂಡು ಹೋಗಿಬಿಡುತ್ತದೆ.

"ನಮ್ಮ ಊರ ಕಡೆ ಗದ್ದೆಗೆ ತೆವರಿ ಕಟ್ಟುತ್ತಾರೆ. ತೆವರಿ ಎಂದರೆ ಗೊತ್ತು ತಾನೆ? ಯಾರು ಬಹಳ ಕಷ್ಟ ತೆಗೆದುಕೊಂಡು ಗದ್ದೆಯ ನಾಲ್ಕು ಕಡೆಗೂ ತೆವರಿ ಹಾಕುತ್ತಾರೊ, ಅವರ ತೆವರಿ ಮಳೆ ನೀರಿನ ಒತ್ತಡಕ್ಕೆ ಸಿಕ್ಕಿ ಒಡೆದು ಕೊಚ್ಚಿಹೋಗಿಬಿಡುತ್ತದೆ. ಆದರೆ ಯಾರು ತಮ್ಮ ಗದ್ದೆಯ ತೆವರಿಯನ್ನು ಅಲ್ಲಲ್ಲಿ ಕಿತ್ತು ಹೆಪ್ಪು ಹಾಕಿಬಿಡುವರೊ, ಅವರ ಗದ್ದೆಗೆ ವಿಪರೀತ ಮೆಕ್ಕಲು ಮಣ್ಣು ಬಂದು ಬೀಳುತ್ತದೆ; ಒಳ್ಳೆ ಸೊಗಸಾದ ಫಸಲು ದೊರೆಯುತ್ತದೆ.

"ಯಾರು ತಮ್ಮ ಹಣವನ್ನು ಸದ್ವ್ಯವಹಾರಗಳಿಗೆ, ಎಂದರೆ ಭಗವಂತನ ಪೂಜೆ ಪುರಸ್ಕಾರಗಳಿಗೆ, ಸಾಧು ಭಕ್ತರ ಸೇವೆಗೆ, ದಾನ ಧರ್ಮಾದಿ ಕಾರ್ಯಗಳಿಗೆ ಉಪಯೋಗಿಸುವರೊ ಅವರು ಮಾತ್ರವೇ ಅದನ್ನು ಸದುಪಯೋಗಪಡಿಸಿದಂತಾಗುತ್ತದೆ. ಅವರಿಗೆ ಸತ್ಫಲ ದೊರೆಯುತ್ತದೆ.

"ಡಾಕ್ಟರು, ಕವಿರಾಜರು ತಂದುಕೊಡೋ ವಸ್ತುಗಳನ್ನು ನಾನು ತಿನ್ನಲಾರೆ. ಮನುಷ್ಯರು ಕಷ್ಟಕ್ಕೆ ಸಿಕ್ಕಿಕೊಂಡಿರೋದನ್ನು ನೋಡಿ, ಅವರ ರಕ್ತ ಹೀರಿ ಯಾರು ದುಡ್ಡು ಸಂಪಾದಿಸುವರೊ, ಅವರ ಹಣ ಕೇವಲ ರಕ್ತ ಮತ್ತು ಕೀವು ಅಲ್ಲದೆ ಬೇರೇನೂ ಅಲ್ಲ."

ಹೀಗೆಂದು ಹೇಳಿ ಪರಮಹಂಸರು ಇಬ್ಬರು ಡಾಕ್ಟರ ಹೆಸರನ್ನು ಹೇಳಿದರು.

ಗಿರೀಶ: "ಡಾಕ್ಟರ್ ರಾಜೇಂದ್ರದತ್ತ ಒಳ್ಳೆ ಉದಾರಿ. ಯಾರಿಂದಲೂ ಒಂದು ಕಾಸನ್ನೂ ತೆಗೆದುಕೊಳ್ಳೋದಿಲ್ಲ. ಆತ ದಾನಧರ್ಮಾದಿ ಕಾರ್ಯಗಳನ್ನು ಮಾಡೋದುಂಟು."

೧೭ನೆ ಏಪ್ರಿಲ್ ೧೮೮೬, ಚೈತ್ರ ಶುಕ್ಲ ಚತುರ್ದಶಿ, ಶನಿವಾರ.

ಈಗ ಕೆಲವು ದಿನಗಳಿಂದ ನರೇಂದ್ರ ಪ್ರತಿದಿನವೂ ದಕ್ಷಿಣೇಶ್ವರಕ್ಕೆ ಹೋಗಿಬರುತ್ತಾ ಇದಾನೆ. ಅಲ್ಲಿ ಪಂಚವಟಿಯಲ್ಲಿ ಬಹಳ ಸಮಯವನ್ನು ಧ್ಯಾನ, ಭಜನೆ, ಸಾಧನೆ ಇವುಗಳಲ್ಲೇ ಕಳೆಯುತ್ತಿದಾನೆ. ಇಂದು ಸಾಯಂಕಾಲದ ವೇಳೆ ಅಲ್ಲಿಂದ ಹಿಂದಿರುಗಿ ಬಂದಿದಾನೆ. ತಾರಕ, ಕಾಳೀಪ್ರಸಾದ ಇವರೂ ಆತನ ಜೊತೆಯಲ್ಲೇ ಹಿಂದಿರುಗಿ ಬಂದಿದಾರೆ.

ಘಂಟೆ ರಾತ್ರಿ ಎಂಟು. ಚಂದ್ರನ ಬೆಳಕು, ಜೊತೆಗೆ ದಕ್ಷಿಣ ಮಾರುತ ಇವೆರಡೂ ಕೂಡಿ ಆಗಲೇ ರಮ್ಯವಾಗಿದ್ದ ತೋಟವನ್ನು ಇನ್ನೂ ರಮ್ಯವಾಗಿ ಮಾಡಿವೆ. ಭಕ್ತರಲ್ಲನೇಕರು ನೆಲ ಅಂತಸ್ತಿನ ಕೊಠಡಿಯಲ್ಲಿ ಕುಳಿತು ಧ್ಯಾನಮಾಡುತ್ತಿದಾರೆ. ಅವರ ಮಾತೆತ್ತಿ ನರೇಂದ್ರ ಮಾಸ್ಟರಿಗೆ ಹೇಳುತ್ತಿದಾನೆ: "ಇವರು ತಮ್ಮ ಉಪಾಧಿಯನ್ನು ಒಂದೊಂದನ್ನಾಗಿ ಕಳೆದುಕೊಳ್ಳುತ್ತಾ ಇದಾರೆ."

ಕೆಲವು ನಿಮಿಷಗಳಾದನಂತರ ಮಾಸ್ಟರ್ ಪರಮಹಂಸರ ಕೊಠಡಿಗೆ ಬಂದು ನೆಲದ ಮೇಲೆ ಕುಳಿತುಕೊಂಡ. ಪರಮಹಂಸರು ಆತನಿಗೆ ತಮ್ಮ ಚೌಕವನ್ನು ಒಗೆದು ತರುವಂತೆಯೂ, ಉಗುಳು - ಪಾತ್ರೆಯನ್ನು ತೊಳೆದು ತರುವಂತೆಯೂ ಹೇಳಿದರು. ಮಾಸ್ಟರ್ ಪುಷ್ಕರಣಿಗೆ ಹೋಗಿ ಅದನ್ನು ತೊಳೆದು ತೆಗೆದುಕೊಂಡುಬಂದ.

ಮಾರನೆಯ ಪ್ರಾತಃಕಾಲ ಪರಮಹಂಸರು ಮಾಸ್ಟರನ್ನು ಕರೆಯ ಕಳುಹಿಸಿದರು. ಆತ ಬೆಳಗ್ಗೆ ಎದ್ದು ಗಂಗಾಸ್ನಾನ ಮುಗಿಸಿಕೊಂಡು ಪರಮಹಂಸರಿಗೆ ಪ್ರಣಾಮಮಾಡಿದನಂತರ ಚಾವಣಿ ಮೇಲಕ್ಕೆ ಹೋಗಿ ದಾನೆ. ಆತನ ಹೆಂಡತಿ ಪುತ್ರಶೋಕದಿಂದ ಹುಚ್ಚಿಯಂತೇ ಆಗಿಬಿಟ್ಟಿ ದಾಳೆ. ಪರಮಹಂಸರು ಆಕೆಯನ್ನು ತೋಟಕ್ಕೆ ಒಂದೆರಡು ದಿವಸದ ಮಟ್ಟಿಗೆ ಕರೆದುಕೊಂಡುಬರೋ ವಿಷಯವನ್ನು ಮಾಸ್ಟರಿಗೆ ಹೇಳುತ್ತಿದಾರೆ.

ಶ್ರೀ ರಾಮಕೃಷ್ಣರು ಸೌಜ್ಞೆಯ ಮೂಲಕ ಹೇಳುತ್ತಿದಾರೆ: "ಇಲ್ಲಿಗೆ ಬರೋ ಹಾಗೆ ಹೇಳು. ಒಂದೆರಡು ದಿವಸಗಳ ಮಟ್ಟಿಗೆ ಇಲ್ಲೇ ಇರಲಿ. ಕೈ ಮಗುವನ್ನು ಜೊತೆಯಲ್ಲಿ ಎತ್ತಿಕೊಂಡು ಬರಲಿ. ಇಲ್ಲೇ ಊಟ ಮಾಡಲಿ."

ಮಾಸ್ಟರ್: "ಆಗಲಿ. ಆಕೆಯ ಅಂತರ್ಯದಲ್ಲಿ ವಿಶೇಷವಾಗಿ ಭಕ್ತಿ ಬೆಳೆದುಬಿಟ್ಟದ್ದೇ ಆದರೆ, ಬಹಳ ಒಳ್ಳೆಯದಾಗಿಬಿಡುತ್ತದೆ."

ಶ್ರೀ ರಾಮಕೃಷ್ಣರು ಮತ್ತೆ ಸೌಜ್ಞೆಯ ಮೂಲಕ: "ಉಹ್ಞೂ, ಶೋಕ ಭಕ್ತಿಯನ್ನು ಒಂದು ಮೂಲೆಗೆ ಒತ್ತರಿಸಿಬಿಡುತ್ತದೆ. ಆ ಹುಡುಗನೋ ಚೆನ್ನಾಗಿ ಬೆಳೆದಿದ್ದ ಹುಡುಗ!

"ಕೃಷ್ಣಕಿಶೋರನಿಗೆ ಇಬ್ಬರು ಗಂಡು ಮಕ್ಕಳಿದ್ದರು. ಭವನಾಥ ನಷ್ಟೇ ವಯಸ್ಸು. ವಿಶ್ವವಿದ್ಯಾನಿಲಯದ ಎರಡೆರಡು ಪರೀಕ್ಷೆಗಳನ್ನು ಮಾಡಿದ್ದರು. ಇಬ್ಬರೂ ಸತ್ತುಹೋಗಿಬಿಟ್ಟರು. ಆತ ಒಳ್ಳೆ ಜ್ಞಾನಿ.

ಆದರೂ ಮೊದಲು ಮೊದಲು ಆತನ ಕೈಯಲ್ಲಿ ಪುತ್ರಶೋಕವನ್ನು ಸಹಿಸಿ ಕೊಳ್ಳಲಾಗಲಿಲ್ಲ. ನನ್ನ ಭಾಗ್ಯೋದಯಕ್ಕೆ ನನಗೆ ಮಕ್ಕಳು-ಗಿಕ್ಕಳು ಯಾವೂ ಇಲ್ಲ!

"ಅರ್ಜುನ ಬಹಳ ದೊಡ್ಡ ಜ್ಞಾನಿ; ಜೊತೆಗೆ ಶ್ರೀಕೃಷ್ಣ ಆತನ ಎಡೆಬಿಡದ ಸಂಗಾತಿಯಾಗಿದ್ದ. ಆದರೂ ಅಭಿಮನ್ಯುವಿನ ಮರಣದಿಂದ ಸಂಪೂರ್ಣವಾಗಿ ಕುಗ್ಗಿ ಹೋಗಿದ್ದ.

"ಕಿಶೋರಿ ಬರುತ್ತಿಲ್ಲವಲ್ಲ ಏಕೆ?"

ಒಬ್ಬ ಭಕ್ತ: "ಆತ ದಿನಾ ಗಂಗಾಸ್ನಾನಕ್ಕೆ ಬರುತ್ತಿದಾನೆ."

ಶ್ರೀರಾಮಕೃಷ್ಣರು: "ಇಲ್ಲಿಗೆ ಏಕೆ ಬರುತ್ತಿಲ್ಲ?"

ಭಕ್ತ: "ಬರ್ರೋ ಹಾಗೆ ಹೇಳುತ್ತೇನೆ."

ಶ್ರೀರಾಮಕೃಷ್ಣರು ಲಾಟುವಿಗೆ: "ಹರೀಶ ಬರುತ್ತಿಲ್ಲವಲ್ಲ ಏಕೆ?"

ಮಾಸ್ಟರ ಮನೆಯ ಒಂಬತ್ತು, ಹತ್ತು ವರ್ಷದ ಇಬ್ಬರು ಹುಡುಗಿಯರು ಪರಮಹಂಸರ ಎದುರಿಗೆ ಭಗವತಿಯ ಸಂಬಂಧವಾಗಿ ಅನೇಕ ಹಾಡುಗಳನ್ನು ಹಾಡಿದರು. ಪರಮಹಂಸರು ಒಮ್ಮೆ ಶ್ಯಾಮಪುಕುರದಲ್ಲಿ ಮಾಸ್ಟರ ಮನೆಗೆ ಭೇಟಿ ಇತ್ತಿದ್ದಾಗ ಈ ಹುಡುಗಿಯರು ಅವರೆದುರಿಗೆ ಹಾಡಿದ್ದರು. ಇವರ ಹಾಡುಗಳನ್ನು ಕೇಳಿ ಪರಮಹಂಸರು ಬಹಳವಾಗಿ ಆನಂದಪಟ್ಟಿದ್ದರು. ಈಗ ಈ ಹುಡುಗಿಯರು ಪರಮಹಂಸರೆದುರು ಹಾಡಿ ಮುಗಿಸಿದನಂತರ, ಭಕ್ತರೂ ಇವರನ್ನು ನೆಲ ಅಂತಸ್ತಿಗೆ ಕರೆಸಿಕೊಂಡು ಇವರಿಂದ ಕೆಲವು ಹಾಡುಗಳನ್ನು ಹಾಡಿಸಿದರು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಿನ್ನ ಈ ಹುಡುಗಿಯರಿಗೆ ಇನ್ನು ಹೆಚ್ಚಾಗಿ ಹಾಡನ್ನು ಕಲಿಸಬೇಡ. ತಮ್ಮಷ್ಟಕ್ಕೆ ತಾವೇ ಹಾಡಿಕೊಂಡರೆ ಅದು ಬೇರೆ ವಿಷಯ. ಸಿಕ್ಕಿಸಿಕ್ಕಿದವರೆದುರಿಗೆಲ್ಲ ಹಾಡಲು ಶುರು ಮಾಡಿದರೆ ಕೊನೆಗೆ ಲಜ್ಜೆಯನ್ನು ಕಳೆದುಕೊಂಡುಬಿಡುತ್ತಾರೆ. ಹೆಂಗಸರಿಗೆ ಲಜ್ಜೆ ಅತ್ಯಂತ ಆವಶ್ಯಕ."

ಪರಮಹಂಸರ ಹತ್ತಿರ ಹೂವು, ಚಂದನ ಇವನ್ನೆಲ್ಲ ಇಟ್ಟಿದ್ದ ಒಂದು ಪುಷ್ಪಪಾತ್ರೆಯನ್ನು ಇಡಲಾಯಿತು. ಈಗ ಪರಮಹಂಸರು ಹಾಸಿಗೆ ಮೇಲೆ ಕುಳಿತೇ ಹೂವು, ಚಂದನ ಇವುಗಳಿಂದ ತಮ್ಮನ್ನು ತಾವೇ ಪೂಜೆ ಮಾಡಿ ಕೊಳ್ಳುತ್ತಾ ಇದಾರೆ. ಸಚಂದನ ಪುಷ್ಪವನ್ನು ಕೈಯಲ್ಲಿ ತೆಗೆದುಕೊಂಡು, ಕೆಲವು ವೇಳೆ ತಲೆಯನ್ನು, ಇನ್ನು ಕೆಲವು ವೇಳೆ ಕಂಠವನ್ನು, ಮತ್ತೆ ಕೆಲವು

ವೇಳೆ ಹೃದಯವನ್ನು, ಮತ್ತೆ ಇನ್ನೂ ಕೆಲವು ವೇಳೆ ನಾಭಿಸ್ಥಳವನ್ನು ಸ್ಪರ್ಶ ಮಾಡಿಕೊಳ್ಳುತ್ತಿದಾರೆ.

ಕೊನ್ನಗರದ ಮನಮೋಹನ ಶ್ರೀರಾಮಕೃಷ್ಣರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ. ಪರಮಹಂಸರು ಇನ್ನೂ ತಮ್ಮನ್ನು ಪೂಜೆ ಮಾಡಿಕೊಳ್ಳುತ್ತಲೇ ಇದಾರೆ. ಈಗ ತಮ್ಮ ಕೊರಳಿಗೆ ತಾವೇ ಹೂವಿನ ಮಾಲೆಯನ್ನು ಹಾಕಿಕೊಳ್ಳುತ್ತಾ ಇದಾರೆ. ಸ್ವಲ್ಪ ಹೊತ್ತಾದನಂತರ ಪ್ರಸನ್ನರಾಗಿ ಮನಮೋಹನನಿಗೆ ಒಂದು ಕಿಂಚಿತ್ ಪುಷ್ಪ ಪ್ರಸಾದವನ್ನು ಕೊಟ್ಟರು. ಮಾಸ್ಟರಿಗೆ ಒಂದು ಸಂಪಿಗೆ ಹೂವನ್ನು ಕೊಟ್ಟರು.

ಘಂಟೆ ಒಂಬತ್ತು. ಪರಮಹಂಸರು ಮಾಸ್ಟರೊಡನೆ ಮಾತುಕತೆ ಆಡುತ್ತಿದಾರೆ. ಕೊಠಡಿಯಲ್ಲಿ ಶಶಿಯೂ ಕುಳಿತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನರೇಂದ್ರ, ಶಶಿ ಮಾತಾಡುತ್ತಿದ್ದರಲ್ಲ ಏನನ್ನು? ಯಾವ ವಿಷಯವಾಗಿ ಅವರು ಚರ್ಚೆಮಾಡುತ್ತಿದ್ದರು?"

ಮಾಸ್ಟರ್ ಶಶಿಗೆ: "ಏನು ಮಾತಾಡುತ್ತಿದ್ದಿರಿ?"

ಶಶಿ: "ಬಹುಶಃ ನಿರಂಜನ ಹೇಳಿರಬೇಕು."

ಶ್ರೀರಾಮಕೃಷ್ಣರು: "'ಭಗವಂತ', 'ಅಸ್ತಿ', 'ನಾಸ್ತಿ' ಹೀಗೆ ಏನೇನೊ ಮಾತುಕತೆ ನಡೆಯುತ್ತಿತ್ತಲ್ಲ ಏನದು?"

ಶಶಿ ನಗುತ್ತ: "ನರೇಂದ್ರನನ್ನು ಕರೆಯಲೆ?"

ಶ್ರೀರಾಮಕೃಷ್ಣರು: "ಕರೆ."

ನರೇಂದ್ರ ಬಂದು ಒಂದು ಕಡೆ ಕುಳಿತುಕೊಂಡ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಆತನಿಗೆ ಏನಾದರು ಪ್ರಶ್ನೆ ಹಾಕು. (ನರೇಂದ್ರನಿಗೆ) ಏನು ಮಾತಾಡುತ್ತಿದ್ದಿರೊ ಹೇಳು ಅದನ್ನ."

ನರೇಂದ್ರ: "ನನಗೆ ಸ್ವಲ್ಪ ಅಗ್ನಿಮಾಂದ್ಯವಾಗಿದೆ. ನಿಮಗೆ ನಾನು ಹೇಳಬೇಕಾದ್ದು ತಾನೆ ಏನಿದೆ?"

ಶ್ರೀರಾಮಕೃಷ್ಣರು: "ಅಗ್ನಿಮಾಂದ್ಯ ಹೋಗಿಬಿಡುತ್ತದೆ."

ಮಾಸ್ಟರ್ ನಗುತ್ತ: "ಬುದ್ಧನ ಅನುಭವದ ಸಂಬಂಧವಾಗಿ ಹೇಳು."

ನರೇಂದ್ರ: "ನಾನಾಗಲೆ ಬುದ್ಧನಾಗಿಬಿಟ್ಟೆದೇನೇನು ಆತನ ಸಂಬಂಧವಾಗಿ ಮಾತಾಡೋಕೆ?"

ಮಾಸ್ಟರ್: "ಭಗವಂತನ ಇರುವಿಕೆಯ ಸಂಬಂಧವಾಗಿ ಆತನ ಅಭಿಪ್ರಾಯವೇನು?"

ನರೇಂದ್ರ: "ಭಗವಂತನಿದಾನೆ ಅಂತ ನೀವು ತಾನೆ ಹೇಗೆ ಹೇಳ ಬಲ್ಲಿರಿ? ಈ ಜಗತ್ತನ್ನು ಸೃಷ್ಟಿಮಾಡಿರೋರು ನೀವೇ. ಇದರ ಸಂಬಂಧ ವಾಗಿ 'ಬರ್ಕ್‌ಲೆ' ಏನು ಹೇಳುತ್ತಾನೆ ಎಂಬುದು ನಿಮಗೆ ಗೊತ್ತಿಲ್ಲವೆ?"

ಮಾಸ್ಟರ್: "ಹೌದು, ಗೊತ್ತಿದೆ. ಬಾಹ್ಯ ವಸ್ತುಗಳ ಇರುವಿಕೆ ಇಂದ್ರಿಯಾನುಭವಗಳ ಮೇಲೆ ನಿಂತಿದೆ. ಇಂದ್ರಿಯಕಾರ್ಯಗಳು ನಡೆದುಕೊಂಡುಹೋಗೋವರೆಗೆ ಮಾತ್ರವೇ ಈ ಜಗತ್ತು ಉಳಿದುಕೊಂಡಿರು ತ್ತದೆ."

ಶ್ರೀರಾಮಕೃಷ್ಣರು: "ತೋತಾಪುರಿ ಹೇಳುತ್ತಿದ್ದ: 'ಈ ಜಗತ್ತು ಮನಸ್ಸಿನಿಂದಲೇ ಉದ್ಭವವಾಗಿ ಮನಸ್ಸಿನಲ್ಲೇ ಲಯವಾಗುತ್ತದೆ.' ಆದರೆ ಎಲ್ಲಿಯವರೆಗೆ 'ಅಹಂ' ಎಂಬುದು ಇರುವುದೊ ಅಲ್ಲಿಯವರೆಗೆ ಸೇವ್ಯ-ಸೇವಕ ಭಾವವೇ ಶ್ರೇಯಸ್ಕರವಾದ್ದು."

ನರೇಂದ್ರ ಮಾಸ್ಟರಿಗೆ: "ವಿಚಾರಮಾಡಿ ನೋಡೋದಾದರೆ ಭಗವಂತನಿದಾನೆ ಎಂಬುದಾಗಿ ಪ್ರಮಾಣೀಕರಿಸೋ ಬಗೆ ಹೇಗೆ? ಆದರೆ ವಿಶ್ವಾಸವನ್ನು ಆಶ್ರಯಿಸೋದಾದರೆ ಸೇವ್ಯ-ಸೇವಕ ಭಾವವನ್ನು ಒಪ್ಪಲೇ ಬೇಕಾಗುತ್ತದೆ. ಅದನ್ನು ಒಪ್ಪಿಕೊಳ್ಳೋದಾದರೆ—ಬೇರೆ ವಿಧಿಯಿಲ್ಲದೆ—ಆತ ದಯಾಮಯ ಅಂತ ಹೇಳಲೇಬೇಕಾಗುತ್ತದೆ.

"ನೀವು ಕೇವಲ ಈ ಜಗತ್ತಿನ ದುಃಖದ ಕಡೆಗೇ ದೃಷ್ಟಿ ಇಟ್ಟಿದೀರಿ. ಭಗವಂತ ಬೇಕಾದಷ್ಟು ಸುಖಗಳನ್ನೂ ಕೊಟ್ಟಿದಾನೆ ಎಂಬುದನ್ನು ಏಕೆ ನೀವು ಮರತುಬಿಡುತ್ತಾ ಇದೀರಿ? ಆತನ ಕೃಪೆ ಎಷ್ಟು ಅಪರಿಮಿತ ವಾದ್ದು! ಆತ ಅತ್ಯಂತ ಮಹತ್ತಾದ ಈ ಮೂರನ್ನೂ ಕೊಟ್ಟಿದಾನೆ—'ಮನುಷ್ಯತ್ವಂ, ಮುಮುಕ್ಷುತ್ವಂ, ಮಹಾಪುರುಷಸಂಶ್ರಯಃ'"

ಎಲ್ಲರೂ ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನನ್ನ ಅಂತರ್ಯದಲ್ಲಿ ಬೇರೆ ಯಾರೊ ಒಬ್ಬ ಇದಾನೆ ಎಂಬುದರ ಬೋಧೆ ನನಗೆ ಸ್ಪಷ್ಟವಾಗಿ ಆಗುತ್ತಾ ಇದೆ."

ಡಾಕ್ಟರ್ ರಾಜೇಂದ್ರದತ್ತ ಬಂದು ಒಂದು ಕಡೆ ಕುಳಿತುಕೊಂಡ. ಆತ ಪರಮಹಂಸರಿಗೆ ಹೋಮಿಯಾಪತಿ ಔಷಧವನ್ನು ಕೊಡುತ್ತಿದಾನೆ.

ಔಷಧದ ಸಂಬಂಧವಾಗಿ ಮಾತುಕತೆ ಎಲ್ಲಾ ಮುಗಿದ ಮೇಲೆ, ಪರಮ ಹಂಸರು ಮನಮೋಹನನ ಕಡೆ ಬೆರಳುಮಾಡಿ ಆತನನ್ನು ಡಾಕ್ಟರಿಗೆ ತೋರಿಸುತ್ತಿದಾರೆ.

ಡಾಕ್ಟರ್ ರಾಜೇಂದ್ರದತ್ತ: "ಆತ ನನ್ನ ದೂರದ ಸಂಬಂಧಿ."

ನರೇಂದ್ರ ನೆಲ ಅಂತಸ್ತಿಗೆ ಇಳಿದು ಹೋದ. ಅಲ್ಲಿ ಆತ ತನಗೆ ತಾನೇ ಹಾಡಿಕೊಳ್ಳುತ್ತಿದಾನೆ :

ಹರಿಯಿತೆನ್ನ ಬವಣೆ, ಪ್ರಭೂ
ಹರಿಯಿತೆನ್ನ ಬವಣೆಯು . . . .

ನರೇಂದ್ರನಿಗೆ ಸ್ವಲ್ಪ ಅಗ್ನಿಮಾಂದ್ಯವಾಗಿದೆ. ಮಾಸ್ಟರಿಗೆ ಹೇಳು ತ್ತಿದಾನೆ: "ಭಕ್ತಿಮಾರ್ಗವನ್ನು ಅನುಸರಿಸಿದರೆ ಮನಸ್ಸು ಒಂದು ಸ್ವಲ್ಪ ದೇಹದ ಅಂತಸ್ತಿಗೆ ಇಳಿಯುತ್ತದೆ. ಇಲ್ಲದೆ ಇತ್ತು ಎಂದರೆ, ನಾನು ಯಾರು ? ನಾನು ಮನುಷ್ಯನೂ ಅಲ್ಲ, ದೇವರೂ ಅಲ್ಲ. ನನಗೆ ಸುಖವೂ ಇಲ್ಲ, ದುಃಖವೂ ಇಲ್ಲ."

ಘಂಟೆ ರಾತ್ರಿ ಒಂಬತ್ತು. ಸುರೇಂದ್ರ ಮತ್ತು ಇನ್ನೂ ಕೆಲವರು ಹೂವಿನ ಮಾಲೆಗಳನ್ನು ತಂದು ಪರಮಹಂಸರಿಗೆ ಅರ್ಪಿಸಿದರು. ಬಾಬುರಾಮ, ಲಾಟು, ಮಾಸ್ಟರ್ ಇವರೂ ಕೊಠಡಿಯಲ್ಲಿ ಕುಳಿತಿದಾರೆ.

ಪರಮಹಂಸರು ಸುರೇಂದ್ರ ತಂದಿದ್ದ ಹೂವಿನ ಮಾಲೆಯನ್ನು ತಾವೇ ಹಾಕಿಕೊಳ್ಳುತ್ತಿದಾರೆ. ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ. ಇದ್ದಕ್ಕಿದ್ದಹಾಗೆ ಪರಮಹಂಸರು ತಮ್ಮ ಹತ್ತಿರಕ್ಕೆ ಬರೋ ಹಾಗೆ ಸುರೇಂದ್ರನಿಗೆ ಸೌಜ್ಞೆ ಮಾಡಿದರು. ಆತ ಅವರ ಹಾಸಿಗೆ ಹತ್ತಿರ ಹೋದೊಡನೆಯೆ, ಅವರು ತಮ್ಮ ಕೊರಳಿನಿಂದ ಆ ಹೂವಿನ ಹಾರವನ್ನು ತೆಗೆದು ಆತನ ಕೊರಳಿಗೆ ಹಾಕಿಬಿಟ್ಟರು. ಸುರೇಂದ್ರ ಬಳಿಕ ಅವರಿಗೆ ಪ್ರಣಾಮಮಾಡಿದ. ಅವರು ಮತ್ತೆ ಸನ್ನೆಯಮೂಲಕ ತಮ್ಮ ಕಾಲನ್ನು ಒತ್ತುವಂತೆ ಆತನಿಗೆ ಹೇಳಿದರು. ಸುರೇಂದ್ರ ಒಂದು ಸ್ವಲ್ಪ ಹೊತ್ತು ಮೃದುವಾಗಿ ಒತ್ತಿದ.

ಭಕ್ತರಲ್ಲನೇಕರು ಪುಷ್ಕರಣಿಯ ಹಂತಗಳ ಮೇಲೆ ಕುಳಿತು ತಾಳ ಮೃದಂಗಗಳೊಡನೆ ಹಾಡುತ್ತಿದಾರೆ. ಪರಮಹಂಸರು ಲಾಟುವಿನ ಮೂಲಕ ಅವರಿಗೆ ಹರಿನಾಮಕೀರ್ತನೆಯನ್ನು ಮಾಡುವಂತೆ ಹೇಳಿಕಳು ಹಿಸಿದರು.

ಮಾಸ್ಟರ್, ಬಾಬುರಾಮ ಇವರೇ ಮೊದಲಾದವರು ಇನ್ನೂ ಪರಮ ಹಂಸರ ಹತ್ತಿರವೇ ಕುಳಿತಿದಾರೆ. ಭಕ್ತರು ಹಾಡುತ್ತಿದ್ದ ಹಾಡು ಅವರ ಕಿವಿಗೆ ಬಿತ್ತು. ಅವರು ಹಾಡುತ್ತಿದಾರೆ :

ಹರಿನಾಮವ ನುತಿಸಿ ಅದೋ
ಕುಣಿವನು ಗೌರಾಂಗ. . . .

ಪರಮಹಂಸರು ಹಾಡನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆಯೇ ಬಾಬುರಾಮ, ಮಾಸ್ಟರ್ ಮೊದಲಾದವರಿಗೆ ಸನ್ನೆಯ ಮೂಲಕ ಹೇಳು ತ್ತಿದಾರೆ: "ನೀವೂ ಕೆಳಕ್ಕೆ ಇಳಿದುಹೋಗಿ, ಅವರೊಡನೆ ಹಾಡಿ ಮತ್ತು ನರ್ತಿಸಿ."

ಕೆಲವು ನಿಮಿಷಗಳಾದನಂತರ ಒಬ್ಬ ಭಕ್ತನ ಕೈಯಲ್ಲಿ ಕೆಲವರಿಗೆ ಈ ಕೆಲವು ಆಶುಕವಿತೆಗಳನ್ನು ಹಾಡುವಂತೆ ಹೇಳಿಕಳುಹಿಸಿದರು: "ಆಹ! ನರ್ತನೆ ನನ್ನ ಮುದ್ದು ಗೌರನಿಗೂ ಬರುತ್ತದೆ!" "ಗೌರನ ಭಾವಗಳ ಬಣ್ಣಿಸುವುದೆಂತು ?" "ಗೌರ ಎರಡು ಬಾಹುಗಳನ್ನೂ ಮೇಲಕೆತ್ತಿ ನರ್ತಿಸುತಿಹನು."

ಹಾಡುವುದು ಮುಗಿಯಿತು. ಸುರೇಂದ್ರ ಬಹುಮಟ್ಟಿಗೆ ಭಾವಾ ವಿಷ್ಟನಾಗಿದ್ದ. ಆತ ಹಾಡಲಾರಂಭಿಸಿದಾನೆ :

ನನ್ನ ತಂದೆಯು ಮರುಳು
ನನ್ನ ತಾಯಿಯು ಮರುಳು
ಅವರ ಮಗನಾಗಿರುವ ನನಗು ಮರುಳು.
ಘನ ಶ್ಯಾಮೆ — ಎನ್ನುವುದು ತಾಯ ಹೆಸರು !

ನನ್ನ ತಂದೆಯೊ ತನ್ನ ಕೆನ್ನೆಗಳ ಬಡಿಬಡಿದು
ಬಲು ವಿಚಿತ್ರದ ದನಿಯು ಹೊಮ್ಮಿಸುವನು !
ನನ್ನ ತಾಯಿಯೊ ಸುರೆಯ ಕುಡಿದು ತೂರಾಡುತ್ತ
ನನ್ನ ತಂದೆಯ ಮೇಲೆ ಬೀಳುತಿಹಳು !
ಅವಳ ಅಸ್ತವ್ಯಸ್ತ ಕೇಶರಾಶಿಯು ಹೊನಲು
ದಿಕ್ಕುದಿಕ್ಕಿಗು ಹರಿದು ಹೋಗುತಿರಲು,
ಅವಳ ಪದಕಮಲದೆಡೆ ಲೆಕ್ಕವಿಲ್ಲದ ಭ್ರಮರ
ತಮ್ಮ ಝೇಂಕೃತಿಯಲ್ಲಿ ಸುತ್ತುತಿರಲು
ಅಃ ಅದೋ ನೂಪುರದ ದನಿಯನಾಲಿಸಿ ನೋಡು ;
ಎಂತು ಶ್ರೀ ಘನಶ್ಯಾಮೆ ನರ್ತಿಸುವಳು !

೫೧

# ಶ್ರೀರಾಮಕೃಷ್ಣರ ಭಕ್ತವಾತ್ಸಲ್ಯ

೨೧ನೆ ಏಪ್ರಿಲ್ ೧೮೮೬, ಚೈತ್ರ ಕೃಷ್ಣ ತೃತೀಯ, ಬುಧವಾರ.

ನರೇಂದ್ರ ಮತ್ತು ಮಾಸ್ಟರ್ ಕಾಶೀಪುರದ ಉದ್ಯಾನವನದಲ್ಲಿ ಅಡ್ಡಾಡುತ್ತ ಅಡ್ಡಾಡುತ್ತ ಮಾತುಕತೆ ಆಡುತ್ತಿದಾರೆ. ತನ್ನ ಮನೆಯ ಆರ್ಥಿಕ ಮುಗ್ಗಟ್ಟನ್ನು ಬಗೆಹರಿಸಲು ನರೇಂದ್ರನಿಗೆ ಇನ್ನೂ ಆಗದೆ ಇರುವುದರಿಂದ ಆತ ಬಹಳ ಚಿಂತೆಗೆ ಒಳಗಾಗಿದಾನೆ.

ನರೇಂದ್ರ: "ವಿದ್ಯಾಸಾಗರನ ಶಾಲೆಯ ನೌಕರಿ ನನಗೆ ಬೇಡವೇ ಬೇಡ. ಗಯೆಗೆ ಹೋಗಬೇಕೆಂದು ಯೋಚಿಸುತ್ತಾ ಇದೇನೆ. ಅಲ್ಲಿ ಜಮೀನುದಾರನೊಬ್ಬನಿಗೆ ಒಬ್ಬ ಮ್ಯಾನೇಜರ್ ಬೇಕಂತೆ. ಈ ಜಗತ್ತಿನಲ್ಲಿ ಭಗವಂತ - ಗಿಗವಂತ ಯಾರೂ ಇಲ್ಲವೇ ಇಲ್ಲ."

ಮಾಸ್ಟರ್ ನಗುತ್ತ: "ಈಗ ನೀನು ಹೀಗೆ ಹೇಳುತ್ತಿದೀಯೆ, ಆದರೆ ಮುಂದೆ ನೀನು ಎಂದಿಗೂ ಹೀಗೆ ಮಾತಾಡೋದಿಲ್ಲ. ಪರಮಹಂಸರು ಹೇಳುತ್ತಿದಾರೆ, ಭಗವಂತನ ಸಾಕ್ಷಾತ್ಕಾರ ಮಾರ್ಗದಲ್ಲಿ ಸಂದೇಹ ಎಂಬುದು ಒಂದು ಹಂತ. ಮುಮುಕ್ಷು ಈ ವಿಧವಾದ ಹಂತಗಳನ್ನು ದಾಟಿ ಮುಂದಕ್ಕೆ ಹೋಗಬೇಕು; ಆಗಮಾತ್ರವೇ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ."

ನರೇಂದ್ರ: "ನಾನು ಈ ಮರವನ್ನು ನೋಡೋ ಹಾಗೆ ಯಾರಾದರು ಭಗವಂತನನ್ನು ನೋಡಿದಾರೇನು?"

ಮಾಸ್ಟರ್: "ಹೌದು, ಪರಮಹಂಸರು ಹಾಗೆ ನೋಡಿದಾರೆ."

ನರೇಂದ್ರ: "ಅದು ಅವರ ಚಿತ್ತಭ್ರಮಣೆಯಿಂದಿರಬಹುದು."

ಮಾಸ್ಟರ್: "ಯಾವಾವ ಅವಸ್ಥೆಯಲ್ಲಿ ವ್ಯಕ್ತಿ ಏನೇನನ್ನು ನೋಡುತ್ತಾನೊ, ಅದು ಆತನಿಗೆ ಆಯಾಯ ಅವಸ್ಥೆಯಲ್ಲಿ ಸತ್ಯವಾಗೇ ತೋರುತ್ತದೆ. ನೀನು ಒಂದು ತೋಟಕ್ಕೆ ಹೋಗಿರುವುದಾಗಿ ನಿನಗೆ ಸ್ವಪ್ನ ಬಿದ್ದಿದೆ ಅಂತ ಇಟ್ಟುಕೊ. ನೀನು ಆ ಸ್ವಪ್ನಾವಸ್ಥೆಯಲ್ಲಿ ಇರೋವರೆಗೆ ನಿನಗೆ ಆ ತೋಟ ಸತ್ಯವಾದ್ದೇ. ಆದರೆ ಆ ಅವಸ್ಥೆ ಬದಲಾವಣೆಯನ್ನು ಹೊಂದಿತು ಎಂದರೆ, ಜಾಗ್ರದವಸ್ಥೆಗೆ ಬಂದೆ ಎಂದರೆ, ಅದು ಮಿಥ್ಯವಾಗಿ

ತೋರುತ್ತದೆ. ಯಾವ ಅವಸ್ಥೆಯಲ್ಲಿ ಭಗವಂತನ ಸಾಕ್ಷಾತ್ಕಾರ ಸಾಧ್ಯವೊ ಆ ಅವಸ್ಥೆಯನ್ನು ನಿನ್ನ ಮನಸ್ಸು ಮುಟ್ಟಿತು ಎಂದರೆ, ಆಗ ಸತ್ಯದ ಬೋಧೆ ಆಗುತ್ತದೆ."

ನರೇಂದ್ರ : "ನನಗೆ ಬೇಕಾಗಿರೋದು ಸತ್ಯ. ಅಂದು ಈ ವಿಷಯ ವಾಗಿ ಪರಮಹಂಸರೊಡನೆಯೇ ಬಹಳವಾಗಿ ಚರ್ಚಿಸಿಬಿಟ್ಟೆ."

ಮಾಸ್ಟರ್ : "ಏನು ನಡೆಯಿತು ?"

ನರೇಂದ್ರ : "ಅವರು ನನಗೆ ಹೇಳಿದರು : 'ಕೆಲವರು ನನ್ನನ್ನು ಭಗವಂತ ಅಂತ ಕರೆಯುತ್ತಿದಾರೆ.' ನಾನು ಹೇಳಿದೆ : 'ಸಹಸ್ರಾರು ಜನ ಹಾಗೆ ಬೇಕಾದರೆ ಕೂಗಿಕೊಳ್ಳಲಿ. ನನಗೆ ಅದು ಸತ್ಯ ಎಂಬುದಾಗಿ ತೋರ ದವರೆಗೆ ನಾನು ಹಾಗೆ ನಿಮ್ಮನ್ನು ಎಂದಿಗೂ ಕರೆಯೋದಿಲ್ಲ.' ಅವರು ಹೇಳಿದರು: 'ಯಾವುದನ್ನು ಅನೇಕರು ಪ್ರತಿಪಾದಿಸುತ್ತಾರೊ, ಅದೇ ತಾನೆ ಸತ್ಯ, ಅದೇ ತಾನೆ ಧರ್ಮ.' ನಾನು ಹೇಳಿದೆ: 'ನನಗದು ಸತ್ಯ ವೆಂದು ಬೋಧೆಯಾಗದ ಹೊರತು ಉಳಿದವರ ಮಾತಿಗೆ ನಾನು ಬೆಲೆ ಕೊಡೋದಿಲ್ಲ.'"

ಮಾಸ್ಟರ್ ನಗುತ್ತ : "ನಿನ್ನ ಮನೋಭಾವ ಪಾಶ್ಚಾತ್ಯ ಪಂಡಿತರ—ಬರ್ಕ್‌ಲೆ, ಕೋಪರ್ನಿಕಸ್—ಹಾಗೆ. ಇಡೀ ಜಗತ್ತಿನ ಜನರು ಹೇಳುತ್ತಾರೆ, ಸೂರ್ಯ ಭೂಮಿಯ ಸುತ್ತ ಸುತ್ತುತ್ತಿದಾನೆ ಅಂತ. ಆದರೆ ಕೋಪರ್ನಿಕಸ್ ಅವರ ಮಾತಿಗೆ ಬೆಲೆ ಕೊಡಲಿಲ್ಲ. ಈ ಜಗತ್ತಿನಲ್ಲಿ ಪ್ರತಿಯೊಬ್ಬರೂ ಹೇಳು ತ್ತಾರೆ, ಈ ಬಾಹ್ಯ ಜಗತ್ತು ಸತ್ಯ ಅಂತ. ಆದರೆ ಬರ್ಕ್‌ಲೆ ಅವರ ಮಾತಿಗೆ ಬೆಲೆ ಕೊಡಲಿಲ್ಲ. ಅದಕ್ಕಾಗೇ ಲ್ಯೂಯಿಸ್ ಹೇಳಿದ: 'ನಾವು ಬರ್ಕ್‌ಲೆ ಯನ್ನು ದಾರ್ಶನಿಕ ಕೋಪರ್ನಿಕಸ್ ಅಂತ ಏಕೆ ಕರೆಯಬಾರದು ?'"

ನರೇಂದ್ರ : "ನೀವು ನನಗೊಂದು ದಾರ್ಶನಿಕ ಇತಿಹಾಸದ ಪ್ರತಿ ಯನ್ನು ಕೊಡಬಲ್ಲಿರೇನು ?"

ಮಾಸ್ಟರ್ : "ಏನು, ಲ್ಯೂಯಿಸನದೇ?"

ನರೇಂದ್ರ : "ಅದು ಬೇಡಿ. ಉಬೆರ್ವೆಗ್ ಬರೆದಿರೋದು. ಒಬ್ಬ ಜರ್ಮನ್ ಬರೆದಿರೋದನ್ನು ಓದಲು ಇಚ್ಛೆ."

ಮಾಸ್ಟರ್ : "ನೀನು ಈಗ ತಾನೆ ಕೇಳಿದೆ : 'ನಾನು ಈ ಮರವನ್ನು ನೋಡೋ ರೀತಿಯಲ್ಲಿ ಯಾರಾದರು ಭಗವಂತನನ್ನು ನೋಡಿದಾರೆಯೆ ?' ಒಂದು ಪಕ್ಷ ಭಗವಂತ ಮನುಷ್ಯರೂಪವನ್ನು ಧರಿಸಿ ನಿನ್ನ ಎದುರಿಗೇ ಬಂದು

ಹೇಳಿದರೆ: 'ನಾನು ಭಗವಂತ' ಅಂತ, ನೀನು ಆತನನ್ನು ನಂಬುವೆ ಯೇನು? ನಿನಗೆ ಲ್ಯಾಸರಸ್ಸನ ಕಥೆ ಗೊತ್ತೇ ಇರಬೇಕಲ್ಲವೆ? ಲ್ಯಾಸರಸ್ ಪರಲೋಕಕ್ಕೆ ಹೋದಾಗ, ಅಲ್ಲಿ ಏಬ್ರಹ್ಯಾಮನಿಗೆ ಹೇಳಿದ: 'ನಾನು ಭೂಮಿಗೆ ಇಳಿದು ಹೋಗಿ, ಅಲ್ಲಿ ನನ್ನ ಬಂಧುಮಿತ್ರರಿಗೆಲ್ಲ ಪರಲೋಕ, ನರಕ ಇವೆಲ್ಲ ಇವೆ ಎಂಬುದಾಗಿ ಹೇಳಿಬರುತ್ತೇನೆ.' ಅದಕ್ಕೆ ಏಬ್ರಹ್ಯಾಮ್ ಹೇಳಿದ: 'ನೀನು ಹಾಗೆ ಹೋಗಿ ಹೇಳಿದರೆ, ಅವರು ಅದನ್ನು ನಂಬುವರೆ? ಅವರು ಭಾವಿಸುತ್ತಾರೆ ಒಬ್ಬ ಮಾತಿನಮಲ್ಲ ಬಂದು ಹೀಗೆಲ್ಲಾ ಹೇಳುತ್ತಿದಾನೆ.' ಪರಮಹಂಸರು ಹೇಳುತ್ತಿದಾರೆ: ಭಗವಂತ ನನ್ನು ವಿಚಾರದ ಮೂಲಕ ಪಡೆಯಲಾಗೋದಿಲ್ಲ. ವಿಶ್ವಾಸದಿಂದಲೇ ಎಲ್ಲವೂ — ಜ್ಞಾನ, ವಿಜ್ಞಾನ— ದೊರೆತುಬಿಡುತ್ತವೆ. ವಿಶ್ವಾಸದಿಂದಲೇ ಆತನ ದರ್ಶನ, ಆತನೊಡನೆ ಬೆರೆಯುವಿಕೆ ಎಲ್ಲಾ ದೊರೆತುಬಿಡುತ್ತವೆ."

ಘಂಟೆ ಅಪರಾಹ್ನ ಮೂರು. ಪರಮಹಂಸರು ಸುಮ್ಮನೆ ಮಲಗಿ ಕೊಂಡಿದಾರೆ. ರಾಮಲಾಲ ಅವರ ಪಾದಗಳನ್ನು ಒತ್ತುತ್ತಿದಾನೆ. ಸಿಂತಿಯ ಗೋಪಾಲ ಮತ್ತು ಮಾಸ್ಟರ್ ಕೊಠಡಿಯಲ್ಲಿ ಕುಳಿತಿದಾರೆ. ರಾಮಲಾಲ ಪರಮಹಂಸರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗೋಕೆ ದಕ್ಷಿಣೇಶ್ವರದಿಂದ ಬಂದಿದಾನೆ.

ಪರಮಹಂಸರು ಮಾಸ್ಟರಿಗೆ ಹೇಳಿದರು, ಕಿಟಕಿಗಳನ್ನು ಮುಚ್ಚಿ ತಮ್ಮ ಪಾದಗಳನ್ನು ಒತ್ತುವಂತೆ. ಪರಮಹಂಸರ ಇಚ್ಛೆಗನುಸಾರ ಪೂರ್ಣ ಒಂದು ಗಾಡಿ ಮಾಡಿಕೊಂಡು ಕಾಶೀಪುರದ ಮನೆಗೆ ಬಂದಿದಾನೆ. ಮಾಸ್ಟರು ಅದರ ಬಾಡಿಗೆ ಕೊಡುವಂತೆ ವ್ಯವಸ್ಥೆ ಆಗಿದೆ. ಪರಮ ಹಂಸರು ಗೋಪಾಲನನ್ನು ಸನ್ನೆಯ ಮೂಲಕ ಕೇಳುತ್ತಿದಾರೆ: "ಈತ ಕೊಟ್ಟನೇನು?" ಗೋಪಾಲ ಹೇಳಿದ: "ಹೌದು, ಕೊಟ್ಟಿದಾನೆ."

ಘಂಟೆ ರಾತ್ರಿ ಒಂಬತ್ತು. ಸುರೇಂದ್ರ, ರಾಮ ಇವರೇ ಮೊದ ಲಾದವರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಲು ಸಿದ್ಧರಾಗುತ್ತಿದಾರೆ. ಈಗ ವೈಶಾಖ ಮಾಸವಾಗಿರೋದರಿಂದ ಪರಮಹಂಸರ ಕೊಠಡಿ ಬಿಸಿಲಿನಿಂದ ಬಹಳವಾಗಿ ಕಾದುಬಿಡುತ್ತಿದೆ. ಅದನ್ನು ಸ್ವಲ್ಪ ತಂಪಾಗಿರಿಸಲು ಸುರೇಂದ್ರ ಕೆಲವು ಲಾಮಂಚದ ಪರದೆಗಳನ್ನು ತಂದುಕೊಟ್ಟಿದಾನೆ.

ಸುರೇಂದ್ರ: "ಏಕೆ, ಯಾರೂ ಈ ಲಾಮಂಚದ ಪರದೆಗಳನ್ನು

ಕಟ್ಟಲಿಲ್ಲವೇ? ಇಲ್ಲಿ ಯಾರಿಗೂ ಯಾವುದರ ಮೇಲೂ ಗಮನವೇ ಇಲ್ಲ ಅಂತ ಕಾಣುತ್ತೆ."

ಒಬ್ಬ ಭಕ್ತ ನಗುತ್ತ: "ಈಗ ಇಲ್ಲಿರೋ ಭಕ್ತರಿಗೆಲ್ಲ ಬ್ರಹ್ಮಜ್ಞಾನಾವಸ್ಥೆ ಬಂದುಬಿಟ್ಟಿದೆ. ಈಗ ಎಲ್ಲರಿಗೂ 'ಸೋಽಹಮ್' ಭಾವ—ಜಗತ್ತು ಮಿಥ್ಯವಾಗಿ ಕಾಣುತ್ತಿದೆ. ಮತ್ತೆ ಯಾವಾಗ 'ನೀನು ಪ್ರಭು, ನಾನು ದಾಸ' ಎಂಬ ಅವಸ್ಥೆ ಬರುವುದೊ, ಆಗ ಅವುಗಳ ಕಡೆಗೆಲ್ಲಾ ಮನಸ್ಸು ಕೊಡುತ್ತಾರೆ." (ಎಲ್ಲರೂ ನಗುತ್ತಿದಾರೆ.)

೨೨ನೆ ಏಪ್ರಿಲ್ ೧೮೮೬, ಚೈತ್ರ ಕೃಷ್ಣ ಚತುರ್ಥಿ, ಗುರುವಾರ.

ಸಾಯಂಕಾಲವಾಗಿದೆ. ಶಶಿ, ರಾಖಾಲ, ಮಾಸ್ಟರ್ ಕಾಶೀಪುರದ ತೋಟದಲ್ಲಿ ಸುಮ್ಮನೆ ಅಡ್ಡಾಡುತ್ತಿದಾರೆ.

ಮಾಸ್ಟರ್: "ಪರಮಹಂಸರು ಮಗುವಿನ ಹಾಗೆ ತ್ರಿಗುಣಾತೀತರು."

ಶಶಿ ಮತ್ತು ರಾಖಾಲ: "ತಮ್ಮದು ಆ ಅವಸ್ಥೆ ಎಂದು ಅವರೇ ಹೇಳಿದಾರಲ್ಲ."

ರಾಖಾಲ: "ಅವರು ಬಹಳ ಎತ್ತರವಾದ ಒಂದು ಗೋಪುರದ ಮೇಲೆ ಕುಳಿತುಕೊಂಡವರಂತಿದಾರೆ. ಅಲ್ಲಿ ಕುಳಿತು ಎಲ್ಲಾ ವಿಷಯಗಳನ್ನೂ ತಿಳಿದುಕೊಳ್ಳಬಲ್ಲರು, ಎಲ್ಲವನ್ನೂ ನೋಡಬಲ್ಲರು; ಆದರೆ ಬೇರೆ ಯಾರೂ ಅಲ್ಲಿಗೆ ಹೋಗಿ ಅವರನ್ನು ಮುಟ್ಟಲಾಗೋದಿಲ್ಲ."

ಮಾಸ್ಟರ್: "ಪರಮಹಂಸರು ಹೇಳಿದಾರೆ: 'ಆ ಅವಸ್ಥೆಯಲ್ಲಿ ಸರ್ವದಾ ಭಗವಂತನ ದರ್ಶನ ಸಾಧ್ಯ.' ಆ ಅವಸ್ಥೆಯನ್ನು ಪಡೆದವನ ಮನಸ್ಸಿನಲ್ಲಿ ಎಳ್ಳಷ್ಟೂ ವಿಷಯರಸ ಇರದು. ಒಣ ಸೌದೆಯ ಹಾಗೆ ಬೇಗ ಹೊತ್ತಿಕೊಂಡುಬಿಡುತ್ತದೆ."

ಶಶಿ: "ಬುದ್ಧಿಸೂಕ್ಷ್ಮತೆಯಲ್ಲಿ ಎಷ್ಟು ವಿಧ ಎಂಬುದನ್ನು ಪರಮಹಂಸರು ಚಾರುವಿಗೆ ಒಮ್ಮೆ ವರ್ಣಿಸಿ ಹೇಳಿದರು. ಯಾವುದರಿಂದ ಭಗವಂತನ ಸಾಕ್ಷಾತ್ಕಾರ ದೊರೆಯುವುದೊ, ಅದೇ ಸರಿಯಾದ ಬುದ್ಧಿ-ಸೂಕ್ಷ್ಮತೆ. ಯಾವ ಬುದ್ಧಿಸೂಕ್ಷ್ಮತೆಯಿಂದ ಹಣ ಗಳಿಸಿಕೊಳ್ಳಬಹುದೊ ಮನೆ ಕಟ್ಟಿಕೊಳ್ಳಬಹುದೊ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಆಗಬಹುದೊ ವಕೀಲನಾಗಬಹುದೊ ಅದು ನೀಚ ಬುದ್ಧಿಸೂಕ್ಷ್ಮತೆ. ಅದು ಕೇವಲ ನೀರು-ಮಜ್ಜಿಗೆಯ ಹಾಗೆ. ಅದು ಅವಲಕ್ಕಿಯನ್ನೇನೊ ನೆನೆಸುತ್ತದೆ, ಆದರೆ ಅದಕ್ಕೆ ಯಾವ ರುಚಿಯನ್ನೂ ಕೊಡದು. ಅದು ಎಂದಿಗೂ ಗಟ್ಟಿ

ಮೊಸರಿನ ಮಟ್ಟಕ್ಕೆ ಬರದು. ಯಾವ ಬುದ್ಧಿಸೂಕ್ಷ್ಮತೆಯಿಂದ ಭಗವಂತನ ಸಾಕ್ಷಾತ್ಕಾರ ದೊರೆಯುವುದೊ, ಅದು ಗಟ್ಟಿ ಮೊಸರಿನ ಹಾಗೆ ಉತ್ಕೃಷ್ಟ ಶ್ರೇಣಿಗೆ ಸೇರಿದ್ದು."

ಮಾಸ್ಟರ್: "ಆಹ! ಎಂಥಾ ಮಾತುಗಳು!"

ಶಶಿ: "ತಪಸ್ವಿ ಕಾಳೀಪ್ರಸಾದ ಪರಮಹಂಸರಿಗೆ ಹೇಳಿದ: 'ಆನಂದದಿಂದ ಏನು ಪ್ರಯೋಜನ? ಭಿಲ್ಲರೂ ಆನಂದಭರಿತರೆ. ಕಾಡು - ಜನರು ಯಾವಾಗಲೂ ಆನಂದದಿಂದ "ಹೋ! ಹೋ!" ಅಂತ ಹಾಡೋದು ನರ್ತಿಸೋದು ಇವನ್ನೆಲ್ಲಾ ಮಾಡುತ್ತಾರೆ.'"

ರಾಖಾಲ: "ಪರಮಹಂಸರು ಕಾಳೀಪ್ರಸಾದನಿಗೆ ಉತ್ತರವಿತ್ತರು: ಏನು ನೀನು ಹೇಳೋದು? ಬ್ರಹ್ಮಾನಂದ ವಿಷಯಾನಂದ ಒಂದೇ ಏನು? ಜೀವರು ವಿಷಯಾನಂದದಲ್ಲಿ ಮಗ್ನರಾಗಿರುತ್ತಾರೆ. ವಿಷಯಾಸಕ್ತಿ ಸಂಪೂರ್ಣವಾಗಿ ಹೋಗದ ಹೊರತು ಬ್ರಹ್ಮಾನಂದ ದೊರಕದು. ಒಂದು ಕಡೆ ಹಣದ ಆನಂದ, ಇಂದ್ರಿಯ ಸುಖಗಳ ಆನಂದ; ಇನ್ನೊಂದು ಕಡೆ ಭಗವದ್ಸಾಕ್ಷಾತ್ಕಾರದ ಆನಂದ. ಇವೆರಡೂ ಎಂದಿಗಾದರೂ ಒಂದೇ ಶ್ರೇಣಿಗೆ ಸೇರಿದವುಗಳಾಗುವುವೆ? ಋಷಿಗಳು ಬ್ರಹ್ಮಾನಂದವನ್ನು ಅನುಭವಿಸಿದ್ದರು.'"

ಮಾಸ್ಟರ್: "ಕಾಳೀಪ್ರಸಾದ ಈಗ ಬುದ್ಧದೇವನ ಧ್ಯಾನ ಮಾಡುತ್ತಿರೋದಿಲ್ಲವೆ; ಅದಕ್ಕಾಗಿ ಆತ ಆನಂದಾತೀತವಾದ ಅವಸ್ಥೆಯ ಸಂಬಂಧವಾಗಿ ಮಾತಾಡುತ್ತಿರೋದು."

ರಾಖಾಲ: "ಹೌದು, ಕಾಳೀಪ್ರಸಾದ ಪರಮಹಂಸರ ಹತ್ತಿರವೂ ಬುದ್ಧನ ಸಂಬಂಧವಾಗಿ ಮಾತಾಡಿದ. ಅವರು ಹೇಳಿದರು: 'ಬುದ್ಧದೇವ ಅವತಾರಪುರುಷ. ಆತನನ್ನು ಬೇರೆಯವರೊಡನೆ ಹೋಲಿಸುವುದೆ? ಆತ ಒಬ್ಬ ಮಹಾಪುರುಷ. ಆತನಿಗೆ ತಕ್ಕಂತೆ ಆತನ ಉಪದೇಶಗಳು ಮಹತ್ತಾದುವೆ.' ಕಾಳೀಪ್ರಸಾದ ಹೇಳಿದ: 'ಎಲ್ಲವೂ ಭಗವಂತನ ಶಕ್ತಿಯಿಂದ ತಾನೆ ಉದ್ಭವವಾಗಿದೆ? ಆ ಶಕ್ತಿಯಿಂದಲೇ ಭಗವದಾನಂದ, ವಿಷಯಾನಂದ ಎರಡೂ ಹೊರಹೊಮ್ಮಿವೆ.'"

ಮಾಸ್ಟರ್: "ಅದಕ್ಕೆ ಪರಮಹಂಸರು ಏನು ಉತ್ತರಕೊಟ್ಟರು?"

ರಾಖಾಲ: "ಅವರು, ಹೇಳಿದರು: 'ಏನು ನೀನು ಹೇಳೋದು?

ಸಂತಾನೋತ್ಪಾದನೆಗೆ ಮೂಲಭೂತವಾದ ಶಕ್ತಿ, ಭಗವತ್ಸಾಕ್ಷಾತ್ಕಾರಕ್ಕೆ ಕಾರಣಭೂತವಾದ ಶಕ್ತಿ ಎರಡೂ ಒಂದೇ ಏನು ? ' ''

ಪರಮಹಂಸರು ಎರಡನೆ ಅಂತಸ್ತಿನ ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಅಲ್ಲಿ ರಾಖಾಲ, ನರೇಂದ್ರ, ಶಶಿ, ಸುರೇಂದ್ರ, ಮಾಸ್ಟರ್, ಭವನಾಥ ಇವರೇ ಮೊದಲಾದ ಭಕ್ತರು ಕುಳಿತುಕೊಂಡಿದಾರೆ. ಡಾಕ್ಟರ್ ಮಹೇಂದ್ರಸರ್ಕಾರ, ಡಾಕ್ಟರ್ ರಾಜೇಂದ್ರದತ್ತ ಇವರು ಪರಮಹಂಸರ ದೇಹಾರೋಗ್ಯವನ್ನು ಪರೀಕ್ಷಿಸಲು ಬಂದಿದಾರೆ. ಪರಮಹಂಸರ ರೋಗ ದಿನದಿನವೂ ಪ್ರಬಲಗೊಳ್ಳುತ್ತಿದೆ.

ಮನೆಯ ಬಾಡಿಗೆ ಅರವತ್ತೊ ಅರವತ್ತೈದೊ ಆಗುತ್ತಿದೆ. ಸುರೇಂದ್ರ ಅದರ ಅಧಿಕಾಂಶ ಭಾಗವನ್ನು ಕೊಡುತ್ತಿದಾನೆ. ಆ ಮನೆಯನ್ನು ಆತನ ಹೆಸರಿನಲ್ಲೇ ಬಾಡಿಗೆಗೆ ತೆಗೆದುಕೊಂಡಿದೆ. ಉಳಿದವರು ತಮ್ಮ ಶಕ್ತ್ಯಾನುಸಾರ ಆರ್ಥಿಕಸಹಾಯ ಮಾಡುತ್ತಿದಾರೆ. ಮನೆಯ ಕೆಲಸ ಕಾರ್ಯಗಳನ್ನೆಲ್ಲ ಸುಸೂತ್ರವಾಗಿ ನಡೆಸಿಕೊಂಡುಹೋಗಲು ಒಬ್ಬ ಅಡಿಗೆಯವನನ್ನು ಮತ್ತು ಒಬ್ಬಳು ದಾಸಿಯನ್ನು ನೇಮಿಸಿದಾರೆ.

ಶ್ರೀರಾಮಕೃಷ್ಣರು ಡಾಕ್ಟರ್ ಸರ್ಕಾರನಿಗೆ ಮತ್ತು ಉಳಿದವರಿಗೆ: '' ಖರ್ಚು ಸುಮ್ಮನೆ ಬೆಳೆಯುತ್ತಿದೆ. ''

ಡಾಕ್ಟರ್ ಸರ್ಕಾರ ಭಕ್ತರ ಕಡೆ ತಿರುಗಿ: '' ಅದಕ್ಕೆಲ್ಲಾ ಇವರು ಸಿದ್ಧರಾಗೇ ಇದಾರೆ. ಇಲ್ಲಿನ ಖರ್ಚನ್ನೆಲ್ಲಾ ಇವರು ನಿರಾಯಾಸವಾಗಿ ಕೊಡಬಲ್ಲರು. (ಪರಮಹಂಸರಿಗೆ) ಈಗ ನೋಡಿ, ಕಾಂಚನದ ಆವಶ್ಯಕತೇನಾ. ''

ಶ್ರೀರಾಮಕೃಷ್ಣರು ನರೇಂದ್ರನಿಗೆ: '' ಏಕೆ ನೀನು ಉತ್ತರಕೊಡಬಾರದು ? ''

ನರೇಂದ್ರ ಸುಮ್ಮನೆ ಕುಳಿತುಕೊಂಡಿದಾನೆ. ಡಾಕ್ಟರ್ ಮತ್ತೆ ಮಾತು ಮುಂದುವರಿಸಿದ.

ಡಾಕ್ಟರ್ : '' ಕಾಂಚನ ಆವಶ್ಯಕ. ಕಾಮಿನಿಯೂ ಆವಶ್ಯಕ. ''

ಡಾಕ್ಟರ್ ರಾಜೇಂದ್ರದತ್ತ: '' ಹೌದು, ಇವರ (ಪರಮಹಂಸರ) ಹೆಂಡತಿ ಇವರಿಗೆ ಅಡಿಗೆ ಮಾಡಿ ಹಾಕುತ್ತಿದಾರೆ. ''

ಡಾಕ್ಟರ್ ಸರ್ಕಾರ ಪರಮಹಂಸರಿಗೆ: '' ನೋಡಿದಿರೋ ? ''

ಶ್ರೀರಾಮಕೃಷ್ಣರು ನಗುತ್ತ: "ಹೌದು— ಆದರೆ ಬಹಳ ತಾಪತ್ರಯ!"

ಡಾಕ್ಟರ್ ಸರ್ಕಾರ: "ತಾಪತ್ರಯವಿಲ್ಲದೆ ಇತ್ತು ಎಂದರೆ ಎಲ್ಲರೂ ಪರಮಹಂಸರಾಗಿಬಿಡುತ್ತಾರೆ."

ಶ್ರೀರಾಮಕೃಷ್ಣರು: "ಹೆಂಗಸೇನಾದರು ನನ್ನನ್ನು ಮುಟ್ಟಿದ್ದೇ ಆದರೆ ನಾನು ರೋಗಗ್ರಸ್ತನಾಗಿಬಿಡುತ್ತೇನೆ. ಅವರು ಮುಟ್ಟಿದ ಭಾಗ ಸುಮ್ಮನೆ 'ಚಳಕ್, ಚಳಕ್' ಅಂತ ಮುಳ್ಳುಳ್ಳ ಮೀನು ಚುಚ್ಚಿದ ಹಾಗೆ ನೋಯಲಾರಂಭಿಸುತ್ತದೆ."

ಡಾಕ್ಟರ್ ಸರ್ಕಾರ: "ಅದರಲ್ಲೇನೊ ನನಗೆ ವಿಶ್ವಾಸ. ಆದರೆ ಹೆಂಗಸರು ಇಲ್ಲದಿದ್ದರೆ ಕೆಲಸಕಾರ್ಯ ನಡೆಯೋ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಹಣವನ್ನು ಕೈಯಲ್ಲಿ ತೆಗೆದುಕೊಂಡೆನೆಂದರೆ ಕೈ ತಿರುಚುಮುರುಚಿಕೊಂಡುಬಿಡುತ್ತದೆ; ಉಸಿರಾಡೋದೂ ನಿಂತು ಹೋಗಿಬಿಡುತ್ತದೆ. ಹಣದಿಂದ ವಿದ್ಯಾ ಸಂಸಾರವನ್ನು— ಭಗವಂತನ ಸೇವೆ, ಸಾಧು ಭಕ್ತರ ಸೇವೆ — ನಡೆಸಿಕೊಂಡುಹೋಗೋದಾದರೆ, ಅದರಿಂದ ಯಾವ ಕೆಡಕೂ ಸಂಭವಿಸದು.

"ಹೆಂಗಸನ್ನು ಕಟ್ಟಿಕೊಂಡು ಮಾಯಾ ಸಂಸಾರವನ್ನು ನಡೆಯಿಸಿಕೊಂಡು ಹೋದರೆ, ಭಗವಂತನನ್ನು ಮರತೇಬಿಡಬೇಕಾಗುತ್ತದೆ. ಯಾರು ಈ ಜಗತ್ತಿನ ಮಾತೆಯೊ ಆಕೆಯೇ ಈ ಮಾಯಾ ರೂಪನ್ನು— ಹೆಂಗಸಿನ ರೂಪನ್ನು— ಧರಿಸಿದ್ದಾಳೆ. ಇದನ್ನು ಸರಿಯಾಗಿ ಅರಿತುಕೊಂಡಿದ್ದೇ ಆದರೆ, ಬಳಿಕ ಮಾಯಾ ಸಂಸಾರವನ್ನು ಮುಂದುವರಿಸಿಕೊಂಡು ಹೋಗಲು ಇಚ್ಛೆಯಾಗೋದಿಲ್ಲ. ಎಲ್ಲಾ ಸ್ತ್ರೀಯರೂ ಮಾತೆಯರೇ ಎಂಬ ಬೋಧೆಯಾಗಿಬಿಟ್ಟಿತು ಎಂದರೆ, ಬಳಿಕ ಬೇಕಾದರೆ ವಿದ್ಯಾ ಸಂಸಾರವನ್ನು ನಡೆಯಿಸಿಕೊಂಡುಹೋಗಲು ಸಾಧ್ಯ. ಭಗವದ್ದರ್ಶನ ಆಗದ ಹೊರತು ಹೆಂಗಸಿನ ಸ್ವರೂಪ ಏನು ಎಂಬುದು ಅರ್ಥವಾಗೋದಿಲ್ಲ."

ಹೋಮಿಯೋಪತಿ ಔಷಧ ತೆಗೆದುಕೊಳ್ಳುತ್ತಿರೋದರಿಂದ ಪರಮಹಂಸರು ಈಗ ಕೆಲವು ದಿನಗಳಿಂದ ಸ್ವಲ್ಪ ಉತ್ತಮಗೊಂಡವರಂತೆ ಕಾಣುತ್ತಿದ್ದಾರೆ.

ಡಾಕ್ಟರ್ ರಾಜೇಂದ್ರ ಶ್ರೀರಾಮಕೃಷ್ಣರಿಗೆ: "ನಿಮಗೆ ಗುಣವಾದ

ನಂತರ ನೀವು ಹೋಮಿಯಾಪತಿ ಚಿಕಿತ್ಸೆ ಮಾಡೋದನ್ನು ಕಲಿಯಬೇಕು. ಇಲ್ಲದಿದ್ದರೆ ನೀವು ಬದುಕಿ ಫಲವೇನು ?" (ಎಲ್ಲರೂ ನಗುತ್ತಿದಾರೆ.)

ನರೇಂದ್ರ: "ಚರ್ಮದ ಹಾಗೆ ಬೇರೊಂದೂ ಇಲ್ಲ! (ಮೋಚಿಗೆ ಚರ್ಮದಂಥ ಉತ್ಕೃಷ್ಟ ವಸ್ತು ಈ ಜಗತ್ತಿನಲ್ಲಿ ಬೇರೊಂದಿಲ್ಲ!)" (ಎಲ್ಲರೂ ನಗುತ್ತಿದಾರೆ.)

ಸ್ವಲ್ಪ ಹೊತ್ತಾದನಂತರ ಡಾಕ್ಟರುಗಳು ಹೊರಟುಹೋದರು. ಶ್ರೀರಾಮಕೃಷ್ಣರು ಮಾಸ್ಟರೊಡನೆ ಮಾತುಕತೆ ಆಡುತ್ತಿದಾರೆ. 'ಕಾಮಿನಿಯ' ಸಂಬಂಧವಾಗಿ ತಮ್ಮ ಮಾನಸಿಕ ವರ್ತನೆ ಏನು ಎಂಬುದನ್ನು ವಿವರಿಸುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇವರು ಕಾಮಕಾಂಚನವಿಲ್ಲದೆ ಬದುಕಿರಲಾಗೋದಿಲ್ಲ ಅಂತ ಹೇಳುತ್ತಿದಾರೆ. ನನ್ನ ಮಾನಸಿಕ ಅವಸ್ಥೆ ಏನು ಎಂಬುದು ಇವರಿಗೆ ಅರ್ಥವಾಗುತ್ತಿಲ್ಲ.

"ಹೆಂಗಸಿನ ಶರೀರವೇನಾದರು ನನ್ನ ಕೈಗೆ ತಾಕಿತೆಂದರೆ, ಅದಕ್ಕೆ ಜೋವು ಹಿಡಿದು ನೋಯಲಾರಂಭಿಸುತ್ತದೆ. ಆತ್ಮೀಯ ಭಾವನೆಯಿಂದ ಹೆಂಗಸನ್ನು ಸಮೀಪಿಸಿ ಆಕೆಯೊಡನೆ ಮಾತುಕತೆಗಳಾಡಲು ಆರಂಭಿಸಿದರೆ ನನಗೂ ಆಕೆಗೂ ಮಧ್ಯೆ ಒಂದು ಅಡ್ಡಕಟ್ಟನ್ನು ಹಾಕಿರೋ ಹಾಗೆ ಅನುಭವವಾಗುತ್ತದೆ. ಅದನ್ನು ನಾನು ದಾಟಿ ಆ ಕಡೆಗೆ ಹೋಗೋ ಹಾಗೇ ಇಲ್ಲ.

"ಕೊಠಡಿಯಲ್ಲಿ ನಾನೊಬ್ಬನೆ ಕುಳಿತುಕೊಂಡಿರುವಾಗ, ಅಕಸ್ಮಾತ್ತಾಗಿ ಹೆಂಗಸು ಕೊಠಡಿಯನ್ನು ಪ್ರವೇಶಿಸೋದಾದರೆ, ಒಡನೇ ನನಗೆ ಬಾಲಕನ ಅವಸ್ಥೆ ಬಂದುಬಿಡುತ್ತದೆ. ಆಗ ಆಕೆ ನನ್ನ ತಾಯಿಯಾಗಿ ಕಂಡುಬರುತ್ತಾಳೆ."

ಮಾಸ್ಟರ್ ಪರಮಹಂಸರ ಹಾಸಿಗೆ ಹತ್ತಿರ ಕುಳಿತುಕೊಂಡು ಆಶ್ಚರ್ಯಚಕಿತನಾಗಿ ಈ ಮಾತುಗಳನ್ನೆಲ್ಲಾ ಕೇಳುತ್ತಿದಾನೆ. ನರೇಂದ್ರ ಹಾಸಿಗೆಯಿಂದ ಸ್ವಲ್ಪ ದೂರದಲ್ಲಿ ಕುಳಿತುಕೊಂಡು ಭವನಾಥನೊಡನೆ ಮಾತುಕತೆ ಆಡುತ್ತಿದಾನೆ. ಭವನಾಥ ವಿವಾಹ ಮಾಡಿಕೊಂಡಿದಾನೆ. ಉದ್ಯೋಗಕ್ಕಾಗಿ ಪ್ರಯತ್ನಮಾಡುತ್ತಾ ಇದಾನೆ. ಅದಕ್ಕಾಗಿ ಆತನಿಗೆ ಕಾಶೀಪುರದ ಮನೆಗೆ ಆಗಾಗ ಬಂದು ಹೋಗಲಾಗುತ್ತಿಲ್ಲ. ಭವನಾಥ ಸಂಸಾರಸಾಗರಕ್ಕೆ ಕಾಲುಹಾಕಿರೋದರಿಂದ, ಆತನ ಯೋಗಕ್ಷೇಮದ

ಸಂಬಂಧವಾಗಿ ಪರಮಹಂಸರು ಬಹಳವಾಗಿ ಚಿಂತಿಸುತ್ತಿದಾರೆ. ಆತನ ವಯಸ್ಸು ಇಪ್ಪತ್ತುಮೂರೊ ಇಪ್ಪತ್ತನಾಲ್ಕೊ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ಆತನಿಗೆ ಬಹಳವಾಗಿ ಧೈರ್ಯ ಹೇಳು."

ನರೇಂದ್ರ, ಭವನಾಥ ಇಬ್ಬರೂ ಪರಮಹಂಸರ ಕಡೆ ನೋಡಿ ನಗಲಾರಂಭಿಸಿದಾರೆ. ಪರಮಹಂಸರು ಸನ್ನೆಯ ಮೂಲಕ ಭವನಾಥನಿಗೆ ಹೇಳುತ್ತಿದಾರೆ: "ಬಹಳ ದೊಡ್ಡ ವೀರಪುರುಷನಾಗಿ ಬದುಕು. ಆಕೆ ಮುಸುಕು ಹಾಕಿಕೊಂಡು ಅಳೋದನ್ನು ನೋಡಿ ನಿನ್ನನ್ನು ನೀನು ಮರೆಯ ಬೇಡ. ಹೆಂಗಸರು ಬಹಳವಾಗಿ ಅಳೋದುಂಟು—ಸಿಂಬಳ ತೆಗೆಯೋಕೂ! (ನರೇಂದ್ರ, ಮಾಸ್ಟರ್, ಭವನಾಥ ನಗುತ್ತಿದಾರೆ.)

"ಭಗವಂತನನ್ನು ಎಂದಿಗೂ ಮರೆಯಬೇಡ. ವೀರಪುರುಷ ರಮಣಿ ಯೊಡನೆ ವಾಸಿಸಿದರೂ ಆಕೆಯ ಸಹವಾಸವನ್ನು ಮಾತ್ರ ಮಾಡೋದಿಲ್ಲ. ನಿನ್ನ ಹೆಂಡತಿಯೊಡನೆ ಭಗವಂತನ ವಿಷಯವಾಗೇ ಮಾತಾಡು."

ಕೆಲವು ನಿಮಿಷಗಳಾದನಂತರ ಪರಮಹಂಸರು ಸನ್ನೆಯ ಮೂಲಕ ಭವನಾಥನಿಗೆ ಹೇಳುತ್ತಿದಾರೆ: "ಇಂದು ಇಲ್ಲೇ ಊಟಮಾಡು."

ಭವನಾಥ: "ಆಗಲಿ. ನನಗಾವ ಸಂಕೋಚವೂ ಇಲ್ಲ."

ಸುರೇಂದ್ರ ಕೊಠಡಿಗೆ ಬಂದು ಒಂದು ಕಡೆ ಕುಳಿತುಕೊಂಡ. ಭಕ್ತರು ದಿನವೂ ಹೂವಿನ ಹಾರಗಳನ್ನು ತಂದು ಪರಮಹಂಸರಿಗೆ ಅರ್ಪಿಸುತ್ತಿದಾರೆ. ಅವರು ಅವನ್ನು ಒಂದೊಂದಾಗಿ ತಮ್ಮ ಕೊರಳಿಗೆ ಹಾಕಿಕೊಳ್ಳೋ ಅಭ್ಯಾಸ. ಸುರೇಂದ್ರ ಸುಮ್ಮನೆ ಕುಳಿತಿದಾನೆ. ಪರಮಹಂಸರು ಪ್ರಸನ್ನರಾಗಿ ಆತನಿಗೆ ಎರಡು ಹಾರಗಳನ್ನು ತಮ್ಮ ಕೊರಳಿನಿಂದ ತೆಗೆದುಕೊಟ್ಟರು. ಈಗ ಸುರೇಂದ್ರ ಅವರಿಗೆ ಪ್ರಣಾಮ ಮಾಡಿ ಅವರಿಂದ ಆ ಹಾರಗಳನ್ನು ಪಡೆದು ಕೊಂಡು ಅವನ್ನು ತನ್ನ ಕೊರಳಿಗೆ ಹಾಕಿಕೊಳ್ಳುತ್ತಿದಾನೆ.

ಎಲ್ಲರೂ ನಿಶ್ಶಬ್ದರಾಗಿ ಕುಳಿತು ಪರಮಹಂಸರ ಕಡೆ ನೋಡುತ್ತಿದಾರೆ. ಈಗ ಮತ್ತೆ ಸುರೇಂದ್ರ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿ ನಿಂತುಕೊಂಡಿದಾನೆ. ಇನ್ನೇನು ಅವರಿಂದ ಬೀಳ್ಕೊಳ್ಳುವುದರಲ್ಲಿದಾನೆ. ತಾನು ಹೋಗುತ್ತಿದ್ದ ಹಾಗೆ ಭವನಾಥನನ್ನು ಕರೆದು ಹೇಳುತ್ತಿದಾನೆ: "ದಯವಿಟ್ಟು ಲಾಮಂಚದ ಪರದೆಗಳನ್ನು ಕಟ್ಟಿಬಿಡು."

ಹಿರಾನಂದ ತನ್ನ ಇಬ್ಬರು ಸ್ನೇಹಿತರೊಡನೆ ಕೊಠಡಿಯನ್ನು

ಪ್ರವೇಶಿಸಿದ. ಆತ ಕಲ್ಕತ್ತಕ್ಕೆ ಎರಡು ಸಾವಿರದ ಇನ್ನೂರು ಮೈಲಿ ದೂರದಲ್ಲಿರೋ ಸಿಂಧೂ ದೇಶ ನಿವಾಸಿ. ಆತ ಕಲ್ಕತ್ತದ ವಿಶ್ವವಿದ್ಯಾನಿಲಯ ದಲ್ಲಿ ತನ್ನ ವ್ಯಾಸಂಗ ಮುಗಿಸಿಕೊಂಡು, ತನ್ನ ದೇಶಕ್ಕೆ ಹಿಂದಿರುಗಿಹೋಗಿ ಅಲ್ಲಿ "ಸಿಂಧ್ ಟೈಮ್ಸ್", "ಸಿಂಧ್ ಸುಧಾರ್" ಎಂಬ ಎರಡು ವಾರ್ತಾ ಪತ್ರಿಕೆಗಳ ಸಂಪಾದಕನಾಗಿದಾನೆ. ಆತ ಕಲ್ಕತ್ತದಲ್ಲಿ ವ್ಯಾಸಂಗ ಮಾಡು ತ್ತಿದ್ದಾಗ ಕೇಶವಚಂದ್ರಸೇನನನ್ನು ನೋಡಲು ಹೋಗುತ್ತಿದ್ದ ಮತ್ತು ಆತ ನೊಡನೆ ವಿಶೇಷವಾಗಿ ಪರಿಚಯ ಮಾಡಿಕೊಂಡಿದ್ದ. ಆತ ಪರಮಹಂಸರನ್ನು ದಕ್ಷಿಣೇಶ್ವರದಲ್ಲಿ ಹಿಂದೆ ನೋಡಿದ್ದ. ಎಲ್ಲೋ ಒಂದು ಸಲ ಪರಮಹಂಸ ರೊಡನೆ, ಒಂದು ರಾತ್ರಿಯನ್ನೂ ಕಳೆದಿದ್ದ. ಪರಮಹಂಸರು ರೋಗ ಗ್ರಸ್ತರಾಗಿದಾರೆ ಎಂಬುದನ್ನು ಕೇಳಿ ಆತ ಸಿಂಧೂ ದೇಶದಿಂದ ಇಲ್ಲಿಗೆ ಅವರ ದರ್ಶನ ಪಡೆಯಲು ಬಂದಿದಾನೆ. ಪರಮಹಂಸರೂ ಆತನನ್ನು ನೋಡ ಬೇಕೆಂದು ಬಹಳವಾಗಿ ತವಕಪಡುತ್ತಿದ್ದರು.

ಶ್ರೀರಾಮಕೃಷ್ಣರು ಸೌಜ್ಞೆಯ ಮೂಲಕ ಮಾಸ್ಟರಿಗೆ ಹಿರಾನಂದ ನನ್ನು ತೋರಿಸಿ: "ಈತ ಒಳ್ಳೆಯವ. ನಿನಗೆ ಪರಿಚಯವಿದೆಯೆ ?"

ಮಾಸ್ಟರ್: "ಹೌದು, ಪರಿಚಯವಿದೆ."

ಶ್ರೀರಾಮಕೃಷ್ಣರು ಹಿರಾನಂದನಿಗೆ ಮತ್ತು ಮಾಸ್ಟರಿಗೆ: "ನೀವಿಬ್ಬರೂ ಒಂದು ಸ್ವಲ್ಪ ಹೊತ್ತು ಮಾತಾಡಿ, ನೋಡೋಣ. ನಿಮ್ಮಿಬ್ಬರ ಮಾತು ಕೇಳಬೇಕು ಅಂತ ನನಗೆ ಇಚ್ಛೆಯಾಗಿದೆ."

ಮಾಸ್ಟರ್ ಸುಮ್ಮನೆ ಕುಳಿತಿರುವುದನ್ನು ನೋಡಿ ಪರಮಹಂಸರು ಆತನಿಗೆ ಹೇಳಿದರು: "ನರೇಂದ್ರ ಇಲ್ಲೇ ಇದಾನೇನು ? ಹೋಗಿ ಕರೆದು ಕೊಂಡು ಬಾ."

ನರೇಂದ್ರ ಕೊಠಡಿಗೆ ಬಂದು ಪರಮಹಂಸರ ಹತ್ತಿರ ಕುಳಿತುಕೊಂಡ.

ಶ್ರೀರಾಮಕೃಷ್ಣರು ನರೇಂದ್ರ ಮತ್ತು ಹಿರಾನಂದನಿಗೆ: "ನೀವಿಬ್ಬರೂ ಒಂದು ಸ್ವಲ್ಪ ಹೊತ್ತು ಮಾತಾಡಿ, ನೋಡೋಣ."

ಹಿರಾನಂದ ಸುಮ್ಮನೆ ಕುಳಿತಿದಾನೆ. ಬಹಳವಾಗಿ ಹಿಂದು ಮುಂದು ನೋಡಿ ಮಾತಾಡಲಾರಂಭಿಸಿದ.

ಹಿರಾನಂದ ನರೇಂದ್ರನಿಗೆ: "ಒಳ್ಳೇದು, ಭಕ್ತನಿಗೆ ದುಃಖ ಬರಲು ಕಾರಣವೇನು ?"

ಹಿರಾನಂದನ ಮಾತುಗಳು ಮಧುಮಯವಾಗಿದ್ದುವು. ಕೊಠಡಿ

ಯಲ್ಲಿದ್ದ ಪ್ರತಿಯೊಬ್ಬನಿಗೂ ಅನಿಸಿತು, ಆತನ ಹೃದಯ ಪ್ರೇಮದಿಂದ ತುಂಬಿತುಳುಕಾಡುತ್ತಿದೆ ಎಂಬುದಾಗಿ.

ನರೇಂದ್ರ: "ಈ ಜಗತ್ತಿನ ಸೃಷ್ಟಿರಚನೆ ಪೈಶಾಚಿಕವಾದ್ದು. ನಾನು ಇದಕ್ಕಿಂತಲೂ ಮೇಲಾದ ಜಗತ್ತನ್ನು ಸೃಷ್ಟಿಮಾಡಿಬಿಡುತ್ತಿದ್ದೆ."

ಹಿರಾನಂದ: "ದುಃಖ ಇಲ್ಲದೆ ಇತ್ತು ಎಂದರೆ ಸುಖದ ಬೋಧೆ ಆಗುವುದೆ?"

ನರೇಂದ್ರ: "ಈ ಜಗತ್ತನ್ನು ಯಾವ ರೀತಿಯಾಗಿ ಸೃಷ್ಟಿಸಬೇಕು ಎಂಬುದರ ವಿಷಯವಾಗಿ ನಾನು ಹೇಳುತ್ತಿಲ್ಲ, ಆದರೆ ಈಗಿರುವುದರ ರಚನೆಯ ಸಂಬಂಧವಾಗಿ ಹೇಳುತ್ತಿದೇನೆ.

"ಆದರೆ, ವಿಶ್ವದೇವೈಕ್ಯವಾದದಲ್ಲಿ ವಿಶ್ವಾಸವಿದ್ದುದೇ ಆದರೆ, ಎಲ್ಲಾ ಸಮಸ್ಯೆಗಳ ಬಗೆಯೂ ದೊರೆತುಬಿಡುತ್ತದೆ. ಎಲ್ಲವೂ ಭಗವಂತನೆ ಎಂಬುದರಲ್ಲಿ ವಿಶ್ವಾಸವಿದ್ದುದೇ ಆದರೆ ಸಕಲ ಸಂದೇಹಗಳೂ ನಿವೃತ್ತಿಯಾಗಿ ಹೋಗುತ್ತವೆ. ಎಲ್ಲಕ್ಕೂ ಭಗವಂತನೊಬ್ಬನೇ ಕಾರಣ."

ಹಿರಾನಂದ: "ಹಾಗೆಂದೇನೊ ಬಾಯಲ್ಲಿ ಸುಲಭವಾಗಿ ಹೇಳಿಬಿಡಬಹುದು."

ಈಗ ನರೇಂದ್ರ ಶ್ರೀ ಶಂಕರಾಚಾರ್ಯರ ನಿರ್ವಾಣಷಟ್ಕವನ್ನು[1] ಸ್ವರ ಹಾಕಿಕೊಂಡು ಹಾಡುತ್ತಿದಾನೆ:

ಬುದ್ಧಿ ಮನ ಚಿತ್ತ ಹಂಕಾರ ನಾನಲ್ಲ;
ಕಣ್ಣು ಕಿವಿ ಮೂಗಲ್ಲ, ನಾಲಗೆಯುಮಲ್ಲ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

ಪಂಚವಾಯುಗಳಲ್ಲ, ಪ್ರಾಣ ನಾನಲ್ಲ;
ಸಪ್ತಧಾತುಗಳಲ್ಲ, ಕೋಶವೈದಲ್ಲ;
ಕರ್ಮಾಂಗ ವಿಷಯೇಂದ್ರಿಯಂಗಳಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!

ದ್ವೇಶರಾಗಗಳಿಲ್ಲ ಲೋಭಮೆನಗಿಲ್ಲ;
ಮೋಹಮದ ಮಾತ್ಸರ್ಯ ಭಾವಮೆನಗಿಲ್ಲ;

1. ಶ್ರೀ ಶಂಕರಾಚಾರ್ಯ ವಿರಚಿತದ ಅನುವಾದ.

ಧರ್ಮಾರ್ಥ ಕಾಮಾದಿ ಮೋಕ್ಷ ನಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!
ಪಾಪಪುಣ್ಯಗಳಲ್ಲ, ಸುಖದುಃಖವಲ್ಲ;
ಮಂತ್ರತೀರ್ಥಗಳಲ್ಲ, ವೇದ ಮಖವಲ್ಲ;
ಭೋಜ್ಯ ಭೋಜನವಲ್ಲ, ಭೋಕ್ತ ನಾನಲ್ಲ!
ಸಚ್ಚಿದಾನಂದಾತ್ಮ ಶಿವ ನಾನು ನಾನು!
ಜಾತಿ ಭೇದಗಳಿಲ್ಲ, ಮೃತ್ಯು ಭಯವಿಲ್ಲ;
ಜನ್ಮ ಮೃತ್ಯುಗಳಿಲ್ಲ, ತಂದೆತಾಯಿಲ್ಲ;
ಬಂಧು ಸಖರಿಲ್ಲ, ಗುರುಶಿಷ್ಯರಾರಿಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು!
ನಿರ್ವಿಕಲ್ಪನು ನಾ ನಿರಾಕಾರ ನಾನು!
ಸರ್ವೇಂದ್ರಿಯಾತೀತ ಸರ್ವತ್ರ ನಾನು;
ಕಾಲದೇಶಾತೀತ ವಿಶ್ವವಿಭು ನಾನು!
ಸಚ್ಚಿದಾನಂದಾತ್ಮ ಶಿವ ನಾನು ನಾನು!

ಹಿರಾನಂದ: "ಭೇಷ್!"

ಶ್ರೀರಾಮಕೃಷ್ಣರು ಸೌಜ್ಞೆಯ ಮೂಲಕ ಹಿರಾನಂದನಿಗೆ: "ಆತನಿಗೆ ಈಗ ಉತ್ತರ ಕೊಡು."

ಹಿರಾನಂದ: "ಕೊಠಡಿಯನ್ನು ಅದರ ಒಂದು ಮೂಲೆಯಲ್ಲಿ ನಿಂತುಕೊಂಡು ನೋಡಿದರೆ ಏನು ಕಾಣುತ್ತದೊ, ಅದರ ಮಧ್ಯೆ ನಿಂತುಕೊಂಡು ನೋಡಿದರೂ ಅದೇ ಕಾಣುತ್ತದೆ. 'ಹೇ ಭಗವಂತ, ನಾನು ನಿನ್ನ ದಾಸ' ಅಂತ ಹೇಳಿದರೂ ಆತನ ಸಾಕ್ಷಾತ್ಕಾರ ದೊರೆಯುತ್ತದೆ, ಅಥವಾ, 'ಸೋಽಹಮ್' ಅಂತ ಹೇಳಿದರೂ ಆತನ ಸಾಕ್ಷಾತ್ಕಾರವೇ ದೊರೆಯುತ್ತದೆ. ಮನೆಯನ್ನು ಅದರ ಅನೇಕ ಬಾಗಿಲುಗಳಿಂದ ಪ್ರವೇಶಿಸಬಹುದು."

ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ. ಹಿರಾನಂದ ನರೇಂದ್ರನಿಗೆ ಹೇಳಿದ: "ಇನ್ನಾವುದನ್ನಾದರೂ ಹಾಡು." ನರೇಂದ್ರ ಶ್ರೀ ಶಂಕರಾಚಾರ್ಯ ವಿರಚಿತ ಕೌಪೀನಪಂಚಕವನ್ನು ಸ್ವರ ಕೊಟ್ಟು ಹಾಡುತ್ತಿದಾನೆ:

ವೇದಾಂತ ವಾಕ್ಯೇಷು ಸದಾ ರಮಂತೋ
ಭಿಕ್ಷಾನ್ನಮಾತ್ರೇಣ ಚ ತುಷ್ಟಿಮಂತಃ ।

ವಿಶೋಕಮಂತಃಕರಣೇ ಚರಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥
ಮೂಲಂ ತರೋಃ ಕೇವಲಮಾಶ್ರಯಂತಃ
ಪಾಣಿದ್ವಯಂ ಭೋಕ್ತುಮಮಂತ್ರಯಂತಃ ।
ಕಂಥಾಮಿವ ಶ್ರೀಮಪಿ ಕುತ್ಸಯಂತಃ
ಕೌಪೀನವಂತಃ ಖಲುಭಾಗ್ಯವಂತಃ ॥
ಸ್ವಾನಂದಭಾವೇ ಪರಿತುಷ್ಟಿಮಂತಃ
ಸುಶಾಂತಸರ್ವೇಂದ್ರಿಯವೃತ್ತಿಮಂತಃ ।
ಅಹರ್ನಿಶಂ ಬ್ರಹ್ಮಸುಖೇ ರಮಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥

ಪರಮಹಂಸರು, "ಅಹರ್ನಿಶಂ ಬ್ರಹ್ಮಸುಖೇ ರಮಂತಃ" ಎಂಬ ಪಾದವನ್ನು ಕೇಳಿದೊಡನೆಯೆ ಅವರು ಮೆತ್ತಗೆ ಹೇಳಿದರು: "ಆಹ!" ತರುವಾಯ ಸೌಜ್ಞೆಯ ಮೂಲಕ ಭಕ್ತರಿಗೆ ಹೇಳುತ್ತಿದಾರೆ: "ಇದು ಯೋಗಿಯ ಲಕ್ಷಣ."

ನರೇಂದ್ರ ಮುಂದುವರಿಸುತ್ತಿದಾನೆ:

ದೇಹಾದಿಭಾವಂ ಪರಿವರ್ತಯಂತಃ
ಸ್ವಾತ್ಮಾನಾಮಾತ್ಮನ್ಯವಲೋಕಯಂತಃ ।
ನಾಂತಂ ನ ಮಧ್ಯಂ ನ ಬಹಿಃ ಸ್ಮರಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥
ಬ್ರಹ್ಮಾಕ್ಷರಂ ಪಾವನಮುಚ್ಚರಂತೋ
ಬ್ರಹ್ಮಾಹಮಸ್ಮೀತಿ ವಿಭಾವಯಂತಃ ।
ಭಿಕ್ಷಾಶಿನೋ ದಿಕ್ಷು ಪರಿಭ್ರಮಂತಃ
ಕೌಪೀನವಂತಃ ಖಲು ಭಾಗ್ಯವಂತಃ ॥

ಮತ್ತೆ ನರೇಂದ್ರ ಹಾಡಿದ:

ಪರಿಪೂರ್ಣಮಾನಂದಮ್ ।
ಅಂಗವಿಹೀನಂ ಸ್ಮರ ಜಗನ್ನಿಧಾನಮ್ ।
ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ,
ಯದ್ವಾಚೋಹ ವಾಚಂ ವಾಗತೀತಂ,
ಪ್ರಾಣಸ್ಯ ಪ್ರಾಣಂ ಪರಂ ವರೇಣ್ಯಮ್ । †

* ೩ನೆ ಪರಿಶಿಷ್ಟದಲ್ಲಿ ೧೩ನ್ನು ನೋಡಿ. † ೩ನೆ ಪರಿಶಿಷ್ಟದಲ್ಲಿ ೧೪ನ್ನು ನೋಡಿ.

ಪರಮಹಂಸರು ನರೇಂದ್ರನಿಗೆ : "ಆ ಹಾಡು — 'ಇರುವುದೆಲ್ಲ ನೀನೆ ಈ ಜಗದಲಿ!' ಎಂಬುದು."

ನರೇಂದ್ರ ಹಾಡುತ್ತಿದಾನೆ :

ನನ್ನ ಮನವನು ನಿನಗೆ ಅರ್ಪಿಸಿರುವೆನು ಗುರುವೆ
ಇರುವುದೆಲ್ಲವು ನೀನೆ ಈ ಜಗದಲಿ!
ನಿನ್ನೊಬ್ಬನನೆ ಕಂಡೆ, ಮತ್ತೆ ಯಾರೂ ಇಲ್ಲ;
ನನ್ನಾತ್ಮ ಬಂಧು ನೀ ಸರ್ವಾಶ್ರಯ.
ನೀನಿರದ ಎದೆಯಿಲ್ಲ; ಎಲ್ಲರೆದೆಯೊಳು ನೀನೆ, . . .

ಪರಮಹಂಸರು, "ನೀನಿರದ ಎದೆಯಿಲ್ಲ; ಎಲ್ಲರೆದೆಯೊಳು ನೀನೆ," ಎಂಬ ಚರಣವನ್ನು ಕೇಳಿದೊಡನೆಯೆ, ಸೌಜ್ಞೆಯ ಮೂಲಕ ಹೇಳುತ್ತಿದಾರೆ :

"ಭಗವಂತ ಪ್ರತಿಯೊಬ್ಬರ ಹೃದಯದಲ್ಲೂ ಇದಾನೆ. ಆತ ಅಂತರ್ಯಾಮಿ."

ನರೇಂದ್ರ, "ಇರುವುದೆಲ್ಲವು ನೀನೆ ಈ ಜಗದಲಿ! ನಿನ್ನೊಬ್ಬನನೆ ಕಂಡೆ, ಮತ್ತೆ ಯಾರೂ ಇಲ್ಲ;" ಎಂಬುದಾಗಿ ಹಾಡಿದಾಗ, ಹಿರಾನಂದ ನರೇಂದ್ರನಿಗೆ ಹೇಳಿದ : "ಹೌದು, 'ಇರುವುದೆಲ್ಲವು ನೀನೆ.' ಈಗ ನೀನು ಹೇಳುತ್ತಿದೀಯೆ : 'ನೀನು! ನೀನು! ನಾನಲ್ಲ, ನೀನು!'"

ನರೇಂದ್ರ : "ನನಗೆ ಒಂದನ್ನು ಕೊಡು, ನಿನಗೆ ಕೋಟಿಯನ್ನು ಕೊಡುತ್ತೇನೆ. ನೀನೆ ನಾನು, ನಾನೇ ನೀನು. ನಾನು ವಿನಾ ಬೇರೆ ಏನೂ ಇಲ್ಲ."

ಈಗ ನರೇಂದ್ರ ಅಷ್ಟಾವಕ್ರ ಸಂಹಿತೆಯಿಂದ ಕೆಲವು ಶ್ಲೋಕಗಳನ್ನು ಪಠಿಸಲಾರಂಭಿಸಿದಾನೆ. ಕೊಠಡಿ ಮತ್ತೆ ನಿಶ್ಶಬ್ದತೆಯಿಂದ ಕೂಡಿದೆ.

ಶ್ರೀರಾಮಕೃಷ್ಣರು ಹಿರಾನಂದನಿಗೆ ನರೇಂದ್ರನನ್ನು ತೋರಿಸಿ : "ಆತ ಒರೆಯಿಂದ ತೆಗೆದ ಕತ್ತಿಯನ್ನು ಹಿಡಿದು ತಿರುಗಾಡುತ್ತಿರುವವನಂತಿದಾನೆ. (ಹಿರಾನಂದನನ್ನು ತೋರಿಸಿ ಮಾಸ್ಟರಿಗೆ) ಎಷ್ಟು ಶಾಂತನಾಗಿದಾನೆ! ನಾಗರ ಹಾವು ಹೆಡೆ ಬಿಚ್ಚಿ ಹಾವಾಡಿಗನ ಎದುರು ಸುಮ್ಮನೆ ಕುಳಿತಿರೋ ಹಾಗೆ."

ಪರಮಹಂಸರು ಅಂತರ್ಮುಖರಾಗಿದಾರೆ. ಅವರ ಹತ್ತಿರ ಹಿರಾನಂದ ಮತ್ತು ಮಾಸ್ಟರ್ ಕುಳಿತಿದಾರೆ. ಕೊಠಡಿ ನಿಶ್ಶಬ್ದವಾಗಿದೆ. ಪರಮಹಂಸರಿಗೆ ಬಂದಿರೋ ರೋಗ ಅವರಿಗೆ ತಡೆಯಲಾರದ ವೇದನೆಯನ್ನುಂಟು

ಮಾಡುತ್ತಿದೆ. ಭಕ್ತರ ಕೈಯಲ್ಲಿ ಈ ರೋಗದ ದಾರುಣತೆಯನ್ನು ನೋಡಿ ಸಹಿಸಲಾಗುತ್ತಿಲ್ಲ; ಆದರೂ ಪರಮಹಂಸರು ಹೇಗೋ ಮಾಡಿ ಅವರೆಲ್ಲರೂ ಅದನ್ನು ಮರೆಯುವಂತೆ ಮಾಡಿದಾರೆ. ಯಾವ ರೋಗವೂ ಇಲ್ಲದವರಂತೆ ಹಸನ್ಮುಖರಾಗಿ ಕುಳಿತಿದಾರೆ.

ಭಕ್ತರು ಹೂವುಗಳನ್ನು ಮತ್ತು ಹೂವಿನ ಹಾರಗಳನ್ನು ತೆಗೆದು ಕೊಂಡು ಬಂದು ಪರಮಹಂಸರಿಗೆ ಅರ್ಪಿಸಿದಾರೆ. ಅವರು ಅದರಿಂದ ಒಂದು ಹೂವನ್ನು ತೆಗೆದುಕೊಂಡು ಅದನ್ನು ತಮ್ಮ ತಲೆ, ಗಂಟಲು, ಹೃದಯ, ನಾಭಿ ಇವುಗಳಿಗೆ ಮುಟ್ಟಿಸುತ್ತಿದಾರೆ. ಚಿಕ್ಕ ಹುಡುಗ ಹೂವಿನೊಡನೆ ಆಟವಾಡುತ್ತಿರುವನೊ ಏನೊ ಎಂಬಂತೆ ಭಕ್ತರಿಗೆ ತೋರಿಬಂತು.

ಪರಮಹಂಸರು ತಮ್ಮ ಭಕ್ತರಿಗೆ ಹೇಳಿದ್ದರು, ತಮಗೆ ಭಗವದ್ದರ್ಶನ, ಭಗವದ್ಭಾವ ಉಂಟಾದಾಗಲೆಲ್ಲ ಮಹಾವಾಯು ಊರ್ಧ್ವಗಾಮಿಯಾಗುತ್ತದೆ ಎಂಬುದಾಗಿ.

ಈಗ ಅವರು ಮಾಸ್ಟರೊಡನೆ ಮಾತುಕತೆಗಳಾಡಲು ಆರಂಭಿಸಿದಾರೆ.

ಶ್ರೀರಾಮಕೃಷ್ಣರು: "ಮಹಾವಾಯು ಯಾವಾಗ ಊರ್ಧ್ವಗಾಮಿಯಾಗಿಬಿಟ್ಟಿತು ಎಂಬುದನ್ನು ನಾನು ಹೇಳಲಾರೆ. ಈಗ ನನಗೆ ಬಾಲಭಾವ ಬಂದುಬಿಟ್ಟಿದೆ. ಅದಕ್ಕಾಗೇ ಹೂವುಗಳನ್ನು ತೆಗೆದುಕೊಂಡು ಈ ರೀತಿಯಾಗಿ ಆಟವಾಡುತ್ತಿದೇನೆ. ಈಗ ನನಗೆ ಏನು ಕಾಣುತ್ತಿದೆ ಗೊತ್ತೆ? ಈ ಶರೀರ ಬಿದಿರು ದಬ್ಬೆಗಳಿಂದ ಬಿಗಿದ ಒಂದು ಆಕಾರವಾಗಿರೋ ಹಾಗೆಯೂ, ಇದಕ್ಕೆ ಬಟ್ಟೆ ಹೊದಿಸಿರುವ ಹಾಗೆಯೂ ಕಾಣಬರುತ್ತಿದೆ. ಇದರೊಳಗೆ ಒಬ್ಬ ವಾಸಿಸುತ್ತಿರೋದರಿಂದ, ಇದು ಚಲಿಸುತ್ತಿದೆ.

"ಮತ್ತೆ ಈ ಶರೀರ ಬೀಜಗಳನ್ನೆಲ್ಲ ತೋಡಿಹಾಕಿಬಿಟ್ಟ ಕುಂಬಳ ಕಾಯಿಯೋಪಾದಿಯಲ್ಲಿ ಕಾಣುತ್ತಿದೆ. ಇದರ ಆಂತರ್ಯದಲ್ಲಿ ಕಾಮಾದಿ ಆಸಕ್ತಿ ಒಂದು ಎಳ್ಳಿನ ಮೊನೆಯಷ್ಟೂ ಇಲ್ಲ. ಒಳಗೆ ಸಂಪೂರ್ಣವಾಗಿ ಚೊಕ್ಕಟವಾಗಿದೆ. ಮತ್ತು—"

ಪರಮಹಂಸರಿಗೆ ಮಾತಾಡಲೂ ಕಷ್ಟವಾಗುತ್ತಿದೆ. ಅತ್ಯಂತ ದುರ್ಬಲರಾಗಿದಾರೆ. ಪರಮಹಂಸರು ಮತ್ತೆ ಭಕ್ತರಿಗೆ ಏನು ಹೇಳಬೇಕೆಂದಿದಾರೆ ಎಂಬುದನ್ನು ಊಹಿಸಿಕೊಂಡು ಮಾಸ್ಟರ್ ಅವರಿಗೆ ಹೇಳಿದ: "ಮತ್ತೆ ನೀವು ನಿಮ್ಮ ಆಂತರ್ಯದಲ್ಲಿ ಭಗವಂತನನ್ನು ನೋಡುತ್ತಾ ಇದೀರಿ."

ಶ್ರೀರಾಮಕೃಷ್ಣರು: "ಆಂತರ್ಯದಲ್ಲೂ ಮತ್ತು ಹೊರಗೂ

ಆ ಅಖಂಡ ಸಚ್ಚಿದಾನಂದ ಒಳಗೆ, ಹೊರಗೆ ಎರಡು ಕಡೆಯಲ್ಲೂ ಇದಾನೆ. ಆತ ನೆಪಮಾತ್ರಕ್ಕೆ ಈ ಚೀಲವನ್ನು (ತಮ್ಮ ಶರೀರವನ್ನು ತೋರಿಸಿ) ಆಶ್ರಯಿಸಿ ಇದರ ಒಳಗೆ ಮತ್ತು ಹೊರಗೆ ಇದಾನೆ. ಇದು ನನಗೆ ಸ್ಪಷ್ಟವಾಗಿ ಕಾಣುತ್ತಿದೆ.''

ಮಾಸ್ಟರು ಮತ್ತು ಹಿರಾನಂದ ಪರಮಹಂಸರ ಈ ಮಹಾನುಭವಗಳನ್ನು ಏಕಚಿತ್ತದಿಂದ ಆಲಿಸುತ್ತಿದಾರೆ. ಕೆಲವು ನಿಮಿಷಗಳನಂತರ ಪರಮಹಂಸರು ಮತ್ತೆ ಅವರ ಕಡೆ ದೃಷ್ಟಿಹಾಕಿ ತಮ್ಮ ಮಾತನ್ನು ಮುಂದುವರಿಸುತ್ತಿದಾರೆ.

ಶ್ರೀರಾಮಕೃಷ್ಣರು : ''ನೀವೆಲ್ಲರೂ ನನ್ನ ಸ್ವಬಾಂಧವರಾಗಿ ಕಾಣುತ್ತಿದೀರಿ. ನೀವು ಯಾರೂ ಹೊರಗಿನವರಾಗಿ ತೋರಿಬರುತ್ತಿಲ್ಲ.

''ನೀವೆಲ್ಲರೂ ಒಂದೊಂದು ಚೀಲಗಳಾಗಿ, ತಲೆ ಅಲ್ಲಾಡಿಸುತ್ತಿರುವಂತೆ ಕಾಣುತ್ತಿದೆ.

''ನನ್ನ ಮನಸ್ಸು ಭಗವಂತನೊಡನೆ ಐಕ್ಯವಾದಾಗಲೆಲ್ಲಾ ಈ ಶರೀರದ ಕಷ್ಟಗಳೆಲ್ಲ ಎಲ್ಲೋ ಒಂದು ಮೂಲೆಯಲ್ಲಿ ಮುದುರಿಬಿದ್ದಿರುವುದು ನನ್ನ ಗಮನಕ್ಕೆ ಬರುತ್ತಿದೆ.

''ಈಗ ನನಗೆ ಸ್ಪಷ್ಟವಾಗಿ ಕಾಣಬರುತ್ತಿದೆ : ಆ ಅಖಂಡ ಸಚ್ಚಿದಾನಂದ ಈ ಚರ್ಮದ ಹೊದ್ದಿಕೆಯನ್ನು ಹೊದ್ದುಕೊಂಡಿರೋದು ; ಈ ಗಂಟಲ ಹುಣ್ಣು ಇದರ ಒಂದು ಭಾಗದಲ್ಲಿ ಮುದುರಿಕೊಂಡಿರೋದು.''

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡರು. ಕೆಲವು ನಿಮಿಷಗಳಾದನಂತರ ಅವರು ಹೇಳಿದರು : ''ಜಡದ ಸತ್ತ್ವವನ್ನು ಚೈತನ್ಯವಸ್ತು ಆರೋಪಿಸಿಕೊಳ್ಳುತ್ತದೆ, ಚೈತನ್ಯದ ಸತ್ತ್ವವನ್ನು ಜಡವಸ್ತು ಆರೋಪಿಸಿಕೊಳ್ಳುತ್ತದೆ. ಅದಕ್ಕಾಗೇ ದೇಹ ರೋಗಗ್ರಸ್ತವಾದಾಗ ಮನುಷ್ಯ ಹೇಳುತ್ತಾನೆ : 'ನನಗೆ ರೋಗ ಬಂದಿದೆ.'''

ಪರಮಹಂಸರು ಈಗ ತಾನೆ ಆಡಿದ ಮಾತುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಹಿರಾನಂದ ಆಕಾಂಕ್ಷೆ ತೋರಿಸಿದ ; ಅದಕ್ಕಾಗೇ ಮಾಸ್ಟರ್ ಆತನಿಗೆ ಹೇಳುತ್ತಿದಾನೆ : ''ಬಿಸಿ ನೀರು ಕೈಯನ್ನು ಸುಟ್ಟಾಗ ಜನ ಹೇಳುತ್ತಾರೆ, ನೀರು ಕೈಯನ್ನು ಸುಟ್ಟಿತು ಎಂದು ; ಆದರೆ ಸತ್ಯವೇನೆಂದರೆ, ಅದರಲ್ಲಿನ ಕಾವು ಕೈಯನ್ನು ಸುಡುತ್ತದೆ.''

ಹಿರಾನಂದ ಶ್ರೀರಾಮಕೃಷ್ಣರಿಗೆ: "ದಯವಿಟ್ಟು ಹೇಳಿ, ಭಕ್ತನಿಗೆ ಏಕೆ ಕಷ್ಟಬರುತ್ತದೆ?"

ಶ್ರೀರಾಮಕೃಷ್ಣರು: "ಕಷ್ಟಪಡೋದು ದೇಹ."

ಪರಮಹಂಸರ ಬಾಯಿಂದ ಇನ್ನೇನು ಬರುವುದೊ ಎಂಬುದನ್ನು ಕೇಳಲು ಅವರಿಬ್ಬರೂ ಉತ್ಸುಕತೆಯಿಂದ ಕುಳಿತಿದಾರೆ.

ಶ್ರೀರಾಮಕೃಷ್ಣರು ಕೇಳಿದರು: "ಅರ್ಥವಾಯಿತೇನು?"

ಮಾಸ್ಟರ್ ಹಿರಾನಂದನಿಗೆ ಮೆತ್ತಗೆ ಮೆತ್ತಗೆ: "ಭಕ್ತನ ಶರೀರ ಕಷ್ಟಪಡುತ್ತದೆ ಲೋಕಶಿಕ್ಷಣಕ್ಕಾಗಿ. ಆತನ ಜೀವನ ಆದರ್ಶಪ್ರಾಯ ವಾದ್ದು. ಇಷ್ಟೊಂದು ದೈಹಿಕ ಕಷ್ಟಗಳ ಮಧ್ಯೆ ಇದ್ದರೂ, ಆತನ ಮನಸ್ಸು ಮಾತ್ರ ಶೇಕಡ ನೂರು ಭಾಗ ಭಗವಂತನಲ್ಲಿ ಐಕ್ಯವಾಗಿರುತ್ತದೆ."

ಹಿರಾನಂದ: "ಹೌದು, ಇದು ಏಸುವನ್ನು ಶಿಲುಬೆಗೆ ಏರಿಸಿದ ಹಾಗೆ. ಆದರೂ ರಹಸ್ಯ ಬಗೆಹರಿಯದೆ ಉಳಿದುಕೊಂಡಿದೆ— ಎಲ್ಲರೂ ಹೋಗಿ ಇವರು ಏಕೆ ಹೀಗೆ ಕಷ್ಟಪಡಬೇಕು?"

ಮಾಸ್ಟರ್: "ಪರಮಹಂಸರು ಹೇಳುತ್ತಾರಲ್ಲ ಇದೆಲ್ಲ ಭಗವತಿಯ ಇಚ್ಛೆ ಅಂತ. ಇವರ ಶರೀರದಲ್ಲಿ ಆತ ಈ ರೀತಿಯಾಗಿ ಕ್ರೀಡಿಸು ತ್ತಿದಾನೆ."

ಈಗ ಈ ಭಕ್ತರಿಬ್ಬರೂ ಮೆತ್ತಮೆತ್ತಗೆ ಮಾತಾಡಿಕೊಳ್ಳುತ್ತಿದಾರೆ. ಪರಮಹಂಸರು ಹಿರಾನಂದನನ್ನು ಸನ್ನೆಯಮೂಲಕ ಕೇಳುತ್ತಿದಾರೆ: "ಏನು ಹೇಳುತ್ತಿದಾನೆ?" ತಾವು ಮೊದಲು ಮಾಡಿದ ಸನ್ನೆಯನ್ನು ಹಿರಾನಂದ ಅರ್ಥಮಾಡಿಕೊಳ್ಳದಿರೋದನ್ನು ನೋಡಿ ಮತ್ತೆ ಅದನ್ನೇ ಆವೃತ್ತಿ ಮಾಡಿದರು.

ಹಿರಾನಂದ: "ಈತ ಹೇಳುತ್ತಿದಾನೆ, ನಿಮಗೆ ಕಾಯಿಲೆ ಬಂದಿ ರೋದು ಲೋಕಶಿಕ್ಷಣಕ್ಕಾಗಿ ಎಂದು."

ಶ್ರೀರಾಮಕೃಷ್ಣರು: "ಆದರೆ ಅದು ಆತನ ಊಹೆ ಮಾತ್ರ.

(ಮಾಸ್ಟರಿಗೆ ಮತ್ತು ಹಿರಾನಂದನಿಗೆ) "ನನ್ನ ಅವಸ್ಥೆ ಬದಲಾಯಿ ಸುತ್ತಿದೆ. 'ಆತ್ಮಜಾಗೃತಿಯುಂಟಾಗಲಿ' ಎಂದು ಎಲ್ಲರಿಗೂ ನಾನು ಹೇಳ ಬಾರದು ಎಂಬುದಾಗಿ ಮನಸ್ಸಿಗೆ ಅನಿಸುತ್ತಿದೆ. ಕಲಿಯುಗದಲ್ಲಿ ಪಾಪ ಜಾಸ್ತಿಯಾಗಿದೆ; ನಾನು ಜನರ ಆತ್ಮಜಾಗೃತಿಯನ್ನುಂಟುಮಾಡಿದರೆ, ಅವರ ಪಾಪದ ಹೊರೆಯೆಲ್ಲ ನನ್ನ ತಲೆ ಮೇಲೆ ಬಂದು ಬೀಳುತ್ತದೆ."

ಮಾಸ್ಟರ್ ಹಿರಾನಂದನಿಗೆ: "ಕಾಲ ಬಾರದೆ ಇದ್ದರೆ ಅವರು ಜನರ ಆತ್ಮಜಾಗೃತಿಯನ್ನುಂಟುಮಾಡೋದಿಲ್ಲ. ವ್ಯಕ್ತಿ ಸಿದ್ಧನಾಗಿದ್ದನೆಂದರೆ ಆಗ ಅವರು ಆತನ ಆತ್ಮಜಾಗೃತಿಯನ್ನು ಉಂಟುಮಾಡುತ್ತಾರೆ."

೨೩ನೆ ಏಪ್ರಿಲ್ ೧೮೮೬, ಚೈತ್ರ ಕೃಷ್ಣ ಪಂಚಮಿ, ಶುಕ್ರವಾರ.

ಹಿರಾನಂದ ಇಂದು ಮಧ್ಯಾಹ್ನ ಇಲ್ಲೇ ಊಟಮಾಡಿದ. ಸಮಯ ಅಪರಾಹ್ನ ಒಂದು. ಈಗ ಆತ ಪರಮಹಂಸರ ಪಾದಗಳನ್ನು ಒತ್ತುತ್ತಿದಾನೆ. ಮಾಸ್ಟರೂ ಪರಮಹಂಸರ ಹತ್ತಿರ ಕುಳಿತಿದಾನೆ. ಲಾಟು ಮತ್ತು ಇನ್ನೂ ಒಬ್ಬಿಬ್ಬರು ಆಗಾಗ ಕೊಠಡಿಗೆ ಬಂದು ಹೋಗುತ್ತಾ ಇದಾರೆ. ಹಿರಾನಂದ ಸ್ವಲ್ಪ ಕಾಲ ಕಾಶೀಪುರದಲ್ಲೇ ಇದ್ದುಬಿಡಲಿ ಅಂತ ಪರಮಹಂಸರ ಇಚ್ಛೆ.

ಹಿರಾನಂದ ಪರಮಹಂಸರ ಪಾದಗಳನ್ನು ಒತ್ತುತ್ತ ಒತ್ತುತ್ತ ಮಗುವನ್ನು ಸಂತೈಸೋ ರೀತಿಯಲ್ಲಿ ಅವರೊಡನೆ ತನ್ನ ಮಧುರ ಕಂಠದಿಂದ ಮಾತಾಡುತ್ತಿದಾನೆ.

ಹಿರಾನಂದ: "ನೀವೇಕೆ ಇಷ್ಟೊಂದು ನಿಮ್ಮ ರೋಗದ ವಿಷಯವಾಗಿ ತಲೆಗೆ ಹಚ್ಚಿಕೋಬೇಕು? ನೀವು ಡಾಕ್ಟರ ಮೇಲೆ ಭಾರ ಹಾಕಿಬಿಟ್ಟರಿ ಅಂದರೆ ನಿಶ್ಚಿಂತರಾಗಿರಬಹುದು. ನೀವು ಒಂದು ಮಗು ಮಾತ್ರ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಡಾಕ್ಟರ ಮೇಲೆ ಭಾರ ಹಾಕೋಬಗೆ ಹೇಗೆ? ಡಾಕ್ಟರ್ ಸರ್ಕಾರ ಹೇಳಿಬಿಟ್ಟಿದಾನೆ, ಗುಣವಾಗೋದಿಲ್ಲ ಅಂತ."

ಹಿರಾನಂದ: "ಅದಕ್ಕಾಗಿ ನೀವು ಇಷ್ಟೊಂದು ಚಿಂತಿಸುವುದೇಕೆ? ಏನಾಗಬೇಕೊ ಅದು ಆಗುತ್ತದೆ."

ಮಾಸ್ಟರ್ ಹಿರಾನಂದನನ್ನು ಒಂದು ಕಡೆಗೆ ಕರೆದು: "ಅವರು ತಮಗಾಗಿ ಭಾವಿಸುತ್ತಿಲ್ಲ. ಅವರು ಶರೀರವನ್ನು ಇಟ್ಟುಕೊಂಡಿರೋದು ಭಕ್ತರ ಸಲುವಾಗಿ."

ಇಂದು ಬಿಸಿಲಿನ ಬೇಗೆ ಅಧಿಕ. ಜೊತೆಗೆ ಈಗ ಮಧ್ಯಾಹ್ನ. ಲಾಮಂಚದ ಪರದೆಗಳನ್ನು ಕಟ್ಟಿದೆ. ಹಿರಾನಂದ ಎದ್ದುಹೋಗಿ ಅವನ್ನು ಸರಿಯಾಗಿ ಕಟ್ಟುತ್ತಿದಾನೆ. ಪರಮಹಂಸರು ಆತನ ಕಡೆ ನೋಡುತ್ತಿದಾರೆ.

ಶ್ರೀರಾಮಕೃಷ್ಣರು ಹಿರಾನಂದನಿಗೆ: "ಆದ್ದರಿಂದ ಪೈಜಾಮುಗಳನ್ನು ಕಳುಹಿಸಿಕೊಡೋದನ್ನು ಮರೆಯಬೇಡ."

ಸಿಂಧೂ ದೇಶದಲ್ಲಿ ಉಪಯೋಗಿಸೋ ಪೈಜಾಮುಗಳನ್ನು ಪರಮಹಂಸರು ಉಪಯೋಗಿಸಿದ್ದೇ ಆದರೆ, ಸೆಕೆ ಕಡಮೆಯಾಗಿ ಅವರು ಸುಖದಿಂದ ಇರಬಹುದು ಎಂದು ಹಿರಾನಂದ ಅವರಿಗೆ ಹೇಳಿದ್ದ. ಅದಕ್ಕಾಗಿ ಅವರು ಅದನ್ನು ಆತನ ಜ್ಞಾಪಕಕ್ಕೆ ತರುತ್ತಿದಾರೆ.

ಹಿರಾನಂದ ಸರಿಯಾಗಿ ಊಟಮಾಡಲಿಲ್ಲ. ಅನ್ನ ಸ್ವಲ್ಪ ಅಕ್ಕಿ ಅಕ್ಕಿಯಾಗೇ ಇತ್ತು. ಅದನ್ನು ಕೇಳಿ ಪರಮಹಂಸರಿಗೆ ಬಹಳ ದುಃಖವಾಗಿದೆ. ಆಗಾಗ ಹಿರಾನಂದನನ್ನು ಕೇಳುತ್ತಲೇ ಇದಾರೆ, ಉಪಾಹಾರ ತೆಗೆದುಕೋತೀಯಾ ಅಂತ. ಅವರ ರೋಗ ಅಧಿಕವಾಗಿಬಿಟ್ಟಿರೋದರಿಂದ ಅವರಿಗೆ ಮಾತಾಡಲು ಬಹಳ ಕಷ್ಟವಾಗುತ್ತಿದೆ. ಆದರೂ ಆಗಾಗ ಆತನನ್ನು ಹಾಗೆ ಕೇಳುತ್ತಲೇ ಇದಾರೆ. ಅವರು ಲಾಟುವನ್ನು ಕೇಳಿದರು: "ನೀವೆಲ್ಲರೂ ಅದೇ ಅನ್ನವನ್ನು ಊಟಮಾಡಬೇಕಾಯಿತೇನು?"

ಅವರು ಉಡುತ್ತಿದ್ದ ಪಂಚೆ ಅವರ ಸೊಂಟದ ಮೇಲೆ ಇರುತ್ತಿದ್ದುದು ಎಲ್ಲೋ ಅಪರೂಪ. ಬಹುಮಟ್ಟಿಗೆ ಬಾಲಕನ ಹಾಗೆ ದಿಗಂಬರರಾಗೇ ಇರುತ್ತಿದ್ದರು. ಹಿರಾನಂದ ತನ್ನೊಡನೆ ಇಬ್ಬರು ಬ್ರಾಹ್ಮಭಕ್ತರನ್ನು ಕರೆದುಕೊಂಡುಬಂದಿದ್ದ. ಅದಕ್ಕಾಗೇ ಪರಮಹಂಸರು ಆಗಾಗ ಪಂಚೆಯನ್ನು ತಮ್ಮ ಸೊಂಟಕ್ಕೆ ಬಿಗಿದುಕೊಳ್ಳುತ್ತಲೇ ಇದಾರೆ.

ಶ್ರೀರಾಮಕೃಷ್ಣರು ಹಿರಾನಂದನಿಗೆ: "ಪಂಚೆ ಕಳಚಿ ಬಿದ್ದುಹೋಗಿಬಿಟ್ಟರೆ ನೀವು ಅಸಭ್ಯತೆ ಅಂತ ಭಾವಿಸಬಹುದಲ್ಲವೆ?"

ಹಿರಾನಂದ: "ಅದು ಹಾಗೆ ಕಳಚಿ ಬಿದ್ದುಹೋದರೆ ತಾನೆ ಏನು? ನೀವು ಒಬ್ಬ ಬಾಲಕರು."

ಶ್ರೀರಾಮಕೃಷ್ಣರು ಒಬ್ಬ ಬ್ರಾಹ್ಮಭಕ್ತನ ಕಡೆ ಬೆರಳುಮಾಡಿ: "ಆತನಿಗೆ ಅಸಭ್ಯತೆಯಾಗಿ ತೋರುತ್ತದೆ."

ಹಿರಾನಂದ ಇನ್ನೇನು ಹೊರಡುವುದರಲ್ಲಿದಾನೆ. ಆತ ಇನ್ನೂ ಒಂದೆರಡು ದಿನ ಕಲ್ಕತ್ತದಲ್ಲಿ ಇದ್ದು ಬಳಿಕ ಸಿಂಧೂ ದೇಶಕ್ಕೆ ಹಿಂದಿರುಗುತ್ತಾನೆ.

ಶ್ರೀರಾಮಕೃಷ್ಣರು ಹಿರಾನಂದನಿಗೆ: "ನೀನು ಅಲ್ಲಿಗೆ ಹಿಂದಿರುಗದೆ ಇಲ್ಲೇ ಇದ್ದುಬಿಟ್ಟರೆ?"

ಹಿರಾನಂದ ನಗುತ್ತ: "ಭೇಷ್! ಅಲ್ಲಿ ಬೇರೆ ಯಾರೂ ಇಲ್ಲ. ನಾನೇ ಎಲ್ಲಾ ಕೆಲಸ ಮಾಡಬೇಕಾಗಿದೆ."

ಶ್ರೀರಾಮಕೃಷ್ಣರು: "ನಿನಗೆ ತಿಂಗಳಿಗೆ ಎಷ್ಟು ಸಂಬಳ?"

ಹಿರಾನಂದ: "ಇಂಥ ಕೆಲಸಗಳಿಗೆಲ್ಲ ಕಡಮೆ ಸಂಬಳ."

ಶ್ರೀರಾಮಕೃಷ್ಣರು: "ಆದರೂ ಎಷ್ಟು?"

ಹಿರಾನಂದ ನಗಲಾರಂಭಿಸಿದ.

ಶ್ರೀರಾಮಕೃಷ್ಣರು: "ನೀನು ಇಲ್ಲೇ ಏಕೆ ಇದ್ದುಬಿಡಬಾರದು ?"

ಹಿರಾನಂದ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ನೀನು ಆ ಕೆಲಸ ಬಿಟ್ಟುಬಿಟ್ಟರೆ ?"

ಹಿರಾನಂದ ಸುಮ್ಮನೆ ಕುಳಿತಿದಾನೆ.

ಇನ್ನೂ ಸ್ವಲ್ಪ ಹೊತ್ತು ಮಾತುಕತೆಯಾಡಿದನಂತರ ಹಿರಾನಂದ ಇನ್ನೇನು ಪರಮಹಂಸರಿಂದ ಬೀಳ್ಕೊಳ್ಳುವುದರಲ್ಲಿದಾನೆ.

ಶ್ರೀರಾಮಕೃಷ್ಣರು: "ಮತ್ತೆ ಯಾವಾಗ ಬರುತ್ತೀಯೆ ?"

ಹಿರಾನಂದ: "ನಾಳಿದ್ದು ಸೋಮವಾರ ಊರಿಗೆ ಹೊರಡುತ್ತೇನೆ. ಆಗ ಪ್ರಾತಃಕಾಲವೇ ಬಂದು ನಿಮ್ಮ ದರ್ಶನ ಪಡೆದುಹೋಗುತ್ತೇನೆ."

ಹಿರಾನಂದ ಪರಮಹಂಸರಿಂದ ಬೀಳ್ಕೊಂಡ.

ಮಾಸ್ಟರ್ ಪರಮಹಂಸರ ಹತ್ತಿರ ಕುಳಿತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಬಹಳ ಒಳ್ಳೆಯವ, ಅಲ್ಲವೆ ?"

ಮಾಸ್ಟರ್: "ಹೌದು, ಆತನ ಸ್ವಭಾವ ಬಹಳ ಮಧುರವಾದ್ದು."

ಶ್ರೀರಾಮಕೃಷ್ಣರು: "ಹೇಳಿದ ಎರಡುಸಾವಿರದ ಇನ್ನೂರು ಮೈಲಿ ತನ್ನ ಊರು ಅಂತ. ಅಷ್ಟು ದೂರದಿಂದ ನನ್ನನ್ನು ನೋಡೋಕೆ ಬಂದಿದಾನಲ್ಲ!"

ಮಾಸ್ಟರ್: "ಹೌದು, ನಿಜ. ಒಳ್ಳೆ ಪ್ರೀತಿಯಿಲ್ಲದಿದ್ದರೆ ಇದು ಸಾಧ್ಯವಿಲ್ಲ."

ಶ್ರೀರಾಮಕೃಷ್ಣರು: "ನನ್ನನ್ನು ತನ್ನ ದೇಶಕ್ಕೆ ಕರೆದುಕೊಂಡು ಹೋಗಬೇಕು ಅಂತ ಆತನಿಗೆ ಬಹಳ ಇಚ್ಛೆ."

ಮಾಸ್ಟರ್: "ನಾಲ್ಕೈದು ದಿನ ಟ್ರೈನಿನಲ್ಲಿ ಪ್ರಯಾಣಮಾಡಬೇಕಾಗುತ್ತದೆ. ಬಹಳ ಕಷ್ಟಪಡಬೇಕಾಗುತ್ತದೆ."

ಶ್ರೀರಾಮಕೃಷ್ಣರು: "ಆತನಿಗೆ ವಿಶ್ವವಿದ್ಯಾನಿಲಯದ ಮೂರು ಡಿಗ್ರಿಗಳ ಪಾಸು ಆಗಿದೆ."

ಮಾಸ್ಟರ್: "ಹೌದು."

ಪರಮಹಂಸರು ಮಾತಾಡಿ ಮಾತಾಡಿ ಆಯಾಸಗೊಂಡಿದಾರೆ. ಈಗ

ಸ್ವಲ್ಪ ವಿಶ್ರಮಿಸಿಕೊಳ್ಳುತ್ತಿದಾರೆ. ಅವರು ಮಾಸ್ಟರಿಗೆ ಕಿಟಕಿ ಬಾಗಿಲು ಗಳನ್ನು ತೆರೆಯುವಂತೆಯೂ ಮತ್ತು ತಮ್ಮ ಹಾಸಿಗೆ ಮೇಲೆ ಮುಂದಲಿಗೆ ಹಾಸುವಂತೆಯೂ ಹೇಳಿದರು. ಈಗ ಮಾಸ್ಟರ್ ಅವರಿಗೆ ಗಾಳಿ ಬೀಸ ಲಾರಂಭಿಸಿದಾನೆ. ಪರಮಹಂಸರಿಗೆ ನಿದ್ದೆ ಹತ್ತಲಾರಂಭಿಸಿದೆ.

ಪರಮಹಂಸರು ಒಂದು ತುಸು ಹೊತ್ತು ನಿದ್ರಿಸಿದನಂತರ ಮಾಸ್ಟ ರನ್ನು ಕೇಳಿದರು: "ನನಗೆ ನಿದ್ದೆ ಬಂದಿತ್ತೇನು?"

ಮಾಸ್ಟರ್: "ಹೌದು, ಎಲ್ಲೋ ಸ್ವಲ್ಪ."

ನರೇಂದ್ರ, ಶರಚ್ಚಂದ್ರ, ಮಾಸ್ಟರ್ ನೆಲ ಅಂತಸ್ತಿನಲ್ಲಿ ಮಾತುಕತೆ ಯಾಡುತ್ತಿದಾರೆ.

ನರೇಂದ್ರ: "ಇದು ಎಷ್ಟು ವಿಸ್ಮಯಕರವಾದ್ದು! ಬಹಳ ವರ್ಷ ಗಳ ವರೆಗೆ ಓದಿದರೂ ವಿದ್ಯೆ ಮಾತ್ರ ದೊರೆಯೋ ಹಾಗಿಲ್ಲ. ಹಾಗಿರೋ ವಾಗ ಒಂದೆರಡು ದಿನಗಳ ಮಟ್ಟಿಗೆ ಸಾಧನೆ ಮಾಡಿದ್ದಕ್ಕೇನೇ ಭಗವಂತನ ಸಾಕ್ಷಾತ್ಕಾರ ದೊರೆತುಬಿಡಬೇಕಂತಲ್ಲ, ಇದು ಹೇಗೆ? ಭಗವಂತನ ಸಾಕ್ಷಾತ್ಕಾರ ಅಷ್ಟು ಸುಲಭವಾದ್ದೇನು? (ಶರಚ್ಚಂದ್ರನಿಗೆ) ನಿನಗೆ ಶಾಂತಿ ದೊರೆತಿದೆ. ಮಾಸ್ಟರಿಗೂ ದೊರೆತಿದೆ. ಆದರೆ ನನಗೆ ಮಾತ್ರ ದೊರೆತಿಲ್ಲವಲ್ಲ."

ಮಧ್ಯಾಹ್ನವಾಗಿದೆ. ಶರಚ್ಚಂದ್ರ, ಶಶಿ, ಲಾಟು, ನಿತ್ಯಗೋಪಾಲ, ಗಿರೀಶ, ರಾಮ, ಮಾಸ್ಟರ್, ಸುರೇಶ, ಇನ್ನೂ ಅನೇಕರು ಪರಮಹಂಸರ ಕೊಠಡಿಯಲ್ಲಿ ಕುಳಿತಿದಾರೆ.

ಕೇದಾರ ಕೊಠಡಿಯನ್ನು ಪ್ರವೇಶಿಸಿದ. ಬಹಳ ಕಾಲವಾದಮೇಲೆ ಪರಮಹಂಸರನ್ನು ನೋಡಲು ಬಂದಿದಾನೆ. ಢಾಕಾದಲ್ಲಿ ಉದ್ಯೋಗದಲ್ಲಿ ದಾನೆ. ಪರಮಹಂಸರಿಗೆ ಕಾಯಿಲೆಯಾಗಿರೋದನ್ನು ಕೇಳಿ ಅವರ ದರ್ಶನ ಪಡೆದು ಹೋಗಲು ಬಂದಿದಾನೆ. ಕೊಠಡಿಯನ್ನು ಪ್ರವೇಶಿಸಿದೊಡನೆಯೆ ಆತ ಪರಮಹಂಸರ ಪಾದಧೂಳಿಯನ್ನು ತೆಗೆದುಕೊಂಡು ತನ್ನ ತಲೆಯ ಮೇಲೆ ಹಾಕಿಕೊಂಡು, ಉಳಿದವರಿಗೂ ಆನಂದದಿಂದ ಹಂಚುತ್ತಿದಾನೆ. ಎಲ್ಲರೂ ಈಗ ತಮ್ಮ ತಮ್ಮ ತಲೆಗಳನ್ನು ಬಾಗಿಸಿ ಅದನ್ನು ಸ್ವೀಕರಿಸುತ್ತಿ ದಾರೆ. ಆತ ಅದನ್ನು ಶರಚ್ಚಂದ್ರನಿಗೆ ಕೊಡಲು ಹೋದಾಗ, ಆತ ತಾನೇ ಎದ್ದುಹೋಗಿ ಪರಮಹಂಸರಿಗೆ ಅಡ್ಡಬಿದ್ದು ಅವರ ಪಾದಧೂಳಿಯನ್ನು ತೆಗೆದುಕೊಂಡ. ಇದನ್ನು ನೋಡಿ ಮಾಸ್ಟರ್ ನಕ್ಕ. ಪರಮಹಂಸರೂ

ಮಾಸ್ಟರ ಕಡೆಗೆ ನೋಡಿ ನಕ್ಕರು. ಭಕ್ತರೆಲ್ಲರೂ ನಿಶ್ಯಬ್ದರಾಗಿ ಕುಳಿತಿದಾರೆ. ಪರಮಹಂಸರು ಭಾವಾವಿಷ್ಟರಾಗುತ್ತಿರುವಂತೆ ಅವರ ಮುಖಮುದ್ರೆ ಸೂಚಿಸುತ್ತಿದೆ. ತಮ್ಮ ಭಾವವನ್ನು ಅದುಮಿ ಇಡುತ್ತಿರುವರೊ ಏನೊ ಎಂಬಂತೆ ಅವರು ಆಗಾಗ ನಿಟ್ಟುಸಿರು ಬಿಡುತ್ತಿದಾರೆ. ಅವರು ಕೇದಾರನಿಗೆ ಸನ್ನೆಯ ಮೂಲಕ ಹೇಳುತ್ತಿದಾರೆ: "ಗಿರೀಶನೊಡನೆ ವಾದಿಸು."

ಗಿರೀಶ ಕೇದಾರನಿಗೆ: "ನಾನು ನಿಮ್ಮ ಕ್ಷಮೆ ಬೇಡುತ್ತೇನೆ. ನೀವು ಯಾರು ಎಂಬುದು ಹಿಂದೆ ನನಗೆ ಗೊತ್ತಿರಲಿಲ್ಲ. ಅದಕ್ಕಾಗಿ ನಿಮ್ಮೊಡನೆ ವಾದಿಸುತ್ತಿದ್ದೆ. ಆದರೆ ಈಗಿನ ಸ್ಥಿತಿಯೇ ಬೇರೆ."

ಶ್ರೀರಾಮಕೃಷ್ಣರು ನಗುತ್ತಿದಾರೆ.

ಶ್ರೀರಾಮಕೃಷ್ಣರು ನರೇಂದ್ರನ ಕಡೆ ಬೆರಳುಮಾಡಿ ಕೇದಾರನಿಗೆ: "ಈತ ಎಲ್ಲವನ್ನೂ ತ್ಯಜಿಸಿಬಿಟ್ಟಿದಾನೆ. (ಭಕ್ತರಿಗೆ) ಒಮ್ಮೆ ಕೇದಾರ ನರೇಂದ್ರನಿಗೆ ಹೇಳಿದ: 'ಈಗ ನೀನು ತರ್ಕಮಾಡುತ್ತಾ ಇದೀಯೆ; ವಾದಿಸುತ್ತಾ ಇದೀಯೆ; ಆದರೆ ಕೊನೆಯಲ್ಲಿ ನೀನು ಭಗವನ್ನಾಮೋಚ್ಚಾರಣೆ ಮಾಡುತ್ತ ನೆಲದ ಮೇಲೆ ಬಿದ್ದು ಹೊರಳಾಡಬೇಕಾಗುತ್ತದೆ.' (ನರೇಂದ್ರನಿಗೆ) ಕೇದಾರನ ಪಾದಧೂಳಿಯನ್ನು ತೆಗೆದುಕೊ."

ಕೇದಾರ ನರೇಂದ್ರನಿಗೆ: "ಹೋಗಿ ಅವರ (ಪರಮಹಂಸರ) ಪಾದಧೂಳಿಯನ್ನು ತೆಗೆದುಕೊ. ಅಷ್ಟೇ ಸಾಕು."

ಸುರೇಂದ್ರ ಭಕ್ತರ ಹಿಂಭಾಗದಲ್ಲಿ ಕುಳಿತುಕೊಂಡಿದಾನೆ. ಪರಮಹಂಸರು ಆತನ ಕಡೆಗೆ ಮುಗುಳುನಗೆ ನಕ್ಕು ಕೇದಾರನಿಗೆ ಹೇಳುತ್ತಿದಾರೆ: "ಆಹ, ಆತನ ಸ್ವಭಾವ ಎಷ್ಟು ಪ್ರಿಯವಾದ್ದು!" ಕೇದಾರ ಪರಮಹಂಸರ ಇಂಗಿತವನ್ನು ಅರಿತುಕೊಂಡು ಸುರೇಂದ್ರನ ಹತ್ತಿರ ಹೋಗಿ ಕುಳಿತುಕೊಂಡ.

ಸುರೇಂದ್ರನಿಗೆ ಸ್ವಲ್ಪ ಅಭಿಮಾನ ಜಾಸ್ತಿ. ಕಾಶೀಪುರದ ಮನೆಯ ಖರ್ಚಿಗಾಗಿ ಕೆಲವು ಮಂದಿ ಭಕ್ತರು ಹೊರಗಿನ ಭಕ್ತರಿಂದ ಹಣ ಯಾಚಿಸಲು ಹೋಗಿದ್ದರು. ಅದಕ್ಕಾಗಿ ಆತನಿಗೆ ಒಂದು ಸ್ವಲ್ಪ ಅಧಿಕವಾಗೇ ಅಭಿಮಾನ ಬಂದುಬಿಟ್ಟಿದೆ. ಆತನೊಬ್ಬನೇ ಕಾಶೀಪುರದ ಮನೆಯ ಖರ್ಚಿನ ಅಧಿಕಾಂಶ ಭಾಗವನ್ನು ಹೊರುತ್ತಿದಾನೆ.

ಸುರೇಂದ್ರ ಕೇದಾರನಿಗೆ: "ಇಂಥ ಸಾಧುಪುರುಷರ ಹತ್ತಿರ ನಾನು ಹೇಗೆ ತಾನೆ ಕುಳಿತುಕೊಳ್ಳಲಿ. ಕೆಲವು ದಿನಗಳ ಹಿಂದೆ ಇವರಲ್ಲಿ ಕೆಲವರು (ನರೇಂದ್ರನನ್ನು ಊಹಿಸಿ) ಕಾಷಾಯವಸ್ತ್ರ ಧರಿಸಿ ಬುದ್ಧ-ಗಯೆಗೆ ಯಾತ್ರಾರ್ಥಿಗಳಾಗಿ ಹೋಗಿದ್ದರು. ಅಲ್ಲಿ ಇನ್ನೂ ದೊಡ್ಡ ದೊಡ್ಡ ಸಾಧುಗಳನ್ನು ನೋಡುವ ಸಲುವಾಗಿ."

ಪರಮಹಂಸರು ಸುರೇಂದ್ರನನ್ನು ಸಂತೈಸಲು ಪ್ರಯತ್ನಮಾಡುತ್ತಿದಾರೆ. ಅವರು ಆತನಿಗೆ ಹೇಳುತ್ತಿದಾರೆ: "ಹೌದು, ಅವರು ಇನ್ನೂ ಎಳೆ ಹುಡುಗರೆ. ಒಳ್ಳೆಯದಾವುದು ಎಂಬುದು ಗೊತ್ತಿಲ್ಲ."

ಸುರೇಂದ್ರ ಕೇದಾರನಿಗೆ: "ಯಾರ ಮನೋಭಾವ ಎಂಥೆಂಥದು ಎಂಬುದು ಗುರುದೇವರಿಗೆ (ಪರಮಹಂಸರಿಗೆ) ಗೊತ್ತಿಲ್ಲವೆ? ಅವರನ್ನು ತುಷ್ಟರನ್ನಾಗಿ ಮಾಡುವುದು ಹಣವಲ್ಲ; ನಮ್ಮ ಮನೋಭಾವ."

ಪರಮಹಂಸರು ತಮ್ಮ ತಲೆಯನ್ನಲ್ಲಾಡಿಸಿ ಆತನ ಮಾತಿಗೆ ತಮ್ಮ ಒಪ್ಪಿಗೆಯನ್ನು ಇತ್ತರು.

ಭಕ್ತರು ತಿಂಡಿ ತೀರ್ಥಗಳನ್ನು ತೆಗೆದುಕೊಂಡು ಬಂದಿದಾರೆ. ಅವರು ಅವನ್ನು ಪರಮಹಂಸರಿಗೆ ಅರ್ಪಿಸಿದರು. ಪರಮಹಂಸರು ಒಂದು ಸಾಸಿವೆ ಕಾಳಿನಷ್ಟನ್ನು ತಮ್ಮ ಬಾಯಿಗೆ ಹಾಕಿಕೊಂಡು, ಉಳಿದುದನ್ನೆಲ್ಲಾ ಸುರೇಂದ್ರನ ಕೈಗೆ ಕೊಟ್ಟು ಎಲ್ಲರಿಗೂ ಹಂಚುವಂತೆ ಹೇಳಿದರು. ಅದನ್ನು ತೆಗೆದುಕೊಂಡು ಸುರೇಂದ್ರ ನೆಲ ಅಂತಸ್ತಿಗೆ ಇಳಿದು ಹೋದ. ಅಲ್ಲಿ ಅದನ್ನು ಎಲ್ಲರಿಗೂ ಹಂಚುತ್ತಾನೆ.

ಶ್ರೀರಾಮಕೃಷ್ಣರು ಕೇದಾರನಿಗೆ: "ನೀನೂ ಕೆಳಗಿಳಿದುಹೋಗಿ ಬರಿದೆ ವಾಗ್ವಿವಾದದಲ್ಲಿ ತೊಡಗದೆ ಇರಬೇಕೆಂದು ಸುರೇಂದ್ರನಿಗೆ ಹೇಳಿ ಬಾ."

ಮಾಸ್ಟರ್ ಪರಮಹಂಸರಿಗೆ ಗಾಳಿ ಬೀಸುತ್ತಿದಾನೆ. ಅವರು ಆತನನ್ನು ಕೇಳಿದರು: "ಏನು, ನೀನು ತಿನ್ನೋದಿಲ್ಲವೆ?" ಅವರು ಆತನನ್ನು ನೆಲ ಅಂತಸ್ತಿಗೆ ಕಳುಹಿಸಿದರು.

ಇನ್ನೇನು ಸಾಯಂಕಾಲವಾಗುವುದರಲ್ಲಿದೆ. ಗಿರೀಶ ಮತ್ತು ಮಾಸ್ಟರ್ ಪುಷ್ಕರಣಿ ದಡದ ಮೇಲೆ ಅಡ್ಡಾಡುತ್ತಿದಾರೆ.

ಗಿರೀಶ: "ಶ್ರೀರಾಮಕೃಷ್ಣರ[1] ವಿಷಯವಾಗಿ ನೀನು ಏನೊ ಬರೆಯುತ್ತಾ ಇದ್ದೀಯಂತೆ?"

ಮಾಸ್ಟರ್: "ಅದರ ಸಂಬಂಧವಾಗಿ ನಿನಗಾರು ತಿಳಿಸಿದರು?"

ಗಿರೀಶ: "ನನ್ನ ಕಿವಿಗೆ ಬಿತ್ತು. ಅದನ್ನು ನನಗೆ ಕೊಡುತ್ತೀಯ?"

ಮಾಸ್ಟರ್: "ಅದನ್ನು ನಾನೆ ಸರಿಯಾಗಿ ಅರ್ಥಮಾಡಿಕೊಳ್ಳದ ಹೊರತು ಬೇರೆಯವರಿಗೆ ಕೊಡಲಿಚ್ಛೆಯಿಲ್ಲ. ಅದನ್ನು ನಾನು ಬರೆದುಕೊಂಡದ್ದು ನನಗಾಗಿ ವಿನಾ ಉಳಿದವರಿಗಾಗಿ ಅಲ್ಲ."

ಗಿರೀಶ: "ಏನು ನಿನಗೆ ತಲೆ - ಗಿಲೆ ಕೆಟ್ಟುಹೋಗಿದೆಯೇ?"

ಮಾಸ್ಟರ್: "ಬಹುಶಃ ನಾನು ಸಾಯೋವಾಗ ನಿನಗೆ ದೊರೆಯಬಹುದು."

ಸಾಯಂಕಾಲವಾಗಿದೆ. ಪರಮಹಂಸರ ಕೊಠಡಿಗೆ ದೀಪ ಹಚ್ಚಲಾಗಿದೆ. ಬ್ರಾಹ್ಮಸಮಾಜಕ್ಕೆ ಸೇರಿದ ಅಮೃತವಸು ಕೊಠಡಿಯನ್ನು ಪ್ರವೇಶಿಸಿದ. ಆತನನ್ನು ನೋಡಬೇಕೆಂದು ಪರಮಹಂಸರು ಕಾತರರಾಗಿದ್ದರು. ಮಾಸ್ಟರ್ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಕೊಠಡಿಯಲ್ಲಿ ಕುಳಿತಿದಾರೆ. ಪರಮಹಂಸರ ಮುಂದೆ ಬಾಳೆ ಎಲೆಯಲ್ಲಿ ಹೂವಿನ ಹಾರವನ್ನು ಭಕ್ತರು ಇಟ್ಟಿದಾರೆ. ಕೊಠಡಿ ನಿಶ್ಶಬ್ದವಾಗಿದೆ. ಒಬ್ಬ ಮಹಾಯೋಗಿ ಯೋಗದಲ್ಲಿ ನಿಶ್ಶಬ್ದವಾಗಿ ಕುಳಿತಿರುವಂತೆ ಕಾಣುತ್ತಿದೆ. ಪರಮಹಂಸರು ಆ ಮಾಲೆಯನ್ನು ತಮ್ಮ ಕೊರಳಿಗೆ ಹಾಕಿಕೊಳ್ಳಬೇಕೆಂದಿರುವರೊ ಏನೊ ಎಂಬಂತೆ ಆಗಾಗ ಅದನ್ನು ಮೇಲಕ್ಕೆ ಎತ್ತುತ್ತಿದಾರೆ.

ಅಮೃತ ಮೃದುವಾಗಿ: "ಅದನ್ನು ಕೊರಳಿಗೆ ಹಾಕಿಕೊಡಲೆ?"

ಪರಮಹಂಸರು ಒಪ್ಪಿದರು. ಬಳಿಕ ಆತನೊಡನೆ ಬಹಳ ಹೊತ್ತು ಮಾತುಕತೆಗಳನ್ನಾಡಿದರು. ಈಗ ಆತ ಅವರಿಂದ ಬೀಳ್ಕೊಳ್ಳುವುದರಲ್ಲಿದಾನೆ. ಪರಮಹಂಸರು ಆತನಿಗೆ ಹೇಳಿದರು: "ಮತ್ತೆ ಬಾ."

---

1. ಶ್ರೀರಾಮಕೃಷ್ಣರೊಡನೆ ನಡೆದ ಸಂಭಾಷಣೆಗಳನ್ನು ಮಾಸ್ಟರ್ ತನಗೆ ಸಾಧ್ಯವಾದಾಗಲೆಲ್ಲಾ ಬಂಗಾಳಿಯಲ್ಲಿ ಗುರುತುಮಾಡಿಕೊಂಡಿದ್ದು ಅವನ್ನು ಪರಮಹಂಸರ ದೇಹತ್ಯಾಗವಾದನಂತರ "ಶ್ರೀರಾಮಕೃಷ್ಣ ಕಥಾಮೃತ" ಎಂಬ ಹೆಸರಿನಿಂದ ಬಂಗಾಳಿ ಭಾಷೆಯಲ್ಲಿ ಅಚ್ಚುಹಾಕಿಸಿದ. ಆ ಪುಸ್ತಕ ಐದು ಭಾಗಗಳನ್ನುಳ್ಳದ್ದಾಗಿದೆ. ಶ್ರೀ ರಾಮಕೃಷ್ಣ ವಚನವೇದ (ಪೂರ್ವಾರ್ಧ, ಉತ್ತರಾರ್ಧ) ಅದರ ಅನುವಾದ.

ಅಮೃತ: "ಬರಬೇಕು ಅಂತಲೇನೊ ಬಹಳ ಇಚ್ಛೆ, ಆದರೆ ದೂರ ಬಹಳ. ಅದಕ್ಕಾಗಿ ಆಗಾಗ ಬರಲಾಗುತ್ತಿಲ್ಲ."

ಶ್ರೀರಾಮಕೃಷ್ಣರು: "ನೀನು ಬಾ. ಇಲ್ಲಿಂದಲೇ ನಿನಗೆ ಗಾಡಿ ಬಾಡಿಗೆ ದೊರೆಯುತ್ತದೆ."

ಪರಮಹಂಸರು ಅಮೃತನಿಗೆ ತೋರಿಸಿದ ಅಕ್ಕರೆಯನ್ನು ನೋಡಿ ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿದಾರೆ.

ಮಾರನೆಯ ದಿನ ಮಾಸ್ಟರ್ ತನ್ನ ಹೆಂಡತಿ ಮತ್ತು ಒಬ್ಬ ಮಗನನ್ನು ಕಾಶೀಪುರದ ಮನೆಗೆ ಕರೆದುಕೊಂಡು ಬಂದ. ಆ ಹುಡುಗನಿಗೆ ವಯಸ್ಸು ಏಳು. ಪುತ್ರವಿಯೋಗದಿಂದ ಬಹುಮಟ್ಟಿಗೆ ಹುಚ್ಚಿಯೇ ಆಗಿಬಿಟ್ಟಿರೋ ತನ್ನ ಹೆಂಡತಿಯನ್ನು ಪರಮಹಂಸರ ಇಚ್ಛೆಗನುಸಾರ ಮಾಸ್ಟರ್ ಇಂದು ಇಲ್ಲಿಗೆ ಕರೆದುಕೊಂಡು ಬಂದಿದಾನೆ.

ಇಂದು ಮಾಸ್ಟರನ ಹೆಂಡತಿ ತಮಗೆ ಶುಶ್ರೂಷೆಮಾಡಲು ಪರಮಹಂಸರು ಆಕೆಗೆ ಅನೇಕ ಅವಕಾಶಗಳನ್ನು ಕಲ್ಪಿಸಿಕೊಟ್ಟರು. ಆಕೆಯ ಯೋಗಕ್ಷೇಮವೇ ಪರಮಹಂಸರ ಮನಸ್ಸಿನ ಬಹುಭಾಗವನ್ನು ಸೆಳೆದುಬಿಟ್ಟಿರುವಂತೆ ಕಾಣುತ್ತಿತ್ತು. ರಾತ್ರಿಯಾದ ಮೇಲೆ ಶ್ರೀ ಶಾರದಾದೇವಿಯವರು ಪರಮಹಂಸರಿಗೆ ಊಟಕ್ಕೆ ಬಡಿಸಲು ಅವರ ಕೊಠಡಿಗೆ ಬಂದರು. ಮಾಸ್ಟರ ಹೆಂಡತಿ ದೀಪ ಹಿಡಿದುಕೊಂಡು ಅವರನ್ನು ಹಿಂಬಾಲಿಸಿದಳು. ಪರಮಹಂಸರು ಬಹಳ ಅಕ್ಕರೆಯಿಂದ ಆಕೆಗೆ ಆಕೆಯ ಮನೆಯ ಸಂಬಂಧವಾಗಿ ಅನೇಕ ಪ್ರಶ್ನೆಗಳನ್ನು ಹಾಕಿದರು. ತನ್ನ ಹೆಣ್ಣು ಶಿಶುವಿನೊಡನೆ ಮತ್ತೊಮ್ಮೆ ಬಂದು ಶ್ರೀ ಶಾರದಾದೇವಿಯವರೊಡನೆ ಕೆಲವು ಕಾಲವನ್ನು ಕಳೆಯಬೇಕೆಂದು ಆಕೆಗೆ ತಿಳಿಸಿದರು. ಪರಮಹಂಸರು ಊಟ ಮಾಡಿ ಮುಗಿಸಿದನಂತರ, ಆಕೆ ಅವರು ಉಪಯೋಗಿಸಿದ ತಟ್ಟೆಬಟ್ಟಲುಗಳನ್ನೆಲ್ಲಾ ತೆಗೆದು ಆ ಸ್ಥಳವನ್ನು ಚೊಕ್ಕಟಮಾಡಿದಳು. ಬಳಿಕ ಅವರು ಆಕೆಯೊಡನೆ ಕೆಲವು ನಿಮಿಷಗಳವರೆಗೆ ಏನೇನೊ ಮಾತುಕತೆಯಾಡಿದರು.

ಘಂಟೆ ರಾತ್ರಿ ಒಂಬತ್ತು. ಪರಮಹಂಸರು ಭಕ್ತರೊಡನೆ ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಕೊರಳಿಗೆ ಹೂವಿನ ಹಾರ ಹಾಕಿಕೊಂಡಿದಾರೆ. ಅವರು ಮಾಸ್ಟರಿಗೆ ಹೇಳುತ್ತಿದಾರೆ: "ನಾನು ನಿನ್ನ ಹೆಂಡತಿಗೆ ಮತ್ತೆ ಇಲ್ಲಿಗೆ ಬಂದು ಕೆಲವು ದಿನಗಳ ಮಟ್ಟಿಗೆ ರಾಮಲಾಲನ ಚಿಕ್ಕಮ್ಮನೊಡನೆ ಕಳೆಯಬೇಕೆಂದು ಹೇಳಿದೇನೆ." ಪರಮಹಂಸರು ತನಗೆ

ಮಾಡಿದ ಕೃಪೆಯನ್ನು ನೋಡಿ ಮಾಸ್ಟರ ಹೃದಯ ಕರಗಿ ನೀರಾಗಿ ಹೋಯಿತು.

ಮಾಸ್ಟರ್ ಪರಮಹಂಸರಿಗೆ ಗಾಳಿ ಬೀಸುತ್ತಿದಾನೆ. ಅವರು ತಮ್ಮ ಕೊರಳಲ್ಲಿದ್ದ ಹಾರವನ್ನು ಕೈಗೆ ತೆಗೆದುಕೊಂಡು ಏನನ್ನೊ ತಮ್ಮೊಳಗೆ ತಾವೆ ಮಟಗುಟ್ಟುತ್ತಿದಾರೆ. ಬಳಿಕ ಪ್ರಸನ್ನಚಿತ್ತತೆಯಿಂದ ಆ ಹಾರವನ್ನು ಮಾಸ್ಟರಿಗೆ ಕೊಟ್ಟರು.



೫೨

## ಮಹಾ ಸಮಾಧಿಯ ಅನಂತರ.

ಶ್ರೀರಾಮಕೃಷ್ಣಪರಮಹಂಸರು ೧೫ನೆ ಆಗಸ್ಟ್ ೧೮೮೬, ಭಾನುವಾರ ಮಹಾ ಸಮಾಧಿಯನ್ನು ಹೊಂದಿಬಿಟ್ಟರು. ಇದು, ಅವರ ಶಿಷ್ಯ ಭಕ್ತರನ್ನೆಲ್ಲಾ ಮಹಾ ದುಃಖಸಾಗರದಲ್ಲಿ ಮುಳುಗಿಸಿಬಿಟ್ಟಿದೆ. ಅವರ ಅವಸ್ಥೆ ಹಡಗು ಒಡೆದುಹೋಗಿ ಮಹಾ ಸಮುದ್ರದಲ್ಲಿ ಮುಳುಗಿ ಮುಳುಗಿ ಏಳುತ್ತಿರುವಂತೆ ಆಗಿಬಿಟ್ಟಿದೆ. ಆದರೂ ಬಲಯುತವಾದ ಪ್ರೇಮದ ಹಗ್ಗವೊಂದು ಅವರನ್ನೆಲ್ಲಾ ಬಿಗಿದು ಒಂದೇ ಕಡೆ ಕೂಡಿಸಿಟ್ಟಿದೆ. ಅವರು ಒಬ್ಬರಿಗೊಬ್ಬರು ತೋರಿಸುತ್ತಿರೋ ಒತ್ತಾಸೆಯ ದೆಸೆಯಿಂದ ಧೈರ್ಯ ಮತ್ತು ಸಾಹಸ ಅವರ ಹೃದಯದಲ್ಲಿ ನೆಲಸಿಬಿಟ್ಟಿದೆ. ಪ್ರಾಪಂಚಿಕರ ಸ್ನೇಹ ಅವರಿಗೆ ಸಪ್ಪೆಯಾಗಿ ತೋರುತ್ತಿದೆ. ಪರಮಹಂಸರ ವಿಷಯವಾಗೇ ಮಾತುಕತೆಗಳಾಡುತ್ತಿದಾರೆ. "ಅವರನ್ನು ಮತ್ತೆ ನಾವು ನೋಡಲಾರವೇ ?"— ಎಂಬ ಭಾವನೆಯೋ ಅವರ ಸ್ವಪ್ನದ ಕನವರಿಕೆ; ಹಗಲುಗನಸಿನ ಹಂಬಲ; ಮನಸ್ಸಿನ ಏಕಮಾತ್ರ ಚಿಂತನೆ. ಪರಮಹಂಸರನ್ನು ಕಳೆದುಕೊಂಡಿದುದಕ್ಕಾಗಿ ಒಂಟೊಂಟಿಯಾಗಿ ಕುಳಿತು ಬಹಳವಾಗಿ ಅತ್ತರು; ಕಲ್ಕತ್ತದ ಬೀದಿಗಳಲ್ಲಿ ನಡೆಯುತ್ತಿರುವಾಗಲೂ ಅವರಿಗೆ ಪರಮಹಂಸರ ಭಾವನೆಯೇ. ಪರಮಹಂಸರು ಒಮ್ಮೆ ಮಾಸ್ಟರಿಗೆ ಹೇಳಿದ್ದರು: "ನಾನು ಈ ಶರೀರವನ್ನು ತ್ಯಜಿಸಿದನಂತರ ನೀವೆಲ್ಲರೂ ನನ್ನನ್ನು ಸ್ಮರಿಸಿಕೊಂಡು ದಿಕ್ಕಿಲ್ಲದವರ ಹಾಗೆ ಅಲೆದಾಡುವ ಚಿತ್ರ ನನ್ನ ಕಣ್ಣ ಮುಂದೆ ಬರುತ್ತಿರುವುದನ್ನು ನೋಡಿ ನನಗೆ ಈ ಶರೀರವನ್ನು ತ್ಯಜಿಸಲು ಕಷ್ಟವಾಗಿ ತೋರುತ್ತಿದೆ." ಶಿಷ್ಯರಲ್ಲಿ ಕೆಲವರು ಯೋಚಿಸುತ್ತಿದಾರೆ: "ಪರಮಹಂಸರು ಈಗ ಈ ಭೌತಿಕ ಜಗತ್ತಿನಲ್ಲಿ ಇಲ್ಲ. ಆದರೆ ನಾವು ಮಾತ್ರ ಇನ್ನೂ ಬದುಕಿಕೊಂಡಿದೇವಲ್ಲ, ಯಾವ ಎದೆಯಿಂದ! ಇಚ್ಛೆಪಟ್ಟರೆ ನಾವೂ ನಮ್ಮ ನಮ್ಮ ದೇಹಗಳನ್ನು ತ್ಯಜಿಸಿಬಿಡಬಲ್ಲೆವು. ಆದರೆ ಹಾಗೆ ಮಾತ್ರ ನಾವು ಮಾಡದೆ ಇದೇವಲ್ಲ." ಪದೇ ಪದೇ ಪರಮಹಂಸರು ಅವರಿಗೆಲ್ಲಾ ಹೇಳಿದ್ದರು, ಯಾರೇ ಆಗಲಿ ಅತ್ಯಂತ ವ್ಯಾಕುಲಚಿತ್ತದಿಂದ ಭಗವಂತನ ಸಾಕ್ಷಾತ್ಕಾರಕ್ಕಾಗಿ ತವಕಪಡುತ್ತಿದ್ದರೆ, ಆತನಿಗೆ ಆತನ ಸಾಕ್ಷಾತ್ಕಾರ

ದೊರೆತೇ ದೊರೆಯುತ್ತದೆ. ಪರಮಹಂಸರು ಅವರಿಗೆ ಅಭಯವನ್ನು ಕೊಟ್ಟಿದ್ದರು, ಹೃತ್ಪೂರ್ವಕವಾಗಿ ಭಗವಂತನನ್ನು ಪ್ರಾರ್ಥಿಸಿದರೆ ಆತ ಅವರ ಪ್ರಾರ್ಥನೆಯನ್ನು ಕೇಳೇ ಕೇಳುತ್ತಾನೆ.

ಶ್ರೀರಾಮಕೃಷ್ಣರ ಅಂತರಂಗ ಶಿಷ್ಯರು ಹಗಲಿರುಳೆನ್ನದೆ ಪರಮಹಂಸರ ಸೇವೆಯನ್ನು ಕಾಶೀಪುರದ ಮನೆಯಲ್ಲಿ ಮಾಡಿದ್ದರು. ಅವರಲ್ಲಿ ಅನೇಕರು, ಪರಮಹಂಸರು ಮಹಾ ಸಮಾಧಿಯನ್ನು ಹೊಂದಿದನಂತರ ಒಂದು ಕಿಂಚಿತ್ತೂ ಇಚ್ಛೆಯಿಲ್ಲದವರಾಗಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಹೋಗಿದ್ದರು. ಅವರು ಇನ್ನೂ ವಿಧಿಪೂರ್ವಕವಾಗಿ ಸಂಸಾರವನ್ನು ತ್ಯಜಿಸಿದ ಸನ್ಯಾಸಿಗಳಾಗಿರಲಿಲ್ಲ. ತಮ್ಮ ತಮ್ಮ ಹಳೆಯ ಹೆಸರುಗಳನ್ನೇ ಇನ್ನೂ ಇಟ್ಟುಕೊಂಡಿದ್ದರು. ಆದರೆ ಮಾನಸಿಕವಾಗಿ ಸಂಸಾರವನ್ನು ತ್ಯಜಿಸಲು ಪರಮಹಂಸರು ಅವರಿಗೆಲ್ಲಾ ತರಪೇತು ಕೊಟ್ಟಿದ್ದರು. ಪರಮಹಂಸರೇ ಅವರಲ್ಲಿ ಕೆಲವರಿಗೆ ತಮ್ಮ ಕೈಗಳಿಂದ ಕಾಷಾಯವಸ್ತ್ರಗಳನ್ನು ಹರಸಿ ಕೊಟ್ಟಿದ್ದರು.

ಆ ಯುವಕ ಭಕ್ತರಲ್ಲಿ ಇಬ್ಬರು ಮೂವರಿಗೆ ಹಿಂದಿರುಗಿ ಹೋಗಲು ಮನೆ ಇರಲಿಲ್ಲ. ಉದಾರ ಹೃದಯಿಯಾದ ಸುರೇಂದ್ರಮಿತ್ರ ಅವರಿಗೆ ಹೇಳಿದ: “ ಸಹೋದರರಿರಾ, ನೀವು ಬೇರೆಲ್ಲಿಗಾದರೂ ಹೋಗುವುದು ತಾನೆ ಏಕೆ? ನಾವು ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಡುತ್ತೇವೆ. ನೀವು ಅದರಲ್ಲಿ ವಾಸಿಸುತ್ತ ಅದನ್ನು ಪರಮಹಂಸರ ದೇವಾಲಯವನ್ನಾಗಿ ಮಾಡಿಕೊಳ್ಳುವಿರಂತೆ; ಗೃಹಸ್ಥ ಭಕ್ತರಾದ ನಾವು ಮನಶ್ಶಾಂತಿಗಾಗಿ ಆಗಾಗ ಅಲ್ಲಿಗೆ ಬಂದುಹೋಗುವೆವು. ಹೆಂಡತಿ ಮಕ್ಕಳ ಸಹವಾಸದಲ್ಲೇ ಇನ್ನು ಮೇಲೆ ನಮ್ಮ ಜೀವನವನ್ನು ಕಳೆಯಲು ಹೇಗೆ ತಾನೆ ಸಾಧ್ಯ? ಪರಮಹಂಸರು ಕಾಶೀಪುರದಲ್ಲಿದ್ದಾಗ ಅವರ ಸೇವೆಗೆಂದು ನಾನು ಸ್ವಲ್ಪ ಹಣ ಖರ್ಚುಮಾಡುತ್ತಿದ್ದೆ. ಅದನ್ನೇ ನಿಮ್ಮಗಳ ಖರ್ಚುವೆಚ್ಚಗಳಿಗಾಗಿ ಆನಂದದಿಂದ ಕೊಡುತ್ತೇನೆ.” ಬಳಿಕ ಸುರೇಂದ್ರ ಮಿತ್ರ ಆ ಯುವಕ ಭಕ್ತರಿಗೆ ವರಾಹನಗರ ಎಂಬ ಹೆಸರಿನ ಕಲ್ಕತ್ತದ ಉಪನಗರದಲ್ಲಿ ಒಂದು ಬಾಡಿಗೆ ಮನೆಯನ್ನು ಮಾಡಿಕೊಟ್ಟ. ಕ್ರಮೇಣ ಅದು ಮಠದ ರೂಪವನ್ನು ತಾಳಿತು.

ಮೊದಲನೆಯ ಕೆಲವು ತಿಂಗಳು ಸುರೇಂದ್ರಮಿತ್ರ ತಿಂಗಳಿಗೆ ಮೂವತ್ತು ರೂಪಾಯಿಗಳಂತೆ ಅವರ ಖರ್ಚುವೆಚ್ಚಗಳಿಗಾಗಿ ಕೊಡುತ್ತಿದ್ದ.

ಉಳಿದ ಯುವಕ ಭಕ್ತರು ಕ್ರಮಕ್ರಮೇಣ ಒಬ್ಬೊಬ್ಬರಾಗಿ ಅಲ್ಲಿಗೆ ಬಂದು ಸೇರುತ್ತಿರುವುದನ್ನು ನೋಡಿ, ಅದರ ಎರಡರಷ್ಟನ್ನು, ಕೊನೆಗೆ ತಿಂಗಳಿಗೆ ನೂರು ರೂಪಾಯಿನಷ್ಟನ್ನು ಕೊಡಲಾರಂಭಿಸಿದ. ಆ ಮನೆಗೆ ತಿಂಗಳಿಗೆ ಹನ್ನೊಂದು ರೂಪಾಯಿ ಬಾಡಿಗೆ. ಅಡಿಗೆಯವನಿಗೆ ತಿಂಗಳಿಗೆ ಆರು ರೂಪಾಯಿ ಸಂಬಳ. ಉಳಿದ ಹಣ ಆಹಾರಸಾಮಗ್ರಿಗಳಿಗಾಗಿ ಖರ್ಚಾಗುತ್ತಿತ್ತು.

ಚಿಕ್ಕ ಗೋಪಾಲ, ಪರಮಹಂಸರು ಕಾಶೀಪುರದಲ್ಲಿ ಉಪಯೋಗಿಸುತ್ತಿದ್ದ ಹಾಸಿಗೆ, ಬಟ್ಟೆ ಬರೆ, ಅವರ ದಿನಚರಿ ಉಪಯೋಗದ ವಸ್ತುಗಳು ಇವನ್ನೆಲ್ಲಾ ಈ ಮಠಕ್ಕೆ ತೆಗೆದುಕೊಂಡುಬಂದು ಇಟ್ಟ. ಕಾಶೀಪುರದಲ್ಲಿದ್ದಾಗ ಅಡಿಗೆ ಮಾಡುತ್ತಿದ್ದ ಬ್ರಾಹ್ಮಣನನ್ನೇ ಇಲ್ಲಿನ ಅಡಿಗೆಗೆ ನೇಮಕಮಾಡಿಕೊಂಡರು. ಈ ಮಠಕ್ಕೆ ಬಂದು ಸ್ಥಾಯಿಯಾಗಿ ನಿಂತವರಲ್ಲಿ ಹಿರಿಯ ಗೋಪಾಲನೇ ಮೊದಲನೆಯವನು. ಶರಚ್ಚಂದ್ರ ತನ್ನ ರಾತ್ರಿಯನ್ನು ಮಾತ್ರ ಇಲ್ಲಿ ಕಳೆಯುತ್ತಿದ್ದ. ಮೊದಲು ಮೊದಲು ತಮ್ಮ ತಮ್ಮ ಅನುಕೂಲಗಳಿಗನುಗುಣವಾಗಿ ಶರಚ್ಚಂದ್ರ, ಶಶಿ, ಬಾಬುರಾಮ, ನಿರಂಜನ, ಕಾಳೀಪ್ರಸಾದ ಇವರು ಆಗಾಗ ಮಠಕ್ಕೆ ಬಂದು ಹೋಗಲಾರಂಭಿಸಿದರು. ಪರಮಹಂಸರು ಮಹಾಸಮಾಧಿಯನ್ನು ಹೊಂದಿದನಂತರ ತಾರಕ ಬೃಂದಾವನಕ್ಕೆ ಹೋಗಿ ಅಲ್ಲಿ ಕೆಲವು ತಿಂಗಳನ್ನು ಕಳೆದು ಮತ್ತೆ ಹಿಂದಿರುಗಿ ಕಲ್ಕತ್ತಕ್ಕೆ ಬಂದ ಮೇಲೆ ಈ ಮಠದಲ್ಲೇ ಸ್ಥಾಯಿಯಾಗಿರಲಾರಂಭಿಸಿದ. ಈ ಮಠ ಸ್ಥಾಪನೆಯಾದಾಗ ರಾಖಾಲ, ಯೋಗೀಂದ್ರ, ಲಾಟು, ಕಾಳೀಪ್ರಸಾದ ಇವರು ಬೃಂದಾವನದಲ್ಲಿ ಶ್ರೀ ಶಾರದಾದೇವಿಯವರೊಡನೆ ವಾಸಮಾಡುತ್ತಿದ್ದರು. ಕಾಳೀಪ್ರಸಾದ ಒಂದು ತಿಂಗಳೊಳಗಾಗಿ, ರಾಖಾಲ ಕೆಲವು ತಿಂಗಳೊಳಗಾಗಿ, ಲಾಟು ಮತ್ತು ಯೋಗಿಂದ್ರ ಒಂದು ವರ್ಷದೊಳಗಾಗಿ ಹಿಂದಿರುಗಿ ಕಲ್ಕತ್ತಕ್ಕೆ ಬಂದರು. ಗೃಹಸ್ಥ ಭಕ್ತರು ಆಗಾಗ ಈ ಮಠಕ್ಕೆ ಬಂದು ಹೋಗುತ್ತ, ಒಮ್ಮೊಮ್ಮೆ ಇಲ್ಲಿ ತಮ್ಮ ಹಲವು ಘಂಟೆಗಳನ್ನೇ ಜಪತಪಾದಿಗಳಲ್ಲಿ ಕಳೆದುಬಿಡಲಾರಂಭಿಸಿದರು.

ಸ್ವಲ್ಪ ಕಾಲಾನಂತರ ನರೇಂದ್ರ, ರಾಖಾಲ, ನಿರಂಜನ, ಶರಚ್ಚಂದ್ರ, ಶಶಿ, ಬಾಬುರಾಮ, ಯೋಗೀಂದ್ರ, ಲಾಟು ಒಮ್ಮೆಗೇ ಸಂಸಾರವನ್ನು ತ್ಯಜಿಸಿ ಮಠಕ್ಕೆ ಬಂದುಬಿಟ್ಟರು. ಶಾರದಾಪ್ರಸನ್ನ ಮತ್ತು ಸುಬೋಧ ಇನ್ನೂ ಸ್ವಲ್ಪ ಕಾಲಾನಂತರ ಮಠಕ್ಕೆ ಬಂದು ಸೇರಿದರು. ನರೇಂದ್ರನನ್ನು

ಅತಿಯಾಗಿ ಪ್ರೀತಿಸುತ್ತಿದ್ದ ಗಂಗಾಧರ ಕ್ರಮತಪ್ಪದೆ ಮಠಕ್ಕೆ ಬರುತ್ತಿದ್ದ. ಕಾಶೀದೇವಾಲಯದಲ್ಲಿ ಸಾಯಂಕಾಲದ ಮಂಗಳಾರತಿಯ ಸಮಯದಲ್ಲಿ ನಡೆಯೋ ಸ್ತೋತ್ರವನ್ನು ಉಳಿದ ಸಹೋದರರಿಗೆ ಹೇಳಿಕೊಟ್ಟವನು ಈತನೇ. ಈತ ತಪಸ್ಸಿಗೆಂದು ಟಿಬೆಟ್ಟಿಗೆ ಹೋಗಿದ್ದು, ಅಲ್ಲಿಂದ ಹಿಂದಿರುಗಿ ಬಂದನಂತರ ಮಠಕ್ಕೆ ಸೇರಿದ. ಹರಿ ಮತ್ತು ತುಳಸಿ ಆಗಾಗ ಮಠಕ್ಕೆ ಬರುತ್ತಿದ್ದು ಕೊನೆಗೆ ಅವರೂ ಮಠಕ್ಕೆ ಸೇರಿದರು.

ಸುರೇಂದ್ರ ನಿಜವಾಗಿಯೂ ಒಬ್ಬ ಧನ್ಯಪುರುಷ. ಪರಮಹಂಸರ ಯುವಕ ಶಿಷ್ಯರು ಮನೆ ಮಠಗಳನ್ನೂ ತ್ಯಜಿಸಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಒಂದು ಕಡೆ ವಾಸಿಸಲು ಸಾಧ್ಯವಾದುದು ಈತನ ಭಕ್ತಿ ಮತ್ತು ತ್ಯಾಗ ಬುದ್ಧಿಯಿಂದ. ಪರಮಹಂಸರು ತಮ್ಮ ಮುಖ್ಯೋಪದೇಶ— ಕಾಮಕಾಂಚನ ತ್ಯಾಗವೇ ಭಗವಂತನ ಸಾಕ್ಷಾತ್ಕಾರಕ್ಕೆ ಉಪಾಯ— ಈ ಯುವಕರ ಮೂಲಕ ಸಶರೀರವನ್ನು ಹೊಂದಲು ಬೇಕಾಗೋ ಅನುಕೂಲತೆಗಳನ್ನು ಸುರೇಂದ್ರನ ಮೂಲಕ ಮಾಡಿಸಿದರು.

ಪರಮಹಂಸರ ಶಿಷ್ಯರು ಮಠದಲ್ಲಿ ತಬ್ಬಲಿ ಮಕ್ಕಳೋಪಾದಿಯಲ್ಲಿ ವಾಸಿಸಲಾರಂಭಿಸಿದಾರೆ. ಒಮ್ಮೊಮ್ಮೆ ಮನೆ ಬಾಡಿಗೆ ಕೊಡಲೂ ಕೈಯಲ್ಲಿ ಹಣವಿರುತ್ತಿರಲಿಲ್ಲ; ಕೆಲವು ವೇಳೆ ಉಗ್ರಾಣ ಬರಿದಾಗಿರುತ್ತಿತ್ತು. ಸುರೇಂದ್ರ ಮಾತ್ರ. ಆಗಾಗ ಬಂದು ಇವುಗಳ ವ್ಯವಸ್ಥೆ ಮಾಡಿ ಹೋಗುತ್ತಿದ್ದ. ಆತ ಈ ಸನ್ಯಾಸಿಗಳ ಹಿರಿಯ ಅಣ್ಣನಂತಿದ್ದ. ಮುಂದೆ ಈತನ ಅಕೃತ್ರಿಮ ಪ್ರೀತಿಯನ್ನು ನೆನಸಿಕೊಂಡಾಗಲೆಲ್ಲಾ ಮೊದಲನೆಯ ಮಠದ ಸನ್ಯಾಸಿಗಳು ಉಪಕಾರಸ್ಮರಣೀಯವಾದ ಅಶ್ರುವನ್ನು ಸುರಿಸುತ್ತಿದ್ದರು.

ಈ ಮಠವನ್ನು ಭಕ್ತರು "ವರಾಹನಗರ ಮಠ" ಅಂತ ಕರೆಯಲಾರಂಭಿಸಿದರು. ನರೇಂದ್ರ, ರಾಖಾಲ ಮತ್ತು ಉಳಿದ ಯುವಕ ಶಿಷ್ಯರು ತೀವ್ರ ವೈರಾಗ್ಯದಿಂದ ತುಂಬಿತುಳುಕಾಡುತ್ತಿದಾರೆ. ಒಂದು ದಿನ ರಾಖಾಲನ ತಂದೆ ಅಲ್ಲಿಗೆ ಬಂದು ರಾಖಾಲನನ್ನು ಮನೆಗೆ ಹಿಂದಿರುಗಿ ಬರುವಂತೆ ಕೇಳಿಕೊಂಡ. ರಾಖಾಲ ಹೇಳಿದ: "ನೀವು ಬರಿದೆ ಏಕೆ ಇಷ್ಟು ದೂರ ನಡೆದುಬರೋ ಶ್ರಮ ತೆಗೆದುಕೊಳ್ಳುತ್ತಾ ಇದೀರಿ? ನಾನು ಇಲ್ಲಿ ಅತ್ಯಂತ ಆನಂದದಿಂದ ಇದೇನೆ. ನೀವು ನನ್ನನ್ನು ಮರೆಯೋ ಹಾಗೆ, ನಾನು ನಿಮ್ಮನ್ನು ಮರೆಯೋ ಹಾಗೆ ನಮ್ಮಿರ್ವರಿಗೂ ಶಕ್ತಿಯನ್ನು ದಯಪಾಲಿಸು ಎಂಬುದಾಗಿ ನೀವು ಭಗವಂತನಿಗೆ ಪ್ರಾರ್ಥನೆ ಮಾಡಿ."

ಈ ಯುವಕ ಶಿಷ್ಯರು ತಮ್ಮೊಳಗೆ ತಾವೇ ಹೇಳಿಕೊಳ್ಳಲಾರಂಭಿಸಿದಾರೆ: "ನಾವು ಎಂದಿಗೂ ಸಂಸಾರ ಜೀವನಕ್ಕೆ ಕಾಲುಹಾಕೋರಲ್ಲ. ಕಾಮ ಕಾಂಚನ ತ್ಯಾಗಿಗಳಾಗಬೇಕೆಂದು ಪರಮಹಂಸರು ನಮಗೆ ಬೆಸಸಿಹೋಗಿ ದಾರೆ. ಆದ್ದರಿಂದ ನಾವು ಹಿಂದಿರುಗಿ ನಮ್ಮ ನಮ್ಮ ಮನೆಗಳಿಗೆ ಹೋಗಿ ಇರಲು ಹೇಗೆ ಸಾಧ್ಯ?"

ಶಶಿ ಶ್ರೀರಾಮಕೃಷ್ಣರ ನಿತ್ಯಪೂಜೆ ಭಾರವನ್ನು ವಹಿಸಿಕೊಂಡಿದಾನೆ. ಪರಮಹಂಸರ ಅಸ್ಥಿಯನ್ನು ಬಲರಾಮನ ಮನೆಯಿಂದ ತೆಗೆದುಕೊಂಡು ಬಂದು ದೇವರ ಮನೆಯಲ್ಲಿ ಇಟ್ಟಿದೆ. ನಿತ್ಯವೂ ಅದಕ್ಕೆ ಪೂಜೆ ನಡೆಯು ತ್ತಿದೆ. ನರೇಂದ್ರ ಮಠದ ಕಾರ್ಯಕಲಾಪಗಳನ್ನು ವಹಿಸಿಕೊಂಡಿದಾನೆ. ಯುವಕ ಶಿಷ್ಯರು ಆತನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡಿದಾರೆ. ಆತ ಆಗಾಗ ತನ್ನ ಸೋದರ ಶಿಷ್ಯರಿಗೆ ಹೇಳುತ್ತಿದಾನೆ: "ಗೀತೆಯಲ್ಲಿ ಹೇಳಿರೋ ನಿಷ್ಕಾಮ ಕರ್ಮ ಎಂಬವು ಪೂಜೆ, ಜಪ, ತಪ, ಧ್ಯಾನ ಇವೇ ಮೊದಲಾದುವೇ ವಿನಾ ಉಳಿದ ಕರ್ಮಗಳಲ್ಲ." ಮಠದ ಸೋದರ ಸನ್ಯಾಸಿಗಳು ತಮ್ಮ ಆಧ್ಯಾತ್ಮಿಕ ಉನ್ನತಿಗಾಗಿ ನರೇಂದ್ರನನ್ನು ದೊಡ್ಡ ಆಸರೆಯನ್ನಾಗಿ ಮಾಡಿಕೊಂಡಿದಾರೆ. ಆತ ಅವರಿಗೆ ಹೇಳುತ್ತಿದಾನೆ: "ನಮಗೆ ಸಾಧನೆ ಅತ್ಯಂತ ಆವಶ್ಯಕ; ಇಲ್ಲದಿದ್ದರೆ ನಾವು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲಾಗೋದಿಲ್ಲ."

ನರೇಂದ್ರ ಮತ್ತು ಆತನ ಸೋದರ ಶಿಷ್ಯರು ತಪೋನಿಷ್ಠ ಭಾವನೆ ಯಿಂದ ತುಂಬಿತುಳುಕಾಡುತ್ತ ಸಾಧನೆ ಭಜನೆಯಲ್ಲಿ ಮಗ್ನರಾಗಿಬಿಟ್ಟಿ ದಾರೆ. ಭಗವಂತನ ಸಾಕ್ಷಾತ್ಕಾರವೇ ಅವರ ಜೀವನದ ಏಕಮಾತ್ರ ಉದ್ದೇಶ. ವೇದಗಳಲ್ಲಿ, ಪುರಾಣಗಳಲ್ಲಿ, ತಂತ್ರಗಳಲ್ಲಿ ಸನ್ಯಾಸಿಯ ಜೀವನದ ಸಂಬಂಧವಾಗಿ ಏನೇನು ನೀತಿನಿಯಮಗಳು ವಿಧಿತವಾಗಿವೆಯೊ, ಅವನ್ನೆಲ್ಲಾ ತಮ್ಮ ತಮ್ಮ ಹೃದಯ ತಣಿದು ತೃಪ್ತವಾಗುವವರೆಗೆ ಅಭ್ಯಸಿಸ ಲಾರಂಭಿಸಿದಾರೆ. ತಮ್ಮ ಇಡೀ ಸಮಯವನ್ನೆಲ್ಲಾ ಜಪತಪಾದಿಗಳಲ್ಲಿಯೂ, ಸ್ವಾಧ್ಯಾಯಪ್ರವಚನಾದಿಗಳಲ್ಲಿಯೂ ಕಳೆಯಲಾರಂಭಿಸಿದಾರೆ. ತಮ್ಮ ಭಗವದ್ಭಾವನೆಯ ತೀವ್ರತೆ ಸ್ವಲ್ಪ ಕಡಮೆಯಾಗಿಹೋಗಿದೆ ಎಂಬುದರ ಅರಿವು ಅವರಿಗೆ ಆದಾಗಲೆಲ್ಲಾ ಅವರು ಶಂಕೆಪಡುತ್ತಿದ್ದರು, ತಮ್ಮ ಇಡೀ ಜೀವನವೇ ನಾಶವಾಗಿಹೋಗಿಬಿಡುವುದೊ ಏನೊ ಎಂಬುದಾಗಿ. ಅವರು ಏಕಾಂಗಿಯಾಗಿ ಕೆಲವು ವೇಳೆ ಮರದ ಕೆಳಗೆ, ಇನ್ನು ಕೆಲವು ವೇಳೆ

ಶ್ಮಶಾನದಲ್ಲಿ, ಮತ್ತೆ ಕೆಲವು ವೇಳೆ ಗಂಗಾ ದಡದಲ್ಲಿ ಜಪತಪಾದಿಗಳಲ್ಲಿ ತೊಡಗುತ್ತಿದಾರೆ. ಒಮ್ಮೊಮ್ಮೆ ಮಠದ ಕೊಠಡಿಯಲ್ಲೇ ಇಡೀ ದಿನವನ್ನೆಲ್ಲಾ ಜಪತಪಾದಿಗಳಲ್ಲಿ ಕಳೆದುಬಿಡಲಾರಂಭಿಸಿದಾರೆ; ಇನ್ನು ಕೆಲವು ವೇಳೆ ಹಾಡಲು ಮತ್ತು ನರ್ತಿಸಲು ಎಲ್ಲರೂ ಒಟ್ಟಿಗೆ ಸೇರುತ್ತಿದಾರೆ. ಎಲ್ಲರನ್ನೂ, ವಿಶೇಷತಃ ನರೇಂದ್ರನನ್ನು ಭಗವಂತನ ಸಾಕ್ಷಾತ್ಕಾರ ಪಡೆಯಬೇಕೆಂಬ ದಾವಾನಲ ಸುಮ್ಮನೆ ದಹಿಸುತ್ತಿದೆ. ಆಗಾಗ ಅವರು ತಮ್ಮೊಳಗೆ ತಾವೇ ಹೇಳಿಕೊಳ್ಳುತ್ತಿದಾರೆ: "ಭಗವಂತನ ಸಾಕ್ಷಾತ್ಕಾರ ಪಡೆಯಲು ನಮ್ಮ ಇಡೀ ಜೀವನವನ್ನೇ ಆಹುತಿಯನ್ನಾಗಿ ಕೊಡಲು ನಾವು ಸಿದ್ಧರಿರಬೇಡವೆ?"

೨೧ನೆ ಫೆಬ್ರುವರಿ ೧೮೮೭, ಶಿವರಾತ್ರಿ, ಸೋಮವಾರ.

ನರೇಂದ್ರ, ರಾಖಾಲ, ನಿರಂಜನ, ಶರಚ್ಚಂದ್ರ, ಶಶಿ, ಕಾಳೀಪ್ರಸಾದ ಬಾಬುರಾಮ, ತಾರಕ, ಶಾರದಾಪ್ರಸನ್ನ ಇವರು ವರಾಹನಗರದ ಮಠದಲ್ಲಿ ವಾಸಿಸುತ್ತಿದಾರೆ. ಇಂದು ಶಿವರಾತ್ರಿಯಾದ್ದರಿಂದ ಎಲ್ಲರೂ ಉಪವಾಸವ್ರತ ಕೈಗೊಂಡಿದಾರೆ. ಶರಚ್ಚಂದ್ರ, ಕಾಳೀಪ್ರಸಾದ, ನಿರಂಜನ, ಶಾರದಾಪ್ರಸನ್ನ ಮುಂದಿನ ಶನಿವಾರ ಪೂರಿ-ಜಗನ್ನಾಥನ ದರ್ಶನಕ್ಕೆ ಹೋಗಿ ಬರಬೇಕೆಂದು ಯೋಚಿಸುತ್ತಿದಾರೆ. ಯೋಗೀಂದ್ರ ಮತ್ತು ಲಾಟು ಇನ್ನೂ ಬೃಂದಾವನದಲ್ಲೇ ಇದಾರೆ. ಇವರಿಬ್ಬರು ಈ ಹೊಸ ಮಠವನ್ನು ಇನ್ನೂ ನೋಡಿಲ್ಲ.

ನರೇಂದ್ರನ ತಂದೆ ಸತ್ತ ಬಳಿಕ, ಆತನ ಮನೆಯವರು ಒಂದು ವ್ಯಾಜ್ಯಕ್ಕೆ ಒಳಗಾಗಿದಾರೆ. ಅದರ ಸಂಬಂಧವಾಗಿ ನರೇಂದ್ರ ಪ್ರಾತಃಕಾಲವೇ ಎದ್ದು ಕಲ್ಕತ್ತಕ್ಕೆ ಹೋಗಿದಾನೆ. ಮಾಸ್ಟರ್ ಬೆಳಗ್ಗೆ ಒಂಬತ್ತು ಘಂಟೆಗೆ ಮಠಕ್ಕೆ ಬಂದ. ಆತನನ್ನು ನೋಡಿ ತಾರಕ ಬಹಳ ಆನಂದಪಟ್ಟು ರಾಖಾಲನೊಡನೆ ಶಿವನ ಸಂಬಂಧವಾಗಿ ಹಾಡಲಾರಂಭಿಸಿದಾನೆ:

ಅದೋ ಅಲ್ಲಿ ಪರಮಶಿವನು
ನರ್ತಿಸುವನು ಮೋದದಿ,
ಡಿಮಿ ಡಿಮಿ ಡಿಮಿ ಡಮರುನಾದ
ಮೊಳಗಿದೆ ಬ್ರಹ್ಮಾಂಡದಿ!

ಕೊರಳ ಸುತ್ತ ರುಂಡ ಮಾಲೆ
ದಿಕ್ಕು ದೆಸೆಗೆ ತೂಗಿದೆ.
ಜಡೆಯ ಗಂಗೆ ಬುಸುಗುಟ್ಟಿದೆ,
ಉಗ್ರ ಅನಲ ಶೂಲ ಕಾಂತಿ
ಕಣ್ಣುಗಳನೆ ಕುಕ್ಕಿದೆ!
ಕಟಿಯ ಸುತ್ತ ಸರ್ಪರಾಜ
ಹೆಡೆಯಾಡಿಸಿ ಮಿರುಗಿದೆ,
ಅದೊ, ಲಲಾಟದಲ್ಲಿ ನೋಡು
ಶಶಿ ಕಳೆಯೂ ಜ್ವಲಿಸಿದೆ!

ರಾಖಾಲ ಮತ್ತು ತಾರಕ ಈ ಹಾಡನ್ನು ಹಾಡುತ್ತ ನರ್ತಿಸಲಾರಂಭಿಸಿದಾರೆ. ಈಗ ಕೆಲವು ದಿನಗಳ ಹಿಂದೆ ನರೇಂದ್ರ ಈ ಹಾಡನ್ನು ರಚಿಸಿದ.

ಶಶಿ ಪ್ರಾತಃಕಾಲ ಪೂಜೆಯನ್ನು ಮಾಡಿ ಮುಗಿಸಿದಾನೆ. ಶರಚ್ಚಂದ್ರ ತಂಬೂರಿ ತೆಗೆದುಕೊಂಡು ಸ್ವಲ್ಪ ಹೊತ್ತಿನಿಂದ ಶಿವನ ಸಂಬಂಧವಾಗಿ ಹಾಡುತ್ತಿದಾನೆ.

ಅಷ್ಟರಲ್ಲಿ ನರೇಂದ್ರ ಕಲ್ಕತ್ತದಿಂದ ಹಿಂದಿರುಗಿ ಬಂದಿದಾನೆ. ಆತ ಇನ್ನೂ ಸ್ನಾನ ಮಾಡಿರಲಿಲ್ಲ. ಕಾಳೀಪ್ರಸಾದ ಆತನನ್ನು ಕೇಳಿದ: "ವ್ಯಾಜ್ಯ ಏನಾಯಿತು?" ಒಡನೆ ನರೇಂದ್ರ ಸ್ವಲ್ಪ ಮುಟ್ಟಿ ಮುಟ್ಟಿ ನೋಡಿಕೊಳ್ಳೋ ಹಾಗೆ ಉತ್ತರವಿತ್ತ: "ನಿನಗೇಕೆ ಅದರ ಚಿಂತನೆ?"

ನರೇಂದ್ರ ಹುಕ್ಕ ಸೇದುತ್ತ ಮಾಸ್ಟರ್ ಮೊದಲಾದವರೊಡನೆ ಮಾತುಕತೆ ಆಡುತ್ತಿದಾನೆ. ಆತ ಹೇಳಿದ: "ಕಾಮಕಾಂಚನ ತ್ಯಜಿಸದೆ ಅಧ್ಯಾತ್ಮಜೀವನದಲ್ಲಿ ಮುಂದುವರಿಯಲಾಗುವುದಿಲ್ಲ. ಕಾಮಿನಿಯೇ ನರಕದ ಮಹಾದ್ವಾರ. ಎಲ್ಲರೂ ಅವರ ವಶರಾಗಿಬಿಟ್ಟಿದಾರೆ. ಶಿವ ಮತ್ತು ಕೃಷ್ಣ ಇವರ ವಿಷಯವೇ ಬೇರೆ. ಶಿವ ಶಕ್ತಿಯನ್ನು ತನ್ನ ದಾಸಿಯನ್ನಾಗಿ ಮಾಡಿಕೊಂಡಿದ್ದ. ಶ್ರೀಕೃಷ್ಣ ಸಂಸಾರದಲ್ಲಿ ಇದ್ದುದೇನೊ ನಿಜ. ಆದರೆ ಆತ ಎಷ್ಟು ನಿರ್ಲಿಪ್ತನಾಗಿದ್ದ! ಹೇಗೆ ಕ್ಷಣಮಾತ್ರದಲ್ಲಿ ಬೃಂದಾವನ, ಗೋಪಿಯರು ಇವರನ್ನೆಲ್ಲಾ ತ್ಯಜಿಸಿ ಹೊರಟು ಹೋದ!"

ರಾಖಾಲ: "ಅದೂ ಅಲ್ಲದೆ ದ್ವಾರಕೆಯನ್ನೂ ಆತ ಹೇಗೆ ತ್ಯಜಿಸಿಬಿಟ್ಟ."

ನರೇಂದ್ರ ಗಂಗಾಸ್ನಾನ ಮಾಡಿಕೊಂಡು ಮಠಕ್ಕೆ ಹಿಂದಿರುಗಿದ.

ಕೈಯಲ್ಲಿ ಒದ್ದೆ ಬಟ್ಟೆಗಳನ್ನು ಮತ್ತು ಚೌಕವನ್ನೂ ಹಿಡಿದುಕೊಂಡು ಬಂದಿದಾನೆ. ಶಾರದಾಪ್ರಸನ್ನ ಬಂದು ನರೇಂದ್ರನಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಆತನೂ ಉಪವಾಸ ಮಾಡುತ್ತಿದಾನೆ. ಈಗ ಆತ ಗಂಗಾಸ್ನಾನಕ್ಕೆ ಹೊರಟಿದಾನೆ. ನರೇಂದ್ರ ದೇವರ ಮನೆಗೆ ಹೋಗಿ ಪರಮ ಹಂಸರ ಭಾವಚಿತ್ರಕ್ಕೆ ಪ್ರಣಾಮ ಮಾಡಿ ಧ್ಯಾನಕ್ಕೆ ಕುಳಿತುಕೊಂಡ.

ಸೋದರ ಸನ್ಯಾಸಿಗಳೆಲ್ಲರೂ ಒಂದು ಕೊಠಡಿಯಲ್ಲಿ ಕುಳಿತು ಮಾತು ಕತೆಗಳಾಡುತ್ತಿದಾರೆ. ಭವನಾಥನ ಸಂಬಂಧವಾಗಿ ಮಾತುಕತೆ ಆರಂಭ ವಾಯಿತು. ನರೇಂದ್ರ ಹೇಳುತ್ತಿದಾನೆ: ''ಅಂಥವರೆಲ್ಲರೂ ಸಂಸಾರದ ಕೀಟಗಳು.''

ಅಪರಾಹ್ನವಾಗಿದೆ. ಶಿವರಾತ್ರಿ ಪೂಜೆಯ ವ್ಯವಸ್ಥೆ ನಡೆಯುತ್ತಿದೆ. ಬಿಲ್ವ ಪತ್ರೆ, ಬಿಲ್ವ ಸಮಿತ್ತು ಇವನ್ನು ಶೇಖರಿಸಲಾಯಿತು. ಪೂಜೆಯಾದ ನಂತರ ಹೋಮ ನಡೆಯಲಿದೆ.

ಸಾಯಂಕಾಲವಾಗಿದೆ. ಶಶಿ ದೇವರ ಮನೆಗೆ ಧೂಪ ಹಾಕಿ ಉಳಿದ ಕೊಠಡಿಗಳಿಗೂ ಅದನ್ನು ತೆಗೆದುಕೊಂಡು ಹೋದ. ಪ್ರತಿಯೊಂದು ದೇವ ದೇವಿಯರ ಪಟದ ಹತ್ತಿರವೂ ಪ್ರಣಾಮಮಾಡುತ್ತ ವಿಶೇಷವಾದ ಶ್ರದ್ಧಾಭಕ್ತಿಯಿಂದ ಭಗವನ್ನಾಮೋಚ್ಚಾರಣೆ ಮಾಡುತ್ತಿದಾನೆ: ಶ್ರೀ ಗುರು ದೇವಾಯ ನಮಃ! ಶ್ರೀ ಕಾಳಿಕಾಯೈ ನಮಃ! ಶ್ರೀ ಜಗನ್ನಾಥ-ಸುಭದ್ರ-ಬಲರಾಮೇಭ್ಯೋ ನಮಃ! ಶ್ರೀ ಷಡ್ಭುಜಾಯ ನಮಃ! ಶ್ರೀ ರಾಧಾ ವಲ್ಲಭಾಯ ನಮಃ! ಶ್ರೀರಾಮಾಯ, ಶ್ರೀ ಲಕ್ಷ್ಮಣಾಯ, ಶ್ರೀ ವಿಶ್ವಾಮಿತ್ರಾಯ ನಮಃ!

ಮಠದ ಆವರಣದಲ್ಲೇ ಇದ್ದ ಬಿಲ್ವ ವೃಕ್ಷದ ಕೆಳಗೆ ಶಿವನ ಪೂಜೆ ಮಾಡಲು ವ್ಯವಸ್ಥೆ ಮಾಡಲಾಗಿದೆ. ಘಂಟೆ ರಾತ್ರಿ ಒಂಬತ್ತು. ಈಗ ಮೊದಲನೆ ಜಾವದ ಪೂಜೆ ಆರಂಭವಾಗಲಿದೆ. ಎರಡನೆ ಜಾವದ ಪೂಜೆ ಹನ್ನೊಂದೂವರೆ ಘಂಟೆಗೆ. ನಾಲ್ಕು ಜಾವದ ಪೂಜೆಯೂ ನಡೆಯುತ್ತದೆ. ನರೇಂದ್ರ, ರಾಖಾಲ, ಶರಚ್ಚಂದ್ರ, ಕಾಳೀಪ್ರಸಾದ ಮತ್ತು ಉಳಿದ ಸೋದರರು, ಸಿಂತಿಯ ಗೋಪಾಲ ಇವರೇ ಮೊದಲಾದವರು ಬಿಲ್ವ ಮರದ ಕೆಳಗೆ ಸೇರಿದಾರೆ. ಭೂಪತಿ ಮತ್ತು ಮಾಸ್ಟರೂ ಅಲ್ಲಿ ಕುಳಿತಿದಾರೆ. ಮಠದ ಸೋದರರಲ್ಲಿ ಒಬ್ಬ ಪೂಜೆ ಮಾಡುತ್ತಿದಾನೆ. ಕಾಳೀಪ್ರಸಾದ

ಗೀತಾಪಾರಾಯಣ ಮಾಡುತ್ತಿದಾನೆ. ಆಗಾಗ ಆತ ನರೇಂದ್ರನೊಡನೆ ತರ್ಕಮಾಡುತ್ತಿದಾನೆ.

ಕಾಳೀಪ್ರಸಾದ: "ನಾನೇ ಎಲ್ಲಾ. ನಾನೇ ಸೃಷ್ಟಿ, ಸ್ಥಿತಿ, ಪ್ರಳಯ ಎಲ್ಲವನ್ನೂ ಮಾಡುತ್ತಿದೇನೆ."

ನರೇಂದ್ರ: "ಸೃಷ್ಟಿ ಎಲ್ಲಿಂದ ಸಾಧ್ಯ ನನಗೆ? ಇನ್ನೊಂದು ಶಕ್ತಿ ನನ್ನ ಮೂಲಕ ಆ ಕಾರ್ಯವನ್ನು ಮಾಡಿಸುತ್ತಿದೆ. ನಮ್ಮ ವಿವಿಧ ಕಾರ್ಯಗಳು—ಚಿಂತನೆ ಕೂಡ—ಆ ಶಕ್ತಿಯಿಂದ ಮಾಡಲ್ಪಡುತ್ತಿವೆ."

ಮಾಸ್ಟರ್ ತನಗೆ ತಾನೆ: "ಪರಮಹಂಸರು ಹೇಳುತ್ತಿದ್ದರು: 'ಧ್ಯಾನಮಾಡುತ್ತಿರುವವನು ತಾನು ಎಂಬ ಬೋಧೆ ಎಲ್ಲಿಯವರೆಗೆ ಮನುಷ್ಯನಿಗೆ ಇರುವುದೊ ಅಲ್ಲಿಯವರೆಗೆ ಆತ ಇನ್ನೂ ಆದ್ಯಾಶಕ್ತಿಯ ಎಲ್ಲೆಯೊಳಗೇ ಇದಾನೆ. ಆತ ಶಕ್ತಿಯನ್ನು ಒಪ್ಪಲೇಬೇಕಾಗುತ್ತದೆ.'"

ಕಾಳೀಪ್ರಸಾದ ಹಾಗೇ ಕುಳಿತು ಸ್ವಲ್ಪ ಹೊತ್ತು ಯೋಚಿಸಿ ಹೇಳುತ್ತಿದಾನೆ: "ನೀನು ಹೇಳಿದ ಕಾರ್ಯ-ಗೀರ್ಯ ಇವೆಲ್ಲಾ ಮಿಥ್ಯಾ. ಚಿಂತನೆ-ಗಿಂತನೆ ಎಂಬುದೂ ಮಿಥ್ಯಾ. ಇವುಗಳ ಭಾವನೆಯೇ ನನಗೆ ನಗುವನ್ನು ತರುತ್ತಿದೆ."

ನರೇಂದ್ರ: "'ಸೋಽಹಮ್' ಎಂಬುದರ 'ಅಹಂ' ನಮ್ಮ ಈ 'ಅಹಂ' ಅಲ್ಲ. ದೇಹ, ಮನಸ್ಸು ಇವನ್ನೆಲ್ಲಾ ವರ್ಜಿಸಿದ ಮೇಲೆ ಉಳಿಯೋ 'ಅಹಂ'"

ಗೀತಾಪಾರಾಯಣವನ್ನು ಮುಗಿಸಿದನಂತರ ಕಾಳೀಪ್ರಸಾದ ಪಠಿಸಿದ "ಶಾಂತಿಃ! ಶಾಂತಿಃ! ಶಾಂತಿಃ!" ಎಂಬುದಾಗಿ.

ಈಗ ನರೇಂದ್ರಾದಿ ಭಕ್ತರೆಲ್ಲರೂ ಎದ್ದು ನಿಂತು ನರ್ತಿಸುತ್ತ, ಹಾಡುತ್ತ ಬಿಲ್ವ ಮರಕ್ಕೆ ಪ್ರದಕ್ಷಿಣೆ ಮಾಡುತ್ತಿದಾರೆ. ಆಗಾಗ ಒಕ್ಕೊರಳಿನಿಂದ ಹೇಳುತ್ತಿದಾರೆ, "ಶಿವ ಗುರು! ಶಿವ ಗುರು!" ಎಂಬುದಾಗಿ.

ಇಂದು ಕೃಷ್ಣಪಕ್ಷದ ಚತುರ್ದಶಿ. ಎಲ್ಲೆಲ್ಲೂ ಗಾಢಾಂಧಕಾರ. ಜೀವ ಜಂತು ಎಲ್ಲವೂ ನಿಶ್ಶಬ್ದತೆಯಿಂದ ಮಲಗಿವೆ. ಯುವಕ ಸನ್ಯಾಸಿಗಳು ಕಾಷಾಯವಸ್ತ್ರಧಾರಿಗಳಾಗಿದಾರೆ. ಅವರೆಲ್ಲರೂ ಕೂಡಿ ಉಚ್ಚರಿಸುತ್ತಿದ್ದ "ಶಿವ ಗುರು! ಶಿವ ಗುರು!" ಎಂಬ ಮಂತ್ರಧ್ವನಿ ಮೇಘಗಂಭೀರ ರವದಿಂದ ಅನಂತ ಆಕಾಶದ ಕಡೆಗೆ ನುಗ್ಗುತ್ತ ಅಖಂಡ ಸಚ್ಚಿದಾನಂದನಲ್ಲಿ ಲಯವಾಗುತ್ತಿದೆ.

ಪೂಜೆ ಮುಗಿಯಿತು. ಇನ್ನೇನು ಅರುಣೋದಯವಾಗುವುದರಲ್ಲಿದೆ. ಆ ಬ್ರಾಹ್ಮೀ ಮುಹೂರ್ತದಲ್ಲಿ ನರೇಂದ್ರಾದಿ ಭಕ್ತರೆಲ್ಲರೂ ಗಂಗಾಸ್ನಾನ ಮಾಡಿ ಹಿಂದಿರುಗುತ್ತಿದಾರೆ.

ಬೆಳಗಾಯಿತು. ಭಕ್ತರೆಲ್ಲರೂ ದೇವರ ಮನೆಯನ್ನು ಪ್ರವೇಶಿಸಿ, ಪರಮಹಂಸರ ಭಾವಚಿತ್ರಕ್ಕೆ ಪ್ರಣಾಮಮಾಡಿ ಹೊರಕ್ಕೆ ಬರುತ್ತಿದಾರೆ. ಈಗ ಎಲ್ಲರೂ ದೊಡ್ಡ ಅಂಗಳದಲ್ಲಿ ನೆರೆಯುತ್ತಿದಾರೆ. ನರೇಂದ್ರ ಹೊಸ ಕಾಷಾಯವಸ್ತ್ರವನ್ನು ಧರಿಸಿಕೊಂಡಿದಾನೆ. ಆ ಹೊಸ ಕಾಷಾಯವಸ್ತ್ರದ ಕಾಂತಿಯೊಡನೆ ಆತನ ತಪಃಪ್ರಭಾವದಿಂದ ಎದ್ದು ಕಾಣುತ್ತಿರೋ ಅಪೂರ್ವ ಸ್ವರ್ಗೀಯ ಕಾಂತಿಯೂ ಬೆರತುಕೊಂಡಿದೆ. ಆತನ ವದನಮಂಡಲ ತೇಜಸ್ಸಿನಿಂದ ಪರಿಪೂರ್ಣವಾಗಿದೆ; ಪ್ರೇಮದಿಂದ ತುಂಬಿತುಳುಕಾಡುತ್ತಿದೆ. ಆ ಅಖಂಡ ಸಚ್ಚಿದಾನಂದಸಾಗರದ ಗುಳ್ಳೆಯೊಂದು ಜ್ಞಾನ, ಭಕ್ತಿ ಇವನ್ನು ಪ್ರಚಾರಮಾಡಲು ಪರಮಹಂಸರಿಗೆ ನೆರವಾಗಲೋಸುಗ ಈತನ ರೂಪಿನಲ್ಲಿ ಬಂದಿದೆಯೊ ಏನೊ ಎಂಬಂತೆ ನರೇಂದ್ರ ಕಾಣಬರುತ್ತಿದಾನೆ. ಎಲ್ಲಾ ಕಣ್ಣುಗಳೂ ಆತನ ಕಡೆಗೇ ನೋಡುತ್ತಿವೆ. ಅವಕ್ಕೆ ಬೇರೆ ಕಡೆಗೆ ದೃಷ್ಟಿಹಾಕಲು ಇಚ್ಛೆಯಾಗುತ್ತಿಲ್ಲ. ಈಗ ಆತನಿಗೆ ವಯಸ್ಸು ಕೇವಲ ಇಪ್ಪತ್ತುನಾಲ್ಕು ಮಾತ್ರ. ಇದೇ ವಯಸ್ಸಿನಲ್ಲೇ ಶ್ರೀ ಚೈತನ್ಯನೂ ಸಂಸಾರವನ್ನು ತ್ಯಜಿಸಿದ್ದ.

ಭಕ್ತರ ಪಾರಣೆಗಾಗಿ ಬಲರಾಮ ತನ್ನ ಮನೆಯಿಂದ ಹಣ್ಣುಹಂಪಲ ಮೃಷ್ಟಾನ್ನಾದಿಗಳನ್ನು ಹಿಂದಿನ ದಿನವೇ ಕಳುಹಿಸಿಕೊಟ್ಟಿದ್ದ. ನರೇಂದ್ರ, ರಾಖಾಲ ಮತ್ತು ಇನ್ನೂ ಕೆಲವರು ನಿಂತುಕೊಂಡೇ ಫಲಾಹಾರವನ್ನು ತೆಗೆದುಕೊಳ್ಳುತ್ತಾ ಇದಾರೆ. ಒಂದೆರಡು ಚೂರುಗಳನ್ನು ತಿಂದನಂತರ ಅವರಲ್ಲಿ ಒಬ್ಬ ಕೂಗಿಕೊಳ್ಳುತ್ತಿದಾನೆ: "ಧನ್ಯ! ಧನ್ಯ ಬಲರಾಮಬಾಬು!" (ಎಲ್ಲರೂ ನಗುತ್ತಿದಾರೆ.)

ಈಗ ನರೇಂದ್ರ ಬಾಲಕನ ಹಾಗೆ ತಮಾಷೆ ಮಾಡುತ್ತಿದಾನೆ. ಪರಮಹಂಸರ ಹಾಗೆ ನಟಿಸುತ್ತ, ಒಂದು ರಸಗುಳ್ಳ (ಸಿಹಿ ತಿಂಡಿ) ಬಾಯಿಗೆ ಹಾಕಿಕೊಂಡು ಸಮಾಧಿಸ್ಥನಾದವನ ಹಾಗೆ ಸ್ಥಿರವಾಗಿ ನಿಂತಿದಾನೆ. ಆತನ ಕಣ್ಣುಗಳು ಎವೆಯಿಕ್ಕದೆ ನೋಡುತ್ತಿವೆ. ಆತ ಕೆಳಕ್ಕೆ ಬಿದ್ದುಬಿಡಬಹುದೆಂದು ಆತನನ್ನು ಹಿಡಿದುಕೊಂಡಿರೋನ ಹಾಗೆ ಇನ್ನೊಬ್ಬ ಭಕ್ತ ನಟಿಸುತ್ತಿದಾನೆ. ನರೇಂದ್ರ ಈಗ ಕಣ್ಣು ಮುಚ್ಚಿಕೊಂಡಿದಾನೆ.

ಕೆಲವು ನಿಮಿಷಗಳಾದನಂತರ ರಸಗುಳ್ಳವನ್ನು ಇನ್ನೂ ಬಾಯಲ್ಲೇ ಇಟ್ಟು ಕೊಂಡು ಕಣ್ಣು ತೆರೆದ. ಈಗ ತೊದಲಿಸುತ್ತ ಹೇಳುತ್ತಿದಾನೆ: "ಈಗ–ನನಗೆ–ಎಂದಿನ–ಸ್ಥಿತಿ–ಬಂದಿದೆ." (ಎಲ್ಲರೂ ಗಹಗಹಿಸಿ ನಗುತ್ತಿದಾರೆ.)

ಈಗ ಎಲ್ಲರೂ ಕುಳಿತು ಫಲಾಹಾರ ಸ್ವೀಕರಿಸುತ್ತಿದಾರೆ. ಮಾಸ್ಟರು ಈ ಆನಂದಕೂಟದ ಕಡೆ ನೋಡಿ ನಲಿಯುತ್ತಿದಾನೆ. ಭಕ್ತರೆಲ್ಲರೂ ಕೂಡಿ ಆನಂದದಿಂದ ಘೋಷಿಸುತ್ತಿದಾರೆ: "ಜೈ ಗುರುಮಹಾರಾಜ್! ಜೈ ಗುರುಮಹಾರಾಜ್!"

೨೫ನೆ ಮಾರ್ಚ್ ೧೮೮೭, ಶುಕ್ರವಾರ.

ಸೋದರ ಸನ್ಯಾಸಿಗಳ ದರ್ಶನ ಪಡೆಯಲು ಮಾಸ್ಟರ್ ಮಠಕ್ಕೆ ಬಂದಿದಾನೆ. ಆತನೊಡನೆ ದೇವೇಂದ್ರನೂ ಬಂದಿದಾನೆ. ಮಾಸ್ಟರ್ ಆಗಾಗ ಮಠಕ್ಕೆ ಬಂದು ಹೋಗುತ್ತಿದಾನೆ. ಒಮ್ಮೊಮ್ಮೆ ಒಂದೆರಡು ದಿನಗಳ ಮಟ್ಟಿಗೆ ಮಠದಲ್ಲೇ ಇದ್ದುಬಿಡುತ್ತಿದಾನೆ. ಹಿಂದಿನ ವಾರ ಆತ ಒಟ್ಟಿಗೆ ಮೂರು ದಿನಗಳನ್ನು ಮಠದಲ್ಲೇ ಕಳೆದ. ಈ ಯುವಕ ಸನ್ಯಾಸಿಗಳ, ವಿಶೇಷತಃ ನರೇಂದ್ರನ ತೀವ್ರ ವೈರಾಗ್ಯವನ್ನು ಲಕ್ಷ್ಯವಿಟ್ಟು ನೋಡಬೇಕೆಂಬ ಆಸೆ. ಅದಕ್ಕಾಗಿ ಆತ ಆಗಾಗ ಬಂದು ಮಠದಲ್ಲೇ ಇದ್ದುಬಿಡುತ್ತಿದಾನೆ.

ಸಾಯಂಕಾಲವಾಗಿದೆ. ಮಾಸ್ಟರ್ ಇಂದಿನ ರಾತ್ರಿಯನ್ನು ಇಲ್ಲೇ ಕಳೆಯುತ್ತಾನೆ. ಶಶಿ ಭಗವನ್ನಾಮೋಚ್ಚಾರಣೆ ಮಾಡುತ್ತ ದೇವರ ಮನೆಗೆ ದೀಪ ಹಚ್ಚಿ ಧೂಪ ಹಾಕಿದ ಬಳಿಕ ಪ್ರತಿಯೊಂದು ಕೊಠಡಿಗೂ ಹೋಗಿ ಅಲ್ಲಿದ್ದ ದೇವದೇವಿಯರ ಪಟಗಳಿಗೆ ಧೂಪ ತೋರಿಸಿ ಅವುಗಳಿಗೆಲ್ಲಾ ಪ್ರಣಾಮಮಾಡಲಾರಂಭಿಸಿದಾನೆ. ಈಗ ಮಂಗಳಾರತಿ ಶುರು ಆಯಿತು. ಶಶಿ ಮಂಗಳಾರತಿ ಮಾಡುತ್ತಿದಾನೆ. ಮಠದ ಸೋದರರು, ಮಾಸ್ಟರ್, ದೇವೇಂದ್ರ ಇವರೆಲ್ಲಾ ಕೈ ಕಟ್ಟಿ ನಿಂತುಕೊಂಡು ಮಂಗಳಾರತಿ ಹಾಡನ್ನು ಹಾಡುತ್ತಿದಾರೆ:

ಜೈ ಶಿವ ಓಂಕಾರ, ಜೈ ಶಿವ ಓಂಕಾರ!
ಬ್ರಹ್ಮ ವಿಷ್ಣು ಸದಾಶಿವ!!
ಹರ ಹರ ಹರ ಮಹಾದೇವ!!!

ಈಗ ನರೇಂದ್ರ ಮತ್ತು ಮಾಸ್ಟರ್ ಮಾತುಕತೆ ಆಡುತ್ತಿದಾರೆ. ತಾನು ಪರಮಹಂಸರನ್ನು ಮೊಟ್ಟಮೊದಲು ಸಂಧಿಸಿದಂದಿನಿಂದ ಇದುವರೆಗೆ

ನಡೆದ ತನ್ನ ಜೀವನದ ಘಟನಾವಳಿಗಳನ್ನೆಲ್ಲಾ ನರೇಂದ್ರ ಮಾಸ್ಟರ ಮುಂದೆ ತೋಡಿಕೊಳ್ಳುತ್ತಾ ಇದ್ದಾನೆ.

ನರೇಂದ್ರ: "ನಾನು ಮೊದಲು ಮೊದಲು ಅವರ ಹತ್ತಿರ ಹೋಗುತ್ತಿದ್ದಾಗ ಒಂದು ದಿನ ಭಾವದಲ್ಲಿ ಅವರು ಹೇಳಿದರು: 'ಬಂದೆಯಾ!' ನಾನು ಭಾವಿಸಿದೆ: 'ಏನಾಶ್ಚರ್ಯ ಇದು! ಇವರು ನನ್ನ ಪರಿಚಯ ಆಗಲೇ ಇರೋರ ಹಾಗೆ ಮಾತಾಡುತ್ತಿದ್ದಾರಲ್ಲ!' ಬಳಿಕ ಕೇಳಿದರು: 'ನಿನಗೇನಾದರು ಒಂದು ಜ್ಯೋತಿ ಕಾಣಿಸಿಕೊಳ್ಳುವುದೆ?' ಅದಕ್ಕೆ ನಾನು ಉತ್ತರವಿತ್ತೆ: 'ಹೌದು, ನನಗೆ ನಿದ್ದೆ ಹತ್ತೋಕೆ ಮುನ್ನ ಯಾವುದೋ ಒಂದು ವಿಧದ ಜ್ಯೋತಿ ನನ್ನ ಭ್ರೂಮಧ್ಯದ ಹತ್ತಿರ "ಗರಗರ" ಅಂತ ಸುತ್ತುತ್ತಿರುತ್ತದೆ.'"

ಮಾಸ್ಟರ್: "ಈಗಲೂ ಹಾಗೆ ಕಾಣಿಸಿಕೊಳ್ಳುತ್ತಿದೆಯೇನು?"

ನರೇಂದ್ರ: "ಹಿಂದೆ ಪದೇ ಪದೇ ಕಾಣಿಸಿಕೊಳ್ಳುತ್ತಿತ್ತು. ಯದುಮಲ್ಲಿಕನ ತೋಟದ ಮನೆಯಲ್ಲಿ ಒಂದು ದಿನ ಪರಮಹಂಸರು ನನ್ನನ್ನು ಸ್ಪರ್ಶಿಸಿ ಏನನ್ನೋ ಮಟಗುಟ್ಟಲಾರಂಭಿಸಿದರು. ಒಡನೆಯೇ ನಾನು ಬಾಹ್ಯಜ್ಞಾನಶೂನ್ಯನಾಗಿಬಿಟ್ಟೆ. ಅದರ ನಶಾ ಒಂದು ತಿಂಗಳ ವರೆಗೂ ಇತ್ತು.

"ನನಗೆ ವಿವಾಹವಾಗಲಿದೆಯೆಂದು ಕೇಳಿ ಕಾಳಿಯ ಪಾದಗಳನ್ನು ಹಿಡಿದು ಅಳಲಾರಂಭಿಸಿದರು. ಕಣ್ಣೀರು ಸುರಿಸುತ್ತಲೇ ಭಗವತಿಗೆ ಹೇಳಿದರು: 'ಹೇ ತಾಯೆ, ಅದು ನಡೆಯದ ಹಾಗೆ ಮಾಡಿಬಿಡು! ನರೇಂದ್ರ ಮುಳುಗಿಹೋಗದ ಹಾಗೆ ನೋಡಿಕೊ.'

"ತಂದೆ ಸತ್ತ ಬಳಿಕ, ಮನೆಯಲ್ಲಿ ನನ್ನ ತಾಯಿ, ಸೋದರ ಸೋದರಿಯರು ಹೊಟ್ಟೆಗಿಲ್ಲದೆ ಕಷ್ಟಪಡುತ್ತಿದ್ದರು. ಒಂದು ದಿನ ಅನ್ನದಗುಹನೊಡನೆ ಪರಮಹಂಸರನ್ನು ನೋಡಲು ಹೋಗಿದ್ದೆ. ಆಗ ಅವರು ಆತನಿಗೆ ಹೇಳಿದರು: 'ಈತನ (ನರೇಂದ್ರನ) ತಂದೆ ಸತ್ತುಹೋಗಿದ್ದಾನೆ. ಈತನ ಮನೆಯಲ್ಲಿ ಬಹಳ ಕಷ್ಟ ಪರಿಸ್ಥಿತಿ ಬಂದಿದೆ. ಈ ಸಂದರ್ಭದಲ್ಲಿ ಈತನ ಬಂಧುಬಾಂಧವರು ಈತನಿಗೆ ಸಹಾಯ ನೀಡೋದಾದರೆ ಬಹಳ ಒಳ್ಳೆಯದಾಗುತ್ತದೆ.'

"ಅನ್ನದಗುಹ ಹೊರಟುಹೋದನಂತರ ನಾನು ಅವರಿಗೆ ಚೆನ್ನಾಗಿ ತಗುಲಿಸಿದೆ. ಹೇಳಿದೆ: 'ಏಕೆ ನೀವು ಆತನ ಹತ್ತಿರ ಇದನ್ನೆಲ್ಲಾ

ಹೇಳೋಕೆ ಹೋದಿರಿ ? ' ಅವರು ಪೆಚ್ಚಾಗಿ ಅಳುತ್ತಾ ಹೇಳಿದರು : ' ನೋಡು ನರೇಂದ್ರ, ನಾನು ನಿನ್ನ ಸಲುವಾಗಿ ಬಾಗಿಲಿಂದ ಬಾಗಿಲಿಗೆ ಅಲೆದು ಭಿಕ್ಷೆ ಬೇಡಿ ತರಬಲ್ಲೆ. '

" ಅವರು ತಮ್ಮ ಪ್ರೀತಿಯಿಂದ ನಮ್ಮನ್ನೆಲ್ಲಾ ವಶಮಾಡಿಕೊಂಡು ಬಿಟ್ಟರು. ನಿಮಗೆ ಹೇಗೆ ಅನಿಸುತ್ತದೆ ? "

ಮಾಸ್ಟರ್ : " ಲೇಶಮಾತ್ರವೂ ಸಂದೇಹವಿಲ್ಲ. ಅವರದು ಅಹೇತುಕ ಪ್ರೀತಿ. "

ನರೇಂದ್ರ : " ಒಂದು ದಿನ ನಾನೊಬ್ಬನೆ ಅವರೊಡನೆ ಇದ್ದಾಗ ಅವರು ನನಗೆ ಒಂದು ವಿಷಯ ತಿಳಿಸಿದರು. ಹತ್ತಿರ ಬೇರೆ ಯಾವ ನರಪ್ರಾಣಿಯೂ ಇರಲಿಲ್ಲ. ಬೇರೆ ಯಾರ ಕಿವಿಗೂ ಇದು ಹೋಗ ಕೂಡದು. "

ಮಾಸ್ಟರ್ : " ಇಲ್ಲ, ನಾನು ಬೇರೆ ಯಾರ ಕಿವಿಗೂ ಹಾಕೋದಿಲ್ಲ. ಏನು ಹೇಳಿದರು ? "

ನರೇಂದ್ರ : " ಅವರು ಹೇಳಿದರು: ' ನಾನಂತೂ ಸಿದ್ಧಿಗಳನ್ನು ಉಪ ಯೋಗಿಸೋ ಹಾಗೆಯೇ ಇಲ್ಲ ; ನಿನ್ನ ಮೂಲಕ ಅವನ್ನು ಉಪಯೋಗಿಸ ಬೇಕೆಂದಿದೇನೆ. ನೀನು ಏನು ಹೇಳುತ್ತೀಯಾ ? ' ಅದಕ್ಕೆ ನಾನು ಹೇಳಿದೆ : ' ಬೇಡಿ. ಅದಕ್ಕೆ ನಾನು ಒಪ್ಪೋನಲ್ಲ. '

" ಅವರ ಮಾತುಗಳನ್ನೆಲ್ಲ ನಾನು ಸುಮ್ಮನೆ ಪರಿಹಾಸ್ಯಮಾಡಿಬಿಡು ತ್ತಿದ್ದೆ. ನೀವು ಅವರಿಂದಲೇ ಈ ವಿಷಯಗಳನ್ನೆಲ್ಲಾ ಕೇಳಿರಬೇಕು. ಅವರ ಭಗವದ್ರೂಪದ ದರ್ಶನಗಳ ಸಂಬಂಧವಾಗಿ ನಾನು ಅವರಿಗೆ ಹೇಳಿ ಬಿಡುತ್ತಿದ್ದೆ : ' ಇವೆಲ್ಲ ನಿಮ್ಮ ಮಾನಸಿಕ ಭ್ರಾಂತಿ. '

" ಅವರು ಹೇಳುತ್ತಿದ್ದರು : ' ನಾನು ಕುಟೀರದ ಮೇಲಕ್ಕೆ ಹತ್ತಿ ಹೋಗಿ ತಾರಸ್ವರದಿಂದ ಕೂಗುತ್ತಿದ್ದೆ : " ಎಲೌ ಭಕ್ತರಿರಾ, ಎಲ್ಲಿದೀರ್ರೋ ನೀವು ? ಬೇಗ ಬನ್ರೋ ! ನಿಮ್ಮನ್ನು ಕಾಣದೆ ನನ್ನ ಪ್ರಾಣ ಇನ್ನೇನು ಹೋಗುವುದರಲ್ಲಿದೆ. " ಭಗವತಿ ನನಗೆ ಹೇಳಿದಳು: " ಭಕ್ತರು ಬಂದೇ ಬರುತ್ತಾರೆ. " ಈಗ ನೋಡು ಎಲ್ಲವೂ ಸತ್ಯವಾಗುತ್ತಿದೆ. '

" ಅದಕ್ಕೆ ನಾನು ಬೇರೆ ಯಾವ ಉತ್ತರವನ್ನು ತಾನೆ ಕೊಡಲಿ ? ಸುಮ್ಮನೆ ಇದ್ದುಬಿಟ್ಟೆ.

" ಒಂದು ದಿನ ಕೊಠಡಿಯ ಬಾಗಿಲು ಕಿಟಕಿಗಳನ್ನೆಲ್ಲಾ ಮುಚ್ಚಿ

ದೇವೇಂದ್ರಬಾಬು ಮತ್ತು ಗಿರೀಶಬಾಬುವಿಗೆ ನನ್ನ ಸಂಬಂಧವಾಗಿ ಹೇಳಿದರು: 'ಈತ ಯಾರು ಎಂಬುದನ್ನು ನಾನು ಈತನಿಗೆ ತಿಳಿಸಿಬಿಟ್ಟದ್ದೇ ಆದರೆ, ಬಳಿಕ ಈತ ತನ್ನ ಶರೀರವನ್ನು ಬದುಕಿಸಿ ಇಟ್ಟುಕೊಳ್ಳುವುದಿಲ್ಲ.' ''

ಮಾಸ್ಟರ್: ''ಹೌದು ಅದನ್ನು ಕೇಳಿದೇವೆ. ನಮ್ಮ ಎದುರಿಗೇ ಅನೇಕ ವೇಳೆ ಹೇಳಿದಾರೆ. ನೀನು ಕಾಶೀಪುರದಲ್ಲಿದ್ದಾಗ ನಿನಗೊಮ್ಮೆ ನಿರ್ವಿಕಲ್ಪಸಮಾಧಿಯುಂಟಾಗಿ, ಅದರಲ್ಲಿ ನೀನು ಯಾರು ಎಂಬುದನ್ನು ನೀನು ಅರಿತುಕೊಂಡುಬಿಟ್ಟೆ, ಅಲ್ಲವೆ?''

ನರೇಂದ್ರ: ''ಹೌದು, ಆ ಅವಸ್ಥೆಯಲ್ಲಿ ನನಗೆ ಶರೀರವೇ ಇಲ್ಲದಿರೋ ಹಾಗೆ ಅನುಭವವಾಗಿ ಕೇವಲ ನನ್ನ ಮುಖ ಮಾತ್ರ ಕಾಣಿಸಿಕೊಳ್ಳಲಾರಂಭಿಸಿತು. ಪರಮಹಂಸರು ಮೇಲಿನ ಅಂತಸ್ತಿನಲ್ಲಿದ್ದರು. ನೆಲ ಅಂತಸ್ತಿನಲ್ಲಿ ನನಗೀ ಅನುಭವ. ಆಗ ನಾನು ಸುಮ್ಮನೆ ಅಳಲಾರಂಭಿಸಿದೆ. ಕೂಗಲಾರಂಭಿಸಿದೆ: 'ನನಗೇನು ಆಗಿಬಿಟ್ಟದೆ?' ಹಿರಿಯ ಗೋಪಾಲ ಮೇಲಕ್ಕೆ ಹೋಗಿ ಪರಮಹಂಸರಿಗೆ ತಿಳಿಸಿದ: 'ನರೇಂದ್ರ ಅಳುತ್ತಿದಾನೆ.'

''ನಾನು ಮೇಲಕ್ಕೆ ಹೋಗಿ ಅವರನ್ನು ನೋಡಿದಾಗ ಅವರು ಹೇಳಿದರು: 'ಈಗ ನೀನು ಅರಿತುಕೊಂಡಿದೀಯೆ. ಆದರೆ ಬೀಗದಕೈ ನನ್ನ ಹತ್ತಿರವೇ ಉಳಿದಿರುತ್ತದೆ.'

''ನಾನು ಅವರನ್ನು ಕೇಳಿದೆ: 'ನನಗೇನಾಗಿಬಿಟ್ಟತ್ತು?'

''ಭಕ್ತನ ಕಡೆ ತಿರುಗಿ ಅವರು ಹೇಳಿದರು: 'ಈತ ತಾನು ಯಾರು ಎಂಬುದನ್ನು ಅರಿತುಕೊಂಡುಬಿಟ್ಟರೆ, ಬಳಿಕ ತನ್ನ ದೇಹವನ್ನು ಇಟ್ಟುಕೊಂಡಿರೋದಿಲ್ಲ. ಅದಕ್ಕಾಗಿ ನಾನು ಈತನಿಗೆ ಗೊತ್ತಾಗದ ಹಾಗೆ ಮಾಡಿಬಿಟ್ಟದೇನೆ.'

''ಒಂದು ದಿನ ಹೇಳಿದರು: 'ನೀನು ಇಚ್ಛೆಪಟ್ಟರೆ ನೀನು ನಿನ್ನ ಹೃದಯಮಧ್ಯದಲ್ಲಿ ಶ್ರೀಕೃಷ್ಣನನ್ನು ನೋಡಬಹುದು.' ನಾನು ಹೇಳಿದೆ: 'ನನಗೆ ಕೃಷ್ಣ-ಗಿಷ್ಣರಾರಲ್ಲೂ ನಂಬಿಕೆಯೇ ಇಲ್ಲ!' (ಮಾಸ್ಟರ್ ಮತ್ತು ನರೇಂದ್ರ ಇಬ್ಬರೂ ನಗುತ್ತಿದಾರೆ.)

''ಒಮ್ಮೊಮ್ಮೆ ನನಗೆ ಒಂದು ಅಸಾಧಾರಣ ಅನುಭವ ಆಗುತ್ತಿದೆ. ಕೆಲವು ಸ್ಥಳಗಳು, ಕೆಲವು ವಸ್ತುಗಳು, ಕೆಲವು ಮನುಷ್ಯರು ನನ್ನ ಕಣ್ಣಿಗೆ ಬಿದ್ದಾಗ ನನಗೆ ಅನಿಸುತ್ತದೆ, ನಾನಾಗಲೇ ಇವನ್ನು ನನ್ನ ಹಿಂದಿನ

ಜನ್ಮದಲ್ಲಿ ನೋಡಿದೇನಲ್ಲ ಅಂತ. ಅವೆಲ್ಲಾ ನನಗೆ ಗೊತ್ತಿದ್ದ ವಸ್ತು ಗಳಾಗಿಯೇ ಕಾಣಬರುತ್ತವೆ. ನಾನು ಒಂದು ದಿನ ಆಮ್‌ಹರ್ಸ್ಟ್ ಬೀದಿಯಲ್ಲಿರೋ ಶರಚ್ಚಂದ್ರನ ಮನೆಗೆ ಹೋಗಿದ್ದೆ. ಮನೆಗೆ ಕಾಲಿ ಟ್ಟೊಡನೆಯೆ ಆತನಿಗೆ ಹೇಳಿದೆ : 'ಏನಿದು, ಈ ಮನೆ ನನಗಾಗಲೆ ಪರಿಚಯ ವಿದ್ದಹಾಗೆ ಇದೆಯಲ್ಲ! ಒಳಗಿರೋ ಮಾರ್ಗಗಳು ಕೊಠಡಿಗಳು ಎಲ್ಲಾ ತಿಳಿದಿರೋ ಹಾಗೇ ಇವೆಯಲ್ಲ!'

"ನಾನು ನನ್ನ ಇಚ್ಛಾನುಸಾರವಾಗಿಯೇ ಎಲ್ಲಾ ಕೆಲಸ ಕಾರ್ಯ ಗಳನ್ನು ಮಾಡುತ್ತಿದ್ದೆ. ಅದಕ್ಕೆ ಅವರು ಏನೂ ಹೇಳುತ್ತಿರಲಿಲ್ಲ. ನಾನು ಸಾಧಾರಣ ಬ್ರಾಹ್ಮಸಮಾಜದ ಸದಸ್ಯನಾಗಿದ್ದುದು ನಿಮಗೆ ಜ್ಞಾಪಕದಲ್ಲಿರ ಬೇಕು, ಇಲ್ಲವೆ?"

ಮಾಸ್ಟರ್ : "ಹೌದು, ಜ್ಞಾಪಕದಲ್ಲಿದೆ."

ನರೇಂದ್ರ : "ಹೆಂಗಸರೂ ಅಲ್ಲಿಗೆ ಹೋಗುತ್ತಾರೆ ಎಂಬುದು ಅವ ರಿಗೆ ಗೊತ್ತಿತ್ತು. ಹೆಂಗಸಿನ ಬಳಿಯಲ್ಲಿ ಕುಳಿತು ಭಗವಚ್ಚಿಂತನೆ ಮಾಡ ಲಾಗೋದಿಲ್ಲ; ಅದಕ್ಕಾಗಿ ಅವರು ಬ್ರಾಹ್ಮಸಮಾಜದ ಧ್ಯಾನದ ವ್ಯವಸ್ಥೆ ಯನ್ನು ಅವರು ಹೀಯಾಳಿಸುತ್ತಿದ್ದರು. ಆದರೂ ಅವರು ನನಗೇನನ್ನೂ ಹೇಳುತ್ತಿರಲಿಲ್ಲ. ಆದರೆ ಒಂದು ದಿನ ಹೇಳಿದರು : 'ನೀನು ಬ್ರಾಹ್ಮ ಸಮಾಜಕ್ಕೆ ಸದಸ್ಯನಾಗಿರೋದನ್ನು ರಾಖಾಲನಿಗೆ ತಿಳಿಸಬೇಡ. ಅದು ಗೊತ್ತಾದರೆ ಆತನೂ ಸದಸ್ಯನಾಗಲು ಇಚ್ಛಿಸಬಹುದು.'"

ಮಾಸ್ಟರ್ : "ನಿನ್ನ ಮನಸ್ಸು ಬಹಳ ಬಲವಾದ್ದು. ಅದಕ್ಕಾಗಿ ಅವರು ನೀನು ಅಲ್ಲಿಗೆ ಹೋಗುತ್ತಿದ್ದುದಕ್ಕೆ ಯಾವ ಅಡ್ಡಿಯನ್ನೂ ತರ ಲಿಲ್ಲ."

ನರೇಂದ್ರ : "ನಾನು ಬಹಳವಾಗಿ ದುಃಖ, ಕಷ್ಟ ಇವನ್ನು ಅನು ಭವಿಸಿದನಂತರ ನನಗೀ ಮಾನಸಿಕ ಅವಸ್ಥೆ ಬಂದಿದೆ. ನೋಡಿ, ನೀವು ಅಂಥ ದುಃಖ, ಕಷ್ಟ ಯಾವುದಕ್ಕೂ ಒಳಗಾಗಲಿಲ್ಲ. ದುಃಖ, ಕಷ್ಟ ಇವುಗಳಿಗೆ ಒಳಗಾಗದಿದ್ದರೆ, ಭಗವಂತನಲ್ಲಿ ಆತ್ಮಸಮರ್ಪಣೆ ಮಾಡಿಕೊಳ್ಳ ಬೇಕೆಂಬ ಬುದ್ಧಿ ಬರೋದಿಲ್ಲ ಎಂಬುದು ಈಗ ನನ್ನ ಅನುಭವಕ್ಕೆ ಬರುತ್ತಿದೆ.

"ಒಳ್ಳೆಯದು, ** ಬಹಳ ನಮ್ರ ಸ್ವಭಾವಿ, ನಿರಹಂಕಾರಿ! ಎಂಥಾ ವಿನಯಿ! ವಿನಯಿ ಆಗೋದು ಹೇಗೆ ಎಂಬುದನ್ನು ನನಗೆ ತಿಳಿಸ ಬಲ್ಲಿರಾ?"

ಮಾಸ್ಟರ್: "ಪರಮಹಂಸರು ಒಮ್ಮೆ ನಿನ್ನ ಅಹಂಕಾರದ ಮಾತೆತ್ತಿ ಹೇಳಿದರು: 'ಅದು ಯಾರ "ಅಹಂ"?'"

ನರೇಂದ್ರ: "ಅದರ ಅರ್ಥ?"

ಮಾಸ್ಟರ್: "ಒಬ್ಬ ಸಖಿ ರಾಧೆಗೆ ಹೇಳಿದಳು: 'ನಿನಗೆ ಅಹಂಕಾರ ಬಂದುಬಿಟ್ಟದೆ. ಅದಕ್ಕಾಗೇ ನೀನು ಶ್ರೀಕೃಷ್ಣನಿಗೆ ಅಪಮಾನ ಮಾಡಿದ್ದು.' ಅದಕ್ಕೆ ಇನ್ನೊಬ್ಬ ಸಖಿ ಉತ್ತರವಿತ್ತಳು: 'ಹೌದು, ರಾಧೆಗೆ ಅಹಂಕಾರ ಬಂದುಬಿಟ್ಟಿರುವುದೇನೊ ನಿಜ. ಆದರೆ ಆ "ಅಹಂ" ಯಾರದು?' ಆಕೆಯ ಉತ್ತರದ ಅರ್ಥ, ರಾಧೆಗೆ ಬಂದಿರೋದು ಶ್ರೀಕೃಷ್ಣನೇ ತನ್ನ ಪತಿ ಎಂಬ ಅಹಂಕಾರ. ಅದನ್ನು ಆತನೇ ಆಕೆಯಲ್ಲಿ ಇಟ್ಟಿದ್ದಾನೆ.

"ಪರಮಹಂಸರು ಹೇಳಿದ್ದರ ಅರ್ಥ, ಭಗವಂತ ನಿನ್ನ ಮೂಲಕ ತನ್ನ ಅನೇಕ ಕೆಲಸಗಳನ್ನು ಮಾಡಿಸಿಕೊಳ್ಳಲೋಸುಗ ಈ 'ಅಹಂ' ಅನ್ನು ನಿನ್ನಲ್ಲಿ ಇಟ್ಟಿದಾನೆ ಎಂಬುದಾಗಿ."

ನರೇಂದ್ರ: "ನನ್ನ ಅಹಂಕಾರ ಡಂಗುರಹೊಡೆದು ಎಲ್ಲರಿಗೂ ಹೇಳುತ್ತಿದೆ ನನಗೇನೂ ದುಃಖವಿಲ್ಲ ಅಂತ."

ಮಾಸ್ಟರ್ ನಗುತ್ತ: "ಇಚ್ಛೆಯಿದ್ದರೆ ಹಾಗೆ ಡಂಗುರಹೊಡೆದು ನೋಡು." (ಇಬ್ಬರೂ ನಗುತ್ತಿದಾರೆ.)

ಈಗ ಉಳಿದ ಭಕ್ತರ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ನರೇಂದ್ರ: "ಅವರು ವಿಜಯಕೃಷ್ಣಗೋಸ್ವಾಮಿಯ ಸಂಬಂಧವಾಗಿ ಹೇಳಿದರು: 'ಆತ ಬಾಗಿಲ ಹತ್ತಿರ ನಿಂತು ಕದ ತಟ್ಟುತ್ತಿದಾನೆ.'"

ಮಾಸ್ಟರ್: "ಅಂದರೆ, ಆತ ಇನ್ನೂ ಒಳಕ್ಕೆ ಪ್ರವೇಶ ಮಾಡಿಲ್ಲ ಅಂತ ಅರ್ಥ. ಆದರೆ ಆತ ಶ್ಯಾಮಪುಕುರದ ಮನೆಯಲ್ಲಿ ಪರಮಹಂಸರಿಗೆ ಹೇಳಿದ: 'ನಾನು ನಿಮ್ಮ ಈ ಆಕಾರವನ್ನೇ, ಈ ಸ್ಥೂಲ ಶರೀರವನ್ನೇ ಢಾಕಾದಲ್ಲಿ ನೋಡಿದೇನೆ.' ಅಂದು ನೀನೂ ಅಲ್ಲೇ ಇದ್ದೆಯಲ್ಲ."

ನರೇಂದ್ರ: "ದೇವೇಂದ್ರಬಾಬು, ರಾಮಬಾಬು ಇವರಿಗೆ ಸಂಸಾರವನ್ನು ತ್ಯಜಿಸಿಬಿಡಬೇಕೆಂಬ ಇಚ್ಛೆ ಇದೆ. ಅದಕ್ಕಾಗಿ ಅವರು ಬಹಳವಾಗಿ ಪ್ರಯತ್ನಮಾಡುತ್ತಿದಾರೆ. ರಾಮಬಾಬು ರಹಸ್ಯವಾಗಿ ನನಗೆ ಹೇಳಿದ, ಎರಡು ವರ್ಷಗಳಾದ ಮೇಲೆ ತಾನು ಸಂಸಾರವನ್ನು ತ್ಯಜಿಸಿಬಿಡುವುದಾಗಿ."

ಮಾಸ್ಟರ್: "ಎರಡು ವರ್ಷಗಳಾದ ಮೇಲೆಯೆ? ಮಕ್ಕಳು ಮರಿಗಳಿಗೆ ಸುವ್ಯವಸ್ಥೆ ಮಾಡಿಯಾದ ಮೇಲೆ ಅಂತ ಕಾಣುತ್ತೆ?"

ನರೇಂದ್ರ: "ಅದೂ ಅಲ್ಲದೆ, ತನ್ನ ಈಗಿನ ಮನೆಯನ್ನು ಬಾಡಿಗೆಗೆ ಕೊಟ್ಟುಬಿಟ್ಟು ಇನ್ನೊಂದು ಚಿಕ್ಕ ಮನೆಯನ್ನು ಕೊಂಡುಕೊಳ್ಳುತ್ತಾನಂತೆ. ಆತನ ಹೆಣ್ಣುಮಕ್ಕಳ ವಿವಾಹವನ್ನು ಆತನ ಬಂಧುಬಾಂಧವರು ನೋಡಿಕೊಳ್ಳುತ್ತಾರಂತೆ."

ಮಾಸ್ಟರ್: "ಗೋಪಾಲ ಈಗ ಒಳ್ಳೆ ಉಚ್ಚ ಮಾನಸಿಕ ಅವಸ್ಥೆಯಲ್ಲಿ ಇದಾನೆ, ಅಲ್ಲವೆ?"

ನರೇಂದ್ರ: "ಎಲ್ಲಿ?"

ಮಾಸ್ಟರ್: "ಎಷ್ಟೊಂದು ಭಾವ! ಕೇವಲ ಭಗವನ್ನಾಮೋಚ್ಚಾರಣೆಯಿಂದಲೇ ಎಷ್ಟೊಂದು ಪ್ರೇಮಾಶ್ರು ಮತ್ತು ರೋಮಾಂಚ!"

ನರೇಂದ್ರ: "ಕೇವಲ ಭಾವವೇ ಆಧ್ಯಾತ್ಮಿಕ ಉನ್ನತಿಯನ್ನು ತಂದುಬಿಡುವುದೆ? ಕಾಳೀಪ್ರಸಾದ, ಶರಚ್ಚಂದ್ರ, ಶಶಿ, ಶಾರದಾಪ್ರಸನ್ನ ಇವರು ಗೋಪಾಲನಿಗಿಂತ ಎಷ್ಟೋ ಮುಂದುವರಿದಿದಾರೆ. ಇವರ ತ್ಯಾಗ ಎಷ್ಟು ಮಹತ್ತಾದುದು! ಗೋಪಾಲನೆಲ್ಲಿ ಪರಮಹಂಸರನ್ನು ಸ್ವೀಕರಿಸಿದಾನೆ?"

ಮಾಸ್ಟರ್: "ಅವನು ಇಲ್ಲಿಗೆ ಸೇರಿದವನಲ್ಲ ಅಂತ ಪರಮಹಂಸರು ಹೇಳುತ್ತಿದ್ದುದೇನೊ ನಿಜ. ಆದರೆ ಆತ ಪರಮಹಂಸರನ್ನು ಬಹಳವಾಗಿ ಗೌರವಿಸುತ್ತಿದ್ದುದನ್ನು ನಾನು ನೋಡಿದೇನೆ."

ನರೇಂದ್ರ: "ಏನಪ್ಪ ಅದು ನೀವು ನೋಡಿರೋದು?"

ಮಾಸ್ಟರ್: "ಮೊದಲು ಮೊದಲು ನಾನು ದಕ್ಷಿಣೇಶ್ವರಕ್ಕೆ ಹೋಗುತ್ತಿದ್ದಾಗ, ಒಂದು ದಿನ ಪರಮಹಂಸರ ಕೊಠಡಿಯಲ್ಲಿ ಮಾತುಕತೆ ಮುಗಿದ ನಂತರ ಭಕ್ತರೆಲ್ಲರೂ ಹೊರಕ್ಕೆ ಎದ್ದು ಬರುತ್ತಿದ್ದರು. ನಾನು ಹೊರಕ್ಕೆ ಬಂದಾಗ ಗೋಪಾಲ ಫುಟ್‌ಪಾತಿನಲ್ಲಿ ಪರಮಹಂಸರೆದುರಿಗೆ ಮಂಡಿಯೂರಿ ಕೈಮುಗಿದು ನಿಂತಿರುವುದನ್ನು ಕಂಡೆ. ಚಂದ್ರ ನಡುನೆತ್ತಿಯಲ್ಲಿ ಚೆನ್ನಾಗಿ ಬೆಳಗುತ್ತಿದ್ದ. ಇದು ನಡೆದದ್ದು ಪರಮಹಂಸರ ಕೊಠಡಿಯ ಆ ಉದ್ದವಾದ ವರಾಂಡದಲ್ಲಿರೋ ಕೆಂಪು ಇಟ್ಟಿಗೆ ಚೂರುಗಳಿಂದ ನಿರ್ಮಿತವಾದ ಫುಟ್‌ಪಾತಿನಲ್ಲಿ. ಅಲ್ಲಿ ಬೇರೆ ಯಾರೂ ಇರಲಿಲ್ಲ. ಗೋಪಾಲ ಪರಮ

ಹಂಸರಿಗೆ ಶರಣಾಗತನಾಗಿರುವಂತೆಯೂ, ಅವರು ಅವನಿಗೆ ಅಭಯವನ್ನು ನೀಡುತ್ತಿರುವಂತೆಯೂ ಕಂಡಿತು.''

ನರೇಂದ್ರ: ''ನಾನು ಅದನ್ನು ನೋಡಲಿಲ್ಲ.''

ಮಾಸ್ಟರ್: ''ಇದೂ ಅಲ್ಲದೆ ಪರಮಹಂಸರು ಆಗಾಗ ಹೇಳುತ್ತಿದ್ದರು: 'ಗೋಪಾಲ ಪರಮಹಂಸಾವಸ್ಥೆಯಲ್ಲಿದಾನೆ.' ಆದರೆ ಅವರು ಆತನಿಗೆ ಹೆಂಗಸರೊಡನೆ ಅತಿಯಾಗಿ ಬೆರೆಯಬೇಡ ಅಂತ ಹೇಳುತ್ತಿದ್ದುದೂ ನನಗೆ ಚೆನ್ನಾಗಿ ಜ್ಞಾಪಕದಲ್ಲಿದೆ. ಆ ವಿಷಯವಾಗಿ ಅವರು ಆತನಿಗೆ ಅನೇಕ ವೇಳೆ ಎಚ್ಚರಿಕೆ ಕೊಟ್ಟಿದ್ದರು.''

ನರೇಂದ್ರ: ''ಆದರೆ ಗೋಪಾಲನ ಮಾತೆತ್ತಿ ಪರಮಹಂಸರು ನನ್ನನ್ನು ಕೇಳಿದರು: 'ಗೋಪಾಲ ನಿಜವಾಗಿಯೂ ಪರಮಹಂಸನಾಗಿದ್ದರೆ ಆತ ಹಣಕ್ಕಾಗಿ ಏಕೆ ಆಸೆಪಡುತ್ತಾ ಇದಾನೆ?' ಮತ್ತೆ ಹೇಳಿದರು: 'ಆತ ಈ ಸ್ಥಳಕ್ಕೆ ಸೇರಿದವನಲ್ಲ. ನನಗೆ ಸೇರಿದವರು ಇಲ್ಲಿಗೆ ಸರ್ವದಾ ಬರುತ್ತಾರೆ.' ಟಿ— ತಮ್ಮನ್ನು ಆಗಾಗ ಬಂದುಕಾಣದೆ, ಗೋಪಾಲನೊಡನೇ ಇರುತ್ತಿದ್ದುದನ್ನು ನೋಡಿ ಪರಮಹಂಸರು ಆತನ ಮೇಲೆ ಕೋಪಿಸಿಕೊಳ್ಳುತ್ತಿದ್ದರು. ಪರಮಹಂಸರು ನನಗೆ ಒಮ್ಮೆ ಹೇಳಿದರು: 'ಗೋಪಾಲನೇನೊ ಸಿದ್ಧ—ಹಠಾತ್ ಸಿದ್ಧ. ಆದರೆ ಆತ ಇಲ್ಲಿಗೆ ಸೇರಿದವನಲ್ಲ. ಆತನೇನಾದರು ಇಲ್ಲಿಗೆ ಸೇರಿದವನಾಗಿದ್ದರೆ, ಆತನನ್ನು ನೋಡಬೇಕೆಂದು ನಾನು ಅಳಲಿಲ್ಲವಲ್ಲ ಏಕೆ ಮತ್ತೆ?'

''ಕೆಲಕೆಲವರು, ಗೋಪಾಲ ನಿತ್ಯಾನಂದನ ಅವತಾರ ಅಂತ ಸಾರುತ್ತಿದಾರೆ. ಆದರೆ ಪರಮಹಂಸರೇ ನನಗೆ ಎಷ್ಟೊಂದು ಸಾರಿ ಹೇಳಿದಾರೆ ಏನು ಕತೆ! ಅವರು ಹೇಳಿದಾರೆ: 'ನಾನೇ ಅದ್ವೈತ-ಚೈತನ್ಯ-ನಿತ್ಯಾನಂದ. ಇವರು ಮೂವರೂ ನನ್ನಲ್ಲಿ ವ್ಯಕ್ತವಾಗಿದಾರೆ.' ''

೮ನೆ ಏಪ್ರಿಲ್ ೧೮೮೭, ಶುಕ್ರವಾರ.

ಮಾಸ್ಟರ್ ಪ್ರಾತಃಕಾಲ ಎಂಟು ಘಂಟೆ ಸಮಯಕ್ಕೆ ಸರಿಯಾಗಿ ವರಾಹನಗರದ ಮಠಕ್ಕೆ ಬಂದು ನೋಡಿದಾಗ ಒಂದು ಕೊಠಡಿಯಲ್ಲಿ ಒಬ್ಬ ಸನ್ಯಾಸಿ ಒಬ್ಬ ಗೃಹಸ್ಥ ಭಕ್ತನೊಡನೆ ಮಾತುಕತೆಯಾಡುತ್ತಿದ್ದುದು ಆತನ ಕಣ್ಣಿಗೆ ಬಿತ್ತು. ಅವರಿಬ್ಬರಿಗೂ ಒಂದೇ ವಯಸ್ಸು — ಇಪ್ಪತ್ತು ನಾಲ್ಕೊ ಅಥವಾ ಇಪ್ಪತ್ತು ಐದೊ. ಈ ಸಲ ಮಾಸ್ಟರ್ ಮಠದಲ್ಲಿ ಮೂರು ದಿನಗಳನ್ನು ಕಳೆಯಲು ಸಂಕಲ್ಪಿಸಿದಾನೆ. ಆತ ನೇರವಾಗಿ

ಡೇವರ ಮನೆಗೆ ಹೋಗಿ ಪರಮಹಂಸರ ಭಾವಚಿತ್ರಕ್ಕೆ ಪ್ರಣಾಮಮಾಡಿದ. ಬಳಿಕ ನರೇಂದ್ರ, ರಾಖಾಲ ಇವರೇ ಮೊದಲಾದ ಸೋದರ ಸನ್ಯಾಸಿಗಳನ್ನೆಲ್ಲಾ ಸಂಧಿಸಿ, ಕೊನೆಗೆ ಆ ಇಬ್ಬರು ಭಕ್ತರು ಮಾತುಕತೆಯಾಡುತ್ತಿದ್ದ ಕೊಠಡಿಗೆ ಬಂದು ಒಂದು ಕಡೆ ಕುಳಿತುಕೊಂಡ. ಗೃಹಸ್ಥ ಭಕ್ತನಿಗೆ ಸಂಸಾರವನ್ನು ತ್ಯಜಿಸಬೇಕೆಂಬ ಇಚ್ಛೆ. ಆತ ಹಾಗೆ ಮಾಡದೆ ಇರುವಂತೆ ಸನ್ಯಾಸಿ ಆತನಿಗೆ ಬುದ್ಧಿವಾದವೀಯುತ್ತಿದಾನೆ.

ಸನ್ಯಾಸಿ: "ಈಗ ಮಾಡಬೇಕಾಗಿ ಉಳಿದುಕೊಂಡಿರೋ ಕೆಲವು ಕರ್ಮಗಳನ್ನು ಮಾಡಿ ಮುಗಿಸಿಬಿಡಿ. ಇನ್ನೂ ಸ್ವಲ್ಪ ಪ್ರಯತ್ನಪಟ್ಟರೆ ಅವೆಲ್ಲಾ ಮುಗಿದುಹೋಗಿಬಿಡುತ್ತವೆ.

"ಒಬ್ಬನಿಗೆ ಗೊತ್ತಾಯಿತು ತನಗೆ ನರಕಪ್ರಾಪ್ತಿಯಾಗುವುದೆಂದು. ಆತ ತನ್ನ ಒಬ್ಬ ಸ್ನೇಹಿತನನ್ನು ಕೇಳಿದ: 'ನರಕ ಹೇಗಿದೆ?' ಸ್ನೇಹಿತ ಸೀಮೆ-ಸುಣ್ಣ ತೆಗೆದುಕೊಂಡು ನೆಲದ ಮೇಲೆ ನರಕದ ನಕ್ಷೆಯನ್ನು ಬರೆಯಲಾರಂಭಿಸಿದ. ಆತ ಆ ನಕ್ಷೆಯನ್ನು ಪೂರ್ಣಮಾಡುವುದೆ ತಡ ನರಕಪ್ರಾಪ್ತಿಯನ್ನು ಹೊಂದಬೇಕಾದವ ಅದರ ಮೇಲೆ ಬಿದ್ದು ಹೊರಳಾಡಲಾರಂಭಿಸಿದ. ಬಳಿಕ ಹೇಳಿದ: 'ಈಗ ನನಗೆ ನರಕಪ್ರಾಪ್ತಿ ಆಗಿಹೋಗಿಬಿಟ್ಟಿತು!'"

ಗೃಹಸ್ಥ: "ನನಗೆ ಸಂಸಾರ ರುಚಿಸುತ್ತಿಲ್ಲ. ಆಹ, ನೀವೆಲ್ಲರೂ ಎಷ್ಟು ಆನಂದದಿಂದ ಇದೀರಿ!"

ಸನ್ಯಾಸಿ: "ಹಾಗೆಂದೇಕೆ ಸುಮ್ಮನೆ ಒರಲುತ್ತಾ ಇದೀಯೆ? ನಿಜವಾಗಿ ಇಚ್ಛೆ ಇದ್ದರೆ ಏಕೆ ತ್ಯಜಿಸಿಬಿಡಬಾರದು? ಆದರೆ ಮತ್ತೆ ನಾನು ನಿನಗೆ ಒತ್ತಿ ಹೇಳುತ್ತೇನೆ, ಇನ್ನೇನು ಭೋಗಾಸಕ್ತಿ ಉಳಿದುಕೊಂಡಿವೆಯೊ ಅವನ್ನೆಲ್ಲ ಏಕೆ ಹಿಡಿದ ಕೈಯಲ್ಲೇ ಮುಗಿಸಿಕೊಂಡುಬಿಡಬಾರದು?"

ಶಶಿ ಒಂಬತ್ತು ಘಂಟೆಗೆ ದೇವಾಲಯಕ್ಕೆ ಹೋಗಿ ನಿತ್ಯಪೂಜೆಯನ್ನು ಮಾಡಿ ಮುಗಿಸಿದ. ಈಗ ಘಂಟೆ ಹನ್ನೊಂದು. ಮಠದ ಸೋದರರೆಲ್ಲರೂ ಗಂಗಾಸ್ನಾನ ಮಾಡಿ ಹಿಂದಿರುಗಿ ಬಂದಿದಾರೆ. ಎಲ್ಲರೂ ಮಡಿ ವಸ್ತ್ರಗಳನ್ನು ಉಟ್ಟು, ದೇವಾಲಯಕ್ಕೆ ಹೋಗಿ ಗುರುಮಹಾರಾಜರಿಗೆ (ಪರಮಹಂಸರಿಗೆ) ನಮಸ್ಕಾರಮಾಡಿದನಂತರ ಧ್ಯಾನದಲ್ಲಿ ಕುಳಿತುಕೊಂಡಿದಾರೆ.

ನೈವೇದ್ಯವನ್ನು ದೇವರಿಗೆ ಅರ್ಪಿಸಿದನಂತರ ಸೋದರರೆಲ್ಲರೂ ಮಾಸ್ಟರೊಡನೆ ಕುಳಿತು ಪ್ರಸಾದವನ್ನು ಸ್ವೀಕರಿಸಿದರು.

ಸಾಯಂಕಾಲವಾಗಿದೆ. ದೇವರ ಮನೆಗೆ ದೀಪ ಹಚ್ಚಿ ಧೂಪವನ್ನು ಹಾಕಲಾಯಿತು. ಈಗ ಮಂಗಳಾರತಿ ಮುಗಿಯಿತು. ರಾಖಾಲ, ಶಶಿ, ಹಿರಿಯ ಗೋಪಾಲ, ಹರೀಶ ಇವರು ದೊಡ್ಡ ಅಂಗಳದಲ್ಲಿ ಕುಳಿತಿದಾರೆ. ರಾಖಾಲ ಈಗ ಒಬ್ಬ ಸಹೋದರನಿಗೆ ಗುರುಮಹಾರಾಜರಿಗೆ ಅರ್ಪಿಸೋ ನೈವೇದ್ಯದ ಸಂಬಂಧವಾಗಿ ಎಚ್ಚರಿಕೆ ಕೊಡುತ್ತಿದಾನೆ.

ರಾಖಾಲ ಶಶಿ ಮೊದಲಾದವರಿಗೆ: "ಒಂದು ದಿನ ಅವರು ಉಪಾಹಾರ ತೆಗೆದುಕೊಳ್ಳೋ ಮುನ್ನವೇ, ಅವರಿಗಾಗಿ ಇಟ್ಟಿದ್ದುದರಲ್ಲಿ ನಾನು ಸ್ವಲ್ಪವನ್ನು ತೆಗೆದುಕೊಂಡು ತಿಂದುಬಿಟ್ಟೆ. ಅವರು ಹೇಳಿದರು: 'ನಾನು ನಿನ್ನಮುಖದ ಕಡೆ ನೋಡಲಾಗುತ್ತಿಲ್ಲವಲ್ಲ, ಹಾಗೇಕೆ ಮಾಡಿದೆ?' ನಾನು ಅಳಲಾರಂಭಿಸಿದೆ."

ಹಿರಿಯ ಗೋಪಾಲ: "ಒಂದು ದಿನ ನಾನು ಕಾಶೀಪುರದಲ್ಲಿ ಅವರ ಆಹಾರದ ಮೇಲೆ ಗಟ್ಟಿಯಾಗಿ ಉಸಿರು ಬಿಟ್ಟುಬಿಟ್ಟೆ. ಅದಕ್ಕೆ ಅವರು ಹೇಳಿದರು: 'ಅದನ್ನು ಹಿಂದಕ್ಕೆ ತೆಗೆದುಕೊಂಡು ಹೋಗಿಬಿಡು.'"

ಮಾಸ್ಟರ್ ಮತ್ತು ನರೇಂದ್ರ ಪರಾಂಡದಲ್ಲಿ ಸುಮ್ಮನೆ ಅಡ್ಡಾಡುತ್ತ ತಮ್ಮ ಹಿಂದಿನ ದಿನಗಳನ್ನು ಜ್ಞಾಪಕಮಾಡಿಕೊಳ್ಳುತ್ತಿದಾರೆ.

ನರೇಂದ್ರ: "ನನಗೆ ಯಾವುದರಲ್ಲೂ ವಿಶ್ವಾಸವಿರಲಿಲ್ಲ."

ಮಾಸ್ಟರ್: "ಏನು, ಭಗವಂತನ ರೂಪ-ಗೀಪದ ಸಂಬಂಧವಾಗಿಯೋ?"

ನರೇಂದ್ರ: "ಮೊದಲು ಮೊದಲು ಪರಮಹಂಸರು ಹೇಳುತ್ತಿದ್ದುದರ ಬಹು ಭಾಗವನ್ನು ನಾನು ಒಪ್ಪಿಕೊಳ್ಳುತ್ತಿರಲಿಲ್ಲ. ಒಂದು ದಿನ ಅವರು ನನ್ನನ್ನು ಕೇಳಿದರು: 'ಹಾಗಾದರೆ, ನೀನು ಏಕೆ ಇಲ್ಲಿಗೆ ಬರುತ್ತಾ ಇದೀಯೆ?' ನಾನು ಹೇಳಿದೆ: 'ನಾನು ಬರುತ್ತಾ ಇರೋದು ನಿಮ್ಮನ್ನು ನೋಡಲು ವಿನಾ ನಿಮ್ಮ ಮಾತು ಕೇಳೋಕಲ್ಲ.'"

ಮಾಸ್ಟರ್: "ಅದಕ್ಕೆ ಅವರು ಏನು ಹೇಳಿದರು?"

ನರೇಂದ್ರ: "ಅವರಿಗೆ ಬಹಳ ಆನಂದವಾಗಿಬಿಟ್ಟಿತು."

೯ನೆ ಏಪ್ರಿಲ್ ೧೮೮೭, ಶನಿವಾರ.

ಮಧ್ಯಾಹ್ನದ ಊಟವಾದನಂತರ ಮಠದ ಸೋದರರೆಲ್ಲರೂ ವಿಶ್ರಮಿಸಿ

ಕೊಳ್ಳುತ್ತಿದ್ದಾರೆ. ನರೇಂದ್ರ ಮತ್ತು ಮಾಸ್ಟರ್ ಮಠದ ಪಶ್ಚಿಮ ಭಾಗದ ತೋಟದಲ್ಲಿ ಒಂದು ಮರದ ಕೆಳಗೆ ಕುಳಿತುಕೊಂಡಿದ್ದಾರೆ. ಅದು ನಿರ್ಜನ ಸ್ಥಳ. ಬೇರೆ ಯಾರೂ ಅಲ್ಲಿ ಇಲ್ಲ. ತಾನು ಪರಮಹಂಸರನ್ನು ಸಂಧಿಸಿದ ನಂತರ ನಡೆದ ಕೆಲವು ಘಟನೆಗಳನ್ನು ನರೇಂದ್ರ ಮಾಸ್ಟರಿಗೆ ಹೇಳಿಕೊಳ್ಳುತ್ತಿದ್ದಾನೆ. ನರೇಂದ್ರನಿಗೆ ಇಪ್ಪತ್ತುನಾಲ್ಕು ಮಾಸ್ಟರಿಗೆ ಮೂವತ್ತೆರಡು ವಯಸ್ಸು.

ಮಾಸ್ಟರ್: "ನೀನು ಅವರನ್ನು ಮೊಟ್ಟಮೊದಲು ನೋಡಿದ ದಿನ ನಿನಗೆ ಚೆನ್ನಾಗಿ ಜ್ಞಾಪಕದಲ್ಲಿರಬೇಕಲ್ಲವೆ?"

ನರೇಂದ್ರ: "ಹೌದು, ಜ್ಞಾಪಕದಲ್ಲಿದೆ. ದಕ್ಷಿಣೇಶ್ವರದಲ್ಲಿ, ಅವರ ಕೊಠಡಿಯಲ್ಲಿ. ಅಂದು ನಾನು ಈ ಎರಡು ಹಾಡುಗಳನ್ನು ಹಾಡಿದೆ."

ನರೇಂದ್ರ ಅವನ್ನು ಹಾಡುತ್ತಿದ್ದಾನೆ:

ಓ ನಡೆಯೋ ಹೋಗೋಣ ನಮ್ಮ ನೆಲೆಗೆ
ಎಲ್ಲಿಂದ ಬಂದೆವೋ ಅತ್ತಕಡೆಗೆ!

ಸಂಸಾರವೆಂತೆಂಬ ಈ ವಿದೇಶದಿ ನಾವು
ವಿದೇಶ ವೇಷದಲಿ ಬರಿ ಬಯಲು ಭ್ರಾಂತಿಯಲಿ
ಅಲೆದುದಾಯ್ತು.
ಕಡೆಗೆ ಏನೂ ನಮಗೆ ದೊರೆಯದಾಯ್ತು.

ಸುತ್ತ ನಡೆಯುವ ಜಾಳು, ಈ ವಿಷಯ ಪಂಚಕವು
ಏನಾದರೂ ನಮಗೆ ಅಪರಿಚಿತವೇ!
ನಮ್ಮವರು ಇಲ್ಲಿಲ್ಲ, ನಿನ್ನ ನೀನೇ ಮರತು
ಈ ವಿದೇಶದಲಿಂತು ಅಲೆಯಬಹುದೇ?
ಸಾಕು, ನಡೆ ಹೋಗೋಣ ನಮ್ಮ ನೆಲೆಗೆ
ಎಲ್ಲಿಂದ ಬಂದೆವೋ ಅತ್ತ ಕಡೆಗೆ!

ಸತ್ಯ ಪಥವನ್ನೇರು, ನಡೆಮುಂದೆ; ಚಣಚಣವು
ಪ್ರೇಮದಲಿ ಹೃದಯವನು ದೀಪ್ತಗೊಳಿಸು.
ಲೋಭಮೋಹಗಳೆಂಬ ಚೋರರಿಗೆ ಸಿಕ್ಕದೊಲು
ಪುಣ್ಯಧನವನು ಒಳಗೆ ಭದ್ರಪಡಿಸು;
ಶಾಂತಿ-ಶಮೆಯನು ಜೊತೆಗೆ ಕಾವಲಿರಿಸು.

ನಡೆವಾಗ ಒಮ್ಮೊಮ್ಮೆ ಸಂದೇಹ ಬಂದಾಗ
ನಿನ್ನ ಪಯಣದ ಪಥದಿ ಸಾಧುಸಂಗವೆ ನಿನಗೆ
ವಿಶ್ರಾಂತಿ ಭವನ.
ಅಲ್ಲಿ ವಿರಮಿಸಿಕೊಂಡು ಪಥದ ವಿವರವ ತಿಳಿದು
ಮುಂದೆ ಸಾಗಲಿ ಮತ್ತೆ ನಿನ್ನ ಪಯಣ.

ದಾರಿಯಲಿ ನಿನಗಾವ ಆಪತ್ತು ಬಂದರೂ
ಆ ದೇವನನು ಕೂಗು; ಅವನೆ ರಾಜ!
ಮೃತ್ಯುವನೆ ಬೆದರಿಸುವುದವನ ತೇಜ!

* * *

ಇನ್ನೆಷ್ಟು ದಿನ ನಾನು ಬರಿಯ ವಿಫಲತೆಯಲ್ಲಿ
ತೊಳಲಬೇಕೋ . . . .

ಮಾಸ್ಟರ್: "ನಿನ್ನ ಹಾಡುಗಳನ್ನು ಕೇಳಿ ಏನು ಹೇಳಿದರು."

ನರೇಂದ್ರ: "ಅವರು ಭಾವಾವಿಷ್ಟರಾಗಿಬಿಟ್ಟರು. ರಾಮಬಾಬು ವನ್ನು ಕೇಳಿದರು: 'ಈ ಹುಡುಗನಾರು? ಆಹ, ಎಷ್ಟು ಚೆನ್ನಾಗಿ ಹಾಡುತ್ತಾನೆ!' ಅವರು ನನಗೆ ಮತ್ತೆ ಬರುವಂತೆ ಹೇಳಿದರು."

ಮಾಸ್ಟರ್: "ಮತ್ತೆ ನೀನು ಅವರನ್ನು ನೋಡಿದುದು ಎಲ್ಲಿ?"

ನರೇಂದ್ರ: "ರಾಜಮೋಹನನ ಮನೆಯಲ್ಲಿ. ಮೂರನೆ ಭೇಟಿ ಮತ್ತೆ ದಕ್ಷಿಣೇಶ್ವರದಲ್ಲಿ. ಮೂರನೆಯ ಸಲ ನನ್ನನ್ನು ನೋಡಿದಾಗ ಭಾವಾವಿಷ್ಟರಾಗಿ ನನ್ನನ್ನು ಸ್ತುತಿಸಲಾರಂಭಿಸಿದರು. ಸ್ತುತಿಸುತ್ತಾ ಹೇಳಿದರು: 'ಹೇ ನಾರಾಯಣ, ನೀನು ನನಗಾಗಿ ನರರೂಪವನ್ನು ಧಾರಣೆಮಾಡಿಕೊಂಡುಬಂದಿದೀಯೆ.' ಆದರೆ ನೋಡಿ, ದಯವಿಟ್ಟು ಇದನ್ನು ಯಾರಿಗೂ ತಿಳಿಸಬೇಡಿ."

ಮಾಸ್ಟರ್: "ಅವರು ಮತ್ತೇನನ್ನು ಹೇಳಿದರು?"

ನರೇಂದ್ರ: "ಅವರು ಹೇಳಿದರು: 'ನೀನು ನನಗಾಗಿ ದೇಹ ಧಾರಣೆಮಾಡಿಕೊಂಡು ಬಂದಿದೀಯೆ. ಭಗವತಿಗೆ ನಾನು ಪ್ರಾರ್ಥನೆ ಮಾಡಿದ್ದೆ: "ಹೇ ತಾಯೆ, ಕಾಮಕಾಂಚನವನ್ನು ತ್ಯಜಿಸಿದ ಶುದ್ಧ ಭಕ್ತರ ಸಹವಾಸ ದೊರೆಯದೆ ಇದ್ದರೆ ನಾನು ಈ ಧರೆಯಲ್ಲಿ ಹೇಗೆ ಬದುಕಿಕೊಂಡಿರಲಿ?"' ಬಳಿಕ ಹೇಳಿದರು: 'ನೀನು ರಾತ್ರಿ ವೇಳೆ

ಬಂದು ನನ್ನನ್ನು ಏಳಿಸಿ ಹೇಳಿದೆ: “ಇಗೋ ನೋಡಿ, ನಾನು ಬಂದಿದೇನೆ!” ’ ಆದರೆ ನನಗೆ ಇದಾವುದೂ ಗೊತ್ತಿಲ್ಲ. ನಾನು ಮಾತ್ರ ನಮ್ಮ ಕಲ್ಕತ್ತದ ಮನೆಯಲ್ಲಿ ಮಲಗಿ ಗೊರಕೆ ಹೊಡೆಯುತ್ತಿದ್ದೆ.”

ಮಾಸ್ಟರ್ : “ಹೇಗೆ ಭಗವಂತ ಸಾಕಾರನೂ ಹೌದೊ ನಿರಾಕಾರನೂ ಹೌದೊ, ಹಾಗೇ ನೀನು ನಿನ್ನ ಮನೆಯಲ್ಲಿ ಮಲಗಿಯೂ ಇದ್ದೆ ಅಲ್ಲಿಗೆ ಹೋಗಿಯೂ ಇದ್ದೆ.”

ನರೇಂದ್ರ : “ಆದರೆ ದಯವಿಟ್ಟು ಬೇರೆ ಯಾರಿಗೂ ಹೇಳಬೇಡಿ. ಕಾಶೀಪುರದಲ್ಲಿ ಅವರು ನನ್ನಲ್ಲಿ ಶಕ್ತಿಸಂಚಾರ ಮಾಡಿಬಿಟ್ಟರು.”

ಮಾಸ್ಟರ್: “ಕಾಶೀಪುರದ ತೋಟದಲ್ಲಿ ಒಂದು ಮರದ ಕೆಳಗೆ ಧುನಿ ಹೊತ್ತಿಸಿಕೊಂಡು ನೀನು ಧ್ಯಾನಮಾಡುತ್ತಿದ್ದೆಯಲ್ಲ, ಆಗೇನು?”

ನರೇಂದ್ರ: “ಹೌದು. ಒಂದು ದಿನ ನಾನು ಧ್ಯಾನಮಾಡುತ್ತಿದ್ದಾಗ ಕಾಳೀಪ್ರಸಾದನಿಗೆ ಹೇಳಿದೆ ನನ್ನ ಕೈಯನ್ನು ಹಿಡಿದುಕೊಳ್ಳುವಂತೆ. ಬಳಿಕ ಕಾಳೀಪ್ರಸಾದ ಹೇಳಿದ: ‘ನಾನು ನಿನ್ನ ಶರೀರವನ್ನು ಮುಟ್ಟಿದೊಡನೆ ವಿದ್ಯುತ್ತಿನಂಥ ಒಂದು ಷಾಕ್ ನನಗೆ ಹೊಡೆಯಿತು.’

“ಇದನ್ನು ನೀವು ಇಲ್ಲಿ ಯಾರಿಗೂ ಹೇಳಕೂಡದು. ದಯವಿಟ್ಟು ಹಾಗೆ ವಾಗ್ದಾನ ಮಾಡಿ.”

ಮಾಸ್ಟರ್ : “ನಿನ್ನಲ್ಲಿ ಅವರು ಶಕ್ತಿಸಂಚಾರ ಮಾಡಿದ್ದು ವಿಶೇಷ ಉದ್ದೇಶದಿಂದ. ನಿನ್ನ ಮೂಲಕ ಅವರು ಅನೇಕ ಕೆಲಸ ಮಾಡಿಸಬೇಕಾಗಿದೆ. ಒಂದು ದಿನ ಅವರು ಒಂದು ಚೂರು ಕಾಗದದ ಮೇಲೆ ಬರೆದು ತಿಳಿಸಿದರು : ‘ನರೇಂದ್ರ ಲೋಕಶಿಕ್ಷಣ ಮಾಡಬೇಕಾಗಿದೆ.’ ”

ನರೇಂದ್ರ: “ಆದರೆ ನಾನು ಅವರಿಗೆ ಹೇಳಿದೆ: ‘ಅದೆಲ್ಲಾ ನನ್ನ ಕೈಯಲ್ಲಿ ಸಾಧ್ಯವಿಲ್ಲ.’ ಅದಕ್ಕೆ ಅವರು ಹೇಳಿದರು: ‘ನಿನ್ನ ಮೂಳೆಗಳೇ ಆ ಕೆಲಸವನ್ನು ಮಾಡಿಬಿಡುತ್ತವೆ.’ ಶರಚ್ಚಂದ್ರನ ಯೋಗಕ್ಷೇಮವನ್ನು ನನಗೆ ಒಪ್ಪಿಸಿದಾರೆ. ಈಗ ಆತ ಭಗವಂತನಿಗಾಗಿ ಅತ್ಯಂತ ವ್ಯಾಕುಲನಾಗಿದಾನೆ. ಆತನ ಕುಂಡಲಿನಿ ಜಾಗೃತಿಗೊಂಡುಬಿಟ್ಟಿದೆ.”

ಮಾಸ್ಟರ್ : “ಈಗ ಆತ ತನ್ನಲ್ಲಿ ಕೊಳೆತುಹೋದ ಎಲೆಗಳು ಬಂದು ಶೇಖರವಾಗದ ಹಾಗೆ ನೋಡಿಕೋಬೇಕು. ಬಹುಶಃ ನಿನಗೂ ಜ್ಞಾಪಕದಲ್ಲಿರಬೇಕು ಪರಮಹಂಸರು ಹೇಳುತ್ತಿದ್ದುದು: ‘ಕೊಳಗಳಲ್ಲಿ ಮೀನು ವಿಶ್ರಮಿಸಿಕೊಳ್ಳಲು ರಂಧ್ರಗಳನ್ನು ತೋಡಿಕೊಳ್ಳುತ್ತವೆ. ಅದರಲ್ಲಿ ಕೊಳೆತ ಎಲೆ

ಗಳೇನಾದರು ಶೇಖರವಾಗಿಬಿಟ್ಟದ್ದೇ ಆದರೆ ಮತ್ತೆ ಅಲ್ಲಿ ಅವು ವಿಶ್ರಮಿಸಿ ಕೊಳ್ಳೋದಿಲ್ಲ.' "

ನರೇಂದ್ರ: "ಪರಮಹಂಸರು ನನ್ನನ್ನು 'ನಾರಾಯಣ' ಅಂತ ಕರೆಯುತ್ತಿದ್ದರು."

ಮಾಸ್ಟರ್: "ಹೌದು, ಅವರು ನಿನ್ನನ್ನು ಹಾಗೆ ಕರೆಯುತ್ತಿದ್ದುದು ನನಗೆ ಗೊತ್ತಿದೆ."

ನರೇಂದ್ರ: "ಅವರು ರೋಗಗ್ರಸ್ತರಾಗಿದ್ದಾಗ ಅವರ ಶೌಚಕ್ಕೆ ನೀರು ಕೊಡಲು ನನ್ನನ್ನು ಅವರು ಬಿಟ್ಟುಕೊಡುತ್ತಿರಲಿಲ್ಲ. ಒಮ್ಮೆ ಅವರು ಕಾಶೀಪುರದಲ್ಲಿ ಹೇಳಿದರು: 'ಬೀಗದ ಕೈ ನನ್ನ ಹತ್ತಿರ ಇರುತ್ತದೆ. ತಾನು ಯಾರು ಎಂಬುದನ್ನು ನರೇಂದ್ರ ಅರಿತೊಡನೆಯೆ ಆತ ತನ್ನ ದೇಹವನ್ನು ತ್ಯಜಿಸಿಬಿಡುತ್ತಾನೆ.' "

ಮಾಸ್ಟರ್: "ನೀನು ನಿರ್ವಿಕಲ್ಪ ಸಮಾಧಿಯಲ್ಲಿ ಇದ್ದಾಗ ಅವರು ಹಾಗೆ ಹೇಳಿದರು ತಾನೆ?"

ನರೇಂದ್ರ: "ಹೌದು. ಆ ಅವಸ್ಥೆಯಲ್ಲಿ ನನಗೆ ಬೋಧೆಯಾಗು ತ್ತಿತ್ತು, ಕೇವಲ ಮುಖ ಮಾತ್ರ ಇದ್ದು ಶರೀರ ಇಲ್ಲದೆ ಇರೋ ಹಾಗೆ.

"ಮನೆಯಲ್ಲೇ 'ಲಾ' ಪರೀಕ್ಷೆಗಾಗಿ ಓದುತ್ತಿದ್ದೆ. ಆಗ ಇದ್ದಕ್ಕಿದ್ದ ಹಾಗೆ ಅನ್ನಿಸಿತು: 'ಇದೇನು ನಾನು ಮಾಡುತ್ತಾ ಇರೋದು?' "

ಮಾಸ್ಟರ್: "ನಿನಗೆ ಹಾಗಾದ್ದು ಪರಮಹಂಸರು ಕಾಶೀಪುರದಲ್ಲಿ ಇದ್ದಾಗಲೇನು?"

ನರೇಂದ್ರ: "ಹೌದು, ಆಗಲೆ. ಹುಚ್ಚನೋಪಾದಿಯಲ್ಲಿ ಮನೆ ಯಿಂದ ಓಡಲಾರಂಭಿಸಿದೆ. ಅಲ್ಲಿಂದ ಕಾಶೀಪುರಕ್ಕೆ ಬಂದನಂತರ ಪರಮ ಹಂಸರು ಕೇಳಿದರು: 'ನಿನಗೇನು ಬೇಕು?' ನಾನು ಹೇಳಿದೆ: 'ನನಗೆ ಸಮಾಧಿಸ್ಥನಾಗೇ ಇರಬೇಕೆಂಬ ಇಚ್ಛೆ.' ಅದಕ್ಕೆ ಅವರು ಹೇಳಿದರು: 'ನಿನ್ನದು ಎಂಥ ಹೀನಬುದ್ಧಿ! ಸಮಾಧಿಗಿಂತಲೂ ಅತೀತವಾದ ಸ್ಥಿತಿಗೆ ಹೋಗು! ಸಮಾಧಿ ಬಹಳ ಸಾಮಾನ್ಯವಾದ್ದು.' "

ಮಾಸ್ಟರ್: "ಹೌದು, ಅವರು ಹೇಳುತ್ತಿದ್ದರು, ಜ್ಞಾನದನಂತರ ವಿಜ್ಞಾನ. ಇದು ಮೇಲ್ಛಾವಣಿಗೆ ಹತ್ತಿದನಂತರ ಹಂತಗಳ ಮೂಲಕ ಇಳಿದು ಹತ್ತಿ ಮಾಡೋ ಹಾಗೆ."

ನರೇಂದ್ರ: "ಕಾಳೀಪ್ರಸಾದ, 'ಜ್ಞಾನ, ಜ್ಞಾನ' ಅನ್ನುತ್ತಲೇ

ಇದಾನೆ. ಅದಕ್ಕಾಗಿ ನಾನು ಆತನನ್ನು ಬಯ್ಯುತ್ತೇನೆ. ಬರೀ ಬಾಯಿ ಮಾತಿನಿಂದಲೇ ಜ್ಞಾನ ದೊರೆತುಬಿಡುವುದೆ? ಮೊದಲು ಆತನ ಭಕ್ತಿ ಪರಿಪಕ್ವವಾಗಲಿ. ಪರಮಹಂಸರು ದಕ್ಷಿಣೇಶ್ವರದಲ್ಲಿ ತಾರಕನಿಗೆ ಹೇಳಿದ್ದರು: 'ಭಾವ ಭಕ್ತಿ ಇವೇ ಸತ್ಯದ ಕೊನೆಯ ಮಾತಲ್ಲ.' "

ಮಾಸ್ಟರ್: "ನಿನ್ನ ವಿಷಯವಾಗಿ ಅವರು ಇನ್ನೂ ಏನೇನನ್ನು ಹೇಳಿದರು?"

ನರೇಂದ್ರ: "ಒಮ್ಮೆ ನಾನು ಅವರಿಗೆ ಹೇಳಿದೆ: 'ನೀವು ದರ್ಶನ ಮಾಡುತ್ತಿರೋ ಭಗವಂತನ ರೂಪ-ಗೀಪಗಳೆಲ್ಲ ನಿಮ್ಮ ಮಾನಸಿಕ ಭ್ರಾಂತಿ.' ಅವರಿಗೆ ನನ್ನ ಮಾತಿನಲ್ಲಿ ಅಷ್ಟೊಂದು ವಿಶ್ವಾಸ, ಒಡನೆಯೇ ದೇವಾಲಯಕ್ಕೆ ಹೋಗಿ ಭಗವತಿಯನ್ನು ಕೇಳಿದರು: 'ತಾಯಿ, ನರೇಂದ್ರ ಹೀಗೆಲ್ಲ ಹೇಳುತ್ತಾ ಇದಾನಲ್ಲ. ಹಾಗಾದರೆ ಇವೆಲ್ಲ ನನ್ನ ಮಾನಸಿಕ ಭ್ರಾಂತಿಗಳೇನು?' ಹಿಂದಿರುಗಿ ಬಂದು ನನಗೆ ಹೇಳಿದರು: 'ಭಗವತಿ ಹೇಳಿದಳು, ಅವೆಲ್ಲ ಸತ್ಯ ಅಂತ.'

"ಬಹುಶಃ ಇದು ನಿಮ್ಮ ಜ್ಞಾಪಕದಲ್ಲಿರಬೇಕು. ಅವರು ಹೇಳುತ್ತಿದ್ದರು: 'ನಿನ್ನ ಹಾಡು ಕಿವಿಗೆ ಬಿತ್ತು ಎಂದರೆ, ಇದರ (ತಮ್ಮ ಎದೆಯ ಕಡೆ ಕೈ ತೋರಿಸಿ) ಅಂತರ್ಯದಲ್ಲಿರೋನು ಹಾವಿನೋಪಾದಿಯಲ್ಲಿ ಬುಸುಗುಟ್ಟುತ್ತ ಮೇಲಕ್ಕೆ ಹೆಡೆಬಿಚ್ಚಿ ಎದ್ದು ಕಿವಿಗೊಟ್ಟುಕೇಳುತ್ತಾನೆ.'

"ನೋಡಿ ಮಾಸ್ಟರ್ ಮಹಾಶಯರೆ, ನನ್ನ ವಿಷಯವಾಗಿಯೇನೊ ಅವರು ಬಹಳವಾಗಿ ಹೊಗಳಿ ಹೇಳಿದರು; ಆದರೆ ನನಗೆ ಯಾವ ಉನ್ನತಿಯೂ ದೊರೆತಿಲ್ಲವಲ್ಲ?"

ಮಾಸ್ಟರ್: "ಈಗ ನೀನು ಶಿವನ ವೇಷವನ್ನು ಧರಿಸಿದೀಯೆ; ನೀನು ಈಗ ದುಡ್ಡು ಮುಟ್ಟೋಹಾಗಿಲ್ಲ. ಪರಮಹಂಸರು ಹೇಳುತ್ತಿದ್ದ ಕಥೆ ನಿನ್ನ ಜ್ಞಾಪಕದಲ್ಲಿರಬೇಕಲ್ಲವೆ?"

ನರೇಂದ್ರ: "ಏನದು, ಹೇಳಿ ನೋಡೋಣ."

ಮಾಸ್ಟರ್: "ಒಬ್ಬ ಬಹುರೂಪಿ ಶಿವನ ವೇಷ ಧರಿಸಿ ಒಬ್ಬರ ಮನೆಗೆ ಹೋದ. ಆ ಮನೆಯವರು ಆತನಿಗೆ ಒಂದು ರೂಪಾಯಿ ಕೊಡಲು ಬಂದರು. ಆತ ಅದನ್ನು ಸ್ವೀಕರಿಸಲಿಲ್ಲ. ಆತ ತನ್ನ ಮನೆಗೆ ಹಿಂದಿರುಗಿಹೋಗಿ ವೇಷವನ್ನು ತೆಗೆದುಹಾಕಿ, ಬಳಿಕ ಆ ಮನೆಗೆಬಂದು ಆ ಒಂದು ರೂಪಾಯನ್ನು ಕೊಡುವಂತೆ ಕೇಳಿದ. ಆಗ ಆ ಮನೆಯವರು

ಕೇಳಿದರು: 'ಆಗ ಏಕೆ ನೀನು ಸ್ವೀಕರಿಸದೆ ಹೋದೆ?' ಆತ ಉತ್ತರ ವಿತ್ತ: 'ಆಗ ನಾನು ಶಿವನ ವೇಷವನ್ನು, ಸನ್ಯಾಸಿಯ ವೇಷವನ್ನು ಧರಿಸಿದ್ದೆ; ಹಣವನ್ನು ಮುಟ್ಟಕೂಡದು.' "

ಈ ಕಥೆಯನ್ನು ಕೇಳಿದನಂತರ ನರೇಂದ್ರ ಬಹಳ ಹೊತ್ತು ಗಹಗಹಿಸಿ ನಕ್ಕ.

ಮಾಸ್ಟರ್: "ಈಗ ನೀನು ಡಾಕ್ಟರ್ ಪಾತ್ರವನ್ನು ವಹಿಸಿದೀಯೆ. ಎಲ್ಲಾ ಹೊರೆಯೂ ನಿನ್ನ ಮೇಲೆ ಬಂದು ಬಿದ್ದಿದೆ. ನೀನು ಈ ಮಠದ ಸೋದರರನ್ನೆಲ್ಲ ಪುರುಷಸಿಂಹರನ್ನಾಗಿ ಮಾಡಬೇಕಾಗಿದೆ."

ನರೇಂದ್ರ: "ನಾವು ಇಲ್ಲಿ ಮಾಡುತ್ತಿರೋ ಸಾಧನೆ-ಗೀಧನೆಗಳೆಲ್ಲ ಪರಮಹಂಸರ ಆದೇಶಕ್ಕನುಗುಣವಾಗಿ. ಆದರೆ ಆಶ್ಚರ್ಯಕರವಾದುದೇನೆಂದರೆ, ಈ ರಾಮಬಾಬು ನಾವು ಮಾಡುತ್ತಿರೋ ಸಾಧನೆಗಳನ್ನು ಖಂಡಿಸುತ್ತಿದಾನೆ. ಆತ ಹೇಳುತ್ತಿದಾನೆ: 'ನಾವು ಅವರನ್ನು (ಪರಮಹಂಸರನ್ನು) ದರ್ಶನಮಾಡಿದೇವೆ. ಇನ್ನು ನಮಗೇಕೆ ಸಾಧನೆ-ಗೀಧನೆ?' "

ಮಾಸ್ಟರ್: "ಯಾರಿಗೆ ಯಾವುದರಲ್ಲಿ ವಿಶ್ವಾಸವೊ ಅವರು ಅದರಂತೆ ನಡೆದುಕೊಳ್ಳಲಿ."

ನರೇಂದ್ರ: "ಪರಮಹಂಸರು ನಮಗೆ ಸಾಧನೆ ಮಾಡುವಂತೆ ಆದೇಶವಿತ್ತಿದಾರೆ."

ಪರಮಹಂಸರು ತನ್ನಲ್ಲಿಟ್ಟಿದ್ದ ಪ್ರೀತಿಯ ಸಂಬಂಧವಾಗಿ ಮತ್ತೆ ನರೇಂದ್ರ ಹೇಳಿಕೊಳ್ಳಲಾರಂಭಿಸಿದ.

ನರೇಂದ್ರ: "ನನಗಾಗಿ ಅವರು ಭಗವತಿಯನ್ನು ಎಷ್ಟೊಂದು ಸಲ ಪ್ರಾರ್ಥಿಸಿದರು ಏನು ಕತೆ! ನನ್ನ ತಂದೆ ಸತ್ತನಂತರ ಮನೆಯಲ್ಲಿ ತಿನ್ನೋಕೆ ಏನೂ ಇಲ್ಲದೆ ನನ್ನ ತಾಯಿ, ನನ್ನ ಸೋದರಸೋದರಿಯರೆಲ್ಲರೂ ಸಾಯುತ್ತಿದ್ದಾಗ ನನಗೆ ದುಡ್ಡಿನ ಸಹಾಯ ಮಾಡೋ ಹಾಗೆ ಭಗವತಿಗೆ ಪ್ರಾರ್ಥನೆಮಾಡಿದರು."

ಮಾಸ್ಟರ್: "ಅದು ನನಗೆ ಗೊತ್ತಿದೆ. ನೀನು ಅದನ್ನು ನನಗೆ ಹಿಂದೆಯೇ ಹೇಳಿದೀಯೆ."

ನರೇಂದ್ರ: "ನನಗೆ ದುಡ್ಡು-ಗಿಡ್ಡು ಏನೂ ದೊರೆಯಲಿಲ್ಲ. ಅವರು ನನಗೆ ಹೇಳಿದರು: 'ಭಗವತಿ ಹೇಳಿದಳು, ನಿನಗೆ ಸಾಮಾನ್ಯವಾದ

ಆಹಾರ ಬಟ್ಟೆಬರೆ ದೊರೆಯುವುದು; ಅನ್ನ ಸಾರು ದೊರೆಯುವುದು ಎಂಬುದಾಗಿ.'

"ಅವರು ನನ್ನನ್ನು ಇಷ್ಟೊಂದಾಗಿ ಪ್ರೀತಿಸುತ್ತಿದ್ದರು! ಆದರೂ ನನ್ನ ಹೃದಯದಲ್ಲೇನಾದರು ಅಪವಿತ್ರ ಭಾವನೆ ಮೂಡಿತು ಎಂದರೆ, ಅದು ಒಡನೆಯೆ ಅವರಿಗೆ ಗೊತ್ತಾಗಿಬಿಡುತ್ತಿತ್ತು. ಅನ್ನದಗುಹನೊಡನೆ ಅಲ್ಲಿ ಇಲ್ಲಿ ಸುತ್ತಾಡುತ್ತಿದ್ದಾಗ, ಒಮ್ಮೊಮ್ಮೆ ಕೆಟ್ಟವರ ಸಹವಾಸವೂ ದೊರೆತು ಬಿಡುತ್ತಿತ್ತು. ಅಂಥ ಸಂದರ್ಭಗಳಲ್ಲಿ ಪರಮಹಂಸರು ನನ್ನ ಕೈಯಿಂದ ಯಾವ ಆಹಾರವನ್ನೂ ಸ್ವೀಕರಿಸುತ್ತಿರಲಿಲ್ಲ; ಅವರ ಕೈಯೇನೊ ಬಾಯಿ ಕಡೆ ಸ್ವಲ್ಪ ಏಳುತ್ತಿತ್ತು, ಆದರೆ ಮುಂದುವರಿಯುತ್ತಿರಲಿಲ್ಲ. ಒಮ್ಮೆ ಅವರು ಅಸ್ವಸ್ಥರಾಗಿದ್ದಾಗ, ನಾನೂ ಅಂಥ ಒಂದು ಅವಸ್ಥೆಯಲ್ಲಿದ್ದಾಗ ಅವರ ಕೈ ಬಾಯವರೆಗೇನೊ ಬಂದು ಹಾಗೇ ನಿಂತುಕೊಂಡುಬಿಟ್ಟಿತು. ಆಗ ಅವರು ಹೇಳಿದರು: 'ನೀನು ಇನ್ನೂ ಸಿದ್ಧನಾಗಿಲ್ಲ.'

"ಒಮ್ಮೊಮ್ಮೆ ನನಗೆ ನಾಸ್ತಿಕ ಭಾವನೆ ಬಂದುಬಿಡುತ್ತದೆ. ಒಂದು ಸಲ ನಾನು ಬಾಬುರಾಮನ ಮನೆಯಲ್ಲಿ ಕುಳಿತಿದ್ದಾಗ, ಏನೂ ಇಲ್ಲದ ಹಾಗೆ—ಭಗವಂತ-ಗಿಗವಂತ ಯಾರೂ ಇಲ್ಲದ ಹಾಗೆ ಬೋಧೆಯಾಯಿತು."

ಮಾಸ್ಟರ್: "ಪರಮಹಂಸರೂ ಹೇಳುತ್ತಿದ್ದರು, ತಮಗೂ ಒಮ್ಮೊಮ್ಮೆ ಹೀಗಾಗುತ್ತಿತ್ತು ಎಂಬುದಾಗಿ."

ಇಬ್ಬರೂ ಸ್ವಲ್ಪ ಹೊತ್ತು ಹಾಗೇ ಕುಳಿತುಕೊಂಡಿದ್ದರು. ಬಳಿಕ ಮಾಸ್ಟರ್ ಹೇಳಿದ: "ನೀವೇ ಧನ್ಯರು! ಹಗಲೂ ಇರುಳೂ ನೀವು ಪರಮಹಂಸರ ಚಿಂತನೆಯಲ್ಲೇ ಇದೀರಿ."

ನರೇಂದ್ರ: "ಎಲ್ಲಿ? ಭಗವಂತನ ಸಾಕ್ಷಾತ್ಕಾರ ದೊರೆಯುತ್ತಿಲ್ಲವಲ್ಲ ಎಂದು ಪ್ರಾಣ ನೀಗಿಕೊಳ್ಳೋ ಇಚ್ಛೆ ಎಲ್ಲಿ ಬಂದಿದೆ ನಮಗೆ?"

ರಾತ್ರಿಯಾಗಿದೆ. ಜಗನ್ನಾಥ-ಪೂರಿ ಯಾತ್ರೆಗೆ ಹೋಗಿದ್ದ ನಿರಂಜನ ಸ್ವಲ್ಪ ಹೊತ್ತಿನ ಹಿಂದೆ ಹಿಂದಿರುಗಿ ಬಂದ. ಆತನನ್ನು ಕಂಡೊಡನೆಯೆ ಮಠದ ಸೋದರರೆಲ್ಲರೂ ಬಹಳವಾಗಿ ಆನಂದಪಟ್ಟರು. ಆತ ತನ್ನ ಯಾತ್ರೆಯ ಸಂಬಂಧವಾಗಿ ಈಗ ವರ್ಣನೆ ಮಾಡಲಾರಂಭಿಸಿದ. ಆತನ ವಯಸ್ಸು ಇಪ್ಪತ್ತೈದೊ ಇಪ್ಪತ್ತಾರೊ.

ಸಾಯಂಕಾಲದ ಮಂಗಳಾರತಿ ಮುಗಿಯಿತು. ಸೋದರರಲ್ಲಿ ಕೆಲವರು ಧ್ಯಾನಮಾಡುತ್ತಾ ಕುಳಿತಿದಾರೆ. ಆದರೆ ಉಳಿದವರಲ್ಲಿ

ಅನೇಕರು ನಿರಂಜನನ ಸುತ್ತ ಆ ದೊಡ್ಡ ಅಂಗಳದಲ್ಲಿ ಕುಳಿತು ಮಾತುಕತೆ ಆಡುತ್ತಿದಾರೆ. ಶಶಿ ಒಂಬತ್ತು ಘಂಟೆಯಾದನಂತರ ಗುರುಮಹಾರಾಜರಿಗೆ ನೈವೇದ್ಯ ಅರ್ಪಿಸಿ ಬಳಿಕ ಅವರಿಗೆ ಶಯನ ಮಾಡಿಸಿದ.

ಈಗ ಸೋದರರೆಲ್ಲರೂ ನಿರಂಜನನೊಡನೆ ಊಟಕ್ಕೆ ಕುಳಿತಿದಾರೆ. ಈಗಿನ ಊಟ ರೊಟ್ಟಿ, ಒಂದು ಪಲ್ಯ, ಬೆಲ್ಲ ಮತ್ತು ಗುರುಮಹಾರಾಜರಿಗೆ ಅರ್ಪಿಸಿದ್ದ ಒಂದು ಕಿಂಚಿತ್ ರವೆ ಪಾಯಸ ಇವುಗಳಿಂದ ಮುಗಿಯಿತು.

೭ನೆ ಮೇ ೧೮೮೭, ವೈಶಾಖ ಪೂರ್ಣಿಮೆ, ಶನಿವಾರ.

ಮಾಸ್ಟರ್ ಕಲ್ಕತ್ತದ ಒಂದು ಭಾಗದಲ್ಲಿದ್ದ ಒಂದು ಮನೆಯ ಕೊಠಡಿಯೊಂದನ್ನು ತನ್ನ ಓದುವ ಕೊಠಡಿಯನ್ನಾಗಿ ಮಾಡಿಕೊಂಡಿದ್ದ. ಅಲ್ಲಿ ಒಂದು ಮಂಚದ ಮೇಲೆ ಕುಳಿತು ಮಾಸ್ಟರ್ ಮತ್ತು ನರೇಂದ್ರ ಮಾತುಕತೆಯಾಡುತ್ತಿದಾರೆ. ಇಂದು ನರೇಂದ್ರ ಅಲ್ಲಿಗೆ ಬರುವ ಮುನ್ನ ಮಾಸ್ಟರ್ ತಾನು ಸ್ಕೂಲಿನಲ್ಲಿ ಪಾಠ ಹೇಳಿಕೊಡಬೇಕಾದ ಪುಸ್ತಕಗಳನ್ನು— "ಮರ್ಚೆಂಟ್ ಆಫ್ ವೆನಿಸ್", "ಕೋಮಸ್", ಬ್ಲ್ಯಾಕಿಯ "ಸೆಲ್ಫ್ ಕಲ್ಚರ್" — ಓದುತ್ತಾ ಕುಳಿತಿದ್ದ.

ನರೇಂದ್ರ ಮತ್ತು ಉಳಿದ ಮಠದ ಸೋದರರೆಲ್ಲರೂ ಭಗವಂತನ ಸಾಕ್ಷಾತ್ಕಾರಕ್ಕಾಗಿ ಅತ್ಯಂತ ವ್ಯಾಕುಲರಾಗಿದಾರೆ. ಅವರ ಹೃದಯದಲ್ಲಿ ತೀವ್ರ ವೈರಾಗ್ಯದ ಬೆಂಕಿ ಜ್ವಾಜ್ವಲ್ಯಮಾನವಾಗಿ ಉರಿಯುತ್ತಿದೆ.

ನರೇಂದ್ರ: "ನನಗೆ ಯಾವುದೂ ರುಚಿಸುತ್ತಿಲ್ಲ. ನೋಡಿ, ಈಗ ನಾನು ನಿಮ್ಮೊಡನೆ ಮಾತುಕತೆಯಾಡುತ್ತಿದೇನೆ, ಆದರೆ ಈಕ್ಷಣವೇ ಇಲ್ಲಿಂದ ಎದ್ದು ಓಡಿಹೋಗಿಬಿಡಬೇಕು ಅಂತ ಅನ್ನಿಸುತ್ತಿದೆ."

ನರೇಂದ್ರ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡ. ಮತ್ತೆ ಹೇಳಲಾರಂಭಿಸಿದಾನೆ: "ಭಗವಂತನ ಸಾಕ್ಷಾತ್ಕಾರಕ್ಕಾಗಿ ಪ್ರಾಯೋಪವೇಶನ ಕೈಗೊಳ್ಳುತ್ತೇನೆ."

ಮಾಸ್ಟರ್: "ಅದು ಬಹಳ ಒಳ್ಳೆಯದೆ. ಭಗವಂತನ ಸಾಕ್ಷಾತ್ಕಾರಕ್ಕಾಗಿ ಏನನ್ನು ಬೇಕಾದರೂ ಮಾಡಿಬಿಡಬಹುದು."

ನರೇಂದ್ರ: "ನನ್ನ ಕೈಯಲ್ಲಿ ಹಸಿವನ್ನು ತಡೆಯಲಾರದೆ ಹೋಗಿಬಿಟ್ಟರೆ?"

ಮಾಸ್ಟರ್: "ತಿಂದು ಮತ್ತೆ ಆರಂಭಮಾಡು."

ಕೆಲವು ನಿಮಿಷ ನರೇಂದ್ರ ಸುಮ್ಮನೆ ಕುಳಿತುಕೊಂಡ.

ನರೇಂದ್ರ: “ಭಗವಂತನೆಂಬುವನು ಇಲ್ಲ ಎಂಬ ಬೋಧೆಯಾಗುತ್ತಿದೆ. ಆತನಿಗೆ ಬಹಳವಾಗಿ ಪ್ರಾರ್ಥನೆ ಸಲ್ಲಿಸುತ್ತಾ ಇದೇನೆ, ಆದರೂ ಆತನಿಂದ ಯಾವ ಉತ್ತರವೂ ಇದುವರೆಗೆ ದೊರೆತಿಲ್ಲ – ಒಂದೂ ಇಲ್ಲ.

“ನನಗೆ ಎಷ್ಟೊಂದು ಅಲೌಕಿಕ ದರ್ಶನಗಳಾದುವು! ಮಂತ್ರ ಸುವರ್ಣಾಕ್ಷರಗಳಿಂದ ಪ್ರಜ್ವಲಿಸೋದನ್ನು ನೋಡಿದೇನೆ! ಭಗವತಿ ಕಾಳಿಯ ಸಂಬಂಧವಾಗಿ ಎಷ್ಟೊಂದು ದರ್ಶನಗಳಾಗಿವೆ! ಉಳಿದ ರೂಪುಗಳನ್ನು ಎಷ್ಟೊಂದಾಗಿ ದರ್ಶನಮಾಡಿದೇನೆ! ಆದರೂ ನನಗೆ ಶಾಂತಿ ಮಾತ್ರ ದೊರೆಯುತ್ತಿಲ್ಲವಲ್ಲ!

“ನನಗೆ ಒಂದೂವರೆ ಆಣೆ ಕೊಡುವಿರೇನು?”

ನರೇಂದ್ರ ವರಾಹನಗರದ ಮಠಕ್ಕೆ ಹಿಂದಿರುಗಲು ಗಾಡಿ ಬಾಡಿಗೆಗಾಗಿ ಈ ದುಡ್ಡನ್ನು ಕೇಳಿದ. ಆ ಸಮಯಕ್ಕೆ ಸರಿಯಾಗಿ ಸಾತ್ಕರಿ ಗಾಡಿ ಮಾಡಿಕೊಂಡು ಅಲ್ಲಿಗೆ ಬಂದ. ಆತ ನರೇಂದ್ರನ ಸಮವಯಸ್ಕ. ಮಠದ ಸೋದರರನ್ನು ಕಂಡರೆ ಆತನಿಗೆ ಬಹಳ ಪ್ರೀತಿ. ಆಗಾಗ ಮಠಕ್ಕೆ ಹೋಗುತ್ತಲೇ ಇರುತ್ತಾನೆ. ವರಾಹನಗರದ ಮಠದ ಹತ್ತಿರವೇ ಆತನ ಮನೆ. ಕಲ್ಕತ್ತದ ಆಫೀಸೊಂದರಲ್ಲಿ ಆತನಿಗೆ ಕೆಲಸ. ಆತನಿಗೆ ಸ್ವಂತ ಗಾಡಿ ಇದೆ. ಆಫೀಸಿನಿಂದ ಹಿಂದಿರುಗುವಾಗ ಅಲ್ಲಿಗೆ ಬಂದಿದಾನೆ.

ತಾನು ಸಾತ್ಕರಿಯ ಗಾಡಿಯಲ್ಲಿ ಹಿಂದಿರುಗುವುದಾಗಿ ನರೇಂದ್ರ ಮಾಸ್ಟರಿಗೆ ತಿಳಿಸಿ ಆತನಿಗೆ ಆ ಒಂದೂವರೆ ಆಣೆಯನ್ನು ಹಿಂದಿರುಗಿ ಕೊಟ್ಟುಬಿಟ್ಟ. ತಮಗೇನಾದರು ಸ್ವಲ್ಪ ಉಪಾಹಾರ ತಂದುಕೊಡುವಂತೆ ನರೇಂದ್ರ ಮಾಸ್ಟರನ್ನು ಕೇಳಿದ. ಮಾಸ್ಟರ್ ಅವರಿಗೆ ಉಪಾಹಾರ ಮಾಡಿಸಿದ.

ಮಾಸ್ಟರೂ ಅದೇ ಗಾಡಿಯಲ್ಲಿ ಮಠಕ್ಕೆ ಬಂದ. ಮಠವನ್ನು ತಲುಪುವುದರಲ್ಲಿ ಸಾಯಂಕಾಲವಾಗಿತ್ತು. ಮಠದ ಸೋದರರು ಯಾವ ಯಾವ ಸಾಧನೆಗಳನ್ನು ಮಾಡುತ್ತ ದಿನಗಳನ್ನು ಕಳೆಯುತ್ತಿದಾರೆ ಎಂಬುದನ್ನು ನೋಡಲೋಸುಗ ಆತ ಬಂದಿದಾನೆ. ಪರಮಹಂಸರು ಯಾವಾವ ರೀತಿಯಾಗಿ ಅವರ ಶಿಷ್ಯರ ಮೂಲಕ ವ್ಯಕ್ತರಾಗುತ್ತಿದಾರೆ ಎಂಬುದನ್ನು ನೋಡಿ ಆನಂದಪಡಲೋಸುಗ ಆಗಾಗ ಮಠಕ್ಕೆ ಬರುತ್ತಲೇ ಇದಾನೆ. ನಿರಂಜನನಿಗೆ ಕೇವಲ ಹೆತ್ತ ತಾಯೊಬ್ಬಳು ವಿನಾ ಬೇರೆ ಯಾರೂ ಇರಲಿಲ್ಲ. ಆಕೆಯನ್ನು ನೋಡಿಬರಲು ಆತ ಮನೆಗೆ ಹೋಗಿ

ದಾನೆ. ಬಾಬುರಾಮ, ಶರಚ್ಚಂದ್ರ, ಕಾಳೀಪ್ರಸಾದ ಇವರು ಜಗನ್ನಾಥ ಪೂರಿಗೆ ಹೋಗಿದಾರೆ. ಅವರು ರಥಜಾತ್ರೆಯವರೆಗೆ ಅಲ್ಲೇ ಇದ್ದು ಬಳಿಕ ಹಿಂದಿರುಗುವರು.

ನರೇಂದ್ರ ಮಠದ ಸೋದರರ ಭಾರವನ್ನೆಲ್ಲ ಹೊತ್ತುಕೊಂಡಿದಾನೆ. ಶಾರದಾಪ್ರಸನ್ನ ಕೆಲವು ದಿನಗಳಿಂದ ಬಹಳವಾಗಿ ಸಾಧನೆಯಲ್ಲಿ ತೊಡಗಿ ಬಿಟ್ಟಿದಾನೆ. ಭಗವಂತನ ಸಾಕ್ಷಾತ್ಕಾರಕ್ಕಾಗಿ ತಾನು ಪ್ರಾಯೋಪವೇಶನ ಮಾಡುವುದಾಗಿ ನರೇಂದ್ರ ಆತನಿಗೂ ತಿಳಿಸಿದ್ದ. ನರೇಂದ್ರ ಕಲ್ಕತ್ತಕ್ಕೆ ಹೋದ ಸಮಯವನ್ನು ನೋಡಿಕೊಂಡಿದ್ದು, ಶಾರದಾಪ್ರಸನ್ನ ತನ್ನ ನಿರ್ದೇಶವನ್ನು ತಿಳಿಸದೆ ಎಲ್ಲಿಗೊ ಹೊರಟುಹೋಗಿಬಿಟ್ಟಿದಾನೆ. ನರೇಂದ ಹಿಂದಿರುಗಿ ಬಂದು ಸಮಾಚಾರವನ್ನೆಲ್ಲಾ ಕೇಳಿದ. ಆತ ಉಳಿದ ಸೋದರರನ್ನು ಕೇಳಿದ: "ರಾಜ[1] ಏಕೆ ಹಾಗೆ ಹೋಗಲು ಬಿಟ್ಟುಕೊಟ್ಟ?" ಆದರೆ ರಾಖಾಲನೂ ಆ ಸಂದರ್ಭದಲ್ಲಿ ಅಲ್ಲಿ ಇರಲಿಲ್ಲ. ಆತ ತಿರುಗಾಡಿ ಕೊಂಡು ಬರಲು ದಕ್ಷಿಣೇಶ್ವರಕ್ಕೆ ಹೋಗಿದ್ದ.

ನರೇಂದ್ರ: "ರಾಜ ಹಿಂದಿರುಗಿ ಬರಲಿ. ಚೆನ್ನಾಗಿ ಬಯ್ಯುತ್ತೇನೆ. ಏಕೆ ಆತ ಅವನನ್ನು ಬಿಟ್ಟುಕೊಟ್ಟುಬಿಟ್ಟ? (ಹರೀಶನಿಗೆ) ನೀನು ನಿನ್ನ ಕಾಲುಗಳನ್ನು ದೂರದೂರವಾಗಿ ಇಟ್ಟುಕೊಂಡು ಲೆಕ್ಚರ್ ಹೊಡೆಯುತ್ತಾ ಇದ್ದೆ ಅಂತ ಕಾಣುತ್ತೆ. ಹೋಗಬೇಡ ಅಂತ ಹೇಳಬಾರದಾಗಿತ್ತೆ?"

ಹರೀಶ ಮೃದು ಕಂಠದಿಂದ: "ಹಾಗೆ ಹೋಗಬೇಡವೆಂದು ತಾರಕ ಹೇಳಿದ. ಆದರೂ ಆತ ಹೊರಟುಹೋದ."

ನರೇಂದ್ರ ಮಾಸ್ಟರಿಗೆ: "ನೋಡಿ, ನಾನು ಎಂಥ ಕಷ್ಟಗಳಿಗೆ ಸಿಕ್ಕಿಬಿದ್ದಿದೇನೆ! ಇಲ್ಲಿಯೂ ಒಂದು ವಿಧವಾದ ಮಾಯಾ ಸಂಸಾರದ ಬಲೆಗೆ ಬಿದ್ದಿದೇನೆ. ಈ ಹುಡುಗ ಎಲ್ಲಿಗೆ ಹೋದನೊ ಏನು ಕತೆಯೊ ಏನು ಮಾಡೋದು ಈಗ?"

---

1. ರಾಖಾಲನನ್ನು ಸೋದರರೆಲ್ಲರೂ "ರಾಜ" ಅಂತ ಕರೆಯುತ್ತಿದ್ದರು. "ರಾಖಾಲ ರಾಜ", ಎಂದರೆ "ಗೋಪಾಲಕರ ರಾಜ" ಎಂದು ಅರ್ಥ. ಈ ಹೆಸರಿನಿಂದ ಗೋಪಾಲಕರು ಶ್ರೀ ಕೃಷ್ಣನನ್ನು ಕರೆಯುತ್ತಿದ್ದರು. ರಾಖಾಲ ಶ್ರೀ ಕೃಷ್ಣನ ಪರಮ ಸಖನೆಂದು ಪರಮಹಂಸರು ಆಗಾಗ ಆತನ ಸಂಬಂಧವಾಗಿ ಹೇಳುತ್ತಿದ್ದರು.

ರಾಖಾಲ ದಕ್ಷಿಣೇಶ್ವರದಿಂದ ಹಿಂದಿರುಗಿ ಬಂದ. ಭವನಾಥನೂ ಆತನೊಡನೆ ಹೋಗಿದ್ದ.

ಶಾರದಾ ಪ್ರಸನ್ನ ಮಠ ಬಿಟ್ಟು ಹೊರಟುಹೋಗಿರೋ ಸಮಾಚಾರವನ್ನು ನರೇಂದ್ರ ರಾಖಾಲನಿಗೆ ತಿಳಿಸಿದ. ಶಾರದಾಪ್ರಸನ್ನ ನರೇಂದ್ರನಿಗೆ ಒಂದು ಪತ್ರ ಬರೆದು ಅದನ್ನು ನರೇಂದ್ರನ ಮೇಜದ ಮೇಲೆ ಇಟ್ಟು ಹೋಗಿದ್ದ. ಅದರಲ್ಲಿ ಬರೆದಿದ್ದ: "ನಾನು ನಡೆದೇ ಬೃಂದಾವನಕ್ಕೆ ಹೋಗುತ್ತಿದೇನೆ. ನಾನು ಇಲ್ಲೇ ಇದ್ದರೆ ವಿಪತ್ತುಗಳು ಬರೋ ಸಂಭವ ಇವೆ. ಇಲ್ಲಿ ನನ್ನ ಮನಸ್ಸು ಬದಲಾಯಿಸುತ್ತಾ ಇದೆ. ಹಿಂದೆ ತಂದೆ ತಾಯಿಯರ ಮತ್ತು ಉಳಿದ ಬಂಧುಗಳ ಸ್ವಪ್ನ ಆಗಾಗ ಆಗುತ್ತಿತ್ತು. ಬಳಿಕ ಮಾಯಾ ಮೂರ್ತಿಯ — ಹೆಂಗಸಿನ — ಸ್ವಪ್ನವೂ ಆಗುತ್ತಿತ್ತು. ಎರಡು ಸಲ ಬಹಳ ಕಷ್ಟಕ್ಕೆ ಒಳಗಾಗಿದ್ದೆ; ಮನೆಗೆ ಹಿಂದಿರುಗಿ ಹೋಗಬೇಕಾಗಿ ಬಂದಿತ್ತು. ಅದಕ್ಕಾಗಿ ನಾನು ಈಗ ದೂರ ಪ್ರದೇಶಕ್ಕೆ ಹೋಗುತ್ತಿದೇನೆ. ಪರಮಹಂಸರು ಒಮ್ಮೆ ನನಗೆ ಹೇಳಿದ್ದರು: 'ನಿನ್ನ ಮನೆಯವರು ನಿನ್ನನ್ನು ಸಂಸಾರಕ್ಕೆ ಎಳೆಯಲು ಯಾವುದಕ್ಕೂ ಹೇಸೋದಿಲ್ಲ; ಆದ್ದರಿಂದ ಅವರನ್ನು ಎಂದಿಗೂ ನಂಬಬೇಡ.'"

ರಾಖಾಲ ಹೇಳಿದ: "ಆತ ಹೊರಟು ಹೋಗಲು ಇನ್ನೂ ಅನೇಕ ಕಾರಣಗಳಿವೆ. ಒಮ್ಮೆ ಆತ ನನಗೆ ಹೇಳಿದ: 'ತಾಯಿ, ಸೋದರ ಸೋದರಿಯರ ಯೋಗಕ್ಷೇಮ ವಿಚಾರಮಾಡಿಕೊಂಡು ಬರಲು ಆಗಾಗ ನರೇಂದ್ರ ಮನೆಗೆ ಹೋಗಿಬರುತ್ತಲೇ ಇದಾನೆ. ಇದೂ ಅಲ್ಲದೆ ತನ್ನ ಮನೆಯವರ ಮೊಕದ್ದಮೆಯನ್ನೂ ನೋಡಿಕೊಳ್ಳುತ್ತಾ ಇದಾನೆ. ಆತ ಹಾಗೆ ಮಾಡುತ್ತಿರುವುದನ್ನು ನೋಡಿ ನನಗೂ ಮನೆಗೆ ಹೋಗಿ ಬರಬೇಕು ಎಂಬ ಇಚ್ಛೆ ಎಲ್ಲಿ ಬಂದುಬಿಡುವುದೊ ಏನೊ ಎಂಬ ಹೆದರಿಕೆಯಾಗುತ್ತಿದೆ.'"

ನರೇಂದ್ರ ಇದನ್ನೆಲ್ಲಾ ಕೇಳಿ ಸುಮ್ಮನೆ ಕುಳಿತುಕೊಂಡ.

ತೀರ್ಥಯಾತ್ರೆಗೆ ಹೋಗಿಬರುವುದರ ಸಂಬಂಧವಾಗಿ ರಾಖಾಲ ಮಾತು ಎತ್ತಿದ. ಆತ ಹೇಳಿದ: "ಇಲ್ಲೇ ಇದ್ದಂತೂ ನಮಗೇನೂ ದೊರೆತಿಲ್ಲ. ಭಗವಂತನ ದರ್ಶನ ಮಾಡಿಕೊಳ್ಳಬೇಕು ಎಂಬುದಾಗಿ ಪರಮಹಂಸರು ಹೇಳುತ್ತಿದ್ದರಲ್ಲ, ನಾವು ಅದನ್ನು ಪಡೆದುಕೊಂಡಿರೋದೆಲ್ಲಿ?"

ರಾಖಾಲ ಹಾಗೇ ಸ್ವಲ್ಪ ಮಲಗಿಕೊಂಡ. ಉಳಿದವರಲ್ಲಿ ಕೆಲವರು ಹಾಗೇ ಮಲಗಿಕೊಂಡಿದಾರೆ, ಇನ್ನು ಕೆಲವರು ಕುಳಿತಿದಾರೆ.

ರಾಖಾಲ: "ಸಿದ್ಧರಾಗಿಬಿಡಿ, ನರ್ಮದಾ ತೀರಕ್ಕೆ ಹೋಗಿಬಿಡೋಣ."

ನರೇಂದ್ರ: "ಸುಮ್ಮನೆ ಸುತ್ತುವುದರಿಂದ ದೊರೆಯೋದೇನು? ಸುಮ್ಮನೆ 'ಜ್ಞಾನ! ಜ್ಞಾನ!' ಅನ್ನುತ್ತಿದ್ದರೇ ಜ್ಞಾನ ದೊರೆತುಬಿಡುವುದೆ?"

ಒಬ್ಬ ಭಕ್ತ: "ಹಾಗಾದರೆ, ಸಂಸಾರವನ್ನು ಏಕೆ ತ್ಯಜಿಸಿಬಂದಿರಿ?"

ನರೇಂದ್ರ: "ರಾಮ ದೊರೆಯಲಿಲ್ಲ ಅಂತ ಶ್ಯಾಮನೊಡನೆ ಇರಬೇಕೋ? ಭಗವಂತನ ಸಾಕ್ಷಾತ್ಕಾರ ದೊರೆಯಲಿಲ್ಲವೆಂದು ಕೈಗೊಂದು ಕಾಲಿಗೊಂದು ಮಕ್ಕಳನ್ನು ಹೆತ್ತುಕೊಳ್ಳುತ್ತಾ ಇರಬೇಕೋ? ಏನು ಮಾತಾಡುತ್ತ ಇದೀಯೆ ನೀನು?"

ನರೇಂದ್ರ ಸ್ವಲ್ಪ ಹೊತ್ತು ಹೊರಕ್ಕೆ ಹೋಗಿದ್ದು ಮತ್ತೆ ಹಿಂದಿರುಗಿ ಬಂದ. ರಾಖಾಲ ಇನ್ನೂ ಮಲಗೇ ಇದಾನೆ.

ಒಬ್ಬ ಸೋದರ ಹಾಗೇ ಮಲಗಿ ಮಲಗಿಕೊಂಡೇ ಭಗವಂತನ ದರ್ಶನ ದೊರೆಯದೆ ಇರುವುದರಿಂದ ಅತ್ಯಂತ ತೀವ್ರವಾದ ವಿರಹಾಗ್ನಿಯಿಂದ ನರಳುತ್ತಿರುವವನ ಹಾಗೆ ನಟಿಸುತ್ತಾ ಕೂಗಿಕೊಳ್ಳುತ್ತಿದಾನೆ: "ಗೆಳೆಯರಾ, ನನಗೊಂದು ಕತ್ತಿ ತಂದುಕೊಡಿರಪ್ಪ! ಇನ್ನು ಮೇಲೆ ಬದುಕಿ ಫಲವೇನು. ಇನ್ನು ನಾನು ಈ ವಿರಹವನ್ನು ತಾಳಲಾರೆ!"

ನರೇಂದ್ರ ಗಂಭೀರ ಮುದ್ರೆಯಿಂದ: "ನೋಡು, ಅಲ್ಲೇ. ಸ್ವಲ್ಪ ಕೈ ಚಾಚಿ ತೆಗೆದುಕೊ." (ಎಲ್ಲರೂ ನಗುತ್ತಿದಾರೆ.)

ಮತ್ತೆ ಮಾತುಕತೆ ಪ್ರಸನ್ನನ ಸಂಬಂಧವಾಗಿ ಆರಂಭವಾಯಿತು.

ನರೇಂದ್ರ: "ಇಲ್ಲಿಯೂ ಮಾಯೆಗೆ ಸಿಕ್ಕಿದೇವೆ! ಹಾಗಾದರೆ ನಾವು ಸನ್ಯಾಸಿಗಳಾದುದೇಕೆ?"

ರಾಖಾಲ: "ಸನ್ಯಾಸಿಗಳು ಒಟ್ಟಿಗೆ ಇರುವುದು ಶ್ರೇಯಸ್ಕರವಲ್ಲ ಎಂಬುದಾಗಿ 'ಮುಕ್ತಿ ಮತ್ತು ಅದಕ್ಕೆ ಸಾಧನೆ' ಎಂಬ ಪುಸ್ತಕ ಹೇಳುತ್ತದೆ. ಅದರಲ್ಲಿ ಸನ್ಯಾಸಿ ನಗರದ ವರ್ಣನೆ ಇದೆ."

ಶಶಿ: "ನಾನು ಸನ್ಯಾಸ-ಗಿನ್ಯಾಸಕ್ಕೆ ವಿಶೇಷವಾಗಿ ಏನೂ ಬೆಲೆ ಕೊಡುತ್ತಿಲ್ಲ. ನಾನು ವಾಸಿಸಲಾಗದ ಸ್ಥಳವೇ ಈ ಜಗತ್ತಿನಲ್ಲಿ ಇಲ್ಲ."

ಈಗ ಭವನಾಥನ ಸಂಬಂಧವಾಗಿ ಮಾತು ಆರಂಭವಾಯಿತು. ಆತನ

ಹೆಂಡತಿ ಪ್ರಾಣಾಂತಕ ರೋಗಕ್ಕೆ ತುತ್ತಾಗಿದ್ದಳು. ನರೇಂದ್ರ ರಾಖಾಲನಿಗೆ ಹೇಳಿದ: "ಭವನಾಥನ ಹೆಂಡತಿ ಯಮನ ದಾಡೆಯಿಂದ ನುಣುಚಿ ಕೊಂಡುಬಿಟ್ಟಳು ಅಂತ ಕಾಣುತ್ತೆ. ಅದಕ್ಕಾಗಿಯೇನು ಆತ ನಿನ್ನೊಡನೆ ದಕ್ಷಿಣೇಶ್ವರಕ್ಕೆ ಸುತ್ತಾಡಿಬರೋಕೆ ಹೋಗಿದ್ದುದು?"

ಈಗ ಕಾಕುರಗಾಚಿಯ (ಪರಮಹಂಸರ ಅಸ್ಥಿಯನ್ನು ಹೂತಿಟ್ಟಿರುವ ಜಾಗದ) ಸಂಬಂಧವಾಗಿ ಮಾತುಕತೆ ಆರಂಭವಾಯಿತು. ರಾಮ ಅಲ್ಲಿ ಒಂದು ದೇವಾಲಯವನ್ನು ಕಟ್ಟಿಸುವುದರಲ್ಲಿದಾನೆ.

ನರೇಂದ್ರ ರಾಖಾಲನಿಗೆ: "ರಾಮಬಾಬು ಮಾಸ್ಟರನ್ನು ಆ ತೋಟದ ಒಬ್ಬ ಟ್ರಸ್ಟಿಯನ್ನಾಗಿ ಮಾಡಿದಾನೆ."

ಮಾಸ್ಟರ್ ರಾಖಾಲನಿಗೆ: "ಏನದು, ಆ ವಿಷಯವಾಗಿ ನನಗೆ ಏನೂ ಗೊತ್ತಿಲ್ಲವಲ್ಲ."

ಸಾಯಂಕಾಲವಾಗಿದೆ. ಶಶಿ ದೇವಾಲಯಕ್ಕೆ ಧೂಪ ಹಾಕಿದಬಳಿಕ ಕೊಠಡಿಗಳಲ್ಲಿದ್ದ ಪ್ರತಿಯೊಂದು ಪಟಕ್ಕೂ ಧೂಪ ತೋರಿಸಿ, ಮಧುರ ಕಂಠದಿಂದ ಭಗವನ್ನಾಮವನ್ನು ಜಪಿಸುತ್ತಾ ಅವಕ್ಕೆ ಪ್ರಣಾಮಮಾಡುತ್ತಿದಾನೆ.

ಈಗ ಮಂಗಳಾರತಿ ನಡೆಯುತ್ತಿದೆ. ಮಠದ ಸೋದರರೆಲ್ಲರೂ ಉಳಿದ ಭಕ್ತರೊಡನೆ ಎದ್ದು ಕೈ ಮುಗಿದು ನಿಂತುಕೊಂಡು ಮಂಗಳಾರತಿಯನ್ನು ನೋಡುತ್ತಿದಾರೆ. ಗಂಟೆ ಮತ್ತು ಜಾಗಟೆಗಳ ಶಬ್ದ ಆಗುತ್ತಿದೆ. ಭಕ್ತರು ಏಕಕಂಠದಿಂದ ಮಂಗಳಾರತಿಯ ಶ್ಲೋಕವನ್ನು ಹಾಡುತ್ತಿದಾರೆ:

ಜಯ ಶಿವ ಓಂಕಾರ, ಭಜ ಶಿವ ಓಂಕಾರ।
ಬ್ರಹ್ಮ ವಿಷ್ಣು ಸದಾಶಿವ, ಹರ ಹರ ಹರ ಮಹಾದೇವ॥

ಈ ಶ್ಲೋಕವನ್ನು ಸಾಯಂ ಮಂಗಳಾರತಿಯ ಸಮಯದಲ್ಲಿ ಹಾಡೋ ಆಚರಣೆಯನ್ನು ನರೇಂದ್ರ ತಂದಿದಾನೆ. ಇದೇ ಶ್ಲೋಕವನ್ನು ಕಾಶಿಯ ವಿಶ್ವನಾಥ ದೇವಾಲಯದಲ್ಲಿ ಹಾಡುತ್ತಾರೆ.

ಮಠದಲ್ಲಿ ಊಟ-ಗೀಟ ಮುಗಿಯುವುದರೊಳಗೆ ರಾತ್ರಿ ಹನ್ನೊಂದು ಘಂಟೆ ಆಯಿತು. ಮಠದ ಸೋದರರು ಮಾಸ್ಟರಿಗೆ ಒಂದು ಹಾಸಿಗೆಯನ್ನು ಸಿದ್ಧಮಾಡಿ ತಾವೂ ಮಲಗಿಕೊಂಡರು.

ಈಗ ನಡು ರಾತ್ರಿ. ಮಾಸ್ಟರಿಗೆ ಇನ್ನೂ ನಿದ್ದೆ ಹತ್ತಿಲ್ಲ. ಆತ ತನಗೆ ತಾನೆ ಹೇಳಿಕೊಳ್ಳುತ್ತಿದಾನೆ: "ಎಲ್ಲವೂ ಹಿಂದಿನ ಹಾಗೇ ಇದೆ. ಹಿಂದಿನ ಅಯೋಧ್ಯೆಯೆ — ಆದರೆ ರಾಮ ಮಾತ್ರ ಇಲ್ಲ." ಮಾಸ್ಟರ್ ಮೆತ್ತಗೆ

ಹಾಸಿಗೆಯಿಂದ ಎದ್ದ. ಇಂದು ವೈಶಾಖ ಪೂರ್ಣಿಮೆ. ಬೌದ್ಧರ ಮೂರು ಬಾರಿ ಪವಿತ್ರಗೊಂಡ ಪೂರ್ಣಿಮೆ — ಬುದ್ಧ ಜನ್ಮ ತಳೆದದ್ದು, ನಿರ್ವಾಣ ಪಡೆದದ್ದು, ಮಹಾಸಮಾಧಿಯನ್ನು ಹೊಂದಿದ್ದು ಇಂಥ ಪೂರ್ಣಿಮೆಯ ದಿನಗಳಲ್ಲೇ. ಈಗ ಮಾಸ್ಟರ್ ಏಕಾಕಿಯಾಗಿ ಗಂಗಾ ದಡದಲ್ಲಿ ನಡೆಯುತ್ತಾ ಪರಮಹಂಸರ ಜೀವನವನ್ನು ಸ್ಮರಿಸಿಕೊಳ್ಳುತ್ತಿದಾನೆ.

ಇಂದು ಭಾನುವಾರ. ಮಾಸ್ಟರ್ ನಿನ್ನೆ ಶನಿವಾರ ಇಲ್ಲಿಗೆ (ಮಠಕ್ಕೆ) ಬಂದ. ಬರೋ ಬುಧವಾರದ ವರೆಗೆ ಇಲ್ಲೇ ಇರುತ್ತಾನೆ. ಗೃಹಸ್ಥ ಭಕ್ತರು ಸಾಮಾನ್ಯವಾಗಿ ಭಾನುಭಾನುವಾರ ಮಠಕ್ಕೆ ಬರೋ ವಾಡಿಕೆ.

ಮಠದಲ್ಲಿ ಈಗ ಕೆಲವು ದಿನಗಳಿಂದ ಯೋಗವಾಸಿಷ್ಠದ ಪ್ರವಚನ ನಡೆಯುತ್ತಿದೆ. ಮಾಸ್ಟರ್ ಇದರ ಸಂಬಂಧವಾಗಿ ಪರಮಹಂಸರಿಂದ ಅಲ್ಪಸ್ವಲ್ಪವಾಗಿ ಕೇಳಿದ್ದ. ಅದು ಜೀವ, ಬ್ರಹ್ಮ ಒಂದೇ; ಈ ಜಗತ್ತು ಮಿಥ್ಯಾ ಅಂತ ಬೋಧಿಸುತ್ತದೆ. ದೇಹಬುದ್ಧಿ ಇರೋವರೆಗೆ ಯೋಗ ವಾಸಿಷ್ಠದ "ಸೋऽಹಮ್" ಭಾವವನ್ನು ಅನುಸರಿಸಕೂಡದು; ಗೃಹಸ್ಥರಿಗೆ "ಸೇವ್ಯ-ಸೇವಕ" ಭಾವವೇ ಒಳ್ಳೆಯದು ಎಂದು ಪರಮ ಹಂಸರು ತಿಳಿಸಿದ್ದರು.

ಈಗ ಮಾತುಕತೆ ಯೋಗವಾಸಿಷ್ಠದ ಸಂಬಂಧವಾಗಿ ಆರಂಭ ವಾಯಿತು.

ಮಾಸ್ಟರ್: "ಒಳ್ಳೆಯದು, ಯೋಗವಾಸಿಷ್ಠ ಬ್ರಹ್ಮಜ್ಞಾನದ ಸಂಬಂಧವಾಗಿ ಏನು ಹೇಳುತ್ತದೆ?"

ರಾಖಾಲ: "ಹಸಿವು, ಬಾಯಾರಿಕೆ, ಸುಖ, ದುಃಖ ಇವೆಲ್ಲಾ ಮಾಯೆ. ಬ್ರಹ್ಮಸಾಕ್ಷಾತ್ಕಾರಕ್ಕೆ ಮನೋನಾಶವೇ ಉಪಾಯ."

ಮಾಸ್ಟರ್: "ಮನೋನಾಶವಾದ ಮೇಲೆ ಏನು ಉಳಿದುಕೊಳ್ಳು ತ್ತದೆಯೊ ಅದೇ ಬ್ರಹ್ಮ, ಅಲ್ಲವೆ?"

ರಾಖಾಲ: "ಹೌದು."

ಮಾಸ್ಟರ್: "ಪರಮಹಂಸರೂ ಹೀಗೇ ಹೇಳುತ್ತಿದ್ದರು. ಇದೇ ರೀತಿಯಾಗಿ ತೋತಾಪುರಿ ಅವರಿಗೆ ಹೇಳಿದ್ದನಂತೆ. ಒಳ್ಳೆಯದು, ವಸಿಷ್ಠ ರಾಮನಿಗೆ ಸಂಸಾರಿಯಾಗು ಅಂತ ಹೇಳಿರುವುದೇನಾದರು ಅದರಲ್ಲಿ ಇದೆ ಯೇನು?"

ರಾಖಾಲ: "ಅಂಥದೇನು ನನ್ನ ಕಣ್ಣಿಗೆ ಇದುವರೆಗೆ ಬಿದ್ದಿಲ್ಲ.

ರಾಮನನ್ನು ಅವತಾರಪುರುಷ ಅಂತ ಗ್ರಂಥಕರ್ತ ಒಪ್ಪಿಕೊಳ್ಳುತ್ತಲೇ ಇಲ್ಲ."

ಈ ಸಮಯಕ್ಕೆ ಸರಿಯಾಗೇ ಗಂಗಾ ತೀರದಿಂದ ನರೇಂದ್ರ, ತಾರಕ, ಇನ್ನೊಬ್ಬ ಭಕ್ತ ಹಿಂದಿರುಗಿ ಮಠಕ್ಕೆ ಬಂದರು. ಗಂಗೆಯ ಆಚೆ ದಡದಲ್ಲಿರೋ ಕೊನ್ನಗರಕ್ಕೆ ಹೋಗಬೇಕೆಂದು ಅವರು ಗಂಗೆಯ ಹತ್ತಿರಕ್ಕೆ ಹೋಗಿದ್ದರು. ದೋಣಿ ಸಿಕ್ಕದೆಹೋದುದರಿಂದ ಹಿಂದಿರುಗಿ ಬಂದು ಕುಳಿತುಕೊಂಡರು. ಯೋಗವಾಸಿಷ್ಠದ ಸಂಬಂಧವಾಗಿ ಮಾತು ಕತೆ ಮುಂದುವರಿಯಿತು.

ನರೇಂದ್ರ ಮಾಸ್ಟರಿಗೆ: "ಅದರಲ್ಲಿ ಅನೇಕ ಒಳ್ಳೆ ಕಥೆಗಳಿವೆ. ಲೀಲೆಯ ಕಥೆ ನಿಮಗೆ ಗೊತ್ತೇನು?"

ಮಾಸ್ಟರ್: "ಹೌದು, ಅದು ಯೋಗವಾಸಿಷ್ಠದಲ್ಲಿ ಇದೆ. ಅದರ ಹಾಳೆಗಳನ್ನು ಅಲ್ಲಿ ಇಲ್ಲಿ ತಿರುವಿಹಾಕಿ ನೋಡಿದೇನೆ. ಲೀಲೆಗೆ ಬ್ರಹ್ಮಜ್ಞಾನ ದೊರೆತಿತ್ತು, ಅಲ್ಲವೇನು?"

ನರೇಂದ್ರ: "ಹೌದು, ಇಂದ್ರ, ಅಹಲ್ಯೆ ಇವರ ಸಂವಾದ ಜ್ಞಾಪಕ ದಲ್ಲಿದೆಯೆ? ಆದು, ವಿದೂರಥರಾಜ ಚಂಡಾಲನಾದ್ದು?"

ಮಾಸ್ಟರ್: "ಜ್ಞಾಪಕದಲ್ಲಿವೆ."

ನರೇಂದ್ರ: "ವನದ ವರ್ಣನೆ ಎಷ್ಟು ಸೊಗಸಾಗಿದೆ!"

ನರೇಂದ್ರನೇ ಮೊದಲಾದವರು ಗಂಗಾಸ್ನಾನಕ್ಕೆ ಹೊರಟಿದಾರೆ. ಮಾಸ್ಟರೂ ಅವರನ್ನು ಹಿಂಬಾಲಿಸಿದ. ಬಹಳ ಬಿಸಿಲು. ಆದ್ದರಿಂದ ಮಾಸ್ಟರ್ ಜೊತೆಯಲ್ಲಿ ಛತ್ರಿ ತೆಗೆದುಕೊಂಡಿದಾನೆ. ವರಾಹನಗರದ ನಿವಾಸಿ ಶರಚ್ಚಂದ್ರನೂ ಗಂಗಾಸ್ನಾನಕ್ಕೆ ಹೊರಟಿದಾನೆ. ಆತ ಸದಾಚಾರ ನಿಷ್ಠ ಗೃಹಸ್ಥ ಬ್ರಾಹ್ಮಣ ಯುವಕ. ಆಗಾಗ ಮಠಕ್ಕೆ ಬರುತ್ತಲೇ ಇದಾನೆ. ಆತ ತೀರ್ಥ ಯಾತ್ರೆಗೆ ಹೋಗಿದ್ದು ಕೆಲವು ದಿನಗಳ ಹಿಂದೆ ಹಿಂದಿರುಗಿ ಬಂದಿದಾನೆ.

ಮಾಸ್ಟರ್ ಶರಚ್ಚಂದ್ರನಿಗೆ: "ಬಿಸಿಲು ಬಹಳ."

ನರೇಂದ್ರ: "ಓಹೋ! ಅದಕ್ಕಾಗೊ ನೀವು ಛತ್ರಿ ತೆಗೆದುಕೊಂಡು ಬಂದಿರೋದು?"

ಮಾಸ್ಟರ್ ನಕ್ಕ.

ಮಠದ ಸೋದರರೆಲ್ಲರು ಕಾಷಾಯವಸ್ತ್ರಧಾರಿಗಳಾಗಿದಾರೆ.

ಮಾಸ್ಟರ್ ನರೇಂದ್ರನಿಗೆ: "ನಿಜವಾಗಿಯೂ ಇಂದು ಬಹಳ ಬಿಸಿಲು. ಸೂರ್ಯಾಘಾತವಾಗೋ ಸಂಭವ."

ನರೇಂದ್ರ: "ಓಹೋ, ಈಗ ನನಗೆ ಅರ್ಥವಾಯಿತು. ನಿಮ್ಮ ಈ ಶರೀರವೇ ನಿಮ್ಮ ವೈರಾಗ್ಯದ ಪ್ರತಿಬಂಧಕ, ಅಲ್ಲವೆ? ನಿಮ್ಮ, ದೇವೇನಬಾಬುವಿನ—"

ಮಾಸ್ಟರ್ ನಗುತ್ತ ತನಗೆ ತಾನೆ ಹೇಳಿಕೊಳ್ಳುತ್ತಿದಾನೆ: "ಕೇವಲ ಶರೀರವೇ ಏಕೆ?"

ಸ್ನಾನಾನಂತರ ಭಕ್ತರು ಮಠಕ್ಕೆ ಹಿಂದಿರುಗಿದರು. ಕೈ ಕಾಲು ತೊಳೆದುಕೊಂಡು ದೇವರ ಮನೆಗೆ ಹೋಗಿ ಗುರುಮಹಾರಾಜರಿಗೆ ಪ್ರಣಾಮಮಾಡಿ ಅವರಿಗೆ ಪುಷ್ಪಾಂಜಲಿಯನ್ನು ಅರ್ಪಿಸಿದರು.

ನರೇಂದ್ರ ದೇವರ ಮನೆಗೆ ಸ್ವಲ್ಪ ತಡವಾಗಿ ಬಂದ. ಅಷ್ಟರಲ್ಲಿ ತಟ್ಟೆಯಲ್ಲಿಟ್ಟದ್ದ ಹೂವುಗಳೆಲ್ಲಾ ಮುಗಿದುಹೋಗಿದ್ದುವು; ಎಲ್ಲೋ ಕೆಲವು ಬಿಲ್ವ ಪತ್ರೆಗಳು ಮಾತ್ರ ಉಳಿದುಕೊಂಡಿದ್ದುವು. ಅವುಗಳಿಗೇನೆ ಸ್ವಲ್ಪ ಗಂಧಚಂದನಗಳನ್ನು ಹಚ್ಚಿ ಗುರುಮಹಾರಾಜರಿಗೆ ಅರ್ಪಿಸಿ ಅವರಿಗೆ ಪ್ರಣಾಮಮಾಡಿದ. ಬಳಿಕ ಘಂಟಾನಾದವನ್ನು ಮಾಡಿ ಮತ್ತೆ ಗುರು ಮಹಾರಾಜರಿಗೆ ಪ್ರಣಾಮಮಾಡಿದ. ಈಗ "ದಾನವರ ಕೊಠಡಿ" ಎಂಬ ಹೆಸರಿನ ಆ ದೊಡ್ಡ ಅಂಗಳಕ್ಕೆ ಬಂದು ಉಳಿದ ಸೋದರರೊಡನೆ ಕುಳಿತುಕೊಂಡ.

ಮಠದ ಸೋದರರು ತಮ್ಮನ್ನು ತಾವೆ "ದಾನವರು", "ದೈತ್ಯರು" ಎಂಬುದಾಗಿ—ಶಿವನ ಅನುಯಾಯಿಗಳಾದ ದೆವ್ವ ಪಿಶಾಚಿಗಳು— ಕರೆದು ಕೊಳ್ಳುತ್ತಿದ್ದರು. ಅವರು ಈ ಜಗತ್ತಿನ ಸುಖದುಃಖಗಳ ಕಡೆ ಅತ್ಯಂತ ಉದಾಸೀನರಾಗಿದ್ದುದರಿಂದ ಈ ಹೆಸರುಗಳನ್ನು ತಮಗೆ ತಾವೇ ನಾಮಕರಣ ಮಾಡಿಕೊಂಡಿದ್ದರು.

ಎರಡನೆ ಅಂತಸ್ತಿನಲ್ಲಿ ಅತ್ಯಂತ ದಕ್ಷಿಣದಲ್ಲಿದ್ದ ಕೊಠಡಿಯನ್ನು ಧ್ಯಾನ ಮತ್ತು ಪಾಠಕ್ಕಾಗಿ ಉಪಯೋಗಿಸುತ್ತಿದ್ದರು. ಅದರಲ್ಲೇ ಕಾಳೀ ಪ್ರಸಾದ ತನ್ನ ಸಮಯದ ಬಹುಭಾಗವನ್ನು ಕಳೆದುಬಿಡುತ್ತಿದ್ದ. ಆದ್ದರಿಂದ ಆ ಕೊಠಡಿಗೆ "ತಪಸ್ವಿ ಕಾಳಿಯ ಕೊಠಡಿ" ಎಂಬ ಹೆಸರು ಬಂದು ಬಿಟ್ಟಿತ್ತು. ಅದಕ್ಕೆ ಉತ್ತರದಲ್ಲಿದ್ದ ಕೊಠಡಿಯೇ ದೇವರ ಮನೆ. ಅದಕ್ಕೆ ಉತ್ತರದ್ದು ನೈವೇದ್ಯ ತಯಾರಿಸೋ ಕೊಠಡಿ. ಈ ಕೊಠಡಿಯಲ್ಲೇ

ನಿಂತು ಮಂಗಳಾರತಿ ನೋಡಬೇಕಾಗಿತ್ತು. ಭಕ್ತರು ಈ ಕೊಠಡಿಗೆ ಬಂದು ಗುರುಮಹಾರಾಜರಿಗೆ ಪ್ರಣಾಮಮಾಡುತ್ತಿದ್ದರು. ಇದಕ್ಕೆ ಉತ್ತರದಲ್ಲಿ ದಾನವರ ಕೊಠಡಿ. ಮಠದ ಸೋದರರೆಲ್ಲಾ ನೆರೆಯುತ್ತಿದ್ದುದು ಈ ಕೊಠಡಿಯಲ್ಲೇ. ಇದೇ ಬೈಠಕ್‌ಖಾನೆಯಾಗಿತ್ತು. ಇದಕ್ಕೆ ಉತ್ತರದಲ್ಲಿ ಒಂದು ಚಿಕ್ಕ ಕೊಠಡಿ. ಇದಕ್ಕೇ "ಪಾನದ" ಕೊಠಡಿ ಎಂಬ ಹೆಸರನ್ನಿಟ್ಟಿದ್ದರು. ಇದರಲ್ಲಿ ಸೋದರರೆಲ್ಲರೂ ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ದೇವರ ಮನೆಯ ಮತ್ತು ತಪಸ್ವಿ ಕಾಳಿಯ ಕೊಠಡಿಯ ಪೂರ್ವಕ್ಕೆ ಒಂದು ಉದ್ದವಾದ ವರಾಂಡವಿತ್ತು. ಇದರ ನೈರುತ್ಯದ ಕೊನೆಯಲ್ಲಿ ವರಾಹನಗರದ ಒಂದು ಸಮಿತಿಯ ವಾಚಾನಾಲಯವಿತ್ತು. ಈ ವಾಚನಾಲಯಕ್ಕು, ತಪಸ್ವಿ ಕಾಳಿಯ ಕೊಠಡಿಗು ಮಧ್ಯೆ ಕೆಳಗಿನಿಂದ ಮೇಲಕ್ಕೆ ಹತ್ತಿಬರಲು ಒಂದು ಮೆಟ್ಟಲಸಾಲು ಇತ್ತು. "ಪಾನದ" ಕೊಠಡಿಯ ಉತ್ತರ ದಿಕ್ಕಿನಲ್ಲಿ ಈ ಎರಡನೆ ಅಂತಸ್ತಿನಿಂದ ಚಾವಣಿಗೆ ಹೋಗಲು ಒಂದು ಮೆಟ್ಟಲಸಾಲೂ ಇತ್ತು.

ನರೇಂದ್ರ ಮತ್ತು ಉಳಿದ ಮಠದ ಸೋದರರು ಅನೇಕವೇಳೆ ಈ ಚಾವಣಿ ಮೇಲೆಯೆ ತಮ್ಮ ಸಾಯಂಕಾಲವನ್ನು ಕಳೆಯುತ್ತಿದ್ದರು. ಆ ಸಮಯದ ಬಹುಭಾಗವನ್ನು ಅವರು ಶ್ರೀರಾಮಕೃಷ್ಣರ, ಶಂಕರಾಚಾರ್ಯರ, ರಾಮಾನುಜಾಚಾರ್ಯರ, ಏಸುವಿನ ಉಪದೇಶಗಳ ಸಂಬಂಧವಾಗಿ ಮತ್ತು ಹಿಂದೂ ದರ್ಶನ, ಪಾಶ್ಚಾತ್ಯ ದರ್ಶನ, ವೇದ, ಪುರಾಣ, ತಂತ್ರ ಇವುಗಳ ಸಂಬಂಧವಾಗಿ ಮಾತುಕತೆಗಳಾಡುತ್ತಲೇ ಕಳೆಯುತ್ತಿದ್ದರು.

ನರೇಂದ್ರ ತನ್ನ ದೇವದುರ್ಲಭ ಕಂಠದಿಂದ ಆಗಾಗ "ದಾನವರ" ಕೊಠಡಿಯಲ್ಲಿ ಕುಳಿತು ಹಾಡುತ್ತಿದ್ದ ಮತ್ತು ಶರಚ್ಚಂದ್ರ ಮೊದಲಾದವರಿಗೆ ಸಂಗೀತ ಕಲಿಸುತ್ತಿದ್ದ. ಕಾಳಿ ಇಲ್ಲಿ ತಬಲವನ್ನು ಕಲಿಯುತ್ತಿದ್ದ. ಸೋದರರೆಲ್ಲರೂ ತಮ್ಮ ಅನೇಕ ಘಂಟೆಗಳನ್ನು ಈ ಕೊಠಡಿಯಲ್ಲಿ ಆನಂದದಿಂದ ಹಾಡುತ್ತ ನರ್ತಿಸುತ್ತ ಕಳೆಯುತ್ತಿದ್ದರು.

ನರೇಂದ್ರ ಭಕ್ತರೊಡನೆ "ದಾನವರ" ಕೊಠಡಿಯಲ್ಲಿ ಕುಳಿತಿದಾನೆ. ಧರ್ಮಪ್ರಚಾರದ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಮಾಸ್ಟರ್ ನರೇಂದ್ರನಿಗೆ: "ವಿದ್ಯಾಸಾಗರ ಹೇಳುತ್ತಾನೆ: 'ಬೆತ್ತದ

ಏಟಿಗೆ ಹೆದರಿ ನಾನು ಯಾರಿಗೂ ಭಗವಂತನ ವಿಷಯವಾಗಿ ಏನನ್ನೂ ಹೇಳುತ್ತಿಲ್ಲ.' "

ನರೇಂದ್ರ: "ಬೆತ್ತದ ಏಟಿಗೆ ಹೆದರೋದೆ? ಏನದು?"

ಮಾಸ್ಟರ್: "ವಿದ್ಯಾಸಾಗರ ಹೇಳುತ್ತಾನೆ: 'ಸತ್ತಮೇಲೆ ನಾವೆಲ್ಲರೂ ಭಗವಂತನ ಹತ್ತಿರಕ್ಕೆ ಹೋಗುತ್ತೇವೆ ಅಂತ ಭಾವಿಸಿಕೊಳ್ಳಿ. ಕೇಶವಸೇನ ಈ ಜಗತ್ತಿನಲ್ಲಿ ಅನೇಕ ಪಾಪ-ಗೀಪ ಕೃತ್ಯಗಳನ್ನು ಮಾಡಿ ರೋದರಿಂದ, ಯಮದೂತರು ಆತನನ್ನು ಭಗವಂತನ ಹತ್ತಿರಕ್ಕೆ ಕರೆದು ಕೊಂಡುಹೋಗುತ್ತಾರೆ. ಅವನು ಪಾಪಮಾಡಿರೋದು ಪ್ರಮಾಣವಾದ ನಂತರ ಬಹುಶಃ ಭಗವಂತ ಆತನಿಗೆ ಇಪ್ಪತ್ತೈದು ಬೆತ್ತದ ಏಟುಗಳನ್ನು ಹೊಡೆಯೋ ಹಾಗೇ ತನ್ನ ಕಿಂಕರರಿಗೆ ಆಜ್ಞೆಮಾಡಬಹುದು. ಬಳಿಕ ನನ್ನನ್ನೂ ಭಗವಂತನ ಹತ್ತಿರಕ್ಕೆ ಕಿಂಕರರು ಕರೆದುಕೊಂಡುಹೋಗುತ್ತಾರೆ ಅಂತ ಇಟ್ಟುಕೊಳ್ಳಿ. ನಾನೂ ಕೇಶವಸೇನನ ಸಮಾಜಕ್ಕೆ ಹೋಗುತ್ತಿ ರೋದರಿಂದ ಅನೇಕ ಅನ್ಯಾಯ ಕೆಲಸಗಳನ್ನು ಮಾಡಿದೇನೆ. ಅದಕ್ಕಾಗಿ ನನಗೂ ಬೆತ್ತದ ಏಟಿನ ಹುಕುಮ್ ಆಗಬಹುದು. ಆಗ ನಾನು ಹೇಳು ತ್ತೇನೆ: "ಕೇಶವಸೇನನ ಬೋಧೆ ಕೇಳಿ ಹೀಗೆಲ್ಲಾ ಮಾಡಿಬಿಟ್ಟೆ." ಆಗ ಭಗವಂತ ಕೇಶವಸೇನನನ್ನು ಮತ್ತೆ ಕರೆಯಿಸಿ ಹೇಳುತ್ತಾನೆ: "ಏನು, ನೀನು ಈತನಿಗೆ ಉಪದೇಶ ಕೊಟ್ಟೆಯೇನು? ನನ್ನ ವಿಷಯವಾಗಿ ನಿನಗೇ ಏನೂ ಗೊತ್ತಿಲ್ಲ, ಅಂಥಾದ್ದರಲ್ಲಿ ನೀನು ಪರರಿಗೆ ಉಪದೇಶ ಮಾಡಿದೆಯಾ! ಏನ್ರೋ, ಯಾರಿದೀರ‍್ರೋ ಇಲ್ಲಿ. ಕೊಡಿ ಇವನಿಗೆ ಇನ್ನಿಪ್ಪತ್ತೈದು."'" (ಎಲ್ಲರೂ ನಗುತ್ತಿದಾರೆ.)

"ಇದಕ್ಕಾಗೇ ವಿದ್ಯಾಸಾಗರ ಹೇಳೋದು: 'ನನ್ನ ಯೋಗಕ್ಷೇಮ ವನ್ನು ನಾನೇ ನೋಡಿಕೊಳ್ಳಲಾರೆ; ಅಂಥಾದ್ದರಲ್ಲಿ ಪರರಿಗೆ ತಪ್ಪು ದಾರಿ ತೋರಿಸಿ ಬೆತ್ತದ ಏಟನ್ನು ತಿನ್ನಲೇ? ಭಗವಂತನ ವಿಷಯ ನನಗೇನೆಂದ ರೇನೂ ಗೊತ್ತಿಲ್ಲ. ನಿಜಸ್ಥಿತಿ ಹೀಗಿರುವಾಗ ನಾನು ಭಗವಂತನ ಸಂಬಂಧ ವಾಗಿ ಪರರಿಗೆ ಉಪದೇಶಕೊಡಲೆ?' "

ನರೇಂದ್ರ: "ಯಾರಿಗೆ ಭಗವಂತನ ವಿಷಯವಾಗಿ ಏನೂ ಗೊತ್ತಿಲ್ಲವೊ, ಅಂಥವನಿಗೆ ಉಳಿದ ಹತ್ತಾರು ವಿಷಯಗಳ ಸಂಬಂಧವಾಗಿ ಅರಿವಾದ ಬಗೆ ಹೇಗೆ?"

ಮಾಸ್ಟರ್: "ಉಳಿದ ಹತ್ತಾರು ಯಾವುವು?"

ನರೇಂದ್ರ: "ಆತ ಹೇಳುತ್ತಿದಾನೆ, ಭಗವಂತನ ವಿಷಯವಾಗಿ ತನಗೆ ಏನೂ ಗೊತ್ತಿಲ್ಲ ಅಂತ. ಹಾಗಾದರೆ ಆತ ದಯೆ, ಪರೋಪಕಾರ ಇವುಗಳ ಸಂಬಂಧವಾಗಿ ಅರಿತುಕೊಂಡ ಬಗೆ ಹೇಗೆ? ಸ್ಕೂಲನ್ನು ಕಟ್ಟಿಸ ಬೇಕು ಎಂಬುದಾಗಿ ಅರಿತ ಬಗೆ ಹೇಗೆ? ಸ್ಕೂಲನ್ನು ಕಟ್ಟಿಸಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕು ಎಂಬುದನ್ನು ಅರಿತ ಬಗೆ ಹೇಗೆ? ಸಂಸಾರಕ್ಕೆ ಕಾಲಿಟ್ಟು, ವಿವಾಹ ಮಾಡಿಕೊಂಡು ಮಕ್ಕಳನ್ನು ಹೆತ್ತುಕೊಳ್ಳುವುದು ಸರಿ ಎಂಬುದಾಗಿ ಅರಿತ ಬಗೆ ಹೇಗೆ?

"ಯಾರು ಒಂದನ್ನು ಸರಿಯಾಗಿ ಅರಿತುಕೊಳ್ಳಬಲ್ಲನೊ, ಆತ ಎಲ್ಲ ವನ್ನೂ ಸರಿಯಾಗಿ ಅರಿತುಕೊಳ್ಳಬಲ್ಲ."

ಮಾಸ್ಟರ್ ತನಗೆ ತಾನೆ: "ಹೌದು, ಪರಮಹಂಸರೂ ಹೇಳು ತ್ತಿದ್ದರು: 'ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಆತನಿಗೆ ಎಲ್ಲವೂ ಗೊತ್ತಾಗುತ್ತದೆ.' ಸಂಸಾರದ ಸಂಬಂಧವಾಗಿ, ಸ್ಕೂಲಿನ ಸಂಬಂಧವಾಗಿ ವಿದ್ಯಾಸಾಗರನಿಗೆ ಹೇಳಿದ್ದರು: 'ರಜೋಗುಣದಿಂದ ಆ ಪ್ರವೃತ್ತಿ ಬರುತ್ತದೆ.' ವಿದ್ಯಾಸಾಗರನ ದಯೆಯ ಸಂಬಂಧವಾಗಿ ಅವರು ಹೇಳಿದ್ದರು: 'ಇದು ಸತ್ತ್ವಪ್ರಧಾನ ರಜೋಗುಣದ ಕಾರ್ಯ. ಈ ರಜೋಗುಣದಿಂದ ಯಾವ ಹಾನಿಯೂ ಬಾರದು.'"

ಮಧ್ಯಾಹ್ನ ಊಟವಾದನಂತರ ಮಠದ ಸೋದರರೆಲ್ಲರೂ ವಿಶ್ರಮಿಸಿ ಕೊಳ್ಳುತ್ತಿದಾರೆ. ಮಾಸ್ಟರ್ ಮತ್ತು ಚುಣಿಲಾಲ ಒಂದು ಕಡೆ ಕುಳಿತು ಮಾತುಕತೆಗಳಾಡುತ್ತಿದಾರೆ. ಚುಣಿಲಾಲ ಮಾಸ್ಟರಿಗೆ ಹೇಳುತ್ತಿದಾನೆ, ಯಾವ ರೀತಿಯಾಗಿ ದಕ್ಷಿಣೇಶ್ವರದಲ್ಲಿ ತನಗೆ ಪರಮಹಂಸರ ಮೊಟ್ಟ ಮೊದಲ ದರ್ಶನ ದೊರೆಯಿತು ಎಂಬುದರ ವಿಷಯವಾಗಿ. ಆತನಿಗೆ ಸಂಸಾರ ರುಚಿಸದೆ ಹೋಗಿ, ಆತ ಮನೆ ಬಿಟ್ಟು ಹೊರಟು ತೀರ್ಥಯಾತ್ರೆ ಮಾಡಿಕೊಂಡು ಹಿಂದಿರುಗಿ ಬಂದಿದಾನೆ. ಆ ವಿಷಯವಾಗೂ ಆತ ಮಾತಾಡುತ್ತಿದಾನೆ. ಸ್ವಲ್ಪ ಹೊತ್ತಾದನಂತರ ನರೇಂದ್ರ ಎದ್ದುಬಂದು ಅವರ ಹತ್ತಿರ ಕುಳಿತುಕೊಂಡ. ಆತ ಚಿಕ್ಕ ಗೋಪಾಲನಿಗೆ ಹೇಳಿದ ತನಗೆ ಹುಕ್ಕ ತಯಾರುಮಾಡಿಕೊಡುವಂತೆ. ಚಿಕ್ಕ ಗೋಪಾಲ ಧ್ಯಾನ ದಲ್ಲಿ ಕುಳಿತಿದಾನೆ. ನರೇಂದ್ರ ಆತನಿಗೆ ಹೇಳುತ್ತಿದಾನೆ: "ನಾನು ಹೇಳುತ್ತಿರುವುದು ಕಿವಿಗೆ ಬಿತ್ತೇನು? ಈ ನಿನ್ನ ಧ್ಯಾನದಿಂದ ಏನು ಪ್ರಯೋಜನ? ಮೊದಲು ಭಗವಂತನ, ಸಾಧುಗಳ ಸೇವೆ ಮಾಡೋದನ್ನು

ಕಲಿತುಕೊ; ತರುವಾಯ ನಿನಗೆ ಧ್ಯಾನಮಾಡೋ ಯೋಗ್ಯತೆ ಬರುತ್ತದೆ. ಮೊದಲು ಕರ್ಮ, ಬಳಿಕ ಧ್ಯಾನ.'' (ಎಲ್ಲರೂ ನಗುತ್ತಿದಾರೆ.)

ಮಠದ ಆವರಣದ ಪಶ್ಚಿಮಕ್ಕೆ ಗಿಡಮರಗಳಿಂದ ಕೂಡಿದ ಒಂದು ವಿಸ್ತಾರವಾದ ಪ್ರದೇಶವಿದೆ. ಮಾಸ್ಟರ್ ಅಲ್ಲಿ ಒಂದು ಮರದ ಕೆಳಗೆ ಏಕಾಕಿಯಾಗಿ ಕುಳಿತಿದಾನೆ. ಇದ್ದಕ್ಕಿದ್ದಹಾಗೆ ಅಲ್ಲಿಗೆ ಶಾರದಾಪ್ರಸನ್ನ ಬಂದ. ಘಂಟೆ ಅಪರಾಹ್ನ ಮೂರು.

ಮಾಸ್ಟರ್: ''ಈ ಕೆಲವು ದಿವಸಗಳನ್ನು ನೀನು ಎಲ್ಲಿ ಕಳೆದೆ? ನಿನ್ನ ಸಂಬಂಧವಾಗಿ ಎಲ್ಲರೂ ಬಹಳವಾಗಿ ಚಿಂತಿಸುತ್ತಿದ್ದರು. ಮಠದ ಸೋದರರನ್ನೆಲ್ಲ ಸಂಧಿಸಿದೆಯೇನು? ಯಾವಾಗ ಬಂದೆ?''

ಪ್ರಸನ್ನ: ''ಈಗ ತಾನೆ ಬಂದು ಅವರನ್ನೆಲ್ಲ ಸಂಧಿಸಿದೆ.''

ಮಾಸ್ಟರ್: ''ನೀನು ಬೃಂದಾವನಕ್ಕೆ ಹೋಗುವುದಾಗಿ ಪತ್ರ ಬರೆದಿಟ್ಟು ಹೋಗಿದ್ದೆ. ನಾವೆಲ್ಲರೂ ನಿನಗಾಗಿ ಬಹಳವಾಗಿ ಚಿಂತಿಸುತ್ತಿದ್ದೆವು. ಏನು, ಎಲ್ಲಿಯವರೆಗೆ ಹೋಗಿದ್ದೆ?''

ಪ್ರಸನ್ನ: ''ಓ, ಕೊನ್ನಗರದ[1] ವರೆಗೆ ಮಾತ್ರ.''

ಇಬ್ಬರೂ ನಗುತ್ತಿದಾರೆ.

ಮಾಸ್ಟರ್: ''ಕುಳಿತುಕೊ. ನಡೆದ ವೃತ್ತಾಂತವನ್ನೆಲ್ಲ ತಿಳಿಸು. ಮೊದಲು ನೀನು ತಂಗಿದ ಸ್ಥಳವಾವುದು?''

ಪ್ರಸನ್ನ: ''ದಕ್ಷಿಣೇಶ್ವರದ ಕಾಳೀದೇವಾಲಯ. ಅಲ್ಲಿ ಒಂದು ರಾತ್ರಿಯನ್ನು ಕಳೆದೆ.''

ಮಾಸ್ಟರ್ ನಗುತ್ತ: ''ಹಾಜರಾ ಮಹಾಶಯನ ಪ್ರಸ್ತುತ ಭಾವ ಏನು?''

ಪ್ರಸನ್ನ: ''ಹಾಜರಾ ಕೇಳಿದ: 'ನನ್ನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು?''' (ಇಬ್ಬರೂ ನಗುತ್ತಿದಾರೆ.)

ಮಾಸ್ಟರ್: ''ನೀನು ಏನು ಉತ್ತರ ಕೊಟ್ಟೆ?''

ಪ್ರಸನ್ನ: ''ನಾನು ಸುಮ್ಮನೆ ಇದ್ದುಬಿಟ್ಟೆ.''

ಮಾಸ್ಟರ್: ''ಬಳಿಕ?''

---

1. ಮಠದಿಂದ ಕೆಲವು ಮೈಲಿಗಳ ದೂರದಲ್ಲಿರುವ ಒಂದು ಚಿಕ್ಕನಗರ. ಇದು ಗಂಗಾ ನದಿಯ ಆಚೆ ದಡದಲ್ಲಿದೆ.

ಪ್ರಸನ್ನ: "ಮತ್ತೆ ಕೇಳಿದ: 'ನನಗಾಗಿ ಹೊಗೆಸೊಪ್ಪು ತಂದಿದೀಯಾ?' (ಇಬ್ಬರೂ ನಗುತ್ತಿದಾರೆ.) ನಾನು ಆತನ ಸೇವೆ ಮಾಡಿಕೊಂಡಿರಬೇಕೆಂಬುದಾಗಿ ಆತ ಇಚ್ಛೆಪಟ್ಟ." (ನಗು.)

ಮಾಸ್ಟರ್: "ಬಳಿಕ ಎಲ್ಲಿಗೆ ಹೋದೆ?"

ಪ್ರಸನ್ನ: "ಕ್ರಮಕ್ರಮೇಣ ಕೊನ್ನಗರವನ್ನು ತಲುಪಿದೆ. ಮೈದಾನದಲ್ಲಿ ಒಂದು ಕಡೆ ಮಲಗಿ ರಾತ್ರಿಯನ್ನು ಕಳೆದೆ. ಇನೂ ಮುಂದುವರಿಯಬೇಕು ಅಂತ ಭಾವಿಸಿದೆ. ಪಶ್ಚಿಮದೇಶಕ್ಕೆ ಹೋಗಲು ಬೇಕಾಗೊ ರೈಲ್ವೆ ಛಾರ್ಜನ್ನು ಯಾರಾದರು ಕೊಡುವರೆ ನೋಡೋಣ ಅಂತ ಕೆಲವು ಸದ್ಗೃಹಸ್ಥರನ್ನು ಕೇಳಿ ನೋಡಿದೆ."

ಮಾಸ್ಟರ್: "ಅವರು ಏನು ಹೇಳಿದರು?"

ಪ್ರಸನ್ನ: "ಅವರು ಹೇಳಿದರು: 'ನಿನಗೆ ಒಂದು ರೂಪಾಯಿ ನಷ್ಟನ್ನು ಬೇಕಾದರೆ ಯಾರಾದರೂ ಕೊಡಬಲ್ಲರು; ಸಂಪೂರ್ಣ ಛಾರ್ಜನ್ನು ಯಾರು ಕೊಡುತ್ತಾರೆ?'" (ಇಬ್ಬರೂ ನಗುತ್ತಿದಾರೆ.)

ಮಾಸ್ಟರ್: "ಜೊತೆಯಲ್ಲಿ ಏನೇನು ತೆಗೆದುಕೊಂಡುಹೋಗಿದ್ದೆ?"

ಪ್ರಸನ್ನ: "ಓ, ಒಂದೆರಡು ಬಟ್ಟೆ ತುಂಡು ಮತ್ತು ಪರಮಹಂಸರ ಭಾವಚಿತ್ರ. ಭಾವಚಿತ್ರವನ್ನು ನಾನು ಯಾರಿಗೂ ತೋರಿಸಲಿಲ್ಲ."

ಶಶಿಯನ್ನು ಮನೆಗೆ ಕರೆದುಕೊಂಡುಹೋಗಿಯೇಬಿಡಬೇಕೆಂದು ಆತನ ತಂದೆ ಬಂದಿದಾನೆ. ಶ್ರೀರಾಮಕೃಷ್ಣರು ಅಸ್ವಸ್ಥರಾಗಿದ್ದಾಗ ಶಶಿ ಏಕನಿಷ್ಠೆಯಿಂದ ಸುಮಾರು ಒಂಬತ್ತು ತಿಂಗಳ ಕಾಲ ಅವರ ಸೇವೆ ಮಾಡಿದ್ದ. ಆತ ಬಿ.ಎ. ಕ್ಲಾಸಿಗೆ ಬಂದಿದಾನೆ; ಆದರೆ, ಪರೀಕ್ಷೆಗೆ ಇನ್ನೂ ಕುಳಿತಿರಲಿಲ್ಲ. ಪ್ರವೇಶ ಪರೀಕ್ಷೆಯಲ್ಲಿ ಆತನಿಗೆ ವಿದ್ಯಾರ್ಥಿ ವೇತನ ದೊರೆತಿತ್ತು. ಶಶಿಯ ತಂದೆ ಒಬ್ಬ ಬಡ ಬ್ರಾಹ್ಮಣ, ಆದರೆ ನಿಷ್ಠಾವಂತ ಮತ್ತು ಭಗವದ್ಭಕ್ತ. ಶಶಿಯೇ ಆತನ ಹಿರಿಯ ಮಗ. ಶಶಿ ವ್ಯಾಸಂಗವನ್ನು ಮುಗಿಸಿದನಂತರ ಸಾಕಾದಷ್ಟು ಹಣ ಸಂಪಾದಿಸಿ ತಮ್ಮ ದಾರಿದ್ರ್ಯವನ್ನು ದೂರಮಾಡುವನೆಂದು ಆತನ ತಂದೆತಾಯಿಗಳು ಆತನ ಮೇಲೆ ಭರವಸೆಯನ್ನಿಟ್ಟುಕೊಂಡಿದ್ದರು. ಆದರೆ ಆತ ಭಗವಂತನ ಸಾಕ್ಷಾತ್ಕಾರಕ್ಕಾಗಿ ಎಲ್ಲವನ್ನೂ ತ್ಯಜಿಸಿಬಿಟ್ಟಿದಾನೆ. ತಂದೆತಾಯಿಗಳ ಜ್ಞಾಪಕ ಬಂದಾಗಲೆಲ್ಲ ಆತನ ಹೃದಯ ಬಹಳವಾಗಿ ಸಂಕಟಪಡುತ್ತಿದೆ. ಅನೇಕ ವೇಳೆ ಕಣ್ಣೀರು ಸುರಿಸುತ್ತ ತನ್ನ ಸ್ನೇಹಿತರಿಗೆ ಹೇಳುತಾನೆ:

"ಏನು ಮಾಡಲಿ, ಏನು ಮಾಡಬೇಕೆಂಬುದೇ ಸರಿಯಾಗಿ ಹೊಳೆಯುತ್ತಿಲ್ಲ. ಹಾ ದೇವರೆ! ನಾನು ನನ್ನ ತಂದೆತಾಯಿಗಳ ಸೇವೆಯನ್ನು ಸ್ವಲ್ಪವೂ ಮಾಡಲಾಗಲಿಲ್ಲ. ಅವರು ನನ್ನ ಸಂಬಂಧವಾಗಿ ಎಂಥ ದೊಡ್ಡ ಸ್ವರ್ಣದ ಕನಸನ್ನು ಕಟ್ಟಿದ್ದರು! ದಾರಿದ್ರ್ಯದ ದೆಸೆಯಿಂದ ನನ್ನ ತಾಯಿ ಒಡವೆ ಮುಖವನ್ನೇ ನೋಡಲಾಗಲಿಲ್ಲ. ಆಕೆಗೆ ಕೆಲವು ಒಡವೆಗಳನ್ನು ಮಾಡಿಸಿ ಕೊಡಬೇಕೆಂದು ಸ್ವಪ್ನ ಕಟ್ಟಿದ್ದೆ. ಆದರೆ ಒಂದೂ ಸಾಧ್ಯವಿಲ್ಲ. ಮನೆಗೆ ಎಂದಿಗೂ ಹಿಂದಿರುಗಿಹೋಗಲಾರೆ. ಪರಮಹಂಸರು ಕಾಮಕಾಂಚನ ತ್ಯಜಿಸೋ ಹಾಗೆ ಹೇಳಿಹೋಗಿದಾರೆ. ಹರಿಹರಬ್ರಹ್ಮಾದಿಗಳು ಒತ್ತಾಯ ಪಡಿಸಿದರೂ ಮನೆಗೆ ಹಿಂದಿರುಗಿ ಹೋಗೋಕೆ ಆಗೋದೇ ಇಲ್ಲ."

ಶ್ರೀರಾಮಕೃಷ್ಣಪರಮಹಂಸರು ಮಹಾಸಮಾಧಿಯನ್ನು ಹೊಂದಿದ ಮೇಲೆ ಶಶಿ ಮನೆಗೆ ಹಿಂದಿರುಗಿ ಬಂದುಬಿಡುತ್ತಾನೆ ಎಂಬುದಾಗಿ ಆತನ ತಂದೆ ಭಾವಿಸಿದ್ದ. ಶಶಿಯೇನೊ ಒಂದು ಕೆಲವು ದಿವಸಗಳ ಮಟ್ಟಿಗೆ ಮನೆಗೆ ಹಿಂದಿರುಗಿಬಂದು ಇದ್ದ. ಆದರೆ ವರಾಹನಗರದ ಮಠ ಸ್ಥಾಪನೆ ಆದ ಮೇಲೆ ಆಗಾಗ ಅಲ್ಲಿಗೆ ಹೋಗುತ್ತಿದ್ದು ಕೊನೆಗೆ ಮಠದಲ್ಲೇ ಇರಲು ನಿರ್ಧರಿಸಿ ಅಲ್ಲೇ ಸ್ಥಾಯಿಯಾಗಿ ನಿಂತುಬಿಟ್ಟ. ಇದನ್ನು ನೋಡಿ ಆತ ನನ್ನು ಮನೆಗೆ ಹಿಂದಿರುಗುವಂತೆ ಒತ್ತಾಯಪಡಿಸಲೋಸುಗ ಆತನ ತಂದೆ ಮಠಕ್ಕೆ ಆಗಾಗ ಬರಲಾರಂಭಿಸಿದಾನೆ. ಶಶಿ ಮಾತ್ರ ಹಿಂದಿರುಗಿ ಹೋಗೋದಿಲ್ಲವೆಂದು ಸ್ಥಿರಸಂಕಲ್ಪಮಾಡಿಬಿಟ್ಟಿದಾನೆ.

ಇಂದು ತನ್ನ ತಂದೆ ಮಠಕ್ಕೆ ಬಂದಿರುವುದನ್ನು ನೋಡಿ, ಶಶಿ ಬೇರೊಂದು ಬಾಗಿಲಿನಿಂದ ಮಠದಿಂದ ಹೊರಕ್ಕೆ ಹೊರಟುಹೋದ. ಆತನಿಗೆ ತನ್ನ ತಂದೆಯನ್ನು ಸಂಧಿಸಲು ಇಚ್ಛೆ ಆಗಲಿಲ್ಲ.

ಶಶಿಯ ತಂದೆಗೆ ಮಾಸ್ಟರ ಪರಿಚಯವಿತ್ತು. ಅವರಿಬ್ಬರೂ ಎರಡನೆ ಅಂತಸ್ತಿನಲ್ಲಿದ್ದ ವರಾಂಡದಲ್ಲಿ ತಿರುಗಾಡುತ್ತ ಮಾತುಕತೆ ಆಡುತ್ತಿದಾರೆ.

ಶಶಿಯ ತಂದೆ: "ಇಲ್ಲಿಗೆ ಯಜಮಾನನಾರು? ನರೇಂದ್ರನೇ ಇದಕ್ಕೆಲ್ಲ ಮೂಲ. ಯುವಕರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಬಂದು ಮತ್ತೆ ಓದೋದು - ಬರೆಯೋದರಲ್ಲಿ ನಿರತರಾಗಿದ್ದರು."

ಮಾಸ್ಟರ್: "ಇಲ್ಲಿಗೆ ಯಜಮಾನನೆಂಬುವನೇ ಇಲ್ಲ. ಎಲ್ಲರೂ ಇಲ್ಲಿ ಸರಿಸಮಾನಸ್ಕಂಧರು. ಪಾಪ, ನರೇಂದ್ರ ಏನುಮಾಡಿಯಾನು?

ಸ್ವಂತ ಇಚ್ಛೆ ಇಲ್ಲದೆ ಮನೆ ಬಿಟ್ಟು ಬಂದುಬಿಡಲಾಗುತ್ತದೆಯೆ? ನಾವು ಒಮ್ಮೆಗೇ ಮನೆಯನ್ನು ತ್ಯಜಿಸಿಬರಲು ಶಕ್ಯರಾಗಿರುವೆವೇನು?''

ಶಶಿಯ ತಂದೆ: ''ನಿನ್ನ ವ್ಯವಹಾರ ಬಹಳ ಒಳ್ಳೆಯದು. ನೀನು ಪ್ರಪಂಚ, ಭಗವಂತ ಎರಡು ಕಡೆಗೂ ದೃಷ್ಟಿ ಇಟ್ಟಿದೀಯೆ. ನೀನು ನಡೆದುಕೊಳ್ಳುತ್ತಿರುವ ರೀತಿಯಲ್ಲಿ ನಡೆದುಕೊಂಡರೆ ಭಗವಂತನ ಕಡೆಗೆ ಹೋಗೋಕಾಗೋದಿಲ್ಲವೊ? ಶಶಿಯೂ ಹೀಗೇ ವ್ಯವಹರಿಸಬೇಕು ಅಂತ ನಮ್ಮ ಇಚ್ಛೆ. ಆತ ಇಲ್ಲೂ ಇರಲಿ, ಅಲ್ಲೂ ಇರಲಿ. ಆತನ ಹೆತ್ತ ತಾಯಿ ಆತನಿಗಾಗಿ ಎಷ್ಟೊಂದು ಅಳುತ್ತಿದಾಳೆ ಎಂಬುದನ್ನು ನಿನಗೆ ಊಹಿಸಲೂ ಸಾಧ್ಯವಿಲ್ಲ!''

ಮಾಸ್ಟರ್ ದುಃಖಿತನಾಗಿ ಯಾವ ಉತ್ತರವನ್ನು ಕೊಡಲಿಲ್ಲ.

ಶಶಿಯ ತಂದೆ: ''ಸಾಧುವಿನ ಸಹವಾಸಕ್ಕಾಗಿ ಹುಡುಕಾಡುತ್ತಿದ್ದರೆ ನಾನು ಆತನನ್ನು ಒಬ್ಬ ಒಳ್ಳೆ ಸಾಧುವಿನ ಹತ್ತಿರಕ್ಕೆ ಕರೆದು ಕೊಂಡುಹೋಗಬಲ್ಲೆ. ಇಂದ್ರನಾರಾಯಣನ ಮನೆಗೆ ಒಬ್ಬ ಸಾಧು ಬಂದಿದಾನೆ. ಬಹಳ ಒಳ್ಳೆಯವ. ಅಲ್ಲಿಗೆ ಬೇಕಾದರೆ ಅವನು ಹೋಗಲಿ.''

ರಾಖಾಲ ಮತ್ತು ಮಾಸ್ಟರ್ ತಪಸ್ವಿ ಕಾಳಿಯ ಕೊಠಡಿಯ ಪೂರ್ವ ದಿಕ್ಕಿನಲ್ಲಿರೋ ವರಾಂಡದಲ್ಲಿ ಅಡ್ಡಾಡುತ್ತಿದಾರೆ. ಪರಮಹಂಸರ ಮತ್ತು ಭಕ್ತರ ಸಂಬಂಧವಾಗಿ ಮಾತುಕತೆ ಆಡುತ್ತಿದಾರೆ.

ರಾಖಾಲ ವ್ಯಸ್ತನಾಗಿ: ''ಮಾಸ್ಟರ್ ಮಹಾಶಯ, ಬನ್ನಿ ನಾವೆಲ್ಲರೂ ಸಾಧನೆಯಲ್ಲಿ ತೊಡಗೋಣ! ಇದಕ್ಕಾಗೇ ನಾನು ಮನೆಗೆ ಹಿಂದಿರುಗಿ ಹೋಗಲಿಲ್ಲ. ಯಾರಾದರು ಹೇಳಿದರೆ, 'ಮನೆ, ಮಠ ಬಿಟ್ಟುಬಂದಿದ್ದರಿಂದಲೇನೂ ನಿಮಗೆ ಭಗವಂತನ ಸಾಕ್ಷಾತ್ಕಾರ ದೊರೆತಿಲ್ಲ; ಆದ್ದರಿಂದ ಇನ್ನೇಕೆ ಈ ವಿಧದ ಜೀವನ?' ನರೇಂದ್ರ ಅವರಿಗೆ ಬಹಳ ಚೆನ್ನಾದ ಉತ್ತರ ಕೊಡುತ್ತಾನೆ. ಆತ ಹೇಳುತ್ತಾನೆ: 'ರಾಮ ದೊರೆಯಲಿಲ್ಲ ಅಂತ, ಶ್ಯಾಮನೊಡನೆ ಬೆರತು ಮನೆ, ಮಠ ಮಾಡಿಕೊಳ್ಳಬೇಕೇನು? ಮಕ್ಕಳು ಮರಿಗಳನ್ನು ಹೆತ್ತುಕೊಳ್ಳಬೇಕೇನು?' ಆಹ! ನರೇಂದ್ರ ಆಗಾಗ ಬಹಳ ಒಳ್ಳೊಳ್ಳೆ ಮಾತುಗಳನ್ನಾಡುತ್ತಾನೆ. ನೀವೇ ಹೋಗಿ ಆತನನ್ನು ಕೇಳಿ.''

ಮಾಸ್ಟರ್: ''ನೀನು ಹೇಳುತ್ತಿರುವುದು ಸರಿ. ರಾಖಾಲಬಾಬೂ,

ನಿನ್ನ ಮನಸ್ಸೂ ಕೂಡ ಭಗವಂತನ ಸಾಕ್ಷಾತ್ಕಾರಕ್ಕಾಗಿ ಬಹಳವಾಗಿ ವ್ಯಾಕುಲಪಡುವಂತೆ ನನಗೆ ತೋರಿಬರುತ್ತಿದೆ."

ರಾಖಾಲ: "ಮಾಸ್ಟರ್ ಮಹಾಶಯ, ನನ್ನ ಮಾನಸಿಕ ಅವಸ್ಥೆಯನ್ನು ನಾನು ಹೇಗೆತಾನೆ ವರ್ಣಿಸಿಹೇಳಲಿ? ಇಂದು ಮಧ್ಯಾಹ್ನ ನನ್ನ ಮನಸ್ಸು ನರ್ಮದಾ ತೀರಕ್ಕೆ ಹೋಗಬೇಕೆಂದು ಬಹಳವಾಗಿ ವ್ಯಾಕುಲಪಡಲಾರಂಭಿಸಿತು. ಮಾಸ್ಟರ್ ಮಹಾಶಯ, ನೀವೂ ಸಾಧನೆಯಲ್ಲಿ ತೊಡಗಿ; ಇಲ್ಲದಿದ್ದರೆ ಏನೂ ದೊರೆಯೋ ಹಾಗಿಲ್ಲ. ನೋಡಿ, ಶುಕದೇವನಿಗೂ ಈ ಜಗತ್ತನ್ನು ನೋಡಿ ಬಹಳ ಭಯ ಬಂದುಬಿಟ್ಟಿತು. ಅದಕ್ಕಾಗೇ ಆತ ಜನ್ಮ ತಳೆದೊಡನೆಯೇ ಈ ಜಗತ್ತನ್ನು ಬಿಟ್ಟು ಪಲಾಯನ ಮಾಡಿದ. ವ್ಯಾಸ ಸ್ವಲ್ಪ ನಿಲ್ಲುವಂತೆ ಹೇಳಿದ, ಆದರೆ ಆತ ನೇರವಾಗಿ ಹೊರಟೇಹೋದ."

ಮಾಸ್ಟರ್: "ಹೌದು ಶುಕದೇವ ಯಾವರೀತಿಯಾಗಿ ಈ ಮಾಯಾ ಪ್ರಪಂಚವನ್ನು ಬಿಟ್ಟು ಪಲಾಯನಮಾಡಿದ ಎಂಬುದನ್ನು ಯೋಗೋಪನಿಷತ್ ವರ್ಣನೆಮಾಡುತ್ತದೆ. ವ್ಯಾಸ ಶುಕದೇವನೊಡನೆ ನಡೆಸಿದ ಸಂಭಾಷಣೆಯನ್ನೂ ಅದು ತಿಳಿಸುತ್ತದೆ. ಸಂಸಾರದಲ್ಲೇ ಇದ್ದು ಧಾರ್ಮಿಕನಾಗುವಂತೆ ವ್ಯಾಸ ಆತನಿಗೆ ಉಪದೇಶಮಾಡುತ್ತಾನೆ. ಶುಕದೇವ ಹೇಳುತ್ತಾನೆ, ಹರಿಪಾದಪದ್ಮವೊಂದೇ ಸಾರವಸ್ತು ಅಂತ. ಪ್ರಾಪಂಚಿಕರು ವಿವಾಹವಾಗಿ ಹೆಂಗಸಿನೊಡನೆ ವಾಸಿಸೋದರ ಕಡೆ ಆತ ತನ್ನ ಜಿಹಾಸೆಯನ್ನು ವ್ಯಕ್ತಗೊಳಿಸಿದಾನೆ."

ರಾಖಾಲ: "ಹೆಂಗಸಿನ ಮುಖ ನೋಡದೆ ಇದ್ದುಬಿಟ್ಟರೇ ಬೇಕಾದಷ್ಟು ಅಂತ ಅನೇಕರು ಭಾವಿಸುತ್ತಾರೆ. ಹೆಂಗಸು ಕಣ್ಣಿಗೆ ಬಿದ್ದಳೆಂದರೆ ಅದನ್ನು ನೆಲದ ಕಡೆಗೆ ತಿರುಗಿಸಿಬಿಟ್ಟ ಮಾತ್ರಕ್ಕೇ ದೊರಕೋ ಫಲವೇನು? ನರೇಂದ್ರ ಈ ವಿಷಯವಾಗಿ ನಿನ್ನೆ ಬಹಳ ಚೆನ್ನಾಗಿ ಹೇಳಿದ. ಆತ ಹೇಳಿದ: 'ಎಲ್ಲಿಯವರೆಗೆ ನನ್ನಲ್ಲಿ ಕಾಮವಿರುವುದೊ, ಅಲ್ಲಿಯವರೆಗೆ ನನಗೆ ಹೆಂಗಸಿನ ಭಾವನೆ ಇದ್ದೇ ಇರುತ್ತದೆ. ಕಾಮ ಇಲ್ಲದೆ ಇತ್ತು ಎಂದರೆ ಸ್ತ್ರೀ ಪುರುಷ ಎಂಬ ಭೇದ ಬೋಧೆಯೇ ಇರದು.'"

ಮಾಸ್ಟರ್: "ಇದು ಎಷ್ಟು ಸತ್ಯವಾದ ಮಾತು! ಮಕ್ಕಳಿಗೆ ಗಂಡು ಹೆಣ್ಣು ಎಂಬ ಭಾವನೆಯೇ ಇಲ್ಲ."

ರಾಖಾಲ: "ಅದಕ್ಕಾಗೇ ನಾನು ಹೇಳುತ್ತಿರೋದು, ನಾವು

ಸಾಧನೆಯಲ್ಲಿ ತೊಡಗಬೇಕು ಎಂಬುದಾಗಿ. ಮಾಯಾತೀತರಾಗದೆ ಭಗವಂತನ ಸಾಕ್ಷಾತ್ಕಾರ ಪಡೆಯೋ ಬಗೆ ಹೇಗೆ?

"ಬನ್ನಿ, ಆ ದೊಡ್ಡ ಅಂಗಳಕ್ಕೆ ಹೋಗೋಣ. ವರಾಹನಗರದಿಂದ ಕೆಲವರು ಬಂದಿದ್ದಾರೆ. ನರೇಂದ್ರ ಅವರೊಡನೆ ಮಾತುಕತೆಗಳಾಡುತ್ತಿದಾನೆ. ಬನ್ನಿ, ಹೋಗಿ ಅದನ್ನು ಕೇಳೋಣ."

ಮಾಸ್ಟರ್ ಆ ಅಂಗಳವನ್ನು ಪ್ರವೇಶಿಸದೆ, ಅದರ ಹೊರಗಡೆಯೇ ಅಡ್ಡಾಡುತ್ತ ನರೇಂದ್ರನಾಡುತ್ತಿರೋ ಮಾತುಕತೆಗಳನ್ನು ಕೇಳುತ್ತಿದಾನೆ.

ನರೇಂದ್ರ: "ಸಂಧ್ಯಾದಿ ಕರ್ಮಗಳಿಗೆ ನಿರ್ದಿಷ್ಟ ಸ್ಥಾನವೇ ಆಗಲಿ ಅಥವಾ ಸಮಯವೇ ಆಗಲಿ ಯಾವುದೂ ಇಲ್ಲ."

ಒಬ್ಬ ಸಂಭಾವಿತ: "ಒಳ್ಳೇದು, ಕೇವಲ ಸಾಧನೆಯಿಂದಲೇ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲಾಗುವುದೆ?"

ನರೇಂದ್ರ: "ಅದು ಆತನ ಕೃಪೆಯನ್ನು ಅವಲಂಬಿಸಿದೆ. ಶ್ರೀಕೃಷ್ಣ ಗೀತೆಯಲ್ಲಿ ಹೇಳಿದಾನೆ:

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ *

"ಆತನ ಕೃಪೆ ದೊರೆಯದೆ ಇತ್ತು ಎಂದರೆ ಕೇವಲ ಸಾಧನೆ ಭಜನೆ ಇವುಗಳಿಂದಲೇ ಏನೂ ದೊರೆಯದು. ಇದಕ್ಕಾಗಿಯೇ ಭಗವಂತನಲ್ಲಿ ಶರಣಾಗತನಾಗಬೇಕು."

ಸಂಭಾವಿತ: "ನಾವು ಆಗಾಗ ಬಂದು ನಿಮ್ಮನ್ನು ಸ್ವಲ್ಪ ಕಾಡಿಸಿ ಹೋಗಲು ಅನುಮತಿಯಿರುವುದೆ?"

ನರೇಂದ್ರ: "ಇಚ್ಛೆ ಬಂದಾಗಲೆಲ್ಲಾ ದಯವಿಟ್ಟು ಬನ್ನಿ. ನಾವು ನಿಮ್ಮ ಗಂಗಾ ಘಟ್ಟಕ್ಕೆ ಹೋಗಿ ಸ್ನಾನಮಾಡಿ ಬರುತ್ತಿದೇವೆ."

ಸಂಭಾವಿತ: "ಅದಕ್ಕೆ ನನ್ನ ಆಕ್ಷೇಪಣೆಯೇನಿಲ್ಲ. ಆದರೆ ಬೇರೆಯವರು ಅಲ್ಲಿಗೆ ಹೋಗದೆ ಇರಲಿ."

ನರೇಂದ್ರ: "ನೀವು ಹಾಗೆ ಹೇಳೋದಾದರೆ, ನಾವೂ ಅಲ್ಲಿಗೆ ಹೋಗೋದಿಲ್ಲ."

---

* ಭ. ಗೀ. XVIIIನೆ ಅ. ೬೧, ೬೨. ೩ನೆ ಪರಿಶಿಷ್ಟದಲ್ಲಿ ೧೫ನ್ನು ನೋಡಿ.

ಸಂಭಾವಿತ: "ಹಾಗಲ್ಲ, ನೀವು ಉಪಯೋಗಿಸಬಾರದು ಅಂತಲೇ ನಲ್ಲ. ಅಲ್ಲಿ ಆಗಲೇ ಜನರಿರೋವಾಗ ನೀವು ಅಲ್ಲಿಗೆ ಹೋಗದಿರುವುದೇ ಮೇಲು."

ಸಾಯಂಕಾಲವಾಗಿದೆ. ಸಾಯಂ-ಮಂಗಳಾರತಿ ನಡೆಯಲಾರಂಭಿಸಿತು. ಭಕ್ತರು ಕೈ ಕಟ್ಟಿ ನಿಂತು "ಜಯ ಶಿವ ಓಂಕಾರ" ಎಂಬ ಶ್ಲೋಕವನ್ನು ಒಕ್ಕೊರಳಿನಿಂದ ಹಾಡಲಾರಂಭಿಸಿದಾರೆ. ಮಂಗಳಾರತಿ ಮುಗಿಯಿತು. ಈಗ ಭಕ್ತರೆಲ್ಲರೂ "ದಾನವರ" ಕೊಠಡಿಯಲ್ಲಿ ನೆರೆದಿದಾರೆ. ಮಾಸ್ಟರೂ ಅಲ್ಲಿ ಕುಳಿತಿದಾನೆ. ಶಾರದಾಪ್ರಸನ್ನ ಗುರುಗೀತೆಯನ್ನು ಪಠಿಸಲಾರಂಭಿಸಿದಾನೆ. ಈಗ ನರೇಂದ್ರ ಅಲ್ಲಿಗೆ ಬಂದು ಅದಕ್ಕೇ ಸ್ವರಕೊಟ್ಟು ಹಾಡಲಾರಂಭಿಸಿದಾನೆ:

ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ
ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್ ।
ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥ ೯೭ ॥

ಮತ್ತೆ ಹಾಡುತ್ತಿದಾನೆ:

(ನ ಗುರೋರಧಿಕಂ ನ ಗುರೋರಧಿಕಂ) ‡
ನ ಗುರೋರಧಿಕಂ ನ ಗುರೋರಧಿಕಮ್ ।
(ಶಿವಶಾಸನತಃ ಶಿವಶಾಸನತಃ) ‡
ಶಿವಶಾಸನತಃ ಶಿವಶಾಸನತಃ ॥ ೧೦೮ ॥

ಶ್ರೀಮತ್ಪರಂ ಬ್ರಹ್ಮಗುರುಂ ಸ್ಮರಾಮಿ
ಶ್ರೀಮತ್ಪರಂ ಬ್ರಹ್ಮಗುರುಂ ಭಜಾಮಿ ।
ಶ್ರೀಮತ್ಪರಂ ಬ್ರಹ್ಮಗುರುಂ ವದಾಮಿ
ಶ್ರೀಮತ್ಪರಂ ಬ್ರಹ್ಮಗುರುಂ ನಮಾಮಿ ॥ ೯೬ ॥*

ನರೇಂದ್ರ ತನ್ನ ಮಧುರ ಕಂಠದಿಂದ ಗುರುಗೀತೆಯ ಈ ಕೆಲವು ಶ್ಲೋಕಗಳನ್ನು ಹಾಡುತ್ತಿದ್ದ ಹಾಗೇ ಭಕ್ತರ ಮನಸ್ಸು ನಿವಾತ, ನಿಷ್ಕಂಪ ದೀಪಶಿಖದ ಹಾಗೆ ಸ್ಥಿರವಾಗಿ ನಿಂತುಬಿಟ್ಟಿತು.

---

* ೩ನೆ ಪರಿಶಿಷ್ಟದಲ್ಲಿ ೧೬ನ್ನು ನೋಡಿ.

‡ ಈ ಭಾಗಗಳನ್ನು ನರೇಂದ್ರ ಹಾಡದೆ ಬಿಟ್ಟುಬಿಟ್ಟ.

ತಪಸ್ವಿ ಕಾಳಿಯ ಕೊಠಡಿಯಲ್ಲಿ ರಾಖಾಲ ಕುಳಿತಿದ್ದಾನೆ. ಆತನ ಹತ್ತಿರವೇ ಪ್ರಸನ್ನ ಕುಳಿತಿದ್ದಾನೆ. ಮಾಸ್ಟರೂ ಅದೇ ಕೊಠಡಿಯಲ್ಲಿ ಕುಳಿತಿದ್ದಾನೆ.

ರಾಖಾಲ ತನ್ನ ಸಂತಾನ, ಪರಿವಾರ ಇಬ್ಬರನ್ನೂ ತ್ಯಜಿಸಿ ಬಂದಿದ್ದಾನೆ. ತೀವ್ರ ವೈರಾಗ್ಯ ಆತನ ಅಂತರ್ಯದಲ್ಲಿ ಸುಮ್ಮನೆ ಪ್ರಜ್ವಲಿಸುತ್ತಿದೆ. ಒಬ್ಬನೇ ನರ್ಮದಾ ನದಿಯ ಹತ್ತಿರಕ್ಕಾಗಲಿ ಅಥವಾ ಬೇರೆಲ್ಲಿಗಾದರಾಗಲಿ ಹೊರಟುಹೋಗಬೇಕೆಂದು ಬಹಳವಾಗಿ ಯೋಚಿಸುತ್ತಿದ್ದಾನೆ. ಆದರೂ ಆತ ಪ್ರಸನ್ನನಿಗೆ ಮಠವನ್ನು ಬಿಟ್ಟುಹೋಗಬೇಡವೆಂದು ಬುದ್ಧಿವಾದ ಹೇಳುತ್ತಿದ್ದಾನೆ.

ರಾಖಾಲ ಪ್ರಸನ್ನನಿಗೆ: "ಈ ಜಾಗ ಬಿಟ್ಟು ಎಲ್ಲಿಗೆ ಓಡಿ ಹೋಗ ಬೇಕು ಅಂತ ಇದ್ದೀಯೆ? ಇಲ್ಲಿರೋ ಸಾಧುಸಂಗವನ್ನು ಬಿಟ್ಟು ಎಲ್ಲಾದರೂ ಓಡಿಹೋಗೋದುಂಟೆ? ವಿಶೇಷತಃ ನರೇಂದ್ರನ ಸಂಗ! ಇದನ್ನು ಬಿಟ್ಟು ಎಲ್ಲಿಗೆ ಓಡಿಹೋಗುತ್ತೀಯೆ?"

ಪ್ರಸನ್ನ: "ಕಲ್ಕತ್ತದಲ್ಲಿ ತಂದೆತಾಯಿಗಳಿದ್ದಾರೆ. ಭಯವಾಗುತ್ತಿದೆ, ಅವರ ಪ್ರೇಮ ನನ್ನನ್ನು ಎಲ್ಲಿ ಅವರ ಕಡೆಗೆ ಎಳೆದುಬಿಡುತ್ತೊ ಏನೊ ಎಂಬುದಾಗಿ. ಅದಕ್ಕಾಗಿ ಒಂದು ದೂರ ದೇಶಕ್ಕೆ ಓಡಿಬಿಡೋಣ ಅಂತ ಮಾಡಿಕೊಂಡಿದ್ದೇನೆ."

ರಾಖಾಲ: "ಗುರುಮಹಾರಾಜರು ನಮ್ಮನ್ನು ಪ್ರೀತಿಸಿದಷ್ಟುಮಟ್ಟಿಗೆ ಎಂದಿಗಾದರೂ ನಮ್ಮ ತಂದೆತಾಯಿಗಳು ನಮ್ಮನ್ನು ಪ್ರೀತಿಸಬಲ್ಲರೆ? ಪರಮಹಂಸರು ನಮ್ಮನ್ನು ಅಷ್ಟೊಂದಾಗಿ ಪ್ರೀತಿಸಲು ನಾವು ಅವರಿಗೆ ಏನನ್ನಾದರೂ ಮಾಡಿಕೊಟ್ಟಿದ್ದೇವೇನು? ಏಕೆ ಅವರು ನಮ್ಮ ದೇಹ, ಮನಸ್ಸು, ಆತ್ಮ ಇವುಗಳ ಮಂಗಳಕ್ಕಾಗಿ ಅಷ್ಟೊಂದು ವ್ಯಸ್ತರಾಗಿದ್ದರು? ಅವರಿಂದ ಇವನ್ನೆಲ್ಲಾ ಪಡೆಯಲು ನಾವು ಅವರಿಗೆ ಏನನ್ನಾದರು ಮಾಡಿ ಕೊಟ್ಟಿದ್ದೇವೇನು?"

ಮಾಸ್ಟರ್ ತನಗೆ ತಾನೆ: "ಆಹ! ರಾಖಾಲ ಹೇಳುವುದು ಸಂಪೂರ್ಣ ಸತ್ಯ. ಅದಕ್ಕಾಗೇ ಅಂಥವರನ್ನು ಜನ ಕರೆಯೋದು, 'ಅಹೇತುಕಕೃಪಾ ಸಿಂಧು' ಎಂಬುದಾಗಿ."

ಪ್ರಸನ್ನ ರಾಖಾಲನಿಗೆ: "ಇಲ್ಲಿಂದ ಹೊರಟುಹೋಗಬೇಕು ಅಂತ ನಿನಗೂ ಇಚ್ಛೆಯಾಗುತ್ತಿಲ್ಲವೊ?"

ರಾಖಾಲ: "ಹೌದು, ಕೆಲವು ದಿನಗಳನ್ನು ನರ್ಮದಾ ತೀರದಲ್ಲಿ ಕಳೆಯಬೇಕು ಎಂಬ ಚಪಲವೊಂದು ನನ್ನನ್ನು ಬಾಧಿಸುತ್ತಿದೆ. ಇನ್ನು ಕೆಲವು ವೇಳೆ ಭಾವಿಸುತ್ತೇನೆ: 'ಅಂಥದೊಂದು ಜಾಗಕ್ಕೆ ಹೋಗಿ ನಿರ್ಜನ ತೋಟದಲ್ಲಿ ತಪಸ್ಸು ಮಾಡೋಣ.' ಮೂರು ದಿನ ಪಂಚತಪ ಮಾಡೋಣ ಅಂತ ಬೇರೆ ಅನಿಸುತ್ತಿದೆ. ಆದರೆ, ಗೃಹಸ್ಥರ ಮನೆ ತೋಟಗಳಿಗೆ ಹೋಗಿ ಇರಲು ಇಚ್ಛೆಯಾಗುತ್ತಿಲ್ಲ."

ತಾರಕ ಮತ್ತು ಪ್ರಸನ್ನ "ದಾನವರ" ಕೊಠಡಿಯಲ್ಲಿ ಮಾತುಕತೆ ಆಡುತ್ತಿದಾರೆ. ತಾರಕ ತನ್ನ ತಾಯನ್ನು ಕಳೆದುಕೊಂಡಿದಾನೆ. ಆತನ ತಂದೆ ರಾಖಾಲನ ತಂದೆಯ ಹಾಗೆ ಎರಡನೆ ಸಲ ಮದುವೆಯಾಗಿದಾನೆ. ತಾರಕನಿಗೂ ವಿವಾಹವಾಗಿತ್ತು, ಆದರೆ ಆತನ ಪತ್ನಿ ಸ್ವರ್ಗಸ್ಥಳಾಗಿ ಬಿಟ್ಟಿದಾಳೆ. ಈಗ ಆತನಿಗೆ ಮಠವೇ ಮನೆಯಾಗಿದೆ. ಆತನೂ ಪ್ರಸನ್ನನಿಗೆ ಮಠವನ್ನು ಬಿಟ್ಟುಹೋಗಬೇಡವೆಂದು ಬುದ್ಧಿವಾದವೀಯುತ್ತಿದಾನೆ.

ಪ್ರಸನ್ನ: "ನನ್ನಲ್ಲಿ ಜ್ಞಾನವೂ ಇಲ್ಲ, ಪ್ರೇಮವೂ ಇಲ್ಲ; ನಾನು ಯಾವುದನ್ನು ಅವಲಂಬಿಸಿಕೊಂಡು ಈ ಜಗತ್ತಿನಲ್ಲಿ ಇರಲಿ ಹೇಳು ಮತ್ತೆ?"

ತಾರಕ: "ಜ್ಞಾನವನ್ನು ಪಡೆದುಕೊಳ್ಳುವುದೇನೊ ಬಹಳ ಕಷ್ಟವಾದ್ದೆ; ಆದರೆ ನಿನ್ನಲ್ಲಿ ಪ್ರೇಮ ಇಲ್ಲ ಅಂತ ನೀನು ಹೇಗೆ ಹೇಳುತ್ತಿದೀಯೆ?"

ಪ್ರಸನ್ನ: "ಭಗವಂತನ ಸಾಕ್ಷಾತ್ಕಾರಕ್ಕಾಗಿ ನಾನು ಇದುವರೆಗೆ ಅತ್ತಿಲ್ಲ. ಆದ್ದರಿಂದ ನನ್ನಲ್ಲಿ ಪ್ರೇಮವಿದೆ ಅಂತ ಹೇಗೆ ಹೇಳಿಕೊಳ್ಳಲಿ? ಇದೂ ಅಲ್ಲದೆ, ಇದುವರೆಗೆ ನನಗೆ ಏನು ತಾನೆ ದೊರೆತಿದೆ?"

ತಾರಕ: "ಏಕೆ, ನೀನು ಪರಮಹಂಸರನ್ನು ದರ್ಶನಮಾಡಿದೀಯಲ್ಲ; ನಿನ್ನಲ್ಲಿ ಜ್ಞಾನವಿಲ್ಲ ಅಂತ ಏಕೆ ಹೇಳಿಕೊಳ್ಳುತ್ತಿದೀಯೆ?"

ಪ್ರಸನ್ನ: "ಯಾವುದರ ಜ್ಞಾನ ನೀನು ಹೇಳುತ್ತಿರೋದು? ಜ್ಞಾನ ಎಂದರೆ ಅರಿವು. ಯಾವುದರ ಅರಿವು? ನಿಸ್ಸಂದೇಹವಾಗಿ ಭಗವಂತನ ಅರಿವು. ಆದರೆ ನನಗೆ ಭಗವಂತನ ಇರುವಿಕೆಯಲ್ಲೇ ಸಂದೇಹ."

ತಾರಕ: "ಹೌದು, ಅದೇನೊ ನಿಜ. ಜ್ಞಾನಿಗಳ ದೃಷ್ಟಿಯಿಂದ ಭಗವಂತ-ಗಿಗವಂತ ಯಾರೂ ಇಲ್ಲ."

ಮಾಸ್ಟರ್ ತನಗೆ ತಾನೆ: "ಆಹ! ಪರಮಹಂಸರು ಹೇಳುತ್ತಿದ್ದರು,

ಯಾರು ಭಗವಂತನಿಗಾಗಿ ವ್ಯಾಕುಲರಾಗುತ್ತಾರೊ ಅವರು, ಈಗ ಪ್ರಸನ್ನನಿಗೆ ಬಂದಿದೆಯಲ್ಲ ಅವಸ್ಥೆ, ಅಂಥದರ ಮೂಲಕ ಹಾದುಹೋಗಬೇಕಾಗುತ್ತದೆ ಎಂಬುದಾಗಿ. ಆ ಅವಸ್ಥೆಯಲ್ಲಿ ಒಮ್ಮೊಮ್ಮೆ ಭಗವಂತನ ಇರುವಿಕೆಯಲ್ಲೇ ಸಂದೇಹ ಬಂದುಬಿಡುತ್ತದೆ. ಬಹುಶಃ ತಾರಕ ಈಗ ಬೌದ್ಧ ಮತ ಶಾಸ್ತ್ರಗಳನ್ನೂ ಓದುತ್ತಿರಬೇಕು. ಅದಕ್ಕಾಗೇ ಆತ ಜ್ಞಾನಿಯ ದೃಷ್ಟಿಯಿಂದ ಭಗವಂತ-ಗಿಗವಂತ ಯಾರೂ ಇಲ್ಲ ಅಂತ ಹೇಳಿದ್ದು. ಆದರೆ ಪರಮಹಂಸರು ಹೇಳುತ್ತಿದ್ದರು, ಜ್ಞಾನಿ ಮತ್ತು ಭಕ್ತ ಇಬ್ಬರೂ ಕೊನೆಗೆ ಒಂದೇ ಗುರಿಯನ್ನು ತಲುಪುವರು ಎಂಬುದಾಗಿ.''

ನರೇಂದ್ರ ಮತ್ತು ಪ್ರಸನ್ನ ಧ್ಯಾನದ ಕೊಠಡಿಯಲ್ಲಿ ಎಂದರೆ, ತಪಸ್ವಿ ಕಾಳಿಯ ಕೊಠಡಿಯಲ್ಲಿ ಮಾತುಕತೆ ಆಡುತ್ತಿದಾರೆ. ಆ ಕೊಠಡಿಯ ಒಂದು ಭಾಗದಲ್ಲಿ ರಾಖಾಲ ಹರೀಶ, ಚಿಕ್ಕಗೋಪಾಲ ಇವರು ಕುಳಿತಿದಾರೆ. ಸ್ವಲ್ಪ ಹೊತ್ತಾದನಂತರ ಅಲ್ಲಿಗೆ ಹಿರಿಯ ಗೋಪಾಲನೂ ಬಂದ.

ನರೇಂದ್ರ ಗೀತೆಯನ್ನು ಓದುತ್ತ ೧೮ ನೆ ಅಧ್ಯಾಯದ ಕೆಲವು ಶ್ಲೋಕಗಳನ್ನು ಪ್ರಸನ್ನನಿಗೆ ವಿವರಿಸಿ ಹೇಳುತ್ತಿದಾನೆ:

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥೬೧॥
ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥*

ನರೇಂದ್ರ: ''ಶ್ರೀಕೃಷ್ಣ, 'ಯಂತ್ರಾರೂಢಾನಿ' ಅಂತ ಹೇಳಿರೋದನ್ನು ನೀನು ನೋಡಿದೆಯಾ? ಭಗವಂತ ತನ್ನ ಮಾಯಾಶಕ್ತಿಯಿಂದ ಈ ಜಗತ್ತಿನ ಸರ್ವ ಭೂತಗಳನ್ನೂ ಯಂತ್ರದ ಮೇಲೆ ಇಟ್ಟು ಸುತ್ತಿಸುತ್ತಿರುವನೊ ಏನೊ ಎಂಬಂತೆ ಸುತ್ತಿಸುತ್ತಿದಾನೆ. ಭಗವಂತನನ್ನು ಅರಿತುಕೊಳ್ಳಲು ಇಚ್ಛಿಸುವುದು! ಕ್ರಿಮಿಕೀಟಗಳಲ್ಲಿ ನೀನೊಂದು ಕ್ರಿಮಿ—ಅಂಥ ನೀನು ಆತನನ್ನು ಅರಿತುಕೊಳ್ಳುವುದು! ಮನುಷ್ಯ ಏನು ಎಂಬುದನ್ನು ಸ್ವಲ್ಪ ಆಲೋಚಿಸಿ ನೋಡು. ನೋಡು, ಆಕಾಶದಲ್ಲಿ ಕಾಣುತ್ತವೆಯಲ್ಲ ಈ ಅಸಂಖ್ಯ ನಕ್ಷತ್ರಗಳು, ಅವು ಒಂದೊಂದೂ ಒಂದು ಸೌರವ್ಯೂಹವಂತೆ.

* ೩ನೆ ಪರಿಶಿಷ್ಟದಲ್ಲಿ ಶ್ಲೋಕ (೬೧, ೬೨), ೬೬ಕ್ಕೆ ೧೫, ೧೭ನ್ನು ನೋಡಿ.

ನಮ್ಮ ಈ ಭೂಮಿ ಕೇವಲ ಒಂದೇ ಒಂದು ಸೌರವ್ಯೂಹದ ಒಂದು ಕಿಂಚಿತ್ ಭಾಗ ಮಾತ್ರ. ಇದೇ ನಮಗೆ ಅತಿ ದೊಡ್ಡದಾಗಿ ಕಾಣುತ್ತಿದೆ. ಈ ಭೂಮಿಯನ್ನು ಸೂರ್ಯನಿಗೆ ಹೋಲಿಸಿ ನೋಡಿದರೆ ಇದು ಒಂದು ಚಿಕ್ಕ ಚೆಂಡಿನ ಗಾತ್ರದ್ದೂ ಅಲ್ಲ. ಇಂಥಾ ಭೂಮಿಯ ಮೇಲೆ ಮನುಷ್ಯ ಒಂದು ಕೀಟವೊ ಏನೊ ಎಂಬಂತೆ ಚಲನ - ವಲನ ಮಾಡುತ್ತಿದಾನೆ.''

ನರೇಂದ್ರ ಹಾಡುತ್ತಿದಾನೆ :

ಈ ಮರ್ತ್ಯ ಧೂಳಿಯಲಿ ಹುಟ್ಟಿ ಬೆಳೆದೆವು ನಾವು
ಈ ಧೂಳಿಯಲಿ ದೃಷ್ಟಿ ಕುರುಡಾಯಿತು.
ಈ ಮಣ್ಣಿನಲಿ ನಾವು ಮಕ್ಕಳಂತಾಡಿಹೆವು
ಅಭಯವನು ನೀಡಯ್ಯ ದಿವ್ಯ ಗುರುವೆ.

ನಮ್ಮ ಏನೋ ಒಂದು ಅಲ್ಪ ತಪ್ಪಿಗೆ ನೀನು
ನಿನ್ನ ತೊಡೆಯಿಂದಾಚೆ ನೂಕಲಿಹೆಯಾ ?
ನೀನೆ ನಮ್ಮನು ತಳ್ಳಿ, ಅನಾಥರಂದದಿ ನಮ್ಮ
ತೊಳಲಿಸುವೆಯಾ ?
ಓವೊ ಪ್ರಭು, ನೀನಂತೆ ಗೈಯಬೇಡ
ಮತ್ತೆಂದು ಮೇಲೇಳದಂಥ ನರಕದಿ ನಮ್ಮ
ನೂಕಬೇಡ.

ನಿನ್ನೆದುರು ನಾವೆಲ್ಲ ಬರಿಯ ಹಸುಳೆಗಳಯ್ಯ
ಹೆಜ್ಜೆ ಹೆಜ್ಜೆಗು ಎಡವಿ ಬೀಳುತಿಹೆವು !
ಇದನರಿತರೂ ನೀನು ರುದ್ರಮುಖ ಭ್ರುಕುಟಿಯೊಳು
ನಮ್ಮನೇತಕೆ ಇಂತು ನಡುಗಿಸಿರುವೆ ?

ನಾವು ಅಲ್ಪರು ಗುರುವೆ— ಸಿಟ್ಟಾಗದಿರು ನಮಗೆ.
ಅಪರಾಧವೆಸಗಿದರು, ಮೃದುನುಡಿಯೊಳೆಮ್ಮೊಡನೆ
ಮಾತನಾಡು.
ನೂರು ಸಲ ನೀನೆತ್ತಿ ನಿಲ್ಲಿಸಿದರೂ ಕೂಡ
ನೂರು ಸಲ ಬೀಳುವುದು ನಮ್ಮ ಪಾಡು,
ಇಂಥ ದುರ್ಬಲ ಮತಿಯ ಕರುಣದಲಿ ನೋಡು !

ಬಳಿಕ ನರೇಂದ್ರ ಪ್ರಸನ್ನನಿಗೆ ಹೇಳಿದ: ''ಆತನ ಪಾದಪದ್ಮಗಳಲ್ಲಿ

ಶರಣಾಗತನಾಗು. ಆತನ ಇಚ್ಛೆಯಿದ್ದಂತಾಗಲಿ ಎಂದು ಆತನಿಗೆ ಆತ್ಮ ಸಮರ್ಪಣೆ ಮಾಡಿಬಿಡು.''

ಈಗ ನರೇಂದ್ರ ಭಾವಾವೇಶವಾಗಿ ಹಾಡಲಾರಂಭಿಸಿದಾನೆ:

ನಾ ನಿನ್ನ ಕಿಂಕರನು, ನಾ ನಿನ್ನ ಕಿಂಕರನು,
ನಾ ನಿನ್ನ ಕಿಂಕರನು ನನ್ನ ಪ್ರಭುವೇ.
ನೀನೆನ್ನ ಪ್ರಭು ದೇವ, ನೀನೆನ್ನ ಪ್ರಭು ದೇವ,
ನೀನೆನ್ನ ಪ್ರಭು ದೇವ ನನ್ನ ದೊರೆಯೇ.
ನಾನು ಹೊದೆದೀ ತುಂಡು ಕಾವಿಯರಿವೆಯು ನೀನು
ಕೊಟ್ಟಿರುವೆ ನನಗೆ!
ನಿನ್ನ ನಾಮುವ ನುತಿಸಲೆನ್ನ ಎದೆಯೊಳು ಭಕ್ತಿ
ಹೊಮ್ಮಿ ಕಾಪಾಡುವುದು ಎಡರಿನೊಳಗೆ!
ನೀನೆನ್ನ ಪ್ರಭು ದೇವ, ಪರಮಕರುಣಾಮಯನು
ಈ ಕಬೀರನು ನಿನಗೆ ಶರಣೆನುವನು!

ನರೇಂದ್ರ ಪ್ರಸನ್ನನಿಗೆ ಹೇಳಿದ: "'ಭಗವಂತ ಒಂದು ಸಕ್ಕರೆಯ ಬೆಟ್ಟ, ನೀನು ಕೇವಲ ಒಂದು ಪುಟ್ಟ ಇರುವೆ. ನಿನ್ನ ಹೊಟ್ಟೆ ತುಂಬಲು ಸಕ್ಕರೆಯ ಒಂದು ಕಣವೇ ಸಾಕು; ಆದರೂ ನೀನು ಆ ಸಕ್ಕರೆಯ ಬೆಟ್ಟ ವನ್ನೇ ಗೂಡಿಗೆ ಹೊತ್ತು ತರಬೇಕು ಅಂತ ಭಾವಿಸುತ್ತಿದೀಯೆ!' ಎಂಬು ದಾಗಿ ಪರಮಹಂಸರು ಹೇಳಿರುವುದು ನಿನ್ನ ಜ್ಞಾಪಕದಲ್ಲಿಲ್ಲವೇನು? ಶುಕ ದೇವನ ಸಂಬಂಧವಾಗಿ ಪರಮಹಂಸರು ಹೇಳಿದ್ದು ನಿನ್ನ ಸ್ಮೃತಿಯಲ್ಲಿಲ್ಲ ವೇನು? ಶುಕದೇವ ಅತಿ ಹೆಚ್ಚೆಂದರೆ ಒಂದು ದೊಡ್ಡ ಇರುವೆ ಮಾತ್ರ. ಅದಕ್ಕಾಗೇ ನಾನು ಗದರಿಸೋದು: 'ಎಲಾ ತಿಳಿಗೇಡಿ! ನಿನ್ನ ಟೇಪು, ಗಜಕಡ್ಡಿ ಇವುಗಳಿಂದ ಭಗವಂತನನ್ನು ಅಳೆಯಲು ಹೋಗುತ್ತೀಯಾ?'.

"ಭಗವಂತ ದಯಾಸಿಂಧು. ಆತನ ಸೇವಕನಾಗಿ ಆತನಲ್ಲಿ ಶರಣಾ ಗತಿಯನ್ನು ಹೊಂದು. ಆತ ನಿನಗೆ ಕೃಪೆ ಮಾಡುತ್ತಾನೆ. ಆತನಿಗೆ ಪ್ರಾರ್ಥನೆಮಾಡು:

'ಯತ್ತೇ ದಕ್ಷಿಣಂ ಮುಖಮ್ ।
ತೇನ ಮಾಂ ಪಾಹಿ ನಿತ್ಯಮ್ ॥ †

† ಶ್ವೇತಾಶ್ವತರ ಉಪನಿಷತ್ IV. ೨೧.

ಓಂ ಅಸತೋ ಮಾ ಸದ್ಗಮಯ ।
ತಮಸೋ ಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾಮೃತಂ ಗಮಯ ॥ *
ಆವಿರಾವಿರ್ಮ ಏಧಿ ।
ರುದ್ರ ಯತ್ತೇ ದಕ್ಷಿಣಂ ಮುಖಮ್ ।
ತೇನ ಮಾಂ ಪಾಹಿ ನಿತ್ಯಮ್ ॥ ' "

ಪ್ರಸನ್ನ: "ಯಾವ ವಿಧವಾದ ಸಾಧನೆಯನ್ನು ಮಾಡಬೇಕು?"

ನರೇಂದ್ರ: "ಕೇವಲ ಭಗವಂತನ ನಾಮಜಪಮಾಡು. ಅದೇ ಯಥೇಷ್ಟ. ಪರಮಹಂಸರು ಹಾಡುತ್ತಿದ್ದ ಹಾಡು ನಿನ್ನ ಜ್ಞಾಪಕದಲ್ಲಿ ಇಲ್ಲವೇನು?"

ನರೇಂದ್ರ ಹಾಡುತ್ತಿದಾನೆ.

ಓ ನನ್ನ ಘನಶ್ಯಾಮ, ನಿನ್ನ ನಾಮವೆ ನನಗೆ
ಭರವಸೆಯ ಸೂತ್ರ.

ಗಂಟೆಜಾಗಟೆಯೇಕೆ? ಮತ್ತೆ ಬೇಕೇ ನನಗೆ
ಸಂಪ್ರದಾಯದ ಬರಡು ಮಂತ್ರ-ಗಿಂತ್ರ?
ನಿನ್ನ ತಾರಕನಾಮ ಮೃತ್ಯುವನೆ ಜಯಿಸುವುದು—
ಎಂದು ಆ ಪರಶಿವನೆ ಘೋಷಿಸಿಹನು!
ನಾನು ಶಿವಕಿಂಕರನು, ಮೃತ್ಯು ಅಲ್ಪವೊ ನನಗೆ.
ಏನು ಬಂದರು ನಿನ್ನ ದಿವ್ಯ ಶುಭನಾಮವನು
ಶಿವನ ವಚನವ ನಂಬಿ ಹಿಡಿದುಕೊಂಡವಗೆ!

ಆತ ಮತ್ತೆ ಹಾಡಿದ:

ನಿನ್ನೆದುರು ನಾವೆಲ್ಲ ಬರಿಯ ಹಸುಳೆಗಳಯ್ಯ
ಹೆಜ್ಜೆ ಹೆಜ್ಜೆಗು ಎಡವಿ ಬೀಳುತಿಹೆವು!
ಇದನರಿತರೂ ನೀನು ರುದ್ರಮುಖ ಭ್ರುಕುಟಿಯೊಳು
ನಮ್ಮನೇತಕೆ ಇಂತು ನಡುಗಿಸಿರುವೆ?

ಪ್ರಸನ್ನ: "ಈಗ ನೀನು ಹೇಳುತ್ತಾ ಇದೀಯೆ ಭಗವಂತನಿದಾನೆ

---

* ಬೃ.ಉ. ೧.೩.೨೮. ಇವುಗಳ ಅನುವಾದಕ್ಕೆ ೩ನೆ ಪರಿಶಿಷ್ಟದಲ್ಲಿ ೧೮ನ್ನು ನೋಡಿ.

ಎಂಬುದಾಗಿ. ಮತ್ತೆ ಹೇಳೋನೂ ನೀನೆ, ಚಾರ್ವಾಕರ ಮತ್ತು ಉಳಿದ ಇನ್ನೂ ಕೆಲವರ ದೃಷ್ಟಿಯಿಂದ ಈ ಜಗತ್ತು ಸ್ವಕೃತನಾದ್ದು ಎಂಬುದಾಗಿ!"

ನರೇಂದ್ರ: "ನೀನು ರಸಾಯನ ಶಾಸ್ತ್ರವನ್ನು ಓದಿಲ್ಲವೇನು? ವಿವಿಧ ಮೂಲ ಧಾತುಗಳನ್ನು ಒಟ್ಟುಗೂಡಿಸುವವರಾರು? ನೀರನ್ನು ತಯಾರಿಸಲು ಜಲಜನಕ, ಆಮ್ಲಜನಕ, ವಿದ್ಯುತ್ ಇವನ್ನು ಸಂಯೋಜಿಸುವುದು ಮನುಷ್ಯನ ಕೈಯಲ್ಲವೆ? ಜ್ಞಾನಪೂರ್ವಕವಾದ ಒಂದು ಶಕ್ತಿ ಈ ಜಗತ್ತಿನ ಸಕಲ ವ್ಯಾಪಾರವನ್ನು ನಡೆಯಿಸಿಕೊಂಡು ಹೋಗುತ್ತಿರುವುದು ಎಂಬುದಾಗಿ ಎಲ್ಲರೂ ಒಪ್ಪಿಕೊಳ್ಳುತ್ತಿದಾರೆ."

ಪ್ರಸನ್ನ: "ಭಗವಂತ ದಯಾಮಯ ಎಂಬುದಾಗಿ ನಾವು ಅರಿತುಕೊಳ್ಳುವ ಬಗೆ ಹೇಗೆ?"

ನರೇಂದ್ರ: "ವೇದದಲ್ಲಿ 'ಯತ್ತೇ ದಕ್ಷಿಣಂ ಮುಖಮ್।' ಎಂಬುದಾಗಿ ಹೇಳಿದೆ. ಜಾನ್ ಸ್ಟೂಯರ್ಟ್ ಮಿಲ್ಲನೂ ಹೀಗೇ ಹೇಳಿದಾನೆ. ಆತ ಹೇಳಿದಾನೆ: 'ಯಾರು ಮಾನವನ ಹೃದಯದಲ್ಲಿ ದಯೆ ಎಂಬುದನ್ನು ನೆಟ್ಟಿರುವನೊ, ಆತ ಇನ್ನೆಷ್ಟು ದಯಾಮಯನಾಗಿ ಇರಬೇಕು!' ಪರಮಹಂಸರು ಹೇಳುತ್ತಿದ್ದರು: 'ಅತ್ಯವಶ್ಯಕವಾದ್ದು ವಿಶ್ವಾಸ. ಭಗವಂತ ನಮ್ಮ ಹತ್ತಿರವೇ ಇದಾನೆ. ವಿಶ್ವಾಸ ಉಂಟಾದೊಡನೆಯೇ ಆತನ ದರ್ಶನ ದೊರೆತುಬಿಡುತ್ತದೆ.'"

ನರೇಂದ್ರ ಈಗ ತನ್ನ ಸುಮಧುರ ಕಂಠದಿಂದ ಹಾಡಲಾರಂಭಿಸಿದಾನೆ:

ಎಲ್ಲಿ ಅರಸುವೆ ನನ್ನ, ಓ ನನ್ನ ಕಿಂಕರನೆ
ನಿನ್ನ ಬಳಿಯೇ ನಾನು ವಾಸಿಸಿರುವೆ!
ನಾನು ನಿನ್ನೊಂದಿಗೇ ಇದ್ದರೂ ನನಗಾಗಿ
ಎಲ್ಲೊ ದೂರದಿ ಹುಡುಕಿ ಬಳಲುತಿರುವೆ!

ನಾನು ಚರ್ಮದೊಳಿಲ್ಲ. ರೋಮದೊಳಗೂ ಇಲ್ಲ,
ಅಸ್ಥಿಯಲೊ ಮಾಂಸದಲೊ ಹುದುಗಿಕೊಂಡಿಲ್ಲ.
ಗುಡಿ ಮಸೀದಿಯೊಳಿಲ್ಲ, ಕಾಶಿ ಕೈಲಾಸದಲೊ,
ದ್ವಾರಕೆ ಅಯೋಧ್ಯೆಯೊಳೊ, ದೊರೆವನಲ್ಲ!

ಸನ್ಯಾಸದೊಳಗಿಲ್ಲ, ವೈರಾಗ್ಯದೊಳಗಿಲ್ಲ,
ಯೋಗಾದಿ ಸಿದ್ಧಿಗೂ ದೂರ ನಾನು.

ಶ್ರದ್ಧೆ ಎಲ್ಲಿರುವುದೋ ಅಲ್ಲಿ ದೊರೆಯುವೆ ನಾನು,
ನನಗಾಗಿ ಹುಡುಕಿದರೆ ದೊರೆವೆ ನಾನು !

ಪ್ರಸನ್ನ: "ಕೆಲಕೆಲವು ವೇಳೆ ನೀನು ಭಗವಂತ ಇಲ್ಲ ಅಂತ ಹೇಳುತ್ತೀಯೆ; ಆದರೆ ಈಗ ನೋಡಿದರೆ ಹೀಗೆಲ್ಲಾ ಹೇಳುತ್ತಿದೀಯೆ! ನಿನ್ನ ಮಾತಿನಲ್ಲಿ ಒಂದು ಸ್ಥಿಮಿತ ಎಂಬುದು ಇಲ್ಲ. ನೀನು ಬಹುಮಟ್ಟಿಗೆ ನಿನ್ನ ಅಭಿಪ್ರಾಯಗಳನ್ನು ಬದಲಾಯಿಸುತ್ತಲೇ ಇರುತ್ತೀಯೆ."

ಎಲ್ಲರೂ ನಗುತ್ತಿದಾರೆ.

ನರೇಂದ್ರ: "ಒಳ್ಳೇದು! ಈಗ ನಾನು ಆಡಿದ ಮಾತುಗಳನ್ನು ಎಂದಿಗೂ ಬದಲಾಯಿಸೋದಿಲ್ಲ. ಎಲ್ಲಿಯವರೆಗೆ ಕಾಮನೆ, ವಾಸನೆ ಇರುವುವೋ ಅಲ್ಲಿಯವರೆಗೆ ಭಗವಂತನಲ್ಲಿ ಅವಿಶ್ವಾಸ ಇದ್ದೇ ಇರುತ್ತದೆ. ವ್ಯಕ್ತಿಗೆ ಒಂದಲ್ಲ ಒಂದು ಕಾಮನೆ ಇದ್ದೇ ಇರುತ್ತದೆ— ಎಂದರೆ ಓದಿ ಏನೇನೊ ಡಿಗ್ರಿಗಳನ್ನು ಪಾಸುಮಾಡೋದು, ಪಾಂಡಿತ್ಯ ಪಡೆಯೋದು ಇವೇ ಮೊದಲಾದುವು."

ನರೇಂದ್ರ ಭಾವಾವೇಶನಾಗಿ ಗದ್ಗದ ಕಂಠದಿಂದ ಹಾಡಲಾರಂಭಿಸಿದಾನೆ:

ಜಯ ದೇವ ಜಯ ದೇವ ಜಯ ಮಂಗಳದಾತಾ, ಜಯ ಜಯ ಮಂಗಳದಾತಾ।
ಸಂಕಟಭಯದುಃಖತ್ರಾತಾ, ವಿಶ್ವಭುವನ ಪಾತಾ, ಜಯ ದೇವ ಜಯ ದೇವ॥
ಅಚಿಂತ್ಯ ಅನಂತ ಅಪಾರ, ನಾಹಿ ತವ ಉಪಮಾ ಪ್ರಭು, ನಾಹಿ ತವ ಉಪಮಾ।
ಪ್ರಭು ವಿಶ್ವೇಶ್ವರ ವ್ಯಾಪಕ ವಿಭು ಚಿನ್ಮಯ ಪರಮಾತ್ಮಾ, ಜಯ ದೇವ ಜಯ ದೇವ॥
ಜಯ ಜಗವಂದ್ಯ ದಯಾಳ, ಪ್ರಣಾಮಿ ತವ ಚರಣೇ, ಪ್ರಭು ಪ್ರಣಾಮಿ ತವ ಚರಣೇ।
ಪರಮ ಶರಣ ತುಮಿ ಹೇ, ಜೀವನೇ ಮರಣೇ, ಜಯ ದೇವ ಜಯ ದೇವ॥
ಕಿ ಆರ್ ಯಾಚಿಬೋ ಆಮರಾ ಕೊರಿ ಹೇ ಏ ಮಿನತಿ, ಪ್ರಭು ಕೊರಿ ಹೇ ಮಿನತಿ।
ಏ ಲೋಕೇ ಸುಮತಿ ದೇವೋ, ಪರಲೋಕೇ ಸುಗತಿ, ಜಯ ದೇವ ಜಯ ದೇವ॥

---

* ಈ ಬಂಗಾಳಿ ಹಾಡಿನಲ್ಲಿ ಸರಳವಾದ ಸಂಸ್ಕೃತ ಪದಗಳೇ ಬಹಳ ಅಧಿಕವಾಗಿರೋದರಿಂದ ಇದನ್ನು ಅನುವಾದಿಸದೆಯೇ ಉಳಿಸಿದೆ.

ನರೇಂದ್ರ, ಭಗವಂತ ನಮಗೆ ಎಷ್ಟು ಹತ್ತಿರದಲ್ಲಿ— ಕಸ್ತೂರಿ, ಕಸ್ತೂರಿ-ಜಿಂಕೆಗೆ ಎಷ್ಟು ಹತ್ತಿರದಲ್ಲಿರುವುದೊ ಅಷ್ಟು ಹತ್ತಿರದಲ್ಲಿ— ಇದ್ದಾನೆ ಎಂಬುದನ್ನು ವರ್ಣಿಸುವ ಮತ್ತು ಹರಿರಸಮದಿರೆಯನ್ನು ಕುಡಿಯು ವಂತೆ ತನ್ನ ಸೋದರರನ್ನು ಪ್ರೇರೇಪಿಸುವ ಒಂದು ಹಾಡನ್ನು ಹಾಡಿದ:

ಓ ಸಾಧೂ—
ಪ್ರೇಮ ಪಾತ್ರೆಯನು ಈಗಾದರು ತುಟಿಗಿಡು
ಹರಿನಾಮದ ಸುಧೆ ಹೀರು,
ಆನಂದದಿ ಕರಗು !
ಬಾಲ್ಯವ ನೂಕಿದೆ ಆಟಪಾಟವಿನೋದಸಂಭ್ರಮದಿ,
ಯೌವನವೂ ಜಾರಿತು ಕಾಮಿನಿಯರ ಸಹವಾಸದಲಿ,
ಇದೋ ಬಂದಿತು ಮುಪ್ಪು; ರೋಗರುಜಿನತಾಪತ್ರಯದಿ;
ಮಸಣದ ಸೂಡನು ಕಾಯುತ ಕುಳಿತಿಹೆ
ಬಾಳಿನ ತುದಿಯಲ್ಲಿ !
ಮೃಗದ ನಾಭಿಯಲಿ ಕತ್ತುರಿಯಿದ್ದರು
ಅದು ತಿಳಿಯದು; ಅದನೊರೆವವರಾರು ?
ಸದ್ಗುರುವಿನ ನಿರ್ದೇಶನವಿಲ್ಲದೆ,
ಕಾನನವಲೆಯುವ ಮೃಗದಂತೀ
ಮಾನವನಿಹನು !

ಮಾಸ್ಟರ್ ವರಾಂಡದಿಂದಲೆ ಇದೆಲ್ಲವನ್ನೂ ಕೇಳುತ್ತಿದ್ದಾನೆ.

ನರೇಂದ್ರ ಮೇಲಕ್ಕೆ ಎದ್ದ. ಆತ ಕೊಠಡಿಯಿಂದ ಹೊರಕ್ಕೆ ಬರುತ್ತ ಹೇಳುತ್ತಿದ್ದಾನೆ: "ಈ ಸೋದರರಿಗೆಲ್ಲಾ ಬುದ್ಧಿವಾದ ಹೇಳಿ ಹೇಳಿ ನನ್ನ ಮಿದುಳು ಕಾದುಹೋಗಿಬಿಟ್ಟಿದೆ."

ನರೇಂದ್ರ ಮಾಸ್ಟರನ್ನು ವರಾಂಡದಲ್ಲಿ ಕಂಡು ಆತನಿಗೆ ಹೇಳಿದ: "ಕುಡಿಯೋ ನೀರು ಬೇಕಲ್ಲ."

ಮಠದ ಸೋದರನೊಬ್ಬ ನರೇಂದ್ರನಿಗೆ: "ಆದರೆ, ಭಗವಂತ ಇಲ್ಲ ಅಂತ ಏಕೆ ಹೇಳುತ್ತೀಯೆ ?"

ನರೇಂದ್ರ ನಕ್ಕ.

**೯ನೆ ಮೇ ೧೮೮೭, ಸೋಮವಾರ.**

ಮಾಸ್ಟರ್ ಪ್ರಾತಃಕಾಲವೇ ಎದ್ದು ಮಠದ ತೋಟದಲ್ಲಿ ಒಂದು

ಮರದ ಕೆಳಗೆ ಒಬ್ಬನೇ ಕುಳಿತಿದಾನೆ. ತನಗೆ ತಾನೆ ಹೇಳಿಕೋತಿದಾನೆ: "ಪರಮಹಂಸರು ಕಾಮಕಾಂಚನವನ್ನು ತ್ಯಾಗಮಾಡುವಂತೆ ಈ ಮಠದ ಸೋದರರನ್ನು ಪ್ರೇರೇಪಿಸಿ ಜಯಶೀಲರಾದರು. ಆಹ! ಇವರು ಭಗವಂತನ ಸಾಕ್ಷಾತ್ಕಾರಕ್ಕಾಗಿ ಎಷ್ಟೊಂದು ವ್ಯಾಕುಲರಾಗಿದಾರೆ. ಈ ಸ್ಥಾನ ವೈಕುಂಠ ವಿದ್ದ ಹಾಗೇ ಇದೆಯಲ್ಲ! ಮಠದ ಪ್ರತಿಯೊಬ್ಬ ಸೋದರನೂ ಸಾಕ್ಷಾತ್ ನಾರಾಯಣನೇ ಏನೊ ಎಂಬಂತೆ ತೋರುತ್ತಿದಾನಲ್ಲ! ಪರಮಹಂಸರು ಮಹಾ ಸಮಾಧಿಯನ್ನು ಹೊಂದಿ ಹೆಚ್ಚು ದಿನಗಳೇನಾಗಿಲ್ಲ; ಅದಕ್ಕಾಗೇ ಅವರ ಉಪದೇಶ-ಗಿಪದೇಶಗಳೆಲ್ಲ ಇವರ ಹೃದಯದಲ್ಲಿ ಅಚ್ಚಳಿಯದೆ ಉಳಿದುಕೊಂಡಿವೆ. 'ಅಯೋಧ್ಯೆ ಹಿಂದಿನದೇ — ಕೇವಲ ರಾಮ ಮಾತ್ರ ಇಲ್ಲ.' ಈ ಯುವಕರು ಗೃಹವನ್ನು ತ್ಯಜಿಸಿಬರುವಂತೇನೊ ಪರಮಹಂಸರು ಮಾಡಿದರು. ಆದರೆ ಇನ್ನು ಕೆಲವರನ್ನು ಗೃಹದಲ್ಲೇ ಉಳಿಸಿಬಿಟ್ಟಿದಾರಲ್ಲ ಏಕೆ? ಅವರಿಗೆ ಬೇರೆ ಉಪಾಯವೇ ಇಲ್ಲವೇನು?"

ಮಾಸ್ಟರ್ ಏಕಾಕಿಯಾಗಿ ಮರದ ಕೆಳಗೆ ಕುಳಿತಿರುವುದನ್ನು ನರೇಂದ್ರ ಎರಡನೆ ಅಂತಸ್ತಿನಿಂದ ನೋಡಿದ. ಆತ ಇಳಿದು ಬಂದು ನಗುತ್ತ ನಗುತ್ತ ಮಾಸ್ಟರಿಗೆ ಹೇಳುತ್ತಿದಾನೆ: "ಏನು ಮಾಸ್ಟರ್ ಮಹಾಶಯ! ಏನು ನಡೆಯುತ್ತಾ ಇದೆ ಇಲ್ಲಿ?"

ಇಬ್ಬರೂ ಸ್ವಲ್ಪ ಹೊತ್ತು ಮಾತುಕತೆಗಳಾಡಿದನಂತರ ಮಾಸ್ಟರ್ ನರೇಂದ್ರನಿಗೆ ಹೇಳಿದ: "ಆಹ, ನಿನ್ನ ಕಂಠ ಎಷ್ಟು ಮಧುರವಾದ್ದು! ಯಾವುದಾದರೂ ಒಂದು ಸ್ತೋತ್ರವನ್ನು ಹಾಡು."

ನರೇಂದ್ರ ಈಗ ಶಿವಾಪರಾಧ ಕ್ಷಮಾಪಣಸ್ತೋತ್ರವನ್ನು ಹಾಡುತ್ತಿದಾನೆ:

ಆದೌ ಕರ್ಮಪ್ರಸಂಗಾತ್ಕಲಯತಿ ಕಲುಷಂ ಮಾತೃಕುಕ್ಷೌ ಸ್ಥಿತಂ ಮಾಂ
ವಿಣ್ಮೂತ್ರಾಮೇಧ್ಯಮಧ್ಯೇ ಕ್ವಥಯತಿ ನಿತರಾಂ ಜಾಠರೋ ಜಾತವೇದಾಃ।
ಯದ್ಯದ್ವೈ ತತ್ರ ದುಃಖಂ ವ್ಯಥಯತಿ ನಿತರಾಂ ಶಕ್ಯತೇ ಕೇನ ವಕ್ತುಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ॥

ಬಾಲ್ಯೇ ದುಃಖಾತಿರೇಕೋ ಮಲಲುಲಿತವಪುಃ ಸ್ತನ್ಯಪಾನೇ ಪಿಪಾಸಾ
ನೋ ಶಕ್ತಶ್ಚೇಂದ್ರಿಯೇಭ್ಯೋ ಭವಗುಣಜನಿತಾಃ ಜಂತವೋ ಮಾಂ ತುದಂತಿ।
ನಾನಾರೋಗಾದಿದುಃಖಾದ್ರುದಿತಪರವಶಃ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ॥

ಪ್ರೌಢೋಽಹಂ ಯೌವನಸ್ಥೋ ವಿಷಯವಿಷಧರೈಃ ಪಂಚಭಿರ್ಮರ್ಮಸಂಧೌ
ದಷ್ಟೋ ನಷ್ಟೋ ವಿವೇಕಃ ಸುತಧನಯುವತಿಸ್ವಾದು ಸೌಖ್ಯೇ ನಿಷಣ್ಣಃ ॥
ಶೈವೀಚಿಂತಾವಿಹೀನಂ ಮಮ ಹೃದಯಮಹೋ ಮಾನಗರ್ವಾಧಿರೂಢಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ವಾರ್ಧಕ್ಯೇ ಚೇಂದ್ರಿಯಾಣಾಂ ವಿಗತಗತಿಮತಿಶ್ಚಾಧಿದೈವಾದಿತಾಪೈಃ
ಪಾಪೈ ರೋಗೈರ್ವಿಯೋಗೈಸ್ತ್ವನವಸಿತವಪುಃ ಪ್ರೌಢಿಹೀನಂ ಚ ದೀನಮ್ ।
ಮಿಥ್ಯಾಮೋಹಾಭಿಲಾಷೈರ್ಭ್ರಮತಿ ಮಮ ಮನೋ ಧೂರ್ಜಟೇರ್ಧ್ಯಾನಶೂನ್ಯಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ನೋ ಶಕ್ಯಂ ಸ್ಮಾರ್ತಕರ್ಮಪ್ರತಿಪದಗಹನಪ್ರತ್ಯವಾಯಾಕುಲಾಖ್ಯಂ
ಶ್ರೌತೇ ವಾರ್ತಾ ಕಥಂ ಮೇ ದ್ವಿಜಕುಲವಿಹಿತೇ ಬ್ರಹ್ಮಮಾರ್ಗೇ ಸುಸಾರೇ ।
ತತ್ತ್ವೇಽಜ್ಞಾತೇ ವಿಚಾರೈಃ ಶ್ರವಣಮನನಯೋಃ ಕಿಂ ನಿದಿಧ್ಯಾಸಿತವ್ಯಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ಸ್ನಾತ್ವಾ ಪ್ರತ್ಯೂಷಕಾಲೇ ಸ್ನಪನವಿಧಿವಿಧೌ ನಾಹೃತಂ ಗಾಂಗತೋಯಂ
ಪೂಜಾರ್ಥಂ ವಾ ಕದಾಚಿದ್ಬಹುತರಗಹನಾತ್ಖಂಡಬಿಲ್ವೀದಲಾನಿ ।
ನಾನೀತಾ ಪದ್ಮಮಾಲಾ ಸರಸಿ ವಿಕಸಿತಾ ಗಂಧಪುಷ್ಪೈಸ್ತ್ವದರ್ಥಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ದುಗ್ಧೈರ್ಮಧ್ವಾಜ್ಯಯುಕ್ತೈರ್ದಧಿಸಿತಸಹಿತೈಃ ಸ್ನಾಪಿತಂ ನೈವ ಲಿಂಗಂ
ನೋ ಲಿಪ್ತಂ ಚಂದನಾದ್ಯೈಃ ಕನಕವಿರಚಿತೈಃ ಪೂಜಿತಂ ನ ಪ್ರಸೂನೈಃ ।
ಧೂಪೈಃ ಕರ್ಪೂರದೀಪೈರ್ವಿವಿಧರಸಯುತೈರ್ನೈವ ಭಕ್ಷ್ಯೋಪಹಾರೈಃ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ಧ್ಯಾತ್ವಾ ಚಿತ್ತೇ ಶಿವಾಖ್ಯಂ ಪ್ರಚುರತರಧನಂ ನೈವ ದತ್ತಂ ದ್ವಿಜೇಭ್ಯೋ
ಹವ್ಯಂ ತೇ ಲಕ್ಷಸಂಖ್ಯೈರ್ಹುತವಹವದನೇ ನಾರ್ಪಿತಂ ಬೀಜಮಂತ್ರೈಃ ।
ನೋ ತಪ್ತಂ ಗಾಂಗತೀರೇ ವ್ರತಜಪನಿಯಮೈಃ ರುದ್ರಜಾಪ್ಯಂ ನ ಜಪ್ತಂ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ಸ್ಥಿತ್ವಾ ಸ್ಥಾನೇ ಸರೋಜೇ ಪ್ರಣವಮಯಮರುತ್ಕುಂಭಿತೇ ಸೂಕ್ಷ್ಮಮಾರ್ಗೇ
ಶಾಂತೇ ಸ್ವಾಂತೇ ಪ್ರಲೀನೇ ಪ್ರಕಟಿತವಿಭವೇ ಜ್ಯೋತಿರೂಪೇ ಪರಾಖ್ಯೇ ।
ಲಿಂಗಜ್ಞೇ ಬ್ರಹ್ಮವಾಕ್ಯೇ ಸಕಲತನುಗತಂ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ನಗ್ನೋ ನಿಃಸಂಗಶುದ್ಧಸ್ತ್ರಿಗುಣವಿರಹಿತೋ ಧ್ವಸ್ತಮೋಹಾಂಧಕಾರೋ
ನಾಸಾಗ್ರೇ ನ್ಯಸ್ತದೃಷ್ಟಿರ್ವಿದಿತಭವಗುಣೋ ನೈವ ದೃಷ್ಟಃ ಕದಾಚಿತ್ ।
ಉನ್ಮನ್ಯಾಽವಸ್ಥಯಾ ತ್ವಾಂ ವಿಗತಗತಿಮತಿಃ ಶಂಕರಂ ನ ಸ್ಮರಾಮಿ
ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥

ಚಂದ್ರೋದ್ಭಾಸಿತ ಶೇಖರೇ ಸ್ಮರಹರೇ ಗಂಗಾಧರೇ ಶಂಕರೇ
ಸರ್ಪೈರ್ಭೂಷಿತಕಂಠಕರ್ಣವಿವರೇ ನೇತ್ರೋತ್ಥವೈಶ್ವಾನರೇ ।
ದಂತಿತ್ವಕ್ಕೃತ ಸುಂದರಾಂಬರಧರೇ ತ್ರೈಲೋಕ್ಯಸಾರೇ ಹರೇ
ಮೋಕ್ಷಾರ್ಥಂ ಕುರು ಚಿತ್ತವೃತ್ತಿಮಮಲಾಮನ್ಯೈಸ್ತು ಕಿಂ ಕರ್ಮಭಿಃ ॥

ಕಿಂ ವಾಽನೇನ ಧನೇನ ವಾಜಿಕರಿಭಿಃ ಪ್ರಾಪ್ತೇನ ರಾಜ್ಯೇನ ಕಿಂ
ಕಿಂ ವಾ ಪುತ್ರಕಲತ್ರಮಿತ್ರಪಶುಭಿರ್ದೇಹೇನ ಗೇಹೇನ ಕಿಮ್ ।
ಜ್ಞಾತ್ವೈತತ್ ಕ್ಷಣಭಂಗುರಂ ಸಪದಿ ರೇ ತ್ಯಾಜ್ಯಂ ಮನೋ ದೂರತಃ
ಸ್ವಾತ್ಮಾರ್ಥಂ ಗುರುವಾಕ್ಯತೋ ಭಜ ಭಜ ಶ್ರೀಪಾರ್ವತೀ ವಲ್ಲಭಮ್ ॥

ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಂ
ಪ್ರತ್ಯಾಯಾಂತಿ ಗತಾಃ ಪುನರ್ನ ದಿವಸಾಃ ಕಾಲೋ ಜಗದ್ಭಕ್ಷಕಃ ।
ಲಕ್ಷ್ಮೀಸ್ತೋಯತರಂಗಭಂಗಚಪಲಾ ವಿದ್ಯುಚ್ಚಲಂ ಜೀವಿತಂ
ತಸ್ಮಾತ್ತ್ವಾಂ ಶರಣಾಗತಂ ಶರಣದ ತ್ವಂ ರಕ್ಷ ರಕ್ಷಾಧುನಾ ॥

ವಂದೇ ದೇವಮುಮಾಪತಿಂ ಸುರಗುರುಂ ವಂದೇ ಜಗತ್ಕಾರಣಂ
ವಂದೇ ಪನ್ನಗಭೂಷಣಂ ಮೃಗಧರಂ ವಂದೇ ಪಶೂನಾಂ ಪತಿಮ್ ।
ವಂದೇ ಸೂರ್ಯಶಶಾಂಕವಹ್ನಿನಯನಂ ವಂದೇ ಮುಕುಂದಪ್ರಿಯಂ
ವಂದೇ ಭಕ್ತಜನಾಶ್ರಯಂ ಚ ವರದಂ ವಂದೇ ಶಿವಂ ಶಂಕರಮ್ ॥

ಗಾತ್ರಂ ಭಸ್ಮಸಿತಂ ಸಿತಂ ಚ ಹಸಿತಂ ಹಸ್ತೇ ಕಪಾಲಂ ಸಿತಂ
ಖಟ್ವಾಂಗಂ ಚ ಸಿತಂ ಸಿತಶ್ಚ ವೃಷಭಃ ಕರ್ಣೇ ಸಿತೇ ಕುಂಡಲೇ ।
ಗಂಗಾಫೇನಸಿತಾ ಜಟಾ ಪಶುಪತೇಶ್ಚಂದ್ರಃ ಸಿತೋ ಮೂರ್ಧನಿ
ಸೋಽಯಂ ಸರ್ವಸಿತೋ ದದಾತು ವಿಭವಂ ಪಾಪಕ್ಷಯಂ ಸರ್ವದಾ ॥

ಕರಚರಣಕೃತಂ ವಾಕ್ಕಾಯಜಂ ಕರ್ಮಜಂ ವಾ
ಶ್ರವಣನಯನಜಂ ವಾ ಮಾನಸಂ ವಾಽಪರಾಧಮ್ ।
ವಿಹಿತಮವಿಹಿತಂ ವಾ ಸರ್ವಮೇತತ್ ಕ್ಷಮಸ್ವ
ಜಯ ಜಯ ಕರುಣಾಬ್ಧೇ ಶ್ರೀಮಹಾದೇವ ಶಂಭೋ ॥

---

* ೩ನೆ ಪರಿಶಿಷ್ಟದಲ್ಲಿ ೧೯ನ್ನು ನೋಡಿ.

ಸ್ತೋತ್ರಪಠನೆ ಮುಗಿಯಿತು. ಮತ್ತೆ ನರೇಂದ್ರ ಮಾಸ್ಟರೊಡನೆ ಮಾತುಕತೆಯಾಡಲು ಆರಂಭಿಸಿದ.

ನರೇಂದ್ರ: "ಮನುಷ್ಯ ಸಂಸಾರದಲ್ಲಿ ನಿರ್ಲಿಪ್ತನಾಗಿರಲಿ ಅಥವಾ ಇನ್ನೇನುಬೇಕಾದರೂ ಆಗಿರಲಿ, ಕಾಮಕಾಂಚನವನ್ನು ತ್ಯಜಿಸದ ಹೊರತು ಆತನಿಗೆ ಭಗವಂತನ ಸಾಕ್ಷಾತ್ಕಾರ ದೊರೆಯದು. ಹೆಂಗಸಿನೊಡನೆ ಸಹವಾಸಮಾಡಲು ಅಸಹ್ಯ ತೋರೋದಿಲ್ಲವೆ?

ಅಮೇಧ್ಯಪೂರ್ಣೇ ಚ ವಿದೂಷಿತೇಽಸ್ಥಿರೇ ।
ಕಲೇಬರೇ ಮೂತ್ರಪುರೀಷಭಾವಿತೇ
ರಮಂತಿ ಮೂಢಾ, ವಿರಮಂತಿ ಪಂಡಿತಾಃ ॥ §

"ವೇದಾಂತ ಉಪದೇಶಗಳಲ್ಲಿ ಯಾರಿಗೆ ಅಭಿರುಚಿ ಇಲ್ಲವೊ, ಯಾರು ಹರಿರಸಮದಿರೆಯನ್ನು ಪಾನಮಾಡರೊ ಅವರ ಜೀವನ ಬರಿದೆ ವ್ಯರ್ಥ.

ಓಂಕಾರ ಮೂಲಂ ಪರಮಂ ಮಹಾಂತಂ
ಗಾಯತ್ರಸಾವಿತ್ರಸುಭಾಷಿತಾಂತರಮ್ !
ವೇದಾಂತಗಂ ಯಃ ಪುರುಷಂ ನ ಸೇವತೇ
ವೃಥೈವ ತಸ್ಯಾಪಿ ನರಸ್ಯ ಜೀವನಮ್ ॥ ‡

"ಒಂದು ಹಾಡನ್ನು ಕೇಳಿ."

ನರೇಂದ್ರ ಹಾಡುತ್ತಿದಾನೆ:

ಕತ್ತರಿಸು ಮೋಹವನು, ದುರ್ಮಂತ್ರಗಳ ದೂಡು;
ಅವನ ಇರುವನು ಅರಿತು ಬಿಡುತೆಯನು ಗಳಿಸು.
ನಾಲ್ಕು ದಿನಗಳ ಸುಖಕೆ ಪ್ರಾಣಸಖನನು ಮರೆತೆ!
ಏಸೀವಿಡಂಬನೆಯು? ಅವನೊಲವ ಬೆಳಸು.

ಮತ್ತೆ ನರೇಂದ್ರ ಹೇಳುತ್ತಿದಾನೆ: "ಸನ್ಯಾಸಿಯ ಕೌಪೀನ-ಜೀವನ ವನ್ನು ಕೈಗೊಳ್ಳದೆ ಇದ್ದರೆ ಮನುಷ್ಯನಿಗೆ ಮುಕ್ತಿ ದೊರಕದು. ಸಂಸಾರ ವನ್ನು ತ್ಯಜಿಸಲೇಬೇಕು."

ಈಗ ನರೇಂದ್ರ ಶ್ರೀ ಶಂಕರಾಚಾರ್ಯ ವಿರಚಿತ ಕೌಪೀನಪಂಚಕ ವನ್ನು ಸ್ವರದಿಂದ ಹಾಡುತ್ತಿದಾನೆ:

---

§ ೩ನೆ ಪರಿಶಿಷ್ಟದಲ್ಲಿ ೨೦ನ್ನು ನೋಡಿ. ‡ ೩ನೆ ಪರಿಶಿಷ್ಟದಲ್ಲಿ ೨೧ನ್ನು ನೋಡಿ.

ವೇದಾಂತವಾಕ್ಯೇಷು ಸದಾ ರಮಂತೋ ಭಿಕ್ಷಾನ್ನಮಾತ್ರೇಣ ಚ ತುಷ್ಟಿಮಂತಃ ।
ವಿಶೋಕಮಂತಃಕರಣೇ ಚರಂತಃ ಕೌಪೀನವಂತಃ ಖಲು ಭಾಗ್ಯವಂತಃ ॥ . . .

ನರೇಂದ್ರ ಮತ್ತೆ ಮಾತು ಮುಂದುವರಿಸುತ್ತಾ ಹೇಳಿದ: "ಮನುಷ್ಯ ಏಕೆ ಸಂಸಾರದಲ್ಲಿ ಬದ್ಧನಾಗಬೇಕು? ಆತ ಮಾಯಾ ಬಲೆಗೆ ಏಕೆ ಸಿಕ್ಕಿ ಬೀಳಬೇಕು? ಮನುಷ್ಯನ ನಿಜಸ್ವರೂಪವೇನು? 'ಚಿದಾನಂದರೂಪಃ ಶಿವೋऽಹಮ್।' ನಾನೇ ಆ ಸಚ್ಚಿದಾನಂದ."

ನರೇಂದ್ರ ಈಗ ಶ್ರೀ ಶಂಕರಾಚಾರ್ಯ ವಿರಚಿತ ನಿರ್ವಾಣಷಟ್ಕವನ್ನು* ಸ್ವರದಿಂದ ಹಾಡುತ್ತಿದ್ದಾನೆ:

ಬುದ್ಧಿಮನ ಚಿತ್ತಹಂಕಾರ ನಾನಲ್ಲ;
ಕಣ್ಣುಕಿವಿ ಮೂಗಲ್ಲ, ನಾಲಗೆಯುಮಲ್ಲ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು! . . .

ನರೇಂದ್ರ ಈಗ ಶ್ರೀಮಧುಸೂದನ ಸ್ತೋತ್ರವನ್ನು ಹಾಡುತ್ತಿದ್ದಾನೆ:

ಓಮಿತಿ ಜ್ಞಾನಮಾತ್ರೇಣ ರೋಗಾಜೀರ್ಣೇನ ನಿರ್ಜಿತಃ ।
ಕಾಲನಿದ್ರಾಂ ಪ್ರಪನ್ನೋऽಸ್ಮಿ ತ್ರಾಹಿ ಮಾಂ ಮಧುಸೂದನ ॥
ನ ಗತಿರ್ವಿದ್ಯತೆ ಚಾನ್ಯಾ ತ್ವಮೇವ ಶರಣಂ ಮಮ ।
ಪಾಪಪಂಕೇ ನಿಮಗ್ನೋऽಸ್ಮಿ ತ್ರಾಹಿ ಮಾಂ ಮಧುಸೂದನ ॥
ಮೋಹಿತೋ ಮೋಹಜಾಲೇನ ಪುತ್ರದಾರಗೃಹಾದಿಷು ।
ತೃಷ್ಣಯಾ ಪೀಡ್ಯಮಾನೋऽಸ್ಮಿ ತ್ರಾಹಿ ಮಾಂ ಮಧುಸೂದನ ॥
ಭಕ್ತಿಹೀನಂ ಚ ದೀನಂ ಚ ದುಃಖಶೋಕಾತುರಂ ಪ್ರಭೋ ।
ಅನಾಶ್ರಯಮನಾಥಂ ಚ ತ್ರಾಹಿಮಾಂ ಮಧುಸೂದನ ॥
ಗತಾಗತೇನ ಶ್ರಾಂತೋऽಸ್ಮಿ ದೀರ್ಘಸಂಸಾರವರ್ತ್ಮಸು ।
ಯೇನ ಭೂಯೋ ನ ಗಚ್ಛಾಮಿ ತ್ರಾಹಿ ಮಾಂ ಮಧುಸೂದನ ॥
ಬಹವೋ ಹಿ ಮಯಾ ದೃಷ್ಟಾ ಕ್ಲೇಶಾಚ್ಚೈವ ಪೃಥಕ್ ಪೃಥಕ್ ।
ಗರ್ಭವಾಸೇ ಮಹದ್ದುಃಖಂ ತ್ರಾಹಿ ಮಾಂ ಮಧುಸೂದನ ॥
ತೇನ ದೇವ ಪ್ರಪನ್ನೋऽಸ್ಮಿ ತ್ರಾಣಾರ್ಥಂ ತ್ವತ್ಪರಾಯಣಃ ।
ದುಃಖಾರ್ಣವಪರಿತ್ರಾಣಾತ್ ತ್ರಾಹಿ ಮಾಂ ಮಧುಸೂದನ ॥

* ಶ್ರೀ ಶಂಕರಾಚಾರ್ಯ ವಿರಚಿತದ ಅನುವಾದ.

ವಾಚಾ ಯತ್ರ ಪ್ರತಿಜ್ಞಾತಂ ಕರ್ಮಣಾ ನೋಪಪಾದಿತಮ್ ।
ತತ್ಪಾಪಾರ್ಜಿತಮಗ್ನೋಽಸ್ಮಿ ತ್ರಾಹಿ ಮಾಂ ಮಧುಸೂದನ ॥
ಸುಕೃತಂ ನ ಕೃತಂ ಕಿಂಚಿತ್ ದುಷ್ಕೃತಂ ಚ ಕೃತಂ ಮಯಾ ।
ಸಂಸಾರಘೋರೇ ಮಗ್ನೋಽಸ್ಮಿ ತ್ರಾಹಿ ಮಾಂ ಮಧುಸೂದನ ॥
ದೇಹಾಂತರಸಹಸ್ರೇಷು ಚಾನ್ಯೋನ್ಯಭ್ರಾಮಿತೋ ಮಯಾ ।
ತಿರ್ಯಕ್ತ್ವಂ ಮಾನುಷತ್ವಂ ಚ ತ್ರಾಹಿ ಮಾಂ ಮಧುಸೂದನ ॥
ವಾಚಯಾಮಿ ಯಥೋನ್ಮತ್ತಃ ಪ್ರಲಪಾಮಿ ತವಾಗ್ರತಃ ।
ಜರಾಮರಣಭೀತೋಽಸ್ಮಿ ತ್ರಾಹಿ ಮಾಂ ಮಧುಸೂದನ ॥
ಯತ್ರ ಯತ್ರ ಚ ಯಾತೋಽಸ್ಮಿ ಸ್ತ್ರೀಷು ವಾ ಪುರುಷೇಷು ವಾ ।
ತತ್ರ ತತ್ರಾಚಲಾ ಭಕ್ತಿಃ ತ್ರಾಹಿ ಮಾಂ ಮಧುಸೂದನ ॥ *

ಮಾಸ್ಟರ್ ನರೇಂದ್ರ ಹಾಡಿದ ಈ ಶ್ಲೋಕಗಳನ್ನು ಕೇಳಿ ಮಂತ್ರ ಮುಗ್ಧನಾಗಿಬಿಟ್ಟಿದಾನೆ. ಆತ ತನಗೆ ತಾನೆ ಹೇಳಿಕೊಳ್ಳುತ್ತಿದಾನೆ: "ನರೇಂದ್ರನದು ಎಂಥ ತೀವ್ರ ವೈರಾಗ್ಯ! ಈ ಕಾರಣದಿಂದಲೇ ಮಠದ ಸೋದರರೆಲ್ಲರಿಗೂ ಈತನ ಅವಸ್ಥೆಯೇ! ಪರಮಹಂಸರ ಗೃಹಸ್ಥ ಭಕ್ತರಲ್ಲಿಯೂ ಇವರನ್ನು ನೋಡಿ ಕಾಮಕಾಂಚನಾಸಕ್ತಿಯನ್ನು ತ್ಯಜಿಸಬೇಕೆಂಬ ಭಾವನೆ ಪ್ರಬಲವಾಗಿ ಬೆಳೆಯುತ್ತಿದೆ. ಆಹ, ಈ ಸೋದರರ ಅವಸ್ಥೆ ಎಷ್ಟು ಅದ್ಭುತವಾದ್ದು! ನಮ್ಮೀ ಕೆಲವರನ್ನು ಪರಮಹಂಸರು ಏಕೆ ಸಂಸಾರದಲ್ಲಿ ಇಟ್ಟಿದಾರೆ? ನಮಗೂ ಒಂದು ಉಪಾಯವನ್ನು ತೋರಿಸಿಕೊಡುವರೆ? ನಮ್ಮಲ್ಲಿಯೂ ತೀವ್ರ ವೈರಾಗ್ಯವನ್ನು ಉಂಟು ಮಾಡುವರೊ ಅಥವಾ ಈ ಸಂಸಾರದಲ್ಲೇ ಮೋಹಗೊಂಡಿರುವಂತೆ ಮಾಡಿ ಬಿಡುವರೋ ಏನೊ?"

ಊಟವಾದನಂತರ ಮಠದ ಸೋದರರೆಲ್ಲರು ವಿಶ್ರಮಿಸಿಕೊಳ್ಳುತ್ತಿದಾರೆ. ಹಿರಿಯ ಗೋಪಾಲ ಕೆಲವು ಹಾಡುಗಳನ್ನು ಬರೆದುಕೊಳ್ಳುತ್ತಿದಾನೆ. ನಿರಂಜನ ತನ್ನ ತಾಯನ್ನು ನೋಡಿಬರಲು ಮನೆಗೆ ಹೋಗಿದಾನೆ. ಶರಚ್ಚಂದ್ರ, ಕಾಳೀಪ್ರಸಾದ, ಬಾಬುರಾಮ ಜಗನ್ನಾಥ-ಪುರಿಗೆ ಹೋಗಿದಾರೆ.

ನರೇಂದ್ರ ತನ್ನ ಮನೆಯ ಮೊಕದ್ದಮೆಯ ಸಂಬಂಧವಾಗಿ ಒಬ್ಬಿಬ್ಬರು ಸಹೋದರರೊಡನೆ ಊಟವಾದನಂತರ ಕಲ್ಕತ್ತಕ್ಕೆ ಹೋಗಿ

* ೩ನೆ ಪರಿಶಿಷ್ಟದಲ್ಲಿ ೨೨ನ್ನು ನೋಡಿ.

ದಾನೆ. ಆತ ಸಾಯಂಕಾಲ ಹಿಂದಿರುಗಿ ಬರುತ್ತಾನೆ. ನರೇಂದ್ರ ಮಠದಲ್ಲಿ ಇಲ್ಲದೆ ಇರುವುದು ಉಳಿದ ಸೋದರರಿಗೆ ಸಹಿಸಲಾಗುತ್ತಿಲ್ಲ. ನರೇಂದ್ರ ಎಷ್ಟು ಹೊತ್ತಿಗೆ ಹಿಂದಿರುಗಿ ಬರುವನೆಂದು ಎಲ್ಲರೂ ಭಾವಿಸುತ್ತಿದಾರೆ.

ಅಪರಾಹ್ನವಾಗಿದೆ. ರವೀಂದ್ರ ಉನ್ಮತ್ತನಂತೆ ಮಠಕ್ಕೆ ಬಂದಿದಾನೆ. ಕಾಲಿಗೆ ಏನನ್ನೂ ಹಾಕಿಕೊಂಡಿಲ್ಲ. ಕಪ್ಪು ಅಂಚಿನ ಪಂಚೆಯ ಅರ್ಧಭಾಗವನ್ನು ಮಾತ್ರ ಸೊಂಟಕ್ಕೆ ಸುತ್ತಿಕೊಂಡಿದಾನೆ. ಆತನ ಕಣ್ಣುಗಳು ಹುಚ್ಚನ ಕಣ್ಣುಗಳ ಹಾಗೆ ತಿರುಗುತ್ತಿವೆ. ಏನು ಸಮಾಚಾರ ಎಂಬುದಾಗಿ ಎಲ್ಲರೂ ಕಾತರರಾಗಿ ಕೇಳುತ್ತಿದಾರೆ.

ರವೀಂದ್ರ ಹೇಳಿದ: "ಮೊದಲು ಸ್ವಲ್ಪ ಉಸಿರು ತೆಗೆದುಕೊಂಡು ಬಳಿಕ ಎಲ್ಲವನ್ನೂ ನಿಮಗೆ ಸಾಂಗವಾಗಿ ತಿಳಿಸುತ್ತೇನೆ. ನಾನು ಇನ್ನು ಮನೆಗೆ ಹಿಂದಿರುಗಿ ಹೋಗೋದಿಲ್ಲ; ನಿಮ್ಮೊಡನೆ ಇಲ್ಲೇ ಇದ್ದುಬಿಡುತ್ತೇನೆ. ಆಕೆ ವಿಶ್ವಾಸಘಾತಕಿ! ಆಕೆಗಾಗಿ ಐದು ವರ್ಷದ ಕುಡಿಯೋ ಅಭ್ಯಾಸವನ್ನೂ ಬಿಟ್ಟುಬಿಟ್ಟೆ. ಈಗ ಎಂಟು ತಿಂಗಳಿಂದ ಒಂದು ತೊಟ್ಟನ್ನೂ ಮುಟ್ಟಿಲ್ಲ. ಆಕೆ ವಿಶ್ವಾಸಘಾತಕಿ!"

ಮಠದ ಸೋದರರು: "ಶಾಂತನಾಗು! ಈಗ ಇಲ್ಲಿಗೆ ಹೇಗೆ ಬಂದೆ?"

ರವೀಂದ್ರ: "ಕಲ್ಕತ್ತದಿಂದ ಬರೀ ಕಾಲಿನಲ್ಲೇ ನಡೆದುಬಂದೆ."

ಮಠದ ಸೋದರರು: "ನಿನ್ನ ಪಂಚೆಯ ಇನ್ನೊಂದರ್ಧ ಎಲ್ಲಿ?"

ರವೀಂದ್ರ: "ಆಕೆಯ ಮನೆಯಿಂದ ನಾನು ಹೊರಟಾಗ, ಆಕೆ ನನ್ನ ಪಂಚೆಯನ್ನು ಹಿಡಿದು ಎಳೆಯಲಾರಂಭಿಸಿದಳು. ಆಗ ಪಂಚೆ ಅರ್ಧಕ್ಕೆ ಹರಿದುಹೋಯಿತು."

ಮಠದ ಸೋದರರು: "ಹೋಗಿ ಗಂಗಾಸ್ನಾನ ಮಾಡಿ ಬಾ. ಮೊದಲು ನಿನ್ನ ಮಿದುಳು ಸ್ವಲ್ಪ ಶಾಂತವಾಗಲಿ, ಬಳಿಕ ಎಲ್ಲವನ್ನೂ ಕೇಳುತ್ತೇವೆ."

ರವೀಂದ್ರ ಕಲ್ಕತ್ತದ ಒಂದು ಸಂಭಾವಿತ ಕಾಯಸ್ಥರ ಮನೆತನಕ್ಕೆ ಸೇರಿದವ. ಆತನ ವಯಸ್ಸು ಇಪ್ಪತ್ತೊ ಇಪ್ಪತ್ತೆರಡೊ. ಪರಮಹಂಸರನ್ನು ಕಾಳೀದೇವಾಲಯದಲ್ಲಿ ದರ್ಶನಮಾಡಿದ್ದ. ಅವರಿಂದ ವಿಶೇಷ ಕೃಪೆಯನ್ನು ಪಡೆದಿದ್ದ. ಒಮ್ಮೆ ಆತ ಪರಮಹಂಸರೊಡನೆ ಮೂರು ದಿನ

ಗಳನ್ನೂ ಕಳೆದಿದ್ದ. ಆತನ ಸ್ವಭಾವ ಅತಿ ಮೃದು ಮತ್ತು ಕೋಮಲ. ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆದರೆ ಒಮ್ಮೆ ಅವರು ಆತನಿಗೆ ಹೇಳಿದ್ದರು: "ನೀನು ಇನ್ನೂ ಸ್ವಲ್ಪ ಕಾಲ ಕಾದಿರಬೇಕು; ಇನ್ನೂ ಕೆಲವು ಅನುಭವಗಳನ್ನು ಪಡೆಯಬೇಕಾಗಿದೆ; ಈಗ ಏನೂ ದೊರೆಯೋಹಾಗಿಲ್ಲ. ಕಳ್ಳರು ಮನೆಗೆ ಕನ್ನ ಹಾಕುತ್ತಿರುವಾಗ ಪೊಲೀಸರ ಕೈಯಲ್ಲಿ ಏನನ್ನೂ ಮಾಡಲಾಗೋದಿಲ್ಲ. ಸೂರೆಮಾಡಿ ಇನ್ನೇನು ಮುಗಿಯಿತು ಅನ್ನುವಷ್ಟರಲ್ಲಿ ಬಂದು ಅವರನ್ನು ಹಿಡಿದು ಕೈದಿಗಳನ್ನಾಗಿ ಮಾಡುತ್ತಾರೆ."

ರವೀಂದ್ರನಿಗೆ ಅನೇಕ ಗುಣಗಳಿವೆ. ಆತನಿಗೆ ಭಗವಂತನಲ್ಲಿ ಶ್ರದ್ಧಾಭಕ್ತಿ ಇವೆ; ಬಡಬಗ್ಗರಲ್ಲಿ ಪ್ರೀತಿ, ದಯೆ ಇಟ್ಟಿದಾನೆ. ಆದರೆ ಆತ ಒಬ್ಬ ವೇಶ್ಯೆಯ ಬಲೆಗೆ ಹೋಗಿ ಬಿದ್ದುಬಿಟ್ಟಿದ್ದ. ಈಗ ಆತನ ಅರಿವಿಗೆ ಬಂದಿದೆ ಆಕೆ ಒಬ್ಬಳು ವಿಶ್ವಾಸಘಾತಕಿ ಎಂಬುದಾಗಿ. ಸಂಸಾರಕ್ಕೆ ಹಿಂದಿರುಗಿ ಹೋಗೋದಿಲ್ಲವೆಂದು ಸಂಕಲ್ಪಿಸಿ ಅರ್ಧ ಪಂಚೆಯನ್ನು ಉಟ್ಟೇ ಮಠಕ್ಕೆ ಬಂದುಬಿಟ್ಟಿದಾನೆ.

ರವೀಂದ್ರ ಗಂಗಾಸ್ನಾನಕ್ಕೆ ಹೋಗುತ್ತಿದಾನೆ. ಒಬ್ಬ ಭಕ್ತ ಆತನನ್ನು ಹಿಂಬಾಲಿಸುತ್ತಿದಾನೆ. ಆ ಭಕ್ತನ ಮಹದಾಕಾಂಕ್ಷೆ ರವೀಂದ್ರನೂ ಮಠದ ಸೋದರರೊಡನೆ ಇದ್ದು ಆತ್ಮಜಾಗೃತಿಯನ್ನು ಪಡೆದುಕೊಳ್ಳಬೇಕು ಎಂಬುದಾಗಿ. ಸ್ನಾನ ಮುಗಿದನಂತರ ಆ ಭಕ್ತ ರವೀಂದ್ರನನ್ನು ಹತ್ತಿರವೇ ಇದ್ದ ಶ್ಮಶಾನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಬಿದ್ದಿದ್ದ ಹೆಣಗಳನ್ನು ತೋರಿಸುತ್ತಾ ಹೇಳುತ್ತಿದಾನೆ: "ಇಲ್ಲಿಗೆ ಮಠದ ಸೋದರರು ಆಗಾಗ ಒಬ್ಬೊಬ್ಬರೇ ರಾತ್ರಿ ವೇಳೆ ಬಂದು ಧ್ಯಾನಮಾಡುತ್ತಾರೆ. ಇಲ್ಲಿ ಧ್ಯಾನ ಮಾಡುವುದು ಬಹಳ ಒಳ್ಳೆಯದು; ಸಂಸಾರ ಅನಿತ್ಯ ಎಂಬುದು ಬಹಳ ಚೆನ್ನಾಗಿ ಮನದಟ್ಟಾಗುತ್ತದೆ."

ರವೀಂದ್ರ ಧ್ಯಾನಕ್ಕೆಂದು ಆ ಶ್ಮಶಾನದಲ್ಲಿ ಕುಳಿತುಕೊಂಡ. ಆದರೆ ಹೆಚ್ಚು ಹೊತ್ತು ಧ್ಯಾನ ಮಾಡಲಾಗಲಿಲ್ಲ; ಮನಸ್ಸು ಅವಿಶ್ರಾಂತವಾಗಿತ್ತು.

ಈಗ ರವೀಂದ್ರ ಮತ್ತು ಆ ಭಕ್ತ ಇಬ್ಬರೂ ಮಠಕ್ಕೆ ಹಿಂದಿರುಗಿದರು. ಬಳಿಕ ದೇವರ ಮನೆಗೆ ಹೋಗಿ ಗುರುಮಹಾರಾಜರಿಗೆ ಪ್ರಣಾಮಮಾಡಿ

ದರು. ಆ ಭಕ್ತ ರವೀಂದ್ರನಿಗೆ ಹೇಳಿದ: "ಮಠದ ಸೋದರರು ಇಲ್ಲಿ ಧ್ಯಾನಮಾಡುತ್ತಾರೆ."

ರವೀಂದ್ರ ಅಲ್ಲೂ ಧ್ಯಾನಕ್ಕೆ ಕುಳಿತ, ಆದರೆ ಮತ್ತೆ ಹೆಚ್ಚು ಹೊತ್ತು ಧ್ಯಾನದಲ್ಲಿ ಕುಳಿತುಕೊಳ್ಳಲಾಗಲಿಲ್ಲ.

ಭಕ್ತ: "ಈಗ ನಿನಗೆ ಹೇಗಿದೆ? ನಿನ್ನ ಮನಸ್ಸು ಇನ್ನೂ ಸ್ಥಿರವಾಗಿ ನಿಲ್ಲುತ್ತಿಲ್ಲವೇನು? ಬಹುಶಃ ಅದಕ್ಕಾಗೇ ಧ್ಯಾನ ಸಾಧ್ಯವಾಗದೆ ಹೋಗಿರ ಬೇಕು."

ರವೀಂದ್ರ: "ನಾನು ಸಂಸಾರಕ್ಕೆ ಹಿಂದಿರುಗಿ ಹೋಗದಿರುವುದೇನೊ ಖಂಡಿತ ನಿಜ. ಆದರೆ ಮನಸ್ಸು ಮಾತ್ರ ಚಂಚಲವಾಗಿದೆ."

ಮಾಸ್ಟರ್ ಮತ್ತು ರವೀಂದ್ರ ಬೇರೆ ಯಾರೂ ಇಲ್ಲದ ಮಠದ ಒಂದು ಭಾಗದಲ್ಲಿ ನಿಂತು ಮಾತುಕತೆ ಆಡುತ್ತಿದಾರೆ. ಮಾಸ್ಟರ್ ಬುದ್ಧದೇವನ ಸಂಬಂಧವಾಗಿ ಕೆಲವು ಕಥೆಗಳನ್ನು ಹೇಳುತ್ತಿದಾನೆ. ಈಗ ಕೆಲವು ದಿವಸ ಗಳಿಂದ ಮಠದ ಸೋದರರು ಬುದ್ಧದೇವನ ಮತ್ತು ಚೈತನ್ಯದೇವನ ಚರಿತೆ ಗಳನ್ನೂ ದಿನವೂ ಓದುತ್ತಿದಾರೆ. ಮಾಸ್ಟರ್ ದೇವೇಂದ್ರನಿಗೆ ಹೇಳುತ್ತಿ ದಾನೆ, ಬುದ್ಧದೇವನ ಆತ್ಮ ಮೊದಲು ಜಾಗೃತಿಗೊಂಡುದು ದೇವಕನ್ಯೆಯರ ಹಾಡನ್ನು ಕೇಳಿದನಂತರ ಎಂಬುದಾಗಿ.

ಈಗ ಮಾಸ್ಟರ್ ಆ ಹಾಡನ್ನು ಹಾಡುತ್ತಿದಾನೆ:

ಹಾ ಸುತ್ತುತಿರುವೆವು ನಾವು, ವಿಶ್ರಾಂತಿಯಿನಿತಿಲ್ಲ
ಬಂದುದೆಲ್ಲಿಂದಲೊ, ನಡೆವುದೆಲ್ಲೋ? . . .

ನರೇಂದ್ರ, ತಾರಕ, ಹರೀಶ ಕಲ್ಕತ್ತದಿಂದ ಮಠಕ್ಕೆ ಹಿಂದಿರುಗು ವುದರಲ್ಲಿ ರಾತ್ರಿಯಾಗಿತ್ತು. ಬಂದೊಡನೆಯೆ ಹೇಳಿದರು: "ಇಂದು ಹೊಟ್ಟೆ ಒಡೆಯೋ ಹಾಗೆ ಒಳ್ಳೆ ಚೆನ್ನಾದ ಊಟ!" ಕಲ್ಕತ್ತದಲ್ಲಿ ಒಬ್ಬ ಭಕ್ತ ಅವರಿಗೆ ಅತಿಥಿಸತ್ಕಾರ ಮಾಡಿ ಕಳುಹಿಸಿದ.

ಮಠದ ಸೋದರರೆಲ್ಲರು ಈಗ "ದಾನವರ" ಕೊಠಡಿಯಲ್ಲಿ ನೆರೆ ದಿದಾರೆ. ನರೇಂದ್ರ ರವೀಂದ್ರನ ವೃತ್ತಾಂತವನ್ನೆಲ್ಲಾ ಕೇಳಿದ. ಆತನಿಗೆ ಬುದ್ಧಿವಾದವೀಯೋ ಉದ್ದೇಶದಿಂದ ನರೇಂದ್ರ ಹಾಡಲಾರಂಭಿಸಿದಾನೆ:

ಕತ್ತರಿಸು ಮೋಹವನು, ದುರ್ಮಂತ್ರಗಳ ದೂಡು;
ಅವನ ಇರವನು ಅರಿತು ಬಿಡುತೆಯನು ಗಳಿಸು . . . .

ನರೇಂದ್ರ ಮತ್ತೆ ಹಾಡುತ್ತಿದಾನೆ :

ಓ ಸಾಧೂ—

ಪ್ರೇಮ ಪಾತ್ರೆಯನು ಈಗಾದರು ತುಟಗಿಡು

ಹರಿನಾಮದ ಸುಧೆ ಹೀರು,

ಆನಂದದಿ ಕರಗು ! . . .

ಸ್ವಲ್ಪ ಹೊತ್ತಾದನಂತರ ಸೋದರರೆಲ್ಲರು ತಪಸ್ವಿ ಕಾಳಿಯ ಕೊಠಡಿಗೆ ಬಂದು ಕುಳಿತುಕೊಂಡಿದಾರೆ. ಗಿರೀಶಘೋಷನ ಎರಡು ಹೊಸ ಪುಸ್ತಕಗಳು — ಬುದ್ಧದೇವನ ಚರಿತೆ, ಚೈತನ್ಯದೇವನ ಚರಿತೆ — ಈಗತಾನೆ ಬಂದಿವೆ.

ಮಠವನ್ನು ಸ್ಥಾಪಿಸಿದಂದಿನಿಂದ ಶಶಿ ತನ್ನ ಇಡೀ ಮನಸ್ಸನ್ನಿಟ್ಟು ಹಗಲಿರುಳೆನ್ನದೆ ಗುರುಮಹಾರಾಜರ ಪೂಜೆ ಪುರಸ್ಕಾರಗಳಲ್ಲೇ ನಿರತನಾಗಿದಾನೆ. ಆತನ ಶ್ರದ್ಧಾಭಕ್ತಿಯನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾಗಿಬಿಟ್ಟದಾರೆ. ಪರಮಹಂಸರು ಅಸ್ವಸ್ಥರಾಗಿದ್ದಾಗ ಯಾವರೀತಿಯಾಗಿ ಶಶಿ ಹಗಲೂ ಇರುಳೂ ಅವರ ಸೇವೆಯಲ್ಲಿ ನಿರತನಾಗಿದ್ದನೊ ಅದೇ ರೀತಿಯಾಗಿ ಈಗಲೂ ಏಕಚಿತ್ತದಿಂದ ಅವರ ಸೇವೆಯಲ್ಲೇ ನಿರತನಾಗಿದಾನೆ.

ಮಠದ ಒಬ್ಬ ಸೋದರ ಬುದ್ಧದೇವನ ಮತ್ತು ಚೈತನ್ಯದೇವನ ಚರಿತೆಗಳಿಂದ ಗಟ್ಟಿಯಾಗಿ ಓದಲಾರಂಭಿಸಿದ. ಚೈತನ್ಯದೇವನ ಚರಿತೆಯನ್ನು ಓದುವಾಗ ಸ್ವಲ್ಪ ಅದನ್ನು ಪರಿಹಾಸ್ಯ ಸ್ವರದಿಂದ ಓದಲಾರಂಭಿಸಿದ. ನರೇಂದ್ರ ಆತನ ಕೈಯಿಂದ ಆ ಪುಸ್ತಕವನ್ನು ಕಿತ್ತುಕೊಂಡು ಹೇಳಿದ : "ಒಳ್ಳೆಯದನ್ನೆಲ್ಲ ಹಾಳುಮಾಡೋದು ನೀನು ಈ ರೀತಿಯಾಗೇ !"

ಚೈತನ್ಯದೇವ ತನ್ನ ಪ್ರೇಮವನ್ನು ಚಂಡಾಲಾದಿಯಾಗಿ ಬ್ರಾಹ್ಮಣನವರೆಗೆ ಯಾವರೀತಿಯಾಗಿ ಹಂಚಿದ ಎಂಬ ಅಧ್ಯಾಯವನ್ನು ನರೇಂದ್ರ ತಾನೇ ಓದಲಾರಂಭಿಸಿದ.

ಒಬ್ಬ ಸೋದರ: "ನಾನು ಹೇಳುತ್ತೇನೆ, ಯಾರೆ ಆಗಲಿ ಯಾರಿಗೂ ಪ್ರೇಮವನ್ನು ಹಂಚಲಾಗೋದಿಲ್ಲ."

ನರೇಂದ್ರ: "ಆದರೆ ಪರಮಹಂಸರು ನನಗೆ ಅದನ್ನು ಕೊಟ್ಟದಾರೆ."

ಸೋದರ : "ಆಗಲಿ, ನಿನಗೆ ಅದು ದೊರೆತಿದೆ ಅಂತ ತಿಳಿದುಕೊಂಡಿದೀಯೇನು ?"

ನರೇಂದ್ರ: "ಅದರ ಸಂಬಂಧವಾಗಿ ನಿನಗೇನು ಗೊತ್ತು? ನೀನು ಭಗವಂತನ ಸೇವಕರ ದರ್ಜೆಗೆ ಸೇರಿದವ. ನೀವೆಲ್ಲರೂ ಬಂದು ನನಗೆ ಸೇವೆ ಮಾಡಬೇಕು, ಕಾಲು ಒತ್ತಬೇಕು. ಎಲ್ಲಾ ತಿಳಿದು ಹೋಗಿ ಬಿಟ್ಟಿದೆ ಅಂತ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬೇಡಿ. ಈಗ ಹೋಗಿ ನೀನು ಹುಕ್ಕ ತಯಾರು ಮಾಡಿ ತೆಗೆದುಕೊಂಡು ಬಾ."

ಎಲ್ಲರೂ ನಗುತ್ತಿದಾರೆ.

ಸೋದರ: "ತ—ಯಾ—ರು—ಮಾ—ಡೋ—ದಿ—ಲ್ಲಾ."

ಎಲ್ಲರೂ ನಗುತ್ತಿದಾರೆ.

ಮಾಸ್ಟರ್ ತನಗೆ ತಾನೆ: "ಪರಮಹಂಸರು ಕೇವಲ ನರೇಂದ್ರನೊಬ್ಬನಲ್ಲೇ ಅಲ್ಲ ಉಳಿದ ಸೋದರರಲ್ಲೂ ಎದೆ ಕೆಚ್ಚನ್ನು ಬೆಳಸಿಬಿಟ್ಟಿದಾರೆ. ಈ ಕೆಚ್ಚು ಇಲ್ಲದಿದ್ದರೆ ಕಾಮಕಾಂಚನವನ್ನು ತ್ಯಜಿಸಲು ಸಾಧ್ಯವಾಗುವುದೆ?"

೧೧ನೆ ಮೇ ೧೮೮೭, ಮಂಗಳವಾರ.

ಭಗವತಿಯ ಪೂಜೆಗೆ ಮಂಗಳವಾರ ಬಹಳ ಪವಿತ್ರವಾದ ದಿನ. ಆದ್ದರಿಂದ ಇಂದು ಮಠದಲ್ಲಿ ಭಗವತಿಯ ವಿಶೇಷ ಪೂಜೆಗೆ ವ್ಯವಸ್ಥೆ ನಡೆದಿದೆ. ಗುರುಮಹಾರಾಜರ ಎದುರಿಗೆ ಒಂದು ಯಂತ್ರವನ್ನು ಬರೆದಿದೆ. ಹೋಮ ನಡೆಯಲಿದೆ; ಬಳಿಕ ಬಲಿಯೂ ನಡೆಯಲಿದೆ. ಹೋಮ ಮತ್ತು ಬಲಿಯನ್ನು ತಾಂತ್ರಿಕ ರೀತಿಯಾಗಿ ಮಾಡುವಂತೆ ವ್ಯವಸ್ಥೆ ಆಗಿದೆ.

ಮಾಸ್ಟರ್ ಈಗ ಗಂಗಾಸ್ನಾನಕ್ಕಾಗಿ ಹೊರಟಿದಾನೆ. ರವೀಂದ್ರ ಒಬ್ಬನೆ ಚಾವಣಿಯ ಮೇಲೆ ಅಡ್ಡಾಡುತ್ತಿದಾನೆ. ನರೇಂದ್ರ ಸ್ವರಸಹಿತ ನಿರ್ವಾಣಷಟ್ಕವನ್ನು ಹಾಡುತ್ತಿರೋದು ಮಾಸ್ಟರ ಕಿವಿಗೆ ಬೀಳುತ್ತಿದೆ:

ಬುದ್ಧಿ ಮನ ಚಿತ್ತ ಹಂಕಾರ ನಾನಲ್ಲ;
ಕಣ್ಣು ಕಿವಿ ಮೂಗಲ್ಲ, ನಾಲಗೆಯುಮಲ್ಲ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು! . . .

ಈಗ ರವೀಂದ್ರ ಗಂಗಾಸ್ನಾನ ಮಾಡಿ ಒದ್ದೆ ಬಟ್ಟೆ ಉಟ್ಟುಕೊಂಡೇ ಬಂದಿದಾನೆ.

ನರೇಂದ್ರ ಮೆತ್ತಗೆ ಮಾಸ್ಟರಿಗೆ: "ಗಂಗಾಸ್ನಾನ ಮಾಡಿ ಬಂದಿದಾನೆ. ಈಗ ಸನ್ಯಾಸಕೊಟ್ಟುಬಿಟ್ಟರೇ ಮುಗಿಯಿತಲ್ಲ."

ನರೇಂದ್ರ ಮತ್ತು ಮಾಸ್ಟರ್ ಇಬ್ಬರೂ ನಗುತ್ತಿದಾರೆ.

ಪ್ರಸನ್ನ ರವೀಂದ್ರನಿಗೆ ಕಾಷಾಯವಸ್ತ್ರವನ್ನು ಕೊಟ್ಟು ಒದ್ದೆ ಬಟ್ಟೆಯನ್ನು ಬಿಚ್ಚಿಹಾಕುವಂತೆ ಹೇಳಿದ. ನರೇಂದ್ರ ಮಾಸ್ಟರಿಗೆ ಹೇಳಿದ: "ಈಗ ಅವನು ತ್ಯಾಗದ ವಸ್ತ್ರವನ್ನು ಧರಿಸುವುದರಲ್ಲಿದಾನೆ."

ಮಾಸ್ಟರ್ ನಗುತ್ತ: "ಯಾವುದರ ತ್ಯಾಗ?"

ನರೇಂದ್ರ: "ಕಾಮಕಾಂಚನ ತ್ಯಾಗ."

ರವೀಂದ್ರ ಕಾಷಾಯವಸ್ತ್ರವನ್ನು ಧರಿಸಿ ಧ್ಯಾನಕ್ಕೆಂದು ತಪಸ್ವಿ ಕಾಳಿಯ ಕೊಠಡಿಗೆ ಹೋದ.



# ಪರಿಶಿಷ್ಟ ೧

## ಕೇಶವಸೇನನೊಡನೆ ದಕ್ಷಿಣೇಶ್ವರದಲ್ಲಿ

೧ನೆ ಜನವರಿ ೧೮೮೧, ಶನಿವಾರ.

ಬ್ರಾಹ್ಮಸಮಾಜದ ವಾರ್ಷಿಕೋತ್ಸವ ಇನ್ನೇನು ಬರಲಿದೆ. ಇಂದು ಬ್ರಾಹ್ಮಸಮಾಜದ ಮುಖ್ಯಸ್ಥ ಕೇಶವಚಂದ್ರಸೇನ ಪರಮಹಂಸರ ದರ್ಶನ ಪಡೆಯಲು ಜಹಜಿನಲ್ಲಿ ದಕ್ಷಿಣೇಶ್ವರಕ್ಕೆ ಬರುವನೆಂಬುದಾಗಿ ಆತನ ಅನುಯಾಯಿಗಳು—ಪ್ರತಾಪ, ತ್ರೈಲೋಕ್ಯ, ಜಯಗೋಪಾಲ, ಇನ್ನೂ ಅನೇಕ ಬ್ರಾಹ್ಮಭಕ್ತರು—ಉತ್ಸುಕರಾಗಿ ದಕ್ಷಿಣದ ಕಡೆಗೇ ನೋಡುತ್ತ ಪರಮಹಂಸರ ಕೊಠಡಿಯಲ್ಲಿ ಕುಳಿತಿದಾರೆ. ರಾಮ, ಮನಮೋಹನ ಇವರೇ ಮೊದಲಾದ ಪರಮಹಂಸರ ಭಕ್ತರೂ ಅಲ್ಲಿ ಕುಳಿತಿದಾರೆ. ಕೊಠಡಿಯಲ್ಲಿ ಏನೇನೊ ಕಾಡುಹರಟೆಯ ಶಬ್ದ ಸುಮ್ಮನೆ ಮೊಳಗುತ್ತಿದೆ. ಅದು ಕೇಶವಸೇನ ಬರುವವರೆಗೂ ಮುಂದುವರಿಯಿತು.

ಈಗ ಕೇಶವಸೇನ ಕೈಯಲ್ಲಿ ಎರಡು ಬೇಲದ ಹಣ್ಣುಗಳನ್ನೂ ಮತ್ತು ಹೂವಿನ ಒಂದು ಗೊಂಚಲನ್ನೂ ಹಿಡಿದು ಪರಮಹಂಸರ ಕೊಠಡಿಯನ್ನು ಪ್ರವೇಶಿಸಿದ. ಅವನ್ನು ಶ್ರೀರಾಮಕೃಷ್ಣರ ಪಕ್ಕದಲ್ಲಿ ಇಟ್ಟು ಅವರ ಪಾದಗಳನ್ನು ಸ್ಪರ್ಶಿಸಿ ಅವರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಒಡನೆ ಪರಮಹಂಸರೂ ಆತನಿಗೆ ಪ್ರತಿ ಸಾಷ್ಟಾಂಗಪ್ರಣಾಮ ಮಾಡಿದರು. ಈಗ ಪರಮಹಂಸರು ಆನಂದದಿಂದ ನಗುತ್ತ ಕೇಶವಸೇನನೊಡನೆ ಮಾತುಕತೆಗಳಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಕೇಶವ, ನಿನಗೇನೊ ನನ್ನನ್ನು ಕಂಡರೆ ಅಕ್ಕರೆ: ಆದರೆ ನಿನ್ನ ಅನುಯಾಯಿಗಳಿಗೆ ನಾನು ಬೇಕಾಗಿಲ್ಲ. ನಿನ್ನ ಅನುಯಾಯಿಗಳಿಗೆ ಹೇಳುತ್ತಿದ್ದೆ: 'ಈಗ ಗೊಂದಲವನ್ನು ಎಬ್ಬಿಸೋಣ. ಬಳಿಕ ಗೋವಿಂದ ಬರುತ್ತಾನೆ.' (ಕೇಶವನ ಅನುಯಾಯಿಗಳಿಗೆ) ಇಗೋ ನೋಡಿ, ಇಲ್ಲಿ ನಿಮ್ಮ ಗೋವಿಂದ!

"ನಿನ್ನನ್ನು ರಂಗಮಂಟಪದಲ್ಲಿ ಎದುರುಗೊಳ್ಳಲು ನಾವು ಇದುವರೆಗೆ ಸುಮ್ಮನೆ ಚಡಪಡಿಸುತ್ತಿದ್ದೆವು. ಗೋವಿಂದನ ದರ್ಶನವನ್ನು ಸಹಜವಾಗಿ ಪಡೆಯಲಾಗೋದಿಲ್ಲ. ಕೃಷ್ಣಲೀಲೆಯ ಬಯಲುನಾಟಕದಲ್ಲಿ

ನಾರದ ಬೃಂದಾವನವನ್ನು ಪ್ರವೇಶಿಸಿ ವ್ಯಾಕುಲಹೃದಯದಿಂದ, 'ಪ್ರಾಣ ಹೇ ಗೋವಿಂದ ಮಮ ಜೀವನ' ಎಂದು ಪ್ರಾರ್ಥಿಸಿದೊಡನೆಯೇ ಶ್ರೀಕೃಷ್ಣ ಗೋಪಾಲರೊಡನೆ ರಂಗಮಂಟಪವನ್ನು ಪ್ರವೇಶಿಸುವುದನ್ನೂ, ಬಳಿಕ ಸಖಿಯರು ಮತ್ತು ಗೋಪಿಯರು ಅವರನ್ನು ಹಿಂಬಾಲಿಸುವುದನ್ನೂ ನೀನು ನೋಡಿರಲೇಬೇಕು. ವ್ಯಾಕುಲತೆ ಇಲ್ಲದಿದ್ದರೆ ಆತನ ದರ್ಶನ ದೊರೆಯದು.

"ಹೋಗಲಿ, ಕೇಶವ, ನಮಗೇನಾದರು ಸ್ವಲ್ಪ ಹೇಳು! ನಿನ್ನ ಮಾತನ್ನು ಕೇಳಲು ಎಲ್ಲರೂ ಕಾತರರಾಗಿ ಕುಳಿತಿದಾರೆ."

ಕೇಶವಸೇನ ವಿನಯದಿಂದ ನಗುತ್ತ: "ಇಲ್ಲಿ ನಾನು ಬಾಯನ್ನು ಬಿಡುವುದೆಂದರೆ 'ಗುಡ್ಡಕ್ಕೆ ಕಲ್ಲು ಹೊತ್ತ ಹಾಗೆ'."

ಶ್ರೀರಾಮಕೃಷ್ಣರು ನಗುತ್ತ: "ಆದರೆ ಗೊತ್ತೆ, ಭಕ್ತರ ಸ್ವಭಾವ ಗಾಂಜಾಖೋರರ ಸ್ವಭಾವದ ಹಾಗೆ ಎಂಬುದು? ಗಾಂಜಾ ಚಿಲುಮೆಯನ್ನು ನೀನು ಒಮ್ಮೆ ಸೇದಿದೆ ಎಂದರೆ ನಾನೂ ಒಮ್ಮೆ ಸೇದುತ್ತೇನೆ." (ಎಲ್ಲರೂ ನಗುತ್ತಿದಾರೆ.)

ಘಂಟೆ ಅಪರಾಹ್ನ ನಾಲ್ಕು. ಕಾಳೀದೇವಾಲಯದ ನಹಬತ್ ಖಾನೆಯಿಂದ ವಾದ್ಯ ಕೇಳಿಬರಲಾರಂಭಿಸಿತು.

ಶ್ರೀರಾಮಕೃಷ್ಣರು ಕೇಶವಸೇನ ಮೊದಲಾದವರಿಗೆ: "ನಾಗಸ್ವರ ಎಷ್ಟು ಇಂಪಾಗಿ ಕಿವಿಗೆ ಬೀಳುತ್ತಿದೆ ನೋಡಿದೆಯಾ? ಒಬ್ಬ ಕೇವಲ 'ಪ್ಞೋ' ಅಂತ ಊದುತ್ತಿದಾನೆ, ಇನ್ನೊಬ್ಬ ವಿವಿಧ ರಾಗರಾಗಿಣಿಗಳ ಮನೋಹರ ತರಂಗಗಳನ್ನು ಎಬ್ಬಿಸುತ್ತಿದಾನೆ. ನನ್ನ ಭಾವ ಈ ಎರಡನೆಯವನ ಹಾಗೆ. ಏಳು ರಂಧ್ರಗಳಿರೋ ವಾದ್ಯ ನನ್ನ ಕೈಯಲ್ಲಿರೋವಾಗ, ನಾನೇಕೆ ಕೇವಲ 'ಪ್ಞೋ' ಅಂತ ಊದಲಿ? ನಾನೇಕೆ ಕೇವಲ ಹೇಳಲಿ 'ಸೋಽಹಮ್', 'ಸೋಽಹಮ್'. ನಾನು ಏಳು ರಂಧ್ರಗಳ ಮೂಲಕವೂ ವಿವಿಧ ರಾಗರಾಗಿಣಿಗಳನ್ನು ಹೊರಗೆಡಹುತ್ತೇನೆ. ಕೇವಲ 'ಬ್ರಹ್ಮ! ಬ್ರಹ್ಮ!' ಅಂತ ಏಕೆ ಹೇಳುತ್ತಿರಲಿ? ನಾನು ಎಲ್ಲಾ ಭಾವಗಳಿಂದಲೂ— ಶಾಂತ, ದಾಸ್ಯ, ವಾತ್ಸಲ್ಯ, ಸಖ್ಯ, ಮಧುರ—ಆತನನ್ನು ಕರೆಯುತ್ತೇನೆ, ಆತನೊಡನೆ ಆನಂದಪಡುತ್ತೇನೆ, ಆತನೊಡನೆ ವಿಲಾಸಿಸುತ್ತೇನೆ."

ಕೇಶವಸೇನ ಆಶ್ಚರ್ಯಚಕಿತನಾಗಿ ಈ ಮಾತುಗಳನ್ನೆಲ್ಲಾ ಕೇಳುತ್ತಿದಾನೆ. ಆತ ಬ್ರಾಹ್ಮಭಕ್ತರಿಗೆ ಹೇಳುತ್ತಿದಾನೆ: "ಭಕ್ತಿ ಮತ್ತು ಜ್ಞಾನದ

ಸಂಬಂಧವಾಗಿ ಇಷ್ಟು ಅದ್ಭುತವಾದ, ಚನ್ನಾದ ವಿವರಣೆಯನ್ನು ನಾನು ಇದುವರೆಗೆ ಯಾರ ಬಾಯಿಂದಲೂ ಕೇಳಿರಲಿಲ್ಲ!''

ಕೇಶವಸೇನ ಶ್ರೀರಾಮಕೃಷ್ಣರಿಗೆ: ''ಇನ್ನೆಷ್ಟು ದಿನ ನೀವು ಈ ರೀತಿಯಾಗಿ ಗೋಪ್ಯವಾಗಿ ಇರಬಲ್ಲಿರಿ? ಕ್ರಮೇಣ ಈ ಸ್ಥಳವನ್ನು ಜನರ ಗುಂಪು ಗುಂಪೇ ಮುತ್ತಲಾರಂಭಿಸುತ್ತದೆ.''

ಶ್ರೀ ರಾಮಕೃಷ್ಣರು: ''ಏಕೆ ಹೀಗೆಲ್ಲ ಹೇಳುತ್ತಿದೀಯೆ? ನಾನು ಉಂಡು, ತಿಂದು, ಭಗವನ್ನಾಮ ಜಪ ಮಾಡುತ್ತ ಸುಮ್ಮನೆ ಇದ್ದು ಕೊಂಡಿದೇನೆ. ಜನರು ಈ ಸ್ಥಳವನ್ನು ಗುಂಪು ಗುಂಪಾಗಿ ಮುತ್ತುವುದು ಇದೆಲ್ಲ ನನಗೆ ಏನೂ ಗೊತ್ತಿಲ್ಲ. ಹನುಮಂತ ಒಮ್ಮೆ ಹೇಳಿದ: 'ನನಗೆ ವಾರವೇ ಆಗಲಿ, ತಿಥಿಯೇ ಆಗಲಿ, ನಕ್ಷತ್ರವೇ ಆಗಲಿ ಇವು ಯಾವೂ ಗೊತ್ತಿಲ್ಲ. ನಾನು ಕೇವಲ ರಾಮಚಿಂತನೆಯನ್ನು ಮಾತ್ರ ಮಾಡಿ ಕೊಂಡಿದೇನೆ.' ''

ಕೇಶವ: ''ಜನ ಬಂದು ನಿಮ್ಮನ್ನು ಮುತ್ತೋ ಹಾಗೆ ಮಾಡುತ್ತೇನೆ. ಆದರೆ ಅವರೆಲ್ಲರೂ ನಿಮ್ಮ ಈ ಸ್ಥಳಕ್ಕೆ ಬಂದೇ ನಿಮ್ಮನ್ನು ಮುತ್ತಬೇಕು.''

ಶ್ರೀ ರಾಮಕೃಷ್ಣರು: ''ನಾನು ಎಲ್ಲರ ಪಾದಗಳ ದೂಳಿನ ದೂಳು. ಯಾರು ಕೃಪೆಮಾಡಿ ಇಲ್ಲಿಗೆ ಬರುವರೋ ಅವರಿಗೆ ಸುಸ್ವಾಗತ.''

ಕೇಶವ: ''ನೀವು ಏನುಬೇಕಾದರೂ ಹೇಳಿಕೊಳ್ಳಿ ನಿಮ್ಮ ಅವತರಣ ವ್ಯರ್ಥವಾಗಿ ಹೋಗದು.''

ಇಷ್ಟರಲ್ಲಿ ಕೀರ್ತನೆಯ ವ್ಯವಸ್ಥೆ ನಡೆದು ಅನೇಕ ಭಕ್ತರು ಭಾಗ ತೆಗೆದುಕೊಂಡಿದಾರೆ. ಅವರ ಗುಂಪು ಪಂಚವಟಿಯಿಂದ ಹೊರಟು ಪರಮಹಂಸರ ಕೊಠಡಿಯ ಕಡೆ ಮುಂದುವರಿಯಲಾರಂಭಿಸಿತು. ಹೃದಯ ಶಿಂಗವನ್ನು ಊದುತ್ತಿದಾನೆ. ಗೋಪೀದಾಸ ಮೃದಂಗವನ್ನು ಬಾಜಿಸುತ್ತಿ ದಾನೆ. ಇನ್ನಿಬ್ಬರು ಭಕ್ತರು ತಾಳವನ್ನು ಹೊಡೆಯುತ್ತಿದಾರೆ.

ಪರಮಹಂಸರು ಹಾಡಲಾರಂಭಿಸಿದಾರೆ:

ಶ್ರೀ ಹರಿನಾಮವ ನುತಿಸೆ ನಿರಂತರ
ಹಿರಿಯಾನಂದದಿ ನೀನಿರುವೆ.
ಸಿರಿವೈಕುಂಠವ ನೀ ಪಡೆವೆ .
ಮೋಕ್ಷಫಲವ ನೀ ಸೇವಿಸುವೆ.

ಶ್ರೀ ಹರಿನಾಮದ ಮಹಿಮೆ ಅಂತುಟದೆ,
ದೇವದೇವರಾ ಶಿವನೇ ಹರಿಯನು
ಐದೂ ಮುಖದೊಳು ಭಜಿಸುವನು.

ಪರಮಹಂಸರು ಸಿಂಹಪರಾಕ್ರಮದಿಂದ ನರ್ತಿಸಲಾರಂಭಿಸಿದರು. ಈಗ ಸಮಾಧಿಸ್ಥರಾಗಿಬಿಟ್ಟಿದಾರೆ. ಪ್ರಕೃತಿಸ್ಥರಾದನಂತರ ಕೊಠಡಿಯಲ್ಲೇ ಕುಳಿತು ಕೇಶವಸೇನ ಮೊದಲಾದವರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಎಲ್ಲಾ ಮಾರ್ಗಗಳಿಂದಲೂ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ಯಾವ ರೀತಿಯಾಗಿ ನೀವೆಲ್ಲರೂ ಈ ಸ್ಥಳವನ್ನು ಬಂಡಿಯ ಮೂಲಕವೊ, ದೋಣಿಯ ಮೂಲಕವೊ, ಜಹಜಿನ ಮೂಲಕವೊ, ಕಾಲು ನಡಿಗೆಯಿಂದಲೊ ಮುಟ್ಟಿದಿರೊ ಹಾಗೆ. ನೀವು ನಿಮ್ಮ ನಿಮ್ಮ ಅನುಕೂಲತೆ ಮತ್ತು ರುಚಿಗನುಸಾರವಾಗಿ ಈ ಸ್ಥಳವನ್ನು ಬಂದು ತಲುಪಿದಿರಿ; ಆದರೆ ಮಾತ್ರ ಎಲ್ಲರ ಉದ್ದೇಶವೂ ಒಂದೇ. ಕೆಲವರು ಮುಂಚೆ, ಇನ್ನು ಕೆಲವರು ಆಮೇಲೆ ಇಲ್ಲಿಗೆ ಬಂದು ಸೇರಿದಿರಿ; ಆದರೆ ಎಲ್ಲರೂ ಈ ಸ್ಥಳಕ್ಕೆ ಬಂದು ಸೇರಿಬಿಟ್ಟಿರಿ.

"ನಮ್ಮ ಉಪಾಧಿ ಕಡಮೆ ಕಡಮೆಯಾದಷ್ಟೂ ಭಗವಂತನೂ ನಮ್ಮ ಹತ್ತಿರ ಹತ್ತಿರಕ್ಕೆ ಬರಲಾರಂಭಿಸುತ್ತಾನೆ. ದಿಣ್ಣೆ ಮೇಲೆ ಮಳೆ ನೀರು ನಿಲ್ಲದು; ತಗ್ಗು ಪ್ರದೇಶದಲ್ಲಿ ಮಾತ್ರ ಶೇಖರವಾಗುತ್ತದೆ. ಅದೇ ರೀತಿಯಾಗಿ ಆತನ ಕೃಪಾವಾರಿ ಅಹಂಕಾರವೆಂಬ ದಿಣ್ಣೆ ಮೇಲೆ ನಿಲ್ಲದು. ಭಗವಂತನೊಡನೆ ದೀನ ನಮ್ರಭಾವದಿಂದ ನಡೆದುಕೊಳ್ಳುವುದೇ ಶ್ರೇಯಸ್ಕರ.

"ನಾವು ಬಹಳ ಎಚ್ಚರಿಕೆಯಿಂದ ಇರಬೇಕು. ಉಡಿಗೆ-ತೊಡಿಗೆಗಳೂ ಅಹಂಕಾರವನ್ನು ಉತ್ಪತ್ತಿಮಾಡಿಬಿಡುತ್ತವೆ. ಕಾಮಾಲೆ ರೋಗದಿಂದ ನರಳೋ ಮನುಷ್ಯ ಕರಿ ಅಂಚಿನ ಪಂಚೆಯನ್ನು ಉಟ್ಟಿದ್ದೇ ಆದರೆ ಆತನೂ ನಿಧುಬಾಬುವಿನ ಲಘು ಗೀತೆಗಳನ್ನು ಹಾಡೋದನ್ನು ನೋಡಿದೇನೆ. ಕೆಲವರು ಕಾಲಿಗೆ ಬೂಟ್ಸು ಹಾಕಿಕೊಳ್ಳುವುದೇ ತಡ, ಒಡನೆಯೇ ಇಂಗ್ಲಿಷಿನಲ್ಲಿ ಗಳಹಲಾರಂಭಿಸುತ್ತಾರೆ. ಸಾಮಾನ್ಯ ಮನುಷ್ಯ ಕಾಷಾಯ ವಸ್ತ್ರಧಾರಿಯಾದ್ದೇ ಆದರೆ, ಆತನಿಗೆ ಅಹಂಕಾರ ಬಂದುಬಿಡುತ್ತದೆ. ಯಾರಾದರೂ ಆತನಿಗೆ ಒಂದು ಕಿಂಚಿತ್ ಉದಾಸೀನತೆಯನ್ನು ತೋರಿಸಿದರೇ ಸಾಕು, ಒಡನೆಯೆ ಕೋಪ ಅಭಿಮಾನ ಉಂಟಾಗಿಬಿಡುತ್ತವೆ.

"ವ್ಯಾಕುಲರಾಗದೆ ಭಗವಂತನ ದರ್ಶನ ಪಡೆಯಲಾಗೋದಿಲ್ಲ. ಜೀವನದ ಸುಖೋಪಭೋಗಗಳನ್ನು ಪೂರ್ಣವಾಗಿ ಅನುಭವಿಸದ ಹೊರತು ವ್ಯಾಕುಲತೆ ಉಂಟಾಗದು. ಯಾರು ಕಾಮಕಾಂಚನದ ಮಧ್ಯೆ ವಾಸಿಸುತ್ತಿದಾರೊ, ಯಾರ ಸುಖೋಪಭೋಗಗಳು ಇನ್ನೂ ಮುಗಿದಿಲ್ಲವೊ, ಅವರಿಗೆ ವ್ಯಾಕುಲತೆ ಉಂಟಾಗದು.

"ನಾನು ಕಾಮಾರಪುಕುರದಲ್ಲಿ ಇದ್ದಾಗ ಹೃದಯನ ನಾಲ್ಕೊ ಐದೊ ವರ್ಷದ ಒಂದು ಮಗು ತನ್ನ ಇಡೀ ದಿನವನ್ನೆಲ್ಲ ನನ್ನೊಡನೇ ಕಳೆಯುತ್ತಿತ್ತು. ಇಡೀ ದಿನವನ್ನೆಲ್ಲ ನನ್ನ ಹತ್ತಿರ ಆಟಪಾಟಗಳಲ್ಲಿ ತೊಡಗಿ ಪ್ರಪಂಚವನ್ನೇ ಮರೆತುಬಿಡುತ್ತಿತ್ತು. ಆದರೆ ಸಾಯಂಕಾಲವಾಗುವುದೇ ತಡ, ಒಡನೆಯೇ ತನ್ನ ತಾಯಿ ಹತ್ತಿರಕ್ಕೆ ಹೋಗಬೇಕೆಂದು ಚಂಡಿ ಹಿಡಿಯುತ್ತಿತ್ತು. ತಾಯನ್ನು ಮರೆಸಲು ಆ ಹುಡುಗನಿಗೆ ಹೇಳುತ್ತಿದ್ದೆ: 'ಈ ಪಾರಿವಾಳವನ್ನು ಹಿಡಿದುಕೊಡುತ್ತೇನೆ, ಇದು ಕೊಡುತ್ತೇನೆ, ಅದು ಕೊಡುತ್ತೇನೆ.' ಆ ಮಗು ಏನು ಮಾಡಿದರೂ ತಾಯನ್ನು ಮರೆಯದೆ ಅಳುತ್ತ ಅಳುತ್ತ ಹೇಳುತ್ತಿತ್ತು: 'ಉಹ್ಞೂ, ಏನೂ ಬೇಡ. ತಾಯಿ ಹತ್ತಿರಕ್ಕೆ ಹೋಗಬೇಕು.' ಆಗ ಆ ಮಗುವಿಗೆ ಆಟ-ಗೀಟ ಏನೂ ರುಚಿಸುತ್ತಿರಲಿಲ್ಲ. ಅದರ ಆ ಅವಸ್ಥೆಯನ್ನು ನೋಡಿ ನಾನು ಅಳುತ್ತಿದ್ದೆ.

"ನಾವು ಈ ರೀತಿಯಾಗಿ—ಮಗುವಿನ ಹಾಗೆ—ಭಗವಂತನ ಸಾಕ್ಷಾತ್ಕಾರಕ್ಕಾಗಿ ಸುಮ್ಮನೆ ಅಳಬೇಕು. ಇದಕ್ಕೆ ವ್ಯಾಕುಲತೆ ಅಂತ ಹೆಸರು. ಆಟ-ಗೀಟ-ಊಟ ಯಾವುದೂ ಆಗ ರುಚಿಸದು. ಸುಖೋಪಭೋಗಗಳನ್ನು ಪೂರ್ಣವಾಗಿ ಅನುಭವಿಸಿ ಮುಗಿಸಿದೊಡನೆಯೇ ಮನುಷ್ಯನಿಗೆ ಈ ವಿಧವಾದ ವ್ಯಾಕುಲತೆ ಉಂಟಾಗುತ್ತದೆ; ಆಗ ಆತ ಭಗವಂತನಿಗಾಗಿ ಸುಮ್ಮನೆ ಅಳಲಾರಂಭಿಸುತ್ತಾನೆ."

ಪರಮಹಂಸರ ಈ ಮಾತುಗಳನ್ನು ಎಲ್ಲರೂ ಆಶ್ಚರ್ಯಚಕಿತರಾಗಿ ಕೇಳುತ್ತ ನಿಶ್ಶಬ್ದರಾಗಿ ಕುಳಿತಿದಾರೆ. ಆಗಲೆ ಸಾಯಂಕಾಲವಾಗಿಬಿಟ್ಟಿದೆ. ಕೊಠಡಿಗೆ ದೀಪವನ್ನು ಹಚ್ಚಿ ಇಡಲಾಯಿತು. ಈಗ ಕೇಶವಸೇನ ಮೊದಲಾದವರ ಫಲಾಹಾರಕ್ಕೆ ವ್ಯವಸ್ಥೆ ನಡೆಯುತ್ತಿದೆ.

ಕೇಶವ ನಗುತ್ತ: "ಇಂದೂ ಕೇವಲ ಪುರಿ ಮಾತ್ರ?"

ಶ್ರೀರಾಮಕೃಷ್ಣರು ನಗುತ್ತ: "ಅದು ಹೃದೂಗೇ ಗೊತ್ತು."

ಎಲೆ ಹಾಕಲಾಯಿತು. ಮೊದಲು ಪುರಿ, ಬಳಿಕ ಪೂರಿಪಲ್ಯ ಬಡಿಸ

ಲಾಯಿತು. ಎಲ್ಲರೂ ಆನಂದದಿಂದ ಫಲಾಹಾರವನ್ನು ಸ್ವೀಕರಿಸಿದರು ಫಲಾಹಾರ ಮುಗಿಯುವುದರೊಳಗಾಗಿ ರಾತ್ರಿ ಹತ್ತಾಯಿತು.

ಪರಮಹಂಸರು ಕೇಶವಸೇನ ಮೊದಲಾದವರೊಡನೆ ಪಂಚವಟಿಗೆ ಹೋದರು.

ಶ್ರೀರಾಮಕೃಷ್ಣರು ಕೇಶವಸೇನ ಮೊದಲಾದವರಿಗೆ : "ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡ ಮೇಲೆ ಈ ಜಗತ್ತಿನಲ್ಲಿ ಆನಂದದಿಂದ ಇರಬಹುದು. ಮೊದಲು ಅಜ್ಜಿಯನ್ನು ಮುಟ್ಟಿಬಿಟ್ಟು, ಬಳಿಕ ಏಕೆ ಕಣ್ಣುಮುಚ್ಚಾಲೆ ಆಟದಲ್ಲಿ ತೊಡಗಬಾರದು ?

"ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡನಂತರ, ಭಕ್ತ ಕೆಸರು ಮೀನಿನ ಹಾಗೆ, ಈ ಜಗತ್ತಿನಲ್ಲಿ ನಿರ್ಲಿಪ್ತನಾಗಿರುತ್ತಾನೆ. ಕೆಸರು ಮೀನು ಕೆಸರಿನಲ್ಲಿ ವಾಸಿಸುತ್ತಿದ್ದರೂ ಕೆಸರಿನಿಂದ ಅದು ನಿರ್ಲಿಪ್ತವಾಗಿ ರುತ್ತದೆ."

ಘಂಟೆ ರಾತ್ರಿ ಹನ್ನೊಂದಾಯಿತು: ಎಲ್ಲರೂ ತಮ್ಮ ತಮ್ಮ ಮನೆ ಗಳಿಗೆ ಹಿಂದಿರುಗಲು ವ್ಯಸ್ತರಾಗಿದ್ದಾರೆ. ಪ್ರತಾಪ ಹೇಳಿದ :

"ಈ ರಾತ್ರಿಯನ್ನು ಇಲ್ಲೇ ಕಳೆದುಬಿಟ್ಟರೆ ಬಹಳ ಚೆನ್ನಾಗಿರುತ್ತದೆ."

ಶ್ರೀರಾಮಕೃಷ್ಣರು ಕೇಶವಸೇನನಿಗೆ: "ಹೌದು, ಈ ರಾತ್ರಿಯನ್ನು ಏಕೆ ಇಲ್ಲೇ ಕಳೆಯಬಾರದು ?"

ಕೇಶವ ನಗುತ್ತ : "ಕೆಲಸಕಾರ್ಯಗಳಿವೆ. ಹಿಂದಿರುಗಿ ಹೋಗ ಬೇಕು."

ಶ್ರೀರಾಮಕೃಷ್ಣರು : "ಏಕೆ? ಬಹುಶಃ ಮೀನಿನ ಕುಕ್ಕೆ ಹತ್ತಿರ ಇಲ್ಲದಿದ್ದರೆ ನಿದ್ದೆ ಹತ್ತೋದಿಲ್ಲ ಅಂತ ಕಾಣುತ್ತೆ. ಒಮ್ಮೆ ರಾತ್ರಿ ವೇಳೆಯಲ್ಲಿ ಒಬ್ಬ ಬೆಸ್ತರವಳು ಒಬ್ಬ ಹೂವಿನ ತೋಟದವಳ ಅತಿಥಿಯಾದಳು. ಆಕೆಗೆ ಮಲಗಲು ಹೂವು ತುಂಬಿದ್ದ ಕೊಠಡಿಯನ್ನು ಬಿಟ್ಟುಕೊಡ ಲಾಯಿತು. ಆದರೆ ಆಕೆಗೆ ಅಲ್ಲಿ ನಿದ್ದೆಯೇ ಹತ್ತದೆಹೋಯಿತು. (ಎಲ್ಲರೂ ನಗುತ್ತಿದ್ದಾರೆ.) ಆಕೆ ಸುಮ್ಮನೆ ಈ ಕಡೆಯಿಂದ ಆಕಡೆಗೆ ಆ ಕಡೆಯಿಂದ ಈ ಕಡೆಗೆ ಹೊರಳಾಡುತ್ತಲೇ ಇದ್ದಳು. ಅದನ್ನು ನೋಡಿ ಆ ತೋಟದವಳು ಆಕೆಯನ್ನು ಕೇಳಿದಳು : 'ಏನು ಸಮಾಚಾರ? ಏಕೆ ಸುಮ್ಮನೆ ಹೊರಳಾಡುತ್ತಾ ಇದೀಯೆ ?' ಬೆಸ್ತರವಳು ಹೇಳಿದಳು: 'ಏಕೊ ನಿದ್ದೆ ಹತ್ತುತ್ತಿಲ್ಲ. ಏನಿಲ್ಲಿ ಈ ಹೂವುಗಳ ವಾಸನೆ! ಇದಕ್ಕಾಗೇ ಇರ

ಬೇಕು. ದಯವಿಟ್ಟು ನೀನು ಆ ಮೀನಿನ ಕುಕ್ಕೆಯನ್ನು ನನ್ನ ಹತ್ತಿರಕ್ಕೆ ತಂದುಕೊಡಬಲ್ಲೆಯಾ?' ಬಳಿಕ ಆ ಬೆಸ್ತರವಳು ತನ್ನ ಆ ಕುಕ್ಕೆಗೆ ನೀರು ಚಿಮುಕಿಸಿ ಅದನ್ನು ಮೂಗಿನ ಹತ್ತಿರ ಇಟ್ಟುಕೊಂಡು ಅದರ ಗಂಧವನ್ನು ಸವಿಯುತ್ತ ಸವಿಯುತ್ತ ಗಾಢ ನಿದ್ರೆಯನ್ನು ಮಾಡಿದಳು." (ಎಲ್ಲರೂ ಗಹಗಹಿಸಿ ನಗುತ್ತಿದಾರೆ.)

ಬೀಳ್ಕೊಳ್ಳುವಾಗ ಕೇಶವಸೇನ ಪರಮಹಂಸರ ಪಾದಗಳನ್ನು ಸ್ಪರ್ಶಿಸಿ ಅವರಿಗೆ ಸಾಷ್ಟಾಂಗಪ್ರಣಾಮ ಮಾಡಿ, ತಾನು ಅವರಿಗೆ ಅರ್ಪಿಸಿದ್ದ ಹೂವು ಗೊಂಚಲಿಂದ ಕೆಲವು ಹೂವುಗಳನ್ನು ತೆಗೆದುಕೊಂಡ. ಪ್ರಣಾಮ ಮಾಡಿದಾಗ ಬ್ರಾಹ್ಮಭಕ್ತರೊಡನೆ ಜಯಘೋಷಮಾಡಿದ: "ಜೈ ನವವಿಧಾನ್."

೧೮೮೧ ನೆ ಇಸವಿಯ ಆಷಾಢಮಾಸದ ಒಂದುದಿನ ಪರಮಹಂಸರು ತಮ್ಮ ಭಕ್ತರೊಡನೆ ಸುರೇಂದ್ರನ ಮನೆಗೆ ಬಂದಿದಾರೆ. ಇನ್ನೇನು ಸಾಯಂಕಾಲವಾಗುವುದರಲ್ಲಿದೆ.

ಶ್ರೀರಾಮಕೃಷ್ಣರನ್ನು ಸುರೇಂದ್ರನ ಮನೆಯ ಎರಡನೆ ಅಂತಸ್ತಿನಲ್ಲಿದ್ದ ಬೈಠಕ್‌ಖಾನೆಗೆ ಕರೆದುಕೊಂಡುಹೋಗಲಾಯಿತು. ಸುರೇಂದ್ರನ ನೆರೆಹೊರೆಯವರು ಆಗಲೇ ಪರಮಹಂಸರಿಗಾಗಿ ಅಲ್ಲಿ ಕಾದು ಕುಳಿತಿದ್ದರು. ಕೇಶವನಿಗೂ ಆಹ್ವಾನ ಕಳುಹಿಸಲಾಗಿತ್ತು, ಆದರೆ ಆತನಿಗೆ ಬರಲಾಗಲಿಲ್ಲ. ತ್ರೈಲೋಕ್ಯ ಮತ್ತು ಇನ್ನೂ ಕೆಲವು ಬ್ರಾಹ್ಮಭಕ್ತರು ಅಲ್ಲಿ ಕುಳಿತಿದಾರೆ. ನೆಲದ ಮೇಲೆ ಮಂದಲಿಗೆ ಹಾಸಿ ಅದರ ಮೇಲೆ ಬಿಳಿ ಬಟ್ಟೆಯನ್ನು ಹಾಸಿದೆ. ಅದರ ಮೇಲೆ ಒಂದು ಕಡೆ ಸುಂದರವಾದ ರತ್ನಗಂಬಳಿಯನ್ನು ಹಾಸಿ ಒರಗುದಿಂಬನ್ನು ಇಟ್ಟಿದೆ. ಆ ರತ್ನಗಂಬಳಿಯ ಮೇಲೆ ಮಂಡಿಸುವಂತೆ ಸುರೇಂದ್ರ ಪರಮಹಂಸರನ್ನು ಬೇಡಿಕೊಂಡ; ಆದರೆ ಅವರು ಹಾಗೆ ಮಾಡದೆ ಸುರೇಂದ್ರನ ನೆರೆಯವನಾದ ಮಹೇಂದ್ರಗೋಸ್ವಾಮಿಯ ಹತ್ತಿರ ಮಂದಲಿಗೆ ಮೇಲೇ ಕುಳಿತುಕೊಂಡರು.

ಮಹೇಂದ್ರಗೋಸ್ವಾಮಿ ಭಕ್ತರಿಗೆ: "ನಾನು ಕೆಲವು ತಿಂಗಳ ಬಹುಭಾಗವನ್ನು ಇವರೊಡನೇ (ಪರಮಹಂಸರೊಡನೆ) ಕಳೆದೆ. ನಾನು ಹಿಂದೆ ಎಂದೂ ಇವರಂಥ ಮಹಾ ಪುರುಷರನ್ನು ನೋಡಿರಲಿಲ್ಲ. ಇವರ ಭಾವಗಳು ಸಾಮಾನ್ಯವಾದುವುಗಳಲ್ಲ."

ಶ್ರೀರಾಮಕೃಷ್ಣರು ಮಹೇಂದ್ರಗೋಸ್ವಾಮಿಗೆ: "ಏಕೆ ಹೀಗೆಲ್ಲಾ

ಹೇಳುತ್ತಿದೀಯೆ? ನಾನು ಹೀನರಲ್ಲೆಲ್ಲಾ ಹೀನ, ದೀನರಲ್ಲೆಲ್ಲಾ ದೀನ. ನಾನು ಭಗವಂತನ ದಾಸಾನುದಾಸ. ಕೇವಲ ಕೃಷ್ಣನೊಬ್ಬನೇ ಮಹಾ ಪುರುಷ.

"ಯಾರು ಅಖಂಡಸಚ್ಚಿದಾನಂದನೊ, ಆತನೇ ಶ್ರೀಕೃಷ್ಣ. ದೂರ ದಿಂದ ನೋಡಿದರೆ ಸಮುದ್ರ ನೀಲಿ ವರ್ಣದ್ದಾಗಿ ಕಾಣುತ್ತದೆ. ಆದರೆ ಹತ್ತಿರ ಹೋಗಿ ನೋಡಿದರೆ ಅದಕ್ಕೆ ಯಾವ ವರ್ಣವೂ ಇಲ್ಲ. ಯಾರು ಸಗುಣನೊ, ಆತನೇ ನಿರ್ಗುಣ. ನಿತ್ಯ ಯಾರದೊ ಆತನದೇ ಲೀಲೆ.

"ಶ್ರೀಕೃಷ್ಣ ತ್ರಿಭಂಗಿಯಾಗಿರುವುದೇಕೆ? ಆತ ರಾಧೆಯಲ್ಲಿಟ್ಟಿರೋ ಪ್ರೇಮದ ದೆಸೆಯಿಂದ.

"ಯಾರು ಬ್ರಹ್ಮನೊ, ಆತನೇ ಕಾಳಿ, ಆತನೇ ಆದ್ಯಾಶಕ್ತಿ, ಆತನೇ ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುತ್ತಿದಾನೆ. ಯಾರು ಕೃಷ್ಣನೊ, ಆತನೇ ಕಾಳಿ. ಮೂಲ ಒಂದೇ–ಇದೆಲ್ಲಾ ಆತನ ಕ್ರೀಡೆ, ಲೀಲೆ.

"ಆತನ ದರ್ಶನ ಪಡೆಯಲು ಸಾಧ್ಯ. ಶುದ್ಧ ಮನಸ್ಸು, ಶುದ್ಧ ಬುದ್ಧಿಯಿಂದ ಆತನ ದರ್ಶನವನ್ನು ಪಡೆಯಬಹುದು. ಕಾಮಕಾಂಚನಾ ಸಕ್ತಿ ಇತ್ತು ಎಂದರೆ ಮನಸ್ಸು ಮಲಿನವಾಗುತ್ತದೆ.

"ಎಲ್ಲವೂ ಮನಸ್ಸನ್ನು ಅವಲಂಬಿಸಿದೆ. ಅದು ಅಗಸನ ಮನೆ ಯಿಂದ ಆಗತಾನೆ ಬಂದ ಬಿಳಿ ಬಟ್ಟೆಯ ಹಾಗೆ. ಯಾವ ಬಣ್ಣದಲ್ಲಿ ಅದನ್ನು ಅದ್ದುವೆಯೋ ಅದಕ್ಕೆ ಆ ಬಣ್ಣ ಬಂದುಬಿಡುತ್ತದೆ. ಜ್ಞಾನವೂ ಮನಸ್ಸಿಗೆ ಸೇರಿದ್ದೆ, ಅಜ್ಞಾನವೂ ಮನಸ್ಸಿಗೆ ಸೇರಿದ್ದೆ. ಯಾರೋ ಒಬ್ಬ ಕೆಟ್ಟುಹೋದ ಅಂದರೆ, ಆತನ ಮನಸ್ಸು ಕೆಟ್ಟ ಬಣ್ಣವನ್ನು ತೆಗೆದು ಕೊಂಡಿದೆ ಎಂದು ಅರ್ಥ."

ಸುರೇಂದ್ರ ಕೈಯಲ್ಲಿ ಒಂದು ಹೂವಿನ ಮಾಲೆಯನ್ನು ತೆಗೆದುಕೊಂಡು ಅದನ್ನು ಪರಮಹಂಸರಿಗೆ ಹಾಕಲು ಬಂದ. ಆದರೆ ಪರಮಹಂಸರು ಅದನ್ನು ತಮ್ಮ ಕೈಗೆ ತೆಗೆದುಕೊಂಡು ತಮ್ಮ ಪಕ್ಕದಲ್ಲಿ ಒಂದು ಕಡೆ ಸ್ವಲ್ಪ ದೂರದಲ್ಲೇ ಇಟ್ಟುಬಿಟ್ಟರು. ಸುರೇಂದ್ರ ಅಶ್ರುಪೂರ್ಣಲೋಚನ ನಾಗಿ ಪಶ್ಚಿಮ ವರಾಂಡಕ್ಕೆ ಹೋಗಿ ಕುಳಿತುಕೊಂಡ. ಆತನ ಹತ್ತಿರ ರಾಮ, ಮನಮೋಹನ ಮೊದಲಾದವರು ಕುಳಿತಿದಾರೆ. ಸುರೇಂದ್ರ ಅಭಿ ಮಾನದಿಂದ ಹೇಳುತ್ತಿದಾನೆ: "ನನಗೆ ಕೋಪಬಂದುಬಿಟ್ಟಿದೆ. ಆದರ

ಬೆಲೆ ಏನು ಎಂಬುದು ಈ ಬಡ ಬ್ರಾಹ್ಮಣನಿಗೆ ಹೇಗೆ ಗೊತ್ತಾಗಬೇಕು? ಬಹಳ ದುಡ್ಡು ಖರ್ಚುಮಾಡಿ ಆ ಮಾಲೆಯನ್ನು ತಯಾರಿಸಿದೇನೆ; ಅವರು ಅದನ್ನು ಸ್ವೀಕರಿಸದೆ ಹೋದರಲ್ಲ. ಕೋಪವನ್ನು ತಾಳಲಾರದೆ ಬಾಕಿ ಮಾಲೆಗಳನ್ನ ಭಕ್ತರ ಕೊರಳಿಗೆ ಹಾಕಿಬಿಡಿ ಎಂದು ಹೇಳಿಬಿಟ್ಟೆ. ನನ್ನ ಅಪರಾಧವೇನೆಂಬುದು ಈಗ ನನಗೆ ಅರ್ಥವಾಗುತ್ತಿದೆ. ದುಡ್ಡಿನಿಂದ ಭಗವಂತನನ್ನು ಕೊಂಡುಕೊಳ್ಳಲಾಗೋದಿಲ್ಲ; ಅಹಂಕಾರದಿಂದ ಆತನನ್ನು ಜೇಬಿಗೆ ಹಾಕಿಕೊಳ್ಳಲಾಗೋದಿಲ್ಲ. ನಾನೊಬ್ಬ ಅಹಂಕಾರಿ. ಆದ್ದರಿಂದ ನನ್ನ ಅರ್ಪಣೆಯನ್ನು ಹೇಗೆ ತಾನೆ ಅವರು ಸ್ವೀಕರಿಸಿಯಾರು? ಇನ್ನು ಮೇಲೆ ಬದುಕಿರಲು ನನಗೆ ಇಚ್ಛೆ ಆಗುತ್ತಿಲ್ಲ.'' ಕಣ್ಣೀರು ಆತನ ಕೆನ್ನೆಗಳ ಮೇಲಿಂದ ತೊಟ್ಟಿಕ್ಕಿ ಎದೆಯ ಮೇಲೆ ಹರಿಯಲಾರಂಭಿಸಿತು.

ಆದರೆ ಆ ಕಡೆ, ಕೊಠಡಿಯೊಳಗೆ ತ್ರೈಲೋಕ್ಯ ಹಾಡುತ್ತಿದಾನೆ. ಪರಮಹಂಸರು ಪ್ರೇಮೋನ್ಮತ್ತರಾಗಿ ನರ್ತಿಸುತ್ತಿದಾರೆ. ಯಾವ ಮಾಲೆಯನ್ನು ಒಂದು ಕಡೆಗೆ ತಳ್ಳಿಬಿಟ್ಟಿದ್ದರೊ ಅದನ್ನು ಈಗ ಕೊರಳಿಗೆ ಹಾಕಿಕೊಳ್ಳುತ್ತಿದ್ದಾರೆ. ಒಂದು ಕೈಯಿಂದ ಆ ಮಾಲೆಯನ್ನು ಹಿಡಿದುಕೊಂಡು ಇನ್ನೊಂದು ಕೈಯಿಂದ ಅದನ್ನು ಉಯ್ಯಾಲಾಡಿಸುತ್ತ ಉಯ್ಯಾಲಾಡಿಸುತ್ತ ಹಾಡುತ್ತಲೂ ಮತ್ತು ನರ್ತಿಸುತ್ತಲೂ ಇದಾರೆ. ಅದನ್ನು ನೋಡಿ ಸುರೇದ್ರನ ಆನಂದಕ್ಕೆ ಪಾರವೇ ಇಲ್ಲದಂತಾಗಿಬಿಟ್ಟಿತು. ತನಗೆ ತಾನೇ ಹೇಳಿಕೊಳ್ಳುತ್ತಿದಾನೆ: ''ಭಗವಂತ ಮನುಷ್ಯನ ಅಹಂಕಾರವನ್ನ ಧ್ವಂಸವನ್ನೇನೊ ಮಾಡಿಯೇ ಮಾಡುತ್ತಾನೆ, ಆದರೆ ಆತ ನಿಸ್ಸಂದೇಹವಾಗಿ ದೀನ ಹೀನರ ಪರಮ ನಿಧಿ.''

ಪರಮಹಂಸರು ಈಗ ಹಾಡುತ್ತಿದಾರೆ:

ಹರಿನಾಮವನು ನುತಿಸಿ, ಆನಂದ ಬಾಷ್ಪವನು
ಕರೆವಣ್ಣತಮ್ಮದಿರು; ಇವರು ನೋಡು! . . .

ಪರಮಹಂಸರು ಈ ಹಾಡಿನೊಡನೆ ನರ್ತಿಸುತ್ತಿದಾರೆ. ಭಕ್ತರಲ್ಲಿ ಅನೇಕರೂ ಅವರೊಡನೆ ನರ್ತಿಸುತ್ತಿದಾರೆ.

ಈಗ ಎಲ್ಲರೂ ಕುಳಿತುಕೊಂಡು ಪರಮಹಂಸರೊಡನೆ ಮಾತುಕತೆ ಆಡುತ್ತಿದಾರೆ. ಪರಮಹಂಸರು ಸುರೇಂದ್ರನಿಗೆ ಹೇಳುತ್ತಿದಾರೆ: ''ನನಗೆ ಏನಾದರೂ ಉಪಾಹಾರ–ಗಿಪಾಹಾರ ಮಾಡಿಸೋದಿಲ್ಲವೆ?'' ಬಳಿಕ ಅವರು ಮನೆಯ ಒಳಕ್ಕೆ ಹೋದರು. ಹೆಂಗಸರೆಲ್ಲರೂ ಶ್ರದ್ಧಾಭಕ್ತಿಯಿಂದ

ಅವರಿಗೆ ಪ್ರಣಾಮಮಾಡಲಾರಂಭಿಸಿದರು. ಉಪಾಹಾರವನ್ನು ತೆಗೆದು ಕೊಂಡನಂತರ ಪರಮಹಂಸರು ದಕ್ಷಿಣೇಶ್ವರಕ್ಕೆ ಹಿಂದಿರುಗಿ ಹೊರಟರು.

೩ನೆ ಡಿಸೆಂಬರ್ ೧೮೮೧, ಶನಿವಾರ.

ಘಂಟೆ ಅಪರಾಹ್ನ ನಾಲ್ಕು. ಪರಮಹಂಸರು ಕಲ್ಕತ್ತದಲ್ಲಿ ಸಿಮ್ಲಾ ಬೀದಿಯಲ್ಲಿರೋ ಮನಮೋಹನನ ಮನೆಗೆ ಭೇಟಿ ಇತ್ತಿದಾರೆ. ಅದು ಎರಡು ಅಂತಸ್ತಿನ ಒಂದು ಚಿಕ್ಕ ತೊಟ್ಟಿ ಮನೆ. ಪರಮಹಂಸರು ನೆಲ ಅಂತಸ್ತಿನ ಬೈಠಕ್‌ಖಾನೆಯಲ್ಲಿ ಕುಳಿತು ಈಶಾನ ಮುಖ್ಯೋಪಾಧ್ಯಾಯ ನೊಡನೆ ಮಾತುಕತೆ ಆಡುತ್ತಿದಾರೆ.

ಈಶಾನ: "ಮಹಾಶಯರೆ, ನೀವು ಸಂಸಾರವನ್ನು ಏಕೆ ತ್ಯಜಿಸಿ ಬಿಟ್ಟಿರಿ? ಶಾಸ್ತ್ರ, ಗೃಹಸ್ಥಾಶ್ರಮ ಶ್ರೇಷ್ಠವಾದ್ದು ಎಂಬುದಾಗಿ ಹೇಳು ತ್ತಿದೆಯಲ್ಲ."

ಶ್ರೀರಾಮಕೃಷ್ಣರು: "ಯಾವುದು ಒಳ್ಳೆಯದೊ, ಯಾವುದು ಕೆಟ್ಟದ್ದೊ ಅದೆಲ್ಲಾ ನನಗೆ ಗೊತ್ತಿಲ್ಲ. ಭಗವಂತ ಮಾಡಿಸಿದ ಹಾಗೆ ಮಾಡುತ್ತಿದೇನೆ, ಪ್ರೇರೇಪಿಸಿದ ಹಾಗೆ ಮಾತಾಡುತ್ತಿದೇನೆ."

ಈಶಾನ: "ಎಲ್ಲರೂ ಸಂಸಾರವನ್ನು ತ್ಯಜಿಸಿಬಿಟ್ಟದ್ದೇ ಆದರೆ, ಅದು ಆತನ ಇಚ್ಛೆಗೆ ವಿರುದ್ಧವಾಗಿ ನಡೆದಂತಾಗುತ್ತದೆ."

ಶ್ರೀರಾಮಕೃಷ್ಣರು: "ಎಲ್ಲರೂ ಏಕೆ ತ್ಯಾಗ ಮಾಡಬೇಕು? ಹಾಗಾದರೆ ಆತನ ಇಚ್ಛೆ, ಎಲ್ಲರೂ ನಾಯಿ ನರಿಗಳ ಹಾಗೆ ಕಾಮಕಾಂಚನ ದಲ್ಲೇ ಕ್ರೀಡಾಲೋಲರಾಗಿರಬೇಕು ಅಂತಲೇನು? ಇದನ್ನು ಬಿಟ್ಟರೆ ಬೇರೆ ಇನ್ನಾವ ಇಚ್ಛೆಯೂ ಆತನಿಗೆ ಇಲ್ಲ ಅಂತಲೇನು? ಯಾವುದು ಆತನ ಇಚ್ಛೆ, ಯಾವುದು ಆತನ ಅನಿಚ್ಛೆ ಇದನ್ನೆಲ್ಲ ನೀನು ಅರಿತುಕೊಂಡುಬಿಟ್ಟಿ ದೀಯೇನು?

"ನೀನು ಹೇಳುತ್ತಾ ಇದೀಯೆ, ಎಲ್ಲರೂ ಸಂಸಾರಿಗಳಾಗಿರ ಬೇಕೆಂಬುದು ಆತನ ಇಚ್ಛೆ ಎಂಬುದಾಗಿ. ಹೆಂಡತಿ ಮಕ್ಕಳು ಸತ್ತಾಗ ಅದೂ ಭಗವಂತನ ಇಚ್ಛೆಗನುಸಾರ ಅಂತ ಏಕೆ ನೀನು ಭಾವಿಸೋದಿಲ್ಲ? ದಟ್ಟದಾರಿದ್ರ್ಯದಿಂದ ತಿನ್ನೋಕೇನೂ ದೊರೆಯದೇ ಇರುವಾಗ ಅದೂ ಭಗವಂತನ ಇಚ್ಛೆಗನುಸಾರ ಅಂತ ಏಕೆ ನೀನು ಭಾವಿಸೋದಿಲ್ಲ?

"ಆತನ ಇಚ್ಛೆ ಏನು ಎಂಬುದನ್ನು ಅರಿತುಕೊಳ್ಳಲು ಮಾಯೆ ನಮ್ಮನ್ನು ಬಿಟ್ಟುಕೊಡಲೊಲ್ಲದು. ಆತನ ಮಾಯೆಯ ದೆಸೆಯಿಂದ ನಿತ್ಯ

ಅನಿತ್ಯವಾಗಿಯೂ, ಅನಿತ್ಯ ನಿತ್ಯವಾಗಿಯೂ ಬುದ್ಧಿಗೆ ಬೋಧೆಯಾಗುತ್ತದೆ. ಈ ಜಗತ್ತು ಅನಿತ್ಯವಾದ್ದು. ಈಗಿದೆ, ಈಗಿಲ್ಲ. ಆದರೆ ಆತನ ಮಾಯೆಯ ದೆಸೆಯಿಂದ ಬೋಧೆಯಾಗುತ್ತದೆ ಈ ಜಗತ್ತು ಸತ್ಯವಾದ್ದು ಎಂಬುದಾಗಿ. ನಾನು ಕರ್ತ ಎಂಬ ಬೋಧೆಯಾಗುತ್ತಿರೋದೂ ಆತನ ಮಾಯೆಯ ದೆಸೆಯಿಂದಲೇ. ಇದೂ ಅಲ್ಲದೆ ಈ ಮಾಯೆಯ ದೆಸೆಯಿಂದಲೇ ಹೆಂಡತಿ ಮಕ್ಕಳು, ಸಹೋದರಸಹೋದರಿಯರು, ತಂದೆತಾಯಿಗಳು ಮನೆಮಠಗಳು ತನ್ನದೆಂದು ಬೋಧೆಯಾಗುತ್ತದೆ.

"ಮಾಯೆಯಲ್ಲಿ ಎರಡು ವಿಧ: ವಿದ್ಯಾ ಮಾಯೆ, ಅವಿದ್ಯಾ ಮಾಯೆ. ಅವಿದ್ಯಾ ಮಾಯೆ ಭಗವಂತನನ್ನು ಮರೆಯುವಂತೆ ಮಾಡಿ ಸಂಸಾರದಲ್ಲೇ ಮುಳುಗಿಸಿಟ್ಟುಬಿಡುತ್ತದೆ. ಆದರೆ ವಿದ್ಯಾಮಾಯೆ — ಜ್ಞಾನ, ಭಕ್ತಿ, ಸಾಧುಸಂಗ — ಭಗವಂತನ ಕಡೆಗೆ ಕರೆದೊಯ್ಯುತ್ತದೆ.

"ಯಾರು ಭಗವಂತನ ಕೃಪೆಯಿಂದ ಮಾಯಾತೀತನಾಗುತ್ತಾನೊ ಆತನ ದೃಷ್ಟಿಗೆ ವಿದ್ಯಾಮಾಯೆ, ಅವಿದ್ಯಾಮಾಯೆ ಎರಡೂ ಒಂದೇ ಸರಿಸಮನಾಗಿ ಕಾಣಿಸಿಕೊಳ್ಳುತ್ತವೆ. ಸಂಸಾರಾಶ್ರಮ ನಿಸ್ಸಂದೇಹವಾಗಿ ಭೋಗಾಶ್ರಮ. ಹಾಗೇ ನೋಡಿದರೆ ಕಾಮಕಾಂಚನದಲ್ಲಿ ಇರೋ ಸುಖ ತಾನೆ ಏನು ? ಸಂದೇಶ (ಸಿಹಿ ತಿಂಡಿ) ಗಂಟಲಿನಿಂದ ಕೆಳಕ್ಕೆ ಇಳಿಯಿತು ಎಂದರೆ, ಅದು ಸಿಹಿಯೋ ಹುಳಿಯೋ ಎಂಬುದೇ ಜ್ಞಾಪಕದಲ್ಲಿರದು.

"ಆದರೆ ಎಲ್ಲರೂ ತ್ಯಾಗಮಾಡಬೇಕಾದ ಆವಶ್ಯಕತೆಯೇನಿದೆ? ಸಕಾಲ ಬಾರದೆ ಇದ್ದರೆ ತ್ಯಾಗಬುದ್ಧಿ ಬರುವುದೆ? ಭೋಗಪಡುವುದೆಲ್ಲ ಮುಗಿಯಿತು ಎಂದರೆ, ಆಗ ತ್ಯಾಗಬುದ್ಧಿ ಕಾಲಿಡುತ್ತದೆ. ಬಲಾತ್ಕಾರದಿಂದ ತ್ಯಾಗಿಯಾಗಲಾಗುವುದೆ? ಒಂದು ವಿಧವಾದ ವೈರಾಗ್ಯವಿದೆ. ಅದಕ್ಕೆ 'ಮರ್ಕಟ ವೈರಾಗ್ಯ' ಅಂತ ಹೆಸರು. ಹೀನ ಬುದ್ಧಿಯ ಜನರಿಗೆ ಈ ವಿಧದ ವೈರಾಗ್ಯ ಉಂಟಾಗುತ್ತದೆ. ಉದಾಹರಣೆಗೆ ತಂದೆ ಸತ್ತ ಹುಡುಗನನ್ನು ತೆಗೆದುಕೊಳ್ಳಿ. ಆತನ ತಾಯಿ ನೂಲು ನೂತು ಜೀವನ ಮಾಡಿಕೊಂಡಿದ್ದಾಳೆ. ಆ ಹುಡುಗನಿಗೆ ಇದ್ದ ಯಾವುದೋ ಒಂದು ಸಾಮಾನ್ಯ ಕೆಲಸವೂ ತಪ್ಪಿಹೋಗಿ ಇದ್ದಕ್ಕಿದ್ದ ಹಾಗೆ ವೈರಾಗ್ಯ ಬಂದುಬಿಡುತ್ತದೆ. ಆತ ಕಾಷಾಯವಸ್ತ್ರ ಧರಿಸಿ ಕಾಶಿಗೆ ಹೋಗುತ್ತಾನೆ. ಕೆಲವು ದಿವಸಗಳಾದನಂತರ ಆತ ಮನೆಗೆ ಕಾಗದ ಬರೆಯುತ್ತಾನೆ: 'ನನಗೆ ಒಂದು ಕೆಲಸ ಸಿಕ್ಕಿದೆ. ತಿಂಗಳಿಗೆ ಹತ್ತು ರೂಪಾಯಿ ಸಂಬಳ.'

ಇಷ್ಟರೊಳಗಾಗೇ ಆತ ಬೆರಳಿಗೆ ಚಿನ್ನದ ಉಂಗುರವನ್ನು ಮತ್ತು ಒಳ್ಳೆ ಪೋಷಾಕನ್ನು ಕೊಂಡುಕೊಳ್ಳಲು ಪ್ರಯತ್ನಪಟ್ಟುಬಿಡುತ್ತಾನೆ. ಭೋಗೇಚ್ಛೆ ಎಲ್ಲಿ ಬಿಟ್ಟುಹೋದೀತು ಆತನನ್ನು ?"

ಕೆಲವು ಮಂದಿ ಬ್ರಾಹ್ಮಭಕ್ತರೊಡಗೂಡಿ ಕೇಶವಸೇನ ಕೊಠಡಿಯನ್ನು ಪ್ರವೇಶಿಸಿದ. ಬಳಿಕ ಪರಮಹಂಸರಿಗೆ ಶ್ರದ್ಧಾಪೂರ್ವಕವಾಗಿ ಪ್ರಣಾಮ ಮಾಡಿ ಅವರ ಎಡಗಡೆ ಕುಳಿತುಕೊಂಡ. ಬಲಗಡೆಯಲ್ಲಿ ರಾಮ ಕುಳಿತಿದಾನೆ. ಸ್ವಲ್ಪ ಹೊತ್ತಿನಿಂದ ಭಾಗವತಪ್ರವಚನ ನಡೆಯುತ್ತಿದೆ.

ಭಾಗವತಪ್ರವಚನ ಮುಗಿದನಂತರ ಪರಮಹಂಸರು ಮಾತುಕತೆ ಗಳಾಡಲು ಆರಂಭಿಸಿದಾರೆ.

ಶ್ರೀ ರಾಮಕೃಷ್ಣರು ಭಕ್ತರಿಗೆ: "ಈ ಸಂಸಾರದಲ್ಲಿ ಕೆಲಸ ಮಾಡೋದು ಎಂದರೆ ಬಹಳ ಕಷ್ಟ. ಗಿರ್ರೆಂದು ಸುಮ್ಮನೆ ಸುತ್ತಿದರೆ ತಲೆಸುತ್ತು ಬಂದು ಮೂರ್ಛೆ ಬರುವಂತಾಗುತ್ತದೆ. ಆದರೆ ಕಂಬ ಹಿಡಿದು ಸುತ್ತಿದರೆ ಹಾಗೇನು ಭಯಪಡಬೇಕಾದ್ದೇನಿಲ್ಲ. ಕೆಲಸ ಕಾರ್ಯಗಳನ್ನು ಮಾಡಿ, ಆದರೆ ಭಗವಂತನನ್ನು ಮಾತ್ರ ಮರೆಯಬೇಡಿ.

"ನೀವು ಕೇಳಬಹುದು: 'ಈ ಸಂಸಾರ ಅಷ್ಟು ಕಷ್ಟವಾದ್ದೇ ಆದರೆ, ಅದರಿಂದ ಪಾರಾಗೋ ಬಗೆ ಹೇಗೆ?' ಅಭ್ಯಾಸಯೋಗವೇ ಅದಕ್ಕೆ ಉಪಾಯ. ಕಾಮಾರಪುಕುರದಲ್ಲಿ ಬಡಗಿಯ ಹೆಂಗಸರು ಏತದಿಂದ ಅವಲಕ್ಕಿ ಕುಟ್ಟುವುದನ್ನು ನೋಡಿದೇನೆ. ಏತದ ಕಣ್ಣು ಎಲ್ಲಿ ಕೈ ಮೇಲೆ ಬಿದ್ದು ಬೆರಳನ್ನು ಜಜ್ಜಿಬಿಡುವುದೊ ಎಂಬ ಭಯ ಇದ್ದೇ ಇರುತ್ತದೆ; ಆದರೂ ಆ ಕೆಲಸದೊಡನೆ ಮಗುವಿಗೆ ಎದೆಯನ್ನೂ ಕೊಡುತ್ತಾ ಗಿರಾಕಿ ಗಳೊಡನೆ ವ್ಯಾಪಾರವನ್ನೂ ಮಾಡುತ್ತಾರೆ. ಅವರು ಗಿರಾಕಿಗಳಿಗೆ ಹೇಳು ತ್ತಾರೆ: 'ನೀವು ಹೊರಡುವ ಮುನ್ನ ನಿಮ್ಮ ಈ ಬಾಕಿಗಳನ್ನೆಲ್ಲ ತೀರಿಸಿ ಹೋಗಿ.'

"ಶೀಲಭ್ರಷ್ಟಳಾದ ಹೆಂಗಸು ಮನೆಯ ಎಲ್ಲಾ ಕೆಲಸಗಳನ್ನೇನೊ ಮಾಡಿಕೊಂಡು ಹೋಗುತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ಸರ್ವದಾ ತನ್ನ ಉಪಪತಿಯ ಮೇಲೇ ನೆಲಸಿರುತ್ತದೆ.

"ಅದೇ ರೀತಿಯಾಗಿ ಮನಸ್ಸು ಭಗವಂತನ ಮೇಲೆ ನೆಲಸಬೇಕಾದರೆ ಸ್ವಲ್ಪ ಸಾಧನೆ ಅವಶ್ಯಕ. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಆತನನ್ನು ಕರೆಯಬೇಕಾಗುತ್ತದೆ. ಭಕ್ತಿಯನ್ನು ಪಡೆದುಕೊಂಡನಂತರ ಈ ಜಗತ್ತಿನ

ಕರ್ಮಗಳನ್ನು ಮಾಡಲು ಸಾಧ್ಯ. ಸುಮ್ಮನೆ ಹೋಗಿ ಹಲಸಿನ ಹಣ್ಣನ್ನು ಬಿಡಿಸಲು ಶುರುಮಾಡಿದರೆ ಅದರ ಅಂಟು ಕೈಗೆಲ್ಲಾ ಅಂಟಿಕೊಂಡುಬಿಡುತ್ತದೆ. ಆದರೆ ಮೊದಲೇ ಕೈಗೆ ಎಣ್ಣೆ ಸವರಿಕೊಂಡು ಬಿಡಿಸಿದರೆ, ಅದರ ಅಂಟು ಅಂಟದು.''

ಈಗ ಕೀರ್ತನೆ ಆರಂಭವಾಯಿತು. ತ್ರೈಲೋಕ್ಯ ಹಾಡುತ್ತಿದಾನೆ. ಪರಮಹಂಸರು ಆನಂದದಿಂದ ನರ್ತಿಸುತ್ತಿದಾರೆ. ಅವರೊಡನೆ ಕೇಶವನೇ ಮೊದಲಾದ ಭಕ್ತರೂ ನರ್ತಿಸುತ್ತಿದಾರೆ. ಚಳಿಗಾಲವಾಗಿದ್ದರೂ ಪರಮಹಂಸರ ದೇಹದಿಂದ ಬೆವರು ಸುರಿಯಲಾರಂಭಿಸಿತು. ಕೀರ್ತನೆ ಮುಗಿದನಂತರ ಎಲ್ಲರೂ ಕೆಳಗೆ ಕುಳಿತುಕೊಂಡರು. ಪರಮಹಂಸರಿಗೆ ಏನನ್ನಾದರೂ ತಿನ್ನಬೇಕು ಅನ್ನಿಸಿತು. ಮನೆಯೊಳಗಿನಿಂದ ಒಂದು ತಟ್ಟೆಯಲ್ಲಿ ಮೃಷ್ಟಾನ್ನಾದಿಗಳನ್ನು ತಂದಿದಾರೆ. ಕೇಶವಸೇನ ಆ ತಟ್ಟೆಯನ್ನು ಕೈಯಲ್ಲಿ ಹಿಡಿದು ಪರಮಹಂಸರ ಮುಂದೆ ನಿಂತುಕೊಂಡ. ಪರಮಹಂಸರು ತಟ್ಟೆಯಿಂದ ತಿನ್ನುತ್ತಿದಾರೆ. ಪರಮಹಂಸರು ತಿಂದು ಮುಗಿಸಿದನಂತರ ಕೇಶವಸೇನ ಅವರ ಕೈಯನ್ನು ತೊಳೆದು ಕೈ ಬಾಯಿಗಳನ್ನು ಒಂದು ಶುಭ್ರವಾದ ಚೌಕದಿಂದ ಒರಸಿದ. ಬಳಿಕ ಅವರಿಗೆ ಬೀಸಣಿಗೆಯಿಂದ ಗಾಳಿ ಬೀಸಲಾರಂಭಿಸಿದ.

ಶ್ರೀರಾಮಕೃಷ್ಣರು ಕೇಶವಸೇನ ಮೊದಲಾದವರಿಗೆ: ''ಯಾರು ಸಂಸಾರದಲ್ಲಿದ್ದು ಭಗವಂತನನ್ನು ಕರೆಯಬಲ್ಲರೊ ಅವರೇ ವೀರಭಕ್ತರು. ಅವರ ತಲೆ ಮೇಲೆ ಇಪ್ಪತ್ತು ಮಣದ ಹೊರೆ ಇದೆ; ಆದರೂ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಪ್ರಯತ್ನಪಡುತ್ತಿದಾರೆ. ಅವರೇ ನಿಜವಾದ ವೀರಭಕ್ತರು. ಹೀಗೆ ಮಾಡುವುದು ಬಹಳ ಕಠಿನ ಎಂದು ನೀವು ಹೇಳಬಹುದು. ಆದರೂ ಭಗವಂತನ ಕೃಪೆಯಿಂದ ಏನು ತಾನೇ ಸಾಧ್ಯವಾಗದು? ಅಸಂಭವ ಸಂಭವವಾಗುತ್ತದೆ. ಸಾವಿರಾರು ವರ್ಷಗಳಿಂದ ಕಗ್ಗತ್ತಲೆ ಕವಿದಿದ್ದ ಕೊಠಡಿಗೆ ಬೆಳಕನ್ನು ತಂದುದೇ ಆದರೆ, ಅದು ಕಿಂಚಿತ್ತಾಗಿ ಆ ಕೊಠಡಿಯನ್ನು ಬೆಳಗಲಾರಂಭಿಸುವುದೆ? ಕೊಠಡಿ ಒಮ್ಮೆಗೇ ಬೆಳಕಿನಿಂದ ಬೆಳಗಲಾರಂಭಿಸುತ್ತದೆ.''

ಪರಮಹಂಸರ ಈ ಆಶಾಭರಿತ ಮಾತುಗಳನ್ನು ಕೇಳಿ ಕೇಶವನೇ ಮೊದಲಾದ ಗೃಹಸ್ಥ ಭಕ್ತರಿಗೆ ಆನಂದವಾಗಿಬಿಟ್ಟದೆ.

ಕೇಶವಸೇನ ರಾಮ ಮತ್ತು ಮನಮೋಹನನ ಚಿಕ್ಕಪ್ಪನಾದ

ರಾಜೇಂದ್ರಮಿತ್ರನಿಗೆ: "ನಿಮ್ಮ ಮನೆಯಲ್ಲಿ ಒಂದು ದಿನ ಈ ರೀತಿಯಾಗಿ ಆನಂದಕೂಟ ನೆರೆದರೆ ಬಹಳ ಚೆನ್ನಾಗಿರುತ್ತದೆ, ಅಲ್ಲವೆ?"

ರಾಜೇಂದ್ರ: "ಒಳ್ಳೆಯದು, ನಡೆಯಲಿ ಒಂದು ದಿನ. ರಾಮು, ಎಲ್ಲಾ ಭಾರ ನಿನ್ನ ಮೇಲೆ."

ಮನಮೋಹನನ ತಾಯಿ ತನ್ನ ಕೈಯಿಂದಲೇ ಪರಮಹಂಸರಿಗೆಂದು ವಿವಿಧ ಭಕ್ಷ್ಯಭೋಜ್ಯಗಳನ್ನು ತಯಾರುಮಾಡಿದ್ದಾಳೆ. ಪರಮಹಂಸರನ್ನು ಮನೆಯ ಒಳಕ್ಕೆ ಕರೆದುಕೊಂಡು ಹೋಗಿ ಅವರಿಗೆ ಅವನ್ನೆಲ್ಲಾ ಬಡಿಸುತ್ತಿದ್ದಾಳೆ. ಅವರು ಪ್ರೀತಿಸುತ್ತಿದ್ದ ಮಂಜು ನೀರನ್ನೂ ಒಂದು ಲೋಟದಲ್ಲಿ ತುಂಬಿ ಅವರ ಹತ್ತಿರ ಇಟ್ಟಿದ್ದಾಳೆ.

ಕೇಶವಸೇನ ಮತ್ತು ಉಳಿದ ಭಕ್ತರು ಅಂಗಳದಲ್ಲಿ ಕುಳಿತು ಆನಂದದಿಂದ ಊಟಮಾಡುತ್ತಿದ್ದಾರೆ. ಪರಮಹಂಸರೂ ಅಲ್ಲಿಗೆ ಬಂದು ಅವರಿಗೆ ಆನಂದವನ್ನುಂಟುಮಾಡಲು ಶ್ಲೋಕಗಳನ್ನು ಹೇಳುತ್ತ ನರ್ತಿಸುತ್ತಿದ್ದಾರೆ.

ಪರಮಹಂಸರು ಈಗ ದಕ್ಷಿಣೇಶ್ವರಕ್ಕೆ ಹೊರಡಲು ಸಿದ್ಧರಾಗಿದ್ದಾರೆ. ಕೇಶವಸೇನ ಮತ್ತು ಉಳಿದ ಭಕ್ತರು ಅವರ ಪಾದಧೂಳಿಯನ್ನು ತೆಗೆದುಕೊಂಡು ಅವರನ್ನು ಒಂದು ಗಾಡಿಗೆ ಹತ್ತಿಸಿ ಕಳುಹಿಸಿಕೊಟ್ಟರು.

೧೦ನೆ ಡಿಸೆಂಬರ್ ೧೮೮೧, ಶನಿವಾರ.

ರಾಜೇಂದ್ರಮಿತ್ರ ಕೇಶವಸೇನನ ಸಲಹೆಗನುಸಾರ ಕಲ್ಕತ್ತದಲ್ಲಿರೋ ತನ್ನ ಮನೆಯಲ್ಲಿ ಒಂದು ಸಂತೋಷ ಕೂಟವನ್ನು ಇಂದು ಏರ್ಪಡಿಸಿ ಪರಮಹಂಸರನ್ನಲ್ಲದೆ ಅನೇಕ ಮಂದಿ ಭಕ್ತರನ್ನೂ, ವಿಶೇಷತಃ ಬ್ರಾಹ್ಮ ಭಕ್ತರನ್ನೂ ಆಹ್ವಾನಿಸಿದ್ದಾನೆ.

ಎರಡು ದಿನಗಳ ಹಿಂದೆ ಬ್ರಾಹ್ಮಸಮಾಜದ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬನಾದ ಅಘೋರನಾಥ ಎಂಬುವನು ಇದ್ದಕ್ಕಿದ್ದ ಹಾಗೆ ಸತ್ತು ಹೋಗಿಬಿಟ್ಟಿದ್ದಾನೆ. ಕೇಶವಸೇನನೇ ಮೊದಲಾದ ಬ್ರಾಹ್ಮಭಕ್ತರಿಗೆ ಸತ್ತ ಸೂತಕ ಬಂದುಬಿಟ್ಟಿದೆ. ಆದ್ದರಿಂದ ಕೇಶವಸೇನನೇ ಮೊದಲಾದವರು ತನ್ನ ಮನೆಯ ಸಂತೋಷ ಕೂಟಕ್ಕೆ ಬಾರದೆ ಹೋಗಬಹುದು ಎಂಬುದಾಗಿ ರಾಜೇಂದ್ರ ಮಿತ್ರನಿಗೆ ಯೋಚನೆ ಬಂದು, ಅದು ಆತನಿಗೆ ಒಂದು ದೊಡ್ಡ ಚಿಂತೆಯನ್ನೇ ತಂದುಬಿಟ್ಟಿದೆ. ಆದರೆ ರಾಮು ಆತನಿಗೆ ಧೈರ್ಯ ಕೊಟ್ಟ: "ಇದಕ್ಕಾಗಿ ನೀನು ಏಕೆ ಇಷ್ಟೊಂದು ಚಿಂತಿಸುತ್ತಿದ್ದೀಯೆ? ಕೇಶವಸೇನ ಬರೋಕಾಗದೆ ಹೋದರೆ ಯಾವ ಆಕಾಶ ಕಳಚಿಬಿದ್ದುಹೋಗುತ್ತದೆ?

ಪರಮಹಂಸರು ಬರುತ್ತಾರಲ್ಲ ಇನ್ನೇನು ? ಅವರು ಸರ್ವದಾ ಸಮಾಧಿಸ್ಥ ರಾಗಿರೋದು ನಿನಗೆ ಗೊತ್ತಿಲ್ಲವೆ? ಅವರು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡಿದ್ದಾರೆ. ಅವರ ಸಾನ್ನಿಧ್ಯವೇ ಈ ಸಂತೋಷ ಕೂಟವನ್ನು ಜಯಪ್ರದವಾದುದನ್ನಾಗಿ ಮಾಡಿಬಿಡುತ್ತದೆ.''

ರಾಜೇಂದ್ರಮಿತ್ರ, ರಾಮ ಮತ್ತು ಇನ್ನೂ ಕೆಲವರನ್ನು ತನ್ನ ಜೊತೆಯಲ್ಲಿ ಕರೆದುಕೊಂಡುಹೋಗಿ ಕೇಶವಸೇನನನ್ನು ಕಂಡು ಅಘೋರನಾಥ ಸತ್ತುಹೋದುದಕ್ಕಾಗಿ ತನ್ನ ಸಂತಾಪವನ್ನು ಸೂಚಿಸಿದ. ಕೇಶವಸೇನ ರಾಜೇಂದ್ರಮಿತ್ರನಿಗೆ ಹೇಳಿದ: ''ನಿನ್ನ ಮನೆಯ ಸಂತೋಷಕೂಟಕ್ಕೆ ಬರುವುದಿಲ್ಲವೆಂದು ನಾನು ನಿನಗೆ ತಿಳಿಸಲಿಲ್ಲವಲ್ಲ. ಪರಮಹಂಸರು ಅಲ್ಲಿಗೆ ಬರಲಿದ್ದಾರೆ; ಆದ್ದರಿಂದ ನಾನು ಹೇಗೆ ಅಲ್ಲಿಗೆ ಬಾರದೆ ಉಳಿದುಕೊಳ್ಳಲಿ? ಖಂಡಿತ ಬರುತ್ತೇನೆ. ಸೂತಕವೇನೊ ಬಂದಿದೆ; ಆದರೆ ಅಲ್ಲಿ ಪ್ರತ್ಯೇಕವಾಗಿ ಕುಳಿತುಕೊಳ್ಳುತ್ತೇನೆ.''

ಕೇಶವಸೇನನ ಕೊಠಡಿಯ ಒಂದು ಗೋಡೆ ಮೇಲೆ ಪರಮಹಂಸರ ಸಮಾಧಿಸ್ಥ ಅವಸ್ಥೆಯ ಒಂದು ಭಾವಚಿತ್ರ ತೂಗಹಾಕಿತ್ತು.

ರಾಜೇಂದ್ರಮಿತ್ರ ಕೇಶವಸೇನನಿಗೆ: ''ಅನೇಕರು ಹೇಳುತ್ತಿದ್ದಾರೆ ಅವರು (ಚಿತ್ರವನ್ನು ತೋರಿಸಿ) ಚೈತನ್ಯದೇವನ ಅವತಾರ ಎಂಬುದಾಗಿ.''

ಕೇಶವಸೇನ ಚಿತ್ರದ ಕಡೆ ನೋಡಿ: ''ಈ ವಿಧವಾದ ಸಮಾಧಿ ಬಹಳ ದುರ್ಲಭವಾದ್ದು. ಯೇಸು, ಮಹಮ್ಮದ್, ಚೈತನ್ಯದೇವ ಇವರಿಗೆ ಇದು ಉಂಟಾಗುತ್ತಿತ್ತು.''

ಘಂಟೆ ಮೂರು. ಪರಮಹಂಸರು ಮನಮೋಹನನ ಮನೆಗೆ ಬಂದಿದ್ದಾರೆ. ಅಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಉಪಾಹಾರವನ್ನು ಸ್ವೀಕರಿಸಿದರು. ಸುರೇಂದ್ರ ಪರಮಹಂಸರಿಗೆ ಒಂದು ಗಾಡಿ ಮಾಡಿ ಅವರನ್ನು ಬೆಂಗಾಲ್ ಫೋಟಾಗ್ರಫರ್ ಸ್ಟುಡಿಯೋಗೆ ಕರೆದುಕೊಂಡುಹೋದ. ಅಲ್ಲಿ ಫೋಟಾಗ್ರಫರ್ ಫೋಟೋ ಹೇಗೆ ತೆಗೆಯುವುದು ಎಂಬ ವಿಷಯವಾಗಿ ಪರಮಹಂಸರಿಗೆ ವಿವರಿಸಲಾರಂಭಿಸಿದ. ಬೆಳ್ಳಿಯ ಉಪ್ಪನ್ನು (ಸಿಲ್ವರ್ ನೈಟ್ರೇಟ್) ಸವರಿದ ಗಾಜಿನಲ್ಲಿ ಯಾವ ರೀತಿಯಾಗಿ ಭಾವಚಿತ್ರ ಏಳುತ್ತದೆ ಎಂಬುದನ್ನು ಈಗ ತೋರಿಸುತ್ತಿದ್ದಾನೆ. ಬಳಿಕ ಪರಮಹಂಸರ ಫೋಟೋವನ್ನು ತೆಗೆದುಕೊಳ್ಳಲಾಯಿತು. ಆ ಸಮಯದಲ್ಲಿ ಅವರು ಇದ್ದಕ್ಕಿದ್ದ ಹಾಗೆ ಸಮಾಧಿಸ್ಥರಾಗಿಬಿಟ್ಟರು.

ಈಗ ಪರಮಹಂಸರು ರಾಜೇಂದ್ರಮಿತ್ರನ ಮನೆಗೆ ಬಂದಿದಾರೆ. ಕೇಶವಸೇನ ಇನ್ನೂ ಬಂದಿರಲಿಲ್ಲ. ಮಹೇಂದ್ರಗೋಸ್ವಾಮಿ ಭಾಗವತವನ್ನು ಓದುತ್ತಿದಾನೆ. ಪರಮಹಂಸರು ಭಕ್ತರೊಡನೆ ಮಾತುಕತೆಗಳಾಡಲು ಆರಂಭಿಸಿದಾರೆ.

ಶ್ರೀರಾಮಕೃಷ್ಣರು : "ಸಂಸಾರದಲ್ಲಿದ್ದರೂ ಭಗವಂತನ ಸಾಕ್ಷಾತ್ಕಾರವನ್ನು ಏಕೆ ಪಡೆಯಲಾಗೋದಿಲ್ಲ? ಆದರೆ ಬಹಳ ಕಠಿನ. ಬರೋವಾಗ ಬಾಗ್‌ಬಸಾರಿನ ಸೇತುವೆಯನ್ನು ದಾಟಿ ಬಂದೆ. ಅದನ್ನು ಎಷ್ಟೊಂದು ಸರಪಣಿಗಳಿಂದ ಕಟ್ಟಿದಾರೆ! ಒಂದು ಪಕ್ಷ ಆ ಸರಪಣಿಗಳಲ್ಲಿ ಒಂದು ಕಿತ್ತುಹೋಗಿಬಿಟ್ಟದ್ದೇ ಆದರೆ ಆ ಸೇತುವೆಗೆ ಏನೂ ಆಗದು, ಏಕೆಂದರೆ ಆ ಸೇತುವೆಯನ್ನು ಸರಿಯಾಗಿ ಹಿಡಿದು ನಿಲ್ಲಿಸಲು ಇನ್ನೂ ಅನೇಕ ಸರಪಣಿಗಳಿವೆ. ಅದೇ ರೀತಿಯಾಗಿ ಸಂಸಾರಿಗಳಿಗೆ ಅನೇಕ ಬಂಧನಗಳಿವೆ. ಭಗವಂತನ ಕೃಪೆಯೊಂದಿಲ್ಲದಿದ್ದರೆ ಅವುಗಳಿಂದ ಮುಕ್ತರಾಗಲು ಅವರಿಗೆ ಬೇರೆ ಉಪಾಯವೇ ಇಲ್ಲ.

"ಆತನ ದರ್ಶನವೊಂದು ದೊರೆತುಬಿಟ್ಟದ್ದೇ ಆದರೆ ಮತ್ತೆ ಭಯ ಪಡಬೇಕಾದ್ದೇನಿಲ್ಲ. ಆತನ ಮಾಯೆಯಲ್ಲಿ ವಿದ್ಯಾ, ಅವಿದ್ಯಾ ಎರಡೂ ಇವೆ; ಭಗವಂತನ ದರ್ಶನ ದೊರೆತನಂತರ ಅವುಗಳಿಂದ ನಿರ್ಲಿಪ್ತವಾಗಿರಲು ಸಾಧ್ಯ. ಪರಮಹಂಸಾವಸ್ಥೆಯಲ್ಲಿ ನಿಜಸ್ಥಿತಿ ಏನು ಎಂಬುದು ಸರಿಯಾಗಿ ಅರ್ಥವಾಗುತ್ತದೆ. ನೀರು ಮಿಶ್ರಣ ಹಾಲಿನಿಂದ ಕೇವಲ ಹಾಲನ್ನು ಕುಡಿದು ನೀರನ್ನು ನಿರಾಕರಿಸಲು ಹಂಸಪಕ್ಷಿಗೆ ಮಾತ್ರವೇ ಸಾಧ್ಯ. ಬಕಪಕ್ಷಿ ಹಾಗೆ ಮಾಡಲಾರದು."

ಒಬ್ಬ ಭಕ್ತ: "ಹಾಗಾದರೆ ಸಂಸಾರಿಗಳಿಗೆ ಉಪಾಯ ?"

ಶ್ರೀರಾಮಕೃಷ್ಣರು : "ಗುರುವಾಕ್ಯದಲ್ಲಿ ವಿಶ್ವಾಸವಿಡಬೇಕು. ಆತ ಹೇಳೋ ಹಾಗೆ ನಡೆದುಕೋಬೇಕು. ಕಂಬವನ್ನು ಹಿಡಿದು ಸುತ್ತೋನ ಹಾಗೆ ಆತನ ಉಪದೇಶವನ್ನು ಅನುಷ್ಠಾನಕ್ಕೆ ತರುತ್ತಾ ಸಂಸಾರದಲ್ಲಿರಬೇಕು.

"ಗುರುವನ್ನು ಮನುಷ್ಯ ಅಂತ ಭಾವಿಸಬಾರದು ; ಸಚ್ಚಿದಾನಂದನೇ ಗುರುವಿನ ರೂಪನ್ನು ಧರಿಸುತ್ತಾನೆ. ಗುರುವಿನ ಕೃಪೆಯಿಂದ ಇಷ್ಟದೇವನ ದರ್ಶನ ದೊರೆಯುತ್ತದೆ. ಬಳಿಕ ಗುರು ಇಷ್ಟದೇವನಲ್ಲಿ ಲೀನವಾಗಿಬಿಡುತ್ತಾನೆ.

"ಸರಳ ವಿಶ್ವಾಸದ ಕೈಯಲ್ಲಿ ಏನು ತಾನೆ ಸಾಧ್ಯವಿಲ್ಲ! ಒಮ್ಮೆ ಒಬ್ಬ ಗುರುವಿನ ಮನೆಯಲ್ಲಿ ಆತನ ಪುತ್ರನ ಅನ್ನಪ್ರಾಶನ ನಡೆಯಬೇಕಾಗಿತ್ತು. ಆತನ ಶಿಷ್ಯರು ಆ ಸಂದರ್ಭದಲ್ಲಿ ತಮ್ಮ ಶಕ್ತ್ಯನುಸಾರ ಆತನಿಗೆ ಆಹಾರ ಸಾಮಗ್ರಿಗಳನ್ನು ಒದಗಿಸಿಕೊಡಲು ಮುಂದೆ ಬಂದರು. ಒಬ್ಬ ಬಡ ವಿಧವೆಯೂ ಆತನ ಶಿಷ್ಯೆ. ಆಕೆ ಒಂದು ಹಸುವನ್ನು ಸಾಕಿಕೊಂಡಿದ್ದಳು. ಒಂದು ಗಡಿಗೆ ಹಾಲನ್ನು ತಂದು ಗುರುವಿಗೆ ಅರ್ಪಿಸಿದಳು. ಗುರು ಭಾವಿಸಿಕೊಂಡಿದ್ದ ತನಗೆ ಬೇಕಾಗೋ ಹಾಲೂ ಮೊಸರೂ ಎಲ್ಲದರ ಭಾರ ವನ್ನು ಆಕೆ ಹೊತ್ತುಕೊಳ್ಳುತ್ತಾಳೆ ಎಂಬುದಾಗಿ. ಆತ ವಿರಕ್ತಿಗೊಂಡು ಆಕೆ ತಂದಿದ್ದ ಹಾಲನ್ನು ಒಂದು ಕಡೆಗೆ ಚೆಲ್ಲಿಬಿಟ್ಟು ಹೇಳಿದ: 'ನೀನು ಬದುಕಿರೋದಕ್ಕಿಂತ ಹೋಗಿ ನೀರಿನಲ್ಲಿ ಮುಳುಗಿ ಸತ್ತುಹೋಗಬಾರದೆ!' ಆಕೆ ಇದು ಗುರುವಿನ ಆಜ್ಞೆಯೇ ಎಂದು ಭಾವಿಸಿ ನೀರಿನಲ್ಲಿ ಮುಳುಗಿ ಸಾಯಲು ನದಿಯ ಹತ್ತಿರಕ್ಕೆ ಬಂದಳು. ಶ್ರೀಮನ್ನಾರಾಯಣ ಆಕೆಯ ಸರಳ ವಿಶ್ವಾಸವನ್ನು ನೋಡಿ ಸುಪ್ರೀತನಾಗಿ ಅವಳಿಗೆ ತನ್ನ ದರ್ಶನ ಕೊಟ್ಟು ಹೇಳಿದ: 'ಈ ಪಾತ್ರೆಯಲ್ಲಿ ಮೊಸರಿದೆ. ಪಾತ್ರೆಯನ್ನು ಬರಿದುಮಾಡಿ ದಂತೆಲ್ಲ ಅದು ಮತ್ತೆ ಮತ್ತೆ ಮೊಸರಿನಿಂದ ತುಂಬಿಕೊಳ್ಳುತ್ತಲೇ ಇರು ತ್ತದೆ. ನಿನ್ನ ಗುರುವಿಗೆ ಇದನ್ನು ತೆಗೆದುಕೊಂಡುಹೋಗಿ ಕೊಡು. ಆತ ಸಂತುಷ್ಟನಾಗಿಬಿಡುತ್ತಾನೆ.' ಆಕೆ ಆ ಪಾತ್ರೆಯನ್ನು ಗುರುವಿನ ಕೈಗೆ ಕೊಟ್ಟಾಗ ಆತ ಆಶ್ಚರ್ಯಚಕಿತನಾಗಿಬಿಟ್ಟ. ಬಳಿಕ ಗುರು ನಡೆದ ವೃತ್ತಾಂತವನ್ನೆಲ್ಲ ಸವಿಸ್ತಾರವಾಗಿ ಆಕೆಯಿಂದ ಕೇಳಿ ನದಿಯ ಹತ್ತಿರಕ್ಕೆ ಬಂದು ಹೇಳಿದ: 'ನೀನು ಈಗ ಶ್ರೀಮನ್ನಾರಾಯಣನನ್ನು ನನಗೆ ತೋರಿ ಸದೆ ಇದ್ದರೆ, ಈ ಕ್ಷಣವೇ ನದಿಗೆ ಬಿದ್ದು ಪ್ರಾಣತ್ಯಾಗ ಮಾಡಿಬಿಡುತ್ತೇನೆ.' ಶ್ರೀಮನ್ನಾರಾಯಣನೇನೊ ಒಡನೆಯೇ ಕಾಣಿಸಿಕೊಂಡ, ಆದರೆ ಗುರು ವಿನ ಕಣ್ಣಿಗೆ ಮಾತ್ರ ಗೋಚರನಾಗಲಿಲ್ಲ. ಆಗ ಆ ವಿಧವೆ ಶ್ರೀಮನ್ನಾರಾ ಯಣನಿಗೆ ಪ್ರಾರ್ಥನೆ ಮಾಡಿಕೊಂಡಳು: 'ಪ್ರಭು, ಗುರುವಿನ ಕಣ್ಣಿಗೆ ಗೋಚರನಾಗದೆ ನೀನು ಉಳಿದುಕೊಂಡರೆ, ಆತನೇನಾದರು ದೇಹ ತ್ಯಾಗ ಮಾಡಿಬಿಟ್ಟ ಎಂದರೆ ನಾನೂ ಆತನೊಡನೆ ದೇಹತ್ಯಾಗಮಾಡಿಬಿಡು ತ್ತೇನೆ.' ಆಗ ಶ್ರೀಮನ್ನಾರಾಯಣ ಗುರುವಿಗೂ ಒಮ್ಮೆ ಕಾಣಿಸಿಕೊಂಡ.

"ನೋಡಿ, ಗುರುಭಕ್ತಿಯ ದೆಸೆಯಿಂದ ಆಕೆಗೂ ಭಗವಂತನ ದರ್ಶನ ದೊರೆಯಿತು, ಆಕೆಯ ಗುರುವಿಗೂ ಭಗವಂತನ ದರ್ಶನ ದೊರೆ

ಯಿತು. ಅದಕ್ಕಾಗೇ ನಾನು ಹೇಳೋದು : 'ನನ್ನ ಗುರು ಹೆಂಡದಂಗಡಿಗೆ ಹೋಗುತ್ತಿರಬಹುದು ; ಆದರೂ ಆತ ನನಗೆ ನಿತ್ಯಾನಂದರಾಯನೆ.'

"ಎಲ್ಲರೂ ಗುರು ಆಗಬೇಕು ಅಂತ ಇಚ್ಛೆಪಡುವರೇ ವಿನಾ ಶಿಷ್ಯ ಆಗಬೇಕು ಎಂಬುವವರು ಅತಿ ವಿರಳ. ಆದರೆ ನೋಡಿ, ನೀರು ದಿಣ್ಣೆ ಮೇಲೆ ಶೇಖರವಾಗೋದಿಲ್ಲ; ಅದು ಶೇಖರವಾಗೋದು ತಗ್ಗು ಪ್ರದೇಶ ದಲ್ಲಿ ಮಾತ್ರ.

"ಗುರು ಯಾವ ಮಂತ್ರವನ್ನು ಕೊಡುತ್ತಾನೊ ಅದರಲ್ಲಿ ವಿಶ್ವಾಸ ವಿಟ್ಟು ಸಾಧನೆ ಭಜನೆ ಮಾಡಬೇಕು. ಮುತ್ತಿನ ಹುಳು ತನ್ನ ಚಿಪ್ಪನ್ನ ತೆರೆದು ಸ್ವಾತಿ ನಕ್ಷತ್ರದ ಮಳೆಗಾಗಿ ಕಾದು ಕುಳಿತಿರುತ್ತದೆ. ಆ ಮಳೆ ಬಿದ್ದೊಡನೆಯೆ ನೇರವಾಗಿ ಸಮುದ್ರದ ತಳಕ್ಕೆ ಮುಳುಗಿ ಆ ನೀರು ಮುತ್ತಾ ಗುವವರೆಗೆ ಅದು ಅಲ್ಲೇ ಇರುತ್ತದೆ ಎಂಬುದಾಗಿ ಒಂದು ಹೇಳಿಕೆ ಇದೆ."

ಅಲ್ಲಿ ಅನೇಕ ಬ್ರಾಹ್ಮಭಕ್ತರು ನೆರೆದಿರುವುದನ್ನು ನೋಡಿ ಪರಮ ಹಂಸರು ಅವರಿಗೆ ಹೇಳಿದರು : "ಬ್ರಾಹ್ಮಸಭೆ ನಿಜವಾದ ಶ್ರದ್ಧಾಭಕ್ತಿಯ ಕೂಟವೊ ಅಥವಾ ಕೇವಲ ತೋರಿಕೆಯದೊ ? ಬ್ರಾಹ್ಮಸಮಾಜದಲ್ಲಿ ಒಂದು ನಿಯಮಿತ ಉಪಾಸನೆ ನಡೆಯುತ್ತದೆ; ಅದು ಬಹಳ ಒಳ್ಳೆಯದೆ. ಆದರೆ ಆಳಕ್ಕೆ ಮುಳುಗಬೇಕು; ಕೇವಲ ಉಪಾಸನೆ, ಲೆಕ್ಚರುಗಳಿಂದಲೇ ಆತನ ಸಾಕ್ಷಾತ್ಕಾರ ದೊರೆಯದು. ಹೃದಯದಿಂದ ಭೋಗಾಸಕ್ತಿ ಹೊರಟು ಹೋಗುವಂತೆಯೂ, ಆತನ ಪಾದಪದ್ಮಗಳಲ್ಲಿ ಭಕ್ತಿ ಉಂಟಾಗು ವಂತೆಯೂ ಆತನಿಗೆ ಸತತ ಪ್ರಾರ್ಥನೆಮಾಡಿಕೊಳ್ಳುತ್ತಿರಬೇಕು.

"ಆನೆಗೆ ಹೊರಗೆ ಕಾಣೋ ಕೋರೆ ಹಲ್ಲುಗಳಲ್ಲದೆ ಒಳಗೆ ದವಡೆ ಹಲ್ಲುಗಳೂ ಇವೆ. ಹೊರಗಿನ ಕೋರೆ ಹಲ್ಲುಗಳು ಅದಕ್ಕೆ ಕೇವಲ ಅಲಂಕಾರಪ್ರಾಯ ಮಾತ್ರ; ಒಳಗಿರೋ ದವಡೆ ಹಲ್ಲುಗಳಿಂದ ಅದು ಆಹಾರ ತಿನ್ನುತ್ತದೆ. ಅಂತರ್ಯದಲ್ಲೇ ಕಾಮಕಾಂಚನಗಳನ್ನು ಭೋಗಿ ಸಿದರೆ ಅದು ವ್ಯಕ್ತಿಯ ಭಕ್ತಿಗೆ ಹಾನಿಯನ್ನು ತರುತ್ತದೆ.

"ಹೊರಗೆ ಲೆಕ್ಚರ್-ಗಿಕ್ಚರ್ ಕೊಡುವುದರಿಂದ ದೊರೆಯೋ ಫಲ ವೇನು? ರಣಹದ್ದು ಬಹಳ ಎತ್ತರಕ್ಕೇನೊ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿಯೆಲ್ಲಾ ಹೆಣದ ಗುಂಡಿಗಳ ಕಡೆಗೇ. ಬಾಣಬಿರುಸು 'ಪುಸ್' ಅಂತ ಆಕಾಶದ ಕಡೆಗೆ ಮೊದಲು ಏರೇನೊ ಹೋಗುತ್ತದೆ, ಆದರೆ ಸ್ವಲ್ಪ ಹೊತ್ತಿನಲ್ಲೇ ಅದು ಕೆಳಕ್ಕೆ ಬಿದ್ದುಬಿಡುತ್ತದೆ.

“ಭೋಗಾಸಕ್ತಿ ಸಂಪೂರ್ಣವಾಗಿ ಬಿಟ್ಟುಹೋಗಿದ್ದರೆ, ಸಾಯೋ ಸಮಯದಲ್ಲಿ ಕೇವಲ ಭಗವಂತನ ಸ್ಮೃತಿಯೇ ಮನಸ್ಸಿಗೆ ಬರುತ್ತದೆ. ಇಲ್ಲದೆ ಇತ್ತು ಎಂದರೆ ಈ ಪ್ರಾಪಂಚಿಕ ವಸ್ತುಗಳ — ಹೆಂಡತಿ, ಮಕ್ಕಳು, ಮನೆ, ಧನ, ಮಾನ, ಸಂಭ್ರಮ—ಭಾವನೆಯೇ ಮನಸ್ಸಿಗೆ ಬರುತ್ತದೆ. ‘ರಾಧಾಕೃಷ್ಣ’ ಎಂದು ಹೇಳೋ ಹಾಗೆ ಹಕ್ಕಿಗೆ ಅಭ್ಯಾಸಮಾಡಿಸ ಬಹುದು; ಆದರೆ ಅದನ್ನು ಬೆಕ್ಕೇನಾದರೂ ಹೋಗಿ ಹಿಡಿದುಕೊಂಡಿತು ಎಂದರೆ ಅದು ಕೇವಲ ‘ಕ್ಯಾ, ಕ್ಯಾ’ ಅಂತ ಕೂಗಿಕೊಳ್ಳುತ್ತದೆ.

“ಅದಕ್ಕಾಗೇ ಆತನ ನಾಮಗುಣಕೀರ್ತನೆ, ಆತನ ಧ್ಯಾನ, ಆತನ ಚಿಂತನೆ ಇವನ್ನು ಸತತ ಮಾಡುತ್ತಿರಬೇಕು. ಇವೂ ಅಲ್ಲದೆ ಭೋಗಾಸಕ್ತಿ ಹೃದಯವನ್ನು ಬಿಟ್ಟು ತೊಲಗಿಹೋಗೋ ಹಾಗೆ, ಆತನ ಪಾದಪದ್ಮಗಳ ಕಡೆ ಮನಸ್ಸು ಸತತ ಹರಿಯೋ ಹಾಗೆ ಮಾಡಿಕೊಡಬೇಕೆಂದು ಆತನಿಗೆ ಪ್ರಾರ್ಥನೆ ಮಾಡಿಕೊಳ್ಳುತ್ತಿರಬೇಕು.

“ಈ ವಿಧದ ಸಂಸಾರಿಗಳು ಈ ಜಗತ್ತಿನಲ್ಲಿ ದಾಸಿಯೋಪಾದಿಯಲ್ಲಿ ವಾಸಿಸುತ್ತಾರೆ. ಆಕೆ ಯಜಮಾನನ ಮನೆಯ ಎಲ್ಲಾ ಕೆಲಸಗಳನ್ನೂ ಮಾಡುತ್ತಿರುತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ತನ್ನ ಹಳ್ಳಿಯ ಮೇಲೇ ನೆಲಸಿರುತ್ತದೆ; ಅಂದರೆ ಭಗವಂತನಲ್ಲಿ ಮನಸ್ಸಿಟ್ಟು ಈ ಜಗತ್ತಿನ ಎಲ್ಲಾ ಕೆಲಸಗಳನ್ನು ಮಾಡುತ್ತಾರೆ. ಸಂಸಾರಕ್ಕೆ ಕಾಲು ಬಿತ್ತು ಎಂದರೆ ಕೈ ಮೈಗೆಲ್ಲ ಕೆಸರು ತಗುಲೇ ತಗುಲುತ್ತದೆ. ಆದರೆ ಭಕ್ತ-ಸಂಸಾರಿ ಕೆಸರು ಮೀನಿನೋಪಾದಿಯಲ್ಲಿ ಈ ಜಗತ್ತಿನಲ್ಲಿ ವಾಸಿಸುತ್ತಾನೆ. ಕೆಸರು ಮೀನು ಕೆಸರಿನಲ್ಲಿ ವಾಸಿಸುತ್ತಿದ್ದರೂ ಅದು ಕೆಸರನ್ನು ಮೈಗೆ ಅಂಟಿಸಿ ಕೊಳ್ಳದು.

“ಬ್ರಹ್ಮ, ಶಕ್ತಿ ಅಭೇದ. ಭಗವಂತನನ್ನು ತಾಯಿ ಎಂಬುದಾಗಿ ಸಂಬೋಧಿಸಲಾರಂಭಿಸಿದರೆ ಬಹು ಬೇಗ ಹೃದಯದಲ್ಲಿ ಭಕ್ತಿ ಉಂಟಾಗಿ ಬಿಡುತ್ತದೆ, ಪ್ರೀತಿ ಉಂಟಾಗಿಬಿಡುತ್ತದೆ.”

ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದಾರೆ:

ಶ್ರೀ ಘನಶ್ಯಾಮೆಯ ಚರಣಾಕಾಶದಿ ಗಾಳಿಪಟದ ತೆರದಿ
ಹಾರುತಿರಲು ಮನ, ದುರಿತ ಕಲುಷ ಬಿರುಗಾಳಿಯು ಭರದಿ
ಬೀಸಿ ಪಟವ ಈ ತಿರೆಗೆ ತಳ್ಳಿತೋ ಮತ್ತೆ ಏರದಂತೆ
ಸತಿ ಸುತ ವ್ಯಾಮೋಹದ ಮಾಯೆಗೆ ಸಿಕ್ಕಿ ಹರಿಯುವಂತೆ.

ಮನದ ಪಟದ ಅಜ್ಞಾನವುಂಡವೇ ಮುರಿಯಲಿಳಿಗೆ ಬಿತ್ತು,
ಶ್ರದ್ಧೆಯ ಸೂತ್ರವು ಹಿಡಿದಿದ್ದರು ಪಟ ಅರಿವರ್ಗದಿ ನಮೆದಾಯ್ತು
"ಇಂಥ ಪಟವ ನಾ ಹಾರಾಟಕೆ ಬಿಡದಿದ್ದರೆ ಒಳಿತಾಗಿತ್ತು"
ಎಂದು ನುಡಿವನೀ ನರೇಶಚಂದ್ರನು ನೋವಿನಲಿ ನಮೆದು.

ಅವರು ಮತ್ತೆ ಹಾಡುತ್ತಿದ್ದಾರೆ :

ಅಂದು—

ನಂದಗೋಕುಲದಲ್ಲಿ ಗೋಪಾಲನಾದಂದು. . . .

ಪರಮಹಂಸರು ಎದ್ದುನಿಂತು ಈ ಹಾಡುಗಳನ್ನು ಹಾಡುತ್ತ ಹಾಡುತ್ತ ನರ್ತಿಸುತ್ತಲೂ ಇದ್ದಾರೆ. ಭಕ್ತರೆಲ್ಲರೂ ಎದ್ದುನಿಂತುಕೊಂಡಿದ್ದಾರೆ. ಪರಮಹಂಸರು ಆಗಾಗ ಸಮಾಧಿಸ್ಥರಾಗುತ್ತಲೇ ಇದ್ದಾರೆ. ಭಕ್ತರೆಲ್ಲರೂ ಬೊಂಬೆಗಳೋಪಾದಿಯಲ್ಲಿ ನಿಂತು ಪರಮಹಂಸರನ್ನು ಏಕ ದೃಷ್ಟಿಯಿಂದ ನೋಡುತ್ತಿದ್ದಾರೆ. ಡಾಕ್ಟರ್ ದುಕರಿ ಪರಮಹಂಸರ ಸಮಾಧಿ ಎಷ್ಟರಮಟ್ಟಿಗೆ ಸತ್ಯವಾದುದು ಎಂಬುದನ್ನು ಪರೀಕ್ಷಿಸಲು ಅವರ ಕಣ್ಣಿನೊಳಕ್ಕೆ ಬೆರಳಿಟ್ಟು ಪರೀಕ್ಷೆ ಮಾಡುತ್ತಿದ್ದಾನೆ. ಡಾಕ್ಟರ ಈ ವರ್ತನೆಯನ್ನು ನೋಡಿ ಭಕ್ತರಿಗೆ ಮೊಗಚಿಟ್ಟಲು ಆಗಿಬಿಟ್ಟಿದೆ.

ಈ ಅದ್ಭುತ ಸಂಕೀರ್ತನೆ ಮತ್ತು ನೃತ್ಯ ಮುಗಿದನಂತರ ಎಲ್ಲರೂ ಕೆಳಕ್ಕೆ ಕುಳಿತುಕೊಂಡರು. ಈ ಸಮಯಕ್ಕೆ ಸರಿಯಾಗೇ ಕೇಶವಸೇನ ಕೆಲವು ಬ್ರಾಹ್ಮಭಕ್ತರೊಡನೆ ಅಲ್ಲಿಗೆ ಬಂದ. ಆತ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ. ರಾಜೇಂದ್ರ ಕೇಶವ ಸೇನನಿಗೆ ಹೇಳಿದ, ಬಹಳ ಸೊಗಸಾದ ಕೀರ್ತನೆ ನಡೆಯಿತು ಎಂಬುದಾಗಿ. ಬಳಿಕ ಆತ ತ್ರೈಲೋಕ್ಯನನ್ನು ಹಾಡುವಂತೆ ಕೇಳಿಕೊಂಡ. ಅದಕ್ಕೆ ಕೇಶವ ಉತ್ತರವಿತ್ತ: "ಪರಮಹಂಸರು ಆಗಲೆ ಕೆಳಕ್ಕೆ ಕುಳಿತುಕೊಂಡು ಬಿಟ್ಟಿರೋದರಿಂದ ಕೀರ್ತನೆಯಲ್ಲಿ ಜೀವಾಳವೇ ಇರೋದಿಲ್ಲ."

ತ್ರೈಲೋಕ್ಯ ಮತ್ತು ಬ್ರಾಹ್ಮಭಕ್ತರು ಹಾಡಲಾರಂಭಿಸಿದಾರೆ :

ಹರಿನಾಮವ ಜಪಿಸೋ ಮನ
ಹರಿನಾಮವ ನುತಿಸೋ ಮನ
ಹರಿನಾಮವ ಗಾಯನಗೈ ಓ ಮನವೆ. . . .

ಎಲೆ ಹಾಕಲು ಎರಡನೆ ಅಂತಸ್ತಿನಲ್ಲಿ ಸಿದ್ಧತೆ ನಡೆಯುತ್ತಿದೆ. ಪರಮಹಂಸರು ಕೇಶವಸೇನನೊಡನೆ ಮಾತುಕತೆಗಳಾಡುತ್ತ ಕುಳಿತಿದ್ದಾರೆ.

ಶ್ರೀರಾಮಕೃಷ್ಣರು ನಗುತ್ತ: "ಇಂದು ಮನುಷ್ಯನ ಫೋಟೊ ತೆಗೆಯುವ ಯಂತ್ರವನ್ನು ನೋಡಿ ನನಗೆ ಬಹಳ ಆನಂದವಾಗಿಬಿಟ್ಟಿದೆ. ಒಂದು ವಿಶೇಷ ಏನೆಂದರೆ ಬರೀ ಗಾಜಿನ ಮೇಲೆ ಭಾವಚಿತ್ರ ಏಳದೆ, ಏನೊ ಒಂದು ಕಪ್ಪು ದ್ರಾವಕವನ್ನು ಸವರಿದ ಗಾಜಿನ ಮೇಲೆ ಏಳುತ್ತದೆ. ಅದೇ ರೀತಿಯಾಗಿ ಬರಿದೆ ಭಗವದ್ವಿಷಯಗಳನ್ನು ಕಿವಿಯಲ್ಲಿ ಕೇಳಿಬಿಡೋದ ರಿಂದ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗದು. ಅದು ಬೇಗ ಮರೆತುಹೋಗಿಬಿಡುತ್ತದೆ. ಆದರೆ ಭಕ್ತಿ ಮತ್ತು ಅನುರಾಗಗಳಿಂದ ಅಂತರ್ಯ ಸವರಲ್ಪಟ್ಟಿದ್ದರೆ ಭಗವದ್ಭಾವನೆಗಳು ಮನಸ್ಸಿನಲ್ಲಿ ಚಿರಮುದ್ರಿತ ವಾಗುತ್ತವೆ."

ಈಗ ಪರಮಹಂಸರನ್ನು ಎರಡನೆ ಅಂತಸ್ತಿಗೆ ಕರೆದುಕೊಂಡುಹೋಗಿ ಬಹಳ ಸುಂದರವಾದ ರತ್ನಗಂಬಳಿಯ ಮೇಲೆ ಕೂರಿಸಲಾಯಿತು. ಮನಮೋಹನನ ತಾಯಿ ಅವರಿಗೆ ಊಟಕ್ಕೆ ಬಡಿಸುತ್ತಿದಾಳೆ. ಕೇಶವಸೇನ ಮತ್ತು ಉಳಿದ ಭಕ್ತರೂ ಆನಂದದಿಂದ ಊಟಮಾಡುತ್ತಿದಾರೆ.

೧ನೆ ಜನವರಿ ೧೮೮೩, ಭಾನುವಾರ.

ಪರಮಹಂಸರು ಸಿಮೂಲಿಯಾ ಬ್ರಾಹ್ಮಸಮಾಜದ ವಾರ್ಷಿಕೋತ್ಸವ ದಲ್ಲಿ ಭಾಗವಹಿಸಲು ಕಲ್ಕತ್ತದಲ್ಲಿರೋ ಜ್ಞಾನಚೌದೂರಿಯ ಮನೆಗೆ ತಮ್ಮ ಭಕ್ತರೊಡನೆ ಬಂದಿದಾರೆ. ಕೇಶವಸೇನ, ರಾಮ, ಮನಮೋಹನ, ಬಲರಾಮ, ಕೇದಾರ, ನರೇಂದ್ರ, ರಾಖಾಲ, ಜೊತೆಗೆ ಇನ್ನೂ ಕೆಲವರು ಅಲ್ಲಿಗೆ ಬಂದಿದಾರೆ. ನರೇಂದ್ರ ಈಗ ಕೆಲವು ದಿನಗಳ ಹಿಂದೆ ರಾಮ ಮೊದ ಲಾದವರೊಡನೆ ದಕ್ಷಿಣೇಶ್ವರಕ್ಕೆ ಹೋಗಿ ಪರಮಹಂಸರನ್ನು ಕಂಡು ಬಂದಿದ್ದ. ಆತ ಆಗಾಗ ಈ ಸಿಮೂಲಿಯಾ ಬ್ರಾಹ್ಮಸಮಾಜಕ್ಕೆ ಬಂದು ಹಾಡೋದು, ಉಪಾಸನೆ ನಡೆಸೋದು ಇವನ್ನೆಲ್ಲಾ ಮಾಡುತ್ತಿದ್ದ. ಇಂದೂ ಆತ ಈ ಸಭೆಯಲ್ಲಿ ಭಾಗವಹಿಸುತ್ತಾನೆ.

ಈಗ ಬ್ರಾಹ್ಮಸಮಾಜ ಸಂಪ್ರದಾಯಕ್ಕೆ ತಕ್ಕಂತೆ ಉಪಾಸನೆ ಆರಂಭ ವಾಯಿತು. ಮೊದಲು ಸ್ವಲ್ಪ ಹೊತ್ತು ಶಾಸ್ತ್ರಪಾಠ ನಡೆಯಿತು; ಬಳಿಕ ನರೇಂದ್ರ ಸ್ವಲ್ಪ ಹೊತ್ತು ಹಾಡಿದ. ಆಗಲೆ ಮುಂಗತ್ತಲೆ ಕಾಲಿಟ್ಟಿದೆ. ಭಕ್ತರೆಲ್ಲರೂ ಆನಂದದಿಂದ ಮಾತುಕತೆಗಳಾಡಿಕೊಳ್ಳುತ್ತಿದಾರೆ. ಪರಮ ಹಂಸರು ತಮ್ಮ ಸುತ್ತಲೂ ಕುಳಿತಿರೋ ಗೃಹಸ್ಥ ಭಕ್ತರ ಕಡೆ ದೃಷ್ಟಿ ಹಾಕಿ ನಗುತ್ತ ನಗುತ್ತ ಹೇಳುತ್ತಿದಾರೆ: "ತನ್ನ ಮನಸ್ಸನ್ನು ಭಗವಂತನಿಗೆ

ಅರ್ಪಿಸಲು ಸಂಸಾರಿಗೆ ಸಾಧ್ಯವಾಗದೆ ಏನು? ಆದರೆ ಒಂದು ವಿಷಯ. ಆತನ ಮನಸ್ಸು ಆತನ ವಶದಲ್ಲಿ ಇಲ್ಲ. ಅದು ಆತನ ವಶದಲ್ಲಿ ಇದ್ದರೆ ತಾನೆ ಆತ ಅದನ್ನು ಭಗವಂತನಿಗೆ ಅರ್ಪಿಸಬಲ್ಲ. ಅದನ್ನು ಆತ ಅಡವಿಟ್ಟು ಬಿಟ್ಟಿದಾನೆ— ಕಾಮಕಾಂಚನಗಳಿಗೆ ಅಡವಿಟ್ಟುಬಿಟ್ಟಿದಾನೆ. ಅದಕ್ಕಾಗೇ ಆತನಿಗೆ ಸಾಧುಸಂಗದ ಆವಶ್ಯಕತೆ ಇದೆ. ಆತ ತನ್ನ ಮನಸ್ಸನ್ನು ಅಡವಿನಿಂದ ಬಿಡಿಸಿಕೊಂಡ ಮೇಲೆ ತಾನೆ ಅದನ್ನು ಸಾಧನೆ ಭಜನೆಯಲ್ಲಿ ತೊಡಗಿಸಬಲ್ಲ. ಆದ್ದರಿಂದ ಮೊದಲು ಆತನಿಗೆ ಅತ್ಯಾವಶ್ಯಕವಾಗಿ ಬೇಕಾಗಿರೋದು ಗುರುವಿನ ಸಂಗ, ಗುರುವಿನ ಸೇವೆ, ಸಾಧುಸಂಗ. ಸಾಧ್ಯವಾಗೋದಾದರೆ ಆತ ನಿರ್ಜನ ಪ್ರದೇಶದಲ್ಲಿ ಭಗವಂತನ ಧ್ಯಾನದಲ್ಲೇ ಮಗ್ನನಾಗಿರಬೇಕು, ಇಲ್ಲದಿದ್ದರೆ ಸಾಧುಸತ್ಪುರುಷರೊಡನೆ ವಾಸಿಸಬೇಕು. ಮನಸ್ಸನ್ನು ಒಂಟಿಯಾಗಿ ಬಿಟ್ಟುಬಿಟ್ಟದ್ದೇ ಆದರೆ ಕ್ರಮೇಣ ಅದು ಶುಷ್ಕವಾಗಿಬಿಡುತ್ತದೆ. ಒಂದು ಕೊಡ ನೀರನ್ನು ಪ್ರತ್ಯೇಕವಾಗಿ ಒಂದು ಕಡೆ ಇಟ್ಟುಬಿಟ್ಟದ್ದರೆ ಕ್ರಮೇಣ ಅದು ಇಂಗಿ ಬರಿದಾಗಿಬಿಡುತ್ತದೆ. ಆದರೆ ಅದನ್ನು ಗಂಗೆಯಲ್ಲಿ ಮುಳುಗಿಸಿ ಇಟ್ಟಿದ್ದರೆ ಅದಕ್ಕೆ ಆ ಅವಸ್ಥೆ ಬರೋ ಹಾಗೇ ಇಲ್ಲ.

"ಕುಲುಮೆಯಲ್ಲಿ ಕಬ್ಬಿಣ ಕೆಂಪಗೆ ಕಾದಿರುತ್ತದೆ. ಅದನ್ನು ಅಲ್ಲಿಂದ ತೆಗೆದು ಹೊರಗೆ ಪ್ರತ್ಯೇಕವಾಗಿ ಇಟ್ಟಿದ್ದೇ ಆದರೆ, ಅದು ಮತ್ತೆ ಎಂದಿನಂತೆ ಕಪ್ಪಾಗುತ್ತದೆ. ಅದಕ್ಕಾಗಿ ಅದನ್ನು ಆಗಾಗ ಕುಲುಮೆಗೆ ಹಾಕುತ್ತಲೇ ಇರಬೇಕು.

"ನಾನು ಕರ್ತ, ನನ್ನಿಂದಲೇ ಈ ಸಂಸಾರ ನಡೆದುಕೊಂಡು ಹೋಗುತ್ತದೆ, ನನ್ನ ಗೃಹ, ನನ್ನ ಬಂಧುಬಳಗ–ಎಂಬಿವೇ ಮೊದಲಾದ ಭಾವನೆಗಳು ಅಜ್ಞಾನ ಜನ್ಯವಾದುವು. ನಾನು ಆತನ ದಾಸ, ಆತನ ಭಕ್ತ, ಆತನ ಸಂತಾನ– ಈ ಭಾವನೆಗಳು ಬಹಳ ಶ್ರೇಯಸ್ಕರವಾದುವು.

"ಒಮ್ಮೆಗೇ 'ಅಹಂ' ಎಂಬುದು ಹೊರಟುಹೋಗದು. ಈ ನಿಮಿಷ ಅದು ಇಲ್ಲವೇ ಇಲ್ಲವೆಂದು ವಿಚಾರದ ಮೂಲಕ ಮನಸ್ಸಿಗೆ ತೋರಿಸಬಹುದು, ಆದರೆ ಮರು ನಿಮಿಷ, ಎಲ್ಲಿಂದಲೊ ಗೊತ್ತಿಲ್ಲ ಅದು ಮನಸ್ಸನ್ನು ಪ್ರವೇಶಿಸಿಬಿಡುತ್ತದೆ. ತಲೆಯನ್ನು ಕತ್ತರಿಸಿಹಾಕಿದ ಮೇಲೂ ಆಡು ಸ್ವಲ್ಪ ಹೊತ್ತು 'ಬ್ಯಾ, ಬ್ಯಾ' ಅಂತ ಕೂಗೋ ಹಾಗೆ ಮತ್ತು ಕೈಕಾಲು ಒದರೋ ಹಾಗೆ ಅದು ವರ್ತಿಸುತ್ತದೆ.

"ಭಗವಂತನ ದರ್ಶನ ದೊರೆತ ಮೇಲೂ ಆತ ನಮ್ಮ ಹೃದಯದಲ್ಲಿ ಇಡುತ್ತಾನಲ್ಲ 'ಅಹಂ' ಎಂಬುದನ್ನ, ಅದು 'ಮಾಗಿದ ಅಹಂ'. ಅದು ಕತ್ತಿ ಸ್ಪರ್ಶವೇದಿಯನ್ನು ಮುಟ್ಟಿಬಿಟ್ಟು ಚಿನ್ನವಾಗಿಬಿಟ್ಟ ಹಾಗೆ; ಮತ್ತೆ ಅದರಿಂದ ಯಾವ ಹಿಂಸಾತ್ಮಕ ಕಾರ್ಯವೂ ಸಾಧ್ಯವಾಗೋದಿಲ್ಲ."

ಈ ರೀತಿಯಾಗೆಲ್ಲ ಪರಮಹಂಸರು ಪೂಜೆಯ ಅಂಗಳದಲ್ಲಿ ಕುಳಿತು ಮಾತನಾಡುತ್ತಿದಾರೆ; ಕೇಶವಸೇನ ಮೊದಲಾದವರು ಮೈಮರೆತು ಕೇಳು ತ್ತಿದಾರೆ. ಘಂಟೆ ರಾತ್ರಿ ಎಂಟಾಯಿತು. ಉಪಾಸನೆಯನ್ನು ಆರಂಭಿಸಲು ಮೂರು ಸಲ ಗಂಟೆ ಶಬ್ದ ಆಯಿತು.

ಶ್ರೀರಾಮಕೃಷ್ಣರು ಕೇಶವಸೇನ ಮೊದಲಾದವರಿಗೆ: "ಏಕೆ ಹೀಗೆ? ನಿಮ್ಮ ಉಪಾಸನೆ ಇನ್ನೂ ಆರಂಭವಾಗೇ ಇಲ್ಲ ಅಂತ ಕಾಣುತ್ತದೆಯಲ್ಲ!"

ಕೇಶವಸೇನ: "ಇನ್ನು ಬೇರೆ ಉಪಾಸನೆ ಏನು? ಈಗ ನಡೆಯು ತ್ತಿರುವುದು ಉಪಾಸನೆ ಅಲ್ಲವೆ?"

ಶ್ರೀರಾಮಕೃಷ್ಣರು: "ಹಾಗೆ ಮಾಡಬಾರದು. ಪದ್ಧತಿಗನುಸಾರ ಮೊದಲು ನಡೆಯಲಿ."

ಕೇಶವ: "ಏಕೆ ಅದು? ಇದೇ ಚೆನ್ನಾಗಿ ನಡೆಯುತ್ತಿದೆಯಲ್ಲ."

ಪರಮಹಂಸರಿಂದ ಅನೇಕ ಸಾರಿ ಹೇಳಿಸಿಕೊಂಡು ಕೇಶವಸೇನ ಎದ್ದು ಈಗ ಉಪಾಸನೆ ಆರಂಭಮಾಡಿದಾನೆ. ಉಪಾಸನೆ ನಡೆಯುತ್ತಿದ್ದ ಹಾಗೆ ಪರಮಹಂಸರು ಇದ್ದಕ್ಕಿದ್ದ ಹಾಗೆ ಎದ್ದು ನಿಂತು ಸಮಾಧಿಸ್ಥರಾಗಿ ಬಿಟ್ಟಿದಾರೆ. ಬ್ರಾಹ್ಮಭಕ್ತಮಂಡಲಿ ಹಾಡುತ್ತಿದೆ:

ಹರಿನಾಮವ ಜಪಿಸೋ ಮನ
ಹರಿನಾಮವ ನುತಿಸೋ ಮನ
ಹರಿನಾಮವ ಗಾಯನಗೈ ಓ ಮನವೆ....

ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ನಿಂತಿದಾರೆ. ಕೇಶವ ಸೇನ ಅವರ ಕೈಯನ್ನು ಹಿಡಿದುಕೊಂಡು ಬಹಳ ಎಚ್ಚರಿಕೆಯಿಂದ ದೇವಾಲಯದಿಂದ ಪ್ರಾಂಗಣಕ್ಕೆ ಇಳಿಸಿಕೊಂಡುಹೋದ. ಕೀರ್ತನೆ ಮುಂದುವರಿಯುತ್ತಿದೆ. ಪರಮಹಂಸರು ಕೀರ್ತನೆಯೊಡನೆ ನರ್ತಿಸುತ್ತಿ ದಾರೆ. ಭಕ್ತರು ಅವರ ಸುತ್ತಲೂ ನರ್ತಿಸುತ್ತಿದಾರೆ.

ಪರಮಹಂಸರು ಮತ್ತೆಲ್ಲರೂ ಉಪಾಹಾರವನ್ನು ಮಾಡಿ ಮುಗಿಸಿ ದರು. ಈಗ ಪರಮಹಂಸರು ಕೇಶವಸೇನನೊಡನೆ ಮಾತುಕತೆ ಆಡು

ತ್ತಿದಾರೆ. ಮಾತಾಡುತ್ತ ಮಾತಾಡುತ್ತ ಪರಮಹಂಸರು ಹಾಡಲಾರಂಭಿಸಿದಾರೆ. ಕೇಶವಸೇನನೂ ಅವರೊಡನೆ ಹಾಡುತ್ತಿದಾನೆ:

ಸಾಗುತಿಹುದು ಚಿತ್ತ ಭೃಂಗ
ಕಾಳೀಪದ ನೀಲಕಮಲ ಮಧುಪಾನದ ಆಸೆಗೆ!...

ಅವರು ಮತ್ತೆ ಹಾಡುತ್ತಿದಾರೆ:

ಶ್ರೀ ಘನಶ್ಯಾಮೆಯ ಚರಣಾಕಾಶದಿ ಗಾಳಿಪಟದ ತೆರದಿ
ಹಾರುತಿರಲು ಮನ, ದುರಿತ ಕಲುಷ ಬಿರುಗಾಳಿಯು ಭರದಿ...

ಪರಮಹಂಸರು ಮತ್ತು ಕೇಶವಸೇನ ಇಬ್ಬರೂ ಪ್ರೇಮೋನ್ಮತ್ತರಾಗಿಬಿಟ್ಟಿದಾರೆ. ಉಳಿದ ಭಕ್ತರೂ ಅವರೊಡನೆ ಮಧ್ಯರಾತ್ರಿಯವರೆಗೆ ಹಾಡಿ ನರ್ತಿಸಿದರು.

ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಕೇಶವಸೇನನಿಗೆ ಹೇಳುತ್ತಿದಾರೆ: "ನಿನ್ನ ಮಗನ ವಿವಾಹದ ಸಂದರ್ಭದಲ್ಲಿ ನನಗೇಕೆ ನೀನು ಬಹುಮಾನಗಳನ್ನು ಕಳುಹಿಸಿದೆ? ಅವನ್ನು ತೆಗೆದುಕೊಂಡು ನಾನು ಏನು ಮಾಡಲಿ? ದಯವಿಟ್ಟು ಹಿಂದಕ್ಕೆ ತೆಗೆದುಕೊಂಡುಬಿಡು."

ಕೇಶವಸೇನ ಸ್ವಲ್ಪ ನಕ್ಕ. ಪರಮಹಂಸರು ಮತ್ತೆ ಆತನಿಗೆ ಹೇಳುತ್ತಿದಾರೆ: "ನನ್ನ ಸಂಬಂಧವಾಗಿ ಏಕೆ ನೀನು ನಿಮ್ಮ ಪತ್ರಿಕೆಗಳಲ್ಲಿ ಬರೆಯುತ್ತಾ ಇದೀಯೆ? ಪುಸ್ತಕಗಳಲ್ಲಿ, ವಾರ್ತಾ ಪತ್ರಿಕೆಗಳಲ್ಲಿ ಪ್ರಕಟಿಸಿ ಯಾರನ್ನೇ ಆಗಲಿ ದೊಡ್ಡವನನ್ನಾಗಿ ಮಾಡಲಾಗೋದಿಲ್ಲ. ಆದರೆ ಭಗವಂತ ಯಾರನ್ನು ದೊಡ್ಡವನನ್ನಾಗಿ ಮಾಡುತ್ತಾನೊ ಆತ ಕಾಡಿನ ಮಧ್ಯೆ ವಾಸವಾಗಿದ್ದರೂ ಆತನ ವಿಷಯ ಎಲ್ಲರಿಗೂ ಗೊತ್ತಾಗಿಬಿಡುತ್ತದೆ. ದಟ್ಟವಾದ ಕಾಡಿನ ಮಧ್ಯೆ ಹೂವು ಅರಳಿದರೆ ಅದು ಜೇನು ಹುಳುಗಳಿಗೆ ತಿಳಿದುಬಂದುಬಿಡುವುದು, ಆದರೆ ನೊಣಗಳಿಗೆ ಅದು ಸಾಧ್ಯವಿಲ್ಲ. ಮನುಷ್ಯನ ಕೈಯಲ್ಲಿ ಏನು ತಾನೆ ಸಾಧ್ಯ? ಆತನಲ್ಲಿ ಆಶ್ರಯವನ್ನು ಹೊಂದಬೇಡ. ಆತ ಒಂದು ಕ್ರಿಮಿ ಮಾತ್ರ. ಈ ದಿನ ನಿನ್ನನ್ನು ಹೊಗಳೋ ನಾಲಗೆಯೇ ನಾಳೆ ನಿನ್ನನ್ನು ತೆಗಳುವುದು. ನನಗೆ ಹೆಸರು, ಕೀರ್ತಿ ಬೇಕಾಗಿಲ್ಲ. ನಾನು ದೀನರಲ್ಲಿ ದೀನನಾಗಿಯೂ ನಮ್ರರಲ್ಲಿ ನಮ್ರನಾಗಿಯೂ ಯಾವಾಗಲೂ ಇರುವಂತಾಗಲಿ!"

# ಪರಿಶಿಷ್ಟ ೨

## ಒಂದು ಪತ್ರ[1]

ನನ್ನ ಪ್ರೀತಿಯ ಸೋದರ, ಮಾಸ್ಟರ್ ಮಹಾಶಯ,

ನೀನು ಕಳುಹಿಸಿದ ಶ್ರೀ ರಾಮಕೃಷ್ಣ ಕಥಾಮೃತದ ನಾಲ್ಕನೆ ಭಾಗ ಈಗ ಮೂರು ದಿನಗಳ ಹಿಂದೆಯೇ ನನಗೆ ತಲುಪಿತು. ಇಂದು ಅದನ್ನು ಓದಿ ಮುಗಿಸಿದೆ. ನೀನೇ ಧನ್ಯ. ಎಂಥ ದಿವ್ಯ ಅಮೃತವನ್ನು ದೇಶದಲ್ಲೆಲ್ಲಾ ಹರಡಿದೀಯೆ! . . . ಪರಮಹಂಸರಿಗೂ ನನಗು ನಡೆದ ಸಂಭಾಷಣೆಗಳನ್ನು ಬರೆದು ಕಳುಹಿಸಬೇಕೆಂದು ನೀನು ಅನೇಕ ದಿವಸಗಳ ಹಿಂದೇ ನನಗೆ ತಿಳಿಸಿದ್ದೆ. ಈಗ ಅದನ್ನು ಬರೆದು ಕಳುಹಿಸಲು ಪ್ರಯತ್ನಿಸುತ್ತಿದೇನೆ. ಆದರೆ ನಾನು ನಿನ್ನ ಹಾಗೆ ಅವರನ್ನು ಸಂಧಿಸಿದ ದಿನ, ತಾರೀಖು, ಮುಹೂರ್ತ ಇವನ್ನೆಲ್ಲಾ ಮತ್ತು ಅವರ ಶ್ರೀಮುಖದಿಂದ ಬಂದುದನ್ನೆಲ್ಲ ಬಂದ ರೀತಿಯಲ್ಲೇ ಬರೆದಿಡೋ ಸುಯೋಗವನ್ನು ಪಡೆದು ಹುಟ್ಟಲಿಲ್ಲ. ಎಷ್ಟು ನನ್ನ ಜ್ಞಾಪಕದಲ್ಲಿ ಇರುವುದೊ ಅಷ್ಟನ್ನು ಮಾತ್ರ ಈ ಪತ್ರದಲ್ಲಿ ಬರೆದು ಕಳುಹಿಸುತ್ತಿದೇನೆ. ಬಹುಶಃ ಒಂದು ದಿನ ನಡೆದ ಮಾತುಕತೆಗಳನ್ನು ಇನ್ನೊಂದು ದಿನಕ್ಕೆ ಸೇರಿಸಿಬಿಟ್ಟಿರೋ ಸಂಭವವೆಲ್ಲಾ ಇದೆ. ಇದೂ ಅಲ್ಲದೆ ಇಷ್ಟರಲ್ಲಿ ಎಷ್ಟೋ ವಿಷಯಗಳನ್ನು ಮರತೂ ಬಿಟ್ಟಿದೇನೆ.

ನಾನು ಮೊಟ್ಟಮೊದಲು ಪರಮಹಂಸರ ದರ್ಶನ ಪಡೆದುದು ಬಹುಶಃ ೧೮೮೧ ನೆಇಸವಿಯ ದುರ್ಗಾಪೂಜೆಯ ರಜಾದಿನಗಳಲ್ಲಿ ಅಂತ ಕಾಣುತ್ತೆ. ನಾನು ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಹೋಗಿ ಸ್ನಾನಘಟ್ಟದ ಮೂಲಕ ಮೇಲಕ್ಕೆ ಹತ್ತಿದೊಡನೆಯೆ ಒಬ್ಬನನ್ನು ಕೇಳಿದೆ, ಪರಮಹಂಸರು ಎಲ್ಲಿದಾರೆ ಎಂಬುದಾಗಿ. ಆತ ಒಂದು ಕೊಠಡಿಯ ಉತ್ತರ ದಿಕ್ಕಿನ ವರಾಂಡದಲ್ಲಿ ಒರಗುದಿಂಬು ಒರಗಿಕೊಂಡು ಕುಳಿತಿದ್ದ ಒಬ್ಬ ವ್ಯಕ್ತಿಯನ್ನು ತೋರಿಸಿ ಹೇಳಿದ: "ಅವರೇ ಪರಮಹಂಸರು." ಅವರು ಕಪ್ಪು ಅಂಚಿನ ಪಂಚೆಯನ್ನು ಉಟ್ಟಿದ್ದರು. ಕಪ್ಪು ಅಂಚಿನ ಪಂಚೆ, ಒರಗು

---

1. ಮಾಸ್ಟರ್ ಮಹಾಶಯನಿಗೆ ಅಶ್ವಿನೀಕುಮಾರದತ್ತ ಬರೆದ ಪತ್ರ. ಅಶ್ವಿನೀಕುಮಾರದತ್ತ ವಂಗದೇಶದ ಸಂತರ ಪಂಕ್ತಿಗೆ ಸೇರಿದ ಒಬ್ಬ ದೇಶಭಕ್ತ.

ದಿಂಬು ಇವನ್ನೆಲ್ಲಾ ನೋಡಿ ನನಗೆ ನಾನೇ ಹೇಳಿಕೊಂಡೆ : "ಇವರೆಂಥ ಪರಮಹಂಸರಪ್ಪ ಇವರು ?"

ಅವರ ಹತ್ತಿರ ಹೋಗಿ ನೋಡಲಾಗಿ ಅವರು ಕಾಲುಗಳನ್ನು ಎಳೆದುಕೊಂಡು ಕೈಗಳನ್ನು ಮಂಡಿಯ ಸುತ್ತಲೂ ಕಟ್ಟಿ ಒರಗುದಿಂಬನ್ನು ಒಂದು ಕಿಂಚಿತ್ ಒರಗಿಕೊಂಡು ಕುಳಿತಿದ್ದರು. ಆಗ ನಾನು ಭಾವಿಸಿದೆ: "ಇವರು ಒರಗುದಿಂಬನ್ನು ಸಂಭಾವಿತರು ಉಪಯೋಗಿಸೋ ರೀತಿಯಲ್ಲಿ ಉಪಯೋಗಿಸುತ್ತಿಲ್ಲ. ಬಹುಶಃ ಅದಕ್ಕಾಗೇ ಇವರು ಪರಮಹಂಸರಿರಬೇಕು." ಅವರ ಬಲಗಡೆ, ಒರಗುದಿಂಬಿನ ಹತ್ತಿರವೇ ಒಬ್ಬ ಸಂಭಾವಿತ ಕುಳಿತುಕೊಂಡಿದ್ದ. ಆತನ ಹೆಸರು ರಾಜೇಂದ್ರಲಾಲ ಮಿತ್ರ ಎಂಬುದಾಗಿ. ಆತ ವಂಗ ಸರ್ಕಾರದ ಸಹಾಯಕ ಕಾರ್ಯದರ್ಶಿಯಾಗಿದ್ದ. ಇನ್ನೂ ಸ್ವಲ್ಪ ದೂರದಲ್ಲಿ ಇನ್ನು ಕೆಲವರು ಕುಳಿತಿದ್ದರು.

ಕೆಲವು ನಿಮಿಷಗಳಾದನಂತರ ಪರಮಹಂಸರು ರಾಜೇಂದ್ರಲಾಲ ಮಿತ್ರನಿಗೆ ಹೇಳಿದರು: "ಸ್ವಲ್ಪ ನೋಡು, ಕೇಶವಚಂದ್ರಸೇನ ಬರುತ್ತಿದಾನೆಯೆ ?" ಪರಮಹಂಸರು ಕೇಶವಚಂದ್ರಸೇನನ ನಿರೀಕ್ಷಣೆಯಲ್ಲಿದಾರೆ ಎಂಬುದಾಗಿ ನನಗೆ ಆಗ ಅರ್ಥವಾಯಿತು.

ಒಬ್ಬ ಸ್ವಲ್ಪ ದೂರ ಹೋಗಿ ನೋಡಿ ಹಿಂದಿರುಗಿಬಂದು ಹೇಳಿದ: "ಇಲ್ಲ, ಬರುತ್ತಿಲ್ಲ."

ಇನ್ನು ಸ್ವಲ್ಪ ಹೊತ್ತಾದ ಮೇಲೆ ಏನೊ ಒಂದು ಶಬ್ದ ಆದುದನ್ನು ಕೇಳಿ ಅವರು ಮತ್ತೆ ಹೇಳಿದರು: "ಹೋಗಿ ಇನ್ನೊಮ್ಮೆ ನೋಡಿ ಬಾ."

ಮತ್ತೆ ಇನ್ನೊಬ್ಬ ಸ್ವಲ್ಪ ದೂರ ಹೋಗಿ ಅದೇ ನಕಾರಾತ್ಮಕ ಉತ್ತರ ಕೊಟ್ಟ.

ಆಗ ಪರಮಹಂಸರು ನಗುತ್ತ ನಗುತ್ತ ಹೇಳಲಾರಂಭಿಸಿದರು: "ಹೊರಗೆ ಆಗೋ ಎಲೆಗಳ ಮರ್ಮರ ಶಬ್ದ ಕೇಳಿ ರಾಧೆ ಹೇಳುತ್ತಿದ್ದಳು: 'ಬಹುಶಃ ಈಗ ಬರುತ್ತಾ ಇದಾನೆ ನನ್ನ ಪ್ರಾಣನಾಥ!'" ಮತ್ತೆ ಅವರು ಹೇಳಿದರು: "ನೋಡಿ, ಯಾವಾಗ ನೋಡಿದರೂ ಕೇಶವ ಹೀಗೇ ವರ್ತಿಸುತ್ತಿದಾನೆ. ಬರುತ್ತಾನೆ ಬರುತ್ತಾನೆ ಅಂತ ಕಾದರೆ ಬರೋದೇ ಇಲ್ಲ."

ಮುಂಗತ್ತಲೆ ಸಮಯಕ್ಕೆ ಕೇಶವಸೇನ ಅಲ್ಲಿಗೆ ತನ್ನ ಕೆಲವು ಮಂದಿ ಅನುಯಾಯಿಗಳೊಡನೆ ಬಂದು ಪರಮಹಂಸರಿಗೆ ಸಾಷ್ಟಾಂಗಪ್ರಣಾಮ

ಮಾಡಿದ. ಪರಮಹಂಸರೂ ಆತನಿಗೆ ಪ್ರತಿ ಸಾಷ್ಟಾಂಗಪ್ರಣಾಮ ಮಾಡಿದರು.

ಸ್ವಲ್ಪ ಹೊತ್ತಾದನಂತರ ಪರಮಹಂಸರು ಭಾವಾವಿಷ್ಟರಾಗಿ ಹೇಳುತ್ತಿದಾರೆ: "ಇಲ್ಲಿ ನೋಡಿ! ನಾನು ಏನೋ ಒಂದು ದೊಡ್ಡ ಉಪನ್ಯಾಸವನ್ನೇ ಕೊಟ್ಟುಬಿಡುತ್ತೇನೆ ಎಂಬುದಾಗಿ ಈತ ಇಡೀ ಕಲ್ಕತ್ತವನ್ನೇ ಇಲ್ಲಿಗೆ ಕರೆದುಕೊಂಡು ಬಂದಿದಾನೆ. ನನ್ನ ಕೈಯಲ್ಲಿ ಉಪನ್ಯಾಸ-ಗಿಪನ್ಯಾಸ ಏನೂ ಸಾಧ್ಯವಿಲ್ಲ. ಬೇಕಾದರೆ ನೀನೇ ಮಾಡು. ನನ್ನ ಕೈಯಲ್ಲಿ ಅದೆಲ್ಲ ಸಾಧ್ಯವಿಲ್ಲ."

ಇನ್ನೂ ಭಾವಾವಿಷ್ಟರಾಗೇ ದಿವ್ಯ ನಗುವನ್ನು ನಗುತ್ತ ಹೇಳುತ್ತಿದಾರೆ: "ನಾನು ಉಂಡೂ ತಿಂದೂ ಆನಂದದಿಂದ ಇರುತ್ತೇನೆ. ಉಂಡೂ ತಿಂದೂ ಮಲಗುತ್ತೇನೆ. ನನ್ನ ಕೈಯಲ್ಲಿ ಉಪನ್ಯಾಸ - ಗಿಪನ್ಯಾಸ ಸಾಧ್ಯವಿಲ್ಲ."

ಕೇಶವಸೇನ ಪರಮಹಂಸರ ಅವಸ್ಥೆಯನ್ನು ನೋಡುತ್ತ ನೋಡುತ್ತ ಆತನೂ ಭಾವಾವಿಷ್ಟನಾಗಿಬಿಡುತ್ತಿದಾನೆ. ಈಗ ಆತ ಭಾವಪರವಶನಾಗಿ ಆಗಾಗ ಹೇಳುತ್ತಿದಾನೆ: "ಆಹ! ಆಹ!"

ಪರಮಹಂಸರ ಆ ಅವಸ್ಥೆಯನ್ನು ನೋಡಿ ನನಗೆ ನಾನೆ ಹೇಳಿಕೊಂಡೆ: "ಇದೇನು ಬೂಟಾಟಿಕೆಯದಾಗಿರಬಹುದೆ?" ಈ ವಿಧವಾದ ಅವಸ್ಥೆಯನ್ನು ನಾನು ಹಿಂದೆ ಎಂದೂ ನೋಡಿದವನಲ್ಲ. ಇಂಥವುಗಳಲ್ಲಿ ನನಗೆಂಥ ವಿಶ್ವಾಸವಿದೆ ಎಂಬುದು ನಿನಗೆ ಗೊತ್ತಾದ ವಿಷಯವೆ.

ಪ್ರಕೃತಿಸ್ಥರಾದನಂತರ ಪರಮಹಂಸರು ಕೇಶವಸೇನನಿಗೆ ಹೇಳುತ್ತಿದಾರೆ: "ಒಮ್ಮೆ ನಾನು ನಿಮ್ಮ ದೇವಾಲಯಕ್ಕೆ ಹೋಗಿದ್ದೆ. ಉಪಾಸನೆ ಸಮಯದಲ್ಲಿ ನೀನು ಹೇಳುತ್ತಿದ್ದೆ: 'ಭಕ್ತಿ ನದಿಯಲ್ಲಿ ಮುಳುಗಿ ನೇರವಾಗಿ ಸಚ್ಚಿದಾನಂದ ಸಾಗರವನ್ನು ತಲುಪಿಬಿಡೋಣ.' ಆಗ ನಾನು ಮೇಲಕ್ಕೆ (ಕೇಶವಸೇನನ ಹೆಂಡತಿ ಮತ್ತು ಉಳಿದ ಸ್ತ್ರೀಯರು ಕುಳಿತಿದ್ದ ಗ್ಯಾಲರಿಯ ಕಡೆ) ನೋಡಿ ಭಾವಿಸಿದೆ: 'ಇವರ ಗತಿ?' ಕೇಶವ, ನೋಡಿಲ್ಲಿ. ನೀವು ಗೃಹಸ್ಥರು. ಒಮ್ಮೆಗೇ ನೀವು ಸಚ್ಚಿದಾನಂದ ಸಾಗರವನ್ನು ತಲುಪೋ ಬಗೆ ಹೇಗೆ? ನಿಮ್ಮ ಅವಸ್ಥೆ ಬಾಲಕ್ಕೆ ಇಟ್ಟಿಗೆಯನ್ನು ಕಟ್ಟಿರುವ ಮುಂಗುಸಿಯ ಅವಸ್ಥೆಯ ಹಾಗೆ. ಅದಕ್ಕೇನಾದರು ಹೆದರಿಕೆ-ಗಿದರಿಕೆ ಆಯಿತು ಎಂದರೆ ಒಡನೆ ಅದು ಗೋಡೆಯಲ್ಲಿರೋ ತನ್ನ ಗೂಡಿಗೆ ನೆಗೆದು ಕುಳಿತುಕೊಳ್ಳುತ್ತದೆ. ಆದರೆ ಅದಕ್ಕೆ ಅಲ್ಲೇ ಕುಳಿತಿರಲು ಹೇಗೆ ಸಾಧ್ಯವಾದೀತು?

ಬಾಲಕ್ಕೆ ಕಟ್ಟಿರೋ ಇಟ್ಟಿಗೆ ಅದನ್ನು ಕೆಳಕ್ಕೆ ಎಳೆದುಬಿಡುತ್ತದೆ. ಅದು 'ಧಪ್' ಎಂದು ಕೆಳಕ್ಕೆ ಬೀಳುತ್ತದೆ. ನೀವೂ ಸ್ವಲ್ಪ ಧ್ಯಾನ-ಗೀನವನ್ನೇನೊ ಮಾಡಬಲ್ಲಿರಿ. ಆದರೆ ಹೆಂಡತಿಮಕ್ಕಳೆಂಬ ಇಟ್ಟಿಗೆಯ ಭಾರ ನಿಮ್ಮನ್ನು ಕೆಳಕ್ಕೆ ಎಳೆದುಬಿಡುತ್ತದೆ. ನೀವು ಭಕ್ತಿ ನದಿಯಲ್ಲೇನೊ ಮುಳುಗಬಹುದು, ಆದರೆ ಎದ್ದುಬರಬೇಕಾಗುತ್ತದೆ. ನೀವು ಅದರಲ್ಲಿ ಮುಳುಗಿ ಏಳಿ ಮಾಡಲೇಬೇಕಾಗುತ್ತದೆ. ನೀವು ಒಮ್ಮೆಗೇ ಅದರಲ್ಲಿ ಮುಳುಗಿಹೋಗಿಬಿಡೋ ಬಗೆ ಹೇಗೆ?"

ಕೇಶವಸೇನ ಹೇಳಿದ: "ಆದ್ದರಿಂದ ಗೃಹಸ್ಥನಿಗೆ ಎಂದಿಗೂ ಸಾಧ್ಯವಿಲ್ಲವೇನು? ಹಾಗಾದರೆ ಮಹರ್ಷಿ ದೇವೇಂದ್ರನಾಥಠಾಕೂರ?"

ಪರಮಹಂಸರು ಎರಡು ಮೂರು ಸಲ ಮೆತ್ತಗೆ, "ದೇವೇಂದ್ರನಾಥ ಠಾಕೂರ— ದೇವೇಂದ್ರ— ದೇವೇಂದ್ರ" ಎಂಬುದಾಗಿ ಹೇಳಿ ಆತನಿಗೆ ಅನೇಕ ಸಲ ಕೈ ಮುಗಿದರು.

ಬಳಿಕ ಅವರು ಹೇಳಿದರು: "ಒಂದು ಕಥೆ ಹೇಳುತ್ತೇನೆ ಕೇಳು. ಒಬ್ಬ ತನ್ನ ಮನೆಯಲ್ಲಿ ದುರ್ಗಾಪೂಜೆಯನ್ನು ಬಹಳ ವಿಜೃಂಭಣೆಯಿಂದ ನಡೆಸುತ್ತಿದ್ದ. ಆಡುಗಳ ಬಲಿ ಸೂರ್ಯೋದಯದಿಂದ ಹಿಡಿದು ಸೂರ್ಯಾಸ್ತದವರೆಗೆ ನಡೆಯುತ್ತಲೇ ಇರುತ್ತಿತ್ತು. ಕೆಲವು ವರ್ಷಗಳಾನಂತರ ಬಲಿ ಅಷ್ಟು ಆಕರ್ಷಣೀಯವಾಗಿ ಏನೂ ನಡೆಯುತ್ತಿರಲಿಲ್ಲ. ಒಬ್ಬ ಆತನನ್ನು ಕೇಳಿದ: 'ಮಹಾಶಯ, ಈಗ ಕೆಲವು ವರ್ಷಗಳಿಂದ ಬಲಿ ನಿಮ್ಮ ಮನೆಯಲ್ಲಿ ಅಷ್ಟು ವೈಭವದಿಂದ ನಡೆಯುತ್ತಿಲ್ಲವಲ್ಲ ಏಕೆ?' ಆತ ಉತ್ತರವಿತ್ತ: 'ಕಾಣುತ್ತಾ ಇಲ್ಲವೇನು ನನ್ನ ಹಲ್ಲು ಬಿದ್ದುಹೋಗಿರೋದು?' ದೇವೇಂದ್ರನಾಥಠಾಕೂರ ಈಗ ಧ್ಯಾನ-ಗೀನಗಳನ್ನೇನೊ ಮಾಡುತ್ತಾ ಇದಾನೆ. ಮುಪ್ಪಾದ ಮೇಲೆ ಮಾಡದೆಯೇನು? ಆದರೆ ಆತ ನಿಜವಾಗಿ ಒಬ್ಬ ವಿಶೇಷ ವ್ಯಕ್ತಿಯೇ.

"ಇಲ್ಲಿ ನೋಡು, ಎಲ್ಲಿಯವರೆಗೆ ಮನುಷ್ಯನಲ್ಲಿ ಮಾಯೆ ಇರುವುದೊ ಅಲ್ಲಿಯವರೆಗೆ ಆತ ಎಳನೀರಿನ ಹಾಗೆ ಇರುತ್ತಾನೆ. ಎಳನೀರಿನ ತಿರುಳನ್ನು ಕೆರೆದುಕೊಳ್ಳಲು ಪ್ರಯತ್ನಿಸಿದರೆ, ಅದರೊಡನೆ ಒಂದು ಸ್ವಲ್ಪ ಕರಟವೂ ಕಚ್ಚಿಕೊಂಡು ಬಂದೇ ಬರುತ್ತದೆ. ಆದರೆ ತೆಂಗಿನ ತರಳಿನಲ್ಲಿ ಗಿಟಕು ಮತ್ತು ಕರಟ ಪ್ರತ್ಯೇಕ ಪ್ರತ್ಯೇಕವಾಗಿಬಿಟ್ಟಿರುತ್ತವೆ. ತರಳನ್ನು ಹಿಡಿದು ಅಳ್ಳಾಡಿಸಿದಾಗ ಗಿಟಕು ಒಳಗೆ 'ಟಕ, ಟಕ' ಅಂತ ಶಬ್ದಮಾಡುವುದನ್ನು

ಕೇಳಬಹುದು. ಮಾಯೆಯಿಂದ ಮುಕ್ತನಾದ ಮನುಷ್ಯ ತೆಂಗಿನ ತರಳಿನ ಹಾಗೆ ಇರುತ್ತಾನೆ. ಆತ್ಮ ಪ್ರತ್ಯೇಕ, ದೇಹ ಪ್ರತ್ಯೇಕ; ಅವೆರಡಕ್ಕೂ ಯಾವ ಸಂಬಂಧವೂ ಇಲ್ಲ ಎಂಬ ಬೋಧೆ ಆತನಿಗಾಗುತ್ತದೆ.

"ಸಕಲ ದುಃಖದುರಿತಗಳಿಗೆಲ್ಲ ಮೂಲ ಈ 'ಅಹಂ' ಎಂಬುದು. ಈ ನೀಚ 'ಅಹಂ' ಮನುಷ್ಯನನ್ನು ಎಂದಿಗೂ ಬಿಟ್ಟು ತೊಲಗದೇನು? ಪಾಳು ಮನೆಗಳಲ್ಲಿ ಅಶ್ವತ್ಥ ವೃಕ್ಷಗಳು ಬೆಳೆಯೋದನ್ನು ನೀನು ನೋಡಿರಬಹುದು. ಈ ದಿನ ಅವನ್ನು ಕತ್ತರಿಸಿ ಹಾಕಿದರೆ ಮಾರನೆ ದಿನವೇ ಅವುಗಳಲ್ಲಿ ಮೊಳಕೆ ಬಂದುಬಿಟ್ಟಿರುತ್ತವೆ. ಈ 'ಅಹಂ' ಕೂಡ ಆ ರೀತಿಯದೆ. ಬೆಳ್ಳುಳ್ಳಿ ಹಾಕಿದ್ದ ಪಾತ್ರೆಯನ್ನು ಹತ್ತಾರು ಸಲ ತೊಳೆದರೂ ಆ ಹಾಳಾದ ವಾಸನೆ ಮಾತ್ರ ಎಂದಿಗೂ ಹೋಗದು."

ಹಾಗೆಯೇ ಏನೇನೊ ಮಾತಾಡುತ್ತ ಮಾತಾಡುತ್ತ ಮತ್ತೆ ಅವರು ಕೇಶವಸೇನನಿಗೆ ಹೇಳಿದರು: "ಒಳ್ಳೆಯದು ಕೇಶವ, ನಿಮ್ಮ ಕಲ್ಕತ್ತದ ಬಾಬುಗಳು ಭಗವಂತನಿಲ್ಲ ಎಂಬುದಾಗಿ ಹೇಳುತ್ತಾರಂತೆ, ನಿಜವೇನು? ನಿಮ್ಮ ಕಲ್ಕತ್ತದ ಬಾಬು ಮೆಟ್ಟಲಸಾಲು ಹತ್ತಲು ಪ್ರಯತ್ನಿಸುತ್ತಾನೆ. ಒಂದು ಹಂತಕ್ಕೆ ಕಾಲಿಟ್ಟು ಇನ್ನೊಂದು ಹಂತಕ್ಕೆ ಕಾಲಿಡುವಷ್ಟರಲ್ಲೇ, 'ಓ, ನನ್ನ ಈ ಭಾಗ! ನನ್ನ ಈ ಭಾಗ!' ಎಂಬುದಾಗಿ ಕೂಗಿಕೊಳ್ಳುತ್ತ ಮೂರ್ಛಿತನಾಗಿಬಿಡುತ್ತಾನೆ. ಆತನ ಬಂಧುಗಳು ಆಕಾಂಕ್ಷಿತರಾಗಿ ಕೂಗಿಕೊಳ್ಳುವರು: 'ಕರೆಯಿರಿ, ಕರೆಯಿರಿ! ಕರೆಯಿರಿ ಡಾಕ್ಟರನ್ನಾ!' ಡಾಕ್ಟರು ಬರುವುದರಲ್ಲೇ ಆತ ಚಟ್ ಆಗಿಹೋಗಿಬಿಟ್ಟಿರುತ್ತಾನೆ. ಇಂಥ ದುರ್ಬಲರು ಭಗವಂತನಿಲ್ಲ ಎಂಬುದಾಗಿ ಹೇಳುವುದು!"

ಬಳಿಕ ಒಂದು ಘಂಟೆ ಕಳೆದನಂತರವೊ ಏನೊ ಕೀರ್ತನೆ ಆರಂಭವಾಯಿತು. ಆಗ ನನ್ನ ಕಣ್ಣಿಗೆ ಏನು ಬಿತ್ತೊ ಅದನ್ನು ಜನ್ಮಜನ್ಮಾಂತರಗಳಲ್ಲೂ ಮರೆಯಲಾರೆ. ಕೇಶವ ಮತ್ತು ಎಲ್ಲರೂ ನರ್ತಿಸಲಾರಂಭಿಸಿದರು. ಪರಮಹಂಸರನ್ನು ಮಧ್ಯದಲ್ಲಿ ಬಿಟ್ಟು ಎಲ್ಲರೂ ಅವರನ್ನು ಸುತ್ತುಗಟ್ಟಿ ನರ್ತಿಸುತ್ತಿದಾರೆ. ನರ್ತಿಸುತ್ತ ನರ್ತಿಸುತ್ತ ಪರಮಹಂಸರು ಇದ್ದಕ್ಕಿದ್ದ ಹಾಗೆ ಸ್ಥಿರವಾಗಿ ನಿಂತುಕೊಂಡುಬಿಟ್ಟರು — ಸಮಾಧಿಸ್ಥರಾಗಿಬಿಟ್ಟರು. ಬಹಳ ಹೊತ್ತು ಹಾಗೇ ನಿಂತಿದ್ದರು. ಅವರ ಮಾತಕತೆಗಳನ್ನೆಲ್ಲಾ ಕೇಳಿ, ಜೊತೆಗೆ ಈ ದೃಶ್ಯಗಳನ್ನೆಲ್ಲಾ ನೋಡಿ ನನಗೆ ನಾನೆ ಹೇಳಿಕೊಂಡೆ: "ಹೌದು, ಇವರು ನಿಜವಾಗಿಯೂ ಪರಮಹಂಸರೆ!"

ಇನ್ನೊಂದು ದಿನ, ಬಹುಶಃ ೧೮೮೩ನೆ ಇಸವಿಯಲ್ಲಿರಬೇಕು, ಶ್ರೀರಾಮಪುರದ ಕೆಲವು ಮಂದಿ ಯುವಕರನ್ನು ಜೊತೆಯಲ್ಲಿ ಕರೆದುಕೊಂಡು ದಕ್ಷಿಣೇಶ್ವರಕ್ಕೆ ಹೋಗಿ ಪರಮಹಂಸರ ದರ್ಶನ ಮಾಡಿದೆ. ಅವರ ಕಡೆ ನೋಡಿ ಪರಮಹಂಸರು ಕೇಳಿದರು: "ಇವರೆಲ್ಲಾ ಏಕೆ ಇಲ್ಲಿಗೆ ಬಂದಿದಾರೆ?"

ನಾನು: "ತಮ್ಮನ್ನು ನೋಡಲು."

ಶ್ರೀರಾಮಕೃಷ್ಣರು: "ನನ್ನಲ್ಲಿ ಏನು ನೋಡೋದಿದೆ? ದೇವಾಲಯ-ಗೀವಾಲಯಗಳ ಕಡೆ ಏಕೆ ಹೋಗಿ ನೋಡಬಾರದು?"

ನಾನು: "ಇವರು ಅವನ್ನು ನೋಡಲು ಬಂದಿಲ್ಲ. ತಮ್ಮನ್ನು ನೋಡೋಕೇ ಬಂದಿದಾರೆ."

ಶ್ರೀರಾಮಕೃಷ್ಣರು: "ಆಹ! ಹಾಗಾದರೆ ಇವರು ಚಕಮುಕಿ ಕಲ್ಲೇ ಆಗಿರಬೇಕು. ಅಂತರ್ಯದಲ್ಲಿ ಬೆಂಕಿ ಇದೆ. ಸಾವಿರ ವರ್ಷ ನೀರಿನಲ್ಲಿ ಹಾಕಿದ್ದು ಅದನ್ನು ತೆಗೆದು ಕುಟುಕಿದೆ ಎಂದರೆ ಬೆಂಕಿ ಕಿಡಿ ಹೊರಡುತ್ತದೆ. ಇವರು ಬಹುಶಃ ಆ ವಿಧದ ಗುಂಪಿಗೆ ಸೇರಿದವರಾಗಿರಬೇಕು. ನನ್ನನ್ನು ಕುಟುಕಿದರೆಲ್ಲಿ ಬೆಂಕಿ ಹೊರಕ್ಕೆ ಬರುತ್ತದೆ!"

ಅವರ ಕೊನೆಯ ಮಾತನ್ನು ಕೇಳಿ ನಾವೆಲ್ಲರೂ ನಕ್ಕೆವು. ಅಂದು ಅವರು ಇನ್ನೂ ಏನೇನು ಹೇಳಿದರು ಎಂಬುದು ಜ್ಞಾಪಕದಲ್ಲಿ ಇಲ್ಲ. ಅಂದು ಕಾಮಕಾಂಚನ ತ್ಯಾಗದ ಸಂಬಂಧವಾಗಿಯೂ ಮತ್ತು ಈ "ಅಹಂ" ಎಂಬುದರ ಗಂಧ ಏನು ಮಾಡಿದರೂ ಹೋಗದು ಎಂಬುದರ ವಿಷಯವಾಗಿಯೂ ಮಾತಾಡಿರಬೇಕು.

ಇನ್ನೊಂದು ದಿನ ಅಲ್ಲಿಗೆ ಹೋಗಿ ಅವರನ್ನು ಕಂಡೆ. ಪ್ರಣಾಮ ಮಾಡಿ ಕುಳಿತುಕೊಳ್ಳುವುದೆ ತಡ ಹೇಳಿದರು: "ನೋಡು, ಕಾರ್ಕು ತೆಗೆದೊಡನೆಯೆ 'ಫುಸ್, ಫುಸ್' ಅಂತ ಮೇಲೇಳುವ ಮತ್ತು ಸ್ವಲ್ಪ ಸಿಹಿಯಾಗಿಯೂ ಸ್ವಲ್ಪ ಹುಳಿಯಾಗಿಯೂ ಇರುವ ಒಂದು ವಸ್ತು ಇದೆಯಲ್ಲ ಅದನ್ನು ನನಗೆ ತಂದುಕೊಡುವೆಯಾ?"

ನಾನು: "ಲೆಮೊನೇಡ್ ಏನು?"

ಶ್ರೀರಾಮಕೃಷ್ಣರು: "ಏಕೆ ಒಂದನ್ನು ತರಬಾರದು?"

ನಾನು ಅದನ್ನು ಅವರಿಗೆ ತಂದುಕೊಟ್ಟೆ ಎಂಬುದಾಗಿ ಜ್ಞಾಪಕ

ದಲ್ಲಿದೆ. ಅಂದು ಅಲ್ಲಿ ಬೇರೆ ಯಾರೂ ಇರಲಿಲ್ಲ. ಅವರಿಗೆ ಕೆಲವು ಪ್ರಶ್ನೆಗಳನ್ನು ಹಾಕಿದೆ.

ನಾನು: "ನಿಮಗೆ ಜಾತಿ-ಗೀತಿ ಭೇದ ಇರುವುದೆ?"

ಶ್ರೀರಾಮಕೃಷ್ಣರು: "ಇನ್ನೆಲ್ಲಿದೆ? ಕೇಶವಸೇನನ ಮನೆ ಪಲ್ಯ ತಿಂದುಬಿಟ್ಟಿದೇನೆ. ಒಮ್ಮೆ ಏನು ನಡೆಯಿತು ಎಂಬುದನ್ನು ತಿಳಿಸುತ್ತೇನೆ. ಒಮ್ಮೆ ಉದ್ದನಾದ ಗಡ್ಡವಿರೋ ಒಬ್ಬ[1] 'ಐಸ್' ಅನ್ನು ಹೊತ್ತುಕೊಂಡು ಬಂದ, ಆದರೆ ಏಕೊ ಆತನಿಂದ ಕೊಂಡು ತಿನ್ನಲು ಇಚ್ಛೆ ಆಗಲಿಲ್ಲ. ಸ್ವಲ್ಪಹೊತ್ತಾದನಂತರ ಆತನ ಹತ್ತಿರದಿಂದಲೇ ಒಬ್ಬ 'ಐಸ್' ಅನ್ನು ಕೊಂಡುಕೊಂಡು ಬಂದ. ಅದನ್ನು ಬಹಳ ಆನಂದದಿಂದ ಚೀಪಿ ಚೀಪಿ ತಿಂದುಬಿಟ್ಟೆ. ನೋಡು, ಜಾತಿಭೇದ ತಾನಾಗಿಯೇ ಹೊರಟುಹೋಗುತ್ತದೆ. ತೆಂಗಿನ ಮರ, ತಾಳೆ ಮರ, ಇವು ಬೆಳೆದ ಹಾಗೆಲ್ಲಾ ಅವುಗಳ ಒಣಗಿದ ಮಟ್ಟೆಗಳು ತಾವಾಗೇ ಕಳಚಿ ಬಿದ್ದುಹೋಗುತ್ತವೆ. ಜಾತಿಭೇದವೂ ಅದೇ ರೀತಿಯಾಗಿ ತಾನಾಗೇ ಬಿಟ್ಟು ತೊಲಗಿಹೋಗುತ್ತದೆ. ಆ ತಿಳಿಗೇಡಿಗಳು (ಬ್ರಾಹ್ಮಸಮಾಜದವರು) ಮಾಡೋ ಹಾಗೆ ಬಲಾತ್ಕಾರದಿಂದ ತೆಗೆಯಲು ಹೋಗಬೇಡ."

ನಾನು: "ಕೇಶವಬಾಬು ಎಂಥವನು?"

ಶ್ರೀರಾಮಕೃಷ್ಣರು: "ಆತ ಒಬ್ಬ ಸಂತ."

ನಾನು: "ತ್ರೈಲೋಕ್ಯಬಾಬು?"

ಶ್ರೀರಾಮಕೃಷ್ಣರು: "ಬಹಳ ಒಳ್ಳೆ ಮನುಷ್ಯ. ದೊಡ್ಡ ಸಂಗೀತ ವಿದ್ವಾನ್."

ನಾನು: "ಶಿವನಾಥಬಾಬು?"

ಶ್ರೀರಾಮಕೃಷ್ಣರು: "... ಒಳ್ಳೆ ಮನುಷ್ಯನೆ, ಆದರೆ ಬಹಳವಾಗಿ ವಾದಿಸುತ್ತಾನೆ."

ನಾನು: "ಹಿಂದೂಗಳಿಗೂ ಬ್ರಾಹ್ಮೋಗಳಿಗೂ ಇರೋ ವ್ಯತ್ಯಾಸವೇನು?"

ಶ್ರೀರಾಮಕೃಷ್ಣರು: "ಇನ್ನೇನು ವ್ಯತ್ಯಾಸ? ನೋಡು, ಇಲ್ಲಿ ನಾಗಸ್ವರವನ್ನು ಊದುತ್ತಾರೆ. ಒಬ್ಬ ವಾದ್ಯಗಾರ ಕೇವಲ 'ಪ್ಲೋ' ಎಂಬ ಸ್ವರವನ್ನು ಹೊರಡಿಸುತ್ತಾನೆ, ಇನ್ನೊಬ್ಬ ವಿವಿಧ ರಾಗರಾಗಿಣಿ

1. ಮಹಮ್ಮದೀಯ ಅಂತ ಪರಮಹಂಸರು ಸೂಚಿಸಿರಬೇಕು.

ಗಳನ್ನು ಹೊರಡಿಸುತ್ತಾನೆ. ಬ್ರಾಹ್ಮೋಗಳು ಕೇವಲ 'ಪ್ಲೋ' ಎಂಬ ರಾಗವನ್ನು, ನಿರಾಕಾರ ರಾಗವನ್ನು ಹೊರಡಿಸುತ್ತಾರೆ. ಹಿಂದೂಗಳು ವಿವಿಧ ರಾಗರಾಗಿಣಿಗಳನ್ನು ಹೊರಡಿಸುತ್ತಾರೆ; ಎಂದರೆ ಭಗವಂತನನ್ನು ವಿವಿಧ ರೀತಿಯಲ್ಲಿ ಪೂಜಿಸಿ ಆನಂದಪಡುತ್ತಾರೆ.

"ನಿರಾಕಾರ ಸಾಕಾರವನ್ನು, ನೀರು ನೀರ್ಗಲ್ಲಿಗೆ ಹೋಲಿಸಬಹುದು. ಯಾವುದು ನೀರೊ ಅದೇ ಶೈತ್ಯದಿಂದ ನೀರ್ಗಲ್ಲಾಗುತ್ತದೆ. ಜ್ಞಾನದ ಕಾವಿನಿಂದ ನೀರ್ಗಲ್ಲು ನೀರಾಗುತ್ತದೆ. ಭಕ್ತಿಯ ಶೈತ್ಯದಿಂದ ನೀರು ನೀರ್ಗಲ್ಲಾಗುತ್ತದೆ.

"ಇರುವುದು ಒಂದೇ ವಸ್ತು. ವಿವಿಧ ಜನರು ಅದಕ್ಕೆ ವಿವಿಧ ಹೆಸರನ್ನು ಕೊಡುತ್ತಾರೆ. ಉದಾಹರಣೆಗೆ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಘಟ್ಟಗಳಿರೋ ಕೊಳವನ್ನು ತೆಗೆದುಕೊ. ಒಂದನೆ ಘಟ್ಟದಲ್ಲಿ ನೀರು ತೆಗೆದು ಕೊಳ್ಳುವವರು ಅದಕ್ಕೆ 'ಜಲ' ಎಂಬುದಾಗಿಯೂ, ಎರಡನೆ ಘಟ್ಟದಲ್ಲಿ ತೆಗೆದುಕೊಳ್ಳುವವರು ಅದಕ್ಕೆ 'ಪಾನಿ' ಎಂಬುದಾಗಿಯೂ, ಮೂರನೆ ಘಟ್ಟದಲ್ಲಿ ತೆಗೆದುಕೊಳ್ಳುವವರು ಅದಕ್ಕೆ 'ವಾಟರ್' ಎಂಬುದಾಗಿಯೂ ನಾಲ್ಕನೆ ಘಟ್ಟದಲ್ಲಿ ತೆಗೆದುಕೊಳ್ಳುವವರು ಅದಕ್ಕೆ 'ಆಕ್ವಾ' ಎಂಬು ದಾಗಿಯೂ ಕರೆಯುತ್ತಾರೆ. ಆದರೆ ಅವರೆಲ್ಲರೂ ತೆಗೆದುಕೊಂಡು ಹೋಗುತ್ತಿರೋದು ಒಂದೇ ವಸ್ತುವನ್ನ—ನೀರನ್ನ."

ನಾನು ಪರಮಹಂಸರಿಗೆ ಹೇಳಿದೆ, ನಾನು ಬರಿಸಾಲಿನ ಅಚಲಾನಂದತೀರ್ಥ ಅವಧೂತನನ್ನು ನೋಡಿದೆ ಎಂಬುದಾಗಿ.

ಶ್ರೀರಾಮಕೃಷ್ಣರು: "ಕೋತರಂಗದ ರಾಮಕುಮಾರನನ್ನೇನು?"

ನಾನು: "ಹೌದು."

ಶ್ರೀರಾಮಕೃಷ್ಣರು: "ಆತ ನಿನಗೆ ಹೇಗೆ ಕಂಡ?"

ನಾನು: "ಆತ ಬಹಳ ಒಳ್ಳೆಯವ."

ಶ್ರೀರಾಮಕೃಷ್ಣರು: "ಒಳ್ಳೆಯದು. ನಮ್ಮಿಬ್ಬರಲ್ಲಿ ನಿನಗೆ ಯಾರನ್ನು ಕಂಡರೆ ಇಷ್ಟ? ನನ್ನನ್ನು ಕಂಡರೋ ಅವನನ್ನು ಕಂಡರೊ?"

ನಾನು: "ಆತನೊಡನೆ ನಿಮ್ಮನ್ನು ಹೋಲಿಸಲಾಗುವುದೆ? ಆತ ಪಂಡಿತ, ವಿದ್ಯಾವಂತ; ನೀವೂ ಅಂಥವರೇನು?"

ನನ್ನ ಉತ್ತರ ಕೇಳಿ ಪರಮಹಂಸರು ಸ್ವಲ್ಪ ದಿಗ್ಭ್ರಮೆ ಹಿಡಿದಂತವ ರಾಗಿ ಸುಮ್ಮನೆ ಕುಳಿತುಕೊಂಡರು. ಸ್ವಲ್ಪ ಹೊತ್ತಾದನಂತರ ನಾನು

ಹೇಳಿದೆ: "ಆತನೇನೊ ಪಂಡಿತ, ಆದರೆ ನೀವು ವಿನೋದಭರಿತರು! ನಿಮ್ಮೊಡನೆ ಬಹಳವಾಗಿ ಆನಂದಪಡಬಹುದು."

ಇದನ್ನು ಕೇಳಿ ಪರಮಹಂಸರು ನಗುತ್ತ ಹೇಳಿದರು: "ಸರಿ! ಸರಿ! ನೀನು ಹೇಳುವುದು ಸರಿ!"

ಅವರು ನನ್ನನ್ನು ಕೇಳಿದರು: "ನನ್ನ ಪಂಚವಟಿ ನೋಡಿದೀಯಾ?"

ನಾನು: "ಹೌದು, ನೋಡಿದೇನೆ."

ಅದರ ಕೆಳಗೆ ಏನೇನು ಸಾಧನೆಗಳನ್ನು ಮಾಡಿದ್ದರೊ ಅದರ ಸಂಬಂಧವಾಗಿ ಸ್ವಲ್ಪ ಹೊತ್ತು ಹೇಳಿದರು. ತೋತಾಪುರಿಯ ಸಂಬಂಧ ವಾಗಿಯೂ ಸ್ವಲ್ಪ ತಿಳಿಸಿದರು.

ಬಳಿಕ ನಾನು ಕೇಳಿದೆ: "ಭಗವಂತನ ಸಾಕ್ಷಾತ್ಕಾರವನ್ನು ಪಡೆದು ಕೊಳ್ಳೋ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ನೋಡು, ಚುಂಬಕ ಕಬ್ಬಿಣವನ್ನು ಆಕರ್ಷಿಸೋ ರೀತಿಯಲ್ಲಿ ಆತ ನಮ್ಮನ್ನು ಸತತ ಆಕರ್ಷಿಸುತ್ತಿದಾನೆ. ಆದರೆ ಕಬ್ಬಿಣ ಕೊಳೆಯಿಂದ ತುಂಬಿಕೊಂಡಿದ್ದರೆ ಅದು ಹೋಗಿ ಚುಂಬಕ ವನ್ನು ಮುಟ್ಟಲಾಗೋದಿಲ್ಲ. ಅದರ ಕೊಳೆಯನ್ನು ತೊಳೆದೊಡನೆಯೆ ಅದು ಥಟ್ಟನೆ ಹೋಗಿ ಚುಂಬಕವನ್ನು ಮುಟ್ಟಬಿಡುತ್ತದೆ. ಭಗವಂತನಿಗಾಗಿ ಅಳು. ಅದು ನಿನ್ನ ಮನಸ್ಸಿನ ಕೊಳೆಯನ್ನು ತೊಳೆದುಬಿಡುತ್ತದೆ."

ಅವರ ಈ ಮಾತುಗಳನ್ನು ನಾನು ಗುರುತುಮಾಡಿಕೊಳ್ಳುತ್ತಿದ್ದಾಗ ಅವರು ಹೇಳಿದರು: "ಇಲ್ಲಿ ನೋಡು. ಬಂಗಿ ಸೊಪ್ಪು, ಬಂಗಿ ಸೊಪ್ಪು ಅಂತ ಕೇವಲ ಬಾಯಲ್ಲಿ ಮಾತ್ರ ಹೇಳುತ್ತಿದ್ದರೆ ಅದು ನಮಗೆ ಮತ್ತನ್ನು ಹತ್ತಿಸದು. ಅದನ್ನು ಸ್ವಲ್ಪ ತೆಗೆದುಕೊಂಡು ಬಂದು ನೀರು ಹಾಕಿ ಅರೆದು ಕುಡಿಯಬೇಕು. . . ."

ಬಳಿಕ ಹೇಳಿದರು: "ನೀವು ಸಂಸಾರದಲ್ಲಿರಬೇಕಾಗಿದೆ. ಆದ್ದರಿಂದ ಭಗವಂತನ ಸಂಬಂಧವಾಗಿ ನಿಮಗೆ ಸಾಮಾನ್ಯವಾದ ನೆಶಾ ಹತ್ತೋಹಾಗೆ ಮಾಡಿಕೊಳ್ಳಿ. ನೀವು ನಿಮ್ಮ ಕೆಲಸಕಾರ್ಯಗಳನ್ನು ಮಾಡುತ್ತಿದ್ದರೂ ಆ ನೆಶಾ ಮಾತ್ರ ನಿಮಗೆ ಹತ್ತಿಕೊಂಡೇ ಇರಲಿ. ಆದರೆ ನಿಮಗೆ ಶುಕ ದೇವನ ಹಾಗೆ ಬತ್ತಲೆ–ಗಿತ್ತಲೆಯಾಗಿ ಒಂದು ಕಡೆ ಬಾಹ್ಯಜ್ಞಾನಶೂನ್ಯ ರಾಗಿ ಬಿದ್ದುಕೊಂಡಿರುವಷ್ಟು ಭಗವದ್ಭಾವನೆಯಿಂದ ಮತ್ತರಾಗಿರಲು ಸಾಧ್ಯವೇ ಇಲ್ಲ. ನೀವು ಈ ಸಂಸಾರದಲ್ಲಿ ಇರಬೇಕಾಗೋವರೆಗೆ

ಭಗವಂತನಿಗೆ ನಿಮ್ಮ ವಕಾಲತ್ತನ್ನು ವಹಿಸಿಬಿಡಿ. ನಿಮ್ಮ ಭಾರವನ್ನೆಲ್ಲ ಆತನ ಮೇಲೆ ಹಾಕಿಬಿಡಿ; ಆತ ಏನು ಬೇಕಾದರೂ ಮಾಡಿಕೊಳ್ಳಲಿ. ಶ್ರೀಮಂತನ ಮನೆ ದಾಸಿಯೋಪಾದಿಯಲ್ಲಿ ನೀವು ಸಂಸಾರದಲ್ಲಿರಬೇಕು. ಆಕೆ ತನ್ನ ಯಜಮಾನನ ಮಕ್ಕಳು ಮರಿಗಳಿಗೆ ಸ್ನಾನಮಾಡಿಸುವುದೇನು, ಬಟ್ಟೆಬರೆಗಳನ್ನು ಹಾಕುವುದೇನು, ಊಟಕ್ಕೆ ಹಾಕುವುದೇನು, ಇವೇ ಮೊದಲಾದ ವಿಧದಿಂದ ಅವು ತನ್ನ ಮಕ್ಕಳೇ ಎಂಬುದಾಗಿ ಅವನ್ನು ಸಾಕಿ ಸಲಹುತ್ತಾಳೆ. ಆದರೆ ಆಕೆಗೆ ಚೆನ್ನಾಗಿ ಗೊತ್ತಿದೆ ಅವೊಂದೂ ತನ್ನವಲ್ಲವೆಂಬುದು. ಆಕೆಯನ್ನು ಕೆಲಸದಿಂದ ತೆಗೆದುಹಾಕಿದೊಡನೆಯೆ ಆಕೆಗೂ ಆ ಮಕ್ಕಳಿಗೂ ಯಾವ ಸಂಪರ್ಕವೂ ಇರದು.

"ಹಲಸಿನ ಹಣ್ಣನ್ನು ಬಿಡಿಸುವ ಮುನ್ನ ಕೈಗೆ ಎಣ್ಣೆ ಸವರಿಕೊಳ್ಳಬೇಕು. ಅದೇ ರೀತಿಯಾಗಿ ಮೊದಲು ಭಕ್ತಿ ಎಂಬ ಎಣ್ಣೆಯನ್ನು ಮೈಗೆ ಹಚ್ಚಿಕೊಂಡುಬಿಡಿ; ಬಳಿಕ ಸಂಸಾರ ನಿಮಗೆ ಅಂಟಿಕೊಳ್ಳದು. ನೀವು ಅದರಿಂದ ಲಿಪ್ತರಾಗೋದಿಲ್ಲ."

ಅದುವರೆಗೂ ಪರಮಹಂಸರು ನೆಲದಮೇಲೆ ಕುಳಿತಿದ್ದರು. ಬಳಿಕ ಎದ್ದುಹೋಗಿ ತಮ್ಮ ಮಂಚದ ಮೇಲೆ ಮಲಗಿಕೊಂಡರು.

ಅವರು ನನಗೆ ಹೇಳಿದರು: "ಸ್ವಲ್ಪ ನನಗೆ ಗಾಳಿ ಬೀಸು."

ನಾನು ಅವರಿಗೆ ಗಾಳಿ ಬೀಸಲು ಆರಂಭಿಸಿದೆ. ಅವರು ಸುಮ್ಮನೆ ಮಲಗಿಕೊಂಡಿದ್ದರು.

ಸ್ವಲ್ಪ ಹೊತ್ತಾದನಂತರ ಅವರು ಹೇಳಿದರು: "ಬಹಳ ಸೆಕೆ. ಬೀಸಣಿಗೆಯನ್ನು ಏಕೆ ನೀರಿನಲ್ಲಿ ಅದ್ದಿ ತರಬಾರದು?"

ನಾನು: "ಓಹೋ! ನಿಮಗೂ ಷೋಕಿ-ಗೀಕಿ ಎಲ್ಲಾ ಇದೆ!" ಪರಮಹಂಸರು ನಕ್ಕು ಮಾತನ್ನು ಎಳೆದು ಹೇಳಿದರು: "ಏಕೆ—ಇರ—ಬಾರದು?" ಅದಕ್ಕೆ ನಾನು ಹೇಳಿದೆ: "ಬಹಳ ಒಳ್ಳೆಯದು! ಇರಲಿ, ಇರಲಿ, ತುಂಬಿರಲಿ!" ಅಂದು ನಾನು ಅವರೊಡನೆ ಬೆರತು ಎಷ್ಟು ಆನಂದ ಪಟ್ಟೆ ಎಂಬುದನ್ನು ಬಾಯಿಂದ ವರ್ಣನೆ ಮಾಡಲಾಗೋದಿಲ್ಲ.

ಕೊನೆಯ ಸಲ ನಾನು ಅವರನ್ನು ದರ್ಶನ ಮಾಡಿದ್ದು—ನೀನು ಆಗಲೆ ನಿನ್ನ ಪುಸ್ತಕದ ಮೂರನೆ ಭಾಗದಲ್ಲಿ[1] ಬರೆದಿದೀಯೆ—ಆಗತಾನೆ ಡಿಗ್ರಿ ಪಡೆದಿದ್ದ ನಮ್ಮ ಸ್ಕೂಲಿನ ಹೆಡ್ಮಾಸ್ಟರೊಡನೆ ಹೋಗಿದ್ದಾಗ. ನೀನು

1. ಇದೇ ಪುಸ್ತಕದ ೪೮೪ನೆ ಪುಟ ನೋಡಿ.

ಆತನನ್ನು ಈಗ ಸ್ವಲ್ಪ ಕಾಲದ ಹಿಂದೆ ನೋಡಿದೀಯೆ. ಆತ ಅವರ ಕಣ್ಣಿಗೆ ಬಿದ್ದೊಡನೇ ಅವರು ಕೇಳಿದರು: "ಈತನೆಲ್ಲಿ ನಿನಗೆ ದೊರಕಿದ? ಬಹಳ ಒಳ್ಳೆಯವ!"

ಮತ್ತೆ ಅವರು ಹೇಳಿದರು: "ನೀನು ಒಬ್ಬ ವಕೀಲ; ಬಹಳ ಬುದ್ಧಿಶಾಲಿ. ನನಗೊಂದು ಸ್ವಲ್ಪ ಬುದ್ಧಿವಂತಿಕೆ ಕೊಡಬಲ್ಲೆಯಾ? ನಿಮ್ಮ ತಂದೆ ಅಂದು ಇಲ್ಲಿಗೆ ಬಂದಿದ್ದ. ಇಲ್ಲಿ ಮೂರು ದಿನ ಇದ್ದ."

ನಾನು: "ಅವರು ನಿಮ್ಮ ಕಣ್ಣಿಗೆ ಹೇಗೆ ಕಂಡರು?"

ಶ್ರೀರಾಮಕೃಷ್ಣರು: "ಒಳ್ಳೆಯವನೆ, ಆದರೆ ಒಮ್ಮೊಮ್ಮೆ ಹುಚ್ಚುಹುಚ್ಚಾಗಿ ಮಾತಾಡುತ್ತಾನೆ."

ನಾನು: "ಮುಂದಿನ ಸಲ ನೀವು ಅವರನ್ನು ನೋಡಿದಾಗ, ದಯವಿಟ್ಟು ಆ ದೋಷದಿಂದ ಅವರು ಮುಕ್ತರಾಗೋ ಹಾಗೆ ಮಾಡಿ."

ಈ ಮಾತನ್ನು ಕೇಳಿ ಪರಮಹಂಸರು ಸ್ವಲ್ಪ ನಕ್ಕರು.

ನಾನು: "ನಮಗೇನಾದರು ಒಂದೆರಡು ಬುದ್ಧಿವಾದದ ಮಾತು ಹೇಳಿ."

ಶ್ರೀರಾಮಕೃಷ್ಣರು: "ನಿನಗೆ ಹೃದೆ ಗೊತ್ತೆ?"

ನಾನು: "ನಿಮ್ಮ ಅಕ್ಕನ ಮಗ ತಾನೆ? ಆತನ ಹೆಸರು ಕೇಳಿದೇನೆ."

ಶ್ರೀರಾಮಕೃಷ್ಣರು: "ಹೃದೆ ನನಗೆ ಹೇಳುತ್ತಿದ್ದ: 'ಮಾವ, ನಿಮ್ಮ ಉಪದೇಶಗಳ ಉಗ್ರಾಣವನ್ನು ಒಮ್ಮೆಗೇ ಬರಿದುಮಾಡಿಕೊಂಡು ಬಿಡಬೇಡಿ. ಹೇಳಿದ್ದನ್ನೇ ಮತ್ತೆ ಮತ್ತೆ ಏಕೆ ಹೇಳುತ್ತಿದೀರಿ?' ನಾನು ಹೇಳುತ್ತಿದ್ದೆ: 'ಏ ತಿಳಿಗೇಡಿ, ಅದಕ್ಕೇಕೆ ನಿನಗೆ ತಲೆನೋವು? ಇವೆಲ್ಲ ನನ್ನ ಮಾತು. ಬೇಕಾದರೆ ಒಂದು ಲಕ್ಷ ಸಲ ಆವೃತ್ತಿಮಾಡುತ್ತೇನೆ. ನೀನು ಬಾಯಿ ಮುಚ್ಚಿ ಸುಮ್ಮನೆ ಕುಳಿತಿರು!'"

ನಾನು ನಗುತ್ತ ನಗುತ್ತ: "ಹಾಗಲ್ಲದೆ ಮತ್ತೇನು?"

ಸ್ವಲ್ಪ ಹೊತ್ತಾದ ಮೇಲೆ ಹಾಸಿಗೆ ಮೇಲೆ ಎದ್ದು ಕುಳಿತು "ಓಂ, ಓಂ" ಅಂತ ಹೇಳುತ್ತಿದ್ದು ಬಳಿಕ ಹಾಡಲು ಆರಂಭಿಸಿದರು:

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ
ಮುಳುಗು ಮುಳುಗು ಒಳಗೇ....

ಅವರು ಈ ಹಾಡಿನ ಒಂದೆರಡು ಚರಣಗಳನ್ನು ಹಾಡುವುದರಲ್ಲೇ ಆನಂದಸಾಗರದ ಆಳಕ್ಕೆ ತಾವೇ ಮುಳುಗಿ ಸಮಾಧಿಸ್ಥರಾಗಿಬಿಟ್ಟರು.

ಪ್ರಕೃತಿಸ್ಥರಾದನಂತರ ಅವರು ತಮ್ಮ ಕೊಠಡಿಯಲ್ಲಿ ಶತಪಥ ತಿರುಗಾಡಲಾರಂಭಿಸಿದರು. ತಾವು ಉಟ್ಟಿದ್ದ ಪಂಚೆಯನ್ನು ಸೊಂಟದ ಮೇಲಿನವರೆಗೂ ಎರಡು ಕೈಗಳಿಂದಲೂ ಎಳೆದುಕೊಂಡರು. ಅದರ ಒಂದು ಕೊನೆ ನೆಲ ಸಾರಿಸಲಾರಂಭಿಸಿತು, ಇನ್ನೊಂದು ಕೊನೆ ಇಳಿಬೀಳಲಾರಂಭಿಸಿತು.

ನಾನು ನನ್ನೊಡನೆ ಬಂದಿದ್ದವನನ್ನು ಮೆತ್ತಗೆ ಮೊಳಕೈಯಿಂದ ಗುದ್ದಿ ಪಿಸುಗುಟ್ಟಿದೆ: "ನೋಡು, ಪಂಚೆಯನ್ನು ಎಷ್ಟು ಚೆನ್ನಾಗಿ ಉಟ್ಟುಕೊಂಡಿದಾರೆ!"

ಇನ್ನೊಂದು ಕ್ಷಣದನಂತರ, "ಹೋಗು, ಹಾಳಾದ ಪಂಚೆಯೆ!" ಎಂಬುದಾಗಿ ಹೇಳಿ ಅದನ್ನು ತೆಗೆದು ಬಿಸಾಡೇ ಬಿಟ್ಟರು.

ಬಳಿಕ ದಿಗಂಬರರಾಗೇ ಕೊಠಡಿಯಲ್ಲಿ ತಿರುಗಾಡಲಾರಂಭಿಸಿದರು. ಕೊಠಡಿಯ ಉತ್ತರ ದಿಕ್ಕಿನ ಕೊನೆಯಲ್ಲಿದ್ದ ಕೋಲು ಮತ್ತು ಛತ್ರಿಯನ್ನು ತೆಗೆದುಕೊಂಡುಬಂದು ಕೇಳಿದರು: "ಇವು ನಿಮ್ಮವೆ?"

ನಾನು "ಅಲ್ಲ" ಎಂದು ಹೇಳುವುದೇ ತಡ, ಅವರು ಹೇಳಿದರು: "ಇವು ನಿಮ್ಮವಲ್ಲ ಎಂಬುದಾಗಿ ಮೊದಲೇ ಗೊತ್ತಾಗಿಬಿಟ್ಟಿತು. ಮನುಷ್ಯನ ಛತ್ರಿ, ಕೋಲು ನೋಡಿದೊಡನೆಯೆ ಆತನ ಸ್ವಭಾವ ಏನು ಎಂಬುದನ್ನು ಅರಿತುಕೊಂಡುಬಿಡಬಲ್ಲೆ. ಈಗ ಇಲ್ಲಿ ಸ್ವಲ್ಪ ಹೊತ್ತಿನ ಹಿಂದೆ ಕುಳಿತು ನಾನು ಹೇಳಿದ್ದನ್ನೆಲ್ಲಾ ಒಂದು ಸ್ವಲ್ಪವೂ ಅರ್ಥಮಾಡಿಕೊಳ್ಳದೆ 'ಗೊಳಕ್, ಗೊಳಕ್' ಅಂತ ನುಂಗುತ್ತಿದ್ದನಲ್ಲ ಆತನದೆ ಖಂಡಿತವಾಗಿ ಆಗಿರಬೇಕು."

ಸ್ವಲ್ಪ ಹೊತ್ತಾದನಂತರ ದಿಗಂಬರರಾಗೇ ಅವರು ಮಂಚದ ಉತ್ತರದ ಅಂಚಿನಲ್ಲಿ ಪಶ್ಚಿಮಾಭಿಮುಖರಾಗಿ ಕುಳಿತು ಕೇಳಿದರು: "ಒಳ್ಳೆಯದು, ನಾನೊಬ್ಬ ಅಸಭ್ಯನೆ?"

ನಾನು: "ಇಲ್ಲ, ನೀವು ನಿಜವಾಗಿಯೂ ಸಭ್ಯರೇ. ಈಗ ಏಕೆ ಈ ಪ್ರಶ್ನೆ?"

ಶ್ರೀರಾಮಕೃಷ್ಣರು: "ನೋಡು ಶಿವನಾಥನೇ ಮೊದಲಾದವರು ನನ್ನನ್ನು ಒಬ್ಬ ಸಭ್ಯ ಅಂತ ಪರಿಗಣಿಸುತ್ತಿಲ್ಲ. ಅವರು ಇಲ್ಲಿಗೆ ಬಂದಾಗ

ನಾನು ಒಂದು ಪಂಚೆ-ಗಿಂಚೆಯನ್ನು ಸೊಂಟಕ್ಕೆ ಸುತ್ತಿಕೊಳ್ಳಬೇಕಾಗುತ್ತದೆ. ನಿನಗೆ ಗಿರೀಶಘೋಷ ಗೊತ್ತೆ?"

ನಾನು: "ಯಾವ ಗಿರೀಶಘೋಷ? ಥಿಯೇಟರ್ ನಡೆಸುತ್ತಾನಲ್ಲ ಅವನೇನು?"

ಶ್ರೀರಾಮಕೃಷ್ಣರು: "ಹೌದು."

ನಾನು: "ಆತನನ್ನು ನಾನು ನೋಡಿಲ್ಲ. ಪ್ರಸಿದ್ಧವಾದ ಆತನ ಹೆಸರನ್ನು ಕೇಳಿದೇನೆ."

ಶ್ರೀರಾಮಕೃಷ್ಣರು: "ಆತ ಬಹಳ ಒಳ್ಳೆಯವ."

ನಾನು: "ಆತ ಮದ್ಯ ಸೇವನೆ ಮಾಡುತ್ತಾನಂತಲ್ಲ?"

ಶ್ರೀರಾಮಕೃಷ್ಣರು: "ಸೇವಿಸಲಿ! ಸೇವಿಸಲಿ! ನೋಡೋಣ ಇನ್ನೆಷ್ಟು ದಿನ ಸೇವಿಸುತ್ತಾನೆ? ನಿನಗೆ ನರೇಂದ್ರ ಗೊತ್ತೆ?"

ನಾನು: "ಇಲ್ಲ."

ಶ್ರೀರಾಮಕೃಷ್ಣರು: "ನೀನು ಆತನೊಡನೆ ಮಾತುಕತೆ ಆಡಬೇಕೆಂದು ನನಗೆ ಬಹಳ ಇಚ್ಛೆ ಇದೆ. ಆತ ಬಿ.ಎ. ಪಾಸುಮಾಡಿದಾನೆ. ವಿವಾಹವಾಗಿಲ್ಲ."

ನಾನು: "ಆಗಲಿ. ಆತನನ್ನು ಸಂಧಿಸುತ್ತೇನೆ."

ಶ್ರೀರಾಮಕೃಷ್ಣರು: "ಇಂದು ರಾಮನ ಮನೆಯಲ್ಲಿ ಕೀರ್ತನೆ ನಡೆಯುತ್ತದೆ. ನೀನು ಅಲ್ಲಿ ಆತನನ್ನು ನೋಡಬಹುದು. ಸಾಯಂಕಾಲ ಅಲ್ಲಿಗೆ ದಯವಿಟ್ಟುಹೋಗು."

ನಾನು: "ಆಗಲಿ."

ಶ್ರೀರಾಮಕೃಷ್ಣರು: "ಹಾಗೆ ಮಾಡು. ಖಂಡಿತ ಮರೆಯಬೇಡ."

ನಾನು: "ನಿಮ್ಮಿಂದ ಈ ಹುಕುಮ್ ಆದಮೇಲೆ ನಾನು ಹೋಗದೆ ಇರುತ್ತೇನೆಯೆ? ಖಂಡಿತ ಹೋಗುತ್ತೇನೆ."

ಕೊಠಡಿಯಲ್ಲಿದ್ದ ಪಟಗಳನ್ನೆಲ್ಲಾ ತೋರಿಸಿ ನನ್ನನ್ನು ಕೇಳಿದರು, ಬುದ್ಧನ ಪಟ ದೊರೆಯುವುದೆ ಎಂಬುದಾಗಿ.

ನಾನು: "ದೊರೆಯುತ್ತದೆ ಎಂಬುದಾಗಿ ಕೇಳಿದೇನೆ."

ಶ್ರೀರಾಮಕೃಷ್ಣರು: "ಹಾಗಾದರೆ ನನಗೊಂದನ್ನು ಕೊಂಡುಕೊಂಡು ಬಾ."

ನಾನು : "ಒಳ್ಳೆಯದು. ಮತ್ತೆ ಇಲ್ಲಿಗೆ ಬರೋವಾಗ ಒಂದನ್ನ ತೆಗೆದುಕೊಂಡುಬರುತ್ತೇನೆ."

ಆದರೆ ಅಯ್ಯೋ! ಮತ್ತೆ ನಾನು ದಕ್ಷಿಣೇಶ್ವರಕ್ಕೆ ಹೋಗಲಾಗಲೇ ಇಲ್ಲ. ಅಂದಿನ ಸಾಯಂಕಾಲ ನರೇಂದ್ರನನ್ನ ಸಂಧಿಸಲು ನಾನು ರಾಮನ ಮನೆಗೆ ಹೋದೆ. ನರೇಂದ್ರನೊಡನೆ ಮಾತುಕತೆ ಆಡಿದೆ. ಅಲ್ಲಿ ಒಂದು ಕೊಠಡಿಯಲ್ಲಿ ಪರಮಹಂಸರು ಒಂದು ಒರಗುದಿಂಬನ್ನ ಒರಗಿಕೊಂಡು ಕುಳಿತಿದ್ದರು. ನರೇಂದ್ರ ಅವರ ಬಲಪಕ್ಕದಲ್ಲಿ ಕುಳಿತುಕೊಂಡ, ನಾನು ಅವರ ಮುಂದುಗಡೆ ಕುಳಿತುಕೊಂಡೆ.

ಪರಮಹಂಸರು ನರೇಂದ್ರನಿಗೆ ಹೇಳಿದರು, ನನ್ನೊಡನೆ ಮಾತುಕತೆ ಆಡುವಂತೆ. ಆದರೆ ನರೇಂದ್ರ ಹೇಳಿದ: "ನನಗೆ ಇಂದು ಭಯಂಕರ ತಲೆನೋವು ಬಂದಿದೆ. ಬಾಯಿ ತೆರೆಯಲೇ ಇಚ್ಛೆಯಾಗುತ್ತಿಲ್ಲ."

ನಾನು: "ಹಾಗಾದರೆ ಬೇಡ. ಇನ್ನೊಂದು ದಿನ ಮಾತುಕತೆ ಆಡೋಣ."

ಮತ್ತೆ ಆತನೊಡನೆ ಮಾತುಕತೆಯಾಡೋ ಸುಯೋಗ ದೊರೆತುದು ೧೮೯೭ ನೆ ಇಸವಿಯ ಮೇ ಅಥವಾ ಜೂನ್ ತಿಂಗಳಲ್ಲಿ ಆಲ್ಮೋರದಲ್ಲಿ. ಪರಮಹಂಸರ ಇಚ್ಛೆ ಪೂರ್ಣವಾಗಲೇ ಬೇಕು. ಅದು ಹನ್ನೆರಡು ವರ್ಷಗಳ ಬಳಿಕ ಪೂರ್ಣಗೊಂಡಿತು. ಆಹ, ಆ ಕೆಲವು ದಿವಸಗಳನ್ನ ನಾನು ಸ್ವಾಮಿ ವಿವೇಕಾನಂದರೊಡನೆ ಎಷ್ಟು ಆನಂದದಿಂದ ಕಳೆದೆ! ಕೆಲವು ವೇಳೆ ಅವರು ಇಳಿದುಕೊಂಡಿದ್ದ ಮನೆಯಲ್ಲಿ, ಇನ್ನು ಕೆಲವು ವೇಳೆ ನಾನು ಇಳಿದುಕೊಂಡಿದ್ದ ಮನೆಯಲ್ಲಿ, ಒಂದು ದಿನ ನಾವಿಬ್ಬರೇ ಬೆಟ್ಟದ ಮೇಲೆ ಆನಂದಪಟ್ಟೆವು. ಬಳಿಕ ಅವರನ್ನು ಸಂಧಿಸೋ ಸುಯೋಗವೇ ದೊರೆಯಲಿಲ್ಲ. ಪರಮಹಂಸರ ಇಚ್ಛೆಯನ್ನು ಪೂರ್ಣಮಾಡಲೇ ಇರಬೇಕು ಅಂತ ಕಾಣುತ್ತೆ ನಾನು ಅವರನ್ನು ಆಲ್ಮೋರದಲ್ಲಿ ಸಂಧಿಸಿದ್ದು.

ನಾನು ಪರಮಹಂಸರನ್ನು ನೋಡಿದ್ದು ಒಂದು ನಾಲ್ಕೈದು ಸಲಕ್ಕಿಂತ ಹೆಚ್ಚೇನಿಲ್ಲ; ಆದರೆ ಆ ಅಲ್ಪ ಕಾಲದೊಳಗೇ ನನಗೂ ಅವರಿಗೂ ಸ್ನೇಹ ಅಷ್ಟೊಂದು ಬೆಳೆದುಬಿಟ್ಟಿತು, ನಾವಿಬ್ಬರೂ ಸಹಪಾಠಿಗಳೇ ಎಂಬುದಾಗಿ ನನಗೆ ತೋರಲಾರಂಭಿಸಿತು. ಅವರೊಡನೆ ನಾನು ಎಷ್ಟು ಸಲಿಗೆಯಿಂದ ಮಾತಾಡುತ್ತಿದ್ದೆ ಏನು ಕತೆ! ಆದರೆ ಅವರಿಂದ ಬೀಳ್ಕೊಂಡು ಹೊರಟೊಡನೆ ಮನಸ್ಸಿಗೆ ಹೊಳೆಯುತ್ತಿತ್ತು: "ಅಬ್ಬಬ್ಬ! ನಾನು ಹೋಗಿದ್ದುದು ಯಾರ

ಹತ್ತಿರಕ್ಕೆ!'' ಆ ಕೆಲವು ಸಂದರ್ಭಗಳಲ್ಲಿ ನಾನು ಏನೇನನ್ನು ನೋಡಿದೆನೊ, ನನಗೇನೇನು ಉಪದೇಶ ದೊರೆಯಿತೊ ಅವೆಲ್ಲಾ ಕೂಡಿ ನನ್ನ ಇಡೀ ಜೀವನವನ್ನೇ ಮಧುಮಯವನ್ನಾಗಿ ಮಾಡಿಬಿಟ್ಟವೆ. ದಿವ್ಯಾಮೃತವನ್ನೇ ವರ್ಷಿಸುತ್ತಿದ್ದ ಅವರ ನಗುವನ್ನು ನಾನು ಹೃದಯಾಂತರಾಳದಲ್ಲಿ ಭದ್ರವಾಗಿ ಬಚ್ಚಿಟ್ಟುಕೊಂಡುಬಿಟ್ಟಿದೇನೆ. ಅದು ನನ್ನಂಥ ದೌರ್ಭಾಗ್ಯನ ಎಂದಿಗೂ ಬರಿದಾಗದ ನಿಧಿಯಾಗಿದೆ. ಆ ನಗುವಿನಿಂದ ವರ್ಷಿಸಲ್ಪಟ್ಟ ಆನಂದದ ಒಂದು ಬಿಂದು ಅಷ್ಟೊಂದು ದೂರದಲ್ಲಿರುವ ಕೋಟ್ಯನುಕೋಟಿ ಅಮೆರಿಕನ್ನರ ಜೀವನವನ್ನು ಮಧುಮಯವನ್ನಾಗಿ ಮಾಡುತ್ತಿದೆ ಎಂಬುದನ್ನು ಭಾವಿಸಿದರೇ ನನ್ನ ಹೃದಯ ಆನಂದದಿಂದ ತುಂಬಿತುಳುಕಾಡುತ್ತಾ ನಲಿದಾಡುತ್ತಿರುತ್ತದೆ. ನನಗೇ ಹೀಗನಿಸುತ್ತಿರುವಾಗ ನೀನೆಂಥ ಸೌಭಾಗ್ಯಶಾಲಿ ಎಂಬುದನ್ನು ನೀನೇ ಊಹಿಸಿಕೊ.



## ಪರಿಶಿಷ್ಟ ೩

## ಸಂಸ್ಕೃತ ಶ್ಲೋಕಗಳ ಸರಳಾನುವಾದ

೧. ಹೇ ದೇವಿ, ನೀನೇ ಸ್ವಾಹಾ, ನೀನೇ ಸ್ವಧಾ, ನೀನೇ ವಷಟ್ಕಾರ; ನೀನೇ ಸ್ವರಾತ್ಮಿಕೆ. ನೀನೇ ಸುಧೆ, ನೀನೇ ಅಕ್ಷರೆ, ನೀನೇ ನಿತ್ಯೆ. ನೀನೇ ಹ್ರಸ್ವ, ದೀರ್ಘ, ಪ್ಲುತ ಎಂಬ ಮೂರು ಮಾತ್ರೆಗಳಲ್ಲಿಯೂ ಮತ್ತು ಉಚ್ಚರಿಸಲಾಗದ ಅರ್ಧಮಾತ್ರೆಯಲ್ಲಿಯೂ ವ್ಯಕ್ತವಾಗಿದೀಯೆ.

ಹೇ ದೇವಿ, ನೀನೇ ಸಾವಿತ್ರಿ, ನೀನೇ ಪರಾ ಜನನಿ. ನಿನ್ನಿಂದಲೇ ಈ ಇಡೀ ಜಗತ್ತು ಧರಿಸಲ್ಪಟ್ಟಿದೆ. ನಿನ್ನಿಂದಲೇ ಈ ಇಡೀ ಜಗತ್ತು ಸೃಷ್ಟಿಸಲ್ಪಟ್ಟಿದೆ, ಪರಿಪಾಲಿಸಲ್ಪಡುತ್ತಿದೆ, ಕೊನೆಗೆ ನಿನ್ನಲ್ಲೇ ಲಯವಾಗುತ್ತದೆ.

ಹೇ ಸೃಷ್ಟಿಸ್ವರೂಪಿಣಿಯೆ, ನೀನು ಈ ಜಗತ್ತನ್ನು ಸೃಷ್ಟಿಸುವಾಗ ನಿನ್ನನ್ನೇ ನಾವು "ಸೃಷ್ಟಿಕರ್ತೆ" ಎಂಬುದಾಗಿಯೂ, ಪಾಲಿಸುವಾಗ "ರಕ್ಷಕಿ" ಎಂಬುದಾಗಿಯೂ, ಸಂಹಾರಮಾಡುವಾಗ "ಸಂಹಾರರೂಪಿಣಿ" ಎಂಬುದಾಗಿಯೂ ಕರೆಯುತ್ತೇವೆ. (ದುರ್ಗಾಸಪ್ತಶತೀ ರಾತ್ರಿಸೂಕ್ತ ೨—೫)

೨. ಸರ್ವಜ್ಞನಾಗಿಯೂ, ಸನಾತನನಾಗಿಯೂ, ಪ್ರಶಾಸಕನಾಗಿಯೂ, ಅಣುವಿಗಿಂತಲೂ ಅಣುವಾಗಿಯೂ, ಎಲ್ಲವನ್ನೂ ಧರಿಸಿರುವವನಾಗಿಯೂ, ಅಚಿಂತ್ಯರೂಪವುಳ್ಳವನಾಗಿಯೂ, ಸೂರ್ಯನೋಪಾದಿಯಲ್ಲಿ ಸ್ವಯಂಪ್ರಭನಾಗಿಯೂ, ಅಜ್ಞಾನಾತೀತನಾಗಿಯೂ ಇರುವ ಪರಮಾತ್ಮನನ್ನು ಯಾರು ತನ್ನ ಅವಸಾನ ಕಾಲದಲ್ಲಿ ಭಕ್ತಿಯಿಂದ, ಅಚಲವಾದ ಮನಸ್ಸಿನಿಂದ, ಯೋಗಬಲದಿಂದ ತನ್ನ ಇಡೀ ಪ್ರಾಣವನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿ ಧ್ಯಾನಮಾಡುತ್ತಾನೊ, ಆತ ಆ ದಿವ್ಯ ಪರಮಪುರುಷನನ್ನು ಪಡೆದುಕೊಳ್ಳುತ್ತಾನೆ. (ಭ. ಗೀ. VIII. ೯—೧೦)

ವೇದವಿದರು ಯಾವ ಪರಮಪದವನ್ನು "ಅಕ್ಷರ" ಎಂಬುದಾಗಿ ಕರೆಯುವರೊ, ಯಾವುದರಲ್ಲಿ ರಾಗರಹಿತರಾದ ಯತಿಗಳು ಲೀನರಾಗುವರೊ, ಯಾವುದನ್ನು ಪಡೆದುಕೊಳ್ಳಲೋಸುಗ (ಜನರು) ಬ್ರಹ್ಮಚರ್ಯ

ವ್ರತವನ್ನು ಕೈಗೊಳ್ಳುವರೊ, ಅದರ ಸಂಬಂಧವಾಗಿ ನಾನು ನಿನಗೆ ಸಂಕ್ಷಿಪ್ತವಾಗಿ ವಿವರಿಸುತ್ತೇನೆ. (ಭ. ಗೀ. VIII. ೧೧)

**೩.** ಆದ್ದರಿಂದ ನೀನು ಸಕಲ ಕರ್ಮಗಳನ್ನೂ ಅನಾಸಕ್ತನಾಗಿ ಮಾಡು. ಯಾರು ಸಕಲ ಕರ್ಮಗಳನ್ನೂ ಅನಾಸಕ್ತನಾಗಿ ಮಾಡುತ್ತಾನೊ ಆತ ಪರಮಪದವನ್ನು ಹೊಂದುತ್ತಾನೆ. (ಭ. ಗೀ. III. ೧೯)

**೪.** ಪ್ರಕೃತಿಯ ಗುಣಗಳು ಸಕಲ ಕಾರ್ಯಗಳನ್ನೂ ಮಾಡಿಕೊಂಡು ಹೋಗುತ್ತವೆ. ಅಹಂಕಾರದಿಂದ ಬುದ್ಧಿಗೆಟ್ಟ ಮನುಷ್ಯ ಭಾವಿಸುತ್ತಾನೆ ತಾನೇ ಎಲ್ಲಕ್ಕೂ ಕರ್ತ ಎಂಬುದಾಗಿ. (ಭ. ಗೀ. III. ೨೭)

**೫.** ಎಲೈ ಕುಂತೀಪುತ್ರನೆ, ನೀನು ಯಾವಾವ ಕರ್ಮಗಳನ್ನು ಮಾಡುವೆಯೊ, ಯಾವಾವುದನ್ನು ಭುಂಜಿಸುವೆಯೊ, ಯಾವಾವುದನ್ನು ಹವನಮಾಡುವೆಯೊ, ಯಾವಾವುದನ್ನು ದಾನಮಾಡುವೆಯೊ, ಯಾವಾವ ತಪಸ್ಸನ್ನು ಮಾಡುವೆಯೊ, ಅವೆಲ್ಲವನ್ನೂ ನನಗೆ ಸಮರ್ಪಣೆಯಾಗಿ ಮಾಡು. (ಭ. ಗೀ. IX. ೨೭)

**೬.** ಯಾರು ಎಲ್ಲದರಲ್ಲಿಯೂ ನನ್ನನ್ನು ದರ್ಶಿಸುವನೊ ಮತ್ತು ಎಲ್ಲವನ್ನೂ ನನ್ನಲ್ಲಿ ಕಾಣುವನೊ, ಆತ ನನ್ನಿಂದ ಪ್ರತ್ಯೇಕನಾಗುವುದಿಲ್ಲ, ನಾನು ಆತನಿಂದ ಪ್ರತ್ಯೇಕನಾಗುವುದಿಲ್ಲ.

ಸರ್ವಭೂತಗಳಲ್ಲಿಯೂ ಇರತಕ್ಕ ನನ್ನನ್ನು ಯಾರು ಅಭೇದಬುದ್ಧಿಯಿಂದ ಭಜಿಸುವನೊ, ಆ ಯೋಗಿ ಯಾವ ಕರ್ಮಗಳಲ್ಲಿ ನಿರತನಾಗಿದ್ದರೂ ನನ್ನಲ್ಲೇ ಸ್ಥಿರನಾಗಿರುತ್ತಾನೆ.

ಎಲೈ ಅರ್ಜುನಾ, ಯಾವ ಯೋಗಿ ಸರ್ವರ ಸುಖದುಃಖಗಳನ್ನೂ ತನ್ನ ಸುಖದುಃಖಗಳ ಹಾಗೇ ನೋಡುವನೊ, ಆತನೇ ಅತ್ಯಂತ ಶ್ರೇಷ್ಠನಾದ ಯೋಗಿ. (ಭ. ಗೀ. VI. ೩೦—೩೨)

**೭.** ನಿರ್ವಿಶೇಷನೂ ನಿರೀಹನೂ ಆದ, ಹರಿಹರಬ್ರಹ್ಮಾದಿಗಳಿಗೂ ಸಾಕ್ಷಾತ್ಕಾರಯೋಗ್ಯವಸ್ತುವಾದ, ಧ್ಯಾನದಿಂದ ಯೋಗಿಗಳಿಗೆ ದೊರೆಯಲ್ಪಡುವವನಾದ, ಜನನಮರಣಭೀತಿ ಇವನ್ನು ಧ್ವಂಸಮಾಡತಕ್ಕವನಾದ, ಎಲ್ಲಾ ಪ್ರಪಂಚಗಳಿಗೂ ಬೀಜಪ್ರಾಯನಾದ, ಸಚ್ಚಿತ್ಸ್ವರೂಪನೂ ಚೈತನ್ಯನೂ ಆದ ಪರಬ್ರಹ್ಮನನ್ನು ನಾನು ನನ್ನ ಹೃದಯಕಮಲಮಧ್ಯದಲ್ಲಿ ಧ್ಯಾನಮಾಡುತ್ತೇನೆ. (ಮಹಾನಿರ್ವಾಣ ತಂತ್ರ. III. ೫೦)

೮. ಹೇ ಚಂದ್ರಚೂಡನೆ, ಮದನಾಂತಕನೆ, ಶೂಲಪಾಣಿಯೆ, ಸ್ಥಾಣುವೆ, ಗಿರೀಶನೆ, ಗಿರಿಜೇಶನೆ, ಮಹೇಶನೆ, ಶಂಭುವೆ, ಭೂತೇಶನೆ, ಭೀತಭಯಸೂದನನೆ, ಜಗದೀಶನೆ ಈ ಸಂಸಾರದುಃಖರೂಪ ಘೋರಾರಣ್ಯ ದಿಂದ ಅನಾಥನಾದ ನನ್ನನ್ನು ರಕ್ಷಿಸು. (೧)

ಹೇ ಪಾರ್ವತೀವಲ್ಲಭನೆ, ಚಂದ್ರಮೌಳಿಯೆ, ಭೂತಾಧಿಪನೆ, ಪ್ರಮಥನಾಥನೆ, ಗಿರೀಶಜಾಪನೆ, ವಾಮದೇವನೆ, ಭವನೆ, ರುದ್ರನೆ, ಪಿನಾಕಪಾಣಿಯೆ, ಜಗದೀಶನೆ ಈ ಸಂಸಾರದುಃಖರೂಪ ಘೋರಾರಣ್ಯ ದಿಂದ ಅನಾಥನಾದ ನನ್ನನ್ನು ರಕ್ಷಿಸು. (೨)

ಹೇ ನೀಲಕಂಠನೆ, ವೃಷಭಧ್ವಜನೆ, ಪಂಚಾನನನೆ, ಲೋಕೇಶನೆ, ಶೇಷವಲಯನೆ ( ಅನಂತನಾಗನನ್ನು ಮುಂಗೈಗೆ ಸುತ್ತಿಕೊಂಡಿರುವವನೆ ), ಪ್ರಮಥೇಶನೆ, ಶರ್ವನೆ, ಧೂರ್ಜಟಿಯೆ, ಪಶುಪತಿಯೆ, ಗಿರಿಜಾಪತಿಯೆ, ಜಗದೀಶನೆ ಈ ಸಂಸಾರದುಃಖರೂಪ ಘೋರಾರಣ್ಯದಿಂದ ಅನಾಥನಾದ ನನ್ನನ್ನು ರಕ್ಷಿಸು. (೩)

ಹೇ ವಿಶ್ವನಾಥನೆ, ಶಿವನೆ, ಶಂಕರನೆ, ದೇವದೇವನೆ, ಗಂಗಾಧರನೆ, ಪ್ರಮಥನಾಯಕನೆ, ನಂದಿಕೇಶನೆ, ಬಾಣೇಶ್ವರನೆ, ಅಂಧಕರಿಪುವೆ ( ಅಂಧ ಕಾಸುರನ ಶತ್ರುವೆ ), ಹರನೆ, ಲೋಕನಾಥನೆ, ಜಗದೀಶನೆ ಈ ಸಂಸಾರ ದುಃಖರೂಪ ಘೋರಾರಣ್ಯದಿಂದ ಅನಾಥನಾದ ನನ್ನನ್ನು ರಕ್ಷಿಸು. (೪)

ಹೇ ವಾರಾಣಸೀಪುರಪತಿಯೆ, ಮಣಿಕರ್ಣಿಕೇಶನೆ, ವೀರೇಶನೆ, ದಕ್ಷ ಮಖಕಾಲನೆ ( ದಕ್ಷಯಜ್ಞ ನಾಶಕನೆ ), ವಿಭುವೆ, ಗಣೇಶನೆ, ಸರ್ವಜ್ಞನೆ, ಸರ್ವಹೃದಯೈಕನಿವಾಸನೆ ( ಎಲ್ಲರ ಅಂತರ್ಯಾಮಿಯೆ ), ನಾಥನೆ, ಜಗ ದೀಶನೆ ಈ ಸಂಸಾರದುಃಖರೂಪ ಘೋರಾರಣ್ಯದಿಂದ ಅನಾಥನಾದ ನನ್ನನ್ನು ರಕ್ಷಿಸು. (೫)

ಹೇ ಶ್ರೀಮನ್ಮಹೇಶ್ವರನೆ, ಕೃಪಾಮಯನೆ, ದಯಾಳುವೆ, ವ್ಯೋಮ ಕೇಶನೆ, ಶಿತಕಂಠನೆ, ಗಣಾದಿನಾಥನೆ, ಭಸ್ಮಾಂಗರಾಗನೆ, ನೃಕಪಾಲ ಕಲಾಪಮಾಲನೆ (ನರ ಕಪಾಲಗಳನ್ನು ಮಾಲೆಯನ್ನಾಗಿ ಮಾಡಿಕೊಂಡಿರುವ ವನೆ ), ಜಗದೀಶನೆ ಈ ಸಂಸಾರದುಃಖರೂಪ ಘೋರಾರಣ್ಯದಿಂದ ಅನಾಥ ನಾದ ನನ್ನನ್ನು ರಕ್ಷಿಸು. (೬)

ಹೇ ಕೈಲಾಸಶೈಲನಿವಾಸಿಯೆ, ವೃಷಾಕಪಿಯೆ, ಮೃತ್ಯುಂಜಯನೆ, ತ್ರಿನಯನನೆ, ತ್ರಿಜಗನ್ನಿವಾಸನೆ, ನಾರಾಯಣಪ್ರಿಯನೆ, ಮದಾಪಹನೆ,

ಶಕ್ತಿನಾಥನೆ, ಜಗದೀಶನೆ ಈ ಸಂಸಾರದುಃಖರೂಪ ಘೋರಾರಣ್ಯದಿಂದ ಅನಾಥನಾದ ನನ್ನನ್ನು ರಕ್ಷಿಸು. (೭)

ಹೇ ವಿಶ್ವೇಶನೆ, ವಿಶ್ವದ ಜನಕ ಮತ್ತು ನಾಶಕನೆ, ವಿಶ್ವರೂಪನೆ, ವಿಶ್ವಾತ್ಮಕನೆ, ತ್ರಿಭುವನೈಕಗುಣಾಭಿವೇಶನೆ (ಮೂರು ಲೋಕಗಳ ಗುಣಗಳಿಗೂ ಏಕ ಮಾತ್ರ ಆಶ್ರಯನಾದವನೆ), ವಿಶ್ವವಂದ್ಯನೆ, ಕರುಣಾಮಯನೆ, ದೀನಬಂಧುವೆ, ಜಗದೀಶನೆ ಈ ಸಂಸಾರದುಃಖರೂಪ ಘೋರಾರಣ್ಯದಿಂದ ಅನಾಥನಾದ ನನ್ನನ್ನು ರಕ್ಷಿಸು. (೮)

೯. ಯೋಗಯುಕ್ತನಾಗಿಯೂ, ಸರ್ವತ್ರ ಸಮದರ್ಶಿಯಾಗಿಯೂ ಇರತಕ್ಕ ವ್ಯಕ್ತಿ ಎಲ್ಲಾ ಭೂತಗಳು ತನ್ನಲ್ಲಿಯೂ, ತಾನು ಎಲ್ಲಾ ಭೂತಗಳಲ್ಲಿಯೂ ಇರುವಂತೆ ನೋಡುತ್ತಾನೆ. (ಭ. ಗೀ. VI. ೨೯)

೧೦. ಹೇ ಕೃಷ್ಣ! ಹೇ ಪರಮ ಶ್ರೇಷ್ಠ ಕೃಷ್ಣ! ಹೇ ಮಹಾಯೋಗಿ! ನೀನೇ ಆದ್ಯ ಪರಮಪುರುಷ. ಋಷಿಗಳು ಸಾರಿ ಹೇಳುವ ಹಾಗೆ ಈ ವ್ಯಕ್ತ ಮತ್ತು ಅವ್ಯಕ್ತ ವಿಶ್ವವೆಲ್ಲಾ ನಿನ್ನಿಂದಲೇ ಹೊರಹೊಮ್ಮಿದೆ. (೨೯)

ನೀನೇ ಎಲ್ಲಾ ಭೂತಗಳ ದೇಹ, ಪ್ರಾಣ, ಆತ್ಮ, ಇಂದ್ರಿಯ ಇವುಗಳ ಏಕಮಾತ್ರ ಒಡೆಯನಾಗಿದೀಯೆ. ನೀನೇ ಕಾಲ, ನೀನೇ ಭಗವಾನ್ ವಿಷ್ಣು, ನೀನೇ ಅವ್ಯಯನಾದ ಈಶ್ವರ. (೩೦)

ನೀನೇ ಸತ್ತ್ವರಜಸ್ತಮೋಮಯಿ ಸೂಕ್ಷ್ಮ ಮಹಾಪ್ರಕೃತಿಯಾಗಿದೀಯೆ. ಎಲ್ಲಾ ದೇಹಗಳಲ್ಲಿಯೂ ಸಾಕ್ಷಿಯಾಗಿ ವಾಸವಾಗಿರುವ ಪುರುಷ ನೀನೇ. (೩೧)

೧೧. ತಾವರೆ ಎಲೆ ಮೇಲಿನ ನೀರು ಯಾವ ರೀತಿಯಾಗಿ ಅಸ್ಥಿರವಾದ್ದೊ, ಅದೇ ರೀತಿಯಾಗಿ (ಮಾನವನ) ಜೀವನವೂ ಅಸ್ಥಿರವಾದ್ದು. ಇಡೀ ಮಾನವ ಕುಲವೇ ವ್ಯಾಧಿ, ಅಭಿಮಾನ, ಶೋಕ ಇವುಗಳಿಗೆ ತುತ್ತಾಗಿದೆ ಎಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿಡು.

೧೨. ನಾನು ನನ್ನ ಹಿಂದಿನ ಜನ್ಮದಲ್ಲಿ ನಿನ್ನ ಪಾದಪದ್ಮಗಳನ್ನು ಆಶ್ರಯಿಸಲೂ ಇಲ್ಲ, ಪೂಜಿಸಲೂ ಇಲ್ಲ. ಆದ್ದರಿಂದ (ಈ ಜನ್ಮದಲ್ಲಿ ಮಾತೃಗರ್ಭದಲ್ಲಿದ್ದಾಗ) ಹಿಂದಿನ ಜನ್ಮದ ಸ್ಮೃತಿಯಿಂದಲೂ ಮತ್ತು ಈ ಜನ್ಮದಲ್ಲಿ ತಾಯ ಗರ್ಭವನ್ನು ಹೊಕ್ಕಿದುದರ ನಿಮಿತ್ತ ಪ್ರಬಲವಾದ

ದುಃಖರಾಶಿಯಿಂದಲೂ ಪೀಡಿತನಾಗಿದ್ದೆ. ಈ ಜನ್ಮದಲ್ಲಿ ಮತ್ತೆ ನನಗೆ ಎಲ್ಲಿ ಆಶ್ರಯ ದೊರೆಯುವುದೊ, ಅದು ನನಗೆ ಗೊತ್ತಿಲ್ಲ. ಹೇ ಪ್ರಕಟಿತ ರದನೆ ( ಹಲ್ಲು ತೆರೆದಿರುವವಳೆ), ಕಾಮರೂಪಿಣಿಯೆ, ಕರಾಳಿಯೆ ನನ್ನ ಅಪರಾಧಗಳನ್ನು ನೀನು ಕ್ಷಮಿಸಲೇ ಬೇಕು. (೧)

**೧೩.** ವೇದಾಂತ ವಾಕ್ಯಗಳಲ್ಲಿ ಸದಾ ನಿರತನಾಗಿರುವ, ಕೇವಲ ಭಿಕ್ಷಾನ್ನ ಮಾತ್ರದಿಂದಲೇ ತುಷ್ಟನಾಗಿರುವ, ಶೋಕವಿಹೀನನಾಗಿರುವ ಅಂತರ್ಯದಲ್ಲೇ ವಿಹರಿಸುತ್ತಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ. (೧)

ಕೇವಲ ತರುಗಳ ಮೂಲವನ್ನೇ ಆಶ್ರಯಿಸಿಕೊಂಡಿರುವ, ತನ್ನ ಎರಡು ಕರಗಳನ್ನೇ ಭಿಕ್ಷಾಪಾತ್ರೆಯನ್ನಾಗಿ ಮಾಡಿಕೊಂಡಿರುವ, ಶ್ರೀಯನ್ನು ಕೂಡ ಒಂದು ಹಳೇ ಚಿಂದಿಯೋಪಾದಿಯಲ್ಲಿ ಧಿಕ್ಕರಿಸಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ. (೨)

ಸ್ವಾನಂದಭಾವದಿಂದಲೇ ಪರಿತುಷ್ಟನಾಗಿರುವ, ತನ್ನ ಎಲ್ಲಾ ಇಂದ್ರಿಯಗಳನ್ನು ಸುಶಾಂತವಾದುವುಗಳನ್ನಾಗಿ ಮಾಡಿಕೊಂಡಿರುವ, ಅಹರ್ನಿಶಿ ಬ್ರಹ್ಮಸುಖದಲ್ಲೇ ವಿಹರಿಸುತ್ತಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ. (೩)

ದೇಹಾದಿಗಳಲ್ಲಿ ಆತ್ಮಬುದ್ಧಿಯನ್ನು ತ್ಯಜಿಸಿರುವ, ತನ್ನ ಸ್ವರೂಪವನ್ನೇ ತನ್ನ ಅಂತಃಕರಣದಲ್ಲಿ ದರ್ಶಿಸುತ್ತಿರುವ, ಒಳಗೂ ಹೊರಗೂ ಮಧ್ಯೇ ಎಂಬ ಭೇದಭಾವನೆಯೇ ಇಲ್ಲದಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ. (೪)

ಪವಿತ್ರವೂ ಬ್ರಹ್ಮಸೂಚಕವೂ ಆದ ಪ್ರಣವಾಕ್ಷರವನ್ನು ಉಚ್ಚರಿಸುತ್ತಿರುವ, "ನಾನೇ ಬ್ರಹ್ಮ" ಎಂಬುದಾಗಿ ಭಾವಿಸುತ್ತಿರುವ, ಭಿಕ್ಷಾನ್ನ ಭೋಜಿಯಾಗಿರುವ, ದಿಗ್ದಿಗಂತಗಳಲ್ಲೆಲ್ಲಾ ಪರಿಭ್ರಮಿಸುತ್ತಿರುವ ಕೌಪೀನವಂತನೇ ನಿಸ್ಸಂದೇಹವಾಗಿ ಭಾಗ್ಯವಂತ. (೫)

**೧೪.** ಪರಿಪೂರ್ಣನಾದ, ಆನಂದಮಯನಾದ, ಅಂಗವಿಹೀನನಾದ, ಜಗನ್ಮೂಲನಾದ, ಕಿವಿಗೆ ಕಿವಿಯಾದ, ಮನಸ್ಸಿಗೆ ಮನಸ್ಸಾದ, ವಾಕ್ಕಿಗೆ ವಾಕ್ಕಾದ, ವಾಗತೀತನಾದ, ಪ್ರಾಣಕ್ಕೆ ಪ್ರಾಣನಾದ, ಶ್ರೇಷ್ಠನಾದ ಪರಮಪುರುಷನನ್ನು ಸ್ಮರಿಸು.

**೧೫.** ಹೇ ಅರ್ಜುನಾ, ಈಶ್ವರ ತನ್ನ ಮಾಯಾಬಲದಿಂದ ಎಲ್ಲಾ ಭೂತಗಳನ್ನು ಯಂತ್ರಾರೂಢವಾಗಿರೋ ಬೊಂಬೆಗಳೋಪಾದಿಯಲ್ಲಿ ಸುತ್ತು ತಿರುಗಿಸುತ್ತಾ ಅವುಗಳ ಹೃದಯಮಧ್ಯದಲ್ಲಿ ವಾಸವಾಗಿದಾನೆ.

ಹೇ ಭಾರತ, ಸರ್ವ ಭಾವಗಳಿಂದಲೂ ನೀನು ಭಗವಂತನಲ್ಲಿ ಶರಣು ಹೋಗು. ಆತನ ಪ್ರಸಾದದಿಂದ ನೀನು ಪರಮಶಾಂತಿಯನ್ನೂ, ಶಾಶ್ವತ ವಾದ ಸ್ಥಾನವನ್ನೂ ಗಳಿಸಿಕೊಳ್ಳುತ್ತೀಯೆ. (ಭ. ಗೀ. XVIII. ೬೧-೬೨)

**೧೬.** ಬ್ರಹ್ಮಾನಂದಸ್ವರೂಪನಾದ, ಪರಮಸುಖವನ್ನು ಕೊಡ ತಕ್ಕವನಾದ, ಕೇವಲ ಜ್ಞಾನಮೂರ್ತಿಯೇ ಆದ, ದ್ವಂದ್ವಾತೀತನಾದ, ಗಗನ ಸದೃಶನಾದ, ತತ್ತ್ವಮಸ್ಯಾದಿ ವೇದಾಂತ ವಾಕ್ಯಗಳ ಲಕ್ಷ್ಯನಾದ, ಏಕನೇ ಆದ, ನಿತ್ಯನಾದ, ವಿಮಲನಾದ, ಅಚಲನಾದ, ಎಲ್ಲರ ಬುದ್ಧಿಯ ಸಾಕ್ಷಿಯಾದ, ಭಾವಾತೀತನಾದ, ತ್ರಿಗುಣರಹಿತನಾದ ಸದ್ಗುರುವಿಗೆ ನಾನು ನಮಿಸುತ್ತೇನೆ. (೯೭)

ಗುರುವಿಗಿಂತ ಅಧಿಕವಾದ್ದು ಬೇರೊಂದಿಲ್ಲ; ಗುರುವಿಗಿಂತ ಶ್ರೇಷ್ಠ ವಾದ್ದು ಬೇರೆ ಯಾವುದೂ ಇಲ್ಲ. ಗುರುವಿಗಿಂತ ಉತ್ಕೃಷ್ಟವಾದ್ದು ಬೇರೊಂದಿಲ್ಲ; ಗುರುವಿಗಿಂತ ಪರಮಪವಿತ್ರವಾದ್ದು ಬೇರೆ ಯಾವುದೂ ಇಲ್ಲ. ಇದನ್ನೇ ಶಿವ ಘೋಷಿಸಿ ಹೇಳಿದ; ಇದನ್ನೇ ಶಿವ ಸಾರಿ ಹೇಳಿದ. ಇದನ್ನೇ ಶಿವ ಪ್ರಕಟಿಸಿ ಹೇಳಿದ; ಇದನ್ನೇ ಶಿವ ಡಂಗುರ ಹೊಡೆದು ಹೇಳಿದ. (೧೦೮)

ಶ್ರೀಮತ್ಪರಬ್ರಹ್ಮಗುರುವನ್ನು ಸ್ಮರಿಸುತ್ತೇನೆ; ಶ್ರೀಮತ್ಪರಬ್ರಹ್ಮ ಗುರುವನ್ನು ಭಜಿಸುತ್ತೇನೆ. ಶ್ರೀಮತ್ಪರಬ್ರಹ್ಮಗುರುವನ್ನು ಸ್ತುತಿಸು ತ್ತೇನೆ ; ಶ್ರೀಮತ್ಪರಬ್ರಹ್ಮಗುರುವಿಗೆ ನಮಿಸುತ್ತೇನೆ. (೯೬)

**೧೭.** ನೀನು ಎಲ್ಲಾ ಧರ್ಮಗಳನ್ನೂ ತ್ಯಜಿಸಿ ನನ್ನಲ್ಲೇ ಶರಣು ಹೋಗು. ನಾನು ಎಲ್ಲಾ ಪಾಪಗಳಿಂದಲೂ ನಿನ್ನನ್ನು ಮುಕ್ತನನ್ನಾಗಿ ಮಾಡುತ್ತೇನೆ; (ಕಿಂಚಿತ್ತೂ) ಶೋಕಿಸಬೇಡ. (ಭ. ಗೀ. XVIII. ೬೬)

**೧೮.** ನಿನ್ನ ಕರುಣಾಮಯ ದೃಷ್ಟಿಯನ್ನು ಇಟ್ಟು ಸತತ ನನ್ನನ್ನು ಕಾಪಾಡು.

ಅಸತ್ತಿನಿಂದ ಸತ್ತಿಗೆ ನನ್ನನ್ನು ಕರೆದುಕೊಂಡುಹೋಗು. ತಮಸ್ಸಿನಿಂದ ಜ್ಯೋತಿಗೆ ನನ್ನನ್ನು ಕರೆದುಕೊಂಡು ಹೋಗು. ಮೃತ್ಯುತ್ವದಿಂದ ಅಮೃತತ್ವಕ್ಕೆ ನನ್ನನ್ನು ಕರೆದುಕೊಂಡುಹೋಗು. (ಬೃಹದಾರಣ್ಯಕ ಉಪನಿಷತ್ ೧. ೩. ೨೮)

ನನಗೆ ನಿನ್ನ ದರ್ಶನ ಕೊಟ್ಟು ನಿನ್ನ ಕರುಣಾಮಯ ದೃಷ್ಟಿಯನ್ನು ನನ್ನ ಮೇಲೆ ಬೀರಿ ನನ್ನನ್ನು ಸತತ ಕಾಪಾಡು.

೧೯. ನಾನು ಪೂರ್ವಾರ್ಜಿತ ಕರ್ಮಫಲಗಳಲ್ಲಿ ಆಸಕ್ತನಾಗಿದ್ದುದರ ದೆಸೆಯಿಂದ ಈ ಭೂಮಿಯ ಬೆಳಕನ್ನು ನೋಡುವ ಮುನ್ನವೇ ತಾಯ ಗರ್ಭದಲ್ಲಿದ್ದ ನನ್ನನ್ನು ಪಾಪ ಬಹಳವಾಗಿ ಪೀಡಿಸಿತು. ತಾಯ ವಿಷ್ಟೆ, ಮೂತ್ರ ಇವುಗಳ ಮಧ್ಯದಲ್ಲಿ ಬಿದ್ದಿದ್ದ ನನ್ನನ್ನು ಗರ್ಭಾಗ್ನಿ ಬಹಳವಾಗಿ ಬೇಯಿಸಿತು. ಅಲ್ಲಿ ಏನೇನು ದುಃಖಗಳು ಕಾಡಿಸುತ್ತವೆ ಎಂಬುದನ್ನು ವರ್ಣನೆ ಮಾಡಲು ಯಾರಿಗೆ ತಾನೇ ಸಾಧ್ಯ? ಹೇ ಶಿವ, ಹೇ ಶಂಕರ, ಹೇ ದೇವದೇವ, ಹೇ ಮಹಾದೇವ, ಹೇ ಶಂಭೋ ನನ್ನ ಅಪರಾಧಗಳನ್ನು ಕ್ಷಮಿಸು. (೧)

ಬಾಲ್ಯದಲ್ಲಿ ದುಃಖ ತಾಳಲಾರದಷ್ಟಾಗಿಬಿಟ್ಟಿತ್ತು. ನನ್ನ ಶರೀರ ಮಲದಿಂದ ಕೊಳಕುಕೊಳಕಾಗಿಬಿಟ್ಟಿತ್ತು. ಆಗ ಸ್ತನ್ಯಪಾನ ಪಿಪಾಸು ಆಗಿದ್ದೆ. ನನ್ನ ಇಂದ್ರಿಯಗಳ ಮೇಲೆ ನನಗೆ ಸ್ವಾತಂತ್ರ್ಯವೇ ಇರಲಿಲ್ಲ. ತಮ್ಮ ತಮ್ಮ ಕರ್ಮಫಲಗಳಿಂದ ಉದ್ಭವಿಸಿದ ಸೊಳ್ಳೆ, ನೊಣ ಇವೇ ಮೊದಲಾದ ಕ್ರಿಮಿಕೀಟಗಳು ಚಿತ್ರಹಿಂಸೆ ಮಾಡುತ್ತಿದ್ದುವು ನಾನಾ ರೋಗಾದಿಗಳ ದುಃಖದಿಂದ ರೋದನಪರವಶನಾಗಿದ್ದುದರಿಂದ ನಾನು ನಿನ್ನನ್ನು ಸ್ಮರಿಸಿಕೊಳ್ಳಲಿಲ್ಲ. ಆದ್ದರಿಂದ ಹೇ ಶಿವ,... ನನ್ನ ಅಪರಾಧಗಳನ್ನು ಕ್ಷಮಿಸು. (೨)

ನಾನು ಯೌವನಾವಸ್ಥೆಯನ್ನು ಮುಟ್ಟಿದಾಗ ಐದು ವಿಷಯರೂಪ ಸರ್ಪಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ನನ್ನ ಮರ್ಮಸ್ಥಾನಗಳನ್ನು ಕಚ್ಚಿಬಿಟ್ಟದ್ದರಿಂದ ನನ್ನ ವಿವೇಕ ನಷ್ಟವಾಗಿ ಹೋಗಿಬಿಟ್ಟಿತ್ತು. ಆಗ ಸುತ, ಧನ, ಯುವತಿ ಇವುಗಳ ಭೋಗಸುಖಗಳಲ್ಲಿಯೇ ಸಂಪೂರ್ಣ ನಿರತನಾಗಿಬಿಟ್ಟಿದ್ದೆ. ಅಯ್ಯೋ! ಆಗ ನನ್ನ ಹೃದಯ ಶಿವನ ಭಾವನೆಗಳಿಂದ ಶೂನ್ಯವಾಗಿಬಿಟ್ಟು ಅಭಿಮಾನ, ಗರ್ವ ಇವುಗಳಿಂದ ತುಂಬಿತುಳುಕಾಡುತ್ತಿತ್ತು. ಹೇ ಶಿವ,... ನನ್ನ ಅಪರಾಧಗಳನ್ನು ಕ್ಷಮಿಸು. (೩)

ಈಗ ಮುಪ್ಪಿನಲ್ಲಿ ನನ್ನ ಇಂದ್ರಿಯಗಳೆಲ್ಲದರ ಗತಿ, ಮತಿ ನಶಿಸಿ ಹೋಗಿಬಿಟ್ಟಿದೆ. ಆಧಿದೈವಾದಿ ಪಾಪ, ತಾಪ, ರೋಗ, ವಿಯೋಗ ಇವುಗಳಿಂದ ದೇಹ ಒಮ್ಮೆಗೇ ಸಾಯದೇ ಇದ್ದರೂ, ಅದು ವೀರ್ಯವಿಹೀನವಾಗಿಯೂ, ಬಡವಾಗಿಯೂ ಆಗಿಬಿಟ್ಟಿದೆ. ಅದು ಆ ಸ್ಥಿತಿಯಲ್ಲಿದ್ದರೂ

ಮನಸ್ಸು ಮಾತ್ರ ಈಗಲೂ ಧೂರ್ಜಟಿಯ ಧ್ಯಾನವನ್ನು ಮಾಡದೆ ಮಿಥ್ಯಾ, ಮೋಹ, ಅಭಿಲಾಷೆ ಇವುಗಳ ಬೆನ್ನುಹತ್ತಿ ಸುಮ್ಮನೆ ಭ್ರಮಿಸುತ್ತಿದೆ. ಹೇ ಶಿವ, . . . ನನ್ನ ಅಪರಾಧಗಳನ್ನು ಕ್ಷಮಿಸು. (೪)

ಹೆಜ್ಜೆಹೆಜ್ಜೆಗೂ ಗಹನವೂ, ಪ್ರತ್ಯವಾಯಸಂಕುಲವೂ ಆದ ಸ್ಮಾರ್ತ ಕರ್ಮಗಳ ಅನುಷ್ಠಾನವೇ ನನ್ನ ಶಕ್ತಿಗೆ ಮೀರಿದ್ದಾಗಿರುವಾಗ, ಇನ್ನು ವೇದಗಳಲ್ಲಿ ಬ್ರಾಹ್ಮಣರಿಗೆ ನಿಧಿಸಲ್ಪಟ್ಟಿರುವ ಸುಸಾರವಾದ ಬ್ರಹ್ಮ ಮಾರ್ಗದ ಅನುಷ್ಠಾನ ನನ್ನ ಕೈಯಲ್ಲಿ ಹೇಗೆ ತಾನೆ ಸಾಧ್ಯವಾದೀತು? ನಾನು ತತ್ತ್ವವನ್ನು ಶ್ರವಣಮನನದಿಂದಲೇ ಇನ್ನೂ ಅರಿತುಕೊಳ್ಳದೆ ಇರುವಾಗ, ನನಗೆ ನಿದಿಧ್ಯಾಸನ ಹೇಗೆ ತಾನೇ ಸಾಧ್ಯವಾದೀತು? ಹೇ ಶಿವ, . . . ನನ್ನ ಅಪರಾಧಗಳನ್ನು ಕ್ಷಮಿಸು. (೫)

ಸೂರ್ಯೋದಯಕ್ಕೆ ಮುಂಚೆಯೇ ನನ್ನ ಸ್ನಾನವನ್ನು ಮುಗಿಸಿಕೊಂಡು ನಿನ್ನ ಅಭಿಷೇಕಕ್ಕಾಗಿ (ಎಂದೂ) ನಾನು ಗಂಗಾಜಲವನ್ನು ಸಕಾಲಕ್ಕೆ ತೆಗೆದುಕೊಂಡುಬರಲಿಲ್ಲ. ದಟ್ಟ ಅರಣ್ಯಕ್ಕೆ ಹೋಗಿ ಎಂದೂ ನಿನ್ನ ಪೂಜೆಗಾಗಿ ಒಳ್ಳೆ ಬಿಲ್ವ ದಳಗಳನ್ನು ಕೊಯ್ದುಕೊಂಡುಬರಲಿಲ್ಲ. ಸರೋವರಗಳಿಗೆ ಹೋಗಿ ಅರಳಿದ ತಾವರೆ ಹೂವುಗಳನ್ನು ಕೊಯ್ದು ತಂದು ಅವನ್ನು (ಎಂದಿಗೂ) ನಿನಗೆ ಧೂಪದೀಪಗಳೊಡನೆ ಅರ್ಪಿಸಲಿಲ್ಲ. ಹೇ ಶಿವ, . . . ನನ್ನ ಅಪರಾಧಗಳನ್ನು ಕ್ಷಮಿಸು. (೬)

ನಾನು (ಎಂದೂ) ನಿನ್ನ ಲಿಂಗಕ್ಕೆ ಹಾಲು, ತುಪ್ಪ, ಜೇನು, ಮೊಸರು, ಸಕ್ಕರೆ ಇವುಗಳಿಂದ ಪಂಚಾಭಿಷೇಕ ಮಾಡಿಸಲಿಲ್ಲ. ನಾನು ಎಂದೂ ಅದಕ್ಕೆ ಚಂದನಾದಿ ಸುಗಂಧದ್ರವ್ಯಗಳನ್ನು ಲೇಪಿಸಲಿಲ್ಲ. ನಾನು (ಎಂದೂ) ಸುವರ್ಣ ಪುಷ್ಪಗಳಿಂದಲೂ, ಧೂಪ ಕರ್ಪೂರದೀಪ ಇವುಗಳಿಂದಲೂ, ರಸಯುತ ವಿವಿಧ ಭಕ್ಷ್ಯೋಪಹಾರಗಳಿಂದಲೂ ನಿನ್ನನ್ನು ಪೂಜಿಸಲಿಲ್ಲ. ಹೇ ಶಿವ, . . . ನನ್ನ ಅಪರಾಧಗಳನ್ನು ಕ್ಷಮಿಸು. (೭)

ಹೇ ಮಹಾದೇವ, ನಿನ್ನ ಪಾದಪದ್ಮಗಳನ್ನು ಧ್ಯಾನಮಾಡುತ್ತ ಎಂದೂ ನಾನು ಬ್ರಾಹ್ಮಣರಿಗೆ ಪ್ರಚುರತರವಾಗಿ ಧನವನ್ನು ಅರ್ಪಿಸಲಿಲ್ಲ. ನಿನ್ನನ್ನು ಉದ್ದೇಶಿಸಿ ನಿನ್ನ ಬೀಜಮಂತ್ರವನ್ನು ಜಪಿಸುತ್ತಾ ಒಂದು ಲಕ್ಷ ಹವ್ಯಗಳನ್ನು ಯಜ್ಞಕುಂಡಕ್ಕೆ (ಎಂದೂ) ನಾನು ಹಾಕಲಿಲ್ಲ. ಎಂದೂ ನಾನು ಗಂಗಾ ನದಿಯ ದಡದಲ್ಲಿ ಕುಳಿತು ವ್ರತ ಜಪ ನಿಯಮಾದಿಗಳಿಂದಲೂ,

ವೇದಪಾಠದಿಂದಲೂ, ರುದ್ರಜಪದಿಂದಲೂ ತಪಶ್ಚರ್ಯೆಯನ್ನು ಮಾಡಲಿಲ್ಲ. ಹೇ ಶಿವ, . . . ನನ್ನ ಅಪರಾಧಗಳನ್ನು ಕ್ಷಮಿಸು. (೮)

ಪದ್ಮಾಸನದಲ್ಲಿ ಕುಳಿತುಕೊಂಡು ಪ್ರಣವೋಚ್ಚಾರಣೆ ಮಾಡುತ್ತ, ಪ್ರಾಣವಾಯುವನ್ನು ಸುಷುಮ್ನಾ ಮಾರ್ಗದಲ್ಲಿ ನಿರೋಧಿಸಿ, ಅಂತಃಕರಣ ವನ್ನು ಪ್ರಶಾಂತವಾದುದನ್ನಾಗಿ ಮಾಡಿ, ಯಾವ ಪ್ರಣವ ನಿನ್ನ ಮಹಿಮೆ ಯನ್ನು ವ್ಯಕ್ತಗೊಳಿಸಿದೆಯೊ ಅದನ್ನು ಜ್ಯೋತಿರ್ಮಯ ಪರಬ್ರಹ್ಮರೂಪ ನಾದ ಸಾಕ್ಷಿಚೈತನ್ಯನಲ್ಲಿ ಪ್ರಲೀನಮಾಡಿ, ಪ್ರತಿಯೊಂದು ಶರೀರದಲ್ಲೂ ಅಂತರ್ಯಾಮಿರೂಪದಲ್ಲಿ ಇರುವ ಶಂಕರನಾದ ನಿನ್ನನ್ನು ಸಮಾಧಿಸ್ಥನಾಗಿ ನಾನು (ಎಂದೂ) ಧ್ಯಾನಮಾಡಲಿಲ್ಲ. ಹೇ ಶಿವ, . . . ನನ್ನ ಅಪರಾಧ ಗಳನ್ನು ಕ್ಷಮಿಸು. (೯)

ದಿಗಂಬರನಾದ, ಸಂಗರಹಿತನಾದ, ಶುದ್ಧನಾದ, ತ್ರಿಗುಣರಹಿತ ನಾದ, ಮೋಹ ಅಂಧಕಾರ ಇವುಗಳಿಂದ ವಿಮುಕ್ತನಾದ, ನಾಸಾಗ್ರದಲ್ಲಿ ದೃಷ್ಟಿಯುಳ್ಳವನಾದ, ಸಂಸಾರಸ್ವರೂಪವನ್ನು ಅರಿತಿರುವವನಾದ ನಿನ್ನನ್ನು ನಾನು ಎಂದೂ ದರ್ಶನಮಾಡಲಿಲ್ಲ; ತನ್ಮಯಚಿತ್ತನಾಗಿ ಕಲಿಮಲವಿಗತ ನಾದ, ಮಂಗಳಮೂರ್ತಿಯಾದ ನಿನ್ನನ್ನು ನಾನು ಧ್ಯಾನಿಸಲಿಲ್ಲ. ಹೇ ಶಿವ, . . . ನನ್ನ ಅಪರಾಧಗಳನ್ನು ಕ್ಷಮಿಸು. (೧೦)

ಯಾರ ಲಲಾಟ ಚಂದ್ರನಿಂದ ಪ್ರಜ್ವಲಿಸುತ್ತಿದೆಯೊ, ಯಾರು ಮದನನನ್ನು ಭಸ್ಮಮಾಡಿದಾನೊ, ಯಾರು ತನ್ನ ನೆತ್ತಿಯಲ್ಲಿ ಗಂಗೆಯನ್ನು ಧರಿಸಿದಾನೊ, ಯಾರು ಮಂಗಳದಾಯಕನೊ, ಯಾರು ತನ್ನ ಕಂಠ ಮತ್ತು ಕಿವಿಗಳನ್ನು ಸರ್ಪಗಳಿಂದ ಅಲಂಕಾರಮಾಡಿಕೊಂಡಿದಾನೊ, ಯಾರ ನೇತ್ರಗಳಿಂದ ಅಗ್ನಿ ಉತ್ಥಿತವಾಗಿದೆಯೊ (ಉದ್ಭವವಾಗಿದೆಯೊ), ಯಾರು ಗಜ-ಚರ್ಮವನ್ನು ತನ್ನ ಸುಂದರ ಅಂಬರವನ್ನಾಗಿ ಮಾಡಿ ಕೊಂಡಿದಾನೊ, ಯಾರು ಮೂರು ಲೋಕಗಳ ಸತ್ತ್ವವಾಗಿದಾನೊ, ಅಂಥ ಶಿವನಲ್ಲಿ ನಿನ್ನ ಚಿತ್ತವೃತ್ತಿಗಳನ್ನು ಸ್ಥಿರಮಾಡು. ಉಳಿದ ಕರ್ಮಗಳು ಯಾವ ಪ್ರಯೋಜನಕ್ಕೆ ಬಂದಾವು? (೧೧)

ಈ ಧನದಿಂದಲೇ ಆಗಲಿ, ಅಶ್ವದಿಂದಲೇ ಆಗಲಿ, ಹಸ್ತಿಯಿಂದಲೇ ಆಗಲಿ ಅಥವಾ ರಾಜ್ಯದಿಂದಲೇ ಆಗಲಿ ಏನು ಪ್ರಯೋಜನ? ಪುತ್ರ, ಹೆಂಡತಿ, ಮಿತ್ರ, ಪಶು ಇವುಗಳಿಂದ ತಾನೆ ಏನು ಪ್ರಯೋಜನ? ದೇಹ

ಮತ್ತು ಮನೆ ಇವುಗಳಿಂದಲೂ ತಾನೆ ಏನು ಪ್ರಯೋಜನ? ಹೇ ಮನಸ್ಸೇ, ಈ ವಸ್ತುಗಳೆಲ್ಲಾ ಕ್ಷಣಭಂಗುರ ವಸ್ತುಗಳಾದ್ದರಿಂದ ಅವನ್ನು ಬೇಗ ತ್ಯಜಿಸಿಬಿಡುವುದು ಮೇಲು. ಆತ್ಮಸಾಕ್ಷಾತ್ಕಾರ ಪಡೆಯಲೋಸುಗ ಗುರುವಾಕ್ಯಾನುಸಾರ ಪಾರ್ವತೀವಲ್ಲಭನನ್ನು ಪುನಃ ಪುನಃ ಭಜಿಸು. (೧೨)

ನೋಡುತ್ತ ನೋಡುತ್ತ ಇದ್ದ ಹಾಗೇ ದಿನದಿನವೂ ಆಯುಸ್ಸು ಕಡಮೆ ಕಡಮೆಯಾಗುತ್ತಾ ಬರುತ್ತದೆ. ಯೌವನ ಕ್ಷಯಕ್ಷಯವಾಗುತ್ತಾ ಬರುತ್ತದೆ. ಕಳೆದುಹೋದ ದಿನ ಎಂದಿಗೂ ಹಿಂದಿರುಗಿ ಬರದು. ಕಾಲ ಜಗತ್ತನ್ನು ಭಕ್ಷಿಸುತ್ತಾ ಬರುತ್ತದೆ. ಲಕ್ಷ್ಮಿ ಅಲೆಯೋಪಾದಿಯಲ್ಲಿ ಚಪಲಸ್ವಭಾವವುಳ್ಳವಳು. ಜೀವನ ವಿದ್ಯುತ್ತಿನಂತೆ ಚಂಚಲಸ್ವಭಾವ ವುಳ್ಳದ್ದು. ಆದ್ದರಿಂದ ಹೇ ಶರಣಾಗತವತ್ಸಲ, ನಿನ್ನಲ್ಲಿ ಶರಣು ಹೊಂದಿರತಕ್ಕ ನನ್ನನ್ನು ಒಡನೆಯೆ ರಕ್ಷಿಸು, ಕಾಪಾಡು. (೧೩)

ಸ್ವಪ್ರಕಾಶನಾದ ಸುರಗುರು ಉಮಾಪತಿಗೆ ನಾನು ವಂದಿಸುತ್ತೇನೆ. ಜಗತ್ಕಾರಣನಿಗೆ ವಂದಿಸುತ್ತೇನೆ. ಸರ್ಪಭೂಷಣನಿಗೆ, ಮೃಗಧರನಿಗೆ ವಂದಿಸುತ್ತೇನೆ. ಪಶುಪತಿಗೆ ವಂದಿಸುತ್ತೇನೆ. ಚಂದ್ರ, ಸೂರ್ಯ, ಅಗ್ನಿ ಇವನ್ನೇ ಮೂರು ಕಣ್ಣಾಗಿ ಉಳ್ಳ ಮುಕ್ಕಣ್ಣನಿಗೆ ವಂದಿಸುತ್ತೇನೆ. ಮುಕುಂದಪ್ರಿಯನಿಗೆ ವಂದಿಸುತ್ತೇನೆ. ಭಕ್ತಜನಾಶ್ರಯನಿಗೆ, ವರದಾತನಿಗೆ ವಂದಿಸುತ್ತೇನೆ. ಮಂಗಳಮಯ ಶಂಕರನಿಗೆ ವಂದಿಸುತ್ತೇನೆ. (೧೪)

ಹೇ ಪಶುಪತಿ, ಭಸ್ಮದಿಂದ ನಿನ್ನ ಶರೀರ ಬೆಳ್ಳಗೆ ಕಾಣುತ್ತಿದೆ. ನಿನ ಹಲ್ಲು ಬೆಳ್ಳಗಿವೆ. ನಿನ್ನ ಕೈಯಲ್ಲಿ ನೀನು ಹಿಡಿದಿರುವ ಕಪಾಲ ಬೆಳ್ಳಗಿದೆ. ನಿನ್ನ ಕೈಯ ದಂಡ ಬೆಳ್ಳಗಿದೆ. ನಿನ್ನ ವೃಷಭ ಬೆಳ್ಳಗಿದೆ. ನಿನ್ನ ಕಿವಿಯ ಕುಂಡಲ ಬೆಳ್ಳಗಿವೆ. ನಿನ್ನ ಜಟೆ ಗಂಗೆಯ ನೊರೆಯಿಂದ ಬೆಳ್ಳಗೆ ಕಾಣು ತ್ತಿದೆ. ನಿನ್ನ ಲಲಾಟದಲ್ಲಿರುವ ಚಂದ್ರ ಬೆಳ್ಳಗಿದಾನೆ. ಈ ರೀತಿಯಾಗಿ ಯಾರು ಸಂಪೂರ್ಣ ಬೆಳ್ಳಗಿದಾನೊ, ಆತ ಪಾಪಕ್ಷಯ ಮಾಡತಕ್ಕ ಸಂಪತ್ತನ್ನು ನನಗೆ ಸರ್ವದಾ ದಯಪಾಲಿಸಲಿ. (೧೫)

ಹೇ ಶಿವ, ನಾನು (ಈ ಜನ್ಮದಲ್ಲಿ) ಕರಚರಣಗಳಿಂದ, ವಾಕ್ಕಾಯ ಗಳಿಂದ, ಶ್ರವಣನಯನಗಳಿಂದ, ಮನಸ್ಸಿನಿಂದ ಮಾಡಿದ ಅಪರಾಧ ಗಳನ್ನೆಲ್ಲಾ ಕೃಪೆಮಾಡಿ ಕ್ಷಮಿಸಿಬಿಡು. ಹೇ ಕರುಣಾಸಾಗರ, ಶ್ರೀ ಮಹಾ ದೇವ, ಶಂಭು ನಿನಗೆ ಜಯವಾಗಲಿ! ನಿನಗೆ ಜಯವಾಗಲಿ! (೧೬)

